ಶ್ರೀವ್ಯಾಸತೀರ್ಥಗ್ರಂಥಮಾಲಾ - 14

ಶ್ರೀಮಜ್ಜಯತೀರ್ಥಪೂಜ್ಯಚರಣವಿರಚಿತ

# ಶ್ರೀಮನ್ನ್ಯಾಯಸುಧಾ

(ಶ್ರೀ ಕಂಬಾಲೂರುರಾಮಚಂದ್ರತೀರ್ಥರ ಟಿಪ್ಪಣೀ ಅನುವಾದ ವಿವರಣೆ ಸಹಿತ)

## ಪ್ರಥಮ ಭಾಗ

(ಜಿಜ್ಞಾಸಾಧಿಕರಣ-"ನಾರಾಯಣಂ ನಿಖಿಲಪೂರ್ಣಗುಣೈಕದೇಹಂ" ಪದ್ಯದ ಸಮಾಪ್ತಿಪರ್ಯಂತ)

(ಪ್ರತಿಪದಾರ್ಥ, ಸನ್ನ್ಯಾಯರತ್ನಾವಲೀ, ನ್ಯಾಯಚಂದ್ರಿಕಾ, ಪದಾರ್ಥಸಂಬಂಧದೀಪಿಕಾ **ಪರಿಮಳ**, ರಸರಂಜನೀ, ಲಘುರಸರಂಜನೀ ಇತ್ಯಾದಿ ಟೀಕಾ ಟಿಪ್ಪಣಿಗಳ ವಿಶೇಷಾಂಶಗಳೊಂದಿಗೆ)

ಸಂಪಾದಕರು ಮತ್ತು ಅನುವಾದಕರು

ವಿದ್ವಾನ್ ಕೆ. ಎಸ್. ಕೃಷ್ಣಾಚಾರ್ಯ ಕೆಂಪದಾಳಿಹಳ್ಳಿ

ಪ್ರಕಾಶನ

ಶ್ರೀವ್ಯಾಸತೀರ್ಥಸಂಶೋಧನಪ್ರತಿಷ್ಠಾನಮ್(ರಿ.)

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿದೆ.

ಶ್ರೀವ್ಯಾಸರಾಜಮಠ (ಸೋಸಲೆ), ಕೃಷ್ಣಮೂರ್ತಿಪುರಂ, ಮೈಸೂರು

॥ ಶ್ರೀಮನ್ಮೂಲಗೋಪಾಲಕೃಷ್ಣೋ ವಿಜಯತೇ ॥

ಶ್ರೀವ್ಯಾಸತೀರ್ಥಗ್ರಂಥಮಾಲಾ -14

# ಶ್ರೀಕಂಬಾಲೂರುರಾಮಚಂದ್ರತೀರ್ಥರ ಟಿಪ್ಪಣೀ

**ಕನ್ನಡಾನುವಾದ ವಿವರಣೆ ಸಹಿತ,**

## ಶ್ರೀಮಜ್ಜಯತೀರ್ಥಪೂಜ್ಯಚರಣವಿರಚಿತ-

# ಶ್ರೀಮನ್ನ್ಯಾಯಸುಧಾ

**(ಪ್ರತಿಪದಾರ್ಥ ಹಾಗೂ ಸಾರ)**

## ಪ್ರಥಮಭಾಗ

**(ಜಿಜ್ಞಾಸಾಧಿಕರಣ"ನಾರಾಯಣಂ ನಿಖಿಲಪೂರ್ಣಗುಣೈಕದೇಹಂ"**

**ಪದ್ಯದ ಸಮಾಪ್ತಿಪರ್ಯಂತ)**

**(ಸನ್ನ್ಯಾಯರತ್ನಾವಲೀ, ನಯಚಂದ್ರಿಕಾ, ಪದಾರ್ಥಸಂಬಂಧದೀಪಿಕಾ ಪರಿಮಳ, ರಸರಂಜನೀ ಮುಂತಾದ ಟೀಕಾ ಟಿಪ್ಪಣಿಗಳ ವಿಶೇಷಾಂಶಗಳೊಂದಿಗೆ)**

ವ್ಯಾಖ್ಯಾತಾ-

ವಿದ್ವಾನ್ **ಕೆ.ಎಸ್. ಕೃಷ್ಣಾಚಾರ್ಯ ಕೆಂಪದಾಳಿಹಳ್ಳಿ**

ಪ್ರಕಾಶನ:

**ಶ್ರೀವ್ಯಾಸತೀರ್ಥಸಂಶೋಧನಾಪ್ರತಿಷ್ಠಾನಮ್(ರಿ)**

ಕರ್ನಾಟಕಸಂಸ್ಕೃತವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ.

ಶ್ರೀವ್ಯಾಸರಾಜಮಠ (ಸೋಸಲೆ)

ಕೃಷ್ಣಮೂರ್ತಿಪುರಂ,

ಮೈಸೂರು

2022

**"ಶ್ರೀಕಂಬಾಲೂರುರಾಮಚಂದ್ರತೀರ್ಥವಿರಚಿತಟಿಪ್ಪಣೀಸಹಿತಶ್ರೀಮನ್ನ್ಯಾಯಸುಧಾ"** - ಈ ಕೃತಿಯು ಶ್ರೀವ್ಯಾಸರಾಜಗುರುಸಾರ್ವಭೌಮರ 483ನೆಯ ಆರಾಧನಾ ಮಹೋತ್ಸವ ಸುಸಂದರ್ಭದಲ್ಲಿ ಪ್ಲವನಾಮ ಸಂವತ್ಸರದ ಫಾಲ್ಗುಣ ಕೃಷ್ಣ ಚತುರ್ಥೀ ಮಂಗಳವಾರದಂದು (ದಿ. 22-03-2022) ಪರಮಪೂಜ್ಯರಾದ ಶ್ರೀವ್ಯಾಸರಾಜಮಠಾಧೀಶರಾದ 1008 ಶ್ರೀಶ್ರೀವಿದ್ಯಾಶ್ರೀಶತೀರ್ಥಶ್ರೀಪಾದರ ಅಮೃತಹಸ್ತದಿಂದ ನವವೃಂದಾವನನಡುಗಡ್ಡೆಯಲ್ಲಿ ಶ್ರೀಕಂಬಾಲೂರುರಾಮಚಂದ್ರತೀರ್ಥಗುರ್ವಂತರ್ಗತವ್ಯಾಸತೀರ್ಥಗುರ್ವಂತರ್ಗತಮುಖ್ಯಪ್ರಾಣಸ್ಥ-ಶ್ರೀಮೂಲಗೋಪಾಲಕೃಷ್ಣನಿಗೆ ಅರ್ಪಿತವಾಯಿತು.

ವ್ಯಾಖ್ಯಾತಾ : ವಿದ್ವಾನ್॥ **ಕೆ.ಎಸ್. ಕೃಷ್ಣಾಚಾರ್ಯ,** ಕೆಂಪದಾಳಿಹಳ್ಳಿ
ಅಧ್ಯಾಪಕ, ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು.

ಪ್ರಕಾಶನ : **ಶ್ರೀವ್ಯಾಸತೀರ್ಥಸಂಶೋಧನಪ್ರತಿಷ್ಠಾನಮ್(ರಿ)**
**ಸೋಸಲೆ ಶ್ರೀವ್ಯಾಸರಾಜಮಠ.**
**ಕೆ.ಎಮ್. ಪುರಂ, ಮೈಸೂರು**

ಪ್ರಥಮಮುದ್ರಣ : 2022

ಪುಟಗಳು : xlvi + 685

ಪ್ರತಿಗಳು :



ಬೆಲೆ : ರೂ 450/-

ಮುಖಪುಟ ವಿನ್ಯಾಸ :

ಅಕ್ಷರಸಂಯೋಜನೆ : ಸುಬ್ಬಣ್ಣ ಕೆಂಪದಾಳಿಹಳ್ಳಿ. 9141311280

ಮುದ್ರಣ :

||ಶ್ರೀಮನ್ಮೂಲಗೋಪಾಲಕೃಷ್ಣೋ ವಿಜಯತೇ ||

# ಜಗದ್ಗುರುಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
# ಶ್ರೀರಾಜೇಂದ್ರತೀರ್ಥರ ಪೂರ್ವಾದಿಮಠೀಯ
# ಶ್ರೀವ್ಯಾಸರಾಜಮಠ, ಸೋಸಲೆ

ದಿನಾಂಕ 10-03-2022

# ಅನುಗ್ರಹಸಂದೇಶ

ಶ್ರೀವ್ಯಾಸರಾಜಮಠದ ತರುಣವಿದ್ವಾಂಸರೂ ಹಾಗೂ ಶ್ರೀಮನ್ನ್ಯಾಯಸುಧಾ-ವ್ಯಾಸತ್ರಯಾದಿ-ಗ್ರಂಥಗಳ ಅಧ್ಯಯನನಿರತರೂ ಆದ ಕೆಂಪದಾಳಿಹಳ್ಳಿ ಕೃಷ್ಣಾಚಾರ್ಯರು ಶ್ರೀಕಂಬಾಲೂರುರಾಮಚಂದ್ರ-ತೀರ್ಥರ ಟಿಪ್ಪಣೀಸಹಿತ ಶ್ರೀಮನ್ನ್ಯಾಯಸುಧಾ ಅನುವಾದ ಮಾಡುತ್ತಿರುವುದು ನಮಗೆ ತುಂಬ ಮುದ ನೀಡಿದೆ. ಟೀಕಾಗ್ರಂಥದ ಅನುವಾದವೇ ಕಷ್ಟಸಾಧ್ಯವಾದ ಕಾರ್ಯವಾಗಿದೆ. ಹೀಗಿರುವಾಗ ಟಿಪ್ಪಣಿಗಳ ಅನುವಾದ ಇನ್ನೂ ಶ್ರಮಸಾಧ್ಯವೆಂದು ಹೇಳಬೇಕಾಗಿಲ್ಲ. ಪ್ರತಿವಾಕ್ಯಗಳ ಅವತರಣಿಕೆ-ಶಂಕಾದಿಗಳನ್ನು ತೋರಿಸಿ ಟೀಕಾವಾಕ್ಯದಿಂದ ದೊರಕುವ ಪರಿಹಾರವನ್ನು ಸ್ಫುಟವಾಗಿ ವಿವರಿಸಬೇಕಾದ ಅಗತ್ಯ ಇಂತಹ ಅನುವಾದಗಳ ಸಂದರ್ಭದಲ್ಲಿ ಆವಶ್ಯಕವಾಗುವುದು. ಶ್ರೀಕಂಬಾಲೂರುರಾಮಚಂದ್ರತೀರ್ಥರ ಟಿಪ್ಪಣಿ-ಯಲ್ಲಿ ವ್ಯಾಕರಣ-ಮೀಮಾಂಸಾಶಾಸ್ತ್ರಗಳ ಸಂವಾದ-ವಿಮರ್ಶೆಗಳಿವೆ. ನವ್ಯನ್ಯಾಯಶಾಸ್ತ್ರದ ಹಿನ್ನೆಲೆಯ ಪರಿಷ್ಕಾರಗಳಿವೆ. ಇಂತಹ ಸಂದರ್ಭಗಳಲ್ಲಿಯೂ ಇವರ ಅನುವಾದ ಸ್ಫುಟವಾಗಿದೆ.

ಗುರ್ವರ್ಥದೀಪಿಕಾ, ವಾಕ್ಯಾರ್ಥಚಂದ್ರಿಕಾ, ವಾಕ್ಯಾರ್ಥರತ್ನಮಾಲಾ, ಯಾದುಪತ್ಯ, ಪರಿಮಳ, ಕಾಶೀಟಿಪ್ಪಣೀ, ಶ್ರೀನಿಧಿತೀರ್ಥೀಯ, ರಸರಂಜನೀ, ಲಘುರಸರಂಜನೀ, ಏರೀಬಾಳಾಚಾರ್ಯರ ಟಿಪ್ಪಣೀ ಪಾಂಥ್ರೀ ಆಚಾರ್ಯರ ಟಿಪ್ಪಣೀ ಮೊದಲಾದ ಬಹುಟಿಪ್ಪಣಿಗಳ ಪ್ರಮೇಯಸಂಗ್ರಹ ಈ ಅನುವಾದದಲ್ಲಿರು-ವುದು ವಿದ್ವಾಂಸರಿಗೆ ಹಾಗೂ ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತ ಹಾಗೂ ಉಪಕಾರಕ. ಶ್ರೀಟೀಕಾ-ಕೃತ್ಪಾದರ ಸೇವೆಗಾಗಿ ಟಿಪ್ಪಣಿಗಳನ್ನು ರಚಿಸಿದ ಜ್ಞಾನಿಗಳ ಟಿಪ್ಪಣಿಗಳ ವಿಶೇಷಾಂಶಸಂಗ್ರಹವು ಅತ್ಯಂತ ಉಪಕಾರಕವೂ ಆಗುವುದರಲ್ಲಿ ಸಂದೇಹವಿಲ್ಲ. ಈ ಪ್ರಥಮಸಂಪುಟ ಇದೀಗ ಪ್ರಕಾಶಿತವಾಗುತ್ತಿದ್ದು ಆದಷ್ಟು ಬೇಗ ಮುಂದಿನ ಸಂಪುಟಗಳೂ ಮುದ್ರಣವಾಗಿ ಜಿಜ್ಞಾಸುಗಳ ಕೈಸೇರಲಿ ಎಂದು ನಮ್ಮ ಆರಾಧ್ಯಮೂರ್ತಿಯಾದ ಶ್ರೀಮೂಲಗೋಪಾಲಕೃಷ್ಣ-ಮೂಲಪಟ್ಟಾಭಿರಾಮದೇವರಲ್ಲಿ ಪ್ರಾರ್ಥಿಸುತ್ತ, ಶ್ರೀ-ಕೃಷ್ಣಾಚಾರ್ಯರನ್ನು ವಿಶೇಷವಾಗಿ ಅಭಿನಂದಿಸುತ್ತೇವೆ.

ಶ್ರೀಮನ್ನಾರಾಯಣಸ್ಮರಣೆಗಳು.

**ಶ್ರೀಶ್ರೀವಿದ್ಯಾಶ್ರೀಶತೀರ್ಥಶ್ರೀಪಾದಂಗಳವರು,**

**ಪೀಠಾಧಿಪತಿಗಳು, ಸೋಸಲೆ ಶ್ರೀವ್ಯಾಸರಾಜಮಠ.**

# ನಿದೇಶಕರ ನುಡಿ

ಸೋಸಲೆ ಶ್ರೀವ್ಯಾಸರಾಜಮಠಾಧೀಶರಾದ 1008 ಶ್ರೀಶ್ರೀವಿದ್ಯಾಶ್ರೀಶತೀರ್ಥಶ್ರೀಪಾದಂಗಳವರು "ವ್ಯಾಸತೀರ್ಥಸಂಶೋಧನಾಪ್ರತಿಷ್ಠಾನ"ವನ್ನು ಪ್ರಾರಂಭ ಮಾಡಿ ಈಗಾಗಲೇ 4 ವರ್ಷಗಳು ಸಂದಿವೆ. ಪ್ರತಿಷ್ಠಾನವು ಈ ಹಿಂದಿನ ವರ್ಷಗಳಲ್ಲಿ ಶ್ರೀವ್ಯಾಸರಾಜರ ಆರಾಧನಾಪರ್ವಕಾಲದಲ್ಲಿ ಅನೇಕ ಗ್ರಂಥಗಳ ಪ್ರಕಟನೆಯನ್ನು ಮಾಡಿದೆ. ಈ ವರ್ಷ ಬಿಡುಗಡೆಯಾಗುತ್ತಿರುವ ಗ್ರಂಥಗಳ ಪೈಕಿ ಶ್ರೀಕಂಬಾಲೂರುರಾಮಚಂದ್ರತೀರ್ಥರ ಟಿಪ್ಪಣಿಸಹಿತ ಹಾಗೂ ಪ್ರತಿಪದಾರ್ಥದೊಂದಿಗೆ ನ್ಯಾಯಸುಧಾಗ್ರಂಥದ ಅನುವಾದ ಪುಸ್ತಕವೂ ಒಂದು.

ಪ್ರಕೃತ ಗ್ರಂಥದ ಅನುವಾದವನ್ನು ನಮ್ಮ ಶ್ರೀಮಠದ ವಿದ್ವಾಂಸರಾದ ಶ್ರೀ ಕೆ.ಎಸ್. ಕೃಷ್ಣಾಚಾರ್ಯ ಕೆಂಪದಾಳಿಹಳ್ಳಿ ಇವರು ಮಾಡಿದ್ದಾರೆ. ಇವರು ಕಂಬಾಲೂರುಟಿಪ್ಪಣಿಯ ಹಾಗೂ ಸುಧಾಗ್ರಂಥದ ಅನುವಾದವನ್ನಷ್ಟೇ ಮಾಡದೇ ಉಪಲಬ್ಧವಿರುವ ಅನೇಕ ಟಿಪ್ಪಣಿಗಳ ವಿಶೇಷಾಂಶಗಳನ್ನು ಸೇರಿಸಿರುವುದು ವಿಶಿಷ್ಟವಾದದ್ದು. ಅಲ್ಲದೇ ಅಲಂಕಾರಶಾಸ್ತ್ರ, ವೇದಭಾಷ್ಯ, ಹಾಗೂ ಟಿಪ್ಪಣೀಕಾರರು ತೋರಿಸಿದ ಇತರ ಮತಗಳ ಗ್ರಂಥಗಳಲ್ಲಿ ಬರುವ ಹಲವು ಉದಾಹರಣೆಗಳನ್ನು ಸಪ್ರಮಾಣವಾಗಿ ವಿವರಿಸಿರುವುದು, ಜೊತೆಗೆ ಪ್ರಮಾಣಗಳಾಗಿ ಕೊಟ್ಟಿರುವ ಭಾಗವತಾದಿಗ್ರಂಥವಾಕ್ಯಗಳ ಸಂಪೂರ್ಣ-ಉಲ್ಲೇಖ ಹಾಗೂ ಅವುಗಳ ವಿಶೇಷಾಂಶಗಳನ್ನೊಳಗೊಂಡಿರುವುದು ಪುಸ್ತಕದ ಮಹತ್ವವನ್ನು ಹೆಚ್ಚಿಸಿದೆ. ಪ್ರಾಯಃ ರಸರಂಜನೀ ಹಾಗೂ ಲಘುರಸರಂಜನೀ ಟಿಪ್ಪಣಿಗಳ ಉಪಲಬ್ಧವಿರುವ ಸಂಪೂರ್ಣಭಾಗದ ಅನುವಾದ ಇದರಲ್ಲಿರುವುದು ಸಂತಸದ ವಿಷಯ.

ಒಟ್ಟಿನಲ್ಲಿ ಒಂದು ಗ್ರಂಥವನ್ನು ಯಾವ ಯಾವ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದು ಎಂಬ ಸುಂದರವಾದ ಮಾರ್ಗದರ್ಶನ ಅವರ ಈ ಕೃತಿಯಲ್ಲಿದೆ. ಅಲ್ಲದೆ ಶ್ರೀಮನ್ನ್ಯಾಯಸುಧಾಕ್ಕೆ ಪ್ರತಿಪದಾರ್ಥ ಪ್ರಕಟನೆಗೊಂಡಿರುವುದು ಇದೇ ಮೊದಲು.

ಹೀಗೆ ಈ ಅನುವಾದವು ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಹಾಗೂ ನ್ಯಾಯಸುಧಾ-ಗ್ರಂಥವನ್ನು ಕಲಿಯಲು ಬಯಸುವ ಜಿಜ್ಞಾಸುಗಳಿಗೂ ಬಹಳ ಉಪಕಾರಿಯಾಗುವುದರಲ್ಲಿ ಸಂಶಯವಿಲ್ಲ.

ಈಗಾಗಲೇ ಅವರು ಸಿದ್ಧಪಡಿಸಿದ ತರ್ಕತಾಂಡವದ ಪ್ರಕರಣಾಧಾರಿತವಾದ ಆಖ್ಯಾತವಾದ ಎಂಬ ಸಂಸ್ಕೃತಕೃತಿ, ಶ್ರೀವ್ಯಾಸರಾಜಸ್ತೋತ್ರ ಹಾಗೂ ಶ್ರೀರಾಘವೇಂದ್ರ-ಸ್ತೋತ್ರ ಚಿಂತನಮಂಥನ ಕೃತಿಗಳು ನಮ್ಮ ಶ್ರೀವ್ಯಾಸತೀರ್ಥಸಂಶೋಧನಾಪ್ರತಿಷ್ಠಾನ-ದಿಂದ ಮುದ್ರಿತವಾಗಿ ವಿದ್ವಾಂಸರ ಮನ್ನಣೆಯನ್ನು ಗಳಿಸಿವೆ.

ಈ ರೀತಿಯಾದ ಗ್ರಂಥಗಳು ನಮ್ಮ ಶ್ರೀವ್ಯಾಸತೀರ್ಥಸಂಶೋಧನಾಪ್ರತಿಷ್ಠಾನದಿಂದ ಹೊರಬರಲು ಆಶೀರ್ವದಿಸಿ ಪರಮಾನುಗ್ರಹ ಮಾಡುತ್ತಿರುವ ಸಂಸ್ಥೆಯ ಸ್ಥಾಪಕರಾದ ಶ್ರೀಸೋಸಲೆ ವ್ಯಾಸರಾಜಮಠದ ಪೀಠಾಧಿಪತಿಗಳಾದ 1008 ಶ್ರೀಶ್ರೀ ವಿದ್ಯಾಶ್ರೀಶ-ತೀರ್ಥಶ್ರೀಪಾದರಿಗೆ ಅನಂತಾನಂತಪ್ರಣಾಮಗಳು.

ಈ ಕೃತಿಯನ್ನು ಸುಂದರವಾಗಿ ಸಿದ್ಧಪಡಿಸಿದ ವಿದ್ವಾನ್ ಕೆಂಪದಾಳಿಹಳ್ಳಿ ಕೃಷ್ಣಾ-ಚಾರ್ಯರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಅವರಿಂದ ಹೀಗೆಯೇ ಮುಂದಿನ ಸಂಪುಟಗಳು ಶೀಘ್ರದಲ್ಲಿಯೇ ಬರಲೆಂದು ಆಶಿಸುತ್ತೇನೆ.

ಗಣಕೀಕರಿಸಿದ ಶ್ರೀಯುತ ಸುಬ್ಬಣ್ಣ. ಕೆ. ಅವರಿಗೆ ಹಾಗೂ ಮುದ್ರಣ ಮಾಡಿಕೊಟ್ಟ ವಾಣೀಪ್ರೆಸ್-ಅವರಿಗೆ ಧನ್ಯವಾದಗಳು.

**ಡಾ. ಡಿ.ಪಿ.ಮಧುಸೂದನಾಚಾರ್ಯ**

ಗೌರವನಿದೇಶಕರು.

# ಗ್ರಂಥಪ್ರವೇಶಮಾಡುವ ಮುನ್ನ

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯರಾದ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಸಮರ್ಥರಾದ ಪದವಾಕ್ಯಪ್ರಮಾಣಪಾರಾವಾರಪಾರಂಗತರಾದ ಸರ್ವತಂತ್ರಸ್ವತಂತ್ರರಾದ ಪೂರ್ಣಬೋಧಮತಾಂಬುಧಿಪೂರ್ಣಚಂದ್ರರಾದ ಶಿಷ್ಯನಿಕರಾಜ್ಞಾನತಿಮಿರಮಾರ್ತಾಂಡರಾದ ಪರಾಪರತತ್ವಪ್ರಬೋಧ-ಅನೇಕಾಗ್ರಹಾರತಟಾಕನಿರ್ಮಾಣ-ದೇವಾಲಯಾದಿಜನಿತದಿಗಂತವ್ಯಾಪ್ತಕೀರ್ತಿಸಂಪನ್ನರಾದ ಪರವಾದಿಮತ್ತೇಭಮಸ್ತಕವಿದಾರಣವಿಚಕ್ಷಣಯುಕ್ತಿಕಲಾಪವುಳ್ಳ ರಾಜಗುರುಗಳಾದ **ಶ್ರೀವ್ಯಾಸರಾಜರ** ಹೆಸರಿನಿಂದಲೇ ಪ್ರಸಿದ್ಧವಾದ ವಿದ್ಯಾಮಠವಾದ ಶ್ರೀವ್ಯಾಸರಾಜಮಠದಲ್ಲಿ ಅನೇಕ ಜ್ಞಾನಿಗಳು ಬಂದಿದ್ದಾರೆ.

ಅವರುಗಳಲ್ಲಿ ಶ್ರೀಮಠದ ಸಂಪ್ರದಾಯಪ್ರವರ್ತಕರೆಂದೇ ಪ್ರಸಿದ್ಧರಾದವರು **ಶ್ರೀಕಂಬಾಲೂರುರಾಮಚಂದ್ರತೀರ್ಥರು.** ಇವರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಶ್ರೀಮನ್ನ್ಯಾಯಸುಧಾಟಿಪ್ಪಣಿಯೂ ಒಂದು. ಇಂತಹ ಶ್ರೀರಾಮಚಂದ್ರತೀರ್ಥರ ಬಗ್ಗೆ ಕುಂಡಲಗಿರಿಆಚಾರ್ಯರು ತಾವು ರಚಿಸಿದ ಶ್ರೀಮನ್ನ್ಯಾಯಸುಧಾಟಿಪ್ಪಣಿಯ ಮೊದಲಿಗೆ ಹೀಗೆ ಸ್ಮರಿಸಿದ್ದಾರೆ—

ಸ್ವಾದಿಮಾನಂ ಸುಧಾಯಾ ಯಃ ಸಮ್ಯಗ್ ಜ್ಞಾಪಿತವಾನ್ ಭುವಿ ।
ರಾಮಚಂದ್ರಗುರುಂ ನೌಮಿ ವಿದ್ವನ್ಮುಕುಟಮಂಡನಮ್ ॥

ಎಂದು ನ್ಯಾಯಸುಧಾಸ್ವಾದವನ್ನು ಅನುಭವಿಸಬೇಕಾದರೆ ಶ್ರೀರಾಮಚಂದ್ರತೀರ್ಥರನ್ನು ಅವಶ್ಯ ಆಶ್ರಯಿಸಲೇಬೇಕು.

ಇವರ ಈ ಸುಧಾಟಿಪ್ಪಣಿಯು ಇದುವರೆಗೆ ಮೂರು ಅಧ್ಯಾಯಗಳಿಗೆ ಅಂದರೆ ಮೊದಲನೆಯ, ಎರಡನೆಯ ಹಾಗೂ ನಾಲ್ಕನೆಯ ಅಧ್ಯಾಯಗಳಿಗೆ ಮಾತ್ರ ಮುದ್ರಿತವಾಗಿ ಉಪಲಬ್ಧವಿದೆ.

ಈ ಕೃತಿಯ ವೈಶಿಷ್ಟ್ಯವನ್ನು ಬಣ್ಣಿಸುವುದು ಅಸಾಧ್ಯ. ಓದಿಯೇ ಅದರ ಸ್ವಾದವನ್ನು ಅನುಭವಿಸಬೇಕು.

ಇಂತಹ ಮಹಾಜ್ಞಾನಿಗಳಾದ ಶ್ರೀಕಂಬಾಲೂರುರಾಮಚಂದ್ರತೀರ್ಥರ ಟಿಪ್ಪಣೀಗ್ರಂಥವನ್ನು ಅವರ ಭಕ್ತರೆಲ್ಲರೂ ಅವಶ್ಯವಾಗಿ ಓದಬೇಕಾದದ್ದು. ಇದು ಕರ್ತವ್ಯವೂ ಆಗಿದೆ. ಇದಕ್ಕಿಂತ ಮುಖ್ಯವಾಗಿ ಶ್ರೀವ್ಯಾಸರಾಜರ ಭಕ್ತರು ಅದರಲ್ಲೂ ಶ್ರೀವ್ಯಾಸರಾಜಮಠದ ಶಿಷ್ಯರು ಶ್ರೀಮಠದ ಪ್ರತಿಯೊಬ್ಬ ಮಹನೀಯರ ಗ್ರಂಥಗಳ ರಕ್ಷಣೆ ಮಾಡಬೇಕಾದುದು ಆವಶ್ಯಕ. ಹಾಗೆ ಅವರು ಹೇಳಿಕೊಟ್ಟ ಧಾರ್ಮಿಕಸಂಪ್ರದಾಯದ ಜೊತೆಗೆ ಗ್ರಂಥಪಾಠಕ್ರಮವನ್ನು ನಮ್ಮ ಮುಂದಿನ ಪೀಳಿಗೆಗೆ ಅನೂಚಾನವಾಗಿ ಹರಡುವಂತೆ ಮಾಡಬೇಕು. ಇದರಿಂದ ಗುರುಗಳ ವಿಶೇಷವಾದ ಅನುಗ್ರಹ

ನಮಗೆ ದೊರೆಯುವುದು. ತನ್ಮೂಲಕ ರುಕ್ಮಿಣೀಸತ್ಯಭಾಮಾಸಮೇತಶ್ರೀಮನ್ಮೂಲಗೋಪಾಲ-ಕೃಷ್ಣನ ಅನುಗ್ರಹವೂ ಆಗುವುದು.

ಈ ನಿಟ್ಟಿನಲ್ಲಿ ಶ್ರೀವ್ಯಾಸರಾಜಮಠದ ಶಿಷ್ಯನಾದ ನನಗೆ ಮೊದಲು ನೆನಪಾದದ್ದು ನಮ್ಮ ಮಠದ ಸಂಪ್ರದಾಯಪ್ರವರ್ತಕರಾದ ಶ್ರೀಕಂಬಾಲೂರುರಾಮಚಂದ್ರತೀರ್ಥರ ಮೇರುಕೃತಿಯಾದ ಶ್ರೀಮ-ನ್ನ್ಯಾಯಸುಧಾಟಿಪ್ಪಣೀ. ಹಾಗಾಗಿ ಈ ಟಿಪ್ಪಣಿಯ ಅನುವಾದಕಾರ್ಯದಲ್ಲಿ ಪ್ರವೃತ್ತನಾಗಿ ಗುರು-ದೇವತಾನುಗ್ರಹದಿಂದ ಇದೀಗ ಪುಸ್ತಕರೂಪದಲ್ಲಿ ಈ ಕೃತಿಯು ಸಂಪನ್ನವಾಗಿದೆ.

ಈ ಕೃತಿಯಲ್ಲಿ 'ಶ್ರಿಯಃ ಪತ್ಯೇ' ಎಂಬ ಪ್ರಾರಂಭಿಸಿ, 'ನಾರಾಯಣಂ ನಿಖಿಲಪೂರ್ಣ...' ಎಂಬ ಅನುವ್ಯಾಖ್ಯಾನದ ಆದ್ಯಪದ್ಯದವರೆಗಿನ ಸುಧಾಭಾಗದ ಪ್ರತಿಪದಾರ್ಥವನ್ನು ಹಾಗು ಸಾರವನ್ನು ನೀಡಲಾಗಿದೆ. ಶ್ರೀಕಂಬಾಲೂರು ಟಿಪ್ಪಣಿಯ ಕನ್ನಡಾನುವಾದ ವಿಶೇಷವಿವರಣೆ ಇದೆ. ಅದರ ಜೊತೆಗೆ ಹತ್ತಕ್ಕಿಂತ ಹೆಚ್ಚು ಟಿಪ್ಪಣಿಗಳ ಹಾಗೂ ಪ್ರಾಚೀನಟೀಕೆಗಳ ಕನ್ನಡಾನುವಾದ ವಿಶೇ-ಷಾಂಶಗಳೂ ಇವೆ.

### ಶ್ರೀ ಜಯತೀರ್ಥರು ನಿರ್ಮಿಸಿದ ಅನುವ್ಯಾಖ್ಯಾನಟೀಕೆಯ ಹೆಸರೇನು?

ನಮ್ಮೆಲ್ಲರಿಗೂ ತಿಳಿದಿರುವಂತೆ ಶ್ರೀಮದಾಚಾರ್ಯರ ಅನುವ್ಯಾಖ್ಯಾನಕ್ಕೆ ವಿಸ್ತಾರವಾದ ಟೀಕೆಯನ್ನು ಶ್ರೀಜಯತೀರ್ಥರು ರಚಿಸಿದ್ದಾರೆ. ಅದು "ಶ್ರೀಮನ್ನ್ಯಾಯಸುಧಾ" ಎಂಬ ಹೆಸರಿನಿಂದ ಬಹಳ ಪ್ರಸಿದ್ಧಿಯನ್ನು ಹೊಂದಿದೆ. ಈ ಟೀಕೆಗೆ ಜಯತೀರ್ಥರೇ ಪ್ರತಿಯೊಂದು ಅಧ್ಯಾಯದ ಪಾದಗಳ ಕೊನೆಗೆ ಸೂಚಿಸುವ ಹೆಸರು ಒಂದಿದೆ. ಉದಾಹರಣೆಗೆ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದ ಕೊನೆಗೆ –

"ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇಃ
ಅನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ **ಟೀಕಾಯಾಂ** ವಿಷಮಪದವಾಕ್ಯಾರ್ಥವಿವೃತೌ
ಅಯಂ ಪೂರ್ವಾಧ್ಯಾಯೇ ಪ್ರಥಮಚರಣಃ ಪರ್ಯವಸಿತಃ ॥"

ಎಂದಿದ್ದಾರೆ. ಇದೇ ರೀತಿ ನಾಲ್ಕನೆಯ ಅಧ್ಯಾಯದ ಕೊನೆಯ ಪಾದದಲ್ಲಿಯೂ –

"ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇಃ
ಅನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ **ಟೀಕಾಯಾಂ** ವಿಷಮಪದವಾಕ್ಯಾರ್ಥವಿವೃತೌ
ಚತುರ್ಥೇಽಧ್ಯಾಯೇಽಸ್ಮಿನ್ ಚರಮಚರಣಃ ಪರ್ಯವಸಿತಃ ॥

ಎಂದಿದ್ದಾರೆ. ಇವೆರಡನ್ನು ಗಮನಿಸಿದಾಗ ಉಪಕ್ರಮೋಪಸಂಹಾರಗಳಲ್ಲಿ, ಶ್ರೀಮದಾನಂದತೀರ್ಥ-ಭಗವತ್ಪಾದರ ಒಳ್ಳೆಯ ಕೃತಿಯಾದ ಅನುವ್ಯಾಖ್ಯಾನಕ್ಕೆ ಜಯತೀರ್ಥರೆಂಬ ಯತಿಯು ಮಾಡಿದ "ವಿಷಮಪದವಾಕ್ಯಾರ್ಥವಿವೃತಿ" ಎಂಬ ಟೀಕೆಯಲ್ಲಿ ಮೊದಲನೆಯ ಅಧ್ಯಾಯದ ಮೊದಲನೆಯ ಪಾದ ಹಾಗೂ ನಾಲ್ಕನೇ ಅಧ್ಯಾಯದ ನಾಲ್ಕನೇ ಪಾದ ಸಮಾಪ್ತವಾಯಿತು ಎಂದು ತಿಳಿಯುವುದು. ಹೀಗೆ ಶ್ರೀಜಯತೀರ್ಥರು ತಮ್ಮ ಟೀಕೆಯನ್ನು "ವಿಷಮಪದವಾಕ್ಯಾರ್ಥವಿವೃತಿ" ಎಂದು ಅನೇಕಬಾರಿ ಉಲ್ಲೇಖಿಸಿದ್ದಾರೆ.

ಇದರಿಂದ ಅನುವ್ಯಾಖ್ಯಾನದ ಜಯತೀರ್ಥರ ಟೀಕೆಯ ಹೆಸರು 'ವಿಷಮಪದವಾಕ್ಯಾರ್ಥವಿವೃತಿ' ಎಂದು ತಿಳಿಯುವುದು.

ಹಾಗಾದರೆ "ಶ್ರೀಮನ್ನ್ಯಾಯಸುಧಾ" ಎಂಬುದು ಶ್ರೀಜಯತೀರ್ಥರ ಟೀಕೆಯ ಹೆಸರಲ್ಲವೇ?. ಇಲ್ಲ ಅದೂ ಟೀಕೆಯ ಹೆಸರೇ ಆಗಿದೆ. ಇದನ್ನು ಶ್ರೀಜಯತೀರ್ಥರೇ ತಮ್ಮ ಅನುವ್ಯಾಖ್ಯಾನಟೀಕಾಗ್ರಂಥದ ಕೊನೆಗೆ ತಿಳಿಸಿದ್ದಾರೆ.

ಅನುವ್ಯಾಖ್ಯಾಮೃತಾಂಭೋಧೇಃ ಸಮುತ್ಪನ್ನಾತಿನಿರ್ಮಲಾ ।
ಇಯಂ **ನ್ಯಾಯಸುಧಾ** ಭೌಮ್ಯೈಃ ವಿಬುಧ್ಯೈಃ ಸೇವ್ಯತಾಂ ಸದಾ ॥

ಎಂದು. ಇಲ್ಲಿ ನ್ಯಾಯಸುಧಾ ಎಂಬ ನಾಮೋಲ್ಲೇಖವನ್ನು ಜಯತೀರ್ಥರೇ ಮಾಡಿದ್ದಾರೆ.

ಅಲ್ಲದೇ ಈ ಟೀಕಾವ್ಯಾಖ್ಯಾನಕಾರರೆಲ್ಲರನ್ನೂ ಗಮನಿಸಿದಾಗ **ನ್ಯಾಯಸುಧಾ** ಎಂಬ ಶಬ್ದವನ್ನು ಬಳಸಿದ್ದೇ ಕಂಡಿದೆ.

ಉದಾ — ಶ್ರೀಪಾದರಾಜರು ರಚಿಸಿದ ತಮ್ಮ ಸುಧಾಗ್ರಂಥೋಪನ್ಯಾಸರೂಪವಾದ **ವಾಗ್ವಜ್ರ**ಗ್ರಂಥ-ದಲ್ಲಿ ಮೊದಲಿಗೆ ಪ್ರತಿಜ್ಞೆಯನ್ನು ಮಾಡುತ್ತಾ —

**ಶ್ರೀಮನ್ನ್ಯಾಯಸುಧಾಗ್ರಂಥಾತ್** ಕ್ರಿಯತೇ ತ್ವರ್ಥಸಂಗ್ರಹಃ ।
ವಾಗ್ವಜ್ರಾಖ್ಯಂ ಮಹಾಗ್ರಂಥಂ ನಿರ್ಮಾತುಂ ತರ್ಕಸಂಗ್ರಹಮ್ ॥

ಎಂದು ಶ್ರೀಮನ್ನ್ಯಾಯಸುಧಾಗ್ರಂಥ ಎಂದು ನಾಮೋಲ್ಲೇಖವನ್ನು ಮಾಡಿದ್ದಾರೆ. ಅದೇ ರೀತಿ ಶ್ರೀವಾದಿರಾಜರ **ಗುರ್ವರ್ಥದೀಪಿಕಾ**ಗ್ರಂಥದ ಮಂಗಳಶ್ಲೋಕದಲ್ಲಿ —

ನಾರಾಯಣಂ ಹಯಗ್ರೀವಂ ವ್ಯಾಸಂ ವಾಯುಂ ಸರಸ್ವತೀಮ್ ।
ನತ್ವಾ ತತ್ಕರುಣಾಸತ್ವಾತ್ ರಮೇ **ನ್ಯಾಯಸುಧಾಂಬುಧೌ** ॥

ಎಂದು ನ್ಯಾಯಸುಧಾ ಎಂಬುದಾಗಿ ವ್ಯವಹರಿಸಿದ್ದಾರೆ. ಆದ್ದರಿಂದ ನ್ಯಾಯಸುಧಾ ಹಾಗೂ ವಿಷಮ-

ಪದವಾಕ್ಯಾರ್ಥವಿವೃತಿ ಎಂಬ ಎರಡೂ ಹೆಸರು ಶ್ರೀಜಯತೀರ್ಥರು ನಿರ್ಮಿಸಿದ ಅನು-ವ್ಯಾಖ್ಯಾನಟೀಕೆಗೆ ಇದೆ ಎಂದು ತಿಳಿಯಬೇಕು. ನ್ಯಾಯಸುಧಾ ಎಂಬ ಪ್ರಸಿದ್ಧಿಯಾದರೋ ನಮ್ಮಲ್ಲಿ ಬಂದಿರುವುದನ್ನು ಹೀಗೆ ಚಿಂತಿಸಬಹುದು. ಅನುವ್ಯಾಖ್ಯಾನವನ್ನು ಶ್ರೀನಾರಾಯಣಪಂಡಿತಾ-ಚಾರ್ಯರು ಸುಧಾ ಎಂದು ಕರೆದಿದ್ದಾರೆ. (ಇತ್ಯರ್ಥಿತೋ ವ್ಯಧಾನ್ಮಧ್ವಃ ಸೋಽನುವ್ಯಾಖ್ಯಾಂ ಸತಾಂ ಸುಧಾಮ್) ಎಂದು. ಈ ಅನುವ್ಯಾಖ್ಯಾನವೆಂಬ ಸುಧೆಯನ್ನು ಅವಲಂಬಿಸಿ ಬಂದದ್ದು ಸುಧೆಯೇ ಆಗಿರುತ್ತದೆ ಎಂಬ ಅಂಶವನ್ನು ನೆನಪಿಸಲೋ ಎಂಬಂತೆ ಎಲ್ಲ ಟಿಪ್ಪಣೀಕಾರರು ಶ್ರೀಜಯತೀರ್ಥರು ಹೇಳಿದ ನ್ಯಾಯಸುಧಾ ಎಂಬ ನಾಮವನ್ನೇ ತಮ್ಮ ಟಿಪ್ಪಣಿಗಳಲ್ಲಿ ಉಲ್ಲೇಖಿಸಿದ್ದಾರೆ.

ಶ್ರೀಜಯತೀರ್ಥರ ಈ ಅನುವ್ಯಾಖ್ಯಾನಟೀಕೆಯನ್ನು ಶ್ರೀಮನ್ನ್ಯಾಯಸುಧಾ ಎಂದೂ ವ್ಯವಹರಿ-ಸಿದ್ದಿದೆ.

ಶ್ರೀರಾಘವೇಂದ್ರಗುರುಸಾರ್ವಭೌಮರ ಪರಿಮಳಟಿಪ್ಪಣಿಯಲ್ಲಿ "ಶ್ರೀಮನ್ನ್ಯಾಯಸುಧಾವಾಕ್ಯ-ವ್ಯಾಖ್ಯಾಂ ಕುರ್ಯಾಂ ಯಥಾಮತಿ" - ಶ್ರೀಮನ್ನ್ಯಾಯಸುಧಾ ಎಂದು ಉಲ್ಲೇಖಿಸಿದ್ದಾರೆ. ಹೀಗೆ ಉಲ್ಲೇಖಿಸಿದ ಅವರೇ ತಮ್ಮ ಟಿಪ್ಪಣಿಯ ಕೊನೆಗೆ "ಯೇ ತು ನ್ಯಾಯಸುಧಾಪಾನಕಾಮುಕಾ ರಸಿಕಾ ಬುಧಾಃ" - ನ್ಯಾಯಸುಧಾ ಎಂದು ಉಲ್ಲೇಖಿಸಿದ್ದಾರೆ.

ಶ್ರೀಕಂಬಾಲೂರು ರಾಮಚಂದ್ರತೀರ್ಥರು ತಮ್ಮ ಟಿಪ್ಪಣಿಯಲ್ಲಿ - "ಶ್ರೀಮನ್ನ್ಯಾಯಸುಧಾವಾಕ್ಯ-ವ್ಯಾಖ್ಯಾ ಕ್ರಿಯತೇ ಪ್ರೀತಯೇ ಹರೇಃ' ಶ್ರೀಮನ್ನ್ಯಾಯಸುಧಾ ಎಂದು ಕರೆದಿದ್ದಾರೆ.

ಮಾದನೂರು ಶ್ರೀವಿಷ್ಣುತೀರ್ಥರು ರಸರಂಜನೀಟಿಪ್ಪಣಿಯಲ್ಲಿ – "ಸುಧಾಮವನಿದೇವತಾಃ ಪಿಬತ ಪಾನಪಾತ್ರಾಗತಾಂ" - ಸುಧಾ ಎಂದು ಕರೆದಿದ್ದಾರೆ. ಅವರೇ ಮುಂದೆ "ಭೂಯಾತ್ ಶ್ರೀನ್ಯಾಯ-ಸುಧಾರಸರಂಜನೀ ತನ್ಮಾನಸದಾ" ಶ್ರೀನ್ಯಾಯಸುಧಾ ಎಂದು ಹೇಳಿದ್ದಾರೆ.

ಅಡವೀ ಕೃಷ್ಣಾಚಾರ್ಯರ ಲಘುರಸರಂಜನೀ ಎಂಬ ಟಿಪ್ಪಣಿಯಲ್ಲಿ ಹೀಗಿದೆ – "ಶ್ರೀಮನ್ನ್ಯಾಯ-ಸುಧಾಶಬ್ದನಿಚಯೈಃ ವಾಚ್ಯಾಂ ಭಜೇ ಭಕ್ತಿತಃ" ಎಂದು. ಹಾಗೂ "ಸುಧಾದಿಟೀಕಾಕೃದಭೀಷ್ಟ-ಶಿಷ್ಯರಾಟ್" ಸುಧಾ ಎಂಬ ಶಬ್ದದಿಂದ ವ್ಯವಹರಿಸಿದ್ದಾರೆ.

ಹೀಗೆ ಟಿಪ್ಪಣೀಗ್ರಂಥಗಳಲ್ಲಿ ಗ್ರಂಥದ ನಾಮದ ವಿಷಯದಲ್ಲಿ "ಇದೇ ನಾಮದಿಂದಲೇ ಕರೆಯ-ಬೇಕು" ಎಂಬ ನಿರ್ಬಂಧವೇನೂ ಕಂಡಿಲ್ಲ.

## ನ್ಯಾಯಸುಧಾ ಅಥವಾ ಶ್ರೀಮನ್ನ್ಯಾಯಸುಧಾ ಪದದ ವಿವರಣೆ

ನ್ಯಾಯಸುಧಾ ಎಂಬ ಪದದ ವ್ಯುತ್ಪತ್ತಿಯನ್ನು ವ್ಯಾಖ್ಯಾನಕಾರರು ಹೀಗೆ ತಿಳಿಸಿದ್ದಿದೆ –

**ಯಾದುಪತ್ಯ – ನ್ಯಾಯಸುಧೇತಿ ॥** ಅಮೃತಹೇತುತ್ವೇನ ಸುಧಾರೂಪಾಃ ನ್ಯಾಯಾಃ ಯಸ್ಯಾಮ್ ಇತಿ ವಿಗ್ರಹಃ । ಅಗ್ನ್ಯಾಹಿತಾದಿವತ್ ಪರನಿಪಾತಃ ।

ವಿರೀಬಾಳಾಚಾರ್ಯರು – ಅಮೃತಹೇತುತಯಾ ಸುಧಾರೂಪಾಃ ನ್ಯಾಯಾಃ ಯಸ್ಯಾಂ ಸಾ ನ್ಯಾಯಸುಧಾ । ಆಹಿತ-ಅಗ್ನ್ಯಾದಿವತ್ (ವಾ ಆಹಿತಾಗ್ನ್ಯಾದಿಷು) ಪೂರ್ವನಿಪಾತಃ ಇತ್ಯಾಹುಃ ।

ನ್ಯಾಯಾನಾಂ ಸಮೂಹಃ ನ್ಯಾಯಮ್ । ತಸ್ಯ ಸಮೂಹ ಇತ್ಯಣ್ । ತದೇವ ಸುಧಾ ಇತಿ ವಾ । ತದೇವ ಸುಧಾ ಯಸ್ಯ ಸಾ ಇತಿ ವಾ । ಆಯಾನಾಂ ಸ್ವಾಮಿಗ್ರಾಹ್ಯಭಾಗಾನಾಂ ಸಮೂಹಃ ಆಯಮ್ । ಪ್ರಾಗ್ವತ್ ಅಣ್ । ನಿತರಂ **ಆಯಾನಾಂ** ಸ್ವಾಮಿಗ್ರಾಹ್ಯಭಾಗಾನಾಂ ಸಮೂಹಃ ಯಸ್ಯಾಂ ಸಾ ತಥೋಕ್ತಾ । ಸಾ ಚ ಸಾ **ಸುಧಾ** ಚ ಇತಿ ವಾ ವಯಂ ಪ್ರತೀಮಃ । 'ತದಸ್ಮಿನ್ ವೃದ್ಧ್ಯಾಯ-ಲಾಭಶುಲ್ಕೋಪದಾ ದೀಯತೇ' (ಪಾ.ಸೂ. 5.1.47) ಇತಿ ಸೂತ್ರೇ ಆಯಃ ಸ್ವಾಮಿಗ್ರಾಹ್ಯಭಾಗಃ ಇತಿ ವ್ಯಾಖ್ಯಾನಾತ್ ।

ನ್ಯಾಯ ಎಂಬ ಶಬ್ದದ ವ್ಯುತ್ಪತ್ತಿ ಹೀಗಿದೆ – ನೀಯಂತೇ ಏಭಿಃ ಇತಿ ನ್ಯಾಯಾಃ ಎಂದು. ಅಂದರೆ, ಸಮೀಚೀನವಾದ ಅರ್ಥವು ಯಾವುದರಿಂದ ತಿಳಿಯಲ್ಪಡುತ್ತದೋ ಅದನ್ನು ನ್ಯಾಯ ಎಂದು ಅರ್ಥಾತ್ ಯುಕ್ತಿಗಳು. ಸುಧಾ ಎಂದರೆ ಸುಷ್ಠು ಧೀಯತೇ - ಎಂದು ವರ್ಣಿಸುತ್ತಾರೆ. ಚೆನ್ನಾಗಿ ಸ್ವೀಕರಿಸಲ್ಪಡುವುದನ್ನು ಸುಧಾ ಎನ್ನುತ್ತಾರೆ. ಸುಧಾರೂಪವಾದ ನ್ಯಾಯಗಳು ಯಾವ ಗ್ರಂಥದಲ್ಲಿ ಇದೆಯೋ ಅದನ್ನು ನ್ಯಾಯಸುಧಾ ಎನ್ನುತ್ತಾರೆ. ಹಿಂದೆ ಕ್ಷೀರಸಮುದ್ರದ ಮಥನವಾದಾಗ ಅಮೃತವು ಹುಟ್ಟಿತು. ಅದರಂತೆ ಈ ನ್ಯಾಯಸುಧೆಯೂ ಅನುವ್ಯಾಖ್ಯಾನವೆಂಬ ಅಮೃತ-ಸಮುದ್ರದಲ್ಲಿ ಹುಟ್ಟಿದೆ. ಅಮೃತಕ್ಕೆ ಕಾರಣವಾದ ನ್ಯಾಯಗಳು ಇರುವ ಈ ಗ್ರಂಥಕ್ಕೆ ನ್ಯಾಯ-ಸುಧಾ ಎಂದು ಕರೆದಿದ್ದಾರೆ. ಇಲ್ಲಿ ಕ್ಷೀರಸಮುದ್ರಮಥನದಿಂದ ಬಂದ ಅಮೃತಕ್ಕೂ ಈ ನ್ಯಾಯಸುಧಾಕ್ಕೂ ಹೋಲಿಕೆಯು ಅಮೃತಹೇತುತ್ವೇನ ಇದೆ. ಇಲ್ಲಿ ಅಮೃತ ಎಂದರೆ ಭಗವಂತ ಅಥವಾ ಮೋಕ್ಷ ಎಂದರ್ಥ. 'ಅಮೃತಃ ಶಾಶ್ವತಃ ಸ್ಥಾಣುಃ' ಎಂದು ವಿಷ್ಣುಸಹಸ್ರನಾಮ, ಹಾಗೂ 'ಅಪಾಮ ಸೋಮಮಮೃತಾ ಅಭೂಮ' ಎಂದು ಶ್ರುತಿ ಇರುವುದರಿಂದ. ಆ ಭಗವಂತನ ಜ್ಞಾನಕ್ಕೆ ಕಾರಣವಾದದ್ದಾದ್ದರಿಂದ ಇದನ್ನೇ ಅಮೃತ ಎಂದು ಕರೆದಿದ್ದಾರೆ. ಅರ್ಥಾತ್ ಸುಧಾ ಎಂದು ಕರೆದಿದ್ದಾರೆ.

ಇಲ್ಲಿ ನ್ಯಾಯಸುಧಾಪದಗಳಿಗೆ ವಿಗ್ರಹ ಮಾಡಿದಾಗ ಯದ್ಯಪಿ ಪೂರ್ವನಿಪಾತವು ಸುಧಾಪದಕ್ಕೆ ಬರಬೇಕು. ವಿಶೇಷಣವಾಚಕಪದವಾದ್ದರಿಂದ.

ಆಗ ಸುಧಾನ್ಯಾಯ ಎಂದಾಗಬೇಕು. ಆದರೆ ವಾ ಆಹಿತಾಗ್ನ್ಯಾದಿಷು ಎಂಬ ಪಾಣಿನಿಯ ಸೂತ್ರದ ಪ್ರಕಾರ ನ್ಯಾಯಸುಧಾ ಎಂದಾಗಿದೆ.

ಅಥವಾ ನ್ಯಾಯಸುಧಾಶಬ್ದಾರ್ಥವನ್ನು ಹೀಗೂ ವಿವರಿಸಬಹುದು. ಜ್ಞಾನಿಗಳಿಂದ ಗ್ರಾಹ್ಯವಾದ ಭಾಗವು ಬಹಳಷ್ಟು ಈ ಗ್ರಂಥದಲ್ಲಿ ಇದೆ. ಅಂತಹ ಜ್ಞಾನಿಗ್ರಾಹ್ಯವಾದ ಅನೇಕ ನ್ಯಾಯಗಳ ಸಮೂಹವೇ ಸುಧಾ ಅರ್ಥಾತ್ ಅಮೃತ. ಆದ್ದರಿಂದ ಈ ಗ್ರಂಥಕ್ಕೆ ನ್ಯಾಯಸುಧಾ ಎಂದು ಹೆಸರು.

ಶ್ರೀಮನ್ನ್ಯಾಯಸುಧಾ ಎಂದಿಟ್ಟುಕೊಂಡಾಗ ವಿಗ್ರಹ ಹೀಗೆ – ಶ್ರೀಮಂತಶ್ಚ ತೇ ನ್ಯಾಯಾಶ್ಚ ಶ್ರೀಮನ್ನ್ಯಾಯಾಃ । ಸುಧಾರೂಪಾಃ ಶ್ರೀಮನ್ನ್ಯಾಯಾಃ ಯಸ್ಯಾಂ ಸಾ = ಶ್ರೀಮನ್ನ್ಯಾಯಸುಧಾ । ಇಲ್ಲಿ ಶ್ರೀಮಂತವಾದ ನ್ಯಾಯಗಳು ಎಂದರೆ ಬೇರೆ ಪ್ರತಿವಾದಿಯುಕ್ತಿಗಳಿಂದ ತಡೆಯಿಲ್ಲದ ನ್ಯಾಯಗಳು ಎಂದರ್ಥ.

ಹೀಗೆ ನ್ಯಾಯಸುಧಾ ಅಥವಾ ಶ್ರೀಮನ್ನ್ಯಾಯಸುಧಾಪದದ ವಿವರಣೆಯನ್ನು ಕಾಣಬಹುದು.

## ಬಗೆ ಬಗೆಯಲ್ಲಿ ಶ್ರೀನ್ಯಾಯಸುಧೆಯ ಪ್ರಶಂಸೆ

**ವಾಗ್ವಜ್ರ** – ವಾಗ್ವಜ್ರ ಎಂಬ ಮಹಾಗ್ರಂಥನಿರ್ಮಾಣಕ್ಕೆ ಮೂಲ ಶ್ರೀಮನ್ನ್ಯಾಯಸುಧಾ.

(ಶ್ರೀಪಾದರಾಜರು)

**ಗುರ್ವರ್ಥದೀಪಿಕಾ** – 'ಶ್ರೀಕರೋಽಯಂ ಗ್ರಂಥಃ ತತ್ರ ವಯಮೇವ ಸಾಕ್ಷಿಣಃ'

(ಶ್ರೀವಾದಿರಾಜರು)

**ಪರಿಮಳ** – ಪ್ರತ್ಯಕ್ಷರಂ ಪ್ರತಿಪದಂ ಅನೇಕಾಕೂತಿಗರ್ಭಿತಾ ।
ಪ್ರತಿಭಾತಿ ಸುಧಾಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ ॥

ಸುಧಾದಲ್ಲಿನ ಪ್ರತಿಯೊಂದು ಅಕ್ಷರಗಳು ಪ್ರತಿಯೊಂದು ಪದಗಳೂ ಅನೇಕ ಅಭಿಪ್ರಾಯಗಳನ್ನೊಳಗೊಂಡಿದೆಯೆಂದು ತೋರುವುದು. ಹೀಗಿದ್ದರೂ ನನ್ನ ಗ್ರಂಥವು ಅಲ್ಪವಾಗಿರಲಿ ಎಂದು ಸುಧೆಯ ಎಲ್ಲ ಅಭಿಪ್ರಾಯವನ್ನು ಹೇಳುತ್ತಿಲ್ಲ. (ಶ್ರೀರಾಘವೇಂದ್ರಸ್ವಾಮಿಗಳು)

**ಕಂಬಾಲೂರು ಶ್ರೀರಾಮಚಂದ್ರತೀರ್ಥರು** – ನ್ಯಾಯಸುಧಾಸೇವನೆಯಲ್ಲಿ ಆಸಕ್ತವಾದ ಮನಸ್ಸುಳ್ಳವರು ಜ್ಞಾನಿಗಳಾಗುವರು.

**ಯಾದುಪತ್ಯ** – ಶ್ರೀಜಯಮುನಿಗಳು ಮಾಡಿದ ನ್ಯಾಯಸುಧಾ ಅಗಾಧ, ಅಪಾರ.

(ಶ್ರೀಯದುಪತ್ಯಾಚಾರ್ಯರು)

**ವಾಕ್ಯಾರ್ಥಚಂದ್ರಿಕಾ** – ನ್ಯಾಯಸುಧೆಯು ಗಂಗೆಗೆ ಸಮಾನ. (ಶ್ರೀವಿದ್ಯಾಧೀಶತೀರ್ಥರು)

**ವಾಕ್ಯಾರ್ಥರತ್ನಮಾಲಾ** – ನ್ಯಾಯಸುಧಾ ಗಂಭೀರಭಾವಾನ್ವಿತಾ. ದುರ್ವಾದೀರಿತಮೂಕತಾಪಸರಣೀ, ಶ್ರೀಮಧ್ವೋಕ್ತಿವಿಕಾಸನೀ. (ಶ್ರೀಪಾಂಡುರಂಗೀ ನರಸಿಂಹಾಚಾರ್ಯರು)

**ಕುಂಡಲಗಿರೀಯ ಟಿಪ್ಪಣೀ** – ನ್ಯಾಯಸುಧಾಪಾನದಿಂದ ಸತ್ಸಂಪತ್ತಿಯ ಪ್ರಾಪ್ತಿ ಪ್ರತಿವಾದಿಗಳ ಅಭಾವ. (ಕುಂಡಲಗಿರಿಆಚಾರ್ಯರು)

**ವಿಟ್ಠಲಭಟ್ಟೀಯಾ** – ಅನುವ್ಯಾಖ್ಯಾನವೆಂಬ ಕ್ಷೀರಸಮುದ್ರದ ಮಥನದಿಂದ ಸಮುದ್ಧೃತವಾದ ಸುಧಾ.

**ಶ್ರೀಮಾದನೂರುವಿಷ್ಣುತೀರ್ಥರು** – ಸುರೇಂದ್ರಮುಖನಂದಿನಿಯಾದ ದಿತಿಸುತೇಂದ್ರ- ದಿಗ್ವಾ-ಪಿನಿಯಾದ ಮಹೀಂದ್ರತನುಸಂಭವಳಾದ ಮಹೇಂದ್ರಗೋತ್ರೋದ್ಭವಳಾದ, ದುರಿತದಾವ-ಜಿಹ್ವೆಯಂತಿರುವ ಸುಧಾ.

**ಶ್ರೀಅಡವೀಕೃಷ್ಣಾಚಾರ್ಯರು** – ಟೀಕಾರಾಯರ ಗ್ರಂಥಗಳೆಲ್ಲವೂ ಸಪ್ತತ್ರಿಂಶತಿಮೂಲಸಂಘ-ವಿವೃತಿ.

**ಶ್ರೀಮನ್ನಾರೀಕೃಷ್ಣಾಚಾರ್ಯರು** – ಗಭೀರದ್ಯುಸರಿನ್ನಿಭಾ ಸುಧಾ.

ಹೀಗೆ ಅನೇಕ ಟಿಪ್ಪಣಿಕಾರರು ವಿಧವಿಧವಾಗಿ ಶ್ರೀಮನ್ನ್ಯಾಯಸುಧೆಯನ್ನು ಸ್ತುತಿಸಿದ್ದಾರೆ.

### ಈ ಕೃತಿಯ ಭಾಗದಲ್ಲಿ ಬಂದ ಕಂಬಾ. ಟಿಪ್ಪಣಿಯ ವಿಶೇಷಾಂಶ

ಕೇವಲ ಒಂದೆರಡೇ ಉದಾಹರಣೆ ನಿಮ್ಮ ಮುಂದೆ ನೀಡಲಾಗಿದೆ. ಇದು ದಿಕ್ಪ್ರದರ್ಶನವಷ್ಟೆ.

(१) कारणानीति ॥ **वस्तुनिर्धारणद्वारा अभिवादने प्रणामे कारणानीत्यर्थः । 'विभवादनेकानि'** इति पाठे **विभवादैश्वर्याल्लक्षणदारिद्र्याभावादनेकानीत्यर्थः ।** **(ಪುಟ 627)**

(२) निर्दोषमित्यनेनेति ॥ निर्दोषमि**त्यनेनैकं लक्षणमुदितमित्यन्वयः । न च वाच्यं निर्दोषपदेन दोष्यन्यत्वं दोषसंसर्गाभाववत्त्वं चेति लक्षणद्वयमुदितमिति वक्तुं शक्यत्वात् कथमेवमुच्यत इति । 'निर्गता दोषा यस्मात् स निर्दोषः' इति दोषसंसर्गाभावस्यैव प्रतीतेः । न चैवमपि दोषसंसर्गाभावस्य प्रागभावध्वंसरूपत्वे ब्रह्मण्यसम्भवः, अत्यन्ताभावरूपत्वे तु प्रामाणिकस्य तदसम्भव इति वाच्यम् । स्वानुयोगिकदोषप्रतियोगिकसंसर्गविशेषात्यन्ताभाववत्त्वस्य** निर्दोष**पदेन विवक्षित-त्वादिति ॥** **(ಪುಟ 627)**

ಇವುಗಳ ವಿವರಣೆಯನ್ನು ಮೇಲೆ ನಿರ್ದೇಶಿಸಿದ ಪುಟಗಳಲ್ಲಿ ನೋಡಿ.

## ಕೃತಜ್ಞತಾ ಅರ್ಪಣೆ

ಮೊದಲಿಗೆ ಪ್ರಾತಃಸ್ಮರಣೀಯರಾದ ನನ್ನ ಗುರುಗಳಾದ, ನ್ಯಾಯಸುಧಾದಿಗ್ರಂಥಗಳನ್ನು ಉಪದೇಶಿಸಿ ಪರಮಾನುಗ್ರಹ ಮಾಡಿದ ಯತಿಕುಲಚಕ್ರವರ್ತಿಗಳಾದ ಪರಮಪೂಜ್ಯ **1008 ಶ್ರೀಶ್ರೀವಿಶ್ವೇಶ-ತೀರ್ಥಶ್ರೀಪಾದಂಗಳವರಿಗೆ** ಅನಂತಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತೇನೆ. ಈ ಕೃತಿಯ ರಚನೆಗೆ ಅವರು ಮಾಡಿದ ವಿದ್ಯೋಪದೇಶವೇ ಮುಖ್ಯ ಬಲ.

ಶ್ರೀವ್ಯಾಸತ್ರಯಸಮುದ್ರಪಾರಾವಾರಪಾರೀಣರಾದ ಶ್ರೀವ್ಯಾಸರಾಜಗುರುಸಾರ್ವಭೌಮವಿದ್ಯಾ-ಕರ್ನಾಟಕಸಿಂಹಾಸನಾಧೀಶ್ವರರಾದ **1008 ಶ್ರೀಶ್ರೀ ವಿದ್ಯಾಶ್ರೀಶತೀರ್ಥಶ್ರೀಪಾದರನ್ನು** ಇಲ್ಲಿ ಅವಶ್ಯ ಸ್ಮರಿಸಲೇಬೇಕು. ಅವರು ಎಂದಿನಂತೆಯೇ ಈ ವರ್ಷವೂ ಈ ಕೃತಿಯ ಸಂಪಾದನೆಗೆ ಪರಮಾನುಗ್ರಹ ಮಾಡಿ ಆಶೀರ್ವದಿಸಿ ವಿಶೇಷವಾದ ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ಅವರಿಗೆ ಅನಂತಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತೇನೆ.

ನನಗೆ ಚಿಕ್ಕಂದಿನಿಂದಲೂ ತೀರ್ಥಪ್ರಬಂಧ, ಭಾಗವತಸಾರೋದ್ಧಾರ ಮೊದಲಾದ ಗ್ರಂಥಗಳ ಪರೀಕ್ಷೆಯನ್ನು ಮಾಡಿ, ಹರಸಿ ಅನುಗ್ರಹಿಸಿರುತ್ತಿರುವ ಪೇಜಾವರಮಠಾಧೀಶರಾದ ಪೂಜ್ಯ **1008 ಶ್ರೀಶ್ರೀ ವಿಶ್ವಪ್ರಸನ್ನತೀರ್ಥಶ್ರೀಪಾದರಿಗೆ** ಅನಂತಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ಪಾಠಮಾಡಿ ಅನುಗ್ರಹಿಸಿದ ಎಲ್ಲ ನನ್ನ ಗುರುಗಳಿಗೂ ಸಾಷ್ಟಾಂಗ-ಪ್ರಣಾಮಗಳು.

ಈ ಕೃತಿಯು ಹೊರಬರುವಲ್ಲಿ ಸಹಕಾರಮಾಡಿ ಪ್ರೋತ್ಸಾಹಿಸಿದ ಶ್ರೀವ್ಯಾಸತೀರ್ಥಸಂಶೋಧನಾ-ಪ್ರತಿಷ್ಠಾನದ ನಿರ್ದೇಶಕರಾದ **ಡಾ|| ಡಿ.ಪಿ. ಮಧುಸೂದನಾಚಾರ್ಯರಿಗೆ** ವಂದನೆಗಳು.

ಇನ್ನು ಈ ಕೃತಿಯ ಪ್ರಾರಂಭದ ಹಂತದಿಂದ ಕೊನೆಯ ಹಂತದವರೆಗೂ ಅವಿಚ್ಛಿನ್ನವಾಗಿ ಸೂಕ್ತ ಸಲಹೆಗಳನ್ನು ಪದೇ ಪದೇ ನೀಡುತ್ತ ಈ ಕೃತಿಯ ಪೂರಣೆಗೆ ಮುಖ್ಯಪಾತ್ರರಾದ ತಾಯಿತಂದೆಯ-ರಾದ ಶ್ರೀಮತಿ ರಮಾದೇವಿ(ಸುಜಾತಾ) ಹಾಗೂ ಶ್ರೀ ಸುಬ್ಬಣ್ಣ ಕೆಂಪದಾಳಿಹಳ್ಳಿ ಅವರಿಗೆ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಇನ್ನು ಈ ಕೃತಿಯು ಸಂಪೂರ್ಣಸುಂದರವಾಗಿ ಬರಲು ಡಿ.ಟಿ.ಪಿ. ಮಾಡುವ ಜೊತೆಗೆ ಗ್ರಂಥದ ಪೂರಣೆಗೂ ವಿಶೇಷವಾದ ಸಹಕಾರವನ್ನು ಮಾಡಿದ ತೀರ್ಥರೂಪರಾದ ಶ್ರೀ ಸುಬ್ಬಣ್ಣ ಕೆಂಪ-ದಾಳಿಹಳ್ಳಿ ಅವರಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಗುರುಮಠದ ಗುರುಗಳ ಸೇವೆಯನ್ನೇ ಪ್ರಧಾನವಾಗಿ ಉದ್ದೇಶಿಸಿಕೊಂಡು ಹೊರಟ ಈ ಗ್ರಂಥದಲ್ಲಿ ಯಾವುದಾದರೂ ದೋಷಗಳಿದ್ದಲ್ಲಿ ವಿದ್ವಾಂಸರು ಕ್ಷಮಿಸಬೇಕೆಂದು ಪ್ರಾರ್ಥಿಸುವೆ.

ಈ ಕೃತಿಯ ನಿರ್ಮಾಣದಿಂದ ಶ್ರೀಶ್ರೀವಿದ್ಯಾಶ್ರೀಶತೀರ್ಥಗುರ್ವಂತರ್ಗತಶ್ರೀಕಂಬಾಲೂರು ರಾಮಚಂದ್ರತೀರ್ಥರು ಪ್ರೀತರಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತಾ ವಿರಮಿಸುತ್ತೇನೆ.

ಇತಿ

ಶ್ರೀವ್ಯಾಸರಾಜಪಾದಪದ್ಮಾರಾಧಕ,

**ಕೆ.ಎಸ್.ಕೃಷ್ಣಾಚಾರ್ಯ ಕೆಂಪದಾಳಿಹಳ್ಳಿ**

## ಶ್ರೀಕಂಬಾಲೂರು ರಾಮಚಂದ್ರತೀರ್ಥರ ಟಿಪ್ಪಣೀ
## ಕನ್ನಡಾನುವಾದ-ವಿವರಣೆ ಸಹಿತ

ನಮಗೆ ದೊರೆಯುವುದು. ತನ್ಮೂಲಕ ರುಕ್ಮಿಣೀಸತ್ಯಭಾಮಾಸಮೇತಶ್ರೀಮನ್ಮೂಲಗೋಪಾಲ-ಕೃಷ್ಣನ ಅನುಗ್ರಹವೂ ಆಗುವುದು.

ಈ ನಿಟ್ಟಿನಲ್ಲಿ ಶ್ರೀವ್ಯಾಸರಾಜಮಠದ ಶಿಷ್ಯನಾದ ನನಗೆ ಮೊದಲು ನೆನಪಾದದ್ದು ನಮ್ಮ ಮಠದ ಸಂಪ್ರದಾಯಪ್ರವರ್ತಕರಾದ ಶ್ರೀಕಂಬಾಲೂರುರಾಮಚಂದ್ರತೀರ್ಥರ ಮೇರುಕೃತಿಯಾದ ಶ್ರೀಮ-ನ್ನ್ಯಾಯಸುಧಾಟಿಪ್ಪಣೀ. ಹಾಗಾಗಿ ಈ ಟಿಪ್ಪಣಿಯ ಅನುವಾದಕಾರ್ಯದಲ್ಲಿ ಪ್ರವೃತ್ತನಾಗಿ ಗುರು-ದೇವತಾನುಗ್ರಹದಿಂದ ಇದೀಗ ಪುಸ್ತಕರೂಪದಲ್ಲಿ ಈ ಕೃತಿಯು ಸಂಪನ್ನವಾಗಿದೆ.

ಈ ಕೃತಿಯಲ್ಲಿ 'ಶ್ರಿಯಃ ಪತ್ಯೇ' ಎಂಬ ಪ್ರಾರಂಭಿಸಿ, 'ನಾರಾಯಣಂ ನಿಖಿಲಪೂರ್ಣ...' ಎಂಬ ಅನುವ್ಯಾಖ್ಯಾನದ ಆದ್ಯಪದ್ಯದವರೆಗಿನ ಸುಧಾಭಾಗದ ಪ್ರತಿಪದಾರ್ಥವನ್ನು ಹಾಗು ಸಾರವನ್ನು ನೀಡಲಾಗಿದೆ. ಶ್ರೀಕಂಬಾಲೂರು ಟಿಪ್ಪಣಿಯ ಕನ್ನಡಾನುವಾದ ವಿಶೇಷವಿವರಣೆ ಇದೆ. ಅದರ ಜೊತೆಗೆ ಹತ್ತಕ್ಕಿಂತ ಹೆಚ್ಚು ಟಿಪ್ಪಣಿಗಳ ಹಾಗೂ ಪ್ರಾಚೀನಟೀಕೆಗಳ ಕನ್ನಡಾನುವಾದ ವಿಶೇ-ಷಾಂಶಗಳೂ ಇವೆ.

## ಶ್ರೀ ಜಯತೀರ್ಥರು ನಿರ್ಮಿಸಿದ ಅನುವ್ಯಾಖ್ಯಾನಟೀಕೆಯ ಹೆಸರೇನು?

ನಮ್ಮೆಲ್ಲರಿಗೂ ತಿಳಿದಿರುವಂತೆ ಶ್ರೀಮದಾಚಾರ್ಯರ ಅನುವ್ಯಾಖ್ಯಾನಕ್ಕೆ ವಿಸ್ತಾರವಾದ ಟೀಕೆಯನ್ನು ಶ್ರೀಜಯತೀರ್ಥರು ರಚಿಸಿದ್ದಾರೆ. ಅದು "ಶ್ರೀಮನ್ನ್ಯಾಯಸುಧಾ" ಎಂಬ ಹೆಸರಿನಿಂದ ಬಹಳ ಪ್ರಸಿದ್ಧಿಯನ್ನು ಹೊಂದಿದೆ. ಈ ಟೀಕೆಗೆ ಜಯತೀರ್ಥರೇ ಪ್ರತಿಯೊಂದು ಅಧ್ಯಾಯದ ಪಾದಗಳ ಕೊನೆಗೆ ಸೂಚಿಸುವ ಹೆಸರು ಒಂದಿದೆ. ಉದಾಹರಣೆಗೆ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದ ಕೊನೆಗೆ –

"ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇಃ
ಅನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ **ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ**
ಅಯಂ ಪೂರ್ವಾಧ್ಯಾಯೇ ಪ್ರಥಮಚರಣಃ ಪರ್ಯವಸಿತಃ ॥"

ಎಂದಿದ್ದಾರೆ. ಇದೇ ರೀತಿ ನಾಲ್ಕನೆಯ ಅಧ್ಯಾಯದ ಕೊನೆಯ ಪಾದದಲ್ಲಿಯೂ –

"ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇಃ
ಅನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ **ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ**
ಚತುರ್ಥೇಽಧ್ಯಾಯೇಽಸ್ಮಿನ್ ಚರಮಚರಣಃ ಪರ್ಯವಸಿತಃ ॥

ಎಂದಿದ್ದಾರೆ. ಇವೆರಡನ್ನು ಗಮನಿಸಿದಾಗ ಉಪಕ್ರಮೋಪಸಂಹಾರಗಳಲ್ಲಿ, ಶ್ರೀಮದಾನಂದತೀರ್ಥ-ಭಗವತ್ಪಾದರ ಒಳ್ಳೆಯ ಕೃತಿಯಾದ ಅನುವ್ಯಾಖ್ಯಾನಕ್ಕೆ ಜಯತೀರ್ಥರೆಂಬ ಯತಿಯು ಮಾಡಿದ "ವಿಷಮಪದವಾಕ್ಯಾರ್ಥವಿವೃತಿ" ಎಂಬ ಟೀಕೆಯಲ್ಲಿ ಮೊದಲನೆಯ ಅಧ್ಯಾಯದ ಮೊದಲನೆಯ ಪಾದ ಹಾಗೂ ನಾಲ್ಕನೇ ಅಧ್ಯಾಯದ ನಾಲ್ಕನೇ ಪಾದ ಸಮಾಪ್ತವಾಯಿತು ಎಂದು ತಿಳಿಯುವುದು. ಹೀಗೆ ಶ್ರೀಜಯತೀರ್ಥರು ತಮ್ಮ ಟೀಕೆಯನ್ನು "ವಿಷಮಪದವಾಕ್ಯಾರ್ಥವಿವೃತಿ" ಎಂದು ಅನೇಕಬಾರಿ ಉಲ್ಲೇಖಿಸಿದ್ದಾರೆ.

ಇದರಿಂದ ಅನುವ್ಯಾಖ್ಯಾನದ ಜಯತೀರ್ಥರ ಟೀಕೆಯ ಹೆಸರು 'ವಿಷಮಪದವಾಕ್ಯಾರ್ಥವಿವೃತಿ' ಎಂದು ತಿಳಿಯುವುದು.

ಹಾಗಾದರೆ "ಶ್ರೀಮನ್ನ್ಯಾಯಸುಧಾ" ಎಂಬುದು ಶ್ರೀಜಯತೀರ್ಥರ ಟೀಕೆಯ ಹೆಸರಲ್ಲವೇ?. ಇಲ್ಲ ಅದೂ ಟೀಕೆಯ ಹೆಸರೇ ಆಗಿದೆ. ಇದನ್ನು ಶ್ರೀಜಯತೀರ್ಥರೇ ತಮ್ಮ ಅನುವ್ಯಾಖ್ಯಾನಟೀಕಾಗ್ರಂಥದ ಕೊನೆಗೆ ತಿಳಿಸಿದ್ದಾರೆ.

ಅನುವ್ಯಾಖ್ಯಾಮೃತಾಂಭೋಧೇಃ ಸಮುತ್ಪನ್ನಾತಿನಿರ್ಮಲಾ ।
ಇಯಂ **ನ್ಯಾಯಸುಧಾ** ಭೌಮ್ಯೈಃ ವಿಬುಧ್ಯೈಃ ಸೇವ್ಯತಾಂ ಸದಾ ॥

ಎಂದು. ಇಲ್ಲಿ ನ್ಯಾಯಸುಧಾ ಎಂಬ ನಾಮೋಲ್ಲೇಖವನ್ನು ಜಯತೀರ್ಥರೇ ಮಾಡಿದ್ದಾರೆ.

ಅಲ್ಲದೇ ಈ ಟೀಕಾವ್ಯಾಖ್ಯಾನಕಾರರೆಲ್ಲರನ್ನೂ ಗಮನಿಸಿದಾಗ **ನ್ಯಾಯಸುಧಾ** ಎಂಬ ಶಬ್ದವನ್ನು ಬಳಸಿದ್ದೇ ಕಂಡಿದೆ.

ಉದಾ – ಶ್ರೀಪಾದರಾಜರು ರಚಿಸಿದ ತಮ್ಮ ಸುಧಾಗ್ರಂಥೋಪನ್ಯಾಸರೂಪವಾದ **ವಾಗ್ವಜ್ರ**ಗ್ರಂಥ-ದಲ್ಲಿ ಮೊದಲಿಗೆ ಪ್ರತಿಜ್ಞೆಯನ್ನು ಮಾಡುತ್ತಾ –

**ಶ್ರೀಮನ್ನ್ಯಾಯಸುಧಾಗ್ರಂಥಾತ್** ಕ್ರಿಯತೇ ತ್ವರ್ಥಸಂಗ್ರಹಃ ।
ವಾಗ್ವಜ್ರಾಖ್ಯಂ ಮಹಾಗ್ರಂಥಂ ನಿರ್ಮಾತುಂ ತರ್ಕಸಂಗ್ರಹಮ್ ॥

ಎಂದು ಶ್ರೀಮನ್ನ್ಯಾಯಸುಧಾಗ್ರಂಥ ಎಂದು ನಾಮೋಲ್ಲೇಖವನ್ನು ಮಾಡಿದ್ದಾರೆ. ಅದೇ ರೀತಿ ಶ್ರೀವಾದಿರಾಜರ **ಗುರ್ವರ್ಥದೀಪಿಕಾ**ಗ್ರಂಥದ ಮಂಗಳಶ್ಲೋಕದಲ್ಲಿ –

ನಾರಾಯಣಂ ಹಯಗ್ರೀವಂ ವ್ಯಾಸಂ ವಾಯುಂ ಸರಸ್ವತೀಮ್ ।
ನತ್ವಾ ತತ್ಕರುಣಾಸತ್ವಾತ್ ರಮೇ **ನ್ಯಾಯಸುಧಾಂಬುಧೌ** ॥

ಎಂದು ನ್ಯಾಯಸುಧಾ ಎಂಬುದಾಗಿ ವ್ಯವಹರಿಸಿದ್ದಾರೆ. ಆದ್ದರಿಂದ ನ್ಯಾಯಸುಧಾ ಹಾಗೂ ವಿಷಮ-

ಪದವಾಕ್ಯಾರ್ಥವಿವೃತಿ ಎಂಬ ಎರಡೂ ಹೆಸರು ಶ್ರೀಜಯತೀರ್ಥರು ನಿರ್ಮಿಸಿದ ಅನು-ವ್ಯಾಖ್ಯಾನಟೀಕೆಗೆ ಇದೆ ಎಂದು ತಿಳಿಯಬೇಕು. ನ್ಯಾಯಸುಧಾ ಎಂಬ ಪ್ರಸಿದ್ಧಿಯಾದರೋ ನಮ್ಮಲ್ಲಿ ಬಂದಿರುವುದನ್ನು ಹೀಗೆ ಚಿಂತಿಸಬಹುದು. ಅನುವ್ಯಾಖ್ಯಾನವನ್ನು ಶ್ರೀನಾರಾಯಣಪಂಡಿತಾ-ಚಾರ್ಯರು ಸುಧಾ ಎಂದು ಕರೆದಿದ್ದಾರೆ. (ಇತ್ಯರ್ಥಿತೋ ಷ್ಯಧಾನ್ಮಧ್ವಃ ಸೋಽನುವ್ಯಾಖ್ಯಾಂ ಸತಾಂ ಸುಧಾಮ್) ಎಂದು. ಈ ಅನುವ್ಯಾಖ್ಯಾನವೆಂಬ ಸುಧೆಯನ್ನು ಅವಲಂಬಿಸಿ ಬಂದದ್ದು ಸುಧೆಯೇ ಆಗಿರುತ್ತದೆ ಎಂಬ ಅಂಶವನ್ನು ನೆನಪಿಸಲೋ ಎಂಬಂತೆ ಎಲ್ಲ ಟಿಪ್ಪಣೀಕಾರರು ಶ್ರೀಜಯತೀರ್ಥರು ಹೇಳಿದ ನ್ಯಾಯಸುಧಾ ಎಂಬ ನಾಮವನ್ನೇ ತಮ್ಮ ಟಿಪ್ಪಣಿಗಳಲ್ಲಿ ಉಲ್ಲೇಖಿಸಿದ್ದಾರೆ.

ಶ್ರೀಜಯತೀರ್ಥರ ಈ ಅನುವ್ಯಾಖ್ಯಾನಟೀಕೆಯನ್ನು ಶ್ರೀಮನ್ನ್ಯಾಯಸುಧಾ ಎಂದೂ ವ್ಯವಹರಿ-ಸಿದ್ದಿದೆ.

ಶ್ರೀರಾಘವೇಂದ್ರಗುರುಸಾರ್ವಭೌಮರ ಪರಿಮಳಟಿಪ್ಪಣಿಯಲ್ಲಿ "ಶ್ರೀಮನ್ನ್ಯಾಯಸುಧಾವಾಕ್ಯ-ವ್ಯಾಖ್ಯಾಂ ಕುರ್ಯಾಂ ಯಥಾಮತಿ" - ಶ್ರೀಮನ್ನ್ಯಾಯಸುಧಾ ಎಂದು ಉಲ್ಲೇಖಿಸಿದ್ದಾರೆ. ಹೀಗೆ ಉಲ್ಲೇಖಿಸಿದ ಅವರೇ ತಮ್ಮ ಟಿಪ್ಪಣಿಯ ಕೊನೆಗೆ "ಯೇ ತು ನ್ಯಾಯಸುಧಾಪಾನಕಾಮುಕಾ ರಸಿಕಾ ಬುಧಾಃ" - ನ್ಯಾಯಸುಧಾ ಎಂದು ಉಲ್ಲೇಖಿಸಿದ್ದಾರೆ.

ಶ್ರೀಕಂಬಾಲೂರು ರಾಮಚಂದ್ರತೀರ್ಥರು ತಮ್ಮ ಟಿಪ್ಪಣಿಯಲ್ಲಿ - "ಶ್ರೀಮನ್ನ್ಯಾಯಸುಧಾವಾಕ್ಯ-ವ್ಯಾಖ್ಯಾ ಕ್ರಿಯತೇ ಪ್ರೀತಯೇ ಹರೇಃ' ಶ್ರೀಮನ್ನ್ಯಾಯಸುಧಾ ಎಂದು ಕರೆದಿದ್ದಾರೆ.

ಮಾದನೂರು ಶ್ರೀವಿಷ್ಣುತೀರ್ಥರು ರಸರಂಜನೀಟಿಪ್ಪಣಿಯಲ್ಲಿ — "ಸುಧಾಮವನಿದೇವತಾಃ ಪಿಬತ ಪಾನಪಾತ್ರಾಗತಾಂ" - ಸುಧಾ ಎಂದು ಕರೆದಿದ್ದಾರೆ. ಅವರೇ ಮುಂದೆ "ಭೂಯಾತ್ ಶ್ರೀನ್ಯಾಯ-ಸುಧಾರಸರಂಜನೀ ತನ್ಮಾನಸದಾ" ಶ್ರೀನ್ಯಾಯಸುಧಾ ಎಂದು ಹೇಳಿದ್ದಾರೆ.

ಅಡವೀ ಕೃಷ್ಣಾಚಾರ್ಯರ ಲಘುರಸರಂಜನೀ ಎಂಬ ಟಿಪ್ಪಣಿಯಲ್ಲಿ ಹೀಗಿದೆ — "ಶ್ರೀಮನ್ನ್ಯಾಯ-ಸುಧಾಶಬ್ದನಿಚಯೈಃ ವಾಚ್ಯಾಂ ಭಜೇ ಭಕ್ತಿತಃ" ಎಂದು. ಹಾಗೂ "ಸುಧಾದಿಟೀಕಾಕೃದಭೀಷ್ಟ-ಶಿಷ್ಯರಾಟ್" ಸುಧಾ ಎಂಬ ಶಬ್ದದಿಂದ ವ್ಯವಹರಿಸಿದ್ದಾರೆ.

ಹೀಗೆ ಟಿಪ್ಪಣೀಗ್ರಂಥಗಳಲ್ಲಿ ಗ್ರಂಥದ ನಾಮದ ವಿಷಯದಲ್ಲಿ "ಇದೇ ನಾಮದಿಂದಲೇ ಕರೆಯ-ಬೇಕು" ಎಂಬ ನಿರ್ಬಂಧವೇನೂ ಕಂಡಿಲ್ಲ.

## ನ್ಯಾಯಸುಧಾ ಅಥವಾ ಶ್ರೀಮನ್ನ್ಯಾಯಸುಧಾ ಪದದ ವಿವರಣೆ

ನ್ಯಾಯಸುಧಾ ಎಂಬ ಪದದ ವ್ಯುತ್ಪತ್ತಿಯನ್ನು ವ್ಯಾಖ್ಯಾನಕಾರರು ಹೀಗೆ ತಿಳಿಸಿದ್ದಿದೆ —

**ಯಾದುಪತ್ಯ – ನ್ಯಾಯಸುಧೇತಿ ॥** ಅಮೃತಹೇತುತ್ವೇನ ಸುಧಾರೂಪಾಃ ನ್ಯಾಯಾಃ ಯಸ್ಯಾಮ್ ಇತಿ ವಿಗ್ರಹಃ । ಅಗ್ನ್ಯಾಹಿತಾದಿವತ್ ಪರನಿಪಾತಃ ।

ವಿಠೀಬಾಳಾಚಾರ್ಯರು – ಅಮೃತಹೇತುತಯಾ ಸುಧಾರೂಪಾಃ ನ್ಯಾಯಾಃ ಯಸ್ಯಾಂ ಸಾ ನ್ಯಾಯಸುಧಾ । ಆಹಿತ-ಅಗ್ನ್ಯಾದಿವತ್ (ವಾ ಆಹಿತಾಗ್ನ್ಯಾದಿಷು) ಪೂರ್ವನಿಪಾತಃ ಇತ್ಯಾಹುಃ ।

ನ್ಯಾಯಾನಾಂ ಸಮೂಹಃ ನ್ಯಾಯಮ್ । ತಸ್ಯ ಸಮೂಹ ಇತ್ಯಣ್ । ತದೇವ ಸುಧಾ ಇತಿ ವಾ । ತದೇವ ಸುಧಾ ಯಸ್ಯ ಸಾ ಇತಿ ವಾ । ಆಯಾನಾಂ ಸ್ವಾಮಿಗ್ರಾಹ್ಯಭಾಗಾನಾಂ ಸಮೂಹಃ ಆಯಮ್ । ಪ್ರಾಗ್ವತ್ ಅಣ್ । ನಿತರಂ **ಆಯಾನಾಂ** ಸ್ವಾಮಿಗ್ರಾಹ್ಯಭಾಗಾನಾಂ ಸಮೂಹಃ ಯಸ್ಯಾಂ ಸಾ ತಥೋಕ್ತಾ । ಸಾ ಚ ಸಾ **ಸುಧಾ** ಚ ಇತಿ ವಾ ವಯಂ ಪ್ರತೀಮಃ । 'ತದಸ್ಮಿನ್ ವೃದ್ಧ್ಯಾಯ-ಲಾಭಶುಲ್ಕೋಪದಾ ದೀಯತೇ' (ಪಾ.ಸೂ. 5.1.47) ಇತಿ ಸೂತ್ರೇ ಆಯಃ ಸ್ವಾಮಿಗ್ರಾಹ್ಯಭಾಗಃ ಇತಿ ವ್ಯಾಖ್ಯಾನಾತ್ ।

ನ್ಯಾಯ ಎಂಬ ಶಬ್ದದ ವ್ಯುತ್ಪತ್ತಿ ಹೀಗಿದೆ – ನೀಯಂತೇ ಏಭಿಃ ಇತಿ ನ್ಯಾಯಾಃ ಎಂದು. ಅಂದರೆ, ಸಮೀಚೀನವಾದ ಅರ್ಥವು ಯಾವುದರಿಂದ ತಿಳಿಯಲ್ಪಡುತ್ತದೋ ಅದನ್ನು ನ್ಯಾಯ ಎಂದು ಅರ್ಥಾತ್ ಯುಕ್ತಿಗಳು. ಸುಧಾ ಎಂದರೆ ಸುಷ್ಠು ಧೀಯತೇ - ಎಂದು ವರ್ಣಿಸುತ್ತಾರೆ. ಚೆನ್ನಾಗಿ ಸ್ವೀಕರಿಸಲ್ಪಡುವುದನ್ನು ಸುಧಾ ಎನ್ನುತ್ತಾರೆ. ಸುಧಾರೂಪವಾದ ನ್ಯಾಯಗಳು ಯಾವ ಗ್ರಂಥದಲ್ಲಿ ಇದೆಯೋ ಅದನ್ನು ನ್ಯಾಯಸುಧಾ ಎನ್ನುತ್ತಾರೆ. ಹಿಂದೆ ಕ್ಷೀರಸಮುದ್ರದ ಮಥನವಾದಾಗ ಅಮೃತವು ಹುಟ್ಟಿತು. ಅದರಂತೆ ಈ ನ್ಯಾಯಸುಧೆಯೂ ಅನುವ್ಯಾಖ್ಯಾನವೆಂಬ ಅಮೃತ-ಸಮುದ್ರದಲ್ಲಿ ಹುಟ್ಟಿದೆ. ಅಮೃತಕ್ಕೆ ಕಾರಣವಾದ ನ್ಯಾಯಗಳು ಇರುವ ಈ ಗ್ರಂಥಕ್ಕೆ ನ್ಯಾಯ-ಸುಧಾ ಎಂದು ಕರೆದಿದ್ದಾರೆ. ಇಲ್ಲಿ ಕ್ಷೀರಸಮುದ್ರಮಥನದಿಂದ ಬಂದ ಅಮೃತಕ್ಕೂ ಈ ನ್ಯಾಯಸುಧಾಕ್ಕೂ ಹೋಲಿಕೆಯು ಅಮೃತಹೇತುತ್ವೇನ ಇದೆ. ಇಲ್ಲಿ ಅಮೃತ ಎಂದರೆ ಭಗವಂತ ಅಥವಾ ಮೋಕ್ಷ ಎಂದರ್ಥ. 'ಅಮೃತಃ ಶಾಶ್ವತಃ ಸ್ಥಾಣುಃ' ಎಂದು ವಿಷ್ಣುಸಹಸ್ರನಾಮ, ಹಾಗೂ 'ಅಪಾಮ ಸೋಮಮಮೃತಾ ಅಭೂಮ' ಎಂದು ಶ್ರುತಿ ಇರುವುದರಿಂದ. ಆ ಭಗವಂತನ ಜ್ಞಾನಕ್ಕೆ ಕಾರಣವಾದದ್ದಾದ್ದರಿಂದ ಇದನ್ನೇ ಅಮೃತ ಎಂದು ಕರೆದಿದ್ದಾರೆ. ಅರ್ಥಾತ್ ಸುಧಾ ಎಂದು ಕರೆದಿದ್ದಾರೆ.

ಇಲ್ಲಿ ನ್ಯಾಯಸುಧಾಪದಗಳಿಗೆ ವಿಗ್ರಹ ಮಾಡಿದಾಗ ಯದ್ಯಪಿ ಪೂರ್ವನಿಪಾತವು ಸುಧಾಪದಕ್ಕೆ ಬರಬೇಕು. ವಿಶೇಷಣವಾಚಕಪದವಾದ್ದರಿಂದ.

ಆಗ ಸುಧಾನ್ಯಾಯ ಎಂದಾಗಬೇಕು. ಆದರೆ ವಾ ಆಹಿತಾಗ್ನ್ಯಾದಿಷು ಎಂಬ ಪಾಣಿನಿಯ ಸೂತ್ರದ ಪ್ರಕಾರ ನ್ಯಾಯಸುಧಾ ಎಂದಾಗಿದೆ.

ಅಥವಾ ನ್ಯಾಯಸುಧಾಶಬ್ದಾರ್ಥವನ್ನು ಹೀಗೂ ವಿವರಿಸಬಹುದು. ಜ್ಞಾನಿಗಳಿಂದ ಗ್ರಾಹ್ಯವಾದ ಭಾಗವು ಬಹಳಷ್ಟು ಈ ಗ್ರಂಥದಲ್ಲಿ ಇದೆ. ಅಂತಹ ಜ್ಞಾನಿಗ್ರಾಹ್ಯವಾದ ಅನೇಕ ನ್ಯಾಯಗಳ ಸಮೂಹವೇ ಸುಧಾ ಅರ್ಥಾತ್ ಅಮೃತ. ಆದ್ದರಿಂದ ಈ ಗ್ರಂಥಕ್ಕೆ ನ್ಯಾಯಸುಧಾ ಎಂದು ಹೆಸರು.

ಶ್ರೀಮನ್ನ್ಯಾಯಸುಧಾ ಎಂದಿಟ್ಟುಕೊಂಡಾಗ ವಿಗ್ರಹ ಹೀಗೆ – ಶ್ರೀಮಂತಶ್ಚ ತೇ ನ್ಯಾಯಾಶ್ಚ ಶ್ರೀಮನ್ನ್ಯಾಯಾಃ । ಸುಧಾರೂಪಾಃ ಶ್ರೀಮನ್ನ್ಯಾಯಾಃ ಯಸ್ಯಾಂ ಸಾ = ಶ್ರೀಮನ್ನ್ಯಾಯಸುಧಾ । ಇಲ್ಲಿ ಶ್ರೀಮಂತವಾದ ನ್ಯಾಯಗಳು ಎಂದರೆ ಬೇರೆ ಪ್ರತಿವಾದಿಯುಕ್ತಿಗಳಿಂದ ತಡೆಯಿಲ್ಲದ ನ್ಯಾಯಗಳು ಎಂದರ್ಥ.

ಹೀಗೆ ನ್ಯಾಯಸುಧಾ ಅಥವಾ ಶ್ರೀಮನ್ನ್ಯಾಯಸುಧಾಪದದ ವಿವರಣೆಯನ್ನು ಕಾಣಬಹುದು.

## ಬಗೆ ಬಗೆಯಲ್ಲಿ ಶ್ರೀನ್ಯಾಯಸುಧೆಯ ಪ್ರಶಂಸೆ

**ವಾಗ್ವಜ್ರ** – ವಾಗ್ವಜ್ರ ಎಂಬ ಮಹಾಗ್ರಂಥನಿರ್ಮಾಣಕ್ಕೆ ಮೂಲ ಶ್ರೀಮನ್ನ್ಯಾಯಸುಧಾ.

(ಶ್ರೀಪಾದರಾಜರು)

**ಗುರ್ವರ್ಥದೀಪಿಕಾ** – 'ಶ್ರೀಕರೋಽಯಂ ಗ್ರಂಥಃ ತತ್ರ ವಯಮೇವ ಸಾಕ್ಷಿಣಃ'

(ಶ್ರೀವಾದಿರಾಜರು)

**ಪರಿಮಳ** – ಪ್ರತ್ಯಕ್ಷರಂ ಪ್ರತಿಪದಂ ಅನೇಕಾಕೂತಿಗರ್ಭಿತಾ ।
ಪ್ರತಿಭಾತಿ ಸುಧಾಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ ॥

ಸುಧಾದಲ್ಲಿನ ಪ್ರತಿಯೊಂದು ಅಕ್ಷರಗಳು ಪ್ರತಿಯೊಂದು ಪದಗಳೂ ಅನೇಕ ಅಭಿಪ್ರಾಯಗಳನ್ನೊಳಗೊಂಡಿದೆಯೆಂದು ತೋರುವುದು. ಹೀಗಿದ್ದರೂ ನನ್ನ ಗ್ರಂಥವು ಅಲ್ಪವಾಗಿರಲಿ ಎಂದು ಸುಧೆಯ ಎಲ್ಲ ಅಭಿಪ್ರಾಯವನ್ನು ಹೇಳುತ್ತಿಲ್ಲ. (ಶ್ರೀರಾಘವೇಂದ್ರಸ್ವಾಮಿಗಳು)

**ಕಂಬಾಲೂರು ಶ್ರೀರಾಮಚಂದ್ರತೀರ್ಥರು** – ನ್ಯಾಯಸುಧಾಸೇವನೆಯಲ್ಲಿ ಆಸಕ್ತವಾದ ಮನಸ್ಸುಳ್ಳವರು ಜ್ಞಾನಿಗಳಾಗುವರು.

**ಯಾದುಪತ್ಯ** – ಶ್ರೀಜಯಮುನಿಗಳು ಮಾಡಿದ ನ್ಯಾಯಸುಧಾ ಅಗಾಧ, ಅಪಾರ.

(ಶ್ರೀಯದುಪತ್ಯಾಚಾರ್ಯರು)

**ವಾಕ್ಯಾರ್ಥಚಂದ್ರಿಕಾ** – ನ್ಯಾಯಸುಧೆಯು ಗಂಗೆಗೆ ಸಮಾನ. (ಶ್ರೀವಿದ್ಯಾಧೀಶತೀರ್ಥರು)

**ವಾಕ್ಯಾರ್ಥರತ್ನಮಾಲಾ** – ನ್ಯಾಯಸುಧಾ ಗಂಭೀರಭಾವಾನ್ವಿತಾ. ದುರ್ವಾದೀರಿತಮೂಕತಾಪಸರಣೀ, ಶ್ರೀಮಧ್ವೋಕ್ತಿವಿಕಾಸನೀ. (ಶ್ರೀಪಾಂಡುರಂಗೀ ನರಸಿಂಹಾಚಾರ್ಯರು)

**ಕುಂಡಲಗಿರೀಯ ಟಿಪ್ಪಣೀ** – ನ್ಯಾಯಸುಧಾಪಾನದಿಂದ ಸತ್ಸಂಪತ್ತಿಯ ಪ್ರಾಪ್ತಿ ಪ್ರತಿವಾದಿಗಳ ಅಭಾವ. (ಕುಂಡಲಗಿರಿಆಚಾರ್ಯರು)

**ವಿಟ್ಠಲಭಟ್ಟೀಯಾ** – ಅನುವ್ಯಾಖ್ಯಾನವೆಂಬ ಕ್ಷೀರಸಮುದ್ರದ ಮಥನದಿಂದ ಸಮುದ್ಧೃತವಾದ ಸುಧಾ.

**ಶ್ರೀಮಾದನೂರುವಿಷ್ಣುತೀರ್ಥರು** – ಸುರೇಂದ್ರಮುಖನಂದಿನಿಯಾದ ದಿತಿಸುತೇಂದ್ರ- ದಿಗ್ವ್ಯಾಪಿನಿಯಾದ ಮಹೇಂದ್ರತನುಸಂಭವಳಾದ ಮಹೇಂದ್ರಗೋತ್ರೋದ್ಭವಳಾದ, ದುರಿತದಾವಜಹ್ವೆಯಂತಿರುವ ಸುಧಾ.

**ಶ್ರೀಅಡವೀಕೃಷ್ಣಾಚಾರ್ಯರು** – ಟೀಕಾರಾಯರ ಗ್ರಂಥಗಳೆಲ್ಲವೂ ಸಪ್ತತ್ರಿಂಶತಿಮೂಲಸಂಘವಿವೃತಿ.

**ಶ್ರೀಮನ್ನಾರೀಕೃಷ್ಣಾಚಾರ್ಯರು** – ಗಭೀರದ್ಯುಸರಿನ್ನಿಭಾ ಸುಧಾ.

ಹೀಗೆ ಅನೇಕ ಟಿಪ್ಪಣಿಕಾರರು ವಿಧವಿಧವಾಗಿ ಶ್ರೀಮನ್ನ್ಯಾಯಸುಧೆಯನ್ನು ಸ್ತುತಿಸಿದ್ದಾರೆ.

## ಈ ಕೃತಿಯ ಭಾಗದಲ್ಲಿ ಬಂದ ಕಂಬಾ. ಟಿಪ್ಪಣಿಯ ವಿಶೇಷಾಂಶ

ಕೇವಲ ಒಂದೆರಡೇ ಉದಾಹರಣೆ ನಿಮ್ಮ ಮುಂದೆ ನೀಡಲಾಗಿದೆ. ಇದು ದಿಕ್ಪ್ರದರ್ಶನವಷ್ಟೆ.

(१) कारणानीति ॥ **वस्तुनिर्धारणद्वारा अभिवादने प्रणामे कारणानीत्यर्थः ।** 'विभवादनेकानि' **इति पाठे विभवादैश्वर्यालक्षणदारिद्र्याभावादनेकानीत्यर्थः ।** **(ಪುಟ 627)**

(२) निर्दोषमित्यनेनेति ॥ निर्दोषमि**त्यनेनैकं लक्षणमुदितमित्यन्वयः । न च वाच्यं निर्दोषपदेन दोष्यन्यत्वं दोषसंसर्गाभाववत्त्वं चेति लक्षणद्वयमुदितमिति वक्तुं शक्यत्वात् कथमेवमुच्यत इति । 'निर्गता दोषा यस्मात् स निर्दोषः' इति दोषसंसर्गाभावस्यैव प्रतीतेः । न चैवमपि दोषसंसर्गाभावस्य प्रागभावध्वंसरूपत्वे ब्रह्मण्यसम्भवः, अत्यन्ताभावरूपत्वे तु प्रामाणिकस्य तदसम्भव इति वाच्यम् । स्वानुयोगिकदोषप्रतियोगिकसंसर्गविशेषात्यन्ताभाववत्त्वस्य** निर्दोषपदेन **विवक्षितत्वादिति ॥** **(ಪುಟ 627)**

ಇವುಗಳ ವಿವರಣೆಯನ್ನು ಮೇಲೆ ನಿರ್ದೇಶಿಸಿದ ಪುಟಗಳಲ್ಲಿ ನೋಡಿ.

## ಕೃತಜ್ಞತಾ ಅರ್ಪಣೆ

ಮೊದಲಿಗೆ ಪ್ರಾತಃಸ್ಮರಣೀಯರಾದ ನನ್ನ ಗುರುಗಳಾದ, ನ್ಯಾಯಸುಧಾದಿಗ್ರಂಥಗಳನ್ನು ಉಪದೇಶಿಸಿ ಪರಮಾನುಗ್ರಹ ಮಾಡಿದ ಯತಿಕುಲಚಕ್ರವರ್ತಿಗಳಾದ ಪರಮಪೂಜ್ಯ **1008 ಶ್ರೀಶ್ರೀವಿಶ್ವೇಶ-ತೀರ್ಥಶ್ರೀಪಾದಂಗಳವರಿಗೆ** ಅನಂತಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತೇನೆ. ಈ ಕೃತಿಯ ರಚನೆಗೆ ಅವರು ಮಾಡಿದ ವಿದ್ಯೋಪದೇಶವೇ ಮುಖ್ಯ ಬಲ.

ಶ್ರೀವ್ಯಾಸತ್ರಯಸಮುದ್ರಪಾರಾವಾರಪಾರೀಣರಾದ ಶ್ರೀವ್ಯಾಸರಾಜಗುರುಸಾರ್ವಭೌಮವಿದ್ಯಾ-ಕರ್ನಾಟಕಸಿಂಹಾಸನಾಧೀಶ್ವರರಾದ **1008 ಶ್ರೀಶ್ರೀ ವಿದ್ಯಾಶ್ರೀಶತೀರ್ಥಶ್ರೀಪಾದರನ್ನು** ಇಲ್ಲಿ ಅವಶ್ಯ ಸ್ಮರಿಸಲೇಬೇಕು. ಅವರು ಎಂದಿನಂತೆಯೇ ಈ ವರ್ಷವೂ ಈ ಕೃತಿಯ ಸಂಪಾದನೆಗೆ ಪರಮಾನುಗ್ರಹ ಮಾಡಿ ಆಶೀರ್ವದಿಸಿ ವಿಶೇಷವಾದ ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ಅವರಿಗೆ ಅನಂತಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತೇನೆ.

ನನಗೆ ಚಿಕ್ಕಂದಿನಿಂದಲೂ ತೀರ್ಥಪ್ರಬಂಧ, ಭಾಗವತಸಾರೋದ್ಧಾರ ಮೊದಲಾದ ಗ್ರಂಥಗಳ ಪರೀಕ್ಷೆಯನ್ನು ಮಾಡಿ, ಹರಸಿ ಅನುಗ್ರಹಿಸಿರುತ್ತಿರುವ ಪೇಜಾವರಮಠಾಧೀಶರಾದ ಪೂಜ್ಯ **1008 ಶ್ರೀಶ್ರೀ ವಿಶ್ವಪ್ರಸನ್ನತೀರ್ಥಶ್ರೀಪಾದರಿಗೆ** ಅನಂತಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ಪಾಠಮಾಡಿ ಅನುಗ್ರಹಿಸಿದ ಎಲ್ಲ ನನ್ನ ಗುರುಗಳಿಗೂ ಸಾಷ್ಟಾಂಗ-ಪ್ರಣಾಮಗಳು.

ಈ ಕೃತಿಯು ಹೊರಬರುವಲ್ಲಿ ಸಹಕಾರಮಾಡಿ ಪ್ರೋತ್ಸಾಹಿಸಿದ ಶ್ರೀವ್ಯಾಸತೀರ್ಥಸಂಶೋಧನಾ-ಪ್ರತಿಷ್ಠಾನದ ನಿದೇಶಕರಾದ **ಡಾ|| ಡಿ.ಪಿ. ಮಧುಸೂದನಾಚಾರ್ಯರಿಗೆ** ವಂದನೆಗಳು.

ಇನ್ನು ಈ ಕೃತಿಯ ಪ್ರಾರಂಭದ ಹಂತದಿಂದ ಕೊನೆಯ ಹಂತದವರೆಗೂ ಅವಿಚ್ಛಿನ್ನವಾಗಿ ಸೂಕ್ತ ಸಲಹೆಗಳನ್ನು ಪದೇ ಪದೇ ನೀಡುತ್ತ ಈ ಕೃತಿಯ ಪೂರಣೆಗೆ ಮುಖ್ಯಪಾತ್ರರಾದ ತಾಯಿತಂದೆಯ-ರಾದ ಶ್ರೀಮತಿ ರಮಾದೇವಿ(ಸುಜಾತಾ) ಹಾಗೂ ಶ್ರೀ ಸುಬ್ಬಣ್ಣ ಕೆಂಪದಾಳಿಹಳ್ಳಿ ಅವರಿಗೆ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಇನ್ನು ಈ ಕೃತಿಯು ಸಂಪೂರ್ಣಸುಂದರವಾಗಿ ಬರಲು ಡಿ.ಟಿ.ಪಿ. ಮಾಡುವ ಜೊತೆಗೆ ಗ್ರಂಥದ ಪೂರಣೆಗೂ ವಿಶೇಷವಾದ ಸಹಕಾರವನ್ನು ಮಾಡಿದ ತೀರ್ಥರೂಪರಾದ ಶ್ರೀ ಸುಬ್ಬಣ್ಣ ಕೆಂಪ-ದಾಳಿಹಳ್ಳಿ ಅವರಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಗುರುಮಠದ ಗುರುಗಳ ಸೇವೆಯನ್ನೇ ಪ್ರಧಾನವಾಗಿ ಉದ್ದೇಶಿಸಿಕೊಂಡು ಹೊರಟ ಈ ಗ್ರಂಥದಲ್ಲಿ ಯಾವುದಾದರೂ ದೋಷಗಳಿದ್ದಲ್ಲಿ ವಿದ್ವಾಂಸರು ಕ್ಷಮಿಸಬೇಕೆಂದು ಪ್ರಾರ್ಥಿಸುವೆ.

ಈ ಕೃತಿಯ ನಿರ್ಮಾಣದಿಂದ ಶ್ರೀಶ್ರೀವಿದ್ಯಾಶ್ರೀಶತೀರ್ಥಗುರ್ವಂತರ್ಗತಶ್ರೀಕಂಬಾಲೂರು ರಾಮ-ಚಂದ್ರತೀರ್ಥರು ಪ್ರೀತರಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತಾ ವಿರಮಿಸುತ್ತೇನೆ.

ಇತಿ

ಶ್ರೀವ್ಯಾಸರಾಜಪಾದಪದ್ಮಾರಾಧಕ,

**ಕೆ.ಎಸ್.ಕೃಷ್ಣಾಚಾರ್ಯ ಕೆಂಪದಾಳಿಹಳ್ಳಿ**

॥ श्रीमद्धनुमद्भीममध्वान्तर्गतनरहरिरामकृष्णवेदव्यासाय नमः ॥
॥ श्रीमन्मूलगोपालकृष्णो विजयते ॥

ಶ್ರೀಮಜ್ಜಯತೀರ್ಥಯತಿಗಳು ರಚಿಸಿದ

# ಶ್ರೀಮನ್ನ್ಯಾಯಸುಧಾ

ಶ್ರೀಕಂಬಾಲೂರು ರಾಮಚಂದ್ರತೀರ್ಥ-ರ ಟಿಪ್ಪಣೀ

ಕನ್ನಡಾನುವಾದ-ವಿವರಣೆ ಸಹಿತ

(ಶ್ರೀಮನ್ನ್ಯಾಯಸುಧಾ-ಪ್ರತಿಪದಾರ್ಥ ಹಾಗೂ ಅನೇಕಟಿಪ್ಪಣಿಗಳ ವಿಶೇಷಾಂಶಗಳೊಂದಿಗೆ)

## ಪ್ರಥಮಭಾಗ

(ಜಿಜ್ಞಾಸಾಧಿಕರಣ — 'ನಾರಾಯಣಂ ನಿಖಿಲಪೂರ್ಣ-
ಗುಣೈಕದೇಹಂ' ಪದ್ಯದ ಸಮಾಪ್ತಿಪರ್ಯಂತ)

### ಶ್ರಿಯಃಪತ್ಯೇ ಶ್ಲೋಕದ ಪ್ರತಿಪದಾರ್ಥ ಹಾಗೂ ಸಾರ

ओं ॥ श्रियःपत्ये नित्यागणितगुणमाणिक्यविशद-
प्रभाजालोल्लासोपहतसकलावद्यतमसे ।
जगज्जन्मस्थेमप्रलयरचनाशीलवपुषे
नमोऽशेषाम्नायस्मृतिहृदयदीप्ताय हरये ॥१ ॥

**ಅನ್ವಯಾರ್ಥ** - ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯ-ತಮಸೇ = ನಿತ್ಯ - ಎಂದಿಗೂ ನಾಶವಾಗದ, ಅಗಣಿತ - ಎಣಿಸಲಾಗದ, ಗುಣ - ಸದ್ಗುಣಗಳೆಂಬ, ಮಾಣಿಕ್ಯ - ಮಾಣಿಕ್ಯ ಎಂಬ ಮಣಿವಿಶೇಷಗಳ, ವಿಶದ - ವಿಸ್ತೃತವಾದ, ಪ್ರಭಾ - ಕಾಂತಿಗಳ, ಜಾಲ - ಸಮೂಹದ, ಉಲ್ಲಾಸ - ಕಾರ್ಯೋನ್ಮುಖತೆಯಿಂದ, ಉಪಹತ - ಸರ್ವದಾ ಇಲ್ಲದಿರುವ, ಸಕಲ - ಎಲ್ಲ , ಅವದ್ಯ -ದೋಷಗಳೆಂಬ, ತಮಸೇ - ಕತ್ತಲೆಯುಳ್ಳ ; ಜಗಜ್ಜನ್ಮಸ್ಥೇಮಪ್ರಲಯರಚನಾಶೀಲ-ವಪುಷೇ = ಜಗತ್ - ಭಗವಂತನಿಗಿಂತ ಬೇರೆಯಾದ, ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾದ ಈ ಜಗತ್ತಿನ, ಜನ್ಮ - ಸೃಷ್ಟಿ, ಸ್ಥೇಮ - ಸ್ಥಿತಿ, ಪ್ರಲಯ - ಸಂಹಾರಗಳನ್ನು, ರಚನಾ - ಮಾಡುವ, ಶೀಲ - ಸ್ವಭಾವದ, ವಪುಷೇ - ದೇಹವುಳ್ಳ ; ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ = ಅಶೇಷ -ಸಕಲ,

ಆಮ್ನಾಯ - ವೇದ, ಸ್ಮೃತಿ - ಸ್ಮೃತಿಗಳ, ಹೃದಯ - ತಾತ್ಪರ್ಯಕ್ಕೆ (ಅಂತರಂಗದಿಂದ), ದೀಪ್ತಾಯ - ವಿಷಯನಾದ (ಪ್ರಕಾಶಿತನಾದ); ಶ್ರಿಯಃಪತ್ಯೇ = ಲಕ್ಷ್ಮೀಯ ಪತಿಯಾದ; ಹರಯೇ = ನಾರಾಯಣನಿಗೆ; ನಮಃ = ನಮಸ್ಕಾರವು.

ಸಾರ – ಟೀಕಾಚಾರ್ಯರು ತಮ್ಮ ಗ್ರಂಥದ ಮೊದಲಿಗೆ ಮಂಗಲಾಚರಣೆಯನ್ನು ಮಾಡಿರುತ್ತಾರೆ. ಈ ಮಂಗಲಾಚರಣೆಯಲ್ಲಿ ಲಕ್ಷ್ಮೀಪತಿಯಾದ ನಾರಾಯಣನಿಗೆ ನಮಸ್ಕರಿಸಿದ್ದಾರೆ. ಆ ನಾರಾಯಣನು ಹೇಗಿದ್ದಾನೆ? ಎಂದು ವಿವರಿಸಿದ್ದಾರೆ. ಹೇಗೆ ಮಾಣಿಕ್ಯವು ತನ್ನ ವಿಸ್ತಾರವಾದ ಪ್ರಭೆಯ ಸಮೂಹದಿಂದ ಕತ್ತಲೆಯನ್ನು ಇಲ್ಲದಂತೆ ಮಾಡುವುದೋ, ಅದೇ ರೀತಿ ನಾರಾಯಣನೂ ಕೂಡ ತನ್ನ ಅಪರಿಮಿತವಾದ ಎಂದಿಗೂ ಉತ್ಪತ್ತಿನಾಶವಿಲ್ಲದ ಗುಣಗಳ ಸಮೂಹದಿಂದ ಯಾವಕಾಲದಲ್ಲೂ ಎಲ್ಲ ರೀತಿಯಾದ ದೋಷಗಳೂ ಇಲ್ಲದವನು. ಇಡೀ ಜಗತ್ತಿಗೆ ಅರ್ಥಾತ್ ಚೇತನಾಚೇತನಾತ್ಮಕಪ್ರಪಂಚಕ್ಕೆ, ಅವರವರಿಗೆ ಯೋಗ್ಯವಾದ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವುಗಳನ್ನುಂಟುಮಾಡುವ ಸ್ವಭಾವವುಳ್ಳ ದೇಹವನ್ನು ಹೊಂದಿರುವನು. ಹಾಗೆಯೇ ಇಡೀ ವೇದ ಹಾಗೂ ಸ್ಮೃತಿಗಳ ಅಂತರಂಗದಿಂದ ಪ್ರಕಾಶಗೊಂಡಿರುವವನು. ಇಂತಹ ಲಕ್ಷ್ಮೀಪತಿಯಾದ ಹರಿಗೆ ನಮಸ್ಕಾರವು.

### ಶ್ರೀಕಂಬಾಲೂರುರಾಮಚಂದ್ರತೀರ್ಥರ

### ಟಿಪ್ಪಣಿಯ ಮಂಗಲಾಚರಣೆ

### ಕಮಲಾಪತಿ ಕಾಮಿತಾರ್ಥಪ್ರದ

कल्याणगुणपूर्णाय कामितार्थप्रदायिने । कञ्जजादीड्यपादाय कमलापतये नमः ॥१

ಮಂಗಳಕರವಾದ ಸಕಲ ಸದ್ಗುಣಗಳಿಂದ ಪೂರ್ಣನಾದ, ಭಕ್ತರು ಬಯಸುವ ವಸ್ತುಗಳನ್ನು ಚೆನ್ನಾಗಿ ನೀಡುವ, ಕಮಲದಲ್ಲಿ ಹುಟ್ಟಿದ ಬ್ರಹ್ಮ, ಮುಂತಾದವರಿಂದ ಸ್ತೋತ್ರಮಾಡಲ್ಪಟ್ಟ ಪಾದಗಳುಳ್ಳ, ಲಕ್ಷ್ಮೀಪತಿಯಾದ ನಾರಾಯಣನಿಗೆ ನಮಸ್ಕಾರವು.

### ಶ್ರೀರಂಗಶಾಯೀ ಭಕ್ತೇಷ್ಟದಾಯೀ

अस्पृष्टदोषवपुषेऽशेषकल्याणशालिने । श्रीरङ्गशायिने नित्यं नमो भक्तेष्टदायिने ॥२ ॥

ದೋಷಸ್ಪರ್ಶವೂ ಆಗದ ದೇಹವುಳ್ಳ, ಸಕಲ ಮಂಗಳಗಳನ್ನುಳ್ಳ, ಭಕ್ತರಿಗೆ ಇಷ್ಟವನ್ನು ಕೊಡುವ, ಶ್ರೀರಂಗಕ್ಷೇತ್ರದಲ್ಲಿ ಮಲಗಿರುವ ಪರಮಾತ್ಮನಿಗೆ ನಿತ್ಯವೂ ನಮಸ್ಕಾರವು.

## ರುದ್ರಾದಿಗಳೆಲ್ಲರೂ ಶ್ರೀಮದಾಚಾರ್ಯರ ಕಿಂಕರರು

**यः प्राणिचेष्टा ह्यनिशं तनोति यत्किङ्कराः शङ्करशक्रपूर्वाः ।**
**तं मुख्यवायोरवताररूपं पूर्णप्रबोधं प्रणमामि नित्यम् ॥३ ॥**

ಯಾವ ವ್ಯಕ್ತಿಯು ಪ್ರಾಣಿಗಳ ಚೇಷ್ಟೆಯನ್ನು (ವ್ಯಾಪಾರವನ್ನು) ಪ್ರತಿನಿತ್ಯವೂ ಉಂಟುಮಾಡುತ್ತಾನೋ, ಯಾರ ಭಕ್ತರಾಗಿ ರುದ್ರ ಇಂದ್ರ ಮೊದಲಾದವರಿದ್ದಾರೋ ಅಂತಹ ಶ್ರೀಮುಖ್ಯಪ್ರಾಣನ ಅವತಾರರಾದ ಪೂರ್ಣಪ್ರಜ್ಞರನ್ನು ನಿತ್ಯವೂ ಭಕ್ತಿಶ್ರದ್ಧಾದಿಗಳಿಂದ ನಮಸ್ಕರಿಸುತ್ತೇನೆ.

## ಜ್ಞಾನಿಗಳಾಗಲು ಶ್ರೀಮಜ್ಜಯತೀರ್ಥರ ಸುಧಾಸೇವನೆ ಆವಶ್ಯಕ

**यन्मनोऽभ्युदितन्यायसुधासेवनतत्पराः ।**
**भवन्ति विबुधा लोकास्तं जयार्यमहं भजे ॥४ ॥**

ಜ್ಞಾನಿಗಳ ಲೋಕವು ಯಾರ ಮನಸ್ಸಿನಿಂದ ಉಂಟಾದ ನ್ಯಾಯಸುಧೆಯನ್ನು ಸೇವಿಸುವುದರಲ್ಲಿ ಆಸಕ್ತ-ರಾಗಿರುವರೋ, ಅಥವಾ ಯಾವ ಪಂಡಿತಲೋಕವು ಯಾರ ಮನಸ್ಸಿನಿಂದ ಬಂದ ನ್ಯಾಯಸುಧೆಯನ್ನು ಸೇವನ ಮಾಡುವುದರಿಂದಲೇ ಜ್ಞಾನಿಗಳಾಗುವರೋ, ಅಂತಹ ಜಯತೀರ್ಥರನ್ನು ಭಜಿಸುವೆನು.

## ಸ್ವಮತಮಂಡನಕಾರರು ವ್ಯಾಸಮುನಿಗಳು

**अदायि वित्तं द्विविधं द्विजेभ्यो न्यधायि पादः प्रतिवादिमूर्धनि ।**
**अमण्डि येन स्वमतं परस्य त्वखण्डि तं व्यासमुनिं नमामि ॥५ ॥**

ಯಾರಿಂದ ಬ್ರಾಹ್ಮಣರಿಗೆ ಆಧ್ಯಾತ್ಮಿಕ ಹಾಗೂ ಭೌತಿಕಗಳೆಂಬ ಎರಡು ರೀತಿಯಾದ ಸಂಪತ್ತುಗಳು ಕೊಡಲ್ಪಟ್ಟಿತೋ, ಯಾರಿಂದ ತನ್ನ ಪಾದವು ಪ್ರತಿವಾದಿಗಳ ತಲೆಯ ಮೇಲೆ ಇಡಲ್ಪಟ್ಟಿತೋ, ಯಾರಿಂದ ತನ್ನ ಮತವು ಮಂಡಿಸಲ್ಪಟ್ಟಿತೋ ಹಾಗೂ ಪರಮತವು ಖಂಡಿಸಲ್ಪಟ್ಟಿತೋ, ಅಂತಹ ವ್ಯಾಸಮುನಿಗಳನ್ನು ನಮಸ್ಕರಿಸುತ್ತೇನೆ.

## ಪಟ್ಟಾಭಿರಾಮನ ಪೂಜಕರು ಲಕ್ಷ್ಮೀಕಾಂತತೀರ್ಥರು

**लक्ष्मीकान्तमुनिं वन्दे लक्षणार्यमहं(लक्ष्मणार्यमहं) सदा ।**
**रक्षितान्(लक्षितान्) स्वेन कुर्वाणं लक्षेशान् (लक्ष्मीशान्) भिक्षुकानपि ॥६ ॥**

ತಮ್ಮಿಂದ ಸನ್ಯಾಸಪಡೆದ ಅನೇಕ ಸನ್ಯಾಸಿಗಳನ್ನು ರಕ್ಷಣೆ ಹೊಂದಿದವರನ್ನಾಗಿ ಮಾಡಲ್ಪಟ್ಟ, ಸುಲಕ್ಷಣೋಪೇತನಾದ ಲಕ್ಷ್ಮಣನ ಅಣ್ಣನಾದ ರಾಮನನ್ನು ಅರ್ಥಾತ್ ಪಟ್ಟಾಭಿರಾಮನನ್ನು ಸದಾ ಪೂಜಿಸುವ ಲಕ್ಷ್ಮೀಕಾಂತಮುನಿಗಳನ್ನು ನಾನು ಯಾವಾಗಲೂ ನಮಸ್ಕರಿಸುತ್ತೇನೆ.

ಲಕ್ಷಣ ಎಂದರೆ ಒಳ್ಳೆಯ ಲಕ್ಷಣಗಳಿರುವ ಲಕ್ಷ್ಮಣ. ಅವನಿಗೆ ಆರ್ಯ ಅರ್ಥಾತ್ ಸ್ವಾಮಿ. ಅಣ್ಣ ಎಂದರ್ಥ. ಅರ್ಥಾತ್ ಶ್ರೀರಾಮಚಂದ್ರ. ಇವನನ್ನು ಮಹಂ - ಅಂದರೆ ಪೂಜಿಸುವ. ಮಹ ಪೂಜಾಯಾಂ ಎಂದು ಧಾತು.

### ಪದವಾಕ್ಯಪ್ರಮಾಣಜ್ಞರಾದ ಶ್ರೀವಿಜಯೀಂದ್ರಯತಿಗಳು

**पदवाक्यप्रमाणज्ञान् सौशील्याद्युपशोभितान् ।**
**विजयीन्द्रयतीन्द्राख्यान् सेवे विद्यागुरून् मम ॥७ ॥**

ವ್ಯಾಕರಣ, ಮೀಮಾಂಸಾ, ನ್ಯಾಯಶಾಸ್ತ್ರಗಳನ್ನು ತಿಳಿದಿರುವ, ಒಳ್ಳೆಯ ಸ್ವಭಾವ ಮೊದಲಾದ ಸದ್ಗುಣಗಳಿಂದ ಶೋಭಿಸುತ್ತಿರುವ, ನನ್ನ ವಿದ್ಯಾಗುರುಗಳಾದ ವಿಜಯೀಂದ್ರಯತಿಗಳನ್ನು ಸೇವಿಸುತ್ತೇನೆ.

### ಸರ್ವತಂತ್ರಕೋವಿದರಾದ ಶ್ರೀಶ್ರೀಪತಿತೀರ್ಥರು

**वेङ्कटेशपदासक्तं वादिभङ्गविचक्षणम्[1] ।**
**श्रीपतीन्द्रगुरुं वन्दे सर्वतन्त्रेषु कोविदम् ॥८ ॥**

ಶ್ರೀನಿವಾಸನ ಪಾದಗಳಲ್ಲಿ ಆಸಕ್ತರಾದ, ಸಕಲ ವಾದಿಗಳ ಭಂಗವನ್ನು ಮಾಡುವುದರಲ್ಲಿ ಸಮರ್ಥರಾದ, ಎಲ್ಲಾ ವಿಧವಾದ ಶಾಸ್ತ್ರಗಳಲ್ಲಿ ಕುಶಲರಾದ ಶ್ರೀಪತಿಯೆಂಬ ಗುರುಶ್ರೇಷ್ಠರನ್ನು ವಂದಿಸುತ್ತೇನೆ.

### ನನ್ನ ದೇಶಿಕರು ಶ್ರೀವಲ್ಲಭಯತಿಗಳು

**श्रीवल्लभयतिं शान्तं श्रुतिस्मृतिषु कोविदम् ।**
**शान्तं व्यासमुनेः पौत्रं मम देशिकमाश्रये ॥९ ॥**

ಶಾಂತಸ್ವಭಾವದವರಾದ ಅಥವಾ ಭಗವಂತನಲ್ಲೇ ನೆಟ್ಟ ಮನಸ್ಸುಳ್ಳ, ಶ್ರುತಿಸ್ಮೃತಿಗಳಲ್ಲಿ ಪಂಡಿತರಾದ, ವ್ಯಾಸಮುನಿಗಳ ಪೌತ್ರರಾದ, ನನ್ನ ಗುರುಗಳಾದ ಶ್ರೀವಲ್ಲಭ ಎಂಬ ಯತಿಗಳನ್ನು ಆಶ್ರಯಿಸುತ್ತೇನೆ.

### ಶ್ರೀಹರಿಪ್ರೀತಿಗಾಗಿ ನ್ಯಾಯಸುಧಾವ್ಯಾಖ್ಯಾನದ ರಚನೆ

**अथ तद्दासदासेन रामचन्द्राख्यभिक्षुणा ।**
**श्रीमन्न्यासुधाव्याख्या क्रियते प्रीतये हरेः ॥१० ॥**

ಹೀಗೆ ಎಲ್ಲ ಗುರುಗಳನ್ನು ಸ್ಮರಿಸಿದ ಅನಂತರ ಹರಿಯ ಪ್ರೀತಿಗಾಗಿ ಹರಿಯ ದಾಸರಾದ ಮಧ್ವಾ-

---

(1) वेङ्कटेशपदात् सर्ववादिभङ्गविचक्षणम ।

ಚಾರ್ಯರಾದಿಯಾಗಿ ಶ್ರೀವಲ್ಲಭಯತಿಗಳ ವರೆಗಿನ ಗುರುಗಳ ದಾಸನಾದ, ಅಥವಾ ಶ್ರೀಲಕ್ಷ್ಮೀ-ಕಾಂತತೀರ್ಥರ ಶಿಷ್ಯರಾದ ಶ್ರೀಪತಿತೀರ್ಥರ ಶಿಷ್ಯನಾದ ರಾಮಚಂದ್ರ ಎಂಬ ಸನ್ಯಾಸಿಯಿಂದ ಶ್ರೀ-ಮನ್ನ್ಯಾಯಸುಧೆಗೆ ವ್ಯಾಖ್ಯಾನವು ಮಾಡಲ್ಪಡುತ್ತದೆ.

## ಅವುಗಳನ್ನೇ ಚೆನ್ನಾಗಿ ಪ್ರತಿಪಾದನೆ ಮಾಡಿರಿ

**मद्वाचि दोषा यदि सम्भवेयुस्तथाऽपि तान्नैव बुधा भणन्तु ।**
**गुणैकदृष्टिं परमां विधाय तानेव सम्यक् प्रतिपादयन्तु ॥११ ॥**

ನನ್ನ ಮಾತಿನಲ್ಲಿ ಒಂದು ವೇಳೆ ದೋಷಗಳು ಸಂಭವಿಸಬಹುದು. ಆದರೂ ಅವುಗಳನ್ನು ವಿದ್ವಾಂಸರು ಹೇಳದಿರಿ. ಕೇವಲ ಗುಣಗಳಲ್ಲಿಯೇ ಮುಖ್ಯವಾದ ದೃಷ್ಟಿಯನ್ನಿಟ್ಟು ಅವುಗಳನ್ನೇ ಚೆನ್ನಾಗಿ ಪ್ರತಿಪಾದನೆ ಮಾಡಿರಿ.

ವ್ಯಾ.ವಿ. - ಶ್ರೀಕಂಬಾಲೂರು ರಾಮಚಂದ್ರತೀರ್ಥರು ತಾವು ರಚಿಸಲಿರುವ ಶ್ರೀಮನ್ನ್ಯಾಯಸುಧಾ-ವ್ಯಾಖ್ಯಾನದ ಮೊದಲಿಗೆ ಗುರುದೇವತೆಗಳನ್ನು ಸ್ಮರಿಸಿ ನಮಸ್ಕಾರಾದಿಗಳನ್ನು ಸಲ್ಲಿಸಿರುತ್ತಾರೆ. ಅರ್ಥಾತ್ ಮಂಗಳವನ್ನು ಆಚರಿಸಿದ್ದಾರೆ. ಒಟ್ಟು ಒಂಭತ್ತು ಪದ್ಯಗಳಲ್ಲಿ ಗುರುದೇವತೆಗಳ ಪ್ರಾರ್ಥನೆಯನ್ನು ಕಾಣಬಹುದು. ನಂತರ ಪ್ರತಿಜ್ಞೆ, ಕೊನೆಗೆ ಅವರ ಮಾಡುವ ನಿವೇದನೆ.

ಮೊದಲನೆಯ ಪದ್ಯದಲ್ಲಿ ಲಕ್ಷ್ಮೀಪತಿಯಾದ ನಾರಾಯಣನಿಗೆ ನಮಸ್ಕಾರವನ್ನು ಮಾಡಿರುವರು. ಆ ಲಕ್ಷ್ಮೀನಾರಾಯಣನಿಗೆ ಮೂರು ವಿಶೇಷಣಗಳನ್ನು ನೀಡಿದ್ದಾರೆ. "ಕಲ್ಯಾಣಗುಣಪೂರ್ಣ" "ಕಾಮಿತಾರ್ಥಪ್ರದಾಯಿ" "ಕಂಜಜಾದೀಡ್ಯಪಾದ" ಎಂಬುದಾಗಿ. ಕ್ರಮವಾಗಿ ಇವುಗಳ ಅರ್ಥ ಹೀಗಿದೆ - 'ಗುಣಗಳೆಲ್ಲವೂ ಅವನಲ್ಲಿರುವುದು ಕಲ್ಯಾಣವಾಗಿವೆ' - ಎಂದರೆ ನಾಶರಹಿತವಾಗಿವೆ ಎಂದರ್ಥ. ಇಂತಹ ನಾಶರಹಿತವಾದ ಗುಣಗಳಿಂದ ಪೂರ್ಣನಾಗಿದ್ದಾನೆ, ತುಂಬಿದ್ದಾನೆ ಎಂದರ್ಥ.

ಅಥವಾ ಕಲ್ಯಾಣ ಎಂಬ ಶಬ್ದಕ್ಕೆ ಮಂಗಳಕರವಾದದ್ದು ಎಂದರ್ಥ.

ಹಾಗೆಯೇ ಭಕ್ತರ ಕಾಮನೆಗೆ ಅಂದರೆ ಅವರ ಇಚ್ಛೆಗೆ ವಿಷಯವಾದ ವಸ್ತುಗಳನ್ನು ಚೆನ್ನಾಗಿ ಕೊಡುವವನು ಎಂದು ಎರಡನೆಯ ವಿಶೇಷಣದ ಅರ್ಥ. ಹಾಗೂ ಕಂಜ ಎಂದರೆ ಕಮಲ ಅದರಲ್ಲಿ ಜ ಎಂದರೆ ಹುಟ್ಟಿದವನು ಚತುರ್ಮುಖಬ್ರಹ್ಮ. ಈ ಕಂಜಜನೇ ಮೊದಲಾದವರಿಂದ ನಮಸ್ಕಾರಗೊಳಿಸಲ್ಪಡುವ ಪಾದಗಳುಳ್ಳವನು ಆ ಕಮಲಾಪತಿ ಎಂದರ್ಥ. ಇಲ್ಲಿ ಪಾದ ಎಂದರೆ ಕಾಲುಗಳು ಅಥವಾ ಅವನ ಸ್ವರೂಪವೆಂದರ್ಥ. ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ - ದೊಡ್ಡವರ ಸ್ವರೂಪವನ್ನಾದರೋ ಪಾದ ಎಂಬ ಶಬ್ದದಿಂದ ವ್ಯವಹರಿಸುತ್ತಾರೆ ಎಂದು ಭಾವ.

ಎರಡನೆಯ ಪದ್ಯದಲ್ಲಿ ಶ್ರೀರಂಗಕ್ಷೇತ್ರದಲ್ಲಿ ಶಯನಮಾಡುವ ರೂಪದಲ್ಲಿ ಕಾಣುವ ಪರಮಾತ್ಮನಿಗೆ ನಿತ್ಯವೂ ನಮಸ್ಕಾರ ಮಾಡುವೆನು ಎಂದು ತಿಳಿಸಿದ್ದಾರೆ. ಇವನಿಗೂ ಮೂರು ವಿಶೇಷಣಗಳನ್ನು ನೀಡಿದ್ದಾರೆ. ಅದು ಹೀಗೆ – "ಅಸ್ಪೃಷ್ಟದೋಷವಪು" "ಅಶೇಷಕಲ್ಯಾಣಶಾಲೀ" "ಭಕ್ತೇಷ್ಟದಾಯೀ" ಎಂದು. ಇದರ ಅರ್ಥ ಸ್ಪಷ್ಟ.

ಈ ಪ್ರಾರಂಭದ ಭಾಗದಲ್ಲಿ ಹೀಗೆ ತಿಳಿಯಬೇಕು.

(1) ಕಮಲಾಪತಿಗೆ, (2) ಶ್ರೀರಂಗನಾಥನಿಗೆ (3) ಮಧ್ವಾಚಾರ್ಯರಿಗೆ (4) ಜಯತೀರ್ಥರಿಗೆ (5) ವ್ಯಾಸರಾಜರಿಗೆ (6) ಲಕ್ಷ್ಮೀಕಾಂತತೀರ್ಥರಿಗೆ (7) ವಿಜಯೀಂದ್ರ ಎಂಬ ಯತಿಗಳಿಗೆ, (8) ಶ್ರೀಪತಿತೀರ್ಥರಿಗೆ, (9) ಶ್ರೀವಲ್ಲಭಯತಿಗಳಿಗೆ ನಮಸ್ಕಾರಾದಿಗಳನ್ನು ಮಾಡಿದ್ದಾರೆ.

ಪ್ರಚಯವೆಂದರೆ ವೃದ್ಧಿ ಎಂದರ್ಥ. ಗ್ರಂಥಕ್ಕೆ ವೃದ್ಧಿ ಎಂದರೆ ಪ್ರಸಿದ್ಧಿ ಎಂದರ್ಥ. ಅರ್ಥಾತ್ ಅವಿಚ್ಛಿನ್ನವಾದ ಆ ಗ್ರಂಥದ ಪಠನ, ಪಾಠನ, ವ್ಯಾಖ್ಯಾನಗಳ ಮೂಲಕ ಅಭಿವೃದ್ಧಿ ಎಂದು.

## ಶ್ರಿಯಃ ಎಂಬ ನಿರ್ದೇಶ ಸಾಧು

**कत्वा – श्रीमज्जयतीर्थमुनिः प्रारिप्सितन्यायसुधाया निरन्तरायपरिसमाप्तिप्रचयप्रयोजनकमविगीतशिष्टाचारपरम्परावगतमवश्यकर्तव्यं श्रीहरिप्रणामरूपं मङ्गलं शिष्यान् ग्राहयितुं ग्रन्थादौ निबध्नाति – श्रिय इति ॥ 'क्विब्वचिप्रच्छिश्रिस्रुद्रुप्रुज्वां दीर्घोऽसम्प्रसारणं च' इति श्रिञः क्विपि दीर्घे च निष्पन्नस्य श्रीशब्दस्य 'नेयङुवङ्स्थानावस्त्री'ति नदीसञ्ज्ञानिषेधात्, ङिद्वचने च तत्सञ्ज्ञायां 'ङिति ह्रस्वश्चे'ति विकल्पिततत्वात्, 'श्रियः' इति निर्देशः ।**

ಪೂಜ್ಯರಾದ ಜಯತೀರ್ಥರೆಂಬ ಮುನಿಗಳು ತಾವು ಪ್ರಾರಂಭಿಸಲು ಇಚ್ಛೆ ಪಟ್ಟಿರುವ ನ್ಯಾಯಸುಧಾ ಎಂಬ ಗ್ರಂಥದ ಮೊದಲಿಗೆ ನಿರ್ವಿಘ್ನಪರಿಸಮಾಪ್ತಿ- ಅಭಿವೃದ್ಧಿ ಎಂಬ ಪ್ರಯೋಜನವುಳ್ಳ, ಶಾಸ್ತ್ರವಿರುದ್ಧವಲ್ಲದ ಶಿಷ್ಟಾಚಾರಪರಂಪರೆಯಿಂದ ಬಂದ, ಅವಶ್ಯಮಾಡಬೇಕಾದ, ಶ್ರೀಹರಿಯ ನಮಸ್ಕಾರರೂಪವಾದ ಮಂಗಳವನ್ನು ಶಿಷ್ಯರಿಗೆ ಮಾಡಬೇಕೆಂದು ತಿಳಿಸಲು ಗ್ರಂಥದ ಮೊದಲಿಗೆ ಬರೆಯುತ್ತಾರೆ – "ಶ್ರಿಯಃ" ಎಂಬುದಾಗಿ. "ಕ್ವಿಪ್-ವಚಿ-ಪ್ರಚ್ಛಿ-ಶ್ರಿ-ಸ್ರು-ದ್ರು-ಪ್ರು-ಜ್ವಾಂ ದೀರ್ಘಃ ಅಸಂಪ್ರಸಾರಣಂ ಚ" ಎಂಬ ಉಣಾದಿ ಸೂತ್ರದಿಂದ ಶ್ರಿಞ್ ಧಾತುವಿಗೆ ಕ್ವಿಪ್ ಎಂಬ ಪ್ರತ್ಯಯವು ಹಾಗೂ ದೀರ್ಘವು ಬಂದು ನಿಷ್ಪನ್ನವಾದ ಶ್ರೀಶಬ್ದಕ್ಕೆ ನ-ಇಯಙ್-ಉವಙ್-ಸ್ಥಾನೌ-ಅಸ್ತ್ರೀ ಎಂಬ ಸೂತ್ರದಿಂದ ನದೀಸಂಜ್ಞಾನಿಷೇಧ ಮಾಡಿದ್ದರೂ ಙಿತ್- ಪ್ರತ್ಯಯಗಳಿದ್ದಲ್ಲಿ ನದೀಸಂಜ್ಞೆಯು ವಿಕಲ್ಪವಾಗಿ ಬರುತ್ತದೆಂದು ಹೇಳುವ "ಙಿತಿ ಹ್ರಸ್ವಶ್ಚ" ಸೂತ್ರವಿರುವುದರಿಂದ ಶ್ರಿಯಃ ಎಂಬುದಾಗಿ ನಿರ್ದೇಶಿಸಿದ್ದಾರೆ.

## ಶ್ರಿಯಃ ಶಬ್ದದ ನಿಷ್ಪತ್ತಿಕ್ರಮ

ವ್ಯಾ.ವಿ. - "ಶ್ರಿಯಃಪತ್ಯೇ" ಎಂಬ ಮಂಗಳ ಪದ್ಯದ ಮೊದಲಿನ ಶಬ್ದ ಶ್ರಿಯಃ ಎಂಬುದು. ಇದರ ನಿಷ್ಪತ್ತಿಯು ಹೀಗೆ - ಈ ಶಬ್ದದಲ್ಲಿ ಶ್ರಿಞ್ ಎಂಬುದು ಧಾತು. ಅದರ ಪರಕ್ಕೆ ಕ್ವಿಪ್ ಪ್ರತ್ಯಯ ಬಂದಿದೆ. ಅದಕ್ಕೆ ಸರ್ವಾಪಹಾರಿಲೋಪ ಬರುವುದು ಎನ್ನುವರು. ಅರ್ಥಾತ್ ಅದರಲ್ಲಿ ಯಾವ ಅಕ್ಷರವೂ ಉಳಿಯದೇ ಎಲ್ಲದಕ್ಕೂ ಲೋಪ. ಅದು ಹೀಗೆ - ಶ್ರಿಞ ಎಂಬಲ್ಲಿ ಞಕಾರಕ್ಕೆ 'ಹಲಂತ್ಯಂ' ಎಂಬ ಸೂತ್ರದಿಂದ ಇತ್ ಸಂಜ್ಞೆಯು, ನಂತರ 'ತಸ್ಯ ಲೋಪಃ' ಎಂಬ ಸೂತ್ರದಿಂದ ಲೋಪವು ಬರುವುದು. ನಂತರ 'ಶ್ರಿ'ಸಲ್ಲಿರುವ ಇಕಾರಕ್ಕೆ ದೀರ್ಘಬಂದರೆ 'ಶ್ರೀ' ಎಂಬುದಾಗಿ ನಿಷ್ಪನ್ನವಾಗುವುದು. ಇದಕ್ಕೆ ಪ್ರಮಾಣವಾಗಿ ಕೊಟ್ಟಿರುವ ವ್ಯಾಕರಣಸೂತ್ರ 'ಕ್ವಿಪ್ ವಚಿ ಪ್ರಚ್ಛಿ ಶ್ರಿ ಸ್ರು ದ್ರು ಪ್ರು ಜ್ವಾಂ ದೀರ್ಘೋಽಸಂಪ್ರಸಾರಣಂ ಚ' ಎಂದು. ಇದು ಉಣಾದಿಸೂತ್ರವಾಗಿದೆ.

ಇದೇ ರೀತಿಯ ವಾರ್ತಿಕವೂ ಒಂದಿದೆ. ಸಿದ್ಧಾಂತಕೌಮುದಿಯಲ್ಲಿ 'ಅನ್ಯೇಭ್ಯೋಽಪಿ ದೃಶ್ಯತೇ' (3-2-178) ಎಂಬ ಸೂತ್ರದ ಸಂದರ್ಭದಲ್ಲಿ ಉಲ್ಲಿಖಿತವಾಗಿದೆ. ಅದರ ಸ್ವರೂಪ ಹೀಗೆ. 'ಕ್ವಿಪ್ ವಚಿ ಪ್ರಚ್ಛಿ ಆಯತಸ್ತು ಕಟಪ್ರು ಜು ಶ್ರೀಣಾಂ ದೀರ್ಘಃ ಅಸಂಪ್ರಸಾರಣಂ ಚ' ಎಂದು. ಇಲ್ಲಿಯೇ 'ಶ್ರಯತಿ ಹರಿಂ ಸಾ ಶ್ರೀಃ' ಎಂದು ಕೌಮುದಿಯಲ್ಲಿ ಬಿಡಿಸಿದ್ದಾರೆ. ಅರ್ಥಾತ್ ಯಾರು ಹರಿಯನ್ನು ಆಶ್ರಯಿಸಿದ್ದಾಳೋ ಅಥವಾ ಸೇವಿಸುತ್ತಾಳೋ ಅವಳು ಶ್ರೀ ಎನಿಸುವಳು.

ಕಂಬಾಲೂರು ರಾಮಚಂದ್ರತೀರ್ಥರ ವ್ಯಾಖ್ಯಾನದಲ್ಲಿ ಉಲ್ಲಿಖಿತವಾದ ಉಣಾದಿಸೂತ್ರದ ಅರ್ಥ ಹೀಗಿದೆ - 'ವಚ ಪರಿಭಾಷಣೇ, ಪ್ರಚ್ಛ ಜ್ಞೀಪ್ಸಾಯಾಂ, ಶ್ರಿಞ್ ಸೇವಾಯಾಂ, ಸ್ರು ಗತೌ, ದ್ರು ಗತೌ, ಪ್ರುಙ್ ಗತೌ, ಜು ಗತೌ' ಈ ಧಾತುಗಳಿಗೆ ಕ್ವಿಪ್ ಪ್ರತ್ಯಯವು ಬರುವುದು, ಹಾಗೂ ದೀರ್ಘವೂ ಕೂಡ. ಸಂಪ್ರಸಾರಣವಿಲ್ಲ - ಎಂದು.

ಈ ರೀತಿ 'ಶ್ರೀ'ಶಬ್ದದ ನಿಷ್ಪತ್ತಿಯನ್ನು ತೋರಿಸಿ 'ಶ್ರಿಯಃ' ಎಂಬ ರೂಪದ ಪ್ರಕ್ರಿಯೆಯನ್ನು ತಿಳಿಸುತ್ತಾರೆ. ಇದು ಶ್ರೀಶಬ್ದದ ಷಷ್ಠೀವಿಭಕ್ತಿಯ ಏಕವಚನದ ರೂಪ. ಶ್ರೀ+ಙಸ್ ಎಂದಿದ್ದಾಗ ಙಸ್ ನಲ್ಲಿ ಙಕಾರಕ್ಕೆ 'ಲಶಕ್ವತದ್ಧಿತೇ' ಎಂಬ ಸೂತ್ರದಿಂದ ಙಕಾರಕ್ಕೆ ಇತ್ ಸಂಜ್ಞೆಯು ಬಂದು 'ತಸ್ಯ ಲೋಪಃ' ಎಂಬ ಸೂತ್ರದಿಂದ ಲೋಪವಾಗಲು ಅಸ್ ಎಂದು ಉಳಿದಾಗ 'ಅಚಿ ಶ್ನು-ಧಾತು-ಭ್ರುವೋ ಇಯಙ್-ಉವಙೌ' ಎಂಬ ಸೂತ್ರದಿಂದ ಇಯಙ್ ಎಂಬ ಆದೇಶವು ಬಂದು 'ಸಸಜುಷೋ ರುಃ' ರುತ್ವ ವಿಸರ್ಗ ಮಾಡಿದರೆ 'ಶ್ರಿಯಃ' ಎಂದು ಸಿದ್ಧವಾಗುವುದು.

ಇಲ್ಲಿ ಶ್ರೀಶಬ್ದಕ್ಕೆ ವ್ಯಾಕರಣಶಾಸ್ತ್ರರೀತ್ಯಾ ನದೀಸಂಜ್ಞೆ ಇದೆಯೋ ಇಲ್ಲವೋ ಎಂಬ ಸಂಶಯಬಂದಾಗ ಯದ್ಯಪಿ ಇಲ್ಲ ಎಂದು ತೋರುವುದು. ಏಕೆಂದರೆ, 'ನೇಯಙ್-ಉವಙ್‌ಸ್ಥಾನಾವಸ್ತ್ರೀ' (ಪಾ.ಸೂ.1-4-4) ಎಂಬ ಸೂತ್ರದಿಂದ ನಿಷೇಧವಿದೆ. ಈ ಸೂತ್ರದ ಅರ್ಥ ಹೀಗಿದೆ - ಮೊದಲು ಹೀಗೆ ಪದಚ್ಛೇದ.

ನ. ಇಯಙ್‌ಉವಙ್‌ಸ್ಥಾನೌ, ಅಸ್ತ್ರೀ ಎಂದು. ಒಟ್ಟು ಅರ್ಥ – ಇಯಙ್‌ಉವಙೋಃ ಸ್ಥಿತಿಃ ಯಯೋಃ ತೌ ಈದೂತೌ ನದೀಸಂಜ್ಞೌ ನ ಸ್ತಃ, ನ ತು ಸ್ತ್ರೀ - ಎಂದು. ಅಭಿಪ್ರಾಯ – ಇಯಙ್ ಹಾಗೂ ಉವಙ್ ಆದೇಶಗಳು ಯಾವ ಈಕಾರಾಂತ ಊಕಾರಾಂತಶಬ್ದಗಳಿಗೆ ಬರಲು ಸ್ಥಿತಿಯಿದೆಯೋ, ಅವುಗಳಿಗೆ ನದೀಸಂಜ್ಞೆಯು ಬರುವುದಿಲ್ಲ. ಆದರೆ ಈ ನಿಯಮ ಸ್ತ್ರೀಶಬ್ದಕ್ಕೆ ಅನ್ವಯಿಸುವುದಿಲ್ಲ. ಈ ರೀತಿಯಲ್ಲಿ ನದೀಸಂಜ್ಞಾನಿಷೇಧವು ಬರಲು 'ಙೆತಿ ಹ್ರಸ್ವಶ್ಚ' ಎಂಬ ಸೂತ್ರದಿಂದ ಙೆತ್ತಾದ ಪ್ರತ್ಯಯಗಳು ಪರದಲ್ಲಿದ್ದಾಗ ವಿಕಲ್ಪೇನ ನದೀಸಂಜ್ಞಾವಿಧಾನವನ್ನು ಮಾಡಿದ್ದರಿಂದ ಶ್ರಿಯಃ ಎಂಬ ಶಬ್ದಪ್ರಯೋಗವು ಸಾಧುವಾಗಿದೆ.

## ಸ್ಥೇಮಶಬ್ದ ಸಾಧು

**कम्वा –** जगज्जन्मस्थेमेति ॥ **यद्यपि 'पृथ्वादिभ्य इमनिज्वा' इत्यत्र स्थिरशब्दस्य पृथ्वादिष्वपाठात् 'प्रियस्थिरे'त्यादिना स्थादेशाप्रसक्तेः** स्थेमशब्दस्यानुपपत्तिः । **तथापि 'उणादयो बहुलम्' इति स्थाधातोरौणादिके भावार्थे इमनिच्प्रत्यये 'आतो लोप इटि चे'त्याकारलोपे** स्थेमशब्दः साधुः । **प्रयोगानुसारेणौणादिकप्रत्ययकल्पने अतिप्रसङ्गाभावात् । प्रयोगाणां चाभियुक्तप्रयोगेषु रामानुजभाष्यादिषु –**

अखिलभुवनजन्मस्थेमभङ्गादिलीले विनतविविधभूतव्रातरक्षैकदीक्षे ।
श्रुतिशिरसि विदीप्ते ब्रह्मणि श्रीनिवासे भवतु मम परस्मिन् शेमुषी भक्तिरूपा ॥

**इत्यादावुपलम्भात् । स्थेमशब्दस्योक्तरीत्या स्थाधातुजत्वादेव श्रुतप्रकाशिकायां 'स्थेमा स्थितिः' इति व्याख्यातम्, न तु 'स्थेमा स्थिरत्वम्' इतीति द्रष्टव्यम् ।**

ಯದ್ಯಪಿ - "ಪೃಥ್ವಾದಿಭ್ಯ ಇಮನಿಜ್ವಾ" ಎಂಬ ಸೂತ್ರದಲ್ಲಿ ಪೃಥ್ವಾದಿಗಣದಲ್ಲಿ ಸ್ಥಿರಶಬ್ದವನ್ನು ಹೇಳದೇ ಇರುವ ಕಾರಣ ಇಮನಿಚ್ ಪ್ರತ್ಯಯವು ಬರದೇ ಇರುವುದರಿಂದ "ಪ್ರಿಯ-ಸ್ಥಿರ-ಸ್ಫಿರೋರು-ಬಹುಲ-ಗುರು- ವೃದ್ಧ-ತೃ-ಪ್ರ-ದೀರ್ಘವೃಂದಾರಕಾಣಾಂ ಪ್ರ-ಸ್ಥ-ಸ್ಫ-ವರ್-ಬಂಹಿ-ಗರ್-ವರ್ಷಿ-ತ್ರಪ್-ದ್ರಾಘಿ-ವೃಂದಾಃ" ಎಂಬ ಸೂತ್ರದಿಂದ ಸ್ಥಾ-ಆದೇಶವು ಬರದೇ ಇರುವುದರಿಂದ ಸ್ಥೇಮಶಬ್ದದ ನಿಷ್ಪತ್ತಿಯು ಆಗಲು ಸಾಧ್ಯವಿಲ್ಲ ಎಂಬ ಶಂಕೆಯು ಬರಬಹುದು. ಆದರೂ "ಉಣಾದಯೋ ಬಹುಲಮ್" ಎಂಬ ಸೂತ್ರವಿರುವುದರಿಂದ ಸ್ಥಾ ಎಂಬ ಧಾತುವಿಗೆ ಉಣಾದಿಗಳಲ್ಲಿ ಸೇರಿದ ಇಮನಿಚ್ ಪ್ರತ್ಯಯವು ಭಾವಾರ್ಥದಲ್ಲಿ ಬರಲು "ಆತೋ ಲೋಪ ಇಟಿ ಚ" ಎಂಬ ಸೂತ್ರದಿಂದ ಆಕಾರಲೋಪವಾಗಿ ಸ್ಥೇಮ ಎಂಬುದಾಗಿ ಸಾಧುವಾದ ಶಬ್ದವು ನಿಷ್ಪನ್ನವಾಗುವುದು. ಪ್ರಯೋಗಗಳನ್ನು ಅನುಸರಿಸಿ ಉಣಾದಿ-

ಪ್ರತ್ಯಯಗಳು ಬರುವವು ಎಂದು ಕಲ್ಪಿಸಿದಾಗ ಯಾವುದೇ ಅತಿಪ್ರಸಂಗಕ್ಕೆ ಅವಕಾಶವಿಲ್ಲವಾದ್ದರಿಂದ ಎಂದು ತಿಳಿಯಬೇಕು. ಸ್ಥೇಮ ಎಂಬ ಈ ರೀತಿಯ ಪ್ರಯೋಗಗಳಾದರೂ ಪ್ರಾಮಾಣಿಕರಾದವರ ಪ್ರಯೋಗಗಳಲ್ಲಿ ಹಾಗೂ ರಾಮಾನುಜ ಶ್ರೀಭಾಷ್ಯ ಮೊದಲಾದವುಗಳಲ್ಲಿ -

ಅಖಿಲಭುವನಜನ್ಮಸ್ಥೇಮಭಂಗಾದಿಲೀಲೇ ವಿನತವಿವಿಧಭೂತವ್ರಾತರಕ್ಷೈಕದೀಕ್ಷೇ।
ಶ್ರುತಿಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ ॥

ಮುಂತಾದ ಕಡೆ ಸಿಗುವುದರಿಂದ.

ಸ್ಥೇಮಶಬ್ದವು ಹಿಂದೆ ಹೇಳಿದ ರೀತಿಯಿಂದ ಸ್ಥಾ ಧಾತುವಿನಿಂದಲೇ ಹುಟ್ಟಿದ್ದರಿಂದ ಶ್ರುತಪ್ರಕಾಶಿಕಾ ಎಂಬ ಶ್ರೀಭಾಷ್ಯವ್ಯಾಖ್ಯಾನದಲ್ಲಿ ಸ್ಥೇಮ ಎಂಬುವುದಕ್ಕೆ ಸ್ಥಿತಿಃ ಎಂದು ವ್ಯಾಖ್ಯಾನಿಸಲಾಗಿದೆ ಹೊರತು ಸ್ಥೇಮ ಎನ್ನುವುದಕ್ಕೆ ಸ್ಥಿರತ್ವಂ ಎಂಬುದಾಗಿ ವ್ಯಾಖ್ಯಾನ ಮಾಡಲಿಲ್ಲ - ಎಂಬುದನ್ನು ತಿಳಿಯಬೇಕು.

## ಸ್ಥೇಮಶಬ್ದ ಅನುಪಪತ್ತಿ ಶಂಕೆ ಹಾಗೂ ಪರಿಹಾರ

ವ್ಯಾ.ವಿ. - 'ಸ್ಥೇಮ'ಶಬ್ದದ ನಿಷ್ಪತ್ತಿಯನ್ನು ತಿಳಿಸಿದ್ದಾರೆ. ಸ್ಥಾ ಧಾತುವಿನಿಂದ ನಿಷ್ಪನ್ನವಾದದ್ದು. ಇಲ್ಲಿನ ಆಕ್ಷೇಪ ಹೀಗಿದೆ - 'ಸ್ಥಿರ'ಶಬ್ದಕ್ಕೆ ಯದ್ಯಪಿ ಇಮನಿಚ್ ಪ್ರತ್ಯಯ ಬರಲು ಸಾಧ್ಯವಿಲ್ಲ. ಏಕೆಂದರೆ, ಇಮನಿಚ್ ಪ್ರತ್ಯಯವನ್ನು ವಿಧಾನಮಾಡುವ "ಪೃಥ್ವಾದಿಭ್ಯಃ ಇಮನಿಜ್ವಾ" ಎಂಬ ಸೂತ್ರದಲ್ಲಿ ಪೃಥ್ವಾದಿಗಣದಲ್ಲಿ ಸ್ಥಿರಶಬ್ದ ಪಾಠವಿಲ್ಲ. ಹಾಗಾಗಿ ಸ್ಥಿರಶಬ್ದಕ್ಕೆ ಇಮನಿಚ್ ಪ್ರತ್ಯಯ ಪರದಲ್ಲಿದ್ದಾಗ 'ಸ್ಥಾ' ಎಂಬ ಆದೇಶವು 'ಪ್ರಿಯ ಸ್ಥಿರ' ಎಂಬ ಸೂತ್ರದಿಂದ ಬರಲು ಸಾಧ್ಯವಿಲ್ಲ. ಈ ಸೂತ್ರದ ಸಂಪೂರ್ಣಸ್ವರೂಪ ಹೀಗಿದೆ - "ಪ್ರಿಯ-ಸ್ಥಿರ-ಸ್ಫಿರೋರು-ಬಹುಲ- ಗುರು-ವೃದ್ಧ-ತೃ-ಪ್ರ-ದೀರ್ಘವೃಂದಾರಕಾಣಾಂ ಪ್ರ-ಸ್ಥ-ಸ್ಫ-ವರ್-ಬಂಹಿ-ಗರ್-ವರ್ಷಿ-ತ್ರಪ್-ದ್ರಾಘಿ-ವೃಂದಾಃ" ಇದರ ಅರ್ಥ ಹೀಗೆ - ಪ್ರಿಯಮುಂತಾದ ಹತ್ತು ಶಬ್ದಗಳಿಗೆ ಕ್ರಮವಾಗಿ ಅಂದರೆ ಪ್ರಿಯಶಬ್ದಕ್ಕೆ ಪ್ರ ಎಂಬ ಆದೇಶ, ಹಾಗೆ ಸ್ಥಿರ ಎಂಬ ಶಬ್ದಕ್ಕೆ ಸ್ಥ ಎಂಬ ಆದೇಶ ಹೀಗೆ ಬರುತ್ತವೆ. ಆದರೆ ಪರದಲ್ಲಿ ಇಷ್ಠನ್ ಇಮನಿಚ್ ಮುಂತಾದ ಪ್ರತ್ಯಯಗಳು ಇರಬೇಕು. ಹೀಗಾಗಿ ಸ್ಥೇಮಶಬ್ದದ ನಿಷ್ಪತ್ತಿಯು ಅಸಾಧ್ಯವೆಂದು ತೋರುವುದು.

ಇದಕ್ಕೆ ಉತ್ತರ ಹೀಗಿದೆ - 'ಉಣಾದಯೋ ಬಹುಲಮ್' ಎಂಬ ಪಾಣಿನಿಯ ಸೂತ್ರದಿಂದ ಸ್ಥಾಧಾತುವಿಗೆ ಇಮನಿಚ್ ಪ್ರತ್ಯಯವು ಬರುವುದು. ಏಕೆಂದರೆ ಉಣಾದಿಪ್ರತ್ಯಯಗಳು ನಿರ್ದಿಷ್ಟವಾದ ಧಾತುಗಳಿಗೆ ಮಾತ್ರ ಎಂಬ ನಿಯಮವಿಲ್ಲ. ಶಿಷ್ಟಪ್ರಯೋಗವನ್ನು ಅನುಸರಿಸಿಯೂ ಕಲ್ಪನೆಮಾಡಲು ಸಾಧ್ಯವಿರುವುದರಿಂದ. ಹೀಗೆ ಸ್ಥಾಧಾತುವಿನ ಅರ್ಥದಲ್ಲಿಯೇ ಅರ್ಥಾತ್ ಭಾವಾರ್ಥದಲ್ಲಿ ಇಮನಿಚ್-ಪ್ರತ್ಯಯವು ಬಂದು 'ಆತೋ ಲೋಪ ಇಟಿ ಚ' ಎಂಬ ಸೂತ್ರದಿಂದ ಸ್ಥಾಧಾತುವಿನ

ಆಕಾರಕ್ಕೆ ಲೋಪವು ಬಂದು ನಂತರ 'ಆದ್ಗುಣಃ' ಎಂಬ ಸೂತ್ರದಿಂದ ಗುಣವು ಬಂದು ಸ್ಥೇಮನ್ ಎಂಬ ಶಬ್ದವು ನಿಷ್ಪನ್ನವಾಗುವುದು.

ಇನ್ನು ಈ ರೀತಿಯ ಪ್ರಯೋಗಗಳು ಅಭಿಯುಕ್ತರ ಪ್ರಯೋಗಗಳು ಹಾಗೂ ರಾಮಾನುಜಾಚಾರ್ಯರ ಶ್ರೀಭಾಷ್ಯದ ಮೊದಲಿಗೆ ಬರುವ ನಾಂದೀಪದ್ಯದಲ್ಲಿ ಕಾಣಬಹುದು.

## ರಾಮಾನುಜಾಚಾರ್ಯರ ಶ್ರೀಭಾಷ್ಯದ ಮಂಗಳಪದ್ಯ

ಆ ನಾಂದೀಪದ್ಯದ ಅರ್ಥ ಹೀಗಿದೆ –

ನನ್ನ ಭಕ್ತಿರೂಪವಾದ ಬುದ್ಧಿಯು ಸರ್ವೋತ್ತಮನಾದ ಆ ಪರಬ್ರಹ್ಮಸ್ವರೂಪಿಯಾದ ಶ್ರೀನಿವಾಸನಲ್ಲಿ ಇರಲಿ ಎಂದು ಪ್ರಾರ್ಥಿಸಿ, ಅವನನ್ನು ಹೀಗೆ ವರ್ಣಿಸಿದ್ದಾರೆ. ಶ್ರುತಿಶಿರಸ್ಸಾದ ಉಪನಿಷತ್ತಿನಲ್ಲಿ ವಿಶೇಷವಾಗಿ ಕಂಗೊಳಿಸುತ್ತಿರುವವನು ಅರ್ಥಾತ್ ವಿಷಯನಾಗಿರುವವನು. ಹಾಗೂ ತನ್ನನ್ನು ನಮಸ್ಕರಿಸುವ ನಾನಾರೀತಿಯಾದ ಪ್ರಾಣಿಗಳ ಸಮೂಹದ ರಕ್ಷಣೆಯನ್ನು ಮಾಡಬೇಕು ಎಂಬ ಒಂದೇ (ಮುಖ್ಯವಾದ) ದೀಕ್ಷೆಯನ್ನು ಹೊಂದಿದವನು. ಹಾಗೂ ಸಮಸ್ತಜಗತ್ತಿನ ಉತ್ಪತ್ತಿ, ಸ್ಥೇಮ (ಅಂದರೆ ಸ್ಥಿತಿ), ಸಂಹಾರ ಮುಂತಾದ ಲೀಲೆಗಳುಳ್ಳವನು ಎಂದು.

ಈ ಶ್ರೀಭಾಷ್ಯದ ವ್ಯಾಖ್ಯಾನವಾದ ಶ್ರುತಪ್ರಕಾಶಿಕಾ ಎಂಬ ಗ್ರಂಥದಲ್ಲಿ ಸ್ಥೇಮ ಎಂಬ ಶಬ್ದಕ್ಕೆ ಸ್ಥಿತಿಃ ಎಂದು ವ್ಯಾಖ್ಯಾನಮಾಡಿದ್ದರಿಂದ ಅವರಿಗೂ ಸ್ಥಾಧಾತುವಿನಿಂದಲೇ ಸ್ಥೇಮಶಬ್ದದ ನಿಷ್ಪತ್ತಿಯೂ ಆಗಿದೆ ಎಂಬುದು ಸಮ್ಮತ. ಇಲ್ಲದಿದ್ದರೆ ಸ್ಥೇಮಾ ಎಂಬ ಪದಕ್ಕೆ ಸ್ಥಿರತ್ವಂ ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದರು.

ಶ್ರೀಭಾಷ್ಯದ ಮಂಗಳಪದ್ಯವನ್ನು ಭಾಷ್ಯವಿವೃತಿಯೆಂಬ ಅದರ ವ್ಯಾಖ್ಯಾನಗ್ರಂಥದಲ್ಲಿ ವಿವರಿಸ-ಲಾಗಿದೆ. ಇಲ್ಲಿ ಆ ಪದ್ಯದ ಪ್ರತಿಯೊಂದು ಪದಗಳ ಅರ್ಥವನ್ನು ಕಾಣಬಹುದು. ಸ್ಥೇಮಶಬ್ದಕ್ಕೆ ಅರ್ಥವನ್ನು ಸ್ಥಿತಿಃ ಎಂದು ಇಲ್ಲಿ ಹೇಳಿದ್ದಾರೆ.

(ಶ್ರೀಭಾಷ್ಯವಿವೃತಿಃ) – ಅಖಿಲೇತಿ ॥ ಪ್ರಾರಿಪ್ಸಿತಸ್ಯ ಪ್ರಬಂಧಸ್ಯಾವಿಘ್ನಸಮಾಪ್ತಿಪ್ರಚಯಗಮನಾ-ರ್ಥಂ ಸ್ಮೃತ್ಯಾಚಾರಸಿದ್ಧಮಿಷ್ಟದೇವತೋಪಾಸನರೂಪಂ ಮಂಗಲಮೇತತ್ । 'ಭವತಿ' ಇತಿ ಭುವನಂ = ಕಾರ್ಯವರ್ಗಃ ತಸ್ಯ ಜನ್ಮ = ಉತ್ಪತ್ತಿಃ ಸ್ಥೇಮಾ = ಸ್ಥಿತಿಃ, ಭಂಗಃ = ನಾಶಃ । ಆದಿಶಬ್ದೇನ ಸೃಷ್ಟ್ಯಾದ್ಯೌಪಯಿಕಮಂತಃಪ್ರವೇಶನಿಯಮನಾದಿ ಗೃಹ್ಯತೇ । ಏತಾದೃಶೀ ಲೀಲಾ ಯಸ್ಯ । ಲೀಲಾಶಬ್ದೇನ ಭಗವತಃ ಪರಿಪೂರ್ಣತ್ವಾನನ್ಯಪ್ರೇರ್ಯತ್ವಸ್ವಚ್ಛಂದಚೇಷ್ಟಿತತ್ವಾದಿಕಮಭಿ-ಪ್ರೇತಮ್ । ವಿಶೇಷೇಣ ನತಾಃ = ಪ್ರಹ್ವೀಭೂತಾ ಅಶೇಷವಿದ್ಯಾ-ವಿಶೇಷನಿಷ್ಠಾ ದೇವಮನುಷ್ಯಾದಿ-ಭೇದೇನ ವಿವಿಧಾ ಯೇ ಪ್ರಾಣಿನಃ । ಭಗವಜ್ಞಾನೇನ ಲಬ್ಧಸತ್ತಾಕಾಃ ಪ್ರಾಣಿನೋಽತ್ರ ಭೂತ-

ಶಬ್ದೇನ ಗೃಹ್ಯಂತೇ । ತತ್ಸಂಬಂಧೀ ವ್ರಾತಸ್ತಸ್ಯ ರಕ್ಷಾ ರಕ್ಷಣಮಿಷ್ಟಪ್ರಾಪಣಪರ್ಯಂತಾನಿಷ್ಟ-ನಿವಾರಣರೂಪಮ್ । ತದ್ವಿಷಯೈಕಾ ಪ್ರಧಾನಭೂತಾ ದೀಕ್ಷಾ ಸಂಕಲ್ಪೋ ಯಸ್ಯ । ಉಪಾ-ಸಕಸಂಬಂಧಿನೋಽಪಿ ಭಗವತ್ಯೈವ ರಕ್ಷ್ಯಂತ ಇತಿ ತತ್ಸಂಬಂಧೀ ವ್ರಾತ ಇತ್ಯುಕ್ತಮ್ । ತದುಕ್ತಮ್ –

ಆಸ್ಫೋಟಯಂತಿ ಪಿತರಃ ಪ್ರನೃತ್ಯಂತಿ ಪಿತಾಮಹಾಃ ।
ವೈಷ್ಣವೋ ನಃ ಕುಲೇ ಜಾತಃ ಸ ನಃ ಸಂತಾರಯಿಷ್ಯತಿ ॥

ಇತಿ । ಶ್ರೂಯತೇ ನಿತ್ಯಮಿತಿ ಶ್ರುತಿಃ । ಅನೇನಾಪೌರುಷೇಯತ್ವಾನ್ನಿರ್ದೋಷತ್ವಂ ವಿವಕ್ಷಿತಮ್ । ತಸ್ಯಾಃ ಶಿರೋಭೂತ ಉಪನಿಷದ್ಭಾಗೇ । ಶಿರಃಶಬ್ದೇನ ಶ್ರುತೇರನನ್ಯಪರತ್ವಂ ಸೂಚ್ಯತೇ । ವಿಶೇಷೇಣ ದೀಪ್ತೇ । ನಿರತಿಶಯಾನಂದರೂಪತ್ವೇನ ಪರಮಪುರುಷಾರ್ಥತ್ವಾತ್ । ಶ್ರಿಯೋ ನಿವಾಸಭೂತೇ । ಅನೇನ ನಿತ್ಯವಿಭೂತಿಮತ್ತ್ವಂ ಸೂಚ್ಯತೇ । ಏತಾದೃಶೇ ಪರಸ್ಮಿನ್ ಬ್ರಹ್ಮಣಿ ಮಮ ಭಕ್ತಿರೂಪಾ ಶೇಮುಷೀ ಬುದ್ಧಿರ್ಭವತು ಇತ್ಯರ್ಥಃ ।

– ** ಅಖಿಲಭುವನಜನ್ಮಸ್ಥೇಮಭಂಗಾದಿಲೀಲೇ ... ಎಂದು ಮಂಗಲಾಚರಣೆಯನ್ನು ಶ್ರೀಭಾಷ್ಯದಲ್ಲಿ ಮೊದಲಿಗೆ ರಾಮಾನುಜಾಚಾರ್ಯರು ಮಾಡಿದ್ದಾರೆ. ಇದರ ಅರ್ಥವನ್ನು ವಿವರಿಸುವ ಶ್ರೀಭಾಷ್ಯವಿವೃತಿ ಎಂಬ ಗ್ರಂಥದಲ್ಲಿ ಹೀಗಿದೆ – ಇಲ್ಲಿ ಮಂಗಲ ಎಂದರೆ ಗ್ರಂಥಕರ್ತೃವಿಗೆ ಇಷ್ಟನಾದ ದೇವತೆಯ ಉಪಾಸನೆಯೇ ಆಗಿದೆ. ಮಂಗಲವನ್ನು ಮಾಡಬೇಕು ಎಂಬುದು ಸ್ಮೃತಿ ಹಾಗೂ ಶಿಷ್ಟರ ಆಚರಣೆಯಿಂದ ಸಿದ್ಧವಾಗಿದೆ. ಇನ್ನು ಮಂಗಲದ ಫಲ ಪ್ರಕೃತದಲ್ಲಿ ಪ್ರಾರಂಭಿಸಲು ಇಚ್ಛೆ ಪಟ್ಟಿರುವ ಗ್ರಂಥದ ನಿರ್ವಿಘ್ನಸಮಾಪ್ತಿ, ಅಭಿವೃದ್ಧಿಯೇ ಆಗಿದೆ. ಅಭಿವೃದ್ಧಿ ಎಂದರೆ ಆ ಗ್ರಂಥದ ಪಠನ, ಪಾಠನ, ವ್ಯಾಖ್ಯಾನಾದಿಗಳೇ ಆಗಿದೆ. ಈ ಶ್ಲೋಕದ ಭುವನಶಬ್ದವು 'ಭವತಿ ಇತಿ ಭುವನಂ - ಹುಟ್ಟುತ್ತದೆ ಯಾವುದೋ ಅದು ಭುವನ ಎನಿಸುತ್ತದೆ' ಎಂಬ ರೀತಿಯ ವ್ಯುತ್ಪತ್ತಿಯಿಂದ ಕಾರ್ಯವಸ್ತುಸಮೂಹವನ್ನು ಹೇಳುತ್ತಿದೆ. ಈ ಕಾರ್ಯವಸ್ತುಗಳ ಉತ್ಪತ್ತಿ, ಸ್ಥಿತಿ, ನಾಶಗಳೆಂಬ ಲೀಲೆಯುಳ್ಳವನು ಪರಮಾತ್ಮ. ಇಲ್ಲಿ ಆದಿಶಬ್ದದಿಂದ ಸೃಷ್ಟಿಗೆ ಬೇಕಾದ ಜಗತ್ತಿನ ಒಳಗಡೆ ಪ್ರವೇಶ ನಿಯಮನ ಮೊದಲಾದವುಗಳನ್ನು ಗ್ರಹಿಸಬೇಕು. ಇಲ್ಲಿ ಲೀಲೆ ಎಂದರೆ ಭಗವಂತನ ಪರಿಪೂರ್ಣತ್ವ, ಬೇರೆಯವರಿಂದ ಪ್ರೇರಣೆಗೊಳ್ಳದಿರುವಿಕೆ, ಸ್ವಚ್ಛಂದವಾದ ವ್ಯಾಪಾರ ಮೊದಲಾದವುಗಳನ್ನು ಗ್ರಹಿಸಬೇಕು. ಇಲ್ಲಿ ವಿನತ ಎಂಬ ಶಬ್ದಕ್ಕೆ ದೇವತೆ ಮನುಷ್ಯಮೊದಲಾದ ಪ್ರಕಾರದಿಂದ ಇರುವ ಪ್ರಾಣಿಗಳನ್ನು ಗ್ರಹಿಸಬೇಕು. ಅಂದರೆ ಯಾರು ಆ ಭಗವಂತನ ಉಪಾಸಕರಾಗಿ ತಮ್ಮ ಅಸ್ತಿತ್ವವನ್ನು ಹೊಂದಿದ ಪ್ರಾಣಿಗಳನ್ನು ಇಲ್ಲಿ ಭೂತ ಎಂಬ ಶಬ್ದದಿಂದ ಗ್ರಹಿಸಬೇಕು. ಇವರಿಗೆ ಸಂಬಂಧಪಟ್ಟ ಗುಂಪಿನ ರಕ್ಷಣೆ ಎಂದರೆ ಅವರಿಗೆ ಇಷ್ಟವಾದ ವಸ್ತು ಸಿಗುವವರೆಗೂ ಬರುವ ಅನಿಷ್ಟಗಳ ನಿವಾರಣೆಯೇ ಆಗಿದೆ. ಇದನ್ನೇ ಪ್ರಧಾನವಾದ ಸಂಕಲ್ಪವನ್ನು ಹೊಂದಿರುವವನು ಪರಮಾತ್ಮ.

ಇದರ ತಾತ್ಪರ್ಯ — ಭಗವಂತನನ್ನು ಉಪಾಸಿಸುವ ವ್ಯಕ್ತಿಗಳ ಸಂಬಂಧಿಗಳನ್ನೂ ಭಗವಂತನೇ ಕಾಪಾಡುತ್ತಾನೆ. ಉದಾ — ಪಿತೃಗಳು, ಪಿತಾಮಹರುಗಳು ಎಲ್ಲರೂ ತಮ್ಮ ಕುಲದಲ್ಲಿ ಒಬ್ಬ ವೈಷ್ಣವ ಹುಟ್ಟಿದರೆ ಅವರು ನಮ್ಮನ್ನು ಉದ್ಧಾರಮಾಡುವವರು ಎಂದು ಸಂತೋಷಪಡುತ್ತಾರೆ. ಶ್ರುತಿ ಎಂದರೆ ವೇದ. ಅದು ಯಾವಾಗಲೂ ಶ್ರವಣೇಂದ್ರಿಯಕ್ಕೆ ವಿಷಯವಾಗುವುದರಿಂದ. ಈ ಶ್ರುತಿ ಎಂಬ ಶಬ್ದದಿಂದಲೇ ಅದು ಅಪೌರುಷೇಯವೆಂದು ಸಿದ್ಧವಾಯಿತು. ಇದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

## ಶ್ರುತಪ್ರಕಾಶಿಕಾ ಶ್ರುತಪ್ರದೀಪಿಕಾಗ್ರಂಥಗಳಲ್ಲಿ ಸ್ಥೇಮಶಬ್ದಾರ್ಥ

(ಶ್ರುತಪ್ರಕಾಶಿಕಾ - ಸುದರ್ಶನಸೂರಿಕೃತಾ) — ಸ್ಥೇಮಾ = ಸ್ಥಿತಿಃ । ಸಾ ಚಾಂತರ್ಯಾಮಿ-ವಿಷ್ಣ್ವ-ವತಾರ-ಲೋಕಪಾಲ-ಮನ್ವಾದಿನೃಪಮಾತಾಪಿತ್ರಾದಿಮುಖೇನ ಕ್ರಿಯಮಾಣಾ ಬಹುವಿಧಾ ವಿವಕ್ಷಿತಾ । ಭಂಗಃ = ನಿತ್ಯನೈಮಿತ್ತಕಪ್ರಾಕೃತಸ್ವರೂಪಃ । ಮೋಕ್ಷಸ್ಯ ಲಯಾಂತರ್ಭಾವೇಽಪಿ ಶಾಸ್ತ್ರಸ್ಯ ಪರಮಪ್ರಯೋಜನತ್ವಾದತ್ರ ಸ ನಾಂತರ್ಭಾವಿತಃ । ಅತ ಏವ ಆದಿಶಬ್ದೇಽಪಿ ನಾಂತರ್ಭಾವ್ಯಃ, ತಸ್ಯ ಸಾಧಾರಣತಯಾ ಸ್ಫುಟಪ್ರತಿಪತ್ತಿಹೇತುತ್ವಾಭಾವಾತ್ । ಪೃಥಗೇವ ಹಿ ಪೂರ್ವೈಶ್ಚ ಸ್ಪಷ್ಟತರಂ ನಿರ್ದಿಷ್ಟೋ ಮೋಕ್ಷಃ, 'ಜಗದುದ್ಭವಸ್ಥಿತಿಪ್ರಣಾಶಸಂಸಾರವಿಮೋಚನಾದಯಃ' ಇತಿ, 'ಜಗಜ್ಜನ್ಮಸ್ಥಿತಿಧ್ವಂಸಮಹಾನಂದೈಕಹೇತವೇ' ಇತಿ ಚ । ಭಗವಾನ್ ಭಾಷ್ಯಕಾರಶ್ಚ ತಥಾ ನಿರ್ದಿಶತಿ; ಯಥಾ ವೇದಾರ್ಥಸಂಗ್ರಹೇ 'ಉದ್ಭವಸ್ಥಿತಿಪ್ರಲಯಸಂಸಾರನಿವರ್ತನೈಕಹೇತುಭೂತ' ಇತಿ ಚ, ಭಾಷ್ಯೇ ಚ, 'ನಿಖಿಲಜಗದುದಯವಿಭವಲಯಮಹಾನಂದೈಕಕಾರಣಮ್' ಇತಿ ।

** — ಸ್ಥೇಮಾ = ಸ್ಥಿತಿಃ ಎಂದು ಇಲ್ಲಿಯೂ ವ್ಯಾಖ್ಯಾನಿಸಲಾಗಿದೆ. ಭಗವಂತನು ಮಾಡುವ ಸ್ಥಿತಿಯು ಇಲ್ಲಿ ಅನೇಕರೀತಿಯಾಗಿ ವಿವಕ್ಷಿತ. ಅದು ಅಂತರ್ಯಾಮಿರೂಪದಿಂದ, ವಿಷ್ಣ್ವಾದಿ ಅವತಾರ-ರೂಪದಿಂದ, ಲೋಕಪಾಲಕರಾದ ದೇವತೆಗಳು, ಮನು ಮುಂತಾದವರು, ರಾಜ, ತಂದೆ- ತಾಯಿ ಮುಂತಾದವರ ಮೂಲಕ ಎಂದು ತಿಳಿಯಬೇಕು.

(ಶ್ರುತಪ್ರದೀಪಿಕಾ)ಸ್ಥೇಮಾ = ಅಂತರ್ಯಾಮಿವಿಷ್ಣ್ವತಾರಾದಿಮುಖೇನ ಕರಣೀಯಾ ವಿವಿಧಾ ಸ್ಥಿತಿಃ ।

ಇಲ್ಲಿಯೂ ಸ್ಥೇಮಶಬ್ದಕ್ಕೆ ಸ್ಥಿತಿಯೆಂದು ಅರ್ಥೈಸಲಾಗಿದೆ.

## ಕುಂಡಲಗಿರಿ ಟಿಪ್ಪಣಿಯಲ್ಲಿ ರಾಮಚಂದ್ರತೀರ್ಥರ ಟಿಪ್ಪಣಿಯ ಉಲ್ಲೇಖ

* ಇಲ್ಲಿ ಕಂಬಾಲೂರು ಟಿಪ್ಪಣಿಯಲ್ಲಿ 'ಯದ್ಯಪಿ ಪೃಥ್ವ್ಯಾದಿಭ್ಯಃ' ಎಂದು ಪ್ರಾರಂಭವಾಗುವ ಭಾಗದಲ್ಲಿ ಸ್ವಲ್ಪ ಪಾಠಶೋಧನೆಯ ಅಗತ್ಯವಿದೆ. ಅಲ್ಲಿ 'ಪೃಥ್ವ್ಯಾದಿಷ್ವಿಮನಿಜಭಾವೇನ' ಎಂಬ ಪದವು

ಇಲ್ಲವೆಂದು ತೋರುವುದು. ಏಕೆಂದರೆ, 'ಪೃಥ್ವಾದಿಷ್ವಿಮನಿಜಭಾವೇನ' ಎಂಬ ಪದಗಳ ಅರ್ಥಕ್ಕೆ ಆ ವಾಕ್ಯದಲ್ಲಿ ಅನ್ವಯವು ಕೂಡುವುದಿಲ್ಲ.

ಅಲ್ಲದೆ ಶ್ರೀಕಂಬಾಲೂರು ರಾಮಚಂದ್ರತೀರ್ಥರ ವ್ಯಾಖ್ಯಾನದ ಉಲ್ಲೇಖಗಳು ಕುಂಡಲಗಿರಿಯ ವ್ಯಾಖ್ಯಾನದಲ್ಲಿ ಕಾಣುತ್ತೇವೆ. ಅಲ್ಲಿ ತಮ್ಮ ಮಂಗಳಪದ್ಯದ ಸಂದರ್ಭದಲ್ಲಿ ತಮ್ಮ ಗುರುಗಳಾದ ಲಕ್ಷ್ಮೀನಾಥಮುನಿಗಳನ್ನು ಸ್ಮರಿಸುತ್ತ ಅವರ ಪರಮಗುರುಗಳಾದ ಶ್ರೀಕಂಬಾಲೂರು ರಾಮಚಂದ್ರ ತೀರ್ಥರ ಸ್ಮರಣೆಯನ್ನು ಮಾಡಿದ್ದಿದೆ. ಅದು ಹೀಗೆ -

ಸ್ವಾದಿಮಾನಂ ಸುಧಾಯಾಃ ಯಃ ಸಮ್ಯಜ್ಞಾಪಿತವಾನ್ ಭುವಿ ।
ರಾಮಚಂದ್ರಂ ಗುರುಂ ನೌಮಿ ವಿದ್ವನ್ಮುಕುಟಮಂಡಲಮ್ ॥ - ಎಂಬುದಾಗಿ.

ವಿದ್ವತ್ಸಮೂಹಕ್ಕೆ ಅಲಂಕಾರಭೂತರಾದ ಶ್ರೀರಾಮಚಂದ್ರತೀರ್ಥರೆಂಬ ಗುರುಗಳನ್ನು ನಮಸ್ಕರಿಸುತ್ತೇನೆ. ಇವರಾದರೋ ಭೂಲೋಕದಲ್ಲಿ ಈ ಜಯತೀರ್ಥರು ನಿರ್ಮಿಸಿದ ನ್ಯಾಯಸುಧೆಯ ಸ್ವಾದವನ್ನು ಚೆನ್ನಾಗಿ ತಿಳಿಸಿಕೊಟ್ಟವರು ಎಂದು ಇದರ ಅರ್ಥ.

(1) ಸ್ವಾದಿಮಾ - ಮಧುರರಸ ಅಥವಾ ಸಿಹಿ. 'ಷ್ವದ ಸ್ವಾದನೇ' ಎಂದು ಧಾತುಪಾಠ.

(2) ಮಕುಟ – ಕಿರೀಟ.

ಇವರ ಈ ವ್ಯಾಖ್ಯಾನದಲ್ಲಿ ಈ ಸ್ಥೇಮಶಬ್ದದ ವಿಚಾರದ ಬಗ್ಗೆ ನಿರೂಪಿಸುತ್ತಾ ಹೀಗೆ ಹೇಳಿದ್ದಾರೆ. "ರಾಮಚಂದ್ರತೀರ್ಥೀಯೇ ತು ಯದ್ಯಪಿ 'ಪೃಥ್ವಾದಿಭ್ಯಃ ಇಮನಿಜ್ವಾ' ಇತ್ಯತ್ರ ಸ್ಥಿರಶಬ್ದಸ್ಯ ಅಪಾಠಾತ್ ಇಮನಿಜಭಾವೇನ ಪ್ರಿಯಸ್ಥಿರ ಇತ್ಯಾದಿನಾ ಸ್ಥಾದೇಶಾಪ್ರಸಕ್ತೇಃ ಸ್ಥೇಮಶಬ್ದಾನುಪಪತ್ತಿಃ ....' ಎಂದು. ಇವಕ್ಕನುಗುಣವಾಗಿಯೂ ಅವರ ಟಿಪ್ಪಣಿಯ ಪಾಠವನ್ನು ನಿರ್ಧರಿಸಬಹುದು.

## ಶ್ರೀವಾದಿರಾಜಗುರುಸಾರ್ವಭೌಮರ ಗುರ್ವರ್ಥದೀಪಿಕಾ-ಟಿಪ್ಪಣೀ ಮಂಗಲಾಚರಣೆ ನ್ಯಾಯಸುಧಾಸಮುದ್ರದ ವಿಹಾರಕ್ಕೆ ತತ್ಕರುಣೆಯು ಕಾರಣ

ನಾರಾಯಣಂ ಹಯಗ್ರೀವಂ ವ್ಯಾಸಂ ವಾಯುಂ ಸರಸ್ವತೀಮ್ ।
ನತ್ವಾ ತತ್ಕರುಣಾಸತ್ವಾತ್ ರಮೇ ನ್ಯಾಯಸುಧಾಂಬುಧೌ ॥

ಶ್ರೀವಾದಿರಾಜರು ಶ್ರೀಮನ್ನ್ಯಾಯಸುಧಾಟಿಪ್ಪಣಿ ರಚಿಸುವ ಮೊದಲು ಮಂಗಳವನ್ನು ಆಚರಿಸಿದ್ದಾರೆ – 'ನಾರಾಯಣಂ ಹಯಗ್ರೀವಂ' ಎಂಬುದಾಗಿ.

ಅರ್ಥ – ನಾರಾಯಣದೇವರಿಗೆ, ಹಯಗ್ರೀವದೇವರಿಗೆ, ವೇದವ್ಯಾಸರಿಗೆ, ವಾಯುದೇವರಿಗೆ, ಸರಸ್ವತೀ (ಭಾರತೀ) ದೇವಿಗೆ ನಮಸ್ಕರಿಸಿ ಅವರೆಲ್ಲರ ಕರುಣೆ ಇರುವುದರಿಂದ ನ್ಯಾಯಸುಧೆ ಎಂಬ ಸಮುದ್ರದಲ್ಲಿ ರಮಿಸುತ್ತೇನೆ.

## ಶ್ರೀಮನ್ನ್ಯಾಯಸುಧಾ ಶ್ರೀಕರಗ್ರಂಥ - ಇದಕ್ಕೆ ನಾವೇ ಸಾಕ್ಷಿ ಎಂದ ಶ್ರೀವಾದಿರಾಜರು

(ಗುರ್ವರ್ಥದೀಪಿಕಾ) —'ಶ್ರಿಯಃ' ಇತಿ, 'ಭೂತಿಃ = ಮಹಾಲಕ್ಷ್ಮೀಃ' ಇತಿ ಚ ಶ್ರೀವಾಚಕಪದಾಭ್ಯಾಮ್ ಆದ್ಯಂತಯೋಃ ಸಂಪುಟೀಕರಣಾತ್ ಶ್ರೀಕರೋऽಯಂ ಗ್ರಂಥಃ । ತತ್ರ ವಯಮೇವ ಸಾಕ್ಷಿಣಃ ।

ಶ್ರೀಮನ್ನ್ಯಾಯಸುಧಾಗ್ರಂಥವನ್ನು ಶ್ರೀಕರಗ್ರಂಥ ಎಂದು ವಾದಿರಾಜರು ಕರೆದಿದ್ದಾರೆ. ಅದಕ್ಕೆ ಸಾಕ್ಷಿಗಳು ತಾವೇ ಎಂದು ಉಲ್ಲೇಖಿಸಿದ್ದಾರೆ. ಶ್ರೀಕರ ಎಂದರೆ ಸಂಪತ್ಪ್ರದವಾದ ಗ್ರಂಥ. ಈ ಅಂಶವು ಈ ನ್ಯಾಯಸುಧಾದಲ್ಲಿ ಮೊದಲು ಹಾಗೂ ಕೊನೆಯ ಭಾಗದಲ್ಲಿ ಬರುವ ಪದವನ್ನು ನೋಡಿದಾಗ ತಿಳಿಯುವುದು. ಅದು ಹೀಗೆ - ಮೊದಲನೆಯ ಪದ್ಯದ "ಶ್ರಿಯಃಪತ್ಯೇ" ಎಂಬಲ್ಲಿರುವ 'ಶ್ರಿಯಃ' ಎಂಬ ಶಬ್ದವಿದೆ. ಹಾಗೆಯೇ ಕೊನೆಗೆ "ಭೂತಿಃ = ಮಹಾಲಕ್ಷ್ಮೀಃ" -ಎಂದು ಭೂತಿಶಬ್ದಕ್ಕೆ ಮಹಾಲಕ್ಷ್ಮೀ ಎಂದು ವಿವರಣೆ ನೀಡಿ ಉಪಸಂಹಾರ ಮಾಡಿದ್ದಾರೆ. ಹೀಗೆ ಮೊದಲು ಕೊನೆಗಳ ಸಂಪುಟೀಕರಣ-ದಿಂದ ಶ್ರೀಕರಗ್ರಂಥ ಎಂದು ವ್ಯವಹರಿಸುತ್ತಾರೆ.

### ಸಂಪುಟೀಕರಣ ಎಂದರೇನು?

ಸಂಪುಟೀಕರಣ — ಸಂಪುಟ ಎಂಬ ಶಬ್ದದಲ್ಲಿ ಸಮ್ ಉಪಸರ್ಗ 'ಪುಟ ಸಂಶ್ಲೇಷಣೇ' ಎಂಬ ಧಾತು, ಕಪ್ರತ್ಯಯವಿದೆ. ಇದರ ಅರ್ಥ — ಏಕಜಾತೀಯಉಭಯಮಧ್ಯವರ್ತೀ ಅಥವಾ ಏಕ-ಜಾತೀಯಪದಾರ್ಥೇನ ಭಿನ್ನಜಾತೀಯಸ್ಯ ಉಭಯತೋ ವ್ಯಾಪ್ತಿಃ - ಎಂದು. ಅರ್ಥಾತ್ ಒಂದೇ ಜಾತಿಯ ಎರಡು ಪದಾರ್ಥಗಳ ಮಧ್ಯದಲ್ಲಿರುವುದಕ್ಕೆ ಸಂಪುಟ ಎನ್ನುವರು. ಅಥವಾ ಒಂದೇ ಜಾತಿಯ ಪದಾರ್ಥವು ಬೇರೆ ಜಾತಿಯ ಪದಾರ್ಥದೊಂದಿಗೆ ಎರಡು ಕಡೆಯಿಂದ ಸಂಬಂಧವನ್ನು ಹೊಂದಿರುವುದು. ಪ್ರಕೃತದಲ್ಲಿ ಏಕಾರ್ಥಕವಾದ ಶ್ರೀಶಬ್ದ ಹಾಗೂ ಭೂತಿಶಬ್ದಗಳಿಂದ ಈ ನ್ಯಾಯಸುಧೆಯು ಆದ್ಯಂತಗಳಲ್ಲಿ ಸಂಬಂಧವನ್ನು ಹೊಂದಿದೆ. ಹೀಗಾಗಿ ಶ್ರೀಶಬ್ದ-ಭೂತಿಶಬ್ದಗಳಿಂದ ಸಂಪುಟವಾಗಿ ಮಾಡಲ್ಪಟ್ಟಿದೆ ನ್ಯಾಯಸುಧೆಯೆಂಬ ಗ್ರಂಥ. ಆದ್ದರಿಂದ ಶ್ರೀಕರ ಎನಿಸುತ್ತದೆ. ಉದಾಹರಣೆಗೆ ಆದ್ಯಂತಗಳಲ್ಲಿ ನಖಸ್ತುತಿಯಿಂದ ಸಂಪುಟೀಕೃತವಾದ ವಾಯುಸ್ತುತಿ.

### ಶ್ರೀದೇವಿಯ ಒಂಭತ್ತು ರೂಪಗಳಲ್ಲಿ ಒಂದಾದ ಭೂತಿ - ಭಾಗವತತಾತ್ಪರ್ಯನಿರ್ಣಯ

** ಅನುವ್ಯಾಖ್ಯಾನದ ಕೊನೆಯ ಶ್ಲೋಕ -

'ನಿಃಶೇಷದೋಷರಹಿತಕಲ್ಯಾಣಾಖಿಲಸದ್ಗುಣ ।
ಭೂತಿ-ಸ್ವಯಂಭು-ಶರ್ವಾದಿವಂದ್ಯಂ ತ್ವಾಂ ನೌಮಿ ಮೇ ಪ್ರಿಯಮ್ ॥'

"ಭೂತಿ" ಎಂಬ ಪದಕ್ಕೆ 'ಮಹಾಲಕ್ಷ್ಮೀಃ' ಎಂದು ಸುಧಾಕಾರರು ವಿವರಣೆ ಮಾಡಿದ್ದಾರೆ.

(ಏರಿಬಾಳಾಚಾರ್ಯರು) — ಭೂತಿಸ್ವಯಂಭುಶರ್ವಾದಿ - ಇತ್ಯತ್ರ ಭೂತಿಪದಂ —

'ಇಂದಿರಾ ಚ ರಮಾ ಲಕ್ಷ್ಮೀಃ ಹಿರಣ್ಯಾ ಗಗನಾ ತಥಾ ।
ರಕ್ತಾ ರಕ್ತತರಾ ಭೂತಿಃ ವಿಭೂತಿಶ್ಚ ಶ್ರಿಯೋ ನವ ॥ (ಭಾಗ.ತಾ.11-16-32)

ಇತಿ ಏಕಾದಶತಾತ್ಪರ್ಯಾನುರೋಧೇನ ಶ್ರೀಲಕ್ಷ್ಮೀರೂಪಪರಮ್ ಇತ್ಯಭಿಪ್ರೇತ್ಯ ವ್ಯಾಚಕ್ಷತೇ — ಭೂತಿಃ ಮಹಾಲಕ್ಷ್ಮೀಃ ಇತಿ ॥

** ಓಜಃ ಸಹೋ ಬಲವತಾಂ ಕರ್ಮಾಹಂ ವಿದ್ಧಿ ಸಾತ್ವತಾಮ್ ।
ಸಾತ್ವತಾಂ ನವಮೂರ್ತೀನಾಮಾದಿಮೂರ್ತಿರಹಂ ಪುರಾ (ಭಾಗವತ 11-16-32)

— 'ಸಹಃ ಅವಷ್ಟಂಭನಶಕ್ತಿಃ ಬಲಂ ಚ ಆಭ್ಯಾಂ ಯುಕ್ತಾನಾಂ ಓಜಃ ಅವಷ್ಟಂಭನಶಕ್ತಿರಹಮ್ । ಓಜಃ ಬಲಂ ಚಾಹಮ್ । ಓಜಃಶಬ್ದಸ್ಯ ನಾನಾರ್ಥಸ್ಯಾಽವೃತ್ತಿಃ । ಸಾತ್ವತಾಂ ಸತ್ವಪ್ರಧಾನಾನಾಂ ಪರಮಭಾಗವತಾನಾಂ ಕರ್ಮ ವಿಷ್ಣುಪೂಜಾದಿ ತತ್ರಾಹಂ ವಿಭೂತಿರಿತಿ ಮಾಂ ವಿದ್ಧಿ । ನವ ಮೂರ್ತಯಃ ಪ್ರತ್ಯೇಕಂ ಯೇಷಾಂ ತೇಷಾಂ ಸಾತ್ವತಾಂ ಬ್ರಹ್ಮವಾಯ್ವಾದೀನಾಂ ಮಧ್ಯೇ, ಪುರಾ ಪೂರ್ವಂ ಪ್ರಾಪ್ತಾ, ಪೂಜಾವಿಷಯತ್ವೇನೇತಿ ಭಾವಃ । ಆದಿಮೂರ್ತಿರಹಮ್ । ಸಾತ್ವತ-ಪಂಚರಾತ್ರೋಕ್ತಕರ್ಮಭಿಃ ಪೂಜಾವಿಷಯಾಣಾಂ ದೇವಾನಾಂ ಮಧ್ಯೇ ಪುರಾ ಪೂಜ್ಯಾ ಆದಿ-ಮೂರ್ತಿಃ ಪ್ರಾಥಮಿಕೀ ಸ್ವಕೀಯನವಮೂರ್ತಿಃ । ತತ್ರಾಽಹಂ ವಿಭೂತಿರ್ಲೀಲಯೇತಿ ಭಾವಃ ॥ - (ಯಾದವೇಂದ್ರತೀರ್ಥಾಃ)

(ನಿರ್ಣಯ) ಶ್ರಿಯಾದಿನವಮೂರ್ತೀನಾಂ ಮಧ್ಯೇ ಸ್ವಕೀಯನವಮೂರ್ತಿರಹಮಿತ್ಯರ್ಥಃ ।
'ಸ್ವರೂಪತಶ್ಚ ಗುಣತೋ ನ ವಿಶೇಷಃ ಕಥಂಚನ ।
ವಿಷ್ಣೋಸ್ತು ನವಮೂರ್ತೀನಾಂ ಪೂಜಾ ಚ ನವಧೇಷ್ಯತೇ' ಇತಿ ಚ ॥

ಅತೋ ನ ಸ್ವನವಮೂರ್ತೀನಾಮ್ । ಅನ್ಯೇಭ್ಯೋಽನ್ಯನವಮೂರ್ತೀನಾಮಪಿ ಪ್ರಾಧಾನ್ಯಕಾರಣಂ ಸನ್ನಿಧಾನಮಾತ್ಮನಸ್ತಾಸ್ವಪ್ಯಸ್ತೀತಿ ಪುರೇತಿವಿಶೇಷಣಮ್ । ಪ್ರಥಮಪೂಜ್ಯಾಸ್ತಾ ಇತ್ಯರ್ಥಃ ।

'ನಾರಾಯಣಃ ಪರಂ ಬ್ರಹ್ಮ ವಾಸುದೇವಾದಿಕಾಸ್ತಥಾ ।
ನರಸಿಂಹವರಾಹೌ ಚ ಪರಂಜ್ಯೋತಿರ್ಹರೇರ್ನವ ।
ಇಂದಿರಾ ಚ ರಮಾ ಲಕ್ಷ್ಮೀರ್ಹಿರಣ್ಯಾ ಗಗನಾ ತಥಾ ।
ರಕ್ತಾ ರಕ್ತತರಾ ಭೂತಿರ್ವಿಭೂತಿಶ್ಚ ಶ್ರಿಯೋ ನವ ।
ಬ್ರಹ್ಮಾ ಚತುರ್ಮುಖೋ ಧಾತಾ ವಿಧಾತಾ ವಿಧಿರೇವ ಚ ।
ಕರ್ತಾ ವಿರಿಂಚೋ ಭೂತೇಶಃ ಶತಾನಂದಶ್ಚ ತಾ ನವ ।

ಧನಂಜಯಮೃತೇ ಚೈವ ವಾಯೋಸ್ತು ನವಮೂರ್ತಯಃ ।
ಶೇಷೋಽನಂತೋ ನರಶ್ಚೈವ ಲಕ್ಷ್ಮಣೋ ಬಲ ಏವ ಚ।
ಸಂಕರ್ಷಣೋ ನೀಲವಾಸಾ ಜಗದ್ರಕ್ಷೋ ಜಲೇಶಯಃ ।
ಸುಪರ್ಣೋ ಗರುಡಶ್ಚೈವ ವೈನತೇಯೋ ಮಹಾಶನಃ ।
ನವವರ್ಣಃ ಪಂಚವರ್ಣಃ ಪನ್ನಗಾಶೋಽಮೃತಾಕರಃ ।
ತಥೈವ ಸರ್ವವೇದಾತ್ಮಾ ಸುಪರ್ಣೋ ನವಧಾ ಸ್ಮೃತಃ' ಇತಿ ಚ

ಭಾಗವತತಾತ್ಪರ್ಯನಿರ್ಣಯ - 11-16-32

– ಭಾಗವತದಲ್ಲಿ ಭಗವಂತನ ಅನೇಕ ವಿಭೂತಿರೂಪಗಳನ್ನು ಆಯಾಯ ಪದಾರ್ಥಗಳಲ್ಲಿರು-ವುದನ್ನು ವರ್ಣಿಸುವ ಸಂದರ್ಭದಲ್ಲಿ ಈ ಭಾಗವು ಬಂದಿದೆ. ಈ ಸಂದರ್ಭದಲ್ಲಿ ಶ್ರೀದೇವಿಯ ಒಂಭತ್ತು ರೂಪಗಳಲ್ಲಿ ಭೂತಿಃ ಎಂಬುದೂ ಒಂದು. ಇನ್ನುಳಿದ ರೂಪಗಳು ಇಂದಿರಾ, ರಮಾ, ಲಕ್ಷ್ಮೀ, ಹಿರಣ್ಯಾ, ಗಗನಾ, ರಕ್ತಾ, ರಕ್ತತರಾ, ವಿಭೂತಿ ಎಂದು.

ಭಗವಂತನ ವಿಭೂತಿರೂಪಗಳು ಹೀಗಿವೆ — ನಾರಾಯಣ, ಪರಂಬ್ರಹ್ಮ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನರಸಿಂಹ, ವರಾಹ, ಪರಂಜ್ಯೋತಿ ಎಂದು.

"ಸಹನಶಕ್ತಿ ಹಾಗೂ ಬಲವುಳ್ಳವರಲ್ಲಿ ಓಜಸ್ಸಾಗಿದ್ದೇನೆ. ಸತ್ವಗುಣವನ್ನೇ ಪ್ರಧಾನವನ್ನಾಗಿ ಹೊಂದಿರುವ ಶ್ರೇಷ್ಠ ಭಗವದ್ಭಕ್ತರ ಕರ್ಮವಾದ ವಿಷ್ಣುಪೂಜಾದಿಗಳಲ್ಲಿ ನನ್ನ ವಿಭೂತಿರೂಪ ಇದೆ. ಇನ್ನು ಒಂಭತ್ತು ಮೂರ್ತಿಗಳನ್ನು ಹೊಂದಿದ ಬ್ರಹ್ಮವಾಯುಗಳ ಮಧ್ಯೆ ಮೊದಲು ಪೂಜಾ-ವಿಷಯವಾಗಿ ನನ್ನ ಮೂರ್ತಿಗಳೇ ಆದವು. ಆದ್ದರಿಂದಲೇ ಆ ಒಂಭತ್ತು ರೂಪಗಳಲ್ಲಿ ನಾನು ಆದಿಮೂರ್ತಿ ಎನಿಸುತ್ತೇನೆ. ಪಂಚರಾತ್ರಗಳಲ್ಲಿ ಹೇಳಿದ ಕರ್ಮಗಳಿಂದ ಪೂಜೆಗೆ ವಿಷಯರಾದ ದೇವತೆಗಳ ಮಧ್ಯದಲ್ಲಿ ನನ್ನ ಮೂರ್ತಿಗಳೇ ಮೊದಲು ಪೂಜ್ಯವಾಗಿದೆ".

ಹಾಗಾಗಿ ನ್ಯಾಯಸುಧಾದಲ್ಲಿ "ಭೂತಿಃ" ಎಂಬುವುದಕ್ಕೆ ಮಹಾಲಕ್ಷ್ಮಿ ಎಂದು ವ್ಯಾಖ್ಯಾನಿಸಿದ್ದಾರೆ. ಈ ಲಕ್ಷ್ಮೀದೇವಿಯ ಒಂಭತ್ತು ರೂಪಗಳು ಪೂಜ್ಯವಾಗುವುದಕ್ಕೆ ಭಗವಂತನು ಅಷ್ಟೂ ರೂಪಗಳಲ್ಲಿ ತನ್ನ ಸನ್ನಿಧಾನವನ್ನು ಇಟ್ಟಿರುವುದೇ ಕಾರಣ. ಹೀಗೆ ಬ್ರಹ್ಮಾದಿ ದೇವತೆಗಳಲ್ಲಿಯೂ ತಿಳಿಯಬೇಕು. ಈ ವಿಷಯಗಳನ್ನು ಭಾಗವತತಾತ್ಪರ್ಯದಲ್ಲಿ ವಿವರಿಸಲಾಗಿದೆ.

## ಸ್ವಯಂಭು ಶಬ್ದ ಸಾಧು - ಮಹಾವೈಯ್ಯಾಕರಣನಾದ ಭರ್ತೃಹರಿಯ ಶೃಂಗಾರಶತಕದಲ್ಲೂ ಈ ಪ್ರಯೋಗ

** 'ಶಂಭುಸ್ವಯಂಭುಹರಯೋ ಹರಿಣೇಕ್ಷಣಾನಾಂ ಯೇನಾಕ್ರಿಯಂತ' ಇತ್ಯಾದೌ ಸ್ವಯಂಭುಶಬ್ದ-

ಪ್ರಯೋಗಸ್ಯ ದೃಷ್ಟತ್ವಾತ್ ಭೂತಿಸ್ವಯಂಭುಶರ್ವಾದಿವಂದ್ಯಮಿತಿ ಮೂಲೇ ಸ್ವಯಂಭುಶಬ್ದ-ಪ್ರಯೋಗಃ ಉಪಪನ್ನಃ । (ಕಂಬಾ. ಟಿಪ್ಪಣೀ)

ಶಂಭುಸ್ವಯಂಭುಹರಯೋ ಹರಿಣೇಕ್ಷಣಾನಾಂ ಯೇನಾಕ್ರಿಯಂತ ಸತತಂ ಗೃಹಕುಂಭದಾಸಾಃ ।
ವಾಚಾಂ ಅಗೋಚರಚರಿತ್ರವಿಚಿತ್ರಿತಾಯ ತಸ್ಮೈ ನಮೋ ಭಗವತೇ ಮಕರಧ್ವಜಾಯ ॥ 2.1 ॥
— ಭರ್ತೃಹರಿ ಶೃಂಗಾರಶತಕಂ

— ಶಂಭ್ವಿತಿ ॥ ಯೇನ (ಮಕರಧ್ವಜೇನ) (ಕುಸುಮಾಯುಧೇನ) ಶಂಭುಸ್ವಯಂಭುಹರಯಃ ಕಪರ್ದಿ-ಪರಮೇಷ್ಠಿಪದ್ಮನಾಭಾಃ ಸತತಂ ಸಾರ್ವಕಾಲಂ ಹರಿಣೇಕ್ಷಣಾನಾಂ ಮೃಗದೃಶಾಂ ಗೃಹ-ಕುಂಭದಾಸಾಃ ಗೃಹೇಷು ಘಟಭಾರವಾಹಾಃ ಅಕ್ರಿಯಂತ ವ್ಯಧೀಯಂತ । ವಾಚಾಂ ಗಿರಾಂ ಅಗೋಚರೇಣ ಅವಿಷಯೇಣ ಚರಿತ್ರೇಣ ವೃತ್ತೇನ ಪವಿತ್ರಿತಾಯ ಪಾವಿತಾಯ ಭಗವತೇ ತಸ್ಮೈ ಮಕರಧ್ವಜಾಯ ಮನ್ಮಥಾಯ ನಮಃ ನಮಸ್ಕ್ರಿಯಾ । ಯಃ ಹರಹಿರಣ್ಯಗರ್ಭಹರೀನಪಿ ನಾರೀಪರವಶಾನ್ ಕೃತವಾನ್ ತಥಾವಿಧೋ ಮದನಃ ಸರ್ವೇಷಾಂ ಲೋಕಾನಾಂ ವಂದ್ಯಃ । ಭಗವತ ಇತ್ಯತ್ರ ಭಗಶಬ್ದೇನ 'ಭಗಶ್ರೀಕಾಮಮಹಾತ್ಮ್ಯವೀರ್ಯಯತ್ನಾರ್ಕಕೀರ್ತಿಷು' ಇತ್ಯಮರಃ । ತೇ ಅಸ್ಯ ಸಂತೀತಿ ಭಗವಾನ್ ತಸ್ಮಾ ಇತ್ಯರ್ಥಃ । (ವಸಂತತಿಲಕಾ) — (ಶೃಂಗಾರ-ಶತಕಟಿಪ್ಪಣೀ)

— ಭೂತಿಸ್ವಯಂಭುಶರ್ವಾದಿ ಎಂಬ ಅನುವ್ಯಾಖ್ಯಾನಪದ್ಯದಲ್ಲಿರುವ ಸ್ವಯಂಭು ಎಂಬ ಹ್ರಸ್ವ ಉಕಾರಾಂತವಾದ ಶಬ್ದವು ಸಾಧುವಾಗಿದೆ. ಈ ರೀತಿಯಾದ ಪ್ರಯೋಗಗಳು ವ್ಯಾಕರಣ-ಶಿರೋಮಣಿಯಾದ ಭರ್ತೃಹರಿಯ ಶೃಂಗಾರಶತಕದಲ್ಲಿಯೂ ಕಾಣಬಹುದು. "ಶಂಭು-ಸ್ವಯಂಭುಹರಯೋ" ಎಂದು. ಇದಕ್ಕೆ ಟಿಪ್ಪಣೀ ಬರೆದವರು ಸ್ವಯಂಭು ಎಂದೇ ಪ್ರತೀಕವನ್ನು ಹಿಡಿದು ವ್ಯಾಖ್ಯಾನಮಾಡಿದ್ದಾರೆ. ಅದು ಬ್ರಹ್ಮ ಎಂಬರ್ಥದಲ್ಲಿ ಸ್ವಯಂಭು ಶಬ್ದ ಇದೆಯೆಂದು ತಿಳಿಸಿದ್ದಾರೆ.

ಈ ಶ್ಲೋಕವು ಶೃಂಗಾರಶತಕದ ಮೊದಲನೆಯ ಪದ್ಯವಾಗಿದೆ. ಇದು ಮಂಗಳಪದ್ಯ. ಇಲ್ಲಿ ಕಾಮನನ್ನು ನಮಸ್ಕರಿಸಲಾಗಿದೆ. ಈ ಕಾಮನಿಗೆ ಎಲ್ಲರೂ ಒಳಪಟ್ಟಿದ್ದಾರೆ. ಅದರಲ್ಲಿ ರುದ್ರ, ಬ್ರಹ್ಮ ಹಾಗೂ ವಿಷ್ಣು ಇವರೂ ಕೂಡ ಸೇರಿದ್ದಾರೆ ಎನ್ನುವುದು ಆಶ್ಚರ್ಯ.

## ಶ್ರೀ ಯದುಪತಿ ಆಚಾರ್ಯರ ಟಿಪ್ಪಣೀ ಯಾದುಪತ್ಯದ ಮಂಗಲಾಚರಣೆ
## ಅಭೀಷ್ಟದೃಷ್ಟಿಪ್ರದರು ವೇದವ್ಯಾಸರೆಂಬ ಸೂರ್ಯರು

ಸುಖಿಮುಖಿಗುಣಬಿಂಬಃ ಸಾಧುಮಾರ್ಗಾವಲಂಬಃ
ಸುಮತಿಜಲದಮೋದೋ ಮೂಷಿತಾನ್ಯಪ್ರಮೋದಃ ।

ಭುವನವಿತತಮೋಹಧ್ವಾಂತವಿಧ್ವಂಸಕೇತೋ
ದಿಶತು ವೃಶಮಭೀಷ್ಟಾಂ ವ್ಯಾಸಸೂರ್ಯಃ ಸ್ವನಿಷ್ಠಾಮ್ ॥

ಈ ಶ್ಲೋಕದಲ್ಲಿ ವೇದವ್ಯಾಸರನ್ನು ಪ್ರಾರ್ಥಿಸುತ್ತಿದ್ದಾರೆ – ನನಗೆ ನಿಮ್ಮಲ್ಲಿ ಸ್ಥಿರವಾದ ನನಗೆ ಇಷ್ಟವಾದ ಜ್ಞಾನವನ್ನು ನೀಡಿರಿ ಎಂದು. ವೇದವ್ಯಾಸರು ಸೂರ್ಯನಂತೆ ಇದ್ದು ಜಗತ್ತಿನಲ್ಲಿ ಎಲ್ಲ ಕಡೆ ಹರಡಿರುವ ಅಜ್ಞಾನವೆಂಬ ಕತ್ತಲೆಯನ್ನು ಧ್ವಂಸಮಾಡುವವರಾಗಿದ್ದಾರೆ. ಹಾಗೆ ಸುಜ್ಞಾನಿಗಳೆಂಬ ಮೋಡಗಳಿಗೆ ಸಂತೋಷವನ್ನು ನೀಡುವವರು. ಶಿಷ್ಟರಿಗಿಂತ ಬೇರೆಯವರಾದ ದುಷ್ಟರಿಗೆ ಯೋಗ್ಯತಾನರ್ಹವಾದ ಸಂತೋಷವನ್ನು ಕಳೆಯುವವರು. ಆನಂದಮೊದಲಾದ ಗುಣಗಳಿಗೆ ಮುಖ್ಯ ಆಶ್ರಯರಾಗಿದ್ದಾರೆ. ಸಜ್ಜನರಿಗೆ ಒಳ್ಳೆಯ ದಾರಿಗೆ ತೋರಿಸುವ ಮೂಲಕ ಆಶ್ರಯರಾಗಿದ್ದಾರೆ.

## ಗುರೂಪದೇಶದ ಮಥಿತಾರ್ಥದ ಫಲವೇ ಈ ಟಿಪ್ಪಣೀ

ಪೂರ್ಣಪ್ರಜ್ಞಜಯಾರ್ಯಪೂರ್ವಕಗುರೂನಾನಮ್ಯ ವಿದ್ಯಾಪ್ರದಾನ್
ವೇದೇಶಾಭಿಧಯೋಗಿನೋಽಪಿ ಕೃಪಯಾ ತೇಷಾಂ ಸುಧಾಟಿಪ್ಪಣೀಮ್ ।
ಬಾಲಾನಾಂ ತನುತೇ ಮಿತಾಂ ಯದುಪತಿರ್ಮೋಧಾಯ ಧೀಶುದ್ಧಯೇ
ಸ್ವಸ್ಯಾಪಿ ಪ್ರವಿಚಿಂತ್ಯ ಸದ್ಗುರುಮುಖಾತ್ ಸಮ್ಯಕ್ ಶ್ರುತಾರ್ಥಾನ್ ಮುಹುಃ ॥

ಯದುಪತಿ ಎಂಬ ಹೆಸರಿನ ನಾನು, ಬಾಲಕರ ಬುದ್ಧಿಶುದ್ಧಿಗಾಗಿ ಹಾಗೂ ನನ್ನ ಬುದ್ಧಿಶುದ್ಧಿಗಾಗಿಯೂ ಕೂಡ ಮಿತವಾದ ಮಾತುಗಳಿಂದ ಕೂಡಿದ ಸುಧಾಟಿಪ್ಪಣಿಯನ್ನು ರಚಿಸುತ್ತಿದ್ದೇನೆ. ಈ ಟಿಪ್ಪಣಿಯನ್ನು ಬರೆಯುವುದಕ್ಕೆ ಮೊದಲು ಪೂರ್ಣಪ್ರಜ್ಞರು ಜಯತೀರ್ಥರು ಮೊದಲಾದ ಎಲ್ಲ ಗುರುಗಳನ್ನು ಹಾಗೂ ನನ್ನ ಗುರುಗಳಾದ ವೇದೇಶತೀರ್ಥರೆಂಬ ಹೆಸರಿನ ಯೋಗಿಗಳನ್ನು ನಮಸ್ಕರಿಸುತ್ತೇನೆ. ಈ ಟಿಪ್ಪಣಿಯ ರಚನೆಯು ಅವರೆಲ್ಲರ ಕಾರುಣ್ಯದಿಂದಲೇ ಸಾಧ್ಯವಾಗುವುದು. ಅದರಲ್ಲೂ ಒಳ್ಳೆಯ ಗುರುಗಳ ಮುಖಾಂತರ ಚೆನ್ನಾಗಿ ಮತ್ತೆ ಮತ್ತೆ ಕೇಳಿದ ವಿಷಯಗಳನ್ನು ಚೆನ್ನಾಗಿ ಚಿಂತಿಸಿ ಬರೆಯುತ್ತಿದ್ದೇನೆ.

## ಈ ಟಿಪ್ಪಣಿಯ ರಚನೆ ಮಾತ್ಸರ್ಯದಿಂದಾಗಲೀ ಪಾಂಡಿತ್ಯಮದದಿಂದಾಗಲೀ ಅಲ್ಲ

ನ ಪಾಂಡಿತ್ಯಾಭಿಮಾನೇನ ನಾಪಿ ಮತ್ಸರತಃ ಕ್ವಚಿತ್ ।
ಯತ್ನೋಽಯಂ ಕಿಂತು ಧೀವಾಚೋವಿಶುದ್ಧ್ಯೈ ಮಮ ನಾನ್ಯಥಾ ॥

ಈ ಟಿಪ್ಪಣಿಯನ್ನು ನನಗೆ ಪಾಂಡಿತ್ಯ ಇದೆಯೆಂಬ ಆಗ್ರಹದಿಂದಾಗಲೀ ಅಥವಾ ಯಾರೊಬ್ಬರ ಮೇಲಿನ ಮಾತ್ಸರ್ಯವಿರುವುದರಿಂದಲಾಗಲೀ ಈ ಟಿಪ್ಪಣಿಯ ಬರೆಯುವ ಪ್ರಯತ್ನ ಮಾಡುತ್ತಿಲ್ಲ. ನನ್ನ ಮಾತು ಹಾಗೂ ಬುದ್ಧಿಯ ವಿಶೇಷವಾದ ಶುದ್ಧಿಗಾಗಿ ಪ್ರಯತ್ನ ನಡೆದಿದೆ.

## ಶ್ರೀಮದಾಚಾರ್ಯರ ಮಾತಿನಲ್ಲಿ ವಿಶ್ವಾಸ ಮೂಡಿಸಿದ ಶ್ರೀಜಯತೀರ್ಥರು

(ಯಾದುಪತ್ಯ) — ಅಥ ಪರಮಕಾರುಣಿಕೋ ಜಯತೀರ್ಥಶ್ರೀಚರಣಃ —

'ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್ ।
ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ'

ಇತ್ಯಾಚಾರ್ಯೋಕ್ತೌ ಲೋಕಾನಾಂ ವಿಶ್ವಾಸಮುಪಜನಯನ್ ಅನುವ್ಯಾಖ್ಯಾನವ್ಯಾಖ್ಯಾಮಾರಭ-ಮಾಣೋ ಅಭೀಷ್ಟಸಮಾಪ್ತ್ಯಾದಿಪ್ರಯೋಜನಕಂ ಶ್ರೀಪತಿಸ್ತುತಿಪ್ರಣಾಮರೂಪಂ ಮಂಗಲಂ ಕೃತ್ವಾ ಶಿಷ್ಯಶಿಕ್ಷಾಯೈ ಗ್ರಂಥಾದೌ ತದುಪನಿಬಧ್ನಾತಿ — **ಶ್ರಿಯಃ ಪತ್ಯ ಇತಿ ॥**

ಶ್ರಿಯಃ ಪತ್ಯೇ ಇತಿ ॥ ಪರಮಕರುಣಾಶಾಲಿಗಳಾದ ಜಯತೀರ್ಥಶ್ರೀಚರಣರು ಆಚಾರ್ಯರ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನವನ್ನು ಪ್ರಾರಂಭಿಸಲು ಹೊರಟಿದ್ದಾರೆ. ಇದರ ಮೊದಲಿಗೆ ಶ್ರೀಪತಿಯ ಪ್ರಣಾಮರೂಪವಾದ ಮಂಗಳವನ್ನು ಮಾಡುತ್ತಿದ್ದಾರೆ. ಇದಕ್ಕೆ ಪ್ರಯೋಜನ ಗ್ರಂಥ ಪ್ರಾರಂಭಿಸು-ತ್ತಿರುವ ಗ್ರಂಥಕರ್ತೃವಿಗೆ ಅಭಿಮತವಾದ ಗ್ರಂಥಪರಿಸಮಾಪ್ತಿ ಹಾಗೂ ಗ್ರಂಥಪ್ರಸಿದ್ಧಿ ಇತ್ಯಾದಿ. ಇಂತಹ ಮಂಗಳವನ್ನು ಶಿಷ್ಯರಿಗೆ ಶಿಕ್ಷಣ ನೀಡುವುದಕ್ಕಾಗಿ ಗ್ರಂಥದಲ್ಲೂ "ಶ್ರಿಯಃ ಪತ್ಯೇ" ಎಂದು ಸೇರಿಸಿದ್ದಾರೆ. ಈ ನ್ಯಾಯಸುಧಾವನ್ನು ಬರೆಯಲು ಪ್ರಾರಂಭಮಾಡುತ್ತ ಆಚಾರ್ಯರ ಮಾತಿನಲ್ಲಿ ಎಲ್ಲ ಸಜ್ಜನವೃಂದಕ್ಕೂ ವಿಶ್ವಾಸವನ್ನು ಜಯತೀರ್ಥಶ್ರೀಪಾದರು ಉಂಟುಮಾಡುತ್ತಿದ್ದಾರೆ. ಆಚಾರ್ಯರ ಆ ಮಾತು ಇದು -

"ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್ ।
ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ॥" (ಅನು. 1-1-ಶ್ಲೋ.256) ಎಂದು.

### ಗ್ರಂಥೋಽಯಮಪಿ ಬಹ್ವರ್ಥಃ - ವಿವರಣೆ

** ನ್ಯಾಯಸುಧಾ — ನ ಚೈವಂ ಸೂತ್ರಾರ್ಥಲೇಶವ್ಯಾಖ್ಯಾನಪರೋಽಯಂ ಗ್ರಂಥಃ ಇತಿ ಅನಾದ-ರಣೀಯಃ ಇತ್ಯಾಶಯೇನಾಹ — ಗ್ರಂಥ ಇತಿ ॥ ಸಮಗ್ರಅರ್ಥವ್ಯಾಖ್ಯಾನಂ ಅಕುರ್ವನ್ನಪಿ । ಅಯಮಿತಿ ಉಕ್ತತ್ವಾತ್ ಸತ್ಯಪಿ ತಸ್ಮಿನ್ ಪುನರಸ್ಯ ವಿರಚನಾತ್ ಭಾಷ್ಯಮ್ ಅಲ್ಪಾರ್ಥಮಿತಿ ನಾಶಂಕನೀಯ-ಮಿತ್ಯಾಹ — ಭಾಷ್ಯಂ ಚೇತಿ ॥ ಅತಿಶಯಿತೇನ ಅರ್ಥೇನ ವಿಸ್ತರೋ ಯಸ್ಯ ಇತಿ ವ್ಯಧಿಕರಣ-ಬಹುವ್ರೀಹಿಃ ಗಮಕತ್ವಾತ್ । ಬಹ್ವರ್ಥತ್ವಂ ಅನಯೋಃ ಅನುಪಲಂಭಬಾಧಿತಮಿತಿ ಚೇತ್ ನ । ವ್ಯಾಖ್ಯಾನಸಾಮಗ್ರೀವೈಕಲ್ಯನಿಮಿತ್ತತ್ವಾತ್ ತದನುಪಲಂಭಸ್ಯ ಇತ್ಯಾಶಯೇನಾಹ — ಬಹುಜ್ಞಾ ಏವ ಇತಿ ॥ ಏತಯೋಃ = ಭಾಷ್ಯಾನುಭಾಷ್ಯಯೋಃ ।

ಈ ಶ್ಲೋಕಕ್ಕೆ ನ್ಯಾಯಸುಧಾದಲ್ಲಿ ಬಂದ ವ್ಯಾಖ್ಯಾನ — ಅನುವ್ಯಾಖ್ಯಾನಗ್ರಂಥವು ಬ್ರಹ್ಮಸೂತ್ರಗಳ

ಅರ್ಥವನ್ನು ಸ್ವಲ್ಪವೇ ವ್ಯಾಖ್ಯಾನಮಾಡುತ್ತದೆ ಎಂಬ ಅನಾದರ ಬೇಡ. ಬಹಳಷ್ಟು ಅರ್ಥವನ್ನು ಇಲ್ಲಿ ವಿವರಿಸಲಾಗಿದೆ. ಭಾಷ್ಯದಲ್ಲಿಯೂ ಹೀಗೆಯೇ ತಿಳಿಯತಕ್ಕದ್ದು. ಆದ್ದರಿಂದ ಅಲ್ಲಿಯೂ ಅನಾದರಕ್ಕೆ ಅವಕಾಶವಿಲ್ಲ. ಇನ್ನು ಬಹಳ ಅರ್ಥಗಳಿವೆ ಎಂಬದು ಕಾಣುತ್ತಿಲ್ಲವಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ವ್ಯಾಖ್ಯಾನಮೊದಲಾದ ಸಾಮಗ್ರೀಗಳು ಇಲ್ಲದಿದ್ದಾಗ ಆ ರೀತಿ ಅನಿಸುವುದಷ್ಟೇ. ವಾಸ್ತವಿಕವಾಗಿ ಅವುಗಳಿದ್ದಾಗ ತಿಳಿದೇ ತಿಳಿಯುವುದು. ಈ ಅಭಿಪ್ರಾಯದಿಂದಲೇ 'ಬಹುಜ್ಞಾ ಏವ ಜಾನಂತಿ' ಎಂದು ಭಾಷ್ಯ ಹಾಗೂ ಅನುವ್ಯಾಖ್ಯಾನಗಳ ಬಗ್ಗೆ ಶ್ರೀಮದಾಚಾರ್ಯರು ತಿಳಿಸಿದ್ದಾರೆ.

ಈ ಅನುವ್ಯಾಖ್ಯಾನಗ್ರಂಥ ಬಹಳ ಅರ್ಥವುಳ್ಳದ್ದು. ಹಾಗೂ ಭಾಷ್ಯಗ್ರಂಥವೂ ಅತಿಯಾದ ಅರ್ಥವುಳ್ಳದ್ದು. ಇದನ್ನು ವಿಶೇಷವಾಗಿ ಬಹುಜ್ಞರೇ ಅರ್ಥಾತ್ ಜ್ಞಾನಿಗಳೇ ಚೆನ್ನಾಗಿ ತಿಳಿಯುತ್ತಾರೆ ಎಂದು.

## ಶ್ರೀಮನ್ನಾರಿಕೃಷ್ಣಾಚಾರ್ಯರ ಚಷಕಟಿಪ್ಪಣೀ ಮಂಗಲಾಚರಣೆ

### ಶ್ರೀಹಯಗ್ರೀವ ಸಕಲವಿದ್ಯಾಪ್ರದ ಹಾಗೂ ಮಂಗಳಪ್ರದ

ಪರ್ಯಷ್ಕಾರಿ ತನುರ್ಗುಣೌಘಮಣಿಭಿಃ ತತ್ಸೌಷುಮೋತ್ಕರ್ಷತೋ–
ಜಂಘಾನೀತರತಂತ್ರತಾದ್ವರತಮಃಸ್ತೋಮಃ ಕದಂಬಂ ವಿದಾಮ್ ।
ಸ್ವಾಮೋಮೋದಿ ಚ ಯೇನ ವಿಶ್ವಜನನಸ್ಥೇಮಾದಿಹೇತುರ್ಗಿರಾಂ
ಸರ್ವಸ್ವಂ ಮಮ ತಂತನೀತು ಸ ಶಿವಂ ಶ್ರೀಶಸ್ತುರಂಗಾಸ್ಯಕಃ ॥

ಲಕ್ಷ್ಮೀಪತಿಯಾದ ಕುದುರೆಯ ಮುಖನಾದ ಹಯಗ್ರೀವದೇವರು ನನಗೆ ಎಲ್ಲ ರೀತಿಯಾದ ವಿದ್ಯೆಯನ್ನು ಹಾಗೂ ಮಂಗಳವನ್ನುಂಟುಮಾಡಲಿ. ಈ ಹಯಗ್ರೀವದೇವರ ದೇಹವು ಗುಣರಾಶಿಗಳೆಂಬ ಮಣಿ-ಯಿಂದ ಚೆನ್ನಾಗಿ ಅಲಂಕರಿಸಲ್ಪಟ್ಟಿದೆ. ಹಯಗ್ರೀವದೇವರ ದೇಹದ ಉತ್ಕೃಷ್ಟವಾದ ಹೊಳಪಿನಿಂದ ಪಾರತಂತ್ರ್ಯಮೊದಲಾದ ದೋಷಗಳೆಂಬ ಕತ್ತಲೆಯ ಸಮೂಹವು ಇಲ್ಲದಂತಾಗಿದೆ. ಇನ್ನು ಈ ಹಯಗ್ರೀವದೇವರು ಜ್ಞಾನಿಗಳ ಸಮೂಹಕ್ಕೆ ಅತ್ಯಂತ ಸಂತೋಷವನ್ನುಂಟು ಮಾಡುವವರಾಗಿ-ದ್ದಾರೆ. ಇವರಿಂದಲೇ ಇಡೀ ವಿಶ್ವಕ್ಕೆ ಹುಟ್ಟು ಸ್ಥಿತಿ ಮೊದಲಾದವುಗಳು ಉಂಟಾಗುತ್ತವೆ.

### ಶ್ರೀವೇದವ್ಯಾಸರು ಸುಧಾಸಮುದ್ರ ಹಾಗೂ ಕಲ್ಪವೃಕ್ಷ

ಯೋಽಶ್ರಾಯಿ ವಿದ್ವೇಂದಿರಯಾ ಷುಕೇಂದುನಾ ತಂತ್ರಾದಿರತ್ನೈರಪಿ ಭಾರತದ್ರುಣಾ ।
ಸೂತ್ರಾಮೃತೇನ ಶ್ರಿತಕಲ್ಪಪಾದಪಂ ತಮದ್ಯ ಕಾನೀನಸುಧಾನಿಧಿಂ ಶ್ರಯೇ ॥

ವೇದವ್ಯಾಸರೆಂಬ ಕ್ಷೀರಸಮುದ್ರವನ್ನು ಆಶ್ರಯಿಸುತ್ತೇನೆ. ಈ ಸಮುದ್ರದಲ್ಲಿ ಲಕ್ಷ್ಮೀದೇವಿ, ಚಂದ್ರ, ರತ್ನಗಳು, ವೃಕ್ಷಗಳು, ಅಮೃತ ಹಾಗೂ ಕಲ್ಪವೃಕ್ಷ ಇವುಗಳೆಲ್ಲ ಇವೆ. ಅವು ಯಾವುವೆಂದರೆ, ವಿದ್ಯೆ

ಎಂಬ ಲಕ್ಷ್ಮಿ, ಶುಕಾಚಾರ್ಯರೆಂಬ ಚಂದ್ರ, ಬ್ರಹ್ಮತರ್ಕಮೊದಲಾದ ರತ್ನಗಳು, ಮಹಾಭಾರತವೆಂಬ ವೃಕ್ಷ ಎಂದು ತಿಳಿಯಬೇಕು. ಇಂತಹ ಇವರು ಕಲ್ಪವೃಕ್ಷರಾಗಿದ್ದಾರೆ. ಬ್ರಹ್ಮಸೂತ್ರವೆಂಬ ಅಮೃತವು ಈ ಕಲ್ಪವೃಕ್ಷದಲ್ಲಿದೆ.

## ಅವಿದ್ಯೆಯೆಂಬ ಕತ್ತಲೆಯನ್ನು ಓಡಿಸುವವರು ಪೂರ್ಣಪ್ರಜ್ಞರು

ಯಃ ಸೂತ್ರಪೀಯೂಷನಿಧಿಂ ಪೃಣಾತಿ ಗೋಭಿರ್ಹ್ಯವಿದ್ಯಾಖ್ಯತಮಃ ಕೃಣಾತಿ ।
ಪೃಣಾತು ಸ ಸ್ವಾಂತಚಕೋರಕೇಽದ್ಯ ತ್ವಿಷ್ಣಾತಿ ವಾಚ್ಯೇನ ದರೀದೃಶಾಖ್ಯಃ (ಜ್ಞಃ) ॥

ಯಾರು ಬ್ರಹ್ಮಸೂತ್ರಗಳಿಂದ ಉದಿಸಿದ ಅಮೃತಮಯವಾದ ಅನುವ್ಯಾಖ್ಯಾನವೆಂಬ ನಿಧಿಯನ್ನು ನೀಡಿದರೋ ಯಾರು ತಮ್ಮ ಮಾತುಗಳಿಂದ ಅವಿದ್ಯೆಯೆಂಬ ತಮಸ್ಸನ್ನು ಸೀಳಿಹಾಕಿದರೋ ಹೆಸರಿನಿಂದ ಪೂರ್ಣಪ್ರಜ್ಞರೆಂದು ಶೋಭಿಸುತ್ತಾರೋ ಅಂತಹ ಮಧ್ವಾಚಾರ್ಯರು ನನ್ನ ಮನಸ್ಸೆಂಬ ಚಕೋರಪಕ್ಷಿಯನ್ನು ಪೋಷಿಸಲಿ.

## ಜಯೀಶ ಎಂಬ ಅರ್ಜುನ ಸಂಪತ್ಪ್ರದನಾಗಲಿ

ಸೂತ್ರಜ್ಯಾನ್ವಿತಸೌತ್ರಭಾಷ್ಯಧನುಷಿ ಪ್ರೋತಪ್ರಮಾಣಾಶುಗಃ
ಭಿಂದನ್ ಯುಕ್ತಿಶಿರಾಂಸಿ ಮಾಯಿಕಸುಧೀಸಂಶಪ್ತಕೀಯಾನಿ ಓ ।
ಕೃಷ್ಣವ್ಯಾಪೃತನೈಗಮಾರ್ವಕಮಹಾಶಾಸ್ತ್ರೋಲ್ಲಸತ್-ಸ್ಯಂದನಾ-
ರೂಢಃ ಸಂಪದಮಾಶು ಮೇ ಪ್ರದಿಶತಾತ್ ಪಾರ್ಥೋ ಜಯೀಶಾಭಿಧಃ ॥

ಜಯತೀರ್ಥರೆಂಬ ಅರ್ಜುನನು ನನಗೆ ವಿದ್ಯಾಸಂಪತ್ತನ್ನು ನೀಡಲಿ. ಇವರು ಅರ್ಜುನನಂತೆ ರಥದಲ್ಲಿ ಇದ್ದಾರೆ. ಆ ರಥವು ಕೃಷ್ಣನಿಂದ ವ್ಯಾಪಿಸಿರುವ ವೇದಾಂತಗಳೆಂಬ ಕುದುರೆಗಳಿಂದ ಶೋಭಿಸುವ ಮಹಾಶಾಸ್ತ್ರದಿಂದ ಕಂಗೊಳಿಸುತ್ತಿದೆ. ಇವರಲ್ಲಿ ಬ್ರಹ್ಮಸೂತ್ರವೆಂಬ ಹಗ್ಗದಿಂದ ಕೂಡಿದ ಆಚಾರ್ಯರ ಭಾಷ್ಯವೆಂಬ ಧನುಸ್ಸಿದೆ. ಅದರಲ್ಲಿ ಪ್ರಮಾಣಗಳೆಂಬ ಬಾಣಗಳು ಯೋಜಿತವಾಗಿವೆ. ಇವುಗಳಿಂದ ಪ್ರಮಾಣವಿರುದ್ಧವಾದ ಅಪ್ರಾಮಾಣಿಕವಾದ ಮಾತನ್ನಾಡುವವರೆಂಬ ಸಂಶಪ್ತಕರ ಯುಕ್ತಿಗಳೆಂಬ ಶಿರಸ್ಸನ್ನು ಛೇದಿಸುತ್ತಿದ್ದಾರೆ.

## ವಿದ್ವಾಂಸರ ಅಲಂಕಾರಕ್ಕೆ ಕಾರಣವಾದ ಶ್ರೀವ್ಯಾಸರಾಜರ ಮೂರು ಕೃತಿಗಳು

ಯೋಽನಂತವಿದ್ವದ್ರಸಮಂಡನಕ್ರಿಯಾಹೇತುಂ ವ್ಯಧಾದ್ರತ್ನನಿಭಂ ಕೃತಿತ್ರಯಮ್ ।
ಸೋಽಲಂಚಿಕೀರ್ಷ್ಯಾದಥ ಸಂಯಮೀಂದ್ರೋ ಮಾಂ ವ್ಯಾಸರಾಜಸ್ತ್ರಿತಯೇನ ತೇನ ॥

ಯಾರು ರತ್ನಗಳಿಗೆ ಸಮಾನವಾದ ಮೂರು ಕೃತಿಗಳನ್ನು ಅಂದರೆ ತರ್ಕತಾಂಡವ, ನ್ಯಾಯಾಮೃತ, ತಾತ್ಪರ್ಯಚಂದ್ರಿಕಾ ಗ್ರಂಥಗಳನ್ನು ರಚನೆಮಾಡಿದ್ದಾರೋ ಅಂತಹ ಯತಿಶ್ರೇಷ್ಠರಾದ ವ್ಯಾಸರಾಜರು

ಆ ಮೂರು ಕೃತಿಗಳಿಂದ ನನ್ನನ್ನು ಅಲಂಕರಿಸಲಿ. ಈ ಮೂರೂ ಕೃತಿಗಳಾದರೋ ಶ್ರೇಷ್ಠವಿದ್ವಾಂಸರಿಗೆ ಎಂದಿಗೂ ಅಳಿಸದ ರೀತಿಯ ಅಲಂಕಾರಮಾಡಿಕೊಳ್ಳುವುದಕ್ಕೆ ಸಾಧನವಾಗಿವೆ.

### ಮಹಾತ್ಮರ ಪಾದಧೂಳಿಯೆಂಬ ದೋಣಿಯು ನ್ಯಾಯಸುಧಾಗಂಗಾತಾರಕ

ವ್ಯಾಚಕ್ರಿರೇ ಯೇ ತು ಮಹಾನುಭಾವಿನಸ್ತತ್ಪಾದಪಾಥೋಜರಜಃ ಸ್ಮೃತಿರ್ಹಿ ನೌಃ ।
ಸುಧಾಂ ಗಭೀರದ್ಯುಸರಿನ್ನಿಭಾಮಲಂ ತಿತೀರ್ಷತೋ ಬಾಲಿಶಶೇಖರಸ್ಯ ಮೇ ॥

ಇನ್ನು ನ್ಯಾಯಸುಧಾಕ್ಕೆ ಯಾವ ಯಾವ ಮಹಾನುಭಾವರು ವ್ಯಾಖ್ಯಾನಮಾಡಿರುವರೋ ಅವರೆಲ್ಲರ ಕಮಲದಂತಿರುವ ಪಾದಗಳ ಧೂಳಿಯ ಸ್ಮರಣೆಯೆಂಬ ದೋಣಿಯೇ ಬಾಲಿಶನಾದ ನನಗೆ ಗಂಭೀರವಾದ ಗಂಗೆಯಂತಿರುವ ನ್ಯಾಯಸುಧೆಯನ್ನು ದಾಟಲು ಸಾಧನವಾಗಿದೆ.

### ಶಾಸ್ತ್ರಗಳಲ್ಲಿ ಚಮತ್ಕಾರವನ್ನು ಮಾಡುವ ಶ್ರೀಸತ್ಯವರ್ಯತೀರ್ಥರು

ಚಮತ್ಕೃತಂ ಚರ್ಕರೀತೇ ಚರ್ಕೃತಾದೌ ಫಣೀತರೈಃ ।
ಅಚರ್ಕತಮಚರ್ಕಾರಿ ಸತ್ಯವರ್ಯಂ ತಮಾಶ್ರಯೇ ॥

ಯಾರು ಶಾಸ್ತ್ರಗಳಲ್ಲಿ ಚಮತ್ಕಾರವನ್ನು ಮಾಡಿದ್ದಾರೋ, ಹಾಗೆಯೇ ಚರ್ಕರೀತ ಅಂದರೆ ಯಙ್-ಲುಗಂತ ಪ್ರಯೋಗಗಳಲ್ಲಿ ಅರ್ಥಾತ್ ಸಮಗ್ರವ್ಯಾಕರಣಶಾಸ್ತ್ರದಲ್ಲಿ ಪತಂಜಲಿಯಂತಿರುವವರಾಗಿ ಮೊದಲಿಗರಾಗಿ ಚೆನ್ನಾಗಿ ವಿಹರಿಸಿದ್ದಾರೋ ಅಂತಹ ಬ್ರಹ್ಮತರ್ಕಾದಿಗಳಲ್ಲಿ ನಿರಂತರ ಸಂಚರಿಸುತ್ತ ಶಿಷ್ಯರಿಗೆ ಬೋಧಿಸುತ್ತಿರುವ ಸತ್ಯವರ್ಯತೀರ್ಥರನ್ನು ಆಶ್ರಯಿಸುತ್ತೇನೆ.

* ಚಷಕ ವ್ಯಾಖ್ಯಾನದಲ್ಲಿ ಒಂದು ಶ್ಲೋಕವು

ಚಮತ್ಕೃತಂ ಚರ್ಕರೀತೇ ಚರ್ಕೃತಾದೌ ಫಣೀತರೈಃ ।
ಅಚರ್ಕತಮಚರ್ಕಾರಿ ಸತ್ಯವರ್ಯಂ ತಮಾಶ್ರಯೇ ॥

ಚಮತ್ಕೃತಂ = ಆಶ್ಚರ್ಯಕರಂ ಶ್ರೀಮಧ್ವಾಶಾಸ್ತ್ರಸೇವಾಕಾರ್ಯಂ ಪುನಃ ಪುನಃ ಆಧಿಕ್ಯೇನ ವಾ ಕೃತಂ ಚರ್ಕರೀತೇ = ಆಧಿಕ್ಯೇನ ಅಥವಾ ಬಾಹುಲ್ಯೇನ ಇತ್ಯರ್ಥಃ । ಬಾಹುಲ್ಯವಾಗಿ ಮತ್ತು ಆಧಿಕ್ಯವಾಗಿ ಎಂಬ ಅರ್ಥಗಳಲ್ಲಿ ಪ್ರಯುಕ್ತವಾದ "ಕೃ" ಧಾತುವಿನ ಒಂದು ಪ್ರಚಲಿತಪ್ರಯೋಗವು. ಪುನಃ ಮಹಾಭಾಷ್ಯಾಂತವೈಯಾಕರಣರಿಂದ ಇದೇ ಅರ್ಥಗಳಲ್ಲಿ ಪ್ರಯುಕ್ತವಾದದ್ದು "ಯಙ್-ಲುಗಂತದ" ಪ್ರಯೋಗವು. ಅತಃ ಇಲ್ಲಿ ಸಾಮಾನ್ಯ ವಿಕರಣದಲ್ಲಿ "ಶಪ್" ಪ್ರತ್ಯಯವು ಬಂದಿಲ್ಲ . "ಚರ್ಕರೀತ' ಎಂಬ ಪದವು "ಕೃ" ಧಾತುವಿಗೆ ಕ್ರಿಯಾಸಮಭಿಹಾರದ ಅಂದರೆ ಪುನಃ ಪುನಃ ಎಂಬುವ ಅರ್ಥದಲ್ಲಿ ಪ್ರಥಮಪುರುಷದ ಏಕವಚನರೂಪವಾದ "ಚರ್ಕರೀತಿ" ಎಂಬ ಶಬ್ದದ ಮೇಲೆ ಆಧಾರಿತವಾಗಿದೆ. ಹೇಗೆ ಅಂದರೆ- ಚರ್ಕರೀತಿ, ಚರ್ಕರ್ತಿ, ಬೋಭವೀತಿ, ಬೋಭೋತಿ

ಶಬ್ದಗಳು ಇದಂತೆ ಎಂದು ತಿಳಿಯಬೇಕು. ಪುನಃ "ಚರ್ಕರೀತಂ ಚ" ಎಂದು ಪಾಣಿನಿಪ್ರಣೀತ-ಅಷ್ಟಾಧ್ಯಾಯೀಸೂತ್ರಪಾಠದಲ್ಲಿ "ಅದಿಪ್ರಭೃತಿಭ್ಯಃ ಶಃ" ವ್ಯಾಖ್ಯಾಸಂದರ್ಭದಲ್ಲಿ ಧಾತುಪಾಠದ ಅದಾದಿಗಣದಲ್ಲಿ ಪಠಿತವಾದ ಸೂತ್ರದ ಜೊತೆಗೆ "ಚರ್ಕರೀತಮಿತಿ ಯಙ್-ಲುಕಃ ಪ್ರಾಚಾಂ ಸಂಜ್ಞಾ" ಎಂದು ಭಾಷಾವೃತ್ತಿಕಾರನಾದ ಶ್ರೀಪುರುಷೋತ್ತಮದೇವನು ಸ್ಪಷ್ಟೀಕರಿಸಿದನು. "ಚೆಕ್ರೀಯೀತ" ಎಂಬ ಪದವು ಪುನಃ ಪುನಃ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಅಂತತೋ ಗತ್ವಾ ಚರ್ಕರೀತೇ ಎಂಬ ಶಬ್ದಕ್ಕೆ ಪುನಃ ಪುನಃ ಮಾಡುವ ಕೆಲಸದ ವಿಷಯದಲ್ಲಿ. ಪುನಃ "ಚರ್ಕೃತ ಆದೌ" ಯಾ ಮಹಾನುಭಾವರಿಂದ ಆದಿಯಲ್ಲಿಯೇ ಸಿದ್ಧಮಾಡಲ್ಪಟ್ಟಿದೆ. "ಫಣೀತರ್ಕೈಃ" ಫಣೀ ಅಂದರೆ ಪಾಂತಜಲವ್ಯಾಕರಣಮಹಾಭಾಷ್ಯವು ಅತ ಏವ ಮಲ್ಲಿನಾಥನು "ಪನ್ನಗಗವೀಗುಂಫೇಷು" ಎಂದು ಪ್ರಯೋಗ ಮಾಡಿದನು. ಅಂತಹ ಮಹಾಭಾಷ್ಯದಲ್ಲಿ "ತರ್ಕೈಃ" ಪಾರಂಗತರು ಮತ್ತು ಶ್ರೇಷ್ಠಜ್ಞಾನವುಳ್ಳವರು ( ಅನ್ಯೇಷಾಮಪಿ ದೃಶ್ಯತೇ ಎಂಬ ಪಾಣಿನಿಸೂತ್ರದಿಂದ ಫಣೀತರಶಬ್ದದಲ್ಲಿ ಪಣೀಶಬ್ದಕ್ಕೆ ದೀರ್ಘವು) "ಅಚರ್ಕತಮ್,ಅಚರ್ಕಾರಿ" ಅಂದರೆ ಯಾರಾದರೇ ಪುನಃ ಪುನಃ ಶಾಸ್ತ್ರವನ್ನು ಕಠಿಣವಾಗಿ ಬೋಧಿಸಿದರೋ ಪುನಃ ಶಿಷ್ಯರನ್ನು ಪರಮಯೋಗ್ಯರಾಗಿ ಮಾಡಿದರೋ (ಶಿಷ್ಯಾಯಮಾಣಾಖಿಲಶಾಸ್ತ್ರವಿದ್ಯಃ) ಅಂತಹ ಶ್ರೀಸತ್ಯವರ್ಯತೀರ್ಥರನ್ನು ಭಕ್ತಿಯಿಂದ ಆಶ್ರಯಿಸುತ್ತೇನೆ. — **(ವ್ಯಾಖ್ಯಾತಾ - ಆತ್ಮಕೂರು ಆನಂದತೀರ್ಥಆಚಾರ್ಯರು)**

## ಬೃಹಸ್ಪತಿಯನ್ನೂ ಮೀರಿಸುವ ಶ್ರೀಸತ್ಯಧರ್ಮತೀರ್ಥರು

ಗೀರ್ಪತಿಂ ಯೋऽದಿಧಿಷಣದಚಿಕೀತತ್ಕಿರೀಟಿನಮ್ ।
ವೃಶತ್ರಾಣನದಾದಿತ್ಯಂ ಸತ್ಯಧರ್ಮಃ ಸ ಮಾऽವತಾತ್ ॥

ಯಾರು ಬೃಹಸ್ಪತಿಯನ್ನೂ ಬುದ್ಧಿಯಲ್ಲಿ ಮೀರಿಸಿದ್ದಾರೋ, ಯಾರು ಕೃಷ್ಣನನ್ನು ಭಕ್ತಿಯಿಂದ ಗೆದ್ದಿದ್ದಾರೋ, ಯಾರು ಆದಿತ್ಯನನ್ನು ಕಾಂತಿಯಿಂದ ಮೀರಿಸಿದ್ದಾರೋ ಅಂತಹ ಸತ್ಯಧರ್ಮತೀರ್ಥರು ನನ್ನನ್ನು ರಕ್ಷಿಸಲಿ.

## ಸೌಧಭಾವಪ್ರಕಾಶಿಕಾಕರ್ತೃಗಳಾದ ಶ್ರೀನಿವಾಸಾರ್ಯರು

ಧಾಯಂ ಧಾಯಂ ಸುಧಾಂ ಸೌಧಭಾವಸ್ಯ ಹಿ ಪ್ರಕಾಶಿಕಾಮ್ ।
ಯೋऽತಾನೀಚ್ಛ್ರೀನಿವಾಸಾರ್ಯಃ ಶ್ರೇಯೋ ಮೇ ತಂತನೀತು ಸಃ ॥

ಸುಧೆಯನ್ನು ಮತ್ತೆ ಮತ್ತೆ ಚೆನ್ನಾಗಿ ಧರಿಸುತ್ತ ಸುಧೆಯ ಅಭಿಪ್ರಾಯವನ್ನು ಸ್ಫುಟಪಡಿಸುತ್ತ ವಿಸ್ತಾರವಾದ ಪ್ರಬಂಧವನ್ನು ರಚಿಸಿರುವರೋ ಅಂತಹ ಶ್ರೀನಿವಾಸ ಎಂಬ ಪೂಜ್ಯರು ನನಗೆ ಶ್ರೇಯಃ-ಪರಂಪರೆಯನ್ನು ಉಂಟುಮಾಡಲಿ.

## ನ್ಯಾಯಸುಧೆ ಅಗಾಧ ಹಾಗೂ ಅತಿಗೂಢಾರ್ಥ

ಅಗಾಧೇಯಂ ಸುಧಾ ಕ್ವಾತಿಗೂಢಾರ್ಥಾ ಮಂದಶೇಮುಷಿಃ ।
ಕ್ವ ಚಾಹಮಪವಾಕ್ಯತ್ವಂ ಯಾಸ್ಯಾಮ್ಯಂತೇ ಸತಾಮಪಿ ॥

ಈ ಸುಧೆ ಅತಿಗೂಢವಾದ ಅರ್ಥವುಳ್ಳದ್ದಾಗಿ ಅಗಾಧವಾಗಿರುವಂತಹದ್ದು. ಹಾಗಾಗಿ ನನ್ನ ಮಂದಬುದ್ಧಿಗೂ ಈ ಸುಧೆಗೂ ಪರಸ್ಪರ ಎಲ್ಲಿಯ ಸಂಬಂಧ. ಕೊನೆಗೆ ಸಜ್ಜನರಲ್ಲಿ ನಾನು ತಪ್ಪಾದ ಮಾತನ್ನು ಆಡುವವನಾಗುತ್ತೇನೋ ಎಂದನ್ನಿಸುತ್ತದೆ. ಅರ್ಥಾತ್ ಗಂಭೀರವಾದ ಆ ನ್ಯಾಯಸುಧೆಯಲ್ಲಿ ಬಹಳಷ್ಟು ಅರ್ಥಗಳು ತುಂಬಿವೆ. ಅದನ್ನು ವ್ಯಾಖ್ಯಾನಿಸುವಾಗ ಯಾವಾಗಲಾದರೊಮ್ಮೆ ಎಡುವುದು ಸಾಧ್ಯವಿದೆ. ಈ ರೀತಿ ಮನ್ನಾರಿಕೃಷ್ಣಾಚಾರ್ಯರು ನ್ಯಾಯಸುಧಾ ಗಂಭೀರತೆಯನ್ನು ಪ್ರತಿಪಾದಿಸಿ-ದ್ದಾರೆ.

## ಕೃಷ್ಣನ ಸುಧಾಪಾನಪಾತ್ರೆ – ಚಷಕ

ಶ್ರೀಮನ್ನ್ಯಾಯಸುಧಾಂ ಭೌಮನಿಲಿಂಪಾನಾಂ ಸುಧಿತ್ಸತಾಮ್ ।
ಸೌಧಂ ಚಷಕಮುದ್ದೀಪ್ತಂ ಮುದೇ ಕೃಷ್ಣೋಽಭಿಧಾಸ್ಯತಿ ॥

ಇಂತಹ ಭೂಸುರರಾದ ಬ್ರಾಹ್ಮಣರಿಗೆ ನ್ಯಾಯಸುಧೆಯನ್ನು ಧರಿಸಲು ಕೃಷ್ಣ ಎಂಬ ಹೆಸರಿನ ನಾನು ಅವರ ಸಂತೋಷಕ್ಕಾಗಿ ಸುಧೆಗೆ ಸಂಬಂಧಪಟ್ಟ ಕಾಂತಿಭರಿತವಾದ ಪಾನಪಾತ್ರೆಯನ್ನು ನೀಡುತ್ತಿದ್ದೇನೆ.

## ಗುರುಸ್ಥಹಯಗ್ರೀವನ ಪ್ರೀತಿಗಾಗಿ ಈ ಟಿಪ್ಪಣಿಯ ಸೇವೆ

ಶ್ರೀನಿವಾಸಾರ್ಯಹೃತ್ಪದ್ಮಮಂದಿರೋ ಹಯಕಂಧರಃ ।
ಸುನಂದತಾತ್ ಸೇವಯಾ ಮೇ ಭಕ್ತ್ಯಾಽಲಂಕೃತಯಾಽನಯಾ ॥

ಶ್ರೀನಿವಾಸರೆಂಬ ಪೂಜ್ಯರ ಹೃದಯಕಮಲಮಂದಿರದಲ್ಲಿ ನೆಲೆಸಿರುವ ಹಯಗ್ರೀವನು ಭಕ್ತಿಯಿಂದ ಅಲಂಕಾರಗೊಂಡ ಈ ನನ್ನ ಸೇವೆಯಿಂದ ಪ್ರಸನ್ನಗೊಳ್ಳಲಿ.

## ಶ್ರಿಯಃ ಪತ್ಯೇ ಮಂಗಳಪದ್ಯದ ಅವತರಣಿಕೆ

'ವೃದ್ಧಿಸೂತ್ರೇ ಏತದೇಕಂ ಆಚಾರ್ಯಸ್ಯ ಮಂಗಲಾರ್ಥಂ ಮೃಷ್ಯತಾಮ್ । ಮಾಂಗಲಿಕಃ ಆಚಾರ್ಯಃ ಮಹತಃ ಶಾಸ್ತ್ರೌಘಸ್ಯ ಮಂಗಲಾರ್ಥಂ ವೃದ್ಧಿಶಬ್ದಂ ಆದಿತಃ ಪ್ರಯುಂಕ್ತೇ ।' ಇತಿ ವ್ಯಾಖ್ಯಾಸಮರ್ಥನೌಪಯಿಕತಯಾ 'ಮಂಗಲಾದೀನಿ ಮಂಗಲಮಧ್ಯಾನಿ ಮಂಗಲಾಂತಾನಿ ಶಾಸ್ತ್ರಾಣಿ ಪ್ರಥಂತೇ ವೀರಪುರುಷಕಾಣಿ ಭವಂತಿ । ಆಯುಷ್ಮತ್ಪುರುಷಕಾಣಿ ಚ । ಅಧ್ಯೇತಾರಶ್ಚ ಮಂಗಲ-ಯುಕ್ತಾಃ ವೃದ್ಧಿಯುಕ್ತಾ ತಥಾ (ಯಥಾ) ಸ್ಯುಃ ॥' ಇತಿ ಪಾತಂಜಲಾಭಿಧಾನಾದ್ ಗ್ರಂಥೋಽಯಮ್

ಇತ್ಯಾನುಪೂರ್ವೀಕಭಗವತ್ಪಾದೀಯವಚೋಧರ್ಮಿಕಪ್ರಾಮಾಣ್ಯೋಪರಕ್ತಪ್ರತಿಸಂಹಿತ್ಯುತ್ಪಾದನಾ-ನುಕೂಲವ್ಯಾಪಾರವಿಶೇಷಿತೋಽನುವ್ಯಾಕೃತಿವ್ಯಾಕೃತಿಮಾರಿಪ್ಸುಃ ಟೀಕಾಕೃತ್ ಪೂಜ್ಯಚರಣಃ ಸಮೀ-ಹಿತಸಮಾಪನಾದಿಫಲಕಶ್ರೀಜಾನ್ಯಭಿಷ್ಟುತ್ಯಾದಿರೂಪಮಂಗಲವಿಧಾನೋತ್ತರಕಾಲಿಕಾನಭ್ಯರ್ಣ-ವರ್ತಿವಿನೇಯಾಧಿಕರಣಕತದ್ಗೋಚರಾನುಸಂಹಿತಿಪ್ರಯೋಜನಕಂ ಮಂಗಲಪ್ರತ್ಯಾಯಕಪದ-ಘಟಕವರ್ಣಾನುವಾದಕರೇಖಾವಿಶೇಷರೂಪೋಪನಿಬಂಧಮಾದಿತೋ ವಿಧತ್ತೇ — **ಶ್ರಿಯಃ ಪತ್ಯ** ಇತ್ಯಾದಿ ॥

ಶ್ರಿಯಃ ಪತ್ಯೇ ॥ ವೃದ್ಧಿರಾದೈಚ್(ಪಾ.ಸೂ.1-1-1) ಎಂಬುದು ಪಾಣನಿಯ ಅಷ್ಟಾಧ್ಯಾಯೀ ಗ್ರಂಥದ ಮೊದಲನೆಯ ಸೂತ್ರ. ಈ ಸೂತ್ರದ ಮಹಾಭಾಷ್ಯದಲ್ಲಿ ಹೀಗಿದೆ - 'ವೃದ್ಧಿಸೂತ್ರೇ ಏತದೇಕಂ ಆಚಾರ್ಯಸ್ಯ ಮಂಗಲಾರ್ಥಂ ಮೃಷ್ಯತಾಮ್ । ಮಾಂಗಲಿಕಃ ಆಚಾರ್ಯಃ ಮಹತಃ ಶಾಸ್ತ್ರೌಘಸ್ಯ ಮಂಗಲಾರ್ಥಂ ವೃದ್ಧಿಶಬ್ದಂ ಆದಿತಃ ಪ್ರಯುಂಕ್ತೇ ।' ಎಂಬ ವಿಷಯವನ್ನು ಸಮರ್ಥನೆ ಮಾಡುತ್ತ - 'ಮಂಗಲಾದೀನಿ ಮಂಗಲಮಧ್ಯಾನಿ ಮಂಗಲಾಂತಾನಿ ಶಾಸ್ತ್ರಾಣಿ ಪ್ರಥಂತೇ ವೀರಪುರುಷಕಾಣಿ ಭವಂತಿ । ಆಯುಷ್ಮತ್ ಪುರುಷಕಾಣಿ ಚ । ಅಧ್ಯೇತಾರಶ್ಚ ಮಂಗಲಯುಕ್ತಾಃ ವೃದ್ಧಿಯುಕ್ತಾ ತಥಾ (ಯಥಾ) ಸ್ಯುಃ ॥ ಎಂದಿದ್ದಾರೆ.

ಇದರ ಭಾವ — ಯಾವುದೇ ಗ್ರಂಥವನ್ನು ಪ್ರಾರಂಭಿಸುವ ಮೊದಲು ಮಂಗಲವನ್ನಾಚರಿಸುವುದು ಸಕಲ ಶಿಷ್ಟರ ಸಂಪ್ರದಾಯ. ಅದರಂತೆ ಆಚರಿಸಿದ ಮಂಗಲವನ್ನು ನಿಬಂಧನೆ ಮಾಡುವುದು ಕೂಡ. ನಿಬಂಧನೆ ಎಂದರೆ ಪ್ರಕೃತದಲ್ಲಿ ಮಂಗಳಪ್ರತ್ಯಾಯಕಪದಘಟಕವರ್ಣ-ಅನುವಾದಕ-ರೇಖೋ-ಪರೇಖಾವಿನ್ಯಾಸ ಎಂದರ್ಥ. ಆದರೆ ಪಾಣಿನಿಯು ತನ್ನ ಅಷ್ಟಾಧ್ಯಾಯೀ ಗ್ರಂಥದಲ್ಲಿ ತಾನು ಆಚರಿಸಿದ ಯಾವುದೇ ಮಂಗಲವನ್ನು ನಿಬಂಧನೆ ಮಾಡಲಿಲ್ಲವಲ್ಲ ಎಂಬ ಪ್ರಶ್ನೆ ಬರುತ್ತವೆ. ಅವಕ್ಕೆ ಉತ್ತರವಾಗಿ ವೃದ್ಧಿಸೂತ್ರ ಎನಿಸುವ ವೃದ್ಧಿರಾದೈಚ್ ಎಂಬ ಸೂತ್ರದಲ್ಲಿ ವೃದ್ಧಿ ಎಂಬ ಶಬ್ದಪ್ರಯೋಗವನ್ನೇ ಮಂಗಲಾಚರಣೆಯ ನಿಬಂಧನೆ ಎನ್ನಬೇಕು. ಅಂದರೆ ಆಚಾರ್ಯರಾದ ಪಾಣಿನಿಯು ತನ್ನ ಅಷ್ಟಾಧ್ಯಾಯಿಯು ನಿರ್ವಿಘ್ನವಾಗಿ ಸಮಾಪ್ತಿಯಾಗಲಿ ಎಂದು ವೃದ್ಧಿಶಬ್ದವನ್ನು ಮೊದಲೇ ಪ್ರಯೋಗ ಮಾಡಿದ್ದಾರೆ. ಈ ಭಾಗವನ್ನು ಸಮರ್ಥನೆ ಮಾಡುತ್ತ ಮಂಗಲಾಚರಣೆಯನ್ನು ಗ್ರಂಥದ ಮೊದಲು ಗ್ರಂಥದ ಮಧ್ಯೆ ಗ್ರಂಥದ ಕೊನೆಗೆ ಮಾಡಬೇಕು ಎನ್ನುವ ವಿಷಯದಲ್ಲಿ ಪ್ರಮಾಣವನ್ನು ಮಹಾಭಾಷ್ಯಕಾರರು ಉಲ್ಲೇಖಿಸಿದ್ದಾರೆ — "ಮಂಗಲವನ್ನು ಆದಿಯಲ್ಲಿ ಮಧ್ಯದಲ್ಲಿ ಕೊನೆಯಲ್ಲಿ ಶಾಸ್ತ್ರಗಳಲ್ಲಿ ಅನುಷ್ಠಾನ ಮಾಡಿದರೆ ಅವುಗಳು ಪ್ರಸಿದ್ಧಿಯನ್ನು ಪಡೆಯುತ್ತವೆ. ಆ ಶಾಸ್ತ್ರಗಳನ್ನು ಓದುವ ಮನುಷ್ಯರು ಒಳ್ಳೆಯ ಸಾಮರ್ಥ್ಯವನ್ನು ಆಯುಸ್ಸನ್ನು ಮಂಗಲವನ್ನು ವೃದ್ಧಿಯನ್ನು ಪಡೆಯುವರು" ಎಂದು. ಈ ರೀತಿ ಮಂಗಲವು ಶಾಸ್ತ್ರಗಳಲ್ಲಿ ಅನುಷ್ಠೇಯವಾಗಿದೆ.

'ಅನುವ್ಯಾಖ್ಯಾನಗ್ರಂಥವು ಬಹಳ ಅರ್ಥವುಳ್ಳದ್ದಾಗಿದೆ. ಬಹಳ ತಿಳಿದವರೇ ಅದರ ಅಭಿಪ್ರಾಯ-ವನ್ನು ವರ್ಣಿಸಲು ಸಾಧ್ಯ' ಎಂಬ ಆಚಾರ್ಯರ ಮಾತಿನಲ್ಲಿ ಪ್ರಾಮಾಣ್ಯವನ್ನು ಸಂಪಾದನೆ ಮಾಡುವುದಕ್ಕೆ ಬೇಕಾದ ವ್ಯಾಪಾರವುಳ್ಳವರಾಗಿ ಅರ್ಥಾತ್ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನವನ್ನು ಬರೆಯಲಿಚ್ಛಿಸಿ ಟೀಕಾಚಾರ್ಯರು ತಮಗೆ ಅಭಿಮತವಾದ ಗ್ರಂಥಪರಿಸಮಾಪ್ತಿರೂಪವಾದ ಫಲವನ್ನು ಕೊಡುವ ಶ್ರೀಪತಿಯ ನಮಸ್ಕಾರರೂಪವಾದ ಮಂಗಲವನ್ನು ಆಚರಿಸುತ್ತ ತದುತ್ತರ-ಕಾಲದಲ್ಲಿ ವಿನೇಯರಿಗೆ ಅರ್ಥಾತ್ ಶಿಷ್ಯರಿಗೆ ಶಿಕ್ಷಣವೇ ಪ್ರಯೋಜನವಾಗಿ ಉಳ್ಳ ರೇಖೋಪ-ರೇಖಾವಿನ್ಯಾಸವಾದ ನಿಬಂಧನವನ್ನು ಮಾಡುತ್ತಾರೆ – ''ಶ್ರಿಯಃ ಪತ್ಯೇ'' ಇತ್ಯಾದಿಯಾಗಿ.

## ಮಹಾಭಾಷ್ಯ – ಅನೇಕ ಕಡೆ ಮಂಗಲಾಚರಣೆಯ ಬಗ್ಗೆ

** ಮಂಗಲಾಚರಣೆ ಮಾಡುವುದರ ಬಗ್ಗೆ ಹಾಗೂ ಅದರ ನಿಬಂಧನೆಯ ಬಗ್ಗೆ 'ಭೂವಾದಯೋ ಧಾತವಃ' (ಪಾ.ಸೂ.1-3-1) ಎಂಬ ಸೂತ್ರದ ಮಹಾಭಾಷ್ಯದಲ್ಲೂ ಹೀಗೆ ಉಲ್ಲೇಖವಿದೆ.

'ಭೂವಾದೀನಾಂ ವಕಾರೋಽಯಂ ಮಂಗಲಾರ್ಥಃ ಪ್ರಯುಜ್ಯತೇ । ಮಾಂಗಲಿಕಃ ಆಚಾರ್ಯಃ ಮಹತಃ ಶಾಸ್ತ್ರೌಘಸ್ಯ ಮಂಗಲಾರ್ಥಂ ವಕಾರಮಾಗಮಂ ಪ್ರಯುಂಕ್ತೇ । ಮಂಗಲಾದೀನಿ ಮಂಗಲಮಧ್ಯಾನಿ ಮಂಗಲಾಂತಾನಿ ಹಿ ಶಾಸ್ತ್ರಾಣಿ ಪ್ರಥಂತೇ । ವೀರಪುರುಷಾಣಿ ಚ ಭವಂತಿ । ಆಯುಷ್ಮತ್ಪುರುಷಾಣಿ ಚ । ಅಧ್ಯೇತಾರಶ್ಚ ಮಂಗಲಯುಕ್ತಾ ಯಥಾ ಸ್ಯುಃ । – ಎಂದು.

– ಭೂವಾದಯೋ ಧಾತವಃ ಎಂಬ ಪಾಣಿನಿಯ ಸೂತ್ರದಲ್ಲಿ ಭೂ ಎಂಬ ಪದದಿಂದ ಭೂಧಾತು-ವನ್ನು ಗ್ರಹಿಸುತ್ತಾರೆ. ವಾ ಎಂಬ ವಕಾರಪ್ರಯೋಗವು ಮಂಗಲಾರ್ಥಕ ಎಂದು ಭಾವಿಸುತ್ತಾರೆ.

ಅದನ್ನೇ ಮುಂದಕ್ಕೆ ಮಂಗಲವನ್ನೇ ಪ್ರಯೋಜನವನ್ನಾಗಿ ಉದ್ದೇಶ ಮಾಡಿಕೊಂಡು ಆಚಾರ್ಯರು (ಪಾಣಿನಿಮಹರ್ಷಿಗಳು) ಈ ಮಹತ್ತಾದ ವ್ಯಾಕರಣಶಾಸ್ತ್ರಕ್ಕೆ ಮಂಗಲವಾಗಲಿ ಎಂದು ವಕಾರವನ್ನು ಪ್ರಯೋಗಿಸಿದ್ದಾರೆ.

** ಹಾಗೇ 'ಸಿದ್ಧೇ ಶಬ್ದಾರ್ಥಸಂಬಂಧೇ' ಎಂಬ ವಾರ್ತಿಕವ್ಯಾಖ್ಯಾನಸಂದರ್ಭದ ಮಹಾಭಾಷ್ಯದಲ್ಲಿ 'ಮಂಗಲಾರ್ಥಂ । ಮಾಂಗಲಿಕಃ ಆಚಾರ್ಯಃ ಮಹತಃ ಶಾಸ್ತ್ರೌಘಸ್ಯ ಮಂಗಲಾರ್ಥಂ ಸಿದ್ಧಶಬ್ದಂ ಆದಿತಃ ಪ್ರಯುಂಕ್ತೇ । ಮಂಗಲಾದೀನಿ ಹಿ ಶಾಸ್ತ್ರಾಣಿ ಪ್ರಥಂತೇ । ವೀರಪುರುಷಕಾಣಿ ಚ ಭವಂತಿ । ಆಯುಷ್ಮತ್ಪುರುಷಕಾಣಿ ಚ । ಅಧ್ಯೇತಾರಶ್ಚ ಸಿದ್ಧಾರ್ಥಾಃ ಯಥಾ ಸ್ಯುಃ' – ಎಂದಿದೆ.

– 'ಸಿದ್ಧೇ ಶಬ್ದಾರ್ಥಸಂಬಂಧೇ' ಎಂಬ ವಾರ್ತಿಕದಲ್ಲಿ ಪ್ರಯೋಗಿಸಲ್ಪಟ್ಟ ಸಿದ್ಧ ಎಂಬ ಶಬ್ದವು ಮಂಗಲಾರ್ಥಕ ಅರ್ಥಾತ್ ಮಂಗಲಪ್ರಯೋಜನಕ.

## ಅಡವೀ ಶ್ರೀಕೃಷ್ಣಾಚಾರ್ಯರ ಲಘುರಸರಂಜನೀ ಟಿಪ್ಪಣೀ — ಮಂಗಲಾಚರಣೆ

### ಅಗಮ್ಯನಾಗಿದ್ದೂ ಗಮ್ಯನಾಗುವ ಶ್ರೀಹರಿ

ಶ್ರಿಯಃ ಕಾಂತಂ ಸಂತಂ ಗುರುಹೃದಯಗೇಹೇಽತಿ ವಿತತಂ
ಗುಣಾದ್ದೇಶಾತ್ ಕಾಲಾದಪಿ ವಿಗತದೋಷಂ ನಿಜವಶಮ್ ।
ಜಗತ್ಸಂಭೂತ್ಯಾದಿಪ್ರದಮಖಿಲವೇದಾದಿವಚಸಾ-
ಮಗಮ್ಯಂ ಗಮ್ಯಂ ಶ್ರೀಹರಿಮನಿಶಮೀಡೇ ಗುಣವಿದೇ ॥1॥

ಶ್ರೀಹರಿಯನ್ನು ಜ್ಞಾನಾದಿ ಸದ್ಗುಣಗಳ ಅಭಿವ್ಯಕ್ತಿಗಾಗಿ ಪ್ರತಿನಿತ್ಯವೂ ಸ್ತುತಿಸುತ್ತೇನೆ. ಈ ಶ್ರೀಹರಿಯು ಗುರುಗಳ ಹೃದಯಮಂದಿರದಲ್ಲಿ ಲಕ್ಷ್ಮಿಯ ಸಹಿತನಾಗಿ ಕಾಂತಿಭರಿತನಾಗಿದ್ದಾನೆ. ಇವನು ದೇಶತಃ ಕಾಲತಃ ಗುಣತಃ ವ್ಯಾಪ್ತನಾಗಿದ್ದಾನೆ. ಸಕಲದೋಷರಹಿತನಾಗಿದ್ದಾನೆ. ತನ್ನ ಭಕ್ತರಿಗೆ ವಶನಾಗುವನು. ಇಡೀ ಜಗತ್ತಿಗೆ ಉತ್ಪತ್ತಿ, ಸ್ಥಿತಿ ಮೊದಲಾದವುಗಳನ್ನು ನೀಡುವವನು. ಸಕಲವೇದ ಮೊದಲಾದ ಮಾತುಗಳಿಂದಲೂ ಸಂಪೂರ್ಣವಾಗಿ ಹೊಂದಲು ಅಸಾಧ್ಯ ಅರ್ಥಾತ್ ತಿಳಿಯಲು ಅಸಾಧ್ಯ.

### ವೇದವ್ಯಾಸರಿಗೆ ಹಾಗೂ ಸುಖತೀರ್ಥರಿಗೆ ನಮಸ್ಕಾರ

ವೇದಾಂಭೋನಿಧಿಮಂಥನೋದ್ಧೃತಿಮಹಾಸೂತ್ರಾಮೃತೋ ಯೋ ಹರಿ-
ರ್ಜಾತೋ ವ್ಯಾಸಪದೇನ ಯಶ್ಚ ಸುಖತೀರ್ಥಾಖ್ಯಾಯುತೋ ಮಾರುತಃ ।
ತದ್ಭಾಷ್ಯಾದಿಬಹೂಕ್ತಿಸಂಚಯಕರಃ ಕಾರುಣ್ಯಮಾತ್ರೇಣ ತೌ
ದೇವೌ ದಿವ್ಯತದೀಯಮೇಯಮತಯೇ ವಂದೇಽಭಿವಂದ್ಯೌ ಸುರೈಃ ॥

ವೇದವ್ಯಾಸರು ಹಾಗೂ ಮಧ್ವಾಚಾರ್ಯರು ತಿಳಿಸಿದ ಉತ್ಕೃಷ್ಟವಾದ ಪ್ರಮೇಯದ ಜ್ಞಾನಕ್ಕಾಗಿ ವೇದವ್ಯಾಸರು ಹಾಗೂ ಮಧ್ವಾಚಾರ್ಯರನ್ನು ನಮಸ್ಕರಿಸುತ್ತೇನೆ. ಇವರಿಬ್ಬರೂ ದೇವತೆಗಳಿಂದ ನಮಸ್ಕರಿಸಲ್ಪಟ್ಟವರು. ಕೇವಲ ಸಜ್ಜನರ ಮೇಲಿನ ಕೃಪೆಯಿಂದ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಇವರಿಬ್ಬರಲ್ಲಿ ವೇದವೆಂಬ ಕ್ಷೀರಸಮುದ್ರವನ್ನು ಮಥನದಿಂದ ಉದ್ಧವಿಸಿದ ಅರ್ಥಾತ್ ವೇದ-ಸಂವಾದಿಯಾದ ಬ್ರಹ್ಮಸೂತ್ರವನ್ನು ಅಮೃತವುಳ್ಳವರಾಗಿ ಶ್ರೀಹರಿಯು ವೇದವ್ಯಾಸ ರೂಪದಿಂದ ಪ್ರಾದುರ್ಭವಿಸಿದರು. ಹಾಗೆಯೇ ಆನಂದತೀರ್ಥರೆಂಬ ಹೆಸರಿನಿಂದ ವಾಯುವು ಆ ಬ್ರಹ್ಮಸೂತ್ರಕ್ಕೆ ಭಾಷ್ಯಮೊದಲಾದ ಗ್ರಂಥಗಳನ್ನು ರಚಿಸುವವರಾಗಿ ಪ್ರಾದುರ್ಭವಿಸಿದರು.

### ಶೇಷಾದಿಸಮಸ್ತಜೀವರ ವಾಙ್ಮನೋಭಿಮಾನಿನೀ ಭಾರತೀದೇವಿ

ಯಾ ಶೇಷಾದಿಸಮಸ್ತಜೀವವಚನಸ್ವಾಂತಾಭಿಯಂತ್ರೀಚ್ಛಯಾ
ಮಂದಾನ್ ವಾಙ್ಮತಿಭಿಃ ಪಟೂನ್ ಸ್ಫುಟತರಂ ಆಸಂವಿಧತ್ತೇ ಜನಾನ್ ।

ಸಾ ಚೇತೋವಚನೇ ಸಮೀರಯತು ಮೇ ಸಂಕೀರ್ತನಾದೌ ಹರೇಃ
ಶರ್ವೇಂದ್ರಾದಿಸುರೇಂದ್ರಪೂಜಿತಪದಾ ಶ್ರೀಭಾರತೀ ಸರ್ವದಾ ॥

ಶ್ರೀಭಾರತೀದೇವಿಯು ಯಾವಾಗಲೂ ನನ್ನ ಮನಸ್ಸು ಮಾತುಗಳನ್ನು ಹರಿಯ ಸಂಕೀರ್ತನೆ ಶ್ರವಣ ಮೊದಲಾದವುಗಳಲ್ಲಿ ಪ್ರೇರಣೆ ಮಾಡಲಿ. ಆ ಭಾರತಿಯಾದರೋ ರುದ್ರಇಂದ್ರಾದಿಸಮಸ್ತ ದೇವತೆಗಳಿಂದ ಪೂಜಿಸಲ್ಪಡುವ ಪಾದವುಳ್ಳವಳು. ಇವಳು ತನ್ನ ಇಚ್ಛೆಯಿಂದ ಮಂದರನ್ನು ಬುದ್ಧಿ ಹಾಗೂ ಮಾತಿನಿಂದ ಅತ್ಯಂತ ಸ್ಫುಟವಾಗಿ ಸಮರ್ಥರನ್ನಾಗಿ ಮಾಡುವಳು. ಇದು ಅವಳಿಗೆ ಸಾಧ್ಯವೇ ಆಗಿದೆ. ಏಕೆಂದರೆ ಅವಳ ಇಚ್ಛೆಯು ಶೇಷದೇವರಿಂದ ಹಿಡಿದು ಎಲ್ಲ ಜೀವರ ಮಾತು ಹಾಗೂ ಮನಸ್ಸುಗಳನ್ನು ನಿಯಂತ್ರಿಸುವದ್ದಾಗಿದೆ.

## ತಲೆಯಲ್ಲಿ ರತ್ನವನ್ನು ಧರಿಸಿದ ಸರ್ಪರಾಜರು ಶ್ರೀಜಯತೀರ್ಥರು

ಆಜ್ಞಾಂ ಶ್ರೀಧವಭಾರತೀಧವಕೃತಾಂ ಕುರ್ವನ್ ಸ್ವಮೌಲೌ ಮಣಿಂ
ಭೂತ್ವಾ ಭೂಮಿತಲೇ ಯತಿಸ್ತ್ವ ಜಯತೀರ್ಥಾಖ್ಯಾಯುತೋ ಯೋಽಹಿರಾಟ್ ।
ಸಪ್ತತ್ರಿಂಶತಿಮೂಲಸಂಘವಿವೃತಿಂ ಚಕ್ರೇ ಪರಂ ತಂ ಗುರುಂ
ಶ್ರೀಮನ್ನ್ಯಾಯಸುಧಾದಿಶಬ್ದನಿಚಯೈರ್ವಾಚ್ಯಾಂ ಭಜೇ ಭಕ್ತಿತಃ ॥

ಜಯತೀರ್ಥರೆಂಬ ಹೆಸರಿನ ಸರ್ಪಶ್ರೇಷ್ಠರಾದ ಗುರುಗಳನ್ನು ಭಕ್ತಿಯಿಂದ ಭಜಿಸುತ್ತೇನೆ. ಇವರಾದರೋ ನಾರಾಯಣ ಹಾಗೂ ವಾಯುದೇವರ ಆಜ್ಞೆಯೆಂಬ ಮಣಿಯನ್ನು ತನ್ನ ತಲೆಯ ಮೇಲೆ ಧರಿಸುತ್ತಾ ಭೂಮಿಗೆ ಯತಿಗಳಾಗಿ ಬಂದರು. ನಂತರ ಶ್ರೀಮನ್ನ್ಯಾಯಸುಧಾ ಮೊದಲಾದ ಶಬ್ದಗಳಿಂದ ಹೇಳಲ್ಪಡುವ, ಮೂವತ್ತೇಳು ಮೂಲ (ಸರ್ವಮೂಲ)ಗ್ರಂಥಗಳ ವಿವರಣಾತ್ಮಕವಾದ ನಿಬಂಧಗಳನ್ನು ರಚಿಸಿದರು.

## ಶ್ರೀಐಜೀರಾಮಾಚಾರ್ಯರೆಂಬ ಕಲ್ಪವೃಕ್ಷ

ದಿಕ್ಕ್ರಾಂತಾತತಪುಣ್ಯಕೀರ್ತಿಸುಲತಾಸಂಶೋಭಿತಃ ಸಂತತಂ
ನಾನಾಶಿಷ್ಯತದೀಯಶಿಷ್ಯವಿಲಸಚ್ಛಾಖೋಪಶಾಖಾನ್ವಿತಃ ।
ಐಜೀವೇಂಕಟನಾರಸಿಂಹದಯಿತಾದಿವ್ಯಾಲಬಾಲೋದ್ಭವಃ
ಸಂಭೂಯಾತ್ ಸಕಲೇಷ್ಟದೋ ಪರಗುರೂ ರಾಮಾರ್ಯಕಲ್ಪದ್ರುಮಃ ॥

ಪರಮಗುರುಗಳಾದ ರಾಮಾಚಾರ್ಯರೆಂಬ (ವ್ಯಾಸತತ್ವಜ್ಞರು) ಕಲ್ಪವೃಕ್ಷವು ನನಗೆ ಸಕಲೇಷ್ಟವನ್ನು ದಯಪಾಲಿಸಲಿ. ಇವರು ಐಜೀವೇಂಕಟನರಸಿಂಹಾಚಾರ್ಯರ ಪತ್ನಿಯಿಂದ ದಿವ್ಯವಾದ ಜ್ಞಾನವನ್ನು ಪಡೆಯುವ ಬಾಲಕರಾಗಿ ಹುಟ್ಟಿದರು. ಈ ವ್ಯಾಸತತ್ತ್ವಜ್ಞರೆಂಬ ಕಲ್ಪವೃಕ್ಷದ ಪುಣ್ಯಕೀರ್ತಿಯೆಂಬ

ಒಳ್ಳೆಯ ಬಳ್ಳಿಯು ಎಲ್ಲ ದಿಕ್ಕು ದಿಕ್ಕುಗಳವರೆಗೆ ಹರಡಿ ಚೆನ್ನಾಗಿ ಶೋಭಿಸುತ್ತಿದೆ. ಆ ಲತೆಯು ಅನೇಕ ಶಿಷ್ಯರು, ಪ್ರಶಿಷ್ಯರೆಂಬ ಶೋಭಿಸುತ್ತಿರುವ ದೊಡ್ಡಕೊಂಬೆಗಳಿಂದ ಹಾಗೂ ಚಿಕ್ಕಕೊಂಬೆಗಳಿಂದ ಕೂಡಿರುವುದು.

## ಶರಣು ಹೊಂದುವೆನು ಶ್ರೀವಿಷ್ಣುತೀರ್ಥರನ್ನು

ಸುಧಾದಿಟೀಕಾಕೃದಭೀಷ್ಟಶಿಷ್ಯರಾಟ್ ತೇನೋಪದಿಷ್ಟಃ ಸುಜನೇಷ್ಟಸಿದ್ಧಯೇ ।
ಅವಾತರತ್ ಶ್ರೀಜಯತೀರ್ಥಸಂಜ್ಞಯಾ ಗುರುಂ ಚ ಸಾಕ್ಷಾಚ್ಛರಣಂ ತಮೇಮ್ಯಹಮ್ ॥

ಶ್ರೀಜಯತೀರ್ಥರೆಂಬ ಹೆಸರಿನ (ಮಾದನೂರು ವಿಷ್ಣುತೀರ್ಥರು) ನನ್ನ ಸಾಕ್ಷಾತ್ ಗುರುಗಳನ್ನು ರಕ್ಷಕರನ್ನಾಗಿ ನಾನು ಹೊಂದುತ್ತೇನೆ. ಇವರಾದರೋ ಸಾತ್ವಿಕಜನರ ಇಷ್ಟವಾದ ಜ್ಞಾನಸಿದ್ಧಿಗಾಗಿ ವ್ಯಾಸತತ್ವಜ್ಞತೀರ್ಥರಿಂದ ಉಪದೇಶಗೊಂಡವರಾಗಿ ಸುಧಾದಿಗ್ರಂಥಗಳಿಗೆ ಟೀಕೆಯನ್ನು ಬರೆದರು ಹಾಗೂ ವ್ಯಾಸತತ್ವಜ್ಞರಿಗೆ ಇಷ್ಟರಾದ ಶಿಷ್ಯರಲ್ಲಿ ಶ್ರೇಷ್ಠರು.

## ರಕ್ಷಕರಾದ ಶ್ರೀವಿಷ್ಣುತೀರ್ಥರು

ತಮೇವ ತಾತಂ ಮಮ ನೈಕಧಾವನೇ ಸ್ಥಿತಂ ಯತಿಂ ಚಾದ್ವನಿ ದೇವಶಂಕಿತೇ ।
ಪ್ರವರ್ತಮಾನೋ ನರಮಾತ್ರಕಃ ಪುನರ್ಭೀತಃ ಶರಣ್ಯಂ ಶರಣಂ ಸಮೇಮ್ಯಹಮ್ ॥

ಅನೇಕ ಬಾರಿ ಕಾಡಿನಲ್ಲಿ ಇದ್ದ ನನ್ನ ತಂದೆಯಾದ ಜಯ(ವಿಷ್ಣು)ತೀರ್ಥರನ್ನು ಭಯಗೊಂಡ ಸಕಲ ಜನರು ಆಶ್ರಯವನ್ನು ಪಡೆಯುತ್ತಿದ್ದರು. ಇಂತಹವರನ್ನು ನಾನು ಆಶ್ರಯಿಸುತ್ತೇನೆ. ಅಡವೀ ಕೃಷ್ಣಾಚಾರ್ಯರಿಗೆ ಒಮ್ಮೆ ತಮ್ಮ ಸ್ವಪ್ನದಲ್ಲಿ ಬಂದ ಯಮದೂತರ ಬಾಧೆಯನ್ನು ವಿಷ್ಣುತೀರ್ಥರು ತಪ್ಪಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

## ಮಂದರಿಗೆ ಹಿತಪ್ರದವಾದ ಲಘುರಸರಂಜನೀ

ಶ್ರೀಮನ್ನ್ಯಾಯಸುಧಾಯಾ ರಸರಂಜನೀ ಗುರುಕೃತಾ ಗುರ್ವರ್ಥಾ ।
ತಸ್ಮಾನ್ಮಂದಹಿತಾರ್ಥಂ ಕುರ್ವೇ ರಸರಂಜನೀಂ ಲಘ್ವೀಮ್ ॥

ಗುರುಗಳಾದ ನನ್ನ ತಂದೆಯಿಂದ ಶ್ರೀಮನ್ನ್ಯಾಯಸುಧಾಕ್ಕೆ ಬಹಳ ಅರ್ಥಗರ್ಭಿತವಾದ ರಸರಂಜನೀ ಎಂಬ ಟಿಪ್ಪಣಿಯ ರಚಿಸಲ್ಪಟ್ಟಿದೆ. ಆದ್ದರಿಂದ ಮಂದರಿಗೆ ಹಿತವಾಗಲಿ ಎಂಬ ದೃಷ್ಟಿಯಿಂದ ಲಘುರಸರಂಜನಿಯನ್ನು ನಾನು ಮಾಡುತ್ತಿದ್ದೇನೆ.

## ಸ್ವಯೋಗ್ಯತಾನುಗುಣವಾದ ಪಕ್ಷಿಗಳ ಹಾರಾಟ

ಅಗಾಧಬೋಧೈರ್ವಿವೃತೇ ಪ್ರವೃತ್ತಿರ್ಗ್ರಂಥೇ ಮದೀಯಾಪಿ ನ ದೂಷಣೀಯಾ ।
ನಭಃ ಪತಂತ್ಯಾತ್ಮಸಮಂ ಪತತ್ರಿಣಃ ಪಕ್ಷೀಶ್ವರಾದ್ಯುತ್ಪತಿತಂ ದುರಂತಮ್ ॥

ವಿಸ್ತಾರವಾದ ಬುದ್ಧಿಯುಳ್ಳ ಹಲವರು ಈ ಸುಧಾಗ್ರಂಥಕ್ಕೆ ವ್ಯಾಖ್ಯಾನಮಾಡಲು ಟಿಪ್ಪಣಿಯನ್ನು ಬರೆಯಲು ಪ್ರವೃತ್ತಿಮಾಡಿದ್ದಾರೆ. ಇಷ್ಟಾದರೂ ನಾನೂ ಈ ಪ್ರವೃತ್ತಿಮಾಡಿದ್ದು ದೂಷಣಾರ್ಹವೇನಲ್ಲ. ಏಕೆಂದರೆ ಆಕಾಶಕ್ಕೆ ಪಕ್ಷಿಶ್ರೇಷ್ಠನಾದ ಗರುಡನು ಹಾರುವಷ್ಟು ಹಾರಲು ಬರದಿದ್ದರೂ ಬೇರೆಯ ಪಕ್ಷಿಗಳು ತಮ್ಮ ಶಕ್ತ್ಯನುಗುಣವಾಗಿ ಹಾರಬಹುದು. ಅದರಂತೆ ಇಲ್ಲಿಯೂ ಕೂಡ ತಿಳಿಯಬಹುದು.

## ಪೂರ್ವಾಚಾರ್ಯರು ಅನುವ್ಯಾಖ್ಯಾನ ವ್ಯಾಖ್ಯಾನ ಮಾಡಿದರೂ ನ್ಯಾಯಸುಧೆಯ ಆವಶ್ಯಕತೆ

ಭಗವತಾ ಬಾದರಾಯಣೇನ ಪ್ರಾಣಿನಾಂ ನಿಃಶ್ರೇಯಸಾಯ ಬ್ರಹ್ಮಮೀಮಾಂಸಾಶಾಸ್ತ್ರಂ ಪ್ರಣೀತಮ್ । ತಥಾಪಿ ತದಸಾಧುನಿಬಂಧಾಂಧತಮಸಾವಕುಂಠಿತತ್ವೇನ ಅಪ್ರಣೀತಮಿವ ಮನ್ಯ-ಮಾನೋ ಭಗವಾನ್ ಆನಂದತೀರ್ಥಮುನಿಃ ಯಥಾಚಾರ್ಯಾಭಿಪ್ರಾಯಮಸ್ಯ ಭಾಷ್ಯಂ ವಿಧಾಯ ಪುನಃ ತ್ರಿವಿಕ್ರಮಾಚಾರ್ಯಸಂಪ್ರಾರ್ಥಿತೋ ದುರ್ವಾದಿಗರ್ವಾದ್ರಿಪವಿಂ ಮಾಯಿಧ್ವಾಂತರವಿದ್ಯುತಿಂ ವ್ಯಕ್ತತರ್ಕತತಿಮನುವ್ಯಾಖ್ಯಾಮಪಿ ಚಕಾರ । ತಾಮ್ ಅಗಾಧಬೋಧೈಃ ಪೂರ್ವಾಚಾರ್ಯೈಃ ಯಥಾಪ್ರುತಾಭಿಪ್ರಾಯಂ ವಿವೃತಾಮಪಿ ಅತಿದುರ್ವಿಭಾವ್ಯತಯಾ ಕಲಿಬಲಕಾಲಿತಮನೋಬಲ-ತಯಾ ಚ ಸಾಮಸ್ತ್ಯೇನ ಜ್ಞಾತುಮಶಕ್ತಾನ್ ಸಜ್ಜನಾನ್ನಿರೀಕ್ಷ್ಯ ಸಂಜಾತಕರುಣೋ ಜಯತೀರ್ಥ-ಶ್ರೀಮಚ್ಚರಣಃ ಅನನ್ಯಸಾಧ್ಯಮನೋದೋಷನಿರಾಸಪೂರ್ವಕಂ ಸಂಪ್ರಕಟಿತಸಮಸ್ತಭಾವಸುಧಾಂ ಶ್ರೀಮನ್ನ್ಯಾಯಸುಧಾಂ ಕರಿಷ್ಯನ್ ವಿಲೀನಪ್ರಕೃತ್ಯಾ ಆನಂದತೀರ್ಥಪ್ರತಿಬಿಂಬತಯಾ ತದ್ವತ್ ಸ್ವಯಮಂತರಾಯವಿಧುರೋऽಪಿ ಅನವರತಮೀಶ್ವರಪ್ರವಣಕಾಯಕರಣವೃತ್ತಿರಪಿ ಶ್ರೀಹರಿ-ಪ್ರಣಾಮಾದಿಕಂ ಪ್ರಾರಿಪ್ಸಿತಸ್ಯಾನಂತರಾಯಪರಿಸಮಾಪ್ತೇಃ ಪ್ರಚಯಸ್ಯ ಚ ಹೇತುತಯಾ ಅವಿಗೀತ ಶಿಷ್ಟಾಚಾರಪರಂಪರಯಾऽವಗತಮವಶ್ಯಂ ಕರಣೀಯಂ ಶಿಷ್ಯಾನ್ ಗ್ರಾಹಯಿತುಂ ಗ್ರಂಥಾದೌ ನಿಬಧ್ನಾತಿ — **ಶ್ರಿಯಃ ಪತ್ಯ ಇತಿ** ॥

ಶ್ರಿಯಃಪತ್ಯೇ — ಪೂಜ್ಯರಾದ ವೇದವ್ಯಾಸರು ಎಲ್ಲ ಮೋಕ್ಷಾಧಿಕಾರಿಗಳಿಗೆ ಮೋಕ್ಷ ಸಿಗುವುದಕ್ಕೋಸ್ಕರ ಬ್ರಹ್ಮಸೂತ್ರವನ್ನು ರಚನೆ ಮಾಡಿದರು. ಆದರೂ ಅದು ರಚನೆ ಮಾಡಿದಂತೆ ಆಗಲಿಲ್ಲ. ಕಾರಣ ಕೆಲವು ಅಸಜ್ಜನರು ಬ್ರಹ್ಮಸೂತ್ರಗಳಿಗೆ ವಿಪರೀತವಾಗಿ ವ್ಯಾಖ್ಯಾನಮಾಡಿದ್ದರಿಂದ. ಹೀಗೆ ರಚನೆ ಮಾಡಿದರೂ ಅಸಜ್ಜನರ ವ್ಯಾಖ್ಯಾನಗಳೆಂಬ ಕತ್ತಲೆಯಿಂದ ಮುಚ್ಚಲ್ಪಟ್ಟದ್ದಾಯಿತು. ಇದನ್ನು ನಿವಾರಿಸಲು ಪೂಜ್ಯರಾದ ಆನಂದತೀರ್ಥಮುನಿಗಳು ವೇದವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾಗಿ ಭಾಷ್ಯವನ್ನು ರಚನೆ ಮಾಡಿದರು — "ನಾರಾಯಣಂ ಗುಣೈಃ ಸರ್ವೈಃ" - ಇತ್ಯಾದಿಯಾಗಿ. ಭಾಷ್ಯದ ರಚನೆಯಾದ ಮೇಲೆ ಮತ್ತೆ ತ್ರಿವಿಕ್ರಮಪಂಡಿತಾಚಾರ್ಯರಿಂದ ಪ್ರಾರ್ಥಿಸಲ್ಪಟ್ಟವರಾಗಿ ದುರ್ವಾದಿ-ಗಳ ಗರ್ವವೆಂಬ ಪರ್ವತಕ್ಕೆ ವಜ್ರಾಯುಧದಂತೆ ಇರುವ, ಮಾಯಾವಾದಿಗಳೆಂಬ ಕತ್ತಲೆಗೆ ಸೂರ್ಯನ ಕಾಂತಿಯಂತೆ ಇರುವ, ಚೆನ್ನಾಗಿ ವ್ಯಕ್ತವಾದ ಯುಕ್ತಿಗಳ ಸಮೂಹವುಳ್ಳ ಅನುವ್ಯಾಖ್ಯಾನ-

ವನ್ನು ರಚನೆ ಮಾಡಿದರು. ಈ ಅನುವ್ಯಾಖ್ಯಾನವನ್ನು ದೊಡ್ಡ ಜ್ಞಾನಿಗಳೆಲ್ಲರೂ ಆಚಾರ್ಯರ ಅಭಿಪ್ರಾಯಾನುಗುಣವಾಗಿ ವಿವರಣೆ ಮಾಡಿದರು. ಆದರೆ ಇನ್ನೂ ಅದರ ಅಭಿಪ್ರಾಯವನ್ನು ತಿಳಿಯಲು ಕಷ್ಟಸಾಧ್ಯವಾದ ಕಾರಣ ಹಾಗೂ ಕಲಿಬಲದಿಂದಾಗಿ ಮನಸ್ಸಿನ ಬಲವನ್ನು ಕಳೆದುಕೊಂಡದ್ದರಿಂದ ಸಮಸ್ತಸಜ್ಜನರು ಸಂಪೂರ್ಣವಾಗಿ ತಿಳಿಯಲು ಅಶಕ್ತರಾದದ್ದನ್ನು ನೋಡಿ ಕಾರುಣ್ಯಬಂದು, ಶ್ರೀಮಜ್ಜಯತೀರ್ಥಶ್ರೀಚರಣರು ಬೇರೆಯವರಿಂದ ಓಡಿಸಲು ಅಸಾಧ್ಯವಾದ ಮನೋದೋಷಗಳನ್ನು ನಿರಾಸಮಾಡುವ ಮೂಲಕ, ಚೆನ್ನಾಗಿ ಅನುವ್ಯಾಖ್ಯಾನವೆಂಬ ಸುಧೆಯನ್ನು ಪ್ರಕಟಗೊಳಿಸುವ ಶ್ರೀಮನ್ನ್ಯಾಯಸುಧೆಯನ್ನು ರಚನೆ ಮಾಡುವವರಾಗಿ, ಪ್ರಕೃತಿಬಂಧವಿಲ್ಲದಿರುವ ಆನಂದತೀರ್ಥರ ಪ್ರತಿಬಿಂಬರಾದ್ದರಿಂದ ತಾವೂ ಸ್ವಯಂ ವಿಘ್ನರಹಿತರಾಗಿದ್ದರೂ ನಿರಂತರ ಈಶ್ವರನಲ್ಲಿ ಮಗ್ನವಾದ ದೇಹವ್ಯಾಪಾರ, ಇಂದ್ರಿಯವ್ಯಾಪಾರ ಉಳ್ಳವರಾದರೂ ಕೂಡ, ಶ್ರೀಹರಿಯ ನಮಸ್ಕಾರ ಮೊದಲಾದವುಗಳು ಪ್ರಾರಂಭಮಾಡಿದ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಲೂ ಹಾಗೂ ಅಭಿವೃದ್ಧಿಯನ್ನು ಪಡೆಯಲು ಕಾರಣವಾದ್ದರಿಂದ, ವೇದವಿರುದ್ಧವಲ್ಲದ ಶಿಷ್ಟರ ಸಂಪ್ರದಾಯದ ಪರಂಪರೆಯಿಂದ ಬಂದ ಅವಶ್ಯವಾಗಿ ಮಾಡತಕ್ಕ ಹರಿಪ್ರಣಾಮವನ್ನು ಶಿಷ್ಯರಿಗೆ ಶಿಕ್ಷಣಕೊಡಲು ಗ್ರಂಥದ ಮೊದಲಿಗೆ ಸೇರಿಸಿದ್ದಾರೆ – ಶ್ರಿಯಃ ಪತ್ಯೇ ಎಂದು.

## ಬ್ರಹ್ಮವಿದ್ಯಾಭ್ಯಾಸಿಗಳು ಮಾಡಲೇಬೇಕಾದ ನಾರಾಯಣಾದಿಷಡ್ದೇವತಾವಂದನೆ

(ಲಘುರಸರಂಜನೀ) – ಬ್ರಹ್ಮವಿದ್ಯಾಭ್ಯಾಸಾರ್ಥಿಭಿಃ ನಾರಾಯಣಾದಯಃ ಷಡ್ದೇವತಾಃ ಅವಶ್ಯಂ ವಂದನೀಯಾಃ । ತಥಾಹಿ – ತತ್ರ ಬ್ರಹ್ಮವಿದ್ಯಾವಾಚ್ಯತಯಾ ನಾರಾಯಣಃ, ತದ್ವಕ್ತೃತಯಾ ವೇದ-ವ್ಯಾಸಃ, ತದಭ್ಯಾಸಾರ್ಥಿನಾಂ ತದುಪಯುಕ್ತಾನ್ನಪಾನವಸನಾದ್ಯರ್ಥಭಾಗ್ಯಾಭಿಮಾನಿನೀ ಲಕ್ಷ್ಮೀಃ, ತತ್ಸಾಧ್ಯತತ್ತ್ವನಿರ್ಣಯಾಯ ಭಗವತ್ಕಾರ್ಯಸಾಧಕೇಶೋ ವಾಯುಃ, ತಸ್ಯ ಮನೋವಾಗ್ವ್ಯಾಪಾರ-ರೂಪತ್ವೇನ ತತ್ಪರತಯಾ ತದುಭಯನಿಯಮನಾಯ ತದಭಿಮಾನಿನೀ ಭಾರತೀ, ತತ್ರಾಧಿಕಾರ-ಸಂಪತ್ತಯೇ ವೈರಾಗ್ಯಾದ್ಯರ್ಥಂ ಭಗವತ್ಕಾರ್ಯಸ್ವಾವಾಂತರಸಾಧಕಃ ಶೇಷದೇವ ಇತಿ । ತದುಕ್ತಂ ಮಹಾಭಾರತತಾತ್ಪರ್ಯನಿರ್ಣಯೇ –

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇ ॥ ......
ವಾಯುರ್ನರೋತ್ತಮೋ ನಾಮ ದೇವೀತಿ ಶ್ರೀರುದೀರಿತಾ ॥
ನಾರಾಯಣೋ ವ್ಯಾಸ ಇತಿ ವಾಚ್ಯವಕ್ತೃಸ್ವರೂಪಕಃ ।
ಏಕಸ್ಸ ಭಗವಾನುಕ್ತಃ ಸಾಧಕೇಶೋ ನರೋತ್ತಮಃ ॥

ಉಪಸಾಧಕೋ ನರಶ್ಚೋಕ್ತೋ ದೇವೀ ಭಾಗ್ಯಾತ್ಮಿಕಾ ನೃಣಾಮ್ ।
ಸರಸ್ವತೀ ವಾಕ್ಯರೂಪಾ ತಸ್ಮಾನ್ನಮ್ಯಾ ಹಿ ತೇಽಖಿಲಾಃ । (ಮಭಾ.ತಾ.ನಿ. 3/5-7)
ತಾಸು 'ಪರಯೇ' ಇತಿ ನಾರಾಯಣೋ ವಂದಿತಃ । ಅತ ಏವ ನಾರಾಯಣವಂದನನಿಮಿತ್ತಂ
ಬ್ರಹ್ಮವಿದ್ಯಾವಾಚ್ಯತ್ವಮ್ 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಇತ್ಯುಕ್ತಮ್ ।

ಬ್ರಹ್ಮವಿದ್ಯೆಯನ್ನು ಅಭ್ಯಾಸಮಾಡುವವರು ನಾರಾಯಣನೇ ಮೊದಲಾದ ಆರು ದೇವತೆಗಳನ್ನು ಅವಶ್ಯವಾಗಿ ನಮಸ್ಕರಿಸಬೇಕು. ಅದರ ಕ್ರಮ ಹೀಗೆ - ಮೊದಲಿಗೆ ಬ್ರಹ್ಮವಿದ್ಯೆಯು ಯಾರನ್ನು ಹೇಳುತ್ತದೋ ಅವನಿಗೆ ನಮಸ್ಕಾರ. ಪ್ರಕೃತದಲ್ಲಿ ನಾರಾಯಣ ಬ್ರಹ್ಮವಿದ್ಯಾಪ್ರತಿಪಾದ್ಯ. ಆದ್ದರಿಂದ ಅವನಿಗೆ ಮೊದಲ ನಮಸ್ಕಾರ. ನಂತರ ಆ ಬ್ರಹ್ಮವಿದ್ಯೆಯನ್ನು ಉಪದೇಶಿಸುವ ವೇದವ್ಯಾಸರಿಗೆ ನಮಸ್ಕಾರ. ಅನಂತರ ಬ್ರಹ್ಮವಿದ್ಯೆಯನ್ನು ಅಭ್ಯಾಸ ಮಾಡುವವರಿಗೆ ಬೇಕಾದ ಅನ್ನ, ಪಾನ, ವಸನಾದಿ ಅರ್ಥಗಳನ್ನು ನೀಡುವ ಭಾಗ್ಯಕ್ಕೆ ಅಭಿಮಾನಿನಿಯಾದ ಲಕ್ಷ್ಮೀದೇವಿಗೆ ನಮಸ್ಕಾರ. ಅನಂತರ ಬ್ರಹ್ಮವಿದ್ಯೆಯಿಂದ ತೋರುವ ಅರ್ಥದ ನಿಶ್ಚಯಕ್ಕೋಸ್ಕರ, ಭಗವತ್ಕಾರ್ಯವನ್ನು ಸಾಧಿಸುವವರಲ್ಲಿ ಪ್ರಮುಖರಾದ ವಾಯುದೇವರಿಗೆ ನಮಸ್ಕಾರ. ಅನಂತರ ಬ್ರಹ್ಮವಿದ್ಯೆಯು ಮನೋವಾಕ್ ವ್ಯಾಪಾರರೂಪವಾದ್ದರಿಂದ ಮನಸ್ಸು ಹಾಗೂ ವಾಗಿಂದ್ರಿಯಗಳ ವ್ಯಾಪಾರವನ್ನು ನಿಯಮನ ಮಾಡಲು ಅವುಗಳಿಗೆ ಅಭಿಮಾನಿನಿಯಾದ ಭಾರತೀದೇವಿಗೆ ನಮಸ್ಕಾರ. ಅನಂತರ ಬ್ರಹ್ಮವಿದ್ಯೆಯ ಅಧಿಕಾರ ಸಿದ್ಧಿಗೋಸ್ಕರ ವೈರಾಗ್ಯಾದಿಗಳು ಬೇಕಾಗಿದೆ. ಹಾಗಾಗಿ ಭಗವಂತನು ಮಾಡುವ ಕಾರ್ಯಗಳಲ್ಲಿ ಉಪಸಾಧಕೇಶರಾದ ಶೇಷದೇವರನ್ನು ನಮಸ್ಕರಿಸಬೇಕು.ಇದೆಲ್ಲವನ್ನೂ ಮಹಾಭಾರತತಾತ್ಪರ್ಯನಿರ್ಣಯದಲ್ಲಿ - 'ನಾರಾಯಣಂ ನಮಸ್ಕೃತ್ಯ' ಎಂದು ಪ್ರಾರಂಭಿಸಿ 'ತಸ್ಮಾತ್ ನಮ್ಯಾ ಹಿ ತೇಽಖಿಲಾಃ' ಎಂಬಲ್ಲಿನವರೆಗೆ ತೋರಿಸಿದ್ದಾರೆ.

ಈ ಆರು ದೇವತೆಗಳಲ್ಲಿ ನ್ಯಾಯಸುಧಾದಲ್ಲಿ ಮೊದಲಿಗೆ ನಮಸ್ಕಾರ ಮಾಡಿದ ದೇವತೆ ಹರಿ. ಅರ್ಥಾತ್ ನಾರಾಯಣ. ಹರಿಯು ನಾರಾಯಣನಾದ್ದರಿಂದಲೇ ನಾರಾಯಣನ ನಮಸ್ಕಾರಕ್ಕೆ ಬೇಕಾದ ಬ್ರಹ್ಮವಿದ್ಯಾವಾಚ್ಯತ್ವವೆಂಬ ಧರ್ಮವನ್ನು ಹರಿಯಲ್ಲೂ ತೋರಿಸಿದ್ದಾರೆ. ಅದು ಹೀಗೆ – ಇಡೀ ಬ್ರಹ್ಮವಿದ್ಯೆಯು ನಾರಾಯಣನನ್ನು ಹೇಳುತ್ತಿದೆ ಎಂದರೆ ಅದು ಹರಿಯನ್ನು ಹೇಳುತ್ತಿವೆ ಎಂದೇ ಅರ್ಥ. ಏಕೆಂದರೆ ಹರಿಯು 'ಅಶೇಷಾಮ್ನಾಯಸ್ಮೃತಿಹೃದಯದೀಪ್ತ'ನಾಗಿದ್ದಾನೆ. ಸಕಲವೇದ-ತದನುಸಾರಿಸ್ಮೃತಿಗಳ ತಾತ್ಪರ್ಯಕ್ಕೆ ವಿಷಯನಾಗಿದ್ದಾನೆ.

## ನಾರಾಯಣಂ ನಮಸ್ಕೃತ್ಯ ನರಂ ಚೈವ.... ಪದ್ಯ – ಭಾವಪ್ರಕಾಶಿಕಾ ವಿವರಣೆ

ಶ್ರೀಮದ್ವಾದಿರಾಜಗುರುಸಾರ್ವಭೌಮರ ತಾತ್ಪರ್ಯನಿರ್ಣಯ ಭಾವಪ್ರಕಾಶಿಕಾದಲ್ಲಿ – ನರಪದಸ್ಯ ಕೇವಲಮನುಷ್ಯಪರತಾಂ, ನರೋತ್ತಮಪದಸ್ಯ ರಾಜಾದ್ಯರ್ಥತಾಂ, ಸರಸ್ವತೀಂ ದೇವೀಮಿತಿ

ಸಾಮಾನಾಧಿಕರಣ್ಯಪ್ರತೀತಿಂ, ಪೃಥಗುಕ್ತ್ಯಾ ವ್ಯಾಸನಾರಾಯಣಯೋರ್ಭೇದಪ್ರತೀತಿಂ ಪೌನರುಕ್ತ್ಯ-ಶಂಕಾಂ ವಾ ಜಯಶಬ್ದಸ್ಯ ಶತ್ರುಜಯಾದ್ಯರ್ಥತಾಂ ಚ ನಿವಾರಯಿತುಮ್ ಏತೇಷಾಮೇವ ನಮ್ಯತ್ವೇ ಕಾರಣಂ ಚ ವಕ್ತುಂ ವ್ಯಾಖ್ಯಾತಿ – ಜಯೋ ನಾಮ ಇತಿ ॥ ತುಲಾಯಾಮಾರೋಪಣೇಽಪಿ ಸ್ವೇತರಗ್ರಂಥಾನ್ ಜಯತಿ ಇತಿ ಹೇತೋಃ ಅಯಂ ಇತಿಹಾಸಃ ಜಯೋ ನಾಮ ಇತಿ ಭಾವಃ ।

ಶೇಷಸ್ಯ ನರತ್ವೇನ ತದುತ್ತಮತಾ ವಾಯೋರೇವ ಸಂಭಗತಿ ಇತಿ ಭಾವೇನ 'ವಾಯುರ್ನರೋ-ತ್ತಮಃ' ಇತ್ಯುಕ್ತಮ್ । ಶೇಷಾದುತ್ತಮಸ್ಯ ವಾಯೋಃ ನರೋತ್ತಮತ್ವಕಥನಾತ್ 'ನರಃ ಶೇಷಃ' ಇತ್ಯಪಿ ವ್ಯಾಖ್ಯಾತಪ್ರಾಯಮ್ । ಕ್ರೀಡಾದಿಗುಣವಿಶಿಷ್ಟತ್ವಾತ್ ನಾರಾಯಣ ಏವ ದೇವಃ । ಅನ್ಯೇ ತು ದೇವತ್ವಜಾತ್ಯಾ ದೇವಾಃ । ಏವಂ ಚ ಯೋಗರೂಢಿಸದ್ಭಾವಾತ್ ನಾರಾಯಣ ಏವ ಮುಖ್ಯೋ ದೇವಃ । ತಸ್ಯ ಇಯಮಿತಿ ವ್ಯುತ್ಪತ್ತ್ಯಾ ಲಕ್ಷ್ಮೀರೇವ ದೇವೀತಿ ಭಾವಃ ॥ ಅರ್ಥಮುಕ್ತ್ವಾ ನಮ್ಯತ್ವೇ ಹೇತುಮಾಹ – ನಾರಾಯಣೋ ವ್ಯಾಸ ಇತಿ ॥ ವಾಚ್ಯವಕ್ತೃಸ್ವರೂಪತಃ ಇತ್ಯನೇನ ವಾಚ್ಯತಯಾ ನಾರಾಯಣಗ್ರಹಣಂ ವಕ್ತೃತಯಾ ವ್ಯಾಸಗ್ರಹಣಮಿತಿ ಏಕಸ್ಯೈವ ದ್ವಿರ್ಗ್ರಹಣೇ ನಿಮಿತ್ತಂ ಸೂಚಿತಮ್ । ಅತ ಏವ ಉಭಯೋರ್ನಮನಮ್ ಇತಿ ಭಾವಃ । ಸಾಧಕೇಶಃ - ಸಾಧಕೇಷು ವ್ಯಾಸಮುಖಾತ್ ಶ್ರುತ್ವಾ ಯೇ ಭಾರತಾರ್ಥಸಾಧಕಾಃ ಶುಕಾದಯಃ ತೇಷಾಮೀಶಃ ಇತ್ಯರ್ಥಃ । ಭಾರತಾರ್ಥವೇತ್ತೃಷು ಉತ್ತಮತ್ವಾತ್ ತತ್ಕರುಣಾಭಾವೇ ಅನ್ಯಸ್ಯ ಅರ್ಥಬೋಧೋ ನ ಸ್ಯಾತ್ ಇತಿ ತನ್ನಮನಮಿತಿ ಭಾವಃ । ಉಪಸಾಧಕಸ್ತು = ಮುಖ್ಯಸಾಧಕಾತ್ ಶಾಸ್ತ್ರಾರ್ಥಜ್ಞಪ್ತಿಸಾಧಕಃ ಸಾಕ್ಷಾತ್ ವಾಯುಮುಖಾತ್ ಶ್ರೋತೃಮಶಕ್ತಾನಾಂ ತದುಪಸಾಧಕೋಽಪ್ಯಪೇಕ್ಷಿತಃ ಇತ್ಯತಃ ತಸ್ಯಾಪಿ ನಮನಮಿತಿ ಭಾವಃ । ಭಾಗ್ಯಾತ್ಮಿಕಾ ಇತ್ಯನೇನ ವಕ್ತೃಶ್ರೋತ್ರಾದೀನಾಮ್ ಅನ್ನಪಾನಾ-ದ್ಯಭಾವೇ ವಚನಸ್ಯೈವ ಅಸಂಭವಾತ್ ಶ್ರವಣೋಚಿತಭಾಗ್ಯಲಾಭಾಯ ದೇವ್ಯಾಃ ನಮನಮಿತಿ ಭಾವಃ । ಸರಸ್ವತೀ ವಾಕ್ಯರೂಪಾ ಭಾರತವಾಕ್ಯಾಭಿಮಾನಿನೀ । ಕೋಶಸ್ಥಧನಲಾಭಾಯ ಕೋಶಪಾಲಾನುಸರಣವತ್ ಸಾಪಿ ವಂದ್ಯಾ ಇತಿ ಭಾವಃ ।

– 'ನಾರಾಯಣಂ ನಮಸ್ಕೃತ್ಯ ನರಂ ಚೈವ" - ಎಂಬ ಮಹಾಭಾರತತಾತ್ಪರ್ಯನಿರ್ಣಯದ ಶ್ಲೋಕಕ್ಕೆ ಶ್ರೀವಾದಿರಾಜಗುರುಸಾರ್ವಭೌಮರು ಹೀಗೆ ವಿವರಣೆ ನೀಡಿದ್ದಾರೆ – ಈ ಶ್ಲೋಕದಲ್ಲಿ ನರ ಎಂದರೆ ಸಾಮಾನ್ಯಮನುಷ್ಯನೆಂದರ್ಥವಲ್ಲ. ಹಾಗೇ ನರೋತ್ತಮ ಎಂದರೆ ಮನುಷ್ಯರಲ್ಲಿ ಉತ್ತಮನಾದ ರಾಜನೆಂದರ್ಥವಲ್ಲ. ಇನ್ನು ಸರಸ್ವತೀಂ ದೇವೀಂ ಎಂದರೆ ದೇವಿಯಾದ ಸರಸ್ವತೀ ಎಂದರ್ಥವಲ್ಲ. ಹೊರತು ದೇವಿ ಎಂದರೆ ಲಕ್ಷ್ಮಿ ಎಂದರ್ಥ. ಸರಸ್ವತಿ ಎನ್ನುವುದಕ್ಕೆ ಸರಸ್ವತಿ ಎಂದೇ ಅರ್ಥ. ನರ ಎಂದರೆ ಶೇಷ; ಅವನಿಗಿಂತ ಉತ್ತಮ ಎಂದರೆ ವಾಯು ಎಂದು ಗ್ರಹಿಸಬೇಕು. ಇನ್ನು ವೇದವ್ಯಾಸರಿಗೆ ಹಾಗೂ ನಾರಾಯಣನಿಗೆ ಭೇದವಿದೆ ಎಂಬ ಜ್ಞಾನ ಬರಬಾರದು. ಅದಕ್ಕೋಸ್ಕರ

ವಾಚ್ಯನಾಗಿ ನಾರಾಯಣನನ್ನು ವಕ್ತೃವಾಗಿ ವೇದವ್ಯಾಸರನ್ನು ನಮಸ್ಕರಿಸಿದ್ದು ಎಂದು ತಿಳಿಯಬೇಕು. ಆದ್ದರಿಂದಲೇ ಇಬ್ಬರೂ ಒಂದಾದರೂ ಮತ್ತೆ ಏಕೆ ನಮಸ್ಕರಿಸಿದ್ದು ಎಂಬ ಪ್ರಶ್ನೆಗೆ ಅವಕಾಶವಿಲ್ಲ.

ಇನ್ನು ಸಾಧಕೇಶ, ಉಪಸಾಧಕ ಎಂಬ ಪದಗಳ ಅರ್ಥ ಹೀಗಿದೆ – ಸಾಧಕೇಶ ಎಂದರೆ ವೇದವ್ಯಾಸರ ಮುಖದಿಂದಲೇ ಭಾರತಮೊದಲಾದ ಅರ್ಥಗಳನ್ನು ಕೇಳಿ ಸಾಧಿಸುವವರಲ್ಲಿ ಶ್ರೇಷ್ಠ ಎಂದರ್ಥ. ಉಪಸಾಧಕ ಎಂದರೆ ವಾಯುದೇವರ ಮುಖದಿಂದ ಸಾಕ್ಷಾತ್ ಕೇಳಲು ಅಶಕ್ತರಾದವರಿಗೆ ವಾಯುಮುಖದಿಂದ ಕೇಳಿ ತಿಳಿದು ಉಪದೇಶಮಾಡುವವನು. ದೇವ ಎಂದರೆ ನಾರಾಯಣನೇ. ಏಕೆಂದರೆ ಸೃಷ್ಟಿಕ್ರೀಡಾದಿಗುಣವಿಶಿಷ್ಟನಾದವನನ್ನೇ ದೇವ ಎನ್ನುವರು. ಅವನ ಹೆಂಡತಿಯೇ ದೇವಿ ಎನಿಸುವಳು. ಇನ್ನು ದೇವತ್ವಜಾತಿ ಇರುವ ಪ್ರಯುಕ್ತ ಅಮುಖ್ಯವಾಗಿ ಬೇರೆ ದೇವತೆಗಳಲ್ಲಿ ದೇವಶಬ್ದವಿದೆ. ಸರಸ್ವತೀದೇವಿಯು ಸಕಲವಾಕ್ಯಗಳಿಗೆ ಅಭಿಮಾನಿನಿ. ಹಾಗಾಗಿ ಕೋಶಾಗಾರದಲ್ಲಿರುವ ಹಣ ಸಿಗಬೇಕಾದರೆ ಆ ಕೋಶಾಗಾರವನ್ನು ಪಾಲಿಸುವವನನ್ನು ಅನುಸರಿಸುವಂತೆ ಈ ಸರಸ್ವತಿಯನ್ನು ವಿದ್ಯೆಗಾಗಿ ಅನುಸರಿಸಬೇಕು.

## ಶ್ರಿಯಃ ಪತ್ಯೇ ಎಂಬಲ್ಲಿ ಬಂದ ಉಪನಿಷತ್ತಿನ ಶ್ರೀಶಬ್ದಪ್ರಯೋಗ ಹಾಗೂ ತತ್ಸೂಚಿತಾರ್ಥ

(ಲಘುರಸರಂಜನೀ) – "ಶ್ರಿಯಃ ಪತ್ಯೇ" ಇತಿ ಮಹಾಲಕ್ಷ್ಮೀರ್ಪಿ ವಂದಿತಾ । ಅತ ಏವ ತದ್ವಂದನನಿಮಿತ್ತಂ –

'ಆವಹಂತೀ ವಿತನ್ವಾನಾ ಕುರ್ವಾಣಾ ಚೀರಮಾತ್ಮನಃ ।
ವಾಸಾಂಸಿ ಮಮ ಗಾವಶ್ಚ ಅನ್ನಪಾನೇ ಚ ಸರ್ವದಾ ।
ತತೋ ಮೇ ಶ್ರಿಯಮಾವಹ' – (ತೈತ್ತಿರೀಯಶಿಕ್ಷಾವಲ್ಲೀ)

ಇತಿ ಶ್ರುತ್ಯುಕ್ತಮನ್ನಪಾನಾದಿಭಾಗ್ಯದೇವತಾತ್ವಂ ಸ್ಮಾರಯಿತುಂ ತತ್ರತ್ಯಶ್ರೀಶಬ್ದಪ್ರಯೋಗಃ । ಏವಂ ಲಕ್ಷ್ಮೀನಾರಾಯಣೌ ಪ್ರಣಮ್ಯ, ಅವಶಿಷ್ಟಾನ್ ಚತುರೋ ವ್ಯಾಸಾದಿದೇವಾನಪಿ ತಾರತಮ್ಯಪ್ರಕಾರೇಣ ಪ್ರಣಮ್ಯ ತೇಭ್ಯೋಽಭೀಷ್ಟಮಾಶಾಸ್ತೇ – 'ಯೇನ' ಇತ್ಯಾದಿಪದ್ಯಚತುಷ್ಟಯೇನ ।

ಶ್ರಿಯಃಪತ್ಯೇ ಎಂದು ಮಹಾಲಕ್ಷ್ಮಿಗೆ ನಮಸ್ಕರಿಸಿದ್ದಾರೆ. ಇದನ್ನು ತಿಳಿಸಲೆಂದೇ ಶ್ರೀ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಮಹಾಲಕ್ಷ್ಮಿಯಲ್ಲೂ ನಮಸ್ಕರಿಸಲು ಬೇಕಾದ ಅರ್ಥ ಧರ್ಮಗಳು ಇವೆ ಎಂದು ತೋರಿಸಿದ್ದಾರೆ. 'ಆವಹಂತೀ ವಿತನ್ವಾನಾ' ಎಂಬ ಶ್ರುತಿಯಲ್ಲಿ ತಿಳಿಸಿದಂತೆ ಅನ್ನಪಾನಾದಿಗಳನ್ನು ನೀಡುವ ಭಾಗ್ಯದೇವತೆಯನ್ನು ಸ್ಮರಿಸಿದ್ದಾರೆ. ಹೀಗೆ ಲಕ್ಷ್ಮೀನಾರಾಯಣರನ್ನು ನಮಸ್ಕರಿಸಿ ಉಳಿದ

ವ್ಯಾಸರೇ ಮೊದಲಾದ ನಾಲ್ಕು ದೇವತೆಗಳನ್ನು ತಾರತಮ್ಯಪ್ರಕಾರವಾಗಿ ನಮಸ್ಕರಿಸಿ, ಅವರಿಂದಲೂ ಅಭೀಷ್ಟಪ್ರಾರ್ಥನೆ ಮಾಡುತ್ತಿದ್ದಾರೆ "ಯೇನ ಪ್ರಾದುರಭಾವಿ" ಮುಂತಾದ ನಾಲ್ಕು ಪದ್ಯಗಳಿಂದ.

## ಆವಹಂತೀ ವಿತನ್ವಾನಾ - ತೈತ್ತಿರೀಯೋಪನಿಷತ್ತಿನ ಮಂತ್ರದ ಖಂಡಾರ್ಥ

** ಆವಹಂತೀ ವಿತನ್ವಾನಾ – ಶ್ರೀರಾಘವೇಂದ್ರಗುರುಸಾರ್ವಭೌಮರ ಖಂಡಾರ್ಥದಲ್ಲಿ – ವಿದ್ಯಾಭ್ಯಾಸಿನಃ ಮನಃಕ್ಷೋಭನಿರಾಸಾಯ ಅನ್ನಾದಿನಾ ಭಾವ್ಯಮ್ । ಅತಃ ತದರ್ಥಂ ಕಾಂಚನ ವಿದ್ಯಾಮಾಹ – ಆವಹಂತೀ ಇತಿ ॥ ಆತ್ಮನಃ = ಜೀವಜಾತಸ್ಯ । ಚೀರಂ = ಚಿರಂ । ಸರ್ವಭೋಗಾನ್ ಆವಹಂತೀ = ಆನಯಂತಿ । ವಿತನ್ವಾನಾ ಸನಾತನೀ । ವಿಪೂರ್ವಾತ್ ತನೋತೇಃ ಲಟಃ ಶಾನಚ್, ಉ ವಿಕರಣಂ, ಯಣಾದೇಶಃ । ವಿಸ್ತಾರವತೀ ಇತ್ಯರ್ಥಃ । ವಿಸ್ತಾರಶ್ಚ ಕಾಲತಃ ವಿವಕ್ಷಿತಃ । ಮಮ ವಾಸಾಂಸಿ ಗಾವಶ್ಚ ಗಾಶ್ಚ ಅನ್ನಪಾನೇ ಚ ಕುರ್ವಾಣಾ ಯತಸ್ತತಃ ಸ್ವಾಹಾ = ಸುಷ್ಠು ಆಹೂಯತೇ, ವೇದ್ಯೈಃ ಪ್ರತಿಪಾದ್ಯತೇ ಇತಿ ಸ್ವಾಹಾ ಇತ್ಯುಕ್ತಃ ಗೋವಿಂದಃ, ಸು ಆ ಇತ್ಯುಪಸರ್ಗದ್ವಯಪೂರ್ವಕಾತ್ ಹ್ವಯತೇ ಕರ್ಮಣಿ ಡಾ ಪ್ರತ್ಯಯೇ ವಲೋಪೇ ಚ ಸತಿ ಸ್ವಾಹಾ ಇತಿ ಸಿದ್ಧೇಃ ಶಬ್ದಸ್ವಾಭಾವ್ಯಾತ್ ಅವ್ಯಯತ್ವಂ । **ಲೋಮಶಾಂ = ಬಹುಕೇಶವತೀಂ** । 'ಲೋಮಾದಿಪಾಮಾದಿಪಿಚ್ಛಾದಿಭ್ಯಃ ಶನೇಲಚಃ' (ಪಾ.ಸೂ. 5-2-3) । ಇತಿ ಮತ್ವರ್ಥೇ ಶಪ್ರತ್ಯಯಃ । ಸುಶಿಖಂಡಾಂ, 'ಚತುಷ್ಕಪರ್ದಾಯುವತಿಃ' (ಋಕ್ಸಂಹಿತಾ 8-6-16-3) ಇತ್ಯಾದಿಶ್ರುತೇಃ 'ಚತುಃಶಿಖಂಡಾ' ಇತಿ ಶ್ರುತ್ಯಂತರಾಚ್ಚ । ಏವಂಭೂತಾಂ ಶ್ರಿಯಂ ಪಶುಭಿಃ ಸಹ ಸದಾ ಮೇ = ಮಯಿ ಆವಹ = ಆನಯ ಇತ್ಯರ್ಥಃ ।

– ವಿದ್ಯಾಭ್ಯಾಸಮಾಡುವವರಿಗೆ ಮನಸ್ಸಿಗೆ ಕ್ಷೋಭೆ ಉಂಟಾಗದಿರಲು ಅನ್ನಪಾನಾದಿಗಳು ಬೇಕು. ಅದಕ್ಕೋಸ್ಕರ ಆವಹಂತೀ ಎಂಬ ಮಂತ್ರವನ್ನು ಹೇಳುತ್ತಿದ್ದಾರೆ. ಸಮಸ್ತ ಜೀವರಾಶಿಗಳಿಗೆ ಬಹಳ ಕಾಲದವರೆಗೆ ಅನ್ನಪಾನಾದಿಗಳನ್ನು ದಯಪಾಲಿಸುವವಳು ಮಹಾಲಕ್ಷ್ಮೀ. ಅವಳಿಂದಲೇ ಬಟ್ಟೆ ಗೋವು ಅನ್ನಪಾನಾದಿಗಳು ಲಭ್ಯ. ಹಾಗಾಗಿ ಹೇ ಸ್ವಾಹಾ = ವಿಷ್ಣುವೇ । ಇಂತಹ ಬಹಳಸುಂದರವಾದ ಕೇಶವಿನ್ಯಾಸವುಳ್ಳ ಲಕ್ಷ್ಮಿಯನ್ನು ಸಂಪತ್ತಿನೊಂದಿಗೆ ನನ್ನಲ್ಲಿ ಅನುಗ್ರಹಿಸು.

## ಲೋಮಶಾಂ - ಚತುಷ್ಕಪರ್ದಾ ಯುವತಿಃ ಎಂಬ ವೇದಮಂತ್ರಾರ್ಥ ವಿವರಣೆ

चतुष्कपर्दा युवतिः सुपेशा घृतप्रतीका वयुनानि वस्ते । तस्यां सुपर्णा वृषणा निषेदतुर्यत्र देवा दधिरे भागधेयम् । [ऋक्सं.10-114-3]

(ಗೀತಾಭಾಷ್ಯ ಪ್ರಮೇಯದೀಪಿಕಾ) ಶ್ರಿಯಸ್ತು ಮಹಾಮಾಹಾತ್ಮ್ಯವತ್ತ್ವೇನ ವೇದೋಕ್ತತ್ವಾದ್ ಅಸಂಭವಾಭಾವಾದ್ ವಾಸ್ತವಮೇವ ತದುಪಾಸನಸ್ಯ ಮೋಕ್ಷಸಾಧನತ್ವಮಿತ್ಯರ್ಥಃ । ಸುಪೇಶಾಃ =

ಸುರೂಪಾ । ಘೃತಪ್ರತೀಕಾ = ದೀಪ್ತಾಂಗೀ । ವಯುನಾನಿ = ಜ್ಞಾನಾನಿ, ವಸ್ತೇ = ಆಚ್ಛಾದಯತಿ । ಜ್ಞಾನಾಲಂಕೃತಾ ಇತಿ ಯಾವತ್ । ಸುಪರ್ಣಾ ಸುಪರ್ಣೌ = ಸುಷ್ಠು ಪರಮಾನಂದೌ ವೃಷಣಾ ಸೇಚಕೌ, ದ್ವಿರೂಪೋ ಭಗವಾನೇವ । ಯತ್ರ = ಯಸ್ಯಾಂ ವಿಷಯೇ । ಅತ್ರ ನಿತ್ಯಯೌವನಮ್, ಜ್ಞಾನಮಯತ್ವಮ್, ಸರ್ವದೇವತಾಪೂಜ್ಯತ್ವಂ ಚ ಪ್ರತೀಯತೇ । ಏವಮುತ್ತರತ್ರ । (ಗೀತಾ 12-1,2)

– ಶ್ರೀದೇವಿಯು ಮಹಾಮಹಿಮಳಾದ್ದರಿಂದ ಅವಳ ಉಪಾಸನೆಯನ್ನು ಮಾಡಬೇಕು. ಅದು ಮೋಕ್ಷಸಾಧನವೂ ಹೌದು. ಈ ದೇವಿಯು ಒಳ್ಳೆಯ ರೂಪವುಳ್ಳವಳು, ಹೊಳೆಯುವ ಅಂಗ-ವುಳ್ಳವಳು. ಜ್ಞಾನದಿಂದ ಅಲಂಕೃತಳು. ಹೀಗೆ ಈ ವೇದಭಾಗದಿಂದ ಶ್ರೀದೇವಿಯಲ್ಲಿ ನಿತ್ಯಯೌವ್ವನ ಜ್ಞಾನಮಯತ್ವ, ಸರ್ವದೇವತಾಪೂಜ್ಯತ್ವ ತೋರುವುದು.

– ಭಾಷ್ಯೇ 'ಚತುಷ್ಕಪರ್ದಾ' ಇತ್ಯಸ್ಯ ಚತ್ವಾರಃ ಕಪರ್ದಾಃ = ಜಟಾಜೂಟಶಬ್ದಿತಾಃ ಶಿಖಂಡಾ ಯಸ್ಯಾಃ ಸಾ ತಥೋಕ್ತಾ ವೇಣೀಚತುಷ್ಟಯಶಾಲಿನೀತ್ಯರ್ಥಃ । ಯದ್ಯಪಿ 'ಕಪರ್ದೋऽಸ್ಯ ಜಟಾಜೂಟಃ' ಇತ್ಯಮರಃ ಪಿನಾಕಿಜಟಾಬಂಧೇ ಕಪರ್ದಶಬ್ದಮಭ್ಯಧತ್ತ । ತಥಾऽಪಿ 'ಕಪರ್ದಸ್ತು ಜಟಾಜೂಟೇ ದೇವದೇವಸ್ಯ ಶೂಲಿನಃ' ಇತ್ಯುಕ್ತ್ವಾ 'ದೃಶ್ಯತೇ ಚ ಜಟಾಜೂಟಮಾತ್ರೇ ಸ್ಯಾಚ್ಚ ವರಾಟಕೇ' ಇತ್ಯಭಿದಧತ್ ಕೇಶವಃ ಜಟಾಜೂಟಮಾತ್ರಮಪಿ ಕಪರ್ದಶಬ್ದಾರ್ಥ ಇತ್ಯುಕ್ತವಾನ್, ಇತಿ ಯುಕ್ತ ಏವೋಕ್ತೋऽರ್ಥಃ । 'ಸುಪೇಶಾಃ' ಇತ್ಯತ್ರ ಪೇಶಃಶಬ್ದಃ ಸಕಾರಾಂತೋ ರೂಪಾರ್ಥಕ ಇತಿ ಭಾವೇನಾಹ – ಸುಪೇಶಾಃ ಸುರೂಪೇತಿ ॥ ಶೋಭನರೂಪೇತ್ಯರ್ಥಃ । ಅತ ಏವ ಪೇಶಃಶಬ್ದಃ ಷೋಡಶಸು ರೂಪನಾಮಸು ಪಠಿತಃ । (ಪ್ರ.ದೀ.ಟಿಪ್ಪಣೀ)

ನಾಲ್ಕು ಕಪರ್ದಗಳು ಎಂದರೆ ಜಟಾಜೂಟ ಎಂಬ ಶಬ್ದದಿಂದ ಕರೆಯುವ ಶಿಖಂಡಗಳು ಎಂದರ್ಥ. ಹೆಣೆಯಲ್ಪಟ್ಟ ನಾಲ್ಕು ಕೇಶಪಾಶವುಳ್ಳವಳು ಎಂದರ್ಥ. ಜಟಾಜೂಟ ಎಂಬ ಶಬ್ದವು ರುದ್ರದೇವರ ಜಟಾಬಂಧವನ್ನು ಹೇಳುವುದು. ಹಾಗಿದ್ದರೂ ಕೇಶವನು 'ದೃಶ್ಯತೇ ಚ ಜಟಾಜೂಟಮಾತ್ರೇ' - ಎಂದು ಹೇಳಿದ್ದರಿಂದ ಶ್ರೀದೇವಿಯ ಹೆಣೆದ ಕೇಶಪಾಶವನ್ನೂ ಗ್ರಹಿಸಬಹುದು.

– ನಿರ್ಣಿಕ, ವವ್ರಿಃ, ವರ್ಪಃ, ವಪುಃ, ಅಮತಿಃ, ಅಪ್ಸಃ, ಪ್ಸುಃ, ಅಪ್ನಃ, ಪಿಷ್ಟಮ್, ಪೇಶಃ, ಕೃಶನಮ್, ಪ್ಸರಃ, ಅರ್ಜುನಮ್, ತಾಮ್ರಮ್, ಅರುಷಮ್, ಶಿಲ್ಪಮ್ - ಇತಿ ಷೋಡಶರೂಪನಾಮಾನಿ (ನಿಘಂಟೌ 3.13.7) - ಈ ಹದಿನಾಲ್ಕು ರೂಪನಾಮಗಳಲ್ಲಿ ಪೇಶ ಎಂಬ ನಾಮವು ಇದೆ.

– ತೇಜೋ ವೈ ಘೃತಮ್, 'ಘೃ ಕ್ಷರಣದೀಪ್ತ್ಯೋಃ' ಪ್ರತೀಕಂ ದೇಹ ಉದ್ದಿಷ್ಟಃ ಇತಿ ವಚನಮಭಿಪ್ರೇತ್ಯ ದೀಪ್ತಾಂಗೀ ಇತ್ಯುಕ್ತಮ್ । 'ಸುಷ್ಠು = ಪರಃ ಣಃ ಯಸ್ಯ' ಇತಿ ವಿಗ್ರಹಮಭಿಪ್ರೇತ್ಯ ಉಕ್ತಮ್ – ಸುಷ್ಠ್ವಿತಿ ॥ 'ಣಶ್ಚ ನಿರ್ವೃತಿವಾಚಕಃ' ಇತಿ ವಚನಾದಿತಿ ಭಾವಃ । (ಪ್ರ.ದೀ.ಟಿ)

ಘೃತಪ್ರತೀಕಾ ಎಂಬ ಶಬ್ದದಲ್ಲಿ ಘೃತ ಎಂದರೆ ದೀಪ್ತ ಎಂದರ್ಥ. 'ಘೃ ಕ್ಷರಣದೀಪ್ತ್ಯೋಃ' ಎಂದು ಧಾತುಪಾಠ ಇರುವುದರಿಂದ. ಪ್ರತೀಕಾ - ಎಂದರೆ ದೇಹ. ಆದ್ದರಿಂದ ದೀಪ್ತಾಂಗೀ ಎಂದು ಪರ್ಯವಸಿತವಾಯಿತು.

— .. 'ಚತುಃಶಿಖಂಡಾ' ಇತಿ ಶ್ರುತಿದ್ವಯೇ ಕಪರ್ದ-ಶಿಖಂಡಶಬ್ದಾಭ್ಯಾಂ ವೇಣೀಕೃತಕಚಭರ ಉಚ್ಯತ ಇತಿ ದ್ರಷ್ಟವ್ಯಮ್ । ಅತ್ರ ಕಿಂ ಮಾಹಾತ್ಮ್ಯಮುಕ್ತಂ ತಸ್ಯಾಃ ? ಇತ್ಯತ ಆಹ — ಅತ್ರೇತಿ ॥ 'ಯುವತಿಃ' ಇತ್ಯನೇನ ನಿತ್ಯಯೌವನಮ್, 'ವಯುನಾನಿ ವಸ್ತೇ' ಇತ್ಯನೇನ ಜ್ಞಾನಮಯತ್ವಮ್, 'ಯತ್ರ ದೇವಾಃ' ಇತಿ ಸರ್ವದೇವತಾಪೂಜ್ಯತ್ವಂ ಚ ಪ್ರತೀಯತ ಇತ್ಯರ್ಥಃ । ಉಪಲಕ್ಷಣಮೇತತ್ । 'ತಸ್ಯಾಮ್' ಇತ್ಯನೇನ ಮುಖ್ಯತೋ ಹರಿಸನ್ನಿಧಾನಾಸ್ಪದತ್ವಂ ಚ ಪ್ರತೀಯತ ಇತಿ ದ್ರಷ್ಟವ್ಯಮ್ । (ಪ್ರ.ದೀಪಿಕಾ ಟಿಪ್ಪಣಿ)

ಯುವತಿ ಎಂಬ ಶಬ್ದದಿಂದ ನಿತ್ಯಯೌವ್ವನವು ತೋರುತ್ತಿದೆ. 'ವಯುನಾನಿ ವಸ್ತೇ' ಎಂಬುದರಿಂದ ಜ್ಞಾನಮಯತ್ವ, 'ಯತ್ರ ದೇವತಾಃ' ಎಂಬುದರಿಂದ ಸರ್ವದೇವತಾಪೂಜ್ಯತ್ವ. ಇದರ ಜೊತೆಗೆ 'ತಸ್ಯಾಮ್' ಎನ್ನುವುದರಿಂದ ಮುಖ್ಯವಾಗಿ ಹರಿಸನ್ನಿಧಾನಕ್ಕೆ ಆಸ್ಪದಳು ಎಂದು ತೋರುತ್ತಿದೆ.

— *'ಮಾಯಾ ವಯುನಂ ಜ್ಞಾನಮ್' ಇತಿ ಪ್ರಜ್ಞಾನಾಮಸು ಪಾಠಾದ್ 'ವಯುನಂ ಜ್ಞಾನಮ್' ಇತಿ ಈಶಾವಾಸ್ಯಭಾಷ್ಯಾಚ್ಚಾಹ — ವಯುನಾನಿ ಜ್ಞಾನಾನೀತಿ ॥ 'ವಸ ಆಚ್ಛಾದನೇ' ಇತಿ ಧಾತೋರಾಹ — ವಸ್ತೇ ಆಚ್ಛಾದಯತೀತಿ ॥ 'ಜ್ಞಾನಾನ್ಯಾಚ್ಛಾದಯತಿ' ಇತ್ಯಸ್ಯ 'ಜ್ಞಾನಾನಿ ತಿರೋಧಾಪಯತಿ' ಇತಿ ವಿರುದ್ಧಮತಿಕೃತ್ತ್ವಾದಾಹ — ಜ್ಞಾನಾಲಂಕೃತೇತಿ ॥

ಭಾವಪ್ರದೀಪಿಕಾಯಾಂ ತು ವಯುನಾನಿ ಪ್ರತಿ ವಸ್ತೇ = ವಸತಿ = ಜ್ಞಾನವಿಷಯೋ ಭವತಿ, ಇತಿ ವ್ಯಾಖ್ಯಾತಮ್ । 'ಸುಪರ್ಣಾ' ಇತ್ಯತ್ರ ದ್ವಿವಚನಸ್ಯ 'ಸುಪಾಂ ಸುಲುಕ್' ಇತ್ಯಾದಿನಾ ಆಕಾರಾದೇಶಃ । ಪೃಷೋದರಾದಿಭಾವೇನ ಪರಶಬ್ದಾಂತ್ಯಲೋಪಃ 'ಣೋ ಹಿ ನಿರ್ವೃತಿವಾಚಕಃ' ಇತಿ ವಚನಾತ್ ಣಕಾರ ಆನಂದಾರ್ಥ ಇತಿ ಭಾವೇನ ವ್ಯಾಚಷ್ಟೇ — ಸುಪರ್ಣೌ ಸುಷ್ಠು ಪರಮಾನಂದಾವಿತಿ ॥ 'ವೃಷು ಸೇಚನೇ' ಇತಿ ಧಾತೋಃ "ಕನಿನ್ ಯು-ವೃಷಿ-ತಕ್ಷಿ- ರಾಜಿ-ಧನ್ವಿ-ದ್ಯು-ಪ್ರತಿದಿವಃ" ಇತ್ಯೌಣಾದಿಕೇ ಕನಿನ್‌ಪ್ರತ್ಯಯೇ, 'ವಾ ಷಪೂರ್ವಸ್ಯ ನಿಗಮೇ' ಇತಿ ಪಕ್ಷೇ ದೀರ್ಘಾಭಾವೇ, ದ್ವಿವಚನಸ್ಯ ಪೂರ್ವವದಾಕಾರೇ ಚ 'ವೃಷಣಾ' ಇತಿ ರೂಪಮಿತಿ ಭಾವೇನ ತದರ್ಥಮಾಹ — ವೃಷಣಾ ಸೇಚಕಾವಿತಿ ॥ ಸರ್ವಾಭೀಷ್ಟಾನಾಂ ವರ್ಷಿತಾರಾವಿತ್ಯರ್ಥಃ ।

ನನ್ವೇಕಸ್ಯಾಂ ಶ್ರೀದೇವ್ಯಾಂ 'ನಿಷೇದತುಃ = ನಿಷಣ್ಣೌ ಬಭೂವತುಃ' ಇತ್ಯುಕ್ತಂ ಸಂಗತತ್ವಂ ಕಥಂ ದ್ವಯೋಃ ಪುರುಷಯೋರ್ಯುಜ್ಯತೇ? ಇತ್ಯತ ಆಹ — ದ್ವಿರೂಪೋ ಭಗವಾನೇವೇತಿ ॥ ತಸ್ಯಾಂ ಸಂಗತೋ ಭಗವಾನೇಕ ಏವ । ದ್ವಿವಚನಂ ತು ಗುಹಾಧಿಕರಣನ್ಯಾಯೇನ ರೂಪದ್ವಯಾಭಿಪ್ರಾಯೇಣ

ಉಪಪನ್ನಮಿತಿ ನೋಕ್ತಚೋದ್ಯಮಿತಿ ಭಾವಃ । ಯಸ್ಯಾಂ ವಿಷಯೇ - ಯಾಮುದ್ದಿಶ್ಯೇತ್ಯರ್ಥಃ । ಅನೇನ ಕಿಂ ಮಹಾಮಾಹಾತ್ಮ್ಯಮುಕ್ತಮ್? ಇತ್ಯತ ಆಹ — ಅತ್ರೇತಿ ॥ 'ಚತುಷ್ಕಪರ್ದಾ' ಇತಿ ಶ್ರುತೌ 'ಯುವತಿಃ' ಇತ್ಯತ್ರ ಅವಧ್ಯನುಕ್ತೇರ್ನಿತ್ಯತಾಲಾಭ ಇತಿ ಭಾವೇನೋಕ್ತಮ್ — ನಿತ್ಯಯೌವನಮಿತಿ ॥ 'ವಯುನಾನಿ ವಸ್ತೇ' ಇತ್ಯಸ್ಯ ತಾತ್ಪರ್ಯಮ್ — ಜ್ಞಾನಮಯತ್ವಮಿತಿ ॥ 'ಯತ್ರ ದೇವಾ ದಧಿರೇ ಭಾಗಧೇಯಮ್' ಇತ್ಯಸ್ಯ ತಾತ್ಪರ್ಯಮ್ — ಸರ್ವದೇವಪೂಜ್ಯತ್ವಮಿತಿ ॥ ಉತ್ತರತ್ರ 'ಅಹಂ ರುದ್ರೇಭಿಃ' ಇತ್ಯಾದಿಶ್ರುತೌ । (ಭಾವರತ್ನಕೋಶಃ)

ವಯುನ ಎಂಬ ಶಬ್ದಕ್ಕೆ ಜ್ಞಾನ ಎಂದರ್ಥ. ಪ್ರಜ್ಞಾ ಪರ್ಯಾಯಶಬ್ದಗಳಲ್ಲಿ ವಯುನ ಎಂಬ ಶಬ್ದವನ್ನು ಪಠಿಸಿದ್ದಾರೆ. "ಕೇತಃ, ಕೇತುಃ, ಚೇತಃ, ಚಿತ್ತಮ್, ಕ್ರತುಃ, ಅಸುಃ, ಧೀಃ, ಶಚೀ, ಮಾಯಾ, ವಯುನಮ್, ಅಭಿಖ್ಯಾ ಇತ್ಯೇಕಾದಶ ಪ್ರಜ್ಞಾನಾಮಾನಿ" (ನಿಘಂಟೌ 3.13.17). ಜ್ಞಾನಗಳನ್ನು ಮರೆಮಾಡುವಳು ಎಂದರ್ಥವಲ್ಲ. ಹೊರತು ಜ್ಞಾನಾಲಂಕೃತಳು ಎಂದರ್ಥ. ಅಥವಾ ಜ್ಞಾನ-ವಿಷಯಳಾಗುವಳು ಎಂದರ್ಥ. ಇವಳಲ್ಲಿ ಪರಮ ಆನಂದರೂಪವಾದ ಎಲ್ಲ ಅಭೀಷ್ಟಗಳ ಮಳೆಗೈಯ್ಯುವ ಎರಡು ಭಗವದ್ರೂಪಗಳು ಇವೆ.

## ಚತುಷ್ಕಪರ್ದಾ ಯುವತಿಃ - ಶ್ರೀ ಸತ್ಯಸಂಧತೀರ್ಥರ ವ್ಯಾಖ್ಯಾನ

श्रीसत्यसन्धतीर्थकृतव्याख्या — श्रीदेव्याः नित्ययौवन-ज्ञानमयत्व-सर्वपूज्यत्वरूपमाहात्म्य-मुच्यते चतुष्कपर्देति । चत्वारः कपर्दाः जटाजूटशब्दिताः शिखण्डाः यस्याः सा तथोक्ता । वेणीचतुष्टयशालिनीत्यर्थः । ..... युवतिः नित्ययौवना । सुपेशा सुरूपा । .... "मृदुपिण्डश्च पेशः स्यात्" इति वचनात् सुकुमारतरशरीरा वा । घृतप्रतीका दीप्ताङ्गी । "स्निग्धदेहा" इत्यप्याहुः । वयुनानि ज्ञानानि । वस्ते आच्छादयति । .... ज्ञानालङ्कृतेति यावत । यत्र यस्यां विषये देवाः भागधेयं कर्म दधिरे समर्पितवन्तः । सुष्ठु परमानन्दा । .... वृषणौ, सेचकौ सर्वाभीष्टानां वर्षितारावित्यर्थः । निषेदतुः निषण्णौ बभूवतुः । द्विरूपभगवतो रमणपात्रं रमेति भावः ॥ ३ ॥ (घर्मसूक्तम)

ಈ ವ್ಯಾಖ್ಯಾನದಲ್ಲಿ ಸುಪೇಶಾ ಎಂಬುದಕ್ಕೆ ಸುಕುಮಾರತರಶರೀರಾ ವಾ ಎಂದು ಅತ್ಯಂತ ಕೋಮಲವಾದ ಶರೀರವುಳ್ಳವಳು ಎಂದು ವಿವರಿಸಿದ್ದಾರೆ. ಇದಕ್ಕೆ ಪ್ರಮಾಣವಾಗಿ 'ಮೃದುಪಿಂಡಃ ಪೇಶಃ ಸ್ಯಾತ್' ಕೋಮಲವಾದ ಪಿಂಡ - ದೇಹವನ್ನು ಪೇಶ ಎಂದು ಕರೆಯುವರು. ಘೃತಪ್ರತೀಕಾ ಎಂಬ ಶಬ್ದಕ್ಕೆ ಸ್ನಿಗ್ಧವಾದ ದೇಹವುಳ್ಳವಳು ಎಂದರ್ಥ ಎಂದು ಕೆಲವರು ಹೇಳುತ್ತಾರೆ ಎಂದು ಉಲ್ಲೇಖಿಸಿದ್ದಾರೆ. ಇನ್ನು ಲಕ್ಷ್ಮಿಯಲ್ಲಿ ಎಲ್ಲ ದೇವತೆಗಳೂ ತಮ್ಮ ಕರ್ಮಗಳನ್ನು ಸಮರ್ಪಣೆ ಮಾಡಿದ್ದಾರೆ. ದ್ವಿರೂಪನಾದ ಭಗವಂತನು ಇವಳಲ್ಲಿ ರಮಿಸುವದರಿಂದ ಇವಳು ರಮೆ ಎನಿಸಿದ್ದಾಳೆ.

## ಚತುಷ್ಕಪರ್ದಾ ಯುವತಿಃ ವೇದಮಂತ್ರ — ಕೆಲವರ ವಿವರಣೆ

(चतुष्कपर्दा) चत्वारः ऋग्यजुःसामाथर्वाख्याः-चूडासदृशा ज्ञानचूडाः श्रुतयो यस्याः यद्वा कं सुखं वदन्ति शब्दयन्ति ये ते कपर्दास्ते च चत्वारो-धर्मार्थकाममोक्षा विषया यस्याः सा वेदवाक् (युवतिः) सदा युवतिः नित्या अनादिनिधना-अजर्या यद्वा परमात्मना सह मिश्रयन्ती (सुपेशाः) सुरूपा ज्ञानात्मकत्वात् सर्वप्रिया (घृतप्रतीका) तेजःप्रतीकं प्रत्यक्तं यया यस्या अध्ययनेन भवति तथाभूता (वयुनानि वस्ते) प्रज्ञानानि प्रकृष्टज्ञानानि "वयुनं प्रज्ञानाम" [निघ० ३।९] आच्छादयति (तस्यां-वृष्णा सुपर्णा निषेदतुः) तस्यां ज्ञानवर्षकौ शोभन-पालकधर्मिणौ जीवात्मपरमात्मानौ वर्णितौ स्तः, यद्वा तदाश्रयेऽध्यापकाध्येतारौ गुरुशिष्यौ नितिष्ठतः (यत्र) यस्यां (देवाः) विद्वांसः (भागधेयं दधिरे) ज्ञानस्य भागं धारयन्ति ॥३॥ (कंचित्)

ವೇದದ ಮಾತಿನಲ್ಲಿ ನಾಲ್ಕು ಹೆಣೆದ ಜಡೆಗಳೆಂದರೆ ಋಗ್ವೇದ ಯಜುರ್ವೇದ ಸಾಮವೇದ ಅಥರ್ವ ವೇದಗಳೇ ಆಗಿವೆ. ಅಥವಾ ನಾಲ್ಕು ಕಪರ್ದಗಳುಳ್ಳದ್ದು ವೇದದ ಮಾತು. ಕಪರ್ದ ಎಂದರೆ ಸುಖಪ್ರದವಾದದ್ದು. ಅಂದರೆ ಧರ್ಮಾರ್ಥಕಾಮಮೋಕ್ಷಗಳನ್ನು ವಿಷಯವನ್ನಾಗಿ ಹೊಂದಿರುವುದು. ವೇದಮಾತು ಯುವತಿಯಾಗಿದೆ ಎಂದರೆ ನಿತ್ಯವಾಗಿದ್ದು ಅನಾದಿಯಾಗಿದೆ. ಪರಮಾತ್ಮನನ್ನೇ ವೇದಮಂತ್ರವು ವಿಷಯೀಕರಿಸುವುದು. ಹಾಗಾಗಿ ವೇದವು ಪರಮಾತ್ಮನೊಂದಿಗೆ ಸೇರಿದೆ ಎಂದು ಹೇಳುವುದು. ಈ ವೇದದ ಅಧ್ಯಯನದಿಂದ ಅಧ್ಯಾಪಕರು ಅಧ್ಯೇತೃಗಳೂ ಆದ ಗುರುಶಿಷ್ಯರು ತಮ್ಮ ತಮ್ಮ ಜ್ಞಾನಭಾಗವನ್ನು ಸ್ವೀಕರಿಸುತ್ತಾರೆ. ಈ ವೇದದಲ್ಲಿ ಜೀವ ಪರಮಾತ್ಮರ ಬಗ್ಗೆ ವರ್ಣನೆಗಳಿವೆ. ಈ ವೇದದಿಂದ ಪ್ರಕೃಷ್ಟವಾದ ಜ್ಞಾನವು ನಮಗೆ ಲಭ್ಯ.

## ಚತುಷ್ಕಪರ್ದಾ ಮಂತ್ರದ ಸಾಯಣಭಾಷ್ಯ

सायणभाष्यम् - चतुष्कपर्दा चतुष्कोणा युवतिः स्त्रीरूपा सुपेशाः शोभनालङ्कारा घृतप्रतीका घृतप्रमुखहविष्कैतादृशी वेदिः वयुनानि ज्ञातव्यानि पदार्थजातानि कर्माणि स्तोत्राणि वा वस्ते । आच्छादयति । तस्यां वेद्यां वृषणा वृषणौ हविषां वर्षितारौ सुपर्णा सुपर्णौ सुपतनौ जायापती यजमानब्रह्माणौ वा निषेदतुः । निषण्णौ भवनः । यत्र यस्यां वेद्यां देवा अग्न्यादयो भाग-धेयम् । स्वार्थिको धेयप्रत्ययः । स्वस्वभागं हविर्दधिरे । धारयन्ति ॥

यद्वा । चतुष्कपर्दा नामाख्यातोपसर्गनिपाताश्चत्वारः कपर्दस्थानीया यस्याः सा युवतिस्तरुणी नित्या घ्रतप्रतीका दीप्यमानवर्णावयवैर्पौपनिषदी वाग्वयुनानि ज्ञानानि वस्ते। आच्छदयति ।

तस्यां वाचि सुपर्णा सुपर्णौ जीवपरमात्मानौ निषण्णौ भवतः । यत्र । "इतरेभ्योऽपि दृश्यते' इति तृतीयार्थे त्रल्प्रत्ययः । यया वाचा देवा भागं धारयन्ति ॥३ ॥ (घर्मसूक्तम्)

ನಾಲ್ಕು ಮೂಲೆಗಳು ಯಜ್ಞವೇದಿಯಲ್ಲಿದೆ. ಅದು ಸ್ತ್ರೀಯಂತೆ ಇದೆ. ಏಕೆಂದರೆ ಒಳ್ಳೆಯ ರೂಪ ಇದೆ. ಹಾಗೂ ತುಪ್ಪದಿಂದ ಪ್ರಕಾಶಿಸುವದ್ದಾಗಿದೆ. ಯಾವಾಗಲೂ ಉತ್ತಮವಾದ ಕರ್ಮಗಳಿಂದ ಪೂರಿತವಾಗಿರುತ್ತದೆ. ಇಂತಹ ವೇದಿಯಲ್ಲ ಅಗ್ನ್ಯಾದಿ ಎಲ್ಲ ದೇವತೆಗಳೂ ತಮ್ಮ ಯಜ್ಞಭಾಗವನ್ನು ಧರಿಸುತ್ತಾರೆ. ಇದೇ ಯಜ್ಞವೇದಿಕೆಯಲ್ಲಿ ಅಭೀಷ್ಟಗಳನ್ನು ಕೊಡುವ ಉತ್ತಮವಾದ ಗತಿಯುಳ್ಳ ಯಜಮಾನ ಹಾಗೂ ಅವನ ಪತ್ನಿಯು ಕುಳಿತುಕೊಳ್ಳುತ್ತಾರೆ.

ಅಥವಾ – ನಾಲ್ಕು ಕಪರ್ದಗಳು ಎಂದರೆ ನಾಮ-ಆಖ್ಯಾತ-ಉಪಸರ್ಗ-ನಿಪಾತಗಳು. ಇದನ್ನು ಉಳ್ಳವಳು ಒಬ್ಬ ಯುವತಿಯು. ಅವಳು ನಿತ್ಯವಾಗಿ ಹೊಳೆಯುವ ಅಕ್ಷರ ಮುಂತಾದ ಅವಯವ-ಗಳುಳ್ಳವಳು. ಇವಳು ಯಾರೆಂದರೆ, ಉಪನಿಷತ್ತಿನ ವಾಕ್ಯಾಗಿದ್ದಾಳೆ (ಮಾತು). ಇವಳಲ್ಲಿ ಜೀವ-ಪರಮಾತ್ಮರು ಕುಳಿತಿರುತ್ತಾರೆ. ಇಂತಹ ಈ ಮಾತಿನಿಂದ ದೇವತೆಗಳು ತಮ್ಮ ತಮ್ಮ ಭಾಗವನ್ನು ಧರಿಸುತ್ತಾರೆ.

### 'ಚತುಃಶಿಖಂಡಾ ಯುವತಿಃ' ವೇದಮಂತ್ರದ ವಿವರಣೆ

* * ''चतुःशिखण्डा युवतिः सुपेशा घृतप्रतीका भुवनस्य मध्ये ।
मर्मृज्यमाना महते सौभगाय मह्यं धुक्ष्व यजमानाय कामान् ॥''

– १ (तैत्तिरीयब्राह्मणम्, आपस्तम्बश्रौतसूत्रम् प्रश्न -४)

– ಚತುಃಶಿಖಂಡಾ ಚತುರ್ಭಿರ್ಭೂಷಣಸ್ಥಾನೀಯೈರ್ಯುಕ್ತಾ ಚತುಷ್ಕೋಣಾ ವಾ ಯುವತಿ-ರಾಕಾರೇಣ ಯುವತಿಸದೃಶೀ ಯಥಾ ಯುವತಿರ್ಮಧ್ಯೇ ಸನ್ನತತರಾ ತಥಾ ವೇದಿರಪಿ । ಅತ ಏವ ಸುಪೇಶಾಃ ಶೋಭನರೂಪಯುಕ್ತಾ ಘೃತಪ್ರತೀಕಾ ಘೃತೋಪಕ್ರಮಾ ತಸ್ಯಾಂ ಹಿ ವೇದ್ಯಾಂ ಪ್ರಥಮಂ ಘೃತಂ ಸ್ಥಾಪ್ಯಂತ । ಸಾ ಚ ಭುವನಸ್ಯ ಸಮಸ್ತಲೋಕಸ್ಯ ಮಧ್ಯೇ ಯಜಮಾನಸ್ಯ ಮಮ ಮಹತ ಸೌಭಗಾಯ ಮರ್ಮೃಜ್ಯಮಾನಾ ವೇದೇನ ಭೃಶಂ ಶೋಧ್ಯಮಾನಾ ವರ್ತತೇ । ತಥಾವಿಧೇ ಹೇ ವೇದೇ ಯಜಮಾನಾಯ ಮಹ್ಯಂ ಕಾಮಾನ್ ಧುಕ್ಷ್ವ ಸಂಪಾದಯ । (ಕೇಚಿತ್)

ವೇದಿಯ (ಯಾಗಕ್ಕಾಗಿ ಪರಿಷ್ಕರಿಸಿ ಸಿದ್ಧಪಡಿಸಿದ ಯಜ್ಞಭೂಮಿಯ) ಪ್ರಾರ್ಥನೆಯನ್ನು ಈ ಮಂತ್ರದಲ್ಲಿ ಮಾಡುತ್ತಿದ್ದಾರೆ. ಯಜಮಾನನಾದ ನನ್ನ ಕಾಮನೆಗಳನ್ನು ಸಂಪಾದಿಸಿಕೊಡು. ಈ ವೇದಿಯು ನಾಲ್ಕು ಭೂಷಣವಾದ ಸ್ಥಾನಗಳನ್ನು ಹೊಂದಿದೆ. ಅಥವಾ ಚತುಷ್ಕೋಣಾಕಾರವಾಗಿ ಕೇಶಸನ್ನಿವೇಶವುಳ್ಳ ಯುವತಿಯಂತೆ ಈ ವೇದಿಯು ಕಂಗೊಳಿಸುತ್ತಿದೆ. ಈ ವೇದಿಯಲ್ಲಿ ಮೊದಲು

ಘೃತವನ್ನು ಸ್ಥಾಪಿಸಿದ್ದಾರೆ. ಈ ವೇದಿಯಾದರೋ ಇಡೀ ಲೋಕದ ಜನರಲ್ಲಿ ಯಜಮಾನನಿಗೆ ದೊಡ್ಡ ಭಾಗ್ಯಕ್ಕೋಸ್ಕರ ಚೆನ್ನಾಗಿ ಶೋಭಿಸಲ್ಪಡುವುದು.

## ಶ್ರೀವೇದವ್ಯಾಸರು -ವಿದ್ಯಾವಕ್ತೃ, ವಾಯು -ಸಾಧಕೇಶ, ಭಾರತೀದೇವಿಯು ವಚನಚೇತೋऽಭಿಮಾನಿನೀ, ಶೇಷ - ಅವಾಂತರಸಾಧಕೇಶ.

(ಲಘುರಸರಂಜನೀ) — ತತ್ರ ಆದ್ಯೇ ಪದ್ಯೇ ವ್ಯಾಸವಂದನನಿಮಿತ್ತಂ ವಿದ್ಯಾವಕ್ತೃತ್ವಂ 'ವ್ಯಸ್ತಾರಿ ಗೋಸಂತತಿಃ' ಇತ್ಯಾದಿನಾ ಪ್ರದರ್ಶಿತಮ್ । ದ್ವಿತೀಯೇ ವಾಯುವಂದನನಿಮಿತ್ತಸಾಧಕೇಶತ್ವೋ-ಪಪಾದನಂ— **'ಭೂಯಾತ್ ತತ್ತ್ವವಿನಿರ್ಣಯಾಯ ಭಗವಾನ್'** ಇತಿ ॥ ತೃತೀಯೇ ಭಾರತೀ-ವಂದನನಿಮಿತ್ತವಾಙ್ಮನೋಮಾನಿತ್ವಪ್ರದರ್ಶನಂ — **ವಚನಚೇತೋದೇವತೇತಿ** ॥ ಚತುರ್ಥೇ ಶೇಷವಂದನನಿಮಿತ್ತಾವಾಂತರಸಾಧಕತ್ವಪ್ರದರ್ಶನಂ 'ವೈರಾಗ್ಯಭಾಗ್ಯೋ ಭವತಾದ್ ವಿಭೂತ್ಯೈ' ಇತೀತಿ ಜ್ಞೇಯಮ್ । ಅತ್ರ ಪದ್ಮನಾಭತೀರ್ಥಾಃ ಶೇಷಾವತಾರಾ ಇತ್ಯಾರ್ಯಾಃ । ಅತ ಏವಾತ್ರಾಪಿ 'ರಮಾನಿವಾಸೋಚಿತವಾಸಭೂಮಿಃ' ಇತಿ ರಮಾರಮಣೋಚಿತಶಯನಸ್ಥಾನತ್ವರೂಪಂ, 'ಸನ್ನ್ಯಾಯರತ್ನಾವಲಿಜನ್ಮಭೂಮಿಃ' ಇತಿ ಫಣಾಸು ರತ್ನಾವಲಿಮತ್ತ್ವರೂಪಂ 'ವೈರಾಗ್ಯಭಾಗ್ಯ' ಇತಿ ಶೇಷಸ್ಯ ಶಿವೈಕ್ಯಾತ್ ತದಭಿಮನ್ಯಮಾನವೈರಾಗ್ಯಾಧಿಕರಣತ್ವರೂಪಂ ಚ ಜ್ಞಾಪಕಮರ್ಥಾದುಕ್ತಮಿತಿ ಜ್ಞೇಯಮ್ ।

ಆ ನಾಲ್ಕುಪದ್ಯಗಳಲ್ಲಿ ಮೊದಲನೆಯ 'ಯೇನ ಪ್ರಾದುರಭಾವಿ' ಎಂಬ ಪದ್ಯದಲ್ಲಿ ಬೇಕಾದ ಬ್ರಹ್ಮವಿದ್ಯಾವಕ್ತೃತ್ವವನ್ನು 'ಗೋಸಂತತಿಃ ವ್ಯಸ್ತಾರಿ' ಮುಂತಾದ ಪದಗಳಿಂದ ವಿವರಿಸಿದ್ದಾರೆ. ಎರಡನೆಯ ಪದ್ಯದಲ್ಲಿ ವಾಯುವಿಗೆ ನಮಸ್ಕರಿಸಲು ಬೇಕಾದ ಅರ್ಹವಾದ ಸಾಧಕೇಶತ್ವವನ್ನು ತೋರಿಸಿದ್ದಾರೆ. ಸಾಧಕೇಶತ್ವ ಎಂದರೆ ಭಗವತ್ಕಾರ್ಯಸಾಧಕರಲ್ಲಿ ಮೊದಲಿಗ ಎಂದರ್ಥ. ಇದನ್ನು ಉಪಪಾದನೆ ಮಾಡಲು "ಭೂಯಾತ್ ತತ್ತ್ವವಿನಿರ್ಣಯಾಯ ಭಗವಾನ್" ಎಂದಿದ್ದಾರೆ. ಮೂರನೆಯ ಪದ್ಯದಲ್ಲಿ "ಸಕಲವಚನಚೇತೋದೇವತಾ" ಎಂದು ಭಾರತೀದೇವಿಗೆ ನಮಸ್ಕರಿಸಲು ನಿಮಿತ್ತವಾದ ವಾಙ್ಮನೋಭಿಮಾನಿತ್ವವನ್ನು ತೋರಿಸಿದ್ದಾರೆ.

ನಾಲ್ಕನೆಯ ಪದ್ಯದಲ್ಲಿ ಶೇಷದೇವರಿಗೆ ನಮಸ್ಕರಿಸಲು ಕಾರಣವಾದ ಭಗವತ್ಕಾರ್ಯಮಾಡುವು-ದರಲ್ಲಿ ಉಪಸಾಧಕರು ಎಂಬುದನ್ನು ತೋರಿಸಲು 'ವೈರಾಗ್ಯಭಾಗ್ಯಃ ಭವತಾದ್ವಿಭೂತ್ಯೈ' ಎಂದಿದ್ದಾರೆ. ಇಲ್ಲಿ ಪದ್ಮನಾಭತೀರ್ಥರೇ ಶೇಷದೇವರ ಅವತಾರ ಎಂದು ಜ್ಞಾನಿಗಳು ಹೇಳುತ್ತಾರೆ. ಆದ್ದರಿಂದಲೇ ಶೇಷದೇವರು ಭಗವಂತನ ಆವಾಸಸ್ಥಾನವಾದ್ದರಿಂದ ಅದೇ ಧರ್ಮವನ್ನು ಇಟ್ಟುಕೊಂಡು ವರ್ಣಿಸಿದ್ದಾರೆ - "ರಮಾನಿವಾಸೋಚಿತವಾಸಭೂಮಿಃ" ಎಂದು ಭಗವಂತನಿಗೆ

ಆವಾಸಸ್ಥಾನ ಎಂದು ಶೇಷಧರ್ಮವನ್ನು ಪದ್ಮನಾಭತೀರ್ಥರಲ್ಲಿ ತಿಳಿಸಿದ್ದಾರೆ. ಹಾಗೆಯೇ ಸನ್ನ್ಯಾಯರತ್ನಾವಲಿಜನ್ಮಭೂಮಿಃ ಎಂಬ ಪದದಿಂದ ಶೇಷನ ಹೆಡೆಗಳಲ್ಲಿ ರತ್ನಗಳ ರಾಶಿಯಿರುವಂತೆ ಇವರಲ್ಲಿಯೂ ಸನ್ನ್ಯಾಯರತ್ನಾವಲಿಗಳಿವೆ ಎಂದು ತಿಳಿಸಿದ್ದಾರೆ. ವೈರಾಗ್ಯಭಾಗ್ಯಃ ಎಂದು ಶೇಷದೇವರಿಗೂ ಶಿವನಿಗೂ ಐಕ್ಯ ಇರುವುದರಿಂದ (ಶಿವನೇ ಮುಂದೆ ಶೇಷಪದವಿಗೆ ಬರುವುದರಿಂದ) ಶಿವನ ಅಧೀನಕ್ಕೆ ಒಳಪಟ್ಟ ವೈರಾಗ್ಯ ಎಂಬ ಗುಣವುಳ್ಳವರು ಪದ್ಮನಾಭತೀರ್ಥರು ಎಂದು ವರ್ಣಿಸಿದ್ದಾರೆ. ಈ ಎಲ್ಲ ಅಂಶಗಳು ಪದ್ಮನಾಭತೀರ್ಥರು ಶೇಷಾವತಾರರು ಎನ್ನುವುದಕ್ಕೆ ಗಮಕವಾಗಿದೆ.

ವೈರಾಗ್ಯ = ಪ್ರಪಂಚದ ವಿಷಯಗಳಲ್ಲಿ ಅನಾಸಕ್ತಿ (ಕೋಶ)

## ಮೂಲರೂಪದಂತೆ ಅವತಾರರೂಪವೂ ಸಾಧಕ - ಶ್ರೀಮದಾಚಾರ್ಯರು ಹಾಗೂ ಶ್ರೀಪದ್ಮನಾಭತೀರ್ಥರು

(ಲಘುರಸರಂಜನೀ) — ನನು 'ನರಂ ಚೈವ ನರೋತ್ತಮಮ್' ಇತ್ಯತ್ರ ಶೇಷವಾಯ್ವೋಃ ಮೂಲರೂಪೇಣೈವ ಮುಖ್ಯಾವಾಂತರಸಾಧಕತ್ವಂ ಪ್ರತೀಯತೇ । ಅತಃ ಕಥಂ ತದುಪಜೀವ್ಯ-ವಾಯುಶೇಷಾವತಾರಯೋಃ ಆನಂದತೀರ್ಥಪದ್ಮನಾಭತೀರ್ಥಯೋಃ ಮುಖ್ಯಾವಾಂತರ-ಸಾಧಕತ್ವಾದ್ ಇತ್ಯುಚ್ಯತೇ । ಮೈವಮ್ —

'ತಸ್ಯಾಂಗಂ ಪ್ರಥಮಂ ವಾಯುಃ ಪ್ರಾದುರ್ಭಾವತ್ರಯಾನ್ವಿತಃ ।
ಪ್ರಥಮೋ ಹನುಮಾನ್ ನಾಮ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ' (ಮ.ಭಾ.ತಾ.ನಿ. 2/124)

'ತೃತೀಯಾಂಗಂ ಹರೇಃ ಶೇಷಃ ಪ್ರಾಮರ್ಭಾವಸಮನ್ವಿತಃ ।' (2/127)

ಇತ್ಯಾದಿನಿರ್ಣಯವಚನಬಲಾದೇವಾವತಾರಯೋರಪಿ ಮೂಲವತ್ ಮುಖ್ಯಾವಾಂತರಸಾಧಕತ್ವ-ಸಿದ್ಧೇಃ ।

'ನರಂ ಚೈವ ನರೋತ್ತಮಂ' ಎಂಬಲ್ಲಿ ಶೇಷ ಹಾಗೂ ವಾಯುವಿಗೆ ಮೂಲರೂಪದಿಂದಲೇ ಭಗವತ್ಕಾರ್ಯಸಾಧಕರು ಎಂದು ತೋರುತ್ತಿದೆ. ಆದ್ದರಿಂದ ಇಲ್ಲಿ ವಾಯುಶೇಷ ಅವತಾರರಾದ ಆನಂದತೀರ್ಥರು ಹಾಗೂ ಪದ್ಮನಾಭತೀರ್ಥರನ್ನು ಭಗವತ್ಕಾರ್ಯಸಾಧಕರು ಆದದ್ದು ಹೇಗೆ?

ಉತ್ತರ - ಮಹಾಭಾರತತಾತ್ಪರ್ಯನಿರ್ಣಯದ ಮಾತುಗಳನ್ನು ಅವಲೋಕಿಸಿದಾಗ ಅವತಾರ-ರೂಪಗಳಿಗೂ ಮೂಲರೂಪದಂತೆ ಭಗವತ್ಕಾರ್ಯಸಾಧಕತ್ವವಿದೆ ಎಂದು ತಿಳಿಯುವುದು.

ಭಗವಂತನಿಗೆ ತನ್ನ ಕಾರ್ಯಗಳಲ್ಲಿ ಮೊದಲನೆಯ ಅಂಗ, ಮೂರು ಅವತಾರಗಳನ್ನೆತ್ತುವ ವಾಯುದೇವರು. ಮೊದಲನೆಯದು ಹನುಮಂತ, ಎರಡನೆಯದು ಭೀಮ, ಮೂರನೆಯದ್ದು ಪೂರ್ಣಪ್ರಜ್ಞರು. ಇವರೆಲ್ಲರೂ ಭಗವತ್ಕಾರ್ಯಸಾಧಕರು ಎಂದಿದ್ದಾರೆ. ಇನ್ನು ಮೂರನೆಯ ಅಂಗ ಅವತಾರವನ್ನೆತ್ತುವ ಶೇಷದೇವರು ಎಂದು.

** — ವಾಯ್ವಾದಯಃ ವಿಷ್ಣೋರಂಗಭೂತಾಃ ಇತ್ಯರ್ಥೇ ಭವಿಷ್ಯತ್ಪರ್ವಪುರಾಣವಚನಮಾಹ — ತಸ್ಯೇತಿ ॥ ತಸ್ಯ ಹರೇಃ ಪ್ರಾದುರ್ಭಾವತ್ರಯಾನ್ವಿತೋ ವಾಯುಃ ಪ್ರಥಮಮಂಗಮ್ । ಅವತಾರತ್ರಯ-ಮಾಹ — ಪ್ರಥಮ ಇತಿ ॥ ಅಂಗತ್ವವಿವರಣಾರ್ಥಮುಕ್ತಮ್ — ಭಗವತ್ಕಾರ್ಯಸಾಧಕ ಇತಿ ॥ — (ಮ.ಭಾ.ತಾ.ನಿ. ಜನಾರ್ದನೀಯ)

ವಾಯು ಮೊದಲಾದವರು ವಿಷ್ಣುವಿನ ಅಂಗವಾಗಿದ್ದಾರೆ ಎಂಬರ್ಥದಲ್ಲಿ ಭವಿಷ್ಯತ್ಪುರಾಣದ ವಚನವನ್ನು ಹೇಳುತ್ತಾರೆ - 'ತಸ್ಯಾಂಗಂ ಪ್ರಥಮಂ ವಾಯುಃ' ಎಂಬುದಾಗಿ. ತಸ್ಯ ಎಂದರೆ ಆ ಹರಿಗೆ ಎಂದರ್ಥ. ವಾಯುಃ ಎಂದರೆ ಮೂರು ಪ್ರಾದುರ್ಭಾವಗಳನ್ನು ಹೊಂದುವ ಮುಖ್ಯವಾಯುವು. ಅವತಾರತ್ರಯಗಳು ಯಾವುವು ಎಂಬುದನ್ನು ತಿಳಿಸಲು - 'ಪ್ರಥಮೋ ಹನೂಮನ್ನಾಮ' ಇತ್ಯಾದಿ-ಯಾಗಿ ಹೇಳಿದ್ದಾರೆ. ಅಂಗತ್ವದ ವಿವರಣೆಯಾಗಿ ಭಗವತ್ಕಾರ್ಯಸಾಧಕರು ಎಂದಿದ್ದಾರೆ.

## ಮೂಲ-ಆದಿ-ಪೂರ್ವ-ಪರಮ-ಸಾಕ್ಷಾತ್ ಗುರುಗಳ ವಂದನೆ

(ಲಘುರಸರಂಜನೀ) — ಅಥವಾ ಪೂರ್ವಪ್ರಸ್ಥಾನೇ ಮೂಲಕಾರಸ್ಯ ಗುರುದೇವತಯೋರಭೇದೇಽಪಿ 'ನಾರಾಯಣಂ ನತ್ವಾ' 'ಗುರೂಂಶ್ಚ ನತ್ವಾ' ಇತಿ ಪುನಃ ಪ್ರಣಾಮೇನ ಗುರುನಮಸ್ಕಾರಾವಶ್ಯಕತ್ವಸ್ಯ, 'ನಾರಾಯಣಂ ನತ್ವಾ' ಇತಿ ಕ್ತ್ವಾಪ್ರತ್ಯಯೇನ ಗುರುನಮಸ್ಕಾರೇ ದೇವತಾನಮನಾನಂತರ್ಯಸ್ಯ, ಸ್ವಗುರೋರೇಕತ್ವೇಽಪಿ 'ಗುರೂನ್' ಇತಿ ಬಹುವಚನೇನ ಯಸ್ಯ ಯಾವಂತೋ ಗುರವಸ್ತೇನ ತೇ ಸರ್ವೇಽಪಿ ನಮಸ್ಕಾರ್ಯಾ ಇತ್ಯಸ್ಯ ಚ ವಿಕ್ಷಿತತ್ವಾತ್ ತದನುಸಾರೇಣ —

ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥ (ಶ್ವೇತಾಶ್ವತರ 6-23) (ತಾ.ನಿ. 1-102)

ಇತ್ಯಾದಿಪ್ರತ್ಯನುಸಾರೇಣ ಚ ಟೀಕಾಕಾರೋಽಪಿ ದೇವತಾನತಿಸಮನಂತರಂ —

'ಸ್ಮೃತ್ವಾ ಗುರುಂ ಪೂರ್ವಗುರುಂ ಆದಿಮೂಲಗುರುಂ ತಥಾ ।
ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್'

ಇತ್ಯತ್ರ ಬ್ರಹ್ಮವಿದ್ಯಾಭ್ಯಾಸಿಭಿರವಶ್ಯಂ ವಂದ್ಯತಯೋಕ್ತಾನ್ ಮೂಲಗುರ್ವಾದೀನ್ ಚತುರೋ

ಗುರೂನ್ ಕ್ರಮೇಣ ಪ್ರಣಮತಿ 'ಯೇನ' ಇತ್ಯಾದಿಪದ್ಯಪಂಚಕೇನ । ತತ್ರ ಯಂ ಸ್ವತಂತ್ರಂ ಗುರುಂ ಮೂಲೀಕೃತ್ಯಾನ್ಯೇಷಾಂ ಸರ್ವೇಷಾಮಪಿ ಗುರುತ್ವಂ ಪ್ರಾಪ್ತಂ ಸಃ = ಮೂಲಗುರುಃ । ಸರ್ವೇಷಾಂ ಗುರುತ್ವಮಪಿ ನಮನಗುರೋರೇವ ಸಾಕ್ಷಾಲ್ಲಭ್ಯತೇ । ಕಿಂತು ತದ್ವಾರೀಭೂತಂ ಯಂ ಕಂಚನ ಸರ್ವಜ್ಞಮಾದಿಂ ಕೃತ್ವಾ ಸ ಏವ = ಆದಿಗುರುಃ । ಸಾಕ್ಷಾದುಪದೇಶಕಃ = ಗುರುಃ । ಗುರ್ವಾದಿಗುರು-ಮಧ್ಯವರ್ತಿನೋಽವಾಂತರತಾರತಮ್ಯೋಪೇತಾಃ ಸರ್ವೇಽಪಿ ಪೂರ್ವಗುರವಃ ।

ತತ್ರ ಮೂಲಗುರುರ್ಬಾದರಾಯಣಃ । ಸ 'ಯೇನ' ಇತ್ಯಾದ್ಯಪದ್ಯೇಽಭಿವಂದಿತಃ । ತತಸ್ತದ್ಗತಾನಿ ವಿಶೇಷಣಾನಿ ತತ್ರ ಮೂಲಗುರುತ್ವೋಪಪಾದನಪರತಯಾ ಯೋಜ್ಯಾನಿ । ಏವಮುತ್ತರತ್ರಾಪಿ । ಆದಿಗುರುರ್ಮುಖ್ಯವಾಯ್ವವತಾರಭೂತಃ ಶ್ರೀಮದಾನಂದತೀರ್ಥಃ ಸ 'ವ್ಯಾಪ್ತಿ'ರಿತಿ ದ್ವಿತೀಯ-ಪದ್ಯೇಽಭಿವಂದಿತಃ । ಪೂರ್ವಗುರುರ್ಭಾರತೀಮಾರಭ್ಯ ಸಾಕ್ಷಾದ್ಗುರುಪರ್ಯಂತಃ ಸರ್ವೋಽಪಿ । ಅತ ಏವ ಮಧ್ಯವರ್ತಿಸರ್ವಸಂಗ್ರಹಾಯ ತೇಷ್ವಾದ್ಯಂತೌ ಭಾರತೀಪರಮಗುರೂ 'ಭವತಿ' ಇತ್ಯಾದಿ ತೃತೀಯಚತುರ್ಥಪದ್ಯಾಭ್ಯಾಮಭಿವಂದಿತೌ । ಸಾಕ್ಷಾದ್ಗುರುಃ ಅಕ್ಷೋಭ್ಯತೀರ್ಥಃ ಪ್ರಸಿದ್ಧಃ ಸ 'ಪವವಾಕ್ಯೇ'ತಿ ಪಂಚಮಪದ್ಯೇಽಭಿವಂದಿತಃ ।

ಅಥವಾ – ಪೂರ್ವಪ್ರಸ್ಥಾನವೆನಿಸುವ ಬ್ರಹ್ಮಸೂತ್ರಭಾಷ್ಯದಲ್ಲಿ ಮಧ್ವಾಚಾರ್ಯರಿಗೆ ಗುರು-ದೇವತೆಗಳು ಒಬ್ಬರೇ ಆದರೂ 'ನಾರಾಯಣಂ ನತ್ವಾ ಗುರೂಂಶ್ಚ ನತ್ವಾ' - ಎಂದು ಗುರು ರೂಪದಿಂದಲೂ ನಾರಾಯಣನಿಗೆ ಮತ್ತೆ ಪ್ರಣಾಮ ಮಾಡಿದ್ದರಿಂದ ಗುರುನಮಸ್ಕಾರವು ಆವಶ್ಯಕ ಎಂದು ತಿಳಿಯುವುದು. ಹಾಗೆಯೇ 'ನಾರಾಯಣಂ ನತ್ವಾ' ಎಂಬಲ್ಲಿ ತ್ವಾ ಎಂಬ ಪ್ರತ್ಯಯದಿಂದ ಗುರು-ನಮಸ್ಕಾರವನ್ನು ದೇವತಾನಮಸ್ಕಾರ ಮಾಡಿದ ಕೂಡಲೇ ಮಾಡಬೇಕೆಂದು ತಿಳಿಯುತ್ತದೆ. ಇನ್ನು ತಮಗೆ ಗುರುದೇವತೆಗಳು ಒಂದೇ ಎಂದು ಸೂಚಿಸಿದ್ದರೂ ಗುರೂನ್ ಎಂಬಲ್ಲಿನ ಬಹುವಚನದಿಂದ ಯಾರಿಗೆ ಎಷ್ಟು ಗುರುಗಳಿದ್ದಾರೋ ಅವರೆಲ್ಲರನ್ನೂ ನಮಸ್ಕರಿಸಬೇಕು ಎಂಬ ಶಿಕ್ಷಣೆಯನ್ನು ಕೊಡುತ್ತಿದ್ದಾರೆ. ಅದಕ್ಕೆ ಅನುಸಾರವಾಗಿ ಸುಧಾಕಾರರು ನಾಲ್ಕು ಗುರುಗಳನ್ನು ಕ್ರಮವಾಗಿ 'ಯೇನ ಪ್ರಾದುರಭಾವಿ' ಎಂಬ ಪದ್ಯದಿಂದ ಪ್ರಾರಂಭಿಸಿ ನಮಸ್ಕರಿಸಿದ್ದಾರೆ. ಅಲ್ಲದೆ - "ಯಾರಿಗೆ ದೇವರಲ್ಲಿ ಅತ್ಯುತ್ತಮವಾದ ಭಕ್ತಿಯಿದೆಯೋ ಅವರಿಗೆ ಗುರುಗಳಲ್ಲಿಯೂ ತಾರ-ತಮ್ಯೋಪೇತವಾಗಿ ಅಂತಹ ಭಕ್ತಿಯು ಇರಬೇಕು. ಹಾಗೆ ಇರುವಂತಹ ವ್ಯಕ್ತಿಗೆ ಶಾಸ್ತ್ರವಾಕ್ಯಗಳ ಅರ್ಥವು ಚೆನ್ನಾಗಿ ಸ್ಫುರಿಸುತ್ತದೆ" ಎಂಬ ಶ್ವೇತಾಶ್ವತರಶ್ರುತಿಯನ್ನು ಅನುಸರಿಸಿಯೂ ಟೀಕಾ-ಚಾರ್ಯರು ಗುರುಗಳ ನಮಸ್ಕಾರವನ್ನು ಮಾಡಿದ್ದಾರೆ.

ಮೊದಲು ದೇವತಾನಮಸ್ಕಾರವನ್ನು ಮಾಡಿ ಅನಂತರ "ಗುರುಗಳನ್ನು, ಪೂರ್ವಗುರುಗಳನ್ನು, ಆದಿಗುರುಗಳನ್ನು ಹಾಗೂ ಮೂಲಗುರುಗಳನ್ನು ದೇವತೆಯಾದ ವಾಸುದೇವನನ್ನೂ ವಿದ್ಯಾಭ್ಯಾಸ-

ವನ್ನು ಮಾಡುವವರು ಸ್ಮರಿಸಿದರೆ ಸಿದ್ಧಿಯನ್ನು ಪಡೆಯುತ್ತಾರೆ" ಎಂದು ಹೇಳಿದ್ದರಿಂದ ಬ್ರಹ್ಮ-ವಿದ್ಯಾಭ್ಯಾಸಿಗಳು ಅವಶ್ಯವಾಗಿ ಮೂಲಗುರು ಮೊದಲಾದ ಸಕಲಗುರುಗಳನ್ನು ಸ್ಮರಿಸಲೇಬೇಕು, ನಮಿಸಲೇಬೇಕು. ಇವರುಗಳಲ್ಲಿ ಮೂಲಗುರು ಎಂದರೆ ಯಾರು? ಎಂಬುದಕ್ಕೆ ಉತ್ತರ – ಒಬ್ಬ ಸ್ವತಂತ್ರನಾದ ಗುರುವನ್ನು ಮೂಲವನ್ನಾಗಿ ಮಾಡಿಕೊಂಡು ಬೇರೆ ಎಲ್ಲರಿಗೆ ಗುರುತ್ವ ಬಂದಿದೆಯೋ ಅಂತಹವರು ಮೂಲಗುರುಗಳೆನಿಸುತ್ತಾರೆ. ಪ್ರಕೃತದಲ್ಲಿ ಅಂತಹ ಮೂಲಗುರುಗಳೆಂದರೆ ವೇದವ್ಯಾಸರು. ಆದಿಗುರು ಎಂದರೆ ಆ ಮೂಲಗುರುಗಳ ನಂತರ ಅವರನ್ನವಲಂಬಿಸಿ ಯಾರಾದರೂ ಒಬ್ಬ ಸರ್ವಜ್ಞನಾದ ಗುರುವನ್ನು ಮೊದಲು ಮಾಡಿಕೊಂಡರೆ ಅವರೇ ಆದಿಗುರುಗಳಾಗುತ್ತಾರೆ. ಪ್ರಕೃತದಲ್ಲಿ ಅಂತಹ ಗುರುಗಳು ಮುಖ್ಯವಾಯುವಿನ ಅವತಾರರಾದ ಶ್ರೀಮಧ್ವಾಚಾರ್ಯರು. ಇನ್ನು ಸಾಕ್ಷಾತ್ತಾಗಿ ಗ್ರಂಥಕರ್ತೃವಿಗೆ ಉಪದೇಶಿಸುವವರು ಗುರುಗಳು. ಪ್ರಕೃತದಲ್ಲಿ ಟೀಕಾರಾಯರಿಗೆ ಸಾಕ್ಷಾತ್ ಗುರುಗಳಾದವರು ಅಕ್ಷೋಭ್ಯತೀರ್ಥರು. ಇನ್ನು ಪೂರ್ವಗುರುಗಳೆಂದರೆ ಆದಿಗುರುಗಳಿಂದ ಪ್ರಾರಂಭಿಸಿ ಸಾಕ್ಷಾತ್ ಗುರುಗಳ ಮಧ್ಯದಲ್ಲಿ ಬರುವ ತಾರತಮ್ಯದಿಂದ ಕೂಡಿದ ಸಕಲರೂ ಕೂಡ ಆಗುತ್ತಾರೆ. ಪ್ರಕೃತದಲ್ಲಿ ಭಾರತೀದೇವಿಯನ್ನಾರಂಭಿಸಿ ಅಕ್ಷೋಭ್ಯತೀರ್ಥರವರೆಗೆ ಪೂರ್ವಗುರು-ಗಳು ಆಗುವರು. ಈ ಎಲ್ಲ ಅಂಶಗಳನ್ನು ಮನಸ್ಸಿನಲ್ಲಿಟ್ಟುಕೊಂಡು 'ಯೇನ ಪ್ರಾದುರಭಾವಿ' 'ವ್ಯಾಪ್ತಿರ್ಯಸ್ಯ ನಿಜೇ ನಿಜೇನ' 'ಭವತಿ ಯದನುಭಾವಾತ್' 'ರಮಾನಿವಾಸೋಚಿತವಾಸಭೂಮಿಃ' 'ಪದವಾಕ್ಯಪ್ರಮಾಣಜ್ಞಾನ್' ಎಂದು ಕ್ರಮವಾಗಿ ಮೂಲ, ಆದಿ, ಪೂರ್ವ, ಪರಮ, ಸಾಕ್ಷಾತ್ ಗುರುಗಳನ್ನು ನಮಸ್ಕರಿಸಿದ್ದಾರೆ.

## 'ಯಸ್ಯ ದೇವೇ ಪರಾಭಕ್ತಿಃ ...' ವಚನದ ಅರ್ಥ

*- ಮುಮುಕ್ಷೋರ್ಹರಿಭಕ್ತಿವತ್ ಗುರುಭಕ್ತಿರಪ್ಯಪೇಕ್ಷಿತಾ ಇತಿ ಪ್ರಮಾಣೇನ ದ್ರಢಯತಿ – ಯಸ್ಯೇತಿ ॥ ದೇವೇ ಪರಾ ಭಕ್ತಿರಿತಿ ವದತಾ ಗುರೌ ನ ತಾದೃಶೀ ಭಕ್ತಿಃ । ಯಥಾ ತಥೇತಿ ತು ದಾರ್ಢ್ಯಮಾತ್ರೇ ದೃಷ್ಟಾಂತ ಇತಿ ಸೂಚಿತಮ್ । (ಮ.ಭಾ.ತಾ.ನಿ. ಭಾವಪ್ರಕಾಶಿಕಾ)

ಮೋಕ್ಷವನ್ನು ಬಯಸುವವನಿಗೆ ಹರಿಭಕ್ತಿಯಂತೆ ಗುರುಭಕ್ತಿಯೂ ಅಪೇಕ್ಷಿತ ಎಂಬ ಅಂಶವನ್ನು ಪ್ರಮಾಣದಿಂದ ದೃಢಪಡಿಸುತ್ತಾರೆ "ಯಸ್ಯ" ಎಂಬುದಾಗಿ. ದೇವರಲ್ಲಿ ಉತ್ಕೃಷ್ಟವಾದ ಭಕ್ತಿ ಮಾಡಬೇಕು ಎಂದು ಹೇಳುತ್ತಾ ಗುರುಗಳಲ್ಲಿ ಅಂತಹ ಭಕ್ತಿಯನ್ನು ಮಾಡಬಾರದು ಎಂದು ತಿಳಿಸಿದ್ದಾರೆ. ಹಾಗಾದರೆ ಹೇಗೋ ಹಾಗೆ ಎಂದು ಹೇಳಿದ್ದು ಹೇಗೆ ಸರಿ ಎಂದರೆ ಅದು ದೇವರಲ್ಲಿ ಮಾಡುವ ದೃಢಭಕ್ತಿಯಂತೆ ಇವರಲ್ಲೂ ಮಾಡುವ ಭಕ್ತಿಯು ದೃಢವಾಗಿರಬೇಕು ಎಂಬ ತಾತ್ಪರ್ಯದಿಂದ ಎಂದು ತಿಳಿಯಬೇಕು.

* ಸಾಧನಬೋಧಿಕಾಂ ಶ್ರುತಿಮುದಾಹರತಿ – ಯಸ್ಯೇತಿ ॥ ಯಸ್ಯ ದೇವೇ ಹರೌ ಪರಾ ಸರ್ವೋತ್ಕೃಷ್ಟಾ

ಭಕ್ತಿರಸ್ತಿ । ಯಥಾ ಯೋಗ್ಯತಾನುಸಾರೇಣ ದೇವೇ ದೇವೇಷು ಚ । ಸಾಮಾನ್ಯೇ ಏಕವಚನಮ್ ತಥಾಶಬ್ದಃ ಸಮುಚ್ಚಯೇ । ಯಥಾತಥಾಶಬ್ದೌ ಆವರ್ತನೀಯೌ । ಗುರುಷು ಚ ಯೋಗ್ಯತಾನುಸಾರೇಣ ಯಸ್ಯ ಭಕ್ತಿರಸ್ತಿ । ತಸ್ಯ ಏತೇ ಕಥಿತಾ ಅರ್ಥಾಃ ಶಮದಮಾದಯಃ ಪ್ರಕಾಶಂತೇ । ತಸ್ಯ ವಿಶೇಷಣಂ ಮಹಾನಾತ್ಮಾ ಜ್ಞಾನಂ ಯಸ್ಯೇತಿ ॥ (ಮ.ಭಾ.ತಾನಿ.ಜನಾರ್ದನೀಯ)

ದೇವೇ ಎಂದರೆ ದೇವರಲ್ಲಿ ಹಾಗೂ ದೇವತೆಗಳಲ್ಲಿ ಎಂದರ್ಥ. ಅವರಲ್ಲಿ ಯೋಗ್ಯತಾನುಸಾರಿಯಾದ ಭಕ್ತಿಯನ್ನು ಹೇಗೆ ಮಾಡುತ್ತೇವೆಯೋ ಹಾಗೆ ಗುರುಗಳಲ್ಲಿಯೂ ಯೋಗ್ಯತಾನುಸಾರೇಣ ಭಕ್ತಿ ಮಾಡಿದಲ್ಲಿ ಆಗ ಶಾಸ್ತ್ರದ ಅರ್ಥಗಳು ಅಂದರೆ ಶಮ,ದಮ ಮೊದಲಾದವುಗಳು ಉಂಟಾಗುತ್ತದೆ. ಇವುಗಳೆಲ್ಲವೂ ಮಹಾತ್ಮರಿಗೆ ಅಂದರೆ ಉತ್ಕೃಷ್ಟವಾದ ಜ್ಞಾನವುಳ್ಳವರಿಗೆ ಲಭ್ಯ.

## 'ಗುರೂನ್' ಎಂಬಲ್ಲಿ ತತ್ವಪ್ರಕಾಶಿಕೆಯಲ್ಲಿ ತೋರಿಸಿದ ಪ್ರಯೋಜನ ದಿಕ್ಪ್ರದರ್ಶನ

(ಲಘುರಸರಂಜನೀ) — ಅತ್ರ 'ಗುರೂಂಶ್ಚ ನತ್ವಾ' ಇತಿ ಪೃಥಕ್ ಪ್ರಣಾಮಸ್ಯ 'ಗುರೂನ್' ಇತಿ ಬಹುವಚನಸ್ಯ ಚ ಟೀಕಾದಾವುಪಲಕ್ಷಣಾಭಿಪ್ರಾಯೇಣೈಕೈಕಮತ್ರ ಪ್ರಯೋಜನಮುಕ್ತಮ್ । ಅನ್ಯಥಾ 'ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್' ಇತಿ ಸ್ವಯಮೇವೋಕ್ತತ್ವಾತ್ ತದಭಿಪ್ರೇತಯಾವತ್ಪ್ರಯೋಜನಪ್ರದರ್ಶನೇ ಶಾಸ್ತ್ರಪರ್ಯವಸಾನಪ್ರಸಂಗಾತ್ । ಅತ ಉಪ-ಲಕ್ಷಣಯಾ ತತ್ಸೂಚಿತಮೇವ ಪ್ರಯೋಜನಾಂತರಮತ್ರ ಪ್ರದರ್ಶಿತಮ್ । ಏವಮನ್ಯತ್ರಾಪ್ಯನು-ಸಂಧೇಯಮಿತಿ ।

ಭಾಷ್ಯದಲ್ಲಿ ಬರುವ ಗುರೂಂಶ್ಚ ನತ್ವಾ ಎಂಬಲ್ಲಿ ಪ್ರತ್ಯೇಕಪ್ರಣಾಮದ ಬಗ್ಗೆ ಹಾಗೂ ಗುರೂನ್ ಎಂಬಲ್ಲಿನ ಬಹುವಚನದ ಬಗ್ಗೆ ತತ್ವಪ್ರಕಾಶಿಕೆ ಟೀಕೆ ಮೊದಲಾದ ಕಡೆ ಒಂದೊಂದೇ ಪ್ರಯೋಜನ-ವನ್ನು ಹೇಳಿದ್ದು ಅಷ್ಟೇ ಇದೆ ಎಂಬಭಿಪ್ರಾಯದಿಂದಲ್ಲ. ಹೊರತು ಕೇವಲ ದಿಕ್ಪ್ರದರ್ಶನವೆಂದು ತಿಳಿಯಬೇಕು. ಹಾಗೆ ಹೇಳದಿದ್ದರೆ 'ಗ್ರಂಥವು ಬಹ್ವರ್ಥ ಹಾಗೂ ಅತ್ಯರ್ಥವಿಸ್ತರ' ಎಂದು ಆಚಾರ್ಯರು ಹೇಳಿದ್ದರಿಂದ ಅದಕ್ಕನುಗುಣವಾಗಿ ಅನೇಕ ಪ್ರಯೋಜನಗಳು ಇರಲೇಬೇಕು ಎಂದು ನೀವು ಹೇಳಿದ ಮಾತು ಸಾರ್ಥಕವಾಗುತ್ತಿತ್ತು. ಅಲ್ಲದೆ ಎಲ್ಲ ಪ್ರಯೋಜನಗಳನ್ನೂ ತೋರಿಸುತ್ತಾ ಹೋದರೆ ಗ್ರಂಥ ಮುಗಿಯದಿರುವ ಪ್ರಸಂಗ ಬಂದೀತು. ಹಾಗಾಗಿ ಅವರ ಮಾತಿನಿಂದ ಉಪಲಕ್ಷಣಯಾ ಸೂಚಿತವಾದ ಬೇರೆ ಪ್ರಯೋಜನವನ್ನು ಇಲ್ಲಿ ತೋರಿಸಲ್ಪಟ್ಟಿದೆ. ಹೀಗೆ ಬೇರೆ ಕಡೆಯೂ ಅನುಸಂಧಾನ ಮಾಡಿಕೊಳ್ಳಬೇಕು.

## ಗುರುತ್ವಪ್ರಯೋಜಕಧರ್ಮಗಳು - ಐದು ವಿಧ

(ಲಘುರಸರಂಜನೀ)— ಅಥವಾ ದೇವತಾನಮನಸ್ಯೇವ ಗುರುನಮನಸ್ಯಾಪ್ಯಭಿಮತಸಿದ್ಧ್ಯಂಗತಯಾ ಕಾರ್ಯಾರಂಭೇಽವಶ್ಯಮನುಷ್ಠೇಯತ್ವಾತ್, ತದಾಚರಣಪುರಃಸರಂ, ಗುರುತ್ವಂ ವಿವೃಣ್ವನ್,

ಗುರುಷು ಗುರುತ್ವಪ್ರಯೋಜಕೀಭೂತಾನ್ ಧರ್ಮಾಂಶ್ಚ ದರ್ಶಯತಿ — ಯೇನೇತ್ಯಾದಿಪದ್ಯಪಂಚಕೇನ ॥

ಗುರುತ್ವಂ ಚ ಬಹುಧಾ ಭವತಿ ಕ್ವಚಿತ್ ಮೋಕ್ಷಸಾಧನೋಪದೇಶಾಯ ಮಹಾಶಾಸ್ತ್ರನಿರ್ಮಾಣಾದಿನಾ, ಕ್ವಚಿತ್ ಮಹಾಶಾಸ್ತ್ರಾವಬೋಧಕಪ್ರಮಾಣಪ್ರಮೇಯಸಂಗ್ರಾಹಕಬಹುಗ್ರಂಥನಿರ್ಮಾಣಪೂರ್ವಕಂ ವಿಶಿಷ್ಟತತ್ವನಿರ್ಣಯಜನನೇನ, ಕ್ವಚಿತ್ ಶಾಸ್ತ್ರಾಭ್ಯಾಸಜನ್ಯತತ್ವನಿರ್ಣಯಸ್ಯ ವಾಙ್ಮನೋವ್ಯಾಪಾರಸಾಧ್ಯತ್ವೇನ ತಯೋಃ ತದ್ವಿಷಯತಯಾ ನಿಯಮನೇನ, ಕ್ವಚಿತ್ ಉಕ್ತಗ್ರಂಥಾರ್ಥವಿವರಣಕರಣಪೂರ್ವಕಂ ವೈರಾಗ್ಯಾದಿಸಹಕಾರಿಶಿಕ್ಷಣೇನ, ಕ್ವಚಿತ್ ಮೋಕ್ಷಮಾರ್ಗಪ್ರವೃತ್ತಯೇ ಸೋಪಸ್ಕರಸಚ್ಛಾಸ್ತ್ರೋಪದೇಶೇನ ಚ — ಇತಿ ।

ಅಥವಾ ದೇವತಾನಮಸ್ಕಾರದ ಜೊತೆಗೆ ಗುರುನಮಸ್ಕಾರವೂ ಕೂಡ ಗ್ರಂಥಕರ್ತೃವಿಗೆ ಅಭಿಮತವಾದ ಫಲಸಿದ್ಧಿಗೆ ಕಾರಣವಾದ್ದರಿಂದ ಗ್ರಂಥದ ಮೊದಲಿಗೆ ಅವಶ್ಯ ಅನುಷ್ಠಾನ ಮಾಡಬೇಕಾದ್ದರಿಂದ ಅದನ್ನು ಆಚರಣೆ ಮಾಡುವ ಮೂಲಕ ಗುರುತ್ವವನ್ನು ವಿವರಿಸುತ್ತ ಗುರುಗಳಲ್ಲಿ ಗುರುತ್ವ ಬರುವುದಕ್ಕೆ ಬೇಕಾದ ಧರ್ಮಗಳನ್ನು 'ಯೇನ ಪ್ರಾದುರಭಾವಿ' ಮುಂತಾದ ಐದು ಪದ್ಯಗಳಿಂದ ತೋರಿಸಿದ್ದಾರೆ.

ಗುರುತ್ವವಾದರೋ ಅನೇಕ ರೀತಿಯಾಗಿ ಬರುತ್ತದೆ — (1) ಕೆಲವರಲ್ಲಿ ಗುರುತ್ವವು ಮೋಕ್ಷಕ್ಕೆ ಸಾಧನವಾದ ಉಪದೇಶವನ್ನು ನೀಡಲು ಮಹಾಶಾಸ್ತ್ರನಿರ್ಮಾಣ ಮಾಡುವುದರಿಂದ. ಇಂತಹ ಗುರುತ್ವವು ವೇದವ್ಯಾಸರಲ್ಲಿದೆ. (2) ಮಹಾಶಾಸ್ತ್ರವಾದ ಮೋಕ್ಷಸಾಧನಶಾಸ್ತ್ರದ(ಬ್ರಹ್ಮಸೂತ್ರದ) ಜ್ಞಾನಬರಲು ಉಪಯೋಗಿಯಾದ ಪ್ರಮಾಣಗಳ ಪ್ರಮೇಯಗಳ ಸಂಗ್ರಹವನ್ನು ಮಾಡುವ ಬಹಳ ಗ್ರಂಥಗಳ ಆವಶ್ಯಕತೆ ಇದೆ. ಇಂತಹ ಗ್ರಂಥಗಳನ್ನು ನಿರ್ಮಾಣ ಮಾಡುವ ಮೂಲಕ ವಿಶಿಷ್ಟವಾದ ತತ್ವನಿರ್ಣಯವು ಉಂಟಾಗುವುದು. ಇದರಿಂದ ಕೆಲವರಲ್ಲಿ ಗುರುತ್ವವು ಉಂಟಾಗುವುದು. ಇಂತಹ ಗುರುತ್ವವು ಆಚಾರ್ಯರಲ್ಲಿದೆ. (3) ಶಾಸ್ತ್ರಾಭ್ಯಾಸದಿಂದ ಉಂಟಾಗುವ ತತ್ವನಿಶ್ಚಯವು ವಾಕ್ ಮನಸ್ಸಿನ ವ್ಯಾಪಾರದಿಂದ ಸಾಧ್ಯ. ಇದರಿಂದ ಅವುಗಳ ನಿಯಮನವನ್ನು ಮಾಡಬೇಕು. ಹೀಗೆ ಮಾಡುವ ಕೆಲವರಲ್ಲಿ ಗುರುತ್ವ ಬರುತ್ತದೆ. ಇಂತಹ ಗುರುತ್ವವು ಭಾರತೀದೇವಿಯಲ್ಲಿದೆ. (4) ದೊಡ್ಡವರು ಹೇಳಿದ ಗ್ರಂಥಗಳ ಅರ್ಥವನ್ನು ವಿವರಣೆ ಮಾಡುವ ಮೂಲಕ ವೈರಾಗ್ಯಭಕ್ತಿ ಮೊದಲಾದ ಸಹಕಾರಿಧರ್ಮಗಳನ್ನು ಶಿಷ್ಯರಿಗೆ ಶಿಕ್ಷಣೆ ಮಾಡುವುದರಿಂದಾಗಿ ಕೆಲವರಲ್ಲಿ ಗುರುತ್ವ ಬರುತ್ತದೆ. ಇಂತಹ ಗುರುತ್ವವು ಪದ್ಮನಾಭತೀರ್ಥರಲ್ಲಿದೆ. (5) ಕೆಲವರಲ್ಲಿ ಮೋಕ್ಷಮಾರ್ಗದಲ್ಲಿ ಪ್ರವೃತ್ತಿಮಾಡಲು ಸಹಕಾರಿಯಾದ ಎಲ್ಲ ಅಂಗಶಾಸ್ತ್ರಗಳ ಉಪದೇಶದ ಜೊತೆಗೆ ಸಚ್ಛಾಸ್ತ್ರವನ್ನು ಉಪದೇಶಿಸುವುದರಿಂದ ಗುರುತ್ವ ಬರುವುದು. ಇಂತಹ ಗುರುತ್ವವು ಅಕ್ಷೋಭ್ಯತೀರ್ಥರಲ್ಲಿದೆ.

## ನಿತ್ಯಾಗಣಿತ ಎಂಬುದರಿಂದ ಬ್ರಹ್ಮಸೂತ್ರಗಳ ಪ್ರಥಮಾಧ್ಯಾಯಾರ್ಥ ದ್ವಿತೀಯಾಧ್ಯಾಯಾರ್ಥಗಳಿಗೆ ಸಂಗತಿ ಪ್ರದರ್ಶನ

(ಗುರ್ವರ್ಥದೀಪಿಕಾ) – **"ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತ-ಸಕಲಾವದ್ಯತಮಸೇ"** ಇತಿ ವದತಾ ಜ್ಞಾನಾನಂದಾದಿಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೇನ ದೇಶತಃ ಕಾಲತಃ ಪೂರ್ಣತ್ವಾಖ್ಯಮಹಿಮ್ನಾ ಅಜ್ಞಾನದುಃಖಾದಿದೋಷಾಣಾಮ್ ಅನವಸರ-ದುಃಸ್ಥತಯಾ ಉಪಹತತ್ವಸ್ಯಾಪಿ ಸೂಚಿತತ್ವಾತ್ ಪ್ರಥಮದ್ವಿತೀಯಾರ್ಥಯೋಃ ಹೇತುಹೇತು-ಮದ್ಭಾವರೂಪಾಽಪಿ ಸಂಗತಿರುಕ್ತಾ ವೇದಿತವ್ಯಾ ।

ಮೊದಲನೆಯ ಅಧ್ಯಾಯವಾದ ಸಮನ್ವಯಾಧ್ಯಾಯದ ಅರ್ಥಕ್ಕೂ ಎರಡನೆಯ ಅಧ್ಯಾಯವಾದ ಅವಿರೋಧಾಧ್ಯಾಯದ ಅರ್ಥಕ್ಕೂ ಕಾರ್ಯಕಾರಣಭಾವವೆಂಬ ಸಂಗತಿಯು ಇದೆ. ದ್ವಿತೀಯಾ-ಧ್ಯಾಯದ ಅರ್ಥವು ಕಾರ್ಯವಾಗಿದೆ. ಪ್ರಥಮಾಧ್ಯಾಯದ ಅರ್ಥವು ಕಾರಣವಾಗಿದೆ. ಈ ಅಂಶವನ್ನು ತಿಳಿಸಲು "ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ" ಎಂದಿದ್ದಾರೆ. ಇದರ ಅರ್ಥ ಭಗವಂತನಲ್ಲಿರುವ ಮಾಣಿಕ್ಯಗಳೆಂದರೆ ಜ್ಞಾನ ಆನಂದ ಮುಂತಾದ-ಗುಣಗಳೇ. ಇವುಗಳ ವಿಸ್ತಾರವಾದ ಪ್ರಭೆಯ ಸಮೂಹದ ಕಾರ್ಯೋನ್ಮುಖತೆಯಿಂದ ದೇಶತಃ ಕಾಲತಃ ಅರ್ಥಾತ್ ಸಕಲ ದೇಶಗಳಲ್ಲಿಯೂ ಸಕಲ ಕಾಲಗಳಲ್ಲಿಯೂ ಈ ಜ್ಞಾನಾನಂದಾದಿಗುಣ-ಗಳಿಂದ ಪೂರ್ಣತ್ವ ಎಂಬ ಮಹಿಮೆಯನ್ನು ಪಡೆದಿದ್ದರಿಂದ ಅಜ್ಞಾನಾದಿ ದೋಷಗಳು ಇರಲು ಸಾಧ್ಯವಿಲ್ಲವಾದ್ದರಿಂದ ಅದು ಉಪಹತವೇ ಆಗಿದೆ - ಎಂದು. ಹೀಗೆ ಜ್ಞಾನಾನಂದಾದಿಗುಣಗಳಿಂದ ಪೂರ್ಣವಾಗಿ ತುಂಬಿದ ಪರಮಾತ್ಮನಲ್ಲಿ ದೋಷಗಳಿವೆ ಎಂದು ಶಂಕೆ ಮಾಡುವ ಸ್ಮೃತಿಯುಕ್ತ್ಯಾದಿ-ಗಳ ವಿರೋಧವಿರುವುದಿಲ್ಲ.

** – ಸಕಲವೈದಿಕಶಬ್ದಗಳ ಸಮನ್ವಯವನ್ನು ಪ್ರಥಮಾಧ್ಯಾಯದಲ್ಲಿ ಭಗವಂತನಲ್ಲಿ ತೋರಿಸಿ-ದ್ದಾರೆ. ಆ ಎಲ್ಲ ಶಬ್ದಗಳ ಸಮನ್ವಯ ಎಂದರೆ ಆಯಾಯ ಶಬ್ದೋಕ್ತ ಗುಣಗಳ ಸಮನ್ವಯ.

## ಅಶೇಷಾಮ್ನಾಯಸ್ಮೃತಿ.... ಹಾಗೂ ಹರಯೇ ಎಂಬ ಪದಗಳು ತೃತೀಯಾಧ್ಯಾಯಾರ್ಥಚತುರ್ಥಾಧ್ಯಾಯಾರ್ಥಸೂಚಕ

(ಗು.ದೀ.) ಉಕ್ತಾರ್ಥೇ ಪ್ರಮಾಣಾಭಾವಶಂಕಾಪರಿಹಾರಾಯ ಉಕ್ತಮ್ – **ಅಶೇಷಾಮ್ನಾಯಸ್ಮೃತಿ-ಹೃದಯದೀಪ್ತಾಯ ಹರಯೇ** ಇತಿ । ಅನೇನ ತೃತೀಯಾಧ್ಯಾಯಾರ್ಥೋಽಪಿ ಸೂಚಿತಃ । **ಹರಯೇ** = ಸಾಂಸಾರಿಕವಿವಿಧದುಃಖಾಪಹರ್ತ್ರೇ ಇತ್ಯನೇನ ಚತುರ್ಥಾಧ್ಯಾಯಾರ್ಥೋಽಪಿ ಸೂಚಿತಃ ।

ಭಗವಂತನಲ್ಲಿರುವ ಸಕಲಗುಣಪರಿಪೂರ್ಣತ್ವ ಹಾಗೂ ಅದರಿಂದ ಸಿದ್ಧವಾದ ಸಕಲದೋಷ-ದೂರತ್ವಗಳ ವಿಷಯದಲ್ಲಿ ಪ್ರಮಾಣವೇನು ಎಂಬ ಪ್ರಶ್ನೆಗೆ ಉತ್ತರವಾಗಿ 'ಅಶೇಷಾಮ್ನಾಯಸ್ಮೃತಿ-ಹೃದಯದೀಪ್ತಾಯ' ಎಂದು ಪ್ರಮಾಣವನ್ನು ಉಲ್ಲೇಖಿಸಿದ್ದಾರೆ. ಹಾಗಾಗಿ ಸಕಲವೇದ ಹಾಗೂ ತದನುಸಾರಿ ಸ್ಮೃತಿಗಳೇ ಪ್ರಮಾಣ ಎಂದಾಯಿತು.

ಈ ವಿಶೇಷಣದಿಂದ ಮೂರನೆಯ ಸಾಧನಾಧ್ಯಾಯದ ಅರ್ಥವು ಸೂಚಿತ. ಅದು ಹೀಗೆ – ಭಗವಂತನನ್ನು ಹೊಂದುವುದಕ್ಕೆ ಅನೇಕ ಸಾಧನಗಳನ್ನು ನಿರೂಪಣೆ ಮಾಡಿದ್ದಾರೆ. ಅವುಗಳಲ್ಲಿ ವೇದಶ್ರವಣ ಮುಂತಾದವುಗಳನ್ನು ಇಲ್ಲಿ ಸಂಗ್ರಹಿಸಿದ್ದಾರೆ. ಅದು ಹೀಗೆ – ಸಕಲವೇದ ತದನುಸಾರಿ ಸ್ಮೃತಿಗಳ ತಾತ್ಪರ್ಯಕ್ಕೆ ಆ ಭಗವಂತನು ವಿಷಯನಾಗಬೇಕಾದರೆ ವೈರಾಗ್ಯ ಭಕ್ತಿ ಶ್ರವಣ ಮನನ ನಿದಿಧ್ಯಾಸನಗಳೂ ಕೂಡ ಅಧಿಕಾರಿಗೆ ಆವಶ್ಯಕ. ಹೀಗಾಗಿ ಇಡೀ ಸಾಧನಾಧ್ಯಾಯದ ಅರ್ಥವು ಈ ವಿಶೇಷಣದಿಂದ ಸೂಚಿತವಾಗಿದೆ.

ಇನ್ನು ನಾಲ್ಕನೆಯ ಅಧ್ಯಾಯವಾದ ಫಲಾಧ್ಯಾಯದ ಅರ್ಥವು 'ಹರಯೇ' ಎಂಬ ಪದದಿಂದ ಹೀಗೆ ಸೂಚಿತ – ಹರಯೇ ಎಂದರೆ ನಮ್ಮ ಸಂಸಾರದ ಎಲ್ಲ ದುಃಖಗಳನ್ನು ಪರಿಹಾರ ಮಾಡುವವನು. ಹೀಗಾಗಿ ಆತ್ಯಂತಿಕಕ್ಲೇಶವನ್ನು ನಾಶಮಾಡುವವನು ಎಂದು. ಅಂದರೆ ಮೋಕ್ಷ ನೀಡುವವನು ಎಂದರ್ಥ. ಮೋಕ್ಷವೆಂಬ ಫಲದ ಬಗ್ಗೆ ನಿರೂಪಣೆ ಮಾಡಲು ಹೊರಟ ಅಧ್ಯಾಯವನ್ನೇ ಫಲಾ-ಧ್ಯಾಯ ಎನ್ನುವುದರಿಂದ.

### 'ಶ್ರಿಯಃ ಪತ್ಯೇ' ಎಂಬ ಪದ್ಯದಲ್ಲಿ ಸೂಚಿತವಾದ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಾರ್ಥಗಳ ವಿವರಣೆ

(ರಸರಂಜನೀ) – ಪ್ರಥಮಾಧ್ಯಾಯಾರ್ಥೇ ಶಂಕಿತದೋಷನಿರಾಸೋ ದ್ವಿತೀಯೇಽಭಿಹಿತಃ ತಮಾಹ – **ಉಪಹತೇತ್ಯಾದಿ ॥** ಏವಂ ಬ್ರಹ್ಮಸ್ವರೂಪೇ ಸಿದ್ಧೇ ಅಧಿಕಾರಿಣಃ ತತ್ಪ್ರಸಾದಸಾಧನೋ-ಪಾಯಭೂತತತ್ಸಾಕ್ಷಾತ್ಕಾರಜನನಾಯ ವೈರಾಗ್ಯಭಕ್ತಿಭ್ಯಾಂ ತದುಪಾಸನಂ ಕರ್ತವ್ಯಮಿತಿ ತೃತೀಯೇ ನಿರೂಪಿತಮ್ । ತಸ್ಯಾಯಂ ಸಂಗ್ರಹಃ – **ಅಶೇಷೇತಿ ॥** ನ ಕೇವಲಂ ಭಗವನ್ಮಾತ್ರೋಪಾಸನೇನ ಪೂರ್ಯತೇ ಕಿಂ ನಾಮ ಪರಿವಾರಭೂತಾನಾಂ ಶ್ರೀಬ್ರಹ್ಮಾದೀನಾಮುಪಾಸನಮಪ್ಯಾವಶ್ಯಕ-ಮಿತ್ಯಾಶಯೇನಾಹ – **ಶ್ರಿಯಃ ಪತ್ಯ ಇತಿ ॥** ಸ್ವರೂಪಾವರಣವ್ಯತಿರಿಕ್ತೇಷು ಪ್ರಿಯಃ ಶ್ರೇಷ್ಠ್ಯಾತ್ ಕಂಠತ ಉಕ್ತಿಃ । .....

ಪ್ರಸನ್ನಂ ಚ ತದ್ವ್ಯಾದೃಶಂ ಪುಮರ್ಥಂ ಪ್ರಯಚ್ಛತಿ ತತ್ಸ್ವರೂಪಂ ಚತುರ್ಥೇಽಭಿಹಿತಮ್ । ತದಭಿಧಾನಂ ಶ್ರಿಯಃ = ಸಂಕಲ್ಪಮಾತ್ರಸಾಧ್ಯಸ್ವಸ್ವಯೋಗ್ಯನಿಖಿಲಭೋಗಭೋಕ್ತೃತ್ವರೂಪೈ-

ಶ್ವರ್ಯಸ್ಯ ಪತ್ಯೇ = ದಾತ್ರೇ ಇತಿ ಯದ್ಯಪಿ ಚತುರ್ಥಾಧ್ಯಾಯಾರ್ಥಕಥನರೂಪಸ್ಯಾಸ್ಯ ಅಂತೇ ನಿವೇಶನಮುಚಿತಂ, ತಥಾಪಿ ಶ್ರೀಶಬ್ದ ಆದೌ ನಿವೇಶಿತಃ ಪರಮಮಂಗಳದಾಯೀ ತಚ್ಛಾಸ್ತ್ರಾಧ್ಯೇತೃಣಾಮಿತಿ ಶಿಷ್ಯಾನ್ ಗ್ರಾಹಯಿತುಮಾದೌ ನಿವೇಶಿತಮ್ ।

ಮೊದಲನೆಯ ಅಧ್ಯಾಯದ ಅರ್ಥವಾದದ್ದು ಬ್ರಹ್ಮನು ಸಕಲ ಗುಣಪೂರ್ಣ ಎಂದು. ಈ ವಿಷಯದಲ್ಲಿ ಶಂಕೆ ಮಾಡಲ್ಪಟ್ಟ ದೋಷಗಳ ನಿರಾಕರಣೆಯನ್ನು ದ್ವಿತೀಯಾಧ್ಯಾಯವಾದ ಅವಿರೋಧಾಧ್ಯಾಯ ಮಾಡಿದೆ. ಇದನ್ನು `ಉಪಹತಸಕಲಾವದ್ಯತಮಸೇ' ಎಂಬುದರಿಂದ ತಿಳಿಸಿದ್ದಾರೆ. ಈ ರೀತಿ ಸಕಲಗುಣಪೂರ್ಣನಾಗಿ ಸಮಸ್ತದೋಷದೂರನಾಗಿ ಬ್ರಹ್ಮನು ಸಿದ್ಧನಾದಾಗ ಅಧಿಕಾರಿಗೆ ಅವನ ಪ್ರಸಾದಕ್ಕೆ ಮೊದಲು ಬೇಕಾದದ್ದು ಅವನ ಸಾಕ್ಷಾತ್ಕಾರ. ಅದನ್ನು ತಂದುಕೊಡುವುದು ವೈರಾಗ್ಯ ಹಾಗೂ ಭಕ್ತಿ. ಅವುಗಳಿಂದ ಅವನ ಉಪಾಸನೆಯನ್ನು ಮಾಡಬೇಕೆಂದು ಮೂರನೆಯ ಅಧ್ಯಾಯದಲ್ಲಿ ನಿರೂಪಣೆ ಮಾಡಿದ್ದಾರೆ. ಈ ಎಲ್ಲ ಅಂಶಗಳನ್ನು 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂದು ಸಂಗ್ರಹಿಸಿದ್ದಾರೆ. ನಾಲ್ಕನೆಯ ಅಧ್ಯಾಯವಾದ ಫಲಾಧ್ಯಾಯದ ಅರ್ಥವನ್ನು `ಶ್ರಿಯಃ ಪತ್ಯೇ' ಎಂಬ ಪದದಿಂದ ಸೂಚಿಸಿದ್ದಾರೆ. ಶ್ರಿಯಃ ಎಂದರೆ ಕೇವಲ ಸಂಕಲ್ಪಿಸಿರುವುದರಿಂದಲೇ ಸಿಗುವ ತಮ್ಮ ತಮ್ಮ ಯೋಗ್ಯತಾನುಗುಣವಾದ ಅಖಿಲಸುಖಭೋಗವನ್ನು ಭೋಗಿಸುವ ಐಶ್ವರ್ಯ ಎಂದರ್ಥ. ಇದನ್ನು ಪತ್ಯೇ ಎಂದರೆ ಕೊಡುವವನು ಎಂದು. ಹೀಗೆ ಮೋಕ್ಷಪ್ರದ ಎಂಬುದು ಶ್ರಿಯಃ ಪತ್ಯೇ ಎಂಬ ಶಬ್ದದ ಅರ್ಥವಾಗಿದೆ. ಯದ್ಯಪಿ ಇಲ್ಲಿ ನಾಲ್ಕನೆಯ ಅಧ್ಯಾಯದ ಅರ್ಥವನ್ನು ತಿಳಿಸುವ ಶ್ರಿಯಃ ಪತ್ಯೇ ಎಂಬ ಪದವನ್ನು ಶ್ಲೋಕದ ಕೊನೆಗೆ ಸೇರಿಸುವುದು ಉಚಿತ. ಹಾಗಿದ್ದರೂ ಶ್ರೀಶಬ್ದವನ್ನು ಮೊದಲು ಸೇರಿಸಿರುವ ಆ ಶಾಸ್ತ್ರವನ್ನು ಅಧ್ಯಯನ ಮಾಡುವವರಿಗೆ ಪರಮಮಂಗಳವುಂಟಾಗುವುದು ಎಂದು ಶಿಷ್ಯರಿಗೆ ಶಿಕ್ಷಣಕೊಡಲು ಮೊದಲಿಗೆ ಶ್ರಿಯಃ ಪತ್ಯೇ ಎಂದು ಸೇರಿಸಿದ್ದಾರೆ.

## ಶ್ರೀರಾಘವೇಂದ್ರಸ್ವಾಮಿಗಳ ಪರಿಮಳಟಿಪ್ಪಣೀ — ಮಂಗಲಾಚರಣೆ

### ಶ್ರೀಪತಿಗೆ ನಮಸ್ಕಾರ

ಪೂರ್ಣಾಗಣ್ಯಗುಣೋದಾರಮೂರ್ತಯೇ ಪುಣ್ಯಕೀರ್ತಯೇ ।
ನಮಃ ಶ್ರೀಪತಯೇ ಭಕ್ತದತ್ತಸ್ವಾನಂದಮೂರ್ತಯೇ ॥

ಈ ಶ್ಲೋಕದಲ್ಲಿ ಲಕ್ಷ್ಮೀಪತಿಯಾದ ನಾರಾಯಣನಿಗೆ ನಮಸ್ಕರಿಸಿದ್ದಾರೆ. ಆ ನಾರಾಯಣನಿಗೆ ಮೂರು ವಿಶೇಷಣಗಳನ್ನು ನೀಡಿದ್ದಾರೆ. ಪೂರ್ಣಾಗಣ್ಯಗುಣೋದಾರಮೂರ್ತಿ, ಪುಣ್ಯಕೀರ್ತಿ ಹಾಗೂ ಭಕ್ತದತ್ತ- ಸ್ವಾನಂದಮೂರ್ತಿ ಎಂದು. ಇವುಗಳ ಅರ್ಥ ಹೀಗೆ — ಭಗವಂತನ ದೇಹ ಗುಣಗಳಿಂದ ತುಂಬಿರುವಂತಹದ್ದು. ಆ ಗುಣಗಳಾದರೋ ಪೂರ್ಣವಾಗಿವೆ. ಹಾಗೆ ಇಷ್ಟು ಗುಣಗಳು ಎಂದು

ಎಣಿಸಲು ಅಶಕ್ಯವಾಗಿವೆ. ಇನ್ನು ಅವನನ್ನು ನಾವು ಕೀರ್ತನೆ ಮಾಡಿದರೆ ಮಂಗಳಕರವಾದ ಕೀರ್ತಿಯನ್ನು ನಾವು ಪಡೆಯಲು ಸಾಧ್ಯವಿದೆ. ಏಕೆಂದರೆ, ಅವನು ಪುಣ್ಯಕೀರ್ತಿ. ಅರ್ಥಾತ್ ಪುಣ್ಯಪ್ರದವಾದ ಮಂಗಳಕರವಾದ ಕೀರ್ತಿಯುಳ್ಳವನು. ಇನ್ನು ಯಾರು ತನ್ನ ಭಕ್ತರಾಗಿದ್ದಾರೋ ಅವರಿಗೆ ತನ್ನ ಆನಂದಮಯವಾದ ದೇಹವನ್ನೇ ಪ್ರಕಟಗೊಳಿಸುವನು - ಎಂದು.

## ನಿತ್ಯಸುಂದರಮೂರ್ತಿಯಾದ ಪರಬ್ರಹ್ಮನಿಗೆ ನಮಸ್ಕಾರ

ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ ।
ಶ್ರೀಬ್ರಹ್ಮವೀಂದ್ರಪೂರ್ವೇಡ್ಯಕೀರ್ತಿನೇ ಬ್ರಹ್ಮಣೇ ನಮಃ ॥

ಈ ಶ್ಲೋಕದಲ್ಲಿ 'ಬ್ರಹ್ಮಣೇ' ಎಂಬಲ್ಲಿರುವ ಬ್ರಹ್ಮ ಎಂದರೆ ಚತುರ್ಮುಖಬ್ರಹ್ಮನಲ್ಲದೇ ಪರಬ್ರಹ್ಮನನ್ನು ಅರ್ಥಾತ್ ವಿಷ್ಣುವನ್ನು ಸ್ವೀಕರಿಸಬೇಕು. ಅವನಿಗೆ ಇಲ್ಲಿ ನಮಸ್ಕಾರ ಮಾಡಿದ್ದಾರೆ. ಇಲ್ಲಿ ವಿಷ್ಣುವಿಗೆ ಎರಡು ವಿಶೇಷಣಗಳು. (1) ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿ (2) ಶ್ರೀಬ್ರಹ್ಮ- ವೀಂದ್ರಪೂರ್ವೇಡ್ಯಕೀರ್ತಿ. ಇವುಗಳ ಅರ್ಥ ಹೀಗೆ – ಪರಬ್ರಹ್ಮನ ದೇಹವು ಸುಂದರವಾಗಿದೆ ಹಾಗೂ ನಿತ್ಯವಾಗಿದೆ. ನಿತ್ಯವಾಗಿದೆ ಅಂದರೆ ಉತ್ಪತ್ತಿಯಾಗಲೀ ನಾಶವಾಗಲೀ ಅದಕ್ಕಿಲ್ಲ. ಹಾಗೆ ಪೂರ್ಣವಾದ ಎಣಿಸಲಶಕ್ಯವಾದ ಸಕಲಸದ್ಗುಣಗಳಿಂದ ತುಂಬಿದೆ. ಇನ್ನು ಭಗವಂತನ ಕೀರ್ತಿಯನ್ನು ಕೊಂಡಾಡುವವರು ಲಕ್ಷ್ಮೀದೇವಿ, ಬ್ರಹ್ಮದೇವರು ಗರುಡದೇವರು ಇಂದ್ರದೇವರೇ ಮೊದಲಾದವರು - ಎಂದು.

## ಇಡೀ ವಿಶ್ವವೇ ವಾಯುದೇವರ ವಶ

ವಿಶ್ವಂ ಯಸ್ಯ ವಶೇ ಸರ್ವಮನಿಶಂ ಶಂಕರಾದಿಕಮ್ ।
ತಸ್ಯ ವಾಯೋಸ್ತೃತೀಯಾಂಶಮಾಶ್ರಯೇ ಶಮವಾಪ್ತಯೇ ॥

ಈ ಶ್ಲೋಕದಲ್ಲಿ ಮಧ್ವಾಚಾರ್ಯರನ್ನು ಆಶ್ರಯಿಸುತ್ತೇನೆ ಎಂದಿದ್ದಾರೆ. ಯಾವುದಕ್ಕಾಗಿ ಎಂದರೆ "ಶಮ್ ಅವಾಪ್ತಯೇ" ಎಂದಿದ್ದಾರೆ. ಅರ್ಥಾತ್ ಶಾಶ್ವತವಾದ ಸುಖಕ್ಕೋಸ್ಕರ ಎಂದು. ಆ ಮಧ್ವಾಚಾರ್ಯರಾದರೋ ವಾಯುದೇವರ ಮೂರನೆಯ ಅವತಾರ. ಇವರು ಇಡೀ ಜಗತ್ತನ್ನೇ ತಮ್ಮ ಅಧೀನವಾಗಿ ಇಟ್ಟುಕೊಂಡವರು. ಇಲ್ಲಿ ಜಗತ್ತೆಂದರೆ ರುದ್ರದೇವರಿಂದ ಪ್ರಾರಂಭಿಸಿ ಸಕಲ ಜೀವರು ಎಂದು ಗ್ರಹಿಸಬೇಕು. ಇಂತಹ ಜಗತ್ತು ಯಾವಾಗಲೂ ಅವರ ಅಧೀನ ಎಂದು ತಿಳಿಯಬೇಕು.

## ತತ್ವಪ್ರಕಾಶಕರಾದ ಜಯತೀರ್ಥರು

ಸತ್ವದ್ಮಬಂಧವೋ ಯಸ್ಯ ಗಾವೋ ವಿಶ್ವತಮೋನುದಃ ।
ಸ ಸ್ಯಾತ್ ತತ್ತ್ವಪ್ರಕಾಶಾಯ ಜಯತೀರ್ಥರವಿರ್ಮಮ ॥

ಈ ಶ್ಲೋಕದಲ್ಲಿ ನ್ಯಾಯಸುಧಾಕರ್ತೃಗಳಾದ ಜಯತೀರ್ಥರನ್ನು ಪ್ರಾರ್ಥಿಸಿದ್ದಾರೆ. ಜಯತೀರ್ಥರನ್ನು ಸೂರ್ಯನಿಗೆ ಹೋಲಿಸಿ, ಆ ಸೂರ್ಯನು ನನಗೆ ಪರಾಪರತತ್ವಗಳ ಪ್ರಕಾಶವನ್ನು ನೀಡಲಿ ಎಂದು ಕೇಳಿಕೊಂಡಿದ್ದಾರೆ. ಆ ಜಯತೀರ್ಥರೆಂಬ ಸೂರ್ಯನ ಮಾತುಗಳು ಕಿರಣಗಳು ಎಂದೆನಿಸುತ್ತವೆ. ಇವುಗಳಿಂದ ಇಡೀ ವಿಶ್ವದಲ್ಲಿ ಪಸರಿಸಿರುವ ಅಜ್ಞಾನವೆಂಬ ಕತ್ತಲೆಯು ಅಥವಾ ವಿಶ್ವ ಎಂದರೆ ವಿಷ್ಣು. ಅವನ ವಿಷಯಕವಾದ ಅಜ್ಞಾನವೆಂಬ ಕತ್ತಲೆಯು ನಾಶವಾಗುತ್ತದೆ. ಇನ್ನು ಸೂರ್ಯನ ಕಿರಣಗಳಿಗೆ ಬಂಧುಗಳಾದವುಗಳು ಪದ್ಮಗಳು. ಅದರಂತೆ ಇಲ್ಲಿ ಜಯತೀರ್ಥರೆಂಬ ಸೂರ್ಯನ ಕಿರಣ(ಮಾತು)ಗಳ ಬಂಧುಗಳೆಂದರೆ ಸಜ್ಜನರೆಂಬ ಕಮಲಗಳೇ ಆಗಿವೆ.

## ಜ್ಞಾನಸಮೃದ್ಧಿಗಾಗಿ ವ್ಯಾಸತೀರ್ಥರ ಪ್ರಾರ್ಥನೆ

ಪದವಾಕ್ಯಪ್ರಮಾಣಜ್ಞೋ ದುರ್ಮತಧ್ವಾಂತಭಾಸ್ಕರಃ ।
ವ್ಯಾಸತೀರ್ಥಮುನೀಂದ್ರೋ ಮೇ ಭೂಯಾಜ್ಜ್ಞಾನಸಮೃದ್ಧಯೇ ॥

ಇಲ್ಲಿ ಶ್ರೀವ್ಯಾಸರಾಜರನ್ನು ಪ್ರಾರ್ಥಿಸಿದ್ದಾರೆ. ನನ್ನ ಜ್ಞಾನಸಮೃದ್ಧಿಗೆ ಕಾರಣವಾಗಲಿ ಎಂದು. ಈ ವ್ಯಾಸತೀರ್ಥರೆಂಬ ಮುನಿಶ್ರೇಷ್ಠರು ವ್ಯಾಕರಣಶಾಸ್ತ್ರ, ಮೀಮಾಂಸಾಶಾಸ್ತ್ರ, ನ್ಯಾಯಶಾಸ್ತ್ರಗಳನ್ನು ಚೆನ್ನಾಗಿ ಅರಿತವರು. ಹಾಗೂ ದುಷ್ಟವಾದ ಮತಗಳೆಂಬ ಕತ್ತಲೆಯನ್ನು ಓಡಿಸುವ ಸೂರ್ಯನಂತಿರು-ವವರು.

## ಶ್ರೀಸುಧೀಂದ್ರತೀರ್ಥರಿಗೆ ನಮಸ್ಕರಿಸಿ ನ್ಯಾಯಸುಧಾವಾಕ್ಯಗಳಿಗೆ ವ್ಯಾಖ್ಯಾನಮಾಡುತ್ತೇನೆ

ಅಸ್ಮದ್ದೇಶಿಕಪಾದಾನಾಂ ಪ್ರಣಮ್ಯ ಚರಣಾಂಬುಜಮ್ ।
ಶ್ರೀಮನ್ನ್ಯಾಯಸುಧಾವಾಕ್ಯವ್ಯಾಖ್ಯಾಂ ಕುರ್ಯಾಂ ಯಥಾಮತಿ ॥

ಇಲ್ಲಿ ತಮ್ಮ ಗುರುಗಳಾದ ಶ್ರೀಸುಧೀಂದ್ರತೀರ್ಥರನ್ನು ನಮಸ್ಕರಿಸಿದ್ದಾರೆ. ಇವರನ್ನು ದೇಶಿಕ ಎಂದು ಇಲ್ಲಿ ಉಲ್ಲೇಖಿಸಿದ್ದಾರೆ. ದೇಶಿಕ ಎಂದರೆ ದಿಶತಿ – ಉಪದಿಶತಿ ಅಧ್ಯಾತ್ಮವಿದ್ಯಾಂ - ಎಂಬಂತೆ ಅಧ್ಯಾತ್ಮವಿದ್ಯೆಯನ್ನು ಸಾಕ್ಷಾತ್ತಾಗಿ ಉಪದೇಶಮಾಡುವವರು. ಇಂತಹ ದೇಶಿಕರಾದ ಪೂಜ್ಯ-ಸ್ವರೂಪವುಳ್ಳ ಶ್ರೀಸುಧೀಂದ್ರತೀರ್ಥರ ಪಾದಕಮಲಗಳಿಗೆ ಭಕ್ತಿಶ್ರದ್ಧೆಗಳಿಂದ ನಮಸ್ಕರಿಸಿ ಶ್ರೀಮ-ನ್ನ್ಯಾಯಸುಧಾವಾಕ್ಯಗಳಿಗೆ ಸ್ವಬುದ್ಧಿಗನುಗುಣವಾಗಿ ವ್ಯಾಖ್ಯಾನವನ್ನು ಮಾಡುತ್ತೇನೆ ಎಂದಿದ್ದಾರೆ.

## ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಎನ್ನುವುದನ್ನು ಶ್ಲೋಕದ ಕೊನೆಗೆ ಹೇಳಿದ್ದರ ಔಚಿತ್ಯ

'ನಿಖಿಲ' ಇತ್ಯಾದಿವಿಶೇಷಣತ್ರಯೇ ವೇದಾದಿರೇವ ಮಾನಮ್ ಇತಿ ಜ್ಞಾಪನಾಯ ಮೂಲ-

ಕ್ರಮೋಲ್ಲಂಘನೇನ '**ಅಶೇಷಾಮ್ನಾಯಃ**' ಇತ್ಯಸ್ಯ ಅಂತೇ ನಿವೇಶಃ । 'ನಿತ್ಯ' ಇತಿ ವಿಶೇಷಣೇನ ಪೂರ್ವಾಧ್ಯಾಯದ್ವಯಸ್ಯ '**ಅಶೇಷ**' ಇತ್ಯಾದಿವಿಶೇಷಣವಿಶೇಷ್ಯಾಭ್ಯಾಮ್ ಉತ್ತರದ್ವಯಸ್ಯಾರ್ಥೋಕ್ತಿಃ ।

ಅನುವ್ಯಾಖ್ಯಾನದಲ್ಲಿ ನಾರಾಯಣನಿಗೆ ನೀಡಿದ ವಿಶೇಷಣಗಳ ಕ್ರಮ ಹೀಗಿದೆ – ಮೊದಲಿಗೆ 'ನಿಖಿಲಪೂರ್ಣಗುಣೈಕದೇಹಂ' ನಂತರ 'ನಿರ್ದೋಷಂ' ಅನಂತರ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂದು. ಆದರೆ ನ್ಯಾಯಸುಧೆಯ ಮಂಗಳಪದ್ಯದಲ್ಲಿ ಈ ಕ್ರಮವನ್ನು ಅಳವಡಿಸಿಲ್ಲ. ಮೊದಲಿಗೆ 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂದು ಹೇಳಿ, ನಂತರ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂಬ ವಿಶೇಷಣವನ್ನು ಹೇಳಿ, ನಂತರ 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂದಿದ್ದಾರೆ.

ಹಾಗಾದರೆ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬ ಅರ್ಥದ 'ಅಶೇಷಾಮ್ನಾಯಸ್ಮೃತಿ-ಹೃದಯದೀಪ್ತಾಯ' ಎಂಬ ವಿಶೇಷಣವನ್ನು 'ಅಸ್ಯೋದ್ಭವಾದಿದಂ' ಎಂಬುದರ ಸಮಾನಾರ್ಥವಾದ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂಬುದರ ಹಿಂದೆಯೇ ಹೇಳಬೇಕಿತ್ತು. ಇದನ್ನು ಹೇಳದೇ ಕೊನೆಗೆ 'ಅಶೇಷಾಮ್ನಾಯಸ್ಮೃತಿ- ಹೃದಯದೀಪ್ತಾಯ' ಎಂಬ ವಿಶೇಷಣವನ್ನು ಹೇಳಿದ್ದರ ಉದ್ದೇಶ ಏನು? ಎಂದರೆ ಹಿಂದೆ ಹೇಳಿದ ಮೂರೂ ವಿಶೇಷಣಗಳಲ್ಲಿ ಪ್ರಮಾಣದ ಪ್ರಶ್ನೆಗೆ ಉತ್ತರವಾಗಿ 'ಸಕಲವೇದಗಳು ಹಾಗು ತದನುಸಾರಿ ಸ್ಮೃತಿಗಳೇ ಇಂತಹ ವಿಶೇಷಣಗಳಿಂದ ಕೂಡಿದ ನಾರಾಯಣನ ವಿಷಯದಲ್ಲಿ ಪ್ರಮಾಣಗಳು' ಎಂದು ತಿಳಿಸಲು.

'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣಕ್ಕೆ ಇನ್ನೊಂದು ರೀತಿಯಾದ ಚಿಂತನೆಯನ್ನು ಮಾಡುತ್ತಿದ್ದಾರೆ.

ಈ ವಿಶೇಷಣವು ಬ್ರಹ್ಮಸೂತ್ರದ ಮೊದಲನೆಯ ಹಾಗೂ ಎರಡನೆಯ ಅಧ್ಯಾಯವಾದ ಸಮನ್ವಯಾಧ್ಯಾಯ ಅವಿರೋಧಾಧ್ಯಾಯಗಳ ಅರ್ಥವನ್ನು ಹೇಳುತ್ತಿದೆ. ಅದು ಹೀಗೆ – ನಿತ್ಯಾಗಣಿತಗುಣಮಾಣಿಕ್ಯ.. ಎಂಬ ವಿಶೇಷಣದಿಂದ ಸಕಲಗುಣಗಳ ಅನ್ವಯ, ಹಾಗೂ ಸಕಲ-ದೋಷವಿದೂರತೆಯನ್ನು ಹೇಳಿದ್ದಾರೆ. ಇದೇ ಸಮನ್ವಯಾಧ್ಯಾಯದ ಹಾಗೂ ಅವಿರೋಧಾಧ್ಯಾಯದ ಅರ್ಥ.

'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬ ವಿಶೇಷಣದಿಂದ ಸಾಧನಾಧ್ಯಾಯದ ಅರ್ಥ-ವನ್ನು ಹೇಳಿದ್ದಾರೆ. 'ಹರಯೇ' ಎಂಬ ಪದದಿಂದ ನಾಲ್ಕನೆಯ ಫಲಾಧ್ಯಾಯದ ಅರ್ಥವನ್ನು ತಿಳಿಸಿದ್ದಾರೆ.

## ಮಾದನೂರು ಶ್ರೀವಿಷ್ಣುತೀರ್ಥರ ರಸರಂಜನೀ ಟಿಪ್ಪಣಿಯ ಮಂಗಲಾಚರಣೆ
## ಶ್ರೀಶನನ್ನು ಸೇವಿಸುವೆ

ಶ್ರೀಹೃತ್ಪದ್ಮನಿವಾಸಂ ದಾಸೀದಾಸಗಣಸಂಸೇವ್ಯಮನಿಶಮ್ ।
ಶ್ರೀಶಂ ಸೇವೇ ಮನಸಾ ಭಾವ್ಯಂ ಸ್ವೇ ಭಾವುಕೈಃ ಸ್ವಾಂತೇ ॥

ಯೋಗಿಗಳು ತಮ್ಮ ಅಂತಃಕರಣದಲ್ಲಿ ಧ್ಯಾನಿಸುವ ಲಕ್ಷ್ಮಿಯ ಹೃದಯಕಮಲದಲ್ಲಿ ವಾಸವಾಗಿರುವ, ದಾಸಿಯರು ದಾಸರುಗಳ ಗುಂಪಿನಿಂದ ಸದಾ ಸೇವಿಸಲ್ಪಡುವ ಲಕ್ಷ್ಮೀಪತಿಯನ್ನು ಮನಸಾ ಸೇವಿಸುತ್ತೇನೆ.

## ಐಜೀರಾಮಾಚಾರ್ಯಾಂತರ್ಯಾಮೀ ವಾಸುದೇವರೂಪೀ ಪರಮಾತ್ಮ

ಐಜೀರಾಮಾರ್ಯಹೃತ್ಪದ್ಮಸೂರ್ಯಬಿಂಬಸ್ಥಿತಂ ಮಮ ।
ವಾಸುದೇವಂ ಸದಾ ಸೇವೇ ತತ್ತ್ವಮಾರ್ಗಪ್ರಭಾಸಕಮ್ ॥

ಐಜೀರಾಮಾಚಾರ್ಯರ (ಶ್ರೀವ್ಯಾಸತತ್ವಜ್ಞರ) ಹೃದಯಕಮಲದ ಸೂರ್ಯಬಿಂಬದಲ್ಲಿರುವ, ನನಗೆ ತತ್ವದ ದಾರಿಯನ್ನು ತೋರಿಸುವ ವಾಸುದೇವನನ್ನು ಯಾವಾಗಲೂ ಸೇವಿಸುತ್ತೇನೆ.

## ಟೀಕಾವ್ಯಾಖ್ಯಾ ಟೀಕೈವ

ಯದ್ಯಪಿ ಟೀಕಾ ವ್ಯಾಖ್ಯಾ ಟೀಕೈವ ನನು ವಿದ್ವತ್ಸದಸಿ ವಿದಿತಾ ।
ಅಥ ಹ ಪುನಃ ಸೇವಾಯೈ ಪ್ರಥಯೇಽಹಂ ಪ್ರಕಾರಮಾತ್ರಂ ತತ್ ॥

ವಿದ್ವತ್ಸಭೆಯಲ್ಲಿ ಎಲ್ಲರಿಗೂ ಗೊತ್ತಿರುವುದು ಈ ವಿಷಯ. ಮೂಲಗ್ರಂಥಗಳಿಗೆ ಬರೆದ ಶ್ರೀಜಯತೀರ್ಥರ ಟೀಕೆಗೆ ವ್ಯಾಖ್ಯಾನವೆಂದರೆ ಅದು ಟೀಕೆಯೇ ಆಗಿದೆ. ಅಂದರೆ ಅದರ ಅಭಿಪ್ರಾಯ ಆ ಟೀಕೆಯಿಂದಲೇ ಗಮ್ಯ. ಇನ್ನೊಬ್ಬರು ಅದನ್ನು ಸಂಪೂರ್ಣವಾಗಿ ಹೇಳಲು ಅಸಾಧ್ಯ. ಆದರೂ ಆ ಟೀಕೆಯ ಸೇವೆಗೋಸ್ಕರ ನಾನು ಆ ಟೀಕೆಯಲ್ಲಿ ಹೇಳಿದ ಕ್ರಮವನ್ನು ಮಾತ್ರ ವಿಸ್ತಾರವಾಗಿ ತಿಳಿಸುತ್ತೇನೆ.

## ಮನಸಾ ಹರಿಸಂಗಮವನ್ನು ಪಡೆದವರೇ ಧನ್ಯರು

ಯೇನ ಕೇನ ಮಿಷೇಣಾಪಿ ಮನಸಾ ಹರಿಸಂಗಮಮ್ ।
ಧನ್ಯಾಃ ಸಕಲಸಚ್ಛಾಸ್ತ್ರಸಾರಂಮನ್ಯಾ ಮಹೀತಲೇ ॥

ಯಾವುದಾದರೊಂದು ನೆಪದಿಂದಲಾದರೂ ಮನಸ್ಸಿನಿಂದ ಹರಿಯ ಸಂಗಮವನ್ನು ಪಡೆದವರೇ ಭೂತಲದಲ್ಲಿ ಧನ್ಯರು. ಹಾಗೂ ಸಕಲಸಚ್ಛಾಸ್ತ್ರವನ್ನು ತಿಳಿದವರಾಗುವವರು. ಅಥವಾ ಸಕಲ-

ಸಚ್ಛಾಸ್ತ್ರಗಳ ಸಾರವನ್ನು ತಿಳಿದವರು 'ಭೂಮಿಯಲ್ಲಿ ಯಾರು ಯಾವುದಾದರೊಂದು ನೆಪದಿಂದಲಾದರೂ ಮನಸ್ಸಿನಿಂದ ಹರಿಸಂಗಮವನ್ನು ಪಡೆದವರು ಧನ್ಯರು' ಎಂದು ಹೇಳುತ್ತಾರೆ.

## ಶ್ರೀಮನ್ನ್ಯಾಯಸುಧಾ ಮಹೇಂದ್ರತನುಸಂಭವಾ

ಸುರೇಂದ್ರಮುಖನಂದಿನೀಂ ದಿತಿಸುತೇಂದ್ರದಿಗ್ಲಾಪಿನೀಂ
ಮಹೇಂದ್ರತನುಸಂಭವಾಮಥ ಮಹೇಂದ್ರಗೋತ್ರೋದ್ಭವಾಮ್ ।
ದಯಾಲುಹರಿದಾಪಿತಾಂ ದುರಿತದಾವಜಹ್ವಾಯಿತಾಂ
ಸುಧಾಮವನಿದೇವತಾಃ ಪಿಬತ ಪಾನಪಾತ್ರಾಗತಾಮ್ ॥

ಹೇ ಭೂಸುರರೇ! ಪಾನಪಾತ್ರೆಯಲ್ಲಿ ಬಂದ ಈ ಸುಧೆಯನ್ನು ಕುಡಿಯಿರಿ. ಈ ನ್ಯಾಯಸುಧೆಯು ಇಂದ್ರಾದಿ ದೇವತೆಗಳಿಗೆ ಸಂತೋಷಪ್ರದ. ದೈತ್ಯಶ್ರೇಷ್ಠರಿಗೆ ದಿಕ್ಕು ದಿಕ್ಕುಗಳಿಗೆ ಓಡುವಂತೆ ಮಾಡುವುದು. ಇಂದ್ರನ ದೇಹದಿಂದ ಹುಟ್ಟಿದೆ. ಹಾಗೂ ಮಹೇಂದ್ರನ ವಂಶದಲ್ಲಿ ಬಂದವರಿಂದ ಅಭಿವ್ಯಕ್ತವಾಗಿದೆ. ಈ ಸುಧೆಯು ಕಾರುಣ್ಯಮೂರ್ತಿಯಾದ ಹರಿಗೆ ನೀಡಲ್ಪಟ್ಟಿದೆ. ಅರ್ಥಾತ್ ಇಡೀ ಸುಧೆಯು ಹರಿಯನ್ನೇ ಕೊಂಡಾಡುತ್ತಿದೆ. ಇನ್ನು ಈ ಸುಧೆಯು ಪಾಪಗಳಿಗೆ ಕಾಡ್ಗಿಚ್ಚಿನ ಕೆನ್ನಾಲಿಗೆಯಂತಿದೆ.

## ಭಾರತಭೂಮಿಯಲ್ಲಿರುವ ಅಧಿಕಾರಿಗಳಿಗೆ ರಸರಂಜನೀ ಅಭೀಷ್ಟಪ್ರದ

ಭಾರತಭುವಿ ಜನ್ಮವತಾಂ ಭವತರಣಕರಣಹರಿಪದಮನುಸರತಾಮ್ ।
ಭೂಯಾಚ್ಛ್ರೀನ್ಯಾಯಸುಧಾರಸರಂಜನೀ ತನ್ಮಾನಸದಾ ॥

ಸಂಸಾರಸಾಗರವನ್ನು ದಾಟಿಸುವುದಕ್ಕೆ ಸಾಧನವಾದ ಹರಿಯ ಪಾದಗಳನ್ನು ಅನುಸರಿಸುತ್ತಿರುವ ಭಾರತಭೂಮಿಯಲ್ಲಿ ಹುಟ್ಟಿದವರಿಗೆ ನ್ಯಾಯಸುಧಾರಸರಂಜನಿಯು ಅವರವರ ಮನಸ್ಸನಲ್ಲಿರುವ ಅಭೀಷ್ಟಗಳನ್ನು ದೊರೆಯುವಂತೆ ಮಾಡಲಿ.

## ಭೂಸುರರು ನನ್ನ ಮಾತನ್ನು ಧರಿಸಲೇಬೇಕು

ದೋಷೇಣಾಪಿ ಮದೀಯಾ ವಾಗ್ಧಾರ್ಯೈವ ಧರಣೀಸುರೈಃ ।
ಶ್ಲಾಘ್ಯತೇ ಗುಣಲುಬ್ಧೈಃ ಯತ್ಕಂಟಕೇತಾಪಿ ಕೇತಕೀ ॥

ದೋಷಗಳಿದ್ದರೂ ನನ್ನ ಮಾತನ್ನು ಭೂಸುರರಾದ ಬ್ರಾಹ್ಮಣರು ಧರಿಸಲೇ ಬೇಕು. ಏಕೆಂದರೆ ಗುಣಗಳಲ್ಲಿ ಲೋಭ ಹೊಂದಿದವರು ಮುಳ್ಳಿದ್ದರೂ ಕೇದಿಗೆ ಪುಷ್ಪವನ್ನು ಸ್ವೀಕರಿಸುವರು. ಅದರಂತೆ ದೋಷಗಳೆಂಬ ಮುಳ್ಳಿದ್ದರೂ ಇದನ್ನು ಸ್ವೀಕರಿಸಬೇಕು.

## ಬಾಂಧವರು ನನ್ನ ಕೃತಿಯಲ್ಲಿ ಸಂತೋಷ ಹೊಂದುತ್ತಾರೆ

ನಂದತೀರ್ಥಪ್ರಬಂಧಾಖ್ಯಸುಧಾಸಿಂಧುವಿಹಾರಿಣಃ ।
ಬಾಂಧವಾ ಮತ್ಕೃತೌ ತೋಷಂ ಯಾಂತ್ಯೇವಾಂತರಚಿಂತಕಾಃ ॥

ಆನಂದತೀರ್ಥರ ಪ್ರಬಂಧವೆಂಬ ಸುಧಾಸಮುದ್ರದಲ್ಲಿ ವಿಹರಿಸುವ ಬಂಧುಗಳು ಎಲ್ಲರ ಹೃದಯದಲ್ಲಿರುವ ಭಗವಂತನಲ್ಲೇ ಚಿಂತಿಸುವವರು ನನ್ನ ಕೃತಿಯಲ್ಲಿ ಸಂತೋಷವನ್ನು ಹೊಂದೇ ಹೊಂದುತ್ತಾರೆ.

## ದುರ್ಬಲರು ನನ್ನನ್ನು ನಿಂದಿಸಲು ಸಾಧ್ಯವೇ?

ಸುಪುಣ್ಯೇ ಭಾರತೇಽರಣ್ಯೇ ಯೇ ವಿಜ್ಞಾನವಿವರ್ಜಿತಾಃ ।
ದುಃಶಾಸ್ತ್ರದೂಷಿತಾತ್ಮಾನಃ ಕಿಂ ಮಾಂ ನಿಂದಂತಿ ದುರ್ಬಲಾಃ ॥

ಪುಣ್ಯಪ್ರದವಾದ ಭಾರತವೆಂಬ ಕಾಡಿನಲ್ಲಿ ಯಾವ ವ್ಯಕ್ತಿಗಳು ಸಚ್ಛಾಸ್ತ್ರಜ್ಞಾನರಹಿತರಾಗಿದ್ದು ದುಃಶಾಸ್ತ್ರಗಳಿಂದ ಕೆಟ್ಟ ಅಂತಃಕರಣವುಳ್ಳವರಾಗಿ ದುರ್ಬಲರಾಗಿದ್ದಾರೋ ಅಂತಹವರು ನನ್ನನ್ನು ನಿಂದಿಸುವರೇ?

## ಷೋಡಶಭಾಗವತೀಪೂಜಾ

ಟೀಕಾಕೃದ್ವರಜಶ್ರೀಹರಿದಾಸೇಷ್ಟಜಯತೀರ್ಥಕೃತಿರೂಪಾ ।
ಷೋಡಶಭಾಗವತೀಯಂ ಪೂಜಾ ಪ್ರೀತ್ಯೈ ಹರೇರ್ಭೂಯಾತ್ ॥

ಟೀಕಾಚಾರ್ಯರ ಪ್ರಸಾದದಿಂದ ಉಂಟಾದ ಹರಿದಾಸರಿಗೆ ಇಷ್ಟವಾದ ಜಯತೀರ್ಥನ (ವಿಷ್ಣು-ತೀರ್ಥರ ಪೂರ್ವಾಶ್ರಮದ ಹೆಸರು) ಕೃತಿಯಾದ ರಸರಂಜನಿಯು ಷೋಡಶೋಪಚಾರಪೂಜೆ-ಯಾಗಿ ಹರಿಯ ಪ್ರೀತಿಗೆ ಕಾರಣವಾಗಲಿ.

## ನಾರಾಯಣಪದದ ವಿವರಣೆಯೇ ನಿಖಿಲಪೂರ್ಣ ಮುಂತಾದ ಆರುವಿಶೇಷಣಗಳು

ನನು ಯದುಕ್ತಂ ಬ್ರಹ್ಮಪದವಿವರಣರೂಪಂ ನಾರಾಯಣಪದಂ ತದ್ವಿವರಣರೂಪಂ ಚ 'ನಿಖಿಲ' ಇತ್ಯಾದಿವಿಶೇಷಣಷಟ್ಕಮಿತಿ, ತತ್ರಾಸ್ತು ನಾರಾಯಣಪದವಿವರಣರೂಪಂ 'ನಿಖಿಲೇ'ತ್ಯಾದಿ-ವಿಶೇಷಣಷಟ್ಕಮಿತಿ । ಅರಾಃ ದೋಷಾಃ ತದ್ವಿರುದ್ಧತ್ವಾತ್ ಗುಣಾ = ನಾರಾಃ ತದಯನತ್ವಾತ್ ನಾರಾಯಣಃ । ಅರಾಣಾಮ್ ಅಯನಂ ನ ಭವತೀತಿ ವಾ । ಉಪಕಾರಿತ್ವಾದಿನಾ ನರಾಣಾಮಿಮೇ ನಾರಾಃ = ವೇದಾದಯಃ ಪ್ರತಿಪಾದ್ಯತಯಾ ತದಯನತ್ವಾದ್ವಾ । ನರಾಣಾಮಿದಂ ನಾರಮ್ = ಉದ್ಧವಾದಿ, ದಾತೃತಯಾ ತದಯನತ್ವಾದ್ವಾ । ನರಸಮೂಹಃ = ನಾರಂ, ವಂದ್ಯತಯಾ ತದಯನ-

ತ್ವಾದ್ವಾ । ನರಾಣಾಮಯಮಧಿಪತಿರ್ನಾರಃ = ಮುಖ್ಯವಾಯುಃ ಪರಮಪ್ರೇಮಾಸ್ಪದತಯಾ ತದ-ಯನತ್ವಾದ್ವೇತಿ ವಕ್ಷ್ಯಮಾಣದಿಶಾ ನಾರಾಯಣಪದಸ್ಯ ನಿರ್ವಕ್ತುಂ ಶಕ್ಯತ್ವಾತ್ ।

ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ – ಬ್ರಹ್ಮ-ಪದದ ವಿವರಣೆಯನ್ನು ಮಾಡಲು ನಾರಾಯಣಪದವಿದೆ. ನಾರಾಯಣಪದದ ವಿವರಣೆಯನ್ನು ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಮೋದ್ಧವಾದಿದಂ, ಆಪ್ತತಮಮಪ್ತಖಿಲೈಃ ಸುವಾಕ್ಯೈಃ, ಅಶೇಷವಿಶೇಷತೋಽಪಿ ವಂದ್ಯಂ, ಸದಾ ಪ್ರಿಯತಮಂ ಎಂಬ ಆರು ವಿಶೇಷಣಗಳು ನೀಡುತ್ತವೆ ಎಂದು ಹೇಳಿದ್ದಾರೆ. ಈಗ ತಾನೆ ಹೇಳಿದ ಎರಡು ಪಕ್ಷಗಳಲ್ಲಿ ನಾರಾಯಣಪದದ ವಿವರಣೆಯನ್ನು 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ಆರು ವಿಶೇಷಣಗಳು ನೀಡುತ್ತವೆ ಎಂದದ್ದು ಸರಿ. ಏಕೆಂದರೆ ನಾರಾಯಣಪದದ ಅರ್ಥಗಳಿವು ಎಂದು ವಿವರಿಸಿಬಹುದಾದ್ದರಿಂದ.

ಅರಾ ಎಂದರೆ ದೋಷಗಳು ಅದಕ್ಕೆ ವಿರುದ್ಧವಾದದ್ದು ಗುಣಗಳು ಅವುಗಳೇ ನಾರಾಃ ಎನಿಸುತ್ತವೆ. ನಾರಾಃ ಎಂಬ ಪದದ ಅರ್ಥವಾದ ಗುಣಗಳಿಗೆ ಅಯನ ಅಂದರೆ ಆಶ್ರಯನು ನಾರಾಯಣನು ಎಂದು.

ಅಥವಾ ಅರಾ ಎಂದರೆ ದೋಷಗಳು ಅವುಗಳಿಗೆ ಆಶ್ರಯನಲ್ಲ ಆದ್ದರಿಂದ ನಾರಾಯಣ ಎನಿಸುತ್ತಾನೆ. ಅಥವಾ ಮನುಷ್ಯರಿಗೆ ಉಪಕಾರಿಯಾದ ವೇದಗಳು ನಾರಾಃ ಎನಿಸುತ್ತವೆ. ನರಸಂಬಂಧಿ-ಯಾಗಿರುವುದರಿಂದ. ಅಂತಹ ವೇದಗಳಿಂದ ಪ್ರತಿಪಾದ್ಯನಾಗುವ ಮೂಲಕ ಆಶ್ರಯನಾದ್ದರಿಂದ ನಾರಾಯಣ ಆಗಿದ್ದಾನೆ.

ಅಥವಾ ನರರಿಗೆ ಸಂಬಂಧಪಟ್ಟದ್ದು ನಾರ. ಅಂದರೆ ಉದ್ಭವ ಸ್ಥಿತಿ ಮೊದಲಾದವುಗಳು. ಅವು-ಗಳನ್ನು ಕೊಡುವ ಮೂಲಕ ಆಶ್ರಯನಾದ್ದರಿಂದ ನಾರಾಯಣನಾಗಿದ್ದಾನೆ. ಅಥವಾ ಮನುಷ್ಯರ ಸಮೂಹವೇ ನಾರ ಎನಿಸುತ್ತದೆ. ಇದಕ್ಕೆ ವಂದ್ಯನಾಗುವ ಮೂಲಕ ಆಶ್ರಯನಾದ್ದರಿಂದ ನಾರಾಯಣ ಎನಿಸಿದ್ದಾನೆ.

ಅಥವಾ ಮನುಷ್ಯರಿಗೆ ಅಧಿಪತಿಯಾದವರು ನಾರರು. ಅರ್ಥಾತ್ ಮುಖ್ಯಪ್ರಾಣದೇವರು. ಅವರಿಗೆ ಪರಮಪ್ರೇಮಾಸ್ಪದರಾಗುವ ಮೂಲಕ ಆಶ್ರಯನಾದ್ದರಿಂದ ನಾರಾಯಣ ಎಂದು ಮುಂದೆ ಸುಧಾ ಮೂಲದಲ್ಲಿ ಹೇಳುವ ರೀತಿಯಲ್ಲಿ ನಾರಾಯಣಪದವನ್ನು ನಿರ್ವಚನಮಾಡಲು ಸಾಧ್ಯವಿದೆ.

### ಬ್ರಹ್ಮಪದದ ವಿವರಣೆಯು ನಾರಾಯಣಪದವಾದರೆ ಬ್ರಹ್ಮಪದದಿಂದ ನಿರ್ದೋಷತ್ವಾದಿ ಅರ್ಥಲಾಭ ಹೇಗೆ?

(ರಸರಂಜನೀ) – ಬ್ರಹ್ಮಪದವಿವರಣರೂಪಂ ನಾರಾಯಣಪದಮಿತಿ ತು ಕಥಂ ಸಂಭವತಿ?

ಗುಣಪೂರ್ಣತ್ವಾದಿಷಟ್ಕಪ್ರತಿಪಾದನಾಯ ಬ್ರಹ್ಮಪದೇ ನಾರಾಯಣಪದವತ್ ನಿರ್ವಚನಷಟ್ಕಸ್ಯ ಕರ್ತುಮಶಕ್ಯತ್ವಾತ್ । ಅನ್ಯಥಾ ಸಮಾನಾರ್ಥತ್ವಾಭಾವೇನ ವ್ಯಾಖ್ಯಾನವ್ಯಾಖ್ಯೇಯಭಾವಾನುಪಪತ್ತೇಃ । ಸೌತ್ರಬ್ರಹ್ಮಪದವಿವರಣಾಯ ಭಾಷ್ಯೇ ನಾರಾಯಣಪದಸ್ಯ ಭಾಷ್ಯಸ್ಥನಾರಾಯಣಪದ-ವಿವರಣಾಯ ತತ್ವಪ್ರಕಾಶಿಕಾಯಾಂ ಬ್ರಹ್ಮಪದಸ್ಯ ಚ ಪ್ರಯೋಗಾನುಪಪತ್ತೇಶ್ಚೇತಿ ಚೇತ್, ಇತ್ಥಮ್ — ಬ್ರಹ್ಮಶಬ್ದಸ್ಯಾರ್ಥದ್ವಯಮ್ । ಶ್ರೌತ-ಆರ್ಥಿಕಭೇದಾತ್ । ತತ್ರ —

'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ । ತದ್ವಾ ಏತದ್ ಬ್ರಹ್ಮಾಹುಃ ಬೃಂಹತಿ ಬೃಂಹಯತಿ ಚ'

ಇತ್ಯಾದಿಶ್ರೌತನಿರ್ವಚನಬಲೇನ ಬ್ರಹ್ಮಶಬ್ದಸ್ಯ ಸಾಕ್ಷಾತ್ಪ್ರತೀಯಮಾನೋ ಗುಣಪರಿಪೂರ್ಣತ್ವ-ರೂಪಃ ಶ್ರೌತಾರ್ಥಃ । ತಸ್ಮಾದೇವ ಅರ್ಥಾತ್ ಪ್ರತೀಯಮಾನೋ ನಿರ್ದೋಷತಾದಿರೂಪಃ ಆರ್ಥಿಕೋಽರ್ಥಃ । ತತ್ರ ನಾರಾಯಣಪದಂ ನ ಬ್ರಹ್ಮಪದಶ್ರೌತಾರ್ಥಮಾತ್ರಸ್ಯ ವಿವರಣಮ್ ಇತ್ಯಂಗೀಕುರ್ಮೋ ಯೇನ ಉಕ್ತಾನುಪಪತ್ತಿಃ । ಕಿಂತು ಅರ್ಥದ್ವಯಸ್ಯಾಪಿ । ತಥಾಚ ಬ್ರಹ್ಮಪದೇ ಗುಣಪೂರ್ಣತ್ವಾದಿಷಟ್ಕಪ್ರತಿಪಾದನಪರತಯಾ ನಿರ್ವಚನಷಟ್ಕಸ್ಯ ಕರ್ತುಮಶಕ್ಯತ್ವೇಽಪ್ಯುಕ್ತದಿಶಾ ಗುಣಪೂರ್ಣತ್ವಾದಿಧರ್ಮಷಟ್ಕಸ್ಯಾಪಿ ತದರ್ಥತ್ವಾದುಪಪನ್ನಂ ಧರ್ಮಷಟ್ಕಪ್ರತಿಪಾದಕಸ್ಯಾಪಿ ನಾರಾಯಣಪದಸ್ಯ ಬ್ರಹ್ಮಪದವಿವರಣರೂಪತ್ವಂ ಸಮಾನಾರ್ಥತ್ವಾದಿತಿ ।

ಆದರೆ ಬ್ರಹ್ಮಪದದ ವಿವರಣೆಯಾಗಿದೆ ನಾರಾಯಣಪದ ಎಂಬುದು ಹೇಗೆ ಸಾಧ್ಯ? ಅಸಾಧ್ಯವೆಂದು ಭಾವ. ಏಕೆಂದರೆ, ನಾರಾಯಣಪದವು ಆರು ಅರ್ಥಗಳನ್ನು ತಿಳಿಸಲು ನಿರ್ವಚನ ಮಾಡಲು ಹೇಗೆ ಬರುವುದೋ, ಅದೇ ರೀತಿ ಬ್ರಹ್ಮಶಬ್ದದಿಂದ ಗುಣಪೂರ್ಣತ್ವಾದಿ ಆರುಧರ್ಮಗಳನ್ನು ಹೇಳಲು ಅಸಾಧ್ಯ. ಬ್ರಹ್ಮಶಬ್ದದ ಅಷ್ಟೂ ನಿರ್ವಚನವನ್ನು ತೋರಿಸಲು ಆಗದೇ ಇರುವುದರಿಂದ. ಆಯ್ತು, ಬೇಡ ಎನ್ನಲು ಬರುವುದಿಲ್ಲ. ಆಗ ಬ್ರಹ್ಮನಾರಾಯಣಶಬ್ದಗಳು ಸಮಾನಾರ್ಥಕವಾಗದೇ ಇರುವುದರಿಂದ ಎರಡಕ್ಕೂ ವ್ಯಾಖ್ಯಾನವ್ಯಾಖ್ಯೇಯಭಾವವು ಕೂಡದೇ ಇರಬೇಕಾದೀತು. ಬ್ರಹ್ಮಶಬ್ದವು ವ್ಯಾಖ್ಯೇಯ. ನಾರಾಯಣಶಬ್ದವು ಅದರ ವ್ಯಾಖ್ಯಾನರೂಪವಾಗಿದೆ. ಸೂತ್ರದಲ್ಲಿರುವ ಬ್ರಹ್ಮಪದವನ್ನು ವಿವರಣೆ ಮಾಡಲು ಭಾಷ್ಯದಲ್ಲಿ 'ನಾರಾಯಣಂ ಗುಣೈಃ ಸರ್ವೈಃ' ಎಂದು ನಾರಾಯಣ ಎಂಬ ಪದವನ್ನು ಪ್ರಯೋಗಮಾಡಿದ್ದಾರೆ. ಹಾಗೆ ಭಾಷ್ಯದಲ್ಲಿರುವ ನಾರಾಯಣಪದ-ವನ್ನು ವಿವರಣೆ ಮಾಡಲು ತತ್ವಪ್ರಕಾಶಿಕಾದಲ್ಲಿ ಬ್ರಹ್ಮಪದವನ್ನು ಪ್ರಯೋಗಿಸಿದ್ದಾರೆ. ಇದು ಹೇಗೆ?

ಉತ್ತರ — ಬ್ರಹ್ಮಶಬ್ದಕ್ಕೆ ಎರಡರ್ಥಗಳಿವೆ. ಶ್ರೌತಾರ್ಥ ಮತ್ತು ಆರ್ಥಿಕಾರ್ಥ ಎಂದು. ಶ್ರೌತಾರ್ಥವೆಂದರೆ ಬ್ರಹ್ಮಶಬ್ದದಿಂದ ಸಾಕ್ಷಾತ್ತಾಗಿ ತೋರುವ ಅರ್ಥ. ಅರ್ಥಾತ್ ಗುಣಪರಿ-

ಪೂರ್ಣತ್ವ. ಇದಕ್ಕೆ ಪ್ರಮಾಣವಾಗಿ ಶ್ರುತಿಯಲ್ಲಿ ಹೀಗೆ ಬ್ರಹ್ಮಶಬ್ದ ನಿರ್ವಚನವನ್ನು ತೋರಿಸಿದ್ದಾರೆ - "ಯಾವ ಕಾರಣಕ್ಕಾಗಿ ಬ್ರಹ್ಮ ಎಂದು ಹೇಳುತ್ತಾರೆ ಎಂದರೆ ಈ ಪರಮಾತ್ಮನಲ್ಲಿ ಬಹಳವಾದ ಗುಣಗಳಿವೆ, ಅವುಗಳು ಪೂರ್ಣವಾಗಿವೆ. ಈ ಕಾರಣದಿಂದಲೇ ಬ್ರಹ್ಮ ಎನ್ನುವರು" ಎಂದು. ಈ ಶ್ರೌತಾರ್ಥವಾದ ಗುಣಪೂರ್ಣತ್ವದಿಂದಲೇ ನಿರ್ದೋಷತ್ವದ ಲಾಭವೂ ಅರ್ಥಾತ್ ಸಿದ್ಧವಾಗುವುದು. ಹೀಗೆ ನಾರಾಯಣಪದವು ಕೇವಲ ಬ್ರಹ್ಮಪದದ ಶ್ರೌತಾರ್ಥಕ್ಕೆ ವಿವರಣೆ-ಯಾಗದೇ ಆರ್ಥಿಕಾರ್ಥವನ್ನೂ ಸೇರಿಸಿ ವಿವರಣರೂಪವಾಗಿದೆ ಎಂದೊಪ್ಪುತ್ತೇವೆ. ಹಾಗಾಗಿ ಆರೂ ಅರ್ಥಗಳನ್ನು ಪ್ರತಿಪಾದನೆ ಮಾಡುವ ನಿರ್ವಚನವನ್ನು ಬ್ರಹ್ಮಪದಕ್ಕೆ ತೋರಿಸಲು ಬರದಿದ್ದರೂ ಬ್ರಹ್ಮಶಬ್ದದ ಶ್ರೌತ ಆರ್ಥಿಕಾರ್ಥಗಳಲ್ಲಿ ಆ ಆರೂ ಸೇರಿದ್ದರಿಂದ ನಾರಾಯಣಪದವು ಬ್ರಹ್ಮಪದದ ವಿವರಣೆಯೇ, ಸಮಾನಾರ್ಥಕವಾದ್ದರಿಂದ ಎಂದು ಹೇಳಿದ್ದು ಸರಿಯಾಗಿಯೇ ಇದೆ.

## ಶಾಂಡಿಲ್ಯೋಪನಿಷತ್ತಿನಲ್ಲಿ ಬ್ರಹ್ಮನ ಬಗ್ಗೆ

अथ हैनमथर्वाणं शाण्डिल्यः पप्रच्छ भगवन्सन्मात्रं चिदानन्दैकरसं कस्मादुच्यते परं ब्रह्मेति । स होवाचाथर्वा यस्माच बृहति बृंहयति च सर्वं तस्मादुच्यते परब्रह्मेति ॥

(शाण्डिल्योनिषद् 3-1)

– ಅಥರ್ವರನ್ನು ಕುರಿತು ಶಾಂಡಿಲ್ಯರು ಕೇಳಿದರು – ಪೂಜ್ಯರೇ। ಜ್ಞಾನಾನಂದಸ್ವರೂಪಿಯಾದ ಸತ್ಯರೂಪನಾದ ಆ ಭಗವಂತನನ್ನು ಯಾವಕಾರಣದಿಂದ ಪರಬ್ರಹ್ಮ ಎನ್ನುತ್ತಾರೆ - ಎಂದು. ಅದಕ್ಕೆ ಅಥರ್ವರು ಹೇಳಿದರು - ಯಾವ ಕಾರಣದಿಂದ ಎಲ್ಲ ಗುಣಗಳು ಅವನಲ್ಲಿ ಪೂರ್ಣವಾಗಿದೆಯೋ, ಹಾಗೇ ಎಲ್ಲ ಗುಣಗಳನ್ನು ಪೂರ್ಣವಾಗಿರುವಂತೆ ಇವನು ಸೇರಿಸಿಕೊಳ್ಳುತ್ತಾನೋ ಆ ಕಾರಣದಿಂದ ಪರಬ್ರಹ್ಮನೆನ್ನುತ್ತಾರೆ.

## ನಿರ್ದೋಷತ್ವಾದಿಗಳು ಬ್ರಹ್ಮಪದದ ಆರ್ಥಿಕಾರ್ಥ

(ರಸರಂಜನೀ) – ನನು ತಥಾಪಿ ಬ್ರಹ್ಮಪದಸ್ಯ ನಿರ್ದೋಷತ್ವಾದಿಃ ಕಥಮಾರ್ಥಿಕೋಽರ್ಥಃ। ತೇನ ತಲ್ಲಾಭಪ್ರಕಾರಾದರ್ಶನಾತ್ ಇತ್ಯಾಶಂಕ್ಯ ಶ್ರೌತನಿರ್ವಚನಬಲೇನ ಗುಣಪೂರ್ಣತ್ವಂ ತಾವದ್ ಬ್ರಹ್ಮಶಬ್ದಸ್ಯ ಶ್ರೌತೋಽರ್ಥ ಇತ್ಯವಿವಾದಮ್ । ಗುಣಪೂರ್ಣತ್ವಂ ಚ ಯಾವದ್ಗುಣ-ವತ್ವಮ್ । ಯಾವದ್ಗುಣಜ್ಞಾನಂ ಚ ತದ್ಘಟಕಾವಾಂತರಗುಣಜ್ಞಾನಂ ಚ ವಿನಾ ನ ಸಂಭವತೀತಿ ಅರ್ಥಾತ್ 'ಆಪ್ಯತಮಮ್' ಇತ್ಯಾದಿ। ಪ್ರತಿಪಾದ್ಯಗುಣಾಂತರಾಣಾಂ ಲಾಭಪ್ರಕಾರಂ ಸುಗಮತ್ವಾತ್ ಶಿಷ್ಯಾ ಏವ ಜಾನಂತೀತ್ಯಾಶಯೇನ ದುರ್ಗಮತ್ವಾತ್ ಅತ್ರ ಭಾಷ್ಯಕಾರೇಣ ನಾರಾಯಣಪದೇನೈವ ಸೂಚಿತಮನ್ಯತ್ರ 'ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ' ಇತಿ ಸ್ಪಷ್ಟಮುಕ್ತಂ ಬ್ರಹ್ಮಪದೇನ

ನಿರ್ದೋಷತ್ವಸ್ಯಾರ್ಥಾಲ್ಲಾಭಪ್ರಕಾರಮೇವ ದೃಷ್ಟಾಂತಮಾಹ – ನಿತ್ಯೇತ್ಯಾದಿನಾ ॥ ಅಗಣಿತಾ ಯೇ ಗುಣಾಃ, ತ ಏವ ಮಾಣಿಕ್ಯಾನಿ, ತೇಷಾಂ ಯಾ ವಿಶದಾಃ ಸ್ಪಷ್ಟಾಃ ಪ್ರಭಾಃ ತಾಸಾಂ ಯಾನಿ ಜಾಲಾನಿ = ಸಂದೋಹಾಃ ತೇಷಾಮ್ ಉಲ್ಲಾಸೈಃ = ವಿಲಾಸೈರುಪಹತಾನಿ ಸಕಲಾವದ್ಯತಮಾಂಸಿ ಯಸ್ಮಿನ್ ಸ ತಥೋಕ್ತಃ, ತಸ್ಮೈ । ಅಸ್ಯ ಸಂಕ್ಷೇಪವ್ಯಾಖ್ಯಾನತ್ವಾತ್ ಸಂಗೃಹ್ಯ 'ನಿಖಿಲೇ'ತಿ 'ಪೂರ್ಣೇ'ತಿ ಚ ಪದದ್ವಯಾರ್ಥಾನುವಾದಃ — **ಅಗಣಿತೇತಿ** ॥

ಅಲ್ಲ; ಹಾಗಿದ್ದರೂ ಬ್ರಹ್ಮಪದಕ್ಕೆ 'ನಿರ್ದೋಷತ್ವ, ಅಖಿಲೈರಪಿ ಸುವಾಕ್ಯೈಃ ಆಪ್ಯತಮತ್ವ' ಮೊದಲಾದವುಗಳು ಆರ್ಥಿಕಾರ್ಥವಾಗುವುದು ಹೇಗೆ? ಒಂದುವೇಳೆ ಆರ್ಥಿಕಾರ್ಥಗಳಾಗಿದ್ದರೆ ಆ ಕ್ರಮವನ್ನು ತೋರಿಸಬೇಕಾಗಿತ್ತು. ಆದರೆ ತೋರಿಸಿಲ್ಲ ಎಂದಾಕ್ಷೇಪ.

ಉತ್ತರ - ಶ್ರುತಿಯಲ್ಲಿ ಹೇಳಿದ ನಿರ್ವಚನದಿಂದ ಗುಣಪೂರ್ಣತ್ವವಂತೂ ಬ್ರಹ್ಮಶಬ್ದದ ಶ್ರೌತಾರ್ಥ ಎಂಬ ವಿಷಯದಲ್ಲಿ ವಿವಾದವಿಲ್ಲ. ಗುಣಪೂರ್ಣತ್ವವೆಂದರೆ ಯಾವದ್ಗುಣವತ್ವಂ ಎಂದು. ಸಕಲ-ಗುಣಗಳೂ ಇವೆ ಎಂದು ಭಾವ. ಸಕಲಗುಣಗಳ ಜ್ಞಾನವಾದರೋ ಸಕಲಗುಣಗಳಲ್ಲಿ ಸೇರಿರುವ ಅವಾಂತರಗುಣಗಳ ಜ್ಞಾನವಿಲ್ಲದೆಯೇ ಆಗುವುದಿಲ್ಲವಾದ್ದರಿಂದ 'ಅಖಿಲೈರಪಿ ಸುವಾಕ್ಯೈಃ ಆಪ್ಯತಮತ್ವ, ಅಸ್ಯೋದ್ಭವಾದಿದತ್ವ' ಮೊದಲಾದ ಅವಾಂತರ ಗುಣಗಳ ಜ್ಞಾನವೂ ಅರ್ಥಾತ್ ಸಿದ್ಧವೇ. ಈ ರೀತಿ ಬ್ರಹ್ಮಪದದಿಂದ ಬೇರೆ ಎಲ್ಲ ಗುಣಗಳ ಲಾಭವು ಸುಲಭವಾದ್ದರಿಂದ ಶಿಷ್ಯರೇ ತಿಳಿಯುತ್ತಾರೆ ಎಂಬ ಅಭಿಪ್ರಾಯದಿಂದ ಭಾಷ್ಯಕಾರರು ಕೇವಲ "ನಾರಾಯಣ"ಪದದಿಂದಲೇ ಇವೆಲ್ಲವೂ ಸೂಚಿತ ಎಂದು ತಿಳಿಸಿ ಬೇರೆ ಕಡೆ 'ಪ್ರಚ್ಯುತೋಽಶೇಷದೋಷೈಃ ಸದಾಪೂರ್ತಿತಃ' (ದ್ವಾದಶಸ್ತೋತ್ರ 7-8) ಎಂದು ಸ್ಪಷ್ಟವಾಗಿ ನಿತ್ಯ ಸಕಲಗುಣಪರಿಪೂರ್ಣನಾದ್ದರಿಂದ ದೋಷ-ಗಳಿಲ್ಲದಿರುವವನು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದ್ದರಿಂದ ಬ್ರಹ್ಮಪದದಿಂದ ನಿರ್ದೋಷತ್ವ-ರೂಪದ ಅರ್ಥದ ಲಾಭವು ಅರ್ಥಾತ್ ಸಿಗುವುದು ಎಂಬ ಅಂಶವನ್ನೇ ದೃಷ್ಟಾಂತಕೊಟ್ಟು ತಿಳಿಸಿದ್ದಾರೆ - ನಿತ್ಯಾನಿತ್ಯಗುಣಮಾಣಿಕ್ಯ ಇತ್ಯಾದಿಯಾಗಿ. ಆದ್ದರಿಂದ ಬ್ರಹ್ಮಶಬ್ದದಿಂದ ಆರೂ ಅರ್ಥಗಳು ಶ್ರೌತಾರ್ಥವಾಗಿಯೋ ಅಥವಾ ಆರ್ಥಿಕಾರ್ಥವಾಗಿಯೋ ಸಿಗುತ್ತವೆ. ಹೀಗೆ ಬ್ರಹ್ಮ-ಶಬ್ದದ ಆರೂ ಅರ್ಥಗಳನ್ನು ನಾರಾಯಣಶಬ್ದವು ವಿವರಣೆ ಮಾಡುತ್ತಿದೆ ಎಂದು ಹಿಂದೆ ಹೇಳಿದ್ದು ಸರಿಯಾಗಿಯೇ ಇದೆ.

## ನಾರಾಯಣನ ವಿಶೇಷಣಗಳೆಲ್ಲವೂ ಹರಿಗೂ ಸಲ್ಲುತ್ತವೆ

(ಪರಿಮಳ)- ಯದ್ವಾ ಮೂಲೇ 'ತಮೇವ' ಇತಿ ಶ್ಲೋಕೇ ವ್ಯಾಸಗುರೋಃ ನಾರಾಯಣೈಕ್ಯ-ಮುಚ್ಯತೇ । 'ಪ್ರಾದುರ್ಭೂತೋ ಹರಿರ್ವ್ಯಾಸಃ' ಇತಿ ಶ್ಲೋಕೇ ಹರ್ಯೈಕ್ಯಮ್ । ತತ್ ಕಥಮ್?

ಇತ್ಯತಃ 'ತಾವೇಕ ಏವ' ಇತಿ ಜ್ಞಾಪನಾಯ ಮೂಲೋಕ್ತನಾರಾಯಣವಿಶೇಷಣಾನ್ಯೇವ ಉಕ್ತ್ವಾ **'ಹರಯೇ'** ಇತಿ ವಿಶೇಷ್ಯಮುಕ್ತಮ್ ।

'ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ (ಕೀರ್ತಿತಾನಿ ನ ಸಂಶಯಃ ॥)'

ಇತಿ ಸ್ಮೃತಿಸೂಚನಾಯ 'ಹರಿ'ಪದಪ್ರಯೋಗ ಇತ್ಯೇಕೇ । ಅನೇನ ಹರೇರ್ನಾರಾಯಣಾನನ್ಯತ್ವ-ಪ್ರತೀತ್ಯಾ 'ಪ್ರಾದುರ್ಭೂತೋ ಹರಿರ್ವ್ಯಾಸಃ' ಇತಿ ವ್ಯಾಸಸ್ಯ ಹರ್ಯವತಾರತ್ವೋಕ್ತೇಃ ನಾರಾಯಣಾವತಾರತ್ವಾತ್ 'ತಮೇವ' ಇತಿ ತದಭೇದೋಕ್ತಿರಯುಕ್ತಾ ಇತಿ ಶಂಕಾನವಕಾಶ ಇತಿ ।

ಅಥವಾ ಹರಿ ಎಂಬ ಪದದ ಸಾರ್ಥಕ್ಯವು ಇನ್ನೊಂದು ರೀತಿಯಲ್ಲೂ ಕಾಣಬಹುದು. ಅದು ಹೀಗೆ – 'ತಮೇವ ಶಾಸ್ತ್ರಪ್ರಭವಂ' ಎಂಬ ಅನುವ್ಯಾಖ್ಯಾನದಲ್ಲಿ ವೇದವ್ಯಾಸರಿಗೂ ನಾರಾಯಣನಿಗೂ ಅಭೇದವನ್ನು ಹೇಳಿದ್ದಾರೆ. ಇನ್ನು 'ಪ್ರಾದುರ್ಭೂತೋ ಹರಿರ್ವ್ಯಾಸಃ' ಎಂಬ ಅನುವ್ಯಾಖ್ಯಾನದಲ್ಲಿ ಹರಿಯೊಂದಿಗೆ ವೇದವ್ಯಾಸರಿಗೆ ಐಕ್ಯವನ್ನು ಹೇಳಿದ್ದಾರೆ.

ಇದು ಹೇಗೆ ಸಾಧ್ಯ? ಹರಿಯೂ ನಾರಾಯಣನೂ ಭಿನ್ನರಲ್ಲವೇ ಎಂದರೆ ಇಲ್ಲ. ಅವರಿಬ್ಬರೂ ಒಬ್ಬರೇ ಎಂದು ತಿಳಿಸಲು ಅನುವ್ಯಾಖ್ಯಾನದ 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂಬ ಪದ್ಯದಲ್ಲಿ ನಾರಾಯಣನಿಗೆ ಯಾವ ಯಾವ ವಿಶೇಷಣಗಳನ್ನು ನೀಡಿದ್ದಾರೋ ಅವೆಲ್ಲವನ್ನೂ ನ್ಯಾಯಸುಧಾದ ಮಂಗಳಪದ್ಯದಲ್ಲಿ ಹರಿಗೂ ನೀಡಿದ್ದಾರೆ. ಹೀಗಾಗಿ ಹರಿಯೂ ನಾರಾಯಣನೂ ಒಬ್ಬನೇ ಎಂದು. ಅದಕ್ಕಾಗಿ 'ಹರಯೇ' ಎಂದು ವಿಶೇಷ್ಯಪದವಿದೆ.

'ವೇದಾಧಿಕಾರಿಗಳು ಪಠಿಸುವ ವೇದಮಂತ್ರದ ಅಕ್ಷರಗಳು ಎಷ್ಟಿವೆಯೋ ಅವೆಲ್ಲವೂ ಹರಿಯ ನಾಮಗಳೇ' ಎಂದು ಹರಿಪದವಿರುವ ಸ್ಮೃತಿಯಿದೆ (ನಾರಾಯಣೋತ್ತರತಾಪನೀಯೋಪನಿಷತ್ತು ಖಂಡ.3; ಆಥರ್ವಣರಹಸ್ಯೇ).

ಆ ಸ್ಮೃತಿಯನ್ನು ನೆನೆಪಿಸಲೆಂದೇ ಇಲ್ಲಿ ಹರಿ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಈ ದೃಷ್ಟಿಯಲ್ಲಿಯೂ ನಾರಾಯಣನೂ ಹರಿಯೂ ಒಂದೇ ಎಂದು ಸಿದ್ಧ - ಎಂದು ಕೆಲವರು ಹೇಳುತ್ತಾರೆ.

ಇದರಿಂದ ಹರಿಯು ನಾರಾಯಣನೇ ಎಂದು ತೋರಿದ್ದರಿಂದ 'ಪ್ರಾದುರ್ಭೂತೋ ಹರಿರ್ವ್ಯಾಸಃ' ಎಂಬಲ್ಲಿ ವೇದವ್ಯಾಸರು ಹರಿಯ ಅವತಾರ ಎಂದು ಹೇಳಿದ್ದರಿಂದ, ಅವರು ನಾರಾಯಣನ ಅವತಾರವಲ್ಲ; ಹಾಗಾಗಿ ನಾರಾಯಣನೂ ವೇದವ್ಯಾಸರೂ ಒಂದೇ ಎಂದು ಹೇಳುವ 'ತಮೇವ ಶಾಸ್ತ್ರಪ್ರಭವಂ' ಎಂಬ ಭಾಗವು ಸರಿಯಲ್ಲ ಎಂಬ ಆಕ್ಷೇಪಕ್ಕೆ ಉತ್ತರ ನೀಡಿದಂತಾಯಿತು.

### ಹರಿವಿಶೇಷಣಗಳ ಕೃತ್ಯ ಮೂಲವಿಶೇಷಣಕೃತ್ಯದಂತೆ

(ಪರಿಮಳ)- 'ತಮೇವ ಶಾಸ್ತ್ರಪ್ರಭವಮ್' ಇತ್ಯುಪಪತ್ತ್ಯರ್ಥಮ್ ಇತ್ಯನ್ಯೇ । ಹರೇರ್ನಾರಾಯಣ-ವಿಶೇಷಣವಿಶಿಷ್ಟತ್ವೋಕ್ತ್ಯಾ ಹರಿವಿಶೇಷಣಾನಾಂ ಕೃತ್ಯಂ ಮೂಲವಿಶೇಷಣಕೃತ್ಯವತ್ ಬೋಧ್ಯಮ್ ।

ಹರಿಯಲ್ಲಿ ನಾರಾಯಣನಿಗೆ ಕೊಟ್ಟ ವಿಶೇಷಣಗಳನ್ನು ಅನ್ವಯಿಸಲು ಬರುವಾಗ ನಾರಾಯಣನಲ್ಲಿ ಕೊಡುವ ವಿಶೇಷಣಗಳಿಗೆ ಸಾರ್ಥಕ್ಯವನ್ನು ಹೇಗೆ ತಿಳಿಸುತ್ತೇವೆಯೋ ಅದೇ ರೀತಿ ಹರಿಗೆ ಕೊಡುವ ವಿಶೇಷಣಗಳಿಗೂ ಸಾರ್ಥಕ್ಯವನ್ನು ಚಿಂತಿಸಬೇಕು. ಹೀಗೆ ಹರಿಪದದ ಉಪಯೋಗ 'ತಮೇವ ಶಾಸ್ತ್ರ-ಪ್ರಭವಂ' ಮುಂತಾದ ಕಡೆ ತಿಳಿಯಬೇಕು. 'ತಮೇವ ಶಾಸ್ತ್ರಪ್ರಭವಂ' ಎಂಬಲ್ಲಿ ನಾರಾಯಣನಿಗೆ ಗುರುತ್ವ ಹೇಗೆ ಇತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ನೀಡಿ ಚಿಂತಿಸಿದ್ದಾರೆ. ಅದೇ ರೀತಿ ಇಲ್ಲಿಯೂ ಹರಿಗೆ ಹಾಗೆಯೇ ಚಿಂತಿಸತಕ್ಕದ್ದು.

### ಏರೀ ಬಾಲಾಚಾರ್ಯಕೃತಾ ಟಿಪ್ಪಣೀ ಮಂಗಲಾಚರಣೆ

### ಪ್ರಗೇ ಚ ಸಾಯಂ ನರಸಿಂಹನನ್ನು ಭಜಿಸುತ್ತೇನೆ

ಶ್ರಿಯಃ ಸಹಾಯಂ ಗುಣವೃಂದಕಾಯಂ ವಿಧೂತಹೇಯಂ ನಿಗಮೈಕಮೇಯಮ್ ।
ಭಜೇ ಸಹಾಯಂ ಸುಸುಖಾಪ್ತ್ಯುಪಾಯಂ ಪ್ರಗೇ ಚ ಸಾಯಂ ನರಸಿಂಹಕಾಯಮ್ ॥

ಲಕ್ಷ್ಮಿಗೆ ಸಹಾಯಕನಾದ, ಗುಣಗಳ ಸಮೂಹವನ್ನೇ ಶರೀರವಾಗಿ ಉಳ್ಳ, ದೋಷಗಳಿಂದ ರಹಿತನಾದ, ವೇದೈಕವೇದ್ಯನಾದ, ಎಲ್ಲರಿಗೂ ಮಿತ್ರನಾದ, ಮೋಕ್ಷಸುಖವನ್ನು ಹೊಂದುವುದಕ್ಕೆ ಸಾಧನನಾದ ನರಸಿಂಹರೂಪಿಯಾದ ಭಗವಂತನನ್ನು ಪ್ರಾತಃ ಸಾಯಂಕಾಲಗಳಲ್ಲಿ ಭಜಸುತ್ತೇನೆ. (ಪ್ರಗೇ = ಪ್ರಾತಃ)

### ಶಂತೀರ್ಥಾದಿಗುರುಗಳನ್ನು ನಮಸ್ಕರಿಸಿ ನ್ಯಾಯಸುಧಾಟಿಪ್ಪಣೀ ರಚನೆ

ಶಂತೀರ್ಥಜಯತೀರ್ಥಾದೀನನಂತಾರ್ಯಗುರೂನಪಿ ।
ಸಂಪ್ರಣಮ್ಯ ನ್ಯಾಯಸುಧಾಪದ್ಯಾನಿ ವಿವೃಣೋಮ್ಯಹಮ್ ॥

ಪೂರ್ಣಪ್ರಜ್ಞರು, ಜಯತೀರ್ಥರು ಮುಂತಾದ ಗುರುಗಳನ್ನು ಹಾಗೂ ಅನಂತ ಎಂಬ ಹೆಸರಿನ ಪೂಜ್ಯ ಗುರುಗಳನ್ನು ನಾನು ಭಕ್ತಿಶ್ರದ್ಧೆಯಿಂದ ನಮಸ್ಕರಿಸಿ ನ್ಯಾಯಸುಧಾಪದ್ಯಗಳನ್ನು ವಿವರಿಸುತ್ತೇನೆ.

### ಜ್ಞಾನಿಗಳೇ ಕ್ಷಮಿಸಿರಿ

ವಿವೃತಾನಾಮಪಿ ತ್ವಾರ್ಯೈಸ್ತೇಷಾಂ ವಿವೃತಿಚಾಪಲಮ್ ।
ಬಾಲಸ್ಯಾಗಾಂಸ್ಯತ್ರ ಮೇಽನ್ಯಾನ್ಯಪಿ ಕ್ಷಾಮ್ಯಂತು ಸೂರಯಃ ॥

ಮಹಾತ್ಮರೆಲ್ಲರೂ ನ್ಯಾಯಸುಧೆಯನ್ನು ವಿವರಿಸಿದ್ದರೂ ಆ ನ್ಯಾಯಸುಧೆಯ ವಿವರಣೆ ಮಾಡುವ ಚಪಲತೆಯಿಂದ ವಿವರಣೆ ಮಾಡುತ್ತಿದ್ದೇನೆ. ಇಲ್ಲಿ ಬಾಲಕನಾದ ನನ್ನ ಚಿಕ್ಕತಪ್ಪುಗಳನ್ನು ಹಾಗೂ ಬೇರೆ ತಪ್ಪುಗಳನ್ನು ಜ್ಞಾನಿಗಳು ಕ್ಷಮಿಸಿರಿ.

## ಅನೇಕವಿಧವಾದ ಹರಿಶಬ್ದ ವ್ಯುತ್ಪತ್ತಿ

(1) ಹರತಿ = ಸ್ವೀಕರೋತಿ ಶ್ರಿಯಂ ಕಲತ್ರತಯೇತಿ ವಾ; (2) ಗುಣಾನ್ ಹರತಿ = ಸ್ವೀಕರೋತೀತಿ ವಾ; (3) ಹರತಿ = ಪರಿಹರತಿ ದೋಷಾನಿತಿ ವಾ; (4) ಸ್ವೇತರಸ್ಯ ಜಗತಃ ಉದ್ಭವಾದಿ ಪ್ರಾಪಯತೀತಿ ವಾ; (5) ಹರತಿ = ಆಹರತಿ ಆಮ್ನಾಯಾದೀನ್ ಸ್ವವಿಷಯ ಇತಿ ವಾ; (6) ಹರತಿ = ಸ್ವೀಕರೋತಿ ಮಧ್ವಾಚಾರ್ಯಮಾಪ್ತತಯೇತಿ ವಾ; (7) ಹರತಿ = ಉಪಾಹರತಿ ಮುಕ್ತಿಂ ಭಕ್ತಾನಿತಿ ವಾ;

ಹರಿ ಶಬ್ದಕ್ಕೆ ಅನೇಕವಿಧವಾದ ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. ಹರತಿ ಎಂದರೆ ಸ್ವೀಕಾರ ಮಾಡುತ್ತಾನೆ ಎಂದರ್ಥ. ಲಕ್ಷ್ಮಿಯನ್ನು ಹೆಂಡತಿಯಾಗಿ ಸ್ವೀಕರಿಸುವುದರಿಂದ ಹರಿ ಎಂದು ಭಗವಂತನಿಗೆ ಹೆಸರು. ಅಥವಾ ಜ್ಞಾನಾನಂದಾದಿ ಗುಣಗಳನ್ನು ಸ್ವೀಕರಿಸುವುದರಿಂದ ಹರಿ. ಅಥವಾ ಹರತಿ ಎನ್ನುವುದಕ್ಕೆ ಪರಿಹರಿಸುತ್ತಾನೆ ಎಂದರ್ಥ. ಯಾವುದನ್ನು ಎಂದರೆ ದೋಷಗಳನ್ನು ಎಂದು ಸ್ವೀಕರಿಸಿದಾಗ ಪರರ ದೋಷಗಳನ್ನು ಪರಿಹರಿಸುವವನಾದ್ದರಿಂದ ಹರಿ ಎಂದು ಹೆಸರು. ಇನ್ನು ಹರತಿ ಎಂದರೆ ಉದ್ಭವಾದಿಗಳನ್ನು ಹೊಂದುವಂತೆ ಮಾಡುವವನು. ಆದ್ದರಿಂದಲೂ ಹರಿ ಎನಿಸುವನು. ಇನ್ನು ಹರತಿ ಎಂದರೆ ಆಹರತಿ. ತಂದು ಕೊಡುವವನು ಎಂದರ್ಥ. ವೇದಗಳನ್ನು ತನ್ನ ವಿಷಯದಲ್ಲಿ ಬರುವಂತೆ ಮಾಡುವವನು. ಅಂದರೆ ತನ್ನ ಬಗ್ಗೆ ಹೇಳುವಂತೆ ವೇದಗಳನ್ನು ಅಭಿವ್ಯಕ್ತಿಗೊಳಿಸುವನು ಎಂದರ್ಥ. ಅಥವಾ ಮಧ್ವಾಚಾರ್ಯರನ್ನು ತನ್ನ ಆಪ್ತನನ್ನಾಗಿ ಹರತಿ ಅಂದರೆ ಸ್ವೀಕರಿಸುತ್ತಾನೆ ಎಂದರ್ಥ. ಇನ್ನು ಮುಕ್ತಿಯನ್ನು ಭಕ್ತರಿಗೆ ಹರತಿ ಅಂದರೆ ಉಪಾಹರತಿ ತಂದು ಕೊಡುವವನು ಎಂದರ್ಥ.

## 'ಶ್ರಿಯಃ ಪತ್ಯೇ' ಎಂಬ ಶ್ಲೋಕ ಬ್ರಹ್ಮಸೂತ್ರಗಳ ನಾಲ್ಕು ಅಧ್ಯಾಯಗಳ ಸಂಕ್ಷೇಪ

(ರಸರಂಜನೀ)– ಅಥವಾ ಶ್ರೋತೃಬುದ್ಧ್ಯನುಕೂಲತಯಾ ಸಕಲಶಾಸ್ತ್ರಾರ್ಥಂ ಸಂಕ್ಷೇಪತೋಽನೇನಾ-ಚಷ್ಟೇ । ವಿದಿತಸಂಕ್ಷೇಪಾ ಹಿ ಪ್ರಪಂಚಂ ಜಿಜ್ಞಾಸವೋ ಭವಂತಿ । ತತ್ರ 'ನಮಃ' ಇತಿ ಪ್ರಥಮಸೂತ್ರಾರ್ಥೋಕ್ತಿಃ । ಮನೋವೃತ್ತೇಃ ತತ್ಪ್ರವಣತಾ ಹಿ ನಮನಮ್ । ಜಿಜ್ಞಾಸಾಪಿ ತದ್ವಿಶೇಷ ಏವ । ತಸ್ಯ ಜೀವಾದಿವ್ಯಾವೃತ್ತಯೇ ಯದ್ ಬ್ರಹ್ಮೇತ್ಯುಕ್ತಂ ತಸ್ಯಾರ್ಥಃ — ನಿತ್ಯಾಗಣಿತೇತ್ಯಾದಿ ॥ ತದುಪಪಾದನಾಯ ದ್ವಿತೀಯಸೂತ್ರೇ ಲಕ್ಷಣಮಭಿಹಿತಮ್ । ತದಾಹ — ಜಗದಿತಿ ॥

**ತೃತೀಯಸೂತ್ರೇ ತತ್ರ ಶಾಸ್ತ್ರಂ ಪ್ರಮಾಣಮಭಿಧಾಯ ತಸ್ಯಾಧ್ಯಾಯಶೇಷೇಣ ತದ್ವಿಷಯತೋಪ-ಪಾದಿತಾ । ತತ್ಕಥನಮ್ — ಅಶೇಷೇತಿ ॥**

* ಶ್ರಿಯಃಪತ್ಯೇ ಎಂಬ ಈ ಮಂಗಳ ಪದ್ಯವು ಕೇವಲಮಂಗಳಪದ್ಯವಾಗದೇ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಅರ್ಥವನ್ನು ಸಂಕ್ಷೇಪವಾಗಿ ಹೇಳುತ್ತಿದೆ. ಇದು ಶ್ರೋತೃಬುದ್ಧಿಗೆ ಅನುಕೂಲವಾದದ್ದು. ಯಾರು ಸಂಕ್ಷೇಪವಾಗಿ ತಿಳಿಯುವವರೋ ಅವರೇ ವಿಸ್ತಾರವಾಗಿ ಹೇಳಿದ್ದನ್ನು ತಿಳಿಯಬಲ್ಲರು. ಹಾಗಾಗಿ ಇಲ್ಲಿ ಸಂಕ್ಷಿಪ್ತಕಥನ ಮಾಡಿದ್ದಾರೆ. ಅದು ಹೀಗೆ -

ಮೊದಲನೆಯ ಬ್ರಹ್ಮಸೂತ್ರದ ಅರ್ಥವನ್ನು ನಮಃ ಎಂಬ ಈ ಶ್ಲೋಕದ ಪದದಿಂದ ಸೂಚಿಸಿದ್ದಾರೆ. ಏಕೆಂದರೆ ನಮನ ಎಂದರೆ ನಮ್ಮ ಮನೋವೃತ್ತಿಯ ಭಗವಲ್ಲೀನತೆಯೇ ಆಗಿದೆ. ಮನೋವೃತ್ತಿಯ ಪ್ರವಣತಾ ವಿಶೇಷವೇ ಜಿಜ್ಞಾಸೆ. ಹಾಗಾಗಿ ಪ್ರಥಮಸೂತ್ರಾರ್ಥವಿವರಣೆ ಮಾಡಿದಂತೆ ಆಯಿತು. ಇನ್ನು ಜಿಜ್ಞಾಸ್ಯನು ಜೀವನಲ್ಲ ಎಂದು ತಿಳಿಸಲು ಬ್ರಹ್ಮಶಬ್ದವನ್ನು ಪ್ರಯೋಗಿಸಿದ್ದಾರೆ. ಇದರ ವಿವರಣೆಯಾಗಿ 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯ-ತಮಸೇ' ಎಂದು ಬಂದಿದೆ. ಈ ವಿಶೇಷಣದಲ್ಲಿ ತೋರುವ ಗುಣಪೂರ್ಣತ್ವ, ಸಮಸ್ತದೋಷ-ದೂರತ್ವ ಇವುಗಳನ್ನು ಸಾಧಿಸುವುದಕ್ಕಾಗಿ ದ್ವಿತೀಯಸೂತ್ರ 'ಜನ್ಮಾದ್ಯಸ್ಯ ಯತಃ' ಎಂಬುದು ಹೊರಟಿದೆ. ಇದನ್ನು 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂಬ ಪದದಿಂದ ವಿವರಿಸಿದ್ದಾರೆ. ಮೂರನೆಯ ಬ್ರಹ್ಮಸೂತ್ರದಲ್ಲಿ ಜಗಜ್ಜನ್ಮಾದಿಕಾರಣ ಬ್ರಹ್ಮ ಎಂಬ ವಿಷಯದಲ್ಲಿ ಪ್ರಮಾಣವನ್ನು ಕೊಟ್ಟು ಅದನ್ನೇ ಮುಂದಕ್ಕೆ ಇಡೀ ಅಧ್ಯಾಯದಿಂದ ವೇದಾದಿಪ್ರಮಾಣಗಳಿಗೆ ಅಂತಹ ಬ್ರಹ್ಮನೇ ವಿಷಯ ಎಂದು ಸಮರ್ಥನೆ ಮಾಡಿದ್ದಾರೆ. ಇದನ್ನು 'ಅಶೇಷಾ-ಮ್ನಾಯಸ್ಮೃತಿಹೃದಯದೀಪ್ತಾಯ' ಎಂದು ವಿವರಿಸಿದ್ದಾರೆ.

## ವಿಶಿಷ್ಟತ್ವ ಇಷ್ಟತ್ವ ಅಧಿಕೃತತ್ವಗಳಿಂದ ಕೂಡಿದ ದೇವತಾನಮನ

**(ಪರಿಮಳ)- ಆದ್ಯಪದ್ಯಂ ವಿವೃಣ್ವಾನೋ ಗ್ರಂಥಾದೌ ನಮ್ಯತ್ವಪ್ರಯೋಜಕವಿಶಿಷ್ಟತ್ವಇಷ್ಟತ್ವ-ಅಧಿಕೃತತ್ವಯುಕ್ತದೇವತಾನತಿರೂಪಂ ಮಂಗಳಮಾಚರತಿ - ಶ್ರಿಯ ಇತಿ ॥**

ಈ ಭಾಗದ ಪರಿಮಳದಲ್ಲಿ 'ಶ್ರಿಯಃ ಪತ್ಯೇ' ಎಂಬ ಮಂಗಳಪದ್ಯ ಹೊರಡುವುದಕ್ಕೆ ಕಾರಣವನ್ನು ನೀಡಲಾಗಿದೆ. ನ್ಯಾಯಸುಧೆಯನ್ನು ಪ್ರಾರಂಭಿಸುತ್ತ ಜಯತೀರ್ಥರು ಮೊದಲಿಗೆ ಮಂಗಳವನ್ನು ಆಚರಿಸಿದ್ದಾರೆ. ಈ ಮಂಗಲಾಚರಣೆಯಲ್ಲಿ ದೇವತಾ ನಮಸ್ಕಾರವನ್ನು ಮಾಡಿದ್ದಾರೆ — "ಶ್ರಿಯಃ ಪತ್ಯೇ ಹರಯೇ ನಮಃ" ಎಂದು. ಅರ್ಥಾತ್ ಲಕ್ಷ್ಮೀಪತಿಯಾದ ನಾರಾಯಣನೇ ಆದ ಹರಿಗೆ ನಮಸ್ಕಾರ ಎಂದು. ಈ ನಾರಾಯಣನಾದರೋ ನಮಸ್ಕರಿಸಲು ಯೋಗ್ಯನೇ ಆಗಿರುವನು. ಏಕೆಂದರೆ ಅವನಲ್ಲಿ ಒಬ್ಬ ವ್ಯಕ್ತಿಗೆ ನಮಸ್ಕರಿಸಲು ಬೇಕಾದ ವಿಶಿಷ್ಟತ್ವ, ಇಷ್ಟತ್ವ, ಅಧಿಕೃತತ್ವ ಎಂಬ ಮೂರೂ

ಧರ್ಮಗಳು ಇವೆ. ಇನ್ನು ಈ ಪದ್ಯವು ಕೇವಲ ಮಂಗಲಾಚರಣೆಯಷ್ಟೇ ಅಲ್ಲದೆ ಆಚಾರ್ಯರ ಅನುವ್ಯಾಖ್ಯಾನದ "ನಾರಾಯಣಂ ನಿಖಿಲಪೂರ್ಣಂ" ಎಂಬ ಮೊದಲನೆಯ ಪದ್ಯದ ವಿವರಣೆಯ ರೂಪವೂ ಆಗಿದೆ.

## ವಿಶಿಷ್ಟತ್ವ ಇಷ್ಟತ್ವ ಅಧಿಕೃತತ್ವ ಸೂಚಕ ವಿಶೇಷಣಗಳು ಯಾವವು?

(ಪರಿಮಳ)- 'ನಿತ್ಯ' ಇತ್ಯಾದಿವಿಶೇಷಣದ್ವಯೇನ ವಿಶಿಷ್ಟತ್ವಮ್, **'ಅಶೇಷ'** ಇತ್ಯಧಿಕೃತತ್ವಮ್, ಹರತಿ ಅಶೇಷಕ್ಲೇಶಾನ್ ಇತಿ **'ಹರಯೇ'** ಇತ್ಯನೇನ ಇಷ್ಟತ್ವಮ್ ಉಕ್ತಂ ಧ್ಯೇಯಮ್ । 'ಹರಿಂ ಹರಂತಮ್ ಅನುಯಂತಿ ದೇವಾಃ' ಇತ್ಯಾದೇಃ ।

'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' 'ಜಗಜ್ಜನ್ಮ-ಸ್ಥೇಮಪ್ರಲಯರಚನಾಶೀಲವಪುಷೇ' ಎಂದು ಸುಧಾದಲ್ಲಿ ಹರಿಗೆ ನೀಡಿರುವ ಎರಡು ವಿಶೇಷಣ-ಗಳಿಂದ ವಿಶಿಷ್ಟತ್ವವನ್ನು ಸೂಚಿಸಿದ್ದಾರೆ. 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬ ವಿಶೇಷಣದಿಂದ ಹರಿಯಲ್ಲಿ ಅಧಿಕೃತತ್ವವಿದೆ ಎಂದು ಸೂಚಿಸಿದ್ದಾರೆ. 'ಹರಯೇ' ಎಂಬ ಪದದಿಂದ ಇಷ್ಟತ್ವವನ್ನು ತಿಳಿಸಿದ್ದಾರೆ. ಹೀಗೆ ನ್ಯಾಯಸುಧಾದ ಮಂಗಳಪದ್ಯದಲ್ಲಿ ನಾಲ್ಕು ವಿಶೇಷಣಗಳಿಂದ ಭಗವಂತನು ನಮಸ್ಕರಿಸಲು ಯೋಗ್ಯನಾಗಲು ಬೇಕಾದ ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವ ಇವೆ ಎಂದು ತಿಳಿಸಿದ್ದಾರೆ.

ವಿಶಿಷ್ಟತ್ವವೆಂದರೆ — ವಿಶೇಷವಾದ ಸಾಮರ್ಥ್ಯ, ಅಧಿಕೃತತ್ವ ಎಂದರೆ — ಗ್ರಂಥದಿಂದ ಪ್ರತಿಪಾದ್ಯತ್ವ, ಇಷ್ಟತ್ವವೆಂಬುದು ಸ್ಪಷ್ಟ. ಇದರ ಬಗ್ಗೆ ಮುಂದೆ ವಿಸ್ತಾರವಾಗಿ ನ್ಯಾಯಸುಧಾದಲ್ಲಿ 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂಬ ಪದ್ಯದ ವಿವರಣೆಯ ಸಂದರ್ಭದಲ್ಲಿ ನೋಡಬಹುದು.

ಇಷ್ಟತ್ವವನ್ನು ತಿಳಿಸಲು ಹರಯೇ ಎಂಬ ಪದವನ್ನು ಹೇಳಿದ್ದಾರೆ. ಅದು ಹೇಗೆ? 'ಹರತಿ ಅಶೇಷಕ್ಲೇಶಾನ್ ಇತಿ ಹರಿಃ' ಎಂದು ಹರಿಶಬ್ದಾರ್ಥವನ್ನು ನೋಡಿದಾಗ ಎಲ್ಲ ಸಂಕಷ್ಟಗಳನ್ನೂ ಅಪಹರಿಸುತ್ತಾನಾದ ಕಾರಣ ಹರಿ ಎಂದು ನಾರಾಯಣನಿಗೆ ಹೆಸರು. ಯಾರು ಸಂಕಷ್ಟಪರಿಹಾರಕರೋ ಅವರನ್ನು ಅನುಸರಿಸುವುದು ಹಾಗೆ ಅಂತಹವರು ಇಷ್ಟರಾಗಿರುವುದು ಪ್ರಸಿದ್ಧ. ಈ ಅರ್ಥಕ್ಕೆ ಸಂವಾದಿಯಾಗಿ ಅನೇಕ ವಾಕ್ಯಗಳಿವೆ.

## ಹರಿಂ ಹರಂತಂ ಅನುಯಂತಿ ದೇವಾಃ - ಮಂತ್ರದ ವಿವರಣೆ

'ಹರಿಂ ಹರಂತಂ ಅನುಯಂತಿ ದೇವಾಃ' - (ತೈತ್ತಿರೀಯ ಆರಣ್ಯಕ 3-15)

ಇಲ್ಲಿ ಅನ್ವಯವಾಕ್ಯ ಹೀಗೆ — ದೇವಾಃ ಹರಂತಂ ಹರಿಂ ಅನುಯಂತಿ - ಎಂದು; ದೇವತೆಗಳೆಲ್ಲರೂ ಕಷ್ಟಗಳನ್ನು ಅಪಹರಿಸುವ ಹರಿಯನ್ನು ಅನುಸರಿಸುತ್ತಾರೆ ಎಂದರ್ಥ.

ಈ ಭಾಗದ ತೈತ್ತಿರೀಯ ಆರಣ್ಯಕದ ಪೂರ್ಣಪಾಠ ಹೀಗಿದೆ –

हरिꣳ हरन्तमनुयन्ति देवाः । विश्वस्येशानं वृषभं मतीनाम् । ब्रह्म सरूपमनु मेदमागात् । अयनं मा विवधीर्विक्रमस्व, इति । मा छिदो मृत्यो मा वधीः । मा मे बलं विवृहो मा प्रमोषीः । प्रजां मा मे रीरिष आयुरुग्र । नृचक्षसं त्वा हविषा विधेम, इति । सद्यश्चक-मानाय । प्रवेपानाय मृत्यवे (१) । प्रास्मा आशा अशृण्वन् । कामेनाजनयन्पुनः, इति । कामेन मे काम आगात् । हृदयाद्धृदयं मृत्योः । यदमीषामदः प्रियम् । तदैतूप मामभि, इति । परं मृत्यो अनुपेरहि पन्थाम् । यस्ते स्व इतरो देवयानात् । चक्षुष्मते शृण्वते ते ब्रवीमि । मा न प्रजाꣳ रीरिषो मोत वीरान्, इति । प्र पूर्व्यं मनसा वन्दमानः । नाधमानो वृषभं चर्षणीनाम् । यः प्रजानामेकराण्मानुषीणाम् । मृत्युं यजे प्रथमजामृतस्य (२) इति ॥ मृत्यवे वीराँश्चत्वारि च ॥

इति कृष्णयजुर्वेदीयतैत्तिरीयारण्यके तृतीयप्रपाठके पञ्चदशोऽनुवाकः ॥१५॥

## ಮೃತ್ಯುದೇವತೆ ಹರಿಶಬ್ದಾರ್ಥ — ಸಾಯಣಭಾಷ್ಯ

– ಹರಿಂ ಹರಣಶೀಲಂ ಪ್ರಾಣಾಪಹರ್ತಾರಂ ಮೃತ್ಯುದೇವಂ ಸರ್ವೇ ದೇವಾ ಅನುಯಂತಿ, ಆನುಕೂಲ್ಯೇನ ಗಚ್ಛಂತಿ । ನ ಕೋऽಪಿ ದೇವೋ ಮೃತ್ಯುಮುಲ್ಲಂಘಯಿತುಂ ಕ್ಷಮತೇ । ಕೀದೃಶಂ ಹರಿಮ್ - ಹರಂತಮ್ = ಆಯುಷೋऽವಸಾನೇ ಪ್ರಾಣಾನ್ ಅಪಹರಂತಮ್, ಅತ ಏವ ವಿಶ್ವಸ್ಯೇಶಾನಂ ಸರ್ವಸ್ಯ ಜಗತಃ ಸ್ವಾಮಿನಮ್, ಮತೀನಾಂ ಮನನೀಯಾನಾಂ ದೇವಾನಾಂ ಮಧ್ಯೇ ವೃಷಭಂ ಶ್ರೇಷ್ಠಮ್ । ಅಸ್ಮಿಂಸ್ತು ಕರ್ಮಣಿ ಸರೂಪಂ ಸಮಾನರೂಪಮನಕೂಲಮಿದಂ ಬ್ರಹ್ಮ = ಮಂತ್ರಜಾತಂ, ಮಾಮನು = ಯಜಮಾನಮ್ ಅನುಲಕ್ಷ್ಯ ಆಗಾತ್, ಅಭಿಮುಖ್ಯೇನ ಪ್ರಾಪ್ನೋತ್ । ಅತ ಹೇ ಮೃತ್ಯೋ ಬ್ರಹ್ಮಣಾ ತುಷ್ಟಃ ಸನ್ನಯನಂ ಮಾ ವಿವಧೀರ್ಮದೀಯಂ ಮಾರ್ಗಂ ಮಾ ವಿನಾಶಯ, ಕಿಂತು ವಿಕ್ರಮಸ್ವ ಮಚ್ಛತ್ರುವಿನಾಶಾರ್ಥಂ ಪರಾಕ್ರಮಂ ಕುರು - (ಸಾಯಣಭಾಷ್ಯ)

– ಹರಿಂ ಹರಂತಂ ಎಂಬ ಭಾಗದ ಅಭಿಪ್ರಾಯ ಹೀಗಿದೆ - ಹರಿ ಎಂದರೆ ಎಲ್ಲವನ್ನೂ ಹರಣ ಮಾಡುವವನು ಎಂದರ್ಥ. ಅದು ಕಷ್ಟಗಳ ಹರಣವಾಗಿರಬಹುದು ಪ್ರಾಣಗಳ ಅಪಹರಣವಾಗಿರ-ಬಹುದು ಇತ್ಯಾದಿ. ಸಾಯಣಭಾಷ್ಯದಲ್ಲಿ ಹೀಗೆ ಅರ್ಥ ನಿರೂಪಣೆ ಮಾಡಿದ್ದಾರೆ. ಹರಿ ಎಂದರೆ ಪ್ರಾಣವನ್ನು ಅಪಹರಿಸುವ ಮೃತ್ಯುದೇವತೆ ಎಂದರ್ಥ. ಇವನನ್ನು ಎಲ್ಲ ದೇವತೆಗಳೂ ಅನುಯಂತಿ - ಅನುಸರಿಸಿ ಇರುತ್ತಾರೆ. ಆ ಮೃತ್ಯುದೇವತೆಗೆ ಅನುಕೂಲರಾಗಿ ಸಕಲದೇವತೆಗಳೂ ಇರುತ್ತಾರೆ ಎಂದು ತಾತ್ಪರ್ಯ. ಏಕೆಂದರೆ ಯಾವ ದೇವತೆಯೂ ಮೃತ್ಯುವನ್ನು ಉಲ್ಲಂಘಿಸಲು ಸಾಮರ್ಥ್ಯವನ್ನು ಪಡೆದಿರುವುದಿಲ್ಲ. ಆ ಹರಿಯಾದರೋ ಹೇಗಿದ್ದಾನೆ ಎಂದರೆ ಹರಂತಂ ಎಂದಿದ್ದಾರೆ. ಅರ್ಥಾತ್

ಆಯುಷ್ಯಮುಗಿಯುವ ಸಮಯದಲ್ಲಿ ಪ್ರಾಣಗಳನ್ನು ಅಪಹರಿಸುವವನು ಆಗಿದ್ದಾನೆ. ಆದ್ದರಿಂದಲೇ ಹರಿಯು ಇಡೀ ಜಗತ್ತಿಗೆ ಸ್ವಾಮಿಯಾಗಿದ್ದು ಎಲ್ಲ ದೇವತೆಗಳ ಮಧ್ಯೆ ಶ್ರೇಷ್ಠನಾಗಿದ್ದಾನೆ ಎಂದು ಮುಂದಿನ ಮಂತ್ರವು ನಿರೂಪಣೆ ಮಾಡುತ್ತಿದೆ. "ವಿಶ್ವಸ್ಯೇಶಾನಂ ಋಷಭಂ ಮತೀನಾಮ್" ಎಂದು.

## ಹರಿಂ ಹರಂತಂ ಮಂತ್ರ ಶಿವಪರವೋ? ವಿಷ್ಣುಪರವೋ?

** किञ्च ब्रह्मरुद्रादीनामपि संहारकर्ता हरिरेवेति श्रूयते । यजुषि – हरिं हरन्तमनुयन्ति देवाः विश्वस्येशानं वृषभं मतीना'मिति । ब्रह्मपुराणे –

ब्रह्माणमिन्द्रं रुद्रं च यमं वरुणमेव च ।
निगृह्याहरते यस्मात्तस्माद्धरिरिहोच्यते ।
ब्रह्मा शम्भुस्तथैवार्कश्चन्द्रमाश्च शतक्रतुः ।
एवमाद्यास्तथैवान्ये युक्ता वैष्णवतेजसा ।
जगत्कार्यावसाने तु वियुज्यन्ते च तेजसा ।
(वि)तेजसश्चैव ते सर्वे पञ्चत्वमुपयान्ति च ॥ इति

ननु - हरिं हरन्तमिति पूर्वोपात्तयजुषि ईशानशब्दश्रवणात् रुद्र एव संहारकर्तेति श्रूयत इति चेत्-तदसत् । तत्र 'विश्वस्येशान'मिति जगन्नियामकत्वमुच्यते । तथा च 'पतिं विश्वस्यात्मेश्वरम्' इतिवत् नारायण एव अत्र प्रतिपाद्यः । 'अस्येशाना जगतो विष्णुपत्नी' स हरिः सुवित्तमः, 'पेरुरिन्द्राय पिन्वते', 'विराडसि', 'बृहती श्रवसीन्द्रपत्नी धर्मपत्नी', 'स ब्रह्मा स शिवः सेन्द्रः' । इत्यादिश्रुतयोऽत्र विभावनीयाः ।

– श्रीनिवासाख्ययज्वना विरचिते वैखानससूत्रव्याख्याने- प्रथमसम्पुटम् (तिरुपतिपब्लिकेषन्)

– ಬ್ರಹ್ಮಪುರಾಣದಲ್ಲಿ ವಿಷ್ಣುವನ್ನು ಹರಿ ಎನ್ನುವುದಕ್ಕೆ ಏನು ಕಾರಣ ಎಂದು ವಿವರಿಸಿದ್ದಾರೆ. ಯಾವ ಕಾರಣದಿಂದ ಬ್ರಹ್ಮ, ರುದ್ರ, ಇಂದ್ರ, ಯಮ, ವರುಣರನ್ನು ನಿಗ್ರಹಿಸಿ ಸ್ವೀಕಾರಮಾಡುತ್ತಾನೋ ಆದ್ದರಿಂದ ಹರಿ ಎಂದು ಹೇಳಲ್ಪಡುತ್ತಾನೆ. ಹೀಗೆ ಬ್ರಹ್ಮರುದ್ರಾದಿಗಳ ಸಂಹಾರಕರ್ತೃವಾದ್ದರಿಂದ ಹರಿ ಎನಿಸುವನು. ಅಲ್ಲ ಹರಿಂ ಹರಂತಂ ಎಂಬ ಯಜುರ್ವೇದಮಂತ್ರದಲ್ಲಿ ಹರಿ ಎಂದರೆ ರುದ್ರನಾಗಬಹುದು. ಏಕೆಂದರೆ ಅದೇ ಮಂತ್ರದಲ್ಲಿ ಈಶಾನಶಬ್ದವು ಕೇಳಲ್ಪಡುತ್ತಿದೆ ಎಂದರೆ ಇಲ್ಲ. 'ವಿಶ್ವಸ್ಯೇಶಾನಂ' - ಇಡೀ ಜಗತ್ತಿಗೆ ನಿಯಾಮಕನಾದವನನ್ನು ಹೇಳುತ್ತಿರುವುದರಿಂದ ಅದು ನಾರಾಯಣನೇ ಆಗಬೇಕು. ಈ ವಿಷಯದಲ್ಲಿ ಅನೇಕ ಶ್ರುತಿಗಳಿವೆ. ಶ್ರುತಿಗಳನ್ನು ಅನುಸಂಧಾನ ಮಾಡಬೇಕು.

## ಶ್ರಿಯಃ ಪತ್ಯೇ ಎಂದು ಹೇಳಿದ್ದು ಇಂದ್ರಾದಿಪ್ರತೀತಿವಾರಣೆಗಾಗಿ

(ಆನಂದ) ಹರಿಶಬ್ದಸ್ಯ ಇಂದ್ರೇಽಪಿ ಪ್ರಸಿದ್ಧತ್ವಾತ್, ಇಂದ್ರಾದಿಃ ಅತ್ರ ನಮ್ಯತ ಇತಿ ಪ್ರತೀತಿನಿರಾಸಾಯ – ಶ್ರಿಯಃ ಪತ್ಯ ಇತಿ ॥

(ಗಲಗಲೀನರಸಿಂಹಾಚಾರ್ಯರ ಆನಂದಟಿಪ್ಪಣಿಯ ಮಂಗಲಾಚರಣೆಯ ಭಾಗವು ಉಪಲಬ್ಧವಿರುವುದಿಲ್ಲ)

"ಹರಯೇ" ಹರಿ ಎಂಬ ಶಬ್ದಕ್ಕೆ ಇಂದ್ರ ಎಂಬ ಅರ್ಥವೂ ಪ್ರಸಿದ್ಧ. ಹಾಗಾಗಿ ಇಂದ್ರನನ್ನು ಇಲ್ಲಿ ನಮಸ್ಕರಿಸುತ್ತಿದ್ದಾರೆ ಎಂದೇಕಾಗಬಾರದು? ಎಂಬ ಆಕ್ಷೇಪಕ್ಕೆ ಉತ್ತರವಾಗಿ "ಶ್ರಿಯಃ ಪತ್ಯೇ" ಎಂದು ಹೇಳಿದ್ದಾರೆ. ಶ್ರಿಯಃ ಪತ್ಯೇ ಎಂಬ ಪದಕ್ಕೆ ಲಕ್ಷ್ಮೀಪತಿಯೆಂದು ಅರ್ಥವಾದ್ದರಿಂದ ಇಂದ್ರನನ್ನು ಗ್ರಹಿಸುವಂತಿಲ್ಲ.

## ನಾರಾಯಣಂ ನಿಖಿಲ ಎಂಬ ಪದ್ಯದಲ್ಲಿ ಲಕ್ಷ್ಮಿಯ ವಂದನೆ ಮಾಡಲಾಗಿದೆಯೇ?

(ಆನಂದ) – ಅನೇನ ಚ 'ನ ವಿದ್ಯಂತೇ ಅರಾಃ = ದೋಷಾಃ ಯಸ್ಯಾಃ ಸಾ ನಾರಾ = ಲಕ್ಷ್ಮೀಃ, ತಸ್ಯಾ ಅಯನಂ = ನಾರಾಯಣಃ' ಇತಿ ನಾರಾಯಣಪದಾರ್ಥ ಉಕ್ತೋ ಭವತಿ । ತೇನ ಚ ಆಚಾರ್ಯೈಃ ಗ್ರಂಥಾರಂಭೇ ಭಗವತೀ ನ ವಂದಿತೇತಿ ದೂಷಣಮಪಾಸ್ತಂ ಭವತಿ । ನ ಚ 'ಶ್ರೀಪತಯೇ' ಇತಿ ಸಮಾಸರೂಪಂ ಪದಂ ಪರಿತ್ಯಜ್ಯ ಭಿನ್ನಪದತ್ವಕರಣೇ ಹೇತುಃ ಕ ಇತಿ ವಾಚ್ಯಮ್ । ತಸ್ಯ 'ಶ್ರಯಂತಿ ಏನಮ್ ಇತಿ ಶ್ರೀಃ ಸ ಚಾಸೌ ಪತಿಶ್ಚ' ಇತಿ ಕರ್ಮಧಾರಯಪ್ರತೀತಿನಿರಾಸಾರ್ಥತ್ವಾತ್ । ಪದಭೇದಕರಣೇ ಷಷ್ಠ್ಯಾ ಶ್ರಿಯೋಽಪ್ರಾಧಾನ್ಯಸ್ಯ ಸ್ಪಷ್ಟಂ ಪ್ರತೀತೇಶ್ಚ । ಅನ್ಯಥಾ ಭಗವತೀವಂದನಸ್ಯ, ತಸ್ಯಾಃ ಅಪ್ರಾಧಾನ್ಯಪ್ರತೀತೇಶ್ಚ ಅಸಂಭವಾದಿತಿ ಭಾವಃ ।

ಶ್ರಿಯಃ ಪತ್ಯೇ ಎಂಬ ಪದದಿಂದ ನಾರಾಯಣಶಬ್ದದ ಅರ್ಥವನ್ನು ವಿವರಿಸಿದ್ದಾರೆ.
ಅದು ಹೀಗೆ – ನಾರಾಯಣ ಎಂದರೆ ಲಕ್ಷ್ಮೀಪತಿ ಎಂದರ್ಥ. ಅರ ಎಂದರೆ ದೋಷಗಳು. ನಾರ - ಎಂದರೆ ದೋಷಗಳಿಲ್ಲದಿರುವವಳು. ಅರ್ಥಾತ್. ಲಕ್ಷ್ಮೀ. ಅವಳಿಗೆ ಅಯನ ಎಂದರೆ ಆಶ್ರಯ. ಈ ರೀತಿ ಹೇಳಿದ್ದರಿಂದ ಒಂದು ಪ್ರಶ್ನೆಗೆ ಉತ್ತರ ಕೊಟ್ಟಂತಾಯಿತು.

ಆಚಾರ್ಯರು ಅನುವ್ಯಾಖ್ಯಾನವನ್ನು ಪ್ರಾರಂಭಮಾಡುತ್ತ ಮೊದಲಿಗೆ ಲಕ್ಷ್ಮೀದೇವಿಗೆ ನಮಸ್ಕಾರ ಮಾಡಲಿಲ್ಲವಲ್ಲವೇ? ಎಂದು ತೋರುವುದು. ಏಕೆಂದರೆ 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂಬ ಅನುವ್ಯಾಖ್ಯಾನದ ಮೊದಲನೆಯ ಪದ್ಯದಲ್ಲಿ ಕೇವಲ ನಾರಾಯಣನಿಗೆ ನಮಸ್ಕರಿಸಿದ್ದಾರಷ್ಟೇ. ಆದರೆ ಹಾಗಲ್ಲ ಎಂಬುದನ್ನು ಟೀಕಾಚಾರ್ಯರು ತಮ್ಮ ಈ ಒಂದು ಪದದಿಂದ ತೋರಿಸಿಕೊಟ್ಟಿದ್ದಾರೆ.

ಶ್ರಿಯಃ ಪತ್ಯೇ ಎಂಬುದಾಗಿ ಹೇಳದೇ ಶ್ರೀಪತಯೇ ಎಂದು ಒಂದೇ ಪದವನ್ನಾಗಿ ಹೇಳದಿರಲು ಏನು ಕಾರಣ? ಎಂದು ಪ್ರಶ್ನಿಸಬಹುದು. ಅದಕ್ಕೆ ಉತ್ತರವಿದು. ಶ್ರೀಪತಯೇ ಎಂದು ಹೇಳಿದ್ದರೆ ಲಕ್ಷ್ಮಿಗೆ ನಮಸ್ಕಾರವು ಮಾಡಿಲ್ಲವೆಂದೂ ಹಾಗೂ ಲಕ್ಷ್ಮಿಯು ಭಗವಂತನಿಗಿಂತ ಅಪ್ರಧಾನಳು ಎಂಬ ಎರಡಂಶಗಳ ತಿಳುವಳಿಕೆಯು ಬರದೇ ಇರುವ ಸಾಧ್ಯತೆ ಇದೆ ಎಂಬ ಎರಡು ದೋಷಗಳಿವೆ.

ಅದು ಹೀಗೆ - ಶ್ರೀ ಎಂದರೆ ಶ್ರಯಂತಿ ಏನಂ ಎಂಬ ವ್ಯುತ್ಪತ್ತಿಗನುಸಾರ ನಾವು ಯಾರನ್ನು ಆಶ್ರಯಿಸುತ್ತೇವೆಯೋ ಅವರು ಶ್ರೀ. ಈ ರೀತಿ ಆಶ್ರಯಿಸಿದಾಗ ಪರಮಾತ್ಮನೂ ಕೂಡ ಶ್ರೀ ಎನಿಸುತ್ತಾನೆ. ಅಂತಹ ಶ್ರೀಯಾದ ಆಶ್ರಯದಾತೃವಾದ ಪತಿ ಅರ್ಥಾತ್ ಸ್ವಾಮಿಯಾದವನು ಎಂದರೆ ಶ್ರೀಪತಿಯಾಗುವನು ಭಗವಂತ. ಹಾಗಾಗಿ ಲಕ್ಷ್ಮಿಗೆ ವಂದನೆ ಮಾಡಿದಂತಾಗಲಿಲ್ಲ. ಅಲ್ಲದೇ ಶ್ರೀಪತಯೇ ಎಂದು ಸಮಾಸಮಾಡಿದಾಗ ಶ್ರೀಶಬ್ದವು ಲಕ್ಷ್ಮಿಯನ್ನು ಒಂದು ಪಕ್ಷದಲ್ಲಿ ಹೇಳಿದರೂ ಅವಳು ಭಗವಂತನಿಗಿಂತ ಅಪ್ರಧಾನಳು ಎಂದು ತಿಳಿಸುವ ಸ್ಪಷ್ಟವಾದ ಶಬ್ದವಿಲ್ಲ.

ಹಾಗಾಗಿ ಶ್ರಿಯಃ ಪತ್ಯೇ ಎಂದು ಬಿಡಿಸಿ ಹೇಳಿದ್ದಾರೆ. ಈಗ ಲಕ್ಷ್ಮಿಗೆ ಪತಿಯಾದವನು ಎಂಬ ಅರ್ಥ ಬರುವುದರಿಂದ ಲಕ್ಷ್ಮಿಗೆ ವಂದನೆಯನ್ನು ಮಾಡಿದಂತಾಯಿತು. 'ವಿಶಿಷ್ಟಸ್ಯ ಯದ್ಭವತಿ ತದ್ವಿಶೇಷಣಸ್ಯಾಪಿ' ಎಂಬ ನಿಯಮದಂತೆ ವಿಶಿಷ್ಟವಾದ ಪದಾರ್ಥಕ್ಕೆ ಯಾವುದನ್ನು ಅನ್ವಯಿಸುತ್ತೇವೆಯೋ ಅವನ್ನು ಅದರ ವಿಶೇಷಣಕ್ಕೂ ಅನ್ವಯಮಾಡಬೇಕು. ಪಕೃತದಲ್ಲಿ ಲಕ್ಷ್ಮೀವಿಶಿಷ್ಟಪತಿಗೆ ನಮಸ್ಕರಿಸಿದರೆ ಲಕ್ಷ್ಮಿಗೂ ನಮಸ್ಕರಿಸಿದಂತೆ, ಅರ್ಥಾತ್ ನಮಃ ಪದದ ಅರ್ಥವಾದ ನಮಸ್ಕಾರವು ವಿಶಿಷ್ಟನಾದ ಭಗವಂತನಿಗೆ ಅನ್ವಯಿಸಿದರೆ ವಿಶೇಷಣವಾದ ಲಕ್ಷ್ಮಿಯಲ್ಲೂ ಅನ್ವಯಿಸಬೇಕು. ಅದರಂತೆಯೇ ಷಷ್ಠೀವಿಭಕ್ತಿಯಿಂದ ಲಕ್ಷ್ಮಿಯು ಅಪ್ರಧಾನಳು ಎಂದು ಸೂಚಿಸಿದಂತೆಯೂ ಆಯಿತು. 'ಚೈತ್ರಸ್ಯ ಗುರುಃ' ಎಂಬಲ್ಲಿನಂತೆ.

## ಅಶೇಷಶಬ್ದಾರ್ಥದಲ್ಲಿ ಸೇರುವ ಲಕ್ಷ್ಮಿಯನ್ನು ಶ್ರಿಯಃ ಪತ್ಯೇ ಎಂಬಲ್ಲಿ ತಿಳಿಸಿದ್ದಾರೆ

(ಪರಿಮಳ) — ಮೂಲೇ **'ಅಶೇಷವಿಶೇಷತೋಽಪಿ'** ಇತ್ಯನೇನ ಸಂಕಲಯ್ಯ ಶ್ರೀಬ್ರಹ್ಮಾದ್ಯುತ್ತಮತ್ವಮ್ ಉಕ್ತಮ್ । ತತ್ರ ಸಕಲವಾಙ್ಮನಸದೇವತಾಯಾಃ ದೇವ್ಯಾಃ ಗ್ರಂಥಾರಂಭೇಽವಶ್ಯಂ ವಂದ್ಯತ್ವದ್ಯೋತನಾಯ **'ಶ್ರಿಯಃ ಪತ್ಯೇ'** ಇತಿ ವಿಶಿಷ್ಯೋಕ್ತಿಃ । ತದಪಿ ಈಶ್ವರೋಪಸರ್ಜನತಯಾ ಇತಿ ಜ್ಞಾಪನಾಯ **'ಶ್ರಿಯಃ'** ಇತಿ ಪೃಥಗುಕ್ತಿಃ ।

ಅನುವ್ಯಾಖ್ಯಾನಮೂಲದಲ್ಲಿ 'ಅಶೇಷವಿಶೇಷತೋಽಪಿ ವಂದ್ಯಂ' ಎಂಬ ಪದದಿಂದ ಎಲ್ಲರೂ ನಮಸ್ಕರಿಸುವ ಲಕ್ಷ್ಮೀಮೊದಲಾದ ದೇವತೆಗಳಿಂದಲೂ ನಾರಾಯಣನು ವಂದ್ಯ ಎಂದಿದ್ದಾರೆ. ಅಲ್ಲಿ ಲಕ್ಷ್ಮಿಯನ್ನು ಸೇರಿಸಿಯೇ ಸಕಲದೇವತೆಗಳಿಗಿಂತ ಉತ್ತಮತ್ವವನ್ನು ನಾರಾಯಣನಿಗೆ ಹೇಳಿದ್ದಾರೆ.

ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ನ್ಯಾಯಸುಧೆಯ ಮೊದಲಿಗೆ 'ಶ್ರಿಯಃ ಪತ್ಯೇ' ಎಂದು ಲಕ್ಷ್ಮೀದೇವಿಗೇ ಸ್ವಾಮಿಯಾದವನು ಎಂದಿದ್ದಾರೆ. ಇನ್ನು ಗ್ರಂಥದ ಮೊದಲಿಗೆ ಅವಶ್ಯವಾಗಿ ಎಲ್ಲರ ಮಾತುಗಳಿಗೆ ಹಾಗೂ ಮನಸ್ಸಿಗೆ ಅಭಿಮಾನಿದೇವತೆಯಾದ ಲಕ್ಷ್ಮಿಯನ್ನು ನಮಸ್ಕರಿಸಲೇ ಬೇಕಾದ್ದರಿಂದ 'ಶ್ರಿಯಃ ಪತ್ಯೇ' ಎಂದು ಹೇಳಿದ್ದಾರೆ. ಅದರಲ್ಲೂ ಲಕ್ಷ್ಮಿಗೆ ನಮಸ್ಕಾರ ಪ್ರತ್ಯೇಕವಾಗಿ ಅರ್ಥಾತ್ ಸ್ವತಂತ್ರವಾಗಿ ಮಾಡುವುದು ಅನುಚಿತವಾದ್ದರಿಂದ ಭಗವಂತನ ಜೊತೆಗೆ ಅಪ್ರಧಾನವಾಗಿ ವಿವಕ್ಷೆ ಮಾಡಿ ನಮಸ್ಕರಿಸಬೇಕು ಎಂಬುದನ್ನು ತಿಳಿಸಲು 'ಶ್ರಿಯಃ' ಎಂದು ಪ್ರತ್ಯೇಕವಾಗಿ ಹೇಳಿದ್ದಾರೆ.

### ಶ್ರಿಯಃ ಪತ್ಯೇ ಎಂಬ ಶ್ಲೋಕದಲ್ಲಿನ ಸಕಲವಿಶೇಷಣಾರ್ಥಸೂಚಕ ಹರಿಪದ

(ರಸರಂಜನೀ) – ತಥಾಹಿ — ಹರತಿ = ವಿಹರತಿ = ಕ್ರೀಡತೇ ರಮಯಾ ಇತಿ ಹರಿಃ, ತದಭಿಪ್ರಾಯಕಥನಂ – ಶ್ರಿಯಃ ಪತ್ಯ ಇತಿ ॥ ಹರತಿ ಪರಿಹರತಿ ಸ್ವೀಯಗುಣಪ್ರಭಯಾ ದೋಷತಮೋ ದೂರೀಕರೋತೀತಿ ವಾ । 'ಸೋಽಯಂ ವಿಹಾರ' (ಮ.ಭಾ.ತಾ.ನಿ.) ಇತ್ಯುಕ್ತೇಃ ಕ್ರೀಡತೇ ಜಗತ್ಸೃಷ್ಟ್ಯಾದಿರೂಪಕ್ರೀಡಾವಾನ್ ಭವತೀತಿ ವಾ ।

'ವೇದಗಿರೋಽಖಿಲಾಃ । ಯತ್ಕ್ರೀಡಾಭೂಮಯಃ' (ಕರ್ಮನಿರ್ಣಯಟೀಕಾ)

ಇತ್ಯುಕ್ತೇಃ । 'ಕ್ರೀಡತೇ ವೇದಾದಿಷು' ಇತಿ ವಾ ಇತಿ ಯಥಾಕ್ರಮಮವಗಂತವ್ಯಮ್ ।

ಶ್ರಿಯಃಪತ್ಯೇ ಎಂಬ ಶ್ಲೋಕದಲ್ಲಿನ ಹರಿಶಬ್ದವು ಕೇವಲ ಡಿತ್ಥಾದಿಶಬ್ದಗಳಂತೆ ಭಗವಂತನಲ್ಲಿ ಸಾಂಕೇತಿಕವೂ ಅಲ್ಲ, ಘಟಾದಿಶಬ್ದಗಳಂತೆ ರೂಢವೂ ಅಲ್ಲ. ಹೊರತು ವಿಶಿಷ್ಟವಾದ ಗುಣಗಳನ್ನು ಹೇಳುವ ಶಬ್ದವಾಗಿದೆ. ಅದು ಹೀಗೆ — ಹರಿ ಎಂದರೆ ಹರತಿ = ವಿಹರತಿ = ಕ್ರೀಡತೇ ರಮಯಾ ಇತಿ ಎಂಬ ವ್ಯುತ್ಪತ್ತಿಯಂತೆ ರಮೆಯೊಟ್ಟಿಗೆ ಯಾರು ವಿಹರಿಸುತ್ತಿದ್ದಾನೋ ಅವನನ್ನೇ ಹರಿ ಎನ್ನುತ್ತಾರೆ. ಇದರ ಅಭಿಪ್ರಾಯವನ್ನು ತಿಳಿಸುವ ಪದವೇ ಶ್ರಿಯಃ ಪತ್ಯೇ ಎಂಬ ಪದ. ಅಥವಾ ಹರತಿ ಎಂದರೆ ಪರಿಹರತಿ ಎಂದರ್ಥ. ಏನನ್ನು ಪರಿಹರಿಸುತ್ತಾನೆ ಎಂದರೆ ತನ್ನ ಗುಣಗಳೆಂಬ ಪ್ರಭೆಯಿಂದ ದೋಷಗಳೆಂಬ ತಮಸ್ಸನ್ನು ಪರಹರಿಸಿಕೊಳ್ಳುತ್ತಾನೆ ಎಂದರ್ಥ. ಇಂತಹವನನ್ನೇ ಹರಿ ಎನ್ನುತ್ತಾರೆ. ತಾತ್ಪರ್ಯನಿರ್ಣಯದ ಮಾತು –

ಸ್ರಕ್ಷ್ಯೇ ಹಿ ಚೇತನಗಣಾನ್ ಸುಖದುಃಖಮಧ್ಯ-<br>
ಸಂಪ್ರಾಪ್ತಯೇ ತನುಭೃತಾಂ ವಿಹೃತಿಂ ಮಮೇಚ್ಛನ್ ।<br>
ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವ-<br>
ಸಂಭೂತಯೇ ಭವತಿ ಭೂತಿಕೃದೇವಭೂತ್ಯಾಃ । (ಅ.1.ಶ್ಲೋ5) - ಎಂದು.

ಹರತಿ = ಕ್ರೀಡತೇ ಕ್ರೀಡಿಸುತ್ತಾನೆ ಅಂದರೆ ಜಗತ್ಸೃಷ್ಟ್ಯಾದಿರೂಪವಾದ ಕ್ರೀಡೆಯನ್ನು ಹೊಂದಿರು-ವವನು ಯಾರೋ ಅವನೇ ಹರಿ ಎನಿಸಿಕೊಳ್ಳುವನು.

## ಜಗತ್ಸೃಷ್ಟಿ ಭಗವಂತನ ವಿಹಾರ

*ಭಾವಪ್ರಕಾಶಿಕಾ – ಅಧುನಾ ಸೃಷ್ಟ್ಯನುಕೂಲಂ ಭಗವತಃ ಸಂಕಲ್ಪಮಾಹ – ಸ್ಥಕ್ಷ್ಯ ಇತಿ ॥ ಸುಖಂ = ಕೇವಲಸ್ವರೂಪಭೂತಸುಖಂ ದುಃಖಂ = ಕೇವಲಸ್ವರೂಪಭೂತದುಃಖಂ ಮಧ್ಯಂ = ಸ್ವರೂಪಭೂತದುಃಖಮಿಶ್ರಸುಖಂ ತೇಷಾಂ ಸಂಪ್ರಾಪ್ತಯೇ = ನಿರೋಧಕಲಿಂಗದೇಹಭಂಗೇನ ಸಮ್ಯಕ್ ಪ್ರಾಪ್ತಯೇ । ಗತ್ಯರ್ಥಾನಾಂ ಜ್ಞಾನಾರ್ಥತ್ವಾತ್ ಅನುಭವಾಯ ತನುಭೃತ್ಸ್ವಭಾವ-ಸಂಭೂತಯೇ ತನುಭೃತಾಂ ಸ್ವಭಾವಃ ತ್ರಿವಿಧಸ್ವಭಾವಃ ತಸ್ಯ ಸಂಭೂತಯೇ = ಸಮ್ಯಕ್ ಭೂತಿರನುಭೂತಿಃ ತಸ್ಮೈ । ಏವಂ ಚ ಉತ್ತಮಾಧಮಜೀವಯೋರಿವ ಮಧ್ಯಮಾನಾಮಪಿ ಸಾಂಸಾರಿಕಾನಿತ್ಯಸುಖದುಃಖಯೋಃ ಸ್ವಭಾವತ್ವಾಯೋಗಾತ್ ಸ್ವಭಾವಭೂತಸ್ವರೂಪಸುಖ-ದುಃಖಾಭಿವ್ಯಕ್ತಿರಪಿ ಕಥಂ ನ ವಾಚ್ಯೇತಿ । ಸೃಷ್ಟಿಶ್ಚತುರ್ವಿಧಾ - ಶುದ್ಧಸೃಷ್ಟಿಃ, ಪರಾಧೀನ-ವಿಶೇಷಾವಾಪ್ತಿರೂಪಾ ಸೃಷ್ಟಿಃ, ಮಿಶ್ರಸೃಷ್ಟಿಃ, ಕೇವಲಸೃಷ್ಟಿಶ್ಚೇತಿ । ತತ್ರ ಶುದ್ಧಸೃಷ್ಟಿರ್ನಾಮ ದೇಹೇಂದ್ರಿಯಾಂತಃಕರಣಾದೇಃ ಈಷದ್ವಿಕಾರಾಭಾವೇಽಪಿ ಕೇವಲಂ ಲೀಲಯೈವ ಜಗದು-ಪಕಾರಾಯ ಮೂಲರೂಪಾತ್ ಬಹಿರಾಗಮನಮ್ । ಉತ್ತರಾ ತು ಲಕ್ಷ್ಮ್ಯಾದೀನಾಂ ಸೃಷ್ಟ್ಯಾದೌ ಭಗವದಾಜ್ಞಯಾ ಪ್ರಕೃತಿಸ್ವಾಮಿತ್ವಾದಿವಿಶೇಷಾವಾಪ್ತಿಃ । ಮಿಶ್ರಸೃಷ್ಟಿರ್ನಾಮ ಅನುತ್ಪನ್ನಾನಾಮೇವ ಜೀವಚೇತನಾನಾಂ ಕೇವಲಂ ಬಾಹ್ಯದೇಹೇನ್ಯೈವೋತ್ಪತ್ತಿಃ । ಕೇವಲಸೃಷ್ಟಿರ್ನಾಮಪ್ರಾಗ-ವಿದ್ಯಮಾನಾನಾಮೇವ ಘಟಪಟಾದೀನಾಂ ಸ್ವರೂಪೇಣೈವೋತ್ಪತ್ತಿಃ ।

– ಭಗವಂತ ಸೃಷ್ಟಿ ಮಾಡುವುದು ನಾಲ್ಕು ರೀತಿಯಲ್ಲಿ ಶುದ್ಧಸೃಷ್ಟಿ, ಪರಾಧೀನವಿಶೇಷಾವಾಪ್ತಿರೂಪ ಸೃಷ್ಟಿ, ಮಿಶ್ರಸೃಷ್ಟಿ, ಕೇವಲಸೃಷ್ಟಿ ಎಂದು. ಇದೆಲ್ಲದಕ್ಕೂ ವಿವರಣೆಯನ್ನು ವ್ಯಾಖ್ಯಾನದಲ್ಲಿ ಕಾಣಬಹುದು. ಅದು ಹೀಗೆ ಶುದ್ಧಸೃಷ್ಟಿ ಎಂದರೆ ಭಗವಂತನ ದೇಹ ಇಂದ್ರಿಯ ಅಂತಃಕರಣಾದಿ-ಗಳಿಗೆ ಸ್ವಲ್ಪವೂ ವಿಕಾರವಾಗದೇ ಕೇವಲ ಲೀಲೆಯಿಂದಲೇ ಜಗತ್ತಿನ ಉಪಕಾರಕ್ಕಾಗಿ ಮೂಲ ರೂಪದಿಂದ ಹೊರಗೆ ಬರುವುದು. ಪರಾಧೀನವಿಶೇಷಾವಾಪ್ತಿರೂಪವಾದ ಸೃಷ್ಟಿ ಎಂದರೆ ಲಕ್ಷ್ಮೀ ಮೊದಲಾದ ದೇವತೆಗಳಿಗೆ ಭಗವಂತನ ಆಜ್ಞೆಯಿಂದ ಸೃಷ್ಟ್ಯಾದಿವಿಷಯಗಳಲ್ಲಿ ಪ್ರಕೃತಿ-ಸ್ವಾಮಿತ್ವ ಮೊದಲಾದ ವಿಶೇಷವನ್ನು ಹೊಂದುವುದು. ಮಿಶ್ರಸೃಷ್ಟಿ ಎಂದರೆ ಇನ್ನೂ ಹುಟ್ಟಿದೇ ಇರುವ ಜೀವಚೇತನನಿಗೆ ಕೇವಲ ಬಾಹ್ಯದೇಹದಿಂದಲೇ ಉತ್ಪತ್ತಿ. ಕೇವಲಸೃಷ್ಟಿ ಎಂದರೆ ಮೊದಲು ಇಲ್ಲದೇ ಇರುವ ಮಡಿಕೆ, ಬಟ್ಟೆ ಮೊದಲಾದವುಗಳ ಸ್ವರೂಪತಃ ಉತ್ಪತ್ತಿ.

ಈ ಸೃಷ್ಟಿಯು ಭಗವಂತನಿಗೆ ಒಂದು ವಿಹಾರವಾಗಿದೆ. ಅರ್ಥಾತ್ ಕ್ರೀಡೆಯಾಗಿದೆ. ಇದರಿಂದ ತ್ರಿವಿಧಚೇತನರಿಗೂ ಉಪಕಾರವಾಗುವುದು.

ಈ ಶ್ಲೋಕದಲ್ಲಿ ಸುಖ ಎಂದರೆ ಕೇವಲ ಸ್ವರೂಪಭೂತವಾದ ಸುಖ. ದುಃಖ ಎಂದರೆ ಕೇವಲ ಸ್ವರೂಪಭೂತವಾದ ದುಃಖ. ಮಧ್ಯ ಎಂದರೆ ಸ್ವರೂಪಭೂತವಾದ ದುಃಖಮಿಶ್ರಿತವಾದ ಸುಖ ಎಂದು ತಿಳಿಯಬೇಕು. ಇವುಗಳ ಸಂಪ್ರಾಪ್ತಿಗಾಗಿ ಎಂದರೆ ಈ ಸುಖಾದಿಗಳನ್ನು ತಡೆಯುವ ಲಿಂಗದೇಹಭಂಗವಾಗುವ ಮೂಲಕ ಆ ಸುಖಾದಿಗಳ ಪ್ರಾಪ್ತಿಗಾಗಿ ಎಂದರ್ಥ.

## ಎಲ್ಲ ವೇದಗಳೂ ಹರಿಯ ಕ್ರೀಡಾಭೂಮಿ - ಕರ್ಮನಿರ್ಣಯಟೀಕಾ

ಅಥವಾ - ಹರತಿ ಎಂದರೆ ಕ್ರೀಡತೇ ಎಂದರ್ಥ. ವೇದಾದಿಗಳಲ್ಲಿ ಕ್ರೀಡಿಸುತ್ತಾನೆ ಎಂದು ತಾತ್ಪರ್ಯ. 'ವೇದಗಿರೋಽಖಿಲಾಃ ಯತ್ಕ್ರೀಡಾಭೂಮಯಃ' ಎಂಬ ಮಾತಿರುವುದರಿಂದ. ಎಲ್ಲ ವೇದಮಾತುಗಳು ಯಾರಿಗೆ ಆಟವಾಡುವ ಭೂಮಿಯಾಗಿದೆಯೋ ಎಂದರ್ಥ.

ब्राह्मणोपनिषन्मंत्रभेदा वेदगिरोऽखिला: ।
यत्क्रीडाभूमयस्तस्मै परस्मै ब्रह्मणे नम: । -(कर्मनिर्णयटीका आदिश्लोक:)

– ಗ್ರಂಥಾದೌ ಮಂಗಲಮಾಚರತಿ – ಬ್ರಾಹ್ಮಣೇತಿ ॥ ಮೂಲೇ "ಯಜ್ಞಭುಜೇ" ಇತ್ಯಾದ್ಯುಕ್ತ್ಯಾ ಯಜ್ಞವಿದ್ಯಾಮಾತ್ರಾರ್ಥತ್ವಪ್ರತೀತಾವಪಿ ತದುಪಲಕ್ಷಣಮಿತಿ ಭಾವೇನೋಕ್ತಮ್ – ಬ್ರಾಹ್ಮಣೇ-ತ್ಯಾದಿ ॥ ತ್ರಿತಯೈಕದೇಶಸ್ಯಾಪಿ ಅತ್ರ ಬ್ರಹ್ಮಪರತ್ವೇನಾಗ್ರೇ ವ್ಯಾಖ್ಯಾನಾತ್ । 'ಬ್ರಾಹ್ಮಣೇ'ತಿ, 'ಉಪನಿಷದಿ'ತಿ. 'ಮಂತ್ರೇ'ತಿ ಭೇದೋ ವಿಭಾಗೋ ಯಾಸಾಂ ತಾ ವೇದರೂಪಾ ಗಿರಃ । ಬ್ರಾಹ್ಮಣೋ ನಾಮ ಮಂತ್ರಾಣಾಂ ವಿನಿಯೋಜಕವಾಕ್ಯಸಂದರ್ಭರೂಪೋ ಗ್ರಂಥಃ । ಉಪನಿಷನ್ನಾಮ ಆರಣ್ಯಕಮ್ । ಮಂತ್ರಃ ಸಂಹಿತಾಭಾಗೋ ಋಗಾದಿಃ । ಏಕೈಕವೇದಾರ್ಥತ್ವನಿರಾಸಾಯೋಕ್ತಮ್ – ಅಖಿಲಾ ಇತಿ ॥ ಯಸ್ಯ ಕ್ರೀಡಾಭೂಮಯೋ ವಿಹಾರಾಶ್ರಯಾಃ ಪ್ರತಿಪಾದಿಕಾ ಇತಿ ಯಾವತ್ । ಮೂಲೇ ರಮಾಪ್ರಣಯಿನ ಇಂದ್ರಾದಿಮಹಾರ್ಥತ್ವಘಟನಾಯ 'ಮಹದ್ಧಿ ತತ್ಪರಂ ಬ್ರಹ್ಮ' ಇತ್ಯುಕ್ತಮ್ । ತದನುರೋಧೇನೋಕ್ತಮ್ – ಪರಸ್ಮೈ ಬ್ರಹ್ಮಣ ಇತಿ ॥ ತೇನ ರಮಾಪ್ರಣಯೀ ಪರಂ ಬ್ರಹ್ಮ ಚೈಕಂ ವಸ್ತು ಇತ್ಯುಕ್ತಂ ಭವತಿ ॥ (ಟೀಕಾ ಭಾವದೀಪ)

* – ಕರ್ಮನಿರ್ಣಯಟೀಕಾಗ್ರಂಥದ ಮೊದಲಿಗೆ ಮಂಗಲವನ್ನು ಆಚರಿಸಿದ್ದಾರೆ. ಬ್ರಾಹ್ಮಣ-ಉಪನಿಷತ್ ಎಂಬುದಾಗಿ. ವೇದರೂಪವಾದ ಮಾತುಗಳು ಮೂರು ವಿಭಾಗವನ್ನು ಹೊಂದಿವೆ. ಬ್ರಾಹ್ಮಣ, ಉಪನಿಷತ್, ಮಂತ್ರ ಎಂಬುದಾಗಿ. ಬ್ರಾಹ್ಮಣ ಎಂದರೆ ಮಂತ್ರವನ್ನು ವಿನಿಯೋಗಿಸುವ ವಿಧಿವಾಕ್ಯಗಳ ಸಮೂಹ. ಉಪನಿಷತ್ ಎಂದರೆ ಆರಣ್ಯಕ. ಮಂತ್ರ ಎಂದರೆ ಋಗ್ವೇದ ಮೊದಲಾದ ಸಂಹಿತಾಭಾಗ. ಈ ಎಲ್ಲ ವೇದಮಾತುಗಳು ಭಗವಂತನ ವಿಹಾರಕ್ಕೆ ಆಶ್ರಯವಾದ ಕ್ರೀಡಾಭೂಮಿ-

ಗಳಾಗಿವೆ. ಅಂದರೆ ಎಲ್ಲವೂ ಆ ಭಗವಂತನನ್ನು ಪ್ರತಿಪಾದನೆ ಮಾಡುತ್ತಿವೆ. ಈ ಮೂರೂ ವಿಭಾಗಗಳು ಬ್ರಹ್ಮಪರ ಎಂದು ಮುಂದೆ ಸಮರ್ಥಿಸಲಾಗುತ್ತದೆ. ಇಂತಹ ಪರಬ್ರಹ್ಮನಿಗೆ ನಮಸ್ಕಾರಗಳು.

* ಪರಸ್ಯ ಬ್ರಹ್ಮಣೋ ಯನ್ನಾಮೇಂದ್ರಾದಿಕಂ ತನ್ಮಹಾರ್ಥತ್ವಾತ್ ಮಹತ್ । ಮಹದ್ಧಿ ತತ್ಪರಂ ಬ್ರಹ್ಮ । ಗುಣಪೂರ್ತೇಃ । - (ಕರ್ಮನಿರ್ಣಯ) (ಪು.7)

ಅತ್ರ ಅವಾಂತರವಾಕ್ಯಭೇದೇನ ತ್ರಯಾಣಾಮಪಿ ಪ್ರಶ್ನಾನಾಂ ತ್ರೀಣ್ಯುತ್ತರಾಣಿ ದ್ರಷ್ಟವ್ಯಾನಿ । ಕಥಂ ಪರಬ್ರಹ್ಮನಾಮ್ನೋ ಮಹಾರ್ಥತ್ವಮಿತ್ಯತ ಆಹ –ಮಹದ್ಧೀತಿ ॥ ಯಸ್ಯೈತನ್ನಾಮ ತತ್ । ಹಿ-ರ್ಹೇತೌ । ತಸ್ಮಾನ್ನಾಮ್ನೋ ಮಹಾರ್ಥತ್ವಂ ಯುಕ್ತಮಿತಿ । ಪರಬ್ರಹ್ಮಣೋ ಮಹತ್ತ್ವಮೇವ ಕುತಃ? ಇತ್ಯತ ಆಹ – ಅಶೇಷೇತಿ ॥ ಅಶೇಷಗುಣೈಃ ಪೂರ್ತೇಃ ಅಶೇಷಗುಣಾನಾಂ ಪೂರ್ತೇರಿತಿ ವಾ । ಮಹತ್ವಂ ಹಿ ಪರಿಮಾಣಪೂರ್ತ್ಯಾ, ಸತ್ತಾ ಪೂರ್ತ್ಯಾ ವಾ ಭವತಿ, ಯಥಾ ಗಗನಾದೇಃ । ಜ್ಞಾನಾದಿ ಗುಣಪೂರ್ತ್ಯಾ ವಾ, ಯಥಾ ವಸಿಷ್ಠಾದೇಃ । ಇದಂ ತು ಅಶೇಷಗುಣಪೂರ್ಣಂ ಕಥಂ ನ ಮಹದಿತಿ ॥ – (ಕರ್ಮನಿರ್ಣಯಟೀಕಾ)

ಅವಾಂತರೇತಿ ॥ 'ಪರಸ್ಯ ಬ್ರಹ್ಮಣಃ' ಇತಿ ಕಸ್ಯ ನಾಮ? ಇತ್ಯಸ್ಯ, 'ಐಂದ್ರಾದಿಕಂ ನಾಮ" ಇತ್ಯೇತತ್ ಕಿಂಚ ತತ್? ಇತ್ಯಸ್ಯ, 'ತನ್ಮಹಾರ್ಥತ್ವಾತ್ ಮಹತ್' ಇತ್ಯೇತತ್ ಕಸ್ಮಾಚ್ಚ ಮಹತ್? ಇತ್ಯೇವಂ ರೂಪೇಣ ತ್ರೀಣ್ಯುತ್ತರಾಣೀತ್ಯರ್ಥಃ । ಬ್ರಹ್ಮಣೋ ಮಹತ್ತ್ವೇ ನಾಮ್ನೋ ಮಹಾರ್ಥತ್ವಂ ಕುತಃ? ಇತ್ಯತೋ ನಾಮ್ನೋ ಮಹಾರ್ಥತ್ವಂ ಘಟಯತಿ – ಯಸ್ಯೈತದಿತಿ ॥ ಅಶೇಷಪದಕೃತ್ಯಂ ವಕ್ತುಮಾಹ – ಮಹತ್ವಂ ಹೀತಿ ॥ (ರಾಘವೇಂದ್ರರ ಕರ್ಮನಿರ್ಣಯಟೀಕಾ ಟಿಪ್ಪಣೀ)

ಪರಸ್ಮೈ ಬ್ರಹ್ಮಣೇ ನಮಃ ಎಂದು ಪರಬ್ರಹ್ಮನಿಗೆ ನಮಸ್ಕಾರ ಮಾಡಿದ್ದಾರೆ. ಕರ್ಮನಿರ್ಣಯದಲ್ಲಿ ಬಂದ ಪರಸ್ಯ ಬ್ರಹ್ಮಣೋ ಎಂಬ ಭಾಗವನ್ನು ನೆನೆಪಿಸುತ್ತಿದೆ. ಆ ಪರಬ್ರಹ್ಮನು ಮಹತ್ತಾಗಿದ್ದಾನೆ. ಏಕೆಂದರೆ ಅವನು ಸಕಲಗುಣಪರಿಪೂರ್ಣನಾಗಿದ್ದಾನೆ. ಈ ಪರಬ್ರಹ್ಮನಿಗೆ ಏನು ಹೆಸರು? ಇಂದ್ರ ಮೊದಲಾದ ನಾಮಧೇಯವಿದೆಯೆಂದು ಉತ್ತರ. ಆ ನಾಮಧೇಯಗಳು ಮಹತ್ತಾಗಿವೆ. ಹಾಗಾಗಿಯೇ ಮಹಾನಾಮ್ನೀ ಎಂದು ಇಲ್ಲಿ ವ್ಯಾಖ್ಯಾನಮಾಡುವ ಋಙ್ಮಂತ್ರಗಳಿಗೆ ಹೆಸರು. ಆ ಇಂದ್ರಾದಿನಾಮ-ಗಳಿಗೆ ಮಹತ್ವ ಹೇಗೆ ಬಂತು? ಎಂದರೆ ಅದರ ಅರ್ಥದಲ್ಲಿ ಮಹತ್ವವಿರುವುದರಿಂದ. ಅರ್ಥಾತ್ ಪರಬ್ರಹ್ಮನಿಗೆ ಮಹತ್ವವಿರುವುದರಿಂದ. ಯಾವಾಗ ಆಕಾಶಾದಿಗಳಲ್ಲಿ ಮಹತ್ವವು ಪರಿಮಾಣಪೂರ್ತಿ ಅಥವಾ ಸತ್ತಾಪೂರ್ತಿಯಿಂದ ಇದೆಯೋ, ಸಕಲದೇಶಕಾಲಗಳಲ್ಲಿ ಆಕಾಶವು ವ್ಯಾಪ್ತವಾದ ಕಾರಣ ಅದರಲ್ಲಿ ಮಹತ್ವವಿದೆ. ಹೀಗೆ ಜ್ಞಾನಾದಿಗುಣಪೂರ್ತಿಯಿಂದ ವಸಿಷ್ಠಾದಿಗಳಲ್ಲಿ ಮಹತ್ವ ಬಂದಿದೆ. ಹೀಗೆ ಬೇರೆ ವಸ್ತುಗಳಲ್ಲೇ ಮಹತ್ವವಿದ್ದಾಗ ಸರ್ವಗುಣಪೂರ್ಣನಾದ ಆ ಪರಬ್ರಹ್ಮನಲ್ಲಿ ಮಹತ್ವ ಸುತರಾಂ ಸಿದ್ಧವೇ ಆಗಿದೆ.

## ನಿತ್ಯಾಗಣಿತ .. ಎಂಬ ಮಾತು ವಿಶೇಷಣದ್ವಯಕ್ಕೆ ಹೇತುಹೇತುಮದ್ಭಾವೇನ ಯೋಜನಾದ್ಯೋತಕ

(ಪರಿಮಳ)– 'ನಿಖಿಲ' ಇತಿ 'ನಿರ್ದೋಷ' ಇತಿ ಚ ವಿಶೇಷಣದ್ವಯಸ್ಯ ಹೇತುಹೇತುಮದ್ಭಾವೇನ ಯೋಜನಾದ್ಯೋತನಾಯ 'ನಿತ್ಯ' ಇತ್ಯಾದ್ಯುಕ್ತಮ್ । 'ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ' ಇತ್ಯುಕ್ತೇಃ ಸರ್ವಸ್ವಾತಂತ್ರ್ಯಸರ್ವಜ್ಞಾನಸರ್ವಶಕ್ತಿಸರ್ವೈಶ್ವರ್ಯಾದಿಗುಣಸತ್ತ್ವೇ ಪಾರ–ತಂತ್ರ್ಯಾದಿದೋಷಾಣಾಮ್ ಅಯೋಗಾತ್ ।

ಅನುವ್ಯಾಖ್ಯಾನದಲ್ಲಿ ಬರುವ 'ನಿಖಿಲಪೂರ್ಣಗುಣೈಕದೇಹಂ' ಹಾಗೂ 'ನಿರ್ದೋಷಂ' ಎಂಬ ಎರಡು ವಿಶೇಷಣಗಳಿಗೆ ಪರಸ್ಪರಸಂಬಂಧವಿದೆ. ಸಂಬಂಧವಾದರೋ ಕಾರ್ಯಕಾರಣಭಾವ-ವಾಗಿದೆ. ಅರ್ಥಾತ್ ಹೇತುಹೇತುಮದ್ಭಾವವಾಗಿದೆ. ಭಗವಂತನು ಪ್ರತ್ಯೇಕವಾಗಿ ಸಕಲಗುಣಗಳಿಂದ ಪರಿಪೂರ್ಣನಾಗಿದ್ದರೆ ಆಗ ದೋಷಗಳುಳ್ಳವನು ಎನ್ನಲು ಸಾಧ್ಯವೇ ಇಲ್ಲ. ಏಕೆಂದರೆ ಒಂದು ದೋಷವಿದೆ ಎಂದಾದರೂ ಸಕಲ ಗುಣಗಳಿವೆ ಎನ್ನುವುದು ಅಸಾಧ್ಯ. ಈ ರೀತಿ ಒಂದೂ ದೋಷಗಳಿಲ್ಲವಾದ್ದರಿಂದ ಅವನಲ್ಲಿ ಸಕಲಗುಣಗಳು ಇವೆ. ಹೀಗೆ ಕಾರ್ಯಕಾರಣಭಾವೇನ ಈ ಎರಡೂ ವಿಶೇಷಣಗಳಿವೆ. ಈ ರೀತಿಯ ಯೋಜನೆಯನ್ನು ಮಾಡಬೇಕೆಂದು ತಿಳಿಸಲು 'ನಿತ್ಯಾ-ಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂದಿದ್ದಾರೆ. ಇಲ್ಲಿ `ಉಪಹತ' ಎಂಬ ಶಬ್ದವನ್ನು ಬಳಸಿ ಅಜ್ಞಾನವೆಂಬ ಕತ್ತಲೆಯು ಇಲ್ಲದಿರುವುದಕ್ಕೆ ಅರ್ಥಾತ್ ಅಜ್ಞಾನವೆಂಬ ದೋಷವಿಲ್ಲದಿರುವುದಕ್ಕೆ ಸರ್ವಜ್ಞತ್ವ ಮೊದಲಾದ ಗುಣಗಳೇ ಪ್ರಯೋಜಕವೆಂದು ಕಾರ್ಯಕಾರಣಭಾವವನ್ನು ಸ್ಫುಟಪಡಿಸಿದ್ದಾರೆ.

## ವಿಶೇಷಣದ್ವಯಗಳ ಬಗ್ಗೆ ದ್ವಾದಶಸ್ತೋತ್ರದಲ್ಲಿ

ಈ ಅಂಶವನ್ನು ದ್ವಾದಶಸ್ತೋತ್ರದಲ್ಲೂ (8/8) ತಿಳಿಸಿದ್ದಾರೆ. ಅದು ಹೀಗೆ –

ಅಚ್ಯುತೋ ಯೋ ಗುಣೈರ್ನಿತ್ಯಮೇವಾಖಿಲೈಃ
ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ ।
ಉಚ್ಯತೇ ಸರ್ವವೇದೋರುವಾದೈರಜಃ
ಸ್ವರ್ಚಿತೋ ಬ್ರಹ್ಮರುದ್ರೇಂದ್ರಪೂರ್ವೈಃ ಸದಾ ॥ 8 ॥ ಪ್ರೀಣಯಾಮೋ ವಾಸುದೇವಮ್॥

ಇಲ್ಲಿ ಅನ್ವಯವಾಕ್ಯ ಹೀಗೆ – 'ಯಃ ನಿತ್ಯಮೇವಾಖಿಲೈಃ ಗುಣೈಃ ಸದಾ ಪೂರ್ತಿತಃ ಅಶೇಷದೋಷೈಃ ಪ್ರಚ್ಯುತಃ ...' – 'ಯಾವ ವ್ಯಕ್ತಿಯು ಉತ್ಪತ್ತಿನಾಶವಿಲ್ಲದಿರುವ ಅರ್ಥಾತ್ ನಿತ್ಯವಾದ ಎಲ್ಲ ಸದ್ಗುಣಗಳಿಂದ ತುಂಬಿರುವ ಕಾರಣದಿಂದ ಎಲ್ಲ ದೋಷಗಳಿಂದ ರಹಿತನಾಗಿರುವನೋ' ಎಂದು.

ಇದರಿಂದಾಗಿ ಎಲ್ಲ ವಿಷಯದಲ್ಲಿ ಸ್ವಾತಂತ್ರ್ಯ, ಸರ್ವಜ್ಞಾನ, ಸರ್ವಶಕ್ತಿ ಸರ್ವೈಶ್ವರ್ಯ ಇವೇ ಮೊದಲಾದ ಗುಣಗಳಿದ್ದಾಗ ಪರಾಧೀನತೆ, ಅಜ್ಞಾನ, ಅಶಕ್ತಿ ಅನೈಶ್ವರ್ಯ ಮೊದಲಾದ ದೋಷಗಳು ಇರಲು ಅಸಾಧ್ಯ ಎಂದಾಯಿತು.

ಪ್ರತಿಪದಾರ್ಥ – ಯಃ = ಯಾವ ವಾಸುದೇವನು, ನಿತ್ಯಂ = ಯಾವಾಗಲೂ, ಅಖಿಲೈಃ = ಎಲ್ಲವಿಧವಾದ, ಗುಣೈಃ = ಜ್ಞಾನಾನಂದಾದಿ ಗುಣಗಳಿಂದ, ಅಚ್ಯುತ ಏವ = ಬಿಡಲ್ಪಡದೇ ಇರುವವನಾಗಿದ್ದಾನೋ. ಸದಾ = ಯಾವಾಗಲೂ, ಪೂರ್ತಿತಃ = ಸಕಲಸದ್ಗುಣಗಳಿಂದ ಪೂರ್ಣನಾಗಿರುವುದರಿಂದ, ಅಶೇಷದೋಷೈಃ = ಪಾರತಂತ್ರ್ಯಮೊದಲಾದ ಎಲ್ಲ ದೋಷಗಳಿಂದ, ಪ್ರಚ್ಯುತಃ = ರಹಿತನಾಗಿದ್ದಾನೋ, ಅಜಃ = ಜನನಾದಿ ದೋಷರಹಿತನೋ, ಸರ್ವವೇದೋರುವಾದ್ಯೈಃ = ಇಡೀ ವೇದಗಳಲ್ಲಿರುವ ಪ್ರತಿಯೊಂದು ವಾಕ್ಯಗಳಿಂದ, ಉಚ್ಯತೇ = ಹೇಳಲ್ಪಡುತ್ತಾನೋ, ಸದಾ = ಯಾವಾಗಲೂ, ಬ್ರಹ್ಮರುದ್ರೇಂದ್ರಪೂರ್ವೈಃ = ಚತುರ್ಮುಖ ಬ್ರಹ್ಮ ರುದ್ರ ಇಂದ್ರ ಮೊದಲಾದವರಿಂದ, ಸ್ವರ್ಚಿತಃ = ಚೆನ್ನಾಗಿ ಪೂಜಿಸಲ್ಪಡುತ್ತಾನೋ, ತಂ = ಅಂತಹ, ದೇವತಾಮಂಡಲಾಖಂಡಮಂಡನಂ = ಬ್ರಹ್ಮರುದ್ರಾದಿದೇವತೆಗಳ ಸಮುದಾಯಕ್ಕೆ ಪೂರ್ಣವಾದ ಅಲಂಕಾರದಂತಿರುವ, ವಾಸುದೇವಂ = ವಾಸುದೇವನನ್ನು, ಪ್ರೀಣಯಾಮಃ = ಸಂತೋಷಕ್ಕಾಗಿ ಹೊಂದೋಣ.

## ಬ್ರಹ್ಮತಂತ್ರದಲ್ಲಿ ನಾರಾಯಣನಿಗೆ ನಮಸ್ಕಾರ ಅಯುಕ್ತ ಎಂಬ ಶಂಕೆ ಕೂಡದು?

(ಪರಿಮಳ)– ಏತಚ್ಚ ಬ್ರಹ್ಮಪದೇನ ಗುಣಪೂರ್ತಿವತ್ ನಿರ್ದೋಷತ್ವಸ್ಯಾಪಿ ಲಾಭಾಯ । ತೇನ ನಾರಾಯಣಶಬ್ದಸ್ಯ ಬ್ರಹ್ಮಶಬ್ದಸಮಾನಾರ್ಥತ್ವಸೂಚನೇನ 'ಬ್ರಹ್ಮತಂತ್ರೇ ನಾರಾಯಣನತಿಃ ಮೂಲೇ ನ ಯುಕ್ತಾ' ಇತಿ ಶಂಕಾ ಪರಾಸ್ತಾ ॥

'ನಿರ್ದೋಷಂ ನಾರಾಯಣಂ ಸನ್ನಮಾಮಿ' ಎಂದು ಅನುವ್ಯಾಖ್ಯಾನದಲ್ಲಿ ನಾರಾಯಣಶಬ್ದದ ಅರ್ಥ ದೋಷರಹಿತ ಎಂದು ತಿಳಿಸಿದ್ದಾರೆ. ಹೀಗೆ ಹೇಳಿದ್ದರಿಂದ ಬ್ರಹ್ಮಶಬ್ದಕ್ಕೆ ಹೇಗೆ ನಿರ್ದೋಷತ್ವ ಎಂಬ ಅರ್ಥವಿದೆಯೋ ಅದೇ ರೀತಿ ಇದಕ್ಕೂ ಅರ್ಥವಿದೆ ಎಂದಾಯಿತು. ಹಾಗಾಗಿ ಬ್ರಹ್ಮಶಬ್ದ ಸಮಾನಾರ್ಥಕವಾಗಿದೆ ನಾರಾಯಣಶಬ್ದ.

ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವ್ಯಾಖ್ಯಾನ ಮಾಡುವಾಗ ಅನುವ್ಯಾಖ್ಯಾನದ ಮೊದಲಿಗೆ ನಾರಾಯಣನಿಗೆ ಮಾಡಿದ ನಮಸ್ಕಾರ ಅನುಚಿತ ಎಂಬ ಶಂಕೆಗೆ ಅವಕಾಶವಿಲ್ಲ. ಇದನ್ನು ಅನುಸರಿಸಿ ಶ್ರೀಮಜ್ಜಯತೀರ್ಥರು ಕೂಡ ನ್ಯಾಯಸುಧಾದಲ್ಲಿ 'ನಿತ್ಯಾಗಣೇತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ ಹರಯೇ ನಮಃ' ಎಂಬಲ್ಲಿ 'ಉಪಹತಸಕಲಾವದ್ಯತಮಸೇ' ಎಂಬ ಭಾಗದಿಂದ ದೋಷರಹಿತ ಎಂಬುದು ನಾರಾಯಣಶಬ್ದದ ಅರ್ಥ ಎಂದು ವಿವರಿಸಿದ್ದಾರೆ. ಹರಿಯೇ ನಾರಾಯಣ ತಾನೇ.

## ನಿತ್ಯಾಗಣಿತ.... ಎಂಬ ಉಕ್ತಿಯು ವ್ಯಾಪ್ತಿಸೂಚನೆಗಾಗಿ

**(ಪರಿಮಳ)– ಯದ್ವಾ ಲೋಕೇ ಗುಣದೋಷಯೋರವಿನಾಭಾವದೃಷ್ಟೇಃ ಇಹಾಪಿ ಗುಣಿತ್ವೇ ದೋಷಿತ್ವಾಪತ್ತಿಃ – ಇತ್ಯತಃ ಮಿತಗುಣಿತ್ವೇ ದೋಷಿತ್ವಮ್, ಅತ್ರ ಅಮಿತಗುಣತ್ವಾತ್ ನ ದೋಷಿತಾ ಇತಿ ಸೂಚನಾಯ ಏವಮುಕ್ತಿಃ ।**

'ಯದ್ವಾ ಲೋಕೇ' ಎಂದು 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತ-ಸಕಲಾವದ್ಯತಮಸೇ' ಎಂಬ ವಿಶೇಷಣದ ಸಾರ್ಥಕ್ಯವನ್ನು ಇನ್ನೊಂದು ರೀತಿಯಲ್ಲಿ ಪರಿಮಳದಲ್ಲಿ ತೋರಿಸುತ್ತಿದ್ದಾರೆ. ಲೋಕದಲ್ಲಿ ಗುಣ ಹಾಗೂ ದೋಷಗಳಿಗೆ ಅವಿನಾಭಾವ ಅರ್ಥಾತ್ ವ್ಯಾಪ್ತಿಯು ಕಂಡಿದೆ. 'ಯತ್ರ ಯತ್ರ ಗುಣಾಃ ತತ್ರ ತತ್ರ ದೋಷಾಃ' ಎಂಬುದಾಗಿ. ಪ್ರಕೃತದಲ್ಲಿ ನಾರಾಯಣಲ್ಲಿಯೂ ಗುಣಗಳಿದ್ದರೆ ದೋಷವಿರಲೇಬೇಕು. ಹಾಗಾಗಿ ನಿರ್ದೋಷ ಎಂದದ್ದು ಹೇಗೆ ಸರಿ?

ಇದಕ್ಕೆ ಉತ್ತರ - ಲೋಕದಲ್ಲಿ ಎಲ್ಲಿ ಎಲ್ಲಿ ಗುಣಗಳು ಇರುವವೋ ಅಲ್ಲಿ ಅಲ್ಲಿ ದೋಷಗಳು ಇರುವವು ಎಂಬ ವ್ಯಾಪ್ತಿಯಿರುವುದಲ್ಲ. ಹೊರತು ಎಲ್ಲಿ ಎಲ್ಲಿ ಪೂರ್ಣಗುಣಗಳಿಲ್ಲದೇ ಪರಿಮಿತವಾದ ಗುಣಗಳಿವೆಯೋ ಅರ್ಥಾತ್ ಕಡಿಮೆ ಗುಣಗಳಿವೆಯೋ ಅಲ್ಲಲ್ಲಿ ದೋಷಗಳಿರುತ್ತವೆ ಎಂದು ವ್ಯಾಪ್ತಿ. ಅರ್ಥಾತ್ 'ಯತ್ರ ಯತ್ರ ಮಿತಗುಣಿತ್ವಂ ತತ್ರ ತತ್ರ ದೋಷಿತ್ವಮ್' ಎಂದು ವ್ಯಾಪ್ತಿಸ್ವರೂಪ. ಪ್ರಕೃತದಲ್ಲಿ ನಾರಾಯಣನಲ್ಲಿ ಮಿತಗುಣಿತ್ವ ಇಲ್ಲವಾದ್ದರಿಂದ ದೋಷಿತ್ವಾಪಾದನೆಯನ್ನು ಮಾಡಲು ಬರುವುದಿಲ್ಲ. ಈ ಅಂಶವನ್ನು ಸೂಚಿಸಲೆಂದೇ ಈ ವಿಶೇಷಣವನ್ನು ಹರಿಗೆ ನೀಡಲಾಗಿದೆ.

## ಸದಾ ಪದಕ್ಕೆ ನಿಖಿಲಪೂರ್ಣ.. ಎಂಬಲ್ಲಿಯೂ ಅನ್ವಯ

**(ಪರಿಮಳ)– ದೇಹಸ್ಯ ಜ್ಞಾನಾದಿಗುಣಾತ್ಮಕತ್ವೇ, ಲೋಕೇ ಜ್ಞಾನಾದೇರನಿತ್ಯತ್ವಾತ್ ದೇಹೋಽಪಿ ತಥಾ ಸ್ಯಾತ್ – ಇತಿ ಶಂಕಾನಿರಾಸಾಯ 'ನಿತ್ಯ'ಇತಿ ಗುಣವಿಶೇಷಣಮ್ । ತೇನ ಮೂಲೇ 'ಸದಾ'ಪದಸ್ಯ 'ನಿಖಿಲ' ಇತ್ಯತ್ರಾಪಿ ಅನ್ವಯಃ ಸೂಚಿತಃ ।**

ನಾರಾಯಣನಿಗೆ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂಬಲ್ಲಿ 'ವಪುಷೇ' ಪದದಿಂದ ದೇಹವಿದೆ ಎಂದು ತಿಳಿಯಿತು. ಇಲ್ಲಿ ಶಂಕೆ – ಅವನ ದೇಹವಾದರೂ ಜ್ಞಾನ, ಆನಂದಾದಿ-ಸ್ವರೂಪವೇ ಆಗಿದೆ. ಲೋಕದಲ್ಲಿ ಜ್ಞಾನಾನಂದಾದಿಗುಣಗಳು ಅನಿತ್ಯ ಎಂದು ಕಂಡಿರುವುದರಿಂದ ಆ ಜ್ಞಾನಾದಿಗಳೇ ಆದ ದೇಹವು ಅನಿತ್ಯವಾಗಬೇಕು. 'ಯದ್ವಸ್ತು ಅನಿತ್ಯವಸ್ತ್ವಾತ್ಮಕಂ ತದಪ್ಯ-ನಿತ್ಯಮ್' ಎಂಬ ವ್ಯಾಪ್ತಿ ಇರುವುದರಿಂದ.

ಇದರ ಪರಿಹಾರಕ್ಕಾಗಿ ಸುಧಾದಲ್ಲಿ ಗುಣಗಳಿಗೆ "ನಿತ್ಯಾಗಣಿತಗುಣ.." ಎಂಬಲ್ಲಿ ಗುಣಕ್ಕೆ 'ನಿತ್ಯ' ಎಂಬುದಾಗಿ ವಿಶೇಷಣವನ್ನು ನೀಡಿದ್ದಾರೆ. ಹೀಗಾಗಿ ದೇಹವು ನಿತ್ಯಜ್ಞಾನಾದಿಗುಣಾತ್ಮಕವಾಗಿ-

ರುವುದರಿಂದ ನಿತ್ಯವೇ ಆಗುವುದು. ಯಾವ ವಸ್ತುವು ನಿತ್ಯವಸ್ತ್ವಾತ್ಮಕವಾಗಿದೆಯೋ ಅದು ನಿತ್ಯವೇ ಆಗುವುದು. ಯಾವ ವಸ್ತುವು ಅಂದರೆ ದೇಹವು ಜ್ಞಾನಾದಿನಿತ್ಯವಸ್ತ್ವಾತ್ಮಕವಾಗಿದೆಯೋ ಅದು ನಿತ್ಯ. ಹಾಗಾಗಿ ದೋಷವಿಲ್ಲ.

ಇದರಿಂದ ಅನುವ್ಯಾಖ್ಯಾನದ 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂದ ಪದ್ಯದಲ್ಲಿ "ಸದಾ ಮಮ ಪ್ರಿಯತಮಂ" ಎಂಬಲ್ಲಿರುವ 'ಸದಾ'ಪದವನ್ನು 'ಸದಾ ನಿಖಿಲಪೂರ್ಣಗುಣೈಕ-ದೇಹಂ' ಎಂದೂ ಅನ್ವಯಿಸಬೇಕು ಎಂದು ತಿಳಿಸಿದಂತಾಯಿತು.

### ಸಕಲಾವದ್ಯ ಎಂದಿದ್ದು ಏಕೆ?

(ಪರಿಮಳ)– 'ನಿರ್ದೋಷಮ್' ಇತ್ಯತ್ರ ದೋಷಪದಂ ಅಶೇಷದೋಷಪರಮ್ ಇತಿ ಜ್ಞಾಪನಾಯ **'ಸಕಲಾವದ್ಯ'** ಇತ್ಯುಕ್ತಿಃ ।

ಅನುವ್ಯಾಖ್ಯಾನದ 'ನಿರ್ದೋಷ' ಎಂಬ ಪದವು ಯತ್ಕಿಂಚಿತ್ ದೋಷಪರವಲ್ಲದೇ ಸಕಲದೋಷಪರ ಎಂದು ತಿಳಿಸಲು ಸುಧಾದಲ್ಲಿ 'ಅವದ್ಯತಮಸೇ' ಎಂದಿಷ್ಟೇ ಹೇಳದೇ ಅವದ್ಯಕ್ಕೆ 'ಸಕಲ' ಎಂಬ ವಿಶೇಷಣವನ್ನು ನೀಡಿ 'ಸಕಲಾವದ್ಯತಮಸೇ' ಎಂದಿದ್ದಾರೆ.

### ಜಗಜ್ಜನ್ಮ ಎಂದಿದ್ದು ಏಕೆ?

(ಪರಿಮಳ)– 'ಅಸ್ಯೋದ್ಭವಾದಿದಮ್' ಇತ್ಯತ್ರ 'ಅಸ್ಯ' ಇತಿ ಪದಂ 'ಪ್ರಮಿತಸರ್ವಪರಂ ಸದಪಿ ನೇಶ್ವರಪರಮ್' ಇತಿ ಜ್ಞಾಪನಾಯ **'ಜಗಜ್ಜನ್ಮ'** ಇತ್ಯುಕ್ತಮ್ । ಅನೇನ ಅಸ್ಯ ಸಮಸ್ತಸ್ಯ 'ಅಸ್ಯೋ-ದ್ಭವಾದಿದಮ್' ಇತ್ಯನ್ವಯಃ ಸೂಚಿತಃ ।

'ಅಸ್ಯೋದ್ಭವಾದಿದಮ್' ಎಂಬಲ್ಲಿನ 'ಅಸ್ಯ' ಎಂಬ ಶಬ್ದವು ಪ್ರಮಾಣಸಿದ್ಧವಾದ ಎಲ್ಲ ವಸ್ತು-ಗಳನ್ನು ಹೇಳುವುದಾದರೂ ಪ್ರಮಾಣಸಿದ್ಧನಾದ ಈಶ್ವರನನ್ನು ಮಾತ್ರ ಹೇಳುವುದಿಲ್ಲ ಎಂದು ತಿಳಿಸಲು ಸುಧಾದಲ್ಲಿ 'ಅಸ್ಯ' ಎಂಬ ಪದದಿಂದ ಈಶ್ವರನನ್ನು ಬಿಟ್ಟು ಬೇರೆಯಾದ ಜಗತ್ತನ್ನು ಗ್ರಹಿಸಬೇಕೆಂದು ತಿಳಿಸಲು 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂದಿದ್ದಾರೆ. ಅಲ್ಲದೆ ಅಸ್ಯೋದ್ಭವಾದಿದಂ ಎಂಬಲ್ಲಿರುವ ಆದಿಪದದಿಂದ ಯಾವುದನ್ನು ಗ್ರಹಿಸಬೇಕು ಎಂಬುದನ್ನು 'ಜಗಜ್ಜನ್ಮಸ್ಥೇಮ' ಎಂಬ ವಿಶೇಷಣವು ಸೂಚಿಸುತ್ತಿದೆ. ಆದಿಪದದಿಂದ ಸ್ಥಿತಿ, ಲಯ ಇತ್ಯಾದಿ-ಗಳನ್ನು ತೆಗೆದುಕೊಳ್ಳಬೇಕು.

### ಜನ್ಮಾದಿತ್ರಯವು ಈಶಾನ್ಯಸರ್ವಸಂಬಂಧಿ

(ಪರಿಮಳ)– 'ಉದ್ಭವಾದಿದಮ್' ಇತ್ಯನೇನ ಸೃಷ್ಟ್ಯಾದ್ಯಷ್ಟಕಗ್ರಹಣೇಽಪಿ ವಿಯದಧಿಕರಣನ್ಯಾಯೇನ

(ಬ್ರ.ಸೂ.2-3-1) ಈಶಾನ್ಯಸರ್ವಸಂಬಂಧಿತ್ವಾತ್ ಜನ್ಮಾದಿತ್ರಯಸ್ಯೈವ ಅತ್ರೋಕ್ತಿಃ । 'ನಿಯತಿಃ' ಅಪ್ಯುಪಲಕ್ಷ್ಯಾ ।

'ಅಸ್ಯೋದ್ಭವಾದಿದಮ್' ಎಂದು ಅನುವ್ಯಾಖ್ಯಾನದಲ್ಲಿ ಸೃಷ್ಟಿಸ್ಥಿತಿಮೊದಲಾದ ಎಂಟನ್ನು ಉದ್ಭವಾದಿ ಎಂಬ ಪದದಿಂದ ಗ್ರಹಿಸಬೇಕೆಂದು ಸುಧಾದಲ್ಲಿ ಟೀಕಾರಾಯರು ವ್ಯಾಖ್ಯಾನಿಸಿದ್ದಾರೆ. ಆದರೆ ನ್ಯಾಯಸುಧಾದ ಮಂಗಳಪದ್ಯದಲ್ಲಿ ಜಗಜ್ಜನ್ಮಸ್ಥೇಮಪ್ರಲಯ ಎಂದು ಮೂರನ್ನು ಮಾತ್ರ ಗ್ರಹಿಸಿದ್ದು ಹೇಗೆ? ಎನ್ನುವ ಪ್ರಶ್ನೆಗೆ ಉತ್ತರವಿದು – ಹೌದು. ಇಲ್ಲಿ ಕೇವಲ ಮೂರನ್ನು ಮಾತ್ರ ಹೇಳಿದ್ದಾರೆ. ಜನ್ಮ ಸ್ಥೇಮ ಪ್ರಲಯ ಎಂದು. ಏಕೆಂದರೆ ಈ ಮೂರು ಈಶ್ವರನನ್ನು ಬಿಟ್ಟು ಬೇರೆ ಎಲ್ಲರಿಗೂ ಸಂಬಂಧ ಪಡುವುದು. ಈ ಅಂಶವು ವಿಯದಧಿಕರಣದಲ್ಲಿ ತಿಳಿಸಿದ ನ್ಯಾಯದಿಂದ ಸ್ಪಷ್ಟ. ಇನ್ನು ನಿಯಮನವು ಸರ್ವಸಾಧಾರಣವಾದ್ದರಿಂದ ಅದನ್ನೂ ಸೇರಿಸಿಯೇ ನಾಲ್ಕನ್ನು ಇಲ್ಲಿ ಗ್ರಹಿಸಬೇಕಾಗಿತ್ತು ಎಂದು ಪ್ರಶ್ನಿಸಬಹುದು. ಇದಕ್ಕೆ ಉತ್ತರ ನಿಯಮನವನ್ನು ಉಪಲಕ್ಷಣಯಾ ಗ್ರಹಿಸಬೇಕು. ಅರ್ಥಾತ್ ಒಂದು ವಸ್ತುವಿನ ಸೃಷ್ಟಿಸ್ಥಿತಿಲಯಗಳು ಒಬ್ಬನ ಅಧೀನವೆಂದರೆ ಆ ವಸ್ತುವಿನ ನಿಯಮನವೂ ಕೂಡ ಆ ವ್ಯಕ್ತಿಯ ಅಧೀನವಾಗಿಯೇ ಇರುತ್ತದೆ. ಹಾಗಾಗಿ ಜಗಜ್ಜನ್ಮಸ್ಥೇಮ-ಪ್ರಲಯ ಎಂಬ ಭಾಗದಿಂದ ನಿಯಮವನ್ನೂ ಗ್ರಹಿಸಬೇಕು.

### ನಿತ್ಯವಾದ ಪ್ರಕೃತಿಪುರುಷಕಾಲಾದಿಗಳಿಗೂ ಉತ್ಪತ್ತಿ ಇದೆ — ವಿಯದಧಿಕರಣ

*** ಪ್ರಕೃತಿಃ ಪುರುಷಃ ಕಾಲೋ ವೇದಾಸ್ತದಭಿಮಾನಿನಃ ॥ ಅನುವ್ಯಾ. 2.3.ಶ್ಲೋ.9 ॥
ಮಹದಾದ್ಯಾಶ್ಚ ಜಾಯಂತೇ ಪರಾಧೀನವಿಶೇಷಿತಾ । .....
ಪ್ರಕೃತಿಃ ಪುರುಷಃ ಕಾಲ ಇತ್ಯೇತೇ ಚ ಸಮಸ್ತಶಃ ॥ 16 ॥
ಈಶಾಧೀನವಿಶೇಷೇಣ ಜನ್ಯಾ ಇತ್ಯೇವ ಕೀರ್ತಿತಾಃ ।
ಕಾಲಪ್ರವಾಹ ಏವೈಕೋ ನಿತ್ಯೋ ನ ತು ವಿಶೇಷವಾನ್ ॥ 17 ॥
ಪುರುಷಾವ್ಯಕ್ತಕಾಲಾನಾಂ ರಮ್ಯೈವೈಕಾಭಿಮಾನಿನೀ ।
ಸಿಸೃಕ್ಷುತ್ವವಿಶೇಷಂ ತತ್ ಸಾಕ್ಷಾದ್ಭಗವದಿಚ್ಛಯಾ ॥ 18 ॥
ಪ್ರಾಪ್ತೈವ ಸೃಷ್ಟೇತ್ಯುದಿತಾ ಪ್ರಧಾನಂ ವಿಕೃತೇರಪಿ ।
ಪುಮಾಂಸೋ ದೇಹಸಂಬಂಧಾತ್ ಸೃಷ್ಟಿಮಂತ ಇತೀರಿತಾಃ ॥

** ಪ್ರಕೃತಿಃ ಪುರುಷಃ ಕಾಲೋ ವೇದಾಶ್ಚೇತಿ ಚತುಷ್ಟಯಮ್ ।
ನಿತ್ಯಂ ಸ್ವರೂಪತೋ ವಿಷ್ಣೋರ್ವಿಶೇಷಾವಾಪ್ತಿಮಾತ್ರತಃ ॥ 97 ॥
ಉತ್ಪತ್ತಿಮದಿತಿ ಪ್ರೋಕ್ತಂ ...... (ಅನುವ್ಯಾ. 2ಅ.3ಪಾ. ಶ್ಲೋ.97)
ತತ್ರ ಪೂರ್ವತನಃ ಶ್ರೇಯಾನ್ ಗುಣೈಃ ಸರ್ವೈಃ ಸಮಸ್ತಶಃ ।

ತೇಭ್ಯಶ್ಚ ಭಗವಾನ್ವಿಷ್ಣುಸ್ತದಧೀನಾ ಇಮೇ ಸದಾ ॥ 101 ॥
ಜನ್ಮಸ್ಥಿತಿಲಯಾಜ್ಞಾನನಿಯತಿಜ್ಞಾನಸಂಸ್ಮೃತಿಃ ।
ಮೋಕ್ಷಶ್ಚ ತದಧೀನತ್ವಮೇತೇಷಾಂ ನೈವ ಹೀಯತೇ ॥ 102 ॥

"ಅನಾದಿರ್ವಾ ಅಯಮಕಾಶಃ" "ಅಥ ಹ ವಾ ವ ನಿತ್ಯಾನಿ ಪುರುಷಃ ಪ್ರಕೃತಿರಾತ್ಮಾ ಕಾಶಃ" ಎಂಬಿತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ ಪ್ರಕೃತಿ, ವೇದ, ಆಕಾಶ, ಆತ್ಮಾ ಎಂಬ ನಿತ್ಯಪದಾರ್ಥಗಳಿಗೆ ಉತ್ಪತ್ತಿ ಇಲ್ಲ ಎಂದು ಪೂರ್ವಪಕ್ಷ. 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಉತ್ಪತ್ತಿಗಳನ್ನು ಹೇಳುವ ಶ್ರುತಿಗಳಿಂದ ಹಾಗೂ 'ವಿಯತ್ ಉತ್ಪತ್ತಿಮತ್ ಅಲ್ಪಶಕ್ತಿತ್ವಾತ್ ಘಟವತ್' ಎಂಬ ಅನುಮಾನಸಹಾಯವು ಇದೆ. ಹಾಗಾಗಿ ಉತ್ಪತ್ತಿಹೇಳುವ ಶ್ರುತಿಗಳು ಪ್ರಬಲವಾಗಿವೆ. ಆದುದರಿಂದ ಪ್ರಕೃತಿ, ಜೀವ, ಚೈತನ್ಯ, ಕಾಲ, ವೇದ, ಮಹತ್ತತ್ವ, ಅಹಂಕಾರತತ್ವ, ಮನಸ್ಸು, ಬುದ್ಧ್ಯಾದಿಗಳಿಗೂ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯಸ್ಸು ತಿಳಿಯಕ್ಕದ್ದು. - ಇದು ವಿಯದಧಿಕರಣದ ತಾತ್ಪರ್ಯ. ಈಶ್ವರಾತಿರಿಕ್ತವಾದ ಎಲ್ಲಕ್ಕೂ ಉತ್ಪತ್ತಿಯಿದೆ ಎಂದು ಫಲಿತಾರ್ಥ. ಹಾಗಾಗಿ 'ಅಸ್ಯೋದ್ಭವಾದಿದಂ' ಎಂಬುದು ಕೂಡುತ್ತದೆ.

## ವಿಯದಧಿಕರಣದ ಸೂತ್ರವಿವರಣೆ

ವಿಯದಧಿಕರಣದಲ್ಲಿ ಬಂದ ಸೂತ್ರ ಹೀಗಿದೆ –

** ಯಾವದ್ವಿಕಾರಂ ತು ವಿಭಾಗೋ ಲೋಕವತ್ ॥ ಓಂ (2/3/7)

ಈ ಸೂತ್ರದಲ್ಲಿ ಆಕಾಶಕ್ಕೆ ಉತ್ಪತ್ತಿ ಇರಲೇ ಬೇಕೆಂದು ಸಿದ್ಧಾಂತಮಾಡಿ, ಹಾಗಾದರೆ ಆಕಾಶಕ್ಕೆ ಉತ್ಪತ್ತಿ ಹೇಗೆ ಎನ್ನುವ ಪ್ರಶ್ನೆ ಮಾಡಿಕೊಂಡು ಸ್ವರೂಪತಃ ಉತ್ಪತ್ತಿ ಇಲ್ಲದಿದ್ದರೂ ಪರಾಧೀನವಿಶೇಷಾವಾಪ್ತಿರೂಪವಾಗಿ ಉತ್ಪತ್ತಿ ಇದೆ ಎಂದು ನಿರೂಪಣೆ ಮಾಡಿದ್ದಾರೆ. ಅದರ ವಿವರಣೆ ಹೀಗಿದೆ –

ಸೂತ್ರಾರ್ಥ – ವಿಭಾಗಃ= ಅಲ್ಪಶಕ್ತಿಯು ಯಾವದ್ವಿಕಾರಂ= ಉತ್ಪತ್ತಿಸಮನಿಯತವು. ಉತ್ಪತ್ತಿಯುಳ್ಳ-ಪದಾರ್ಥವೆಲ್ಲಾ ಅಲ್ಪಶಕ್ತಿಯುಳ್ಳದ್ದು ಘಟದಂತೆ ಎಂದು ತಿಳಿಯಬೇಕು. ಪರಮಾತ್ಮನು ಅನುತ್ಪತ್ತಿ ಉಳ್ಳವನು ಏಕೆಂದರೆ ಪೂರ್ಣಶಕ್ತನು. ಅವನನ್ನು ಬಗ್ಗಿಸಿ ವಿಕಾರ ಹೊಂದಿಸುವವರಿಲ್ಲ. ಹೀಗಿ-ರುವುದರಿಂದ ಆಕಾಶವು ಅಲ್ಪಶಕ್ತಿಯುಳ್ಳದ್ದರಿಂದ ಉತ್ಪತ್ತಿಯುಳ್ಳದ್ದೇ ಎಂದು ಸಿದ್ಧಾಂತವನ್ನು ತಿಳಿಯಬೇಕು.

ಹಾಗಾದರೆ ಎಲ್ಲಾ ಉತ್ಪತ್ತಿಯುಳ್ಳವು. ಸ್ವರೂಪೇಣ ಇದ್ದುದಕ್ಕೆ, ಅದರ ಪರಾಧೀನತೆ ತೋರಿಸಲು ವಿಕಾರ ವಿಶೇಷವನ್ನು ಹರಿ ಕೊಟ್ಟಿರುತ್ತಾನೆ. ಇಂಥ ಉತ್ಪತ್ತಿಯು ಪರಾಧೀನವಿಶೇಷಾವಾಪ್ತಿರೂಪ-ವಾದದ್ದು, ಅನಾದಿವಸ್ತುಗಳಿಗೂ ಇರುವುದು ಎಂದು ತಿಳಿಯಬೇಕು.

ಹೀಗೆ ಎಲ್ಲಕ್ಕೂ ಪರಾಧೀನವಿಶೇಷಾವಾಪ್ತಿರೂಪಸೃಷ್ಟಿ ಇದ್ದರೆ ಆಕಾಶದ ಸ್ವರೂಪಕ್ಕೆ ಅವಕಾಶ-ಮಾತ್ರವೆಂಬ ಧರ್ಮಿಗೆ ಯಾವ ಸೃಷ್ಟಿ ಎಂದರೆ ಸುಧಾದಲ್ಲಿ ಹೇಳಿದ್ದಾರೆ. "ಅಪೂರ್ವ-ವಿಶೇಷೋಪಜನನೇನ ಹಿ ವಿಶಿಷ್ಟಾಕಾರೋಪಜನೋಽವಶ್ಯಂಭಾವೀ । ವಿಶಿಷ್ಟಾಕಾರಶ್ಚ ವಸ್ತು-ಸ್ವರೂಪಾಭಿನ್ನಃ ಇತಿ ತಸ್ಯೈವ ಅಸೌ ಉಪಜನೋ ಭವತೀತಿ" ವಿಶಿಷ್ಟವು ಉತ್ಪನ್ನವಾಗುತ್ತದೆ. ಇದೇ ವಿಶಿಷ್ಟಾಕಾರಅಭಿನ್ನವಾದ ವಸ್ತುಸ್ವರೂಪಕ್ಕೂ ಉತ್ಪತ್ತಿ ಎನ್ನಿಸುತ್ತದೆ.

## ಭಗವಂತನ ಸೃಷ್ಟ್ಯಾದಿವ್ಯಾಪಾರ ಅವನ ಸ್ವಭಾವವೇ

(ಪರಿಮಳ)- ಈಶ್ವರಸ್ಯ ಜಗಜ್ಜನ್ಮಾದಿನಾ ಫಲಂ ನಾಸ್ತಿ ಚೇತ್ 'ಅಸ್ಯೋದ್ಭವಾದಿದಮ್' ಇತ್ಯ-ಯುಕ್ತಮ್ । ಪ್ರೇಕ್ಷಾವತೋ ನಿಷ್ಫಲೇ ಪ್ರವೃತ್ತ್ಯಯೋಗಾತ್ । ಅಸ್ತಿ ಚೇತ್ 'ನಿಖಿಲಪೂರ್ಣ-ಗುಣಃ'ಇತ್ಯಯುಕ್ತಮ್ ಇತ್ಯತಃ- ಶೀಲೇತಿ ॥ 'ಜನ್ಮಾದಿರಚನಾಸ್ವಭಾವ' ಇತ್ಯರ್ಥಃ । ಫಲಾಭಾವೇ-ಽಪಿ ಸ್ವಭಾವೋಽಯಂ ಸೃಷ್ಟ್ಯಾದಿವ್ಯಾಪಾರಃ । ಯಥಾ ಚೈತತ್ ತಥಾ ನ ಪ್ರಯೋಜನಾಧಿಕರಣೇ (2-1-9) ವಕ್ಷ್ಯಾಮ ಇತಿ ಭಾವಃ । ಅನೇನ ಸದಾಽಸ್ಯೋದ್ಭವಾದಿದಮ್ ಇತ್ಯಪ್ಯನ್ವಯಃ ಸೂಚಿತಃ ।

ಭಗವಂತನಿಗೆ ಜಗತ್ತಿನ ಸೃಷ್ಟಿ ಮುಂತಾದವುಗಳಿಂದ ಏನಾದರೂ ಪ್ರಯೋಜನವಿದೆಯೋ ಇಲ್ಲವೋ? ಇಲ್ಲದಿದ್ದರೆ ಪ್ರೇಕ್ಷಾವಂತನಾದ ಈಶ್ವರನು ಫಲವಿಲ್ಲದಿರುವಲ್ಲಿ ಪ್ರವೃತ್ತಿಮಾಡುವುದು ಅನುಚಿತ. ಫಲವಿದ್ದಲ್ಲಿ ನಿಖಿಲಪೂರ್ಣಗುಣಃ ಎಂದು ಹೇಳಿದ್ದು ಸರಿಯಲ್ಲ. ಒಂದು ಗುಣ ನ್ಯೂನತೆ ಇರುವುದರಿಂದ. ಇದಕ್ಕೆ ಉತ್ತರ — ಸೃಷ್ಟಿಮುಂತಾದವುಗಳನ್ನು ಮಾಡುವುದು ಭಗವಂತನ ಸ್ವಭಾವ. ಸ್ವಭಾವಕ್ಕೆ ಫಲದ ಅಪೇಕ್ಷೆ ಇದೆ ಎನ್ನುವುದಂತೂ ಅನುಚಿತ. ಈ ಅಂಶವನ್ನು ತಿಳಿಸ-ಲೆಂದೇ 'ಶೀಲ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಫಲವಿಲ್ಲದೆಯೂ ಸ್ವಭಾವತಃ ಪ್ರವೃತ್ತಿಯು ಲೋಕದಲ್ಲಿ ಅನೇಕ ಕಡೆ ಕಂಡಿದೆ. ಇದನ್ನು ನ ಪ್ರಯೋಜನಾಧಿಕರಣದಲ್ಲಿ ಮುಂದಕ್ಕೆ ಟೀಕಾ-ರಾಯರೇ ವಿವರಿಸಿದ್ದಾರೆ. ಸೃಷ್ಟ್ಯಾದಿ ವ್ಯಾಪಾರವು ಭಗವಂತನ ಸ್ವಭಾವ ಎಂಬ ಅಂಶವು ಅನು-ವ್ಯಾಖ್ಯಾನದಲ್ಲಿಯೂ ಸೂಚಿತವಾಗಿದೆ. ಅಲ್ಲಿ ಸದಾ ಎಂಬ ಪದವನ್ನು ಅಸ್ಯೋದ್ಭವಾದಿದಂ ಎಂಬಲ್ಲಿಯೂ ಅನ್ವಯಿಸಬೇಕು. ಆಗ ಈ ಅರ್ಥವು ಲಭ್ಯ. ತಥಾ ಚ — ಯಾವಾಗಲೂ ಜಗತ್ತಿಗೆ ಉದ್ಭವಾದಿಪ್ರದ ಎಂದರೆ ಅದು ಅವನ ಸ್ವಭಾವವೇ ಆಗಿರಬೇಕು. ಇಲ್ಲದಿದ್ದರೆ ಒಮ್ಮೆ ಸೃಷ್ಟಿಮುಂತಾದವುಗಳನ್ನು ಮಾಡಿದಾಗಲೇ ಪಡೆಯಬೇಕಾದ ಪ್ರಯೋಜನವು ಸಿಕ್ಕಾಗ ಮತ್ತೊಮ್ಮೆ ಸೃಷ್ಟಿ ಮುಂತಾದವುಗಳನ್ನು ಮಾಡದೇ ಇರಬೇಕಾದೀತು।

## ನ ಪ್ರಯೋಜನಾಧಿಕರಣ ಹೊರಡಲು ಪೂರ್ವಪಕ್ಷ ಹಾಗೂ ಸಿದ್ಧಾಂತ

** ಈಶ್ವರನು ಸರ್ವಜಗತ್ತಿಗೂ ಸ್ವತಂತ್ರಕರ್ತನು ಎಂಬ ವಾದವು ಯುಕ್ತಿಸಹವಲ್ಲ. ಯಾವ

ಉದ್ದೇಶ್ಯಪ್ರಯೋಜನಗಳಿಗಾಗಿ ಈಶ್ವರನು ಅನಂತಜೀವಜಡಗಳನ್ನು ಸೃಷ್ಟಿಸಿ ಪ್ರೇರಿಸಬೇಕು? ಪ್ರಯೋಜನವಿದ್ದರೆ ಅಪೂರ್ಣತೆ ಬರುತ್ತೆ. ಇಲ್ಲದಿದ್ದರೆ ಸೃಷ್ಟ್ಯಾದಿಗಳಿಗೆ ಕಾರಣವೇ ಇಲ್ಲವೆಂದು ಸಿದ್ಧಿಸುತ್ತೆ. ಏವಂಚ ಈಶ್ವರನು ಜಗತ್ಕರ್ತನೆಂಬ ವಾದವು ಸರಿಯಲ್ಲ ಎಂದರೆ ಹೇಳುತ್ತಾರೆ.

ಓಂ ॥ ನ ಪ್ರಯೋಜನವತ್ತ್ವಾತ್ ॥ ಓಂ (2/1/33)

ಪರಬ್ರಹ್ಮನ ಸೃಷ್ಟಿ, ಸ್ಥಿತಿ, ಲಯ, ನಿಯಮನಾದಿಕಾರ್ಯವು ಪ್ರಯೋಜನೋದ್ದೇಶದಿಂದ ಮಾಡಲ್ಪಟ್ಟಿಲ್ಲ. ಏಕೆಂದರೆ ಪೂರ್ಣಕಾಮನೂ ಪರಮಾನಂದಸ್ವರೂಪನೂ ಆದ ಅವನಿಗೆ ಎಲ್ಲಾ ಭವಿಷ್ಯತ್ ಪ್ರಯೋಜನಗಳೂ ಕೂಡ ಅನಾದಿಕಾಲದಿಂದಲೂ ಮೊದಲೇ ಪ್ರಾಪ್ತವಾಗಿವೆ. ಆತನು ಅನಾದಿ ಕೃತಕೃತ್ಯನು ಎಂದರ್ಥ.

ಹಾಗಾದರೆ 'ಪ್ರಯೋಜನಮನುದ್ದಿಶ್ಯ ನ ಮಂದೋऽಪಿ ಪ್ರವರ್ತತೇ' ಎಂಬ ಲೋಕವ್ಯಾಪ್ತಿಗೆ ಏನು ಗತಿ ಎಂದರೆ ಹೇಳುತ್ತಾರೆ:

ಓಂ ॥ ಲೋಕವತ್ತು ಲೀಲಾಕೈವಲ್ಯಂ ॥ ಓಂ (2/1/34)

ಈಶ್ವರನ ಸೃಷ್ಟ್ಯಾದಿಕಾರ್ಯವು ಲೋಕದಲ್ಲಿ ಹರ್ಷೋದ್ರೇಕವುಳ್ಳ ಜನರ ವ್ಯಾಪಾರದಂತೆ (ಮತ್ತರ ಕುಣಿತ, ಗಾಯನ, ಕವಿತೆ ಮುಂತಾದ ವ್ಯಾಪಾರದಂತೆ) ಕೇವಲ ಕ್ರೀಡಾರೂಪವೇ. ಸ್ವಪ್ರಯೋಜನೋದ್ದೇಶದಿಂದ ಮಾಡಿದ ವ್ಯಾಪಾರವಲ್ಲ. (ಜ್ಞಾನಿಯೂ ಸಾಧುವೂ ಆದ ಹರಿಯ ವ್ಯಾಪಾರವು ಯೋಗ್ಯಪರಪ್ರಯೋಜನವುಳ್ಳದ್ದೇ ಸ್ವಪೂರ್ಣತೆ ಎಂಬ ಗುಣವನ್ನು ನಾಶಮಾಡ-ದಂತೆ, ಆತ್ಮಘಾತವಾಗದಂತೆ ವರ್ತಿಸತಕ್ಕದ್ದೇ). ಕಾಮಿಜನರು ಸ್ವಾರ್ಥಸಾಧಿಸುವಂತೆ ಸುಖ-ಸಂಪಾದನೆಗಾಗಿ ಅಥವಾ ಆಯಾಸ ಬೇಜಾರುಪರಿಹಾರಕ್ಕಾಗಿ ಮಾಡಿದ ವ್ಯಾಪಾರವಲ್ಲ. 'ಕೇವಲಾ ಏವ ಕೈವಲ್ಯಂ ಕೈವಲ್ಯರೂಪಲೀಲಾ = ಲೀಲಾಕೈವಲ್ಯಂ' ಎಂದು ಮಯೂರವ್ಯಂಸಕಾದಿವತ್ ಸಮಾಸ, ಸ್ವಾರ್ಥೇ ಷ್ಯಞ್ ಎಂದು ತಿಳಿಯಬೇಕು. ಸ್ವಾಭಾವಿಕಪ್ರವೃತ್ತಿಯಲ್ಲಿ ಫಲೋದ್ದೇಶ ಕಂಡಿಲ್ಲ. ದೃಷ್ಟಾಂತ : ಅಗ್ನಿಯ ದಾಹಕತ್ವಂ, ಕರುಗಳ ಕುಣಿತ, ಮದಿರಾಮತ್ತರ ನರ್ತನ, ಜ್ಞಾನಿಗಾಯಕರ ಗಾನ, ಕವಿಗಳ ಕಾವ್ಯರಚನೆ ಮುಂತಾದ ದೃಷ್ಟಾಂತಗಳಿವೆ. 'ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬಲ್ಲಿ ಫಲೇಚ್ಛೆಯಿಲ್ಲ ಎಂದರ್ಥ. 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬಲ್ಲಿ ಇಚ್ಛೆ ಉಂಟು ಎಂದು ಅಂಗೀಕೃತವಾಗಿದೆ. ಆದರೆ ಸ್ವಾರ್ಥಫಲಬರಲಿ ಎಂಬ ಇಚ್ಛೆ ಇಲ್ಲ. ಈಶ್ವರನ ಜ್ಞಾನೇಚ್ಛಾ-ಪ್ರಯತ್ನಗಳೆಲ್ಲಾ ಸ್ವಭಾವ ಭೂತಗಳಾದುವುಗಳು. ಔಪಾಧಿಕವಲ್ಲ. ಅಸ್ವತಂತ್ರವಲ್ಲ.

## ನ ಪ್ರಯೋಜನಾಧಿಕರಣ ಅನುವ್ಯಾಖ್ಯಾನ ಹಾಗೂ ಸುಧಾ

** ಸದಾ ಪ್ರವೃತ್ತಿರೀಶಸ್ಯ ಸ್ವಭಾವಾದೇವ ಕೇವಲಮ್ ॥ 103 ॥

ಅಂಗಚೇಷ್ಟಾ ಯಥಾ ಪುಂಸಃ ಕಾಶ್ಚಿದುದ್ದೇಶವರ್ಜಿತಾಃ ।
"ದೇವಸ್ಯೈಷ ಸ್ವಭಾವೋಽಯ"ಮಿತ್ಯಾಹ ಶ್ರುತಿರಂಜಸಾ ॥ 105 ॥
ಕ್ರೀಡಾಂ ಪ್ರಯೋಜನಂ ಕೃತ್ವಾ ಸೃಷ್ಟಿಃ ಶ್ರುತಿವಿರೋಧಿನೀ ।
ಇತಿ ಕೇವಲಲೀಲೈವ ನಿರ್ಣೀತಾ ಪ್ರಭುಣಾ ಸ್ವಯಮ್ ॥

— (ಅನುವ್ಯಾ. 2-1) (ನ ಪ್ರಯೋಜನಾಧಿಕರಣ)

सुधा — यथा लोके ज्वलनपवनादीनाम्, तथेशस्यापि सदा सृष्ट्यादौ केवलं प्रयोजनेन विना स्वभावादेव प्रवृत्तिः प्रमितेति शेषः । .... काश्चिद् व्याख्यानादावङ्गुलिचालनादिकाः । उद्देशवर्जिताः प्रयोजनोद्देशवर्जिताः । तथा ईशस्यापि प्रवृत्तिरिति पूर्वेणान्वयः । .... देवस्येति । "देवस्यैष स्वभावोऽयमाप्तकामस्य का स्पृहा" इति श्रुतिरञ्जसा स्फुटमुक्तमर्थमाह । देवस्यायं सृष्ट्यादिविषय एषः इच्छा, तत्पूर्विका प्रवृत्तिरिति यावत् । स्वभाव एव । न प्रयोजनाय । कुतः? आप्तकामस्य प्रयोजनस्पृहासम्भवादित्यर्थः । ... यत एवं क्रीडां प्रयोजनं कृत्वा सृष्टिः श्रुतिविरोधिनी, इति तस्मात् श्रुत्यनुसारिणा प्रभुणा स्वयं साक्षात् स्पष्टं केवललीलैव सृष्ट्यादिप्रवृत्तिः निर्णीता लीलाकैवल्यमिति ।

— ಭಗವಂತನು ಜಗತ್ಸೃಷ್ಟ್ಯಾದಿಗಳನ್ನು ಸ್ವಭಾವದಿಂದಲೇ ಮಾಡುವನು. ಯಾವುದೇ ಪ್ರಯೋಜನಾಪೇಕ್ಷೆಯಿಂದಲ್ಲ. ಏಕೆಂದರೆ ಅವನು ಆಪ್ತಕಾಮ. ಅರ್ಥಾತ್ ಅವನ ಇಚ್ಛೆಗೆ ವಿಷಯವಾದದ್ದೆಲ್ಲವೂ ಮೊದಲೇ ಪಡೆದಿದ್ದಾಗಿದೆ. ಇನ್ನು ಪಡೆಯಬೇಕಾದದ್ದೇನಿಲ್ಲ. ಅಲ್ಲದೇ ಅವನ ಪ್ರವೃತ್ತಿಯು ಸ್ವಾಭಾವಿಕವಾದದ್ದು ಎಂಬಲ್ಲಿ ಲೋಕದಲ್ಲೂ ಕೆಲವು ದೃಷ್ಟಾಂತಗಳನ್ನು ಕಾಣಬಹುದು. ಹೇಗೆ ಅಗ್ನಿಯು ನಿರಂತರ ಸುಡುತ್ತಿರುವುದು ಯಾವುದೇ ಪ್ರಯೋಜನಾಪೇಕ್ಷೆ-ಯಿಂದಲ್ಲ ಹೊರತು ಅದರ ಸ್ವಭಾವವಾಗಿದೆ. ಹಾಗೆ ಗಾಳಿಯು ನಿರಂತರ ಸಂಚರಿಸುವುದು ಅದರ ಸ್ವಭಾವವೇ. ಅಲ್ಲ! ಇವುಗಳೆಲ್ಲ ಅಚೇತನಗಳು. ಹಾಗಾಗಿ ಇವುಗಳಲ್ಲಿ ಸ್ವಾಭಾವಿಕವಾದ ಪ್ರವೃತ್ತಿಯಿರಲಿ; ಭಗವಂತ ಒಬ್ಬ ಪ್ರೇಕ್ಷಾವಂತ ಚೇತನ. ಇಂತಹವನಲ್ಲಿ ಈ ರೀತಿಯ ಪ್ರಯೋಜನರಹಿತಪ್ರವೃತ್ತಿಯು ಸರಿಯೇ? ಎಂದರೆ ಸರಿಯೇ ಆಗಿದೆ. ಕೆಲವರು ಪ್ರವಚನಮಾಡು-ವಾಗ ಕೈಯ್ಯ ಬೆರಳುಗಳನ್ನು ಆಚೆ ಈಚೆ ಚಲಿಸುತ್ತಿರುತ್ತಾರೆ. ಇದನ್ನು ಮಾಡುವುದಕ್ಕೆ ಯಾವುದೇ ಪ್ರಯೋಜನವಿರುವುದಿಲ್ಲ. ಈ ರೀತಿ ಸೃಷ್ಟ್ಯಾದಿಗಳಲ್ಲಿ ಭಗವಂತನ ಪ್ರವೃತ್ತಿಯು ಸ್ವಾಭಾವಿಕ ಎಂದೊಪ್ಪುವುದರಿಂದಲೇ 'ದೇವಸ್ಯೈಷ ಸ್ವಭಾವೋಽಯಂ' ಇತ್ಯಾದಿಗಳ ವಿರೋಧವು ಬರುವುದಿಲ್ಲ. ಈ ಎಲ್ಲ ಅಭಿಪ್ರಾಯದಿಂದಲೇ ಸೂತ್ರಕಾರರು ಭಗವಂತನಿಗೆ ಸೃಷ್ಟ್ಯಾದಿ ಕ್ರೀಡೆಯೇ ಪ್ರಯೋಜನವಾಗಲಿ ಎಂದೂ ಒಪ್ಪಿಲ್ಲ. ಹೊರತು ಸೃಷ್ಟ್ಯಾದಿಗಳು ಕೇವಲ ಭಗವಂತನ ಲೀಲೆಯೇ ಆಗಿದೆ ಎಂದು ನಿರ್ಣಯಿಸಿದ್ದಾರೆ.

## ವಪುಷೇ ಎಂದು ಹೇಳಿದ್ದರ ಔಚಿತ್ಯ

(ಪರಿಮಳ)– ಮೂಲೇ 'ದೇಹಮ್' ಇತ್ಯುಕ್ತಿಃ ನ ಕೇವಲಂ ಜ್ಞಾನಾದಿಗುಣಸತ್ತ್ವಾದ್ಯುಪಪತ್ತ್ಯರ್ಥಂ ಕಿಂತು 'ಅಸ್ಯೋದ್ಭವಾದಿದಮ್' ಇತ್ಯುಕ್ತಸ್ರಷ್ಟೃತ್ವಾದ್ಯುಪಪತ್ತ್ಯರ್ಥಂ ಚ ಇತಿ ಸೂಚನಾಯ 'ವಪುಷೇ' ಇತ್ಯುಕ್ತಿಃ। ಅನ್ಯಥಾ 'ಪತ್ಯುರಸಾಮಂಜಸ್ಯಾತ್' ಇತ್ಯಧಿಕರಣೇ 'ಸಂಬಂಧಾನುಪಪತ್ತೇಶ್ಚ' ಇತಿ ಸೂತ್ರೇ 'ಅಶರೀರಸ್ಯ ಜಗತಾ ಕರ್ತೃಕಾರ್ಯಭಾವರೂಪಸಂಬಂಧಾನುಪಪತ್ತೇಃ' ಇತಿ ವಕ್ಷ್ಯಮಾಣದೋಷಾಪತ್ತೇಃ ಇತಿ ಭಾವಃ।

ಅನುವ್ಯಾಖ್ಯಾನದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬಲ್ಲಿ 'ದೇಹಮ್' ಎಂದಿದ್ದು ಏಕೆ? ಎನ್ನುವ ಪ್ರಶ್ನೆಗೆ – ಅವನ ದೇಹದಲ್ಲಿ ಜ್ಞಾನಾದಿಗುಣಗಳಿವೆ ಎಂಬುದನ್ನು ಸಮರ್ಥಿಸಲು ಮಾತ್ರವಲ್ಲದೆ 'ಅಸ್ಯೋದ್ಭವಾದಿದಮ್' ಎಂಬ ಪದದಿಂದ ಸೂಚಿತವಾದ ಜಗತ್ ಸ್ರಷ್ಟೃತ್ವ ಮೊದಲಾದವುಗಳನ್ನು ಭಗವಂತನಿಗೆ ಕೂಡಿಸಲೆಂದು ಹೇಳಿದ್ದಾರೆ. ಇದರ ಭಾವ – ದೇಹವಿಲ್ಲ-ದಿದ್ದರೆ ತದಾಶ್ರಿತವಾದ ಇಂದ್ರಿಯಗಳಿರುವುದಿಲ್ಲ. ಇಂದ್ರಿಯಗಳಿಲ್ಲದಿದ್ದರೆ ಅದರಿಂದ ಜ್ಞಾನ-ವುಂಟಾಗುವುದಿಲ್ಲ. ಹಾಗೆ ಆನಂದಾದಿಗಳೂ ಕೂಡ. ಅದಕ್ಕಾಗಿ ದೇಹವನ್ನು ಒಪ್ಪಿದ್ದು.

ಇನ್ನು ದೇಹವನ್ನು ಒಪ್ಪಿದರೆ ಅವನು ಸೃಷ್ಟಿಮಾಡಲು ಸಾಧ್ಯ. ದೇಹವಿಲ್ಲದವನು ಸೃಷ್ಟಿಮಾಡಲು ಅಸಾಧ್ಯವಾದ್ದರಿಂದ. ಹೀಗೆ ಜಗತ್ ಸ್ರಷ್ಟೃತ್ವಾದಿಗಳನ್ನು ಕೂಡಿಸಲು ಮೂಲದಲ್ಲಿ ಹೇಳಿದ ದೇಹ-ಪದ ಸೂಚಿತಾರ್ಥವನ್ನು ನೆನಪಿಸಲು 'ವಪುಷೇ' ಎಂದು ಸುಧಾದಲ್ಲಿ ಹೇಳಿದ್ದಾರೆ. ಹೀಗೆ ದೇಹವನ್ನು ಒಪ್ಪದೇ ಇದ್ದರೆ 'ಪತ್ಯುರಸಾಮಂಜಸ್ಯಾತ್' ಅರ್ಥಾತ್ ಪತ್ಯುರಧಿಕರಣದಲ್ಲಿ ಬರುವ 'ಸಂಬಂಧಾನುಪಪತ್ತೇಶ್ಚ' ಎಂಬ ಸೂತ್ರದಲ್ಲಿ 'ಅಶರೀರಸ್ಯ ಜಗತಾ ಕರ್ತೃಕಾರ್ಯಭಾವರೂಪ-ಸಂಬಂಧಾನುಪಪತ್ತೇಃ' ದೇಹವಿಲ್ಲದವನಿಗೆ ಜಗತ್ತಿನೊಂದಿಗೆ ಕರ್ತೃಕಾರ್ಯ ಎಂಬ ಸಂಬಂಧವೇ ಕೂಡದೇ ಇರಬೇಕಾದೀತು ಎಂದು ಮುಂದೆ ಹೇಳುವ ದೋಷವು ಬರುತ್ತಿತ್ತು.

## ಪತ್ಯುರಧಿಕರಣಸೂತ್ರಾರ್ಥ

** ಸಂಬಂಧಾನುಪಪತ್ತೇಶ್ಚ (ಸೂ. 2-2-38)

ಸಂಬಂಧಾನುಪಪತ್ತೇಃ। ಚ – ಇತಿ ವಿಭಾಗಃ

(ಭಾ.) ಅಶರೀರತ್ವಾತ್ ತಸ್ಯ ಜಗತಾ ಸಂಬಂಧೋ ನ ಯುಜ್ಯತೇ ಕರ್ತೃತ್ವೇನ ಮೃತಪುರುಷ-ವತ್।

– ಕಿಂಚ ರುದ್ರೋ ನ ಜಗತ್ಕರ್ತಾ। ಅಶರೀರತ್ವಾತ್। ಮೃತಪುರುಷವತ್ ಇತಿ। ಅಶರೀರಸ್ಯಾಪಿ ಕರ್ತೃತ್ವಂ ಕುತೋ ನ ಸ್ಯಾತ್? ಇತ್ಯತಃ ಸೂತ್ರಮ್ – ಸಂಬಂಧಾನುಪಪತ್ತೇಶ್ಚ ಇತಿ॥ ಸಂಬಂಧಸ್ಯ

= ಕರ್ತೃಕಾರ್ಯಭಾವಸ್ಯ, ಅನುಪಪತ್ತೇಃ । 'ಅಶರೀರಸ್ಯ' ಇತಿ ಶೇಷಃ । ತಥಾಚ, ಶರೀರಸ್ಯ ಕರ್ತೃಕಾರ್ಯಭಾವಸಂಬಂಧವ್ಯಾಪಕತಯಾವ್ಯಾಪಕೀಭೂತಶರೀರನಿವೃತ್ತೌತದ್ವ್ಯಾಪ್ಯಭೂತಕರ್ತೃತ್ವಾದಿಸಂಬಂಧನಿವೃತ್ತೇರಾವಶ್ಯಕತ್ವಾದಿತಿ ಭಾವಃ । (ಭಾಷ್ಯಾರ್ಥಮಣಿಮಂಜರೀ)

** ಶಿವನಿಗೆ ಜಗತ್ಕರ್ತೃತ್ವವು ಕೂಡುವುದಿಲ್ಲವೆಂಬಲ್ಲಿ ಪ್ರಬಲತರಯುಕ್ತಿ ಇದೆ. ಅದೇನೆಂದು ಹೇಳುತ್ತಾರೆ.

ಓಂ ॥ ಸಂಬಂಧಾನುಪಪತ್ತೇಶ್ಚ ॥ ಓಂ (2-2-38)

ಶಿವನು ಶರೀರವುಳ್ಳವನೋ, ಅಶರೀರಿಯೋ ಎಂದು ಪ್ರಶ್ನೆ ಮಾಡಿದರೆ ಮೊದಲನೇ ಕಲ್ಪದಲ್ಲಿ ಮುಂದೆ ದೋಷ ಹೇಳಲ್ಪಡುತ್ತೆ. ಶಿವನು ಅಶರೀರಿಯು ಎಂದು ಪಾಶುಪತರು ಹೇಳುತ್ತಾರೆ. ಆದ್ದರಿಂದ ಅವನೇ ಪರಮಾತ್ಮನೆಂದು ಹೇಳುತ್ತಾರೆ. ಈ ಸೂತ್ರದಲ್ಲಿ ಆ ಪಕ್ಷದ ದೋಷವು ತೋರಿಸಲ್ಪಡುತ್ತೆ. ಶರೀರ ರಹಿತನಾದ ಶಿವನಿಗೆ ಕರ್ತೃತ್ವವು ಕೂಡುವುದಿಲ್ಲ. ಸಶರೀರ ಕುಲಾಲನಿಗೆ ಕರ್ತೃತ್ವಸಂಬಂಧವು ಕಂಡಿದೆ. ಶರೀರರಹಿತನು ಮೃತಪುರುಷನಂತೆ ಇರುವನು. ಅವನು ಉಪಾದಾನಸಾಮಗ್ರಿಗಳನ್ನು ಹಿಡಿದು ಪರಿಣಾಮ ಹೊಂದಿಸಿ ಜಗತ್ತನ್ನು ನಿರ್ಮಿಸುವುದು ಅಸಂಭಾವಿತವು. ಅಶರೀರ ಗಗನವು ಘಟಸಂಬಂಧ ಹೊಂದಿದ ರೀತಿಯಲ್ಲಿ ಶಿವನು ಜಗತ್ಸಂಬಂಧವನ್ನು ಹೊಂದಿದರೆ ಯಾವ ಸೃಷ್ಟಿಯೂ ಆಗುವುದಿಲ್ಲ. ಶಿವನಿಗೆ ಜಗತ್ಕರ್ತೃತ್ವವು ಇರಬೇಕಾದರೆ ಕುಲಾಲನಿಗೆ ಘಟಕರ್ತೃತ್ವವಿರುವಂತೆ ಇರಬೇಕು. ಅಶರೀರ ಶಿವನಿಗೆ ಅಂಥ ಜಗತ್ಸಂಬಂಧಿಕಾರ್ಯಕರ್ತೃತ್ವವು ಕೂಡುವುದಿಲ್ಲ. ಪ್ರಳಯದಲ್ಲಿ ಶಿವನು ಪ್ರಮಿತನಾಗಿಲ್ಲವಾದ್ದರಿಂದ ಅವನು ಅಶರೀರಿ ಎಂದೇ ಎಲ್ಲರೂ ಹೇಳಬೇಕು.

## ಪತ್ಯುರಧಿಕರಣ ಅನುವ್ಯಾಖ್ಯಾನ

ಪತ್ಯುರಧಿಕರಣ(2-2-11ಅ.38.ಸೂ) ಅನುವ್ಯಾಖ್ಯಾನದಲ್ಲಿ —

ಅಶರೀರತ್ವತಸ್ತಸ್ಯ ಸಂಬಂಧೋ ಜಗತಾ ಕ್ವಚಿತ್ ॥ 273 ॥
ಕರ್ತೃತ್ವೇನ ನ ಯುಜ್ಯೇತ ದೇಹಿನೋ ಜ್ಞಾನದೃಷ್ಟಿತಃ ।

ತಸ್ಯ = ಆ ರುದ್ರನಿಗೆ, ಅಶರೀರತ್ವತಃ = ಶರೀರ ಇಲ್ಲದೇ ಇರುವುದರಿಂದ, ಕ್ವಚಿತ್ = ಯಾವ ವಿಧವಾದ ಕಾರ್ಯದಲ್ಲಿಯೂ (ಸೃಷ್ಟ್ಯಾದಿಗಳಲ್ಲಿ), ಕರ್ತೃತ್ವೇನ = ಕರ್ತೃತ್ವರೂಪದಿಂದ, ಜಗತಾ = ಜಗತ್ತಿನೊಂದಿಗೆ, ಸಂಬಂಧಃ = ಸಂಬಂಧವು, ಅರ್ಥಾತ್ ಕರ್ತೃಕಾರ್ಯಭಾವಸಂಬಂಧವು, ನ ಯುಜ್ಯೇತ = ಕೂಡದೇ ಇರಬೇಕಾದೀತು। ಏಕೆಂದರೆ ದೇಹಿನಃ = ಶರೀರ ಇರುವವನಿಗೆ, ಜ್ಞಾನದೃಷ್ಟಿತಃ = ಕಾರಣಕಲಾಪಗಳ ಜ್ಞಾನ ಉಂಟಾಗುವುದರಿಂದ. ಅರ್ಥಾತ್ ಶರೀರವುಳ್ಳವನಿಗೆ ಮಾತ್ರ ಜಗಜ್ಜನ್ಮಾದಿಕರ್ತೃತ್ವವು ಕೂಡುವುದರಿಂದ 'ವಪುಷೇ' ಎಂದು ಸುಧಾದಲ್ಲಿ ಹೇಳಿದ್ದಾರೆ.

## ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ ಎಂಬ ಭಾಗದ ಔಚಿತ್ಯ

(ಪರಿಮಳ)- 'ಸುವಾಕ್ಯೈಃ' ಇತ್ಯೇತದ್ 'ವೇದವೇದಾನುಸಾರಿಸರ್ವಪೌರುಷೇಯಾಪೌರುಷೇಯ ಪರಮ್' ಇತಿ ಭಾವೇನೋಕ್ತಮ್ – **ಅಶೇಷಾಮ್ನಾಯಸ್ಮೃತೀತಿ** ॥ ಆಪಾತತೋ ನೋಕ್ತಗುಣ-ವಿಶಿಷ್ಟೋ ಹರಿಃ ಪ್ರತೀಯತೇ, ಇತ್ಯತ ಉಕ್ತಮ್ – **ಹೃದಯೇತಿ** ॥ 'ತಾತ್ಪರ್ಯಪ್ರಕಾಶಿತಾಯ' ಇತ್ಯರ್ಥಃ । 'ಸದಾ ಪ್ರಿಯತಮಮ್' ಇತ್ಯಸ್ಯಾರ್ಥಃ – **ಹರಯೇ ಇತಿ** ॥

ಅನುವ್ಯಾಖ್ಯಾನದಲ್ಲಿ ಬಂದ 'ಸುವಾಕ್ಯೈಃ ಅಖಿಲೈಃ ಅಪಿ ಆಪ್ಯತಮಮ್' ಎಂಬ ಭಾಗದಲ್ಲಿ ಒಳ್ಳೆಯ ವಾಕ್ಯಗಳು ಎಂದರೆ ಯಾವುವು? ಎಂಬುದನ್ನು ತಿಳಿಸಲು 'ಅಶೇಷಆಮ್ನಾಯಸ್ಮೃತಿಹೃದಯ-ದೀಪ್ತಾಯ' ಎಂಬಲ್ಲಿ ಅಶೇಷಾಮ್ನಾಯಸ್ಮೃತಿ ಎಂದಿದ್ದಾರೆ.

ಇದರಿಂದ ಸುವಾಕ್ಯ ಎಂಬ ಪದದಿಂದ ವೇದವನ್ನು ಹಾಗೂ ವೇದವನ್ನು ಅನುಸರಿಸಿ ಇರುವ ಎಲ್ಲ ಪೌರುಷೇಯ ಗ್ರಂಥಗಳು ಹಾಗೂ ಉಪನಿಷತ್ ರೂಪವಾದ ಅಪೌರುಷೇಯಗ್ರಂಥಗಳನ್ನು ವಿವಕ್ಷೆ-ಮಾಡಬೇಕು. ಹಲವು ಸುವಾಕ್ಯಗಳಲ್ಲಿ ನೀವು ಹೇಳಿದ ನಿಖಿಲಪೂರ್ಣಗುಣೈಕದೇಹ ಮುಂತಾದ ವಿಶೇಷಣಗಳಿಂದ ಕೂಡಿದ ನಾರಾಯಣನೇ ತೋರುವುದಿಲ್ಲ ಎನ್ನುವ ಪ್ರಶ್ನೆಗೆ ಉತ್ತರವಾಗಿ "ಹೃದಯದೀಪ್ತಾಯ" ಎಂದಿದ್ದಾರೆ. ಅಂದರೆ ಸುವಾಕ್ಯಗಳ ತಾತ್ಪರ್ಯಕ್ಕೆ ವಿಷಯನಾಗಿದ್ದಾನೆ ಎಂದರ್ಥ.

ಅನುವ್ಯಾಖ್ಯಾನದ 'ಸದಾ ಪ್ರಿಯತಮಂ ಮಮ' ಎಂಬ ವಿಶೇಷಣದ ವ್ಯಾಖ್ಯಾನ "ಹರಯೇ" ಎಂಬ ಪದ. ಹರತಿ ಎಂದರೆ ಸ್ವೀಕರೋತಿ ಅರ್ಥಾತ್ ತನ್ನ ಭಕ್ತನನ್ನಾಗಿ ಸ್ವೀಕರಿಸುವನು. ಈ ರೀತಿ ಮಾಡುವವನು ಇಷ್ಟನೇ ಆಗಿರುತ್ತಾನೆ. ಹೀಗೆ ಆಚಾರ್ಯರನ್ನು ತನ್ನ ಭಕ್ತರನ್ನಾಗಿ ಭಗವಂತನು ಸ್ವೀಕರಿಸಿದ್ದರಿಂದ ಅವರಿಗೆ ಅವನು ಅತ್ಯಂತಪ್ರಿಯತಮನೇ ಸರಿ.

## ಕಾಶೀ ಆಚಾರ್ಯರ ಟಿಪ್ಪಣೀ ಮಂಗಲಾಚರಣೆ

### ವಿಷ್ಣ್ವಾಖ್ಯಬ್ರಹ್ಮನ ಉಪಾಸನೆ

ಜನ್ಮಾದ್ಯಸ್ಯ ಯತಃ ಶಾಸ್ತ್ರಗಮ್ಯಮನ್ವಯತಃ ಪೃಥಕ್ ।
ಪರಮಂ ಬ್ರಹ್ಮವಿಷ್ಣ್ವಾಖ್ಯಮಧಿಕಂ ತದುಪಾಸ್ಮಹೇ ॥

ಯಾರಿಂದ ಈ ಜಗತ್ತಿಗೆ ಜನ್ಮಸ್ಥಿತಿ ಮೊದಲಾದವುಗಳು ಉಂಟಾಗಿವೆಯೋ, ಯಾರು ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಶಾಸ್ತ್ರದಿಂದ ತಿಳಿಯಲ್ಪಡುವನೋ, ಯಾರು ಈ ಜಗತ್ತಿಗಿಂತ ಭಿನ್ನ-ನಾಗಿದ್ದಾನೋ ಅಂತಹ ಸರ್ವೋತ್ತಮನಾದ ವಿಷ್ಣು ಎಂಬ ಹೆಸರಿನ ಪರಬ್ರಹ್ಮನನ್ನು ಉಪಾಸನೆ ಮಾಡುತ್ತೇವೆ.

## ಸೂತ್ರಕಾರರೇ ಮೊದಲಾದವರ ಕೃಪಾಲೇಶದಿಂದ ಸುಧಾಟಿಪ್ಪಣೀ ರಚನೆ

ಸೂತ್ರತದ್ಭಾಷ್ಯತಟ್ಟೀಕಾತದ್ವ್ಯಾಖ್ಯಾಕಾರಿಣೋ ಗುರೂನ್ ।
ಸನ್ನಮ್ಯ ತತ್ಕೃಪಾಲೇಶೈಃ ಸುಧಾ ಕಿಂಚಿತ್ಪ್ರಪಂಚ್ಯತೇ ॥

ಗುರುಗಳಾದ ಸೂತ್ರಕಾರರನ್ನು, ಭಾಷ್ಯಕಾರರನ್ನು, ಟೀಕಾಕಾರರನ್ನು, ಹಾಗೂ ಅದಕ್ಕೆ ವ್ಯಾಖ್ಯಾನ-ಮಾಡಿದವರನ್ನು ಭಕ್ತಿಶ್ರದ್ಧಾಪೂರ್ವಕವಾಗಿ ನಮಸ್ಕರಿಸಿ ಅವರ ಕೃಪೆಯ ಒಂದು ಅಂಶದಿಂದ ನ್ಯಾಯಸುಧೆಯನ್ನು ಸ್ವಲ್ಪ ವಿಸ್ತರಿಸುತ್ತೇನೆ.

## ನಮ್ಮದು ಕೇವಲ ಅವರೆಲ್ಲರ ಅಭಿಪ್ರಾಯದ ಅನುವಾದ ಮಾತ್ರ

ಯಶ್ಚಂದ್ರಿಕಾದಿಸಮುಪಜೀವಿಮಹಾನಿಬಂಧೈಷ್ಟೀಕಾಶಯೇಷು ಬಹುಧಾ ವಿಶದೀಕೃತೇಷು ।
ಯತ್ನೋ ಮಮೈಷ ಸಫಲೋಽಸ್ತು ತದಾಶಯಾನುವಾದೈಸ್ತದೀಯಕರುಣಾಲವಸಂಪ್ರಯುಕ್ತೈಃ ॥

ಚಂದ್ರಿಕಾದಿ ಗ್ರಂಥಗಳನ್ನು ಉಪಜೀವಿಸಿಕೊಂಡು ಹೊರಟ ಅನೇಕ ವ್ಯಾಖ್ಯಾನಕಾರರಿಂದ ಟೀಕೆಯ ಅಭಿಪ್ರಾಯವನ್ನು ಅನೇಕರೀತಿಯಾಗಿ ವಿಸ್ತರಿಸಲ್ಪಟ್ಟಿದ್ದರೂ ನನ್ನ ಈ ಯತ್ನವು ಸಫಲವಾಗಿ ಆಗಲಿ. ಏಕೆಂದರೆ, ಈ ಯತ್ನವು ಅವರೆಲ್ಲರ ಕರುಣಾಲೇಶದ ಬಲದಿಂದ ಉಂಟಾಗಿ ಅವರೆಲ್ಲರ ಅಭಿಪ್ರಾಯವನ್ನು ಅನುವಾದಮಾಡುವುದಷ್ಟೇ ಆಗಿದೆ.

## ಜ್ಞಾನಿಗಳೇ ನನ್ನ ಎಡುವಿಕೆಯನ್ನು ಕ್ಷಮಿಸಿರಿ

ಅನೇಕತಂತ್ರಸಿದ್ಧಾಂತವಿಚಾರಗಹನೇ ಮಮ ।
ಶ್ರದ್ಧಾಜಾಡ್ಯೇನ ಚರತಃ ಕ್ಷಾಮ್ಯಂತು ಸ್ಖಲನಂ ಬುಧಾಃ ॥

ಅನೇಕ ತಂತ್ರಗಳ ಸಿದ್ಧಾಂತದ ಗಂಭೀರವಿಚಾರಗಳಲ್ಲಿ ಪ್ರವೇಶಿಸಿದ ನಾನು ಶ್ರದ್ಧಾಜಾಡ್ಯದಿಂದ ನಡೆಯಬೇಕಾದರೆ ಎಡವಿದ್ದನ್ನು ಜ್ಞಾನಿಗಳು ಕ್ಷಮಿಸಲಿ.

ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ - ಈ ಪದ-ದಲ್ಲಿ ಬರುವ ಕೆಲವು ಶಬ್ದಗಳ ವಿವರ ಹೀಗಿದೆ -

## ವಿಶದಪ್ರಭಾಜಾಲೋಲ್ಲಾಸೋ... ಭಾಗದ ವಿವರಣೆ

ಗುಣಾನಾಂ 'ವಿಶದಪ್ರಭಾಃ' = ಸರ್ವವಿಷಯೀಕರಣಶಕ್ತಯಃ, ತಜ್ಜಾಲೋಲ್ಲಾಸಃ = ಕಾರ್ಯೋ-ನ್ಮುಖತಾಲಕ್ಷಣೋ ವ್ಯಕ್ತಿವಿಶೇಷಃ ತೇನ ನಿತ್ಯೋಪಹತಾನಿ ಅತ್ಯಂತಾಭಾವಪ್ರತಿಯೋಗಿಭೂತಾನಿ ಸಕಲಾವದ್ಯತಮಾಂಸಿ ಯತ್ರ ತಸ್ಮಾ ಇತ್ಯರ್ಥಃ । ಯತ್ರ ಏಕೈಕಗುಣಸ್ಯಾಪಿ ಸಕಲದೋಷಾತ್ಯಂತಾ-ಭಾವಪ್ರಯೋಜಕತಾ ಕಿಮು ತತ್ರ ತದಾನಂತ್ಯಸ್ಯ ಇತ್ಯಾಶಯಃ ।

ಗುಣಗಳ ವಿಸ್ತಾರವಾದ ಪ್ರಭೆ ಎಂದರೆ, ಎಲ್ಲವನ್ನೂ ವಿಷಯೀಕರಿಸುವ ಶಕ್ತಿ. ಈ ಶಕ್ತಿಗಳ ಜಾಲ ಎಂದರೆ ಸಮೂಹ. ಸಮೂಹದ ಉಲ್ಲಾಸ ಎಂದರೆ ಕಾರ್ಯೋನ್ಮುಖವಾಗುವ ಒಂದು ತರಹದ ಪದಾರ್ಥ. ಇದರಿಂದ ನಿತ್ಯದಲ್ಲಿಯೂ ಇಲ್ಲದಿರುವ ಎಲ್ಲ ರೀತಿಯಾದ ದೋಷಗಳೆಂಬ ತಮಸ್ಸುಳ್ಳವನು ಎಂದರ್ಥ. ಅರ್ಥಾತ್ ಮಾಣಿಕ್ಯವು ಅಂಧಕಾರಕ್ಕೆ ಹೇಗೆ ವಿರೋಧಿಯಾಗಿದೆಯೋ ಹಾಗೆ ಭಗವಂತನ ಸ್ವಾತಂತ್ರ್ಯ, ಸರ್ವಜ್ಞತ್ವ ಮುಂತಾದ ಗುಣಗಳು ಪಾರತಂತ್ರ್ಯ, ಅಜ್ಞಾನ ಮುಂತಾದ ದೋಷಗಳ ವಿರೋಧಿಯಾಗಿದ್ದು ಗುಣಗಳ ಪ್ರಭೆಯ ಸಮೂಹವು ನಿತ್ಯ ಕಾರ್ಯೋನ್ಮುಖವಾಗಿದ್ದಾಗ ಯಾವುದೇ ರೀತಿಯಾದ ದೋಷವೆಂಬ ಕತ್ತಲೆಗೆ ಅವಕಾಶವಿಲ್ಲ — ಎಂದಭಿಪ್ರಾಯ. ಒಂದೊಂದು ಗುಣಗಳಿಗೆ ಎಲ್ಲ ದೋಷಗಳು ಇಲ್ಲದಿರುವುದಂತೆ ಮಾಡಲು ಶಕ್ತಿ ಇದ್ದಾಗ ಅನಂತಗುಣಗಳಿದ್ದಲ್ಲಿ ಸುತರಾಂ ಎಂದು ತಿಳಿಯಬೇಕು.

## ಜಗಜ್ಜನ್ಮ ಎಂಬ ಪದವು ಸೃಷ್ಟ್ಯಾದ್ಯಷ್ಟಕಗಳನ್ನೂ ಹೇಳುತ್ತಿದೆ

(ವಾಕ್ಯಾರ್ಥಚಂದ್ರಿಕಾ) ಅತ್ರ 'ಸ್ಥೇಮ'ಶಬ್ದೇನ ಅನ್ನದಾನಾದಿನೇವ ಜ್ಞಾನದಾನೇನಾಪಿ ಪಾಲನಸ್ಯಾ-ಭಿಪ್ರೇತತ್ವಾತ್, ಪ್ರಲಯಶಬ್ದೇನ ಚಾಜ್ಞಾನಬಂಧಮೋಕ್ಷಾಣಾಂ, **'ರಚನಾ'**ಶಬ್ದೇನ ತಂತ್ರೇಣ ನಿಯಮನಸ್ಯಾಪಿ ಗ್ರಹಣಸಂಭವಾತ್ ಉತ್ತರತ್ರ ಅಷ್ಟಕಸಂಗ್ರಾಹಕತ್ವೇನ ವ್ಯಾಖ್ಯಾಸ್ಯಮಾನ-'ಆದಿ'ಪದಸಂಗ್ರಾಹ್ಯಕಥನಪರತ್ವಂ ನಾಸ್ಯ ಯುಕ್ತಮಿತಿ ನ ಶಂಕನೀಯಮ್ ।

ಅನುವ್ಯಾಖ್ಯಾನದ ಮೊದಲನೆಯ ಪದ್ಯ 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂಬುದು. ಅಲ್ಲಿ ಮೂರನೆಯ ಪಾದದಲ್ಲಿ ಬರುವ 'ಅಸ್ಯೋದ್ಭವಾದಿದಂ' ಎಂಬ ಪದಕ್ಕೆ 'ಜನ್ಮಾದ್ಯಷ್ಟಕಂ' ಎಂದು ಟೀಕಾಚಾರ್ಯರು ವಿವರಣೆ ನೀಡಿದ್ದಾರೆ. ಅರ್ಥಾತ್ ಜನ್ಮ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಎಂದು ಗ್ರಹಿಸಿ ಇವುಗಳಿಗೆ ಕಾರಣನಾಗಿದ್ದಾನೆ ನಾರಾಯಣ ಎಂದು. ಆ ವ್ಯಾಖ್ಯಾನಕ್ಕೆ ಅನುಗುಣವಾಗಿ ಶ್ರಿಯಃಪತ್ಯೇ ಎಂಬ ಪದ್ಯದಲ್ಲಿಯೂ ಎಂಟಕ್ಕೂ ಕಾರಣನಾದವನು ಶ್ರೀಹರಿ ಎಂದು ಹೇಳಬೇಕಾಗಿತ್ತು. ಮೊದಲನೆಯ ಪದ್ಯವು ಅನುವ್ಯಾಖ್ಯಾನದ ಆದ್ಯಪದ್ಯವ್ಯಾಖ್ಯಾನ-ರೂಪವಾಗಿ ತೋರುತ್ತಿರುವುದರಿಂದ ಎಂದು ಭಾವ. ಆದರೆ ಕೇವಲ ಜನ್ಮ, ಸ್ಥಿತಿ, ಪ್ರಲಯ ಹೀಗೆ ಮೂರನ್ನು ಮಾತ್ರ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂದು ನಿರ್ದೇಶಿಸಿದ್ದಾರೆ.

ಇದು ಹೇಗೆ ಸರಿ? ಎಂದರೆ, ಇಲ್ಲಿಯೂ ಈ ಪದದಿಂದ ಎಂಟನ್ನೂ ಗ್ರಹಿಸಬೇಕು.

ಅದು ಹೀಗೆ - ಸ್ಥೇಮಶಬ್ದಕ್ಕೆ ಸ್ಥಿತಿ ಎಂದರ್ಥ. ಅರ್ಥಾತ್ ಪಾಲನೆಯನ್ನು ಭಗವಂತ ಅನ್ನಾದಿ-ಗಳನ್ನು ಕೊಡುವ ಮೂಲಕ ಪ್ರಾಣಿಗಳಿಗೆ ಮಾಡುವನು. ಇದರಂತೆ ಜ್ಞಾನವನ್ನೂ ಕೊಡುವನು. ಇದೂ ಒಂದು ಪಾಲನೆಯೇ. ಹಾಗಾಗಿ ಸ್ಥೇಮ ಎಂಬ ಶಬ್ದದಿಂದಲೇ ಜ್ಞಾನದ ಸಂಗ್ರಹವಾಗುವುದು.

ಇನ್ನು ಪ್ರಲಯ ಎಂಬ ಶಬ್ದದಿಂದ ಅಜ್ಞಾನ, ಬಂಧ, ಮೋಕ್ಷ ಇವುಗಳನ್ನು ಗ್ರಹಿಸಬೇಕು. ಪ್ರಲಯ ಎಂದರೆ ನಾಶ ಎಂದು ಪ್ರಸಿದ್ಧವಾದ ಅರ್ಥ. ಇಲ್ಲಿ 'ಪ್ರಕೃಷ್ಟಂ ಲೀಯತೇ ಯಸ್ಮಾತ್ ಸಃ ಪ್ರಲಯಃ' ಚೆನ್ನಾಗಿ ಮನುಷ್ಯನು ಯಾವುದರಿಂದ ನಾಶವನ್ನು ಅರ್ಥಾತ್ ತಮಸ್ಸನ್ನು ಅಥವಾ ಅನಿಷ್ಟಗಳನ್ನು ಹೊಂದುವನೋ ಎಂಬ ಅರ್ಥವನ್ನು ಆಶ್ರಯಿಸಿದಾಗ ಅಜ್ಞಾನ ಹಾಗೂ ಬಂಧಗಳನ್ನು ಗ್ರಹಿಸಬಹುದು. ನಿಯಮನವಾದರೋ ರಚನಾ ಎಂಬ ಶಬ್ದವನ್ನು ಆವೃತ್ತಿಮಾಡಿದಾಗ ಸಿಗುವುದು. ರಚನಾ ಎಂಬ ಶಬ್ದಕ್ಕೆ ನಿಯಮನ ಎಂಬ ಅರ್ಥವು ಪ್ರಸಿದ್ಧ. ಮೊದಲನೆಯ ರಚನಾ ಎಂಬ ಶಬ್ದಕ್ಕೆ ವ್ಯಾಪಾರ ಎಂದರ್ಥ. ಎರಡನೆಯ ಬಾರಿ ಹೇಳಿದಾಗ ರಚನಾ ಶಬ್ದಕ್ಕೆ ನಿಯಮನ ಎಂದರ್ಥ.

## ಜನ್ಮಾದಿತ್ರಯವನ್ನು ಮಾತ್ರ ಗ್ರಹಿಸಿದ್ದೇಕೆ?

(ರಸರಂಜನೀ) – ನನು 'ಅಸ್ಯೋದ್ಭವಾದಿದಂ' ಇತ್ಯತ್ರ ಜನ್ಮಾದ್ಯಷ್ಟಕವಿವಕ್ಷಾಸ್ತಿ ನ ವಾ । ಆದ್ಯೇ ತದ್ವ್ಯಾಖ್ಯಾನೇ 'ಜನ್ಮಸ್ಥೇಮಪ್ರಲಯ' ಇತಿ ತ್ರಿತಯಮಾತ್ರಗ್ರಹಣಮನುಪಪನ್ನಮ್ । ದ್ವಿತೀಯೇ –

'ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ ।
ಬಂಧಮೋಕ್ಷಾವಪಿ ಹ್ಯಾಸು ಶ್ರುತಿಷೂಕ್ತಾ ...'

ಇತಿ ಸ್ವವಾಕ್ಯವಿರೋಧಃ । 'ಉದ್ಭವಃ = ಉತ್ಪತ್ತಿರಾದಿರಸ್ಯ ಇತ್ಯುದ್ಭವಾದಿ = ಜನ್ಮಾದ್ಯಷ್ಟಕ'ಮಿತಿ ತದ್ವ್ಯಾಖ್ಯಾನಾಸಂಗತಿಶ್ಚ । ನ ಚ ಪ್ರಥಮಪಕ್ಷ ಏವಾಂಗೀಕ್ರಿಯತೇ । ತ್ರಿತಯಮಾತ್ರೋಕ್ತಿಶ್ಚ ಉಪಲಕ್ಷಣಾಭಿಪ್ರಾಯೇಣೇತಿ ವಾಚ್ಯಮ್ । ತಥಾತ್ವೇऽಪಿ ಜನ್ಮಮಾತ್ರಗ್ರಹಣೇನಾಪಿ ಉಪಲಕ್ಷಣಸಂಭವೇನ ತ್ರಿತಯಗ್ರಹಣೇ ಪ್ರಯೋಜನಾಭಾವಾದಿತಿ ಚೇತ್ । ಉಚ್ಯತೇ । ಯತ್ ತಾವದ್ವಿಕಲ್ಪಿತಮಷ್ಟಕವಿವಕ್ಷಾಸ್ತಿ ನ ವೇತಿ ತತ್ರಾಸ್ತೀತಿ ಬ್ರೂಮಃ । ತತ್ರ ಯದುಕ್ತಂ ತ್ರಿತಯಮಾತ್ರಗ್ರಹಣಾನುಪಪತ್ತಿರಿತಿ । ತನ್ನ । ಉಪಲಕ್ಷಣಯಾಷ್ಟಕಸ್ಯಾಪಿ ಗ್ರಹಣಾತ್ । ನ ಚೈಕೋಕ್ತಾವಪಿ ಉಪಲಕ್ಷಣಯಾಷ್ಟಕಗ್ರಹಣಸಂಭವೇನ ಕಂಠತಸ್ತ್ರಿತಯಗ್ರಹಣೇ ಪ್ರಯೋಜನಾಭಾವ ಇತ್ಯುಕ್ತಮಿತಿ ವಾಚ್ಯಮ್ । ಪ್ರಯೋಜನಾಭಾವಸ್ಯೈವಾಸಿದ್ಧೇಃ । ತಥಾಹಿ — ಅತ್ರೋಚ್ಯಮಾನಂ ಜನ್ಮಾದಿಕರ್ತೃತ್ವಂ ತಾವಜ್ಜ್ಞಾನದ್ವಾರಾ ಮೋಕ್ಷೋಪಯೋಗೀತಿ –

'ಸೃಷ್ಟಿರಕ್ಷಾಹೃತಿಜ್ಞಾನನಿಯತ್ಯಜ್ಞಾನಬಂಧನಾನ್ ।
ಮೋಕ್ಷಂ ಚ ವಿಷ್ಣುತಶ್ಚೈವ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ ॥'

ಇತ್ಯಾದಿಪ್ರಮಾಣಪ್ರಸಿದ್ಧಮ್ । ನ ಚ ಜ್ಞಾತಮಾತ್ರಂ ಮೋಕ್ಷೋಪಯೋಗೀ, ಕಿಂತು ಯಾಥಾತಥ್ಯೇನ । ಯಥಾಸ್ಥಿತಿಶ್ಚ ತಸ್ಯ ಏವಮ್ — 'ಅಸ್ಯ' ಇತ್ಯನೇನ ಉಕ್ತಮೀಶ್ವರಾತಿರಿಕ್ತಂ ಪ್ರಮಿತಂ ಸರ್ವಚೇತನಾಚೇತನತಯಾ ದ್ವೈರಾಶ್ಯೇನ ವಿವಕ್ಷಿತಮ್ । ತತ್ರ ಜನ್ಮಾದ್ಯಷ್ಟಕೇ ತ್ರಿತಯಸ್ಯ ರಾಶಿ–

ದ್ವಯವಿಷಯತ್ವಮ್, ಉತ್ತರಪಂಚಕಸ್ಯ ತು ಚೇತನಮಾತ್ರವಿಷಯತ್ವಮಿತಿ । ಅಸ್ಯ ವಿಶೇಷಸ್ಯ ಅನುಕ್ತೌ ಕಥಮವಗತಿಃ ಸ್ಯಾತ್ । ಅನ್ಯಥಾವಗತಿಃ ತತೋಽನರ್ಥಾವಗತಿರ್ವಾ ಕಥಂ ನ ಸ್ಯಾದತಃ ಸ ವಕ್ತವ್ಯ ಏವ । ಅಷ್ಟಕಮುಕ್ತ್ವಾ ವಿಶೇಷವಚನೇ ಚ ಸಂಕ್ಷೇಪವ್ಯಾಖ್ಯಾನತ್ವಹಾನಿಃ ಸ್ಯಾದತಃ ಸಂಕ್ಷೇಪೇಣೈವ ಕಾರ್ಯಮತೋಽಷ್ಟಕಗ್ರಹಣೇ ಕಾರ್ಯೇ ಕೃತಂ ತ್ರಿತಯಮಾತ್ರಗ್ರಹಣಂ ಅನ್ಯತೋಽವಿಶೇಷಂ ಸೂಚಯತ್ಯೇವ । ತತೋ ವಿಶೇಷಜ್ಞಾನರೂಪಪ್ರಯೋಜನಸದ್ಭಾವಾದ್ಯುಕ್ತ-ತರಂ ತನ್ಮಾತ್ರಗ್ರಹಣಮಿತಿ ॥

'ಅಸ್ಯೋದ್ಭವಾದಿದಃ' ಎಂಬಲ್ಲಿ ಜನ್ಮ, ಸ್ಥಿತಿ ಮೊದಲಾದ ಎಂಟನ್ನು ಹೇಳಲು ಇಚ್ಛೆ ಇದೆಯೋ ಇಲ್ಲವೋ? ಅರ್ಥಾತ್ ಎಂಟನ್ನೂ ಗ್ರಹಿಸಬೇಕೋ ಬೇಡವೋ?

ಟೀಕಾಚಾರ್ಯರ ಮಾತನ್ನು ನೋಡಿದಾಗ 'ಉದ್ಭವಾದಿ = ಜನ್ಮಾದ್ಯಷ್ಟಕಂ ತದ್ಯಥಾ ಸಂಭವಂ ದದಾತೀತಿ ಉದ್ಭವಾದಿದಃ' ಎಂದು ಮುಂದೆ 'ನಾರಾಯಣಂ' ಎಂಬ ಮೊದಲನೆಯ ಪದ್ಯದ ವ್ಯಾಖ್ಯಾನಸಂದರ್ಭದಲ್ಲಿ ಹೇಳಿರುವುದರಿಂದ ಎಂಟನ್ನೇ ಗ್ರಹಿಸಬೇಕು. ಆದರೆ ಎಂಟು ಎಂದು ಗ್ರಹಿಸಿದರೆ ಅವರದ್ದೇ ಪದ್ಯವಾದ 'ಶ್ರಿಯಃಪತ್ಯೇ' ಎಂಬುದರಲ್ಲಿ ಮೂರನ್ನು ಮಾತ್ರ ಗ್ರಹಿಸಿದ್ದು ಹೇಗೆ ಸರಿ? ಗ್ರಹಿಸುವುದಿಲ್ಲವೆಂದರೆ ಸೃಷ್ಟಿಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ । ಬಂಧ-ಮೋಕ್ಷಾವಪಿ ಹ್ಯಾಸು ಶ್ರುತಿಷೂಕ್ತಾ...' ಎಂಬ ಆಚಾರ್ಯರ ಮಾತಿಗೆ ತಾವೇ ವ್ಯಾಖ್ಯಾನಮಾಡಿದ ವಾಕ್ಯದ ವಿರೋಧ. ಕೊನೆಗೆ ಎಂಟನ್ನೂ ಗ್ರಹಿಸಬೇಕು ಎಂಬ ಪಕ್ಷವನ್ನೇ ಒಪ್ಪಬೇಕು. ಆದರೆ ಎಂಟನ್ನು ಗ್ರಹಿಸಿದ್ದು ಹೇಗೆ? ಎಂದರೆ ಕೇವಲ ಮೂರನ್ನು ಹೇಳಿದರೂ ಅದು ಉಪಲಕ್ಷಣಾ ಎಂದು ಭಾವಿಸಿ ಇನ್ನೂ ಐದನ್ನು ಗ್ರಹಿಸಿದ್ದು. ಉಪಲಕ್ಷಣಾ ಎಂದರೆ ಹೇಗೆ 'ಕಾಕೇಭ್ಯೋ ದಧಿ ರಕ್ಷ್ಯತಾಂ' ಇತ್ಯಾದಿ ಸ್ಥಳಗಳಲ್ಲಿ ಕಾಕಪದದಿಂದಲೇ ಹೇಳದೇ ಇದ್ದ ಬೆಕ್ಕು ಮುಂತಾದ ಮೊಸರಿಗೆ ವಿಘಾತಕವಾದ ಪ್ರಾಣಿಗಳನ್ನು ಗ್ರಹಿಸುವುದು. ಅದೇ ರೀತಿ ಇಲ್ಲಿ ಜನ್ಮಾದಿ ತ್ರಯಗಳನ್ನು ಹೇಳಿದ್ದರಿಂದ ಇನ್ನೂ ಐದನ್ನು ಆ ಪದದಿಂದ ಗ್ರಹಿಸಬೇಕು. ಆದರೆ ಇದಕ್ಕೆ ಜನ್ಮ ಎಂಬ ಒಂದೇ ಪದವು ಸಾಕು. ಮೂರನ್ನು ಏಕೆ ಹೇಳಿದ್ದು? ಯಾವುದೇ ಪ್ರಯೋಜನವಿಲ್ಲವಾದ್ದರಿಂದ ಎಂಬ ಶಂಕೆ ಉಳಿಯುವುದು.

ಉತ್ತರ – ಮೂರನ್ನು ಹೇಳಿದ್ದಕ್ಕೆ ಪ್ರಯೋಜನವಿದೆ. ಹೇಗೆಂದರೆ ಜನ್ಮ, ಸ್ಥಿತಿ ಮೊದಲಾದವುಗಳಿಗೆ ನಾರಾಯಣನು ಕರ್ತೃವಾಗಿದ್ದಾನೆ ಎಂಬ ಜ್ಞಾನ ಮೋಕ್ಷಕ್ಕೆ ಕಾರಣ ಎಂದು.

'ಸೃಷ್ಟಿರಕ್ಷಾಹೃತಿಜ್ಞಾನನಿಯತ್ಯಜ್ಞಾನಬಂಧನಾನ್ ।
ಮೋಕ್ಷಂ ಚ ವಿಷ್ಣುತಶ್ಚೈವ ಜ್ಞಾತ್ವಾ ಮುಕ್ತಿರ್ನಚಾನ್ಯಥಾ ॥' (ತಾ.ನಿ. 1-83)
ಭಾವಪ್ರಕಾಶಿಕಾ – ಅಜ್ಞಾನಬಂಧನಾನ್ ಇತ್ಯತ್ರ ಬಧ್ನಂತೀತಿ ಬಂಧನಾಃ = ಕಾಮಕರ್ಮಾದ್ಯಾಃ ।
ತಾಂಶ್ಚ । ಜ್ಞಾನಪ್ರಕಾರಃ ಕಥಿತಃ ।

ಮುಂತಾದ ಪ್ರಮಾಣಗಳಿಂದ ಪ್ರಸಿದ್ಧ. ಈ ಪ್ರಮಾಣವಾಕ್ಯದಲ್ಲಿ ಕೇವಲ ಜನ್ಮಾದಿಕರ್ತೃತ್ವದ ಜ್ಞಾನವೇ ಮೋಕ್ಷಕ್ಕೆ ಉಪಯೋಗಿ ಎಂದಿಲ್ಲ. ಹೊರತಾಗಿ ಸರಿಯಾಗಿ ಅರ್ಥಾತ್ ಯಥಾರ್ಥವಾಗಿ ತಿಳಿದಾಗ ಮಾತ್ರ ಮೋಕ್ಷಕ್ಕೆ ಕಾರಣ ಎಂದಭಿಪ್ರಾಯ. ಯಥಾರ್ಥವಾಗಿ ತಿಳಿಯಬೇಕಾದರೆ ಹೀಗೆ ವಿಭಾಗವನ್ನು ಮಾಡಿ ತಿಳಿಯಬೇಕು. ಈಶ್ವರನನ್ನು ಬಿಟ್ಟು ಬೇರೆಯಾದ ಸಕಲಜಗತ್ತಿನಲ್ಲಿ ಚೇತನ ಹಾಗೂ ಅಚೇತನ ಎಂದು ವಿಭಾಗವನ್ನು ಒಪ್ಪಿ, ಅಲ್ಲಿ ಮೊದಲನೆಯ ಮೂರು ಅಂದರೆ ಜನ್ಮ, ಸ್ಥಿತಿ, ಲಯ ಇವುಗಳು ಸಕಲ ಚೇತನಾಚೇತನ ಜಗತ್ತಿಗೆ ಇದೆ. ಮುಂದಿನ ಐದಾದರೋ ಚೇತನಗಳಿಗೆ ಮಾತ್ರ ಇದೆ ಎಂದು. ಈ ರೀತಿಯಾದ ವ್ಯತ್ಯಾಸವು ಮೂರನ್ನೂ ಪ್ರತ್ಯೇಕವಾಗಿ ಗ್ರಹಣ ಮಾಡದಿದ್ದರೆ ಹೇಗೆ ತಿಳಿಯಲು ಸಾಧ್ಯ? ಇನ್ನು ಎಂಟನ್ನೂ ಹೇಳಿ ಎಂದರೆ ವಿಸ್ತಾರವಾಗಿ ಹೇಳಿದಂತಾಗಿ ಸಂಕ್ಷೇಪವಾಗಿ ಹೇಳದಂತಾದೀತು। ಸಂಕ್ಷೇಪವಾಗಿ ಹೇಳಿದಾಗ ಮೂರನ್ನು ಗ್ರಹಿಸಿದಾಗ ಮಾತ್ರ ಈ ವಿಶೇಷಾಂಶವು ತಿಳಿಯುವುದು ಎಂದು ಭಾವ.

### ಅಶೇಷಾಮ್ನಾಯ.. ಪದದ ವಿಶೇಷಾರ್ಥ - ಆಮ್ನಾಯಶಬ್ದ ಪೂರ್ವನಿಪಾತ

(ಏರೀ ಬಾಳಾಚಾರ್ಯಕೃತಾ) — ಯದ್ವಾ 'ಶಿಷ್ಯಂತೇ = ಹಿಂಸ್ಯಂತೇ ಏಭಿಃ' ಇತಿ ಶೇಷಾಃ = ಕಾಮಾದಿವೈರಿಣಃ ನ ವಿದ್ಯಂತೇ ತೇ ಯೇಷಾಂ ತೇ ಅಶೇಷಾ = ವೀತರಾಗಾದಯೋ ಜನಾಃ । ತೈರಾಮ್ನಾಯಸ್ಮೃತೀನಾಂ ಹೃದಯೇನ ದೀಪ್ತಾಯ - ಇತ್ಯರ್ಥಃ । ಕಷ - ಶಿಷೇತಿ ಹಿಂಸಾರ್ಥ- ದಂಡಕೇ ಭ್ವಾದೌ ಶಿಷಧಾತೋಃ ಪಾಠಾತ್ । ಅನೇನ 'ಅಶೇಷವಿಶೇಷತೋ ವಂದ್ಯಮ್' ಇತ್ಯೇತತ್ ಪ್ರಕಾರಾಂತರೇಣ ತೃತೀಯಾಧ್ಯಾಯಾರ್ಥತಯಾ ವಿವೃತಂ ಭವತಿ । 'ಸ್ಮೃತಿ'ಪದಸ್ಯ ಅಲ್ಪಾಚ್ಕ್ತ್ವೇಽಪಿ ಆಮ್ನಾಯಸ್ಯಾಭ್ಯರ್ಹಿತತ್ವಾತ್ ಪೂರ್ವಪ್ರಯೋಗಃ ।

ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ - ಈ ಪದಕ್ಕೆ ವಿಶಿಷ್ಟವಾದ ಅರ್ಥವನ್ನು ಕಾಣಬಹುದು. ಅದು ಹೀಗೆ - ಅಶೇಷ ಎಂಬಲ್ಲಿರುವ ಶೇಷ ಎಂಬ ಶಬ್ದಕ್ಕೆ ಶಿಷ್ಯಂತೇ ಹಿಂಸ್ಯಂತೇ ಏಭಿಃ ಇತಿ ಶೇಷಾಃ ಎಂಬ ವಿವರಣೆಯಂತೆ ಯಾವುದರಿಂದ ಜನರು ಹಿಂಸೆಗೆ ಒಳಪಡುವರೋ ಅದನ್ನು ಶೇಷ ಎನ್ನುತ್ತಾರೆ. ಅರ್ಥಾತ್ ಕಾಮ, ಕ್ರೋಧ ಮೊದಲಾದ ಶತ್ರುಗಳು. ಇವುಗಳಿಲ್ಲದವರೇ ಅಶೇಷರು. ಅರ್ಥಾತ್ ರಾಗಾದಿಗಳನ್ನು ಬಿಟ್ಟ ಜನರು. ಇವರುಗಳಿಂದ ಆಮ್ನಾಯ ವೇದ ಹಾಗೂ ಸ್ಮೃತಿಗಳ ತಾತ್ಪರ್ಯದಿಂದ ಪ್ರಕಾಶಗೊಂಡವನು ಶ್ರೀಹರಿ ಎಂದರ್ಥ. ಈ ರೀತಿ ಅರ್ಥ ಮಾಡುವುದರಿಂದ 'ಅಶೇಷ ವಿಶೇಷತೋಽಪಿ ವಂದ್ಯಂ' ಮುಂದೆ ಹೇಳುವ ಅನುವ್ಯಾಖ್ಯಾನದ ಪದದ ಅರ್ಥವನ್ನು ವಿವರಣೆ ಮಾಡಿದಂತಾಗುವುದು. ಒಟ್ಟರ್ಥ ಕಾಮಕ್ರೋಧಾದಿಗಳನ್ನು ಬಿಟ್ಟ ಜನರಿಗೆ ವೇದ ಹಾಗೂ ಸ್ಮೃತಿಗಳ ಅಂತರಂಗಭಾಗದಿಂದ ಹರಿಯು ಪ್ರಕಾಶಿಸುವನು. ಅಂತಹ ಲಕ್ಷ್ಮೀಪತಿಗೆ ನಮಸ್ಕಾರ.

## ಸದಾ ಪ್ರಿಯತಮಂ ಮಮ ಎಂಬುದರ ವಿವರಣೆಯೇ ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ..

(ಏರೀ ಬಾಳಾಚಾರ್ಯಕೃತಾ) ಅಶೇಷಾಮ್ನಾಯಾನಾಂ ಸ್ಮೃತಿಃ = ಪ್ರತಿಭಾ ಯಸ್ಯ ಸ ತಥೋಕ್ತಃ ಶ್ರೀಮದಾಚಾರ್ಯಃ ।

'ಅತ್ರ ಜನ್ಮನಿ ನ ಯತ್ಪಠಿತಂ ತೇ ಜೈತ್ರ ಭಾತಿ ಕಥಮಿತ್ಯಮುನೋಕ್ತೇ ।
ಪೂರ್ವಜನ್ಮಸು ಹಿ ವೇದ ಪುರೇದಂ ಸರ್ವಮಿತ್ಯಮಿತಬುದ್ಧಿರುವಾಚ'

ಇತಿ ಸುಮಧ್ವವಿಜಯೋಕ್ತೇಃ । ತಸ್ಯ ಹೃದಯಂ= ಪ್ರಿಯಃ । ಸಚಾಸೌ ದೀಪ್ತಶ್ಚ ತಸ್ಮಾ ಇತ್ಯರ್ಥಃ ।

'ಪ್ರಿಯಂ ಹೃದಯಮುದ್ದಿಷ್ಟಂ ಕಾಂತಮಿತ್ಯಭಿಧೀಯತೇ'

ಇತಿ ದ್ವಿತೀಯತಾತ್ಪರ್ಯೋಕ್ತೇಃ । ಅನೇನ 'ಮಮ ಸದಾ ಪ್ರಿಯತಮಂ' ಇತ್ಯೇತದ್ ವಿವೃತಂ ಭವತಿ । ಶ್ರೀಮದಾಚಾರ್ಯಸ್ಯ ಹೃದಯೇ ಸ್ವಸ್ಯಾನ್ಯೇಷಾಂ ವಾ ದೀಪ್ತಾಯ = ಅವಭಾತಾಯ ಇತ್ಯರ್ಥೋ ವಾ ।

* ಅಶೇಷ ಎಂದರೆ ಸಕಲ ಎಂದರ್ಥ. ತಥಾಚ - ಸಕಲ ವೇದದ ಸ್ಮೃತಿಃ ಎಂದರೆ ಪ್ರತಿಭೆ (ಹೊಳೆಯುವಿಕೆ) ಎಂದರ್ಥ. ಇದು ಯಾರಿಗೆ ಇದೆಯೋ ಅವರು ಅಶೇಷಆಮ್ನಾಯಸ್ಮೃತಿ ಎಂದು ಕರೆಯಲ್ಪಡುತ್ತಾರೆ. ಅಂದರೆ ಶ್ರೀಮದಾಚಾರ್ಯರು. ಆದ್ದರಿಂದಲೇ ಸುಮಧ್ವವಿಜಯದಲ್ಲಿ –

'ಅತ್ರ ಜನ್ಮನಿ ನ ಯತ್ಪಠಿತಂ ತೇ ಜೈತ್ರ ಭಾತಿ ಕಥಮಿತ್ಯಮುನೋಕ್ತೇ ।
ಪೂರ್ವಜನ್ಮಸು ಹಿ ವೇದ ಪುರೇದಂ ಸರ್ವಮಿತ್ಯಮಿತಬುದ್ಧಿರುವಾಚ' (ಮ.ವಿ. 4-53)

ಎಂದು ಹೇಳಿದ್ದಾರೆ.

ಅರ್ಥ– ಜೈತ್ರ = ಎಲ್ಲ ವಿಷಯದಲ್ಲೂ ಜಯವನ್ನು ಹೊಂದುವ ಸ್ವಭಾವದವನೇ ! ತೇ = ನಿನ್ನಿಂದ, ಅತ್ರ ಜನ್ಮನಿ = ಈ ಜನ್ಮದಲ್ಲಿ , ಯತ್ = ಯಾವುದು, ನ ಪಠಿತಂ ತತ್ = ಓದಲ್ಪಡಲಿಲ್ಲವೋ ಅದು, ಕಥಂ = ಹೇಗೆ, ಭಾತಿ = ಹೊಳೆಯುತ್ತದೆ, ಇತಿ = ಹೀಗೆಂದು, ಅಮುನಾ = ಈ ಗುರುಗಳಿಂದ, ಉಕ್ತೇ ಸತಿ = ಹೇಳಲ್ಪಡುತ್ತಿರಲು, ಅಮಿತಬುದ್ಧಿಃ = ಮಿತವಲ್ಲದ ಅರ್ಥಾತ್ ಪೂರ್ಣವಾದ ಜ್ಞಾನವುಳ್ಳ ಪೂರ್ಣ-ಪ್ರಜ್ಞರು, ಇದಂ = ಈ, ಸರ್ವಂ = ಎಲ್ಲವನ್ನು, ಪೂರ್ವಜನ್ಮಸು = ಹಿಂದಿನ ಜನ್ಮ-ಗಳಲ್ಲಿ , ಪುರಾ ವೇದ ಹಿ = ತಿಳಿದುಕೊಂಡಿದ್ದೆನು, ಇತಿ = ಎಂದು, ಉವಾಚ = ಹೇಳಿದರು.

ಇವರಿಗೆ ಹೃದಯ ಎಂದರೆ ಪ್ರೀತಿಪಾತ್ರ ಎಂದರ್ಥ. ಹೃದಯ ಎಂಬ ಶಬ್ದಕ್ಕೆ ಪ್ರಿಯ ಎಂಬರ್ಥವನ್ನು ದ್ವಿತೀಯತಾತ್ಪರ್ಯ(ಭಾಗವತ)ದಲ್ಲಿ ಹೇಳಿದ್ದಾರೆ. 'ಪ್ರಿಯಂ ಹೃದಯಮುದ್ದಿಷ್ಟಂ ಕಾಂತಮಿತ್ಯ-

ಭಿಧೀಯತೇ' (2-9-23) (ಇತ್ಯಭಿಧಾನಾತ್) ಎಂದು. ದೀಪ್ತಾಯ ಎಂದರೆ ಪ್ರಕಾಶರೂಪನಾದವನು ಎಂದರ್ಥ. ಒಟ್ಟು ಅರ್ಥ - ಎಲ್ಲ ವೇದಗಳ ಸ್ಮರಣೆ ಇರುವ ಮಧ್ವಾಚಾರ್ಯರಿಗೆ ಪ್ರೀತಿಪಾತ್ರನಾದ ಹಾಗೂ ತೇಜೋರೂಪನಾದ ಶ್ರೀಪತಿಗೆ ನಮಸ್ಕಾರ ಎಂದು.

** (ಭಾಗ.ತಾ.) — ಹೃದಯಂ ಎಂದರೆ ಇಲ್ಲಿ ಬಹಳಪ್ರಿಯವಾದುದು ಎಂದರ್ಥ. ಏಕೆಂದರೆ ಕೋಶದಲ್ಲಿ "ಪ್ರಿಯ, ಹೃದಯ, ಉದ್ರಿಕ್ತ ಕಾಂತ" ಇವುಗಳು ಸಮಾನಾರ್ಥಕಗಳೆಂದು ಹೇಳಿದೆ.

ಇದರ ಭಾಗವತವಾಕ್ಯ ಹೀಗಿದೆ —

ಪ್ರತ್ಯಾದಿಷ್ಟಂ ಮಯಾ ತತ್ರ ತ್ವಯಿ ಕರ್ಮವಿಮೋಹಿತೇ ।
ತಪೋ ಮೇ ಹೃದಯಂ ಸಾಕ್ಷಾದಾತ್ಮಾಹಂ ತಪಸೋऽನಘ ॥ 2-9-22 ॥
ಸೃಜಾಮಿ ತಪಸೈವೇದಂ ಗ್ರಸಾಮಿ ತಪಸಾ ಪುನಃ ।
ಬಿಭರ್ಮಿ ತಪಸಾ ವಿಶ್ವಂ ವೀರ್ಯಂ ಮೇ ದುಸ್ತರಂ ತಪಃ ॥ (ಭಾಗ.2-9-23)

ಇಲ್ಲಿ ಭಾಗವತತಾತ್ಪರ್ಯದ ಮುಂದಿನ ವಾಕ್ಯಗಳು ಹೀಗಿವೆ —

'ತಪಃ ಪ್ರಿಯಂ ಸದಾ ವಿಷ್ಣೋಸ್ತಪಸ್ಯೈವಾಪ್ಯತೇ ಹರಿಃ ।
ಸ್ವಯಂ ಚ ತಪಸೈವೇದಂ ಬಿಭರ್ತಿ ಜ್ಞಾನಮೇವ ಹಿ ।
ತಪಃಶಬ್ದಾಭಿಧಂ ಪ್ರೋಕ್ತಂ ಜ್ಞಾನರೂಪೋ ಹರಿರ್ಯತಃ ।
ಜ್ಞಾನವೀರ್ಯೋ ಜ್ಞಾನಬಲೋ ಜ್ಞಾನಾನಂದ ಇತೀರಿತಃ' ಇತಿ ಬೃಹತ್ಸಂಹಿತಾಯಾಮ್

ಶ್ರೀಹರಿಯು ತನ್ನ ಬಳಿಯಲ್ಲಿ ನಿಂತ ಬ್ರಹ್ಮದೇವರ ಕೈಯ್ಯನ್ನು ಹಿಡಿದು ಮಾತುಗಳನ್ನು ಹೇಳುವ ಸಂದರ್ಭದಲ್ಲಿ ಈ ಭಾಗ ಬಂದಿದೆ. ತಾತ್ಪರ್ಯಾರ್ಥ ಹೀಗಿದೆ — ಸೃಷ್ಟಿಯ ಪ್ರಾರಂಭದಲ್ಲಿ ಸೃಷ್ಟಿಯನ್ನು ಮಾಡುವುದು ಹೇಗೆ ಎಂದು ನಿನಗೆ ಜ್ಞಾನವಿರಲಿಲ್ಲ. ಆಗ ನಾನು ನಿನಗೆ ತಪಸ್ಸು ಮಾಡು ಎಂದು ಆದೇಶ ಕೊಟ್ಟೆ. ಏಕೆಂದರೆ ನನಗೆ ತಪಸ್ಸೆಂದರೆ ಬಹಳ ಪ್ರಿಯ. ಆ ತಪಸ್ಸಿನಿಂದಲೇ ನನ್ನನ್ನು ಹೊಂದಲು ಸಾಧ್ಯ. ಆ ತಪಸ್ಸಿನಿಂದಲೇ ಪ್ರಪಂಚದ ಸೃಷ್ಟಿ. ತಪಸ್ಸಿನಿಂದಲೇ ಲಯ. ತಪಸ್ಸಿನಿಂದಲೇ ಪಾಲನೆಯೂ ಕೂಡ. ಏಕೆಂದರೆ ನಾನು ಜ್ಞಾನಸ್ವರೂಪಿ. ಹಾಗೆ ಗುಣಗಳಾದ ವೀರ್ಯ ಬಲ ಮುಂತಾದವುಗಳೂ ನನ್ನ ಜ್ಞಾನಸ್ವರೂಪವೇ ಆಗಿವೆ.

ದೇವಸ್ಯೈಷ ಸ್ವಭಾವೋऽಯಂ ... – ಶ್ರುತಿ

(ಏರೀಬಾಳಾಚಾರ್ಯರು) – ಭಗವತಿ ಪೂರ್ಣಗುಣತ್ವಸ್ಯ ಅಸ್ಮದಾದೌ ಅಭಾವೇನ ಅಸಂಭಾವನಾ-ಶಂಕಾನಿರಾಸಾಯ "ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ" ಇತ್ಯುಕ್ತಮ್ । "ಲೀಲೇತಿ" ವದತಾ ಪ್ರಯೋಜನಾಪೇಕ್ಷಣೇನ ಸೃಷ್ಟ್ಯಾದಿಕರಣೇ ಅಪೂರ್ಣತಾ, ತದಭಾವೇ ಪ್ರಯೋಜನಾ-

ಭಾವೇನ ಸೃಷ್ಟ್ಯಾದಿಕರಣಮೇವ ಅನುಪಪನ್ನಮ್ ಇತಿ ಶಂಕಾಽಪಿ ಪರಿಹೃತಾ । 'ದೇವಸ್ಯೈಷ ಸ್ವಭಾವೋಽಯಮ್ ಆಪ್ತಕಾಮಸ್ಯ ಕಾ ಸ್ಪೃಹಾ' ಇತಿ ಹಿ ಶ್ರುತಿಃ ।

'ನಿಖಿಲಪೂರ್ಣಗುಣೈಕದೇಹಂ' ಎಂಬುದರ ಸಮಾನಾರ್ಥಕವಾದ 'ನಿತ್ಯಾಗಣಿತಗುಣಮಾಣಿಕ್ಯ' ಎಂಬ ವಿಶೇಷಣದಿಂದ ಭಗವಂತನನ್ನು ಸಕಲಗುಣಪರಿಪೂರ್ಣ ಎಂದಿದ್ದಾರೆ. ಇದು ಅಸಂಭಾವಿತ ಏಕೆಂದರೆ ನಮ್ಮೆಲ್ಲರಲ್ಲಿಯೂ ಕಾಣದ ಈ ಗುಣಪರಿಪೂರ್ಣತ್ವ ಭಗವಂತನಲ್ಲಿ ಬರಲು ಹೇಗೆ ಸಾಧ್ಯ? ಎಂಬ ಪ್ರಶ್ನೆ ಬರುವುದು. ಇದಕ್ಕೆ ಉತ್ತರವಾಗಿ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲ-ವಪುಷೇ' ಎಂದಿದ್ದಾರೆ. ಇದರಿಂದಾಗಿ ಇಡೀ ಜಗತ್ತಿಗೆ ಸೃಷ್ಟಿ,ಸ್ಥಿತಿ ಮೊದಲಾದವುಗಳನ್ನು ಮಾಡು-ವವನು ಸಕಲಗುಣಪರಿಪೂರ್ಣನೇ ಆಗಿರಬೇಕು.

ಭಗವಂತನ ಸೃಷ್ಟ್ಯಾದಿವ್ಯಾಪಾರವು ಅವನ ಸ್ವಭಾವವೇ ಆಗಿದೆ ಎಂಬುದು ಶ್ರುತಿಪ್ರಮಾಣಸಿದ್ಧ. "ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ' (ಅನುವ್ಯಾ.2-1 ಶ್ಲೋ.105) ಎಂದು.

ಅನ್ವಯ — ಏಷಃ ಅಯಂ ದೇವಸ್ಯ ಸ್ವಭಾವಃ ಆಪ್ತಕಾಮಸ್ಯ ಕಾ ಸ್ಪೃಹಾ? ಎಂದು ಏಷಃ -ಸೃಷ್ಟಿಯನ್ನು ವಿಷಯೀಕರಿಸುವ, ಅಯಂ - ಈ ಇಚ್ಛೆಯು, ದೇವಸ್ಯ - ಭಗವಂತನ ಸ್ವಭಾವಃ - ಸ್ವಭಾವವಷ್ಟೇ. ಆಪ್ತಕಾಮಸ್ಯ - ಕಾಮನೆಗೆ ವಿಷಯವಾದ ಎಲ್ಲವನ್ನೂ ಪಡೆದಿರುವ ಅವನಿಗೆ ಕಾ ಸ್ಪೃಹಾ ? - ಯಾವ ವಿಷಯದಲ್ಲಿ ಇಚ್ಛೆಯು ಬರಲು ಸಾಧ್ಯ. ಯಾವ ವಿಷಯದಲ್ಲೂ ಇಲ್ಲ; ಎಲ್ಲವನ್ನೂ ಪಡೆದದ್ದರಿಂದ.

ಏಷಃ ಎಂಬ ಶಬ್ದದಲ್ಲಿ "ಇಷ ಇಚ್ಛಾಯಾಂ" ಎಂಬ ಧಾತುವಿದೆ.

(ಸುಧಾ) यदुक्तमीश्वरस्य प्रवृत्तिः प्रयोजनेन विना स्वभावादेव प्रमितेति, तत् प्रमाणमिदानीमाह — देवस्येति । "देवस्यैष स्वभावोऽयमाप्तकामस्य का स्पृहा" इति श्रुतिरञ्जसा स्फुटमुक्तमर्थ-माह । देवस्यायं सृष्ट्यादिविषय एषः इच्छा, तत्पूर्विका प्रवृत्तिरिति यावत् । स्वभाव एव । न प्रयोजनाय । कुतः? आप्तकामस्य प्रयोजनस्पृहासम्भवादित्यर्थः ।

## ಪರದೋಷನಿವರ್ತಕನಿಗೆ ಸ್ವದೋಷನಿವರ್ತಕತ್ವವು ಸುತರಾಂ ಸಿದ್ಧ

(ಆನಂದ) — ಯದ್ವಾ ಹರಿಗುಣಮಾಣಿಕ್ಯಧ್ಯಾನೇ ತತ್ ಪ್ರಭಯಾ ನಿರಾಕೃತಂ ಭಕ್ತಸ್ಯಾವದ್ಯಲಕ್ಷಣಂ ತಮೋ ಯೇನ - ಇತ್ಯರ್ಥಃ । ಪರದೋಷನಿವರ್ತಕತ್ವಂ ಚ ಸ್ವಸ್ಯ ನಿರ್ದೋಷತ್ವಂ ವಿನಾ ನ ಸಂಭವತೀತಿ, ಪರಮಾತ್ಮನೋ ನಿರ್ದೋಷತ್ವಂ ಸಿದ್ಧ್ಯತೀತಿ ಭಾವಃ ।

ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ - ಈ ಹಿಂದೆ ಹರಿಯಲ್ಲಿರುವ ನಿತ್ಯವಾದ ಗುಣಗಳಿಂದ ಯಾವುದೇ ದೋಷಗಳಿಗೂ ಅವಕಾಶವಿಲ್ಲ ಎಂದು ಒಂದು

ಪ್ರಕಾರದಲ್ಲಿ ಅರ್ಥವಿವರಣೆ ಮಾಡಿದ್ದಿದೆ. ಈಗ ಹರಿಯ ನಿತ್ಯವಾದ ಅಗಣಿತವಾದ ಗುಣಗಳೆಂಬ ಮಾಣಿಕ್ಯವನ್ನು ಯಾವ ಭಕ್ತರು ಧ್ಯಾನ ಮಾಡುವರೋ ಅಂತಹವರಿಗೆ ಆ ಹರಿಗುಣಗಳೆಂಬ ಮಾಣಿಕ್ಯದ ಪ್ರಭೆಯಿಂದ, ಎಲ್ಲ ತಮ್ಮ ದೋಷಗಳೆಂಬ ತಮಸ್ಸು ನಾಶವಾಗುವುದು. ಈ ರೀತಿ ಯಾರಿಂದಾಗುತ್ತದೋ ಅವರೇ ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತ-ಸಕಲಾವದ್ಯತಮಸ್ಸಾಗುತ್ತಾರೆ. ಹೀಗೆ ಹರಿಗೆ ಇದು ವಿಶೇಷಣವಾಗಿದೆ. ಶ್ರೀಹರಿಯು ಬೇರೆಯವರ ದೋಷಗಳನ್ನು ನಿವಾರಿಸುವವನಾದ್ದರಿಂದ ತನ್ನಲ್ಲಿ ದೋಷಗಳಿಲ್ಲದಿರುವಿಕೆಯು ಸುತರಾಂ ಸಂಭಾವಿತವಾಗಿದೆ. ಆದ್ದರಿಂದ ನಿರ್ದೋಷತ್ವವು ಹರಿಗೆ ಸಿದ್ಧವಾಗುತ್ತದೆಂದು ಅಭಿಪ್ರಾಯ.

## ಶ್ರೀಶ್ರೀವಿದ್ಯಾಧೀಶತೀರ್ಥರ ವಾಕ್ಯಾರ್ಥಚಂದ್ರಿಕಾ ಟಿಪ್ಪಣೀ

### ನಾರಾಯಣನಿಗೆ ನಮಸ್ಕಾರ

ನಿತ್ಯಾಗಣ್ಯಬಲದ್ಯುತಿಪ್ರಮಿತಿಸತ್ಸೌಖ್ಯಾಗ್ರ್ಯವೀರ್ಯಾತುಲೌ –
ದಾರ್ಯಪ್ರಾಭವಧೀರತಾಮುಖಗುಣವ್ರಾತಾತ್ಮದಿವ್ಯಾಕೃತಿಮ್ ।
ಸಂತಾಪಾದಿಸಮಸ್ತದೋಷವಿಧುರಂ ವೇದೈಕವೇದ್ಯಂ ಜಗತ್–
ಜನ್ಮಾದಿಪ್ರದಮಿಂದಿರೇಶ(ಮಮಲಂ)ಮನಿಶಂ ನಾರಾಯಣಂ ನೌಮ್ಯಹಮ್ ॥

ವ್ಯಾಖ್ಯಾನಕರ್ತೃಗಳು ಸುಧಾಕ್ಕೆ ಟಿಪ್ಪಣಿಯನ್ನು ಪ್ರಾರಂಭಿಸುವಾಗ ನಾರಾಯಣನಿಗೆ ನಮಸ್ಕರಿ-ಸುತ್ತಿದ್ದಾರೆ – ನಾರಾಯಣಂ ನೌಮ್ಯಹಮ್ ಎಂದು. ನಾರಾಯಣನನ್ನು ನಾನು ನಮಸ್ಕರಿಸುತ್ತೇನೆ ಎಂದಿದರ ಅರ್ಥ. ಈ ನಮಸ್ಕಾರವನ್ನು ಮಾಡುವುದು ಈ ಗ್ರಂಥದ ಪ್ರಾರಂಭದ ಸಮಯದಲ್ಲಿ ಅಲ್ಲದೇ ಪ್ರತಿನಿತ್ಯವೂ ನಮಸ್ಕರಿಸುತ್ತಿದ್ದೇನೆ ಎಂದು 'ಅನಿಶಂ' ಎಂಬ ಪದದಿಂದ ಸೂಚಿಸುತ್ತಿದ್ದಾರೆ. ನಾರಾಯಣನು ಹೇಗಿದ್ದಾನೆ ಎಂದು ವರ್ಣಿಸುತ್ತಿದ್ದಾರೆ – ನಿತ್ಯಾಗಣ್ಯ ಇತ್ಯಾದಿಯಾಗಿ. ನಾರಾಯಣನು ದಿವ್ಯವಾದ ದೇಹವುಳ್ಳವನು. ಆ ದೇಹವು ಅನೇಕ ಗುಣಗಳಿಗೆ ಆಶ್ರಯವಾಗಿದೆ. ಆ ಗುಣಗಳು ಬಲ, ಕಾಂತಿ, ಯಥಾರ್ಥಜ್ಞಾನ, ದುಃಖಮಿಶ್ರಿತವಲ್ಲದ ಸುಖ ಇತ್ಯಾದಿ. ಹಾಗೆ ಸಂತಾಪ, ಅಜ್ಞಾನ ಮೊದಲಾದ ಎಲ್ಲ ದೋಷಗಳಿಂದ ರಹಿತನೂ ಆಗಿದ್ದಾನೆ. ಇನ್ನು ಇವನನ್ನು ತಿಳಿಸುವ ಏಕೈಕ ಪ್ರಮಾಣ ವೇದ ಒಂದೇ. ಹಾಗೆಯೇ ಇವನು ಇಡೀ ಜಗತ್ತಿಗೆ ಜನ್ಮಾದಿ- ಅಷ್ಟಕಗಳನ್ನು ಕೊಡುವವನು. ಇದೆಲ್ಲದಕ್ಕಿಂತ ಮುಖ್ಯವಾಗಿ ಎಲ್ಲರೂ ವಂದಿಸುವ ಲಕ್ಷ್ಮಿಗೆ ಪತಿಯಾಗಿದ್ದಾನೆ.

### ವೇದವ್ಯಾಸರೆಂಬ ವಿಚಿತ್ರ ಮೇಘ

ವೇದಾಂಭೋಧಿಸಮುದ್ಧೃತಾತಿವಿಲಸತ್–ಸೂತ್ರಾಮೃತಾಂಭೋಲಸದ್–
ಧಾರಾವರ್ಷಣತುಷ್ಟಸದ್ಧೃದವನಿಜ್ಞಾನಾಂಕುರಾಧಾಯಕಮ್ ।

ಸಂಸಾರಾತಪನಾಶನಂ ಸುರಮನಃಸಚ್ಚಾತಕಾನಂದದಂ
ವೇದವ್ಯಾಸವಿಚಿತ್ರಮೇಘಮನಿಶಂ ಮಚ್ಛ್ರೇಯಸೇ ಸಂಶ್ರಯೇ ॥

ಈ ಶ್ಲೋಕದಲ್ಲಿ ವೇದವ್ಯಾಸರನ್ನು ಪ್ರಾರ್ಥಿಸುತ್ತಿದ್ದಾರೆ – ಪ್ರತಿನಿತ್ಯವೂ ನನ್ನ ಶ್ರೇಯಸ್ಸಿಗಾಗಿ ನಿಮ್ಮನ್ನು ಆಶ್ರಯಿಸುತ್ತೇನೆ ಎಂದು. ವೇದವ್ಯಾಸರನ್ನು ಇಲ್ಲಿ ಮೋಡಕ್ಕೆ ಹೋಲಿಸಿದ್ದಾರೆ. ಈ ಮೋಡವು ಸಾಮಾನ್ಯ ಮೋಡದಂತೆ ಅಲ್ಲದೆ ವಿಚಿತ್ರವಾಗಿದೆ. ಪೂರ್ಣವಾಗಿ ಅದರ ಬಗ್ಗೆ ಹೇಳಲು ಅಸಾಧ್ಯ ಎಂದು ತಾತ್ಪರ್ಯ. ಮೋಡಗಳನ್ನು ಹೀಗೆ ನಿರೂಪಿಸಬಹುದು – ಸಮುದ್ರದಲ್ಲಿರುವ ನೀರನ್ನು ಹೀರುತ್ತದೆ. ನಂತರ ಭೂಮಿಯ ಮೇಲೆ ಧಾರಾಕಾರವಾದ ಮಳೆಯನ್ನು ಸುರಿಸುತ್ತದೆ. ಆಗ ಭೂಮಿಯಲ್ಲಿ ಅಂಕುರಾದಿಗಳು ಉದ್ಭವಿಸುತ್ತವೆ. ಅಲ್ಲದೇ ಮಳೆಯು ಬಂದಾಗ ಅದರಿಂದ ತಾಪ ಕಳೆಯುವುದು. ಇನ್ನು ಚಾತಕಪಕ್ಷಿಗಳು ಮಳೆಯ ನೀರನ್ನು ಪ್ರತೀಕ್ಷೆ ಮಾಡುತ್ತ ಮಳೆಯು ಬಂದಾಗ ಸಂತೋಷ ಪಡೆಯುತ್ತವೆ. ಇದರಂತೆ ವೇದವ್ಯಾಸರೆಂಬ ಮೇಘವು ಒಂದು ವಿಧವಾದ ಸಮುದ್ರದಿಂದ ಅಮೃತವನ್ನು ತೆಗೆದಿದೆ. ಆ ಸಮುದ್ರವು ವೇದಗಳೇ ಆಗಿವೆ. ಅಲ್ಲಿ ಬಂದ ಅಮೃತ ಬ್ರಹ್ಮಸೂತ್ರವೇ ಆಗಿದೆ. ಆ ಬ್ರಹ್ಮಸೂತ್ರಗಳು ಚೆನ್ನಾಗಿ ಶೋಭಿಸುತ್ತಿವೆ. ಅರ್ಥಾತ್ ವೇದಸಂವಾದಿಯಾದ ಅರ್ಥ-ಗಳನ್ನೇ ಬ್ರಹ್ಮಸೂತ್ರಗಳು ಚೆನ್ನಾಗಿ ನಿರೂಪಿಸುತ್ತಿವೆ ಎಂದು. ಇಂತಹ ಈ ಬ್ರಹ್ಮಸೂತ್ರಗಳೆಂಬ ಅಮೃತದ ಸೇಚನದಿಂದ ಇಡೀ ಸಜ್ಜನರ ಹೃದಯವೆಂಬ ಭೂಮಿ ತೊಯ್ದಿದೆ. ಆ ಭೂಮಿಯಲ್ಲಿ ಅಂಕುರವು ಹುಟ್ಟಿದೆ. ಆ ಅಂಕುರವೇ ಜ್ಞಾನ. ವೇದವ್ಯಾಸರೆಂಬ ಈ ಮೇಘವು ಸಂಸಾರವೆಂಬ ತಾಪವನ್ನೇ ಪರಿಹರಿಸುವಂತಹದ್ದು. ಈ ಮೇಘ ಮಳೆ ಸುರಿಸಿದಾಗ ದೇವತೆಗಳ ಮನಸ್ಸೆಂಬ ಚಾತಕಪಕ್ಷಿಗೆ ಆನಂದವುಂಟಾಗುತ್ತಿದೆ. ಹೀಗೆ ಈ ವೇದವ್ಯಾಸರೆಂಬ ಮೇಘವು ಸಾಮಾನ್ಯಮೇಘ-ದಂತೆ ಅಲ್ಲದೆ ನಮ್ಮ ಕಲ್ಪನೆಗೆ ಮೀರಿದ ವೇದಾದಿಸಮುದ್ರಾದಿಗಳಿಂತ ಅಸದೃಶವಾದ ಬ್ರಹ್ಮ-ಸೂತ್ರಾಮೃತವನ್ನು ತೆಗೆದು ಎಲ್ಲ ಅಧಿಕಾರಿಗಳಿಗೂ ನೀಡಿ ಆನಂದ ಪಡುವಂತೆ ಮಾಡುತ್ತಿದೆ.

## ಮಧ್ವಸೂರ್ಯರು ಸಜ್ಞಾನಪ್ರಕಾಶಕರು

ಯದ್ವಾಗ್ವಿಸ್ತರರಶ್ಮಿಭಿರ್ಜಗದಿದಂ ಸನ್ಮಾರ್ಗಮಾಲಂಬಿತಂ
ಸತ್ಸಿದ್ಧಾಂತವರಾರವಿಂದನಿವಹಾ ವಿಸ್ತಾರಮಾಸಾದಿತಾಃ ।
ದುಃಸಿದ್ಧಾಂತಮಹಾಂಧಕಾರನಿಕರಾ ದೇಶಾಂತಮುಲ್ಲಂಘಿತಾಃ
ಸೋಽಯಂ ಮಧ್ವದಿವಾಕರೋ ಭವತು ಸಜ್ಞಾನಪ್ರಕಾಶಾಯ ಮೇ ॥

ಈ ಶ್ಲೋಕದಲ್ಲಿ ಶ್ರೀಮಧ್ವಾಚಾರ್ಯರನ್ನು ಪ್ರಾರ್ಥಿಸಿದ್ದಾರೆ. ನನಗೆ ಸಜ್ಞಾನಕ್ಕೆ ಕಾರಣರಾಗಲಿ ಎಂದು. ಇಲ್ಲಿ ಮಧ್ವಾಚಾರ್ಯರನ್ನು ಸೂರ್ಯನಿಗೆ ಹೋಲಿಸಿದ್ದಾರೆ. ಆ ಸೂರ್ಯನು ಪ್ರಕಾಶ-ಬೀರುವಂತೆ ನನಗೂ ಜ್ಞಾನಪ್ರಕಾಶವನ್ನು ಮಧ್ವಾಚಾರ್ಯಸೂರ್ಯನು ಬೀರಲಿ ಎಂದು. ಪ್ರಸಿದ್ಧ-

ಸೂರ್ಯನು ತನ್ನ ಕಿರಣಗಳಿಂದ ಇಡೀ ಜಗತ್ತಿಗೆ ಒಳ್ಳೆಯ ಮಾರ್ಗವನ್ನು ತೋರಿಸುವ ಮೂಲಕ ನಡೆಯುವಂತೆ ಮಾಡುತ್ತಾನೆ. ಸೂರ್ಯನು ಬಂದಾಗ ಎಲ್ಲ ಕಮಲಗಳ ಸಮೂಹವು ಚೆನ್ನಾಗಿ ಅರಳುವಿಕೆಯನ್ನು ಪಡೆಯುತ್ತದೆ. ಹಾಗೆಯೇ ನಿಬಿಡವಾದ ಕತ್ತಲೆಯು ಆಯಾಯಾ ಪ್ರದೇಶದಿಂದ ದೂರ ಓಡಿದೆ. ಅದರಂತೆ ಇಲ್ಲಿ ಮಧ್ವಾಚಾರ್ಯರು ತಮ್ಮ ಮಾತುಗಳೆಂಬ ಕಿರಣಗಳ ಮುಖಾಂತರ ಸಜ್ಜನರಿಗೆ ಸರಿಯಾದ ಮಾರ್ಗವನ್ನು ಆಶ್ರಯಿಸುವಂತೆ ಮಾಡಿದ್ದಾರೆ. ಒಳ್ಳೆಯ ಸಿದ್ಧಾಂತಗಳೇ ಇಲ್ಲಿ ಕಮಲಗಳು. ಅಂತಹ ಕಮಲಗಳ ಸಮೂಹವನ್ನು ಚೆನ್ನಾಗಿ ಅರಳುವಂತೆ ಮಾಡಿದ್ದಾರೆ. ಇನ್ನು ನಿಬಿಡವಾದ ಕತ್ತಲೆಯೆಂದರೆ ದುಃಸಿದ್ಧಾಂತಗಳೇ. ಇವುಗಳನ್ನು ಆಯಾ ಪ್ರದೇಶಗಳಿಂದ ದೂರ ಓಡುವಂತೆ ಮಾಡಿದ್ದಾರೆ.

## ಜಯಮುನಿಗಳೆಂಬ ಅರ್ಜುನ

ಸತ್ಸೂತ್ರಾನ್ವಿತಮಧ್ವಭಾಷ್ಯವಿಲಸದ್ಗಾಂಡೀವಸಂಯೋಜಿತೈಃ
ಸನ್ಮಾನೇಷುಭಿರರ್ದಯನ್ ಕುಸಮಯಪ್ರತ್ಯರ್ಥಿದುಃಸ್ಯಂದನಾನ್ ।
ಶ್ರೀಕೃಷ್ಣೇರಿತವೇದವಾಜಿನಿಯತಶ್ರೀಮದ್ವಶಾಸ್ತ್ರೋಲ್ಲಸದ್-
ದಿವ್ಯಸ್ಯಂದನಸಂಸ್ಥಿತೋ ಜಯಮುನೀಶಾಖ್ಯಾರ್ಜುನಃ ಸ್ಯಾನ್ಮುದೇ ॥

ಇಲ್ಲಿ ಶ್ರೀಮನ್ನ್ಯಾಯಸುಧಾಕಾರರಾದ ಶ್ರೀಜಯತೀರ್ಥರನ್ನು ನನ್ನ ಸಂತೋಷಕ್ಕೆ ಕಾರಣರಾಗಲಿ ಎಂದು ಪ್ರಾರ್ಥಿಸಿದ್ದಾರೆ. ಇಲ್ಲಿ ಜಯತೀರ್ಥರನ್ನು ಅರ್ಜುನನಿಗೆ ಹೋಲಿಸಿದ್ದಾರೆ. ಅರ್ಜುನ ಒಳ್ಳೆಯ ರಥದಲ್ಲಿ ಕುಳಿತಿದ್ದಾನೆ. ಆ ರಥದ ಕುದುರೆಗಳನ್ನು ಶ್ರೀಕೃಷ್ಣ ನಿಯಂತ್ರಿಸುತ್ತಿದ್ದಾನೆ. ಒಳ್ಳೆಯ ಹಗ್ಗದಿಂದ ಕೂಡಿದ ಗಾಂಡೀವಧನುಸ್ಸನ್ನು ಹಿಡಿದು ಅದರಲ್ಲಿ ಸಂಲಗ್ನವಾದ ಒಳ್ಳೆಯ ಬಾಣಗಳಿಂದ ಶತ್ರುಗಳ ರಥಗಳನ್ನು ನಾಶಮಾಡುತ್ತಿದ್ದಾನೆ. ಅದರಂತೆ ಜಯತೀರ್ಥರೆಂಬ ಅರ್ಜುನನು ಒಂದು ರಥದಲ್ಲಿ ಕುಳಿತಿದ್ದಾನೆ. ಆ ರಥವು ಮಧ್ವಶಾಸ್ತ್ರವು. ಈ ಮಧ್ವಶಾಸ್ತ್ರವೆಂಬ ರಥದ ಕುದುರೆಗಳು ವೇದಗಳೇ. ಆ ವೇದಗಳೆಂಬ ಕುದುರೆಗಳನ್ನು ನಿಯಂತ್ರಿಸುತ್ತಿರುವವನು ಶ್ರೀಕೃಷ್ಣ ಅಂದರೆ ವಾಸಿಷ್ಠಕೃಷ್ಣ ಎನಿಸಿದ ವೇದವ್ಯಾಸರು. ಇದರ ಅಭಿಪ್ರಾಯ ಮಧ್ವಶಾಸ್ತ್ರ ವೇದಾನುಸಾರಿಯಾ-ದದ್ದೇ. ವೇದ ಯಾವ ಮಾರ್ಗದಲ್ಲಿ ಸಾಗುತ್ತದೋ ಆ ಮಾರ್ಗದಲ್ಲಿ ಮಧ್ವಶಾಸ್ತ್ರ ಸಾಗುತ್ತದೆ.

ಇನ್ನು ಜಯತೀರ್ಥರೆಂಬ ಅರ್ಜುನನ ಹತ್ತಿರ ಇರುವ ಗಾಂಡೀವಧನುಸ್ಸೆಂದರೆ ಅದು ಮಧ್ವಾಚಾರ್ಯರ ಭಾಷ್ಯವೇ ಆಗಿದೆ. ಈ ಮಧ್ವಾಚಾರ್ಯರ ಭಾಷ್ಯವೆಂಬ ಗಾಂಡೀವಧನುಸ್ಸು ಒಳ್ಳೆಯ ಹಗ್ಗದಿಂದ ಕೂಡಿದೆ. ಆ ಹಗ್ಗವೇ ಬ್ರಹ್ಮಸೂತ್ರಗಳು. ಅರ್ಥಾತ್ ಮಧ್ವಭಾಷ್ಯವು ಬ್ರಹ್ಮಸೂತ್ರಾನುಸಾರಿಯೇ. ಇಂತಹ ಗಾಂಡೀವಧನುಸ್ಸಿನಲ್ಲಿರುವ ಒಳ್ಳೆಯ ಬಾಣಗಳು ಎಂದರೆ ಒಳ್ಳೆಯ ಪ್ರಮಾಣಗಳು. ಇದರಿಂದ ಕೆಟ್ಟಸಿದ್ಧಾಂತಗಳೆಂಬ ಪ್ರತಿವಾದಿಗಳ ರಥಗಳನ್ನು ನಾಶ-ಮಾಡುತ್ತಿದ್ದಾನೆ.

## ಶ್ರೀರಘೂತ್ತಮರೆಂಬ ಚಂದ್ರ

ಸಚ್ಛಾಸ್ತ್ರಾಮಲಭಾವಬೋಧಕಿರಣೈಃ ಸಂವರ್ಧಯನ್ ಮಧ್ವಸತ್-
ಸಿದ್ಧಾಂತಾಬ್ಧಿಮನಂತಶಿಷ್ಯಕುಮುದವ್ರಾತಂ ವಿಕಾಸಂ ನಯನ್ ।
ಉದ್ಭೂತೋ ರಘುವರ್ಯತೀರ್ಥಜಲಧೇಸ್ತಾಪತ್ರಯಂ ತ್ರಾಸಯನ್
ಯಸ್ತಂ ನೌಮಿ ರಘೂತ್ತಮಾಖ್ಯಶಶಿನಂ ಶ್ರೀವಿಷ್ಣುಪಾದಾಶ್ರಯಮ್ ॥

ಈ ಶ್ರೀರಘೂತ್ತಮತೀರ್ಥರನ್ನು ನಮಸ್ಕರಿಸುತ್ತಿದ್ದಾರೆ. ರಘೂತ್ತಮತೀರ್ಥರನ್ನು ಚಂದ್ರನಿಗೆ ಹೋಲಿಸಿದ್ದಾರೆ. ಚಂದ್ರನು ವಿಷ್ಣುಪದವನ್ನು (ವಿಯತ್ ವಿಷ್ಣುಪದಂ ವಾಪಿ ಎಂದಿದೆ ಕೋಶ) ಅಂದರೆ ಆಕಾಶವನ್ನು ಆಶ್ರಯಿಸಿದ್ದಾನೆ. ಹಾಗೇ ಸಮುದ್ರದಿಂದ ಉದ್ಭವಿಸಿದ್ದಾನೆ. ತನ್ನ ಕಿರಣಗಳಿಂದ ಜನರ ತಾಪವನ್ನು ಪರಿಹರಿಸುತ್ತಿದ್ದಾನೆ. ಇನ್ನು ಚಂದ್ರ ತನ್ನ ನಿರ್ಮಲವಾದ ಶುಭ್ರಕಿರಣಗಳಿಂದ ಅನೇಕ ಕುಮುದಗಳನ್ನು ಹಾಗೂ ಸಮುದ್ರವನ್ನು ಅರಳಿಸುತ್ತಾನೆ ಹಾಗೂ ವೃದ್ಧಿಪಡಿಸುತ್ತಾನೆ. ಅದರಂತೆ ರಘೂತ್ತಮತೀರ್ಥರೆಂಬ ಚಂದ್ರನು ವಿಷ್ಣುಪದ ಅಂದರೆ ಭಗವಂತನ ಪಾದಕಮಲಗಳನ್ನು ಆಶ್ರಯಿಸಿದ್ದಾನೆ. ಇನ್ನು ರಘೂತ್ತಮತೀರ್ಥರೆಂಬ ಚಂದ್ರನು ರಘುವರ್ಯತೀರ್ಥರೆಂಬ ಸಮುದ್ರ-ದಿಂದ ಬಂದಿದ್ದಾನೆ. ತನ್ನ ಒಳ್ಳೆಯ ಶಾಸ್ತ್ರಗಳನ್ನು ಅನುಸರಿಸಿ ಇರುವ ನಿರ್ಮಲವಾದ ಭಾವಬೋಧ ಎಂಬ ವ್ಯಾಖ್ಯಾನದ ಮಾತುಗಳ ಕಿರಣಗಳಿಂದ ಮಧ್ವಸಿದ್ಧಾಂತವೆಂಬ ಸಮುದ್ರವನ್ನು ವೃದ್ಧಿ ಪಡಿಸುತ್ತಾನೆ. ಹಾಗೆಯೇ ಅನಂತಶಿಷ್ಯರು ಎಂಬ ಕುಮುದಗಳ ಸಮೂಹವನ್ನು ಅರಳಿಸುತ್ತಿದ್ದಾನೆ.

## ಮೃಗೇಂದ್ರರಾಜರಾದ ಶ್ರೀವೇದವ್ಯಾಸತೀರ್ಥರು

ಶ್ರೀಮದ್ರಾಮಗಿರೀಂದ್ರಪಾದನಿರತಂ ವಿದ್ರಾವಯಂತಂ ದಿಶೋ
ದುರ್ವಾದೀಂದ್ರಮಹಾಮೃಗಾನ್ ನಿಗಮಸದ್ವ್ಯಾಖ್ಯಾಲಸನ್ನಾದತಃ ।
ದುಃಶಾಸ್ತ್ರೇಭಕುತರ್ಕಕುಂಭದಲನಪ್ರೌಢಾತ್ಮವಿದ್ಯಾನಖಂ
ವೇದವ್ಯಾಸಮೃಗೇಂದ್ರರಾಜಮಧಿಕಂ ವಂದೇಽನಿಶಂ ಮದ್ಗುರುಮ್ ॥

ಈ ಶ್ಲೋಕದಲ್ಲಿ ಗುರುಗಳಾದ ಶ್ರೀವೇದವ್ಯಾಸತೀರ್ಥರನ್ನು ಪ್ರತಿನಿತ್ಯವೂ ನಮಸ್ಕಾರ ಮಾಡುತ್ತೇನೆ ಎಂದಿದ್ದಾರೆ. ವೇದವ್ಯಾಸತೀರ್ಥರನ್ನು ಸಿಂಹಕ್ಕೆ ಹೋಲಿಸಿದ್ದಾರೆ. ಸಿಂಹವು ದೊಡ್ಡಪರ್ವತದ ಗುಹೆಗಳಲ್ಲಿ ನೆಲೆಸುತ್ತದೆ. ಹಾಗೇ ತನ್ನ ಗರ್ಜನೆಯಿಂದ ದೊಡ್ಡ ದೊಡ್ಡ ಪ್ರಾಣಿಗಳನ್ನು ಓಡಿಸುತ್ತದೆ. ಆನೆಯ ಕುಂಭಸ್ಥಳವನ್ನು ಭೇದಿಸುವಂತಹ ಉಗುರುಗಳನ್ನು ಹೊಂದಿದೆ. ಹೀಗೆ ಸಿಂಹವು ಮೃಗೇಂದ್ರರಾಜ ಎನಿಸುತ್ತದೆ. ಇದರಂತೆ ವೇದವ್ಯಾಸತೀರ್ಥರು ಶ್ರೀರಾಮಚಂದ್ರನೆಂಬ ದೊಡ್ಡ ಪರ್ವತದ ಪಾದಗಳನ್ನು ಆಶ್ರಯಿಸಿದ್ದಾರೆ. ತಮ್ಮ ವೇದಶಾಸ್ತ್ರಾನುಗುಣವಾದ ಒಳ್ಳೆಯ

ವ್ಯಾಖ್ಯಾನವೆಂಬ ನಾದದಿಂದ ದುರ್ವಾದಿಶ್ರೇಷ್ಠರೆಂಬ ಮಹಾಮೃಗಗಳನ್ನು ದಿಕ್ಕುಪಾಲಾಗಿಸುತ್ತಿದ್ದಾರೆ. ತಮ್ಮ ಪ್ರೌಢವಾದ ಬ್ರಹ್ಮವಿದ್ಯೆಯೆಂಬ ಉಗುರುಗಳಿಂದ ದುಃಶಾಸ್ತ್ರಗಳೆಂಬ ಆನೆಗಳ ಕುತರ್ಕವೆಂಬ ಕುಂಭಸ್ಥಳಗಳನ್ನು ಸೀಳುತ್ತಿದ್ದಾರೆ. ಹಾಗಾಗಿ ಇವರನ್ನು ಮೃಗೇಂದ್ರರಾಜ ಎಂದು ವರ್ಣಿಸಿದ್ದಾರೆ.

## ವ್ಯಾಸರಾಜರೆಂಬ ಪೂಜ್ಯಚರಣರು ನಿತ್ಯ ಮುದನೀಡಲಿ

ವೇದಾಂತಾಬ್ಧಿಮಮಂದಬೋಧಗಿರಿಣಾ ಸದ್ಬ್ರಹ್ಮಸೂತ್ರಾಹಿನಾ
ದುಸ್ತರ್ಕೇತರದಾನವಾಮರಗಣೈಃ ಸಮ್ಮಥ್ಯ ಯೋ ಲಬ್ಧವಾನ್ ।
ಸನ್ನ್ಯಾಯಾಮೃತಚಂದ್ರಿಕೇ ಯುಧಿ ತಥಾ ತರ್ಕೇಽಕರೋತ್ ತಾಂಡವಂ
ಸೋಽಯಂ ವ್ಯಾಸಮುನೀಂದ್ರಪೂಜ್ಯಚರಣೋ ನಿತ್ಯಂ ಭವೇನ್ಮೇ ಮುದೇ ॥

ಈ ಶ್ಲೋಕದಲ್ಲಿ ಶ್ರೀವ್ಯಾಸರಾಜರನ್ನು ನಿತ್ಯವೂ ನನಗೆ ಸಂತೋಷಪ್ರದರಾಗಲಿ ಎಂದು ಪ್ರಾರ್ಥಿಸಿದ್ದಾರೆ. ಹಿಂದೆ ದೇವತೆಗಳು ದೈತ್ಯರು ಸೇರಿ ಸಮುದ್ರಮಥನವನ್ನು ಮಾಡಿದರು. ಆಗ ಮಥನಮಾಡುವುದಕ್ಕೆ ಮಂದರಪರ್ವತವನ್ನು ಕಡೆಗೋಲನ್ನಾಗಿ ಮಾಡಿಕೊಂಡರು. ವಾಸುಕಿಯನ್ನು ಹಗ್ಗವನ್ನಾಗಿ ಮಾಡಿಕೊಂಡರು. ಆಗ ಚೆನ್ನಾಗಿ ಮಥಿಸಿದಾಗ ಅಮೃತ, ಚಂದ್ರಿಕಾಸಹಿತ ಚಂದ್ರಗಳು ಬಂದವು. ನಂತರ ದೇವತೆಗಳು ದೈತ್ಯರ ಮೇಲೆ ಆಕ್ರಮಣ ಮಾಡಿ ತಾಂಡವಗೈದರು. ಅದರಂತೆ ವ್ಯಾಸರಾಜರು ವೇದಾಂತವೆಂಬ ಸಮುದ್ರವನ್ನು ಮಥನ ಮಾಡಿದರು. ಇಲ್ಲಿ ಮಧ್ವಾಚಾರ್ಯರೆಂಬ ಮಂದರಪರ್ವತವನ್ನು ಕಡೆಗೋಲನ್ನಾಗಿ ಸ್ವೀಕರಿಸಿದ್ದಾರೆ. ಹಗ್ಗವನ್ನಾಗಿ ಬ್ರಹ್ಮಸೂತ್ರಗಳನ್ನು ಸ್ವೀಕರಿಸಿದ್ದಾರೆ. ಮಥನ ಮಾಡಿದ ದೇವತೆಗಳು ದೈತ್ಯರು ಎಂದರೆ ಸತ್ತರ್ಕಗಳು ದುಸ್ತರ್ಕಗಳು. ಉದಿಸಿದ ಅಮೃತಚಂದ್ರಿಕೆಗಳೆಂದರೆ ನ್ಯಾಯಾಮೃತ ಹಾಗೂ ತಾತ್ಪರ್ಯಚಂದ್ರಿಕಾ. ಅನಂತರ ನಡೆದ ವಾಗ್ಯುದ್ಧದಲ್ಲಿ ದುರ್ವಾದಿಗಳ ಮೇಲೆ ತಾಂಡವನೃತ್ಯವನ್ನು ಮಾಡಿದರು. ಅರ್ಥಾತ್ ತರ್ಕತಾಂಡವ ವಿವಕ್ಷಿತ. ಇಂತಹವರು ಪೂಜ್ಯಸ್ವರೂಪರಾದ ವ್ಯಾಸರಾಜರೆಂಬ ಶ್ರೇಷ್ಠ ಮುನಿಗಳು.

## ಮನಸ್ಸಿನ ಶುದ್ಧಿಗಾಗಿ ನ್ಯಾಯಸುಧಾ ಸೇವನೆ

ಅನುವ್ಯಾಖ್ಯಾಬ್ಧಿಯುಙ್ನ್ಯಾಯಸುಧಾಽಗಾಧಸುರಾಪಗಾಮ್ ।
ಗುರೂಣಾಂ ದಯಯಾ ಶುದ್ಧ್ಯೈ ಧಿಯಃ ಸೇವಿತುಮುತ್ಸಹೇ ॥

ಸಮುದ್ರವನ್ನು ವಿಶಾಲವಾದ ಗಂಗೆಯು ಸೇರುತ್ತಾಳೆ. ಹಾಗೆಯೇ ಇಲ್ಲಿ ನ್ಯಾಯಸುಧೆಯೆಂಬ ಗಂಗೆಯು ಅನುವ್ಯಾಖ್ಯಾನವೆಂಬ ಸಮುದ್ರವನ್ನು ಸೇರುತ್ತಿದೆ. ಇಂತಹ ಅನುವ್ಯಾಖ್ಯಾನವೆಂಬ ಸಮುದ್ರದ ಜೊತೆಗಿರುವ ನ್ಯಾಯಸುಧೆಯೆಂಬ ಗಂಗೆಯನ್ನು ಗುರುಗಳ ದಯೆಯಿಂದ ಮನಸ್ಸಿನ ಶುದ್ಧಿಗಾಗಿ ಸೇವೆ ಮಾಡಲು ಉತ್ಸಾಹದಿಂದ್ದೇನೆ.

**ವೇದಾದಿವಾಕ್ಯಗತಶೋಭನತ್ವ ಹಾಗೂ ಆಪ್ಯತಮಂ ಎಂಬಲ್ಲಿನ ತಮಬರ್ಥ**

(ವಾಕ್ಯಾರ್ಥಚಂದ್ರಿಕಾ) — 'ಸುವಾಕ್ಯೈಃ' ಇತ್ಯತ್ರ ವಾಕ್ಯಾನಾಂ ಶೋಭನತ್ವಮಾತ್ರರೂಪಸುಷ್ಠುತ್ವಸ್ಯ ಪ್ರಕೃತಾನುಪಯೋಗಾದಪೌರುಷೇಯತ್ವೇನ ತನ್ಮೂಲಕಾಪ್ತವಾಕ್ಯತ್ವೇನ ವಾ ಶೋಭನತ್ವಮುಚ್ಯತ ಇತ್ಯಭಿಪ್ರೇತ್ಯ 'ಆಪ್ಯತಮಮ್' ಇತ್ಯತ್ರ ತಮಬರ್ಥಂ ಚಾಹ — **ಅಶೇಷೇತಿ** ॥

"ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ" ಎಂಬಲ್ಲಿ ಸುವಾಕ್ಯ ಎಂಬ ಪದದಿಂದ ಒಳ್ಳೆಯ ವಾಕ್ಯಗಳು ಎಂದರ್ಥವನ್ನು ಸ್ವೀಕರಿಸಬೇಕು. ಆದರೆ ಇದು ಪ್ರಕೃತಕ್ಕೆ ಅನುಪಯುಕ್ತ. ಒಳ್ಳೆಯ ವಾಕ್ಯಗಳೆಂದರೆ ವಾಕ್ಯಗಳ ದೋಷವಾದ ಅಬೋಧಕತ್ವ, ವಿಪರೀತಬೋಧಕತ್ವ ಇತ್ಯಾದಿಗಳು ಇಲ್ಲದಿರುವವು ಎಂದರ್ಥ. ಇದಾದರೋ ವೇದಗಳು, ಬ್ರಹ್ಮಸೂತ್ರಾದಿಗಳೇ ಆಗಬೇಕೆಂಬ ನಿಯಮವಿಲ್ಲ. ಕಾವ್ಯಾದಿಗಳೂ ಆಗಬಹುದು. ಇವುಗಳನ್ನು ಪರಿಗ್ರಹಿಸಿದರೆ ಅವುಗಳಿಂದ ನಾರಾಯಣನೇನೂ ಪ್ರತಿಪಾದ್ಯನಾಗಿಲ್ಲ. ಆದ್ದರಿಂದ ಅನುಪಯುಕ್ತ. ಹಾಗಾಗಿ ಸುವಾಕ್ಯ ಎಂಬ ಪದದಿಂದ ವೇದಗಳನ್ನು ಬ್ರಹ್ಮಸೂತ್ರಾದಿಗಳನ್ನು ಸ್ವೀಕರಿಸಬೇಕು. ಅದಕ್ಕೆ ಅನುಗುಣವಾಗಿ ಅಪೌರುಷೇಯತ್ವೇನ ಸುಷ್ಠುತ್ವ-ವನ್ನು ಇಲ್ಲಿ ಸ್ವೀಕರಿಸಿದ್ದಾರೆ. ಒಟ್ಟಾಗಿ ಇಲ್ಲಿ ವಾಕ್ಯಗಳಲ್ಲಿರುವ ಸುಷ್ಠುತ್ವ ಎಂದರೆ ಶೋಭನತ್ವ ಮಾತ್ರ ಅಲ್ಲ ಹೊರತು ಅಪೌರುಷೇಯತ್ವವೇ ಆಗಿದೆ. ಹಾಗೂ ಅಪೌರುಷೇಯವೇದಮೂಲಕ ಆಪ್ತವಾಕ್ಯತ್ವರೂಪವಾದ ಸುಷ್ಠುತ್ವವನ್ನೂ ಸ್ವೀಕರಿಸಬೇಕು. ಇಷ್ಟೆಲ್ಲ ಅಭಿಪ್ರಾಯವನ್ನಿಟ್ಟುಕೊಂಡು ಆಪ್ಯತಮಂ ಎಂಬಲ್ಲಿ ತಮಪ್ ಪ್ರತ್ಯಯದ ಅರ್ಥವನ್ನೂ ಹೇಳಿದ್ದಾರೆ **'ಅಶೇಷಾಮ್ನಾಯ-ಸ್ಮೃತಿಹೃದಯದೀಪ್ತಾಯ'** ಎಂದು. ಹೀಗೆ ಈ ಪದವು ಸುವಾಕ್ಯೈಃ ಎಂಬುವುದನ್ನು ವಿವರಿಸುತ್ತಾ ಆಪ್ಯತಮಂ ಎಂಬಲ್ಲಿನ ತಮಪ್ ಪ್ರತ್ಯಯದ ಅರ್ಥವನ್ನು ವಿವರಿಸುತ್ತಿದೆ.

**ಇಷ್ಟತ್ವ ಹಾಗೂ ಅದರ ವಿಭಾಗ**

(ಲಘುರಸರಂಜನೀ)– ಇಷ್ಟತ್ವಪ್ರದರ್ಶನಾಯ ಮೂಲೇ — 'ಸದಾ ಪ್ರಿಯತಮಂ ಮಮ' ಇತಿ ॥ ಅನೇನ ಪರಮಪ್ರೇಮಯೋಗ್ಯತ್ವಮೇವ ಇಷ್ಟತ್ವಮಿತ್ಯುಕ್ತಂ ಭವತಿ । ಇಷ್ಟತ್ವಂ ದ್ವಿವಿಧಮ್ — ನಿರುಪಾಧಿಕಂ ಸೋಪಾಧಿಕಂ ಚೇತಿ । ಅಧಿಕಾರಿಣೋऽಪಿ ದ್ವಿವಿಧಾಃ । ಏಕಾಂತಿನಃ ತದನ್ಯೇ ಚೇತಿ । ತತ್ರಾದ್ಯಮ್ ಆದ್ಯಾನ್ ಪ್ರತಿ । ಯಥೋಕ್ತಮ್ —

.................. ............... .ಏಕಾಂತಾನಾಂ ನ ಕಸ್ಯಚಿತ್ ।
ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ ತದರ್ಥಕಮ್ - ಇತಿ ।

ದ್ವಿತೀಯಂ ದ್ವಿತೀಯಾನ್ ಪ್ರತಿ । ಯಥೋಕ್ತಮನುವ್ಯಾಖ್ಯಾನೇ —
'ಸಾಧನಮಿಷ್ಟಸ್ಯ ಭಗವಾನಿಷ್ಟದೇವತಾ' (ಅನುವ್ಯಾ.1/45) ಇತಿ ।

ಸೋಪಾಧಿಕಮಿಷ್ಟತ್ವಂ ಚೇಷ್ಟಸಾಧನತ್ವಾನತಿರಿಕ್ತಮ್ । ತತ್ರ ಯದಿಷ್ಟಂ ಪ್ರತಿ ಸಾಧನತ್ವಂ ಭಗವತಿ ಜ್ಞೇಯಮ್ । ತದಿಷ್ಟಂ ದ್ವಿವಿಧಮ್ — ಸಂಪದಾದಿಭಾವರೂಪಮ್ ಅನಿಷ್ಟನಿವೃತ್ತ್ಯಾದ್ಯಭಾವರೂಪಂ ಚೇತಿ । ತತ್ರಾದ್ಯಂ ಪ್ರತಿ ಸಾಧನತ್ವಂ ಭಗವತೋಽಸ್ತೀತ್ಯಾಹ । ಶ್ರಿಯಃ = ಸ್ವರೂಪಾನಂದಾವಿರ್ಭಾವಾದಿರೂಪಮೋಕ್ಷಾದಿಸಂಪದಃ, ಪತ್ಯೇ = ದಾತೃತಯಾ ಸ್ವಾಮಿನ ಇತಿ । ತಥಾ ದ್ವಿತೀಯಂ ಪ್ರತ್ಯಪಿ ಸಾಧನತ್ವಂ ತಸ್ಯಾಸ್ತೀತ್ಯಾಹ – ಹರತಿ ಬಂಧಾದ್ಯನಿಷ್ಟಮಿತಿ ಹರಿಃ ತಸ್ಮೈ ಇತಿ ।

ಸದಾ ಪ್ರಿಯತಮಂ ಮಮ — ನಾರಾಯಣನು ಇಷ್ಟದೇವತೆ. ಹಾಗಾಗಿ ನಮಸ್ಕರಿಸಲು ಯೋಗ್ಯ. ಅರ್ಥಾತ್ ವಂದ್ಯ. ಇದನ್ನು ಸಮರ್ಥಿಸುವ ವಿಶೇಷಣ "ಸದಾ ಪ್ರಿಯತಮಂ ಮಮ" ಎಂಬುದು. ಇದರಿಂದ ಇಷ್ಟ ಎಂದರೆ ಪರಮಪ್ರೇಮಯೋಗ್ಯ ಎಂದರ್ಥ. ಯಾವುದನ್ನು ಇಷ್ಟವಸ್ತು ಎಂದು ಕರೆಯಬೇಕೆಂದರೆ ಯಾವುದರಲ್ಲಿ ಪರಮಪ್ರೀತಿವಿಷಯತ್ವಯೋಗ್ಯತೆಯಿದೆಯೋ ಅದು. ಈ ಇಷ್ಟತ್ವವು ಎರಡು ರೀತಿಯಿದೆ. ನಿರುಪಾಧಿಕ, ಸೋಪಾಧಿಕ ಎಂದು. ನಿರುಪಾಧಿಕ ಎಂದರೆ ಯಾವುದೇ ಕಾರಣವಿಲ್ಲದೆ ಇಷ್ಟಪಡುವುದು. ಸ್ವಾಭಾವಿಕವಾಗಿ ಇಷ್ಟವಾದದ್ದು ಎಂದರ್ಥ. ಸೋಪಾಧಿಕ ಎಂದರೆ ಯಾವುದಾದರೂ ಕಾರಣದಿಂದ ಇಷ್ಟವಾಗುವುದು.

ಇನ್ನು ಅಧಿಕಾರಿಗಳು ಎರಡು ರೀತಿ. (1) ಏಕಾಂತಭಕ್ತರು (2) ಅವರಿಂದ ಬೇರೆಯವರು. ಈ ಅಧಿಕಾರಿಗಳಲ್ಲಿ ಮೊದಲನೆಯ ಏಕಾಂತಭಕ್ತರಿಗೆ ನಿರುಪಾಧಿಕ ಇಷ್ಟ ಆ ಭಗವಂತ. ಎರಡನೆಯ ಅಧಿಕಾರಿವರ್ಗದವರಿಗೆ ಸೋಪಾಧಿಕ ಇಷ್ಟ ಆ ಭಗವಂತ. ಏಕಾಂತಭಕ್ತರಿಗೆ ನಾರಾಯಣನು ನಿರುಪಾಧಿಕ ಇಷ್ಟ ಎಂಬುದನ್ನು "ಏಕಾಂತಭಕ್ತರಿಗೆ ಯಾವುದೇ ಫಲಾಪೇಕ್ಷೆಗಾಗಿಯೂ ನಾರಾಯಣದೇವನು ಇರುವುದಿಲ್ಲ. ಹೊರತಾಗಿ ಎಲ್ಲ ವಸ್ತುಗಳೂ ಅವರಿಗೆ ನಾರಾಯಣನಿಗೋಸ್ಕರವೇ ಉಪಯುಕ್ತವಾಗಿವೆ." ಈ ಅರ್ಥವಿರುವ ಶ್ಲೋಕದಿಂದ ತಿಳಿಸಿದ್ದಾರೆ. ಇನ್ನು ಸೋಪಾಧಿಕಇಷ್ಟತ್ವ ಎಂದರೆ ಇಷ್ಟಸಾಧನತ್ವಕ್ಕಿಂತ ಬೇರೆಯಲ್ಲದ ಇಷ್ಟತ್ವ ಎಂದರ್ಥ. ಭಗವಂತನಲ್ಲಿ ಯಾವುದಾದರೂ ಇಷ್ಟವನ್ನು ಕುರಿತು ಸಾಧನತ್ವವಿದೆಯೆಂದು ತಿಳಿಯಬೇಕು. ಆ ಭಗವಂತನಿಂದ ನಾವು ಪಡೆಯುವ ಇಷ್ಟವಾದ ವಸ್ತುವೆಂದರೆ (1) ಸಂಪತ್ತು ಮೊದಲಾದ ಭಾವವಸ್ತುಗಳು (2) ಅನಿಷ್ಟಗಳ ನಿವೃತ್ತಿಯೇ ಮುಂತಾದ ಅಭಾವವಸ್ತುಗಳು. ಇವುಗಳಲ್ಲಿ ಮೊದಲನೆಯದಾದ ಸಂಪದಾದಿಗಳನ್ನು ಕುರಿತು ಸಾಧನತ್ವವು ಭಗವಂತನಿಗೆ ಇದೆ ಎಂಬುದನ್ನು "ಶ್ರಿಯಃ ಪತ್ಯೇ" ಎಂಬ ಭಾಗದಿಂದ ತಿಳಿಸಿದ್ದಾರೆ. 'ಶ್ರಿಯಃ' ಎಂದರೆ ಸಂಪತ್ತು ಎಂದರ್ಥ. ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷ ಮೊದಲಾದ ಸಂಪತ್ತು ಎಂದು ತಾತ್ಪರ್ಯ. ಇಂತಹ ಸಂಪತ್ತಿಗೆ ಪತ್ಯೇ - ಸ್ವಾಮಿಯಾಗಿದ್ದಾನೆ. ಅರ್ಥಾತ್ ದಾತೃತಯಾ ಕೊಡುವ ಮೂಲಕ ಸ್ವಾಮಿ ಎಂದು. ಹಾಗೆಯೇ ಎರಡನೆಯ ರೀತಿಯ ಅನಿಷ್ಟ- ನಿವೃತ್ತಿರೂಪವಾದದ್ದನ್ನು ಕುರಿತು ಸಾಧನತ್ವವೂ ಭಗವಂತನಿಗೆ ಇದೆ ಎಂಬುದನ್ನು

ಹರಯೇ ಎಂಬ ಪದದಿಂದ ತಿಳಿಸಿದ್ದಾರೆ. ಹರತಿ - ಸಕಲ ಬಂಧಗಳೆಂಬ ಅನಿಷ್ಟಗಳನ್ನು ಪರಿಹರಿಸುವವನು. ಆದ್ದರಿಂದ ಹರಿ ಎನ್ನಿಸುವನು.

## ಏಕಾಂತಾನಾಂ ನ ಕಸ್ಯಚಿತ್ - ಗೀತಾಕಲ್ಪದ ವಾಕ್ಯಕ್ಕೆ ಪ್ರಮೇಯದೀಪಿಕಾ ವಿವರಣೆ

** ಆಹ ಚ -- "ಸರ್ವವೇದಾಸ್ತು ದೇವಾರ್ಥಾಃ ದೇವಾ ನಾರಾಯಣಾರ್ಥಕಾಃ ।
ನಾರಾಯಣಸ್ತು ಮೋಕ್ಷಾರ್ಥೋ ಮೋಕ್ಷೋ ನಾನ್ಯಾರ್ಥ ಇಷ್ಯತೇ ।
ಏವಂ ಮಧ್ಯಮಭಕ್ತಾನಾಮೇಕಾಂತಾನಾಂ ನ ಕಸ್ಯಚಿತ್ ।
ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಮ್"
– ಇತಿ ಗೀತಾಕಲ್ಪೇ (ಗೀತಾಭಾಷ್ಯ ಅಧ್ಯಾಯ 7 ಶ್ಲೋ. 29-30)

**ಪ್ರಮೇಯದೀಪಿಕಾ** – ಆಹ ಚ ಸ್ಪಷ್ಟಮೇತದನ್ಯತ್ರ । ದೇವಾರ್ಥಾ ದೇವಪ್ರತಿಪತ್ತ್ಯರ್ಥಾಃ । ಪ್ರತಿಪನ್ನಾ ದೇವಾ ನಾರಾಯಣಜ್ಞಾನಾರ್ಥಾಃ । ಮೋಕ್ಷಾರ್ಥೇ ಜ್ಞಾತವ್ಯಃ । ನಾನ್ಯಾರ್ಥಃ । ಪರಃ ಪುರುಷಾರ್ಥಃ । ಮಧ್ಯಮಭಕ್ತಾನಾಂ । ಚಿತ್ತವೃತ್ತಿಃ । ಏಕಾಂತಾನಾಂ ನಿಯತಾನಾಮುತ್ತಮಭಕ್ತಾನಾಂ ನ ಕಸ್ಯಚಿದರ್ಥೇ । ಸ ಏವ ಪರಮಪುರುಷಾರ್ಥಃ ।

ಎಲ್ಲ ವೇದಗಳು ದೇವತೆಗಳ ಜ್ಞಾನಕ್ಕಾಗಿ ಇವೆ. ದೇವತೆಗಳಾದರೋ ಇಂದ್ರಿಯಗಳನ್ನು ಪ್ರೇರಿಸುವ ಮೂಲಕ ಭಗವಂತನ ಜ್ಞಾನಕ್ಕಾಗಿ ಇದ್ದಾರೆ. ಭಗವಂತನ ಜ್ಞಾನವು ಮೋಕ್ಷಕ್ಕಾಗಿ. ಮೋಕ್ಷವಾದರೋ ಬೇರೆ ಯಾವುದಕ್ಕೂ ಅಲ್ಲ. ಅರ್ಥಾತ್ ಮೋಕ್ಷವೇ ಕೊನೆಯ ಪುರುಷಾರ್ಥ. ಆದರೆ ಈ ಅಂಶವು ಅಧಿಕಾರಿಭೇದೇನ ಬೇರೆಯಾಗಿದೆ. ಅಂದರೆ ಮೋಕ್ಷವೇ ಕೊನೆಯ ಪುರುಷಾರ್ಥವಾದದ್ದು ಮಧ್ಯಮಭಕ್ತರಿಗೆ ಮಾತ್ರ. ಏಕಾಂತಭಕ್ತರಿಗಾದರೋ ಭಗವಂತನೇ ಕೊನೆಯ ಪುರುಷಾರ್ಥ. ತದಿತರವೆಲ್ಲವೂ ಭಗವಂತನಿಗಾಗಿ ಇಷ್ಟೇ.

– ಗೀತೆಯ ಏಳನೆಯ ಅಧ್ಯಾಯವಲ್ಲಿ ಕೊನೆಗೆ ನಿಷ್ಕಾಮಭಕ್ತಿಯನ್ನು ಪ್ರಶಂಸೆ ಮಾಡುತ್ತ ಸಕಾಮಭಕ್ತಿಯನ್ನು ತ್ಯಾಗಮಾಡಬೇಕು ಎಂದಿದ್ದಾರೆ. ಈ ಅಂಶವು –

'ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।
ತೇ ಬ್ರಹ್ಮ ತದ್ವಿದುಃ ಕೃತ್ಸ್ನಂ ಅಧ್ಯಾತ್ಮಂ ಕರ್ಮಚಾಖಿಲಮ್ ॥
ಎಂಬ ಸಂದರ್ಭದಲ್ಲಿ ಉಲ್ಲೇಖಿಸಲಾಗಿದೆ.

## ಜರಾಮರಣಮೋಕ್ಷಾಯ – ಭಾವರತ್ನಕೋಶ

** 'ಜರಾಮರಣಮೋಕ್ಷಾಯ' ಏತತ್ ಲಕ್ಷಣಯಾ 'ಸ್ವರ್ಗಾದಿಕಾಮನಿವೃತ್ತಯೇ' ಇತ್ಯರ್ಥಕಮ್ । 'ಮೋಕ್ಷಾಸಕ್ತಿರನ್ಯಾಸಕ್ತಿತೋಽಪಿ ಪ್ರಶಸ್ತಾ' ಇತ್ಯೇತದರ್ಥಪರಂ ವಾ. ನ ಪುನಃ ಮೋಕ್ಷಸ್ಯ

ಸರ್ವಾನ್ ಪ್ರತಿ ಪುರುಷಾರ್ಥತ್ವಸ್ಫೋರಣೇನ ಭಗವದ್ಭಜನಂ ಜರಾಮರಣಮೋಕ್ಷೋದ್ದೇಶೇನ ಕಾರ್ಯಮಿತ್ಯೇವಂ ವಿಧಿರೂಪಮ್ । ಏಕಾಂತಾನಾಂ ಮುಮುಕ್ಷಾಽಭಾವಸ್ಯ 'ನಾತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಮ್' ಇತ್ಯಾದಿನಾ ಆವೇದನೇನ ತತ್ಕಾಮಿನಃ ತಾನ್ ಪ್ರತಿ ತದ್ವಿಧಾನಾಯೋಗಾತ್ । "ಕೃತ್ಸ್ನಮಧ್ಯಾತ್ಮಂ" — ಆತ್ಮಾನಂ = 'ಜೀವಮಧಿಕೃತ್ಯ ತದುಪಕಾರಿತ್ವೇನ ವರ್ತಮಾನಂ ವಸ್ತು' ಇತ್ಯಾದಿರೂಪೇಣಾಧ್ಯಾತ್ಮಾದಿಶಬ್ದಾರ್ಥ ಉತ್ತರಾಧ್ಯಾಯೇ ವ್ಯಕ್ತೀಭವಿಷ್ಯತಿ । ಅಖಿಲಂ ಕರ್ಮ ಚ ವಿದುಃ । (ಭಾವರತ್ನಕೋಶಃ)

— ಯಾವ ಜನರು ತಮ್ಮ ಮುಪ್ಪು ಮರಣ ಮೊದಲಾದವುಗಳಿಂದ ಬಿಡುಗಡೆ ಹೊಂದಲು ಬಯಸಿ ನನ್ನನ್ನು ಆಶ್ರಯಿಸಿಕೊಂಡು ಪ್ರಯತ್ನ ಪಡುತ್ತಾರೋ ಅವರು ಆ ಪರಬ್ರಹ್ಮನನ್ನು ಎಲ್ಲ ಅಧ್ಯಾತ್ಮವನ್ನು ಎಲ್ಲ ಕರ್ಮಗಳನ್ನು ತಿಳಿದುಕೊಂಡವರಾಗುತ್ತಾರೆ. ಅಧ್ಯಾತ್ಮ ಎಂದರೆ ಜೀವನನ್ನು ಉದ್ದೇಶಿಸಿಕೊಂಡು ಅವನಿಗೆ ಉಪಕಾರಿಯಾಗಿರುವ ವಸ್ತುವು ಎಂದರ್ಥ. ಇಲ್ಲಿ ಜರಾಮರಣಮೋಕ್ಷಕ್ಕಾಗಿ ನನ್ನನ್ನು ಆಶ್ರಯಿಸಿ ಪ್ರಯತ್ನಪಡುತ್ತಾರೆ ಎನ್ನುವುದರ ಜೊತೆಗೆ ಸ್ವರ್ಗಾದಿ ಕಾಮನಾನಿವೃತ್ತಿಗಾಗಿ ಎಂಬುದನ್ನೂ ತಿಳಿಯಬೇಕು. ಏಕೆಂದರೆ ಬೇರೆ ಆಸಕ್ತಿಗಳಿಗಿಂತ ಮೋಕ್ಷದಲ್ಲಿ ಆಸಕ್ತಿಯು ಬಹಳ ಶ್ರೇಷ್ಠ. ಅರ್ಥಾತ್ ಸ್ವರ್ಗಾದಿಗಳಲ್ಲಿ ಆಸಕ್ತಿಯು ಪ್ರಶಸ್ತವಲ್ಲ. ಅಥವಾ ಮೋಕ್ಷವೇ ಶ್ರೇಷ್ಠ ಎಂದು ಅದನ್ನೇ ಪುರುಷಾರ್ಥವಾಗಿಟ್ಟುಕೊಂಡು ಭಗವದ್ಭಜನೆಯು ಜರಾಮರಣಮೋಕ್ಷೋದ್ದೇಶೇನ ಮಾಡಬೇಕು ಎಂದು ವಿಧಾನವನ್ನು ಮಾಡುತ್ತಿಲ್ಲ. ಒಟ್ಟಾಗಿ ಇದರ ಅಭಿಪ್ರಾಯ ನಿಷ್ಕಾಮಭಕ್ತಿಯಿಂದ ಮಾಡುವ ಭಗವದ್ಭಜನೆಗೆ ಜರಾಮರಣಮೋಕ್ಷವೇ ಫಲ ಎಂದು ವಿಧಿಸುತ್ತಿಲ್ಲ. ಹಾಗಾಗಿ ನಿಷ್ಕಾಮಭಕ್ತಿಯೆಂದರೆ ಕ್ಷುದ್ರವಾದ ಸ್ವರ್ಗಾದಿಕಾಮನೆಗಳಲ್ಲದೇ ಮೋಕ್ಷಕಾಮನೆಯನ್ನು ಮಾಡುವ ಭಕ್ತಿ ಎಂದು ಅರ್ಥೈಸಬಹುದು. ಆದರೆ ನಿಯಮವಿಲ್ಲ. ಏಕೆಂದರೆ ಮೋಕ್ಷಕಾಮನೆ ಮಾಡುವವನಿಗಿಂತ ಮೋಕ್ಷಕಾಮನೆ ಮಾಡದವನೇ ಅರ್ಥಾತ್ ಏಕಾಂತಭಕ್ತನೇ ಶ್ರೇಷ್ಠ ಎಂದು ನಾರದೀಯಪುರಾಣದಲ್ಲಿ ಮಾತಿದೆ. 'ಮುಮುಕ್ಷೋರಮುಮುಕ್ಷುಸ್ತು ವರೋ ಹಿ ಏಕಾಂತಭಕ್ತಿಭಾಕ್' ಎಂದು. ಇನ್ನು ಭಾಗವತದಲ್ಲಿ 'ಮೋಕ್ಷಕಾರಣವಾದ ಭಗವಂತನ ಅನುಗ್ರಹವನ್ನೂ ಬಯಸುವುದಿಲ್ಲ' ಎಂದು ನಿಷ್ಕಾಮಭಕ್ತನನ್ನು ಪ್ರಶಂಸೆ ಮಾಡಲಾಗಿದೆ.

## 'ನಾತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಂ' - ಭಾಗವತ

ನಾತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಂ
ಕಿಂತ್ವನ್ಯದರ್ಪಿತಭಯಂ ಭ್ರುವ ಉನ್ನಯೈಸ್ತೇ ।
ಯೇಽಙ್ಗ ತ್ವದಂಘ್ರಿಶರಣಾ ಭವತಃ ಕಥಾಯಾಃ
ಕೀರ್ತನ್ಯತೀರ್ಥಯಶಸಃ ಕುಶಲಾ ರಸಜ್ಞಾಃ ॥ (ಭಾಗ. 3-16-48)

ಭಗವಂತನ ಪವಿತ್ರವಾದ ಕೀರ್ತಿಯು ಎಲ್ಲರಿಂದಲೂ ಹೊಗಳಲು ಯೋಗ್ಯವಾದದ್ದು. ಅವನ ಕಥೆಯನ್ನು ಆಲಿಸುವವರು ಅರ್ಥಾತ್ ಅವನ ಪಾದಗಳಲ್ಲೇ ಶರಣಾಗತಿಯನ್ನು ಹೊಂದಿದವರು ಮೋಕ್ಷಕ್ಕೋಸ್ಕರ ಅವನ ಪ್ರಸಾದವನ್ನೂ ಅಪೇಕ್ಷಿಸುವುದಿಲ್ಲ. ಇನ್ನು ಅವನ ಹುಬ್ಬಿನ ಚಲನೆಯಿಂದಲೇ ನಾಶವಾಗುವ ಸ್ವರ್ಗಾದಿ ಕ್ಷುದ್ರಸುಖದ ಬಗ್ಗೆ ಹೇಳಬೇಕೇನು? - ಎಂದು ಈ ಶ್ಲೋಕದ ಅರ್ಥ. ಈ ಸಂದರ್ಭದ ಗೀತಾಭಾಷ್ಯದಲ್ಲಿ ಎಲ್ಲ ವೇದಗಳೂ ದೇವತೆಗಳ ಜ್ಞಾನಕ್ಕೋಸ್ಕರ ಇವೆ. ದೇವತೆಗಳಾದರೋ ಇಂದ್ರಿಯ ಪ್ರೇರಕರಾದ ಕಾರಣ ಭಗವಂತನ ಜ್ಞಾನಕ್ಕಾಗಿ ಇದ್ದಾರೆ. ನಾರಾಯಣನಾದರೋ ಮೋಕ್ಷಕ್ಕೋಸ್ಕರ ಅಪೇಕ್ಷಿತ. ಮೋಕ್ಷವಾದರೂ ಯಾವುದೇ ಬೇರೆಯ ಫಲಕ್ಕೋಸ್ಕರ ಇಷ್ಟವಾಗಿಲ್ಲ. ಈ ಗತಿಯನ್ನು ಮಧ್ಯಮ ಭಕ್ತರಿಗೆ ಹೇಳಿ, ಏಕಾಂತಭಕ್ತರಿಗಾದರೋ ಅಂದರೆ ಉತ್ತಮಭಕ್ತರಿಗಾದರೋ ಎಲ್ಲವೂ ಭಗವಂತನಿಗಾಗಿ ಹೊರತು ಮತ್ತೊಂದಕ್ಕಾಗಿ ಭಗವಂತನಲ್ಲ ಎಂದು ತಿಳಿಸಿದ್ದಾರೆ.

## ಸುಮನಸರಿಗೆ ಮುಖ್ಯೇಷ್ಟ ಭಗವಂತ

** ........साधनमिष्टस्य भगवानिष्टदेवता ।
मुख्येष्टं वा सुमनसां प्रेयस्तदिति च श्रुतिः ॥४१॥ (अनुव्या.)

सुधा – मीमांसाविषयस्य ब्रह्मणो वक्तव्यत्वे किमुच्यते भगवानिति । तत्रोक्तम् - इष्टदेवतेति ॥ मीमांसाविषयत्वेनेष्टदेवता ब्रह्मैव भगवानित्यर्थः । इष्टसाधनमपीष्टं भवति, अतो मुख्येत्युक्तम् । निरुपाधिकमित्यर्थः । नन्विष्टस्य सुखादेः साधनं भवतु भगवान्, निरुपाधिकेष्टस्तु कथमित्यत आह – सुमनसामिति ॥ पुरुषार्थान्तराभिलाषाऽकलुषितमनसामित्यर्थः । यथाप्रकृतमिष्टसाधनमिष्टं चानूद्य भगवानिति विधानात्र लिङ्गव्यत्यासदोषः । यथा यदिदं दृष्टं स स्थाणुरिति । एवं यदिष्टमिष्टसाधनं वा वाक्यपर्यवसानकारणं स भगवानिति । मुख्येष्टत्वं भगवतोऽस्तीत्यत्र सम्भावनैवोक्ता, कुतः प्रमाणात् तन्निश्चय इत्यत आह – प्रेय इति ॥ न केवलं सम्भावना, श्रुतिश्चात्रास्तीति चशब्दः । प्रेयोऽतिशयेन प्रियम् । अतिशयश्च निरुपाधिकत्वम् ।

"तदेतत् प्रेयः पुत्रात् प्रेयो वित्तात् प्रेयोऽन्यस्माच्च सर्वस्मादन्तरतरं यदयमात्मा" इत्युदाहृतश्रुतावात्मनो जीवस्य प्रियतमत्वमुच्यत इति प्रतिभाति । ततो विस्पष्टैः पुराणादिवाक्यैर्भगवतो मुख्येष्टत्वं प्रतिपत्तव्यमित्याह प्राणेति । प्राणः शारीरो वायुः । बुद्धिर्मनश्चान्तःकरणवृत्ती । खानीतरेन्द्रियाणि ।

ಭಗವಂತನು ಸುಮನಸರಿಗೆ ನಿರುಪಾಧಿಕ ಇಷ್ಟನಾಗಿದ್ದಾನೆ. ಅಂದರೆ ಇನ್ನೊಂದು ಫಲದ ಅಪೇಕ್ಷೆಗಾಗಿ ಭಗವಂತನು ಇಷ್ಟನಲ್ಲ. ಇಲ್ಲಿ ಸುಮನಸರು ಎಂದರೆ ಬೇರೆ ಪುರುಷಾರ್ಥಗಳ ಅಭಿಲಾಷೆ-

ಯಿಂದ ಕಲುಷಿತಗೊಳ್ಳದ ಮನಸ್ಸುಳ್ಳವರು ಎಂದರ್ಥ. ಇನ್ನು ಮುಖ್ಯವಾಗಿ ಭಗವಂತನು ಇಷ್ಟ ಎಂಬ ಅಂಶವು ಪ್ರಮಾಣಸಿದ್ಧವೂ ಆಗಿದೆ.

ಶ್ರುತಿಯ ಪೂರ್ಣಪಾಠ ಹೀಗಿದೆ – "ತದೇತತ್ಪ್ರೇಯಃ ಪುತ್ರಾತ್ಪ್ರೇಯೋ ವಿತ್ತಾತ್ಪ್ರೇಯೋಽನ್ಯಸ್ಮಾತ್ಸರ್ವಸ್ಮಾದಂತರತರಂ ಯದಯಮಾತ್ಮಾ ಸ ಯೋಽನ್ಯಮಾತ್ಮನಃ ಪ್ರಿಯಂ ಬ್ರುವಾಣಂ ಬ್ರೂಯಾತ್ಪ್ರಿಯಂ ರೋತ್ಸ್ಯತೀತೀಶ್ವರೋ ಹ ತಥೈವ ಸ್ಯಾದಾತ್ಮಾನಮೇವ ಪ್ರಿಯಮುಪಾಸೀತ ಸ ಯ ಆತ್ಮಾನಮೇವ ಪ್ರಿಯಮುಪಾಸ್ತೇ ನ ಹಾಸ್ಯ ಪ್ರಿಯಂ ಪ್ರಮಾಯುಕಂ ಭವತಿ ॥" (ಬೃ.ಉ.)

ಆತ್ಮಬುದ್ಧಿಮನಃಖಾತ್ಮಾ ದೇಹಾಪತ್ಯಧನಾದಯಃ ।
ಯತ್ಸಂಪರ್ಕಾತ್ ಪ್ರಿಯಾ ಆಸನ್ ತತಃ ಕೋ ನ್ವಪರಃ ಪ್ರಿಯಃ ॥ (ಅನು.ವ್ಯಾ.)

ಇತ್ಯಾದಿ ಸ್ಮೃತಿವಾಕ್ಯಗಳಿಂದಲೂ ಭಗವಂತನೇ ಅತ್ಯಂತಪ್ರಿಯತಮನು ಜೀವನಲ್ಲವೆಂದು ಸಿದ್ಧ. ಇಲ್ಲಿರುವ ಪ್ರಾಣಶಬ್ದಕ್ಕೆ ಶರೀರಸಂಚಾರಿಯಾದ ವಾಯು ಎಂದರ್ಥ. ಬುದ್ಧಿಯು ಮನಸ್ಸು ಅಂತಃಕರಣವೃತ್ತಿಗಳು. ಖಾನಿ ಎಂದರೆ ಇಂದ್ರಿಯಗಳು.

## ತದೇತತ್ಪ್ರೇಯಃ - ಮಂತ್ರವಿವರ ಬೃಹದಾರಣ್ಯಕಖಂಡಾರ್ಥ

– 'आत्मोपासनं प्रेमशब्दितभक्तियुक्तं चेत्, पुमर्थहेतुः' इति उक्तं तस्मिन प्रेमोत्पत्तयं तस्य दारापत्यादितोऽपि सुखसाधनत्वेनातिप्रेमास्पदताम् आह– तदेतदिति ॥ यदयमात्मा योऽयमात्मा आप्तगुणः । अन्तरतरं सर्वान्तर्विद्यमानम् । तदेतदात्मनो रूपं पुत्रादितः सर्वस्मात् प्रेयः निरुपाधिकप्रेमास्पदमुत्तमानाम् । अन्येषां तु सुखसाधनत्वादिति भावः । आत्मनः प्रियतमत्वं समर्थयते – स य इति ॥ स यः यः कोऽपि विष्णुभक्तः । आत्मनो हरेरन्यं प्रियं ब्रुवाणं दुर्जनं प्रति तव प्रियं सुखं रोत्स्यति नाशयति भगवान् इति ब्रूयात् । एवं ब्रुवन् ईश्वरो ह । तत्सुखरोधने समर्थो ह निश्चयस्तस्मात्तथैव स्यात् । निरुद्धसुखवानेव स भवतीत्यर्थः । यदर्थं हरेः प्रियत्वमुक्तं तदाह – आत्मानमेवेति ॥ भगवन्तमेव प्रियम् उत्तमानां निरुपाधीष्टम् । अन्येषामिष्टहेतुत्वेन प्रियं प्रीतिविषयोऽयम् इत्युपासीतेत्यर्थः । दारापत्यादेः तत्सम्पर्कप्रयुक्तप्रियत्वकत्वेन स एव मुख्यप्रिय इत्यात्मानमेव प्रियमित्येवकारः । स प्रसिद्धो योऽधिकारीत्यर्थः । प्रमायुक्तं विनाशयुक्तं न भवतीत्यर्थः ॥१-४-२ ॥

ಇದರ ಸಾರ – ಭಗವಂತನು ಉತ್ತಮಭಕ್ತರಿಗೆ ನಿರುಪಾಧಿಕ ಪ್ರೀತಿಪಾತ್ರನಾಗಿದ್ದಾನೆ. ಬೇರೆಯವರಿಗೆ ಭಗವಂತನು ಮೋಕ್ಷಾದಿ ಸುಖಗಳಿಗೋಸ್ಕರ ಪ್ರಿಯನಾಗಿದ್ದಾನೆ. ಇತರರು ಹಾಗೆ ಆಗಬಾರದು. ಏಕೆಂದರೆ ಜೀವನಿಗೆ ಇಷ್ಟವಾದ ಹೆಂಡತಿ ಮಕ್ಕಳು ಇವರೆಲ್ಲರೂ ಪ್ರಿಯರಾಗುವುದಕ್ಕೆ ಕಾರಣ ಆ ಭಗವಂತನೇ ಆಗಿದ್ದಾನೆ.

'ತದೇತತ್ಪ್ರೇಯಃ' ಎಂಬ ಶ್ರುತಿವಾಕ್ಯದಲ್ಲಿ ಅಂತರತರ ಎಂಬ ಪದಕ್ಕೆ ಎಲ್ಲರ ಒಳಗಡೆ ಇರುವವನು ಎಂದರ್ಥ. ತದೇತತ್ ಎಂದರೆ ಆತ್ಮನ ಸ್ವರೂಪ ಎಂದರ್ಥ. ಅರ್ಥಾತ್ ಭಗವಂತನ ಸ್ವರೂಪ. ಇಲ್ಲಿ ಆತ್ಮಶಬ್ದವು ಭಗವದ್ವಾಚಿಯಾಗಿದೆ. ಇದು ಪುತ್ರಾದಿ ಎಲ್ಲದಕ್ಕಿಂತಲೂ ಪ್ರೇಯಃ ಎಂದರೆ ಉತ್ತಮಭಕ್ತರಿಗೆ ನಿರುಪಾಧಿಕಪ್ರೇಮಾಸ್ಪದವಾಗಿದೆ ಎಂದು. ಬೇರೆಯವರಿಗೆ ಸುಖಸಾಧನವಾಗಿದೆ ಎಂದು ಅಭಿಪ್ರಾಯ.

ಆತ್ಮನಾದ ಹರಿಗಿಂತಲೂ ಬೇರೆಯವರನ್ನು ಪ್ರಿಯ ಎಂದು ಬಯಸಿದ ದುರ್ಜನರಿಗೆ ನಿನಗೆ ಇಷ್ಟ-ವಾದ ಸುಖವನ್ನು ಭಗವಂತನು ನಾಶಮಾಡುತ್ತಾನೆ ಎಂದು ಹೇಳಿದರೆ ಭಗವಂತನು ನಾಶ ಮಾಡೇ ಮಾಡುತ್ತಾನೆ ಎಂಬುದು ನಿಶ್ಚಯ. ಭಗವಂತನು ಆ ದುರ್ಜನರ ಸುಖವನ್ನು ನಾಶಮಾಡಲು ಸಮರ್ಥನೇ ಆಗಿರುತ್ತಾನೆ.

## ನಾರಾಯಣನಲ್ಲಿ ಇತರದೇವತಾಪರಿತ್ಯಾಗೇನ ವಂದ್ಯತ್ವಸಮರ್ಥನೆ

(ಲಘುರಸರಂಜನೀ)— ಅತ್ರ ವಂದ್ಯತ್ವಪ್ರಯೋಜಕೇಷ್ವಾದ್ಯಪ್ರಯೋಜಕೋಪಪಾದಕಾನಾಂ ನಿಖಿಲ-ಪೂರ್ಣಗುಣತ್ವಾದೀನಾಂ ತಥಾ ದ್ವಿತೀಯತೃತೀಯಪ್ರಯೋಜಕಯೋಶ್ಚ ಸರ್ವೋತ್ತಮತ್ವೋ-ಪಪಾದಕತಯಾ ಸರ್ವೋತ್ತಮತ್ವಾತ್ ಅಸ್ಯೈವ ಇತರಪ್ರಹಾಣೇನ ವಂದ್ಯತ್ವಮಿತಿ ಸಮರ್ಥಿತಂ ಭವತೀತಿ ಜ್ಞೇಯಮ್ ।

ಇಲ್ಲಿ ನಾರಾಯಣನಲ್ಲಿ ವಂದ್ಯತ್ವ ಬರುವುದಕ್ಕೆ ಪ್ರಯೋಜಕಗಳಾದ ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವ ಧರ್ಮಗಳಲ್ಲಿ ಮೊದಲನೆಯದಕ್ಕೆ ಪ್ರಯೋಜಕವಾದ "ನಿಖಿಲಗುಣಪೂರ್ಣತ್ವ, ನಿರ್ದೋಷತ್ವ, ಅಸ್ಪೋದ್ಯವಾದಿದತ್ವಗಳು" ಇವುಗಳಿಂದ ಹಾಗೂ ಅಧಿಕೃತತ್ವ, ಇಷ್ಟತ್ವ-ಧರ್ಮಗಳಿಗೆ ಪ್ರಯೋಜಕವಾದ ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವ "ಅಶೇಷ-ವಿಶೇಷತೋಽಪಿ ವಂದ್ಯಂ" ಮುಂತಾದವುಗಳಿಂದ, ಬೇರೆ ದೇವತೆಗಳನ್ನು ಪರಿತ್ಯಾಗ ಮಾಡಿ ನಾರಾಯಣನೇ ವಂದ್ಯ ಎಂಬುದನ್ನು ಸಮರ್ಥನೆ ಮಾಡಿದಂತಾಯಿತು.

## ಜಿಜ್ಞಾಸ್ಯ ಬ್ರಹ್ಮ ಹಾಗೂ ನಾರಾಯಣನಲ್ಲಿ ಬಿಂಬಲಕ್ಷಣಸಮನ್ವಯ

(ಲಘುರಸರಂಜನೀ)— 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯತ್ರ ಜಿಜ್ಞಾಸ್ಯಂ ಬ್ರಹ್ಮ ತಾವದ್ ಬಿಂಬರೂಪಮ್ ಇತ್ಯವಶ್ಯಮಂಗೀಕರಣೀಯಮ್, ತಲ್ಲಕ್ಷಣೋಪೇತತ್ವಾತ್ । ತತ ಏವ ನಾರಾ-ಯಣೋಽಪಿ ತಥಾ । ಮೋಕ್ಷಃ ತಾವದಪರೋಕ್ಷಜ್ಞಾನೇನೈವ ಭವತೀತಿ 'ವಿದ್ಯೈವ ತು ನಿರ್ಧಾರಣಾತ್' ಇತ್ಯಧಿಕರಣೇ 'ದರ್ಶನಾಚ್ಚ' (3-3-49) ಇತಿ ಸೂತ್ರಾದಿಸಿದ್ಧಮ್ । ಅಪರೋಕ್ಷ-ಜ್ಞಾನಂ ದ್ವಿವಿಧಮ್ । ಬಿಂಬಾಪರೋಕ್ಷಮಬಿಂಬಾಪರೋಕ್ಷಂ ಚೇತಿ । ತತ್ರಾದ್ಯಂ ಸಾಕ್ಷಾದೇವ

ಮೋಕ್ಷಸಾಧನಮ್ । ದ್ವಿತೀಯಮಾದ್ಯದ್ವಾರಾ । ತಥಾಚ ಸಾಕ್ಷಾನ್ಮೋಕ್ಷಸಾಧನಜ್ಞಾನವಿಷಯತ್ವ-ರೂಪಂ ಬಿಂಬಲಕ್ಷಣಮ್ 'ಅಥಾತೋ ಬ್ರಹ್ಮಜಿಜ್ಞಾಸಾ' ಇತಿ ಸೂತ್ರೇ ಸ್ವಜನ್ಯಜ್ಞಾನದ್ವಾರಾ ಮೋಕ್ಷ-ಸಾಧನತ್ವಾತ್ ಬ್ರಹ್ಮಜಿಜ್ಞಾಸಾ ಕರ್ತವ್ಯಾ ಇತಿ ಜಿಜ್ಞಾಸ್ಯಬ್ರಹ್ಮಣ ಉಚ್ಯತೇ । ಯಥೋಕ್ತಮನು-ವ್ಯಾಖ್ಯಾನೇ ಜಿಜ್ಞಾಸಾಧಿಕರಣೇ –

'ಜಿಜ್ಞಾಸೋತ್ಥಜ್ಞಾನಜಾತ್ ತತ್ಪ್ರಸಾದಾದೇವ ಮುಚ್ಯತೇ' ಇತಿ ।

ತಥೋಪಾಸನಾಪಾದೇ ಚ –

'ಯತೋ ಮೋಕ್ಷಾದಿದಾತಾಸಾವತೋ ಜಿಜ್ಞಾಸ್ಯ ಏವ ವಃ ।'

'ಯೇನೈವ ಬಂಧಮೋಕ್ಷಃ ಸ್ಯಾತ್ ಸ ಚ ಜಿಜ್ಞಾಸಯಾ ಗತಃ ॥' – ಇತಿ ।

ಅತ ಏವ ತತ್ವಪ್ರಕಾಶಿಕಾಯಾಂ ಸೌತ್ರಂ ಬ್ರಹ್ಮೈವ ವಿಶೇಷ್ಯತಯಾ ನಿರ್ದಿಶ್ಯ 'ಧ್ಯಾನಜಜ್ಞಾನ-ಯೋಗಾತ್ ಗಮ್ಯಮ್' ಇತ್ಯುಕ್ತಮ್ ।

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಮೊದಲನೆಯ ಸೂತ್ರದಲ್ಲಿ ಅಧಿಕಾರಿಯ ಜಿಜ್ಞಾಸೆಗೆ ವಿಷಯನಾದವನು ಬ್ರಹ್ಮ. ಈ ಬ್ರಹ್ಮನು ಬಿಂಬರೂಪಿಯಾದ ಭಗವಂತನೆಂದು ಅವಶ್ಯ ಒಪ್ಪಲೇ-ಬೇಕು. ಏಕೆಂದರೆ ಆ ಬ್ರಹ್ಮನಲ್ಲಿ ಬಿಂಬರೂಪಿಯ ಲಕ್ಷಣಗಳಿವೆ. ಈ ಕಾರಣದಿಂದಲೇ ಬ್ರಹ್ಮಶಬ್ದ ಸಮಾನಾರ್ಥಕವಾದ ನಾರಾಯಣಶಬ್ದದಿಂದ ಪ್ರತಿಪಾದ್ಯನಾದ ನಾರಾಯಣನೂ ಬಿಂಬರೂಪಿ ಭಗವಂತನೇ ಎಂದು ತಿಳಿಯಬೇಕು. ಅದು ಹೀಗೆ – ಮೋಕ್ಷವಾದರೋ ಅಪರೋಕ್ಷಜ್ಞಾನದಿಂದಲೇ ಉಂಟಾಗುವುದು ಎಂಮು 'ವಿದ್ಯೈವ ತು ನಿರ್ಧಾರಣಾತ್' (3-3-48) ಎಂಬ ಅಧಿಕರಣದಲ್ಲಿ 'ದರ್ಶನಾಚ್ಚ' ಮುಂತಾದ ಸೂತ್ರಗಳಿಂದ ಸಿದ್ಧವಾಗಿದೆ. ಅಪರೋಕ್ಷಜ್ಞಾನವು ಎರಡು ರೀತಿ. (1) ಬಿಂಬರೂಪೀ ಭಗವಂತನ ಅಪರೋಕ್ಷಜ್ಞಾನ. (2) ಬಿಂಬನಲ್ಲದ ಭಗವಂತನ ಅಪರೋಕ್ಷ-ಜ್ಞಾನ ಎಂದು. ಇವೆರಡರಲ್ಲಿ ಮೊದಲನೆಯದ್ದು ಸಾಕ್ಷಾತ್ತಾಗಿ ಮೋಕ್ಷಕ್ಕೆ ಸಾಧನವಾಗಿದೆ. ಎರಡ-ನೆಯದ್ದು ಬಿಂಬಾಪರೋಕ್ಷವನ್ನು ತಂದುಕೊಡುವ ಮೂಲಕ ಮೋಕ್ಷಕ್ಕೆ ಸಾಧನವಾಗಿದೆ. ಹಾಗಾಗಿ ಬಿಂಬ ಎಂದರೇನು? ಎನ್ನುವ ಪ್ರಶ್ನೆಗೆ ಇದು ಉತ್ತರ. 'ಸಾಕ್ಷಾತ್ ಮೋಕ್ಷಸಾಧನಜ್ಞಾನ-ವಿಷಯತ್ವಂ ಬಿಂಬತ್ವಮ್' ಎಂದು. ಅಂದರೆ ಯಾವುದು ಸಾಕ್ಷಾತ್ತಾಗಿ ಇನ್ನೊಂದರ ಅಪೇಕ್ಷೆಯಿಲ್ಲದೆ ಸ್ವತಂತ್ರವಾಗಿ ಮೋಕ್ಷಕ್ಕೆ ಸಾಧನವಾದ ಜ್ಞಾನಕ್ಕೆ ವಿಷಯವಾಗಿದೆಯೋ ಅದೇ ಬಿಂಬ. ಇಲ್ಲಿ ಮೋಕ್ಷಸಾಧನಜ್ಞಾನವೆಂದರೆ ಬಿಂಬಜ್ಞಾನ ಎಂದು ತಿಳಿಯಬೇಕು.

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ ಬ್ರಹ್ಮನ ಜಿಜ್ಞಾಸೆಯಿಂದ ಉಂಟಾದ ಜ್ಞಾನದ ಮುಖಾಂತರ ಮೋಕ್ಷವೆಂಬ ಪ್ರಯೋಜನಕ್ಕೆ ಸಾಧನವಾದದ್ದು ಬ್ರಹ್ಮಜಿಜ್ಞಾಸಾ ಎಂದು ಹೇಳಿ-

ದ್ದಾರೆ. ಇಂತಹ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು ಎಂದು ಜಿಜ್ಞಾಸ್ಯ ಬ್ರಹ್ಮನ ಬಗ್ಗೆ ಹೇಳಿದ್ದಾರೆ. ಇದನ್ನು ಜಿಜ್ಞಾಸಾಧಿಕರಣದ ಅನುವ್ಯಾಖ್ಯಾನದಲ್ಲಿ ಹೀಗೆಂದಿದ್ದಾರೆ. – ಜಿಜ್ಞಾಸೆಯಿಂದ ಜ್ಞಾನ ಜ್ಞಾನದಿಂದ ಭಗವತ್ಪ್ರಸಾದ. ಅದರಿಂದ ಮೋಕ್ಷ ಎಂದು. ಹಾಗೆಯೇ ಉಪಾಸನಾಪಾದದಲ್ಲಿಯೂ 'ಯಾರಿಂದಲೇ ನಮಗೆ ಬಂಧದಿಂದ ಬಿಡುಗಡೆಯೋ ಅಂತಹವನು ಜಿಜ್ಞಾಸೆಗೆ ವಿಷಯನಾಗಿದ್ದಾನೆ. ಹೀಗೆ ಯಾವ ಕಾರಣದಿಂದ ಮೋಕ್ಷ, ಜ್ಞಾನಾದಿಗಳನ್ನು ನೀಡುವನೋ, ಆ ಕಾರಣದಿಂದ ನಮಗೆ ಆ ನಾರಾಯಣನು ಜಿಜ್ಞಾಸ್ಯನಾಗಿದ್ದಾನೆ ಎಂದು. ಈ ರೀತಿ ಇರುವುದರಿಂದಲೇ ತತ್ತ್ವಪ್ರಕಾಶಿಕೆಯಲ್ಲಿಯೂ ಸೂತ್ರಪ್ರತಿಪಾದ್ಯನಾದ ಬ್ರಹ್ಮನನ್ನೇ ವಿಶೇಷ್ಯವನ್ನಾಗಿ ನಿರ್ದೇಶಿಸಿ 'ಧ್ಯಾನಜಿಜ್ಞಾನಯೋಗಾತ್ ಗಮ್ಯಂ ಬ್ರಹ್ಮ' ಎಂದಿದ್ದಾರೆ.

## ವಿದ್ಯೈವ ತು ನಿರ್ಧಾರಣಾತ್ - ಸೂತ್ರಾರ್ಥ

** ವಿದ್ಯೈವ ತು ನಿರ್ಧಾರಣಾತ್

ವಿದ್ಯಾ । ಏವ । ತು । ನಿರ್ಧಾರಣಾತ್ – ಇತಿ ವಿಭಾಗಃ ।

(ಭಾ) 'ತಮೇವಂ ವಿದಿತ್ವಾಽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇ ಅಯನಾಯ' ಇತಿ ನಿರ್ಧಾರಣಾತ್ ವಿದ್ಯಯಾ ಏವ ಮೋಕ್ಷಃ ॥

'ಕರ್ಮಣ್ಯೇವ' ಇತ್ಯಾದಿಸ್ಮೃತೇರ್ನೋಪಾಸನಂ ಕಾರ್ಯಮಿತಿ ಯದುಕ್ತಮ್, ತನ್ನೇತ್ಯರ್ಥಃ । ಕಿಂತು? ವಿದ್ಯೈವ ಬ್ರಹ್ಮಜ್ಞಾನಮೇವ ಮೋಕ್ಷಸಾಧನಮ್ । ಕರ್ಮ ತು ನೈವ ಸಾಧನಮ್ । ಏತಮೇವಾರ್ಥಮಾಹ – ವಿದ್ಯೈವೇತಿ ॥ ಕುತಃ? ಇತಿ ಹೇತ್ವಾಕಾಂಕ್ಷಾಯಾಂ "ನಿರ್ಧಾರಣಾತ್" ಇತ್ಯಂಶಂ ವ್ಯಾಚಷ್ಟೇ – ತಮೇವಮಿತಿ ॥ ತಂ = ಪೂರ್ವೋಕ್ತಮಹಿಮಾವಿಶಿಷ್ಟಂ ಪುರುಷಪದ-ವಾಚ್ಯಂ ಪರಮಾತ್ಮಾನಂ, ಏವಂ – ಪುರುಷಸೂಕ್ತೋಕ್ತಂ ಸಹಸ್ರಶೀರ್ಷತ್ವಾದಿಪ್ರಕಾರೇಣ, ವಿದಿತ್ವಾ = ಜ್ಞಾತ್ವಾ, ಅಪರೋಕ್ಷೀಕೃತ್ಯ ಚ, ಮೃತ್ಯುಂ – ಸಂಸಾರಾಖ್ಯಂ, ಅತ್ಯೇತಿ = ಅತಿಕ್ರಾಂತೋ ಭವತಿ । ಅಯನಾಯ – ಮೋಕ್ಷಾಯ, ಅನ್ಯಃ – ಅತಿರಿಕ್ತಃ ಪಂಥಾ – ಮಾರ್ಗಃ, ಉಪಾಯ ಇತಿ ಯಾವತ್, ನ ವಿದ್ಯತೇ ಇತಿ ನಿರ್ಧಾರಣಾತ್ ।

ನನು ಕರ್ಮವಚನಸ್ಯ ಪ್ರಾಬಲ್ಯಮುಕ್ತಂ ಜ್ಞಾನಹೇತುತ್ವಪ್ರತಿಪಾದಕವಾಕ್ಯಾಪೇಕ್ಷಯಾ ಇತ್ಯತಃ ಪುನಃ ಸೂತ್ರಂ ಪ್ರಕಾರಾಂತರೇಣ ಯೋಜನೀಯಮ್ । ತದರ್ಥಸ್ತು – ಜ್ಞಾನಹೇತುತ್ವಪ್ರತಿಪಾದಿಕಾ 'ತಮೇವಂ' ಇತ್ಯಾದಿರೂಪಾ ವೇದವಿದ್ಯೈವ ಪ್ರಬಲಾ, ತು = ಕರ್ಮಪ್ರತಿಪಾದಕಸ್ಮೃತಿಸ್ತು ನೈವ ಬಲವತೀ । ಕುತಃ? ನಿರ್ಧಾರಣಾತ್ । ಸಾವಧಾರಣತ್ವೇಽಪಿ ಶ್ರುತೇರಪೌರುಷೇಯತ್ವೇನ ಜಾತ್ಯಾ ಪ್ರಾಬಲ್ಯನಿರ್ಧಾರಣಾದಿತಿ । ತಥಾ ಚ ನಿರ್ಣಯೋಪಪತ್ತಿರಿತಿ ಭಾವಃ ।

'ವಿದ್ಯೈವ ತು' ಎಂದರೆ ವಿದ್ಯೆಯೇ ಮೋಕ್ಷಸಾಧನ ಎಂದರ್ಥ. ವಿದ್ಯೆಯೆಂದರೆ ಬ್ರಹ್ಮಜ್ಞಾನ ಇಲ್ಲಿ ವಿವಕ್ಷಿತ. ಬ್ರಹ್ಮಜ್ಞಾನವೇ ಮೋಕ್ಷಸಾಧನ ಎಂಬ ಅಂಶವು ಹೇಗೆ ಸಿದ್ಧವಾಯಿತು ಎಂದರೆ ನಿರ್ಧಾರಣಾತ್ ಎಂದು ಉತ್ತರಿಸಿದ್ದಾರೆ. ಆ ಶ್ರುತಿಯು ಹೀಗಿದೆ. – ತಂ = ಸಹಸ್ರಶೀರ್ಷತ್ವ ಮೊದಲಾದ ಮಹಿಮೋಪೇತನಾದ ಪುರುಷಪದದಿಂದ ಹೇಳಲ್ಪಡುವ ಪರಮಾತ್ಮನನ್ನು, ಏವಂ = ಪುರುಷಸೂಕ್ತ ಹೇಳಿದ ಪ್ರಕಾರವಾಗಿ ವಿದಿತ್ವಾ = ತಿಳಿದು ಪ್ರತ್ಯಕ್ಷೀಕರಿಸಿಕೊಂಡು, ಮೃತ್ಯುಂ = ಸಂಸಾರವೆಂಬ ಮೃತ್ಯುವನ್ನು, ಅತ್ಯೇತಿ = ದಾಟಿದವನಾಗುತ್ತಾನೆ. ಅಯನಾಯ = ಮೋಕ್ಷಕ್ಕಾಗಿ, ಅನ್ಯಃ = ಇದಕ್ಕಿಂತ ಬೇರೆಯಾದ, ಪಂಥಾ = ಮಾರ್ಗವು ಅರ್ಥಾತ್ ಉಪಾಯವು, ನ ವಿದ್ಯತೇ = ಇರುವುದಿಲ್ಲ.

ಅಲ್ಲ! ಕರ್ಮದಿಂದ ಮೋಕ್ಷ ಎಂದು ತಿಳಿಸುವ ವಾಕ್ಯಗಳು ಪ್ರಬಲವಾಗಿದೆ ಎಂದು ಹೇಳಲ್ಪಟ್ಟಿದೆ. ಹಾಗಾಗಿ ಜ್ಞಾನವೇ ಮೋಕ್ಷಸಾಧನ ಎಂದು ಹೇಳುವ ವಾಕ್ಯಗಳಿಂದ ನೀವು ಹೇಳಿದ ಅರ್ಥವು ಹೇಗೆ ಸಿದ್ಧಿಸುವುದು ಎಂದರೆ ಅದಕ್ಕಾಗಿ ಇದೇ ಸೂತ್ರವನ್ನು ಉತ್ತರವನ್ನಾಗಿ ತಿಳಿಯಬೇಕು. ಈಗ ಈ ಸೂತ್ರದ ಅರ್ಥ ಹೀಗೆ – ಜ್ಞಾನವೇ ಮೋಕ್ಷಸಾಧನ ಎಂದು ಪ್ರತಿಪಾದನೆ ಮಾಡುವ ತಮೇವಂ ಮುಂತಾದ ವೇದವಿದ್ಯೆಯೇ ಪ್ರಬಲ. ಇದರಿಂದ ವಿದ್ಯೈವ ಎಂಬ ಸೂತ್ರದ ಭಾಗಕ್ಕೆ ಅರ್ಥ ಹೇಳಿದಂತಾಯಿತು. ಇನ್ನು ತು ಎಂಬ ಶಬ್ದದಿಂದ ಕರ್ಮ ಮೋಕ್ಷಸಾಧನ ಎಂದು ಪ್ರತಿಪಾದಿಸುವ ವಾಕ್ಯವು ಪ್ರಬಲವಲ್ಲ ಎಂದು ತಿಳಿಯುತ್ತಿದೆ. ಏಕೆಂದರೆ ನಿರ್ಧಾರಣಾತ್ ಎಂದು ಉತ್ತರ. ಸ್ಮೃತಿಗಿಂತ ಅಪೌರುಷೇಯವಾದ ಶ್ರುತಿಯು ಪ್ರಬಲವಾದ್ದರಿಂದ ಎಂದು ಜಾತ್ಯಾ ಶ್ರುತಿಯ ಪ್ರಾಬಲ್ಯ ನಿರ್ಧಾರಣವಾಗಿದೆ. ಆದ್ದರಿಂದ ಜ್ಞಾನವೇ ಮೋಕ್ಷಸಾಧನ ಎಂದು ಹೇಳುವ ವಾಕ್ಯವೇ ಪ್ರಬಲ-ವಾಗಿದೆ.

ಓಂ ॥ ವಿದ್ಯೈವ ತು ನಿರ್ಧಾರಣಾತ್ ॥ ಓಂ (3/3/38)

ಶ್ರವಣಾದಿ ಉಪಾಸನಾದಿಂದ ಪರೋಕ್ಷಜ್ಞಾನ ಬರುತ್ತೆ ಜೀವನು ಅಂತಃಕರಣಸಂಬಂಧದಿಂದ ದುಃಖೀ, ರಕ್ತ, ಭ್ರಾಂತ, ಅಶಕ್ತ ಎನ್ನಿಸುತ್ತಾನೆ. ಅದನ್ನು ತಿಳಿದಮಾತ್ರಕ್ಕೆ ಆ ನೀಚತ್ವ ಹೋಗುವುದಿಲ್ಲ. ಸತ್ಯಬಂಧವು ಜ್ಞಾನಮಾತ್ರದಿಂದ ಹೋಗುವುದಿಲ್ಲ. ಅದನ್ನು ಬಾಹ್ಯಮನಸ್ಸನ್ನು ತಳ್ಳಬೇಕು. ಸುಡಬೇಕು. ಆಗ ಸ್ಫಟಿಕಲೋಹಿತ್ಯವು ಜಪಾಕುಸುಮನಾಶದಿಂದ ಹೋಗುವಂತೆ ಜೀವನ ಸ್ವರೂಪವಿಕಾರ ತಪ್ಪುತ್ತೆ. 'ಕರ್ಮಣ್ಯೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' ಎಂದು ಕರ್ಮಕ್ಕೆ ಮೋಕ್ಷಸಾಧಕತ್ವವಚನವೂ ಇದೆ. ಅನೇಕವಾದಿಗಳು ಮೋಕ್ಷಸಾಧನವನ್ನು ಅನೇಕರೀತಿ ಹೇಳು-ರುತ್ತಾರೆ.

ಗುರುಪ್ರಸಾದವನ್ನು ಹೊಂದಿ ತಾರತಮ್ಯಾಂತಗನಾಗಿ ಅಂತರ್ಯಾಮಿ ವಿಷ್ಣು ಸರ್ವಜಗತ್ಕಾರಣ-

ತ್ವಾದಿ ಗುಣಪೂರ್ಣನೆಂಬ ಜ್ಞಾನವನ್ನೇ ಶ್ರವಣಾದಿ ಉಪಾಸನೆಯಿಂದ ಹೊಂದಿದರೆ ಮೋಕ್ಷ ಎಂದು ಏಕೆ ಹೇಳಬೇಕು? 'ಪ್ರಯಾಗಮರಣಾನ್ಮುಕ್ತಿಃ' ಎಂದಿದೆ. 'ತ್ಯಾಗೇನೈಕೇ ಅಮೃತತ್ವಮಾನಶುಃ' ಎಂದೂ ಇದೆ ಎಂದರೆ ವಿದ್ಯಾ ಏವ ತು – ತಂ ಏವಂ ವಿದ್ವಾನ್ ಅಮೃತ ಇಹ ಭವತಿ, ನಾನ್ಯಃ ಪಂಥಾ ಅಯನಾಯ ವಿದ್ಯತೇ ಎಂದೂ 'ತಮೇವ ವಿದಿತ್ವಾ ಅತಿಮೃತ್ಯುಮೇತಿ, ನಾನ್ಯಃ ಪಂಥಾ ವಿದ್ಯತೇ ಅಯನಾಯ' ಎಂದೂ ಪುರುಷನಾಮಕ ವಿಷ್ಣುವನ್ನೇ ಸಹಸ್ರರೂಪತ್ವ ಮತ್ತು ಮುಕ್ತಾ-ಮುಕ್ತನಿಯಾಮಕತ್ವ, ಬ್ರಹ್ಮಾಂಡಾದಿಜನಕತ್ವ, ಬ್ರಹ್ಮಾದಿದೇವೋಪಾಸ್ಯತ್ವಾದಿ ಸಪ್ರಕಾರಕವಾಗಿ ತಿಳಿದರೇನೇ ಅಂಥ ದೃಢಪರೋಕ್ಷಜ್ಞಾನ ಬಂದರೇನೇ ಮುಕ್ತಿಯಾಗುತ್ತದೆಂದು ಹೇಳಿದ್ದ-ರಿಂದ ಅಂಥ ವಿಷ್ಣುಸರ್ವೋತ್ತಮತ್ವಜ್ಞಾನವೇ ಬಂಧಮೋಚಕವು. ನಿರ್ಧಾರಣಾತ್ = ನಿರ್ಣಾ-ಯಕವಚನವಿರುವುದರಿಂದ ಇತರರು ಹೇಳುವ ಮೋಕ್ಷಮಾರ್ಗವು ಸುಳ್ಳು, ಯಾವ ಕರ್ಮಾದಿಗಳು ಕೂಡ ವಿಜ್ಞಾನದಂತೆ ಬಂಧಮೋಚಕವಿಷ್ಣುಪ್ರೀತಿಜನಕವಲ್ಲ.

## ದರ್ಶನಾಚ್ಚ — ಸೂತ್ರಾರ್ಥ

ದರ್ಶನಾಚ್ಚ ॥ (ಭಾ) – ನ ಕೇವಲಂ ವಿದ್ಯಯಾ ಕಿಂತ್ವಪರೋಕ್ಷಜ್ಞಾನೇನೈವ ಚ ।

ಅತ್ರ ದರ್ಶನಪದಂ ಭಗವದಪರೋಕ್ಷಜ್ಞಾನಪರಮ್ । ತಥಾ ಚ ನ ಕೇವಲಂ ವಿದ್ಯಯಾ ಪರೋಕ್ಷ-ಜ್ಞಾನೇನೈವ । ಕಿಂತು ದರ್ಶನಾಚ್ಚ - ಅಪರೋಕ್ಷಜ್ಞಾನಾದಪಿ । ಅತಸ್ತದರ್ಥಂ ಧ್ಯಾನೋಪಾಸನ-ಮಾವಶ್ಯಕಮಿತಿ ಭಾವಃ । ಏತಮೇವಾರ್ಥಮಾಹ – ನ ಕೇವಲಮಿತಿ ॥ ವಿದ್ಯಯಾ = ಪರೋ-ಕ್ಷಯಾ । ಚಶಬ್ದಃ ಸೂತ್ರೇ ಪರೋಕ್ಷಜ್ಞಾನಸಮುಚ್ಚಯಾರ್ಥಃ । ಪೂರ್ವಸೂತ್ರಾದೇವಶಬ್ದೋಽ-ನುವೃತ್ತೋ ಜ್ಞಾನಪ್ರಾಧಾನ್ಯಸೂಚನಾರ್ಥಃ ।

– ವಿದ್ಯೈವ ತು ನಿರ್ಧಾರಣಾತ್ ಎಂಬ ಸೂತ್ರದಲ್ಲಿ ವಿದ್ಯೆಯೆಂದರೆ ಪರೋಕ್ಷಜ್ಞಾನವೆಂದೇ ಅರ್ಥವನ್ನು ಸ್ವೀಕರಿಸೋಣ. ಅಪರೋಕ್ಷಜ್ಞಾನವೆಂದೇಕೆ ಅರ್ಥಮಾಡಬೇಕು. ಇನ್ನು ಪರೋಕ್ಷ-ಜ್ಞಾನಬರುವುದಕ್ಕೆ ಶ್ರವಣ, ಮನನಗಳೇ ಸಾಕು. ಇವುಗಳಿಂದ ಬಂದ ಪರೋಕ್ಷಜ್ಞಾನದಿಂದಲೇ ಮೋಕ್ಷ ವಿನ್ನೋಣ ಎಂದರೆ ಹೇಳುತ್ತಾರೆ:-

ಓಂ ॥ ದರ್ಶನಾಚ್ಚ ॥ ಓಂ (3/3/49)

ಅರ್ಥ:- 'ಸರ್ವಾನ್ ಪರೋ ಮಾಯಯಾ ಅಯಂ ಸಿನೀತೇ ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' 'ಅಯಂ ಪರಃ = ಈ ಪರಮಾತ್ಮನು, ಮಾಯಯಾ = ಲಕ್ಷ್ಮಿಯಿಂದಾಗಿ, ಸರ್ವಾನ್ = ಬ್ರಹ್ಮಾದಿ ಸಕಲಜೀವರಾಶಿಗಳನ್ನು, ಸಿನೀತೇ = ಬಂಧಿಸುತ್ತಾನೆ. ತಂ = ಹೀಗೆ ಬಂಧಿಸುವ ಭಗವಂತನನ್ನು, ದೃಷ್ಟ್ವೈವ = ಅಪರೋಕ್ಷತಃ ತಿಳಿದೇ, ಮುಚ್ಯತೇ = ಪ್ರಕೃತಿಬಂಧದಿಂದ ಬಿಡುಗಡೆ ಪಡೆಯುವನು.

ನಾಪರೇಣ = ಕೇವಲಪರೋಕ್ಷಜ್ಞಾನದಿಂದಾಗಲೀ ಕರ್ಮದಿಂದಾಗಲೀ ಅಲ್ಲ — ಎಂಬ ಶ್ರುತಿಯಲ್ಲಿ ಸರ್ವಬಂಧಕ ಪರಮಾತ್ಮನ ಸಾಕ್ಷಾತ್ ದರ್ಶನ ಮಾಡಿದರೇನೆ ಮುಕ್ತಿಯಾಗುತ್ತದೆ ಎಂದು ಹೇಳಿರುವುದರಿಂದ 'ತಮೇವಂ ವಿದ್ವಾನ್ ತಂ ದೃಷ್ಟ್ವಾ ಅಮೃತೋ ಭವತಿ' ಎಂದು ತಿಳಿಯಬೇಕು. ಕೇವಲ ಪರೋಕ್ಷಜ್ಞಾನ ಮುಕ್ತಿಗೆ ಸಾಲದು. ಆದ್ದರಿಂದ ಭಕ್ತಿಗೂ ಧ್ಯಾನಕ್ಕೂ ವೈಯರ್ಥ್ಯವಿಲ್ಲ. ಜ್ಞಾನರೂಪವಿದ್ಯೆಯು ಶ್ರವಣ ಮನನದಿಂದಾಗುತ್ತೆ. ಅಪರೋಕ್ಷಜ್ಞಾನವು ಭಕ್ತಿಪೂರ್ವಕಧ್ಯಾನೋಪಾಸನದಿಂದಾಗುತ್ತೆ.

** श्रुतत्वतोऽसौ मोक्षादिदाता। यतश्च मोक्षादिदाताऽसावतो वो युष्माकं मुमुक्षूणां जिज्ञास्य एव इत्येतमर्थं जन्मादिसूत्रेणाऽहेत्यर्थः। अयमभिसन्धिः "जन्माद्यस्य यतः" इति सूत्रे श्रुतमिति वाक्यशेषः। तथाच परमेश्वरस्य मोक्षदातृत्वे श्रुतिः प्रमाणमित्युक्तं भवति। (ಸುಧಾ)

ಭಗವಂತನು ಮೋಕ್ಷವನ್ನು ಕೊಡುವವನು ಎನ್ನುವದಕ್ಕೆ ಏನು ಪ್ರಮಾಣ? ಎಂದು ಪ್ರಶ್ನಿಸಿದಾಗ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ತಿಳಿಸಿದಂತೆ ಶ್ರುತಿವಾಕ್ಯವೇ ಪ್ರಮಾಣವಾಗಿದೆ. ಹಾಗಾಗಿ ಮೋಕ್ಷಾದಿಪ್ರದಾತೃವಾದ ಆ ಭಗವಂತನನ್ನೇ ಮೋಕ್ಷೇಚ್ಛುಗಳು ಜಜ್ಞಾಸೆ ಮಾಡಬೇಕು ಎಂದು ತಿಳಿಯುವುದು.

## ಸುಪ್ರಸನ್ನನಾದ ಭಗವಂತನೇ ಮುಕ್ತಿಪ್ರದ

येनैव बन्धमोक्षः स्यात् स च जिज्ञासया गतः।
सुप्रसन्नो भवेदीशो जिज्ञासाऽतोऽस्य मुक्तिदा॥ अनु. - ३-३-श्लो.१०॥

बन्धान्मोक्षो बन्धमोक्षः। "पञ्चमी" इति योगविभागात समासः। षष्ठीसमासो वा। येन प्रसन्नेन इति शेषः। गतो ज्ञातः। गत्यर्थानामवगत्यर्थत्वात्। चो यस्मादित्यर्थे। प्रसादमात्रस्य मोक्षसाधनत्वाभावात सुशब्दः। अस्येशस्य जिज्ञासाऽस्य जीवस्य मुक्तिदा।

एतदुक्तं भवति जिज्ञासा तावन्न साक्षान्मोक्षसाधनत्वेनास्माकमभिमता, किन्तु सुप्रसन्नो भगवानेव। स चोत्कृष्टतया ज्ञातः सुप्रसन्नो भवति। उत्कर्षज्ञानं च जिज्ञासयेत्येवम्परम्परया। तत्र भगवतो मोक्षदातृत्वं तावत् प्रमाणैः समर्थितम्। प्रसन्न एव ददातीति, उत्कर्षज्ञानात् प्रसीदतीति, जिज्ञासयोत्कृष्टतया ज्ञायत इति च लोकत एव सिद्धम्। किं तत्र प्रमाणोपन्यासेन? अतो भगवज्जिज्ञासाया मोक्षहेतुत्वं प्रमितमिति मन्यते सूत्रकार इति। (सुधा)

ಬಂಧಮೋಕ್ಷಃ ಎಂಬ ಪದಕ್ಕೆ ಬಂಧದಿಂದ ಮೋಕ್ಷ ಎಂದರ್ಥ. ಯೇನ ಎಂದರೆ ಯಾವ ಪ್ರಸನ್ನನಾದ ಭಗವಂತನಿಂದ ಎಂದರ್ಥ. ಗತಃ ಎಂದರೆ ಜ್ಞಾತಃ ತಿಳಿಯಲ್ಪಟ್ಟವನು ಎಂದರ್ಥ. ಸುಪ್ರಸನ್ನಃ

ಎಂಬಲ್ಲಿನ ಸುಶಬ್ದವು ಕೇವಲ ಪ್ರಸಾದಕ್ಕೆ ಮೋಕ್ಷಸಾಧನತ್ವವಿಲ್ಲ ಎಂದು ಜ್ಞಾಪಿಸುತ್ತ ಪರಮ-ಪ್ರಸಾದವೇ ಮೋಕ್ಷಕ್ಕೆ ಸಾಧನ ಎಂದು ತಿಳಿಸುತ್ತಿದೆ. ಹೀಗೆ ಅಸ್ಯ ಎಂದರೆ ಭಗವಂತನ ಜಿಜ್ಞಾಸೆಯು ಅಸ್ಯ = ಜೀವನಿಗೆ, ಮುಕ್ತಿಪ್ರದವಾಗಿದೆ.

ಬ್ರಹ್ಮಜಿಜ್ಞಾಸೆಯು ಸಾಕ್ಷಾತ್ತಾಗಿ ಮೋಕ್ಷಕ್ಕೆ ಸಾಧನವೆಂದು ನಮ್ಮ ಅಭಿಪ್ರಾಯವಲ್ಲ. ಹೊರತು ಸುಪ್ರಸನ್ನನಾದ ಭಗವಂತನೇ. ಭಗವಂತನು ಸಂತೋಷಗೊಳ್ಳುವುದಾದರೂ ಅವನನ್ನು ನಾವು ಸರ್ವೋತ್ಕೃಷ್ಟ ಎಂದು ತಿಳಿದಾಗ ಮಾತ್ರ. ಆ ಉತ್ಕರ್ಷಜ್ಞಾನವಾದರೋ ಜಿಜ್ಞಾಸೆಯಿಂದ ಎಂದು ಈ ಕ್ರಮದಲ್ಲಿ ಪರಂಪರಯಾ ಜಿಜ್ಞಾಸೆಯು ಮೋಕ್ಷಸಾಧನವಾಗಿದೆ. ಇಲ್ಲಿ ಭಗವಂತನು ಮೋಕ್ಷದಾತೃ ಎಂಬ ವಿಷಯದಲ್ಲಿ ಪ್ರಮಾಣಗಳಿವೆ. ಇನ್ನು "ಅವನು ಮೋಕ್ಷವನ್ನು ಕೊಡುವುದು ಪ್ರಸನ್ನನಾಗಿದ್ದರೆ ಮಾತ್ರ" ಎಂಬಂಶವು "ಉತ್ಕರ್ಷಜ್ಞಾನದಿಂದ ಸಂತೋಷಗೊಳ್ಳುವನು" ಎಂಬಂಶವು ಹಾಗೂ "ಜಿಜ್ಞಾಸೆಯಿಂದ ಉತ್ಕೃಷ್ಟನಾಗಿ ತಿಳಿಯಲ್ಪಡುತ್ತಾನೆ" ಎಂಬಂಶವು ಲೋಕದಿಂದಲೇ ಸಿದ್ಧವಾದ ವಿಷಯ. ಈ ಅಂಶಗಳಿಗೆ ಪ್ರಮಾಣವನ್ನು ಹೇಳಬೇಕಾದ ಅವಶ್ಯಕತೆ ಇಲ್ಲ. ಹಾಗಾಗಿ ಭಗವಂತನ ಜಿಜ್ಞಾಸೆಯು ಮೋಕ್ಷಕ್ಕೆ ಕಾರಣ ಎಂಬುದು ಪ್ರಮಾಣಸಿದ್ಧ ಎಂದು ಸೂತ್ರಕಾರರ ಅಭಿಪ್ರಾಯವಾಗಿದೆ ಎಂದು ತಿಳಿಯಬೇಕು.

## ಧ್ಯಾನಜಜ್ಞಾನಯೋಗಾತ್ ಗಮ್ಯಂ ಬ್ರಹ್ಮ - ತತ್ತ್ವಪ್ರಕಾಶಿಕಾ

ರುದ್ಧಾನಂದೋರುಸಂವಿತ್-ದ್ಯುತಿಬಲಬಹುಲೌದಾರ್ಯವೀರ್ಯಾದಿದೇಹಂ
ಚಿಂತಾಸಂತಾಪಲೇಷೋದ್ಭವಮೃತಿಮುಖರಾಶೇಷದೋಷಾತಿದೂರಮ್ ।
ಸದ್ಭಿರ್ವೈರಾಗ್ಯಭಕ್ತಿಶ್ರುತಿಮತಿನಿಯತಧ್ಯಾನಜಜ್ಞಾನಯೋಗಾತ್
ಗಮ್ಯಂ ವಂದೇ ಮುಕುಂದಾಭಿಧಮಮಲಮಲಂ ಬ್ರಹ್ಮ ವೇದಾಂತವೇದ್ಯಮ್ ॥
(ತತ್ತ್ವಪ್ರಕಾಶಿಕಾಮಂಗಲಶ್ಲೋಕ).

(ಭಾವದೀಪ) - नियतध्यानं = स्वयोग्योपासनम् इति तृतीयपादार्थः । तत्र सर्ववेदान्तनये यथाशक्ति कृत्स्नवेदविषयश्रवणमननयोः उपसंहारादिनयेषु स्वयोग्योपासनस्य चोक्तेः । एतेन ज्ञानप्रणाड्या एतान्येवोपायो नान्यत्कर्मादीति सूचितम् । ज्ञानं = साक्षात्कारः स एव योगः = उपायस्तस्मादिति चतुर्थपादार्थः । तत्र पुरुपार्थनयादौ पुमर्थोपायत्वसिद्धेः । एतेन चतुर्थार्थो गम्यमित्येतदपि विवृतम् । प्रणाड्या वैराग्यादिजात् ज्ञानात् सद्भिर्गम्यं न कर्मादित इति ।

ನಿಯತಧ್ಯಾನ ಎಂದರೆ ತಮ್ಮ ಯೋಗ್ಯತೆಗೆ ಅನುಗುಣವಾದ ಉಪಾಸನೆ ಎಂದರ್ಥ. ಸರ್ವ-ವೇದಾಂತಾಧಿಕರಣದಲ್ಲಿ ಯಥಾಶಕ್ತಿ ಸಕಲವೇದಗಳ ಶ್ರವಣಮನನಗಳನ್ನು ಮಾಡಬೇಕು ಎಂದು ತಿಳಿಸಿದ್ದಾರೆ. ಹಾಗೆ ಉಪಸಂಹಾರಾಧಿಕರಣ ಮೊದಲಾದ ಕಡೆ ಸ್ವಯೋಗ್ಯ ಉಪಾಸನೆಯನ್ನು

ತಿಳಿಸಿದ್ದಾರೆ. ಇದರಿಂದ ಜ್ಞಾನದ ಮುಖಾಂತರವೇ ಶ್ರವಣಾದಿಗಳು ಮೋಕ್ಷೋಪಾಯಗಳಾಗಿವೆ. ಕರ್ಮಾದಿಗಳಲ್ಲ ಎಂದು ಸೂಚಿಸಿದಂತಾಯಿತು. ಇಲ್ಲಿ ಜ್ಞಾನಯೋಗ ಎಂಬ ಶಬ್ದಕ್ಕೆ ಅಪರೋಕ್ಷ-ಜ್ಞಾನವೆಂಬ ಉಪಾಯದಿಂದ ಎಂದರ್ಥ. ಈ ಅಂಶವು ಪುರುಷಾರ್ಥಾಧಿಕರಣ ಮುಂತಾದ ಕಡೆ ಪ್ರಸಿದ್ಧ. ಇದರಿಂದ ನಾಲ್ಕನೆಯ ಅಧ್ಯಾಯದ ಅರ್ಥವನ್ನು ತಿಳಿಸುವ ಗಮ್ಯಂ ಎಂಬ ಪದವನ್ನೂ ವಿವರಿಸಿದಂತಾಯಿತು. ಇನ್ನು ವೈರಾಗ್ಯ ಮೊದಲಾದವುಗಳಿಂದ ಉಂಟಾದ ಜ್ಞಾನದಿಂದಲೇ ಸಜ್ಜನರಿಂದ ಹೊಂದಲ್ಪಡುವವನು ಪರಮಾತ್ಮ ಹೊರತು ಕರ್ಮಾದಿಗಳಿಂದಲ್ಲ.

### ಬಿಂಬನ ಲಕ್ಷಣಾಂತರ - ಭಾಗವತಸಾರೋದ್ಧಾರ

(ಲಘುರಸರಂಜನೀ) – ತಥಾ ಶರೀರೇಂದ್ರಿಯಾದಿಸರ್ವಚೇಷ್ಟಕತ್ವಂ ಚ ಬಿಂಬಲಕ್ಷಣಮ್ । ಯಥೋಕ್ತಂ ಭಾಗವತಸಾರೋದ್ಧಾರೇ ಬಿಂಬೋಪದೇಶಪ್ರಕರಣೇ –

'ಸ್ಥಿತ್ಯುದ್ಭವಪ್ರಲಯಹೇತುರಹೇತುರಸ್ಯ ಯಃ ಸ್ವಪ್ನಜಾಗರಸುಷುಪ್ತಿಷು ಸನ್ ಬಹಿಶ್ಚ ।
ದೇಹೇಂದ್ರಿಯಾಸು ಹೃದಯಾನಿ ಚರಂತಿ ಯೇನ ಸಂಜೀವಿತಾನಿ ತದವೈಹಿ ಪರಂ ನರೇಂದ್ರ' –

ಇತಿ । ಇದಂ ಚ ಲಕ್ಷಣಂ ಜಿಜ್ಞಾಸ್ಯಸ್ಯೋಚ್ಯತೇ । 'ಬ್ರಹ್ಮಶಬ್ದಶ್ಚ ವಿಷ್ಣಾವೇವ' ಇತಿ ಭಾಷ್ಯೇಣ । ತಸ್ಯಾರ್ಥಃ ಚಶಬ್ದಃ ಪ್ರಕೃತಾನುಸಂಧಾನಾರ್ಥಃ । ರೂಪಾಂತರಸಾಧಾರಣೋಽಪಿ ಬ್ರಹ್ಮಶಬ್ದಃ ಪ್ರಕೃತಸೂತ್ರೇ ವಿಷ್ಣೌ ದೇಹೇಂದ್ರಿಯಾದಿಸರ್ವಚೇಷ್ಟಕೇ ರೂಪೇ ಏವ । ನ ಕಾರ್ಯಾಂತರಾರ್ಥೇ ರೂಪಾಂತರೇ । ಯಥೋಕ್ತಂ ಮಹಾಭೂತಿಭಾಷ್ಯೇ –

ಇತ್ಥಮ್ಮೆಕ್ಷತ ದೇವೇಶೋ ಬ್ರಹ್ಮಾದ್ಯಾ ಯದಿ ಮಾಂ ವಿನಾ ।
ಕ್ರಿಯಾದಿಷು ಸಮರ್ಥಾ ಸ್ಯುರ್ನ ಮೇ ವಿಷ್ಣ್ವಭಿಧಾ ಭವೇತ್ ।
ಸರ್ವಚೇಷ್ಟಯಿತೃತ್ವಾಚ್ಚ ವಿಶಿಷ್ಟಬಲತಸ್ತಥಾ ।
ವಿಷ್ಣುರಿತ್ಯಭಿಧಾ ಮಹ್ಯಮ್' ಇತೀತಿ ।

ಯದ್ಯಪಿ – " 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಇತಿ ನಿರಂತರಸೂತ್ರದ್ವಯೇ ಬ್ರಹ್ಮತ್ವೇನ ನಾರಾಯಣಸ್ಯೈವ ಪ್ರಸ್ತುತಿಂ ಸೂಚಯತಿ 'ವಿಷ್ಣುಗ್ರಹಣೇನ' " – ಇತಿ ಟೀಕಾಯಾಂ ವಿಷ್ಣುಶಬ್ದಸ್ಯ ಪ್ರಯೋಜನಮುಕ್ತಂ ತಥಾಪಿ ತದುಪಲಕ್ಷಿತಮೇವ ಪ್ರಯೋಜನಾಂತರಮಿದಮುಕ್ತಮಿತಿ ನಾನುಪ-ಪತ್ತಿಃ ।

ಹಾಗೆಯೇ ಬಿಂಬದ ಇನ್ನೊಂದು ಲಕ್ಷಣವು ಹೀಗಿದೆ – 'ಶರೀರೇಂದ್ರಿಯಾದಿಸರ್ವಚೇಷ್ಟಕತ್ವಮ್'- ಶರೀರ ಇಂದ್ರಿಯ ಮೊದಲಾದ ಎಲ್ಲದರ ವ್ಯಾಪಾರಗಳಿಗೆ ಕಾರಣನಾಗಿರುವವನು ಎಂದು. ಇದನ್ನು ಭಾಗವತಸಾರೋದ್ಧಾರದ ಬಿಂಬೋಪದೇಶಕಪ್ರಕರಣದಲ್ಲಿ ತಿಳಿಸಿದ್ದಾರೆ. "ಎಲೈ ರಾಜಶ್ರೇಷ್ಠನೇ!

ಅದನ್ನೇ ಬಿಂಬ ಎಂದು ತಿಳಿ. ಯಾವುದು ಇಡೀ ಜಗತ್ತಿನ ಸ್ಥಿತಿ, ಉತ್ಪತ್ತಿ ಪ್ರಲಯಗಳಿಗೆ ಕಾರಣವಾಗಿದೆಯೋ ಹಾಗೆ ತನಗೆ ಯಾವುದೂ ಕಾರಣವಿಲ್ಲವೋ, ಹಾಗೆ ಯಾವುದು ಸ್ವಪ್ನಾವಸ್ಥೆ ಜಾಗ್ರದವಸ್ಥೆ ಸುಷುಪ್ತ್ಯವಸ್ಥೆಗಳಲ್ಲಿ ಒಳಗೆ ಹೊರಗಡೆ ಇದ್ದು ದೇಹೇಂದ್ರಿಯಾದಿಗಳನ್ನು ಪ್ರವೃತ್ತಿಸು-ವಂತೆ ಮಾಡುತ್ತ ಇಡೀ ಪ್ರಾಣಿಸಂಘಾತವನ್ನು ಬದುಕುವಂತೆ ಮಾಡುತ್ತಿದೆಯೋ ಅದೇ' ಎಂದು. ಈ ಲಕ್ಷಣವನ್ನೇ ಜಿಜ್ಞಾಸ್ಯನಾದ ಬ್ರಹ್ಮನಿಗೆ ಹೇಳಲಾಗಿದೆ. "ಬ್ರಹ್ಮಶಬ್ದಶ್ಚ ವಿಷ್ಣಾವೇವ" ಎಂಬ ಬ್ರಹ್ಮಸೂತ್ರಭಾಷ್ಯದ ಪಂಕ್ತಿ ಈ ಅರ್ಥದ ಪ್ರತಿಪಾದಕವಾಗಿದೆ. ಅದು ಹೀಗೆ – ಈ ವಾಕ್ಯದಲ್ಲಿ-ರುವ ಚಶಬ್ದವು ಪ್ರಕೃತವಾದದ್ದನ್ನು ಅನುಸಂಧಾನ ಮಾಡಬೇಕು ಎಂದು ತಿಳಿಸುತ್ತದೆ. ಪ್ರಕೃತವಾದರೋ ಬೇರೆ ಎಲ್ಲ ಭಗವದ್ರೂಪಗಳಲ್ಲಿ ಸಾಧಾರಣವಾಗಿ ಬಳಸುವ ಬ್ರಹ್ಮಶಬ್ದವು ಈ ಮೊದಲನೆಯ ಸೂತ್ರದಲ್ಲಿ ಮಾತ್ರ ವಿಷ್ಣುವಿನಲ್ಲಿಯೇ ಅದೂ ಕೂಡ ದೇಹೇಂದ್ರಿಯಾದಿ ಎಲ್ಲದರ ಚೇಷ್ಟೆಗಳಿಗೆ ಕಾರಣನಾದ ರೂಪದಲ್ಲಿಯೇ ಹೊರತು ಬೇರೆ ಕಾರ್ಯಗಳಿಗೋಸ್ಕರ ಅವತಾರ-ಮಾಡಿದ ರೂಪಗಳಲ್ಲಿ ಅಲ್ಲ. ಇದನ್ನು ಮಹಾಭೂತಿಭಾಷ್ಯದಲ್ಲಿ ಹೇಳಿದ್ದಾರೆ – ಭಗವಂತನು ಹೀಗೆ ತಿಳಿದನಂತೆ. ನಾನಿಲ್ಲದೇ ಈ ಎಲ್ಲ ಬ್ರಹ್ಮಾದಿದೇವತೆಗಳು ತಮ್ಮ ವ್ಯಾಪಾರದಲ್ಲಿ ಸಮರ್ಥರಾಗಿದ್ದರೆ ನನಗೆ ವಿಷ್ಣು ಎಂಬ ಹೆಸರು ಹೇಗೆ ಬರಲು ಸಾಧ್ಯ? ಹಾಗಾಗಿ ವಿಷ್ಣು ಎಂಬ ನಾಮ ನನಗಿರುವು-ದರಿಂದ ತಿಳಿಯುವುದಿದು. ನಾನು ಎಲ್ಲ ವಸ್ತುಗಳ ವ್ಯಾಪಾರಗಳಿಗೆ ಪ್ರವರ್ತಕನಾಗಿದ್ದೇನೆ. ಹಾಗೂ ವಿಶಿಷ್ಟವಾದ ಬಲವುಳ್ಳವನಾಗಿದ್ದೇನೆ. ಆದ್ದರಿಂದ ನನಗೆ ವಿಷ್ಣು ಎಂದು ಹೆಸರು.

ಮೊದಲನೆಯ ಸೂತ್ರದ ಹತ್ತಿರ ಇರುವ "ಸ ವಿಷ್ಣುರಾಹ ಹಿ" "ತಂ ಬ್ರಹ್ಮೇತ್ಯಾಚಕ್ಷತೇ" ಎಂಬ ಸೂತ್ರಗಳಲ್ಲಿ ವಿಷ್ಣು ಎಂದು ಗ್ರಹಣಮಾಡಿದ್ದರಿಂದ ನಾರಾಯಣನನ್ನೇ ಬ್ರಹ್ಮಶಬ್ದದಿಂದ ಸ್ವೀಕರಿಸ-ಬೇಕು ಎಂದು ತತ್ತ್ವಪ್ರಕಾಶಿಕಾದಲ್ಲಿ ವಿಷ್ಣುಶಬ್ದಕ್ಕೆ ಪ್ರಯೋಜನವನ್ನು ಹೇಳಲಾಗಿದೆ. ಆದರೂ ಅಲ್ಲಿ ಕೇವಲ ಒಂದೇ ಪ್ರಯೋಜನವನ್ನು ತೋರಿಸಲಾಗಿದೆ. ಇನ್ನು ಅನೇಕ ಪ್ರಯೋಜನಗಳಿವೆ. ಆದ್ದರಿಂದ ಈ ರೀತಿಯಾದ ವ್ಯಾಖ್ಯಾನವನ್ನು ಮಾಡಿದರ ಯಾವುದೇ ಅನುಪಪತ್ತಿಯಿಲ್ಲ.

– विष्णुपदोक्तिसूचितं ज्ञापकमाह ॥ स विष्णुरिति ॥ ननु द्वितीयसूत्रे तमित्युद्देश्यो विष्णुरिति कुतः येन तस्यैव ब्रह्मत्वं स्यादित्यत उक्तम् ॥ निरन्तरेति ॥ अन्यान्याव्यवहितेत्यर्थः । सूत्रद्वयमध्ये अन्यद्व्यवधायकं सूत्रं नेति विष्णुरेव तमिति परामृश्यत इति भावः । ब्रह्मत्वेन = ब्रह्मपदमुख्यार्थत्वेन । – (वि.त.नि. भावदीपः)

ವಿಷ್ಣುಪದವನ್ನು ಹೇಳಿದ್ದರಿಂದ ಸೂಚಿತವಾದ ಜ್ಞಾಪಕವನ್ನು ಹೇಳುತ್ತಾರೆ - ಸ ವಿಷ್ಣುರಾಹ ಹಿ ಎಂದು. ಅಲ್ಲ ಎರಡನೆಯ ಸೂತ್ರದಲ್ಲಿ 'ತಂ ಬ್ರಹ್ಮೇತ್ಯಾಚಕ್ಷತೇ' ತಂ ಎಂಬುವುದರಿಂದ ವಿಷ್ಣುವನ್ನೇ ಏಕೆ ಪರಾಮರ್ಶಿಸಬೇಕು. ಹಾಗೆ ಪರಾಮರ್ಶಿಸಿದಲ್ಲಿ ಅವನಿಗೇ ಬ್ರಹ್ಮತ್ವ ಅರ್ಥಾತ್ ಬ್ರಹ್ಮಪದ ಮುಖ್ಯವಾಚ್ಯತ್ವವಿದೆ ಎಂದು ಸಿದ್ಧವಾಗುತ್ತಿತ್ತು. ಇವಕ್ಕೆ ಉತ್ತರ ನಿರಂತರ ಎಂದು. ಇದರ ಅಭಿಪ್ರಾಯ

ಎರಡು ಸೂತ್ರಗಳ ಮಧ್ಯದಲ್ಲಿ ಬೇರೆಯೊಂದು ಸೂತ್ರದ ವ್ಯವಧಾನವಿದ್ದರೆ ಆಗ ನೀವು ಹೇಳಿದಂತೆ ಆಗಬಹುದಿತ್ತು. ಆದರೆ ಯಾವುದೇ ಸೂತ್ರದ ವ್ಯವಧಾನವಿಲ್ಲದೇ ವಿಷ್ಣು: ಎಂದು ಹೇಳಿ ಬ್ರಹ್ಮ ಎಂದು ಹೇಳಿದ್ದರಿಂದ ಬ್ರಹ್ಮಪದವಾಚ್ಯನಾದವನು ವಿಷ್ಣುವೇ. ಆ ವಿಷ್ಣುವೂ ನಾರಾಯಣನೂ ಒಬ್ಬನೇ.

## ಮಹಾಭೂತಿಉಪನಿಷತ್ ಹಾಗೂ ತದ್ಭಾಷ್ಯ

** ಉಪನಿಷತ್ – ಸ ಈಕ್ಷತ ಕಥಂ ನ್ವಿದಂ ಮದೃತೇ ಸ್ಯಾದಿತಿ ಸ ಈಕ್ಷತ ಕತರೇಣ ಪ್ರಪದ್ಯಾ ಇತಿ ಸ ಈಕ್ಷತ ಯದಿ ವಾಚಾಽಭಿವ್ಯಾಹೃತಂ ಯದಿ ಪ್ರಾಣೇನಾಭಿಪ್ರಾಣಿತಂ ಯದಿ ಚಕ್ಷುಷಾ ದೃಷ್ಟಂ ಯದಿ ಶ್ರೋತ್ರೇಣ ಶ್ರುತಂ ಯದಿ ತ್ವಚಾ ಸ್ಪೃಷ್ಟಂ ಯದಿ ಮನಸಾ ಧ್ಯಾತಂ ಯದ್ಯಪಾನೇನಾಭ್ಯ-ಪಾನಿತಂ ಯದಿ ಶಿಶ್ನೇನ ವಿಸೃಷ್ಟಮಥ ಕೋಽಹಮಿತಿ । ಸ ಏತಮೇವ ಸೀಮಾನಂ ವಿದಾರ್ಯೈ-ತಯಾ ದ್ವಾರಾ ಪ್ರಾಪದ್ಯತ ।

– ಸಃ = ಆ ಹರಿಯು, ಇದಂ = ಬ್ರಹ್ಮಾದಿದೇವತೆಗಳ ಸಮುದಾಯವು, ಮದೃತೇ = ನನ್ನನ್ನು ಹೊರತು, ಕಥಂ ನು = ಹೇಗೆ ತಾನೇ, ಸ್ಯಾತ್ = ತಮ್ಮ ತಮ್ಮ ಕಾರ್ಯವನ್ನು ಮಾಡಲಿಕ್ಕೆ ಸಮರ್ಥವಾದದ್ದು ಆಗುವುದು? ಸ್ವಲ್ಪವೂ ಆಗುವುದಿಲ್ಲ. ಆ ಕಾರಣ ಇದರ ಪ್ರವೃತ್ತಿಗಾಗಿ ಬ್ರಹ್ಮನ ಶರೀರದಲ್ಲಿ ನಾನು ಪ್ರವೇಶಮಾಡುವುದೇ ಸರಿ, ಇತಿ = ಈ ಪ್ರಕಾರ ಬ್ರಹ್ಮನ ಶರೀರದಲ್ಲಿ ದೇವತೆ-ಗಳು ಪ್ರವೇಶ ಮಾಡುವುದಕ್ಕಿಂತ ಪೂರ್ವದಲ್ಲಿಯೇ, ಈಕ್ಷತ = ಇಚ್ಛಿಸಿದನು. ಸಃ = ಆ ಹರಿಯು, ಕತರೇಣ = ಯಾವ ಮಾರ್ಗದಿಂದ ಈ ಶರೀರವನ್ನು ಪ್ರಪದ್ಯೈ = ಹೊಂದುವೆನು, ಇತಿ = ಈ ಪ್ರಕಾರ, ಈಕ್ಷತ = ಇಚ್ಛಿಸಿದನು. ಸಃ = ಆ ಹರಿಯು, ವಾಚಾ = ವಾಗಿಂದ್ರಿಯಾಭಿಮಾನಿಯಾದ ದೇವತೆಯಿಂದ, ಮದೃತೇ = ನನ್ನನ್ನು ಬಿಟ್ಟು ಅಂದರೆ ಸ್ವತಂತ್ರವಾಗಿಯೇ, ಅಭಿವ್ಯಾಹೃತಂ ಯದಿ = ಮಾತನಾಡಲ್ಪಡುವುದಾದರೆ, ಪ್ರಾಣೇನ = ಪ್ರಾಣದಿಂದ, ಅಭಿಪ್ರಾಣಿತಂ ಯದಿ = ಚೇಷ್ಟೆ ಮಾಡಲ್ಪಡುವುದಾದರೆ, ಚಕ್ಷುಷಾ = ಕಣ್ಣಿನ ಅಭಿಮಾನಿದೇವತೆಯಿಂದ, ದೃಷ್ಟಂ ಯದಿ = ಕಾಣ-ಲ್ಪಡುವುದಾದರೆ, ಶ್ರೋತ್ರೇಣ = ಕಿವಿಯ ಅಭಿಮಾನಿದೇವತೆಯಿಂದ, ಶ್ರುತಂ ಯದಿ = ಸ್ವತಂತ್ರವಾಗಿ ಕೇಳಲ್ಪಡುವುದಾದರೆ, ತ್ವಚಾ = ತ್ವಗಿಂದ್ರಿಯದ ಅಭಿಮಾನಿದೇವತೆಯಿಂದ, ಸ್ಪೃಷ್ಟಂ ಯದಿ = ಮುಟ್ಟಲ್ಪಡುವುದಾದರೆ, ಮನಸಾ = ಮನೋಭಿಮಾನಿಯಿಂದ, ಧ್ಯಾತಂ ಯದಿ = ಧ್ಯಾನ-ಮಾಡಲ್ಪಡುವುದಾದರೆ, ಅಪಾನೇನ = ಅಪಾನಾಖ್ಯವಾಯುವಿನಿಂದ, ಅಭ್ಯಪಾನಿತಂ ಯದಿ = ಸ್ವತಂತ್ರವಾಗಿ ಹೊರಗೆ ಮಲಾದಿಗಳು ಕಳುಹಿಸಲ್ಪಡುವುದಾದರೆ, ಶಿಶ್ನೇನ = ಗುಹ್ಯೇಂದ್ರಿಯಾಭಿ-ಮಾನಿಯಿಂದ, ವಿಸೃಷ್ಟಂ ಯದಿ = ರೇತೋವಿಸರ್ಜನೆಯು ಮಾಡಲ್ಪಡುವುದಾದರೆ, ಅಥ = ಹಾಗಾದರೆ, ಅಹಂ = ನಾನು, ಕಃ = ವಿಷ್ಣುಶಬ್ದವಾಚ್ಯನು ಹೇಗೆ ಆಗಲು ಸಾಧ್ಯ? ಇತಿ = ಈ ಪ್ರಕಾರ, ಐಕ್ಷತ = ಇಚ್ಛಿಸಿದನು. ಹೀಗೆ ಆಲೋಚಿಸಿ ಸಃ = ಆ ಹರಿಯು, ವಾಸುದೇವರೂಪದಿಂದ, ಏತ-

ಮೇವ ಸೀಮಾನಂ = ಈ ಮಸ್ತಕಪ್ರದೇಶವನ್ನೇ, ವಿದಾರ್ಯ = ಸೀಳಿ, ಏತಯಾ ದ್ವಾರಾ = ಸುಷುಮ್ನಾ ಎಂಬ ಶಿರಸ್ಸಿನಲ್ಲಿರುವ ನಾಡಿಯ ದ್ವಾರದಿಂದ, ಪ್ರಾಪದ್ಯತ = ಪ್ರವೇಶಿಸಿದನು.

** ದೇವತಾನಾಂ ಪ್ರವೇಶಾತ್ತು ಪೂರ್ವಮೇವ ಜನಾರ್ದನಃ ॥
ಇತ್ಥಮೈಕ್ಷತ ದೇವೇಶೋ ಬ್ರಹ್ಮಾದ್ಯಾ ಯದಿ ಮಾಂ ವಿನಾ ।
ಕ್ರಿಯಾದಿಷು ಸಮರ್ಥಾಃ ಸ್ಯುರ್ನ ಮೇ ವಿಷ್ಣ್ವಭಿಧಾ ಭವೇತ್ ॥
ಸರ್ವಚೇಷ್ಟಯಿತೃತ್ವಾಚ್ಚ ವಿಶಿಷ್ಟಬಲತಸ್ತಥಾ ।
ವಿಷ್ಣುರಿತ್ಯಭಿಧಾ ಮಹ್ಯಂ ಸಾ ನ ಯುಕ್ತಾ ದಿವೌಕಸಾಮ್ ॥
ಸ್ವತಂತ್ರತ್ವೇ ತತಃ ಸರ್ವೇ ಮದ್ವಶಾ ಏವ ನಾನ್ಯಥಾ ।
ತಸ್ಮಾದೇಷಾಂ ಪ್ರವೃತ್ತ್ಯರ್ಥಂ ಪ್ರವೇಕ್ಷ್ಯೇ ಸಹ ವಾಯುನಾ ॥
ಇತಿ ಮತ್ವಾ ವಿರಿಂಚಸ್ಯ ಶರೀರಂ ಪ್ರವಿವೇಶ ಸಃ ।

(ಐತರೇಯೋಪನಿಷದ್ಭಾಷ್ಯ = ಮಹಾಭೂತಿಭಾಷ್ಯ)

– ಬ್ರಹ್ಮಾದಿದೇವತೆಗಳಿಗೆ ಅಧಿಪತಿಯಾದ ಶ್ರೀಹರಿಯು (ಬ್ರಹ್ಮನ ಶರೀರದಲ್ಲಿ) ದೇವತೆಗಳು ಪ್ರವೇಶ ಮಾಡುವುದಕ್ಕಿಂತ ಮುಂಚೆಯೇ ಮುಂದೆ ಹೇಳುವ ಪ್ರಕಾರ ಇಚ್ಛಿಸಿದನು. ಬ್ರಹ್ಮಾದಿ-ದೇವತೆಗಳು ನನ್ನನ್ನು ಹೊರತೇ ಕ್ರಿಯೆ ಮೊದಲಾದವುಗಳಲ್ಲಿ ಸಮರ್ಥರಾಗಿದ್ದರೆ ನನಗೆ ವಿಷ್ಣುವೆಂಬ ಹೆಸರು ಕೂಡಲಾರದು. ವಿಶೇಷಕಾರವಾಗಿ ಸರ್ವರಿಗೂ ಚೇಷ್ಟಕನಾದುದರಿಂದಲೂ, ಹಾಗೆಯೇ ಅತಿಸಾಮರ್ಥ್ಯವಿದ್ದುದರಿಂದಲೂ ನನಗೆ ವಿಷ್ಣುವೆಂದು ಹೆಸರು. ದೇವತೆಗಳಿಗೆ ಸ್ವಾತಂತ್ರ್ಯವಿದ್ದರೆ ಆ ಹೆಸರು ನನಗೆ ಕೂಡಲಾರದು. ಆದುದರಿಂದ ಎಲ್ಲರೂ ನನಗೆ ಅಧೀನರಾಗಿರುತ್ತಾರೆ. ಬೇರೆ ರೀತಿಯಾಗಿ ಅಲ್ಲ. ಆದಕಾರಣ ಈ ದೇವತೆಗಳ ಪ್ರವೃತ್ತಿಗಾಗಿ ವಾಯುವಿನ ಜೊತೆಗೆ ಪ್ರವೇಶ ಮಾಡುವೆನು. ಆ ಹರಿಯು ಹೀಗೆ ಆಲೋಚಿಸಿ, ಬ್ರಹ್ಮನ ಶರೀರವನ್ನು ಶಿರಸ್ಸಿನಲ್ಲಿರುವ ಸುಷುಮ್ನಾನಾಡಿಯಿಂದ ಮೊದಲು ಬ್ರಹ್ಮವಾಯುಗಳೊಂದಿಗೆ ಪ್ರವೇಶಿಸಿದನು.

** ಮಹಾಭೂತಿಃ ಶ್ರುತಿಃ ಸ್ಯೈಷಾ ಮಹಾಭೂತಿರ್ಯತೋ ಹರಿಃ ।
ವಿಶೇಷೇಣಾತ್ರ ಕಥಿತಃ ಸರ್ವಜ್ಞಃ ಶಾಶ್ವತಃ ಪ್ರಭುಃ ॥ - ಇತಿ ಋಕ್ಸಂಹಿತಾಯಾಮ್ - ಐ.ಭಾಷ್ಯ.
– ಈ ವಾಕ್ಯ ಐತರೇಯೋಪನಿಷದ್ಭಾಷ್ಯವನ್ನು ಮಹಾಭೂತಿಭಾಷ್ಯ ಎಂದು ಕರೆಯುವುದಕ್ಕೆ ಉಪಯೋಗಿಯಾಗಿರುವ ವಾಕ್ಯ.

## ಪಿಪ್ಪಲಾಯನಮುನಿಗಳ ಉಪದೇಶ - ಜನಕರಾಜನಿಗೆ

** ಭಾಗವತಸಾರೋದ್ಧಾರ –

ಏವಮಾದರಜನನಾಯ ಬಿಂಬೋಪಾಸನಾಂ ಪ್ರಶಸ್ಯ ಬಿಂಬರೂಪಮುಪದಿಶತಿ – ಸ್ಥಿತೀತಿ ॥

ಬ್ರಹ್ಮವಿದಾಮಗ್ರೇಸರೇಣ ಜನಕೇನ ಸ್ವಯಂ ಬಿಂಬರೂಪಂ ವಿಜಾನತಾಪಿ ಲೋಕೋಪಕಾರಾಯ ಯೋಗೇಶ್ವರಾನ್ ಪ್ರತಿ ಪೃಷ್ಟಮ್ । ಯಥಾಹುಃ –

ನಾರಾಯಣಾಭಿಧಾನಸ್ಯ ಬ್ರಹ್ಮಣಃ ಪರಮಾತ್ಮನಃ ।
ನಿಷ್ಠಾಮರ್ಹಥ ನೋ ವಕ್ತುಂ ಯೂಯಂ ಹಿ ಬ್ರಹ್ಮವಿತ್ತಮಾಃ ॥ (11-3-34)

– ಪಿಪ್ಪಲಾಯನಮುನಿಗಳು ಜನಕರಾಜನಿಗೆ ಉಪದೇಶಮಾಡುತ್ತಾರೆ – ಸ್ಥಿತ್ಯುದ್ಭವ ಎಂದು. ಅದರ ಮೊದಲಿಗೆ ರಾಜನು ಈ ರೀತಿ ಅವರನ್ನು ಕುರಿತು ಹೇಳುವನು. ನಾರಾಯಣ ಎನ್ನುವ ಹೆಸರಿನ ವ್ಯಕ್ತಿಯೇ ಪರಮಾತ್ಮ ಪರಬ್ರಹ್ಮ. ಅವನು ಎಲ್ಲ ಜೀವರಿಗಿಂತ ಉತ್ತಮ ಹೇಗೆ ಎಂಬುದನ್ನು ಬ್ರಹ್ಮಜ್ಞಾನಿಗಳಾದ ನೀವು ನಮಗೆ ತಿಳಿಸಿರಿ ಎಂದು.

* ಏವಂ ಪೃಷ್ಟವತೇ ರಾಜ್ಞೇ ಬಿಂಬರೂಪಮುಚ್ಯತೇ । ಹೇ ನರೇಂದ್ರ । ಯಃ ಅಸ್ಯ ಜಗತಃ ಸ್ಥಿತ್ಯಾದಿ-ಹೇತುಃ । ಸ್ವಯಂ ನ ವಿದ್ಯತೇ ಹೇತುರ್ಯಸ್ಯ ಇತಿ ಅಹೇತುಃ । ಯಶ್ಚ ಸ್ವಪ್ನಾದಿಷು ಸನ್ನಪಿ ತತ್ಕೃತ-ಲೇಪಾಭಾವಾತ್ ಬಹಿರೇವ ।

ಅಥವಾ ಅವಸ್ಥಾತ್ರಯಾವಸ್ಥಿತತ್ವವತ್ ಅವಸ್ಥಾಂತರಸ್ಥಿತತ್ವಮಪಿ ಅಸ್ತೀತ್ಯಾಹ - ಬಹಿರಿತಿ ॥ ಬಹಿರ್ಮುಕ್ತೌ ಪ್ರಲಯೇ ಸನ್ನಿತಿ । ಹೃದಯಂ ಮನಃ ಯೇನ ಚ ದೇಹಾದೀನಿ ಸಂಜೀವಿತಾನಿ ಉಜ್ಜೀವಿತಾನ್ಯೇವ । ಚರಂತಿ ಸ್ವಸ್ವವ್ಯಾಪಾರಕ್ಷಮಾಣಿ ಭವಂತಿ । ತದೇವ ಬ್ರಹ್ಮ ನಾರಾ-ಯಣಾದಿಪದತಾತ್ಪರ್ಯವಿಷಯಭೂತಂ ಪರಂ ವಸ್ತು ವಿದ್ಧಿ - ಇತಿ ಯೋಜನಾ ।

ಇದಮುದಿತಂ ಭವತಿ - ಕ್ವಚಿನ್ನಾರಾಯಣನಾಮ್ನೋ ಭಗವದ್ರೂಪಸ್ಯ ಉಪಾಸ್ಯತಾ 'ನಾರಾ-ಯಣಂ ಮಹಾಜ್ಞೇಯಮ್' ಇತ್ಯಾದೌ ; ಕುತ್ರಚಿದ್ ಬ್ರಹ್ಮಪದಾಭಿಧೇಯಸ್ಯ 'ಬ್ರಹ್ಮವಿದಾಪ್ನೋತಿ ಪರಮ್' ಇತ್ಯಾದೌ । ಅನ್ಯತ್ರ ತು ಪರಮಾತ್ಮಾಭಿಧಾನಸ್ಯ 'ತಸ್ಯಾಃ ಶಿಖಾಯಾ ಮಧ್ಯೇ (ತು) ಪರಮಾತ್ಮಾ ವ್ಯವಸ್ಥಿತಃ' ಇತ್ಯಾದೌ ; ಏವಮನೇಕಾಭಿಧಾನಂ ಏಕಮೇವ ರೂಪಮನಂತ-ರೂಪಸ್ಯಾಪಿ ಭಗವತೋ ಬಿಂಬಸಂಜ್ಞಂ ವರ್ತತೇ ಇತಿ ಸಿದ್ಧಮ್ । ತಚ್ಚ ಕೀದೃಶಮಿತ್ಯಭಿ-ಪ್ರಾಯೇಣ ಪೃಷ್ಟೇ ಯೋ ಜಗಜ್ಜನ್ಮಾದಿಕಾರಣತಯಾ ಸರ್ವಶಾಸ್ತ್ರಪ್ರತಿಪಾದ್ಯಃ ಭಗವಾನ-ನಂತರೂಪೇಷ್ವಪಿ ಏತೈರೇವ ರೂಪವಿಶೇಷೈಃ ಮುಕ್ತಿಂ ದದಾಮೀತಿ ಸತ್ಯಸಂಕಲ್ಪಾನುಸಾರೇಣ ಸರ್ವೇಷು ಜೀವೇಷು ಸ್ಥಿತಃ ಅನಾದ್ಯನಂತಕಾಲೇಷ್ವಪಿ ಜಾಗ್ರದಾದಿತ್ರಿವಿಧಕಾಲೀನಭೋಗ-ವಿಶೇಷಂ ಕುರ್ವಾಣೋಽಪಿ ಸ್ವಾತಂತ್ರ್ಯೇಣ ನಿತ್ಯಾಲಿಪ್ತೋ ವಿಜಯತೇತರಾಮಿತ್ಯುತ್ತರಂ ವ್ಯಾ-ದತ್ತಮಿತಿ । ಅನೇಕ ಶಂಕಾತ್ರಯೀ ಕೀದೃಶಂ ತದ್ರೂಪಮಿತಿ ಶಂಕಾ ಪರಿಹೃತಾ - ಇತಿ ಜ್ಞೇಯಮ್ ।

ಈ ಶ್ಲೋಕದ ತಾತ್ಪರ್ಯವಿದು – ಕೆಲವು ಕಡೆ ನಾರಾಯಣನೆಂಬ ಭಗವದ್ರೂಪವು ಉಪಾಸ್ಯವಾಗಿದೆ. ಇದನ್ನು 'ನಾರಾಯಣಂ ಮಹಾಜ್ಞೇಯಂ' ಮುಂತಾದ ಕಡೆ ಕಾಣಬಹುದು. ಕೆಲವು ಕಡೆ ಬ್ರಹ್ಮ ಪದದಿಂದ ಹೇಳಲ್ಪಡುವವನು ಉಪಾಸ್ಯನಾಗಿದ್ದಾನೆ. ಇದು 'ಬ್ರಹ್ಮವಿದಾಪ್ನೋತಿ ಪರಮ್' ಮುಂತಾದ ಶ್ರುತಿಗಳಲ್ಲಿ ಕಾಣಬಹುದು. ಬೇರೆಕಡೆಯಾದರೋ ಪರಮಾತ್ಮನು ಉಪಾಸ್ಯನೆಂದು ಕಂಡಿದೆ. 'ತಸ್ಯಾಃ ಶಿಖಾಯಾಃ ಮಧ್ಯೇ (ತು) ಪರಮಾತ್ಮಾ ವ್ಯವಸ್ಥಿತಃ' ಎಂದು. ಈ ರೀತಿ ಅನೇಕ ಹೆಸರುಳ್ಳ ಬಿಂಬ ಎಂಬ ಹೆಸರುಳ್ಳದ್ದಾದ ಒಂದೇ ರೂಪವು ಅನಂತರೂಪನಾದ ಭಗವಂತನಿಗೆ ಇದೆ ಎಂಬುದು ಸಿದ್ಧ. ಅದು ಎಂತಹದ್ದು? ಎಂಬ ಅಭಿಪ್ರಾಯದಿಂದ ಕೇಳಿದ ಪ್ರಶ್ನೆಗೆ ಉತ್ತರವನ್ನು ಪಿಪ್ಪಲಾಯನರು ಹೀಗೆ ತಿಳಿಸಿದ್ದಾರೆ – ಯಾರು ಜಗತ್ತಿನ ಉತ್ಪತ್ತಿ ಸ್ಥಿತಿ ಮೊದಲಾದವುಗಳಿಗೆ ಕಾರಣನಾಗಿ ಸಕಲಶಾಸ್ತ್ರಗಳಿಂದ ಪ್ರತಿಪಾದಿಸಲ್ಪಟ್ಟಿರುವ ಭಗವಂತನಿದ್ದಾನೋ ಅವನಿಗೆ ಅನಂತರೂಪಗಳಿದ್ದರೂ ಇಷ್ಟೇ ರೂಪಗಳಿಂದ ಮುಕ್ತಿಯನ್ನು ಕೊಡುತ್ತೇನೆ ಎಂಬ ಸತ್ಯಸಂಕಲ್ಪಕ್ಕೆ ಅನುಸಾರವಾಗಿ ಎಲ್ಲ ಜೀವರುಗಳಲ್ಲಿ ಇದ್ದಾನೆ. ಈ ರೀತಿ ಇದ್ದು ಅನಾದ್ಯನಂತಕಾಲಗಳಲ್ಲಿಯೂ ಜಾಗ್ರತ್ ಮೊದಲಾದ ಮೂರು ಕಾಲದಲ್ಲಿಯೂ ಭೋಗವನ್ನು ಮಾಡುತ್ತಿದ್ದರೂ ಸ್ವತಂತ್ರವಾಗಿ ನಿರ್ಲಿಪ್ತನಾಗಿ ಶೋಭಿಸುತ್ತಿದ್ದಾನೆ - ಎಂದು.

## ಮೂರನೆಯ ಬಿಂಬಲಕ್ಷಣ

(ಲಘುರಸರಂಜನೀ) – ತಥಾ 'ದೇಹೇಂದ್ರಿಯಾದಿಸರ್ವಪ್ರೇರಕತಯಾ ಸರ್ವಜೀವಹೃದಯಗುಹಾ-ನಿವಿಷ್ಟತ್ವಂ' ಬಿಂಬರೂಪಲಕ್ಷಣಮ್ । ಯಥೋಕ್ತಂ 'ಗುಹಾಂ ಪ್ರವಿಷ್ಟೌ' ಇತಿ ಸೂತ್ರೇ । 'ಗುಹಾಂ ಪ್ರವಿಷ್ಟೌ ಪಿಬಂತೌ ವಿಷ್ಣುರೂಪೇ ಏವ ।

'ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ ।
ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್ ॥ – (ಬ್ರ.ಸೂ.ಭಾ. – 1.2.11)
ಇತ್ಯಾದಿ ತದ್ಭಾಷ್ಯೇ ಚ ।

'ಜ್ಞಾನಂ ವಿಶುದ್ಧಂ ಪರಮಾರ್ಥಮೇಕಮನಂತರಂ ನ ಬಹಿರ್ಬ್ರಹ್ಮ ಸತ್ಯಮ್' ।
ಪ್ರತ್ಯಕ್ ಪ್ರಶಾಂತಮ್ (ಭಗವಚ್ಛಬ್ದವಾಚ್ಯಂ ಯದ್ವಾಸುದೇವಂ ಕವಯೋ ವದಂತಿ)
– (ಭಾ. 5-12-11)

'ತ್ವಂ ಪ್ರತ್ಯಗಾತ್ಮನಿ ಸದಾ ಭಗವತ್ಯನಂತ ಆನಂದಮಾತ್ರ ಉಪಪನ್ನಸಮಸ್ತಶಕ್ತೌ'
(ಭಕ್ತಿಂ ವಿಧಾಯ ಪರಮಾಂ ಶನಕೈರವಿದ್ಯಾಗ್ರಂಥಿಂ ಬಿಭೇತ್ಸ್ಯಸಿ ಮಾಮಹಮಿತಿ ಪ್ರರೂಢಾಮ್ ॥)
– (ಭಾಗ.4-11-60)

ಇತಿ ಭಾಗವತಸಾರೋದ್ಧಾರೇ ತಸ್ಮಿನ್ನೇವ ಪ್ರಕರಣೇ । ಪ್ರತ್ಯಕ್-ಪ್ರತ್ಯಗಾತ್ಮಪದಾಭ್ಯಾಂ ಚ । ಇದಮಪಿ ಲಕ್ಷಣಂ ಜಿಜ್ಞಾಸ್ಯಬ್ರಹ್ಮಣ ಉಚ್ಯತೇ ತೈತ್ತಿರೀಯೇ ಬ್ರಹ್ಮವಲ್ಲ್ಯಾಮ್ –

'ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್' ಇತಿ ।

ಯಥೋಕ್ತಮಾನಂದಮಯನಯಸುಧಾಯಾಮ್ – 'ಯೋ ವೇದ' ಇತಿ ದ್ವಿತೀಯತಂಕೋ-ತ್ತರಮ್ । ಪರಿಪೂರ್ಣಪರಿಮಾಣಮಪಿ ಶಕ್ತಿವಶಾದ್ ಭಕ್ತಾನುಕಂಪಯಾ ಅಲ್ಪಪರಿಮಾಣಂ ಪ್ರಕಟಯತ್ ಸರ್ವಜೀವತದುಪಕಾರಿಕಾರ್ಯಕಾರಣಪ್ರೇರಕತ್ವೇನ ಸಕಲಹೃದಯಗುಹಾವಸ್ಥಿತಂ ಜ್ಞೇಯಮಿತಿ – ಇತಿ ।

ತಥಾ ಅಸ್ಮಿನ್ನೇವ ಭಾಗವತಸಾರೋದ್ಧಾರವಾಕ್ಯೇ 'ಬ್ರಹ್ಮ ಸತ್ಯಮ್' ಇತಿ 'ಜ್ಞಾನಂ ವಿಶುದ್ಧಮ್' ಇತಿ 'ಭಗವತಿ ಅನಂತ' ಇತಿ ಚ ಸತ್ಯತ್ವಾದೀನಿ ಬಿಂಬಲಕ್ಷಣಾನ್ಯುಕ್ತಾನಿ । ಇಮಾನ್ಯಪಿ ಲಕ್ಷಣಾನಿ ಜಿಜ್ಞಾಸ್ಯಬ್ರಹ್ಮಣ ಉಕ್ತಾನಿ । 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತಿ । ಏವಂ ನಾರಾಯಣೇಽಪೀಮಾನಿ ಬಿಂಬಲಕ್ಷಣಾನಿ ಸಂತ್ಯೇವ । ನಾರಾಯಣಶಬ್ದಸ್ಯ ಬ್ರಹ್ಮಶಬ್ದವ್ಯಾಖ್ಯಾನತ್ವೇನ ತತ್ಸಮಾನಾರ್ಥತ್ವಾತ್ ।

''ಅತೋ ನಾರಾಯಣಸ್ಯೈವ ಜಿಜ್ಞಾಸಾ ಅತ್ರ ವಿಧೀಯತೇ'' (ಅನುವ್ಯಾ. 1.1–ಶ್ಲೋ84)

– ಇತ್ಯನುವ್ಯಾಖ್ಯಾನೇ ನಾರಾಯಣಸ್ಯೈವ ಸ್ಪಷ್ಟಜಿಜ್ಞಾಸ್ಯತ್ವವಚನಾಚ್ಚ ।

ಬಿಂಬದ ಇನ್ನೊಂದು ಲಕ್ಷಣ ಹೀಗಿದೆ – 'ದೇಹೇಂದ್ರಿಯಾದಿಸರ್ವಪ್ರೇರಕತಯಾ ಸರ್ವಜೀವ-ಹೃದಯಗುಹಾನಿವಿಷ್ಟತ್ವಂ' ಎಂದು. ದೇಹ ಇಂದ್ರಿಯಾದಿ ಎಲ್ಲ ವಸ್ತುಗಳಲ್ಲಿ ಪ್ರೇರಕನಾಗಿ ಇದ್ದು ಎಲ್ಲ ಜೀವರ ಹೃದಯಗುಹೆಯಲ್ಲಿ ನೆಲೆಸಿರುವವನು ಎಂದು. ಇದನ್ನು 'ಗುಹಾಂ ಪ್ರವಿಷ್ಟೌ ಆತ್ಮಾನೌ ಹಿ ತದ್ದರ್ಶನಾತ್' (ಬ್ರ.ಸೂ.1/2/11) ಎಂಬಲ್ಲಿ ತಿಳಿಸಿದ್ದಾರೆ. "ಹೃದಯಗುಹೆಯಲ್ಲಿ ಪ್ರವೇಶಮಾಡಿ ಕರ್ಮಫಲಗಳನ್ನು ಅನುಭವಿಸುತ್ತಿರುವ ಆತ್ಮಾ, ಅಂತರಾತ್ಮಾ ಎಂಬ ಎರಡು ರೂಪಗಳು ವಿಷ್ಣು-ರೂಪಗಳೇ ಆಗಿವೆ. ಹರಿಯು ಒಬ್ಬನೇ ಎರಡಾಗಿ ಇದ್ದು ಹೃದಯದಲ್ಲಿ ಇದ್ದವನಾಗಿ ನಿತ್ಯವೂ ಕರ್ಮಜನ್ಯವಾದ ಫಲವನ್ನು ಭೋಗಿಸುತ್ತಾನೆ" ಎಂದು ಬ್ರಹ್ಮಸೂತ್ರಭಾಷ್ಯದಲ್ಲಿಯೂ ಹೇಳಿದ್ದಾರೆ.

– ನಾರಾಯಣನನ್ನು ತಿಳಿಯಬೇಕಾದದ್ದು ಹೇಗೆ ಎನ್ನುವುದನ್ನು ಈ ಶ್ಲೋಕದಲ್ಲಿ ವಿವರಿಸಿದ್ದಾರೆ. ನಾರಾಯಣನೆಂದರೆ ಹರಿಯೇ ವಾಸುದೇವನೇ ಆಗಿರುವನು. ಆ ವಾಸುದೇವನು ಭಗವಾನ್ ಎಂಬ ಶಬ್ದದಿಂದ ಕರೆಸಿಕೊಳ್ಳಲ್ಪಡುವನು. ಇವನ ಶರೀರ ಜ್ಞಾನಾನಂದಮಯವಾದದ್ದು. ಶುದ್ಧವಾಗಿದೆ. ಸರ್ವೋತ್ತಮನಾಗಿದ್ದಾನೆ. ತನ್ನ ಗುಣಗಳು ಹಾಗೂ ಕ್ರಿಯೆಗಳೊಂದಿಗೆ ಭೇದರಹಿತನು. ಸಕಲರಲ್ಲಿ ನೆಲೆಸಿರುವನು. ಹಾಗೆ ಹೊರಗಡೆಯೂ ಇದ್ದಾನೆ. ಇನ್ನು ಸತ್ಯನಾಗಿದ್ದಾನೆ. ಸುಖರೂಪಿಯಾಗಿದ್ದಾನೆ.

ಅವಿದ್ಯೆಯೆಂಬ ಗಂಟನ್ನು ಭೇದಿಸಬೇಕಾದರೆ ಇದು ಅತ್ಯಾವಶ್ಯಕ. ಅವಿದ್ಯೆಯಾದರೋ ಭೇದ್ಯವೇ ಆಗಿದೆ. ಏಕೆಂದರೆ ಅದರಿಂದಾಗಿ ನಾನು ನನ್ನದು ಎಂಬ ಅಭಿಮಾನ ಉಂಟಾಗುವುದು. ಇದರ ಭೇದ ಭಗವಂತನಲ್ಲಿ ಮಾಡುವ ಪರಮಭಕ್ತಿಯಿಂದಲೇ ಸಾಧ್ಯ. ಆ ಭಗವಂತನಾದರೋ ನಿನ್ನ ಒಳಗಡೆಯೇ ಇದ್ದಾನೆ. ಅವನಲ್ಲಿ ಸಕಲಶಕ್ತಿಗಳೂ ಇವೆ.

ಇನ್ನು ಭಾಗವತಸಾರೋದ್ಧಾರದ ಬಿಂಬೋಪದೇಶಪ್ರಕರಣದಲ್ಲಿ - ಪ್ರತ್ಯಕ್ ಹಾಗೂ ಪ್ರತ್ಯಗಾತ್ಮಾ ಎಂಬ ಪದಗಳಿಂದ ಈ ಅಂಶವನ್ನೇ ಸೂಚಿಸಿದ್ದಾರೆ. ಇನ್ನು ಈ ಲಕ್ಷಣವು ಕೂಡ ಜಜ್ಞಾಸ್ಯಬ್ರಹ್ಮನಿಗೆ ಇದೆ ಎಂದು ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ 'ಯೋ ವೇದ ನಿಹಿತಂ ಗುಹಾಯಾಮ್ ಪರಮೇ ವ್ಯೋಮನ್' ಎಂಬಲ್ಲಿ ಹೇಳಿದ ವಿಷಯವನ್ನು ಆನಂದಮಯಾಧಿಕರಣದ ನ್ಯಾಯಸುಧೆಯಲ್ಲಿ ವಿವರಿಸಿದ್ದಾರೆ. ಅದು ಹೀಗೆ – ಯೋ ವೇದ ಎಂಬ ಈ ವಾಕ್ಯವು ಎಲ್ಲಿ ಇದ್ದಾನೆ ಎಂಬ ಎರಡನೆಯ ಪ್ರಶ್ನೆಗೆ ಉತ್ತರವಾಗಿ ಹೊರಟಿದೆ. ಪರಿಪೂರ್ಣವಾದ ಪರಿಮಾಣವಿದ್ದರೂ ಎಲ್ಲ ಕಡೆ ವ್ಯಾಪ್ತನಾಗಿ-ದ್ದರೂ ಎಂದರ್ಥ. ತನ್ನ ಅಚಿಂತ್ಯಾದ್ಭುತವಾದ ಶಕ್ತಿಯಿಂದ ಭಕ್ತರ ಮೇಲಿನ ದಯೆಯಿಂದ ಚಿಕ್ಕ ಪರಿಮಾಣವುಳ್ಳವನಾಗಿ ಪ್ರಕಟನಾಗುತ್ತಾ ಎಲ್ಲ ಜೀವರಿಗೆ ಹಾಗೂ ಆ ಜೀವರಿಗೆ ಉಪಕಾರಿಯಾದ ಎಲ್ಲ ಕಾರ್ಯಕಾರಣವಸ್ತುಗಳಿಗೆ ಪ್ರೇರಕನಾಗಿ ಹೃದಯ ಗುಹೆಯಲ್ಲಿ ಇದ್ದಾನೆ ಎಂದು ತಿಳಿಯಬೇಕು. ಹಾಗೇ ಇದೇ ಭಾಗವತಸಾರೋದ್ಧಾರದ ವಾಕ್ಯದಲ್ಲಿ ಬ್ರಹ್ಮ ಸತ್ಯನೆಂದೂ  ಜ್ಞಾನವು ವಿಶುದ್ಧಂ ಎಂದೂ ಭಗವತಿ ಅನಂತೇ ಎಂದೂ ಸತ್ಯತ್ವ ಮೊದಲಾದವುಗಳನ್ನು ಬಿಂಬನ ಲಕ್ಷಣ ಎಂದಿದ್ದಾರೆ. ಈ ಲಕ್ಷಣಗಳು ಜಜ್ಞಾಸ್ಯಬ್ರಹ್ಮನಿಗೂ ಹೇಳಲ್ಪಟ್ಟಿದೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದಾಗಿ. ಈ ಬಿಂಬದ ಲಕ್ಷಣಗಳು ನಾರಾಯಣನಲ್ಲಿಯೂ ಇವೆ. ಏಕೆಂದರೆ ನಾರಾಯಣಶಬ್ದವು ಬ್ರಹ್ಮಶಬ್ದದ ವ್ಯಾಖ್ಯಾನವಾಗಿ ಸಮಾನಾರ್ಥಕವಾಗಿ ಇರುವುದರಿಂದ. ಅಲ್ಲದೆ 'ಅತೋ ನಾರಾಯಣಸ್ಯೈವ ಜಜ್ಞಾಸಾತ್ರ ವಿಧೀಯತೇ' ಎಂಬ ಅನುವ್ಯಾಖ್ಯಾನದ ಭಾಗದಲ್ಲಿ ನಾರಾಯಣನೇ ಜಜ್ಞಾಸ್ಯನು ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

** – ಏಕ ಏವ ಹರಿಃ, ಆತ್ಮಾಂತರಾತ್ಮಾ ಇತಿ ದ್ವಿಧಾ ರೂಪದ್ವಯೇನ ಹೃದಯೇ ಸ್ಥಿತಃ, ನಿವಿಷ್ಟಃ 'ಚಕ್ಷುರಾದೀಂದ್ರಿಯೇಷು' ಇತಿ ಶೇಷಃ । ಕರ್ಮಜಂ ಜೀವಕೃತಕರ್ಮಜನ್ಯಂ ರಸಂ ಫಲಂ ಪಿಬತಿ ಭುಂಕ್ತೇ – ಇತಿ ಸ್ಮೃತ್ಯರ್ಥಃ । (ಸೂತ್ರಾರ್ಥಮಣಿಮಂಜರೀ)

## ರಹೂಗಣರಾಜನ ಪ್ರಶ್ನೆಗೆ ಜಡಭರತರ ವಾಣಿ

** 'ಜ್ಞಾನಂ ವಿಶುದ್ಧಂ' - ಕ್ವ ಚಾಸ್ತೀತಿ ದಶಮೀಂ ಶಂಕಾಂ ಪರಿಹರ್ತುಮಾಹ - ಜ್ಞಾನಮಿತಿ ॥ ಅವಧೂತೇನ ಅವಧೂತೇನ ಮಮ ಶಿಬಿಕಾಭರ್ತೃತ್ವಂ ಮಾರ್ಗಗಂತೃತ್ವಾದಿಕಂ ನ ಚಾಸ್ತಿ । ಕಿಂತು ಮದಂತರ್ಗತಸ್ಯ ಹರೇರೇವ ಇತ್ಯಾಶಯೇನ –

'ತ್ವಯೋದಿತಂ ವ್ಯಕ್ತಮ್ ಅವಿಪ್ರಲಬ್ಧಂ ಭರ್ತುಃ ಸ ಮೇ ಸ್ಯಾದ್ಯದಿ ವೀರ ಭಾರಃ ।
ಗಂತುರ್ಯದಿ ಸ್ಯಾದಧಿಗಮ್ಯಮಧ್ವಾ (ಪೀವೇತಿ ರಾಶೌ ನ ವಿದಾಂ ಪ್ರವಾದಃ) (5-10-10)
ಇತ್ಯಾದಿನಾ

'ಅಹೋ ಕಷ್ಟಂ ಭ್ರಾತಃ ವ್ಯಕ್ತಮ್ ಉರುಪರಿಶ್ರಾಂತೋ ದೀರ್ಘಮಧ್ವಾನಮೇಕ ಏವ ಊಹಿವಾನ್ ಸುಚಿರಂ' (5-10-4) (ನಾತಿಪೀವಾ ನ ಸಂಹನನಾಂಗೋ ಜರಸಾ ಚೋಪದ್ರುತೋ ಭವಾನ್ ಸಖೇ ನೋ ಏವಾಪರ ಏತೇ ಸಂಘಟ್ಟಿನ ಇತಿ ಬಹು ವಿಪ್ರಲಬ್ಧೋಽಪ್ಯವಿದ್ಯಯಾ ರಚಿತದ್ರವ್ಯಗುಣ-ಕರ್ಮಾಶಯಸ್ವಚರಮಕಲೇವರೇಽವಸ್ತುನಿ ಸಂಸ್ಥಾನವಿಶೇಷೇಽಹಮ್ಮಮೇತ್ಯನಧ್ಯಾರೋಪಿತ-ಮಿಥ್ಯಾಪ್ರತ್ಯಯೋ ಬ್ರಹ್ಮಭೂತಸ್ತೂಷ್ಣೀಂ ಶಿಬಿಕಾಂ ಪೂರ್ವವದುವಾಹ) ಇತ್ಯಾದ್ಯುಪಹಾಸ-ಪೂರ್ವಕಂ ರಾಜ್ಞಾ ಉಕ್ತಸ್ಯ ಉತ್ತರೇ ದತ್ತೇ ಸತಿ ರಾಜ್ಞಾ ವಿಶೇಷಜ್ಞೇ ಗುರೌ ಲಬ್ಧೇ ಸತಿ ವಿಶೇಷೋ ವಿಜ್ಞೇಯ ಏವ - ಇತಿ ಮನ್ವಾನೇನ ವಿಶೇಷವಿವಿತ್ಸಯಾ 'ಭರ್ತುಃ ಸ ಮೇ ಸ್ಯಾದ್ ಯದಿ ವೀರ ಭಾರಃ' ಇತ್ಯಾದಿನಾ ತ್ವಯೋದಿತೇ ಮಮ ಶಿಬಿಕಾಭರ್ತೃತ್ವಂ ಗಂತೃತ್ವಾದಿಕಂ ಚ ನಾಸ್ತೀತ್ಯಾದಿ-ರೂಪೇ ಅರ್ಥೇ ಮೇ ಮನೋ ಭ್ರಮತಿ ಯತೋ ಹರಿರ್ಜೀವೇ ಸ್ಥಿತಶ್ಚೇತ್ ತಸ್ಯ ಹೃದ್ಯೇವ ವರ್ತತೇ । 'ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ' ಇತಿ ಶ್ರುತೇಃ । ಬಹಿರೇವ ಚೇತ್ ಮಹಾನ್ ಸಂತೋಷಃ । ಉಭಯಥಾಪಿ ಹರೇಃ ಶಿಬಿಕಾಭರ್ತೃತ್ವಾದ್ಯಯೋಗ ಇತ್ಯಭಿಪ್ರಾಯೇಣ 'ನ ಹ್ಯಂಜಸಾ ತತ್ತ್ವವಿಮರ್ಶನಾಯ ಭವಾನಮುಷ್ಮಿನ್ ಭ್ರಮತೇ ಮನೋ ಮೇ' ಇತ್ಯನೇನ ಪ್ರಶ್ನೇ ಕೃತೇ ಸತಿ,

ಉತ್ತರಮುಕ್ತಮವಧೂತೇನೇದಮ್। ಯತ್ಪರಮಾರ್ಥಂ ಸರ್ವೋತ್ತಮಂ ಏಕಂ ವಿಶುದ್ಧಜ್ಞಾನರೂಪಂ ಸತ್ಯಂ ನಿತ್ಯಂ ಪ್ರಶಾಂತಂ ಬ್ರಹ್ಮ ಬ್ರಹ್ಮಪದವಾಚ್ಯಮ್ । ತಥಾ ಭಗವಚ್ಛಬ್ದವಾಚ್ಯಂ ವಾಸುದೇವಪದಾಭಿಧೇಯಂ ಚ ವಸ್ತು ಕವಯಃ ವದಂತಿ ತದ್ವಸ್ತು ಬಹಿರ್ಜೀವಸ್ಯ ರೂಪಾದಿತಿ ನ ಮಂತವ್ಯಮ್ । ನಾಪಿ ಅಂತಃ ಜೀವಹೃದಯಾಂತರೇವ ಸ್ಥಿತ್ವಾ ವಿಷಯಭೋಗಂ ಕುರ್ವದಿತ್ಯು-ಕ್ತಮ್ - ಅನಂತರಮಿತಿ ॥ ಕಥಮವಸ್ಥಾನಂ ಬಿಂಬಸ್ಯೇತಿ ತೇನ ವಿಶೇಷತೋ ವಿವಿತ್ಸಿತಮರ್ಥಂ ರಹಸ್ಯತಯಾ ಅವಕ್ತವ್ಯಮಪಿ ಶಿಷ್ಯೇ ಕರುಣಯಾ ದರ್ಶಯತಿ — ಪ್ರತ್ಯಗಿತಿ ॥ ಜೀವಬಿಂಬಮಿತಿ ।

ಇದಮುದಿತಂ ಭವತಿ — ಪ್ರತ್ಯಕ್-ಶಬ್ದೋ ಜೀವಪರಃ ಪ್ರಸಿದ್ಧಃ । ತತ್ಕುತಃ ಪ್ರತ್ಯಗಿತಿ ಸರ್ವದಾ ಅನಾದ್ಯನಂತಕಾಲೇಷ್ವಪಿ ಕದಾಚಿದಪಿ ಕುತಶ್ಚಿತ್ ಕಾರಣಾದಪಿ ಯನ್ನ ಬಹಿರ್ನಿಃಸರತಿ ತದುಚ್ಯತೇ । ಅಂತರೇವ ಸ್ಥಿತಂ ವಸ್ತು ಪ್ರತ್ಯಕ್-ಪದಾಭಿಧೇಯಮಿತಿ ಯಾವತ್ । ತಾದೃಶಂ ಚ ತದ್ಬಿಂಬರೂಪ-ಮೇವ ತಸ್ಯ ಚ ವಿಯೋಗೇ ಜೀವಸ್ವರೂಪಸ್ಯ ಅನವಸ್ಥಾನಾಪತ್ತೇಃ । ತಚ್ಚ ಜೀವಸ್ಯ 'ಶಿರಸಿ ಶಿರಃ, ಮುಖೇ ಮುಖಮ್' ಇತ್ಯಾದಿಕ್ರಮೇಣ ಸಮಾನಾಕೃತಿತಯಾ ಸರ್ವತ್ರ ವಿದ್ಯಮಾನಮ್ । ಸ ತು

ಜೀವಾವಯವೇಂದ್ರಿಯಾದ್ಯಂತಃಸ್ಥಿತ್ಯೈಃ ಸ್ವರೂಪಭೂತ್ಯೈಃ ಸ್ವಾವಯವಾದಿಭಿರ್ಭೋಗಾನ್ ಅನುಭವತಿ। ತತಃ ತತ್ಸನ್ನಿಧಾನಾತ್ ಪ್ರತ್ಯಗಿತಿ ಪ್ರಸಿದ್ಧೋ ಜೀವಃ। ಯಥಾ ಆತ್ಮನಃ ಜೀವಸ್ಯ ಸನ್ನಿಧಾನಾತ್ ದೇಹೋಽಪಿ ಆತ್ಮೇತಿ ವ್ಯವಹ್ರಿಯತೇ। ಜೀವಾಂತರೇವ (ಚ) ವ್ಯಾಪ್ಯ ವಿದ್ಯಮಾನತಯಾ ಪ್ರತ್ಯಕ್-ಪದಬೋಧ್ಯೇ ಜೀವಬಿಂಬರೂಪೇ ಪರಮಾತ್ಮನ್ಯೇವ ಶಿಬಿಕಾಭರ್ತೃತ್ವಾದಿಕಂ ಸುಯೋಗಮಿತಿ ಸ್ವಪ್ರಯುಕ್ತವಾಕ್ಯಾಭಿಪ್ರಾಯೋದ್ಘಾಟನೇನ ರಾಜ್ಞೋ ಬಿಂಬಾವಸ್ಥಾನಂ ಕಥಮಿತಿ ವಿವಕ್ಷಿತಾರ್ಥಸ್ಯ ಲಾಭ ಇತಿ । ಅತ್ರಾನಂತರಂ ನ ಬಹಿಶ್ಚ ಕಿಂತು ಪ್ರತ್ಯಕ್ ಜೀವಸ್ವರೂಪಸ್ಯ ಅಂತರೇವ ವ್ಯಾಪ್ಯ ವಿದ್ಯಮಾನಮ್ ಇತ್ಯೇವಾಲಂ ತಾವತ್ಯೆವ ವಿವಕ್ಷಿತಾರ್ಥಲಾಭಸಂಭವಾತ್ । ತಥಾಪಿ ಈದೃಶಸ್ಯ ಸರ್ವದಾ ಜಾಗ್ರದಾದ್ಯವಸ್ಥಾವಸ್ಥಿತಭೋಗಭೋಕ್ತುಃ ಮುಕ್ತಿದಾನಸಾಮರ್ಥ್ಯಂ ಕಥಮಿತಿ ಶಂಕಾ-ಪರಿಹಾರಾಯ 'ಜ್ಞಾನಂ ವಿಶುದ್ಧಂ' ಇತ್ಯಾದ್ಯಭಿಹಿತಮಿತಿ । ಪರಬ್ರಹ್ಮಣಃ ಮುಕ್ತಿದಾತುರೇವ ಜೀವೇ ಕೃಪಯೈವ ಅತ್ರಾವಸ್ಥಾನಂ ನ ಜೀವತೌಲ್ಯೇನೇತಿ ತತ್ಪರಿಹಾರಃ । ಅನೇನ ಕ್ವ ಚಾಸ್ತೀತಿ ದಶಮೀಶಂಕಾ ಪರಿಹೃತಾ ಭವತಿ । ತತ್ಪ್ರಕಾರಸ್ಯ ಸ್ಫುಟಂ ಪ್ರದರ್ಶಿತತ್ವಾದಿತಿ ॥

— (ಭಾಗವತಸಾರೋದ್ಧಾರ ಬಿಂಬೋಪದೇಶಪ್ರಕರಣ)

— ಅವಧೂತರಾದ ಜಡಭರತರು ರಹೂಗಣರಾಜನಿಗೆ ಬಿಂಬರೂಪವನ್ನು ತಿಳಿಸಿ ಹೇಳುವರು. ಬಿಂಬನು ಎಲ್ಲಿರುವನು? ಎಂಬ ಹತ್ತನೆಯ ಪ್ರಶ್ನೆಗೆ ಉತ್ತರವನ್ನು ಹೇಳುವರು —

(ಜ್ಞಾನಮಿತಿ) — ಮೇನೆಯ ಭಾರವನ್ನು ಹೊತ್ತವನು ನಾನಲ್ಲ. ದಾರಿಯಲ್ಲಿ ಮುನ್ನಡೆಯುವವನೂ ನಾನಲ್ಲ. ಆದರೆ ಈ ಎಲ್ಲ ಕಾರ್ಯಗಳನ್ನು ಮಾಡುವವನು ನನ್ನಲ್ಲಿ ಅಂತರ್ಯಾಮಿಯಾಗಿರುವ ಶ್ರೀಹರಿಯೇ ಆಗಿರುವನು — ಈ ಅಭಿಪ್ರಾಯವನ್ನು ಸೂಚಿಸುವ ಜಡಭರತನ ಮಾತಿದು. 'ಅಯ್ಯೋ ತಮ್ಮಾ। ಬಹಳ ದಣಿದುಕೊಂಡಿರುವಿ. ದೂರದ ದಾರಿ. ಒಬ್ಬನೇ ಮೇನೆಯನ್ನು ಹೊತ್ತಿರುವಿ'. ರಹೂಗಣ ಆಡಿದ ಉಪಹಾಸದ ಮಾತಿಗೆ ಜಡಭರತರು ಕೊಟ್ಟ ಉತ್ತರವಿದು. 'ತ್ವಯೋದಿತಂ ... ಸ್ಯಾದಧಿಗಮ್ಯಮಧ್ವಾ' (5-10-9) 'ರಾಜನಾದ ನಿನ್ನ ಭಾರವನ್ನು ನಾನೇ ನಿಜವಾಗಿಯೂ ಹೊರುತ್ತಿದ್ದರೆ, ಹಾಗೂ ಮೇನೆಯನ್ನು ಹೊತ್ತು ನಾನೇ ನಿಜವಾಗಿಯೂ ನಡೆಯುತ್ತಿದ್ದರೆ ನಿನ್ನ ಮಾತು ಸ್ಪಷ್ಟವೂ ನಿರ್ವಂಚಕವೂ ಆಗುತ್ತಿತ್ತು.

ಜಡಭರತನ ಈ ಅರ್ಥಗರ್ಭಿತವಾದ ಮಾತುಗಳಿಂದ ರಹೂಗಣರಾಜನಿಗೆ ಜ್ಞಾನೋದಯ-ವಾಗುವುದು. "ಶ್ರೀಹರಿಕೃಪೆಯಿಂದ ಬ್ರಹ್ಮತತ್ವವನ್ನು ವಿಶೇಷವಾಗಿ ಅರಿತುಕೊಂಡಿರುವ ಗುರುವು ಲಭಿಸಿದ ಕಾಲಕ್ಕೆ, ಬ್ರಹ್ಮಜ್ಞಾನವನ್ನು ಅವನಿಂದ ವಿಶೇಷವಾಗಿ ಕಲಿತುಕೊಳ್ಳಬೇಕು" ಎಂಬುದು ರಾಜನಿಗೆ ಗೊತ್ತಿದ್ದರಿಂದ ಜಡಭರತರಿಂದ ಆಧ್ಯಾತ್ಮದ ಅಂತರಂಗವನ್ನು ತಿಳಿದುಕೊಳ್ಳಲು ರಾಜನು ಬಯಸಿದನು.

"ನಾನೇ ನಿಜವಾದ ಭಾರವನ್ನು ಹೊತ್ತಿದ್ದರೆ" ಎಂಬ ಜಡಭರತನ ಮಾತುಗಳನ್ನು "ಮೇನೆಯನ್ನು ಹೊರುವುದು, ಮುಂದೆ ದಾರಿ ನಡೆಯುವುದು ಇವೆಲ್ಲವೂ ನನ್ನ ಕೃತಿಗಳೇ ಅಲ್ಲ ಅಂತರ್ಯಾಮಿಯಾದ ಶ್ರೀಹರಿಯೇ ಎಲ್ಲ ಕೃತಿಗಳನ್ನು ನನ್ನಿಂದ ಮಾಡಿಸುವನು" ಮುಂತಾದ ಮಾತುಗಳನ್ನೂ ಕೇಳಿ ರಾಜನ ಮನಸ್ಸು ವಿಚಾರದಿಂದ ಕೂಡುತ್ತದೆ. ನೀನು ಹೇಳುವಂತೆ ಶ್ರೀಹರಿಯು ಜೀವನಲ್ಲಿ, ಅಂತರ್ಯಾಮಿಯಾಗಿ ನಿಜವಾಗಿಯೂ, ನೆಲೆಸಿದ್ದರೆ ಹೃದಯದಲ್ಲಿಯೇ ಆತ ನೆಲೆಸಿರಬೇಕು. ಏಕೆಂದರೆ 'ಅಂಗುಷ್ಠಮಾತ್ರಃ ಪುರುಷಃ ಮಧ್ಯೇ ಆತ್ಮನಿ ತಿಷ್ಠತಿ' ದೇಹದ ಮಧ್ಯಪ್ರದೇಶದಲ್ಲಿ ಪರಮಪುರುಷನು ಹೆಬ್ಬೆಟ್ಟಿನಷ್ಟು ಗಾತ್ರದವನಾಗಿ ನೆಲೆಸಿರುವನು ಎಂದೇ ಶ್ರುತಿಯು ಹೇಳುವುದು. ಪರಮಾತ್ಮನು ದೇಹದ ಹೊರಗೆ ಇರುವನೆಂದರೆ ಅದಂತೂ ಹೆಚ್ಚಿನ ಸಂತೋಷ. ಪರಮಾತ್ಮನು ಹೃದಯದಲ್ಲಿ ಅಂಗುಷ್ಠಪ್ರಮಾಣದ ಗಾತ್ರವುಳ್ಳವನಾಗಿರಲಿ, ಇಲ್ಲವೇ ದೇಹದ ಹೊರಗೇ ಇರಲಿ ಇವೆರಡರಲ್ಲಿ ಏನೇ ಇದ್ದರೂ, ಮೇನೆಯನ್ನು ಹೊರುವ ಮತ್ತು ಹೊತ್ತು ಮುಂದೆ ಸಾಗುವ ಕೃತಿಗಳು ಪರಮಾತ್ಮನ ಕೃತಿಗಳೆಂದು ಹೇಳಲು ಬಾರದು. ನನಗೆ ಹೀಗೆ ಅನಿಸುವುದರಿಂದ ಮೇನೆ ಹೊರುವುದು ಹೊತ್ತು ಮುಂದೆ ಸಾಗುವುದು ಇತ್ಯಾದಿಗಳೆಲ್ಲ ಅಂತರ್ಯಾಮಿಯಾದ ಪರಮಾತ್ಮನೇ ಮಾಡುವನೆಂಬ ನಿನ್ನ ಮಾತುಗಳಲ್ಲಿ ಹುದುಗಿರುವ ತತ್ತ್ವವನ್ನು ಸರಿಯಾಗಿ ತಿಳಿದುಕೊಳ್ಳಲು ನನ್ನ ಮನಸ್ಸು ಉತ್ಸುಕವಾಗಿದೆ.

ರಹೂಗಣರಾಜನು ಬಿಂಬವು - ಪರಮಾತ್ಮನು ನೆಲೆಸಿರುವ ಸ್ಥಾನವು ಯಾವುದು? ಎಂದು ಕೇಳಿದ ಪ್ರಶ್ನೆಗೆ ಅವಧೂತನಾದ ಭರತನು ಕೊಟ್ಟ ಉತ್ತರವನ್ನು ಹೇಳುವರು — ಸರ್ವೋತ್ತಮನೂ, ವಿಶುದ್ಧ ಜ್ಞಾನರೂಪಿಯೂ, ಸತ್ಯನೂ, ನಿತ್ಯನೂ, ಪ್ರಶಾಂತನೂ, ಬ್ರಹ್ಮನೆಂದು ಹೇಳಲ್ಪಡುವನು, ಅದರಂತೆಯೇ ಭಗವತ್ ಶಬ್ದದಿಂದ ಕರೆಯಲ್ಪಡುವನು, ವಾಸುದೇವನಾಮಕನಾದವನು ಇತ್ಯಾದಿಯಾಗಿ ಜ್ಞಾನಿಗಳು ವರ್ಣಿಸಿರುವ ಪರಾತ್ಪರವಸ್ತುವಾಗಿರುವ ಪರಮಾತ್ಮನು ಜೀವನ ದೇಹದ ಹೊರಗೆ ನೆಲೆಸಿರುವನೆಂದು ಸರ್ವಥಾ ತಿಳಿಯಕೂಡದು. ಅದರಂತೆಯೇ ಜೀವನ ಒಳಗೆಯೇ ಆತನ ಹೃದಯದಲ್ಲಿ ಮಾತ್ರ ನಿಂತುಕೊಂಡು (ಜೀವನೊಡನೆ) ವಿಷಯಗಳ ಉಪಭೋಗವನ್ನು ಪರಮಾತ್ಮನು ಮಾಡುವನೆಂತಲೂ ತಿಳಿಯಕೂಡದು.

(ಅನಂತರಮಿತಿ) - ಹಾಗಾದರೆ ಬಿಂಬನು ಜೀವದಲ್ಲಿ ಹೇಗೆ ಯಾವ ರೀತಿ ನೆಲೆಸಿದ್ದಾನೆ ಎಂಬುದನ್ನು ತಿಳಿದುಕೊಳ್ಳಲು ರಾಜನಿಗೆ ಕುತೂಹಲವನ್ನುಂಟುಮಾಡಿದ ಈ ವಿಷಯವು (ಎಲ್ಲರಿಗೂ ಹೇಳಬಾರದಷ್ಟು) ಅತಿಗೂಢವಾದುದು. ಹೀಗಿದ್ದರೂ ಶಿಷ್ಯನ (ರಾಜನ) ಮೇಲಿನ ಕರುಣೆಯಿಂದ ಅದನ್ನು ಜಡಭರತರು ತಿಳಿಸಿಕೊಡುವರು.

## ಪ್ರತ್ಯಕ್ ಶಬ್ದವಾಚ್ಯ ಯಾರು?

– ಪ್ರತ್ಯಕ್ ಎಂಬ ಶಬ್ದವು ಯದ್ಯಪಿ ಜೀವನಲ್ಲಿ ಪ್ರಸಿದ್ಧ. ಏಕೆಂದರೆ ಯಾವತ್ತೂ ಅವನು ಯಾವ ಕಾರಣದಿಂದಲೂ ಹೊರಗಡೆ ಹೋಗುವುದಿಲ್ಲವಾದ್ದರಿಂದ. ಅಂದರೆ ಒಳಗಡೆ ಮಾತ್ರ ಇರುವ ವಸ್ತುವಿನಲ್ಲಿ ಪ್ರತ್ಯಕ್ ಎಂಬ ಶಬ್ದಪ್ರಯೋಗವಿದೆ. ಇದಾದರೋ ಆ ಜೀವನ ಬಿಂಬರೂಪವೇ ಆಗಿದೆ. ಹಾಗಾಗಿ ಅದನ್ನೇ ಪ್ರತ್ಯಕ್ ಎಂಬ ಶಬ್ದದಿಂದ ಕರೆಯಬೇಕು. ಆ ಬಿಂಬರೂಪವು ಜೀವನ ತಲೆಯಲ್ಲಿ ತಲೆಯಾಗಿ ಮುಖದಲ್ಲಿ ಮುಖವಾಗಿ ಈ ರೀತಿ ಕ್ರಮವಾಗಿ ಎಲ್ಲ ಸಮಾನವಾದ ಆಕೃತಿಯಿಂದ ಎಲ್ಲ ಕಡೆ ಇದ್ದು ಜೀವನ ಅವಯವವಾದ ಇಂದ್ರಿಯಗಳ ಒಳಗಡೆ ಇರುವ ತನ್ನ ಸ್ವರೂಪಭೂತವಾದ ತನ್ನ ಅವಯವಗಳೊಂದಿಗೆ ಭೋಗಗಳನ್ನು ಅನುಭವಿಸುತ್ತದೆ. ಆ ಬಿಂಬರೂಪದ ಸನ್ನಿಧಾನದಿಂದಲೇ ಪ್ರತ್ಯಕ್ ಎಂಬ ಶಬ್ದವು ಜೀವನಲ್ಲಿ ಪ್ರಸಿದ್ಧವಾಗಿದೆ. ಹೇಗೆಂದರೆ ಜೀವನ ಸನ್ನಿಧಾನವಿದ್ದಾಗ ದೇಹವನ್ನು ಆತ್ಮಾ ಎಂದು ಹೇಗೆ ವ್ಯವಹರಿಸುತ್ತೇವೆಯೋ ಹಾಗೆ ಎಂದು ತಿಳಿಯಬೇಕು.

ಪ್ರತ್ಯಕ್‌ಶಬ್ದದಿಂದ ಕರೆಯಲ್ಪಟ್ಟ ಜೀವನನ್ನು ಆಂತರಿಕವಾಗಿ ಹಿಂದೆ ಹೇಳಿದಂತೆ ಪೂರ್ಣವಾಗಿ ವ್ಯಾಪಿಸಿ ನೆಲೆಸಿರುವವನು ಪರಮಾತ್ಮನೇ ಆಗಿರುವನು. ಆದುದರಿಂದ ಜೀವನು ಏನೂ ಮಾಡಲಾರನು. ಬಿಂಬರೂಪನಾದ ಪರಮಾತ್ಮ ಸ್ವತಂತ್ರ ಹಾಗೂ ಮುಖ್ಯಕರ್ತೃವಾಗಿ ಸಕಲ ಕಾರ್ಯಗಳನ್ನು ಮಾಡುವನು. ಜಡಭರತರು ಹೇಳುತ್ತಾರೆ – ಮೇನೆಯನ್ನು ಹೊರುವುದು ಮುಂತಾದ ಕಾರ್ಯಗಳನ್ನು ನಾನು ಸ್ವತಂತ್ರವಾಗಿ ಮಾಡುತ್ತಿಲ್ಲ. ಇವೆಲ್ಲ ಕಾರ್ಯಗಳನ್ನು ಬಿಂಬರೂಪನಾದ ಪರಮಾತ್ಮನು ತಾನೇ ಮಾಡಿಸಿ ಮಾಡುತ್ತಿರುವನೆಂದು ನಾನು ಹೇಳುತ್ತಿರುವುದು ಸಯುಕ್ತಿಕ-ಸಮಂಜಸವಾಗಿದೆ.

ಜಡಭರತನು ಮೇನೆಯನ್ನು ಹೊತ್ತವನು ನಾನಲ್ಲ ಇತ್ಯಾದಿಯಾಗಿ ತಾನು ಆಡಿದ ಮಾತುಗಳ ಇಂಗಿತಾರ್ಥವನ್ನು ರಹೂಗಣರಾಜನಿಗೆ ಪ್ರಕಟಿಸುವುದರಿಂದ 'ಜೀವನಲ್ಲಿ ಬಿಂಬರೂಪವು ಹೇಗೆ ನೆಲೆ:ರುವುದು' ಎಂಬುದನ್ನು ತಿಳಿಯಲು ಬಯಸಿದ ರಾಜನಿಗೆ ಬಿಂಬದ ಜ್ಞಾನವನ್ನು ಮಾಡಿ-ಕೊಟ್ಟನು. ಬಿಂಬನು ಜೀವನ ಹೊರಗೆ ಇರುವುದಿಲ್ಲ; ಯಾವ ಕಾಲದಲ್ಲಿಯೂ ಜೀವನನ್ನು ಬಿಟ್ಟು ಅಗಲುವುದಿಲ್ಲ. ಜೀವನ ಅವಯವಗಳನ್ನೇ ತನ್ನ ಸಚ್ಚಿದಾನಂದಾತ್ಮಕ ಅವಯವಗಳಿಂದ ವ್ಯಾಪಿಸಿ (ಪ್ರತಿಬಿಂಬನಾದ) ಜೀವನ ಅವಯವಗಳಿಗೆ ಪ್ರೇರಕನಾಗಿ ಜೀವನಲ್ಲಿ ನೆಲೆಸಿರುವನು. ಇಷ್ಟೇ ಹೇಳುವುದರಿಂದ ರಾಜನು ಪಡೆಯಬಯಸಿದ ಭಗವಂತನು ಕರ್ತಾ ಎನ್ನುವ ಜ್ಞಾನವು ರಹೂ-ಗಣರಾಜನಿಗೆ ಲಭಿಸಿದಂತಾಗುತ್ತಿತ್ತು. ಹೀಗಿದ್ದರೂ ಜೀವನ ಜಾಗ್ರದಾದಿ ಮೂರು ಅವಸ್ಥೆಗಳಲ್ಲಿ ಆತನಿಂದ ಅಗಲದೇ ನೆಲೆಸಿ, ವಿಷಯಭೋಗಗಳನ್ನು ಅನುಭವಿಸುವ ಬಿಂಬರೂಪೀ ಪರಮಾತ್ಮನು

ಮುಕ್ತಿಯನ್ನು ಕೊಡಲು ಹೇಗೆ ಶಕ್ತನಾಗುವನು? ಎಂಬ ಶಂಕೆಯನ್ನು ನಿವಾರಿಸಲೆಂದೇ ಬಿಂಬರೂಪೀ ಪರಮಾತ್ಮನು ವಿಶುದ್ಧವಾದ ಜ್ಞಾನಸ್ವರೂಪನು, ಸತ್ಯನು, ನಿತ್ಯನು ಇತ್ಯಾದಿಯಾಗಿ ಆತನ ಸ್ವರೂಪವನ್ನು ನಿರೂಪಿಸುವರು. ಜೀವನಿಂದ ನಿತ್ಯಭಿನ್ನವಾದ ಪರಮಾತ್ಮನು. ಜೀವನ ಮೇಲಿನ ಕರುಣೆಯಿಂದಲೇ ಆತನ ಉದ್ಧಾರಕ್ಕಾಗಿ ಮುಕ್ತಿಪ್ರದನಾಗಿ ಆತನಲ್ಲಿ ನೆಲೆಸಿರುವನು. ಪರಮಾತ್ಮ-ಜೀವನು ಎಂದಿಗೂ ಸಮಾನವಾದ ಸ್ಥಾನವನ್ನು ಪಡೆಯಲಾರನು ಎಂದು ಹೇಳುವುದರಿಂದಲೂ ಸಮಾನತೆಯ ಶಂಕೆಯು ಪರಿಹಾರವಾಗುತ್ತದೆ.

## ಧ್ರುವನಿಗೆ ಪಿತಾಮಹನಾದ ಮನುವಿನ ಉಪದೇಶ

** "ತ್ವಂ ಪ್ರತ್ಯಗಾತ್ಮನಿ" – ಬಿಂಬಜ್ಞಾನಮೇವ ಸಂಸಾರಾತ್ ಮೋಚಕಂ ತೇನ ವಿನಾ ಮುಕ್ತಿಃ ಸರ್ವಥಾ ನ ಭವತಿ, ತತಃ ತದವಶ್ಯಂ ಗುರುಸೇವಾದಿನಾ ಸಂಪಾದ್ಯಂ, ತಚ್ಚ ಭಕ್ತಿದ್ವಾರಾ ಮೋಚಕಂ ಇತ್ಯಾಶಯೇನಾಹ – ತ್ವಮಿತಿ ॥ ಏವಮನಾದ್ಯನಂತಕಾಲೇಷು ಜೀವಾಂತರೇವ ತದನುರೂಪಾಣ್ಯೇವ ಕರ್ಮಾಣಿ ಕುರ್ವತಃ ತದ್ಭೋಗ್ಯಭೋಗಾನೇವ ಭುಂಜತಃ ಕಥಂ ಸಂಸಾರಮೋಚಕತ್ವಮಿತಿ ಶಂಕಾನಿರಾಸಾಯ ಉಕ್ತಮ್ । ಪ್ರತ್ಯಕ್ ಜೀವಾಂತರೇವ ಅವಸ್ಥಿತ-ರೂಪೇಣ ತದನುರೂಪತಯೈವ ಆತ್ಮನಿ ಆದಾನಭೋಗಾದಿಕರ್ತರ್ಯಪಿ । ಆನಂದಮಾತ್ರೇ ಸಾರಸುಖಾನುಭವಸ್ವರೂಪೇ । ಉಪಪನ್ನಾಃ ಯುಕ್ತಾಃ ಸಮಸ್ತಾಃ ಶಕ್ತಯಃ ಯಸ್ಮಿನ್ ತಸ್ಮಿನ್ನಿತಿ । ಶನಕೈರಾಯಾಸೇನ ಬಿಭೇತ್ಸ್ಯಸಿ ಭೇದಯಸಿ ॥

– ಯುದ್ಧಾಸಕ್ತನಾದ ಧ್ರುವರಾಜನಿಗೆ ಪಿತಾಮಹನಾದ ಮನುವು ಹೇಳುತ್ತಾನೆ – ಬಿಂಬಜ್ಞಾನವನ್ನು ಮಾಡಿಕೊಳ್ಳುವುದು ಒಂದೇ ಒಂದಾದ ಸಾಧನವಾಗಿದೆ. ಬಿಂಬಜ್ಞಾನದ ವಿನಹ ಮುಕ್ತಿಯು ಎಂದಿಗೂ ದೊರೆಯಲಾರದು. ಆದುದರಿಂದ ಸದ್ಗುರುಗಳ ಸೇವೆ ಮಾಡಿ ಬಿಂಬಜ್ಞಾನವನ್ನು ಅಗತ್ಯವಾಗಿ ಪಡೆಯಲೇಬೇಕು. ಭಕ್ತಿಯಿಂದ ಭಗವಂತನನ್ನು ಆರಾಧಿಸಿ, ಆತನ ಪರಮಾನುಗ್ರಹವನ್ನು ಪಡೆದು ಮುಕ್ತರಾಗಬೇಕು.

ಇಲ್ಲೊಂದು ಆಕ್ಷೇಪವಿದೆ – ಅನಾದ್ಯನಂತಸರ್ವಕಾಲದಲ್ಲಿಯೂ ಜೀವನೊಳಗೆ ಅಂತರ್ನಿಯಾಮಕ-ನಾಗಿ ನೆಲೆಸಿ, ಜೀವನಿಗೆ ಅನುರೂಪವಾದ ಕಾರ್ಯಗಳನ್ನೇ ಮಾಡುತ್ತ, ಜೀವನು ಉಪಭೋಗಿಸುವ ಭೋಗಗಳನ್ನೇ ತಾನೂ ಉಪಭೋಗಿಸುತ್ತಿರುವ ಬಿಂಬರೂಪನಾದ ಪರಮಾತ್ಮನು ಜೀವನಿಗೆ ಸಂಸಾರ ಮೋಚಕವಾದ ಮುಕ್ತಿಯನ್ನು ಕೊಡಲು ಹೇಗೆ ಸಮರ್ಥನಾಗುವನು? ಈ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರ ಹೇಳುವರು – ತ್ವಮಿತಿ ಅಂತರ್ಯಾಮಿಯಾಗಿ ವ್ಯಾಪಿಸಿ ಜೀವನಲ್ಲಿ ಪರ-ಮಾತ್ಮನು ನಿಂತುಕೊಂಡು ಆ ಜೀವನ ಭೋಗಗಳನ್ನೇ ತಾನು ಸೇವಿಸುವ ಕಾರ್ಯವನ್ನು ಮಾಡು-

ತ್ತಿದ್ದರೂ, ಪರಮಾತ್ಮನು ಅಪ್ರಾಕೃತಶರೀರವುಳ್ಳವನು, ಜ್ಞಾನಾನಂದಮೂರ್ತಿಯು. ಆತನು ತನಗೆ ಗ್ರಾಹ್ಯವಾದ ಸಾರವನ್ನಷ್ಟೇ ತೆಗೆದುಕೊಳ್ಳುವನು. ಜೀವನ ಕೃತಿಗಳಿಂದ ಉಪಭೋಗಗಳಿಂದ ಪರಮಾತ್ಮನು ನಿರ್ಲಿಪ್ತನಾದವನು. ಷಡ್ಗುಣೈಶ್ವರ್ಯಸಂಪನ್ನನಾದುದರಿಂದ ಸಕಲಶಕ್ತಿಗಳೂ ಪರಮಾತ್ಮನಲ್ಲಿ ಅವಿರೋಧವಾಗಿ ಹೊಂದಿಕೊಳ್ಳುವವು. ಜೀವಾಂತರ್ಯಾಮಿಯಾದ ಪ್ರತ್ಯ-ಗಾತ್ಮನಾದ, ಅನಂತಕಲ್ಯಾಣಗುಣಪೂರ್ಣನಾದ, ಆನಂದಸ್ವರೂಪನಾದ ಸರ್ವಶಕ್ತನಾದ ಬಿಂಬ-ರೂಪಪರಮಾತ್ಮನಲ್ಲಿ ನೀನು ನಿಸ್ಸೀಮವಾದ ಭಕ್ತಿಯನ್ನಿಡಬೇಕು. ಆಗ ನಾನು ನನ್ನದೆಂಬ ಆಳವಾಗಿ ಬೇರುಬಿಟ್ಟ ಅಜ್ಞಾನದ ಗಂಟನ್ನು ಮೆಲ್ಲ ಮೆಲ್ಲಗೆ ಕತ್ತರಿಸುತ್ತೇನೆ.

## ಹೃದಯಗುಹೆಯಲ್ಲಿರುವುದು ಜೀವನೋ ಪರಮಾತ್ಮನೋ?

** ಸೂತ್ರ – ಓಂ ಗುಹಾಂ ಪ್ರವಿಷ್ಟೌ ಆತ್ಮಾನೌ ಹಿ ತದ್ದರ್ಶನಾತ್ ಓಂ (ಬ್ರ.ಸೂ.)

(ಭಾ.) 'ಯೋ ವೇದ ನಿಹಿತಂ ಗುಹಾಯಾಮ್' ಇತ್ಯಾದಿನಾ ಪ್ರಸಿದ್ಧಂ ಹಿಶಬ್ದೇನ ದರ್ಶಯತಿ ।

– ನನು ಗುಹಾನಿಷ್ಠತ್ವಲಿಂಗಸ್ಯ ಜೀವೇಽಪಿ ಸಾವಕಾಶತ್ವಾತ್ ಕಥಂ ತೇನ ಹೇತುನಾ ಪಿಬತೋ ವಿಷ್ಣುತ್ವನಿಶ್ಚಯಃ? ಇತ್ಯತೋ ಹಿ ತದ್ದರ್ಶನಾತ್ ಇತಿ ಸೂತ್ರಖಂಡಂ ಪ್ರಕಾರಾಂತರೇಣ ವ್ಯಾಖ್ಯಾತಿ - ಯೋ ವೇದೇತಿ ॥ 'ಯಃ ಅಧಿಕಾರೀ ಹೃದಯಗುಹಾಯಾಂ ನಿಹಿತಂ ಬ್ರಹ್ಮ ವೇದ ಇತ್ಯಾದಿನಾ ಶ್ರುತಿವಾಕ್ಯೇನ ಪ್ರಸಿದ್ಧಂ ಗುಹಾನಿಹಿತತ್ವಂ ಹಿಶಬ್ದೇನ ಸೂಚಯತಿ ಸೂತ್ರಕಾರ ಇತ್ಯರ್ಥಃ । ತಥಾ ಚೇಯಂ ಸೂತ್ರಖಂಡಯೋಜನಾ – ತತ್ ಗುಹಾನಿಹಿತತ್ವಂ ದರ್ಶನಾತ್ ಶ್ರುತಿವಾಕ್ಯಾತ್ ಹಿ ಪ್ರಸಿದ್ಧಂ ಲಿಂಗತ್ವೇನಾಭಿಮತಮ್ । ಜೀವಸ್ಯ ನ ಗುಹಾನಿಹಿತತ್ವಂ ಶ್ರುತಿಸಿದ್ಧಮಿತಿ ॥

ಗುಹಾನಿಷ್ಠತ್ವ ಎಂಬುದು ಜೀವನಲ್ಲಿಯೂ ಇದೆ ಅವನೂ ಹೃದಯಗುಹೆಯಲ್ಲಿರುವುದರಿಂದ. ಹಾಗಾಗಿ ಗುಹಾನಿಷ್ಠತ್ವ ಎಂಬ ಲಿಂಗದಿಂದ ಕರ್ಮಫಲಭೋಕ್ತೃಗಳಾಗಿರುವುದು ವಿಷ್ಣು ರೂಪಗಳು ಎಂಬ ನಿಶ್ಚಯ ಹೇಗೆ? ಎನ್ನುವುದಕ್ಕುತ್ತರವಾಗಿ 'ತದ್ದರ್ಶನಾತ್' ಎಂಬ ಸೂತ್ರದ ಭಾಗವನ್ನು ಪ್ರಕಾರಾಂತರೇಣ ವ್ಯಾಖ್ಯಾನ ಮಾಡುತ್ತಿದ್ದಾರೆ – "ಯೋ ವೇದ" ಎಂಬುದಾಗಿ.

ಯಃ = ಯಾವ ಅಧಿಕಾರಿಯು, ಗುಹಾಯಾಂ = ಹೃದಯಗುಹೆಯಲ್ಲಿ, ನಿಹಿತಂ = ಇರುವ, ಬ್ರಹ್ಮ = ಬ್ರಹ್ಮನನ್ನು, ವೇದ = ತಿಳಿದಿರುವನೋ - ಎಂಬರ್ಥವುಳ್ಳ ಶ್ರುತಿಯಿಂದ ಪ್ರಸಿದ್ಧವಾದ ಗುಹಾ-ನಿಹಿತತ್ವವನ್ನು ಸೂತ್ರಕಾರರು "ಹಿ" ಎಂಬ ಶಬ್ದದಿಂದ ಸೂಚಿಸುತ್ತಿದ್ದಾರೆ. ಹಾಗಾಗಿ ಈ ರೀತಿ ಸೂತ್ರಯೋಜನೆಯನ್ನು ತಿಳಿಯಬೇಕು. –

ತತ್ = ಆ ಗುಹಾನಿಹಿತತ್ವವು ಅದನ್ನು ತಿಳಿಸುವ ಶ್ರುತಿವಾಕ್ಯದಿಂದ ಪ್ರಸಿದ್ಧವಾದ ಲಿಂಗವಾಗಿ ತಿಳಿಯಲ್ಪಡುತ್ತಿದೆ. ಈ ಶ್ರುತಿಪ್ರಸಿದ್ಧವಾದ ಗುಹಾನಿಹಿತತ್ವವಾದರೋ ಜೀವನಲ್ಲಿ ಇಲ್ಲ.

## ಬ್ರಹ್ಮಜಿಜ್ಞಾಸೆಯೇ ನಾರಾಯಣನ ಜಿಜ್ಞಾಸೆ

** ब्रह्मशब्दोऽपि हि गुणपूर्तिमेव वदत्ययम् ।
अतो नारायणस्यैव जिज्ञासाऽत्र विधीयते ॥७५ ॥

हिशब्देन "अथ कस्मादुच्यते ब्रह्मेति बृहन्तो ह्यस्मिन् गुणाः" इत्यादिप्रसिद्धिं द्योतयति । एवशब्देन सर्वात्मकत्वादिपरापव्याख्यां सर्वप्रमाणविरुद्धां व्यावर्तयति । अयमिति सूत्रप्रयुक्तः । किमतो यद्येवमित्यत आह अत इति । यतो ब्रह्मशब्दो नारायणशब्दसमानार्थः, अतो ब्रह्मजिज्ञासा कर्तव्येति वाक्येन नारायणस्यैव जिज्ञासा विधीयत इति ज्ञायत इत्यर्थः । (सुधा)

ಬ್ರಹ್ಮಶಬ್ದವು ಗುಣಪೂರ್ಣವಾದ ವಸ್ತುವನ್ನೇ ಹೇಳುತ್ತಿದೆ ಎಂಬ ಅಂಶವು ಶ್ರುತಿಪ್ರಸಿದ್ಧ. ಅದನ್ನೇ ಹೇಳುವುದು ಎನ್ನುವುದರಿಂದ ಬೇರೆಯವರು ವ್ಯಾಖ್ಯಾನಮಾಡಿದಂತೆ ಸರ್ವಾತ್ಮಕವಾದದ್ದು ಬ್ರಹ್ಮಶಬ್ದಾರ್ಥವಲ್ಲ. ಅದು ಸರ್ವಪ್ರಮಾಣವಿರುದ್ಧವಾಗಿದೆ ಎಂದು ತಿಳಿಯಬೇಕು. ಒಟ್ಟರ್ಥ ಇದು – ಯಾವ ಕಾರಣದಿಂದ ನಾರಾಯಣಶಬ್ದಕ್ಕೆ ಸಮಾನವಾದ ಅರ್ಥ ಬ್ರಹ್ಮಶಬ್ದಕ್ಕಿದೆಯೋ ಆ ಕಾರಣದಿಂದ ಬ್ರಹ್ಮಜಿಜ್ಞಾಸಾ ಮಾಡಬೇಕು ಎಂಬ ವಾಕ್ಯದಿಂದ ನಾರಾಯಣನ ಜಿಜ್ಞಾಸೆಯನ್ನೇ ಮಾಡಬೇಕು ಎಂದು ತಿಳಿಯುತ್ತದೆ.

## ಬಿಂಬಲಕ್ಷಣಗಳಿಷ್ಟೇ ಅಲ್ಲ ಬಹಳ ಇವೆ

(ಲಘುರಸರಂಜನೀ) – ಉಪಲಕ್ಷಣಯಾ ಅನ್ಯಾನ್ಯಪಿ ಲಕ್ಷಣಾನಿ ಗ್ರಾಹ್ಯಾಣಿ ಇತ್ಯಾಶಯೇನೈವ 'ಜ್ಞೇಯಂ ಗಮ್ಯಂ' ಇತಿ ಭಾಷ್ಯೇ ಸಾಕ್ಷಾನ್ಮೋಕ್ಷಸಾಧನಜ್ಞಾನವಿಷಯತ್ವರೂಪಪ್ರಥಮಲಕ್ಷಣಸ್ಯೋ-ಪನ್ಯಾಸಾಚ್ಚ । ಸ್ಪಷ್ಟಂ ಚ ನಾರಾಯಣೇ ಜಿಜ್ಞಾಸ್ಯಬ್ರಹ್ಮಣಿ ಉಕ್ತಾನಿ ಸರ್ವಾಣ್ಯಪಿ ಬಿಂಬಲಕ್ಷಣಾನಿ ಶ್ರಾವಯತಿ –

''ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್ ।
ವಿಶ್ವತಃ ಪರಮಾಂ ನಿತ್ಯಂ ವಿಶ್ವಂ ನಾರಾಯಣಂ ಹರಿಮ್''

– (ಮಂತ್ರ 3-4 ನಾರಾಯಣೋಪನಿಷತ್)

ಇತ್ಯೇವಂಜಾತೀಯಕಾ ಜಿಜ್ಞಾಸಾವಿಧಾತ್ರೀ ಶ್ರುತಿಃ । ತತ್ರ ನಾರಾಯಣಸ್ಯ 'ಮಹಾಜ್ಞೇಯಮ್' ಇತಿ ಪದೇನ ಸಾಕ್ಷಾನ್ಮೋಕ್ಷಸಾಧನಜ್ಞಾನವಿಷಯತ್ವರೂಪಲಕ್ಷಣಸ್ಯ 'ವಿಶ್ವಾತ್ಮಾನಮ್' ಇತಿ ಪದೇನ ಸರ್ವಜೀವಹೃದಯಗುಹಾನಿವಿಷ್ಟತ್ವಸ್ಯ ತತ್ರ ಸ್ಥಿತ್ವಾ ಶರೀರೇಂದ್ರಿಯಾದಿರೂಪಕಾರ್ಯಕಾರಣ-ಪ್ರೇರಕತ್ವಸ್ಯ ಚ ಜೀವನಪ್ರಾಣನಕರ್ತೃತಯಾ ಮುಖ್ಯಾಶ್ರಯತ್ವಬೋಧಕೇನ ನಾರಾಯಣಪದೇನ 'ಸತ್ತ್ವಂ ಜೀವನಮೇವ ಚ' ಇತ್ಯಾದ್ಯಾನಂದಮಯನಯೋಕ್ತ್ಯಾ ಸತ್ಯತ್ವಸ್ಯ ದ್ವಿತೀಯನಾರಾಯಣ-

ಪದೇನ 'ನಾರಂ = ಜ್ಞಾನಂ ತದಾಶ್ರಯತಯಾ ನಾರಾಯಣಮ್' ಇತಿ ಜ್ಞಾನಸ್ಯ 'ನಿತ್ಯಂ' ಇತ್ಯ-ನಂತತ್ವಸ್ಯ ಚೋಕ್ತತ್ವಾತ್ । ತಥಾ ಚ ಯದಿ ಜಿಜ್ಞಾಸ್ಯಂ ಬ್ರಹ್ಮ ನಾರಾಯಣೋ ವಾ ಬಿಂಬರೂಪಾದನ್ಯದೇವ ಸ್ಯಾತ್, ತದಾ ಕಥಂ ತಲ್ಲಕ್ಷಣಾನ್ಯತ್ರ ಪ್ರೂಯೇರನ್ । ಕಥಂ ಚಾನ್ಯಸ್ಯ ಜಿಜ್ಞಾಸ್ಯತಾ ಬಿಂಬಸ್ಯ ತಜ್ಜನ್ಯಜ್ಞಾನವಿಷಯತಾ ಇತಿ ಜಿಜ್ಞಾಸಾಜ್ಞಾನಯೋರ್ಭಿನ್ನವಿಷಯತಾ ಯುಜ್ಯೇತ ।

ನನು ಜಿಜ್ಞಾಸಾಜನ್ಯತಯಾ ಅತ್ರ ವಿವಕ್ಷಿತತ್ವಾದನ್ಯಜ್ಞಾನಸ್ಯ ಚ ತದ್ದ್ವಾರೀಭೂತಸ್ಯಾತಥಾತ್ವಾತ್ ಬಿಂಬಾನ್ಯಸ್ಯ ಸ್ವಾತಂತ್ರ್ಯೇಣ ತದ್ವಿಷಯತಾಂಗೀಕಾರಾಯೋಗಾತ್ ಇತಿ ಚೇನ್ನ, ತತ್ಪ್ರಮಾಣಾನಾಂ ಚ ದ್ವಾರಕಾರಣಪ್ರತಿಪಾದನಪರತಯಾ ಸಾವಕಾಶತ್ವಸ್ಯ ವಕ್ತುಂ ಶಕ್ಯತ್ವಾತ್ । ಅತ್ರ ವಿಶೇಷೋಽಸ್ಮ-ತ್ಪ್ರಣೀತ — 'ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ' (ಬ್ರ.ಸೂ.3-3-53) ಇತ್ಯಧಿಕರಣಾರ್ಥಸಂಗ್ರಹೇ ದ್ರಷ್ಟವ್ಯ ಇತಿ । ತಥಾ ಚ ಅವಶ್ಯಂ ಜಿಜ್ಞಾಸ್ಯಂ ಬಿಂಬರೂಪಮ್ ಇತಿ ಸ್ಥಿತೇ,

ಇಷ್ಟೇ ಅಲ್ಲದೆ ಇನ್ನೂ ಹಲವು ಲಕ್ಷಣಗಳು ಗ್ರಹಿಸಬೇಕು ಎಂಬ ಅಭಿಪ್ರಾಯದಿಂದಲೇ ಜ್ಞೇಯಂ ಗಮ್ಯಂ ಎಂದು ಭಾಷ್ಯದಲ್ಲಿ ಸಾಕ್ಷಾತ್ ಮೋಕ್ಷಸಾಧನಜ್ಞಾನವಿಷಯತ್ವ ಎಂಬ ಮೊದಲನೆಯ ಲಕ್ಷಣವನ್ನು ಉಪನ್ಯಾಸಮಾಡಿದ್ದಾರೆ. ಇನ್ನು ಸ್ಪಷ್ಟವಾಗಿಯೂ ಜಿಜ್ಞಾಸ್ಯಬ್ರಹ್ಮನಲ್ಲಿರುವ ಎಲ್ಲಾ ಬಿಂಬಲಕ್ಷಣಗಳನ್ನು ನಾರಾಯಣನಲ್ಲಿ ಜಿಜ್ಞಾಸಾವಿಧಾಯಕವಾದ 'ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ ವಿಶ್ವತಃ ಪರಮಾನ್ನಿತ್ಯಂ ವಿಶ್ವಂ ನಾರಾಯಣಂ ಹರಿಂ' ಎಂಬ ರೀತಿಯಾದ ಶ್ರುತಿಗಳು ತಿಳಿಸುತ್ತವೆ. ಆ ವಾಕ್ಯದಲ್ಲಿ ನಾರಾಯಣನು ಮಹಾಜ್ಞೇಯ ಎಂದು ಹೇಳಿದ್ದರಿಂದ ಸಾಕ್ಷಾತ್ ಮೋಕ್ಷಸಾಧನಜ್ಞಾನವಿಷಯತ್ವ, ವಿಶ್ವಾತ್ಮಾನಂ ಎಂಬ ಪದದಿಂದ ಸರ್ವಜೀವಹೃದಯ-ಗುಹಾನಿವಿಷ್ಟತ್ವ ಹಾಗೂ ತತ್ರ ಸ್ಥಿತ್ವಾ ಶರೀರೇಂದ್ರಿಯಾದಿರೂಪಕಾರ್ಯಕಾರಣಪ್ರೇರಕತ್ವ ಎಂಬ ಇಷ್ಟು ಲಕ್ಷಣಗಳು ತಿಳಿಯುತ್ತವೆ. ಇನ್ನು ನಾರಾಯಣಪದದಿಂದ ಜೀವನ-ಪ್ರಾಣನ-ಕರ್ತೃತಯಾ ಮುಖ್ಯಾಶ್ರಯತ್ವವು ತಿಳಿಯುತ್ತದೆ. ಇದನ್ನು ಆನಂದಮಯಾಧಿಕರಣದಲ್ಲಿ ಹೇಳಿದ ರೀತಿಯಿಂದ 'ಬ್ರಹ್ಮೇತಿ ಸ್ಥಾಪನಾಯೈವ ಸತ್ತ್ವಂ ಜೀವನಮೇವ ಚ' (ಅನು.ವ್ಯಾ. ಶ್ಲೋ.193) ಎಂಬ ಭಾಗದಿಂದ ಸತ್ಯತ್ವವು, ಎರಡನೆಯ ನಾರಾಯಣಪದದಿಂದ ನಾರ ಎಂದರೆ ಜ್ಞಾನ ಅದಕ್ಕೆ ಆಶ್ರಯ ನಾರಾಯಣ ಎಂಬುದರಿಂದ ಜ್ಞಾನವು, ನಿತ್ಯಂ ಎಂಬ ಪದದಿಂದ ಅನಂತತ್ವವು ಹೇಳಲ್ಪಟ್ಟಿದೆ.

ಒಟ್ಟಾರೆ ಒಂದು ವೇಳೆ ಜಿಜ್ಞಾಸ್ಯನಾದ ಬ್ರಹ್ಮನು ಅಥವಾ ನಾರಾಯಣನು ಬಿಂಬರೂಪಕ್ಕಿಂತ ಬೇರೆಯವನೇ ಆಗಿದ್ದರೆ ಆಗ ಬಿಂಬದ ಎಲ್ಲ ಲಕ್ಷಣಗಳು ಇವರಲ್ಲಿ ಹೇಗೆ ಕೇಳಿಸುತ್ತಿದ್ದವು. ಅಷ್ಟೇ

ಅಲ್ಲದೆ ಬೇರೆಯವನೇ ಜಿಜ್ಞಾಸ್ಯ ಬಿಂಬನಾದರೋ ಜಿಜ್ಞಾಸಾಜನ್ಯಜ್ಞಾನಕ್ಕೆ ವಿಷಯ ಎಂದು ಜಿಜ್ಞಾಸೆ ಹಾಗೂ ಜ್ಞಾನಕ್ಕೆ ಬೇರೆ ಬೇರೆ ವಿಷಯಗಳು ಎಂದಾದೀತು। ಇದು ಅನುಚಿತ ಎಂದಭಿಪ್ರಾಯ.

ಅಲ್ಲ; ಜಿಜ್ಞಾಸೆಯಿಂದ ಉಂಟಾದ ಜ್ಞಾನಕ್ಕೆ ವಿಷಯನಾದ ವ್ಯಕ್ತಿಯು ಬಿಂಬರೂಪಿಗಿಂತ ಬೇರೆಯೆಂದೇ ಒಪ್ಪೋಣ ಎಂದರೆ ಇದು ಸರಿಯಲ್ಲ. ಇಲ್ಲಿ ಜಿಜ್ಞಾಸೆಯಿಂದ ಉಂಟಾಗುವ ಜ್ಞಾನ ಎಂದರೆ ಸಾಕ್ಷಾತ್ ಮೋಕ್ಷಕ್ಕೆ ಸಾಧನವಾದ ಜ್ಞಾನವೇ ಆಗಿದೆ ಎಂದು ಅಭಿಪ್ರಾಯವಿದೆ. ಹಾಗಾಗಿ ಬೇರೆಯವರ ಜ್ಞಾನವು ಸಾಕ್ಷಾನ್ಮೋಕ್ಷಸಾಧನಜ್ಞಾನದ ಮುಖಾಂತರವೇ ಮೋಕ್ಷಕ್ಕೆ ಉಪಯೋಗಿಯಾಗುವುದು. ಅರ್ಥಾತ್ ಬೇರೆಯದರ ಜ್ಞಾನ ದ್ವಾರದಂತೆ. ಬಿಂಬರೂಪೀ ಭಗವಂತನಿಗಿಂತ ಬೇರೆ ಭಗವದ್ರೂಪಗಳ ಜ್ಞಾನವು ಸ್ವತಂತ್ರವಾಗಿ ಮೋಕ್ಷಕ್ಕೆ ಸಾಧನವಲ್ಲವೆಂದು ಒಪ್ಪಿರುವುದರಿಂದ.

ಬೇರೆ ಭಗವದ್ರೂಪಗಳ ಜ್ಞಾನವು ಕಾರಣ ಎನ್ನುವ ವಾಕ್ಯಗಳಿಗೆ ದ್ವಾರತಯಾ ಎಂದು ಅರ್ಥವನ್ನು ಮಾಡಿ ಅವುಗಳನ್ನು ಸಾವಕಾಶವನ್ನಾಗಿ ಮಾಡಬಹುದು. ಈ ವಿಷಯದಲ್ಲಿ ಇನ್ನೂ ವಿಶೇಷತೆಗಳನ್ನು ನಾವು ರಚಿಸಿದ 'ನ ಸಾಮಾನ್ಯಾದಪಿ ಉಪಲಬ್ಧೇಃ ಮೃತ್ಯುವನ್ನ ಹಿ ಲೋಕಾಪತ್ತಿಃ' (ಬ್ರ.ಸೂ.3-3-53) ಎಂಬ ಅಧಿಕರಣದ ಅರ್ಥವನ್ನು ಸಂಗ್ರಹಮಾಡುವ ಗ್ರಂಥದಲ್ಲಿ ನೋಡಬೇಕು. ಹಾಗಾಗಿ ಅವಶ್ಯವಾಗಿ ಜಿಜ್ಞಾಸ್ಯವಾದದ್ದು ಬಿಂಬರೂಪ ಎಂದು ಒಪ್ಪಲೇಬೇಕೆಂದು ಸಿದ್ಧವಾಯಿತು.

## ಸಚ್ಛಬ್ದಪ್ರವೃತ್ತಿನಿಮಿತ್ತ ಯಾವುದು?

**** अन्नमयप्रकरणं सत्यशब्दार्थ इत्युक्तम्।** तत् कथमित्यत आह – सत्त्वमिति।

...................... **सत्त्वं जीवनमेव च।**

विशीर्णता च सत्त्वं स्यात् सन्नमित्याहुरेव यत्।

अतोऽद्यताऽत्तृताऽन्नत्वं सत्यशब्दार्थ एव हि॥ अनुव्या. १७३॥

न केवलं जन्मैव सच्छब्दार्थः। किन्तु जीवनं च प्राणधारणलक्षणं सत्त्वमेव सच्छब्दप्रवृत्तिनिमित्तमेव। अस्ति देवदत्त इत्युक्ते जीवतीति प्रत्ययात्। विशीर्णता च शैथिल्यलक्षणा। सत्त्वं सच्छब्दप्रवृत्तिनिमित्तं स्यात्। कुतः? यद् यस्माद् विशीर्णं वस्तु सन्नमित्याहुः। एवशब्दः "षद्लृ विशरणगत्यवसादनेषु" इति पाठान्मुख्य एवायं प्रयोग इति सूचयति। तथा चास्तेः शत्रन्तस्य सदेः क्विबन्तस्य वा सदिति रूपम्। भावप्रधानं चैतत्। सत् सत्त्वं जीवनं विशरणं वा भूतानां यापयतीति सत्यमित्युक्तं भवति।

किमतो यद्येवमित्यत आह अत इति। यत एवं सकलभूतानां जीवनविनाशहेतुत्वं सत्यशब्दोक्तम्, अतः सत्यशब्दार्थ एवान्नत्वमन्नशब्दप्रवृत्तिनिमित्तम्। तत् कथम्? हि यस्मादुपजीव्यत्वलक्षणाऽद्यता विनाशकत्वलक्षणाऽत्तृता च तदिति। (सुधा)

ಆನಂದಮಯಾಧಿಕರಣದಲ್ಲಿ ತೈತ್ತಿರೀಯೋಪನಿಷತ್ತಿನಲ್ಲಿ ಬರುವ ಅನ್ನಮಯ ಪ್ರಕರಣವು 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿವಾಕ್ಯದಲ್ಲಿರುವ ಸತ್ಯಶಬ್ದದ ಅರ್ಥವನ್ನು ವಿವರಿಸುತ್ತಿದೆ ಎಂದಿದ್ದಾರೆ. ಅದು ಹೇಗೆ? ಎಂದು ಪ್ರಶ್ನೆ ಬಂದಾಗ 'ಸತ್ವಂ ಜೀವನಮೇವ ಚ' ಎಂಬೀ ಅನು-ವ್ಯಾಖ್ಯಾನ ಹೊರಟಿದೆ. "ಸತ್" ಎಂದರೆ ಕೇವಲ ಜನ್ಮ ಎಂದಿಷ್ಟೇ ಅರ್ಥವಲ್ಲ. ಹೊರತು ಪ್ರಾಣ-ಧಾರಣರೂಪವಾದ ಜೀವನ ಎಂದರ್ಥ. ಹೀಗಾಗಿ ಸತ್ವಂ ಎಂದರೆ ಪ್ರಾಣಧಾರಣ. ಇದೇ ಸಚ್ಛಬ್ದದ ಪ್ರವೃತ್ತಿನಿಮಿತ್ತ. ಏಕೆಂದರೆ 'ಅಸ್ತಿ ದೇವದತ್ತಃ' ಎಂದು ಪ್ರಯೋಗ ಮಾಡಿದಾಗ ದೇವದತ್ತ ಬದುಕಿ-ದ್ದಾನೆ ಎಂಬ ಜ್ಞಾನ ಬರುತ್ತದೆ. ಹಾಗಾಗಿ ದೇವದತ್ತನಲ್ಲಿ ತೋರುತ್ತಿರುವ ಸತ್ತ್ವವು ಪ್ರಾಣಧಾರಣ-ರೂಪವಾಗಿದೆ. ಹಾಗೆಯೇ ನಾಶವಾದ ವಸ್ತುವಿಗೂ 'ಸನ್ನಂ' ಎನ್ನುತ್ತಾರೆ. ಇದರಲ್ಲಿ ಇರುವ ಧಾತು 'ಷದ್ಲೃ ಧಾತು'. ಇದರ ಅರ್ಥ - ವಿಶರಣ, ಗತಿ ಹಾಗೂ ಅವಸಾದನ.

ತಥಾಚ — ಸತ್ಯ ಎಂದರೆ ಸತ್ವವನ್ನು ಅಂದರೆ ಜೀವನ ಅಥವಾ ವಿಶರಣವನ್ನು ಪ್ರಾಣಿಗಳಿಗೆ ಯಾರು ಹೊಂದುವಂತೆ ಮಾಡುತ್ತಾನೋ ಅವನು. ಇದರಿಂದಾಗಿ ಸಕಲಭೂತಾನಾಂ ಜೀವನವಿನಾಶ-ಹೇತುತ್ವ ಎಂಬುದು ಸತ್ಯಶಬ್ದದ ಅರ್ಥ ಎಂದು ತಿಳಿಸಿದಂತಾಯಿತು. ಇದೇ ಅನ್ನಶಬ್ದಪ್ರವೃತ್ತಿ-ನಿಮಿತ್ತವಾಗಿದೆ. ಹೇಗೆಂದರೆ — ಭಗವಂತನು ಪ್ರಾಣಿಗಳಿಗೆ ಉಪಜೀವ್ಯವಾಗಿ ಅದ್ಯನಾಗಿದ್ದಾನೆ. ಅವನು ಸಕಲಪ್ರಾಣಿಗಳನ್ನು ನಾಶ ಮಾಡುವುದರಿಂದ ಅತ್ತೃವಾಗಿದ್ದಾನೆ. ಅತ್ತೃ ಎಂದರೆ ತಿನ್ನುವ-ವನು. ಅದ್ಯ ಎಂದರೆ ತಿನ್ನಲ್ಪಡುವ ವಸ್ತು.

## ಬಿಂಬದರ್ಶನದಿಂದಲೇ ಮುಕ್ತಿ

** 'ನ ಸಾಮಾನ್ಯಾದಪಿ ಉಪಲಬ್ಧೇಃ ಮೃತ್ಯುವನ್ನ ಹಿ ಲೋಕಾಪತ್ತಿಃ' (ಬ್ರ.ಸೂ.3-3-53)

ನ । ಸಾಮಾನ್ಯಾತ್ । ಅಪಿ । ಉಪಲಬ್ಧೇಃ । ಮೃತ್ಯುವತ್ । ನಹಿ । ಲೋಕಾಪತ್ತಿಃ — ಇತಿ ವಿಭಾಗಃ ।

(ಭಾ.) ನ ಸಾಮಾನ್ಯದರ್ಶನಮಾತ್ರೇಣ ಮುಕ್ತಿಃ । ಯಥಾ ಮೃತ್ಯುಮಾತ್ರಾತ್ । ನ ಹಿ ಲೋಕಾ-ಪತ್ತಿಮಾತ್ರಂ ಮುಕ್ತಿಃ । 'ಸಾಮಾನ್ಯದರ್ಶನಾಲ್ಲೋಕಾ ಮುಕ್ತಿರ್ಯೋಗ್ಯಾತ್ಮದರ್ಶನಾತ್' ಇತಿ ಹಿ ನಾರಾಯಣತಂತ್ರೇ ॥

'ಮುಚ್ಯತೇ ನಾತ್ರ ಸಂದೇಹೋ ದೃಷ್ಟ್ವಾ ತು ಸ್ವಾತ್ಮಯೋಗ್ಯಯಾ' ಇತಿ ಚ ॥
'ದರ್ಶನೇನಾತ್ಮಯೋಗ್ಯೇನ ಮುಕ್ತಿರ್ನಾನ್ಯೇನ ಕೇನಚಿತ್' ಇತಿ ಚಾಧ್ಯಾತ್ಮೇ ॥

(ಸೂ.ದೀ.) ಮೃತ್ಯುವತ್ ಮೃತ್ಯುಮಾತ್ರಾನಂತರಂ ಯಥಾ ನ ಮುಕ್ತಿಃ । ಕಿಂತು ಚರಮಮೃತಿವಿಶೇಷಾ-ನಂತರಮೇವ । ತದ್ವದತ್ರಾಪಿ ಭಗವದ್ರೂಪಾಣಾಂ ಸಾಮ್ಯೇಽಪಿ ಉಪಲಬ್ಧೇಃ । ಭಗವದ್-ದೃಷ್ಟಿ-

ಸಾಮಾನ್ಯಾತ್ ಸಾಧಾರಣರೂಪಾಪರೋಕ್ಷಜ್ಞಾನಾತ್ । ನ ಸರ್ವೇಷಾಂ ಮುಕ್ತಿಃ । ಕಿಂತು ಸ್ವಸ್ವಬಿಂಬ-ದರ್ಶನಾದೇವ । ನ ಚೈವಂ ಸಾಮಾನ್ಯದರ್ಶನಸ್ಯ ವೈಫಲ್ಯಮ್ । ತಸ್ಯ ಮಹರಾದಿಲೋಕಪ್ರಾಪ್ತಿ-ಸಾಧನತ್ವಾತ್ । ನ ಚ ಏತಾವತಾ ತಸ್ಯ ಮೋಕ್ಷಹೇತುತ್ವಂ ಪ್ರಾಪ್ನೋತಿ । ಹಿ ಯತಃ । ಲೋಕಾಪತ್ತಿಃ - ಲೋಕಪ್ರಾಪ್ತಿಮಾತ್ರಂ ನ ಮುಕ್ತಿಃ । ತಸ್ಮಾದಿತ್ಯರ್ಥಃ । ಹೀತ್ಯನೇನ 'ಸಾಮಾನ್ಯದರ್ಶನಾತ್' ಇತ್ಯಾದಿ ಪ್ರಮಾಣಪ್ರಸಿದ್ಧಿಶ್ಚ ಸೂಚಿತಾ ।

— ಎಲ್ಲರಿಗೂ ಮರಣವಾದ ಕೂಡಲೇ ಮುಕ್ತಿಯಿಲ್ಲ ಹೊರತು ಮುಕ್ತಿಗೆ ಉಪಯೋಗಿಯಾದ ಚರಮಮರಣವಾದ ಮೇಲೆಯೇ ಮುಕ್ತಿ. ಹಾಗೆ ಇಲ್ಲಿಯೂ ಎಲ್ಲ ಭಗವದ್ರೂಪಗಳು ಸಮಾನ-ವಾಗಿದ್ದರೂ ಭಗವಂತನ ಸಾಧಾರಣರೂಪಗಳ ಅಪರೋಕ್ಷಜ್ಞಾನದಿಂದ ಎಲ್ಲರಿಗೂ ಮುಕ್ತಿಯಿಲ್ಲ. ಹೊರತು ತಮ್ಮ ತಮ್ಮ ಬಿಂಬರೂಪಿಯಾದ ಭಗವಂತನ ದರ್ಶನದಿಂದಲೇ ಮುಕ್ತಿ. ಹಾಗಾದರೆ ಬೇರೆ ಭಗವಂತನ ರೂಪಗಳ ದರ್ಶನಮಾಡಿದಾಗ ಏನೂ ಫಲವಿಲ್ಲವೇ? ಎಂದರೆ ಫಲವಿದೆ ಎಂದೇ ಉತ್ತರ. ಮಹರಾದಿಲೋಕಪ್ರಾಪ್ತಿಯೇ ಫಲ. ಇಷ್ಟುಮಾತ್ರಕ್ಕೆ ಬಿಂಬಾತಿರಿಕ್ತಭಗವದ್ರೂಪದ ದರ್ಶನವು ಮೋಕ್ಷಸಾಧನ ಎನ್ನುವಂತಿಲ್ಲ. ಏಕೆಂದರೆ ಮಹರಾದಿಲೋಕಪ್ರಾಪ್ತಿಯೇ ಮುಕ್ತಿಯಲ್ಲ. ಈ ವಿಷಯದಲ್ಲಿ ಸಾಮಾನ್ಯದರ್ಶನಾತ್ ಎಂಬ ಪ್ರಮಾಣಪ್ರಸಿದ್ಧಿಯು ಸೂಚಿಸಲ್ಪಟ್ಟಿದೆ.

ಸಾಮಾನ್ಯದರ್ಶನಾತ್ ಎಂಬ ಶ್ರುತ್ಯರ್ಥ ಹೀಗಿದೆ — ಸಾಮಾನ್ಯದರ್ಶನಾತ್ = ಭಗವಂತನ ಅವತಾರಾದಿಗಳನ್ನು ದರ್ಶನಮಾಡುವುದರಿಂದ, ಲೋಕಾಃ = ಮಹರಾದಿ ಲೋಕಗಳು ಸಿಗುತ್ತವೆ. ಇನ್ನು ಯೋಗ್ಯವಾದ ಯಾವ ಆತ್ಮನದರ್ಶನವಿದೆಯೋ ಅರ್ಥಾತ್ ಬಿಂಬಾಪರೋಕ್ಷಜ್ಞಾನ-ವಿದೆಯೋ ಅದರಿಂದ ಮುಕ್ತಿ ಎಂದು ನಾರಾಯಣತಂತ್ರದಲ್ಲಿ ಹೇಳಿದ್ದಾರೆ.

"ಮುಚ್ಯತೇ ನಾತ್ರ" ಎಂಬ ವಾಕ್ಯದ ತಾತ್ಪರ್ಯ — ತನಗೆ ಯೋಗ್ಯವಾದ ದೃಷ್ಟಿಯಿಂದ ಅಂದರೆ ಸ್ವಾಂತರ್ಗತ ಬಿಂಬರೂಪಿ ಭಗವಂತನನ್ನು ಕಾಣುವುದರಿಂದಲೇ, ಮೋಕ್ಷ ಹೊಂದುತ್ತಾನೆ. ಬಿಂಬಾಪರೋಕ್ಷದಿಂದ ಮುಕ್ತಿ ಎಂಬ ವಿಷಯದಲ್ಲಿ ಸಂದೇಹವಿಲ್ಲ ಎಂಬ ಪ್ರಮೇಯವನ್ನು ನಾರಾಯಣತಂತ್ರದಲ್ಲಿಯೇ ತಿಳಿಸಿದ್ದಾರೆ.

ಇನ್ನು ಅಧ್ಯಾತ್ಮವಾಕ್ಯದ ತಾತ್ಪರ್ಯ ಹೀಗಿದೆ - ತನಗೆ ಯೋಗ್ಯವಾದ ಬಿಂಬದರ್ಶನದಿಂದಲೇ ಮುಕ್ತಿ. ಇದನ್ನು ಬಿಟ್ಟು ಬೇರೆಯ ಭಗವದ್ರೂಪಗಳ ದರ್ಶನದಿಂದ ಮುಕ್ತಿಯಿಲ್ಲ.

## ಬಿಂಬದ ಹೆಸರು ಹರಿ

(ಲಘುರಸರಂಜನೀ) — ತತ್ಕಿಂನಾಮಕಮಿತ್ಯತ ಉಕ್ತಂ — ಹರಯ ಇತಿ ॥ ತದ್ಬಿಂಬರೂಪಂ ಹರಿನಾಮಕಂ —

'ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ'
ಇತಿ ಶ್ರುತೇಃ ।

ತಥಾ ಶ್ರುತಿಪಾದೇ 'ಆಭಾಸ ಏವ ಚ' ಇತ್ಯಷ್ಟಾದಶೇ ಅಧಿಕರಣೇ ಜೀವಸಮುದಾಯಃ ಪರಮೇಶ್ವರಸ್ಯ ರೂಪಂ ರೂಪಂ ಪ್ರತಿರೂಪೋ ಭೂತ್ವಾ ವರ್ತತೇ । ತದ್ಬಿಂಬರೂಪಮಸ್ಯ ಮುಕ್ತ್ಯರ್ಥಂ ಸಾಕ್ಷಾತ್ಕಾರವಿಷಯೋ ಭವತಿ । ಸ ಚ ಪರಮೇಶ್ವರಃ ಸ್ವಸಾಮರ್ಥ್ಯೇನ ಅನಂತ-ಜೀವಬಿಂಬರೂಪೋ ಜಾಯತೇ । ಅಸ್ಯಾನಂತಾನಿ ಹರಿನಾಮಕಾನಿ ರೂಪಾಣಿ ವ್ಯೂಹಶಃ ಸಂತೀತಿ ಪ್ರಸಿದ್ಧಮಿತ್ಯರ್ಥ ಇತಿ । ತಥಾ ಉಪಾಸನಾಪಾದೇ 'ವಿಕಲ್ಪೋ ವಿಶಿಷ್ಟಫಲತ್ವಾತ್' ಇತ್ಯೇಕೋ-ನಚತ್ವಾರಿಂಶೇಽಧಿಕರಣೇ ಅತ್ರ ಹರಿದರ್ಶನೋಪಯೋಗ್ಯಬಿಂಬೋಪಾಸನಸ್ಯಾಕರ್ತವ್ಯತಾ-ನಿರಾಸಾದಸ್ತಿ ಶಾಸ್ತ್ರಾದಿಸಂಗತಿರಿತಿ ಚ ತತ್ತ್ವಪ್ರಕಾಶೋಕ್ತೇರಿತಿ ಭಾವಃ ।

ಆ ಬಿಂಬರೂಪದ ಹೆಸರೇನು? ಎಂಬ ಪ್ರಶ್ನೆಗೆ ಉತ್ತರವಾಗಿ "ಹರಯೇ" ಎಂದಿದ್ದಾರೆ. ಆ ಬಿಂಬರೂಪದ ಹೆಸರು ಹರಿ ಎಂದು. ಆ ರೀತಿಯಾದ ಬೃಹದಾರಣ್ಯಕಶ್ರುತಿ (ಪಂಚಮ ಮಧು-ಬ್ರಾಹ್ಮಣ) ಇರುವುದರಿಂದ. ಹಾಗೆ ಶ್ರುತಿಪಾದದಲ್ಲಿ ಬರುವ "ಆಭಾಸ ಏವ ಚ" ಎಂಬ ಹದಿನೆಂಟನೆಯ ಅಧಿಕರಣದಲ್ಲಿ. ಜೀವಸಮುದಾಯವು ಭಗವಂತನ ಪ್ರತಿಯೊಂದು ರೂಪಗಳಿಗೆ ಪ್ರತಿಬಿಂಬವಾಗಿದೆ. ಆ ಬಿಂಬರೂಪವು ಈ ಜೀವಸಮುದಾಯಕ್ಕೆ ಮುಕ್ತಿಗೋಸ್ಕರ ಸಾಕ್ಷಾತ್ಕಾರ-ವಿಷಯವಾಗಿ ಆಗಬೇಕು. ಆ ಪರಮೇಶ್ವರನಾದರೋ ತನ್ನ ಸಾಮರ್ಥ್ಯದಿಂದ ಅನಂತಜೀವರಿಗೆ ಬಿಂಬರೂಪನಾಗುವನು. ಅಂದರೆ ಭಗವಂತನ ಅನಂತ ಹರಿ ಎಂಬ ಹೆಸರುಳ್ಳ ರೂಪಗಳು ವ್ಯೂಹವಾಗಿವೆ ಎಂದು ಪ್ರಸಿದ್ಧ. ಹಾಗೆ ಉಪಾಸನಾಪಾದದಲ್ಲಿ "ವಿಕಲ್ಪೋ ವಿಶಿಷ್ಟಫಲತ್ವಾತ್" ಎಂಬ ಮೂವತ್ತೊಂಭತ್ತನೆಯ ಅಧಿಕರಣದಲ್ಲಿ ತತ್ವಪ್ರಕಾಶದಲ್ಲಿ ಹೀಗೆ ಹೇಳಿದ್ದಾರೆ - ಬಿಂಬರೂಪಿಯಾದ ಹರಿಯ ದರ್ಶನಕ್ಕೆ ಉಪಯೋಗಿಯಾದ ಬಿಂಬನಲ್ಲದ ಭಗವದ್ರೂಪಗಳ ಉಪಾಸನೆಯು ಮಾಡಬೇಕಾಗಿಲ್ಲ ಎಂಬ ಶಂಕೆಯನ್ನು ನಿರಾಸಮಾಡುವುದರಿಂದ ಈ ಅಧಿಕರಣಕ್ಕೆ ಶಾಸ್ತ್ರಾದಿಸಂಗತಿಗಳಿರುವುದು - ಎಂದು.

## ರೂಪಂ ರೂಪಂ ಪ್ರತಿರೂಪೋ ಬಭೂವ ಮಂತ್ರಾರ್ಥ

* (बृह. खण्डार्थ) – अध्यात्ममात्मेति हरेः सर्वजीवस्थत्वमुक्तं तत् दधीचाऽश्विभ्यामुक्तं चेत्याह – इदमिति ॥ तदिदं सर्वजीवस्थत्वम् । तत्र मन्त्रमाह – रूपमिति ॥ जीवो हरे रूपं रूपं प्रति प्रतिरूपः प्रतिबिम्बो बभूव । तत् बिम्बरूपम् अस्य जीवस्य । प्रतिचक्षणाय साक्षात्काराय

भवति । नन्वेकस्य कथं बहुजीवेषु बिम्बतया स्थितिरित्यत आह - इन्द्र इति ॥ इन्द्रः परमेश्वरः मायाभिः स्वसामर्थ्यैः पुरुरूपः अनन्तजीवबिम्बरूपः ईयते ज्ञायते । अस्येन्द्रस्य हरयो हरिनामकानि रूपाणि दशशतानि युक्ता संयुक्ताः व्यूहशः सन्तीति हि प्रसिद्धम् । इन्द्ररथाश्वप्रतीतिं निवारयितुमाह - अयं वा इति ॥ हरयो हरिनामकानि दश मत्स्यादीनि । चशब्दान्नारायणादीनि शतानि अयमिन्द्रः सहस्राणि विश्वादीनि । अयं बहूनि परादीनि । अयमनन्तानि अजितादीनि ।

– ಹರಿಯು ಎಲ್ಲ ಜೀವರಲ್ಲಿ ಇದ್ದಾನೆ. ಪ್ರತಿಯೊಂದು ಜೀವರಿಗೂ ಬಿಂಬರೂಪಿಯಾಗಿ ಇದ್ದಾನೆ. ಜೀವರೆಲ್ಲರೂ ಪ್ರತಿಬಿಂಬರೆನಿಸುವರು. ಆ ಬಿಂಬರೂಪೀ ಭಗವಂತ ತನ್ನ ಪ್ರತಿಬಿಂಬನಾದ ಜೀವನಿಗೆ ಮುಕ್ತಿಯನ್ನು ನೀಡಬೇಕಾದರೆ ಜೀವನಿಗೆ ಅವನ ಸಾಕ್ಷಾತ್ಕಾರ ಆಗಬೇಕು. ಇನ್ನು ಒಬ್ಬನೇ ಹರಿಯು ಅನೇಕ ಜೀವರಲ್ಲಿ ಬಿಂಬನಾಗಿರುವುದು ಹೇಗೆ? ಉತ್ತರ ಇದು – ಪರಮೇಶ್ವರನು ತನ್ನ ಸಾಮರ್ಥ್ಯದಿಂದಾಗಿ ಅನಂತಜೀವರ ಬಿಂಬನಾಗಿ ತಿಳಿಯಲ್ಪಡುತ್ತಾನೆ. ಈ ಪರಮೇಶ್ವರನ ರೂಪಗಳು ಬಹಳ ಇವೆ. ಅಜಿತಾದಿರೂಪಗಳು, ವಿಶ್ವಾದಿರೂಪಗಳು, ನಾರಾಯಣಾದಿ ರೂಪಗಳು, ಮತ್ಸ್ಯಾದಿ ರೂಪಗಳು, ಪರಾದಿರೂಪಗಳು, ಹರಿ ಹೆಸರಿನ ರೂಪಗಳು ಹೀಗೆ ಬಹಳವಿವೆ.

* तत्वप्रकाशिका - अंशत्वाविशेषेऽपि जीवानां प्रतिबिम्बांशत्वमस्ति । 'रूपं रूपम्' इति श्रुतेः । न च तन्मत्स्यादीनामतो नैकविधतेति भावः । जीवसमुदायः परमेश्वरस्य रूपं रूपं प्रतिरूपो भूत्वा वर्तते तद्बिम्बरूपमस्य मुक्त्यर्थं साक्षात्कारविषयो भवति । स च परमेश्वरः स्वसामर्थ्येनानन्तजीवबिम्बरूपो ज्ञायते । अस्यानन्तानि हरिनामकानि रूपाणि व्यूहशः सन्तीति प्रसिद्धमित्यर्थः ।

** ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥
(ಋ.6-47-18)

'ಶೃಣ್ವೇ ವೀರಃ' (ಋ.6-47-16) ಇತ್ಯಾದಿನಾ ಪ್ರಕೃತಃ ತ್ರಿವಿಧಜೀವಸಮುದಾಯಃ ಅಸ್ಯ ಪರಮೇಶ್ವರಸ್ಯ ರೂಪಂ ರೂಪಂ ಪ್ರತಿ 'ಪ್ರತಿರೂಪಃ' ಪ್ರತಿಬಿಂಬೋ 'ಬಭೂವ' ಪ್ರತಿಬಿಂಬೋ ಭೂತ್ವಾ ವರ್ತತೇ । ತದ್ಬಿಂಬರೂಪಮಸ್ಯ ಪ್ರತಿಬಿಂಬತ್ವೇನೋಕ್ತಸ್ಯ ಯೋಗ್ಯಜೀವಸ್ಯ ಮುಕ್ತ್ಯರ್ಥಂ 'ಪ್ರತಿಚಕ್ಷಣಾಯ' ಸಾಕ್ಷಾತ್ಕಾರಾಯ ಭವತಿ ತದ್ವಿಷಯೋ ಭವತಿ। ಸ ಚ 'ಇಂದ್ರಃ' ಪರಮೇಶ್ವರಃ 'ಮಾಯಾಭಿಃ' ಸ್ವಸಾಮರ್ಥ್ಯೈಃ ಇಚ್ಛಾಭಿರ್ವಾ 'ಪುರುರೂಪಃ' ಅನಂತಜೀವಬಿಂಬರೂಪಃ 'ಈಯತೇ' ಜ್ಞಾಯತೇ । 'ಅಸ್ಯ' ಈಶ್ವರಸ್ಯ 'ಶತಮನಂತಂ ಭವತಿ' ಇತಿ ವಚನಾತ್ ಶತಾನಿ

ಅಜತಾದ್ಯನಂತರೂಪಾಣಿ, ಏವಂ ದಶಶತಾನಿ ವಿಶ್ವಾದಿಸಹಸ್ರರೂಪಾಣಿ, ಏವಂ ಶತಾನಿ 'ನಾರಾಯಣೋ ನರಃ ಶೌರಿಃ' ಇತ್ಯಾದೀನಿ, ದಶ ಮತ್ಸ್ಯಾದೀನಿ, ಏವಂ ದಶ ಬಹೂನಿ ಪರಾದೀನಿ, 'ಹರಯೋ' ಹರಿನಾಮಕಾನಿ ರೂಪಾಣಿ 'ಯುಕ್ತಾಃ' ವ್ಯೂಹಶಃ ಸಂತಿ 'ಹಿ' ಪ್ರಸಿದ್ಧಮಿತಿ। (ಭಾಷ್ಯದೀಪಿಕಾ)

## ಸೂತ್ರಭಾಷ್ಯಗಳಲ್ಲಿ ಸಾಮಾನ್ಯಪದವಾದ ಬ್ರಹ್ಮಪದಪ್ರಯೋಗ ಏಕೆ?

(ಲಘುರಸರಂಜನೀ) — ಸೂತ್ರಭಾಷ್ಯಯೋಃ ಸಾಮಾನ್ಯಪದಪ್ರಯೋಗಸ್ತು ದ್ವಾರತಯಾ ರೂಪಾಂತರಸ್ಯಾಪಿ ಜಿಜ್ಞಾಸ್ಯತಾಲಾಭಾಯ । ತೇನ ತದ್ವಚನಾನ್ಯಪಿ ಅನುಕೂಲಿತಾನಿ ಭವಂತೀತಿ । ಇಮಮೇವಾಶಯಂ ವಿವಕ್ಷಿತ್ವಾ ಸೂತ್ರಕಾರೋ ಬಹುಬಿಂಬಲಕ್ಷಣೋಪೇತಾಂ 'ಬ್ರಹ್ಮವಿದಾಪ್ನೋತಿ ಪರಮ್' ಇತ್ಯಾದಿತೈತ್ತಿರೀಯಶ್ರುತಿಂ ಸ್ಮಾರಯಿತುಂ ತತ್ರತ್ಯಬ್ರಹ್ಮಪದಪಠನೇನ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಇತಿ ತೈತ್ತಿರೀಯಶ್ರುತಿಮೇವ ವಿಶಿಷ್ಯ ವಿಷಯವಾಕ್ಯತಯಾ ನಿರ್ದಿದೇಶೇತಿ । ಅತ್ರಾಸ್ಯ ಪದ್ಯಸ್ಯಾರ್ಥವಿಶೇಷಾಸ್ತು ಅನುವ್ಯಾಖ್ಯಾನಾದ್ಯಪದ್ಯಸ್ಯ ಕರಿಷ್ಯಮಾಣವ್ಯಾಖ್ಯಾನಾನುಸಾರೇಣ ಜ್ಞೇಯಾಃ । ತತ್ಪ್ರಕಾರಶ್ಚ ನಿಪುಣತರಂ ವ್ಯುತ್ಪಾದಿತೋಽಸ್ಮದ್ಗುರುಚರಣೈಃ ಸುಧಾರಸರಂಜನ್ಯಾಮಿತಿ ಸಪ್ರಪಂಚರುಚಿಭಿರವಹಿತೈಸ್ತತ್ರೈವ ದ್ರಷ್ಟವ್ಯ ಇತಿ ।

ಬ್ರಹ್ಮಸೂತ್ರ ಹಾಗೂ ಭಾಷ್ಯಗಳಲ್ಲಿ ಹರಿ ಎಂಬ ವಿಶೇಷಶಬ್ದವನ್ನು ಪ್ರಯೋಗಿಸದೇ ಬ್ರಹ್ಮ ಎಂಬ ಸಾಮಾನ್ಯಪದವನ್ನು ಪ್ರಯೋಗಮಾಡಿದ್ದಾದರೋ, ದ್ವಾರವಾಗಿ ಬೇರೆ ರೂಪಗಳು ಜಿಜ್ಞಾಸ್ಯವಾಗಿವೆ ಎಂಬ ಅರ್ಥದ ಲಾಭಕ್ಕೋಸ್ಕರ. ಈ ರೀತಿ ಹೇಳಿದ್ದರಿಂದ ರೂಪಾಂತರಗಳು ಜಿಜ್ಞಾಸ್ಯ ಎಂಬ ಮಾತುಗಳು ಅನುಕೂಲವಾಗುತ್ತವೆ. ಇದೇ ಅಭಿಪ್ರಾಯವನ್ನು ವಿವಕ್ಷೆಮಾಡಿ ಸೂತ್ರಕಾರರು ಅನೇಕ ಬಿಂಬಲಕ್ಷಣಗಳನ್ನು ತಿಳಿಸುತ್ತಿರುವ 'ಬ್ರಹ್ಮವಿದಾಪ್ನೋತಿ ಪರಂ' ಮುಂತಾದ ತೈತ್ತಿರೀಯಶ್ರುತಿಯನ್ನು ಸ್ಮರಣೆಗೆ ತರಲು ಅಲ್ಲಿರುವ ಬ್ರಹ್ಮಪದವನ್ನೇ ಮೊದಲನೆಯ ಸೂತ್ರದಲ್ಲಿ ಪಠಿಸಿ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ತೈತ್ತಿರೀಯಶ್ರುತಿಯನ್ನೇ ವಿಶೇಷವಾಗಿ ಅಧಿಕರಣದ ವಿಷಯವಾಕ್ಯವನ್ನಾಗಿ ನಿರ್ದೇಶಿಸಿದ್ದಾರೆ.

ಶ್ರಿಯಃ ಪತ್ಯೇ ಎಂಬ ಈ ಪದ್ಯದ ಇನ್ನೂ ವಿಶೇಷಾರ್ಥಗಳನ್ನು ಅನುವ್ಯಾಖ್ಯಾನದ ಮೊದಲನೆಯ ಪದ್ಯಕ್ಕೆ ಮುಂದೆ ಮಾಡುವ ವ್ಯಾಖ್ಯಾನವನ್ನು ಅನುಸರಿಸಿ ತಿಳಿಯಬೇಕು. ಆ ಕ್ರಮವಾದರೋ ತುಂಬ ಚೆನ್ನಾಗಿ ನಮ್ಮ ಗುರುಪಾದರು ಸುಧಾ ರಸರಂಜನಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಅದನ್ನು ಅಲ್ಲಿಯೇ ವಿಸ್ತಾರವಾಗಿ ವಿಷಯವನ್ನು ತಿಳಿಯುವಲ್ಲಿ ಉತ್ಸುಕತೆಯುಳ್ಳ ಶ್ರದ್ಧಾಳುಗಳು ನೋಡಬೇಕು.

## ಬ್ರಹ್ಮವಿದಾಪ್ನೋತಿ ಪರಮ್

* * 'ಬ್ರಹ್ಮವಿದಾಪ್ನೋತಿ ಪರಮ್' – ಪ್ರಧಾನಬ್ರಹ್ಮವಿದ್ಯಾಮಾಹ - ಬ್ರಹ್ಮವಿದಾಪ್ನೋತಿ ಪರಮಿತಿ ॥ ತಸ್ಯಾರ್ಥಃ ಬ್ರಹ್ಮಪ್ರಾಪ್ತಿಕಾಮೋ ಬ್ರಹ್ಮ ಜಾನೀಯಾದಿತಿ ॥ (ತೈ.ಖಂ.)

* ತತಶ್ಚ ಬ್ರಹ್ಮವಿತ್ ಇತ್ಯಾದೇರಯಮರ್ಥಃ – ಅತ್ರ ಬ್ರಹ್ಮಶಬ್ದಪರಶಬ್ದೌ ಪರಬ್ರಹ್ಮಪರೌ ಅನ್ಯಜ್ಞಾನೇನ ಅನ್ಯಪ್ರಾಪ್ತ್ಯಯೋಗಾತ್ ಬ್ರಹ್ಮವೇತ್ತೀತಿ ಬ್ರಹ್ಮವಿತ್ ಸ್ವಯೋಗ್ಯಬ್ರಹ್ಮಜ್ಞಾನವಾನ್ ಪರಂ ಬ್ರಹ್ಮ ಪ್ರಾಪ್ನೋತಿ । ಬ್ರಹ್ಮಪ್ರಾಪ್ತಿಕಾಮೋ ಬ್ರಹ್ಮ ವಿದ್ಯಾದಿತಿ ಯಾವತ್ । (ಕಾಶೀ.ಖಂ.)

ಬ್ರಹ್ಮನನ್ನು ಹೊಂದಬೇಕು ಎಂದು ಬಯಸುವನು ಬ್ರಹ್ಮನನ್ನು ತಿಳಿಯಬೇಕು. ಇಲ್ಲಿ ಬ್ರಹ್ಮ ಪರ ಎಂಬ ಶಬ್ದಗಳು ಪರಬ್ರಹ್ಮಪರವಾಗಿದೆ ಎಂದು ತಿಳಿಯಬೇಕು. ತಥಾಚ – ತನಗೆ ಯೋಗ್ಯವಾದ ಬ್ರಹ್ಮಜ್ಞಾನವನ್ನು ಪಡೆದವನು ಆ ಪರಬ್ರಹ್ಮನನ್ನು ಹೊಂದುತ್ತಾನೆ.

## ಯತೋ ವಾ ಇಮಾನಿ - ಶ್ರುತ್ಯರ್ಥ

** ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ। । ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮ' (ತೈತ್ತಿರೀಯ ಭೃಗುವಲ್ಲೀ 3.1)

– ತದೇವ ಲಕ್ಷಣಜಾತಂ ದರ್ಶಯತಿ – ಯತ ಇತ್ಯಾದಿನಾ । ಜೀವಂತಿ ಚೇಷ್ಟಂತೇ ಯತ್ಪ್ರಯಂತಿ ಪ್ರಲಯೇ। ಅಭಿ ಸ್ವೇಚ್ಛಯಾ ಸಂವಿಶಂತಿ ಮುಕ್ತೌ । ತದ್ಬ್ರಹ್ಮೇತಿ ಜ್ಞಾತ್ವಾ ತದ್ಬ್ರಹ್ಮ ವಿಜಿಜ್ಞಾಸಸ್ವ ಮನನನಿದಿಧ್ಯಾಸನರೂಪಾಂ ಜಿಜ್ಞಾಸಾಂ ಕುರ್ವಿತ್ಯರ್ಥಃ । ನ ಶ್ರವಣಮಾತ್ರೇಣ ಕೃತೀ ಭವಾನ್ ಶ್ರವಣಮಾತ್ರಸ್ಯ ಬ್ರಹ್ಮಸಾಕ್ಷಾತ್ಕಾರಾಸಾಧನತ್ವಾತ್ । ಸಾಕ್ಷಾತ್ಕಾರಸ್ಯೈವ ಮೋಕ್ಷಹೇತುತ್ವಾದತಃ ತತ್ಸಾಧನೀಭೂತಾಂ ಜಿಜ್ಞಾಸಾಂ ಕುರ್ವಿತಿ ಭಾವಃ ॥ (ಶ್ರೀ.ಖಂ)

ಯಾರಿಂದಾಗಿ ಈ ಜೀವಿಗಳು ವ್ಯಾಪಾರವನ್ನು ಮಾಡುತ್ತಿದ್ದಾರೋ ಯಾರಿಂದ ಪ್ರಲಯಕಾಲದಲ್ಲಿ ಲಯವನ್ನು ಹೊಂದುತ್ತಾರೋ, ಯಾರ ಇಚ್ಛೆಯಿಂದಾಗಿ ಮುಕ್ತಿಯಲ್ಲಿ ಪ್ರವೇಶಪಡೆಯುತ್ತಾರೋ ಅದನ್ನು ಬ್ರಹ್ಮ ಎಂದು ತಿಳಿದು ಆ ಬ್ರಹ್ಮನ ಮನನ ನಿದಿಧ್ಯಾಸನರೂಪವಾದ ಜಿಜ್ಞಾಸೆಯನ್ನು ಮಾಡಬೇಕು. ಏಕೆಂದರೆ ಕೇವಲ ಶ್ರವಣವು ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಲ್ಲವಾದ್ದರಿಂದ. ಸಾಕ್ಷಾತ್ಕಾರವೇ ಮೋಕ್ಷಕ್ಕೆ ಸಾಧನವಾದ್ದರಿಂದ ಅದಕ್ಕೆ ಸಾಧನವಾದ ಜಿಜ್ಞಾಸೆಯನ್ನು ಮಾಡು ಎಂದರ್ಥ.

## ಹರಯೇ ನಿತ್ಯಂ ನಮಃ

(ಲಘುರಸರಂಜನೀ) – ಅತ್ರ ಹರಯೇ ನಮಃ ಇತ್ಯನ್ವಯಃ । ಪ್ರಕರಣಾತ್ ಕರೋಮೀತಿ ವಾ ।

ಅಸ್ತಿಭವತ್ಯೋಃ ಸರ್ವತ್ರಾನುಷಂಗಾತ್ ಅಸ್ತೀತಿ ಉಪಲಭ್ಯತೇ । ಬುದ್ಧ್ಯಾ ವಿವಿಕ್ತಂ 'ನಿತ್ಯ'ಪದಂ ನಮಃ ಇತ್ಯತ್ರಾಪಿ ಅನ್ವೇತಿ । ತೇನ ಸದಾತನತ್ವರೂಪಂ ನಿತ್ಯತ್ವಂ ಸಿದ್ಧ್ಯದನ್ಯಥಾನುಪಪತ್ತ್ಯಾ ನಮತೇ- ರ್ಭಕ್ತ್ಯಾದ್ಯತಿಶಯಸಾಹಿತ್ಯಂ ದ್ಯೋತಯತಿ ।

'ಶ್ರಿಯಃ ಪತ್ಯೇ' ಎಂಬ ಮಂಗಳಪದ್ಯದಲ್ಲಿ ಕೊನೆಯ ವಾಕ್ಯ ಹೀಗಿದೆ — ನಮೋ ಅಶೇಷಾಮ್ನಾಯ- ಸ್ಮೃತಿಹೃದಯದೀಪ್ತಾಯ ಹರಯೇ' ಎಂದು. ಇಲ್ಲಿ 'ಹರಯೇ ನಮಃ' ಎಂದು ಅನ್ವಯವನ್ನು ಮಾಡಿ- ಕೊಳ್ಳಬೇಕು. ಅನಂತರ ಹರಿಗೆ ನಮಸ್ಕಾರವನ್ನು ಮಾಡುತ್ತಿದ್ದೇನೆ ಎಂದು ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು - ಹರಯೇ ನಮಃ ಕರೋಮಿ ಎಂದು. ಅಥವಾ ಹರಯೇ ನಮಃ ಅಸ್ತು ಎಂದು. ಏಕೆಂದರೆ 'ಅಸ್ತಿಭವತ್ಯೋಃ ಸರ್ವತ್ರಾನುಷಂಗಾತ್' ಎಂಬ ವಾಕ್ಯಾನುಗುಣವಾಗಿ ಯಾವುದಾದರೂ ವಾಕ್ಯದಲ್ಲಿ ಕ್ರಿಯಾಪದವಿಲ್ಲದಿದ್ದರೆ ಸರ್ವಸಾಧಾರಣವಾಗಿ ಅಸ್ ಧಾತುವಿನ, ಭೂಧಾತುವಿನ ಸಂಬಂಧವು ಅಲ್ಲಿ ಇರುತ್ತದೆ. ಇನ್ನು 'ಹರಯೇ ನಿತ್ಯಂ ನಮಃ' ಎಂದೂ, 'ನಿತ್ಯಾಗಣಿತಗುಣಮಾಣಿಕ್ಯ' ಎಂಬಲ್ಲಿರುವ ನಿತ್ಯ ಎಂಬ ಶಬ್ದವನ್ನು ಬುದ್ಧಿಯಿಂದ ವಿಭಾಗ- ಮಾಡಿಕೊಂಡು ಅನ್ವಯಿಸಬೇಕು.

ಇದರಿಂದ ತಿಳಿಯುವ ಅಂಶವಿದು — ಹರಿಗೆ ನಿತ್ಯವೂ ನಮಸ್ಕರಿಸುತ್ತಿದ್ದೇನೆ ಎನ್ನುವುದರಿಂದ ಆ ನಮಸ್ಕಾರದಲ್ಲಿ ಭಕ್ತಿ, ಶ್ರದ್ಧೆ ಮುಂತಾದ ಅತಿಶಯಗಳು ತೋರುತ್ತಿವೆ.

## ನಿರುಪಪದ ನಮಃ ಪದಾರ್ಥ

(ಲಘುರಸರಂಜನೀ) — ಯದ್ವಾ, ನಿರುಪಪದಂ ನಮಃಪದಮೇವ ಮುಖ್ಯನಮನಾಭಿಧಾಯಕಮ್ । ನಿರುಪಪದಶಬ್ದಸ್ಯ ಮುಖ್ಯಾರ್ಥಾಭಿಧಾಯಕತ್ವಸ್ಯ ಸೂತ್ರಶಬ್ದಾರ್ಥಕಥನಾವಸರೇ ಸಮರ್ಥಿತತ್ವಾತ್ । ನಮನಸ್ಯ ಮುಖ್ಯತ್ವಂ ಚ ಭಕ್ತ್ಯಾದ್ಯತಿಶಯಸಾಹಿತ್ಯಮೇವ । ತಥಾವಿಧಮೇವ ಹಿ ಹರಿನಮನಂ ಭವತ್ಯಭಿಮತಸಿದ್ಧೇರಂಗಮ್ ॥

ಅಥವಾ ನಮಃ ಎಂಬ ಪದಕ್ಕೆ ನಿತ್ಯ ಎಂದು ಅನ್ವಯವನ್ನು ಮಾಡದೇ ಇದ್ದರೂ ನಮಃ ಪದದಿಂದಲೇ ಈ ಅರ್ಥದ ಲಾಭವಾಗುವುದು. ಹೇಗೆಂದರೆ ಉಪಪದ ಕೊಡದೇ ಇರುವ ಶಬ್ದಗಳು ಮುಖ್ಯಾರ್ಥವನ್ನೇ ಹೇಳುತ್ತವೆ. ಉದಾ - ಸೂತ್ರಗಳು ಎಂದಿಷ್ಟೇ ಹೇಳಿದರೂ ಸಾಕು ಅದು ಮುಖ್ಯವಾದ ಬ್ರಹ್ಮಸೂತ್ರವನ್ನೇ ಹೇಳುವುದು. ಅದರಂತೆ ಇಲ್ಲಿಯೂ ನಮಃ ಎಂದಿಷ್ಟೇ ಹೇಳಿದರೂ ಅದು ಮುಖ್ಯವಾದ ನಮಸ್ಕಾರವನ್ನೇ ಹೇಳುವುದು. ಮುಖ್ಯವಾದ ನಮಸ್ಕಾರವೆಂದರೆ ಭಕ್ತ್ಯಾದಿ ಅತಿಶಯಗಳಿಂದ ಸಹಿತವಾದದ್ದೇ ಎಂದು ಅಭಿಪ್ರಾಯ. ಏಕೆಂದರೆ, ಅಂತಹ ನಮಸ್ಕಾರವೇ ಕರ್ತೃವಿಗೆ ಅಭಿಮತವಾದ ಫಲಕ್ಕೆ ಕಾರಣವಾಗಿರುವುದಾದ್ದರಿಂದ.

## ಶ್ರಿಯಃ ಪತ್ಯೇ ಎಂಬ ಶ್ಲೋಕದಲ್ಲಿ ಆರ್ಥಿಕಪುನರುಕ್ತಿ ಇಲ್ಲ

(ಲಘುರಸರಂಜನೀ) — ಶ್ರಿಯಃ ಪತ್ಯೇ ಇತ್ಯಾದೀನಾಂ ತು ನಮನೋದ್ದೇಶೇನ ಹರಿಣಾ ವಿಶೇಷಣ-ತಯಾ ಸಂಬಂಧಃ। ಪ್ರಯೋಜನಂ ಚ ಸ್ತುತಿಪದಾನಾಂ ವಿಶೇಷ್ಯಪ್ರಶಂಸೈವ। ತತ್ರಾರ್ಥಿಕಪುನರುಕ್ತೇಃ ಸ್ತುತಿತ್ವಮೇವ ಸಮಾಧಾನಮವಧಾತವ್ಯಮ್ ।

ಶ್ರಿಯಃ ಪತ್ಯೇ ಎಂಬ ಪದ್ಯದಲ್ಲಿ ಹರಯೇ ಎಂಬುದು ವಿಶೇಷ್ಯವಾಚಕ ಪದವಾಗಿದೆ. ಹರಯೇ ಎಂಬುದಕ್ಕೆ ಶ್ರಿಯಃ ಪತ್ಯೇ ಮುಂತಾದವುಗಳು ವಿಶೇಷಣವಾಗಿವೆ ಎಂದು ತಿಳಿಯಬೇಕು. ಈ ಎಲ್ಲ ಸ್ತುತಿಸುವ ಪದಗಳಿಗೆ ವಿಶೇಷ್ಯನಾದ ಹರಿಯ ಪ್ರಶಂಸೆಯೇ ಪ್ರಯೋಜನ ಎಂದು ತಿಳಿಯಬೇಕು. ಹಾಗಂತ ಆರ್ಥಿಕಪುನರುಕ್ತಿ ಎಂಬ ದೋಷವನ್ನು ಇಲ್ಲಿ ಶಂಕಿಸಕೂಡದು. ಇದು ಒಂದು ಸ್ತುತಿಯಾ-ದ್ದರಿಂದ. ಸ್ತುತಿಯಲ್ಲಾದರೋ ಆರ್ಥಿಕಪುನರುಕ್ತಿಯನ್ನು ದೋಷವೆಂದು ಒಪ್ಪಿಲ್ಲವಾದ್ದರಿಂದ.

## ಬ್ರಹ್ಮಜಿಜ್ಞಾಸಾಪದಾರ್ಥ

(ಲಘುರಸರಂಜನೀ) — ಅತ್ರ ಶಿಷ್ಯಜನಶಿಕ್ಷಣದೀಕ್ಷಿತೇನ ಬಾದರಾಯಣೇನ ಶಿಷ್ಟಶಿಕ್ಷಾರ್ಥಂ ಗ್ರಂಥಾದೌ ದೇವತಾವಂದನಂ ಕಸ್ಮಾನ್ನ ಅನುಷ್ಠಿತಮಿತ್ಯಾಶಂಕಾಪನೋದಾಯೋಕ್ತಂ ಸೂತ್ರಕೃತಾ — ಬ್ರಹ್ಮಜಿಜ್ಞಾಸೇತಿ ॥ ಅನೇಕಾರ್ಥತ್ವಾತ್ ಬ್ರಹ್ಮ-ಜಿಜ್ಞಾಸಪದಯೋಃ ಪ್ರಕೃತಾನುಕೂಲಾರ್ಥೌ ಅಭಿಹಿತೌ ಪೂರ್ವಪ್ರಸ್ಥಾನೇ — ನಾರಾಯಣಂ ನತ್ವೇತಿ ॥ ಅತಃ ಬ್ರಹ್ಮಪದಾರ್ಥೋ ನಾರಾಯಣಃ ಜಿಜ್ಞಾಸಾಪದಾರ್ಥೋ ನಮನಮ್ । ಮನೋವೃತ್ತೇಸ್ತತ್ಪ್ರವಣತಾ ಹಿ ನಮನಂ ನಾಮ । ಜಿಜ್ಞಾಸಾಪಿ ತದ್ವಿಶೇಷ ಏವ ಇತ್ಯುಕ್ತಂ ಭವತಿ । ಯದುಕ್ತಂ ನತ್ವೇತಿ ನಮನಮಾತ್ರಂ ಜಿಜ್ಞಾಸಾಪದಾರ್ಥ ಇತಿ ತದಯುಕ್ತಮ್ । ನಮನಮಾತ್ರಸ್ಯಾಭಿಮತಸಿದ್ಧ್ಯಂಗತ್ವಾಭಾವಾತ್ ಇತ್ಯತಃ ತದ್ವಿವೃತಮ್ ಉತ್ತರ-ಪ್ರಸ್ಥಾನೇ— ನಾರಾಯಣಂ ಸನ್ನಮಾಮೀತಿ ॥ ಸಮಿತಿ ಭಕ್ತ್ಯಾದ್ಯತಿಶಯಸಾಹಿತ್ಯಲಕ್ಷಣಾಂ ಪ್ರಣಾಮಸ್ಯ ಸಮ್ಯಕ್ತಾಮಾಹ । ತಥಾ ಚ ನಮನಮಾತ್ರಂ ನ ಜಿಜ್ಞಾಸಾಪದಾರ್ಥಃ । ಯೇನಾಭಿಮತಸಿದ್ಧ್ಯ-ಭಾವಃ । ಕಿಂತು ಭಕ್ತ್ಯಾದ್ಯತಿಶಯಸಹಿತಂ ಮುಖ್ಯಮೇವ ನಮನಮ್ । 'ನತ್ವಾ' ಇತ್ಯುಕ್ತಿಸ್ತು ನಿರುಪ-ಪದಪದಸ್ಯ ಮುಖ್ಯಾರ್ಥಾಭಿಧಾಯಕತ್ವಾಭಿಪ್ರಾಯೇಣೇತಿ ಭಾವಃ । ಅತ ಏವ ಸುಧಾಯಾಂ 'ನಮಃ' ಇತ್ಯೇವೋಕ್ತಮ್ ।

ಶಿಷ್ಯರಾದ ಜನರನ್ನು ಶಿಕ್ಷಣೆ ಮಾಡಲು ಸಮರ್ಥರಾದ ವೇದವ್ಯಾಸರು ಶಿಷ್ಟರ ಶಿಕ್ಷಣೆಗೋಸ್ಕರ ತಮ್ಮ ಗ್ರಂಥದ ಮೊದಲಿಗೆ ದೇವತಾನಮಸ್ಕಾರವನ್ನು ಯಾಕೆ ಅನುಷ್ಠಾನಮಾಡಲಿಲ್ಲ? ಎಂಬ ಪ್ರಶ್ನೆಯನ್ನು ಹೋಗಲಾಡಿಸಲು ಬ್ರಹ್ಮಜಿಜ್ಞಾಸಾ ಎಂದಿದ್ದಾರೆ. ಭಾಷ್ಯದಲ್ಲಿ ಪ್ರಕೃತಕ್ಕೆ ಅನುಕೂಲವಾದ ಅರ್ಥಗಳನ್ನೇ ಬ್ರಹ್ಮ ಹಾಗೂ ಜಿಜ್ಞಾಸಾ ಪದಗಳಿಗೆ ಹೇಳಿದ್ದಾರೆ. ಯದ್ಯಪಿ ಅವುಗಳು

ಅನೇಕಾರ್ಥವುಳ್ಳವುಗಳು. 'ನಾರಾಯಣಂ ನತ್ವಾ' ಎಂಬಲ್ಲಿ ನಾರಾಯಣನಿಗೆ ನಮಸ್ಕರಿಸಿ ಎಂದು ಹೇಳಿದ್ದರಿಂದ ಬ್ರಹ್ಮಶಬ್ದದ ಅರ್ಥವಾಗಿದ್ದಾನೆ ನಾರಾಯಣ ಎಂದು ತಿಳಿಯಬೇಕು. ಜಿಜ್ಞಾಸಾಶಬ್ದದ ಅರ್ಥ ನಮನ ಎಂದು. ನಮನವೆಂದರೆ ಮನೋವೃತ್ತಿಯ ಭಗವಲ್ಲಗ್ನತೆ. ಜಿಜ್ಞಾಸೆಯು ನಮಸ್ಕಾರದ ಒಂದು ಪ್ರಭೇದವೇ ಆಗಿದೆ ಎಂದು ತಿಳಿಯಬೇಕು.

ಇನ್ನು ನತ್ವಾ ಎಂದು ಕೇವಲ ನಮಸ್ಕಾರವನ್ನೇ ಜಿಜ್ಞಾಸಾಪದದ ಅರ್ಥವೆಂದು ಹೇಳಿದ್ದಾರೆ. ಅದು ಸರಿಯಲ್ಲ. ಕೇವಲ ನಮಸ್ಕಾರವು ಅಭಿಮತವಾದ ಗ್ರಂಥಸಮಾಪ್ತಿಗೆ ಕಾರಣವಲ್ಲವಾದ್ದರಿಂದ ಎಂಬ ಪ್ರಶ್ನೆಗೆ ಉತ್ತರವಾಗಿ ಉತ್ತರಪ್ರಸ್ಥಾನವೆನಿಸುವ ಅನುವ್ಯಾಖ್ಯಾನದಲ್ಲಿ ನಾರಾಯಣಂ ಸನ್ನಮಾಮಿ ಎಂದಿದ್ದಾರೆ. ಸಂ ಎಂಬ ಉಪಸರ್ಗದಿಂದ ನಮಸ್ಕಾರಕ್ಕೆ ಭಕ್ತಿಶ್ರದ್ಧಾಮುಂತಾದವಿಷಯಗಳ ಜೊತೆಯಿರುವುದಾಗಿ ತಿಳಿಸಿ ಅಂತಹ ನಮಸ್ಕಾರವು ಸೂಕ್ತವಾದದ್ದೆಂದು ತಿಳಿಸಿದ್ದಾರೆ. ಹಾಗಾಗಿ ಕೇವಲ ನಮನವು ಜಿಜ್ಞಾಸಾಶಬ್ದದ ಅರ್ಥವಲ್ಲ. ಹಾಗಿದ್ದಲ್ಲಿ ಗ್ರಂಥಸಮಾಪ್ತಿಯು ಆಗದೇ ಇರ-ಬೇಕಾದೀತು. ಹೊರತು ಭಕ್ತ್ಯಾದಿ ಅತಿಶಯಗಳಿಂದ ಕೂಡಿದ ಮುಖ್ಯವಾದ ನಮಸ್ಕಾರವೇ ಇಲ್ಲಿ ಜಿಜ್ಞಾಸಾಶಬ್ದದ ಅರ್ಥವಾಗಿದೆ. ಹಾಗಾದರೆ ಪೂರ್ವಪ್ರಸ್ಥಾನವಾದ ಭಾಷ್ಯದಲ್ಲಿ ನತ್ವಾ ಎಂದಿಷ್ಟೇ ಏಕೆ ಹೇಳಿದರು? ಉತ್ತರ – ನತ್ವಾ ಎಂದು ಹೇಳಿದ್ದು ಉಪಪದವಿಲ್ಲದೇ ಪ್ರಯುಕ್ತವಾದ ಪದವು ಮುಖ್ಯವಾದ ಅರ್ಥವನ್ನೇ ಹೇಳುತ್ತದೆ ಎಂಬ ಅಭಿಪ್ರಾಯದಿಂದ. ಆದ್ದರಿಂದಲೇ ನ್ಯಾಯಸುಧಾದಲ್ಲೂ 'ಹರಯೇ ನಮಃ' ಎಂಬಲ್ಲಿ ನಮಃ ಎಂದಿಷ್ಟೇ ಹೇಳಿದ್ದಾರೆ.

## ಬ್ರಹ್ಮಶಬ್ದ ಸಮಾನಾರ್ಥಕವಾದ ನಾರಾಯಣಪದವು ಮಹಾಯೋಗವೃತ್ತ್ಯಾ ಗುಣಪೂರ್ಣತ್ವಾಭಿಧಾಯಕ

(ಲಘುರಸರಂಜನೀ) – ನನು ಯದುಕ್ತಂ ಬ್ರಹ್ಮಪದಾರ್ಥೋ ನಾರಾಯಣ ಇತಿ ತದಯುಕ್ತಮ್ । ಯದಿ ನಾರಾಯಣಪದಂ ಡಿತ್ಥಾದಿಶಬ್ದವತ್ ಸಾಂಕೇತಿಕಾದಿರೂಪಂ ತದಾ ದೇವತಾನಮನಾ-ಸಿದ್ಧೇರಿತ್ಯಾಶಂಕ್ಯ ನಾರಾಯಣಪದಾರ್ಥೋ ವಿವೃತಃ ಪೂರ್ವೋತ್ತರಪ್ರಸ್ಥಾನಯೋಃ । 'ಗುಣೈಃ ಸರ್ವೈರುದೀರ್ಣಂ' ಇತ್ಯಾದಿನಾ 'ನಿಖಿಲಪೂರ್ಣಗುಣೈಕದೇಹಮ್' ಇತ್ಯಾದಿನಾ ಚ ನಾತ್ರ ನಾರಾಯಣಶಬ್ದೋ ಡಿತ್ಥಾದಿಶಬ್ದ ಇವ ಸಾಂಕೇತಿಕೋ ಘಟಾದಿಶಬ್ದ ಇವ ವಾ ರೂಢಿಮಾತ್ರೇಣ ಪ್ರವೃತ್ತಃ ಯೇನ ಗ್ರಂಥಾದೌ ದೇವತಾನಮನಾಭಾವಃ ಸ್ಯಾತ್ । ಕಿಂತು ಮಹಾಯೋಗವೃತ್ತ್ಯಾ ಗುಣಪೂರ್ಣತ್ವಾದ್ಯಭಿಧಾಯಕಃ । ತಥಾ ಚ ಗುಣಪೂರ್ಣತ್ವಾದಿಮಾನ್ ನಾರಾಯಣಪದಾರ್ಥ ಇತಿ ನ ದೇವತಾನಮನಾಸಿದ್ಧಿರಿತಿ । ಅನೇನ ಸೌತ್ರಬ್ರಹ್ಮಪದಮಪಿ 'ಅಥ ಕಸ್ಮಾದುಚ್ಯತೇ ಬ್ರಹ್ಮ' ಇತಿ 'ಬೃಹಂತೋ ಹ್ಯಸ್ಮಿನ್ ಗುಣಾಃ' ಇತಿ ಶ್ರುತೇರ್ಗುಣಪೂರ್ಣವಸ್ತ್ವಭಿಧಾಯಕಮ್ ।

ವ್ಯಾಖ್ಯಾನವ್ಯಾಖ್ಯೇಯಯೋಃ ಸಮಾನಾರ್ಥತ್ವಾದಿತಿ ವಿವೃತಂ ಭವತಿ । ತಾದೃಶಶ್ಚ ಸಾಕ್ಷಾಲ್ಲಕ್ಷ್ಮೀ-ಪತಿರಿತ್ಯಾಶಯೇನೋಕ್ತಂ — **ಶ್ರಿಯಃ ಪತ್ಯೇ ಇತಿ** ॥

ಇನ್ನು ಬ್ರಹ್ಮಪದದ ಅರ್ಥ ನಾರಾಯಣ ಎಂದು ಹೇಳಿದ್ದು ಸರಿಯಲ್ಲ ಎಂಬ ಆಕ್ಷೇಪ ಬರುತ್ತದೆ. ಏಕೆಂದರೆ ಒಂದು ವೇಳೆ ನಾರಾಯಣ ಎಂಬ ಪದವು ಡಿತ್ಥ, ಡವಿತ್ಥ ಮೊದಲಾದ ಶಬ್ದಗಳಂತೆ ಯಾರೋ ಒಬ್ಬನ ಇಚ್ಛೆಯಿಂದಷ್ಟೇ ಪ್ರಯುಕ್ತವಾಗುತ್ತಿದ್ದರೆ ಆಗ ದೇವತೆಗೆ ನಮಸ್ಕಾರವು ಸಿದ್ಧವಾಗುತ್ತಿರಲಿಲ್ಲ ಎಂದು ಆಶಂಕಿಸಿ ಎರಡೂ ಪ್ರಸ್ಥಾನಗಳಲ್ಲಿ ನಾರಾಯಣಪದದ ಅರ್ಥವನ್ನು ವಿವರಣೆ ಮಾಡಿದ್ದಾರೆ.

"ಗುಣೈಃ ಸರ್ವೈರುದೀರ್ಣಂ" ಮುಂತಾದ ವಿಶೇಷಣಗಳಿಂದ "ನಿಖಿಲಪೂರ್ಣಗುಣೈಕದೇಹಂ" ಮುಂತಾದವುಗಳಿಂದ ಇಲ್ಲಿ ನಾರಾಯಣ ಎಂಬ ಶಬ್ದವು ಡಿತ್ಥ ಮೊದಲಾದ ಶಬ್ದಗಳಂತೆ ಸಾಂಕೇತಿಕವೂ ಅಲ್ಲ; ಅಥವಾ ಘಟಾದಿಶಬ್ದಗಳಂತೆ ಕೇವಲ ರೂಢಿಯಿಂದ ಹೊರಟದ್ದೂ ಅಲ್ಲ. ಹಾಗಿದ್ದರೆ ಗ್ರಂಥದ ಮೊದಲಿಗೆ ದೇವತೆಗೆ ನಮಸ್ಕಾರವು ಇಲ್ಲ ಎಂದಾದೀತು. ಅದಕ್ಕೆ ಉತ್ತರವಾಗಿ ಮಹಾಯೋಗವೃತ್ತಿಯಿಂದ ಗುಣಪೂರ್ಣತ್ವ ಮೊದಲಾದ ಅರ್ಥಗಳನ್ನು ನಾರಾಯಣಪದವು ಹೇಳುತ್ತಿದೆ. ಹಾಗಾಗಿ ಗುಣಪೂರ್ಣತ್ವ ಮೊದಲಾದ ಧರ್ಮವುಳ್ಳವನೇ ನಾರಾಯಣಪದದ ಅರ್ಥ. ಆದ್ದರಿಂದ ದೇವತೆಗೆ ನಮಸ್ಕಾರವಿಲ್ಲ ಎಂಬ ಪ್ರಶ್ನೆಯಿಲ್ಲ. ಇದರಿಂದಾಗಿ ಸೂತ್ರದಲ್ಲಿರುವ ಬ್ರಹ್ಮಪದವು, ಯಾವ ಕಾರಣಕ್ಕಾಗಿ ಬ್ರಹ್ಮ ಎಂದು ಹೇಳುತ್ತಾರೆ? ಪೂರ್ಣವಾದ ಗುಣಗಳಿ-ರುವುದರಿಂದ ಬ್ರಹ್ಮ ಎನ್ನುವರು ಎಂಬ ಶ್ರುತಿ ಇರುವುದರಿಂದ ಗುಣಪೂರ್ಣವಾದ ವಸ್ತುವನ್ನೇ ಬ್ರಹ್ಮಶಬ್ದವು ಹೇಳುತ್ತಿದೆ. ವ್ಯಾಖ್ಯಾನವ್ಯಾಖ್ಯೇಯಗಳಿಗೆ ಒಂದೇ ಅರ್ಥವಿರುತ್ತದೆಯಾದ್ದರಿಂದ. ಆ ಅರ್ಥವಾದರೋ ಸಾಕ್ಷಾಲ್ಲಕ್ಷ್ಮೀಪತಿಯೇ ಎಂಬ ಅಭಿಪ್ರಾಯದಿಂದ 'ಶ್ರಿಯಃ ಪತ್ಯೇ' ಎಂದಿದ್ದಾರೆ.

** ಡಿತ್ಥಶಬ್ದಃ ಸಂಜ್ಞಾವಾಚೀ ಅಥವಾ 'ಡಿತ್ಥಃ ಕಾಷ್ಠಮಯೋ ಹಸ್ತೀ ಡವಿತ್ಥಸ್ತನ್ಮಯೋ ಮೃಗಃ' ಎಂಬುವಂತೆ ಡಿತ್ಥ ಎಂಬ ಶಬ್ದವು ಒಬ್ಬನ ಹೆಸರಾಗಬಹುದು. ಅಥವಾ ಆನೆಯ ಕಟ್ಟಿಗೆಯ ಗೊಂಬೆಗೆ ವಾಚಕವಾಗಬಹುದು.

## ಏತದಪ್ಯಭಿಸಂಧಾಯೋಕ್ತಂ ಶ್ರಿಯಃಪತ್ಯೇ ಇತಿ

(ಲಘುರಸರಂಜಿನೀ) — ಅಥವಾ 'ನಾರಾಯಣಂ ಸನ್ನಮಾಮಿ' ಇತ್ಯನೇನ 'ನತ್ವಾ' ಇತಿ ನಿರುಪಪದಪದೇನೈವೋಕ್ತಾ ನಮನಸಹಕಾರಿಣೀ ಭಕ್ತಿರ್ನಾರಾಯಣೇ ನ ಸಂಭವತಿ । ತಸ್ಯ ದೇವತಾಂತರಸಾಮ್ಯಾದಿತ್ಯತೋಽಪಿ ನಾರಾಯಣಶಬ್ದಾರ್ಥೋ ವಿವೃತಃ ಪೂರ್ವೋತ್ತರ-ಪ್ರಸ್ಥಾನಯೋಃ — 'ಗುಣೈಃ ಸರ್ವೈರುದೀರ್ಣಂ' 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿನಾ ॥

ತಥಾಚ ನಾಯಂ ನಾರಾಯಣೋ ದೇವದತ್ತಾದಿಸಮಾನಃ ಕಿಂತು ಗುಣಪೂರ್ಣತ್ವಾದಿ-ಮಾಹಾತ್ಮ್ಯೋಪೇತಃ । ತಸ್ಮಿಂಶ್ಚ ಮಾಹಾತ್ಮ್ಯ ಜ್ಞಾನಪೂರ್ವಿಕಾ ಭಕ್ತಿಃ ಸಂಭವತ್ಯೇವ ಇತಿ ಭಾವಃ । ಏತದಪ್ಯಭಿಸಂಧಾಯೋಕ್ತಂ — ಶ್ರಿಯಃ ಪತ್ಯ ಇತಿ ॥ ಯದಾ ಯತ್ಕಿಂಚಿತ್ ಪುರುಷಾರ್ಥ-ಪ್ರದಾತ್ರ್ಯಾಂ ಶ್ರೀದೇವ್ಯಾಂ ಭಕ್ತಿಃ ಸರ್ವಾನುಭವಸಿದ್ಧಾ, ತದಾ ಮೋಕ್ಷಾದಿಸರ್ವಪುರುಷಾರ್ಥ-ದಾತೃತ್ವಾದಿಮಹಾಮಹಿಮೋಪೇತೇ ಶ್ರೀಪತೌ ಭಕ್ತಿರ್ಭವತೀತಿ ಕಿಂ ವಾಚ್ಯಮಿತಿ ಭಾವಃ ।

ಅಥವಾ 'ನಾರಾಯಣಂ. ಸನ್ನಮಾಮಿ' ಎನ್ನುವುದರಿಂದ ಹಾಗೂ 'ನತ್ವಾ' ಎಂಬ ಭಾಗದಿಂದ ನಮಸ್ಕಾರಕ್ಕೆ ಸಹಕಾರಿಯಾದ ಭಕ್ತಿಯು ನಾರಾಯಣನಲ್ಲಿ ಕೂಡುವುದಿಲ್ಲ. ಏಕೆಂದರೆ ಅವನು ಬೇರೆ ದೇವತೆಗಳಿಗೆ ಸಮಾನನಾಗಿರುವುದರಿಂಧ ಎನ್ನುವ ಪ್ರಶ್ನೆಗೆ ಉತ್ತರವಾಗಿ ನಾರಾಯಣಶಬ್ದಾರ್ಥವನ್ನು ಪೂರ್ವೋತ್ತರಪ್ರಸ್ಥಾನಗಳಾದ ಭಾಷ್ಯಾನುಭಾಷ್ಯಗಳಲ್ಲಿ ವಿವರಿಸಿದ್ದಾರೆ. 'ಗುಣೈಃ ಸರ್ವೈರು-ದೀರ್ಣಂ' ಇತ್ಯಾದಿಯಾಗಿ ಭಾಷ್ಯದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿಯಾಗಿ ಅನು-ಭಾಷ್ಯದಲ್ಲಿ. ಹಾಗಾಗಿ ಈ ನಾರಾಯಣನು ದೇವದತ್ತಾದಿವ್ಯಕ್ತಿಗಳಿಗೆ ಸಮಾನನಲ್ಲ ಹೊರತು ಗುಣಪೂರ್ಣತ್ವಾದಿಮಹಿಮೆಯನ್ನು ಹೊಂದಿದವನು. ಇಂತಹವನಲ್ಲಿ ಮಾಹಾತ್ಮ್ಯಜ್ಞಾನ-ಪೂರ್ವಕವಾದ ಭಕ್ತಿಯು ಉಂಟೇ ಉಂಟಾಗುವುದು ಎಂದು ಅಭಿಪ್ರಾಯ. ಇದನ್ನು ಮನಸ್ಸಿನ-ಲ್ಲಿಟ್ಟುಕೊಂಡು ಶ್ರಿಯಃ ಪತ್ಯೇ ಎಂದಿದ್ದಾರೆ. ಇದರ ತಾತ್ಪರ್ಯ — ಯಾವಾಗ ಯಾವುದೋ ಒಂದು ತರಹದ ಪುರುಷಾರ್ಥವನ್ನು ನೀಡುವ ಶ್ರೀದೇವಿಯಲ್ಲಿ ಭಕ್ತಿಯೆಂಬುದು ಸರ್ವರಿಗೆ ಅನುಭವ-ಸಿದ್ಧವಾಗಿದೆಯೋ ಆಗ ಮೋಕ್ಷಾದಿ ಎಲ್ಲ ಪುರುಷಾರ್ಥಗಳನ್ನು ಕೊಡುವ ಮಹಾಮಹಿಮೆ ಇರುವ ಶ್ರೀಪತಿಯಲ್ಲಿ ಭಕ್ತಿಯು ಬರುತ್ತದೆ ಎಂದು ಹೇಳಬೇಕಾಗಿದೆಯೇನು?

## ಬ್ರಹ್ಮಜಿಜ್ಞಾಸೆ ಎಂದರೆ ಮಹಾಲಕ್ಷ್ಮಿಗೆ ವಂದನ ಎಂದರ್ಥ

(ಲಘುರಸರಂಜನೀ) — ಅಥವಾ ನನು ತಥಾಪಿ ಬಾದರಾಯಣೇನ ಶಿಷ್ಟಶಿಕ್ಷಾರ್ಥಂ ಗ್ರಂಥಾರಂಭೇ ಸಕಲವಾಙ್ಮನೋದೇವತಾಯಾ ಮಹಾಲಕ್ಷ್ಮ್ಯಾಃ ವಂದನಂ ಕಸ್ಮಾನ್ನಾನುಷ್ಠಿತಮಿತ್ಯಾಶಂಕಾಯಾಂ ಚೋಕ್ತಂ ಸೂತ್ರಕೃತಾ — ಬ್ರಹ್ಮಜಿಜ್ಞಾಸೇತಿ ॥ 'ಮಮ ಯೋನಿರ್ಮಹದ್ ಬ್ರಹ್ಮ' ಇತ್ಯುಕ್ತೇ-ರ್ಬ್ರಹ್ಮಣಃ = ಮಹದ್ ಬ್ರಹ್ಮಣೋ = ಮಹಾಲಕ್ಷ್ಮ್ಯಾಃ ಜಿಜ್ಞಾಸಾ = ವಂದನಮಿತ್ಯರ್ಥಃ । ನನು ನ ಮಹಾಲಕ್ಷ್ಮೀವಂದನಂ ನಾರಾಯಣಸಾಮ್ಯೇನ ಕಾರ್ಯಮ್ । ದೋಷಾಪತ್ತೇಃ । ಪ್ರಕಾರಾಂತರೇಣ ಚೇತ್ ಕಿಂ ತತ್? ಇತ್ಯತ ಉಕ್ತಂ ಭಾಷ್ಯಕೃತಾ ಪ್ರಸ್ಥಾನದ್ವಯೇಽಪಿ — ನಾರಾಯಣಮಿತಿ ॥ ನಾರಾ = ಲಕ್ಷ್ಮೀಃ ತಸ್ಯಾಃ ಅಯನಮ್ = ಆಶ್ರಯ ಇತಿ । ನನು ಆಶ್ರಯಾಶ್ರಯಿಭಾವೋಽಪ್ಯಾ-ಧಾರಾಧೇಯಭಾವಾದಿರೂಪೋಽನೇಕವಿಧಃ ಕಸ್ತತ್ರೋಪಾಸಿತಃ ತತ್ಪ್ರೀತಿಜನಕ ಇತ್ಯತಃ ತಂ ವ್ಯನಕ್ತಿ

ವ್ಯಾಖ್ಯಾನವ್ಯಾಖ್ಯೇಯಯೋಃ ಸಮಾನಾರ್ಥತ್ವಾದಿತಿ ವಿವೃತಂ ಭವತಿ । ತಾದೃಶಶ್ಚ ಸಾಕ್ಷಾಲ್ಲಕ್ಷ್ಮೀ-ಪತಿರಿತ್ಯಾಶಯೇನೋಕ್ತಂ — **ಶ್ರಿಯಃ ಪತ್ಯೇ ಇತಿ** ॥

ಇನ್ನು ಬ್ರಹ್ಮಪದದ ಅರ್ಥ ನಾರಾಯಣ ಎಂದು ಹೇಳಿದ್ದು ಸರಿಯಲ್ಲ ಎಂಬ ಆಕ್ಷೇಪ ಬರುತ್ತದೆ. ಏಕೆಂದರೆ ಒಂದು ವೇಳೆ ನಾರಾಯಣ ಎಂಬ ಪದವು ಡಿತ್ಥ, ಡವಿತ್ಥ ಮೊದಲಾದ ಶಬ್ದಗಳಂತೆ ಯಾರೋ ಒಬ್ಬನ ಇಚ್ಛೆಯಿಂದಷ್ಟೇ ಪ್ರಯುಕ್ತವಾಗುತ್ತಿದ್ದರೆ ಆಗ ದೇವತೆಗೆ ನಮಸ್ಕಾರವು ಸಿದ್ಧವಾಗುತ್ತಿರಲಿಲ್ಲ ಎಂದು ಆಶಂಕಿಸಿ ಎರಡೂ ಪ್ರಸ್ಥಾನಗಳಲ್ಲಿ ನಾರಾಯಣಪದದ ಅರ್ಥವನ್ನು ವಿವರಣೆ ಮಾಡಿದ್ದಾರೆ.

"ಗುಣೈಃ ಸರ್ವೈರುದೀರ್ಣಂ" ಮುಂತಾದ ವಿಶೇಷಣಗಳಿಂದ "ನಿಖಿಲಪೂರ್ಣಗುಣೈಕದೇಹಂ" ಮುಂತಾದವುಗಳಿಂದ ಇಲ್ಲಿ ನಾರಾಯಣ ಎಂಬ ಶಬ್ದವು ಡಿತ್ಥ ಮೊದಲಾದ ಶಬ್ದಗಳಂತೆ ಸಾಂಕೇತಿಕವೂ ಅಲ್ಲ; ಅಥವಾ ಘಟಾದಿಶಬ್ದಗಳಂತೆ ಕೇವಲ ರೂಢಿಯಿಂದ ಹೊರಟದ್ದೂ ಅಲ್ಲ. ಹಾಗಿದ್ದರೆ ಗ್ರಂಥದ ಮೊದಲಿಗೆ ದೇವತೆಗೆ ನಮಸ್ಕಾರವು ಇಲ್ಲ ಎಂದಾದೀತು. ಅದಕ್ಕೆ ಉತ್ತರವಾಗಿ ಮಹಾಯೋಗವೃತ್ತಿಯಿಂದ ಗುಣಪೂರ್ಣತ್ವ ಮೊದಲಾದ ಅರ್ಥಗಳನ್ನು ನಾರಾಯಣಪದವು ಹೇಳುತ್ತಿದೆ. ಹಾಗಾಗಿ ಗುಣಪೂರ್ಣತ್ವ ಮೊದಲಾದ ಧರ್ಮವುಳ್ಳವನೇ ನಾರಾಯಣಪದದ ಅರ್ಥ. ಆದ್ದರಿಂದ ದೇವತೆಗೆ ನಮಸ್ಕಾರವಿಲ್ಲ ಎಂಬ ಪ್ರಶ್ನೆಯಿಲ್ಲ. ಇದರಿಂದಾಗಿ ಸೂತ್ರದಲ್ಲಿರುವ ಬ್ರಹ್ಮಪದವು, ಯಾವ ಕಾರಣಕ್ಕಾಗಿ ಬ್ರಹ್ಮ ಎಂದು ಹೇಳುತ್ತಾರೆ? ಪೂರ್ಣವಾದ ಗುಣಗಳಿ-ರುವುದರಿಂದ ಬ್ರಹ್ಮ ಎನ್ನುವರು ಎಂಬ ಶ್ರುತಿ ಇರುವುದರಿಂದ ಗುಣಪೂರ್ಣವಾದ ವಸ್ತುವನ್ನೇ ಬ್ರಹ್ಮಶಬ್ದವು ಹೇಳುತ್ತಿದೆ. ವ್ಯಾಖ್ಯಾನವ್ಯಾಖ್ಯೇಯಗಳಿಗೆ ಒಂದೇ ಅರ್ಥವಿರುತ್ತದೆಯಾದ್ದರಿಂದ. ಆ ಅರ್ಥವಾದರೋ ಸಾಕ್ಷಾಲ್ಲಕ್ಷ್ಮೀಪತಿಯೇ ಎಂಬ ಅಭಿಪ್ರಾಯದಿಂದ 'ಶ್ರಿಯಃ ಪತ್ಯೇ' ಎಂದಿದ್ದಾರೆ.

** ಡಿತ್ಥಶಬ್ದಃ ಸಂಜ್ಞಾವಾಚೀ ಅಥವಾ 'ಡಿತ್ಥಃ ಕಾಷ್ಠಮಯೋ ಹಸ್ತೀ ಡವಿತ್ಥಸ್ತನ್ಮಯೋ ಮೃಗಃ' ಎಂಬುವಂತೆ ಡಿತ್ಥ ಎಂಬ ಶಬ್ದವು ಒಬ್ಬನ ಹೆಸರಾಗಬಹುದು. ಅಥವಾ ಆನೆಯ ಕಟ್ಟಿಗೆಯ ಗೊಂಬೆಗೆ ವಾಚಕವಾಗಬಹುದು.

## ಏತದಪ್ಯಭಿಸಂಧಾಯೋಕ್ತಂ ಶ್ರಿಯಃಪತ್ಯೇ ಇತಿ

(ಲಘುರಸರಂಜನೀ) — ಅಥವಾ 'ನಾರಾಯಣಂ ಸನ್ನಮಾಮಿ' ಇತ್ಯನೇನ 'ಸತ್ವಾ' ಇತಿ ನಿರುಪಪದಪದೇನೈವೋಕ್ತಾ ನಮನಸಹಕಾರಿಣೀ ಭಕ್ತಿರ್ನಾರಾಯಣೇ ನ ಸಂಭವತಿ । ತಸ್ಯ ದೇವತಾಂತರಸಾಮ್ಯಾದಿತ್ಯತೋಽಪಿ ನಾರಾಯಣಶಬ್ದಾರ್ಥೋ ವಿವೃತಃ ಪೂರ್ವೋತ್ತರ-ಪ್ರಸ್ಥಾನಯೋಃ — 'ಗುಣೈಃ ಸರ್ವೈರುದೀರ್ಣಂ' 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿನಾ ॥

ತಥಾಚ ನಾಯಂ ನಾರಾಯಣೋ ದೇವದತ್ತಾದಿಸಮಾನಃ ಕಿಂತು ಗುಣಪೂರ್ಣತ್ವಾದಿ-ಮಾಹಾತ್ಮ್ಯೋಪೇತಃ । ತಸ್ಮಿಂಶ್ಚ ಮಾಹಾತ್ಮ್ಯಜ್ಞಾನಪೂರ್ವಿಕಾ ಭಕ್ತಿಃ ಸಂಭವತ್ಯೇವ ಇತಿ ಭಾವಃ । ಏತದಪ್ಯಭಿಸಂಧಾಯೋಕ್ತಂ — ಶ್ರಿಯಃ ಪತ್ಯ ಇತಿ ॥ ಯದಾ ಯತ್ಕಿಂಚಿತ್ ಪುರುಷಾರ್ಥ-ಪ್ರದಾತ್ರ್ಯಾಂ ಶ್ರೀದೇವ್ಯಾಂ ಭಕ್ತಿಃ ಸರ್ವಾನುಭವಸಿದ್ಧಾ, ತದಾ ಮೋಕ್ಷಾದಿಸರ್ವಪುರುಷಾರ್ಥ-ದಾತೃತ್ವಾದಿಮಹಾಮಹಿಮೋಪೇತೇ ಶ್ರೀಪತೌ ಭಕ್ತಿರ್ಭವತೀತಿ ಕಿಂ ವಾಚ್ಯಮಿತಿ ಭಾವಃ ।

ಅಥವಾ 'ನಾರಾಯಣಂ ಸನ್ನಮಾಮಿ' ಎನ್ನುವುದರಿಂದ ಹಾಗೂ 'ನತ್ವಾ' ಎಂಬ ಭಾಗದಿಂದ ನಮಸ್ಕಾರಕ್ಕೆ ಸಹಕಾರಿಯಾದ ಭಕ್ತಿಯು ನಾರಾಯಣನಲ್ಲಿ ಕೂಡುವುದಿಲ್ಲ. ಏಕೆಂದರೆ ಅವನು ಬೇರೆ ದೇವತೆಗಳಿಗೆ ಸಮಾನನಾಗಿರುವುದರಿಂದ ಎನ್ನುವ ಪ್ರಶ್ನೆಗೆ ಉತ್ತರವಾಗಿ ನಾರಾಯಣಶಬ್ದಾರ್ಥವನ್ನು ಪೂರ್ವೋತ್ತರಪ್ರಸ್ಥಾನಗಳಾದ ಭಾಷ್ಯಾನುಭಾಷ್ಯಗಳಲ್ಲಿ ವಿವರಿಸಿದ್ದಾರೆ. 'ಗುಣೈಃ ಸರ್ವೈರು-ದೀರ್ಣಂ' ಇತ್ಯಾದಿಯಾಗಿ ಭಾಷ್ಯದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿಯಾಗಿ ಅನು-ಭಾಷ್ಯದಲ್ಲಿ. ಹಾಗಾಗಿ ಈ ನಾರಾಯಣನು ದೇವದತ್ತಾದಿವ್ಯಕ್ತಿಗಳಿಗೆ ಸಮಾನನಲ್ಲ ಹೊರತು ಗುಣಪೂರ್ಣತ್ವಾದಿಮಹಿಮೆಯನ್ನು ಹೊಂದಿದವನು. ಇಂತಹವನಲ್ಲಿ ಮಾಹಾತ್ಮ್ಯಜ್ಞಾನ-ಪೂರ್ವಕವಾದ ಭಕ್ತಿಯು ಉಂಟೇ ಉಂಟಾಗುವುದು ಎಂದು ಅಭಿಪ್ರಾಯ. ಇದನ್ನು ಮನಸ್ಸಿನ-ಲ್ಲಿಟ್ಟುಕೊಂಡು ಶ್ರಿಯಃ ಪತ್ಯೇ ಎಂದಿದ್ದಾರೆ. ಇದರ ತಾತ್ಪರ್ಯ — ಯಾವಾಗ ಯಾವುದೋ ಒಂದು ತರಹದ ಪುರುಷಾರ್ಥವನ್ನು ನೀಡುವ ಶ್ರೀದೇವಿಯಲ್ಲಿ ಭಕ್ತಿಯೆಂಬುದು ಸರ್ವರಿಗೆ ಅನುಭವ-ಸಿದ್ಧವಾಗಿದೆಯೋ ಆಗ ಮೋಕ್ಷಾದಿ ಎಲ್ಲ ಪುರುಷಾರ್ಥಗಳನ್ನು ಕೊಡುವ ಮಹಾಮಹಿಮೆ ಇರುವ ಶ್ರೀಪತಿಯಲ್ಲಿ ಭಕ್ತಿಯು ಬರುತ್ತದೆ ಎಂದು ಹೇಳಬೇಕಾಗಿದೆಯೇನು?

## ಬ್ರಹ್ಮಜಿಜ್ಞಾಸೆ ಎಂದರೆ ಮಹಾಲಕ್ಷ್ಮಿಗೆ ವಂದನ ಎಂದರ್ಥ

(ಲಘುರಸರಂಜನೀ) — ಅಥವಾ ನನು ತಥಾಪಿ ಬಾದರಾಯಣೇನ ಶಿಷ್ಯಶಿಕ್ಷಾರ್ಥಂ ಗ್ರಂಥಾರಂಭೇ ಸಕಲವಾಙ್ಮನೋದೇವತಾಯಾ ಮಹಾಲಕ್ಷ್ಮ್ಯಾಃ ವಂದನಂ ಕಸ್ಮಾನ್ನಾನುಷ್ಠಿತಮಿತ್ಯಾಶಂಕಾಯಾಂ ಚೋಕ್ತಂ ಸೂತ್ರಕೃತಾ — ಬ್ರಹ್ಮಜಿಜ್ಞಾಸೇತಿ ॥ 'ಮಮ ಯೋನಿರ್ಮಹದ್ ಬ್ರಹ್ಮ' ಇತ್ಯುಕ್ತೇ-ರ್ಬ್ರಹ್ಮಣಃ = ಮಹದ್ ಬ್ರಹ್ಮಣೋ = ಮಹಾಲಕ್ಷ್ಮ್ಯಾಃ ಜಿಜ್ಞಾಸಾ = ವಂದನಮಿತ್ಯರ್ಥಃ । ನನು ನ ಮಹಾಲಕ್ಷ್ಮೀವಂದನಂ ನಾರಾಯಣಸಾಮ್ಯೇನ ಕಾರ್ಯಮ್ । ದೋಷಾಪತ್ತೇಃ । ಪ್ರಕಾರಾಂತರೇಣ ಚೇತ್ ಕಿಂ ತತ್? ಇತ್ಯತ ಉಕ್ತಂ ಭಾಷ್ಯಕೃತಾ ಪ್ರಸ್ಥಾನದ್ವಯೇಽಪಿ — ನಾರಾಯಣಮಿತಿ ॥ ನಾರಾ = ಲಕ್ಷ್ಮೀಃ ತಸ್ಯಾಃ ಅಯನಮ್ = ಆಶ್ರಯ ಇತಿ । ನನು ಆಶ್ರಯಾಶ್ರಯಿಭಾವೋಽಪ್ಯಾ-ಧಾರಾಧೇಯಭಾವಾದಿರೂಪೋಽನೇಕವಿಧಃ ಕಸ್ತತ್ರೋಪಾಸಿತಃ ತತ್ಪ್ರೀತಿಜನಕ ಇತ್ಯತಃ ತಂ ವ್ಯನಕ್ತಿ

— ಶ್ರಿಯಃ ಪತ್ಯ ಇತಿ ॥ ತಥಾ ಚ ಭಗವದ್ಭಾರ್ಯಾತ್ವೇನ ವಂದನಂ ತತ್ಪ್ರೀತಿವಿಶೇಷಜನಕಮಿತಿ ಭಾವಃ । 'ಜಯಾಜಾನಿಃ' ಇತ್ಯಾದಾವಿವ ಅರ್ಥಾಂತರಪ್ರತಿಭಾಸೋ ಮಾ ಭೂದಿತಿ ಶಿಷ್ಯಹಿತೈಷಿಣಾ 'ಶ್ರಿಯಃ ಪತ್ಯೇ' ಇತ್ಯಸಮಾಸಃ ಭೂತ ಇತಿ ಜ್ಞೇಯಮ್ ।

ಅಥವಾ ವೇದವ್ಯಾಸರು ಶಿಷ್ಯರ ಶಿಕ್ಷಣೆಗೋಸ್ಕರ ಗ್ರಂಥದ ಮೊದಲಿಗೆ ಎಲ್ಲರ ಮಾತು ಮನಸ್ಸುಗಳಿಗೆ ಅಭಿಮಾನಿದೇವತೆಯಾದ ಮಹಾಲಕ್ಷ್ಮಿಗೆ ನಮಸ್ಕಾರವನ್ನು ಏಕೆ ಮಾಡಲಿಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಸೂತ್ರಕಾರರು ಬ್ರಹ್ಮಜಿಜ್ಞಾಸಾ ಎಂದಿದ್ದಾರೆ. ಬ್ರಹ್ಮ ಎಂದರೆ ಇಲ್ಲಿ ಮಹದ್ ಬ್ರಹ್ಮ ಎಂದು ಸ್ವೀಕರಿಸಬೇಕು. ಅರ್ಥಾತ್ ಲಕ್ಷ್ಮೀದೇವಿ. ಮಮ ಯೋನಿಃ ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ । ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ (ಭ.ಗೀ. 14-3) ಎಂಬ ಮಾತಿರುವುದರಿಂದ. ಹಾಗಾಗಿ ಮಹದ್ ಬ್ರಹ್ಮನ ಎಂದರೆ ಮಹಾಲಕ್ಷ್ಮಿಯ ಜಿಜ್ಞಾಸಾ ಎಂದರೆ ನಮಸ್ಕಾರವು ಎಂದರ್ಥ. ಅಲ್ಲ ಮಹಾಲಕ್ಷ್ಮಿಯ ನಮಸ್ಕಾರವನ್ನು ನಾರಾಯಣನಿಗೆ ಸಮಾನವಾಗಿ ಮಾಡತಕ್ಕದ್ದಲ್ಲ. ದೋಷವುಂಟಾಗುವುದರಿಂದ. ಅದಕ್ಕಾಗಿ ಬೇರೆ ರೀತಿಯಲ್ಲಿ ಮಾಡಬೇಕು. ಆದರೆ ಆ ರೀತಿ ಯಾವುದು ಎನ್ನುವ ಪ್ರಶ್ನೆಗೆ ಉತ್ತರವಾಗಿ ಭಾಷ್ಯಕಾರರು ಭಾಷ್ಯಾನುಭಾಷ್ಯಗಳಲ್ಲಿ ನಾರಾಯಣಶಬ್ದಾರ್ಥವನ್ನು ವಿವರಿಸಿದ್ದಾರೆ. ನಾರಾ ಎಂದರೆ ಲಕ್ಷ್ಮೀ ಎಂದು ಅರ್ಥ. ಅವಳಿಗೆ ಅಯನ ಎಂದರೆ ಆಶ್ರಯನಾದ ನಾರಾಯಣ ಎಂದು ಭಗವದುಪಸರ್ಜನತಯಾ ನಮಸ್ಕಾರ ಮಾಡಬೇಕು ಎಂದರ್ಥ. ಅಲ್ಲ; ಲಕ್ಷ್ಮಿಗೂ ನಾರಾಯಣನಿಗೂ ಆಶ್ರಯಾಶ್ರಯಿಭಾವ-ಸಂಬಂಧವಾದರೂ ಅನೇಕ ರೀತಿ ಇದೆ. ಆಧಾರಾಧೇಯಭಾವ ಮುಂತಾದ ರೀತಿಯಲ್ಲಿ ಎಂದಭಿ-ಪ್ರಾಯ. ಅವುಗಳಲ್ಲಿ ಯಾವ ಸಂಬಂಧವನ್ನು ಚಿಂತಿಸಿದರೆ ಲಕ್ಷ್ಮಿಗೆ ಪ್ರೀತಿಯಾಗುತ್ತದೆ ಎನ್ನುವುದನ್ನು ವ್ಯಕ್ತಪಡಿಸುತ್ತಾರೆ — ಶ್ರಿಯಃ ಪತ್ಯೇ ಎಂಬುದರಿಂದ. ಹಾಗಾಗಿ ಭಗವಂತನ ಭಾರ್ಯೆ ಎಂದು ಭರ್ತೃಭಾರ್ಯಾಸಂಬಂಧೇನ ವಂದನೆ ಮಾಡಿದರೆ ಅವಳ ವಿಶೇಷಪ್ರೀತಿಯನ್ನು ಸಂಪಾದನೆ ಮಾಡಬಹುದು. ಜಯಾಜಾನಿಃ ಎಂಬ ಶಬ್ದದಲ್ಲಿ ಬೇರೆ ಅರ್ಥವು ತೋರುವಂತೆ ಇಲ್ಲಿ ತೋರದಿರಲಿ ಎಂಬ ಅಭಿಪ್ರಾಯದಿಂದ ಶ್ರಿಯಃ ಪತ್ಯೇ ಎಂದು ಸಮಾಸ ಮಾಡದೇ ನಿರ್ದೇಶಮಾಡಿದ್ದಾರೆ.

## ಮಮ ಯೋನಿರ್ಮಹದ್ ಬ್ರಹ್ಮ

** "ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ (ಭ.ಗೀ. 14-3)

— ಮಮೇತಿ ॥ ಮಹದ್-ಬ್ರಹ್ಮ ಮಹತೀ ಚಿತ್ಪ್ರಕೃತಿಃ । ಮಮ ಯೋನಿಃ = ಭಾರ್ಯಾ । ತಸ್ಮಿನ್ = ಬ್ರಹ್ಮಣಿ ಚಿತ್ಪ್ರಕೃತೌ । ಗರ್ಭಂ ದಧಾಮಿ = ಚತುರ್ವಿಂಶತಿತತ್ತ್ವಾಂಶಯುತಾನ್ ಜೀವಾನ್ ಸ್ವೋದರಸ್ಥಾನ್ ರೇತೋರೂಪೇಣ ನಿರ್ವಾಸ್ಯ ಚಿತ್ಪ್ರಕೃತ್ಯುದರೇ ನಿಕ್ಷಿಪಾಮೀತ್ಯರ್ಥಃ । ತತಃ = ತತ್ರ

ನಿಕ್ಷೇಪಾತ್ । ಭೂತಾನಾಂ = ಪ್ರಾಣಿನಾಮ್ । ದೇಹಯೋಗರೂಪಸಂಭವೋ ಜನ್ಮ । ಭವತಿ । "ಓಂ ಜ್ಞೋತ ಏವ ಓಂ"(2-3-18) "ಓಂ ಯುಕ್ತೇಶ್ಚ ಓಂ"(2-3-19) ಇತಿ ಸೂತ್ರಕೃದುಕ್ತೇಃ । (ಗೀತಾವಿವೃತಿಃ)

– 'ಪರಂ ಭೂಯಃ ಪ್ರವಕ್ಷ್ಯಾಮಿ' (14.1) ಇತಿ ಪ್ರತಿಜ್ಞಾತಮುಚ್ಯತೇ – ಮಮ ಯೋನಿರಿತಿ ॥ ಹೇ ಭಾರತ । ಮಹದ್ ಬ್ರಹ್ಮ ಪ್ರಕೃತಿಶಬ್ದಿತಾ ಮಹಾಲಕ್ಷ್ಮೀಃ ಮಮ ಯೋನಿಃ ಭಾರ್ಯಾ ತಸ್ಮಿನ್ ಮಹತಿ ಬ್ರಹ್ಮಣಿ ಅಹಂ ಗರ್ಭಂ ದಧಾಮಿ । ತತಃ ಚ ಸರ್ವಭೂತಾನಾಂ ಸ್ಥಾವರ-ಜಂಗಮಾತ್ಮಕಪ್ರಾಣಿನಾಂ ಸಂಭವಃ = ದೇಹಯೋಗಲಕ್ಷಣ ಉದ್ಭವೋ ಭವತಿ ॥ (ಭಾವರತ್ನ-ಕೋಶಃ)

– ಎಲೈ ಅರ್ಜುನನೇ ! ಮಹದ್‌ಬ್ರಹ್ಮ = ಚೇತನಪ್ರಕೃತಿಯಾದ ಮಹಾಲಕ್ಷ್ಮಿಯು, ಮಮ = ನನ್ನ, ಯೋನಿಃ = ಹೆಂಡತಿಯು, ತಸ್ಮಿನ್ = ಆ ಮಹದ್ಬ್ರಹ್ಮಳಾದ ಅವಳಲ್ಲಿ, ಗರ್ಭಂ ದಧಾಮಿ = ಅಂದರೆ ಗರ್ಭವನ್ನು ಇಡುತ್ತೇನೆ. ಅದೂ ಕೂಡ ಇಪ್ಪತ್ತನಾಲ್ಕು ತತ್ವಗಳ ಅಂಶಗಳಿಂದ ಸಹಿತರಾದ ತನ್ನ ಉದರದಲ್ಲಿರುವ ಜೀವರನ್ನು ರೇತಸ್ಸಿನ ಮೂಲಕ ಹೊರಗೆ ತಂದು ಅವಳ ಉದರದಲ್ಲಿ ಇಡುತ್ತೇನೆ. ತತಃ = ಅಲ್ಲಿ ಹೀಗೆ ಇಡುವುದರಿಂದ, ಭೂತಾನಾಂ = ಪ್ರಾಣಿಗಳ, ಸಂಭವಃ = ದೇಹಸಂಬಂಧ-ವೆಂಬ ಜನ್ಮವು, ಭವತಿ = ಉಂಟಾಗುತ್ತದೆ – ಎಂದು ಈ ಶ್ಲೋಕದ ಪ್ರತಿಪದಾರ್ಥ.

– ಇಲ್ಲಿ ಯೋನಿಶಬ್ದಕ್ಕೆ ಭಾರ್ಯಾ ಎಂದರ್ಥ. ಭಾರ್ಯೆಯಾದರೋ ಮಹತ್-ಬ್ರಹ್ಮಶಬ್ದದಿಂದ ಹೇಳಲ್ಪಟ್ಟವಳಾಗಿದ್ದಾಳೆ. ಬ್ರಹ್ಮ ಎಂದರೆ ಚಿತ್ಪ್ರಕೃತಿ. (ತದಭಿಮಾನಿನಿಯಾದ ಲಕ್ಷ್ಮೀದೇವಿ).

"ಯೋನಿರ್ಭಾರ್ಯಾ ತಥಾ ಸ್ಥಾನಂ ಯೋನಿಃ ಕಾರಣಮೇವ ಚ" – ಶಬ್ದನಿರ್ಣಯ (ಗೀ.ತಾ.)

(ಗೀ.ಭಾ.) ಮಹತ್ ಬ್ರಹ್ಮ ಪ್ರಕೃತಿಃ । ಸಾ ಚ ಶ್ರೀಭೂದುರ್ಗೇತಿ ಭಿನ್ನಾ । ಉಮಾಸರಸ್ವತ್ಯಾದ್ಯಾಸ್ತು ತದಂಶಯುತಾ ಅನ್ಯಜೀವಾಃ । ತಥಾ ಚ ಕಾಷಾಯಣಶ್ರುತಿಃ --

"ಶ್ರೀರ್ಭೂರ್ದುರ್ಗಾ ಮಹತೀ ತು ಮಾಯಾ ಸಾ ಲೋಕಸೂತಿಃ ಜಗತೋ ಬಂಧಿಕಾ ಚ ।
ಉಮಾವಾಗಾದ್ಯಾ ಅನ್ಯಜೀವಾಸ್ತದಂಶಾಃ ತದಾತ್ಮನಾ ಸರ್ವವೇದೇಷು ಗೀತಾಃ" ಇತಿ ।

– ಲಕ್ಷ್ಮೀದೇವಿಗೆ ಮೂರು ರೂಪಗಳಿವೆ. ಶ್ರೀ, ಭೂ, ದುರ್ಗಾ ಎಂಬುದಾಗಿ. ಇವಳು ಜಗತ್ತಿನ ಉತ್ಪತ್ತಿಗೂ ಕಾರಣಳು. ಬಂಧನಕ್ಕೂಕಾರಣಳು. ಇನ್ನು ಈ ಲಕ್ಷ್ಮಿಗಿಂತ ಪಾರ್ವತೀ, ಶಚೀ, ರತಿ ಇವರೆಲ್ಲರೂ ಭಿನ್ನರು. ಆದರೂ ಲಕ್ಷ್ಮಿಯ ಅಂಶ ಅವರಲ್ಲಿರುವುದರಿಂದ ಲಕ್ಷ್ಮಿ ಎಂದು ಅವರನ್ನೂ ವ್ಯವಹರಿಸುವುದಿದೆ.

"ಮಮ ಯೋನಿಃ" ಇತಿ ಗರ್ಭದಾನಾರ್ಥಾ ಯೋನಿಃ । ನತು ಮಾತಾ ವಾಕ್ಯಶೇಷಾತ್ । ತಥಾ ಹಿ – ಸಾಮವೇದೇ ಶಾರ್ಕರಾಕ್ಷಶ್ರುತೌ --

"ವಿಷ್ಣುರ್ಯೋನಿಃ ಗರ್ಭಸಂಧಾರಣಾರ್ಥಾ ಮಹಾಮಾಯಾ ಸರ್ವದುಃಖೈರ್ವಿಹೀನಾ ।
ತಥಾಪ್ಯಾತ್ಮಾನಂ ದುಃಖಿವನ್ಮೋಹನಾರ್ಥಂ ಪ್ರಕಾಶಯಂತೀ ಸಹ ವಿಷ್ಣುನಾ ಸಾ" ಇತಿ ।

ಅತಃ ಸೀತಾದುಃಖಾದಿಕಂ ಮೃಷಾ ಪ್ರದರ್ಶನಮೇವ । ತಥಾ ಕೂರ್ಮಪುರಾಣೇ ।

– ವಿಷ್ಣುವಿನ ಹೆಂಡತಿಯು ಮಹಾಲಕ್ಷ್ಮಿಯು. ಅವಳು ವಿಷ್ಣುವಿಗೆ ಗರ್ಭಾಧಾನಕ್ಕಾಗಿ ಇದ್ದಾಳೆ. ಅವಳು ಎಲ್ಲ ದುಃಖಗಳಿಂದ ರಹಿತಳೂ ಹಾಗೇ ಮಹಾಮಾಯೆ ಅರ್ಥಾತ್ ಜಗತ್ತಿನ ಬಂಧನಕ್ಕೆ ಕಾರಣಳಾಗಿದ್ದಾಳೆ. ಹೀಗಿದ್ದರೂ ತನ್ನನ್ನು ತಾನು ದುಖಿಪಡುವವಳಂತೆ ಅಸುರಜನರ ಮೋಹನಕ್ಕಾಗಿ ತೋರಿಸಿಕೊಳ್ಳುತ್ತಾಳೆ. ಈ ಪ್ರಮಾಣವಾಕ್ಯದಿಂದ ಲಕ್ಷ್ಮಿಯೇ ಆದ ಸೀತೆಯು ತೋರಿಸಿಕೊಂಡ ದುಃಖಾದಿಗಳು ಅವಳಿಗೆ ಇರಲಿಲ್ಲ ಎಂದೇ ತಿಳಿಯಬೇಕು. ಅದು ಕೇವಲ ನಟನೆ ಮಾತ್ರ.

ನ ಚೇಯಂ ಭೂಃ । ತಥಾ ಚ ಸೌಕರಾಯಣಶ್ರುತಿಃ –
"ಅನ್ಯಾ ಭೂಃ ಭೂರಿಯಂ ತಸ್ಯ ಚ್ಛಾಯಾ ಭೂತಾಽವಮಾ ಸಾ ಹಿ ಭೂತೈಕಯೋನಿಃ" ಇತಿ ।

"ಅವಾಪ ಸ್ವೇಚ್ಛಯಾ ದಾಸ್ಯಂ ಜಗತಾಂ ಪ್ರಪಿತಾಮಹೀ" ಇತಿ ಅನಭಿಮ್ಲಾತ(ನ)ಶ್ರುತಿಃ ।

ಮಹಾಲಕ್ಷ್ಮಿಗೂ ಭೂರೂಪ ಇದೆ. ಆದರೆ ಇಲ್ಲಿ ಭೂ ಎಂದರೆ ಭೂಮಿದೇವಿಯಲ್ಲ. ಆದ್ದರಿಂದಲೇ ಪುರಾಣಗಳಲ್ಲಿ ಗೋರೂಪವನ್ನು ಧರಿಸಿಬಂದ ಭೂದೇವಿಗೆ ದುಃಖಗಳಿವೆ ಎಂದರೂ ಯಾವುದೇ ಆಪತ್ತಿ ಇಲ್ಲ. ಏಕೆಂದರೆ ಲಕ್ಷ್ಮೀದೇವಿಗೆ ದುಃಖದ ಪ್ರಸಕ್ತಿಯೇ ಇಲ್ಲ. ಹಾಗಾಗಿಯೇ ಸೌಕರಾಯಣ-ಶ್ರುತಿಯು ಮಹಾಲಕ್ಷ್ಮಿಯ ಭೂರೂಪ ಭೂಮಿದೇವಿಯ ಭೂರೂಪ ಬೇರೆ ಬೇರೆ ಎಂದು ಹೇಳಿದೆ. ಭೂಮಿದೇವಿಯ ಭೂರೂಪವು ಮಹಾಲಕ್ಷ್ಮಿಯ ಭೂರೂಪವನ್ನು ಒಳಗೊಂಡಿರುವುದು. ಹಾಗಾಗಿಯೇ ಮಹಾಲಕ್ಷ್ಮಿಯ ನೆರಳು ಭೂಮಿದೇವಿಯ ಭೂರೂಪ ಎನ್ನುತ್ತಾರೆ. ಪಂಚಭೂತಗಳಲ್ಲಿ ಕೊನೆಯದ್ದು ಭೂಮಿದೇವಿಯ ಭೂರೂಪ. ಮಹಾಲಕ್ಷ್ಮಿಯ ಭೂರೂಪವಾದರೋ ಎಲ್ಲ ಪಂಚಭೂತಗಳಿಗೆ ಕಾರಣವಾಗಿದೆ.

ಮತ್ಸ್ಯಪುರಾಣೋಕ್ತಮಪಿ ಸ್ವೇಚ್ಛಯೈವ । ಮಹದ್‌ಬ್ರಹ್ಮಶಬ್ದವಾಚ್ಯಾಽಪಿ ಪ್ರಕೃತಿರೇವ ।
"ಮಹತೀ ಬ್ರಹ್ಮಣೀ ದ್ವೇ ತು ಪ್ರಕೃತಿಶ್ಚ ಮಹೇಶ್ವರಃ" ಇತಿ ತತ್ರೈವ ॥ 3-3 ॥

ಈ ಶ್ಲೋಕದಲ್ಲಿರುವ ಮಹದ್‌ಬ್ರಹ್ಮಪದದಿಂದ ಪ್ರಕೃತಿಯನ್ನು ಗ್ರಹಿಸಬೇಕು. ಪ್ರಕೃತಿ ಎಂದರೆ ಚಿತ್ಪ್ರಕೃತಿಯಾದ ಲಕ್ಷ್ಮೀದೇವಿ. ಅವಳಿಗೆ ಶ್ರೀ, ಭೂ, ದುರ್ಗಾ ಎಂಬ ಮೂರು ರೂಪಗಳಿವೆ. ಮಮ ಯೋನಿಃ ಅನ್ನುವುದಕ್ಕೆ ಮಮ ಎಂದರೆ ಕೃಷ್ಣನ ಯೋನಿಃ ಗರ್ಭಾಧಾನಕ್ಕೋಸ್ಕರ ಇರುವವಳು ಎಂದರ್ಥ. ಹೊರತು ತಾಯಿ ಎಂದರ್ಥವಲ್ಲ. ಆದ್ದರಿಂದ ಇಲ್ಲಿ ಯೋನಿಶಬ್ದಕ್ಕೆ ಭಾರ್ಯಾ ಎಂದರ್ಥ. ಏಕೆಂದರೆ ಮುಂದೆ 'ತಸ್ಮಿನ್ ಗರ್ಭಂ ದಧಾಮ್ಯಹಮ್' ಎಂಬ ಮಾತಿರುವುದರಿಂದ. ಮತ್ಸ್ಯ-

ಪುರಾಣದಲ್ಲಿಯೂ ಮಹದ್ ಬ್ರಹ್ಮ ಶಬ್ದವು ಪ್ರಕೃತಿಯನ್ನು ಹೇಳುತ್ತಿದೆ. ಇನ್ನು ಮಹದ್ ಬ್ರಹ್ಮ ಎಂಬ ಪದದಿಂದ ಹೇಳಲ್ಪಡುವ ಚಿತ್ಪ್ರಕೃತಿಗೆ ಶ್ರೀ,ಭೂ, ದುರ್ಗಾ ಈ ಮೂರು ರೂಪಗಳು ಮಾತ್ರ ಎಂದು ಸ್ವೀಕರಿಸಬೇಕು. ಇಲ್ಲಿ ಭೂ ಎಂದರೆ ಯಾರು ಎಂಬ ವಿಚಾರವು ಸೌಕರಾಯಣಶ್ರುತಿಯಲ್ಲಿ ಬಂದಿದೆ.

## ಶ್ರಿಯಃ ಪತ್ಯೇ ಎಂದದ್ದು ಜಯಾಜಾನಿಯಂತೆ ಅಲ್ಲ

** ಜಯಾಜಾನಿಃ' ಜಾನಿ ಎಂಬ ಶಬ್ದವು 'ಜಾಯಾಯಾಃ ನಿಙ್' (5-4-134) 'ಜಾಯಾಶಬ್ದಾಂತಸ್ಯ ಬಹುವ್ರೀಹೇಃ ನಿಙ್-ಆದೇಶಃ ಭವತಿ । ಯುವತಿಃ ಜಾಯಾ ಯಸ್ಯ ಯುವಜಾನಿಃ, ವೃದ್ಧಜಾನಿಃ' ಜಾಯಾಶಬ್ದವೇ ಕೊನೆಗಿರುವ ಬಹುವ್ರೀಹಿ ಸಮಾಸಕ್ಕೆ ನಿಙ್-ಎಂಬ ಆದೇಶವು ಬರುತ್ತದೆ. ಅರ್ಥಾತ್ ಜಾಯಾಶಬ್ದದ ಯಾ ಎನ್ನುವ ಭಾಗಕ್ಕೆ ನಿಙ್ ಎಂಬ ಆದೇಶ. ಪ್ರಕೃತದಲ್ಲಿ ಜಯಾಜಾನಿಃ ಎಂಬ ಕಡೆ ಬಹುವ್ರೀಹಿಸಮಾಸವಿರುವಂತೆ 'ಜಯಾ ಜಾನಿಃ ಯಸ್ಯ' ಯಾರಿಗೆ ಜಯೆಯು ಪತ್ನಿಯಾಗಿದ್ದಾಳೋ ಅವನು ಜಯಾಜಾನಿಯಾಗುವನು. ಹಾಗೆಯೇ ಇಲ್ಲಿಯೂ ಶ್ರಿಯಃ ಪತ್ಯೇ ಎಂಬಲ್ಲಿ ಸಮಾಸ ಮಾಡಿದರೆ ಬಹುವ್ರೀಹಿ ಸಮಾಸ ಎಂದು ಪ್ರತೀತಿ ಬರುತ್ತಿತ್ತು. ಆಗ ಅರ್ಥಾಂತರಪ್ರತಿಭಾಸವಾದೀತು. ಶ್ರೀರೇವ ಪತಿಃ ಯಸ್ಯ - ಲಕ್ಷ್ಮಿಯೇ ಸ್ವಾಮಿಯಾಗಿ ಯಾರಿಗೆ ಇರುವಳೋ ಅಂತಹವನು ಎಂದು ಅರ್ಥಾಂತರ. ಅದಾಗದಿರಲು 'ಶ್ರಿಯಃ ಪತ್ಯೇ' ಎಂದು ಸಮಾಸಮಾಡದೇ ನಿರ್ದೇಶಿಸಿದ್ದಾರೆ.

ಈ ತರಹದ ಜಾನಿಪದವನ್ನು ಉತ್ತರಪದವನ್ನಾಗಿ ಹೊಂದಿದ ಅನೇಕ ಪ್ರಯೋಗಗಳನ್ನು ಕಾಣಬಹುದು. ಉದಾಹರಣೆಗೆ ನ್ಯಾಯಸುಧಾವ್ಯಾಖ್ಯಾನವಾದ ಚಷಕದಲ್ಲಿ ಶ್ರೀಜಾನಿ ಎಂದಿದೆ.

ಪೂಜ್ಯಚರಣಃ ಸಮೀಹಿತಸಮಾಪನಾದಿಫಲಕಶ್ರೀಜಾನ್ಯಭಿಷ್ಟುತ್ಯಾದಿರೂಪಮಂಗಲವಿಧಾನೋತ್ತರ-ಕಾಲಿಕಾನಭ್ಯರ್ಣವರ್ತಿವಿನೇಯಾಧಿಕರಣಕತದ್ಗೋಚರಾನುಸಂಹಿತಿಪ್ರಯೋಜನಕಂ (ಚಷಕ)

## ಬ್ರಹ್ಮ, ಜಿಜ್ಞಾಸಾಪದಗಳು ಮಾಂಗಲಿಕ ಹೇಗೆ?

(ಲಘುರಸರಂಜನೀ) — ನನ್ವನುವ್ಯಾಖ್ಯಾನೇ ಓಂಕಾರಾಥಶಬ್ದಯೋರ್ಮಾಂಗಲಿಕತ್ವಸ್ಯೋಕ್ತತ್ವಾತ್ ಕಥಂ ಬ್ರಹ್ಮಜಿಜ್ಞಾಸಾಪದಾಭ್ಯಾಂ ಮಂಗಲಾನುಷ್ಠಾನಂ ಸಮರ್ಥ್ಯತ ಇತಿ ಚೇನ್ನ । ಪೂರ್ವಪ್ರಸ್ಥಾನೇ ಅಥಶಬ್ದಸ್ಯೈವ ಮಾಂಗಲಿಕತ್ವೋಕ್ತಾವಪಿ ಉತ್ತರಪ್ರಸ್ಥಾನೇ ಓಂಕಾರಾಥಶಬ್ದಯೋರ್ದ್ವಯೋರಪಿ ಮಾಂಗಲಿಕತ್ವೋಕ್ತೇ ರೀತ್ಯಂತರತ್ವವದಸ್ಯಾಪಿ ರೀತ್ಯಂತರತ್ವಸಂಭವಾದಿತಿ ।

ಅಲ್ಲ; ಅನುವ್ಯಾಖ್ಯಾನದಲ್ಲಿ ಓಂಕಾರ ಅಥಶಬ್ದಗಳನ್ನು ಹೇಳಿದ್ದೇ ಮಂಗಲಾನುಷ್ಠಾನವಾಗಿದೆ ಎನ್ನುವುದಕ್ಕೆ ಗಮಕ ಎಂದು ಹೇಳಿ ಇಲ್ಲಿ ಬ್ರಹ್ಮಜಿಜ್ಞಾಸಾಪದಗಳಿಂದ ಮಂಗಲಾನುಷ್ಠಾನವನ್ನು ಸಮರ್ಥನೆ ಮಾಡಿದ್ದು ಹೇಗೆ ಸರಿ?

ಉತ್ತರ - ಪೂರ್ವಪ್ರಸ್ಥಾನವಾದ ಭಾಷ್ಯದಲ್ಲಿ ಅಥಶಬ್ದವನ್ನು ಮಾತ್ರ ಮಾಂಗಲಿಕ ಎಂದು

ಹೇಳಿದ್ದರೂ ಉತ್ತರಪ್ರಸ್ಥಾನವಾದ ಅನುವ್ಯಾಖ್ಯಾನದಲ್ಲಿ ಓಂಕಾರ ಅಥಶಬ್ದಗಳೆರಡೂ ಮಾಂಗಲಿಕ ಎಂದು ಹೇಳಿ ಪ್ರಕಾರಾಂತರವನ್ನು ಆಶ್ರಯಿಸಿದಂತೆ ಇಲ್ಲಿಯೂ ಪ್ರಕಾರಾಂತರ ಎಂದು ಹೇಳಲು ಬರುವುದರಿಂದ ತೋರಿಸಿದ್ದು ಸರಿಯಾಗಿದೆ.

## ನಿಖಿಲತ್ವ ಹಾಗೂ ಪೂರ್ಣತ್ವಗಳ ಲಾಭ ಹೇಗೆ?

**(ಲಘುರಸರಂಜನೀ)— ಸಂಗೃಹ್ಯ ನಿಖಿಲೇತಿ ಪೂರ್ಣೇತಿ ಚ ಪದದ್ವಯಾರ್ಥಾನುವಾದಃ ಅಗಣಿತೇತಿ ॥ ಗುಣೇಷು ಏಕೋ ದ್ವೌ ಇತ್ಯಾದಿಗಣನಾಭಾವೇ ನಿಖಿಲತ್ವಸ್ಯ, ಅಯಮೇತಾವಾನ್ ಅಯಮೇತಾವನ್ ಇತಿ ಪರಿಚ್ಛಿನ್ನಪರಿಮಾಣತಯಾ ಗಣನಾಭಾವೇ ಪೂರ್ಣತ್ವಸ್ಯ ಚ ಲಾಭಾತ್ ।**

ನಿತ್ಯಾಗಣಿತಗುಣಮಾಣಿಕ್ಯ – ಅನುವ್ಯಾಖ್ಯಾನದಲ್ಲಿ ನಿಖಿಲಪೂರ್ಣಗುಣ್ಯೈಕದೇಹಂ ಎಂಬಲ್ಲಿರುವ 'ನಿಖಿಲ' ಎಂಬ ಪದ ಹಾಗೂ 'ಪೂರ್ಣ' ಎಂಬ ಪದದ ಅರ್ಥವನ್ನು ಅನುವಾದ ಮಾಡಲು 'ಅಗಣಿತ' ಎಂದಿದ್ದಾರೆ. ಅಗಣಿತ ಎಂದರೆ ಭಗವಂತನ ಗುಣಗಳಲ್ಲಿ ಒಂದು, ಎರಡು, ಮೂರು ಎಂಬ ಸಂಖ್ಯಾಗಣನೆ ಮಾಡಲು ಬರುವುದಿಲ್ಲ. ಆದ್ದರಿಂದ ನಿಖಿಲಪದದ ಅರ್ಥವು ಸಿಗುವುದು.

ನಿಖಿಲ ಎಂದರೆ ಎಲ್ಲ ಎಂದರ್ಥ. ಆ ಅರ್ಥವು ಅಗಣಿತ ಎಂಬ ಪದದಿಂದ ಸಿಗುತ್ತಿದೆ. ಅಗಣಿತ ಎಂದರೆ ಇಷ್ಟು ಗುಣಗಳು ಇವೆ ಎಂದು ಪರಿಗಣನೆ ಮಾಡಲು ಸಾಧ್ಯವಿಲ್ಲ ಎಂದರ್ಥ. ಹಾಗಾಗಿ ಅನಂತಗುಣಗಳಿವೆ ಎಂದು ಸಿದ್ಧವಾಗುವುದು. ಅಂದರೆ ಎಲ್ಲಾ ಗುಣಗಳನ್ನೂ ಗ್ರಹಿಸಿದಂತೆ ಆಯಿತು. ಪೂರ್ಣತ್ವ ಎಂಬ ಅರ್ಥವನ್ನು ಅಗಣಿತ ಎಂಬ ಪದದಿಂದ ಹೀಗೆ ವಿವರಿಸಬೇಕು. 'ಅಯಂ ಏತಾವಾನ್, ಅಯಂ ಏತಾವಾನ್' 'ಇದು ಇಷ್ಟು, ಇದು ಇಷ್ಟು' ಎಂದು ಪರಿಮಾಣವಿಷ್ಟೇ ಎಂದು ಹೇಳಲು ಸಾಧ್ಯವಿಲ್ಲವಾದ್ದರಿಂದ ಅಪರಿಚ್ಛಿನ್ನಪರಿಮಾಣ ಎಂಬ ಅರ್ಥವು ಸಿಗುವುದು. ಹೀಗೆ ಅಗಣಿತ ಎಂಬ ಪದದಿಂದ ಪೂರ್ಣ ಎನ್ನುವ ಅರ್ಥ ಸಿಗುತ್ತಿದೆ.

## ನಿತ್ಯಾಗಣಿತ ಎಂಬಲ್ಲಿರುವ ನಿತ್ಯತ್ವಕ್ಕೆ ನಾಲ್ಕು ಕಡೆ ಅಥವಾ ಒಂದೇ ಕಡೆ ಅನ್ವಯ

**(ಲಘುರಸರಂಜನೀ) — ಅತ್ರ ಅಗಣಿತತ್ವ-ಗುಣೋ-ಲ್ಲಾಸೋ-ಪಹತತ್ವೇಷು ಚತುರ್ಷು ನಿತ್ಯತ್ವ-ವಿಶೇಷಣೇನ ತೇಷಾಂ ಕಾದಾಚಿತ್ಕತ್ವಶಂಕಾಂ ವ್ಯಾವರ್ತಯತಿ । ತೇನ 'ಸದಾ ನಿರ್ದೋಷಮ್' ಇತಿ ಮೂಲೇ ದೋಷತ್ವಾವಚ್ಛಿನ್ನದೋಷಪ್ರತಿಪಾದಕನಿರುಪಪದದೋಷಪದಪ್ರತಿಪಾದ್ಯಂ ದೋಷಾಣಾಂ ಸಾಕಲ್ಯಂ 'ಸದಾ'ಪದಪ್ರತಿಪಾದ್ಯಂ ತದಭಾವಸ್ಯ ಸಾರ್ವಕಾಲಿಕತ್ವಂ ಚ ಸಮರ್ಥಿತಂ ಭವತಿ । ಅನ್ಯಥಾ ಗುಣೇಷ್ವಗಣಿತತ್ವಸ್ಯ ಕಾದಾಚಿತ್ಕತ್ವೇ ಪ್ರಕೃತೇಽಗಣಿತಪದೋಕ್ತನಿಖಿಲತ್ವ-ಪೂರ್ಣತ್ವಯೋಃ ಕಾದಾಚಿತ್ಕತ್ವಾದ್ ಗುಣೇಷು ಕದಾಚಿದಲ್ಪತ್ವಂ ಸಾವಧಿಕತ್ವಂ ಸ್ಯಾತ್ । ತತ್ರ**

ಗುಣಾನಾಂ ಸ್ವಸದೃಶದೋಷನಿವರ್ತಕತ್ವಸ್ಯ ಯುಕ್ತತ್ವಾತ್, ಗುಣೋಪಹನ್ಯಮಾನದೋಷೇಷ್ವಪಿ ಅಲ್ಪತ್ವಾದಿಪ್ರಾಪ್ತ್ಯಾ ಸಾಕಲ್ಯಂ ನ ಸ್ಯಾತ್ । ತಥಾ ಗುಣಾನಾಂ ಕಾದಾಚಿತ್ಕತ್ವೇ ನಿವರ್ತಕಾಭಾವೇನ ಉಲ್ಲಾಸಸ್ಯ ಕಾದಾಚಿತ್ಕತ್ವೇ ನಿವರ್ತಕಸದ್ಭಾವೇಽಪಿ ಪ್ರತಿಬಂಧವಶಾದುಪಹತತ್ವಸ್ಯ ಕಾದಾಚಿತ್ಕತ್ವೇ ಚ ಕದಾಚಿತ್ ದೋಷಾಣಾಮಪಿ ಪ್ರಸಂಗೇನ ಸದಾಪದೋಕ್ತಸಾರ್ವಕಾಲಿಕತ್ವಂ ದೋಷಾಭಾವಸ್ಯ ನ ಸ್ಯಾತ್ । ಅಥವಾ ನಿತ್ಯಂ ಅಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೈರುಪಹತಾನಿ ಸಕಲಾ-ವದ್ಯತಮಾಂಸಿ ಯಸ್ಮಿನ್ನಿತಿ ಬಹುಪದಬಹುವ್ರೀಹಿಗ್ರಹಣೇನೈಕಸ್ಮಿನ್ನಗಣಿತಗುಣಮಾಣಿಕ್ಯವಿಶದ-ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸ್ತ್ವರೂಪವಿಶಿಷ್ಟಧರ್ಮ ಏವ ನಿತ್ಯತ್ವವಿಶೇಷಣೇನ ಸರ್ವಂ ಸೇತ್ಸ್ಯತಿ । ಉಕ್ತಸ್ಥಲೇಷು ನಿತ್ಯತ್ವವಿವಕ್ಷಾಂ ವಿನಾ ವಿಶಿಷ್ಟಧರ್ಮೇ ನಿತ್ಯತ್ವಾಪರ್ಯವಸಾ-ನಾತ್ । ಅನೇನ ಮೂಲೇ ಸದಾಪದಸ್ಯ ನಿಖಿಲಪೂರ್ಣಗುಣೈಕದೇಹಂ ನಿರ್ದೋಷತ್ವಮ್ ಇತ್ಯುಭಯತ್ರಾನ್ವಯಃ ಸೂಚಿತಃ ।

'ನಿತ್ಯಾಗಣಿತಗುಣಮಾಣಿಕ್ಯ' ಎಂಬ ವಿಶೇಷಣದಲ್ಲಿ ಘಟಕವಾದ ನಿತ್ಯಪದಕ್ಕೆ ನಿತ್ಯ ಎಂದರ್ಥ. ಈ ನಿತ್ಯತ್ವವು ನಾಲ್ಕರಲ್ಲಿ ವಿಶೇಷಣವಾಗಿ ಅನ್ವಯ ಮಾಡಬೇಕು. (1) ಅಗಣಿತತ್ವದಲ್ಲಿ, (2) ಗುಣದಲ್ಲಿ, (3) ಉಲ್ಲಾಸದಲ್ಲಿ (4) ಉಪಹತತ್ವದಲ್ಲಿ. ಹೀಗೆ ವಿಶೇಷಣ ಕೊಟ್ಟಿದ್ದರಿಂದ ಈ ನಾಲ್ಕು ಅಂಶಗಳು ಕಾದಾಚಿತ್ಕ ಅರ್ಥಾತ್ ಯಾವಾಗಲೋ ಒಮ್ಮೆ ಇರುವುದು ಅಂದರೆ ಅನಿತ್ಯ ಎಂಬ ಶಂಕೆಯನ್ನು ಪರಿಹರಿಸಿದಂತಾಯಿತು. ಇದರಿಂದಾಗಿ ಅನುವ್ಯಾಖ್ಯಾನದಲ್ಲಿ ಸದಾ ಎಂಬ ಪದವನ್ನು ನಿರ್ದೋಷಂ ಎಂಬ ಪದದೊಂದಿಗೂ ಅನ್ವಯಿಸಿದ್ದನ್ನು ಸಮರ್ಥಿಸಿದಂತಾಯಿತು ಎಂದು ತಿಳಿಯಬೇಕು.

'ನಿರ್ದೋಷಂ' ಎಂಬ ಪದದಲ್ಲಿನ ದೋಷ ಎಂಬ ಭಾಗವು ದೋಷತ್ವಾವಚ್ಛಿನ್ನದೋಷಗಳನ್ನು ಪ್ರತಿಪಾದನೆ ಮಾಡುತ್ತಿದೆ. ಅರ್ಥಾತ್ ಎಲ್ಲ ದೋಷಗಳು ಎಂದರ್ಥ. ಏಕೆಂದರೆ ನಿರುಪಪದವಾಗಿ ದೋಷಪದವನ್ನು ಗ್ರಹಿಸಿರುವುದರಿಂದ. ಯಾವುದೇ ವಿಶೇಷಣವನ್ನು ಕೊಡದೆ ದೋಷ ಎಂಬ ಪದವನ್ನು ಹೇಳಿದ್ದರಿಂದ ಎಂದರ್ಥ. ಇನ್ನು 'ಸದಾ'ಪದದಿಂದ ಆ ಎಲ್ಲ ದೋಷಗಳ ಅಭಾವವು ಸಾರ್ವಕಾಲಿಕ ಎಂದು ತಿಳಿಯುತ್ತಿದೆ. ಹೀಗೆ ನಿತ್ಯತ್ವವನ್ನು ಪ್ರತಿಯೊಂದು ಕಡೆ ಕೊಡದಿದ್ದರೆ ಗುಣ-ಗಳಲ್ಲಿ ಅಗಣಿತತ್ವವು ಕಾದಾಚಿತ್ಕವಾದರೆ ಪ್ರಕೃತ ಅಗಣಿತ ಎಂಬ ಪದದಿಂದ ಹೇಳಲ್ಪಟ್ಟ ನಿಖಿಲತ್ವ ಪೂರ್ಣತ್ವಗಳು ಕಾದಾಚಿತ್ಕವೆಂದಾಗುವುದರಿಂದ ಗುಣಗಳು ಯಾವಾಗಲಾದರೊಮ್ಮೆ ಕಡಿಮೆ ಹಾಗೂ ಅವಧಿಯುಳ್ಳದ್ದಾಗಬೇಕಾದೀತು. ಹಾಗಾಗಿ ಎಲ್ಲ ಗುಣಗಳು ತಮಗೆ ಸದೃಶವಾದ ದೋಷಗಳನ್ನೇ ನಿವೃತ್ತಿಮಾಡುತ್ತವೆ ಎಂದು ಹೇಳುವುದು ಉಚಿತ. ಇಲ್ಲಿಯೂ ಕೂಡ ಗುಣಗಳಿಂದ ಪರಿಹರಿಸಲ್ಪಡುವ ದೋಷಗಳಲ್ಲೂ ಅಲ್ಪತ್ವಪ್ರಾಪ್ತಿಯಾಗಿ ಎಲ್ಲ ದೋಷಗಳ ನಿವಾರಣೆಯೂ ಆಗದಂತೆಯೂ ಆದೀತು. ಹಾಗಾಗಿ ಗುಣಗಳಲ್ಲಿ ಕಾದಾಚಿತ್ಕ ಎನ್ನುವುದು ಅನಪೇಕ್ಷಿತ.

ಆದ್ದರಿಂದಲೇ ನಿತ್ಯತ್ವ ಎಂಬ ವಿಶೇಷಣವನ್ನು ಅಗಣಿತತ್ವದಲ್ಲಿ ನೀಡಲೇ ಬೇಕು. ಇಲ್ಲದಿದ್ದರೆ ಅಗಣಿತತ್ವವು ಕಾದಾಚಿತ್ಕವಾದಲ್ಲಿ ಗುಣಗಳಲ್ಲಿ ಅಲ್ಪತ್ವಪ್ರಾಪ್ತಿ. ಗುಣಗಳಲ್ಲಿ ಅಲ್ಪತ್ವವಿದ್ದರೆ ಗುಣಗಳು ಸ್ವಸದೃಶವಾದ ದೋಷಗಳನ್ನು ಮಾತ್ರ ನಿವೃತ್ತಿಮಾಡುವುದರಿಂದ ಎಲ್ಲ ದೋಷಗಳೂ ನಿವೃತ್ತವಾಗದೇ ಕೆಲವು ದೋಷಗಳು ಹಾಗೆಯೇ ಉಳಿಯಬೇಕು ಎಂದೆಲ್ಲಾ ಆಪತ್ತಿ ಬಂದೀತು।.

ಹಾಗೆಯೇ ಗುಣಗಳು ಕಾದಾಚಿತ್ಕವೆಂದರೆ ದೋಷಗಳಿಗೆ ನಿವರ್ತಕವು ಇಲ್ಲ ಎಂದಾದೀತು. ಉಲ್ಲಾಸವು ಕಾದಾಚಿತ್ಕವಾದರೆ ನಿವರ್ತಕವಾದ ಗುಣಗಳಿದ್ದರೂ ಸಹಕಾರಿಯಾದ ಉಲ್ಲಾಸವಿಲ್ಲ ಎಂದಾದೀತು ಆಗಲೂ ದೋಷಗಳ ನಿವೃತ್ತಿ ಆಗದಿರಬೇಕಾದೀತು. ಇನ್ನು ಉಪಹತತ್ವವು ಕಾದಾಚಿತ್ಕವಾದರೆ ಯಾವಾಗಲಾದರೊಮ್ಮೆ ದೋಷಗಳು ಇರುವ ಪ್ರಸಂಗ ಬಂದೀತು। ಈ ರೀತಿ ನಿತ್ಯತ್ವವಿಶೇಷಣವನ್ನು ನೀಡದಿದ್ದರೆ ಸದಾ ಪದದಿಂದ ಹೇಳಲ್ಪಡುವ ಸಾರ್ವಕಾಲಿಕದೋಷಾಭಾವವು ಸಿದ್ಧವಾಗುತ್ತಿರಲಿಲ್ಲ.

ಅಥವಾ ಹೀಗೆ ವಿಗ್ರಹವನ್ನು ಮಾಡಬೇಕು — ನಿತ್ಯವಾಗಿ ಅಗಣಿತಗುಣಮಾಣಿಕ್ಯವಿಶದಪ್ರಭಾಜಾಲದ ಉಲ್ಲಾಸದಿಂದ ಪರಿಹರಿಸಲ್ಪಟ್ಟ ಎಲ್ಲ ರೀತಿಯಾದ ದೋಷಗಳೆಂಬ ಕತ್ತಲೆಯು ಯಾರಲ್ಲಿ ಇದೆಯೋ ಅವನೇ ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸ್ಸನಿಸುವನು. ಈ ರೀತಿ ಬಹುಪದಗಳಿಗೆ ಬಹುವ್ರೀಹಿಸಮಾಸವನ್ನು ಆಶ್ರಯಿಸಿದ್ದರಿಂದ ಒಂದರಲ್ಲೇ ನಿತ್ಯತ್ವ ವಿಶೇಷಣವನ್ನು ನೀಡಿದಂತೆ ಆಗಿ ಎಲ್ಲ ಆಪತ್ತಿಗಳೂ ಪರಿಹಾರವಾಗುತ್ತವೆ. ಈಗ ನಿತ್ಯತ್ವವನ್ನು ಅಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸ್ತ್ವವೆಂಬ ವಿಶಿಷ್ಟಧರ್ಮದಲ್ಲಿ ವಿಶೇಷಣವಾಗಿ ನೀಡಲಾಗಿದೆ. ವಿಶಿಷ್ಟಧರ್ಮದಲ್ಲಿ ನೀಡಿದ ವಿಶೇಷಣವು ವಿಶೇಷಣಗಳಾದ ಅಗಣಿತತ್ವ, ಗುಣ, ಉಲ್ಲಾಸ ಹಾಗೂ ಉಪಹತತ್ವಗಳಲ್ಲಿ ಅನ್ವಯವಾಗುತ್ತದೆ. ಈ ನಾಲ್ಕರಲ್ಲಿ ನಿತ್ಯತ್ವ-ವಿಶೇಷಣವನ್ನು ವಿವಕ್ಷೆಮಾಡದಿದ್ದರೆ ವಿಶಿಷ್ಟವಾದ ತಮಸ್ತ್ವದಲ್ಲಿ ನಿತ್ಯತ್ವವು ಪರ್ಯವಸಿತವಾಗುವುದಿಲ್ಲವೆಂದಾಗುವುದರಿಂದ ಅನುವ್ಯಾಖ್ಯಾನದಲ್ಲಿ 'ಸದಾ' ಎಂಬ ಪದಕ್ಕೆ 'ನಿಖಿಲಪೂರ್ಣಗುಣೈಕದೇಹಂ' ಹಾಗೂ 'ನಿರ್ದೋಷಂ' ಎಂಬ ಎರಡು ಕಡೆಯೂ ಸಂಬಂಧವಿದೆಯೆಂದು ಸೂಚಿಸಿದಂತಾಯಿತು.

## ನಿತ್ಯಾಗಣಿತ ಹಾಗೂ ಪ್ರಭಾಜಾಲೋಲ್ಲಾಸ ... ಉಕ್ತಿಯ ಹಾರ್ದ

(ಲಘುರಸರಂಜನೀ) — ಪೂರ್ವಪ್ರಸ್ಥಾನವ್ಯಾಖ್ಯಾನಾವಸರೇ 'ಶುದ್ಧಾನಂದೋರುಸಂವಿತ್' ಇತ್ಯಾದಿನಾ ಗುಣಸ್ವರೂಪಸ್ಯ ವಿಶಿಷ್ಯ ದರ್ಶಿತತ್ವಾದತ್ರ **'ಗುಣ'** ಇತ್ಯೇವೋಕ್ತಮ್ । ಸೂರ್ಯಾದಿ-ಪ್ರಭಾಯಾಃ ಕಾದಾಚಿತ್ಕತ್ವಾತ್ ಮಾಣಿಕ್ಯಪ್ರಭಾಯಾ ಸದಾತನತ್ವಾದ್ವಾ ಯಥಾ ತತ್ತನ್ಮಾಣಿಕ್ಯಸ್ಯ ತತ್ತ-ತ್ತಮೋನಿವರ್ತಕತ್ವಂ ತಥಾ ಜ್ಞಾನಮಜ್ಞಾನಸ್ಯ ಆನಂದೋ ದುಃಖಸ್ಯೇತ್ಯೇವಮ್ ಅನಂತಾನಾಂ

ಗುಣಾನಾಮ್ ಅನಂತದೋಷನಿವರ್ತಕತ್ವಮಿತಿ ಪ್ರದರ್ಶನಾರ್ಥತ್ವಾದ್ವಾ ಗುಣಾನಾಂ ಮಾಣಿಕ್ಯೈ-ರೇವೋಪಮಾನಮ್ । ಗುಣೇಷು ಸಕಲದೋಷೋಪಹಂತೃತ್ವೋಪಪಾದನಾಯೋಕ್ತಮ್ — ನಿತ್ಯಾಗಣಿತೇತಿ ॥ ತಥಾ ಮಾಣಿಕ್ಯೇಷು ತಮೋಹಂತೃತ್ವೋಪಪಾದನಾಯ ಉಕ್ತಮ್ — ಪ್ರಭಾಜಾಲೋಲ್ಲಾಸೇತಿ ॥ ಪ್ರಭಾನಿವರ್ತ್ಯತ್ವಂ ತಮಸ ಏವೇತಿ ದೋಷಾಣಾಂ ತಮೋಭಿರುಪ-ಮಾನಮ್ । ತಥಾ ಚ — ಯಥಾ ಪ್ರಭಾತಮಸೋಃ ಸಾಮಾನಾಧಿಕರಣ್ಯವಿರೋಧಾತ್ ಪ್ರಭಾವತಿ ಪ್ರದೇಶೇಽನುಕ್ತಾವಪಿ ತಮೋಽಭಾವಃ ಸಿಧ್ಯತಿ ತಥಾ ಗುಣದೋಷಯೋರಪಿ ಸಾಮಾನಾ-ಧಿಕರಣ್ಯವಿರೋಧಾದೇವ ಬ್ರಹ್ಮಪದೋಕ್ತೇ ನಿತ್ಯಮಗಣಿತಗುಣೇ ನಾರಾಯಣೇಽನುಕ್ತಾವಪಿ ಸಕಲದೋಷಾಭಾವಃ ಸಿಧ್ಯತಿ । ಅತ ಏವ ನಾರಾಯಣಪದವ್ಯಾಖ್ಯಾನಾವಸರೇ ಅರಾ = ದೋಷಾಃ ತದ್ವಿರುದ್ಧಾ ಗುಣಾ = ನಾರಾ ಇತಿ ಗುಣದೋಷಯೋರ್ವಿರೋಧಂ ವಕ್ಷ್ಯತೀತಿ ಭಾವಃ ।

ಸುಧಾದಲ್ಲಿ ಗುಣಗಳನ್ನು ವಿಶೇಷವಾಗಿ ಆನಂದ, ಜ್ಞಾನ ಇತ್ಯಾದಿಯಾಗಿ ನಿರ್ದೇಶಮಾಡದೆ ಗುಣ ಎಂದು ಸಾಮಾನ್ಯವಾಗಿ ಹೇಳಿರುವುದು ಪೂರ್ವಪ್ರಸ್ಥಾನವಾದ ಭಾಷ್ಯಕ್ಕೆ ವ್ಯಾಖ್ಯಾನಮಾಡುವ ಅವಸರದಲ್ಲಿ ತತ್ವಪ್ರಕಾಶಿಕಾ ಟೀಕೆಯಲ್ಲಿ 'ಶುದ್ಧ-ಆನಂದ-ಉರು-ಸಂವಿತ್' ಮುಂತಾದ ರೀತಿಯಲ್ಲಿ ಗುಣಗಳನ್ನು ವಿಶೇಷವಾಗಿ ನಿರ್ದೇಶ ಮಾಡಿದ್ದರಿಂದ ಎಂದು ತಿಳಿಯಬೇಕು.

ಗುಣಗಳನ್ನು ಮಾಣಿಕ್ಯಗಳಿಗೆ ಹೋಲಿಸಿದ್ದು ಏಕೆ? ಉತ್ತರ – ಸೂರ್ಯಾದಿಪ್ರಭೆಗಳು ಅನಿತ್ಯವಾದ್ದರಿಂದ ಅಥವಾ ಮಾಣಿಕ್ಯದ ಪ್ರಭೆಯು ನಿತ್ಯವಾದ್ದರಿಂದ ಆಯಾಯಾ ಮಾಣಿಕ್ಯವು ಆಯಾಯಾ ತಮಸ್ಸನ್ನೇ ಹೇಗೆ ನಿವಾರಿಸುವುದೋ ಹಾಗೆಯೇ ಜ್ಞಾನವು ಅಜ್ಞಾನಕ್ಕೆ, ಆನಂದವು ದುಃಖಕ್ಕೆ ಹೀಗೆ ಅನಂತ ಗುಣಗಳು ಅನಂತದೋಷಗಳನ್ನು ನಿವೃತ್ತಿಮಾಡುವುದು ಎಂಬುದನ್ನು ತೋರಿಸುವುದಕ್ಕೋಸ್ಕರ ಎಂದು ತಿಳಿಯಬೇಕು.

ನಿತ್ಯಾಗಣಿತ - ಗುಣಗಳು ಎಲ್ಲ ದೋಷಗಳನ್ನು ಪರಿಹರಿಸುವ ಸಾಮರ್ಥ್ಯವನ್ನು ಹೊಂದಿವೆ ಎಂಬುದನ್ನು ತೋರಿಸಲು ನಿತ್ಯಾಗಣಿತ ಎಂದಿದ್ದಾರೆ. ಹಾಗೆ ಮಾಣಿಕ್ಯಗಳಲ್ಲಿ ಕತ್ತಲೆಯನ್ನು ನಾಶ ಮಾಡುವ ಸಾಮರ್ಥ್ಯವಿದೆ ಎಂಬುದನ್ನು ಸಮರ್ಥನೆ ಮಾಡಲು ಪ್ರಭಾಜಾಲೋಲ್ಲಾಸ ಎಂದಿದ್ದಾರೆ. ಬೆಳಕಿನಿಂದ ನಿವೃತ್ತಿಯಾಗುವುದು ತಮಸ್ಸೇ ಎಂಬ ಅಭಿಪ್ರಾಯದಿಂದ ದೋಷಗಳನ್ನು ಕತ್ತಲೆಗೆ ಹೋಲಿಸಿದ್ದಾರೆ. ಹಾಗಾಗಿ ಹೇಗೆ ಬೆಳಕು ಕತ್ತಲೆಗಳಿಗೆ ಏಕಪ್ರದೇಶಸ್ಥಿತಿಯು ವಿರುದ್ಧವೋ ಆದ್ದರಿಂದಲೇ ಬೇರೆ ಪ್ರದೇಶದಲ್ಲಿರುವ ಬೆಳಕು ಇದ್ದಾಗಲೂ ಅಲ್ಲಿ ಕತ್ತಲೆಯು ಇಲ್ಲ ಎಂಬುದು ಕಂಠತಃ(ಬಾಯಿಬಿಟ್ಟು) ಹೇಳಬೇಕಾಗಿಲ್ಲ. ಅದೇ ರೀತಿ ಗುಣದೋಷಗಳಿಗೂ ಏಕದೇಶಸ್ಥಿತಿಯು ವಿರುದ್ಧವಾದ್ದರಿಂದಲೇ ಬ್ರಹ್ಮಪದದಿಂದ ಹೇಳಲ್ಪಟ್ಟ ನಿತ್ಯವಾದ ಅಗಣಿತವಾದ ಗುಣಗಳುಳ್ಳ ನಾರಾಯಣನಲ್ಲಿ ಎಲ್ಲ ದೋಷಗಳೂ ಇಲ್ಲ ಎಂಬುದು ಅರ್ಥಾತ್ ಸಿದ್ಧ. ಆದ್ದರಿಂದಲೇ ನಾರಾಯಣಪದಕ್ಕೆ ವ್ಯಾಖ್ಯಾನ

ಮಾಡುವ ಸಂದರ್ಭದಲ್ಲಿ ಅರ ಎಂದರೆ ದೋಷಗಳು ಅದಕ್ಕೆ ವಿರುದ್ಧವಾದ ಗುಣಗಳನ್ನು ನಾರ ಎನ್ನುತ್ತಾರೆ ಎಂದು ಗುಣದೋಷಗಳಿಗೆ ವಿರೋಧವನ್ನು ಹೇಳುತ್ತಾರೆ ಎಂದು ಭಾವ.

## ಲಕ್ಷಣಪ್ರಮಾಣಗಳ ಕಥನ — ನಮ್ಯವಸ್ತುಸ್ವರೂಪನಿರ್ಧಾರ

(ಲಘುರಸರಂಜನೀ) — ನನು ನಾನಿರ್ಧಾರಿತಸ್ವರೂಪಸ್ಯ ಪ್ರಣಾಮೋ ಯುಕ್ತಃ । ನ ಚಾಂತರೇಣ ಲಕ್ಷಣಪ್ರಮಾಣೇ ವಸ್ತುನಿರ್ಧಾರಣಮ್ ಇತ್ಯತೋ ನಮ್ಯನಾರಾಯಣಸ್ವರೂಪನಿರ್ಧಾರಣಾಯ ಸೂತ್ರಕೃತಾ ಆದ್ಯಸೂತ್ರೇ ಬ್ರಹ್ಮಪದೇನಾಭಿಹಿತಂ ಗುಣಪೂರ್ಣತ್ವಾದಿರೂಪಂ ಪ್ರಧಾನಲಕ್ಷಣಂ 'ನಿಖಿಲ' ಇತ್ಯಾದಿನಾ ಅಭಿಧಾಯ ಪುನಃ ತತ್ಸಿದ್ಧ್ಯರ್ಥಂ ಜನ್ಮಾದಿಸೂತ್ರೋಕ್ತಾನ್ಯೇವ ಲಕ್ಷಣಾನ್ಯನುವದತಿ — **ಅಸ್ಯೋದ್ಭವಾದಿದಮ್ ಇತಿ** ॥

ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ - ಯಾವ ವಸ್ತುವಿನ ಸ್ವರೂಪನಿರ್ಧಾರವಾಗಿರುತ್ತದೋ ಅದಕ್ಕೆ ನಮಸ್ಕಾರಮಾಡುವುದು ಯುಕ್ತ. ವಸ್ತುಸ್ವರೂಪದ ನಿರ್ಧಾರವು ಲಕ್ಷಣ ಹಾಗೂ ಪ್ರಮಾಣಗಳ ಅಧೀನ. ಹಾಗಾಗಿ ನಮಸ್ಕರಿಸಲು ಯೋಗ್ಯನಾದ ನಾರಾಯಣನ ಸ್ವರೂಪದ ನಿರ್ಧಾರವನ್ನು ಸೂತ್ರಕಾರರು ಮೊದಲನೆಯ ಸೂತ್ರದಲ್ಲಿ ಬ್ರಹ್ಮ ಪದದಿಂದ ಹೇಳಿದ ಗುಣಪೂರ್ಣತ್ವ ಎಂಬ ಪ್ರಧಾನಲಕ್ಷಣವನ್ನು ಅನುವ್ಯಾಖ್ಯಾನಕಾರರು 'ನಿಖಿಲಪೂರ್ಣಗುಣೈಕದೇಹಂ' ಎಂಬುವ ಪದದಿಂದ ಹೇಳಿ, ಪುನಃ ಅದರ ಸಿದ್ಧಿಗಾಗಿ ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಲ್ಲಿ ಹೇಳಿದ ಲಕ್ಷಣಗಳನ್ನು 'ಅಸ್ಯೋದ್ಭವಾದಿದಂ' ಎಂಬ ಪದದಿಂದ ಅನುವಾದ ಮಾಡಿದ್ದಾರೆ.

## ಪಕ್ಷದ್ವಯಾಂಗೀಕಾರೇಽಪಿ ದೋಷವಿಲ್ಲ

(ಲಘುರಸರಂಜನೀ) — ನನು 'ಅಸ್ಯೋದ್ಭವಾದಿದಮ್' ಇತ್ಯತ್ರ ನ ತಾವತ್ ಸಮುದಿತಮೇಕಮೇವ ಲಕ್ಷಣಂ ವಿವಕ್ಷಿತಮ್ । ಜನ್ಮಾದಿಷ್ವೇಕೈಕಸ್ಯೈವ ಲಕ್ಷಣತ್ವಸಂಭವೇನ ಶೇಷವೈಯರ್ಥ್ಯಾತ್ । ಕಿಂತ್ವನೇಕಮೇವ ಇತ್ಯವಿವಾದಿತಮ್ । ತತ್ರ ಕಿಮಷ್ಟಾವಪಿ ಲಕ್ಷಣಾನಿ ವಿವಕ್ಷಿತಾನಿ ಉತ ಕತಿಪಯಾನಿ । ನಾದ್ಯಃ । ಯಥಾ ಯಥಾ ಕತಿಪಯೈರೇವ ಲಕ್ಷಣೈರಸ್ಯ ಸ್ವರೂಪಾವಧಾರಣೇ ಲಕ್ಷಣಾಷ್ಟಕವಿವಕ್ಷಾಯಾ ಅನುಪಯೋಗಾತ್ । ನ ದ್ವಿತೀಯಃ । ಏತಾನ್ಯೇವೇತಿ ನಿರ್ಣಾಯಕಾಭಾವೇನ ಅನಿರ್ಣಯಾದಿತಿ ಚೇನ್ನ । ಪಕ್ಷದ್ವಯಾಂಗೀಕಾರೇಽಪಿ ದೋಷಾಭಾವಾತ್ । ತಥಾಹಿ — ಭಾಷ್ಯಕಾರಸ್ತಾವತ್ಸೂತ್ರೋಕ್ತಾ- ನ್ಯೇವ ಲಕ್ಷಣಾನ್ಯನುವದತೀತ್ಯುಕ್ತಮ್ । ಸೂತ್ರೇ ತು ಶ್ರೌತಾನ್ಯೇವ ಲಕ್ಷಣಾನ್ಯುಚ್ಯಂತೇ । ಸೂತ್ರಂ ಚ ಶ್ರುತ್ಯನುಸಾರೀತ್ಯುಕ್ತೇಃ । ಶ್ರುತಯಶ್ಚ —

'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' 'ನಾರಾಯಣಂ ಮಹಾಜ್ಞೇಯಮ್' 'ತಮೇವೈಕಂ ಜಾನಥ ಆತ್ಮಾನಮ್' ಇತ್ಯಾದ್ಯಾ ಆದ್ಯಸೂತ್ರವಿಷಯವಾಕ್ಯಭೂತಾ ಜಿಜ್ಞಾಸಾವಿಧಾತ್ರ್ಯಃ ಬಹ್ವ್ಯಃ ಸಂತಿ । ತತ್ರ ಜಿಜ್ಞಾಸ್ಯಸ್ಯ

ಸರ್ವವ್ಯಾವೃತ್ತಯೇ ಲಕ್ಷಣಮುಚ್ಯತೇ । ನ ಚೈಕಮೇವ ಸರ್ವತ್ರ ಜಿಜ್ಞಾಸಾವಿಧಾಯಕಶ್ರುತಿಷು ಲಕ್ಷಣಂ ಶ್ರೂಯತೇ । ಕಿಂತು ಕ್ವಚಿತ್ ಸೃಷ್ಟಿಃ, ಕ್ವಚಿತ್ ಸ್ಥಿತಿಃ, ಕ್ವಚಿತ್ ಪ್ರಲಯಃ, ಕ್ವಚಿನ್ಮೋಕ್ಷಃ, ಕ್ವಚಿದ್ದ್ವಯಂ, ಕ್ವಚಿತ್ತ್ರಯಂ ವಾ ಇತ್ಯಾದಿರೂಪೇಣಾಷ್ಟಕಮಪಿ । ತತ್ರ ಸೂತ್ರಸ್ಯ ವಿಶ್ವತೋ-ಮುಖತ್ವಾದವಿಶೇಷೇಣ ಜಿಜ್ಞಾಸಾವಿಧಾಯಕಸರ್ವಶ್ರುತಿನಿರ್ಣಾಯಕತ್ವದಶಾಯಾಂ ಸೂತ್ರೇಽಷ್ಟಾವಪಿ ಲಕ್ಷಣಾನಿ ವಿವಕ್ಷಿತಾನಿ । ಅತ ಏವ —

'ಸೃಷ್ಟಿಸ್ಥಿತಿಸಂಹಾರನಿಯಮನಜ್ಞಾನಾಜ್ಞಾನಬಂಧಮೋಕ್ಷಾ ಯತಃ ।'(ಬ್ರ.ಸೂ.ಭಾ.)

'ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ ।<br>
ಬಂಧಮೋಕ್ಷಾವಪಿ ಹ್ಯಾಸು ಶ್ರುತಿಷೂಕ್ತಾಃ ಹರೇಃ ಸದಾ' (ಅನುವ್ಯಾ. 1.ಅ1.ಪಾ. ಶ್ಲೋ.81)

ಇತ್ಯಾದಿತದ್ಭಾಷ್ಯಾನುಭಾಷ್ಯಯೋರಷ್ಟಾವಪಿ ಲಕ್ಷಣಾನಿ ಸ್ಪಷ್ಟಮುಕ್ತಾನಿ । ಅಸ್ಯಾಂ ದಶಾಯಾಂ ಸೂತ್ರಾರ್ಥಾನುವಾದಪರೇ 'ಅಸ್ಯೋದ್ಭವಾದಿದಮ್' ಇತಿ ಸಂಕ್ಷಿಪ್ತಭಾಷ್ಯೇಽಪಿ ಅಷ್ಟಾವೇವ ಲಕ್ಷಣಾನಿ ವಿವಕ್ಷಿತಾನಿ । ಅತ ಏವ ಸುಧಾಯಾಮುತ್ತರತ್ರ ತತ್ತಥೈವ ವ್ಯಾಖ್ಯಾಸ್ಯತೇ । ಕಯಾಚನ ವಿವಕ್ಷಯಾ ತತ್ತಚ್ಛ್ರುತಿನಿರ್ಣಾಯಕತ್ವದಶಾಯಾಂ ತು ತತ್ತದುಕ್ತಾನ್ಯೇವ ಲಕ್ಷಣಾನಿ ವಿವಕ್ಷಿತಾನಿ । ನಾಧಿಕಾನಿ । ಪ್ರಯೋಜನಾಭಾವಾತ್ । ಪ್ರಕೃತೇ ಚ ಕಯಾಚನ ವಿವಕ್ಷಯಾ ತದ್ವಿಜಿಜ್ಞಾಸಸ್ವ ತದ್ ಬ್ರಹ್ಮೇತಿ ಶ್ರುತಿಃ ಕಂಠತ ಏವ ಸೂತ್ರಕೃತಾ ಸೂಚಿತಾ । 'ಆಕಾಶಸ್ತಲ್ಲಿಂಗಾತ್' 'ಅಸ್ಯೈವ ಚೋಪಪತ್ತೇರೂಷ್ಮಾ' ಇತ್ಯಾದಾವಿವ 'ಬ್ರಹ್ಮಜಿಜ್ಞಾಸೇ'ತಿ ತತ್ರತ್ಯಬ್ರಹ್ಮಶಬ್ದಪಾಠಾತ್ । ತಾಂ ವಿವಕ್ಷಾಂ ತು ಹರಿಪದಪ್ರಯೋಗಪ್ರಯೋಜನಪ್ರದರ್ಶನಾವಸರೇ ಲೇಶತಃ ಪ್ರದರ್ಶಯಿಷ್ಯಾಮಃ । ಇತರಾ-ಸ್ತೂಪಲಭ್ಯಂತೇ ।

ಅಸ್ಯೋದ್ಭವಾದಿದಂ ಎಂಬಲ್ಲಿ ಸೃಷ್ಟ್ಯಾದಿಅಷ್ಟಕಗಳನ್ನು ಸೇರಿ ಸಮುದಿತವಾದ ಒಂದೇ ಲಕ್ಷಣವು ವಿವಕ್ಷಿತ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಜನ್ಮಸ್ಥಿತಿಲಯ ಮೊದಲಾದವುಗಳಲ್ಲಿ ಒಂದೊಂದನ್ನೇ ಭಗವಂತನ ಲಕ್ಷಣ ಎಂದು ಹೇಳಲು ಬರುವುದರಿಂದ ವ್ಯರ್ಥವಾಗಬೇಕಾದೀತು। ಆದ್ದರಿಂದ ಅನೇಕವಾದ ಲಕ್ಷಣಗಳನ್ನೇ ಹೇಳಬೇಕು. ಅನೇಕಲಕ್ಷಣಗಳೆಂದರೆ ಎಂಟು ಲಕ್ಷಣಗಳನ್ನು ಹೇಳಬೇಕೋ ಅಥವಾ ಕೆಲವೇ ಲಕ್ಷಣಗಳೋ. ಮೊದಲನೆಯ ಕಲ್ಪ ಸರಿಯಿಲ್ಲ. ಕೆಲವೇ ಲಕ್ಷಣಗಳಿಂದ ನಾರಾಯಣನಸ್ವರೂಪದ ನಿಶ್ಚಯವಾಗುವುದಾದರೆ ಎಂಟು ಲಕ್ಷಣಗಳ ವಿವಕ್ಷೆಯು ವ್ಯರ್ಥವಾದೀತು। ಎರಡನೆಯ ಕಲ್ಪವೂ ಸರಿಯಿಲ್ಲ. ಕೆಲವು ಲಕ್ಷಣಗಳು ಎಂದರೆ ಇವುಗಳನ್ನೇ ಹೇಳಬೇಕು ಎಂದು ನಿಶ್ಚಯವಿಲ್ಲವಾದ್ದರಿಂದ. ಹೀಗಾಗಿ ಎರಡೂಕಲ್ಪಗಳು ಸರಿಯಿಲ್ಲ ಎಂದಾದೀತು? ಆದ್ದರಿಂದ ಯಾವ ಪಕ್ಷ ಎಂಬ ಪ್ರಶ್ನೆ ಉಳಿಯುತ್ತದೆ.

ಉತ್ತರ - ಎರಡು ಪಕ್ಷಗಳನ್ನು ಒಪ್ಪಿದರೂ ಯಾವುದೇ ದೋಷವಿಲ್ಲವಾದ್ದರಿಂದ ಎರಡೂ ಸರಿಯೇ. ಅದು ಹೀಗೆ - ಭಾಷ್ಯಕಾರರಾದರೋ ಸೂತ್ರದಲ್ಲಿ ಹೇಳಿದ ಲಕ್ಷಣಗಳನ್ನೇ ಅನುವಾದ ಮಾಡುತ್ತಾರೆ ಎಂದು ಹೇಳಲಾಗಿದೆ. ಸೂತ್ರದಲ್ಲಿಯಾದರೋ ವೇದದಲ್ಲಿ ಬಂದ ಲಕ್ಷಣಗಳನ್ನೇ ಹೇಳಿದ್ದಾರೆ. ಸೂತ್ರವು ವೇದಾನುಸಾರಿ ಎಂದು ಹೇಳಿದ್ದರಿಂದ. ಶ್ರುತಿಗಳಾದರೋ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' 'ನಾರಾಯಣಂ ಮಹಾಜ್ಞೇಯಂ' 'ತಮೇವ ಏಕಂ ಜಾನಥ ಆತ್ಮಾನಮ್' ಮುಂತಾದವುಗಳು. ಇವುಗಳು ಮೊದಲನೆಯ ಸೂತ್ರಕ್ಕೆ ವಿಷಯವಾಕ್ಯಗಳಾಗಿದ್ದು ಜಿಜ್ಞಾಸಾವನ್ನು ವಿಧಾನಮಾಡುತ್ತಿವೆ. ಇವುಗಳಲ್ಲಿ ಜಿಜ್ಞಾಸ್ಯನಾದ ವ್ಯಕ್ತಿಯನ್ನು ಎಲ್ಲವಸ್ತುಗಳಿಂದಲೂ ಬೇರ್ಪಡಿಸಲು ಲಕ್ಷಣಗಳನ್ನು ಹೇಳಿದ್ದಾರೆ. ವ್ಯಾವೃತ್ತಿಗಾಗಿ ಹೇಳಲ್ಪಡುವ ಲಕ್ಷಣವು ಜಿಜ್ಞಾಸಾವಿಧಾನಮಾಡುವ ಶ್ರುತಿಗಳಲ್ಲಿ ಒಂದೇ ಎಲ್ಲಾ ಕಡೆ ಇಲ್ಲ. ಹೊರತು ಕೆಲವು ಕಡೆ ಸೃಷ್ಟಿ, ಕೆಲವು ಕಡೆ ಸ್ಥಿತಿ, ಕೆಲವು ಕಡೆ ಪ್ರಲಯ, ಕೆಲವು ಕಡೆ ಮೋಕ್ಷ, ಕೆಲವು ಕಡೆ ಎರಡು, ಕೆಲವು ಕಡೆ ಮೂರು ಇತ್ಯಾದಿಯಾಗಿ ಎಂಟೂ ಇರುವುದರಿಂದ. ಅವುಗಳಲ್ಲಿ ಸೂತ್ರವು ವಿಶ್ವತೋಮುಖವಾಗಿ ಜಿಜ್ಞಾಸಾಭಿಧಾಯಕವಾದ ಎಲ್ಲ ಶ್ರುತಿಗಳಿಗೆ ನಿರ್ಣಾಯಕವಾಗಿದೆ ಎಂಬ ಪಕ್ಷದಲ್ಲಿ ಎಂಟೂ ಲಕ್ಷಣಗಳನ್ನು ವಿವಕ್ಷೆ ಮಾಡಬೇಕು.

ಆದ್ದರಿಂದಲೇ ಭಾಷ್ಯ ಹಾಗೂ ಅನುಭಾಷ್ಯಗಳಲ್ಲಿ ಎಂಟೂ ಲಕ್ಷಣಗಳಲ್ಲಿ ಹೇಳುವ 'ಸೃಷ್ಟಿಸ್ಥಿತಿಸಂಹಾರ.....' 'ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ...' ಇತ್ಯಾದಿಯಾಗಿ ಹೇಳಿದ್ದಾರೆ. ಈ ರೀತಿಯಲ್ಲಿ ಸೂತ್ರದ ಅರ್ಥವನ್ನು ಅನುವಾದ ಮಾಡುವ ಅಸ್ಯೋದ್ಭವಾದಿದಂ ಎಂಬ ಅನು-ವ್ಯಾಖ್ಯಾನದಲ್ಲಿ ಎಂಟೇ ಲಕ್ಷಣಗಳು ವಿವಕ್ಷಿತವಾಗಿವೆ ಎಂದು ಹೇಳಬೇಕು. ಆದ್ದರಿಂದಲೇ ನ್ಯಾಯಸುಧಾದಲ್ಲೂ ಮುಂದಕ್ಕೆ 'ಅಸ್ಯೋದ್ಭವಾದಿದಂ' ಎಂಬ ಪದಕ್ಕೆ ವ್ಯಾಖ್ಯಾನಮಾಡುವಾಗ ಎಂಟೇ ಎಂದು ವ್ಯಾಖ್ಯಾನಿಸಿದ್ದಾರೆ. ಇನ್ನು ಯಾವುದೋ ಒಂದು ರೀತಿಯಲ್ಲಿ ಸೂತ್ರಗಳು ಆಯಾಯಾ ಶ್ರುತಿಗಳಿಗೆ ಮಾತ್ರ ನಿರ್ಣಾಯಕ ಎಂದು ಒಪ್ಪಿದ ಪಕ್ಷದಲ್ಲಿ ಆಯಾಯಾ ಶ್ರುತಿಗಳಲ್ಲಿ ಹೇಳಿದ ಲಕ್ಷಣಗಳನ್ನಷ್ಟೇ ವಿವಕ್ಷೆ ಮಾಡಬೇಕು. ಹೆಚ್ಚನ್ನಲ್ಲ. ಪ್ರಯೋಜನವಿಲ್ಲವಾದ್ದರಿಂದ ಎಂದು ತಿಳಿಯ-ಬೇಕು.

ಪ್ರಕೃತದಲ್ಲಿ ಯಾವುದೋ ಒಂದು ರೀತಿಯಲ್ಲಿ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂಬ ಶ್ರುತಿಯನ್ನು ಬಾಯಿಬಿಟ್ಟೇ ಅರ್ಥಾತ್ ಕಂಠತಃ ಸೂತ್ರಕಾರರು ತಿಳಿಸಿದ್ದಾರೆ. 'ಆಕಾಶಸ್ತಲ್ಲಿಂಗಾತ್'(1-1-22) 'ಅಸ್ಯೈವ ಚೋಪಪತ್ತೇರೂಷ್ಮಾ' (4-2-11) ಮುಂತಾದ ಸೂತ್ರಗಳಲ್ಲಿ ಹೇಳಿದಂತೆ ಶ್ರುತಿಯಲ್ಲಿರುವ ಬ್ರಹ್ಮಶಬ್ದವನ್ನೇ ಬ್ರಹ್ಮಜಿಜ್ಞಾಸಾ ಎಂಬಲ್ಲಿ ಪಾಠಮಾಡಿದ್ದಾರೆ. ಈ ರೀತಿ ಯಾವುದೋ ಒಂದು ತರಹದ ವಿವಕ್ಷೆಯನ್ನು ಹರಯೇ ಎಂಬ ಪದದ ಪ್ರಯೋಜನವನ್ನು ತೋರಿಸುವ ಸಂದರ್ಭದಲ್ಲಿ ಸ್ವಲ್ಪ ಹೇಳುತ್ತೇವೆ.

## ತಮೇವೈಕಂ ಜಾನಥ ಆತ್ಮಾನಂ - ಶ್ರುತ್ಯರ್ಥ

** (ಭಾ.) 'ತಮೇವೈಕಂ ಜಾನಥ ಆತ್ಮಾನಮ್ ಅನ್ಯಾ ವಾಚೋ ವಿಮುಂಚಥ । ಅಮೃತಸ್ಯೈಷ ಸೇತುಃ' ಇತ್ಯನ್ಯೇಷಾಂ ಹೇಯತ್ವವಚನಾದಸ್ಯಾಹೇಯತ್ವವಚನಾನ್ನ ಗೌಣ ಆತ್ಮಾ ।

"ತಂ = ದ್ಯುಭ್ವಾದ್ಯಾಶ್ರಯಂ, ಆತ್ಮಾನಮೇವ, ಏಕಂ = ಪ್ರಧಾನಂ, ಜಾನಥ = ಜಾನೀಥಾಃ । ಏವಶಬ್ದಸ್ಯ ವ್ಯಾವರ್ತ್ಯಮಾಹ — ಅನ್ಯಾ ಇತಿ ॥ ಭಗವದನ್ಯಸ್ಯ ಪ್ರಾಧಾನ್ಯಪ್ರತಿಪಾದಿಕಾ ಯಾಃ ವಾಚಃ, ತದವಿಷಯಾ ವಾ, ತಾಃ ವಿಮುಂಚಥ । ಯತೋ ಅಮೃತಸ್ಯ ಮುಕ್ತವರ್ಗಸ್ಯ ಏಷ ಆತ್ಮಾ ಸೇತುಃ ಆಶ್ರಯಃ – ಇತಿ ಶ್ರುತ್ಯಾ, ಅನ್ಯೇಷಾಂ ಗೌಣಾತ್ಮನಾಮ್ 'ಅನ್ಯಾ ವಾಚೋ ವಿಮುಂಚಥ' ಇತಿ ಹೇಯತ್ವವಚನಾತ್ ।

ತಂ = ಸ್ವರ್ಗ, ಭೂಲೋಕ ಮೊದಲಾದವುಗಳಿಗೆ ಆಶ್ರಯನಾದ, ಆತ್ಮಾನಮೇವ = ಆತ್ಮಶಬ್ದದಿಂದ ಹೇಳಲ್ಪಡುವವನನ್ನೇ, ಏಕಂ = ಪ್ರಧಾನವನ್ನಾಗಿ, ಜಾನಥ = ತಿಳಿಯಿರಿ. ಅನ್ಯಾಃ ವಾಚಃ = ಭಗವಂತನನ್ನು ಬಿಟ್ಟು, ಬೇರೆಯದಕ್ಕೆ ಪ್ರಾಧಾನ್ಯವನ್ನು ತಿಳಿಸುವ ಯಾವ ಮಾತುಗಳಿವೆಯೋ, ವಿಮುಂಚಥ = ಅಂತಹವುಗಳನ್ನು ತ್ಯಾಗಮಾಡಿರಿ. ಏಕೆಂದರೆ, ಅಮೃತಸ್ಯ = ಮುಕ್ತಸಮುದಾಯಕ್ಕೆ, ಏಷಃ ಆತ್ಮಾ = ಈ ಆತ್ಮಪದವಾಚ್ಯನು, ಸೇತುಃ = ಆಶ್ರಯನು. — ಎಂಬ ಶ್ರುತಿಯಿಂದ ಬೇರೆ ಗೌಣ ಆತ್ಮವಿಷಯಕವಾದ ಮಾತುಗಳು ಹೇಯ ಎಂದಿದ್ದಾರೆ.

## ಜನ್ಮಾಧಿಕರಣ

** (ಭಾ.) ಸೃಷ್ಟಿಸ್ಥಿತಿಸಂಹಾರನಿಯಮನಜ್ಞಾನಾಜ್ಞಾನಬಂಧಮೋಕ್ಷಾ ಯತಃ (1-1-2)

ಜನ್ಮಾದ್ಯಸ್ಯ ಯತಃ – ಜನ್ಮಾದಿ । ಅಸ್ಯ । ಯತಃ – ಇತಿ ವಿಭಾಗಃ ।

ಜನ್ಮ = ಉತ್ಪತ್ತಿಃ ಆದಿರ್ಯಸ್ಯ ಸ್ಥಿತ್ಯಾದಿಸಪ್ತಕಸ್ಯ ತತ್ ಜನ್ಮಾದಿ । .. ತಥಾ ಚ ಜನ್ಮಾದ್ಯ-ಷ್ಟಕಮ್ ಅಸ್ಯ ಪ್ರಮಾಣಪ್ರಮಿತಸ್ಯ ರಮಾಬ್ರಹ್ಮಾದಿಜಗತೋ ಯಥಾಯೋಗ್ಯಂ ಯತೋ ಬ್ರಹ್ಮಣಃ ಸಕಾಶಾತ್ ಭವತಿ ತದ್ ಬ್ರಹ್ಮ ಜಿಜ್ಞಾಸ್ಯಮಿತಿ ಸಂಬಂಧಃ । ಸೃಷ್ಟ್ಯಾದ್ಯಷ್ಟಕರ್ತೃತ್ವಂ ಬ್ರಹ್ಮಣೋ ಲಕ್ಷಣಮಿತಿ ಫಲಿತಾರ್ಥಃ ।

ಅತ್ರ ಆದಿಪದೇನ ಸ್ಥಿತಿಸಂಹೃತೀ ದ್ವೇ ಏವ ಗೃಹ್ಯೇತೇ 'ಯತೋ ವಾ ಇಮಾನಿ..' ಇತಿ ವಿಷಯ-ವಾಕ್ಯೇ ತಾವನ್ಮಾತ್ರಸ್ಯ ಶ್ರವಣಾತ್ – ಇತ್ಯಪವ್ಯಾಖ್ಯಾಂ ಪ್ರತ್ಯಾಖ್ಯಾತುಂ ಸೂತ್ರಂ ಯಥಾವದ್ ವ್ಯಾಚಷ್ಟೇ – ಸೃಷ್ಟೀತಿ ॥ ಸೃಷ್ಟ್ಯಾದಿಮೋಕ್ಷಾಂತಾಃ ಅಷ್ಟೌ ಯತಃ, 'ಅಸ್ಯ ಭವಂತಿ' ಇತಿ ಶೇಷಃ । 'ತದ್ ಬ್ರಹ್ಮ' ಇತ್ಯನ್ವಯಬಲೇನ ಲಬ್ಧಮ್ । ಸೃಷ್ಟ್ಯಾದ್ಯಷ್ಟಕರ್ತೃತ್ವಂ ಬ್ರಹ್ಮಲಕ್ಷಣಂ ಜೀವೇ ನಾಸ್ತೀತಿ ತದ್- ವ್ಯುದಾಸ ಇತಿ ಭಾವಃ ।

** जगज्जन्मादिकारणत्वमेव लक्षणम् । अस्य प्रत्यक्षादिप्रमाणसिद्धतया प्रकृतस्य समस्त-प्रपञ्चस्य यथासम्भवं जन्मादि यतो भवति तद् ब्रह्मेति सम्बन्धात् । नचैतदप्यप्रसिद्धम् । यतोऽस्य जगतः सृष्ट्यादयः आसु श्रुतिषु प्रसिद्धासु भाष्योदाहृतासु हरेरुदिताः । सदेत्यविगानं सूचयति । (सुधा)

ಈ ಪ್ರಮಾಣಸಿದ್ಧವಾದ ರಮಾಬ್ರಹ್ಮಾದಿಜಗತ್ತಿಗೆ ಯಾವ ಬ್ರಹ್ಮನಿಂದ ಅವರವರ ತಕ್ಕದಾದ ಜನ್ಮಾದಿ ಎಂಟು ಉಂಟಾಯಿತೋ ಅಂತಹ ಬ್ರಹ್ಮನನ್ನು ಜಿಜ್ಞಾಸೆ ಮಾಡಬೇಕು. ಇದರಿಂದ ಬ್ರಹ್ಮನ ಲಕ್ಷಣ ಸೃಷ್ಟ್ಯಾದ್ಯಷ್ಟಕರ್ತೃತ್ವ ಎಂದು ತಿಳಿಸಿದಂತಾಯಿತು. ಇಲ್ಲಿ ಸೃಷ್ಟ್ಯಾದಿ ಎಂಬಲ್ಲಿನ ಆದಿ-ಪದದಿಂದ ಸ್ಥಿತಿಸಂಹಾರಗಳನ್ನು ಮಾತ್ರ ಗ್ರಹಿಸುವುದು. ಏಕೆಂದರೆ 'ಯತೋ ವಾ ಇಮಾನಿ ಭೂತಾನಿ...' ಎಂಬ ವಿಷಯವಾಕ್ಯದಲ್ಲಿ ಅಷ್ಟನ್ನು ಮಾತ್ರ ಹೇಳುವುದರಿಂದ. ಹೀಗಾಗಿ ಸೃಷ್ಟಿಯಿಂದ ಆರಂಭಿಸಿ ಮೋಕ್ಷದವರೆಗಿನ ಎಂಟು ಯಾವುದರಿಂದ ಈ ಜಗತ್ತಿಗೆ ಆಗುತ್ತದೆಯೋ ಅದು ಬ್ರಹ್ಮ ಎಂದು ಹೇಳಿದಂತಾಯಿತು. ಈ ಸೃಷ್ಟ್ಯಾದ್ಯಷ್ಟಕರ್ತೃತ್ವ ಜೀವನಲ್ಲಿ ಇಲ್ಲ. ಅದರಿಂದ ಅವನನ್ನು ಬೇರ್ಪಡಿಸಿದಂತಾಯಿತು. ಈ ಸೃಷ್ಟ್ಯಾದ್ಯಷ್ಟಕರ್ತೃತ್ವವು ಭಗವಂತನಿಗೆ ಇದೆ ಎಂಬುದು ಪ್ರಸಿದ್ಧ. ಆ ಶ್ರುತಿಗಳನ್ನು ಭಾಷ್ಯದಲ್ಲಿ ಕಾಣಬಹುದು.

## ಆಕಾಶಸ್ತಲ್ಲಿಂಗಾತ್

** "ಆಕಾಶಸ್ತಲ್ಲಿಂಗಾತ್"— ಆಕಾಶಃ ಆಕಾಶಶಬ್ದವಾಚ್ಯಃ ವಿಷ್ಣುರೇವ ನ ಪ್ರಸಿದ್ಧಾಕಾಶಃ । ಕುತಃ? ತಲ್ಲಿಂಗಾತ್ । ಛಂದೋಗಶ್ರುತ್ಯುಕ್ತಾಕಾಶೇ ಪರೋವರೀಯಸ್ತ್ವಾದಿರೂಪವಿಷ್ಣುಲಿಂಗಸ್ಯ ಶ್ರವಣಾತ್ ಇತ್ಯರ್ಥಃ । (ಸೂ.ದೀ.)

(ಭಾ) 'ಸ ಏಷ ಪರೋವರೀಯಾನುದ್ಗೀಥಃ ಸ ಏಷೋऽನಂತಃ' ಇತ್ಯಾದಿತಲ್ಲಿಂಗಾತ್ ॥

ಆಕಾಶಪದದಿಂದ ಹೇಳಲ್ಪಡುವವನು ವಿಷ್ಣುವೇ ಹೊರತು ಪ್ರಸಿದ್ಧಾಕಾಶವಾದ ಭೂತಾಕಾಶವಲ್ಲ. ಏಕೆಂದರೆ, ವಿಷ್ಣು ಎನ್ನಲು ಲಿಂಗವಿದೆ. ವಿಷ್ಣುವಿನ ಲಿಂಗವಾದ ಪರೋವರೀಯಸ್ತ್ವವು ಆಕಾಶ-ಶಬ್ದವಾಚ್ಯನಲ್ಲಿ ಶ್ರುತವಾಗಿದೆ. ಪರೋವರೀಯಃ = ಶ್ರೇಷ್ಠರಾದ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠ ಎಂದರ್ಥ.

## ಅಸ್ಯೈವ ಚೋಪಪತ್ತೇರೂಷ್ಮಾ

"ಅಸ್ಯೈವ ಚೋಪಪತ್ತೇರೂಷ್ಮಾ" - (4-2-11) ಊಷ್ಮಾವತ್ವ-ಅನೂಷ್ಮಾವತ್ವಪ್ರತಿಪಾದಿಕಾ 'ದ್ವಿಧಾ ಹೀದಮ್' ಇತಿ ಶ್ರುತಿರಪಿ ಅಸ್ಯೈವ ಕಿಂಚಿತ್-ಸಾಮ್ಯರೂಪಾರ್ಥಸ್ಯೈವ ಉಪಪತ್ತೇರ್ಘಟನಾಯ ಉಪಪಾದಿಕಾ ಭವತೀತ್ಯರ್ಥಃ । (ಸೂ.ದೀ.)

– ಈಶ್ವರನ ಸಾಮ್ಯ ಲಕ್ಷ್ಮೀದೇವಿಗೆ ಸ್ವಲ್ಪ ಇದೆ. ಆದ್ದರಿಂದಲೇ ನಿತ್ಯಮುಕ್ತಳು ಎಂದು ಕರೆಯುತ್ತಾರೆ. ಇದನ್ನು ಪ್ರತಿಪಾದಿಸಲು ಈಶ್ವರನಿಗೆ ಊಷ್ಮಾವತ್ವವು ಲಕ್ಷ್ಮೀದೇವಿಗೆ ಊಷ್ಮಾವತ್ವ ಅನೂಷ್ಮಾವತ್ವವು ಇದೆ ಎಂದು ಪ್ರತಿಪಾದಿಸುವ ಆಯಾ ಪದಘಟಿತವಾದ ಶ್ರುತಿಗಳಿವೆ. ಊಷ್ಮಾ ಎಂದರೆ ಚಕ್ಷುರಾದಿ ಇಂದ್ರಿಯಗಳಿಗೆ ಗೋಚರವಾಗದೇ ಇರುವುದಕ್ಕೆ ಬೇಕಾದ ಸಾಮರ್ಥ್ಯ. ಆ ಶ್ರುತಿಗಳು ಹೀಗಿವೆ –

'ದ್ವಿಧಾ ಹೀದಮವದೃಶ್ಯತೇ ಊಷ್ಮಾವದನೂಷ್ಮಾವಚ್ಚ । ತತ್ರೋಷ್ಮಾವತ್ಪರಂ ಬ್ರಹ್ಮ ಯನ್ನ ಜಿಘ್ರಂತಿ ನ ಪಶ್ಯಂತಿ ನ ಶೃಣ್ವಂತಿ ನ ವಿಜಾನಂತಿ । ಅಥಾನೂಷ್ಮಾವತ್ಪ್ರಕೃತಿಶ್ಚ ಪ್ರಾಕೃತಂ ಚ ಯನ್ನ ಜಿಘ್ರಂತಿ ಜಿಘ್ರಂತಿ ಚ ಯನ್ನ ಪಶ್ಯಂತಿ ಪಶ್ಯಂತಿ ಚ ಯನ್ನ ಶ್ರುಣ್ವಂತಿ ಶ್ರುಣ್ವಂತಿ ಚ ಯನ್ನ ಜಾನಂತಿ ಜಾನಂತಿ ಚ' ಇತಿ ಸೌಪರ್ಣಶ್ರುತೇಃ ಕಿಂಚಿತ್ಸಾಮ್ಯೋಪಪತ್ತೇಃ ॥ (ಭಾಷ್ಯ)

– ಲಕ್ಷ್ಮೀ ಹಾಗೂ ಪರಬ್ರಹ್ಮರ ಮಧ್ಯೆ ಪರಬ್ರಹ್ಮನು ಯಾವ ಇಂದ್ರಿಯಕ್ಕೂ ವಿಷಯನಾಗುವುದಿಲ್ಲ. ಘ್ರಾಣೇಂದ್ರಿಯದಿಂದ ಘ್ರಾಣಿಸಲು ಅಸಾಧ್ಯ. ಕಣ್ಣಿನಿಂದ ನೋಡಲಾಗುವುದಿಲ್ಲ. ಕಿವಿಯಿಂದ ಕೇಳಲಾಗುವುದಿಲ್ಲ. ಅದರಂತೆ ಪ್ರಕೃತಿಯೂ ಕೂಡ ಎಂದು ಸೌಪರ್ಣಶ್ರುತ್ಯನುಸಾರ ಪರಮಾತ್ಮನ ಕಿಂಚಿತ್ ಸಾಮ್ಯವು ಲಕ್ಷ್ಮೀದೇವಿಗೆ ಇದೆ.

## ಅಡಿಗೆಗೋಸ್ಕರ ಉಂಟುಮಾಡಿದ ಬೆಂಕಿ ಪ್ರಕಾಶಿಸುವುದಿಲ್ಲವೇನು?

(ಲಘುರಸರಂಜನೀ) – ಅತ ಏವ ಭಾಷ್ಯಕಾರಾ ಉಪಲಕ್ಷಣಾಭಿಪ್ರಾಯಂ ದ್ಯೋತಯಿತುಂ 'ನಾರಾಯಣಂ ಮಹಾಜ್ಞೇಯಂ' ಇತಿ ಶ್ರುತಿಗತಂ ನಾರಾಯಣಪದಂ ಪಪಾಠ । 'ತದ್ವಿಜ್ಞಾಸಸ್ವ ತದ್ಬ್ರಹ್ಮ' ಇತ್ಯಾದಿಶ್ರುತೌ ಚ– 'ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ ಪ್ರಯಂತ್ಯಭಿಸಂವಿಶಂತಿ' ಇತಿ ಚತ್ವಾರ್ಯೇವ ಲಕ್ಷಣಾನಿ ಶ್ರುತಾನಿ । ತತ್ರ 'ಅಭಿಸಂವಿಶಂತಿ' ಇತಿ ಪದೋಕ್ತೋ ಮೋಕ್ಷಸ್ತು ಜಿಜ್ಞಾಸಾಯಾಃ ನಿಷ್ಪ್ರಯೋಜನತ್ವಶಂಕಾವಾರಕ-ತಯಾ ಅವಶ್ಯಮಾದಾವೇವ ವಕ್ತವ್ಯಃ । ಉಕ್ತಶ್ಚ ಸೂತ್ರಕೃತಾ ಅತಃಶಬ್ದೇನ । ಏವಂ ಪ್ರಯೋ-ಜನಾಂತರಾರ್ಥಮುಕ್ತೋಽಪಿ ಮೋಕ್ಷೋ ಲಕ್ಷಣಂ ಭೂತ್ವಾ ಸ್ವಲಕ್ಷ್ಯಮವಧಾರಯತ್ಯೇವ । ನ ಹಿ ಪಾಕಾರ್ಥಮುತ್ಪಾದಿತೋಽಪಿ ದಹನೋ ನ ಪ್ರಕಾಶಯತೀತಿ ಯುಕ್ತಮಿತಿ । ತಥಾ ಚ ಶ್ರೌತೇಷು ಚತುರ್ಷು ಲಕ್ಷಣೇಷು ಮೋಕ್ಷಾಖ್ಯಲಕ್ಷಣಸ್ಯೋಕ್ತದಿಶಾ ಆದ್ಯಸೂತ್ರೋಕ್ತತ್ವಾತ್ ಪರಿಶಿಷ್ಟಾನಿ ತ್ರೀಣ್ಯೇವ ಲಕ್ಷಣಾನಿ ದ್ವಿತೀಯಸೂತ್ರೇ ತತ ಏವಾನುಭಾಷ್ಯೇ ಚ ವಿವಕ್ಷಿತಾನೀತ್ಯಾಶಯೇನ ಆಹ – ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷ ಇತಿ ॥

ಆದ್ದರಿಂದಲೇ ಭಾಷ್ಯಕಾರರು ಬ್ರಹ್ಮಜಿಜ್ಞಾಸಾ ಎಂಬ ಕಡೆ ಉಪಲಕ್ಷಣವಿದೆ ಎಂದು ತಿಳಿಸಲು

'ನಾರಾಯಣ'ಶಬ್ದವನ್ನು ಪಠಿಸಿದ್ದಾರೆ. ಈ ಶಬ್ದವಾದರೋ 'ನಾರಾಯಣಂ ಮಹಾಜ್ಞೇಯಂ' ಎಂಬ ಶ್ರುತಿಯಲ್ಲಿ ಇದೆ. 'ತದ್ವಿಜಿಜ್ಞಾಸಸ್ವ' ಮುಂತಾದ ಶ್ರುತಿಯ ಸಂದರ್ಭದಲ್ಲಿ ಯಾವುದರಿಂದ ಈ ಭೂತಗಳು ಹುಟ್ಟುತ್ತವೆಯೋ, ಯಾವುದರಿಂದ ಸ್ಥಿತಿಯನ್ನು ಪಡೆದಿವೆಯೋ, ಯಾವುದರಿಂದ ಲಯವನ್ನು ಹೊಂದುತ್ತವೆಯೋ, ಯಾವುದರಿಂದ ಮೋಕ್ಷವು ಪ್ರಾಣಿಗಳಿಗೆ ಸಿಗುತ್ತದೆಯೋ ಎಂಬ ಅರ್ಥವುಳ್ಳ ವಾಕ್ಯಗಳಲ್ಲಿ ನಾಲ್ಕೇ ಲಕ್ಷಣಗಳು ಕೇಳಿಸಲ್ಪಡುತ್ತಿವೆ. ಅವುಗಳಲ್ಲಿ 'ಅಭಿಸಂವಿಶಂತಿ' ಎಂದು ಹೇಳಲ್ಪಡುವ ಮೋಕ್ಷವನ್ನಾದರೋ ಜಿಜ್ಞಾಸೆಗೆ ಪ್ರಯೋಜನವಿಲ್ಲ ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಮೊದಲೇ ಅವಶ್ಯವಾಗಿ ಹೇಳಬೇಕು. ಸೂತ್ರಕಾರರು 'ಅತಃ' ಎಂದು ಹೇಳಿದ್ದಾರೆಯೂ ಕೂಡ. ಈ ರೀತಿ ಬೇರೆ ಪ್ರಯೋಜನಕ್ಕಾಗಿ ಹೇಳಲ್ಪಟ್ಟ ಮೋಕ್ಷವು ಲಕ್ಷಣವಾಗಿಯೂ ಆಗಿ ತನ್ನ ಲಕ್ಷ್ಯವಾದ ನಾರಾಯಣನನ್ನು ನಿರ್ಧಾರ ಮಾಡೇ ಮಾಡುತ್ತದೆ. ಅಡಿಗೆಗೋಸ್ಕರ ಉಂಟು ಮಾಡಿದ ಬೆಂಕಿಯು ಪ್ರಕಾಶವನ್ನು ಬೀರುವುದಿಲ್ಲ ಎನ್ನುವುದು ಸರಿಯಲ್ಲ. ಅದರಂತೆ ಪ್ರಕೃತದಲ್ಲಿ ಎಂದು ತಿಳಿಯಬೇಕು. ಹಾಗಾಗಿ ಶ್ರುತಿಯಲ್ಲಿ ಹೇಳಿದ ನಾಲ್ಕು ಲಕ್ಷಣಗಳಲ್ಲಿ ಮೋಕ್ಷವೆಂಬ ಲಕ್ಷಣವನ್ನು ಮೊದಲನೆಯ ಸೂತ್ರದಲ್ಲಿ ಹೇಳಿದ್ದರಿಂದ ಉಳಿದ ಮೂರೇ ಲಕ್ಷಣಗಳನ್ನು ಎರಡನೇ ಸೂತ್ರದಲ್ಲಿ, ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿಯೂ ಅಷ್ಟೇ ವಿವಕ್ಷಿತ ಎಂಬ ಅಭಿಪ್ರಾಯದಿಂದ ಜಗಜ್ಜನ್ಮಸ್ಥೇಮಪ್ರಲಯ ಎಂದಿದ್ದಾರೆ.

## ಜನ್ಮಾದಿಗಳ ಸಂಬಂಧ ಹಾಗೂ ಲಕ್ಷಣ

(ಲಘುರಸರಂಜನೀ) — ಅತ್ರ ಕೇವಲೋ ಲಯಶಬ್ದಃ ಸಂಹಾರಸ್ಯ ಪ್ರಶಬ್ದಸಹಕೃತಸ್ತು ಪ್ರಕೃಷ್ಟ-ಲಯರೂಪಮೋಕ್ಷಸ್ಯ ವಾಚಕ ಇತಿ ವಿವೇಕಃ । ಆದ್ಯಸೂತ್ರಂ ತು ಬ್ರಹ್ಮಜಿಜ್ಞಾಸಾಯಾಃ ನಿಷ್ಪ್ರ-ಯೋಜನತ್ವಶಂಕಾವಾರಣಮಾತ್ರೇಣ ಚರಿತಾರ್ಥಮ್ । 'ಅಸ್ಯ' ಇತ್ಯಸ್ಯಾರ್ಥೋऽತ್ರ ಜಗತೋ ಜಂಗಮಸ್ಯೇತಿ। ಶ್ರುತೌ 'ಇಮಾನಿ ಭೂತಾನಿ' ಇತಿ ಪ್ರಾಣಿನಿಕಾಯಪ್ರಸಿದ್ಧಭೂತಶಬ್ದಾತ್ 'ಜೀವಂತಿ' ಇತಿ ಪ್ರಾಣಧಾರಣವಚನಾತ್ 'ಅಭಿಸಂವಿಶಂತಿ' ಇತಿ ಮೋಕ್ಷಪ್ರತಿಪಾದನಾಚ್ಚ । ಅಸ್ಯ ಪ್ರತ್ಯಕ್ಷಾದಿ-ಪ್ರಮಾಣಸಿದ್ಧತಯಾ ಬುದ್ಧಿಸನ್ನಿಹಿತಸ್ಯ 'ಸ್ವವ್ಯತಿರಿಕ್ತಪ್ರಪಂಚಸ್ಯ' ಇತಿ ಕರಿಷ್ಯಮಾಣವ್ಯಾಖ್ಯಾನಂ ತು ಸೂತ್ರಸ್ಯ ಜಿಜ್ಞಾಸಾವಿಧಾಯಕಸರ್ವಶ್ರುತಿನಿರ್ಣಾಯಕತ್ವಪಕ್ಷಮವಲಂಬ್ಯೇತಿ ನ ವಿರೋಧಿ । ತತ್ರ ತತ್ತತ್-ಶ್ರುತ್ಯುಕ್ತಸ್ಯ ಮಿಲಿತ್ವಾ ಜನ್ಮಾದ್ಯಷ್ಟಕಸ್ಯ ಯಥಾಸಂಭವಂ ಸರ್ವಪ್ರಪಂಚಸಂಬಂಧಿತ್ವಸ್ಯ ನ್ಯಾಯ್ಯತ್ವಾತ್ । ಅಥವಾ ಅತ್ರಾಪಿ ಜಗತಃ ಪ್ರಪಂಚಸ್ಯ ಇತ್ಯರ್ಥಃ । ಪ್ರಕೃತತ್ವಾತ್ 'ಇಮಾನಿ ಭೂತಾನಿ' ಇತಿ ಪ್ರಾಣಿಮಾತ್ರಪರಾಮರ್ಶಸ್ಯ ಪ್ರಪಂಚೇ ಯಥಾಸಂಭವಂ ಜನ್ಮಾದಿಸಂಬಂಧಸ್ಯ ಚ ಸಂಭವಾತ್ ।

ಅಥವಾ ಎರಡನೆ ಸೂತ್ರದಲ್ಲಿ ಹಾಗೆ ಅನುವ್ಯಾಖ್ಯಾನದಲ್ಲಿ ಶ್ರುತಿಯಲ್ಲಿ ಹೇಳಿದ ನಾಲ್ಕೂ ಲಕ್ಷಣಗಳು

ವಿವಕ್ಷಿತ ಎಂಬ ಅಭಿಪ್ರಾಯದಿಂದ 'ಜಗಜ್ಜನ್ಮಸ್ಥೇಮಪ್ರಲಯ' ಎಂದಿದ್ದಾರೆ. ಇಲ್ಲಿ ಕೇವಲ ಲಯ ಎಂಬ ಶಬ್ದವು ಸಂಹಾರವನ್ನು ಹೇಳಿದರೂ ಪ್ರಶಬ್ದದ ಜೊತೆಗಿರುವ ಲಯಶಬ್ದವು ಪ್ರಕೃಷ್ಟವಾದ ಲಯವನ್ನು ಅಂದರೆ ಮೋಕ್ಷವನ್ನು ಹೇಳುತ್ತಿದೆ ಎಂದು ತಿಳಿಯಬೇಕು. ಮೊದಲನೆಯ ಸೂತ್ರವಾದರೋ ಬ್ರಹ್ಮಜಿಜ್ಞಾಸೆಗೆ ಪ್ರಯೋಜನವಿಲ್ಲ ಎಂಬ ಶಂಕೆಯನ್ನು ವಾರಣೆ ಮಾಡುವುದರಿಂದಲೇ ಸಾರ್ಥಕವಾಗಿದೆ. 'ಅಸ್ಯೋದ್ಭವಾದಿದಂ' ಎಂಬಲ್ಲಿನ ಅಸ್ಯ ಎಂಬ ಶಬ್ದದ ಅರ್ಥವಾದರೋ ಇಲ್ಲಿ 'ಜಂಗಮಸ್ಯ' ಎಂದು. ಜಂಗಮ ಎಂದರೆ ಸಚೇತನವಾದ ಪದಾರ್ಥಗಳು. ಶ್ರುತಿಯಲ್ಲಿ 'ಇಮಾನಿ ಭೂತಾನಿ' ಎಂದು ಪ್ರಾಣಿಸಮುದಾಯದಲ್ಲಿ ಪ್ರಸಿದ್ಧವಾದ ಭೂತಶಬ್ದದಿಂದ 'ಜೀವಂತಿ' ಎಂದು ಪ್ರಾಣಧಾರಣೆಯನ್ನು ಹೇಳುವ ಶಬ್ದವನ್ನು ಬಳಸಿದ್ದರಿಂದ 'ಅಭಿಸಂವಿಶಂತಿ' ಎಂದು ಮೋಕ್ಷವನ್ನು ಹೇಳಿದ್ದರಿಂದಲೂ ಜಂಗಮವನ್ನು ಗ್ರಹಿಸಬೇಕು ಎಂದು ತಿಳಿಯಬೇಕು. ಇನ್ನು 'ಅಸ್ಯ' ಎಂದರೆ 'ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾದ ಬುದ್ಧಿಗೆ ವಿಷಯವಾಗಿರುವ ಬ್ರಹ್ಮವ್ಯತಿರಿಕ್ತವಾದ ಪ್ರಪಂಚಕ್ಕೆ' ಎಂದು ಮಾಡುವ ಮುಂದಿನ ವ್ಯಾಖ್ಯಾನವಾದರೋ ಸೂತ್ರವು ಜಿಜ್ಞಾಸಾಭಿಧಾಯಕ-ವಾದ ಎಲ್ಲ ಶ್ರುತಿಗಳನ್ನು ನಿರ್ಣಯಮಾಡುತ್ತದೆ ಎಂಬಂಶವನ್ನು ಅವಲಂಬಿಸಿ ಹೊರಟಿದ್ದರಿಂದ ಯಾವುದೇ ವಿರೋಧವಿಲ್ಲ. ಅಲ್ಲಿ ಆಯಾಯಾ ಶ್ರುತಿಗಳಲ್ಲಿ ಹೇಳಿದ ಎಲ್ಲವನ್ನೂ ಸೇರಿಸಿ ಜನ್ಮಾದಿ ಎಂಟು ಪದಾರ್ಥಗಳು ಯಥಾಯೋಗ್ಯವಾಗಿ ಇಡೀ ಪ್ರಪಂಚಕ್ಕೆ ಸಂಬಂಧಪಟ್ಟಿದ್ದು ಎಂದು ವ್ಯಾಖ್ಯಾನಿಸಲು ಬರುತ್ತದೆ.

ಅಥವಾ – ಸುಧಾದಲ್ಲಿ ಜಗತ್ತು ಎಂದರೆ ಪ್ರಪಂಚ ಎಂದೇ ಅರ್ಥ. ಪ್ರಕೃತ 'ಇಮಾನಿ ಭೂತಾನಿ' ಎಂದು ಕೇವಲ ಚೇತನರನ್ನು ಮಾತ್ರ ಪರಾಮರ್ಶಿಸಲಾಗಿದೆ. ಪ್ರಪಂಚದಲ್ಲಿ ಯಥಾಯೋಗ್ಯವಾಗಿ ಜನ್ಮಾದಿಗಳ ಸಂಬಂಧವು ತಿಳಿದೇ ತಿಳಿಯುತ್ತದೆ.

### ಸ್ಥೇಮಶಬ್ದ ಯೋಗೇನ ಸ್ಥಿತಿವಾಚಿಯೋ ರೂಢ್ಯಾ ದಾರ್ಢ್ಯವಾಚಿಯೋ

(ಲಘುರಸರಂಜನೀ)– ಸ್ಥೇಮಶಬ್ದಸ್ತು ಸ್ಥಾಧಾತುಪ್ರಕೃತಿಕೋ ಯೋಗೇನ ಸ್ಥಿತಿವಾಚೀತ್ಯೇಕಃ ಪಕ್ಷಃ । ಸ್ಥಿರಶಬ್ದಪ್ರಕೃತಿಕೋ ರೂಢ್ಯಾ ದಾರ್ಢ್ಯವಾಚೀತ್ಯನ್ಯಃ । ತತ್ರಾದ್ಯೇ ಸ್ಥೇಮಾ ಸ್ಥಿತಿರಿತ್ಯರ್ಥಃ । ದ್ವಿತೀಯೇ ಸ್ಥೇಮಾ ದಾರ್ಢ್ಯಮಿತ್ಯರ್ಥಃ । ನನ್ವಸ್ತು ಪ್ರಥಮಃ ಪಕ್ಷಃ ।

'ಸೃಷ್ಟಿಸ್ಥಿತಿಸಂಹಾರನಿಯಮನಜ್ಞಾನಾಜ್ಞಾನಬಂಧಮೋಕ್ಷಾ ಯತಃ ।'

'ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ ।
ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ ।'

'ಸೃಷ್ಟಿಸ್ಥಿತ್ಯಪ್ಯಯೇಹಾ'

ಇತ್ಯಾದೌ ಸರ್ವತ್ರ ಸೃಷ್ಟ್ಯಾದ್ಯಷ್ಟಕಕಥನಾವಸರೇ ಸ್ಥಿತೇರೇವ ಕಥನಾತ್ । ದ್ವಿತೀಯಸ್ತು ಕಥಮ್? ಕುತ್ರಾಪ್ಯನುಕ್ತೇಃ ಇತಿ ಚೇತ್, ಸತ್ಯಮ್ । ಅಭಿಪ್ರಾಯಸದ್ಭಾವಾತ್ । ತಥಾಹಿ – 'ಅಸ್ಯೋದ್ಭವಾ-ದಿದಮ್' ಇತಿ ಮೂಲೇ ಆದಿಪದೇನೋಕ್ತಮಾನೋಕ್ತತ್ವಾತ್ ಸ್ಥಿತಿರ್ಗೃಹ್ಯತೇ 'ಸೃಷ್ಟಿಂ ಚ ಪಾಲನಂ ಚೈವ ಸಂಹಾರಂ ನಿಯಮಂ ತಥಾ' (ಸೂ.ಭಾ.3-2-13) ಇತ್ಯಾದಿಮಾನೋಕ್ತತ್ವಾತ್ ಪಾಲನಂ ವೇತಿ ಸಂದಿಹ್ಯತೇ । ನ ಚೋಭಯಮಪ್ಯೇಕಮೇವ । ಭಕ್ತಿಪಾದೇ 'ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ' ಇತ್ಯಧಿಕರಣೇ ತಯೋಃ ಸಾಧ್ಯಸಾಧನಭಾವಕಥನೇನ ಭೇದಸ್ಯಾ-ಭಿಪ್ರೇತತ್ವಾತ್ । ಯಥೋಕ್ತಂ ತತ್ರೈವ ಸುಧಾಯಾಮ್ – 'ನೇಶ್ವರಸ್ಯ ವಿಶ್ವಪಾಲಕತ್ವಂ ಸಂಭವತಿ । ಸ್ಥಿತೇಸ್ತತ್ಪ್ರಯೋಜನಾತ್ । ತಸ್ಯಾಶ್ಚ ಸ್ವತಃಸಿದ್ಧತ್ವಾದಿತಿ । ದಾರ್ಢ್ಯಪರಿಗ್ರಹೇ ತು ನಾಯಂ ಸಂಶಯ ಉದೇತಿ । ಜಗತ್ಸ್ವರೂಪಸ್ಥಿತೇರೇವಾಭಾವೇ ಕಸ್ಯ ದಾರ್ಢ್ಯಮ್, ಅನ್ನದಾನಾದಿನಾ ಪಾಲನಾಭಾವೇ ಚ ಕಥಂ ದಾರ್ಢ್ಯಮಿತಿ ದಾರ್ಢ್ಯಾನ್ಯಥಾನುಪಪತ್ತ್ಯೋಭಯಸ್ಯಾಪಿ ಗ್ರಹಣಸೂಚನಾತ್ । ಏವಂ ಚ ವಾಕ್ಯದ್ವಯಮಪ್ಯೇಕವಿಷಯಂ ಭವತಿ । ತತ್ರ ಸ್ಥಿತಿಪ್ರತಿಪಾದಕೇ ವಾಕ್ಯೇ ಕಾರ್ಯಾನ್ಯಥಾನುಪಪತ್ತ್ಯಾ ಕಾರಣೀಭೂತಪಾಲನಪರಿಗ್ರಹಸ್ಯ, ಪಾಲನಪ್ರತಿಪಾದಕೇಽಪಿ ಅಪ್ರತಿಹತೇಚ್ಛಾವತ್-ಪರಮೇಶ್ವರಾ-ನುಷ್ಠಿತಕಾರಣಾನ್ಯಥಾನುಪಪತ್ತ್ಯಾ ಕಾರ್ಯಪರಿಗ್ರಹಸ್ಯ ಚ ಸಂಭವಾದಿತಿ । ತಥಾ ಚ ಕುತ್ರಾಪ್ಯ-ನುಕ್ತತ್ವೇಽಪ್ಯುಕ್ತಸಂದೇಹವಾರಣಾಯೋಕ್ತಮಾನದ್ವಯೇಽಪ್ಯೇಕೇನ ಪದೇನ ದ್ವಯೋರಪಿ ಗ್ರಹಣಂ ಯದವಶ್ಯಂ ವಿವಕ್ಷಿತಂ ತತ್ಸೂಚನಾಯ ದಾರ್ಢ್ಯಾರ್ಥಪಕ್ಷೋಽಪಿ ಯುಕ್ತ ಏವೇತಿ ।

ಸ್ಥೇಮ ಎಂಬ ಶಬ್ದವು ಯೋಗವೃತ್ತಿಯಿಂದ ಸ್ಥಿತಿಯೆಂಬ ಅರ್ಥವನ್ನು ಹೇಳುತ್ತಿದೆ ಎಂದು ಒಂದು ಪಕ್ಷ. ಮತ್ತೊಂದು ಪಕ್ಷ – ಸ್ಥೇಮ ಎಂಬ ಶಬ್ದದಲ್ಲಿ ಸ್ಥಾಧಾತುವಿಗೆ ಇಮನಿಚ್ ಪ್ರತ್ಯಯ ಬಂದಿದೆ. ಸ್ಥೇಮಶಬ್ದವು ರೂಢಿಯಿಂದ ದಾರ್ಢ್ಯ ಎಂಬರ್ಥವನ್ನು ಹೇಳುತ್ತಿದೆ. ಈ ಪಕ್ಷದಲ್ಲಿ ಸ್ಥಿರಶಬ್ದವು ಸ್ಥೇಮಶಬ್ದಕ್ಕೆ ಪ್ರಕೃತಿಯಾಗಿದೆ. ಮೊದಲನೆಯ ಪಕ್ಷದಲ್ಲಿ ಸ್ಥೇಮಶಬ್ದಕ್ಕೆ ಸ್ಥಿತಿಯೆಂದರ್ಥ. ಎರಡನೆ ಪಕ್ಷದಲ್ಲಿ ದಾರ್ಢ್ಯ ಎಂದರ್ಥ. ಈ ಎರಡೂ ಪಕ್ಷಗಳೂ ಗ್ರಾಹ್ಯವೇ ಆಗಿವೆ. ಮೊದಲನೆಯ ಪಕ್ಷದಲ್ಲಿ ಸೃಷ್ಟಿಸ್ಥಿತಿಸಂಹಾರನಿಯಮನಜ್ಞಾನ-ಅಜ್ಞಾನಬಂಧಮೋಕ್ಷಗಳು ಯಾರಿಂದ ಆಗುತ್ತದೆಯೋ ಎಂಬರ್ಥವುಳ್ಳ ವಾಕ್ಯ ಹಾಗೂ 'ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ' 'ಸೃಷ್ಟಿಃ ಸ್ಥಿತಿಸ್ತ ಸಂಹಾರೋ ನಿಯತಿರ್ಜ್ಞಾನಮಾವೃತಿಃ' 'ಸೃಷ್ಟಿಸ್ಥಿತ್ಯಪ್ಯಯೇಹಾ' ಮುಂತಾದ ಎಲ್ಲ ಕಡೆ ಸೃಷ್ಟ್ಯಾದಿ ಎಂಟನ್ನು ಹೇಳುವ ಸಂದರ್ಭದಲ್ಲಿ ಸ್ಥಿತಿಯನ್ನೇ ಹೇಳಿದ್ದಾರೆ. ಹಾಗಾಗಿ ಮೊದಲನೆಯ ಪಕ್ಷ ಗ್ರಾಹ್ಯವಾಗಿದೆ.

ಎರಡನೆಯದು ಹೇಗೆ ಎಂಬ ಪ್ರಶ್ನೆ ಉಳಿಯುತ್ತದೆ. ಏಕೆಂದರೆ ಯಾವ ಪ್ರಮಾಣದಲ್ಲಿಯೂ ಸೃಷ್ಟ್ಯಾದಿ ಅಷ್ಟಕಗಳನ್ನು ಹೇಳುವ ಸಂದರ್ಭದಲ್ಲಿ ದಾರ್ಢ್ಯ ಎಂದು ಗ್ರಹಿಸಿಲ್ಲವಾದ್ದರಿಂದ.

ಉತ್ತರ - ಅಭಿಪ್ರಾಯ ಹೀಗೆ ತಿಳಿಯತಕ್ಕದ್ದು. 'ಅಸ್ಯೋದ್ಭವಾದಿದಂ' ಎಂಬ ಅನುವ್ಯಾಖ್ಯಾನದಲ್ಲಿ ಆದಿಪದದಿಂದ ಸ್ಥಿತಿಯನ್ನು ಪ್ರಮಾಣಾನುಸಾರಿಯಾಗಿ ಗ್ರಹಣ ಮಾಡುತ್ತೇವೆ. ಅಲ್ಲಿ ಸ್ಥಿತಿಯನ್ನು ಗ್ರಹಿಸಬೇಕೋ ಅಥವಾ 'ಸೃಷ್ಟಿಂ ಚ ಪಾಲನಂ ಚೈವ ಸಂಹಾರಂ ನಿಯಮಂ ತಥಾ' ಎಂಬ ಪ್ರಮಾಣಾನುಸಾರಿಯಾಗಿ ಪಾಲನೆಯನ್ನು ಗ್ರಹಿಸಬೇಕೋ ಎಂದು ಸಂದೇಹ. ಅಲ್ಲ ಎರಡೂ ಒಂದೆಯೇ ಆಗಿದೆ. ಹಾಗಾಗಿ ಸಂದೇಹ ಬರಲು ಸಾಧ್ಯವಿಲ್ಲ. ಇಲ್ಲ. ಎರಡೂ ಕೂಡ ಬೇರೆಯೇ ಆಗಿದೆ. ಹಾಗಾಗಿಯೇ ಭಕ್ತಿಪಾದದಲ್ಲಿ 'ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ' (3-2-22) ಎಂಬ ಅಧಿಕರಣದಲ್ಲಿ ಸ್ಥಿತಿಪಾಲನೆಗಳಿಗೆ ಸಾಧ್ಯಸಾಧನಭಾವವನ್ನು ಹೇಳಿದ್ದಾರೆ ಹಾಗಾಗಿ ಭೇದವಿದೆ ಎಂದು ತಿಳಿಯುವುದು. ಇದನ್ನು ಆ ಅಧಿಕರಣದ ಸುಧಾದಲ್ಲಿ ಹೀಗೆ ನಿರೂಪಣೆ ಮಾಡಿದ್ದಾರೆ – "ಈಶ್ವರನಿಗೆ ವಿಶ್ವಪಾಲನೆ ಎಂಬುದು ಕೂಡುವುದಿಲ್ಲ. ಏಕೆಂದರೆ ವಿಶ್ವಪಾಲನೆಯಿಂದ ಆಗಬೇಕಾದದ್ದು ವಿಶ್ವದ ಸ್ಥಿತಿ ಅರ್ಥಾತ್ ಪಾಲನೆಯಿಂದ ಸಾಧ್ಯವಾದದ್ದು ವಸ್ತುಗಳ ಸ್ಥಿತಿ. ಅರ್ಥಾತ್ ವಸ್ತುಗಳ ಸತ್ತಾ, ಇರುವಿಕೆಯು. ಇದಾದರೋ ಸ್ವತಃ ಸಿದ್ಧವಾದ್ದರಿಂದ"- ಎಂದು. ಇಲ್ಲಿ ಸಾಧ್ಯಸಾಧನಭಾವವನ್ನು ಸ್ಥಿತಿಪಾಲನೆಗಳಿಗೆ ಹೇಳಿದ್ದಾರೆ.

ಅದೇ ದಾರ್ಢ್ಯವನ್ನು ಪರಿಗ್ರಹಿಸಿದರೆ ಈ ಸಂಶಯಕ್ಕೆ ಅವಕಾಶವಿಲ್ಲ. ಏಕೆಂದರೆ, ಜಗತ್ತಿನ ಸ್ವರೂಪದ ಸ್ಥಿತಿಯೇ ಇಲ್ಲವಾದರೆ ಯಾವ ವಸ್ತುವಿಗೆ ಅನ್ನದಾನಾದಿಗಳಿಂದ ದಾರ್ಢ್ಯ ಹಾಗೆ ಪಾಲನೆಯಿಲ್ಲದಿದ್ದರೆ ಹೇಗೆ ದಾರ್ಢ್ಯ ಎಂಬ ಪ್ರಶ್ನಾನುಗುಣವಾಗಿ ದಾರ್ಢ್ಯಾನ್ಯಥಾನುಪಪತ್ತ್ಯಾ ಅರ್ಥಾತ್ ದಾರ್ಢ್ಯವು ಜಗತ್ತಿನಲ್ಲಿ ಕೂಡಬೇಕೆಂದಾದರೆ ಇವೆರಡನ್ನೂ ಅರ್ಥಾತ್ ಪಾಲನೆ ಹಾಗೂ ಸ್ಥಿತಿಯನ್ನು ಗ್ರಹಿಸಬೇಕು. ಹೀಗೆ ಎರಡೂ ವಾಕ್ಯಗಳು ಒಂದೇ ವಿಷಯವನ್ನು ವಿಷಯೀಕರಿಸುತ್ತಿವೆ ಎಂದಾಯಿತು. ಅಲ್ಲಿ ಸ್ಥಿತಿಯನ್ನು ಪ್ರತಿಪಾದನೆ ಮಾಡುವ ವಾಕ್ಯದಲ್ಲಿ ಸ್ಥಿತಿರೂಪಕಾರ್ಯ ಹೇಳಿದ ಮೇಲೆ ಅದನ್ನು ಕೂಡಿಸುವುದಕ್ಕಾಗಿ ಕಾರಣವಾದ ಪಾಲನೆಯನ್ನು ಸ್ವೀಕಾರ ಮಾಡಬೇಕು. ಹಾಗೆಯೇ ಪಾಲನೆಯನ್ನು ಪ್ರತಿಪಾದನೆ ಮಾಡುವ ವಾಕ್ಯದಲ್ಲಿಯೂ ಪ್ರತಿಬಂಧರಹಿತವಾದ ಇಚ್ಛೆಯುಳ್ಳ ಪರಮಾತ್ಮನು ಅನುಷ್ಠಾನಮಾಡಿದ ಕಾರಣವಾದ್ದರಿಂದ ಕಾರ್ಯವಾದ ಸ್ಥಿತಿಯನ್ನು ಅಲ್ಲಿ ಪರಿಗ್ರಹಿಸಬೇಕು. ಹೀಗೆ ಯಾವುದೇ ಪ್ರಮಾಣದಲ್ಲಿ ಸ್ಥೇಮ ಎಂದರೆ ದಾರ್ಢ್ಯ ಎಂದು ಹೇಳದಿದ್ದರೂ ನಾವು ತೋರಿಸಿದ ಸಂದೇಹವಾರಣೆಗೋಸ್ಕರ ಎರಡೂ ಪ್ರಮಾಣಗಳಲ್ಲಿ ಒಂದೇ ಪದದಿಂದ ಎರಡನ್ನೂಗ್ರಹಿಸಬೇಕುಎಂದುಅವಶ್ಯವಾಗಿವಿವಕ್ಷಿತವಾಗಿದೆಎಂದುಸೂಚನೆಮಾಡುವುದಕ್ಕೋಸ್ಕರ ದಾರ್ಢ್ಯಪಕ್ಷವು ಸರಿಯಾಗಿದೆ ಎಂದಭಿಪ್ರಾಯ.

### ಭಾಗವತತಾತ್ಪರ್ಯನಿರ್ಣಯ ಮಂಗಳಪದ್ಯ

** ಸೃಷ್ಟಿಸ್ಥಿತ್ಯಪ್ಯಯೇಹಾನಿಯತಿದೃಶಿತಮೋಬಂಧಮೋಕ್ಷಾಶ್ಚ ಯಸ್ಮಾ-
ದಸ್ಯ ಶ್ರೀಬ್ರಹ್ಮರುದ್ರಪ್ರಭೃತಿಸುರನರದ್ವಿಃಶತತ್ವಾತ್ಮಕಸ್ಯ ।

ವಿಷ್ಣೋರ್ವ್ಯಸ್ತಾಃ ಸಮಸ್ತಾಃ ಸಕಲಗುಣನಿಧಿಃ ಸರ್ವದೋಷವ್ಯಪೇತಃ
ಪೂರ್ಣಾನಂದೋಽವ್ಯಯೋ ಯೋ ಗುರುರಪಿ ಪರಮಶ್ಚಿಂತಯೇ ತಂ ಮಹಾಂತಮ್ ॥
- (ಭಾಗ.ತಾ. ಮಂಗಳಪದ್ಯ)

ಲಕ್ಷ್ಮೀಬ್ರಹ್ಮರುದ್ರ ಮೊದಲಾದ ದೇವ-ಮಾನವ-ದಾನವ-ಜಡರೂಪವಾದ ಸಮಸ್ತಪ್ರಪಂಚಕ್ಕೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಲ್ಲವೂ ಯಥಾಯೋಗ್ಯ-ವಾಗಿ ವಿಷ್ಣುವಿನಿಂದಲೇ ಆಗುತ್ತವೆ. ಆ ವಿಷ್ಣುವೇ ಸಕಲಗುಣಗಳಿಗೆ ಆಶ್ರಯನಾಗಿದ್ದಾನೆ. ಸಕಲ-ದೋಷಗಳಿಂದ ರಹಿತನಾಗಿದ್ದಾನೆ. ಪೂರ್ಣವಾದ ಆನಂದವುಳ್ಳವನು. ನಾಶರಹಿತನು. ಪರಮ-ಗುರುವಾಗಿದ್ದಾನೆ ಅಂದರೆ ಲೋಕಗುರುಗಳಾದ ಬ್ರಹ್ಮಾದಿದೇವತೆಗಳಿಗೂ ಗುರುವಾಗಿದ್ದಾನೆ. ಇಂತಹ ಭಗವಂತನನ್ನು ಧ್ಯಾನಿಸುತ್ತೇನೆ.

## ಪಾಲಕತ್ವಾಧಿಕರಣಸೂತ್ರಾರ್ಥ

** ಪ್ರಕೃತವಾದ ಸೃಷ್ಟಿಸ್ಥಿತಿ ಮೊದಲಾದವುಗಳಲ್ಲಿ, ಏತಾವತ್ತ್ವಂ = ಹೇಳಲ್ಪಟ್ಟ ಕೇವಲ ಸೃಷ್ಟಿ-ಸಂಹಾರಕರ್ತೃತ್ವವನ್ನು ನಿಷೇಧಮಾಡಿ, ತತಃ ಅಪಿ = ಅದಕ್ಕಿಂತಲೂ, ಭೂಯಃ = ಅಧಿಕವಾಗಿ ಪಾಲಕತ್ವವನ್ನು, ಬ್ರವೀತಿ = ಶ್ರುತಿಯು ಹೇಳುತ್ತಿದೆ. ಆದ್ದರಿಂದ ಸಂಹಾರಮಾಡುವವನಿಗೂ ಪಾಲಕತ್ವವಿದೆ ಎಂದು ಅಭಿಪ್ರಾಯ.

## ಸ ದ್ಯಾವಾಪೃಥಿವೀ ಬಿಭರ್ತಿ

ಶ್ರುತಿಯು ಹೀಗಿದೆ — 'ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ'

ಏನಾ = ಯಾವ ಈಶ್ವರನಿಂದ ಮಾಡಲ್ಪಡುವ, ಏತಾವತ್ = ಹಿಂದೆ ಹೇಳಲ್ಪಟ್ಟ ಸೃಷ್ಟಿ ಸಂಹಾರಗಳು ಮಾತ್ರ ಅಲ್ಲ, ಕಿಂತು ಅನ್ಯತ್ = ಸೃಷ್ಟ್ಯಾದಿಗಳಿಗಿಂತ ಬೇರೆಯಾದದ್ದೂ ಇದೆ. ಅದೇನೆಂದರೆ ಉಕ್ಷಾಃ ಎನ್ನುವುದೇ ಆಗಿದೆ. ಸಃ ಪರಃ = ಆ ಸರ್ವೋತ್ತಮನಾದ ಹರಿಯು, ಉಕ್ಷಾ ಎಂದರೆ ಭಕ್ತರಿಗೆ ಅಭೀಷ್ಟಗಳನ್ನು ಮಳೆಗರೆಯುತ್ತಾನೆ. ದ್ಯಾವಾಪೃಥಿವೀ ಬಿಭರ್ತಿ - ಸ್ವರ್ಗಭೂಮಿ ಮೊದಲಾದವುಗಳನ್ನು ಧರಿಸುತ್ತಾನೆ.

## ಏಕ ಏವ ಕರೋತೀಶಃ

(ಭಾಷ್ಯ.) - 'ಸೃಷ್ಟಿಂ ಚ ಪಾಲನಂ ಚೈವ ಸಂಹಾರಂ ನಿಯಮಂ ತಥಾ ।
ಏಕ ಏವ ಕರೋತೀಶಃ ಸರ್ವಸ್ಯ ಜಗತೋ ಹರಿಃ' ಇತಿ ಬ್ರಹ್ಮಾಂಡೇ
— (ಸೂ.ಭಾ.3-2-13)

ಹರಿಃ ಸರ್ವಸ್ಯ ಜಗತಃ ಸೃಷ್ಟಿಂ ಚ ಪಾಲನಂ ಚ ಸಂಹಾರಂ ನಿಯಮನಂ ಪ್ರೇರಣಂ ಚ,

ತಥಾಶಬ್ದಃ ಸಮುಚ್ಚಯೇ । ಕರೋತಿ ಏಕ ಏವ ಇತ್ಯನ್ಯನಿಷೇಧಃ । ಈಶಃ ಇತ್ಯನೇನ ಸರ್ಜನಾದೌ ಸಾಮರ್ಥ್ಯೋಪಪಾದನಮ್, ಸಂಹರ್ತುರಪಿ ಪಾಲಕತ್ವೇ ವಿರೋಧಪರಿಹರಣಂ ಚ ಪ್ರಯೋಜನಂ ಸೂಚಯತಿ । ಪ್ರಥಮಏವಕಾರೇಣ ಯೋ ಹರಿಃ ಸೃಷ್ಟ್ಯಾದಿಕಂ ಕರೋತಿ ಸ ಏವ ಪಾಲನಂ ಕರೋತೀತ್ಯರ್ಥಃ ಸೂಚಿತೋ ಭವತಿ । ತತ್ರ ವಿರೋಧಪರಿಹಾರಾಯ ಈಶಃ ಇತಿ ಜ್ಞಾತವ್ಯಮ್ । ಅನೇನ ಸ್ಥಿತೇಃ ಪಾಲನಸ್ಯ ಸ್ವತಃ ಸಿದ್ಧತ್ವಂ ಪರಿಸ್ಕೃತಂ ಭವತಿ । ಭಗವದಧೀನತ್ವಸ್ಯ ಧಾರಣಪೋಷಣಾದೇರುಕ್ತತ್ವಾತ್ ।

ಹರಿಯು ಇಡೀ ಜಗತ್ತಿನ ಸೃಷ್ಟಿ, ಪಾಲನ, ಸಂಹಾರ, ನಿಯಮನ, ಪ್ರೇರಣೆಗಳನ್ನು ಒಬ್ಬನೇ ಮಾಡುತ್ತಾನೆ. ಈಶಃ ಎಂದು ಹೇಳಿದ್ದರಿಂದ ಜಗತ್ಸೃಷ್ಟಿಮೊದಲಾದವುಗಳನ್ನು ಮಾಡಬೇಕಾದರೆ ಬೇಕಾದ ಸಾಮರ್ಥ್ಯವಿದೆ ಎಂದು ತಿಳಿಯುವುದು. ಮೊದಲನೆಯ ಏವಕಾರದಿಂದ ಯಾವ ಹರಿಯು ಸೃಷ್ಟ್ಯಾದಿಗಳನ್ನು ಮಾಡುವನೋ ಅವನೇ ಪಾಲನೆಯನ್ನೂ ಮಾಡುತ್ತಾನೆ ಎಂಬರ್ಥವು ಸೂಚಿತ. ಸಂಹಾರಮಾಡುವವನೂ ಪಾಲಕನಾದರೆ ವಿರೋಧಪರಿಹಾರರೂಪವಾದ ಪ್ರಯೋಜನವೂ ಇದೆ ಎಂದು ತಿಳಿಯಬೇಕು. ಈ ರೀತಿ ಈಶಪದದಿಂದ ಸೂಚಿತವಾದ ಎರಡಂಶಗಳು (1) ಸರ್ಜನಾದೌ ಸಾಮರ್ಥ್ಯೋಪಪಾದನಮ್ (2) ಸಂಹರ್ತುರಪಿ ಪಾಲಕತ್ವೇ ವಿರೋಧಪರಿಹಾರಃ. ಇದರಿಂದಾಗಿ ಸ್ಥಿತಿಯು ಸ್ವತಃ ಸಿದ್ಧ ಎಂಬ ಪ್ರಶ್ನೆಗೆ ಉತ್ತರ ಕೊಟ್ಟಂತಾಯಿತು. ಏಕೆಂದರೆ ಭಗವಂತನ ಅಧೀನವಾಗಿ ಜೀವನಿಗೆ ಧಾರಣಪೋಷಣಾದಿಗಳಿವೆ ಎಂದು ಹೇಳಿದ್ದರಿಂದ.

## ವಪುಷೇ ಎನ್ನುವುದರ ಹಿನ್ನೆಲೆ

(ಲಘುರಸರಂಜನೀ) — ನನು ತಥಾಪಿ ನೇಶ್ವರಸ್ಯ ಜನ್ಮಾದಿಕರ್ತೃತ್ವಂ ಯುಕ್ತಮ್ । ಅಶರೀರತ್ವಾತ್ ಮೃತಪುರುಷವತ್ ಇತಿ ಚೇನ್ನ ಅಶರೀರತ್ವಸ್ಯೈವಾಸಿದ್ಧೇಃ । ತರ್ಹಿ ಶರೀರಂ ಕುತೋ ನೋಕ್ತಮ್ । ನ ಚ 'ನಿಖಿಲಪೂರ್ಣಗುಣೈಕದೇಹಮ್' ಇತ್ಯನೇನೋಕ್ತಮಿತಿ ವಾಚ್ಯಮ್ । ತತ್ರ ಜ್ಞಾನಾದಿಗುಣೋಪಪತ್ತ್ಯರ್ಥಮುಕ್ತತ್ವೇಽಪಿ ಭಗವತಃ ಸೃಷ್ಟ್ಯಾದಿಕರ್ತೃತ್ವೋಪಪತ್ತ್ಯರ್ಥಮವಶ್ಯವಕ್ತವ್ಯತ್ವಾದಿತಿ ಚೇನ್ನ । ಜ್ಞಾನಾದಿಗುಣೋಪಪತ್ತ್ಯರ್ಥಮುಕ್ತಸ್ಯಾಪಿ ದೇಹಸ್ಯ ತಂತ್ರೇಣ ಸೃಷ್ಟ್ಯಾದಿಕರ್ತೃತ್ವೋಪಪತ್ತ್ಯರ್ಥತ್ವಾದ್ವಾ 'ಅಸ್ಯೋದ್ಭವಾದಿದಮ್' ಇತ್ಯತ್ರ ದಾನಂ ತಾವದ್ 'ರಚನಾ' ಇತ್ಯುಕ್ತಮ್ । ಸಾ ಚ ಜನ್ಮಾದ್ಯನುಕೂಲೋ ದೈಹಿಕೋ ವ್ಯಾಪಾರವಿಶೇಷ ಇತಿ ಚ । ದೈಹಿಕೋ ವ್ಯಾಪಾರಸ್ತ್ವ ದೇಹಂ ವಿನಾ ಅನುಪಪದ್ಯಮಾನೋಽಸ್ಯ ತದಾಕ್ಷಿಪತಿ ಇತ್ಯಾಕ್ಷೇಪಲಬ್ಧತ್ವಾದ್ವಾ ನ ಸ್ಪಷ್ಟಮತ್ರೋಕ್ತಮಿತ್ಯಾಶಯೇನಾಹ — ವಪುಷ ಇತಿ॥ ತಥಾ ಚ ಜಗತೋ ಜನ್ಮಸ್ಥೇಮಪ್ರಲಯಾನಾಂ ರಚನಾಶೀಲಂ ಯಸ್ಯ ತಾದೃಶಂ ವಪುಃ ಯಸ್ಯೇತಿ ವಿಗ್ರಹಃ ।

ವಪುಷೇ - “ಭಗವಂತನಿಗೆ ಜನ್ಮಾದಿಕರ್ತೃತ್ವವು ಕೂಡುವುದಿಲ್ಲ. ಅವನಿಗೆ ಶರೀರವಿಲ್ಲವಾದ್ದರಿಂದ ಮೃತಪುರುಷನಂತೆ” ಎಂದಾಕ್ಷೇಪಿಸಿದರೆ ಅವನಿಗೆ ಶರೀರವಿಲ್ಲ ಎಂಬುದೇ ಅಸಿದ್ಧ. ಹಾಗಾದರೆ ಶರೀರದ ಬಗ್ಗೆ ಯಾಕೆ ಹೇಳಲಿಲ್ಲ? ಎಂದರೆ ಹೇಳಿದ್ದೇವೆ ಎಂದೇ ಉತ್ತರ. ನಿಖಿಲಪೂರ್ಣಗುಣೈಕ-ದೇಹಂ ಎಂಬಲ್ಲಿ ಅವನಿಗೆ ಗುಣಾತ್ಮಕವಾದ ದೇಹವಿದೆ ಎಂದು ಹೇಳಿದ್ದಾರೆ. ಇಲ್ಲ; ಜ್ಞಾನಾದಿ-ಗುಣಗಳನ್ನು ಭಗವಂತನಲ್ಲಿ ಕೂಡಿಸುವುದಕ್ಕೋಸ್ಕರ ದೇಹವನ್ನು ಒಪ್ಪಿದ್ದರೂ ಭಗವಂತನ ಸೃಷ್ಟ್ಯಾದಿಕರ್ತೃತ್ವವನ್ನು ಕೂಡಿಸಲು ಅವಶ್ಯವಾಗಿ ಹೇಳಲೇಬೇಕಾಗಿತ್ತು ಎಂದು ಪ್ರಶ್ನೆ. ಅದಕ್ಕೆ ಉತ್ತರ – ಜ್ಞಾನಾದಿಗಳನ್ನು ಕೂಡಿಸುವುದಕ್ಕೋಸ್ಕರ ಹೇಳಿದ “ದೇಹ” ಎಂಬ ಪದವನ್ನು ತಂತ್ರೇಣ ಇನ್ನೊಮ್ಮೆ ಇಟ್ಟುಕೊಂಡು ಸೃಷ್ಟ್ಯಾದಿಕರ್ತೃತ್ವವನ್ನು ಕೂಡಿಸುವುದಕ್ಕೂ ಅದೇ ಪದವು ಉತ್ತರವಾಗಿ ಆಗುವುದು.

ಅಥವಾ ದೇಹ ಎಂಬ ಅರ್ಥವು ಸೃಷ್ಟ್ಯಾದಿ ವಿಷಯದಲ್ಲಿ ಅರ್ಥಾತ್ ಸಿಗುವುದರಿಂದ ಸ್ಪಷ್ಟವಾಗಿ ಶರೀರವಿದೆ ಎಂಬ ಅಂಶವನ್ನು ಹೇಳಲಿಲ್ಲ. ಅದು ಹೀಗೆ ‘ಅಸ್ಯೋದ್ಭವಾದಿದಂ’ ಎಂಬ ಪದದಿಂದ ಜಗತ್ತಿಗೆ ಉದ್ಭವಾದಿಗಳನ್ನು ಕೊಡುವವನು ಎಂದು ಹೇಳಿದ್ದಾರೆ. ಇದಕ್ಕೆ ವ್ಯಾಖ್ಯಾನ ಮಾಡುತ್ತ ‘ಜಗಜ್ಜನ್ಮಸ್ಥೇಮಪ್ರಲಯರಚನಾ’ ಎಂದಿದ್ದಾರೆ. ರಚನಾ ಎಂದರೆ ಜಗತ್ತಿನ ಜನ್ಮಸ್ಥಿತಿ ಮೊದ-ಲಾದವುಗಳಿಗೆ ಅನುಕೂಲವಾದ ದೇಹವೃತ್ತಿಯಾದ ವ್ಯಾಪಾರವಿಶೇಷ ಎಂದು. ದೈಹಿಕ-ವ್ಯಾಪಾರವಾದರೋ ದೇಹವಿಲ್ಲದೇ ಇರಲು ಸಾಧ್ಯವಾಗದೇ ಇರುವುದರಿಂದ ದೇಹವು ಅರ್ಥಾತ್ ಸಿದ್ಧವಾಗುತ್ತದೆ. ಈ ಎಲ್ಲ ಅಭಿಪ್ರಾಯದಿಂದ ಸುಧಾದಲ್ಲಿ “ವಪುಷೇ” ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಹಾಗಾಗಿ ಜಗತ್ತಿಗೆ ಜನ್ಮ, ಸ್ಥೇಮ, ಪ್ರಲಯಗಳನ್ನು ಮಾಡುವಂತಹ ವ್ಯಾಪಾರವನ್ನೇ ಸ್ವಭಾವವಾಗಿ ಉಳ್ಳ ದೇಹವುಳ್ಳವನು ಎಂದರ್ಥ.

## ಮೂಲರೂಪದಿಂದ ಜಗತ್ಸೃಷ್ಟ್ಯಾದಿಗಳಾಗುತ್ತವೆಯೇ?

(ಲಘುರಸರಂಜನೀ) – ಅಥವಾ ನನ್ವತ್ರ ಮೂಲಸ್ಥನಾರಾಯಣಪದಸ್ಯ ಪ್ರತಿಪದಂ ಹರಯ ಇತಿ ವಿಶೇಷ್ಯಮುಕ್ತಮ್ । ಹರಿಷ್ಟ ಮೂಲರೂಪಮಿತಿ ಸಮರ್ಥಿತಮಸ್ಮಾಭಿರ್ಗುಹಾಧಿಕರಣಾರ್ಥ-ಸಂಗ್ರಹೇ । ತತಶ್ಚ ವ್ಯಾಖ್ಯಾನವ್ಯಾಖ್ಯೇಯಯೋಃ ಸಮಾನವಿಷಯತ್ವಾನ್ಮೂಲೇ ನಾರಾಯಣೋಽಪಿ ಮೂಲರೂಪಮೇವ । ತಚ್ಚ ನಾವತಾರೈರ್ವಿನಾ ಪ್ರಾಯೇಣ ಸೃಷ್ಟ್ಯಾದಿಕರ್ತೃಪಲಬ್ಧಮ್ । ತತಃ ಕಥಂ ‘ಅಸ್ಯೋದ್ಭವಾದಿದಮ್’ ಇತಿ ವಿಶೇಷಣಮಿತ್ಯತ ಆಹ — ಜಗದಿತಿ ॥ ಜಗತೋ ಜನ್ಮ-ಸ್ಥೇಮಪ್ರಲಯಾನಾಂ ರಚನಾಃ ಕಾರಣಾನಿ ಶೀಲಾನಿ ಸ್ವಭಾವಾ ಯೇಷಾಂ ತಾನಿ ವಪೂಂಷಿ ಅವತಾರಾಃ ಯಸ್ಯ ತಸ್ಮಾ ಇತ್ಯರ್ಥಃ ।

ನನು ಕೇ ತೇ ಅವತಾರಾಸ್ತತ್ರಾಪಿ ಕಃ ಕಸ್ಯ ಕರ್ತೇತ್ಯತೋಽಪ್ಯುಕ್ತಂ ಜಗತೋ ಜನ್ಮಸ್ಥೇಮ-

ಪ್ರಲಯಾನಾಂ ಚತುರ್ಣಾಂ ರಚನಾಶೀಲಾನಿ ನಿರ್ಮಾಣದೀಕ್ಷಿತಾನಿ ವಪೂಂಷ್ಯನಿರುದ್ಧಾದಿ-ಚತೂರೂಪಾಣಿ ಯಸ್ಯ ತಸ್ಮಾ ಇತಿ । ತಥಾ ಚ ಸೃಷ್ಟ್ಯಾದಿಕರ್ತೃತ್ವರೂಪೈಸ್ತಲ್ಲಿಂಗೈರನಿರುದ್ಧಾದಯ ಏವ ತೇ ಅವತಾರಾ ಇತಿ ಜ್ಞಾಯತ ಇತಿ ಭಾವಃ । ಯಥೋಕ್ತಂ ಮಹಾಭಾರತತಾತ್ಪರ್ಯ-ನಿರ್ಣಯಷಡ್ವಿಂಶತಿತಮೇಽಧ್ಯಾಯೇ ।

'ನ ಮಾದೃಶೋಽನ್ಯೋಽಸ್ತಿ ಕುತಃ ಪರೋ ಮತ್ತೋಽಹಂ ಚತುರ್ಧಾ ಜಗತೋ ಹಿತಾಯ ।
ಸ್ಥಿತೋಽಸ್ಮಿ ಮೋಕ್ಷಪ್ರಲಯಸ್ಥಿತೀನಾಂ ಸೃಷ್ಟೇಶ್ಚ ಕರ್ತಾ ಕ್ರಮಶಃ ಸ್ವಮೂರ್ತಿಭಿಃ ।
ಸ ವಾಸುದೇವಾದಿಚತುಃಸ್ವರೂಪಃ ಸ್ಥಿತೋಽನಿರುದ್ಧೋ ಹೃದಿ ಚಾಖಿಲಸ್ಯ ॥'

— (ತಾ.ನಿ.26-28)ಇತಿ ।

'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' — ಅಥವಾ 'ನಾರಾಯಣಂ ನಿಖಿಲಪೂರ್ಣ-ಗುಣೈಕದೇಹಂ' ಎಂಬ ಮೂಲದಲ್ಲಿರುವ ನಾರಾಯಣಪದಕ್ಕೆ 'ಹರಯೇ' ಎಂದು ವಿಶೇಷ್ಯವನ್ನಾಗಿ, ನಾರಾಯಣನಾದ ಹರಿ ಎಂದು ತಿಳಿಸಿದ್ದಾರೆ. ಹರಿಯಾದರೋ ಮೂಲರೂಪವಾದ ಬಿಂಬರೂಪವೇ ಎಂದು ಗುಹಾಧಿಕರಣಾರ್ಥಸಂಗ್ರಹದಲ್ಲಿ ಸಮರ್ಥನೆ ಮಾಡಿದ್ದೇವೆ ಎಂದು ಲಘುರಸರಂಜನೀ-ಕಾರರು ತಿಳಿಸಿದ್ದಾರೆ. ಹಾಗಾಗಿ ವ್ಯಾಖ್ಯಾನವ್ಯಾಖ್ಯೇಯಗಳಿಗೆ ವಿಷಯವು ಒಂದೇ ಆಗಬೇಕಾದ್ದರಿಂದ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ನಾರಾಯಣನು ಮೂಲರೂಪಿಯೇ. ಆ ಮೂಲರೂಪಕ್ಕಾದರೋ ಪ್ರಾಯೇಣ ಅವತಾರಗಳಿಲ್ಲದೇ ಸೃಷ್ಟ್ಯಾದಿಕರ್ತೃತ್ವವು ಕಂಡಿಲ್ಲ. ಹಾಗಾದರೆ 'ಅಸ್ಯೋದ್ಭವಾದಿದಂ' ಎಂಬ ವಿಶೇಷಣ ನಾರಾಯಣನಿಗೆ ಕೊಟ್ಟಿದ್ದು ಹೇಗೆ? ಏಕೆಂದರೆ ಮೂಲರೂಪದಿಂದ ಸೃಷ್ಟಿಯಾದದ್ದು ಇಲ್ಲವಲ್ಲ ಎಂಬುದಕ್ಕೆ ಉತ್ತರವಾಗಿ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' - ಎಂದಿದ್ದಾರೆ. ಪ್ರಪಂಚಕ್ಕೆ ಸೃಷ್ಟಿಸ್ಥಿತಿಪ್ರಲಯಗಳನ್ನು ರಚನಾ ಅಂದರೆ ಮಾಡುವ ಸ್ವಭಾವವುಳ್ಳ ಯಾವ ವಪೂಂಷಿ ಅಂದರೆ ಅವತಾರಗಳು ಅರ್ಥಾತ್ ರೂಪಗಳು ಇವೆಯೋ ಅಂತಹವನಿಗೆ ಎಂದರ್ಥ. ಅಲ್ಲ। ಅಲ್ಲಿಯೂ ಯಾವ ರೂಪವು ಯಾವುದಕ್ಕೆ ಕರ್ತೃವಾಗಿದೆ ಎಂಬ ಪ್ರಶ್ನೆಗೆ ಉತ್ತರವಾಗಿ 'ಪ್ರಪಂಚಕ್ಕೆ ಸೃಷ್ಟಿಸ್ಥಿತಿಪ್ರಲಯಗಳನ್ನು ನೀಡುವುದರಲ್ಲಿ ಸಂಕಲ್ಪಮಾಡಿದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬ ನಾಲ್ಕು ರೂಪಗಳನ್ನುಳ್ಳವನು ಎಂದರ್ಥ. ಹಾಗಾಗಿ ಸೃಷ್ಟ್ಯಾದಿಕರ್ತೃತ್ವ ಎಂಬ ಲಿಂಗದಿಂದ ಅನಿರುದ್ಧಾದಿಗಳನ್ನೇ ಇಲ್ಲಿ ಅವತಾರ ಎಂಬ ಪದದಿಂದ ಸ್ವೀಕರಿಸಬೇಕು ಎಂದು ತಿಳಿಯುವುದು. ಇದನ್ನು ಮಹಾಭಾರತತಾತ್ಪರ್ಯನಿರ್ಣಯದ ಇಪ್ಪತ್ತಾರನೆಯ ಅಧ್ಯಾಯದಲ್ಲಿ ತಿಳಿಸಿದ್ದಾರೆ – "ನಾನೇ ನಾಲ್ಕುರೂಪಗಳನ್ನು ಧರಿಸಿ ಜಗತ್ತಿನ ಹಿತಕ್ಕೋಸ್ಕರ ಕ್ರಮವಾಗಿ ವಾಸುದೇವ, ಪ್ರದ್ಯುಮ್ನ, ಸಂಕರ್ಷಣ, ಅನಿರುದ್ಧರೂಪಗಳಿಂದ ಮೋಕ್ಷ, ಪ್ರಲಯ, ಸ್ಥಿತಿ, ಸೃಷ್ಟಿಗಳನ್ನು ಉಂಟು-

ಮಾಡುತ್ತೇನೆ". ಈ ರೀತಿ ನಮಿಸಲು ಯೋಗ್ಯನಾದ ನಾರಾಯಣನ ಸ್ವರೂಪವನ್ನು ನಿಶ್ಚಯ-ಮಾಡುವುದಕ್ಕಾಗಿ ಲಕ್ಷಣಗಳನ್ನು ಹೇಳಿದ್ದಾರೆ.

** ಕರ್ತಾ ಕ್ರಮಶಃ ಇತ್ಯನೇನ ಕ್ರಮಶಃ = ಶಾಸ್ತ್ರೋಕ್ತಕ್ರಮೇಣ - (ತಾ.ನಿ. ಭಾವಪ್ರಕಾಶಿಕಾ)

**ಆಪ್ತತಮಮಪ್ಯಖಿಲೈಃ ... ಹಾಗೂ ಅಶೇಷಾಮ್ನಾಯ....**

(ಲಘುರಸರಂಜನೀ) — ಏವಂ ನಮ್ಯಸ್ವರೂಪಾವಧಾರಣಾಯ ಲಕ್ಷಣಾನ್ಯಭಿಧಾಯ ಶಾಸ್ತ್ರಯೋನಿ-ಸೂತ್ರೋಕ್ತಾನಿ ಪ್ರಮಾಣಾನ್ಯಪ್ಯಾಹ ಮೂಲೇ — ಆಪ್ತತಮಪ್ಯಖಿಲೈಃ ಸುವಾಕ್ಯೈರಿತಿ ॥ ತದ್ವ್ಯಾಚಷ್ಟೇ — **ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯೇತಿ** ॥ ಸಮನ್ವಯಸೂತ್ರೇ ಸಂಶಬ್ದಸ್ಯ ಅರ್ಥದ್ವಯಮಭಿಪ್ರೇತಂ ಸರ್ವೇಷಾಮಿತಿ ಮುಖ್ಯವೃತ್ತ್ಯೇತಿ ಚ । ತದುಭಯಾನುವಾದೋ ಮೂಲೇ 'ಅಖಿಲೈಃ' ಇತಿ 'ಆಪ್ತತಮಮ್' ಇತಿ । ತತ್ರ ಅರ್ಥಾಂತರಪ್ರತೀತಿವಾರಣಾಯ 'ಅಖಿಲೈಃ' ಇತ್ಯಸ್ಯಾರ್ಥೋ 'ಅಶೇಷ' ಇತಿ । ವಾಕ್ಯೈರಾಪ್ತತ್ವಂ ತತ್ಪ್ರತಿಪಾದ್ಯತ್ವಮ್ ಆಪ್ತತಮತ್ವಂ ತು ಮುಖ್ಯ-ತಾತ್ಪರ್ಯವಿಷಯತ್ವಮಿತ್ಯಾಶಯೇನ 'ಆಪ್ತತಮಮ್' ಇತ್ಯೇತದ್ವ್ಯಾಚಷ್ಟೇ — **ಹೃದಯ-ದೀಪ್ತಾಯೇತಿ** ॥ 'ತಾತ್ಪರ್ಯತಃ ಪ್ರತಿಪಾದ್ಯಾಯ' ಇತ್ಯರ್ಥಃ । 'ಶಾಸ್ತ್ರ' ಇತಿ ಸೌತ್ರಪದಾರ್ಥಾ-ನುವಾದೋ ಮೂಲೇ — ಸುವಾಕ್ಯೈರಿತಿ ॥ ತಸ್ಯಾರ್ಥಃ— **ಆಮ್ನಾಯಸ್ಮೃತೀತಿ** ॥ ಯದ್ವಕ್ಷ್ಯತಿ । ಅಪೌರುಷೇಯತ್ವೇನ ತನ್ಮೂಲತ್ವೇನ ವಾ ಅನಾಶಂಕಿತದೋಷತ್ವಾದಿನಾ ಶೋಭನಾನಿ ವಾಕ್ಯಾನಿ ವೇದಾದೀನಿ ಬ್ರಹ್ಮಸೂತ್ರಾಣಿ ಚ ಸುವಾಕ್ಯಾನಿ ತೈರಖಿಲೈಃ 'ಆಪ್ತತಮಮ್' ಅತಿಶಯೇನ ಪ್ರತಿಪಾದ್ಯಮಿತಿ । ತಥಾ ಚ – ಆಮ್ನಾಯಪದೋಕ್ತಾ ವೇದಾಸ್ತದನುಸಾರಿಪೌರುಷೇಯಗ್ರಂಥಾಶ್ಚ ತತ್ರ ಪ್ರಮಾಣಮ್ - ಇತಿ ಭಾವಃ ।

ಇದಾದಮೇಲೆ "ಶಾಸ್ತ್ರಯೋನಿತ್ವಾತ್" ಎಂಬ ಸೂತ್ರದಲ್ಲಿ ತಿಳಿಸಿದ ಪ್ರಮಾಣಗಳನ್ನು ಮೂಲದಲ್ಲಿ "ಆಪ್ತತಮಮಪ್ಯಖಿಲೈಃ ಸುವಾಕ್ಯೈಃ" ಎಂದು ಹೇಳಿದ್ದಾರೆ. ಅದನ್ನು ''ಅಶೇಷಾಮ್ನಾಯಸ್ಮೃತಿ-ದೀಪ್ತಾಯ'' ಎಂಬ ಪದದಿಂದ ವ್ಯಾಖ್ಯಾನಮಾಡುತ್ತಿದ್ದಾರೆ. "ತತ್ತು ಸಮನ್ವಯಾತ್" ಎಂಬ ಸೂತ್ರದಲ್ಲಿ ಸಂಶಬ್ದಕ್ಕೆ ಎರಡರ್ಥಗಳಿವೆ ಎಂದು ತಿಳಿಸಿದ್ದಾರೆ. (1) ಎಲ್ಲ ಎಂದರ್ಥ. (2) ಮುಖ್ಯವೃತ್ತಿ ಎಂದೂ ಅರ್ಥ. ಇವೆರಡನ್ನೂ ಅನುವಾದ ಮಾಡಲು 'ಅಖಿಲೈಃ' ಹಾಗೂ 'ಆಪ್ತತಮಂ' ಎಂದಿದ್ದಾರೆ. ಇಲ್ಲಿ ಬೇರೆ ಅರ್ಥದ ಜ್ಞಾನವಾರಣೆಗಾಗಿ 'ಅಖಿಲೈಃ' ಎಂಬುದರ ಅರ್ಥವಾಗಿ 'ಅಶೇಷ' ಎಂದಿದ್ದಾರೆ. ವಾಕ್ಯಗಳಿಂದ ಪ್ರತಿಪಾದಿಸಲ್ಪಡುವುದರಿಂದ ಆಪ್ತತ್ವವು ನಾರಾಯಣನಲ್ಲಿ ಇದೆ. ಆಪ್ತತಮತ್ವವಾದರೋ ಮುಖ್ಯತಾತ್ಪರ್ಯಕ್ಕೆ ವಿಷಯನಾಗಿರುವುವೇ ಎಂಬ ಅಭಿಪ್ರಾಯದಿಂದ 'ಹೃದಯದೀಪ್ತಾಯ' ಎಂದಿದ್ದಾರೆ. ಶಾಸ್ತ್ರಗಳ ತಾತ್ಪರ್ಯಕ್ಕೆ ವಿಷಯನಾದವನು ಎಂದರ್ಥ.

'ಶಾಸ್ತ್ರಯೋನಿತ್ವಾತ್' ಸೂತ್ರದ ಶಾಸ್ತ್ರಪದಾರ್ಥವನ್ನು ಅನುವ್ಯಾಖ್ಯಾನದಲ್ಲಿ 'ಸುವಾಕ್ಯೈಃ' ಎಂಬ ಪದದಿಂದ ತಿಳಿಸಿದ್ದಾರೆ. ಇದರ ಅರ್ಥವನ್ನೇ 'ಆಮ್ನಾಯಸ್ಮೃತಿ' ಎಂದು ಬಿಡಿಸಿದ್ದಾರೆ. ಈ ಅರ್ಥವನ್ನು ಸುಧಾದಲ್ಲಿ ಮುಂದೆ ವಿವರವಾಗಿ ತಿಳಿಸುತ್ತಾರೆ. ಅಪೌರುಷೇಯವಾದ್ದರಿಂದ ತನ್ಮೂಲಕವಾದದ್ದರಿಂದ ದೋಷದ ಶಂಕೆಗೂ ಅವಕಾಶವಿಲ್ಲದ ಒಳ್ಳೆಯ ವಾಕ್ಯಗಳಾದ ವೇದಗಳು ಹಾಗೂ ಬ್ರಹ್ಮಸೂತ್ರಗಳೇ ಸುವಾಕ್ಯಗಳೆನ್ನಿಸುತ್ತವೆ. ಇವುಗಳೆಲ್ಲದರಿಂದಲೂ ಸಂಪೂರ್ಣವಾಗಿ ಮುಖ್ಯವೃತ್ತಿಯಿಂದ ಪ್ರತಿಪಾದಿಸಲ್ಪಟ್ಟವನು ನಾರಾಯಣ ಎಂದರ್ಥ. ಹಾಗಾಗಿ ಆಮ್ನಾಯ ಎಂಬ ಪದದಿಂದ ಹೇಳಲ್ಪಟ್ಟ ವೇದಗಳು ಹಾಗೂ ಅದನ್ನು ಅನುಸರಿಸುವ ಪೌರುಷೇಯಗ್ರಂಥಗಳು ನಾರಾಯಣನು ನಮ್ಮ ಎನ್ನುವ ವಿಷಯದಲ್ಲಿ ಪ್ರಮಾಣಗಳಾಗಿವೆ ಎಂದು ಅಭಿಪ್ರಾಯ.

## ಅನುವ್ಯಾಖ್ಯಾನದ ವಿಶೇಷಣಕ್ರಮಕ್ಕಿಂತ ಸುಧಾವಿಶೇಷಣಕ್ರಮದ ವ್ಯತ್ಯಾಸ

(ಲಘುರಸರಂಜಿನೀ)— ಅತ್ರಾನುವ್ಯಾಖ್ಯಾನೇ ವಿಶೇಷಣಕ್ರಮ ಏಕಸ್ತದ್ವ್ಯಾಖ್ಯಾನಸುಧಾಯಾಂ ತ್ವನ್ಯಃ । ತತ್ರಾನುವ್ಯಾಖ್ಯಾನಸ್ಯಾಯಮಾಶಯಃ – ನಮನಾಯಾವಶ್ಯಕಂ ನಾರಾಯಣಸ್ವರೂಪಾವಧಾರಣಂ ಲಕ್ಷಣಪ್ರಮಾಣಾಭ್ಯಾಂ ಭವತಿ । ತತ್ರ 'ನಿಖಿಲಪೂರ್ಣಗುಣೈಕದೇಹಮ್' ಇತಿ 'ನಿರ್ದೋಷಮ್' ಇತಿ ವಿಶೇಷಣಾಭ್ಯಾಂ ಲಕ್ಷಣಾನ್ಯಭಿಹಿತಾನಿ । ಅಥ ತದ್ವಿಶಿಷ್ಟೇ ಪ್ರಮಾಣಾನಿ ವಕ್ತವ್ಯಾನಿ । ತತ್ರ ಪರೋಕ್ಷೇ ನಾರಾಯಣೇ ಪ್ರತ್ಯಕ್ಷಸ್ಯಾನವಕಾಶಾತ್ ವಕ್ತವ್ಯಯೋರಾಗಮಾನುಮಾನಯೋರ್ಮಧ್ಯೇ ಆಗಮಸ್ಯೋಪಜೀವ್ಯತ್ವಾತ್ 'ಆಪ್ತತಮಮಪ್ಯಖಿಲೈಃ ಸುವಾಕ್ಯೈಃ' ಇತ್ಯಾಗಮ ಏವಾದಾವುಕ್ತಃ । ಅತ ಏವಾಗಮೇಽಪಿ ಸ್ಮೃತಿಂ ಪ್ರತ್ಯಾಮ್ನಾಯ ಏವೋಪಜೀವ್ಯ ಇತ್ಯವಾಂತರವಿಶೇಷಮಪಿ ದ್ಯೋತಯಿತುಂ ಸುಧಾಯಾಮ್ 'ಅಲ್ಪಾಚ್ ತರಮ್' ಇತಿ ಸೌತ್ರನಿಯಮಮಪಹಾಯ 'ಆಮ್ನಾಯಸ್ಮೃತಿ' ಇತ್ಯಾಮ್ನಾಯಸ್ಯಾದೌ ಸಂಕೀರ್ತನಂ ಕೃತಮ್ । ಅನುಮಾನಸ್ಯ ತೂಪಜೀವ-ಕತ್ವಾತ್ ಆಗಮಾನಂತರಮ್ 'ಅಸ್ಯೋದ್ಭವಾದಿದಮ್' ಇತ್ಯನುಮಾನಾನ್ಯುಕ್ತಾನೀತಿ ।

ಅನುವ್ಯಾಖ್ಯಾನದ ಮಂಗಳಪದ್ಯದಲ್ಲಿ ವಿಶೇಷಣವಾಗಿ ಕೊಟ್ಟ ಕ್ರಮ ಒಂದು ರೀತಿಯಾಗಿದೆ. ಅದರ ವ್ಯಾಖ್ಯಾನವಾದ ಸುಧಾಭಾಗದಲ್ಲಿಯಾದರೋ ಬೇರೆ ಕ್ರಮವನ್ನು ಆಶ್ರಯಿಸಲಾಗಿದೆ. ಅವುಗಳಲ್ಲಿ ಅನುವ್ಯಾಖ್ಯಾನದ ಅಭಿಪ್ರಾಯ ಹೀಗಿದೆ – ನಮಸ್ಕರಿಸಲು ಆವಶ್ಯಕವಾದದ್ದು ನಾರಾಯಣಸ್ವರೂಪ-ನಿಶ್ಚಯ. ಇದಾದರೋ ನಾರಾಯಣನ ಲಕ್ಷಣ ಹಾಗೂ ಅವನ ವಿಷಯವಾಗಿ ಇರುವ ಪ್ರಮಾಣ-ಗಳಿಂದ ಆಗುತ್ತದೆ. ಅಲ್ಲಿ ಲಕ್ಷಣಗಳನ್ನು 'ನಿಖಿಲಪೂರ್ಣಗುಣೈಕದೇಹಂ' ಹಾಗೂ 'ನಿರ್ದೋಷಂ' ಎಂಬ ವಿಶೇಷಣಗಳಿಂದ ಹೇಳಲ್ಪಟ್ಟಿದೆ. ಅನಂತರ ಅಂತಹ ಲಕ್ಷಣಗಳಿಂದ ಕೂಡಿದ ನಾರಾ-ಯಣನಲ್ಲಿ ಪ್ರಮಾಣಗಳನ್ನು ಹೇಳಬೇಕು. ಅಲ್ಲಿ ಪರೋಕ್ಷನಾದ ನಾರಾಯಣನಲ್ಲಿ ಪ್ರತ್ಯಕ್ಷಕ್ಕೆ ಅವಕಾಶವಿಲ್ಲವಾದ್ದರಿಂದ ಅವನ ವಿಷಯದಲ್ಲಿ ಹೇಳಬೇಕಾದ ಆಗಮ ಅನುಮಾನಗಳಲ್ಲಿ ಆಗಮವೇ

ಉಪಜೀವ್ಯವಾಗಿದೆ. ಆದ್ದರಿಂದ 'ಆಪ್ತತಮಮಪ್ಯಖಿಲೈಃ ಸುವಾಕ್ಯೈಃ' ಎಂಬ ಭಾಗದಲ್ಲಿ ಆಗಮವನ್ನೇ ಮೊದಲಿಗೆ ಹೇಳಿದ್ದಾರೆ. ಆದ್ದರಿಂದಲೇ ಆಗಮದಲ್ಲಿಯೂ ಕೂಡ ಸ್ಮೃತಿಯನ್ನು ಕುರಿತು ಆಮ್ನಾಯವೇ ಉಪಜೀವ್ಯ ಎಂಬ ಅವಾಂತರವ್ಯತ್ಯಾಸವನ್ನು ತೋರಿಸಲು ಸುಧಾದಲ್ಲಿ 'ಅಲ್ಪಾಚ್-ತರಮ್' ಎಂಬ ಸೂತ್ರನಿಯಮವನ್ನು ತ್ಯಾಗಮಾಡಿ ಆಮ್ನಾಯಸ್ಮೃತಿ ಎಂದು ಆಮ್ನಾಯವನ್ನೇ ಮೊದಲು ಹೇಳಿದ್ದಾರೆ. ಅನುಮಾನವಾದರೋ ಉಪಜೀವಕವಾದ್ದರಿಂದ ಆಗಮದ ಅನಂತರ 'ಅಸ್ಯೋದ್ಭವಾದಿದಂ' ಎಂಬ ರೀತಿಯಲ್ಲಿ ಅನುಮಾನಗಳನ್ನು ಹೇಳಿದ್ದಾರೆ.

## ಸುಧೆಯಲ್ಲಿನ ವಿಶೇಷಣಕ್ರಮಕ್ಕೆ ಕಾರಣ

(ಲಘುರಸರಂಜನೀ) — ಯದ್ಯಪ್ಯುಕ್ತಂ ಸುಧಾಯಾಮ್ — "ಅಥವಾ ನಿಖಿಲಇತ್ಯಾದಿ ಉಕ್ತಲಕ್ಷಣೋ-ಪಪನ್ನತಯಾ ನಾರಾಯಣಃ ಕೇನ ಪ್ರಮಾಣೇನ ಪ್ರತಿಪತ್ತವ್ಯಃ? ಇತ್ಯತಃ ಸುವಾಕ್ಯೈಃ ಆಪ್ಯಮ್ ಇತ್ಯುಕ್ತಮ್ । ಅಪಿಶಬ್ದಃ ವಕ್ಷ್ಯಮಾಣ(ಪ್ರಮಾಣ)ಸಮುಚ್ಚಯಾರ್ಥಃ । ಸಕಲಜಗನ್ನಿಮಿತ್ತಕಾರಣತ್ವಾದಿ ಹೇತುಭಿರಪಿ ಉಕ್ತಲಕ್ಷಣೋ ನಾರಾಯಣಃ ಪ್ರತ್ಯೇತವ್ಯಃ ಇತ್ಯಭಿಪ್ರೇತ್ಯ ಉಕ್ತಮ್ - ಅಸ್ಯ ಇತಿ ॥" ಇತಿ । ಸುಧಾಯಾಸ್ತ್ವಯಮಾಶಯಃ — ಪ್ರಮಾಣಾಕಾಂಕ್ಷಾಯಾ ಗುಣಪೂರ್ಣತ್ವಾದಿ-ಪ್ರಧಾನಲಕ್ಷಣೇಷ್ವಿವ ತತ್ರ ಪ್ರಮಾಣತಯಾಽಭಿಪ್ರೇತೇಷು ಸಕಲಜಗನ್ನಿಮಿತ್ತಕಾರಣತ್ವಾದ್ಯವಾಂತರ-ಲಕ್ಷಣೇಷ್ವಪ್ಯಸಂಭವಪರಿಹಾರಾದಯೋ ಭವಂತ್ಯೇವ ಇತ್ಯೇಕೋಕ್ತ್ಯೈವ ಉಭಯತ್ರ ಪ್ರಮಾಣ-ಮಭಿಧಾತುಂ **'ನಿತ್ಯಾಗಣಿತಗುಣ'** ಇತಿ **'ಜಗಜ್ಜನ್ಮಸ್ಥೇಮ'** ಇತಿ ಚ ವಿಶೇಷಣಾಭ್ಯಾಂ ತದು-ಭಯಮಾದೌ ಅಭಿಧಾಯ **'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ'** ಇತ್ಯಸ್ಯಾಂತೇ ನಿವೇಶ ಇತಿ । ಅತ ಏವ ಸೂತ್ರಕಾರೇಣಾಪ್ಯಾದ್ಯಸೂತ್ರೇ ಗುಣಪೂರ್ಣತ್ವಾದೀನಿ ದ್ವಿತೀಯಸೂತ್ರೇ ಜಗನ್ನಿಮಿತ್ತಕಾರಣತ್ವಾದೀನಿ ಚ ಲಕ್ಷಣಾನ್ಯಭಿಧಾಯ ಶಾಸ್ತ್ರಯೋನಿತ್ವಾದಿತ್ಯುಭಯತ್ರಾಪಿ ಪ್ರಮಾಣಾನಿ ದರ್ಶಿತಾನೀತಿ ಧ್ಯೇಯಮ್ ।

ಈ ಅಂಶವನ್ನು ನ್ಯಾಯಸುಧೆಯಲ್ಲಿ ತಿಳಿಸಿದ್ದಾರೆಯೂ ಕೂಡ — "ಅಥವಾ ನಿಖಿಲಇತ್ಯಾದಿ ಉಕ್ತಲಕ್ಷಣೋಪಪನ್ನತಯಾ ನಾರಾಯಣಃ ಕೇನ ಪ್ರಮಾಣೇನ ಪ್ರತಿಪತ್ತವ್ಯಃ? ಇತ್ಯತಃ ಸುವಾಕ್ಯೈಃ ಆಪ್ಯಮ್ ಇತ್ಯುಕ್ತಮ್ । ಅಪಿಶಬ್ದಃ ವಕ್ಷ್ಯಮಾಣಸಮುಚ್ಚಯಾರ್ಥಃ । ಸಕಲಜಗನ್ನಿಮಿತ್ತಕಾರಣತ್ವಾದಿ ಹೇತುಭಿರಪಿ ಉಕ್ತಲಕ್ಷಣೋ ನಾರಾಯಣಃ ಪ್ರತ್ಯೇತವ್ಯಃ ಇತ್ಯಭಿಪ್ರೇತ್ಯ ಉಕ್ತಮ್ - ಅಸ್ಯ ಇತಿ ॥" ಎಂದು. ಈ ಸುಧಾಭಾಗದ ಅಭಿಪ್ರಾಯ ಹೀಗಿದೆ — ಪ್ರಮಾಣಗಳ ಜಜ್ಞಾಸೆಯು ಭಗವಂತನ ಗುಣಪೂರ್ಣತ್ವ ಮೊದಲಾದ ಲಕ್ಷಣಗಳಲ್ಲಿದ್ದಂತೆ ಅವನ ವಿಷಯದಲ್ಲಿ ಪ್ರಮಾಣವಾಗಿ ಹೇಳಿದ ಸಕಲಜಗನ್ನಿಮಿತ್ತಕಾರಣತ್ವ ಮೊದಲಾದ ಅವಾಂತರಲಕ್ಷಣಗಳಲ್ಲಿಯೂ ಅಸಂಭವಪರಿಹಾರ ಮೊದಲಾದವುಗಳು ಆಗುತ್ತವೆ ಎಂದು ಒಂದೇ ಮಾತಿನಿಂದ ಎರಡೂ ಕಡೆ ಪ್ರಮಾಣಗಳನ್ನು

ಹೇಳಬೇಕಾಗಿದೆ. ಅದಕ್ಕೋಸ್ಕರ ನಿತ್ಯಾಗಣಿತಗುಣ ಎಂದು ಜಗಜ್ಜನ್ಮಸ್ಥೇಮ ಎಂದು ಎರಡು ವಿಶೇಷಣಗಳಿಂದ ಅವೆರಡನ್ನೂ ಮೊದಲು ಹೇಳಿ 'ಅಶೇಷ-ಆಮ್ನಾಯಸ್ಮೃತಿಹೃದಯದೀಪ್ತಾಯ' ಎನ್ನುವುದನ್ನು ಕೊನೆಗೆ ಸೇರಿಸಿದ್ದಾರೆ. ಆದ್ದರಿಂದಲೇ ಸೂತ್ರಕಾರರೂ ಕೂಡ ಮೊದಲನೆಯ ಸೂತ್ರದಲ್ಲಿ ಗುಣಪೂರ್ಣತ್ವ ಮೊದಲಾದವುಗಳನ್ನು ಎರಡನೆಯ ಸೂತ್ರದಲ್ಲಿ ಜಗನ್ನಿಮಿತ್ತಕಾರಣತ್ವ ಮೊದಲಾದವುಗಳನ್ನು ಲಕ್ಷಣವನ್ನಾಗಿ ಹೇಳಿ ಶಾಸ್ತ್ರಯೋನಿತ್ವಾತ್ ಎಂಬ ಸೂತ್ರದಿಂದ ಎರಡರ ವಿಷಯದಲ್ಲಿಯೂ ಪ್ರಮಾಣಗಳನ್ನು ತೋರಿಸಿದ್ದಾರೆ ಎಂದು ತಿಳಿಯಬೇಕು.

## ವಿಶಿಷ್ಟತ್ವ ಮೊದಲಾದ ಧರ್ಮಗಳನ್ನು ವಿವರಿಸುತ್ತಿರುವ ಸುಧಾದ ಪದಗಳು

(ಲಘುರಸರಂಜನೀ) — ಯದ್ವಾ ನನು ಕುತೋ ನಾರಾಯಣಸ್ಯ ನಮ್ಯತ್ವಮ್? ತಥಾತ್ವೇಽಪಿ ಕುತೋಽನ್ಯಾಸು ದೇವತಾಸು ಸತೀಷು ಅಸ್ಯೈವ ನಮನಮ್? ಇತ್ಯಾಶಂಕ್ಯೋಕ್ತಂ ಮೂಲೇ – 'ಅಶೇಷವಿಶೇಷತೋಽಪಿ ವಂದ್ಯಮ್' ಇತಿ ॥ ನಾರಾಯಣಸ್ಯ ವಂದ್ಯತ್ವಪ್ರಯೋಜಕಧರ್ಮವತ್ತ್ವಾದ್ ವಂದ್ಯತ್ವಂ ಸರ್ವೋತ್ತಮತ್ವಾಚ್ಚ ಇತರಪ್ರಹಾಣೇನ ವಂದ್ಯತ್ವಮಿತಿ ತತ್ಪರಿಹಾರೋಽತ್ರಾಭಿಮತಃ । ವಂದ್ಯತ್ವಪ್ರಯೋಜಕೀಭೂತಾಶ್ಚ ಧರ್ಮಾ ವಿಶಿಷ್ಟತ್ವಾಧಿಕೃತತ್ವೇಷ್ಟತ್ವರೂಪಾಸ್ತ್ರಯಃ । ತದಭಿಪ್ರೇತಾರ್ಥಮಾಹ— **'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ', 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ'** ಇತಿ ದ್ವಾಭ್ಯಾಮ್ । ಅಧಿಕೃತತ್ವಪ್ರದರ್ಶನಾಯ ಮೂಲೇ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಇತಿ ವಿಶೇಷಣಮ್ । ತದರ್ಥಮಾಹ — **'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ'** ಇತಿ ॥

ಅಥವಾ — ನಾರಾಯಣನು ಏಕೆ ನಮಸ್ಕರಿಸಲು ಯೋಗ್ಯ? ಹಾಗೆಯೇ ಬೇರೆ ದೇವತೆಗಳಿದ್ದರೂ ಅವರನ್ನು ಪರಿತ್ಯಾಗಮಾಡಿ ಇವನನ್ನೇ ಏಕೆ ನಮಸ್ಕರಿಸಬೇಕು? ಎಂದು ಆಶಂಕೆ ಮಾಡಿಕೊಂಡು ಮೂಲದಲ್ಲಿ ಈ ಪ್ರಶ್ನೆಗಳಿಗೆ ಉತ್ತರವಾಗಿ "ಅಶೇಷವಿಶೇಷತೋಽಪಿ ವಂದ್ಯಮ್" ಎಂದಿದ್ದಾರೆ. ನಾರಾಯಣನಲ್ಲಿ ನಮಸ್ಕರಿಸಲು ಬೇಕಾದ ಧರ್ಮಗಳಿರುವುದರಿಂದ ನಮ್ಯತ್ವ ಹಾಗೂ ಸರ್ವೋತ್ತಮನಾದ್ದರಿಂದ ಇತರರನ್ನು ಪರಿತ್ಯಾಗಮಾಡಿ ಇವನಲ್ಲೇ ವಂದ್ಯತ್ವವಿದೆ - ಎಂಬ ಪರಿಹಾರವನ್ನು ಇಲ್ಲಿ ಆಶ್ರಯಿಸಲಾಗಿದೆ. ವಂದ್ಯತ್ವಕ್ಕೆ ಬೇಕಾದ ಧರ್ಮಗಳು ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವವೆಂಬುದಾಗಿ ಮೂರು ರೀತಿಯಾಗಿದೆ. ಅಲ್ಲಿ ವಿಶಿಷ್ಟತ್ವವನ್ನು ಸಮರ್ಥನೆ ಮಾಡಲು ಅನುವ್ಯಾಖ್ಯಾನದಲ್ಲಿ ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಯೋದ್ಭವಾದಿದಂ ಎಂಬ ಮೂರು ವಿಶೇಷಣಗಳಿವೆ. ಈ ವಿಶೇಷಣಗಳಿಂದ ಅಭಿಪ್ರೇತವಾದ ಅರ್ಥವನ್ನೇ ಸುಧಾದಲ್ಲಿ 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಹಾಗೂ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂಬ ಎರಡು ವಿಶೇಷಣಗಳೂ ಹೇಳುತ್ತಿವೆ.

ನಾರಾಯಣನಲ್ಲಿ ಅಧಿಕೃತತತ್ತ್ವವಿದೆ ಎಂದು ತೋರಿಸಲು "ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ" ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದರ ಅರ್ಥವನ್ನು 'ಅಶೇಷಾಮ್ನಾಯಸ್ಮೃತಿಹೃದಯ-ದೀಪ್ತಾಯ' ಎಂಬ ಭಾಗದಿಂದ ಸುಧಾದಲ್ಲಿ ತಿಳಿಸಿದ್ದಾರೆ.

## ಮನೋವೃತ್ತೇಃ ತತ್ಪ್ರವಣತಾ ಹಿ ವಂದನಮ್

(ಲಘುರಸರಂಜನೀ) — ನನು ಪದ್ಯಚತುಷ್ಟಯೇಽಪಿ ಗುಣಕೀರ್ತನರೂಪಾ ಸ್ತುತಿರಭೀಷ್ಟಾಶಾಸನಂ ಚೇತಿ ದ್ವಯಮೇವ ಪ್ರತೀಯತೇ ನ ಪ್ರಣಾಮಃ । ಅತಃ ಕಥಂ ಪ್ರಣಮ್ಯಾಭೀಷ್ಟಮಾಶಾಸ್ತ ಇತ್ಯುಕ್ತಮಿತಿ ಚೇನ್ನ । ತದ್ಗುಣಕೀರ್ತನರೂಪಾ ಸ್ತುತಿಸ್ತತ್ರ ಮನೋವೃತ್ತಿಪ್ರವಣತಾಂ ವಿನಾ ನ ಸಂಭವತೀತಿ ಸರ್ವಾನುಭವಸಿದ್ಧಾ । 'ಮನೋವೃತ್ತೇಃ ತತ್ಪ್ರವಣತಾ ಹಿ ವಂದನಂ ನಾಮ' ಇತ್ಯಭಿಪ್ರಾಯಾತ್ ।

ಅಲ್ಲ; ನಾಲ್ಕೂ ಪದ್ಯಗಳಲ್ಲಿ ಪ್ರಣಾಮವು ತೋರದೇ ಎರಡೇ ಅಂಶಗಳು ತೋರುತ್ತಿವೆ. (1) ಗುಣಕೀರ್ತನ ರೂಪವಾದ ಸ್ತುತಿಯು, (2) ಅಭೀಷ್ಟಪ್ರಾರ್ಥನೆ. ಆದ್ದರಿಂದ ಹೇಗೆ ನಮಸ್ಕರಿಸಿ ಅಭೀಷ್ಟಪ್ರಾರ್ಥನೆಯನ್ನು ಮಾಡುತ್ತಿದ್ದಾರೆ ಎಂದು ಹೇಳಲು ಸಾಧ್ಯ?

ಉತ್ತರ — ಗುಣಗಳನ್ನು ಕೀರ್ತನೆ ಮಾಡುವುದು ಎಂದರೆ ಇದು ಮನೋವೃತ್ತಿಯ ಸಂಲಗ್ನತೆ ಇಲ್ಲದೆಯೇ ಅಸಂಭಾವಿತ ಎನ್ನುವುದು ಸರ್ವರ ಅನುಭವಕ್ಕೂ ಇರುವ ವಿಷಯವಾಗಿದೆ. ನಮಸ್ಕಾರವೆಂದರೆ 'ಮನೋವೃತ್ತೇಃ ತತ್ಪ್ರವಣತಾ ಹಿ ವಂದನಮ್' ಭಗವಂತ ಹಾಗೂ ಗುರುಗಳಿಗೆ ವಂದನೆ ಮಾಡುವುದು ಎಂದರೆ ಅವರುಗಳಲ್ಲಿ ನಮ್ಮ ಮನಸ್ಸನ್ನು ಚೆನ್ನಾಗಿ ಮುಳುಗಿಸುವುದು. ಇದನ್ನೇ ಮನಸ್ಸಿನ ಸಂಲಗ್ನತೆ ಎಂದು ಕರೆಯುವುದು.

## ಪತಯೇ ಎಂದಾಗಬೇಕಲ್ಲವೇ?

(ಶ್ರೀನಿಧಿ) — ನನು 'ಶೇಷೋ ಘ್ಯಸಖಿ' ಇತ್ಯನೇನ ಇವರ್ಣಾಂತತ್ವೇನ ಘಿಸಂಜ್ಞಾಯಾಂ ಘೇರ್ಙಿತಿ ಇತಿ ಗುಣೇ ಕೃತೇ 'ಪತಯೇ' ಇತಿ ಸ್ಯಾತ್ । ನ ತು ಪತ್ಯ ಇತಿ ಚೇನ್ನ, 'ಪತಿಃ ಸಮಾಸ ಏವ' ಇತಿ ವ್ಯಸ್ತಸ್ಯ ಘಿಸಂಜ್ಞಾನಿಷೇಧಾತ್ । ಷಷ್ಠೀತ್ಯುಕ್ತೇ ಘಿಸಂಜ್ಞಾಸ್ತೀತಿ ಚೇನ್ನ । ಛಂದಸೀತ್ಯುಕ್ತೇಃ ತತ್ರಾಪಿ ವಿಕಲ್ಪೇನೈವ ಪ್ರಾಪ್ತೇ 'ಲೋಕೇಽಪಿ' ಇತಿ ಕೇನಚಿತ್ ಉಕ್ತಮಿತಿ ಚೇತ್ ತಥಾಪಿ ವಿಕಲ್ಪೇನ ತದಭಾವಪಕ್ಷೇ ಸಾಧುತ್ವೋಕ್ತೇಃ ॥

'ಶ್ರಿಯಃ ಪತ್ಯೇ' ಎಂಬಲ್ಲಿ ಶ್ರಿಯಃ ಪತಯೇ ಎಂದಾಗಲೀ ಎಂದು ಆಕ್ಷೇಪ. 'ಶೇಷೋ ಘ್ಯಸಖಿ' ಎಂಬ ಸೂತ್ರವು ಇವರ್ಣಾಂತವಾದ ಶಬ್ದಕ್ಕೂ ಘಿಸಂಜ್ಞೆಯನ್ನು ಹೇಳಿದ್ದರಿಂದ ಇಲ್ಲಿ ಪತಿ ಎಂಬ ಶಬ್ದಕ್ಕೂ ಘಿಸಂಜ್ಞೆ ಇದೆ. ಘಿಸಂಜ್ಞೆ ಇದ್ದಾಗ 'ಘೇರ್ಙಿತಿ' (ಪಾ.ಸೂ.7-3-11) ಎಂಬ ಸೂತ್ರದಿಂದ 'ಘ್ಯಂತಸ್ಯ ಅಂಗಸ್ಯ ಙಿತಿ ಪ್ರತ್ಯಯೇ ಪರತೋ ಗುಣೋ ಭವತಿ । ಅಗ್ನಯೇ ವಾಯವೇ' – ಘಿಸಂಜ್ಞೆ

ಇರುವ ಅಂಗದ ಕೊನೆಯ ಅಕ್ಷಕ್ಕೆ ಗುಣಬರುವುದು. ಜಿತ್ತಾದ ಪ್ರತ್ಯಯವು ಪರದಲ್ಲಿ ಇದ್ದಾಗ. ಪ್ರಕೃತದಲ್ಲಿ ಪತಿಶಬ್ದಕ್ಕೆ ಙೇಪ್ರತ್ಯಯವು ಪರದಲ್ಲಿರುವುದರಿಂದ ಘಿಸಂಜ್ಞೆಯೂ ಇರುವುದರಿಂದ ಇಕಾರಕ್ಕೆ ಗುಣ ಬಂದು 'ಏಚೋ ಅಯವಾಯಾವಃ' (ಪಾ.ಸೂ.6-1-78) ಎಂಬ ಸೂತ್ರದಿಂದ ಅಯಾದೇಶವನ್ನು ಮಾಡಿದರೆ 'ಪತಯೇ' ಎಂದಾಗಬೇಕು. ಉತ್ತರ – 'ಪತಿಃ ಸಮಾಸ ಏವ' ಸಮಾಸದಲ್ಲಿ ಮಾತ್ರ ಪತಿಶಬ್ದಕ್ಕೆ ಘಿಸಂಜ್ಞೆ ಇರುವುದು. ಬೇರೆಯ ಕಡೆ ಅಲ್ಲ. ಪ್ರಕೃತದಲ್ಲಿ ಶ್ರಿಯಃ ಪತ್ಯೇ ಎಂಬುವುದು ಸಮಾಸವಲ್ಲವಾದ್ದರಿಂದ ಘಿಸಂಜ್ಞೆಯು ಇರುವುದಿಲ್ಲ. ಆದ್ದರಿಂದಲೇ ತತ್ ಪ್ರಯುಕ್ತವಾದ ಗುಣವೂ ಇರುವುದಿಲ್ಲ.

ಅಲ್ಲ; ಶ್ರಿಯಃ ಪತ್ಯೇ ಎನ್ನುವುದು ಷಷ್ಠೀ ತತ್ಪುರುಷಸಮಾಸವಾಗಿದೆ. ಹಾಗಾದರೆ ಷಷ್ಠೀವಿಭಕ್ತಿಗೆ ಲೋಪ ಏಕೆ ಇರುವುದಿಲ್ಲ ಎಂದು ಪ್ರಶ್ನಿಸಕೂಡದು. ಏಕೆಂದರೆ 'ಷಷ್ಠ್ಯಾ ಆಕ್ರೋಶೇ' (ಪಾ.ಸೂ.6-3-21) ಎಂಬ ಸೂತ್ರದಲ್ಲಿ ತಿಳಿಸುವಂತೆ ಆಕ್ರೋಶವು ತೋರುತ್ತಿರುವಾಗ ಉತ್ತರಪದವು ಪರದಲ್ಲಿದ್ದಾಗ ಷಷ್ಠೀವಿಭಕ್ತಿಗೆ ಲೋಪವನ್ನು ಮಾಡಕೂಡದು. ಆಕ್ರೋಶ ಎಂದರೆ ನಿಂದೆ ಎಂದು ಅರ್ಥ. ಇದರ ವೃತ್ತಿ ಹೀಗೆ – ಆಕ್ರೋಶೇ ಗಮ್ಯಮಾನೇ ಉತ್ತರಪದೇ ಷಷ್ಠ್ಯಾಃ ಅಲುಕ್ ಭವತಿ । ಚೌರಸ್ಯ ಕುಲಂ, ವೃಷಭಸ್ಯ ಕುಲಂ. ಪ್ರಕೃತದಲ್ಲಿ ಶ್ರಿಯಃ ಪತ್ಯೇ ಎಂಬಲ್ಲಿನ ಷಷ್ಠೀವಿಭಕ್ತಿಯಿಂದ ನಾರಾಯಣನಿಗೆ ಲಕ್ಷ್ಮೀದೇವಿಯಿಂದ ಆಗಬೇಕಾಗಿದ್ದು ಏನೂ ಇಲ್ಲ ಎಂಬ ರೀತಿಯಾದ ಆಕ್ರೋಶಪರವಾಗಿದೆ. ಅರ್ಥಾತ್ ನಾರಾಯಣನು ಸ್ವರಮಣ. ಲಕ್ಷ್ಮೀದೇವಿಯಿಂದ ಅವನಿಗೆ ಆನಂದವುಂಟಾಗಬೇಕು ಎಂಬುದೇನಿಲ್ಲ.

ಹಾಗಾದರೆ ಸಮಾಸವಾದ ಪ್ರಯುಕ್ತ ಘಿಸಂಜ್ಞೆ ಇರುವುದರಿಂದ ಪುನಃ ಹಿಂದಿನ ಆಕ್ಷೇಪವು ಇದ್ದೇ ಇದೆ. ಎಂದರೆ ಇಲ್ಲ. ವೈದಿಕಪ್ರಯೋಗದಲ್ಲಿ 'ಪತಿಃ ಸಮಾಸ ಏವ' ಎಂಬ ನಿಯಮ ಇರುವುದಿಲ್ಲ. ಅದೇ ರೀತಿ 'ಸಂಜ್ಞಾಪೂರ್ವಕೋ ವಿಧಿಃ ಅನಿತ್ಯಃ' ಎಂಬ ಪರಿಭಾಷೆಯ ಪ್ರಕಾರ ಘಿಸಂಜ್ಞಾಪೂರ್ವಕವಾದ ಸಂಜ್ಞಾವಿಧಿಯು ಅನಿತ್ಯವೆಂದಾದ್ದರಿಂದ ಘಿಸಂಜ್ಞೆಯಿದ್ದರೂ ತತ್ಕಾರ್ಯವನ್ನು ಮಾಡುವ ಅನಿವಾರ್ಯತೆ ಇರುವುದಿಲ್ಲ. ಹೀಗೆ ಶ್ರಿಯಃ ಪತ್ಯೇ ಎಂಬುದು ವೈದಿಕಪ್ರಯೋಗದಂತೆ ಎಂದಿಟ್ಟುಕೊಂಡಾಗ. ವಿಕಲ್ಪೇನ ಪತಿಃ ಸಮಾಸ ಏವ ಎಂಬ ಸೂತ್ರವು ವಿಧಾನಮಾಡುತ್ತಿದೆ ಎಂದಿಟ್ಟುಕೊಂಡಾಗ ಒಂದು ಪಕ್ಷದಲ್ಲಿ ದೋಷವೇನಿಲ್ಲ ಎಂದು ಅಭಿಪ್ರಾಯ.

## ಸ್ಥೇಮಶಬ್ದದಲ್ಲಿ ಇಮನಿಚ್ ಪ್ರತ್ಯಯ ಹೇಗೆ?

(ಪರಿಮಳ)– ಯದ್ಯಪಿ ವಾಮನವೃತ್ತಾದೌ 'ಮುಗ್ಧಪ್ರೌಢಸ್ಥಿರಶಬ್ದಾನಾಂ ಪೃಥ್ವಾದಿಷ್ವಪಾಠಾತ್ ಪೃಥ್ವಾದಿಷ್ವ ಇಮನಿಷ್ವೇತ್ಯುಕ್ತೇಮನಿಜಪ್ರಾಪ್ತೇರಿಮನಿಜಂತಪ್ರಯೋಗೋಽಸಾಧುಃ' ಇತಿ ಉಕ್ತಮ್ । ತಥಾಪಿ ನೈಷಧದ್ವಾದಶಸರ್ಗಸ್ಥಸ್ಯ 'ಯತ್ ಕಸ್ಯಾಮಪಿ ಭಾನುಮಾನ್ನ ಕಕುಭಿ ಸ್ಥೇಮಾನಮಾ–

ಲಂಬತೇ' ಇತ್ಯಸ್ಯ ವ್ಯಾಖ್ಯಾನೇ 'ವರ್ಣದೃಢಾದಿಭ್ಯಃ ಷ್ಯಞ್ ಚ' ಇತಿ ಸೂತ್ರೇ ಚಕಾರೇಣೇಮನಿಚಃ ಸಮುಚ್ಚಿತತ್ವಾತ್ ಸ್ಥಿರಶಬ್ದಸ್ಯ ದೃಢಾದಿಷು ಪಾಠಾದಮನಿಜಿತ್ಯುಕ್ತತ್ವಾತ್ ಸಾಧುರೇವಾಯಂ ಧ್ಯೇಯಃ ।

ಯದ್ಯಪಿ ವಾಮನವೃತ್ತಿ ಮುಂತಾದವುಗಳಲ್ಲಿ ಅಂದರೆ ಕಾಶಿಕಾವೃತ್ತಿ ಮುಂತಾದವುಗಳಲ್ಲಿ ಸ್ಥೇಮ ಎಂಬ ಶಬ್ದವು ಅಸಾಧು ಎಂದು ಹೇಳಿದಂತೆ ತೋರುತ್ತದೆ. ಅಲ್ಲಿ ಬಂದ ಮಾತು ಹೀಗಿದೆ – ಮುಗ್ಧ-ಪ್ರೌಢ - ಸ್ಥಿರ ಎಂಬ ಶಬ್ದಗಳು ಪೃಥ್ವಾದಿಗಣದಲ್ಲಿ ಹೇಳಿಲ್ಲವಾದ್ದರಿಂದ 'ಪೃಥ್ವಾದಿಭ್ಯ ಇಮನಿಜ್ವಾ' ಎಂಬ ಸೂತ್ರದಿಂದ ಇಮನಿಚ್ ಪ್ರತ್ಯಯವು ಬರಲು ಅಸಾಧ್ಯವಾದ್ದರಿಂದ ಇಮನಿಚ್-ಪ್ರತ್ಯಯಾಂತವಾದ ಸ್ಥಿರಶಬ್ದವು ಅರ್ಥಾತ್ ಸ್ಥೇಮನ್ ಎಂಬ ಶಬ್ದವು ಅಸಾಧು ಎಂದು.

ನೈಷಧಕಾವ್ಯದಲ್ಲಿ 'ಸ್ಥೇಮ'ಶಬ್ದಪ್ರಯೋಗವಿದೆ. ಅದರ ಹನ್ನೆರಡನೆಯ ಸರ್ಗದಲ್ಲಿ 'ಯತ್ ಕಸ್ಯಾಮಪಿ ಭಾನುಮಾನ್ನ ಕಕುಭಿ ಸ್ಥೇಮಾನಮಾಲಂಬತೇ' ಎಂದಿದೆ. ಈ ವಾಕ್ಯಕ್ಕೆ ವ್ಯಾಖ್ಯಾನ-ಮಾಡುವಾಗ 'ವರ್ಣದೃಢಾದಿಭ್ಯಃ ಷ್ಯಞ್ ಚ' ಎಂಬ ಸೂತ್ರದಲ್ಲಿ ಷ್ಯಞ್ ಪ್ರತ್ಯಯದ ಜೊತೆಗೆ ಇಮನಿಚ್ ಪ್ರತ್ಯಯವನ್ನೂ ವರ್ಣವಾಚಕವಾದ ಶಬ್ದಗಳ ಪರಕ್ಕೆ ಹಾಗೂ ದೃಢಾದಿಶಬ್ದಗಳ ಪರಕ್ಕೆ ವಿಧಾನ ಮಾಡಿದ್ದಾರೆ. ಇಮನಿಚ್ ಎಂಬುದು ಸೂತ್ರದಲ್ಲಿ ಸಾಕ್ಷಾತ್ ಉಚ್ಚರಿತವಾಗಿಲ್ಲ-ದಿದ್ದರೂ ಸೂತ್ರದಲ್ಲಿರುವ ಚಶಬ್ದದಿಂದ ಇಮನಿಚ್ ಪ್ರತ್ಯಯವನ್ನು ಸಮುಚ್ಚಯ ಮಾಡಬೇಕು. ಹೀಗೆ ಇಮನಿಚ್ ಪ್ರತ್ಯಯವನ್ನು ವಿಧಿಸುವ ಸೂತ್ರವಾಗಿದೆ - 'ವರ್ಣದೃಢಾದಿಭ್ಯಃ ಷ್ಯಞ್ ಚ' ಎಂಬುದು. ಈ ಸೂತ್ರದಲ್ಲಿ ದೃಢಾದಿಗಣದಲ್ಲಿ ಸ್ಥಿರಶಬ್ದವನ್ನು ಪಠಿಸಿದ್ದರಿಂದ ಅದರ ಮೇಲೂ ಇಮನಿಚ್ ಪ್ರತ್ಯಯ ಬರುವುದು. ಹೀಗೆ ಇಮನಿಚ್ಪ್ರತ್ಯಯಾಂತವಾದ ಸ್ಥಿರಶಬ್ದವು ಅರ್ಥಾತ್ ಸ್ಥೇಮನ್ ಶಬ್ದವು ಸಾಧುವಾಗಿದೆ.

## ಶ್ರೀ ಶ್ರೀನಿಧಿತೀರ್ಥರ ಟಿಪ್ಪಣೀ ಮಂಗಲಾಚರಣೆ

### ಗುರುದೇವತೆಗಳಿಗೆ ಸನ್ನಮನಗಳು

ಅಗಣ್ಯದಿವ್ಯೋರುಗುಣಾರ್ಣವಾಕೃತಿಂ ರಮಾಪತಿಂ ಮಾಂ ಶ್ರೀಮದಾನಂದತೀರ್ಥಾನ್ ।
ಜಯಾರ್ಯವರ್ಯಾನ್ ನರಸಿಂಹಾಚಾರ್ಯವರ್ಯಾನ್ ಗುರೂಂಸ್ತಥಾನ್ಯಾನಪಿ ಸನ್ನತೋಽಸ್ಮಿ ॥

ಎಣಿಸಲಶಕ್ಯವಾದ ದಿವ್ಯವಾದ ಪೂರ್ಣಗುಣಗಳೆಂಬ ಸಮುದ್ರವನ್ನೇ ಆಕೃತಿಯಾಗಿ ಉಳ್ಳ ರಮಾಪತಿಯನ್ನು ಲಕ್ಷ್ಮಿಯನ್ನು ಹಾಗೂ ಶ್ರೀಮದಾನಂದತೀರ್ಥರನ್ನು ಜಯತೀರ್ಥರನ್ನು ನರ-ಸಿಂಹಾಚಾರ್ಯರನ್ನು ಹಾಗೂ ಬೇರೆ ಗುರುಗಳನ್ನೂ ನಾನು ನಮಸ್ಕರಿಸುತ್ತೇನೆ.

### ತ್ರಾತಿ ಸ್ಮ ಯತ್ಸಿಂಹವಾಕ್

ವಿದ್ಯಾಶ್ರೀರತಿಹರ್ಯನುವ್ರತಜನಾನ್ಯಸ್ತಾನ್ ಗುರೂನರ್ಚತಿ
ಭಕ್ತ್ಯಾ ನಿತ್ಯಮುದೇಧಿತೈರ್ನತಪದಂ ಸಂಸ್ತೌತಿ ಸಾರವ್ರತಃ ।
ಕಲ್ಯಾಧಿಃ ಗುರುಶಿಕ್ಷಿತಾನತನುಹೃತ್ ತ್ರಾತಿ ಸ್ಮ ಯತ್ಸಿಂಹವಾಕ್
ವಾಕ್ಪುಂಜಾನ್ ವಿಬುಧೈಶ್ಚ ಯಶ್ಚ ಕಲಿಹಾ ತಂ ತತ್ತ್ವತಃ ಸೌಮ್ಯವಾಕ್ ॥

ವಿದ್ಯಾಸಂಪತ್ತಿನಲ್ಲಿ ಆಸಕ್ತರಾದ ಭಗವದ್ಭಕ್ತರಾದ ಜನರನ್ನು ಹೊಂದಿರುವ ಯಾವಗುರುಗಳನ್ನು ಭಕ್ತಿಯಿಂದ ಅರ್ಚನೆ ಮಾಡುತ್ತಾನೋ, ಹಾಗೆ ನಿತ್ಯ ವೃದ್ಧಿಯಾಗುತ್ತಿರುವ ಜ್ಞಾನಾನಂದಾದಿಗುಣಗಳ ಕಾರಣದಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳವರನ್ನು ಯಾವ ಭಗವಂತನ ಭಕ್ತನಾದವನು ಸ್ತುತಿಮಾಡುತ್ತಾನೋ, ಯಾರ ಹೃದಯವು ವಿಶಾಲವಾಗಿದ್ದು ಮಾತು ಸಿಂಹದಂತೆ ಇದ್ದು ಕಲಿಯಿಂದ ಒದಗುವ ಮಾನಸೀಪೀಡೆಯನ್ನು ನಿವಾರಿಸುತ್ತಾ ಗುರುಗಳ ಶಿಕ್ಷಣೆಯಿಂದ ಹೊಂದಿದ ವಾಕ್ಕು-ಸುಮಗಳನ್ನು ರಕ್ಷಿಸುತ್ತಾರೋ ಯಾರು ವಿದ್ವಾಂಸರೊಂದಿಗೆ ಕಲಹಪ್ರಿಯರೋ ಅಂತಹ ಸೌಮ್ಯವಾದ ಮಾತುಳ್ಳವರೇ ನನ್ನ ಗುರುಗಳು.

### ಶ್ರೀವಲ್ಲಭ ಎಂಬ ಯೋಗಿಶ್ರೇಷ್ಠರು

ಜ್ಞಾನವೈರಾಗ್ಯಭಕ್ತ್ಯಾದಿಗುಣಪುಷ್ಪಾರ್ಚಿತಾಚ್ಯುತಾನ್ ।
ಶ್ರೀವಲ್ಲಭಾಖ್ಯಯೋಗೀಂದ್ರಾನ್ ಸೌಮ್ಯಹಂ ತತ್ಕೃಪಾಬಲಃ ॥

ಜ್ಞಾನವೈರಾಗ್ಯಭಕ್ತಿಮೊದಲಾದ ಗುಣಗಳೆಂಬ ಹೂವುಗಳಿಂದ ಅಚ್ಯುತನನ್ನು ಅರ್ಚನೆ ಮಾಡುವ ಶ್ರೀವಲ್ಲಭ ಎಂಬ ಹೆಸರಿನ ಯೋಗಿಶ್ರೇಷ್ಠರನ್ನು ಅವರ ಕೃಪಾಬಲವುಳ್ಳ ನಾನು ನಮಸ್ಕಾರ ಮಾಡುತ್ತೇನೆ.

### ಶ್ರೀನಿವಾಸ ಎಂಬ ಹಂಸಶ್ರೇಷ್ಠರು

ಶ್ರೀನಿವಾಸಪದಾಂಭೋಜಯುಗಲಾಸಕ್ತಮಾನಸಾನ್ ।
ಶ್ರೀನಿವಾಸಾಖ್ಯಹಂಸೇಂದ್ರಾನ್ ಸೌಮ್ಯಹಂ ಬುದ್ಧಿಶುದ್ಧಯೇ ॥

ಶ್ರೀನಿವಾಸನ ಪಾದಕಮಲಗಳೆರಡರಲ್ಲಿ ಆಸಕ್ತವಾದ ಮನಸ್ಸುಳ್ಳ ಶ್ರೀನಿವಾಸ ಎಂಬ ಹೆಸರಿನ ಹಂಸ-ಶ್ರೇಷ್ಠರನ್ನು ಬುದ್ಧಿಶುದ್ಧಿಗಾಗಿ ನಾನು ನಮಸ್ಕರಿಸುತ್ತೇನೆ.

### ಪೂರ್ಣಬೋಧಗುರುಗಳಿಗೆ ನಮನ

ಶ್ರೀಪೂರ್ಣಬೋಧಗುರವೇ ಸರ್ವಾಭೀಷ್ಟಾಪ್ತಿಹೇತವೇ ।
ಪೂರ್ಣಜ್ಞಾನಾದಿತನವೇ ನಮಃ ಪೂಜಿತವಿಷ್ಣವೇ ॥

ಎಲ್ಲ ಅಭೀಷ್ಟಗಳನ್ನು ಹೊಂದುವುದಕ್ಕೆ ಕಾರಣರಾದ, ನಿರಂತರ ವಿಷ್ಣುವನ್ನು ಪೂಜಿಸುವ, ಪೂರ್ಣಜ್ಞಾನ ಪೂರ್ಣಆನಂದಗಳೇ ಶರೀರವಾಗಿ ಉಳ್ಳ ಶ್ರೀಪೂರ್ಣಬೋಧಗುರುಗಳಿಗೆ ನಮಸ್ಕಾರ.

## ಸ್ಥಿರಶಬ್ದದಿಂದ ಸ್ಥೇಮಶಬ್ದನಿಷ್ಪತ್ತಿಯೋ ಅಥವಾ ಸ್ಥಾತೃಶಬ್ದದಿಂದಲೋ?

(ಶ್ರೀನಿಧಿತೀರ್ಥೀಯ) ನನು 'ಪೃಥ್ವಾದಿಭ್ಯ ಇಮನಿಜ್ವಾ' ಇತಿ ಸೂತ್ರೇಣ ಸ್ಥಿರಶಬ್ದಾದ್ ಇಮನಿಚಿ ಕೃತೇ "ಪ್ರಿಯಸ್ಥಿರಸ್ಫಿರೋರುಬಹುಲಗುರುವೃದ್ಧತೃಪ್ರದೀರ್ಘವೃಂದಾರಕಾಣಾಂ ಪ್ರಸ್ಥಸ್ಫವರ್ಬಂಹಿಗರ್ವರ್ಷಿತ್ರಪ್ ದ್ರಾಘಿವೃಂದಾಃ" ಇತಿ ಸೂತ್ರೇಣ ಇಷ್ಠೇಮೇಯಸ್ಸು ಪರತಃ ಪ್ರಿಯಾದೀನಾಂ ಪ್ರಾದ್ಯಾದೇಶವಿಧಾನಾತ್, ಸ್ಥಿರಶಬ್ದಸ್ಯ ಸ್ಥಾದೇಶೇ ಕೃತೇ ಕಿಂ ಸ್ಥೇಮಶಬ್ದೋ ನಿಷ್ಪನ್ನಃ, ಆಹೋಸ್ವಿತ್ ಸ್ಥಾತೃಶಬ್ದಾತ್ 'ತುರಿಷ್ಠೇಮೇಯಸ್ಸು' ಇತಿಸೂತ್ರೇಣ ಏಷು ಪರತಃ ತೃ ಇತ್ಯಸ್ಯ ಲೋಪವಿಧಾನಾತ್ ಜ್ಞಾಪಕಾತ್, ಇಮನಿಚಿ ಕೃತೇ, ಲೋಪೇ, ತೃಲೋಪೇ ಚ ಸತಿ ಸ್ಥೇಮಶಬ್ದೋ ನಿಷ್ಪನ್ನಃ ।

ಸ್ಥೇಮಶಬ್ದವಿಚಾರ - ಸ್ಥಿರಶಬ್ದದ ಮೇಲೆ ಇಮನಿಚ್ ಪ್ರತ್ಯಯ ಮಾಡಿದಾಗ ಸ್ಥಿರಶಬ್ದಕ್ಕೆ ಸ್ಥಾ ಎಂಬ ಆದೇಶವು ಬಂದು ಸ್ಥೇಮಶಬ್ದ ನಿಷ್ಪತ್ತಿಯಾಯಿತೋ ಅಥವಾ ಸ್ಥಾತೃ ಎಂಬ ಶಬ್ದದ ಪರಕ್ಕೆ ಇಮನಿಚ್ ಪ್ರತ್ಯಯ ಇದ್ದಾಗ ತೃಎಂಬ ಅಂಶಕ್ಕೆ ಲೋಪವನ್ನು ವಿಧಾನ ಮಾಡಿರುವುದೇ ಜ್ಞಾಪಕವನ್ನಾಗಿಟ್ಟುಕೊಂಡು ಸ್ಥಾತೃಶಬ್ದದಲ್ಲಿರುವ ತೃಗೆ ಲೋಪಮಾಡಿ ಇಮನಿಚ್ ಪ್ರತ್ಯಯ ಮಾಡಿ ಸ್ಥೇಮಶಬ್ದ ನಿಷ್ಪತ್ತಿಯಾಯಿತೋ ಎಂದು.

ತುರಿಷ್ಠೇಮೇಯಸ್ಸು (ಪಾ.ಸೂ. 6-4-154) = ತುಃ, ಇಷ್ಠೇಮೇಯಸ್ಸು ಎಂದು ಪದಚ್ಛೇದ. ಎರಡು ಪದಗಳು ಈ ಸೂತ್ರದಲ್ಲಿವೆ. ವೃತ್ತಿ - ಇಷ್ಠನ್ ಇಮನಿಚ್ ಈಯಸುನ್ ಇತ್ಯೇತೇಷು ಪರತಃ ತೃಶಬ್ದಸ್ಯ ಲೋಪೋ ಭವತಿ । - ಇಷ್ಠನ್ ಇಮನಿಚ್ ಈಯಸುನ್ ಈ ಪ್ರತ್ಯಯಗಳು ಪರದಲ್ಲಿದ್ದಾಗ ಪೂರ್ವದಲ್ಲಿರುವ ತೃ ಎಂಬ ಶಬ್ದಕ್ಕೆ ಲೋಪವು ಬರುವುದು.

## ಕಲ್ಪದ್ವಯದಲ್ಲಿಯೂ ಸ್ಥೇಮಶಬ್ದನಿಷ್ಪತ್ತಿ

(ಶ್ರೀನಿಧಿತೀರ್ಥಕೃತಾ) — ನಾದ್ಯಃ । ಸ್ಥಿರಶಬ್ದಸ್ಯ ಪೃಥ್ವಾದಿಷ್ವಪಠಿತತ್ವೇನ ತತ ಇಮನಿಚೋಽಸಂಭವಾತ್ । ಅಸತೀಮನಿಚಿ ತನ್ನಿಮಿತ್ತಕಸ್ಥಾದೇಶಸ್ಯಾಪ್ಯಸಂಭವಃ । ನ ದ್ವಿತೀಯಃ । ಇಮನಿಜ್ಗ್ರಹಣಸ್ಯ ಉತ್ತರಾರ್ಥತ್ವೇನ ಜ್ಞಾಪಕತ್ವಾನುಪಪತ್ತೇಃ । ತಥಾ ಚೋಕ್ತಂ ಕಾಶಿಕಾಯಾಮ್ – 'ಇಮನಿಚ್-ಗ್ರಹಣಂ ಉತ್ತರಾರ್ಥಮ್' ಇತಿ । ಮಂಜರ್ಯಾಮಪಿ ನ ಚೇದಮೇವ ಜ್ಞಾಪಕಂ ಭವಿತುಮರ್ಹತಿ । ಉತ್ತರಾರ್ಥತ್ವೇನಾನುಪಪತ್ತಿರಿತಿ ॥ ಅತಃ ಸ್ಥೇಮಶಬ್ದಸ್ಯ ಕಥಂ ಸಾಧುತ್ವಮಿತಿ ಚೇನ್ನ ।

"ಯತ್ಕಸ್ಯಾಮಪಿ ಭಾನುಮಾನ್ನ ಕಕುಭಿ ಸ್ಥೇಮಾನಮಾಲಂಬತೇ ।
ಜಾತಂ ಯದ್ಧನಕಾನನೈಕಶರಣಂ ಪ್ರಾಪ್ತೇನ ದಾವಾಗ್ನಿನಾ ॥" (ನೈಷಧಕಾವ್ಯ)

ಇತಿ ನೈಷಧೇ ಪ್ರಯೋಗದರ್ಶನಾತ್ ತತ್ಸಾಧುತ್ವಾರ್ಥಂ ಸ್ಥಿರಶಬ್ದಸ್ಯ ಪೃಥ್ವಾದಿಷೂಪಸಂಖ್ಯೇಯತ್ವಾತ್ । 'ಇಕೋಽಚಿ ವಿಭಕ್ತೌ' ಇತ್ಯಾದೌ ಅಜಾದಿ(ಅಚ್ಯಾದಿ)ಗ್ರಹಣಸ್ಯ ಉತ್ತರಾರ್ಥತ್ವೇಽಪಿ 'ನ ಲುಮತಾಂಗೇ'ತಿ ನಿಷೇಧಾದ್ಯನಿತ್ಯತ್ವಜ್ಞಾಪಕತ್ವವತ್ ಇಮನಿಚಿ ತೃಲೋಪವಿಧಾನಸ್ಯ ಜ್ಞಾಪಕತ್ವಸ್ಯಾಶ್ರಿತತ್ವಾದ್ ವೇತಿ ॥

ಮೊದಲನೆಯ ಕಲ್ಪ ಸರಿಯಿಲ್ಲ. ಏಕೆಂದರೆ ಸ್ಥಿರ ಎಂಬ ಶಬ್ದವು ಪೃಥು ಮುಂತಾದ ಶಬ್ದಗಳ ಗಣದಲ್ಲಿ ಹೇಳಲ್ಪಟ್ಟಿಲ್ಲ. ಆದ್ದರಿಂದಲೇ ಇಮನಿಚ್ ಪ್ರತ್ಯಯ ಬರುವುದು ಅಸಾಧ್ಯ.ಇಮನಿಚ್ ಪ್ರತ್ಯಯವೇ ಇಲ್ಲದಿದ್ದಾಗ ಸ್ಥಾ ಆದೇಶವು ಬರಲು ಸಾಧ್ಯವಿಲ್ಲ.

ಎರಡನೆಯ ಕಲ್ಪವೂ ಸರಿಯಿಲ್ಲ. ಏಕೆಂದರೆ, 'ತುಃ ಇಷ್ಠೇಮೇಯಸ್ಸು' ಎಂಬ ಸೂತ್ರದಲ್ಲಿ ಇಮನಿಚ್ ಎಂಬ ಪದವನ್ನು ಗ್ರಹಣ ಮಾಡಿದ್ದು ಮುಂದಿನ ಸೂತ್ರಗಳಲ್ಲಿ ಅನುವೃತ್ತಿಯಾಗಲೆಂದಷ್ಟೇ. ಈ ಸೂತ್ರದಲ್ಲಿ ಅದಕ್ಕೇನೂ ಉಪಯೋಗವಿಲ್ಲ.

ಇದನ್ನು ಕಾಶಿಕಾಗ್ರಂಥದಲ್ಲಿ ಹೀಗೆ ತಿಳಿಸಿದ್ದಾರೆ. 'ಇಮನಿಚ್ ಗ್ರಹಣಂ ಉತ್ತರಾರ್ಥಂ' ಎಂಬುದಾಗಿ. ಆದ್ದರಿಂದ ಸ್ಥೇಮ ಎಂಬ ಶಬ್ದವು ಸಾಧುವಲ್ಲ ಎಂಬ ಪ್ರಶ್ನೆಯು ಬರುತ್ತದೆ.

ಇದಕ್ಕೆ ಉತ್ತರ ಹೀಗಿದೆ – ಎರಡೂ ಕಲ್ಪಗಳು ಸರಿಯಾಗಿವೆ.

'ಯತ್ಕಸ್ಯಾಮಪಿ ಭಾನುಮಾನ್ನ ಕಕುಭಿ ಸ್ಥೇಮಾನಮಾಲಂಬತೇ
ಜಾತಂ ಯದ್ಧನಕಾನನೈಕಶರಣಂ ಪ್ರಾಪ್ತೇನ ದಾವಾಗ್ನಿನಾ ।
ಏಷ್ಯೈತತ್ ಭುಜತೇಜಸಾ ವಿಜಿತಯೋಸ್ತಾವತ್ತಯೋರೌಚಿತೀ
ಧಿಕ್ತಂ ವಾಡವಮಂಭಸಿ ದ್ವಿಪಿ ಭಿಯಾ ಯೇನ ಪ್ರವಿಷ್ಟಂ ಪುನಃ ॥
– (ನೈಷಧೀಯಚರಿತಂ 12ಸರ್ಗ ಶ್ಲೋ.81)

ಎಂದು ನೈಷಧಕಾವ್ಯದಲ್ಲಿ ಸ್ಥೇಮ ಎಂಬ ಶಬ್ದವು ಕಂಡಿರುವುದರಿಂದ ಅದು ಸಾಧುವಾಗಲು ಸ್ಥಿರಶಬ್ದವನ್ನು ಪೃಥು ಮೊದಲಾದ ಶಬ್ದಗಳ ಗಣದಲ್ಲಿ ಹೇಳಬೇಕು.

ನೈಷಧಕಾವ್ಯ - ಸ್ಥೇಮಾನಮಾಲಂಬತೇ

* * ಯದಿತಿ ॥ ಭಾನುಮಾನ್ ಭಾಸ್ವಾನ್ ಸೂರ್ಯಃ ಕಸ್ಯಾಮಪಿ ಕಕುಭಿ ಕುತ್ರಾಪಿ ದಿಶಿ ಸ್ಥೇಮಾನಂ ಸ್ಥಿರತ್ವಂ ಸ್ಥಿರಶಬ್ದಸ್ಯ ದೃಢಾದಿಪಾಠಾದ್ "ವರ್ಣದೃಢಾದಿಭ್ಯಃ ಷ್ಯಞ್-ಚೇತಿ ಚಕಾರಾದ್

ಇಮನಿಚ್ । 'ಪ್ರಿಯ ಸ್ಥಿರೇ'ತ್ಯಾದಿನಾ ಸ್ಥಾದೇಶಃ । ನ ಆಲಂಬತೇ ಇತಿ ಯತ್ ತಥಾ ದಾವಾಗ್ನಿನಾ ಘನಂ ಸಾಂದ್ರಂ ಕಾನನಮೇವ ಏಕಶರಣಂ ಪ್ರಾಪ್ತೇ ನ ದ್ವಿತೀಯಾ... ಇತ್ಯಾದಿನಾ ಸಮಾಸಃ ಜಾತಃ ಇತಿ ಯತ್ ಜಾತಮಿತಿ ಭಾವೇ ಕ್ತಃ । ಏಷಾ ಏತದುಭಯಮಪೀತ್ಯರ್ಥವಿಧೇಯ-ಪ್ರಾಧಾನ್ಯಾತ್ ಸ್ತ್ರೀಲಿಂಗಿತಾ । ಏತಸ್ಯ ರಾಜ್ಞಃ ಭುಜತೇಜಸಾ ಭುಜಪ್ರತಾಪೇನ ವಿಜಿತಯೋಃ ತಯೋರ್ಭಾನುದಾವಾಗ್ನ್ಯೋಃ ಔಚಿತೀ ತಾವತ್ ಔಚಿತ್ಯಮೇವ । ಕಿಂತು ತಂ ವಾಡವಂ ವಡವಾಗ್ನಿಂ ಧಿಕ್ ಯೇನ ವಾಡವೇನ ಪುನಃ, ಭಿಯಾ ಭಯೇನ ದ್ವಿಷಿ ಸಹಜದ್ವೇಷಿಣಿ ಅಂಭಸಿ ಜಲೇ ಪ್ರವಿಷ್ಟಮ್ । ಭಾವೇ ಕ್ತಃ । ಸ್ವಶತ್ರುಸಂಶ್ರಯಣಾತ್ ವರಂ ಪಲಾಯನಮೇವೇತಿ ಭಾವಃ । ಅತ್ರ ಸ್ವಾಭಾವಿಕಸ್ಯ ಸೂರ್ಯಾದಿಪರ್ಯಟನಾದೇಃ ಏತದ್ಭೀಹೇತುಕತ್ವೋತ್ಪ್ರೇಕ್ಷಣಾತ್ ಉತ್ಪ್ರೇಕ್ಷಾ ವ್ಯಂಜಕಾಪ್ರಯೋಗಾತ್ ಗಮ್ಯಾ ॥ 81 ॥

ನಳದಮಯಂತೀಚರಿತ್ರೆಯ ಕುರಿತಾದದ್ದು ನೈಷಧಕಾವ್ಯ. ಇಲ್ಲಿ ರಾಜನ ಭುಜಗಳ ಪರಾಕ್ರಮ-ವನ್ನು ವರ್ಣಿಸುವಾಗ ಅವನ ಭುಜಗಳ ತೇಜಸ್ಸು ಸೂರ್ಯನನ್ನು ಹಾಗೂ ಕಾಡ್ಗಿಚ್ಚನ್ನು ಗೆದ್ದಿದೆ ಎಂದು ವರ್ಣಿಸಲಾಗಿದೆ.

ಅದು ಹೀಗೆ – ಪ್ರಬಲನಾದ ಶತ್ರುವಿನಿಂದ ಪರಾಜಿತನಾದಾಗ ಒಬ್ಬ ವ್ಯಕ್ತಿಯು ನಾಚಿಕೆಯಿಂದ ತನ್ನ ಮುಖವನ್ನು ತೋರಿಸದೆ ಆ ಜಾಗವನ್ನು ಬಿಟ್ಟು ಎಲ್ಲ ಕಡೆ ತಿರುಗುವನು. ಏಕೆಂದರೆ ಒಂದೇ ಪ್ರದೇಶದಲ್ಲಿದ್ದರೆ ಮತ್ತೆ ಶತ್ರುವನ್ನು ನೋಡುವ ಪ್ರಸಂಗಬಂದೀತು. ಅಷ್ಟೇ ಅಲ್ಲದೇ ಅವನು ಆಕ್ರಮಿಸದಿರಲು ಯಾರಿಗೂ ಪ್ರವೇಶಿಸಲು ಸಾಧ್ಯವಿಲ್ಲದಿರುವ ಘನವಾದ ಕಾಡನ್ನು ಪ್ರವೇಶಿಸುತ್ತಾನೆ. ಅದೇ ರೀತಿ ಇಲ್ಲಿ ಭಾನುಮಾನ್ ಅಂದರೆ ಸೂರ್ಯನು ಯಾವುದೇ ಕಕುಭಿ ಎಂದರೆ ದಿಕ್ಕಿನಲ್ಲಿ ಸ್ಥೇಮಾನಂ ಸ್ಥಿರತೆಯನ್ನು ಪಡೆಯದೆ ಯಾವಾಗಲೂ ಎಲ್ಲ ಕಡೆ ತಿರುಗುತ್ತಿರುತ್ತಾನೆ. ಹಾಗೆಯೇ ಕಾಡ್ಗಿಚ್ಚು ಗಹನವಾದ ಕಾಡನ್ನೇ ರಕ್ಷಣೆಯನ್ನಾಗಿ ಹೊಂದಿದೆ. ಹೀಗೆ ಆ ರಾಜನ ಭುಜಗಳ ತೇಜಸ್ಸು ಸೂರ್ಯಕಾಡ್ಗಿಚ್ಚುಗಳಿಗಿಂತಲೂ ಅಧಿಕವಾಗಿದೆ.

ಈ ಸಂದರ್ಭದ ನೈಷಧೀಯಚರಿತೆ ವ್ಯಾಖ್ಯಾನದಲ್ಲಿ ಸ್ಥೇಮಶಬ್ದ ಸಮರ್ಥನೆಯನ್ನು ಹೀಗೆ ಮಾಡಿ-ದ್ದಾರೆ — ಸ್ಥೇಮಾ ಇತಿ ॥ ಸ್ಥಿರಶಬ್ದಾತ್ ಭಾವೇ ಪೃಥ್ವಾದಿತ್ವಾತ್ ಇಮನಿಚಿ ಪ್ರಿಯಸ್ಥಿರ .... ಇತಿ ಸ್ಥಾದೇಶಃ । - ಎಂದು.

ಎರಡನೆಯ ಕಲ್ಪದಲ್ಲಾದರೋ ಮುಂದಿನ ಸೂತ್ರದಲ್ಲಿ ಅನುವೃತ್ತಿಯಾಗಲೆಂದು ಸ್ವೀಕರಿಸಿದ ಪದವೂ ಜ್ಞಾಪಕವಾಗಬಹುದು ಎಂದು 'ಇಕೋಽಚಿ ವಿಭಕ್ತೌ' (ಪಾ.ಸೂ. 7-1-73) ಎಂಬ ಸೂತ್ರದಲ್ಲಿ ಅಚಿ ಎಂಬ ಪದವು ಮುಂದಿನ ಸೂತ್ರದಲ್ಲಿ ಅನುವೃತ್ತಿಯಾಗಲೆಂದು ಇದ್ದರೂ 'ನ ಲುಮತಾಂಗಸ್ಯ' (ಪಾ.ಸೂ.5-2-94) ಎಂಬ ನಿಷೇಧವು ಅನಿತ್ಯ ಎಂಬುವುದಕ್ಕೆ ಜ್ಞಾಪಕ-

ವಾಗಿದೆ ಎಂದು ಹೇಳಿದ್ದರಿಂದ ಪ್ರಕೃತದಲ್ಲಿ ಇಮನಿಚ್ ಪ್ರತ್ಯಯ ಇದ್ದಾಗ ಮಾಡಿದ ತೃ ಎಂಬ ಅಂಶದ ಲೋಪವಿಧಾನವು ಜ್ಞಾಪಕವಾಗಬಹುದು.

## ಇಕೋಽಚಿ ವಿಭಕ್ತೌ ಎಂಬಲ್ಲಿನ ಅಚಿಗ್ರಹಣ

'ಇಕೋಽಚಿ ವಿಭಕ್ತೌ' ಸೂತ್ರದ ವೃತ್ತಿ – ಇಗಂತಸ್ಯ ನಪುಂಸಕಸ್ಯ ಅಂಗಸ್ಯ ಅಜಾದೌ ವಿಭಕ್ತೌ ನುಮಾಗಮೋ ಭವತಿ । ಉದಾ - ತ್ರಪುಣೀ ಜತುನೀ ತುಂಬುರುಣೀ ತ್ರಪುಣೇ ಜತುಣೇ ತುಂಬು-ರುಣೇ ।

ಅರ್ಥಾತ್ – ಇಕ್ ಅಕ್ಷರವು ಅರ್ಥಾತ್ ಇ, ಉ, ಋ, ಲೃ ಇವುಗಳನ್ನು ಅಂತ್ಯದಲ್ಲಿ ಹೊಂದಿರುವ ನಪುಂಸಕಲಿಂಗದಲ್ಲಿರುವ ಅಂಗಕ್ಕೆ ನುಮ್ ಎಂಬ ಆಗಮವು ಬರುತ್ತದೆ. ಅಚ್ ಅಕ್ಷರವೇ ಆದಿಯಾಗುಳ್ಳ ವಿಭಕ್ತಿಯು ಪರದಲ್ಲಿ ಇದ್ದಾಗ.

ಉದಾ - ತ್ರಪು ಎಂಬ ಶಬ್ದವು ಇಗಂತವಾದ ಅಂಗ. ಇದರ ಕೊನೆಗೆ ಇಕ್‌ಅಕ್ಷರವಾದ ಉಕಾರ ಇದೆ. ಹಾಗೇ ನಪುಂಸಕಲಿಂಗದ ಶಬ್ದ ಇದರ ಪರಕ್ಕೆ ಅಜಾದಿಯಾದ ಪ್ರತ್ಯಯವು ಪರದಲ್ಲಿ ಇದೆ. ತ್ರಪು+ಔ ಎಂಬುದಾಗಿ. ಔಪ್ರತ್ಯಯಸ್ಥಾನದಲ್ಲಿ ಶೀ ಎಂಬ ಆದೇಶವು ಬಂದಿದೆ. ಹೀಗೆ ತ್ರಪು+ಈ ಎಂದು ಉಳಿದಿದೆ. ಅನಂತರ ನುಮಾಗಮವು ಣತ್ವವು ಬಂದು ತ್ರಪುಣೀ ಎಂದಾಗಿದೆ.

ಇಲ್ಲಿ ಸೂತ್ರದಲ್ಲಿ ಸೇರಿರುವ ಅಚಿ ಎಂಬ ಪದದ ಸಾರ್ಥಕ್ಯವನ್ನು ಚಿಂತಿಸುತ್ತಾ ಕಾಶಿಕಾವೃತ್ತಿಯಲ್ಲಿ ಹೀಗೆ ಹೇಳಿದ್ದಾರೆ –

"ಅಚಿ ಇತಿ ಕಿಮ್? ಉತ್ತರಾರ್ಥಮ್ । ಯದ್ಯೇವಂ, ತತ್ರ ಏವ ಕರ್ತವ್ಯಮ್ । ಇಹ ತು ತತ್ಕರಣಸ್ಯ ಏತತ್ಪ್ರಯೋಜನಮ್, ಹೇ ತ್ರಪೋ। ಇತ್ಯತ್ರ ನುಮ್ ಮಾಭೂತ್ ಇತಿ ನಚೆಸಂಬುದ್ಧ್ಯೋಃ ಇತಿ ನಲೋಪಪ್ರತಿಷೇಧಃ ಸ್ಯಾತ್ । ನನು ಚ 'ನ ಲುಮತಾಂಗಸ್ಯ' ಇತಿ ಪ್ರತ್ಯಯಲಕ್ಷಣೇ ಪ್ರತಿಷಿದ್ಧೇ ವಿಭಕ್ತಿರೇವ ನಾಸ್ತಿ । ಏತದೇವ ಅಚ್ ಗ್ರಹಣಂ ಜ್ಞಾಪಕಮ್ । ಪ್ರತ್ಯಯಲಕ್ಷಣಪ್ರತಿಷೇಧೋ ಅತ್ರ ನ ಭವತಿ ಇತಿ । ತಥಾ ಚ ಸಂಬುದ್ಧಿಗುಣಃ ಕ್ರಿಯತೇ ।"

ಭಾವ - ಇಕೋಽಚಿ ವಿಭಕ್ತೌ ಎಂಬ ಸೂತ್ರದಲ್ಲಿ ಅಚಿ ಎಂಬ ಪದ ಏಕೆ? ಎನ್ನುವ ಪ್ರಶ್ನೆಗೆ ಉತ್ತರ – ಉತ್ತರಾರ್ಥಮ್ ಎಂದು. ಅಂದರೆ ಈ ಸೂತ್ರದಲ್ಲಿ ಅಚಿ ಎಂಬ ಪದವನ್ನು ಸ್ವೀಕರಿಸಿದ್ದು ಮುಂದಿನ ಸೂತ್ರಗಳಲ್ಲಿ ಅನುವೃತ್ತಿಗೋಸ್ಕರ ಎಂದು. ಹೀಗೆ ಉತ್ತರಾರ್ಥಮ್ ಎಂದು ಅಚಿಎಂಬ ಪದದ ಸಾರ್ಥಕ್ಯವನ್ನು ಹೇಳಿದರೂ ಈ ಸೂತ್ರದಲ್ಲಿ ಆ ಪದವು ವ್ಯರ್ಥವೆಂದೇ ಆದೀತು! ಏಕೆಂದರೆ, ಅಚಿ ಎಂಬ ಪದವನ್ನು ಮುಂದಿನ ಸೂತ್ರದಲ್ಲೇ ಹೇಳಬೇಕಾಗಿತ್ತು. ಇಷ್ಟಾದರೂ ಇಲ್ಲಿ ಹೇಳಿದ್ದಕ್ಕೆ ಪ್ರಯೋಜನವೂ ಇದೆ. ಅದೇನೆಂದರೆ ಹೇ ತ್ರಪೋ ಎಂಬ ರೂಪದಲ್ಲಿ ನುಮ್ ಆಗಮವು ಬರದೇ

ಇರಲಿ ಎಂಬುದೇ ಆಗಿದೆ. ಇದರ ವಿವರಣೆ – ಅಚಿ ಎಂಬ ಪದವಿಲ್ಲದೇ ಇದ್ದರೆ ಹಲಾದಿಯಾದ ವಿಭಕ್ತಿಗಳು ಪರದಲ್ಲಿದ್ದಾಗಲೂ ಇಗಂತವಾದ ನಪುಂಸಕಲಿಂಗದಲ್ಲಿರುವ ಅಂಗಕ್ಕೆ ನುಮಾಗಮವು ಬರುತ್ತಿತ್ತು. ಹಾಗಾಗಿ ಭ್ಯಾಂ, ಭ್ಯಸ್ ಮುಂತಾದ ಹಲಾದಿಪ್ರತ್ಯಯಗಳಿದ್ದಾಗ ನುಮ್ಆಗಮದ ನಕಾರದ ಶ್ರವಣವಾಗಬೇಕಿತ್ತು. ಹಾಗಾಗಿ ಅಚಿ ಎಂಬ ಪದವನ್ನು ಹೇಳಿದ್ದು. ಆದರೆ ಅಚಿ ಎಂಬ ಪದವನ್ನು ಹೇಳದಿದ್ದರೂ ಭ್ಯಾಂ, ಭ್ಯಸ್ ಮುಂತಾದ ಪ್ರತ್ಯಯಗಳಿದ್ದಾಗ ನಕಾರಶ್ರವಣಾಪತ್ತಿ ಎಂಬ ದೋಷವಿರುವದಿಲ್ಲ. 'ನಲೋಪಃ ಪ್ರಾತಿಪದಿಕಾಂತಸ್ಯ' (ಪಾ.ಸೂ.) ಎಂಬ ಸೂತ್ರದಿಂದ ನಕಾರ ಲೋಪವಾಗುವುದರಿಂದ. ಅದಕ್ಕಾಗಿ ಅಚಿ ಎಂಬ ಪದವು ಬೇಕಾಗಿಲ್ಲ. ಆದರೆ ಅಚಿ ಎಂಬ ಪದ ಹೇಳದಿದ್ದರೆ ಸಂಬುದ್ಧಿಪ್ರತ್ಯಯವನ್ನು ವ್ಯಾವೃತ್ತಿ ಮಾಡಿದಂತಾಗುವುದಿಲ್ಲ. ಏಕೆಂದರೆ ಅಲ್ಲಿ ನುಮಾಗಮವನ್ನು ಮಾಡಿದರೆ ನಲೋಪಃ ಪ್ರಾತಿಪದಿಕಾಂತಸ್ಯ ಎಂದು ನಲೋಪ ಮಾಡಲು ಸಾಧ್ಯವಿಲ್ಲ. 'ನ ಙಿಸಂಬುದ್ಧ್ಯೋಃ' (ಪಾ.ಸೂ.) ಎಂಬ ಸೂತ್ರದಿಂದ ನಲೋಪವನ್ನು ನಿಷೇಧ ಮಾಡಿದ್ದರಿಂದ. ಹಾಗಾಗಿ ಸಂಬುದ್ಧಿಪ್ರತ್ಯಯವು ಪರದಲ್ಲಿದ್ದಾಗ ನಲೋಪಶ್ರವಣವಾಗಲಿ ಎಂಬ ಆಪತ್ತಿ ಇದ್ದೇ ಇದೆ. ಅದಕ್ಕಾಗಿ ಅಚಿ ಎಂಬ ಪದವು ಸೂತ್ರದಲ್ಲಿ ಹೇಳಲೇ ಬೇಕು. ಆದರೆ ಇದಕ್ಕೂ ಅಚಿ ಎಂಬ ಪದವು ಬೇಡ. ಏಕೆಂದರೆ, ಸಂಬುದ್ಧಿಪ್ರತ್ಯಯವು 'ಸ್ವಮೋರ್ನಪುಂಸಕಾತ್' (ಪಾ.ಸೂ.) ಎಂಬ ಸೂತ್ರದಿಂದ ಲುಕ್ಕಾಗಿರುವುದರಿಂದ 'ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ' (ಪಾ.ಸೂ.) ಎಂಬ ಸೂತ್ರದಿಂದ ಸಂಬುದ್ಧಿಪ್ರತ್ಯಯಲೋಪವಾಗಿದ್ದರೂ ಸಂಬುದ್ಧಿನಿಮಿತ್ತಕಕಾರ್ಯವನ್ನು ಮಾಡ-ಬಹುದು ಎಂದು ಹೇಳಲಾಗುವುದಿಲ್ಲ. ಏಕೆಂದರೆ 'ನ ಲುಮತಾಂಗಸ್ಯ' (ಪಾ.ಸೂ.) ಎಂಬ ಸೂತ್ರದಿಂದ ಲುಕ್ ಎಂಬ ಶಬ್ದದಿಂದ ಲೋಪವನ್ನು ಎಲ್ಲಿ ಹೇಳಿರುತ್ತೇವೋ ಅಲ್ಲಿ 'ಪ್ರತ್ಯಯಲೋಪೇ ಪ್ರತ್ಯಯ-ಲಕ್ಷಣಂ' ಎಂಬ ಸೂತ್ರದ ಪ್ರವೃತ್ತಿಯನ್ನು ಮಾಡಬಾರದು ಎಂದು ನಿಷೇಧ ಮಾಡಲ್ಪಟ್ಟಿದೆ. ಹಾಗಾಗಿ ಅಚಿ ಎಂಬ ಪದವು ವ್ಯರ್ಥವೆಂದಾದೀತು। ಹೀಗೆ 'ವ್ಯರ್ಥಂ ಸತ್ ಕಂಚಿದರ್ಥಂ ಜ್ಞಾಪಯತಿ' ಎಂಬ ನಿಯಮಾನುಸಾರ ಅಚಿ ಎಂಬ ಪದವು 'ನ ಲುಮತಾಂಗಸ್ಯ' ಎಂಬ ಸೂತ್ರವು ಅನಿತ್ಯ ಎಂದು ತಿಳಿಸುತ್ತಿದೆ. ಈ ಪಕ್ಷದಲ್ಲಿ ಸಂಬುದ್ಧಿಪ್ರತ್ಯಯವಿದ್ದಾಗಲೂ 'ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ' ಎಂಬ ಸೂತ್ರವು ಪ್ರವೃತ್ತಿಸಬಹುದಾದ್ದರಿಂದ ಅಚಿ ಎಂಬ ಪದದ ಆವಶ್ಯಕತೆ ಇದ್ದೇ ಇದೆ.

(ಈ ಟಿಪ್ಪಣಿಯಲ್ಲಿ 'ಇಕೋಽಚಿ ವಿಭಕ್ತೌ ಇತ್ಯಾದೌ ಅಜಾದಿಗ್ರಹಣಸ್ಯ ಉತ್ತರಾರ್ಥತ್ವೇಽಪಿ' ಎಂದಿದೆ. ಇಲ್ಲಿ ಅಜಾದಿಗ್ರಹಣಸ್ಯ ಎಂಬಲ್ಲಿ ಅಚ್ಯಾದಿಗ್ರಹಣಸ್ಯ ಎಂದು ಭಾವಿಸುವುದು ಉಚಿತ ಎನಿಸುತ್ತದೆ. ಸೂತ್ರದಲ್ಲಿ ಅಚಿ ಎಂದೇ ಉಚ್ಚರಿತವಾದ ಪದವಿರುವುದರಿಂದ)

## ಕುಂಡಲಗಿರಿಆಚಾರ್ಯರ ಟಿಪ್ಪಣೀ ಮಂಗಲಾಚರಣೆ —

## ಗುರುಗಳ ನಮಸ್ಕಾರದೊಂದಿಗೆ ಸ್ವನಾಮೋಲ್ಲೇಖೇನ ಪ್ರತಿಜ್ಞೆ

(ಪ್ರಣಮ್ಯ ಜಯತೀರ್ಥಾರ್ಯಗುರೂನಥ ಮಹಾಮುನೀನ್ ।
ಕುಂಡಲಾದಿಪದೇನೇದಂ ಲಿಖ್ಯತೇ ಗಿರಿಶರ್ಮಣಾ ॥

ಮಹಾಮುನಿಗಳಾಗಿರುವ ಜಯತೀರ್ಥರೆಂಬ ಪೂಜ್ಯಗುರುಗಳನ್ನು ನಮಸ್ಕರಿಸಿ ಕುಂಡಲ ಎಂಬ ಪದವನ್ನು ಮೊದಲುಳ್ಳ ಗಿರಿಶರ್ಮನಿಂದ ಈ ಟಿಪ್ಪಣಿಯು ಬರೆಯಲ್ಪಡುತ್ತದೆ.

## ಭಾವಬೋಧವು ಮಾಧವನ ಪ್ರೀತಿ ಹಾಗೂ ಸಜ್ಜನರ ಸಂತೋಷಕ್ಕಾಗಿ

ಶ್ರೀಮನ್ನ್ಯಾಯಸುಧೋಪೇತಂ ಭಾವಬೋಧಾಖ್ಯಿಪಂಚಕಮ್ ।
ಸತಾಂ ಸಂತೋಷಣಾಯೈವ ಪ್ರೀಯತಾಂ ತೇನ ಮಾಧವಃ ॥)

ಶ್ರೀಮನ್ನ್ಯಾಯಸುಧಾಗ್ರಂಥದಿಂದ ಕೂಡಿರುವ ಭಾವಬೋಧ ಎಂಬ ವಿಸ್ತೃತಟಿಪ್ಪಣಿಯು ಸಜ್ಜನರ ಸಂತೋಷಕ್ಕಾಗಿಯೇ ರಚಿಸಲ್ಪಟ್ಟಿದೆ. ಇದರಿಂದ ಲಕ್ಷ್ಮೀಪತಿಯು ಪ್ರೀತನಾಗಲಿ.

## ನಾರಾಯಣ ಶುದ್ಧಸೌಖ್ಯೋನ್ನತಿಕಾರಕ

ಶ್ರೀವೇಂಕಟೇಶಾಯ ನಮಃ ॥

ಶ್ರಿಯಃ ಕಾಂತಂ ಸಮ್ಯಗ್ ಗುಣಜಲನಿಧಿಂ ವೀತಕಲುಷಂ
ಜಗಜ್ಜನ್ಮಸ್ಥೇಮಪ್ರಭೃತಿದಮಾಮ್ನಾಯವಿದಿತಮ್ ।
ಸದಾ ಸೇವ್ಯಂ ಸದ್ಭಿರ್ಹೃದಯಕಮಲೇ ಭಾನುಸದೃಶಂ
ಭಜೇ ದೇವಂ ನಾರಾಯಣಮಮಲಸೌಖ್ಯೋನ್ನತಿಕರಮ್ ॥

ನಾರಾಯಣದೇವನನ್ನು ಭಜಿಸುತ್ತೇನೆ. ಈ ನಾರಾಯಣನು ಲಕ್ಷ್ಮೀಪತಿಯಾಗಿದ್ದು, ಸದ್ಗುಣಗಳ ಎಂಬ ಜಲಗಳಿಗೆ ಆಶ್ರಯನಾಗಿದ್ದಾನೆ. ದೋಷರಹಿತನಾಗಿದ್ದಾನೆ. ಜಗತ್ತಿಗೆ ಜನ್ಮಸ್ಥಿತಿಮೊದಲಾದವುಗಳನ್ನು ಕೊಡುವನು. ವೇದದಿಂದ ತಿಳಿಯಲ್ಪಡುವನು. ಸಜ್ಜನರು ತಮ್ಮ ಹೃದಯಮಂದಿರದಲ್ಲಿ ಇವನನ್ನು ಸದಾ ಸೇವಿಸುತ್ತಾರೆ. ಸೂರ್ಯನಂತಿದ್ದಾನೆ. ನಿರ್ಮಲವಾದ ಸುಖದ ಅಭಿವೃದ್ಧಿಯನ್ನುಂಟುಮಾಡುವನು.

## ವೇದವ್ಯಾಸರು ನನ್ನ ಹೃದಯಕಮಲದಲ್ಲಿ ಸದಾ ಇರಲಿ

ಯೇನಾಮ್ನಾಯಗಣಾಃ ಸುಖಾವಗತಯೇ ವ್ಯಸ್ತಾಃ ಪುರಾಣಂ ರವಿಃ
ಯಸ್ಮಾದಾವಿರಭೂತ್ ತದರ್ಥಮಿತಯೇ ಸದ್ ಬ್ರಹ್ಮಸೂತ್ರಂ ಮಹತ್ ।

ಯೇನಾಕಾಶಿ ಪರಂ ಚ ತತ್ವಮಪರಂ ಧ್ವಾಂತಂ ನಿರಸ್ತಂ ಮುಹುಃ
ಸ ವ್ಯಾಸೋಽಸ್ತು ಹೃದಬ್ಜಗೋ ಮಮ ಸದಾ ಶ್ರೀಮಾನ್ ಸುಬೋಧಾಕೃತಿಃ ॥

ಯಾರಿಂದ ವೇದಗಳ ಸಮೂಹಗಳು ಮೋಕ್ಷಪ್ರಾಪ್ತಿಗಾಗಿ ವಿಭಾಗಮಾಡಲ್ಪಟ್ಟವೋ, ಯಾರಿಂದ ಪುರಾಣಗಳು ಆವಿರ್ಭಾವಗೊಂಡವೋ, ಅವುಗಳ ಅರ್ಥಜ್ಞಾನಕ್ಕಾಗಿ ಯಾರಿಂದ ನಿರ್ಮಲವಾದ ಮಹತ್ತಾದ ಬ್ರಹ್ಮಸೂತ್ರವು ಪ್ರಾದುರ್ಭಾವಗೊಂಡಿತೋ, ಯಾರಿಂದ ಪರಾಪರತತ್ವಗಳ ಪ್ರಕಾಶವಾಯಿತೋ, ಹಾಗೂ ಯಾರಿಂದ ಬಹಳ ತಮಸ್ಸು ನಾಶಗೊಂಡಿತೋ ಅಂತಹ ಸಜ್ಞಾನ-ಸ್ವರೂಪಿಯಾದ ವಿದ್ಯಾಸಂಪದ್ಯುಕ್ತರಾದ ವೇದವ್ಯಾಸರೆಂಬ ಸೂರ್ಯನು ನನ್ನ ಹೃದಯಕಮಲದಲ್ಲಿ ಯಾವಾಗಲೂ ನೆಲಸಲಿ.

## ವಾಜಿವದನ ನಿರ್ನಿಮಿತ್ತಕರುಣಾಸಮುದ್ರ

ಅವ್ಯಾಜಕರುಣಾಸಿಂಧುಃ ಬಂಧುಃ ಸರ್ವಸತಾಂ ಗುರುಃ ।
ಸ್ವಾಮೀ ಚ ವಾಜಿವದನಃ ಪ್ರೀಯತಾಂ ಚಿತ್ಸುಖಾಕೃತಿಃ ॥

ಜ್ಞಾನಸುಖಗಳೇ ಆಕಾರವಾಗಿ ಉಳ್ಳ ಎಲ್ಲ ಸಾತ್ವಿಕಜನರಿಗೆ ಗುರುವಾದ ಬಂಧುವಾದ ನಿರ್ನಿಮಿತ್ತ ಕರುಣಾಸಾಗರನಾದ ಹಾಗೂ ಸ್ವಾಮಿಯಾದ ಹಯಗ್ರೀವದೇವನು ಪ್ರೀತನಾಗಲಿ.

## ನಾರಾಯಣನನ್ನು ನಿರ್ದೋಷ ಸಕಲಗುಣಪೂರ್ಣ ಎಂದು ಪ್ರಸಿದ್ಧಿಗೊಳಿಸಿದ ಶ್ರೀಮಧ್ವಾಚಾರ್ಯರು

ಯೇನಾಜ್ಞಾನತಮೋ ನಿರಸ್ತಮಖಿಲಂ ಹೃದ್ದೇಶಗಂ ಗೋಗಣೈಃ
ತ್ರಯ್ಯಂತಾ ಸುಜನಾಶ್ಚ ಸೂತ್ರನಿಚಯಃ ಪದ್ಮಂ ಸಮುಜ್ಜೃಂಭಿತಮ್ ।
ನಿರ್ದೋಷಾಖಿಲಪೂರ್ಣಸದ್ಗುಣಗಣೋ ನಾರಾಯಣಃ ಖ್ಯಾಪಿತಃ
ತಂ ವಂದೇ ಸುಮನೋಗುರುಂ ಮುನಿವರಂ ಶ್ರೀಮದ್ವಭಾನುಂ ಸದಾ ॥

ಯಾರಿಂದ ಎಲ್ಲ ಕಡೆ ಹರಡಿರುವ ಅಜ್ಞಾನವೆಂಬ ಹೃದಯದೇಶದಲ್ಲಿರುವ ತಮಸ್ಸು ತಮ್ಮ ಮಾತುಗಳಿಂದ ನಾಶಗೊಂಡಿತೋ, ಯಾರಿಂದ ವೇದಗಳು ವೇದಾಂತಗಳು ಸಜ್ಜನರು ಹಾಗೂ ಸೂತ್ರಗಳು ಎಂಬ ಪದ್ಮಗಳು ಅರಳಿಸಲ್ಪಟ್ಟವೋ, ಯಾರಿಂದ ನಾರಾಯಣನು ದೋಷರಹಿತನಾಗಿ ಅಖಿಲಪೂರ್ಣಸದ್ಗುಣಗಳ ಸಮೂಹವುಳ್ಳವನಾಗಿ ಪ್ರಸಿದ್ಧಿಗೆ ತರಲ್ಪಟ್ಟನೋ ಅಂತಹ ದೇವತೆಗಳ ಗುರುವಾದ ಮುನಿಶ್ರೇಷ್ಠರಾದ ಮಧ್ವಾಚಾರ್ಯರೆಂಬ ಸೂರ್ಯನನ್ನು ಯಾವಾಗಲೂ ನಮಸ್ಕ-ರಿಸುತ್ತೇನೆ.

### ಪ್ರತಿವಾದಿರಹಿತರನ್ನಾಗಿ ಮಾಡುವ ಶ್ರೀ ಜಯಾರ್ಯರು

ಪೀತ್ವಾ ಸುಧಾಂ ಯದೀಯಾಂ ತು ಸತ್ಸಂಪತ್ತ್ಯಾ ಸಮಾಸತೇ ।
ವಿದ್ವಜ್ಜನಾ ನಿಃಸಪತ್ನಂ ತಂ ಜಯಾರ್ಯಂ ಭಜೇಽನ್ವಹಮ್ ॥

ಯಾವ ವಿದ್ವಜ್ಜನರು ಯಾರ ಸುಧೆಯನ್ನು ಕುಡಿದು ಒಳ್ಳೆಯ ಸಂಪತ್ತಿನಿಂದ ಕೂಡಿದವರಾಗಿ ಪ್ರತಿವಾದಿರಹಿತರಾಗುವರೋ ಅಂತಹ ಜಯತೀರ್ಥರನ್ನು ಹಗಲಿರುಳೂ ಭಜಿಸುತ್ತೇನೆ.

### ವಾದಿಗೋತ್ರಭೇದಕವಾದ ಶ್ರೀವ್ಯಾಸರಾಜರ ಪ್ರಬಂಧಗಳು

ಯತ್ ಪ್ರಣೀತಪ್ರಬಂಧೇನ ಭಿದುರೇಣ ವಿಪಶ್ಚಿತಃ ।
ಭೇತ್ತಾರೋ ವಾದಿಗೋತ್ರಾಣಾಂ ಸೇವೇ ತಂ ವ್ಯಾಸಯೋಗಿನಮ್ ॥

ಯಾರು ರಚನೆ ಮಾಡಿದ ಗ್ರಂಥಗಳೆಂಬ ಕತ್ತಿಯಿಂದ ವಿದ್ವಾಂಸರು ಪ್ರತಿವಾದಿಗಳ ವಂಶವನ್ನೇ ಭೇದಿಸುವರೋ ಅಂತಹ ವ್ಯಾಸಯೋಗಿಗಳನ್ನು ಸೇವಿಸುತ್ತೇನೆ.

### ಸುಧಾಸ್ವಾದವನ್ನು ತಿಳಿಸಿಕೊಟ್ಟ ರಾಮಚಂದ್ರತೀರ್ಥರು

ಸ್ವಾದಿಮಾನಂ ಸುಧಾಯಾ ಯಃ ಸಮ್ಯಕ್ ಜ್ಞಾಪಿತವಾನ್ ಭುವಿ ।
ರಾಮಚಂದ್ರಂ ಗುರುಂ ನೌಮಿ ವಿದ್ವನ್ಮುಕುಟಮಂಡನಮ್ ॥

ಯಾರು ಸುಧೆಯ ಸ್ವಾದವನ್ನು ಭೂಮಿಯಲ್ಲಿ ಸಾತ್ವಿಕರಿಗೆ ಚೆನ್ನಾಗಿ ತಿಳಿಸಿಕೊಟ್ಟರೋ ಅಂತಹ ವಿದ್ವತ್ಸಮೂಹಕ್ಕೆ ಶಿರೋಮಣಿಯಾಗಿರುವ ರಾಮಚಂದ್ರಗುರುಗಳನ್ನು ನಮಸ್ಕರಿಸುತ್ತೇನೆ.

### ಸಭೆಗಳಲ್ಲಿ ಜಯಶಾಲಿಗಳಾದ ಲಕ್ಷ್ಮೀನಾಥತೀರ್ಥರು ನನ್ನ ಗುರುಗಳು

ಸಭಾಸು ಜಯಸಂಪನ್ನಂ ಸರ್ವಶಾಸ್ತ್ರೇಷು ಕೋವಿದಮ್ ।
ಲಕ್ಷ್ಮೀನಾಥಮುನಿಂ ಶಾಂತಂ ಮಮ ದೇಶಿಕಮಾಶ್ರಯೇ ॥

ವಿದ್ವತ್ಸಭೆಗಳಲ್ಲಿ ಜಯವನ್ನು ಹೊಂದುತ್ತಿದ್ದ, ಎಲ್ಲ ಶಾಸ್ತ್ರಗಳಲ್ಲಿ ವಿದ್ವಾಂಸರಾದ, ನನ್ನ ಗುರುಗಳಾದ ಶಾಂತಸ್ವಭಾವದವರಾದ ಅಥವಾ ಭಗವಂತನಲ್ಲೇ ನೆಟ್ಟ ಬುದ್ಧಿಯುಳ್ಳ ಲಕ್ಷ್ಮೀನಾಥಮುನಿಗಳನ್ನು ಆಶ್ರಯಿಸುತ್ತೇನೆ.

### ಸಜ್ಜನರು ಕಾರುಣ್ಯತೋರಲಿ

ಸಂತೋ ಮಯಿ ಮಹಾತ್ಮಾನಃ ಶಾಸ್ತ್ರೇ ಸಂತು ದಯಾಲವಃ ।
ಮದೀಯದೋಷಾನ್ ವಿಸ್ಮೃತ್ಯ ಭಕ್ತಿಲೇಶೇನ ತೋಷಿತಾಃ ॥

ಶಾಸ್ತ್ರಜ್ಞರಾದ ಮಹಾತ್ಮರಾದ ಸಜ್ಜನರು ನನ್ನ ವಿಷಯದಲ್ಲಿ ಕಾರುಣ್ಯವನ್ನು ತೋರಲಿ. ನನ್ನ ದೋಷ-ಗಳನ್ನು ಮರೆತು ಭಕ್ತಿಯ ಒಂದಂಶದಿಂದ ಸಂತುಷ್ಟರಾಗಿ ಆಗಲಿ.

### ಈ ಟಿಪ್ಪಣಿಯ ರಚನೆಗೆ ವ್ಯಾಸರಾಜರ ಭಕ್ತನಾದ ಸೌಂದರ್ಯರಾಜಪಂಡಿತನ ಅನುಮೋದನೆ

ವ್ಯಾಸತೀರ್ಥಪದಾಂಭೋಜಭಕ್ತಿಪೂರ್ಣೇನ ಧೀಮತಾ ।
ಸೌಂದರ್ಯರಾಜಸನ್ನಾಮ್ನಾ ಪಂಡಿತೇನಾನುಮೋದಿತಃ ॥

ವ್ಯಾಸತೀರ್ಥರ ಪಾದಕಮಲಗಳಲ್ಲಿ ಪೂರ್ಣವಾದ ಭಕ್ತಿಯನ್ನು ಹೊಂದಿದ ಬುದ್ಧಿವಂತನಾದ ಸೌಂದರ್ಯರಾಜ ಎಂಬ ಒಳ್ಳೆಯ ಹೆಸರಿನ ಪಂಡಿತನಿಂದ ಪ್ರೇರಿಸಲ್ಪಟ್ಟವನಾಗಿ,

### ಕೋಂಡಿಭಟ್ಟರ ಪುತ್ರ ಕುಂಡಲಗಿರಿ ಆಚಾರ್ಯರು

ಕುಂಡಲಾದಿಗಿರಿಃ ಸೂರಿಃ ಕೋಂಡಿಭಟ್ಟತನೂದ್ಭವಃ ।
ಲಕ್ಷ್ಮೀನಾಥಮುನೇಃ ಶಿಷ್ಯೋ ವ್ಯಾಕರೋಮಿ ಸುಧಾಮಿಮಾಮ್ ॥

ಕೋಂಡಿಭಟ್ಟನ ಪುತ್ರನಾದ, ಲಕ್ಷ್ಮೀನಾಥಮುನಿಗಳ ಶಿಷ್ಯನಾದ, ಕುಂಡಲ ಎಂಬ ಪದವನ್ನು ಮೊದಲುಳ್ಳ ಗಿರಿ ಎಂಬ ವಿದ್ವಾಂಸನು ಈ ಸುಧೆಯನ್ನು ವ್ಯಾಖ್ಯಾನಿಸುತ್ತೇನೆ.

### ಸುಖಬೋಧಕ್ಕಾಗಿ ನನ್ನ ಈ ಶ್ರಮ ಸಫಲ

ಯದ್ಯಪ್ಯೇಷಾ ಸುಧಾ ಪೂರ್ವದೇಶಿಕೈಸ್ತು ಪ್ರಪಂಚಿತಾ ।
ತಥಾಪಿ ಸುಖಬೋಧಾರ್ಥಂ ಮಮಾಯಂ ಸಫಲಃ ಶ್ರಮಃ ॥

ಯದ್ಯಪಿ ಈ ಸುಧೆಯು ಪೂರ್ವಜರಾದ ಅನೇಕ ಗುರುಗಳಿಂದ ವಿಸ್ತಾರವಾಗಿ ವ್ಯಾಖ್ಯಾನಿಸಲ್ಪಟ್ಟಿದೆ. ಆದರೂ ಸುಖವಾಗಿ ತಿಳಿಯಲೆಂದು ನನ್ನ ಈ ಶ್ರಮ ಸಾರ್ಥಕವಾಗಿದೆ.

### ಇಮನಿಚ್ ಪ್ರತ್ಯಯಸಾಧಕವಾದ ಎರಡು ಸೂತ್ರಗಳು

(ಕುಂಡಲ) – ಸ್ಥೇಮಾ = ಸ್ಥಿತಿಃ । 'ಷ್ಠಾ ಗತಿನಿವೃತ್ತೌ' ಇತ್ಯಸ್ಮಾದ್ಧಾತೋಃ 'ಹೃಭೃ– ಧೃಜೃಸ್ತೃಸೃಭ್ಯ ಇಮನಿಚ್' ಇತಿ ಸೂತ್ರೇ 'ಇಮನಿಚ್' ಇತಿ ಯೋಗವಿಭಾಗಾದ್ವಾ 'ಉಣಾದಯೋ ಬಹುಲಮ್' ಇತಿ ಬಹುಲಗ್ರಹಣಾದ್ ವಾ ಇಮನಿಚ್ ಪ್ರತ್ಯಯೇ ಗುಣೇ ಚ ಸ್ಥೇಮನ್–ಶಬ್ದನಿಷ್ಪತ್ತಿಃ । ತತ್ರೋ–ದಾಹರಣಂ ತು ಹರಿಮಾ – ಭರಿಮಾ ಧರಿಮಾ – ಇತ್ಯಾದಿ ।

ಸ್ಥೇಮ ಎಂಬ ಶಬ್ದಕ್ಕೆ ಸ್ಥಿತಿ ಎಂದರ್ಥ. ಇಮನಿಚ್ ಎಂಬ ಪ್ರತ್ಯಯವು 'ಷ್ಠಾ ಗತಿನಿವೃತ್ತೌ' ಎಂಬ ಧಾತುವಿನ ಪರದಲ್ಲಿ ಬರುವುದು. ಇದಕ್ಕೆ ಉಪಾಯವೆರಡು. ಹೃ, ಭೃ, ಧೃ, ಜೃ, ಸ್ತೃ, ಸೃಭ್ಯ

ಇಮನಿಚ್ - ಎಂಬ ಸೂತ್ರದಲ್ಲಿ 'ಇಮನಿಚ್' ಎಂದು ವಿಭಾಗ ಮಾಡಿದ ಸೂತ್ರದಲ್ಲಿ ಮೊದಲನೆಯ ಭಾಗದ ಸೂತ್ರದಲ್ಲಿ ತಿಳಿಸದೇ ಇರುವ ಇತರ ಧಾತುಗಳ ಮೇಲೂ ಇಮನಿಚ್ ಬರುತ್ತದೆ ಎಂದು ಅರ್ಥವನ್ನು ಕಲ್ಪಿಸಿ ಸ್ಥಾಧಾತುವಿನ ಮೇಲೂ ಇಮನಿಚ್ ಪ್ರತ್ಯಯ ಮಾಡಬಹುದು. ಇತರ ಧಾತುಗಳು ಎಂದರೆ ಪ್ರಯೋಗಾನುಗುಣವಾಗಿ ತಿಳಿಯಬೇಕು. ಆದ್ದರಿಂದಲೇ 'ಯೋಗವಿಭಾಗಾತ್ ಇಷ್ಟಸಿದ್ಧಿಃ' ಎಂಬ ಪರಿಭಾಷೆಯು ಇದೆ ಎಂದು.

ಅಥವಾ ಹರಿಮಾ, ಭರಿಮಾ, ಘರಿಮಾ ಮುಂತಾದ ಶಬ್ದಗಳನ್ನು ಸಾಧಿಸುವಾಗ 'ಉಣಾದಯೋ ಬಹುಲಮ್' ಎಂದು ಬಹುಲಗ್ರಹಣವನ್ನು ಅವಲಂಬಿಸಿದಂತೆ ಇಲ್ಲಿಯೂ ಅವಲಂಬಿಸಬೇಕು.

### ಉಣಾದಯೋ ಬಹುಲಮ್

** 'ಉಣಾದಯೋ ಬಹುಲಮ್" (3-3-1) - ವರ್ತಮಾನೇ ಇತ್ಯೇವ । ಸಂಜ್ಞಾಯಾಮಿತಿ ಚ । ಉಣಾದಯಃ ಪ್ರತ್ಯಯಾಃ ವರ್ತಮಾನೇ ಅರ್ಥೇ ಸಂಜ್ಞಾಯಾಂ ವಿಷಯೇ ಬಹುಲಂ ಭವಂತಿ ।

वर्तमान इत्येव, संज्ञायाम् इति च। उणादयः प्रत्ययाः वर्तमानेऽर्थे संज्ञायां विषये बहुलं भवन्ति। यतो विहितास्ततोऽन्यत्र अपि भवन्ति। केचिदविहिता एव प्रयोगत उन्नीयन्ते। कृवापाजिमिस्वदिसाध्यशूभ्य उण्। कारुः। वायुः। पायुः। जायुः। मायुः। स्वादुः। साधुः। आशुः। वाहुलकं प्रकृतेस्तनुदृष्टेः प्रायसमुच्चयनादपि तेषाम्। कार्यसशेषविधेश्च तदुक्तं नैगमरूढिभवं हि सुसाधु ।१। नाम च धातुजमाह निरुक्ते व्याकरणे शकटस्य च तोकम्। यन् न पदार्थविशेषसमुत्थं प्रत्ययतः प्रकृतेश्च तदूह्यम्। २। संज्ञासु धातुरूपाणि प्रत्ययाश्च ततः परे। कार्याद् विद्यादनूबन्धम् एतच्छास्त्रमुणादिषु। ३। (ಕಾಶಿಕಾವೃತ್ತಿ)

ಉಣಾದಿಪ್ರತ್ಯಯಗಳು ವರ್ತಮಾನಾರ್ಥದಲ್ಲಿ ಸಂಜ್ಞಾವಿಷಯದಲ್ಲಿ ಬಹುಲವಾಗಿ ಬರುತ್ತವೆ. ಅಂದರೆ ಯಾವುದರಿಂದ ವಿಹಿತವಾಗಿದೆಯೋ ಅದನ್ನು ಬಿಟ್ಟು ಬೇರೆಯದರಿಂದಲೂ ಅವು ಬರುತ್ತದೆ. ಕೆಲವು ವಿಧಾನಮಾಡದೇ ಇದ್ದ ಪ್ರತ್ಯಯಗಳನ್ನೂ ಪ್ರಯೋಗದಿಂದ ಊಹಿಸಿಕೊಳ್ಳಬೇಕು ಎಂದಿ-ದ್ದಾರೆ. ಉಣಂತ ಶಬ್ದಕ್ಕೆ ಉದಾ — ಕಾರುಃ, ವಾಯುಃ, ಪಾಯುಃ ಮುಂತಾದವುಗಳು.

### ಆಮ್ನಾಯಸ್ಮೃತಿ - ಅಲ್ಪಾಚ್ತರಮ್

(ಪರಿಮಳ)– 'ನಾಸಿಕಾಸ್ತನಯೋರ್ಧ್ಮಾಧೇಟೋಃ' ಇತಿ ನಿರ್ದೇಶಾತ್ 'ಅಲ್ಪಾಚ್ತರಮ್' ಇತ್ಯಸ್ಯ ಪ್ರಾಯಿಕತ್ವಾತ್ ವಾ ಅಭ್ಯರ್ಹಿತತ್ವಾತ್ ವಾ ಆಮ್ನಾಯಶಬ್ದಸ್ಯ ಪೂರ್ವನಿಪಾತಃ ।

'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬಲ್ಲಿ ಆಮ್ನಾಯ, ಸ್ಮೃತಿ ಪದಗಳಲ್ಲಿ ಪೂರ್ವ-ನಿಪಾತವು ಅರ್ಥಾತ್ ಪೂರ್ವಪ್ರಯೋಗವು ಯಾವುದಕ್ಕೆ ಎಂಬ ಪ್ರಶ್ನೆ ಬಂದಾಗ ಅದಕ್ಕೆ ಉತ್ತರ-

ವಾಗಿ ಪಾಣಿನಿಯ 'ನಾಸಿಕಾಸ್ತನಯೋರ್ಧ್ಮಾಧೇಟೋಃ' ಎಂಬ ಸೂತ್ರನಿರ್ದೇಶವು ಆಮ್ನಾಯ-ಸ್ಮೃತಿ ಎಂಬ ಪ್ರಯೋಗ ಮಾಡುವುದಕ್ಕೆ ಉಪೋದ್ಬಲಕವಾಗಿದೆ. ಈ ಸೂತ್ರದಲ್ಲಿ ನಾಸಿಕಾ-ಸ್ತನಶಬ್ದಗಳಲ್ಲಿ ಯದ್ಯಪಿ ಅಲ್ಪಾಚ್‌ಕವಾದ ಸ್ತನಶಬ್ದವನ್ನು ಮೊದಲು ಪ್ರಯೋಗಿಸಬೇಕಿತ್ತು. ಆದರೂ ಹಾಗೆ ಮಾಡದೆ ಹೇಳಿದ್ದರಿಂದ ಅದರಂತೆ ಇಲ್ಲಿಯೂ ಆಮ್ನಾಯಸ್ಮೃತಿಶಬ್ದಗಳಲ್ಲಿ ಸ್ಮೃತಿಶಬ್ದವು ಅಲ್ಪಾಚ್‌ಕವಾದರೂ ಅದನ್ನು ಮೊದಲು ಪ್ರಯೋಗಿಸದೆ ಆಮ್ನಾಯಶಬ್ದವನ್ನೇ ನಾಸಿಕಾಶಬ್ದದಂತೆ ಪ್ರಯೋಗ ಮಾಡಿದ್ದಾರೆ ಎಂದು ತಿಳಿಯಬೇಕು.

## ದ್ವಂದ್ವೇ ಘಿ - ಅಜಾದ್ಯದಂತಮ್ - ಅಲ್ಪಾಚ್ತರಮ್ ಸೂತ್ರಗಳ ವಿಚಾರ

(ವಾಕ್ಯಾರ್ಥಚಂದ್ರಿಕಾ) —

'ದ್ವಂದ್ವೇ ಘಿ' । ದ್ವಂದ್ವೇ ಘಿಸಂಜ್ಞಂ ಪೂರ್ವಂ ಸ್ಯಾತ್ । ಹರಿಶ್ಚ ಹರಶ್ಚ ಹರಿಹರೌ । ಅನೇಕ-ಪ್ರಾಪ್ತಾವೇಕತ್ರ ನಿಯಮೋಽನಿಯಮಃ ಶೇಷೇ । ಹರಿಗುರುಹರಾಃ ಹರಿಹರಗುರವಃ । ನ ಚ ದ್ವಂದ್ವೇ ಘೀತ್ಯಸ್ಯ ಪಟುಗುಪ್ತೌ ಇತ್ಯತ್ರ 'ಅಜಾದ್ಯದಂತಮ್' ಇತ್ಯಸ್ಯ ಚ ಅಜಾದ್ಯದಂತಮ್। ಇದಂ ದ್ವಂದ್ವೇ ಪೂರ್ವಂ ಸ್ಯಾತ್। ಈಶಕೃಷ್ಣೌ । ಬಹುಷು ಅನಿಯಮಃ । ಅಶ್ವರಥೇಂದ್ರಾಃ । ಇಂದ್ರಾಶ್ವ-ರಥಾಃ । ಘ್ಯಂತಾದಜಾದ್ಯದಂತಂ ವಿಪ್ರತಿಷೇಧೇನ । ಇಂದ್ರಾಗ್ನೀ । ಈಶಕೃಷ್ಣೌ ಇತ್ಯತ್ರ ಸಾವಕಾಶತ್ವೇನ ಇಂದ್ರಾಗ್ನೀ ಇತ್ಯತ್ರೇವ ಆಮ್ನಾಯಸ್ಮೃತೀ ಇತ್ಯತ್ರಾಪ್ಯುಭಯಪ್ರಸಂಗೇ ವಿಪ್ರತಿಷೇಧೇ ಪರಂ ಕಾರ್ಯಮ್ ಇತಿ ಅಜಾದ್ಯದಂತತ್ವಾತ್ ಆಮ್ನಾಯಶಬ್ದಸ್ಯ ಪೂರ್ವನಿಪಾತಸಂಭವೇಽಪಿ ಅಜಾದ್ಯದಂತಮ್ ಇತ್ಯಸ್ಯ ಪೂರ್ವೋಕ್ತೇ 'ಅಲ್ಪಾಚ್‌ತರಮ್' ಇತ್ಯಸ್ಯ ಅಲ್ಪಾಚ್‌ತರಮ್ । 'ಶಿವಕೇಶವೌ, ಪ್ಲಕ್ಷನ್ಯಗ್ರೋಧೌ' ಇತ್ಯತ್ರ ಸಾವಕಾಶತ್ವೇನ ವಾಗೀಶೌ ಇತ್ಯತ್ರೇವ ಅತ್ರಾಪ್ಯು-ಭಯಪ್ರಸಂಗೇ ಪೂರ್ವನ್ಯಾಯೇನ 'ಅಲ್ಪಾಚ್‌ತರತ್ವಾತ್' ಸ್ಮೃತಿಶಬ್ದಸ್ಯೈವ ಪೂರ್ವನಿಪಾತಃ ಸ್ಯಾದಿತಿ ವಾಚ್ಯಮ್, 'ಲಕ್ಷಣಹೇತ್ವೋಃ ಕ್ರಿಯಾಯಾಃ' 'ಸಮುದ್ರಾಭ್ರಾದ್ಘಃ' ಇತ್ಯಾದಿಷು ಯಥಾಯಥಂ ವ್ಯಭಿಚಾರಂ ಕುರ್ವತಾ ಸೂತ್ರಕೃತಾ ಏತತ್ಪ್ರಕರಣಸ್ಯ ಅನಿತ್ಯತ್ವಜ್ಞಾಪನಾತ್ "ಅಲ್ಪಾಚ್‌ತರಮ್ ಇತ್ಯಸ್ಯ ಅನಿತ್ಯತ್ವಾತ್ ಶಕುನಿಸೂತ್ರಯೋರಿತಿ ಸಾಧು" ಇತಿ ವದತಾ ಟೀಕಾಕೃತಾ ತದ-ನಿತ್ಯತ್ವಸ್ಯೋಕ್ತತ್ವಾಚ್ಚ । 'ಅಲ್ಪಾಚ್‌ತರಮ್' ಇತಿ ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನ - ಇತಿ ಯುಕ್ತಿಪಾದೀಯಟೀಕಾಕಾರೀಯೋಕ್ತಿಶ್ಚ ತನ್ನಿತ್ಯತ್ವಾಭ್ಯುಪಗಮವಾದೇನ ಪ್ರವೃತ್ತಾ ಇತಿ ನ ವಿರೋಧಃ ಇತಿ ದ್ರಷ್ಟವ್ಯಮ್ ॥

ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ - ಇಲ್ಲಿ ಆಮ್ನಾಯ ಸ್ಮೃತಿ ಪದಗಳಲ್ಲಿ

ಪೂರ್ವನಿಪಾತವನ್ನು ಆಮ್ನಾಯಪದಕ್ಕೆ ಸಮರ್ಥನೆ ಮಾಡಿದ್ದಾರೆ. ಇದಕ್ಕೆ ಪೂರಕವಾಗಿ ತಿಳಿಯ-ಬೇಕಾದ ಅಂಶಗಳಿವೆ. ಅದು ಹೀಗೆ –

'ದ್ವಂದ್ವೇ ಘಿ' (ಪಾ.ಸೂ.2-2-32) 'ಅಜಾದ್ಯದಂತಮ್' (ಪಾ.ಸೂ. 2-2-33), 'ಅಲ್ಪಾಚ್ ತರಮ್' (ಪಾ.ಸೂ. 2-2-34) – ಈ ಮೂರು ಸೂತ್ರಗಳನ್ನು ವಿಮರ್ಶಿಸಿದಾಗ ಕೊನೆಗೆ ಆಮ್ನಾಯಶಬ್ದಕ್ಕೆ ಪೂರ್ವನಿಪಾತ ಎಂಬುದು ತಿಳಿಯುವುದು. 'ದ್ವಂದ್ವೇ ಘಿ' - ದ್ವಂದ್ವಸಮಾಸದಲ್ಲಿ ಘಿಸಂಜ್ಞೆ ಯಾವುದಕ್ಕದೆಯೋ ಅದನ್ನು ಮೊದಲು ಪ್ರಯೋಗಿಸಬೇಕು. ಉದಾ - ಹರಿಶ್ಚ ಹರಶ್ಚ ಎಂದು ಹರಿಹರಶಬ್ದಗಳಿಗೆ ದ್ವಂದ್ವಸಮಾಸಮಾಡಿದಾಗ ಹರಿ ಎಂಬ ಶಬ್ದಕ್ಕೆ ಘಿಸಂಜ್ಞೆ ಇರುವುದರಿಂದ ಪೂರ್ವನಿಪಾತವನ್ನು ಮಾಡಬೇಕು. ಆಗ ಹರಿಹರೌ ಎಂದು ಸಿದ್ಧವಾಗುವುದು. ಘಿಸಂಜ್ಞೆಯನ್ನು ಹೇಳುವ ಸೂತ್ರ - 'ಶೇಷೋ ಘ್ಯಸಖಿ' ಶೇಷಃ ಘಿ ಅಸಖಿ ಎಂದು ಪದಚ್ಛೇದ. ಇಲ್ಲಿ ಕಾಶಿಕಾವೃತ್ತಿ – 'ಹ್ರಸ್ವಃ ಇತಿ ವರ್ತತೇ । ಶೇಷಃ ಅತ್ರ ಘಿಸಂಜ್ಞಃ ಭವತಿ । ಸಖಿಶಬ್ದಂ ವರ್ಜಯಿತ್ವಾ । ಕಶ್ಚ ಶೇಷಃ? ಹ್ರಸ್ವಇವರ್ಣಉವರ್ಣಾಂತಂ ಯತ್ ನ ಸ್ತ್ರ್ಯಾಖ್ಯಮ್, ಸ್ತ್ರ್ಯಾಖ್ಯಂ ಚ ಯತ್ ನ ನದೀ-ಸಂಜ್ಞಕಂ ಸಃ ಶೇಷಃ ।' - ಘಿಸಂಜ್ಞೆಯು ಸಖಿಶಬ್ದವನ್ನು ಬಿಟ್ಟು ಹ್ರಸ್ವ ಇವರ್ಣಉವರ್ಣಾಂತ-ಶಬ್ದಗಳಿಗೆ ಬರುವುದು.

ಇನ್ನು ಮೂರು ಅಥವಾ ಹೆಚ್ಚಿನ ಶಬ್ದಗಳಿಗೆ ದ್ವಂದ್ವಸಮಾಸ ಮಾಡಿದಾಗ ಒಂದಕ್ಕೆ ಪೂರ್ವನಿಪಾತ ನಿಯಮವನ್ನಿಟ್ಟುಕೊಂಡು ಉಳಿದುದರಲ್ಲಿ ಪೂರ್ವನಿಪಾತವಿಷಯದಲ್ಲಿ ನಿಯಮವಿಲ್ಲ. ಉದಾ-ಹರಣೆಗೆ ಹರಿಗುರುಹರಾಃ ಎಂಬಲ್ಲಿ ಹರಿಶಬ್ದಕ್ಕೇ ಪೂರ್ವನಿಪಾತ, ಹರಿಹರಗುರವಃ ಎನ್ನುವಲ್ಲಿ-ಯೂ ಹರಿಶಬ್ದಕ್ಕೇ ನಿಪಾತ. ಆದರೆ ಹರಿಶಬ್ದ ಬಿಟ್ಟು ಉಳಿದ ಶಬ್ದಗಳಲ್ಲಿ ಪೂರ್ವನಿಪಾತನಿಯಮ-ವಿಲ್ಲ. ಹಾಗಾಗಿ ಒಂದು ಕಡೆ ಹರಿಗುರುಹರಾಃ ಎಂದು ಗುರುಶಬ್ದವು ಮೊದಲಿಗೆ ಇದೆ. ಹರಿಹರ-ಗುರವಃ ಎಂಬಲ್ಲಿ ಹರಶಬ್ದ ಮೊದಲಿದ್ದು ಗುರುಶಬ್ದ ನಂತರವಿದೆ.

'ಅಜಾದ್ಯದಂತಮ್' - ಈ ಸೂತ್ರದ ಅರ್ಥ ಹೀಗಿದೆ – "ದ್ವಂದ್ವ ಇತಿ ವರ್ತತೇ । ಅಜಾದ್ಯದಂತಂ ಶಬ್ದರೂಪಂ ದ್ವಂದ್ವೇ ಸಮಾಸೇ ಪೂರ್ವಂ ಪ್ರಯೋಕ್ತವ್ಯಮ್ । ಉಷ್ಟ್ರಖರಮ್ । ಉಷ್ಟ್ರಶಶಕಂ । ಬಹುಷು ಅನಿಯಮಃ । ಅಶ್ವರಥೇಂದ್ರಾಃ । ಇಂದ್ರಾಶ್ವರಥಾಃ । ದ್ವಂದ್ವೇ ಘ್ಯಂತಾತ್ ಅಜಾದ್ಯ-ದಂತಂ ವಿಪ್ರತಿಷೇಧೇನ । ಇಂದ್ರಾಗ್ನೀ ಇಂದ್ರವಾಯೂ ।" (ಕಾಶಿಕಾವೃತ್ತಿ).

ಇನ್ನು ಸಿದ್ಧಾಂತಕೌಮುದಿಯಲ್ಲಿ – "ಇದಂ ದ್ವಂದ್ವೇ ಪೂರ್ವಂ ಸ್ಯಾತ್ । ಈಶಕೃಷ್ಣೌ । ಬಹುಷು ಅನಿಯಮಃ । ಅಶ್ವರಥೇಂದ್ರಾಃ । ಇಂದ್ರಾಶ್ವರಥಾಃ । ಘ್ಯಂತಾದಜಾದ್ಯದಂತಂ ವಿಪ್ರತಿಷೇಧೇನ । ಇಂದ್ರಾಗ್ನೀ ।" ಎಂದು.

ಅಭಿಪ್ರಾಯ ಹೀಗೆ – ದ್ವಂದ್ವಸಮಾಸ ಮಾಡುವಾಗ ಅಚ್ ಅಕ್ಷರವೇ ಆದಿಯಾಗಿ ಉಳ್ಳದ್ದಾಗಿ

ಯಾವುದು ಅಕಾರಾಂತವಾದ ಶಬ್ದವಿದೆಯೋ ಅದನ್ನು ಪೂರ್ವದಲ್ಲಿ ಪ್ರಯೋಗ ಮಾಡಬೇಕು. ಉದಾ – ಈಶಕೃಷ್ಣೌ ಎಂಬಲ್ಲಿನ ಈಶಶಬ್ದ. ಇಲ್ಲಿ ದ್ವಂದ್ವಸಮಾಸ ಮಾಡುತ್ತಿದ್ದಾರೆ. ಈಶಶ್ಚ ಕೃಷ್ಣಶ್ಚ ಎಂದು. ಈಶಶಬ್ದವಾದರೋ ಅಚ್‌ಅಕ್ಷರವಾದ ಈಕಾರವನ್ನು ಆದಿಯಾಗಿ ಉಳ್ಳದ್ದು. ಹಾಗೂ ಅಕಾರವನ್ನೇ ಕೊನೆಯಾಗಿ ಉಳ್ಳದ್ದು. ಶಕಾರೋತ್ತರ ಅಕಾರವಿದೆ ಎಂದು ಭಾವ. ಹೀಗೆ ಅಜಾದ್ಯದಂತವಾದ್ದರಿಂದ ಅದನ್ನೇ ಮೊದಲು ಪ್ರಯೋಗಿಸಿದ್ದಾರೆ. ಹಾಗಾಗಿ ಕೃಷ್ಣಶಬ್ದಕ್ಕಿಂತ ಮೊದಲು ಈ ಶಬ್ದವಿದೆ. ಬಹಳಶಬ್ದಗಳಿಗೆ ದ್ವಂದ್ವಸಮಾಸಮಾಡಿದಾಗ ಈ ನಿಯಮವಿರುವುದಿಲ್ಲ. ಅಶ್ವರಥೇಂದ್ರಾಃ ಎಂದು ಉದಾಹರಣೆ. ಅಶ್ವಶ್ಚ ರಥಶ್ಚ ಇಂದ್ರಶ್ಚ ಎಂದು ದ್ವಂದ್ವಸಮಾಸ. ಇಲ್ಲಿ ಎರಡು ಶಬ್ದಗಳು ಅಜಾದ್ಯದಂತವಾಗಿವೆ. ಇಂದ್ರ ಹಾಗೂ ಅಶ್ವಶಬ್ದಗಳು. ಇಲ್ಲಿ ಒಮ್ಮೆ ಅಶ್ವಶಬ್ದ-ವನ್ನು ಮೊದಲು ಪ್ರಯೋಗಿಸಬಹುದು. ಅಥವಾ ಇಂದ್ರಶಬ್ದವನ್ನೂ ಪ್ರಯೋಗಿಸಬಹುದು. ಹಾಗಾಗಿ ಇಂದ್ರಾಶ್ವರಥಾಃ ಎಂದಾದರೂ ಅಥವಾ ಅಶ್ವರಥೇಂದ್ರಾಃ ಎಂದಾದರೂ ಆಗಬಹುದು.

ಇಂದ್ರಾಗ್ನೀ ಎಂಬಲ್ಲಿ ಈಗ ಸಮಸ್ಯೆ ಆಯಿತು. ಇಂದ್ರಶಬ್ದವು ಅಜಾದ್ಯದಂತವಾದ್ದರಿಂದ ಅದಕ್ಕೆ ಪೂರ್ವಪ್ರಯೋಗ ಮಾಡಬೇಕೋ ಅಥವಾ ದ್ವಂದ್ವೇ ಘಿ ಎಂಬ ಸೂತ್ರದಿಂದ ಘಿಸಂಜ್ಞೆಯಿಂದ ಅಗ್ನಿಶಬ್ದಕ್ಕೆ ಪೂರ್ವತ್ರ ಪ್ರಯೋಗವೋ? ಇದಕ್ಕೆ ಉತ್ತರ - "ವಿಪ್ರತಿಷೇಧೇ ಪರಂ ಕಾರ್ಯಮ್" (ಪಾ.ಸೂ. 1-4-2) ಎರಡು ಸೂತ್ರಗಳು ಒಂದೇ ಲಕ್ಷ್ಯದಲ್ಲಿ ಪ್ರವೃತ್ತಿಮಾಡುವಾಗ ಅದರಲ್ಲಿ ಅಷ್ಟಾಧ್ಯಾಯಿಯಲ್ಲಿ ಪರದಲ್ಲಿ ಯಾವುದು ಪಠಿತವಾಗಿರುತ್ತದೋ ಆ ಸೂತ್ರೋಕ್ತವಾದ ಕಾರ್ಯ-ವನ್ನು ಮಾಡಬೇಕು. ಪ್ರಕೃತದಲ್ಲಿ ದ್ವಂದ್ವೇ ಘಿ ಹಾಗೂ ಅಜಾದ್ಯದಂತಮ್ ಎಂಬ ಪಾಣಿನಿಯ ಸೂತ್ರಗಳಲ್ಲಿ ಪರಸೂತ್ರವಾಗಿರುವುದು ಅಜಾದ್ಯದಂತಮ್ ಎಂಬುದು. ಹಾಗಾಗಿ ಆ ಸೂತ್ರೋಕ್ತವಾದ ಕಾರ್ಯವನ್ನು ಮಾಡಬೇಕು. ಆದ್ದರಿಂದ ಅಜಾದ್ಯದಂತವಾದ ಇಂದ್ರಶಬ್ದಕ್ಕೇ ಪೂರ್ವತ್ರ-ಪ್ರಯೋಗವಾಗಿ ಇಂದ್ರಾಗ್ನೀ ಎಂದಾಗುತ್ತದೆ.

ಅಲ್ಲ; 'ವಿಪ್ರತಿಷೇಧೇ ಪರಂ ಕಾರ್ಯಮ್' ಎಂಬ ಸೂತ್ರವು ಸಮಾನವಾದ ಬಲವಿರುವ ಸೂತ್ರಗಳಿಗೆ ವಿರೋಧ ಬಂದಾಗ ಪರಿಹಾರ ಹೇಳಲು ಹೊರಟಿದೆ. ಇಲ್ಲಿ ಸೂತ್ರದಲ್ಲಿರುವ ವಿಪ್ರತಿಷೇಧಶಬ್ದಕ್ಕೆ 'ತುಲ್ಯಬಲವಿರೋಧಃ ವಿಪ್ರತಿಷೇಧಃ' ಎಂದು ಹೇಳಿ ಅದನ್ನು ಹೀಗೆ ವಿವರಿಸಿದ್ದಾರೆ. "ಯತ್ರ ದ್ವೌ ಪ್ರಸಂಗೌ ಅನ್ಯಾರ್ಥೌ ಏಕಸ್ಮಿನ್ ಯುಗಪತ್ ಪ್ರಾಪ್ನುತಃ ಸ ತುಲ್ಯಬಲವಿರೋಧಃ ವಿಪ್ರತಿಷೇಧಃ" ಎಂದು. ಆದ್ದರಿಂದ ಪ್ರಕೃತದಲ್ಲಿ ಇಂದ್ರಾಗ್ನೀ ಎಂಬಲ್ಲಿ ಎರಡು ಸೂತ್ರಗಳ ಪ್ರವೃತ್ತಿಯನ್ನು ಶಂಕಿಸಲಾಗಿರುವುದರಿಂದ ಅಲ್ಲಿ ಎರಡು ಸೂತ್ರಗಳು ಸಮಾನಬಲವುಳ್ಳದ್ದು ಎಂದು ತೋರಿಸಬೇಕು. ಸಮಾನಬಲಪ್ರದರ್ಶನವಾದರೋ ಸೂತ್ರಗಳು ಒಂದೊಂದು ಕಡೆ ಸಾವಕಾಶ ಎಂದು ನಿರೂಪಿಸು-ವುದೇ ಆಗಿದೆ. ಅರ್ಥಾತ್ 'ದ್ವಂದ್ವೇ ಘಿ' ಎಂಬ ಸೂತ್ರವು ಪ್ರವೃತ್ತಿಮಾಡದ ಕಡೆ 'ಅಜಾದ್ಯ-ದಂತಮ್' ಎಂಬ ಸೂತ್ರಕ್ಕೆ ಅವಕಾಶವಿರಬೇಕು. ಹಾಗೆಯೇ ಅಜಾದ್ಯದಂತಮ್ ಎಂಬ ಸೂತ್ರವು

ಪ್ರವೃತ್ತಿಮಾಡದ ಕಡೆ 'ದ್ವಂದ್ವೇ ಘಿ' ಎಂಬ ಸೂತ್ರಕ್ಕೆ ಅವಕಾಶವಿರಬೇಕು. ಹೀಗಿದ್ದಾಗ ಸಮಾನಬಲವಿದ್ದಂತಾಗಿ ಏಕತ್ರ ಲಕ್ಷ್ಯದಲ್ಲಿ ಎರಡೂ ಸೂತ್ರಗಳೂ ಪ್ರವೃತ್ತಿಯಾದರೆ ವಿಪ್ರತಿಷೇಧ ಉಂಟಾಗುವುದು. ಪ್ರಕೃತದಲ್ಲಿ ಇಂದ್ರಾಗ್ನೀ ಎಂಬ ಸ್ಥಳದಲ್ಲಿ ಹೀಗೆ ನಿರೂಪಣೆ ಮಾಡಬಹುದು. ಅದರಂತೆಯೇ 'ಆಮ್ನಾಯಸ್ಮೃತೀ' ಎಂಬಲ್ಲಿಯೂ ಎಂದು ತಿಳಿಯಬೇಕು. ಈಶಕೃಷ್ಣೌ ಎಂಬ ಲಕ್ಷ್ಯದಲ್ಲಿ ಅಜಾದ್ಯದಂತಮ್ ಎಂಬ ಸೂತ್ರಕ್ಕೆ ಅವಕಾಶವಿದೆ. ಅಲ್ಲಿ ದ್ವಂದ್ವೇ ಘಿ ಎಂಬ ಸೂತ್ರವು ಪ್ರವೃತ್ತಿಮಾಡುವುದಿಲ್ಲ. ಏಕೆಂದರೆ ಅಲ್ಲಿ ಘಿಸಂಜ್ಞೆ ಇರುವ ಶಬ್ದವೇ ಇಲ್ಲ. ಇನ್ನು 'ಪಟುಗುಪ್ತೌ' ಎಂಬ ಲಕ್ಷ್ಯದಲ್ಲಿ 'ದ್ವಂದ್ವೇ ಘಿ' ಎಂಬ ಸೂತ್ರಕ್ಕೆ ಮಾತ್ರ ಅವಕಾಶವಿದೆ. 'ಅಜಾದ್ಯದಂತಮ್' ಎಂಬ ಸೂತ್ರಕ್ಕೆ ಅವಕಾಶವಿರುವುದಿಲ್ಲ. ಏಕೆಂದರೆ ಅಜಾದಿಯಾಗಿದ್ದು ಅದಂತವಾದ ಶಬ್ದ ಅಲ್ಲಿ ಕಾಣಿಸುವುದಿಲ್ಲ. ಹೀಗೆ ಉಭಯವೂ ಸಾವಕಾಶವಾಗಿದೆ.

ಇದೇ ರೀತಿಯ ಆಶಂಕೆಗಳು 'ಆಮ್ನಾಯಸ್ಮೃತೀ' ಎಂಬ ಲಕ್ಷ್ಯದಲ್ಲಿ ಮಾಡಬೇಕು. ಸ್ಮೃತಿ ಎಂಬ ಶಬ್ದಕ್ಕೆ ಘಿಸಂಜ್ಞೆ ಇದೆ. ಆಮ್ನಾಯ ಎಂಬ ಶಬ್ದವು ಅಜಾದ್ಯದಂತವಾಗಿದೆ. ಹೀಗಿದ್ದಾಗ 'ದ್ವಂದ್ವೇ ಘಿ' ಎಂಬ ಸೂತ್ರದ ಪ್ರವೃತ್ತಿಯೋ ಅಥವಾ 'ಅಜಾದ್ಯದಂತಮ್' ಎಂಬ ಸೂತ್ರದ ಪ್ರವೃತ್ತಿಯೋ ಎಂದು ಸಂದೇಹ ಬಂದಾಗ ವಿಪ್ರತಿಷೇಧೇನ 'ಅಜಾದ್ಯದಂತಮ್' ಎಂಬ ಸೂತ್ರದ ಪ್ರಕಾರ ಆಮ್ನಾಯಶಬ್ದಕ್ಕೆ ಪೂರ್ವನಿಪಾತ ಮಾಡಬೇಕು. ಹಾಗಾಗಿ ಆಮ್ನಾಯಸ್ಮೃತಿ ಎಂದು ಸುಧಾದಲ್ಲಿ ಟೀಕಾರಾಯರು ಪ್ರಯೋಗಿಸಿದ್ದಾರೆ.

ಅಲ್ಲ; ವ್ಯಾಕರಣಶಾಸ್ತ್ರಾನುಗುಣವಾಗಿ ಆಮ್ನಾಯಶಬ್ದಕ್ಕೆ ಪೂರ್ವನಿಪಾತಸಿದ್ಧವಾಗಿರುವುದರಿಂದ ಯಾವುದೇ ಶಂಕೆಗೆ ಅವಕಾಶವಿಲ್ಲ. ಹಾಗಾಗಿ ಇಲ್ಲಿ ಏನು ವಿಚಾರ? ಎಂದು ಶಂಕಿಸಕೂಡದು. ಏಕೆಂದರೆ ಇದೇ ರೀತಿ 'ಅಜಾದ್ಯದಂತಮ್' ಎಂಬ ಸೂತ್ರಕ್ಕೂ 'ಅಲ್ಪಾಚ್ ತರಮ್' ಎಂಬ ಸೂತ್ರಕ್ಕೂ ವಿಪ್ರತಿಷೇಧವಿದೆ.

ಅಲ್ಪಾಚ್ತರಮ್ - ಸೂತ್ರದ ಅರ್ಥ. "ದ್ವಂದ್ವೇ ಇತಿ ವರ್ತತೇ । ಅಲ್ಪಾಚ್ತರಂ ಶಬ್ದರೂಪಂ ದ್ವಂದ್ವೇ ಸಮಾಸೇ ಪೂರ್ವಂ ಪ್ರಯೋಕ್ತವ್ಯಮ್ । ಪ್ಲಕ್ಷಶ್ಚ ನ್ಯಗ್ರೋಧಶ್ಚ ಪ್ಲಕ್ಷನ್ಯಗ್ರೋಧೌ, ಧವಖದಿರ-ಪಲಾಶಾಃ ಬಹುಷು ಅನಿಯಮಃ । ಶಂಖದುಂದುಭಿವೀಣಾಃ ವೀಣಾಶಂಖದುಂದುಭಯಃ" ಎಂದು. ಅರ್ಥಾತ್ ದ್ವಂದ್ವಸಮಾಸಮಾಡುವಾಗ ಕಡಿಮೆ ಅಚ್‌ಅಕ್ಷರವುಳ್ಳ ಶಬ್ದಕ್ಕೆ ಪೂರ್ವತ್ರಪ್ರಯೋಗ ಎಂದು. ಉದಾ - ಪ್ಲಕ್ಷನ್ಯಗ್ರೋಧಶಬ್ದಗಳಿಗೆ ದ್ವಂದ್ವಸಮಾಸಮಾಡಿದಾಗ ಅಲ್ಪಾಚ್ಕವಾದ ಪ್ಲಕ್ಷ-ಶಬ್ದಕ್ಕೆ ಪೂರ್ವತ್ರ ಪ್ರಯೋಗ.

ಪ್ರಕೃತದಲ್ಲಿ ವಾಗೀಶೌ ಎಂಬ ಲಕ್ಷ್ಯದಲ್ಲಿ ಎರಡೂ ಸೂತ್ರಗಳ ಪ್ರವೃತ್ತಿಯುಂಟಾಗುತ್ತಿದೆ. ಈಶ ಎಂಬ ಶಬ್ದವು ಅಜಾದ್ಯದಂತವಾದ್ದರಿಂದ ಅದಕ್ಕೆ 'ಅಜಾದ್ಯದಂತಂ' ಎಂಬ ಸೂತ್ರದಿಂದ ಪೂರ್ವ-

ಪ್ರಯೋಗ ಬರಬೇಕೋ, ಅಥವಾ 'ಅಲ್ಪಾಚ್ ತರಮ್' ಎಂಬ ಸೂತ್ರದಿಂದ ಅಲ್ಪಾಚ್ಕವಾದ ವಾಕ್ ಶಬ್ದಕ್ಕೆ ಪೂರ್ವತ್ರಪ್ರಯೋಗವೋ? ಎಂದರೆ ವಿಪ್ರತಿಷೇಧೇನ ಪರವಾದ 'ಅಲ್ಪಾಚ್-ತರಮ್' ಎಂಬ ಸೂತ್ರವೇ ಪ್ರವೃತ್ತಿಯನ್ನು ಮಾಡುವುದು. ಹಾಗಾಗಿ ವಾಕ್ ಶಬ್ದಕ್ಕೆ ಪೂರ್ವತ್ರ ಪ್ರಯೋಗವಿದ್ದು ವಾಗೀಶೌ ಎಂದಾಗುವುದು. ಇನ್ನು ಎರಡು ಸೂತ್ರಗಳೂ ಸಾವಕಾಶವಾಗಿವೆ ಎಂಬುದು ಸ್ಪಷ್ಟ.

ಪ್ರಕೃತದಲ್ಲಿ 'ಆಮ್ನಾಯಸ್ಮೃತೀ' ಎಂಬ ಕಡೆ ಅಲ್ಪಾಚ್ ಕವಾದ ಸ್ಮೃತಿ ಎಂಬಶಬ್ದಕ್ಕೆ ಪೂರ್ವನಿಪಾತವೋ ಅಥವಾ ಆಮ್ನಾಯಶಬ್ದವು ಅಜಾದ್ಯದಂತವಾದ್ದರಿಂದ ಪೂರ್ವ-ನಿಪಾತವೋ? ಎಂದು ಸಂಶಯಬಂದಾಗ ಪರಸೂತ್ರವಾದ 'ಅಲ್ಪಾಚ್ ತರಮ್' ಎಂಬ ಸೂತ್ರೋಕ್ತ-ವಾದ ಕಾರ್ಯವನ್ನೇ ಮಾಡಬೇಕು. ಹಾಗಾಗಿ ಸ್ಮೃತಿ ಎಂಬ ಶಬ್ದವನ್ನು ಪೂರ್ವತ್ರ ಪ್ರಯೋಗ-ಮಾಡಬೇಕಿತ್ತು. ಆದ್ದರಿಂದ ಸ್ಮೃತ್ಯಾಮ್ನಾಯ ಎಂದಾಗಬೇಕು ಹೊರತು ಆಮ್ನಾಯಸ್ಮೃತೀ ಎಂದಲ್ಲ. ಎಂದು ಪೂರ್ವಪಕ್ಷ ಬಂದರೆ ಅದಕ್ಕೆ ಉತ್ತರ – ಸೂತ್ರಕಾರರು ಪೂರ್ವನಿಪಾತಪ್ರಕ-ರಣವನ್ನು ಅನಿತ್ಯ ಎಂದು ತಿಳಿಸಿದ್ದಾರೆ. ಇದು ಅವರ ನಿರ್ದೇಶದ ಮುಖಾಂತರ. ಉದಾ – 'ಲಕ್ಷಣಹೇತ್ವೋಃ ಕ್ರಿಯಾಯಾಃ' 'ಸಮುದ್ರಾಭ್ರಾದ್ಘಃ' ಮುಂತಾದ ಸೂತ್ರಗಳಲ್ಲಿ. ಇವುಗಳಲ್ಲಿ ಯದ್ಯಪಿ ಶಾಸ್ತ್ರಾನುಗುಣ್ಯೇನ ಕ್ರಮವಾಗಿ ಹೇತು ಹಾಗೂ ಅಭ್ರಶಬ್ದಗಳಿಗೆ ಪೂರ್ವನಿಪಾತ ಬರಬೇಕಿದ್ದರೂ ಅದನ್ನು ಮಾಡಿಲ್ಲ. ಇದರಿಂದ ಪೂರ್ವನಿಪಾತಪ್ರಕರಣವು ಅನಿತ್ಯ ಎಂದು ತಿಳಿಯುವುದು.

ಆದರೆ ಹೀಗೆ ಅನಿತ್ಯ ಎಂದು ಸ್ವೀಕರಿಸಿದರೆ ಯುಕ್ತಿಪಾದದಲ್ಲಿ ಬರುವ ಟೀಕಾಗ್ರಂಥದ ವಿರೋಧ. ಅಲ್ಲಿ – 'ಅಲ್ಪಾಚ್ ತರಮ್' ಇತಿ ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನ ಎಂದು ಪೂರ್ವನಿಪಾತವನ್ನು ನಿರೂಪಿಸುವ 'ಅಲ್ಪಾಚ್ ತರಮ್' ಎಂಬ ಸೂತ್ರವು ಪ್ರವೃತ್ತಿಮಾಡುವುದಿಲ್ಲ. ಹಾಗಾಗಿ ದೋಷ ಬರುವುದು. ಅದನ್ನು ಮೀರಿದಂತೆ ಆಗುವುದು ಎಂದು ಆಕ್ಷೇಪಿಸಿದ್ದಾರೆ. ಇದಕ್ಕೆ ಉತ್ತರ - ಆ ಟೀಕಾಗ್ರಂಥವಾದರೋ ಆ ಸೂತ್ರವನ್ನು ನಿತ್ಯ ಎಂದು ಅಭ್ಯುಪಗಮವಾದದಿಂದ ಹೊರಟಿದ್ದರಿಂದ ವಿರೋಧವಿಲ್ಲ ಎಂದು ತಿಳಿಯಬೇಕು.

### ಆಮ್ನಾಯಸ್ಮೃತಿ – ನಿರ್ಣೀತಿಜಯಕಾರಕಃ ಇವುಗಳಲ್ಲಿ ಪೂರ್ವನಿಪಾತ

(ಲಘುರಸರಂಜಿನೀ) – ನನು 'ಅಲ್ಪಾಚ್ ತರಮ್' ಇತಿ ಸೂತ್ರಾತ್ ಅಲ್ಪಾಚ್ತರತ್ವಾತ್ 'ಸ್ಮೃತ್ಯಾ-ಮ್ನಾಯ' ಇತಿ ಭಾವ್ಯಮ್ । ಸತ್ಯಮ್ । ತಥಾಪಿ ಆಮ್ನಾಯಸ್ಯ ಪ್ರಾಧಾನ್ಯಪ್ರದರ್ಶನಾರ್ಥಮ್ 'ಆಮ್ನಾಯಸ್ಮೃತಿ' ಇತಿ ವ್ಯತ್ಯಸ್ತಪ್ರಯೋಗಃ । ಯಥೋಕ್ತಂ ಯುಕ್ತಿಪಾದೀಯಸುಧಾಯಾಮ್ –

'ಜಲ್ಪ ಇತ್ಯಪಿ ನಾಮ ಸ್ಯಾದ್ವಾದಸ್ಯೈತಾದೃಶಸ್ಯ ತು' (ಅನು. 2ಅ.1ಪಾ. ಶ್ಲೋ.49)

ಇತ್ಯೇತದ್ವ್ಯಾಖ್ಯಾವಸರೇ । ಉಭಯಾರ್ಥಃ ಸ್ಯಾದಿತ್ಯುಕ್ತೇ ಸಾಮ್ಯಪ್ರತೀತಿಪ್ರಸಕ್ತೌ ನಿರ್ಣೀತಿ ಜಯ-ಕಾರಕಃ' ಇತಿ ತತ್ವನಿರ್ಣೀತೇಃ ಪ್ರಾಧಾನ್ಯಪ್ರದರ್ಶನಾರ್ಥಂ ವಿವರಣಂ ಕೃತಮ್ । ಅಲ್ಪಾಚ್ತರಮಿತಿ ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನಾಪ್ಯೇತದೇವ ಸೂಚಿತಮ್ । ಅನ್ಯಥಾ ಜಯನಿರ್ಣೀತಿಕಾರಕ ಇತ್ಯವಕ್ಷ್ಯದಿತಿ ।

ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ - ಆಮ್ನಾಯಸ್ಮೃತಿಪದಗಳಲ್ಲಿ ಅಲ್ಪಾಚ್ ತರಮ್ ಎಂಬ ಸೂತ್ರದಿಂದ ಅಲ್ಪ ಅಚ್ ಅಕ್ಷರವುಳ್ಳ ಸ್ಮೃತಿಪದಕ್ಕೆ ಪೂರ್ವನಿಪಾತವು ಪ್ರಸಕ್ತವಾಗಲು ಸ್ಮೃತ್ಯಾ-ಮ್ನಾಯ ಎಂದು ಹೇಳಬೇಕಿತ್ತು. ಆದ್ದರಿಂದ ಆಮ್ನಾಯಸ್ಮೃತಿ ಎಂಬ ಪ್ರಯೋಗ ಅಯುಕ್ತ ಎಂದು ಆಕ್ಷೇಪ.

ಉತ್ತರ - ಹೌದು, ಆ ಸೂತ್ರದಿಂದ ಅಲ್ಪಾಚ್ಕವಾದ ಸ್ಮೃತಿಶಬ್ದಕ್ಕೇನೇ ಪೂರ್ವನಿಪಾತಪ್ರಸಕ್ತಿ ಇದ್ದರೂ ಹಾಗೆ ಮಾಡದೇ ಇದ್ದದ್ದು ಆಮ್ನಾಯವು ಸ್ಮೃತಿಗಿಂತಲೂ ಪ್ರಧಾನವಾದದ್ದು ಎಂದು ತೋರಿಸಲು ಎಂದು ತಿಳಿಯಬೇಕು. ಹಾಗಾಗಿ ವ್ಯತ್ಯಸ್ತವಾಗಿ ಪ್ರಯೋಗ ಮಾಡಿದ್ದಾರೆ. ಈ ವಿಷಯದ ಬಗ್ಗೆ ಯುಕ್ತಿಪಾದದ ನ್ಯಾಯಸುಧಾದ ನವಿಲಕ್ಷಣತ್ವಾಧಿಕರಣದ ಭಾಗದಲ್ಲಿ 'ಜಲ್ಪ ಇತ್ಯಪಿ ನಾಮ ಸ್ಯಾತ್ ವಾದಸ್ಯ ಏತಾದೃಶಸ್ಯ ತು' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನಮಾಡುವಾಗ ಹೇಳಿದ್ದಾರೆ — ವಾದ ಕಥೆಗಳು ಮೂರು ರೀತಿಯಾಗಿವೆ. ವಾದ ಜಲ್ಪ ವಿತಂಡ ಎಂದು. ಇವುಗಳಲ್ಲಿ ವಾದಕ್ಕೆ ಜಲ್ಪ ಎಂದು ಹೆಸರು ಬರಲಿ ಎಂದು ಆಕ್ಷೇಪ ಬಂದಿದೆ. ಏಕೆಂದರೆ ಜಲ್ಪದ ಫಲವಾದ ಧನಲಾಭ, ಪ್ರತಿವಾದಿಪರಾಜಯನಿಮಿತ್ತ ಕೀರ್ತಿ ಇತ್ಯಾದಿಗಳು ಕೆಲವು ವಾದಗಳಲ್ಲಿಯೂ ಕಂಡಿದೆ. ಹಾಗಾಗಿ ಅಂತಹ ವಾದಗಳನ್ನು ಜಲ್ಪ ಎಂಬ ಹೆಸರಿನಿಂದಲೂ ವ್ಯವಹರಿಸಬೇಕಾದೀತು. ಈ ಸಂದರ್ಭದಲ್ಲಿ ಅಂತಹ ವಾದಕಥೆಯು ಪ್ರಧಾನವಾಗಿ ತತ್ವನಿರ್ಣಯಕ್ಕಾಗಿ ಇದ್ದು, ಅಪ್ರಧಾನವಾಗಿ ಪ್ರತಿವಾದಿಪರಾಜಯ ಧನಲಾಭ ಮುಂತಾದವುಗಳ ಪ್ರಾಪ್ತಿಗಾಗಿ ಆಗುವುದು. ಈ ಸಂದರ್ಭ-ದಲ್ಲಿ ವಾದದ ಫಲವಾದ ತತ್ವನಿರ್ಣಯ ಹಾಗೂ ತದನುಸಾರಿಯಾಗಿ ಉಂಟಾಗುವ ಅಪ್ರಧಾನ-ಫಲವಾದ ಜಯ, ಅರ್ಥಾದಿಪ್ರಾಪ್ತಿ ಇವುಗಳಲ್ಲಿ ಪ್ರಧಾನವಾದದ್ದು ಯಾವುದು? ಎಂದು ವಿಚಾರಮಾಡಿದಾಗ ತತ್ವನಿರ್ಣಯವೇ ಪ್ರಧಾನ ಎಂದು ತೋರಿಸಲು 'ನಿರ್ಣೀತಿಜಯಕಾರಕಃ' ಎಂಬ ಶಬ್ದದಲ್ಲಿ ಜಯ ಎಂಬ ಶಬ್ದವು ಅಲ್ಪಾಚ್ಕವಾದರೂ ಅದನ್ನು ಮೊದಲು ಪ್ರಯೋಗಿಸದೆ ನಿರ್ಣೀತಿ ಎಂಬ ಶಬ್ದವನ್ನೇ ಮೊದಲು ಪ್ರಯೋಗಿಸಿದ್ದಾರೆ. ಅಲ್ಲದೆ ಅಲ್ಪಾಚ್ ತರಮ್ ಎಂಬ ಸೂತ್ರಕ್ಕೆ ವ್ಯಭಿಚಾರವೂ ಕೂಡ ಅನೇಕ ಕಡೆ ಕಂಡಿದೆ. ತದನುಗುಣವಾಗಿ ಜಯನಿರ್ಣೀತಿಕಾರಕಃ ಎಂದು ಹೇಳಬೇಕಾಗಿತ್ತು. ಆದರೆ ಹಾಗೆ ಹೇಳದೇ ಆ ಸೂತ್ರವು ಅನಿತ್ಯವಾದ ಪ್ರಯುಕ್ತ ನಿರ್ಣೀತಿ-ಜಯಕಾರಕಃ ಎಂದಿದ್ದಾರೆ.

ಪ್ರಯೋಗ ಬರಬೇಕೋ, ಅಥವಾ 'ಅಲ್ಪಾಚ್ ತರಮ್' ಎಂಬ ಸೂತ್ರದಿಂದ ಅಲ್ಪಾಚ್ಕವಾದ ವಾಕ್ ಶಬ್ದಕ್ಕೆ ಪೂರ್ವತ್ರಪ್ರಯೋಗವೋ? ಎಂದರೆ ವಿಪ್ರತಿಷೇಧೇನ ಪರವಾದ 'ಅಲ್ಪಾಚ್-ತರಮ್' ಎಂಬ ಸೂತ್ರವೇ ಪ್ರವೃತ್ತಿಯನ್ನು ಮಾಡುವುದು. ಹಾಗಾಗಿ ವಾಕ್ ಶಬ್ದಕ್ಕೆ ಪೂರ್ವತ್ರ ಪ್ರಯೋಗವಿದ್ದು ವಾಗೀಶೌ ಎಂದಾಗುವುದು. ಇನ್ನು ಎರಡು ಸೂತ್ರಗಳೂ ಸಾವಕಾಶವಾಗಿವೆ ಎಂಬುದು ಸ್ಪಷ್ಟ.

ಪ್ರಕೃತದಲ್ಲಿ 'ಆಮ್ನಾಯಸ್ಮೃತೀ' ಎಂಬ ಕಡೆ ಅಲ್ಪಾಚ್ ಕವಾದ ಸ್ಮೃತಿ ಎಂಬಶಬ್ದಕ್ಕೆ ಪೂರ್ವನಿಪಾತವೋ ಅಥವಾ ಆಮ್ನಾಯಶಬ್ದವು ಅಜಾದ್ಯದಂತವಾದ್ದರಿಂದ ಪೂರ್ವ-ನಿಪಾತವೋ? ಎಂದು ಸಂಶಯಬಂದಾಗ ಪರಸೂತ್ರವಾದ 'ಅಲ್ಪಾಚ್ ತರಮ್' ಎಂಬ ಸೂತ್ರೋಕ್ತ-ವಾದ ಕಾರ್ಯವನ್ನೇ ಮಾಡಬೇಕು. ಹಾಗಾಗಿ ಸ್ಮೃತಿ ಎಂಬ ಶಬ್ದವನ್ನು ಪೂರ್ವತ್ರ ಪ್ರಯೋಗ-ಮಾಡಬೇಕಿತ್ತು. ಆದ್ದರಿಂದ ಸ್ಮೃತ್ಯಾಮ್ನಾಯ ಎಂದಾಗಬೇಕು ಹೊರತು ಆಮ್ನಾಯಸ್ಮೃತೀ ಎಂದಲ್ಲ. ಎಂದು ಪೂರ್ವಪಕ್ಷ ಬಂದರೆ ಅದಕ್ಕೆ ಉತ್ತರ – ಸೂತ್ರಕಾರರು ಪೂರ್ವನಿಪಾತಪ್ರಕ-ರಣವನ್ನು ಅನಿತ್ಯ ಎಂದು ತಿಳಿಸಿದ್ದಾರೆ. ಇದು ಅವರ ನಿರ್ದೇಶದ ಮುಖಾಂತರ. ಉದಾ – 'ಲಕ್ಷಣಹೇತ್ವೋಃ ಕ್ರಿಯಾಯಾಃ' 'ಸಮುದ್ರಾಭ್ರಾದ್ಘಃ' ಮುಂತಾದ ಸೂತ್ರಗಳಲ್ಲಿ. ಇವುಗಳಲ್ಲಿ ಯದ್ಯಪಿ ಶಾಸ್ತ್ರಾನುಗುಣ್ಯೇನ ಕ್ರಮವಾಗಿ ಹೇತು ಹಾಗೂ ಅಭ್ರಶಬ್ದಗಳಿಗೆ ಪೂರ್ವನಿಪಾತ ಬರಬೇಕಿದ್ದರೂ ಅದನ್ನು ಮಾಡಿಲ್ಲ. ಇದರಿಂದ ಪೂರ್ವನಿಪಾತಪ್ರಕರಣವು ಅನಿತ್ಯ ಎಂದು ತಿಳಿಯುವುದು.

ಆದರೆ ಹೀಗೆ ಅನಿತ್ಯ ಎಂದು ಸ್ವೀಕರಿಸಿದರೆ ಯುಕ್ತಿಪಾದದಲ್ಲಿ ಬರುವ ಟೀಕಾಗ್ರಂಥದ ವಿರೋಧ. ಅಲ್ಲಿ – 'ಅಲ್ಪಾಚ್ ತರಮ್' ಇತಿ ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನ ಎಂದು ಪೂರ್ವನಿಪಾತವನ್ನು ನಿರೂಪಿಸುವ 'ಅಲ್ಪಾಚ್ ತರಮ್' ಎಂಬ ಸೂತ್ರವು ಪ್ರವೃತ್ತಿಮಾಡುವುದಿಲ್ಲ. ಹಾಗಾಗಿ ದೋಷ ಬರುವುದು. ಅದನ್ನು ಮೀರಿದಂತೆ ಆಗುವುದು ಎಂದು ಆಕ್ಷೇಪಿಸಿದ್ದಾರೆ. ಇದಕ್ಕೆ ಉತ್ತರ - ಆ ಟೀಕಾಗ್ರಂಥವಾದರೋ ಆ ಸೂತ್ರವನ್ನು ನಿತ್ಯ ಎಂದು ಅಭ್ಯುಪಗಮವಾದದಿಂದ ಹೊರಟಿದ್ದರಿಂದ ವಿರೋಧವಿಲ್ಲ ಎಂದು ತಿಳಿಯಬೇಕು.

### ಆಮ್ನಾಯಸ್ಮೃತಿ – ನಿರ್ಣೀತಿಜಯಕಾರಕಃ ಇವುಗಳಲ್ಲಿ ಪೂರ್ವನಿಪಾತ

(ಲಘುರಸರಂಜನೀ) — ನನು 'ಅಲ್ಪಾಚ್ ತರಮ್' ಇತಿ ಸೂತ್ರಾತ್ ಅಲ್ಪಾಚ್ತರತ್ವಾತ್ 'ಸ್ಮೃತ್ಯಾ-ಮ್ನಾಯ' ಇತಿ ಭಾವ್ಯಮ್ । ಸತ್ಯಮ್ । ತಥಾಪಿ ಆಮ್ನಾಯಸ್ಯ ಪ್ರಾಧಾನ್ಯಪ್ರದರ್ಶನಾರ್ಥಮ್ 'ಆಮ್ನಾಯಸ್ಮೃತಿ' ಇತಿ ವ್ಯತ್ಯಸ್ತಪ್ರಯೋಗಃ । ಯಥೋಕ್ತಂ ಯುಕ್ತಿಪಾದೀಯಸುಧಾಯಾಮ್ —

'ಜಲ್ಪ ಇತ್ಯಪಿ ನಾಮ ಸ್ಯಾದ್ವಾದಸ್ಯೈತಾದೃಶಸ್ಯ ತು' (ಅನು. 2ಅ.1ಪಾ. ಶ್ಲೋ.49)

ಇತ್ಯೇತದ್ವ್ಯಾಖ್ಯಾವಸರೇ । ಉಭಯಾರ್ಥಃ ಸ್ಯಾದಿತ್ಯುಕ್ತೇ ಸಾಮ್ಯಪ್ರತೀತಿಪ್ರಸಕ್ತೌ ನಿರ್ಣೀತಿ ಜಯ-ಕಾರಕಃ' ಇತಿ ತತ್ತ್ವನಿರ್ಣೀತೇಃ ಪ್ರಾಧಾನ್ಯಪ್ರದರ್ಶನಾರ್ಥಂ ವಿವರಣಂ ಕೃತಮ್ । ಅಲ್ಪಾಚ್ತರಮಿತಿ ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನಾಪ್ಯೇತದೇವ ಸೂಚಿತಮ್ । ಅನ್ಯಥಾ ಜಯನಿರ್ಣೀತಿಕಾರಕ ಇತ್ಯವಕ್ಷ್ಯದಿತಿ ।

ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ - ಆಮ್ನಾಯಸ್ಮೃತಿಪದಗಳಲ್ಲಿ ಅಲ್ಪಾಚ್ ತರಮ್ ಎಂಬ ಸೂತ್ರದಿಂದ ಅಲ್ಪ ಅಚ್ ಅಕ್ಷರವುಳ್ಳ ಸ್ಮೃತಿಪದಕ್ಕೆ ಪೂರ್ವನಿಪಾತವು ಪ್ರಸಕ್ತವಾಗಲು ಸ್ಮೃತ್ಯಾ-ಮ್ನಾಯ ಎಂದು ಹೇಳಬೇಕಿತ್ತು. ಆದ್ದರಿಂದ ಆಮ್ನಾಯಸ್ಮೃತಿ ಎಂಬ ಪ್ರಯೋಗ ಅಯುಕ್ತ ಎಂದು ಆಕ್ಷೇಪ.

ಉತ್ತರ - ಹೌದು, ಆ ಸೂತ್ರದಿಂದ ಅಲ್ಪಾಚ್ಕವಾದ ಸ್ಮೃತಿಶಬ್ದಕ್ಕೇನೇ ಪೂರ್ವನಿಪಾತಪ್ರಸಕ್ತಿ ಇದ್ದರೂ ಹಾಗೆ ಮಾಡದೇ ಇದ್ದದ್ದು ಆಮ್ನಾಯವು ಸ್ಮೃತಿಗಿಂತಲೂ ಪ್ರಧಾನವಾದದ್ದು ಎಂದು ತೋರಿಸಲು ಎಂದು ತಿಳಿಯಬೇಕು. ಹಾಗಾಗಿ ವ್ಯತ್ಯಸ್ತವಾಗಿ ಪ್ರಯೋಗ ಮಾಡಿದ್ದಾರೆ. ಈ ವಿಷಯದ ಬಗ್ಗೆ ಯುಕ್ತಿಪಾದದ ನ್ಯಾಯಸುಧಾದ ನವಿಲಕ್ಷಣತ್ವಾಧಿಕರಣದ ಭಾಗದಲ್ಲಿ 'ಜಲ್ಪ ಇತ್ಯಪಿ ನಾಮ ಸ್ಯಾತ್ ವಾದಸ್ಯ ಏತಾದೃಶಸ್ಯ ತು' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನಮಾಡುವಾಗ ಹೇಳಿದ್ದಾರೆ — ವಾದ ಕಥೆಗಳು ಮೂರು ರೀತಿಯಾಗಿವೆ. ವಾದ ಜಲ್ಪ ವಿತಂಡ ಎಂದು. ಇವುಗಳಲ್ಲಿ ವಾದಕ್ಕೆ ಜಲ್ಪ ಎಂದು ಹೆಸರು ಬರಲಿ ಎಂದು ಆಕ್ಷೇಪ ಬಂದಿದೆ. ಏಕೆಂದರೆ ಜಲ್ಪದ ಫಲವಾದ ಧನಲಾಭ, ಪ್ರತಿವಾದಿಪರಾಜಯನಿಮಿತ್ತ ಕೀರ್ತಿ ಇತ್ಯಾದಿಗಳು ಕೆಲವು ವಾದಗಳಲ್ಲಿಯೂ ಕಂಡಿದೆ. ಹಾಗಾಗಿ ಅಂತಹ ವಾದಗಳನ್ನು ಜಲ್ಪ ಎಂಬ ಹೆಸರಿನಿಂದಲೂ ವ್ಯವಹರಿಸಬೇಕಾದೀತು. ಈ ಸಂದರ್ಭದಲ್ಲಿ ಅಂತಹ ವಾದಕಥೆಯು ಪ್ರಧಾನವಾಗಿ ತತ್ತ್ವನಿರ್ಣಯಕ್ಕಾಗಿ ಇದ್ದು, ಅಪ್ರಧಾನವಾಗಿ ಪ್ರತಿವಾದಿಪರಾಜಯ ಧನಲಾಭ ಮುಂತಾದವುಗಳ ಪ್ರಾಪ್ತಿಗಾಗಿ ಆಗುವುದು. ಈ ಸಂದರ್ಭ-ದಲ್ಲಿ ವಾದದ ಫಲವಾದ ತತ್ತ್ವನಿರ್ಣಯ ಹಾಗೂ ತದನುಸಾರಿಯಾಗಿ ಉಂಟಾಗುವ ಅಪ್ರಧಾನ-ಫಲವಾದ ಜಯ, ಅರ್ಥಾದಿಪ್ರಾಪ್ತಿ ಇವುಗಳಲ್ಲಿ ಪ್ರಧಾನವಾದದ್ದು ಯಾವುದು? ಎಂದು ವಿಚಾರಮಾಡಿದಾಗ ತತ್ತ್ವನಿರ್ಣಯವೇ ಪ್ರಧಾನ ಎಂದು ತೋರಿಸಲು 'ನಿರ್ಣೀತಿಜಯಕಾರಕಃ' ಎಂಬ ಶಬ್ದದಲ್ಲಿ ಜಯ ಎಂಬ ಶಬ್ದವು ಅಲ್ಪಾಚ್ಕವಾದರೂ ಅದನ್ನು ಮೊದಲು ಪ್ರಯೋಗಿಸದೆ ನಿರ್ಣೀತಿ ಎಂಬ ಶಬ್ದವನ್ನೇ ಮೊದಲು ಪ್ರಯೋಗಿಸಿದ್ದಾರೆ. ಅಲ್ಲದೆ ಅಲ್ಪಾಚ್ ತರಮ್ ಎಂಬ ಸೂತ್ರಕ್ಕೆ ವ್ಯಭಿಚಾರವೂ ಕೂಡ ಅನೇಕ ಕಡೆ ಕಂಡಿದೆ. ತದನುಗುಣವಾಗಿ ಜಯನಿರ್ಣೀತಿಕಾರಕಃ ಎಂದು ಹೇಳಬೇಕಾಗಿತ್ತು. ಆದರೆ ಹಾಗೆ ಹೇಳದೇ ಆ ಸೂತ್ರವು ಅನಿತ್ಯವಾದ ಪ್ರಯುಕ್ತ ನಿರ್ಣೀತಿ-ಜಯಕಾರಕಃ ಎಂದಿದ್ದಾರೆ.

•• वादस्य जल्प इत्यपि नाम स्यादिति वादसञ्ज्ञा तु मुख्या जल्पसञ्ज्ञा त्वमुख्येति सूचितम् ।..

तथाहि यद्यपि कथकावादितो विजिगीषू तथाऽपि सभ्यादिभिर्विजिगीषां परिभाव्योत्पादिता तत्वनिर्णयार्थितैव कथोपयोगिनी । अर्थादिलाभश्चान्तरा प्राप्तो न त्वादित एवोद्दिष्ट इत्यमुख्य एव । अत एव पूर्वम् उभयार्थः स्यादित्युक्ते साम्यप्रतीतिप्रसक्तौ निर्णीतिजयकारक इति तत्वनिर्णीतिः प्राधान्यप्रदर्शनार्थं विवरणं कृतम् । अन्यथा कथाफलद्वयस्यैवोभयशब्देन प्रतीतेर्विवरणं व्यर्थं स्यात् । "अल्पाच्तरम्" इति लक्षणस्य व्यभिचारं कुर्वाणेनाप्येतदेव सूचितम् । अन्यथा जयनिर्णीतिकारक इत्यवक्ष्यत् । (सुधा - नविलक्षणत्वाधिकरणम्)

### ಅಲ್ಪಾಚ್ತರಂ ಸೂತ್ರವು ನಿತ್ಯವಾದರೆ ತದ್ವಿರುದ್ಧವಾದ ಪಾಣಿನಿಯ ಪ್ರಯೋಗಗಳು ಹೇಗೆ?

(ಲಘುರಸರಂಜಿನೀ) – ನನ್ವೇವಮ್ 'ಅಲ್ಪಾಚ್ ತರಮ್' ಇತ್ಯಸ್ಯ ನಿತ್ಯತ್ವೇ ಕಥಂ 'ಲಕ್ಷಣಹೇತ್ವೋಃ ಕ್ರಿಯಾಯಾಃ' 'ಸಮುದ್ರಾಭ್ರಾತ್ ಘಃ' ಇತ್ಯಾದಿಷು ಸೌತ್ರಾ ಏವ ತದ್ವಿಪರೀತಾಃ ಪ್ರಯೋಗಾ ಇತಿ ಚೇನ್ನ । ಅಭಿಪ್ರಾಯಸದ್ಭಾವಾತ್ । ತಥಾಹಿ – 'ಅಲ್ಪಾಚ್ ತರಮ್' ಇತ್ಯುತ್ಸರ್ಗಃ । ಉತ್ಸರ್ಗಸ್ಯ ಕ್ವಚಿತ್ ಕಾರಣಾಂತರೇಣಾಯಂ ವಾದೋ ದೃಷ್ಟಃ । ಯಥಾ 'ನ ಹಿಂಸ್ಯಾತ್ ಸರ್ವ(ಸರ್ವಾ) ಭೂತಾನಿ' ಇತ್ಯುತ್ಸರ್ಗಸ್ಯ 'ಅಗ್ನೀಷೋಮೀಯಂ ಪಶುಮಾಲಭೇತ' ಇತ್ಯಪವಾದಃ । ಕಾರಣಾಂತರೇಣಾಪೋದಿತಸ್ತು ಉತ್ಸರ್ಗೋಽಪವಾದವಿಷಯಂ ಪರಿತ್ಯಜ್ಯ ಅನ್ಯತ್ರ ಸರ್ವತ್ರ ಸ್ವವಿಷಯಂ ವ್ಯವಸ್ಥಾಪಯತ್ಯೇವ ಇತಿ ನಿತ್ಯ ಏವ । ನನ್ವಪವಾದೋ ನಾಪೋದಿತೋ ವ್ಯಭಿಚಾರೀತ್ಯ-ಮಾನಮ್ । ಯಥೋಕ್ತಂ ಭಕ್ತಿಪಾದೀಯಾನುವ್ಯಾಖ್ಯಾನೇ –

'ಉತ್ಸರ್ಗತೋಽಪಿ ಯತ್ಪ್ರಾಪ್ತಂ ಅಪವಾದವಿವರ್ಜಿತಮ್ ।
ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ'

ಇತಿ । ತತ್ರೈವ ಸುಧಾಯಾಮ್ ಚ – 'ಅದೃಷ್ಟೇ ವ್ಯಭಿಚಾರೇ' ಇತಿ ಸಾಧ್ಯವ್ಯಭಿಚಾರಿ-ಲಿಂಗಮಪ್ರಮಾಣಮಿತ್ಯುಕ್ತಮ್ । ತತ್ರ ವಿಶೇಷಮಾಹ – ಉತ್ಸರ್ಗತೋಽಪೀತಿ ॥ ಯಲ್ಲಿಂಗ-ಮುತ್ಸರ್ಗತಃ ಸ್ವಭಾವೇನಾಪವಾದವಿವರ್ಜಿತಂ ಸಾಧ್ಯವ್ಯಭಿಚಾರವಿವರ್ಜಿತಂ ಪ್ರಾಪ್ತಂ ನಿಶ್ಚಿತ-ಮಪ್ಯಪವಾದೇನ ಕಾರಣವಿಶೇಷೇಣೈವ ವ್ಯಭಿಚಾರಿ ತನ್ಮಾನಮೇವ ಭವಿಷ್ಯತಿ । ಏತದುಕ್ತಂ ಭವತಿ – ಇತ್ಯಾದಿ ।

ಅಲ್ಲ! ಹೀಗೆ ಅಲ್ಪಾಚ್ ತರಂ ಎಂಬ ಸೂತ್ರವು ನಿತ್ಯವಾದರೆ 'ಲಕ್ಷಣಹೇತ್ವೋಃ ಕ್ರಿಯಾಯಾಃ' 'ಸಮುದ್ರಅಭ್ರಾತ್ ಘಃ' ಮುಂತಾದ ಸೂತ್ರಗಳಲ್ಲಿ ಮಾಡಿದ ವಿಪರೀತಪ್ರಯೋಗಗಳು ಹೇಗೆ ಉಚಿತ? ಎಂದರೆ ಈ ವಿಷಯದಲ್ಲಿ ಅಭಿಪ್ರಾಯವಿಶೇಷವಿದೆ. ಅದು ಹೀಗೆ – ಅಲ್ಪಾಚ್ ತರಂ

ಎಂಬುದು ಉತ್ಸರ್ಗಸೂತ್ರ ಅಂದರೆ ಸಾಮಾನ್ಯಸೂತ್ರ. ಉತ್ಸರ್ಗಸೂತ್ರಕ್ಕೆ ಕೆಲವುಕಡೆ ಬೇರೆ ಕಾರಣದಿಂದ ಅಪವಾದವು ಕಂಡಿರುತ್ತದೆ. ಉದಾ - 'ನ ಹಿಂಸ್ಯಾತ್ ಸರ್ವ(ಸರ್ವಾ)ಭೂತಾನಿ' ಯಾವುದೇ ಪ್ರಾಣಿಗಳನ್ನು ಹಿಂಸೆ ಮಾಡಬಾರದು ಎಂಬ ಸಾಮಾನ್ಯವಿಧಿಗೆ 'ಅಗ್ನಿಷೋಮೀಯಂ ಪಶುಮಾಲಭೇತ' ಎಂಬ ಅಪವಾದವಿಧಿಯಿದೆ.

'ಬೇರೆ ಕಾರಣದಿಂದ ಅಪವಾದವುಳ್ಳ ಸಾಮಾನ್ಯವಿಧಿಯು ಅಪವಾದದ ವಿಷಯವಾದ ಸ್ಥಳವನ್ನು ಬಿಟ್ಟು ಬೇರೆ ಎಲ್ಲ ಕಡೆ ತನ್ನ ವಿಷಯವನ್ನು ವ್ಯವಸ್ಥೆ ಮಾಡುತ್ತದೆ' ಎಂಬ ಅಭಿಪ್ರಾಯದಿಂದ ನಿತ್ಯವೇ ಎಂದು ವ್ಯವಹರಿಸಲ್ಪಡುತ್ತದೆ ಹೊರತು ಅಪವಾದವಿರುವ ಕಾರಣ ವ್ಯಭಿಚಾರಿಯಾಗಿರುವುದರಿಂದ ಅಪ್ರಮಾಣವಾಗಿದೆ ಎಂದಾಗಲೀ, ಅಪವಾದವೇ ಪ್ರಮಾಣವೆಂದಾಗಲೀ ಅಲ್ಲ. ಇದನ್ನು ಭಕ್ತಿಪಾದದ ಅನುವ್ಯಾಖ್ಯಾನದಲ್ಲಿ ಹೀಗೆ ತಿಳಿಸಿದ್ದಾರೆ –

ಅದೃಷ್ಟೇ ವ್ಯಭಿಚಾರೇ ತು ಸಾಧಕಂ ತದಿತಿ ಸ್ಫುಟಮ್ ।
ಜ್ಞಾಯತೇ ಸಾಕ್ಷಿಣೈವಾದ್ಧಾ ಮಾನಬಾಧೇ ನ ತದ್ಭವೇತ್ ॥ .......
ಉತ್ಸರ್ಗತೋಽಪಿ ಯತ್ಪ್ರಾಪ್ತಂ ಅಪವಾದವಿವರ್ಜಿತಮ್ ।
ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥ (ಅನು.3ಅ.2ಪಾ.- ಶ್ಲೋ.19-21) ಎಂದು.

ಇದರ ಸುಧಾಭಾಗದಲ್ಲಿ ಈ ಕಾರಿಕೆಯ ವಿವರಣೆ ಬಂದಿದೆ – " 'ಅದೃಷ್ಟೇ ವ್ಯಭಿಚಾರೇ' ಎಂಬ ಭಾಗದಿಂದ ಸಾಧ್ಯವ್ಯಭಿಚಾರಿಯಾದ ಹೇತುವು ಅಪ್ರಮಾಣ ಎಂದಿದ್ದಾರೆ. ಆದರೆ ಎಲ್ಲ ಕಡೆ ಸಾಧ್ಯವ್ಯಭಿಚಾರಿಯಾದ ಲಿಂಗವು ಅಪ್ರಮಾಣವಲ್ಲ ಎಂದು ಅದರಲ್ಲಿ ಒಂದು ವಿಶೇಷತೆಯನ್ನು 'ಉತ್ಸರ್ಗತೋಽಪಿ' ಎಂಬ ಶ್ಲೋಕದಿಂದ ತೋರಿಸಿದ್ದಾರೆ. ಯಾವ ಧೂಮ ಮೊದಲಾದ ಲಿಂಗವು ಉತ್ಸರ್ಗತಃ - ಅಂದರೆ ಸ್ವಾಭಾವಿಕವಾಗಿ ಅಪವಾದವಿವರ್ಜಿತಂ - ಅಪವಾದದಿಂದ ಅರ್ಥಾತ್ ಸಾಧ್ಯವ್ಯಭಿಚಾರದಿಂದ ರಹಿತವಾಗಿದೆಯೋ ಅದು ಅಪವಾದದಿಂದ ಅಂದರೆ ಬೇರೆ ಕಾರಣ-ವಿಶೇಷಗಳಿಂದ ವಹ್ನಿವ್ಯಭಿಚಾರಿಯಾದರೆ ಆಗಲೂ ಅದು ಪ್ರಮಾಣವಾಗಿಯೇ ಆಗುತ್ತದೆ" ಎಂದು. ಇದನ್ನು 'ಏತದುಕ್ತಂ ಭವತಿ' ಎಂದು ವಿವರಿಸಿದ್ದಾರೆ.

### ನ ಹಿಂಸ್ಯಾತ್ ಸರ್ವಭೂತಾನಿ ಎಂಬ ಕೂರ್ಮಪುರಾಣದ ಮಾತು

न हिंस्यात् सर्वभूतानि नानृतं वा वदेत् क्वचित् ।
नाहितं नाप्रियं वाच्यं न स्तेनः स्यात् कदाचन ॥
तृणं वा यदि वा शाकं मृदं वा जलमेव वा ।
परस्यापहरञ्जन्तुर्नरकं प्रतिपद्यते ॥ (कूर्मपुराण उत्तरभाग १६.१-२)

ಯಾವುದೇ ಪ್ರಾಣಿಹಿಂಸೆಯನ್ನು ಮಾಡಕೂಡದು. ಯಾವ ವಿಷಯದಲ್ಲಿಯೂ ಸುಳ್ಳನ್ನು ಹೇಳಕೂಡದು.

ಅಹಿತವಾದದ್ದನ್ನು ಅಪ್ರಿಯವಾದದ್ದನ್ನು ಹೇಳಬಾರದು. ಎಂದಿಗೂ ಕಳ್ಳನಾಗಬಾರದು. ಬೇರೆ-ಯವನಿಗೆ ಸಂಬಂಧಪಟ್ಟ ಹುಲ್ಲು ತರಕಾರಿ ಮಣ್ಣು ನೀರು ಯಾವುದನ್ನೂ ಅಪಹರಿಸಬಾರದು. ಹಾಗೆ ಮಾಡಿದರೆ ನರಕಪ್ರಾಪ್ತಿ. ಪ್ರಕೃತದಲ್ಲಿ 'ನ ಹಿಂಸ್ಯಾತ್ ಸರ್ವಭೂತಾನಿ' ಎಂಬ ಈ ಮಾತು ಸಾಮಾನ್ಯವಿಧಿಯಾಗಿದ್ದು ಅಗ್ನೀಷೋಮೀಯ ಪಶುಹಿಂಸಾಸ್ಥಳವನ್ನು ಬಿಟ್ಟು ಬೇರೆ ಕಡೆ ಎಂದು ತಿಳಿಯಬೇಕು ಎಂದು ಇಲ್ಲಿ ವರ್ಣಿಸಲಾಗಿದೆ.

## ಸಾಯಣಭಾಷ್ಯದಲ್ಲಿ ಅಗ್ನೀಷೋಮೀಯಪಶ್ವಾಲಂಭನದ ಕುರಿತು

**अथर्ववेदः/काण्डं १/सूक्तम् ०४ - सायणभाष्यम् –**

अम्बयो यन्त्यध्वभिर्जामयो अध्वरीयताम् । पृञ्चतीर्मधुना पयः ॥१ ॥

अम्बयः । यन्ति । अध्वऽभिः । जामयः । अध्वरिऽयताम् । पृञ्चतीः । मधुना । पयः ॥१ ॥

अम्बयः । अम्बाशब्दवद् आम्बिशब्दोऽपि मातृवाचित्वेन वेदं प्रसिद्धः । यथा--'अम्बितमे नदीतमे' (ऋ २,४१,१६ ) इति 'अम्बे अम्बाल्यम्बिके' (तै ७,४,१९,१) इति च । कृत्स्नस्य जगतो मातृभूता आपः । 'अम्बयो यन्त्यध्वभिरित्यापो वा अम्बयः' ( कौ.ब्रा. १२,२) इति हि कौषीतकिब्राह्मणम् । 'इन्द्राय षट् सहस्राण्यपोत्रं प्रजापतिः प्रायच्छत्ता अम्बयः' इति शाट्यायनकम् । ता आपः । अध्वरीयताम् । ध्वरो हिंसा न विद्यतेस्मिन्निति अध्वरः ज्योतिष्टोमादिर्यागः । तम् आत्मन इच्छताम्--ननु ज्योतिष्टोमादौ अग्नीषोमीयसवनीयानुबन्ध्याः पशव आलभ्यन्ते कथं तत्र हिंसाऽभाव इति चेत् , मैवम् । नात्र हिंसाया अभावं ब्रूमः । किंतु तज्जनितप्रत्यवायाभावम् । तथाहि -- 'न हिंस्यात् सर्वभूतानि' इति सामान्यशास्त्रं विशेषशास्त्र क्रोडीकृतविषयपरिहारेणैव प्रवर्तत इति हि परीक्षकप्रसिद्धिः । 'पञ्चदश सामिधेनीरन्वाह' (तै २,५,८,२) इति सामान्यविहितस्य सामिधेनीपाञ्चदश्यस्य 'सप्तदशानुब्रूयाद्वैश्यस्य' (तै २,५,१०,२) इत्येवं विशेषविहितसामिधेनीसाप्तदश्यस्य विषयाननुप्रवेशेनैव प्रवृत्तेः शास्त्रे निर्णीतत्वात् । तथा च- 'अग्नीषोमीयं पशुम् आलभेत' इति विशेषशास्त्रविहितविषयपरिहारेण 'न हिंस्याद्' इति सामान्यशास्त्रं व्यर्थहिंसामेव अवलम्बत इति वैधहिंसाया निषिद्धत्वाभावात् नानर्थहेतुत्वम् । एतदेवाभिप्रेत्य उक्तम् अध्वर इति । ननु 'अग्नीषोमीयं पशुम् आलभेत' इत्यादिवत् श्येनेनाभिचरन् यजेत' इत्यादौ अभिचारस्यापि विहितत्वात् नानर्थहेतुत्वम् इति चेत्, मैवम् । श्येनादियागस्य विहितत्वेपि तत्साध्यहिंसाया अग्नीषोमीयपशुहिंसावद् विधिविषयत्वाभावेन निषेधशास्त्रानुप्रवेशाद् अनर्थत्वात् । तथा च तत्साधनभूतः श्येनयागोपि तद्द्वारा अनर्थ इति । गुरुमते तु श्येनादेरविधेयत्वम् । तत्र रागत एव प्रवृत्तत्वात् । तथा च श्येनवाक्यस्य अयमर्थः

– अभिचारेण शत्रुं यदि जिघांससि तर्हि तव वैदिकोपायः श्येन इति रागप्राप्तायाः शत्रुहिंसायाः साधनमात्रं बोध्यते न तु यागे पुरुषः प्रवर्त्यते श्येनं कुर्विति । तथा चोक्तम् –'साध्यसाधन-भावप्रतीतिमात्रपर्यवसितो हि विधिव्यापारो न प्रयोगपर्यवसितः' इति । अतः श्येनयागे विधितः प्रवृत्त्यभावेन 'न हिंस्यात् सर्वभूतानि' इति निषेधशास्त्रस्य तत्रानुप्रवेशात् श्येनस्य अनर्थत्वम् । एतद्व्युदासार्थमेव 'चोदनालक्षणोऽर्थो धर्मः' (मी.सू. १,१,२) इत्यत्र भगवता जैमिनिना अर्थपदेन धर्मो विशेषितः । नन्वेवं श्येनाङ्गभूताग्नीषोमीयपशुहिंसायाम् अपि अनर्थता प्रसज्येतेति । नैतत् । वैषम्यात् । न हि श्येनयागवत् तदितिकर्तव्यतायां रागतः प्रवर्तते पुरुषः, किं तु विधित एव । तथा चोक्तम् - कामाधिकारे करणांशे रागतः प्रवृत्तिः अङ्गेषु तु वैधी इति । तद् अलम् अतिप्रसङ्गेन ।

ಜ್ಯೋತಿಷ್ಟೋಮಾದಿಯಾಗಗಳಿಗೆ ಅಧ್ವರ ಎಂಬ ಹೆಸರಿದೆ. ಅಧ್ವರ ಎಂದರೆ ಯಾವುದರಲ್ಲಿ ಹಿಂಸೆ ಇರುವುದಿಲ್ಲವೋ ಅದು. ಅಲ್ಲ ಜ್ಯೋತಿಷ್ಟೋಮಾದಿಯಾಗಗಳಲ್ಲಿಯೂ ಅಗ್ನೀಷೋಮೀಯ-ಸವನೀಯ-ಪಶುಹಿಂಸೆ ಕಂಡಿದೆ. ಹಾಗಾಗಿ ಹಿಂಸೆ ಇಲ್ಲ ಎಂದು ಹೇಗೆ ಹೇಳಲು ಸಾಧ್ಯ?

ಹೀಗೆ ಪ್ರಶ್ನೆ ಮಾಡಬೇಡಿ. ಏಕೆಂದರೆ ಇಲ್ಲಿ ಹಿಂಸೆಯನ್ನು ಇಲ್ಲ ಎಂದು ಹೇಳುತ್ತಿಲ್ಲ. ಹೊರತು ಹಿಂಸೆಯಿಂದ ಉಂಟಾಗುವ ಪಾಪವಿಲ್ಲ ಎಂದಷ್ಟೇ ಹೇಳುತ್ತಿರುವುದು. ಅದು ಹೀಗೆ 'ನ ಹಿಂಸ್ಯಾತ್ ಸರ್ವಭೂತಾನಿ' ಎಂಬ ಸಾಮಾನ್ಯವಾದ ಶಾಸ್ತ್ರವು ವಿಶೇಷಶಾಸ್ತ್ರದ ವಿಷಯವನ್ನು ಬಿಟ್ಟೇ ಪ್ರವೃತ್ತಿ ಮಾಡುವುದು ಎಂಬುದು ಪರೀಕ್ಷಕರಲ್ಲಿ ಅರ್ಥಾತ್ ಶಾಸ್ತ್ರಜ್ಞರಲ್ಲಿ ಪ್ರಸಿದ್ಧಿ ಇದೆ. ಹಾಗಾಗಿ 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬ ವಿಶೇಷಶಾಸ್ತ್ರವು ವಿಧಾನ ಮಾಡಿದ ವಿಷಯವನ್ನು ಪರಿತ್ಯಾಗಮಾಡಿ 'ನ ಹಿಂಸ್ಯಾತ್' ಎಂಬ ಸಾಮಾನ್ಯಶಾಸ್ತ್ರವು ವ್ಯರ್ಥವಾದ ಹಿಂಸೆಯನ್ನು ಮಾಡಬಾರದು ಎಂಬುದರಲ್ಲಿಯೇ ತಾತ್ಪರ್ಯವನ್ನು ಹೊಂದಿದೆ. ಏಕೆಂದರೆ, ವೈಧಹಿಂಸೆಯು ಅರ್ಥಾತ್ ವಿಧಿಬೋಧಿತವಾದ ಹಿಂಸೆಯು ನಿಷಿದ್ಧವಲ್ಲ. ಆದ್ದರಿಂದ ಅನರ್ಥಕ್ಕೆ ಕಾರಣವೂ ಆಗಿಲ್ಲ. ಇದೆಲ್ಲವನ್ನೂ ಮನಸ್ಸಿನಲ್ಲಿಟ್ಟುಕೊಂಡು ಈ ಮಂತ್ರದಲ್ಲಿ "ಅಧ್ವರ" ಎಂದಿದ್ದಾರೆ. ಅಲ್ಲ। ಅಗ್ನೀಷೋಮೀಯಪಶ್ವಾಲಂಭನದಲ್ಲಿ ನೀವು ಪರಿಹಾರಕೊಟ್ಟಂತೆ "ಶ್ಯೇನೇನ ಅಭಿಚರನ್ ಯಜೇತ" ಎಂಬಲ್ಲಿಯೂ ಅಭಿಚಾರಕೃತ್ಯವು ಅನರ್ಥಕ್ಕೆ ಕಾರಣವಲ್ಲ ಎಂದು ಹೇಳಬಹುದಲ್ಲವೇ? ಏಕೆಂದರೆ ಶ್ಯೇನಾದಿಯಾಗವು ಕೂಡ ವಿಹಿತವೇ ಆಗಿದೆ. ಆದರೆ ಇದು ಸರಿಯಲ್ಲ. ಶ್ಯೇನಾದಿ-ಯಾಗವು ವಿಹಿತವಾಗಿದೆ ಎನ್ನಲು ಬಂದರೂ ಅದರಿಂದುಂಟಾಗುವ ಹಿಂಸೆಯು ಅಗ್ನಿಷೋಮೀಯ-ಪಶುಹಿಂಸೆಯಂತೆ ವಿಧಿಶಾಸ್ತ್ರಕ್ಕೆ ವಿಷಯವಾಗದೇ ನಿಷೇಧಶಾಸ್ತ್ರಕ್ಕೆ ವಿಷಯವಾಗುವುದರಿಂದ ಅನರ್ಥಕಾರಣವಾಗಿದೆ.

ಇನ್ನು ಪ್ರಾಭಾಕರಮತದಲ್ಲಿ ಶ್ಯೇನಾದಿಯಾಗಗಳು ವಿಧಿಬೋಧಿತವಲ್ಲ. ಹೊರತು ರಾಗದಿಂದಲೇ ಅಲ್ಲಿ ಪುರುಷರ ಪ್ರವೃತ್ತಿ. ಆದ್ದರಿಂದ 'ಶ್ಯೇನೇನಾಭಿಚರನ್ ಯಜೇತ' ಎಂಬ ವಾಕ್ಯಕ್ಕೆ ಇಷ್ಟು ಅರ್ಥ. ಅಭಿಚಾರದಿಂದ ನೀನು ಶತ್ರುವನ್ನು ಒಂದು ವೇಳೆ ಹಿಂಸೆ ಮಾಡಲು ಇಚ್ಛಿಸಿದರೆ ನಿನಗೆ ಈ ಶ್ಯೇನವು ವೈದಿಕೋಪಾಯವಾಗಿದೆ ಎಂದು ರಾಗತಃ ಪ್ರಾಪ್ತವಾದ ಶತ್ರುಹಿಂಸೆಗೆ ಸಾಧನವಾಗಿದೆ ಎಂದಿಷ್ಟೇ ತಿಳಿಸುತ್ತಿದೆ ಹೊರತು ಇಂತಹ ಯಾಗದಲ್ಲಿ ಪುರುಷನು ಪ್ರವೃತ್ತಿಮಾಡಲಿ (ಶ್ಯೇನಂ ಕುರು) ಎಂದು ವಿಧಿಸುತ್ತಿಲ್ಲ. ಆದ್ದರಿಂದ ಶ್ಯೇನಯಾಗದಲ್ಲಿ ವಿಧಿತಃ ಪ್ರವೃತ್ತಿಯಿಲ್ಲ. ಹೀಗಾಗಿ ಶ್ಯೇನವು ಅನರ್ಥ-ಕಾರಣವೇ. ಇನ್ನು 'ನ ಹಿಂಸ್ಯಾತ್ ಸರ್ವಭೂತಾನಿ' ಎಂಬುದು ವಿಧಿಬೋಧಿತವಾದ್ದರಿಂದ ಅನರ್ಥಹೇತುವಲ್ಲ ಎಂಬುದರಲ್ಲೇ ತಾತ್ಪರ್ಯೋಪೇತ.

ಇಷ್ಟನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡೇ ಜೈಮಿನಿಋಷಿಗಳು ಚೋದನಾಲಕ್ಷಣಃ ಅರ್ಥಃ ಧರ್ಮಃ' ಎಂಬ ಸೂತ್ರದಲ್ಲಿ ಧರ್ಮ ಎಂದರೆ ಅರ್ಥವತ್ತಾದದ್ದು ಎಂದು ತಿಳಿಸಿದ್ದಾರೆ. ಇದರಿಂದ ಅನರ್ಥವಾದದ್ದನ್ನು ವ್ಯಾವೃತ್ತಿ ಮಾಡಿದಂತಾಯಿತು. ಅಲ್ಲ। ಇಷ್ಟಾದರೂ ಅಗ್ನೀಷೋಮೀಯ-ಪಶುಹಿಂಸೆಯಿಂದ ಅನರ್ಥ ಏಕೆ ಸಂಭವಿಸಬಾರದು? ಎಂದು ಕೇಳುವಂತಿಲ್ಲ. ವ್ಯತ್ಯಾಸವಿರುವು-ದರಿಂದ. ಶ್ಯೇನಯಾಗದಂತೆ ಅಗ್ನೀಷೋಮೀಯಪಶುಹಿಂಸೆಯನ್ನು ಮಾಡಲು ಯಾವ ಪುರುಷನೂ ರಾಗತಃ ಪ್ರವೃತ್ತಿಮಾಡುವುದಿಲ್ಲ ಹೊರತು ವಿಧಿಬೋಧಿತವಾದ್ದರಿಂದ ಪ್ರವೃತ್ತಿಮಾಡುತ್ತಾನಷ್ಟೆ ಎಂದು ತಿಳಿಯಬೇಕು.

## ಔಪಾಧಿಕವ್ಯಭಿಚಾರವು ಅಪ್ರಾಮಾಣ್ಯಕಾರಣವಲ್ಲ

** एतदुक्तं भवति – यथा साधनस्य साध्यसाहित्यमात्रं न प्रामाण्योपयोगि, किन्तु निरुपाधिकमेव । अन्यथा सोपाधिकसाध्यसम्बन्धस्य मैत्रीतनयत्वादेरपि श्यामतासाधनत्वप्रसङ्गात् । तथा व्यभिचारोऽपि निरुपाधिक एवासाधनत्वे हेतुः । यथा प्रमेयत्वस्य नित्यत्वेन । नहि प्रमेयत्वं स्वभावेन नित्यत्वाव्यभिचारि, व्यभिचारि तु निमित्तान्तरेणेत्यत्र नियामकं पश्यामः । यस्तु स्वभावेन साध्याव्यभिचारिणोऽपि साधनस्यौपाधिको व्यभिचारो नासावप्रामाण्यकारणमिति । (सुधा)

ಇದನ್ನು ಹೇಳಿದಂತಾಯಿತು – ಹೇಗೆ ಹೇತುವಿಗೆ ಸಾಧ್ಯಸಂಬಂಧವಷ್ಟೇ ಪ್ರಾಮಾಣ್ಯಕ್ಕೆ ಉಪಯೋಗಿಯಲ್ಲ ಹೊರತು ನಿರುಪಾಧಿಕವಾದ ಸಾಧ್ಯಸಂಬಂಧ ಇರುವ ಹೇತುವೇ ಪ್ರಮಾಣ. ಇಲ್ಲದಿದ್ದರೆ ಉಪಾಧಿಸಹಿತವಾದ ಸಾಧ್ಯದ ಸಂಬಂಧ ಇರುವುದರಿಂದ ಮೈತ್ರೀತನಯತ್ವ ಮೊದಲಾದ ಹೇತುಗಳು ಶ್ಯಾಮತ್ವವನ್ನು ಸಾಧನೆ ಮಾಡಬೇಕಿತ್ತು. 'ಅಯಂ ಶ್ಯಾಮಃ ಮೈತ್ರೀ-ತನಯತ್ವಾತ್' ಎಂಬುದಾಗಿ. ಇಲ್ಲಿ ಉಪಾಧಿಯು ಶಾಕಪಾಕಜತ್ವ. ಹಾಗೆ ವ್ಯಭಿಚಾರದೋಷವೂ

ಕೂಡ ನಿರುಪಾಧಿಕವಾಗಿಯೇ ಹೇತುವು ಅಸಾಧನವಾಗುವುದಕ್ಕೆ ಕಾರಣ. ಹೇಗೆ ಎಂದರೆ 'ಪ್ರಮೇಯತ್ವಕ್ಕೆ ನಿತ್ಯತ್ವದೊಂದಿಗೆ'. ಪ್ರಮೇಯತ್ವವು ಸ್ವಭಾವತಃ ನಿತ್ಯತ್ವವ್ಯಭಿಚಾರಿಯಲ್ಲ ಹೊರತು ಬೇರೆ ನಿಮಿತ್ತದಿಂದ ವ್ಯಭಿಚಾರವಾಗಿದೆ ಎಂಬ ನಿಯಾಮಕವನ್ನು ಹೇಳಲು ಬರುವುದಿಲ್ಲ. ನಿತ್ಯತ್ವ ಇಲ್ಲದೇ ಇರುವ ಅನಿತ್ಯವಸ್ತುಗಳಲ್ಲಿಯೂ ಪ್ರಮೇಯತ್ವ ಇರುವುದರಿಂದ. ಆದ್ದರಿಂದಲೇ ಎಲ್ಲೆಲ್ಲಿ ಪ್ರಮೇಯತ್ವವಿದೆಯೋ ಅಲ್ಲಲ್ಲಿ ನಿತ್ಯತ್ವವಿದೆಯೆಂದು ಹೇಳಲು ಸಾಧ್ಯವಿಲ್ಲ. ಸಾಧ್ಯ-ವ್ಯಭಿಚಾರವು ಹೇತುವಿಗೆ ಸ್ವಭಾವತಃ ಇಲ್ಲದೆ ಉಪಾಧಿನಿಮಿತ್ತವಾಗಿ ಬಂದರೆ ಅದು ಹೇತುವಿನ ಅಪ್ರಾಮಾಣ್ಯಕ್ಕೆ ಕಾರಣವಾಗುವುದಿಲ್ಲ.

## 'ಸಾಮಾನ್ಯಲಕ್ಷಣಪ್ರಾಪ್ತಂ ಹಿ ಪುನರ್ವಿಶೇಷಲಕ್ಷಣೈ-ರಪೋದ್ಯತೇ' ಎಂಬ ವ್ಯಾಕರಣಪ್ರಕ್ರಿಯೆ

(ಲಘುರಸರಂಜಿನೀ) — ಆನಂದಮಯಸುಧಾಯಾಂ ಚ — ಅತ್ರ ಕೇಚಿದ್ ವ್ಯಭಿಚಾರಮುದ್ಭಾವ-ಯಂತಿ । ತದಸತ್ । ಸಾಮಾನ್ಯಲಕ್ಷಣಪ್ರಾಪ್ತಂ ಹಿ ಪುನರ್ವಿಶೇಷಲಕ್ಷಣೈರಪೋದ್ಯತ ಇತಿ ವ್ಯಾಕರಣಪ್ರಕ್ರಿಯಾ । ಯಥೋಕ್ತಂ 'ಸಾಮಾನ್ಯವಿಶೇಷವತಾ ಲಕ್ಷಣೇನ' ಇತಿ । ತತ್ರ ವಿಶೇಷ-ಲಕ್ಷಣಾನ್ಯಪರ್ಯಾಲೋಚ್ಯ ಸಾಮಾನ್ಯಲಕ್ಷಣೇ ವ್ಯಭಿಚಾರೋದ್ಭಾವನಂ ಕಥಂ ಯುಜ್ಯತೇ? - ಇತಿ । ಏವಂ ಚಾಲ್ಬಾಚ್ ತರಮಿತಿ ವಿಧಿರ್ವಸ್ತುತೋ ನಿತ್ಯ ಏವ । ತಸ್ಯ ಯಥಾ ಪ್ರಾಧಾನ್ಯ-ಸೂಚನಾದಿಕಾರಣಾಂತರವಶಾತ್ 'ನಿರ್ಣೀತಜಯಕಾರಕಃ' ಇತಿ ಮೂಲಮಪವಾದಕಮ್ ಇತ್ಯುಕ್ತಂ ಸುಧಾಯಾಮ್ । ಅನ್ಯಥಾ ವಿಧೇರನಿತ್ಯತ್ವೇ ಪ್ರಯೋಗಸ್ಯ ಉಚ್ಛೃಂಖಲತ್ವಾತ್ 'ನಿರ್ಣೀತಿ-ಜಯಕಾರಕಃ' ಇತಿ ವ್ಯತ್ಯಸ್ತಪ್ರಯೋಗೇಽಪಿ ಪ್ರಾಧಾನ್ಯಸೂಚನಂ ನ ಸ್ಯಾತ್ । ತಥಾ 'ಲಕ್ಷಣಹೇತ್ವೋಃ' ಇತ್ಯಾದಿ ಸೌತ್ರಪ್ರಯೋಗಾ ಅಪಿ ಕಾರಣಾಂತರವಶಾದಪವಾದಕಾ ಏವ । ಅನ್ಯಥಾ ಶಬ್ದಾಂಭೋ-ನಿಧಿವಿಹರಣಚತುರಃ ಪಾಣಿನಿಮುನಿಃ 'ಅಲ್ಬಾಚ್ ತರಮ್' ಇತಿ ಸ್ವಯಮೇವಾಭಿಧಾಯ ಪುನಃ 'ಲಕ್ಷಣಹೇತ್ವೋಃ' ಇತಿ ತದ್ವಿಪರೀತಂ ಸ್ವಯಮೇವ ಪ್ರಯುಂಜನ್ ಸ್ವೋಕ್ತವಿರುದ್ಧಭಾಷೀತಿ ಸರ್ವತ್ರಾನವಧೇಯವಚನಃ ಸ್ಯಾತ್ ।

ಸಂಭಾವಿತಂ ಚೈತತ್ । ಯತ್ ಸಾರ್ವತ್ರಿಕತಯಾ ಪ್ರಸಕ್ತಸ್ಯಾಪಿ ನಿಯಮಸ್ಯ ಕ್ವಚಿದಪವಾದೇನಾ-ಭಾವೇಽಪಿ ನಿತ್ಯತ್ವಮ್ । ಯಥಾಲ್ಪಾಕ್ಷತರತ್ವಂ ಸೂತ್ರಲಕ್ಷಣಂ ಶ್ರುತ್ಯನುಗಮಾದಿರೂಪಪ್ರಯೋ-ಜನಾಂತರಾರ್ಥಮ್ 'ಆಕಾಶ' ಇತ್ಯಾದಿಬಹ್ವಕ್ಷರಪದೋಪೇತೇಷು 'ಆಕಾಶಃ ತಲ್ಲಿಂಗಾತ್' ಇತ್ಯಾದಿಸೂತ್ರೇಷ್ವಭಾವೇಽಪಿ ಸೂತ್ರಾಣಾಂ ನಿತ್ಯಂ ಲಕ್ಷಣಮೇವ ನ ತು ಸರ್ವಥಾ ಅಲಕ್ಷಣಂ ನಾಪ್ಯನಿತ್ಯಮ್ । ಅನ್ಯಥಾ ಸೂತ್ರಾಂತರೇಷ್ವಪಿ ಅಲ್ಪಾಕ್ಷರೋಪೇತಪದಪ್ರಯೋಗ ಏವ ಕಾರ್ಯ

ಇತಿ ನಿಯಮಾಭಾವಪ್ರಸಂಗಾತ್ ಸರ್ವಜ್ಞಶಿಖಾಮಣಿಃ ಸೂತ್ರಕಾರೋಽಪಿ ಸ್ವೋಕ್ತವಿರುದ್ಧ-ಭಾಷೀತ್ಯನವಧೇಯವಚನಃ ಸ್ಯಾತ್ ।

ಆನಂದಮಯಾಧಿಕರಣದ ನ್ಯಾಯಸುಧೆಯಲ್ಲಿಯೂ ಕೂಡ ಈ ರೀತಿಯ ವಿವರಣೆ ಬಂದಿದೆ –

ಪೂರ್ವಾಂತಸ್ವರಿತೇ ಪುಂಸೋರ್ಬಹುವ್ರೀಹಿತ್ವಮೇಷ್ಯತಿ ॥169॥
ಮಹಾವ್ಯಾಕರಣೇ ಸೂತ್ರಮಿತಿ ಸ್ವರವಿನಿರ್ಣಯೇ । (ಅನುವ್ಯಾಖ್ಯಾನ)

ಈ ಕಾರಿಕೆಯ ವಿವರಣೆ ಮಾಡುವಾಗ "ಈ ವಿಷಯದಲ್ಲಿ ಕೆಲವರು ವ್ಯಭಿಚಾರವನ್ನು ಉದ್ಭಾವನೆ ಮಾಡುತ್ತಾರೆ. ಆದರೆ ಅದು ಸರಿಯಲ್ಲ. ಏಕೆಂದರೆ ಸಾಮಾನ್ಯಲಕ್ಷಣದಿಂದ ಅಂದರೆ ಸಾಮಾನ್ಯ-ಸೂತ್ರದಿಂದ ಪ್ರಾಪ್ತವಾದದ್ದನ್ನು ವಿಶೇಷಲಕ್ಷಣಗಳು ಅಂದರೆ ವಿಶೇಷಸೂತ್ರಗಳು ಬಾಧಿಸುತ್ತವೆ ಎಂದು ವ್ಯಾಕರಣಶಾಸ್ತ್ರದ ಪ್ರಕ್ರಿಯೆ. ಇದನ್ನು 'ಸಾಮಾನ್ಯವಿಶೇಷವತಾಲಕ್ಷಣೇನ' ಎಂದು ಮಹಾ-ಭಾಷ್ಯಕಾರನು ತಿಳಿಸಿದ್ದಾನೆ. ಅಲ್ಲಿ ವಿಶೇಷವಿಧಿಗಳನ್ನು ಜ್ಞಾಪಿಸಿಕೊಳ್ಳದೇ ಸಾಮಾನ್ಯವಿಧಿಯಲ್ಲಿ ವ್ಯಭಿಚಾರವನ್ನು ಹೇಳುವುದು ಹೇಗೆ ಸರಿಯಾದೀತು? ಈ ರೀತಿಯಾಗಿ ಅಲ್ಪಾಚ್ ತರಮ್ ಎಂಬ ಸೂತ್ರವು ವಾಸ್ತವಿಕವಾಗಿ ನಿತ್ಯವೇ ಆಗಿದೆ. ಆ ಸೂತ್ರಕ್ಕೆ ಪ್ರಾಧಾನ್ಯಸೂಚನೆ ಮೊದಲಾದ ಬೇರೆ ಕಾರಣದಿಂದ 'ನಿರ್ಣೀತಿಜಯಕಾರಕಃ' ಎಂಬ ಮೂಲವು ಅಪವಾದವಾಗಿ ಪ್ರಯುಕ್ತವಾಗಿದೆ ಎಂದು ಸುಧಾದಲ್ಲಿ ಹೇಳಿದ್ದಾರೆ. ಇಲ್ಲದಿದ್ದರೆ ಸೂತ್ರವು ಅನಿತ್ಯವಾದ ಪ್ರಯುಕ್ತ ಪ್ರಯೋಗಮಾಡು-ವುದಕ್ಕೆ ಕಡಿವಾಣವಿಲ್ಲದಿರುವುದರಿಂದ ನಿರ್ಣೀತಿಜಯಕಾರಕಃ ಎಂದು ವ್ಯತ್ಯಾಸವಾಗಿ ಪ್ರಯೋಗ-ಮಾಡಿದಾಗಲೂ ಪ್ರಾಧಾನ್ಯವನ್ನು ಸೂಚನೆ ಮಾಡಿದಂತೆ ಆಗುತ್ತಿರಲಿಲ್ಲ. ಹಾಗೆಯೇ 'ಲಕ್ಷಣಹೇತ್ವೋಃ ಕ್ರಿಯಾಯಾಃ' 'ಸಮುದ್ರಾಭ್ರಾದ್ಘಃ' ಮುಂತಾದ ಸೂತ್ರದಲ್ಲಿ ಮಾಡಿದ ಪ್ರಯೋಗಗಳೂ ಕೂಡ ಕಾರಣವಿಶೇಷದಿಂದ ಅಪವಾದಗಳೇ ಆಗಿವೆ. ಇಲ್ಲದಿದ್ದರೆ ಶಬ್ದಸಮುದ್ರದಲ್ಲಿ ವಿಹರಿಸುವ ಚಾತುರ್ಯವುಳ್ಳ ಪಾಣಿನಿಋಷಿಗಳು ಅಲ್ಪಾಚ್ ತರಂ ಎಂದು ತಾವೇ ಹೇಳಿ ಮತ್ತೆ ಲಕ್ಷಣಹೇತ್ವೋಃ ಕ್ರಿಯಾಯಾಃ' ಎಂದು ಅದಕ್ಕಿಂತ ವಿಪರೀತವಾಗಿ ತಾವೇ ಪ್ರಯೋಗಮಾಡುತ್ತ ತಮ್ಮ ಮಾತಿಗೆ ತಾವೇ ವಿರುದ್ಧವಾದ ಮಾತನ್ನು ಆಡಿದಂತೆ ಆಯಿತು. ಆದ್ದರಿಂದ ಅವರ ಎಲ್ಲ ಮಾತುಗಳಲ್ಲಿ ವಿಶ್ವಾಸಬರದೇ ಇರಬೇಕಾದೀತು ।

ಅಲ್ಲದೆ, ನಾವು ಹೇಳಿದ ವಿಷಯವು ಸಂಭಾವಿತವೇ. ಯಾವ ನಿಯಮವು ಎಲ್ಲ ಕಡೆ ಬರುವುದಾಗಿ ಇದ್ದು ಕೆಲವು ಕಡೆ ಮಾತ್ರ ಅಪವಾದಕಾರಣದಿಂದ ಬರದೇ ಇದ್ದರೂ ಅದು ನಿತ್ಯವಾಗಿರುವುದು. ಉದಾ – ಅಲ್ಪಾಕ್ಷರತ್ವ ಎಂಬುದು ಸೂತ್ರದ ಲಕ್ಷಣ. ಇದು "ಆಕಾಶಃ ತಲ್ಲಿಂಗಾತ್" ಮುಂತಾದ ಬಹಳ ಅಕ್ಷರಗಳ ಪದಗಳಿಂದ ಕೂಡಿರುವ ಸೂತ್ರದಲ್ಲಿ ಶ್ರುತ್ಯನುಗಮಮೊದಲಾದ ಬೇರೆ ಪ್ರಯೋಜನಕ್ಕೋಸ್ಕರ ಇಲ್ಲದಿದ್ದರೂ ಸೂತ್ರಗಳಿಗೆ ಲಕ್ಷಣವು ನಿತ್ಯವೇ ಆಗಿದೆ. (ಅದೇ ಲಕ್ಷಣ-

ವಾಗಿದೆ ಹೊರತು ಬೇರೆಯದಲ್ಲ) ಅನಿತ್ಯವೆಂದಲ್ಲ. ಇಲ್ಲದಿದ್ದರೆ ಬೇರೆ ಸೂತ್ರಗಳಲ್ಲಿಯೂ ಕೂಡ ಅಲ್ಪಾಕ್ಷರಗಳಿಂದ ಕೂಡಿದ ಪದವನ್ನೇ ಪ್ರಯೋಗಿಸಬೇಕು ಎಂಬ ನಿಯಮ ಇಲ್ಲದಿರಬೇಕಾದೀತು. ಸರ್ವಜ್ಞಶಿಖಾಮಣಿಗಳಾದ ವೇದವ್ಯಾಸರೂ ಕೂಡ ತಾವು ಹೇಳಿದ ಮಾತಿಗೆ ತಾವೇ ವಿರುದ್ಧವಾಗಿ ಮಾತನಾಡಿದಂತೆ ಆದೀತು. ಆದ್ದರಿಂದ ಅವರ ಎಲ್ಲ ಮಾತುಗಳಲ್ಲಿಯೂ ಅವಿಶ್ವಾಸ ಮೂಡ-ಬೇಕಾಗಿತ್ತು.

*** न केवलं पूर्वपदान्तस्वरितत्वे बहुव्रीहित्वम्, उदाहरणबलात्, उदाहरणेऽप्युत्तरश्रुतिबलात् कल्प्यते । किन्नाम । अनुशासनमप्येवमस्तीत्याह पूर्वान्तस्वरित इति ।

पूर्वान्तस्वरिते पुंसोर्बहुव्रीहित्वमेष्यति ।
महाव्याकरणे सूत्रमिति स्वरविनिर्णये ॥१५२ ॥

पुंसोः पुंल्लिङ्गयोः समस्यमानयोः पूर्वपदान्ते स्वरिते सति तत्समासप्रातिपदिकं बहुव्रीहित्वमेष्यतीति सूत्रार्थः । (सुधा)

ಆನಂದಮಯಾಧಿಕರಣದಲ್ಲಿ "ಬ್ರಹ್ಮಾಧಿಪತಿಃ, ಇಂದ್ರಶತ್ರುಃ" ಮೊದಲಾದ ಪದಗಳನ್ನು ವಿವರಿ-ಸುವ ಸಂದರ್ಭದಲ್ಲಿ ಈ ಭಾಗ ಬಂದಿದೆ. ಪೂರ್ವಪದದ ಕೊನೆಗಿರುವ ಸ್ವರಾಕ್ಷರವು ಸ್ವರಿತವಾದರೆ ಅದನ್ನು ಬಹುವ್ರೀಹಿ ಎಂದು ಪರಿಗಣಿಸಬೇಕು ಎಂಬುವ ಅಂಶ ಕೇವಲ ಉದಾಹರಣೆಯಿಂದಾಗಿ ಸಿಕ್ಕಿದ್ದಲ್ಲ. ಅಥವಾ ಉದಾಹರಣೆಯಲ್ಲಿಯೂ ಅಲ್ಲಿ ಪಠಿಸಿದ ಮುಂದಿನ ಶ್ರುತಿಬಲದಿಂದಲ್ಲ. ಹೊರತು ಅನುಶಾಸನವೇ ಹೀಗಿದೆ ಎಂದು ಹೇಳಲು 'ಪೂರ್ವಾಂತಸ್ವರಿತೇ' ಎಂದಿದ್ದಾರೆ. ಸಮಾಸಮಾಡುವ ಎರಡು ಪುಲ್ಲಿಂಗ ಶಬ್ದಗಳ ಮಧ್ಯೆ ಪೂರ್ವಪದದ ಕೊನೆಯ ಸ್ವರವು ಸ್ವರಿತವಾದರೆ ಆ ಸಮಾಸಪ್ರಾತಿಪದಿಕವು ಬಹುವ್ರೀಹಿತ್ವವನ್ನು ಪಡೆಯುತ್ತದೆ ಎಂದು ಈ ಮಹಾವ್ಯಾಕರಣಸೂತ್ರದ ಅರ್ಥ.

### ಕಾರಣಾಂತರದಿಂದ ಕ್ವಚಿದಪ್ರಸಕ್ತವಾದ ವಿಧಿಯೂ ನಿತ್ಯವೇ

(ಲಘುರಸರಂಜಿನೀ) – ಯಥಾ ವಾ ಪ್ರತಿಬಂಧಾದಿನಿಮಿತ್ತಾಂತರವಶಾತ್ ಕ್ವಚಿತ್ ಕಾರ್ಯಮ-ಜನಯದಪಿ ಕಾರೀರ್ಯಾದಿ ವೃಷ್ಟ್ಯಾದಿಕಾರಣಂ ಭವತ್ಯೇವ । ತಥಾ 'ಅಲ್ಪಾಚ್ ತರಮ್' ಇತಿ ವಿಧಿರಪಿ ಕಾರಣಾಂತರವಶಾತ್ ಕ್ವಚಿದಪ್ರಸಕ್ತೋಽಪಿ ನಿತ್ಯ ಏವ । ಕಾರಣಾಂತರಂ ಚ ಮುನಿವಚನಸ್ಯ ನೈರರ್ಥಕ್ಯಸ್ಯಾಯೋಗಾತ್ ಸಾಮಾನ್ಯತಃ ಸಿದ್ಧಮೇವ । ವಿಶೇಷತಸ್ತ್ವನವಸರಾನ್ನ ವಿಚಾರ್ಯತೇ । ನ ಚಾನಿತ್ಯತ್ವಜ್ಞಾಪನಮೇವಾಸ್ತು ಕಾರಣಾಂತರಮಿತಿ ವಾಚ್ಯಮ್ । ತಥಾತ್ವೇಽನ್ಯತರಸ್ಯಾಮ್ ಇತ್ಯಾದಿ-ಸ್ಪಷ್ಟಶಬ್ದಾಂತರಪ್ರಯೋಗಂ ವಿಹಾಯ ಸ್ವೋಕ್ತವಿರುದ್ಧಭಾಷಣಾಯೋಗಾದಿತಿ । ನನ್ವೇವಂ ಸತಿ 'ಅಲ್ಪಾಚ್ ತರಮ್' ಇತ್ಯಸ್ಯಾನಿತ್ಯತ್ವಾತ್ 'ಶಕುನಿಸೂತ್ರಯೋರಿತಿ ಸಾಧು' ಇತಿ ವಿಷ್ಣುತತ್ತ್ವ-

ನಿರ್ಣಯಟೀಕಾವಿರೋಧ ಇತಿ ಚೇನ್ನ । ತತ್ರ 'ಅನಿತ್ಯತ್ವಾತ್' ಇತ್ಯಸ್ಯ ಕಾರಣಾಂತರಾಪೋದಿತತ್ವಾತ್ ಇತ್ಯೇವಮರ್ಥಕತ್ವೇನ ಉಪಪನ್ನತ್ವಾತ್ । ಅನ್ಯಥಾ ಪ್ರಾಜ್ಞಶಿರೋಮಣಿಃ ಸರ್ವಜ್ಞಕಲ್ಪಷ್ಟೀಕಾಕಾರೋಽಪಿ ವಿಷ್ಣುತತ್ವನಿರ್ಣಯಟೀಕಾಸುಧಯೋರುನ್ಮತ್ತವತ್ ಪರಸ್ಪರವಿರುದ್ಧಂ ಕಥನಮಭಿದಧ್ಯಾತ್ ।

ಅಥವಾ ಪ್ರತಿಬಂಧಕ ಮೊದಲಾದ ಬೇರೆ ಕಾರಣದಿಂದ ಕೆಲವು ಸಲ ಕಾರ್ಯವನ್ನು ಹುಟ್ಟಿಸದಿದ್ದರೂ ಕೂಡ ಕಾರೀರಿ ಮೊದಲಾದ ಯಾಗಗಳು ಮಳೆ ಮುಂತಾದವುಗಳಿಗೆ ಕಾರಣ ಆಗೇ ಆಗುತ್ತವೆ. ಹಾಗೆ 'ಅಲ್ಪಾಚ್ ತರಂ' ಎಂಬ ಸೂತ್ರವು ಕೂಡ ಬೇರೆ ಕಾರಣದಿಂದ ಕೆಲವು ಕಡೆ ಪ್ರಸಕ್ತವಾಗದಿದ್ದರೂ ಕೂಡ ನಿತ್ಯವೇ ಆಗಿದೆ. ಬೇರೆ ಕಾರಣವಾದರೂ ಮುನಿಗಳ ವಚನವು ವ್ಯರ್ಥವಾಗಲು ಸಾಧ್ಯವಿಲ್ಲದಿರುವುದರಿಂದ ಸಾಮಾನ್ಯತಃ ಸಿದ್ಧವಾಗಿಯೇ ಇದೆ. ವಿಶೇಷವಾಗಿಯಾದರೂ ಆ ಸಂದರ್ಭದಲ್ಲಿ ಅವಸರವಿಲ್ಲದಿರುವುದರಿಂದ ವಿಚಾರ ಮಾಡುವುದಿಲ್ಲ. ಅಲ್ಲ. ಅನಿತ್ಯತ್ವವನ್ನು ಆ ಸೂತ್ರಗಳಿಗೆ ಜ್ಞಾಪಿಸುವುದೇ ಬೇರೆ ಕಾರಣ ಎಂದು ಹೇಳೋಣ. ಅಂದರೆ ಅದು ಸರಿಯಲ್ಲ. ಹಾಗಿದ್ದಪಕ್ಷದಲ್ಲಿ 'ಅನ್ಯತರಸ್ಯಾಮ್' ಮುಂತಾದ ಸ್ಪಷ್ಟವಾದ ಬೇರೆ ಶಬ್ದಗಳ ಪ್ರಯೋಗವನ್ನು ಬಿಟ್ಟು ಈ ರೀತಿ ತನ್ನ ಮಾತಿಗೆ ತಾನೇ ವಿರುದ್ಧವಾಗಿ ಹೇಳುವುದು ಕೂಡುವುದಿಲ್ಲ.

ಹೀಗೆ ನಿತ್ಯತ್ಯವನ್ನು ಸಾಧಿಸಿದರೆ 'ಅಲ್ಪಾಚ್ ತರಮ್' ಎಂಬ ಸೂತ್ರವು ಅನಿತ್ಯವಾದ್ದರಿಂದ 'ಶಕುನಿಸೂತ್ರಯೋಃ' ಎಂಬ ಪ್ರಯೋಗವು ಸರಿಯಾಗಿದೆ ಎಂದು ಹೇಳುವ ವಿಷ್ಣುತತ್ವನಿರ್ಣಯಟೀಕೆಯ ವಿರೋಧವು ಬರುತ್ತದೆ ಎಂದರೆ ಇಲ್ಲ. ಆ ಟೀಕಾದಲ್ಲಿರುವ 'ಅನಿತ್ಯತ್ವಾತ್' ಎಂಬ ಪದಕ್ಕೆ 'ಕಾರಣಾಂತರದಿಂದ ಅಪವಾದವುಳ್ಳದ್ದಾದ್ದರಿಂದ' ಎಂದಭಿಪ್ರಾಯ. ಇಲ್ಲದಿದ್ದರೆ ಜ್ಞಾನಿಶಿರೋಮಣಿಗಳಾದ ಸರ್ವಜ್ಞಕಲ್ಪರಾದ ಟೀಕಾಕಾರರೂ ಕೂಡ ವಿಷ್ಣುತತ್ವನಿರ್ಣಯಟೀಕಾ ಹಾಗೂ ಸುಧಾಗಳಲ್ಲಿ ಹುಚ್ಚನಂತೆ ಪರಸ್ಪರವಿರುದ್ಧವಾದ ಮಾತುಗಳನ್ನು ಹೇಗೆ ಹೇಳಿಯಾರು?

## ವ್ಯತ್ಯಸ್ತಪ್ರಯೋಗ ಆಮ್ನಾಯಪ್ರಾಧಾನ್ಯಸೂಚಕ ಹೌದೋ ಅಲ್ಲವೋ?

(ಲಘುರಸರಂಜಿನೀ) — ನನು ತಥಾಪಿ ಯದುಕ್ತಮ್ 'ಆಮ್ನಾಯಸ್ಮೃತೀತಿ ವ್ಯತ್ಯಸ್ತಪ್ರಯೋಗಸ್ಯಾಮ್ನಾಯೇ ಪ್ರಾಧಾನ್ಯಜ್ಞಾಪನಂ ಪ್ರಯೋಜನಮ್' ಇತಿ ತದಯುಕ್ತಮ್ । 'ಸುವಾಕ್ಯೈಃ' ಇತ್ಯಸ್ಯ ಪ್ರಸಿದ್ಧಾರ್ಥಕತ್ವೇಽಪಿ ಸಾಮಾನ್ಯಶಬ್ದತ್ವಾತ್ ಸುವಾಕ್ಯಮಾತ್ರೇ ಸಾಮ್ಯಪ್ರತೀತಿಪ್ರಸಕ್ತೌ ತತ್ರಾಮ್ನಾಯಸ್ಯ ಪ್ರಾಧಾನ್ಯಪ್ರದರ್ಶನಾರ್ಥಮ್ 'ಆಮ್ನಾಯಸ್ಮೃತಿ' ಇತಿ ವಿವರಣಂ ಕೃತಮಿತಿ ತೇನೈವ ತಜ್ಞಾಪನಾತ್ । ಯಥೋಕ್ತಮುಕ್ತಾಯಾಂ ಸುಧಾಯಾಮ್ – 'ಉಭಯಾರ್ಥಃ ಸ್ಯಾತ್' ಇತ್ಯುಕ್ತೇ ಸಾಮ್ಯಪ್ರತೀತಿಪ್ರಸಕ್ತೌ 'ನಿರ್ಣೀತಿಜಯಕಾರಕಃ' ಇತಿ ತತ್ವನಿರ್ಣೀತೇಃ ಪ್ರಾಧಾನ್ಯಪ್ರದರ್ಶನಾರ್ಥಂ

ವಿವರಣಂ ಕೃತಮಿತೀತಿ ಚೇತ್ । ಕಿಂ ಸ್ವವಾಕ್ಯಸ್ಯ ಸ್ವೇನೈವ ವಿವರಣಂ ಜ್ಞಾಪಕಮಿತ್ಯಭಿಪ್ರೇತಂ ಕಿಂ ವಾ ವಿವರಣಮಾತ್ರಮ್ । ನಾದ್ಯಃ । ಪ್ರಕೃತೇ ತದಭಾವಾತ್ । ದ್ವಿತೀಯೇ ವ್ಯತ್ಯಸ್ತಪ್ರಯೋಗರೂಪ ವ್ಯಭಿಚಾರಕರಣಸ್ಯ ಜ್ಞಾಪಕಾಂತರತ್ವಸಂಭವಾತ್ । ಅತ ಏವ ತತ್ರೈವ ಸುಧಾಯಾಮ್ ಅಲ್ಪಾಚ್-ತರಮಿತಿ ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನಾಪೀತ್ಯಪಿಶಬ್ದಃ ಪ್ರಯುಕ್ತಃ ।

ಅಲ್ಲ। ಇಷ್ಟಾದರೂ 'ಆಮ್ನಾಯಸ್ಮೃತಿ' ಎಂಬ ವ್ಯತ್ಯಸ್ತಪ್ರಯೋಗಮಾಡುವುದಕ್ಕೆ ಏನು ಪ್ರಯೋಜನ ಎಂಬ ಪ್ರಶ್ನೆಗೆ ಉತ್ತರವಾಗಿ ಆಮ್ನಾಯವನ್ನು ಸ್ಮೃತಿಗಿಂತ ಪ್ರಧಾನವಾಗಿದೆ ಎಂದು ತಿಳಿಸಲು ಹೇಳಿದ್ದು ಎನ್ನುವುದು ಸರಿಯಲ್ಲ.

ಅದು ಹೀಗೆ – 'ಸುವಾಕ್ಯೈಃ' ಎಂಬ ಪದಕ್ಕೆ ಪ್ರಸಿದ್ಧವಾದ ಅರ್ಥವಿದ್ದರೂ ಅರ್ಥಾತ್ ಎಲ್ಲ ವಿಧ-ವಾದ ವಾಕ್ಯಗಳನ್ನು ಹೇಳುತ್ತಿದ್ದರೂ ಆ ಎಲ್ಲವಿಧವಾಕ್ಯಗಳಲ್ಲಿ ವೇದವೇ ಪ್ರಧಾನ ಎಂದು ತಿಳಿಸಲು 'ಆಮ್ನಾಯಸ್ಮೃತಿ' ಎಂಬ ವಿವರಣೆ ಸುಧಾದಲ್ಲಿ ಬಂದಿದೆ. ಇದು ಸುವಾಕ್ಯೈಃ ಎಂಬ ಪದದಿಂದಲೇ ಜ್ಞಾಪಿಸಲ್ಪಟ್ಟಿದೆ.

ಈ ರೀತಿಯ ವಿಷಯವನ್ನು ಸುಧಾದಲ್ಲಿ ಹೇಳಿದ್ದಾರೆಯೂ ಕೂಡ "ಉಭಯಾರ್ಥಃ ಸ್ಯಾತ್ ಎಂದು ಹೇಳಿದರೆ ವಾದಜಲ್ಪಗಳಲ್ಲಿ ಸಾಮ್ಯಪ್ರತೀತಿಯು ಬಂದಾಗ ನಿರ್ಣೀತಿಜಯಕಾರಕಃ ಎಂದು ತತ್ವನಿರ್ಣಯವು ಪ್ರಧಾನವಾಗಿದೆ ಎಂದು ತೋರಿಸಲು ವಿವರಣೆ ಮಾಡಲ್ಪಟ್ಟಿದೆ" ಎಂದು.

ಇಲ್ಲಿ ವಿಕಲ್ಪವು ಇದೆ – ತಮ್ಮ ವಾಕ್ಯಕ್ಕೆ ತಮ್ಮ ವಾಕ್ಯದಿಂದಲೇ ನೀಡುವ ವಿವರಣೆಯನ್ನು ಜ್ಞಾಪಕ ಎಂದು ಹೇಳುತ್ತಿದ್ದೀರೋ? ಅಥವಾ ಕೇವಲ ವಿವರಣೆಯೋ? ಮೊದಲನೆಯದು ಇಲ್ಲಿಲ್ಲ. ಎರಡನೆಯ ಪಕ್ಷದಲ್ಲಿ ವ್ಯತ್ಯಾಸಪ್ರಯೋಗ ಎಂಬ ವ್ಯಭಿಚಾರವನ್ನು ಮಾಡಿದ್ದಕ್ಕೆ ಬೇರೆ ಜ್ಞಾಪಕವಿದೆ. ಆದ್ದರಿಂದಲೇ ಅದೇ ಸುಧಾಭಾಗದಲ್ಲಿ 'ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನಾಪಿ' ಎಂದು ಅಪಿ ಶಬ್ದವನ್ನು ಪ್ರಯೋಗಿಸಿದ್ದಾರೆ.

## ವಿಟ್ಠಲಭಟ್ಟೀಯಟಿಪ್ಪಣೀ ಮಂಗಲಾಚರಣೆ

### ಮಧ್ವಾರ್ಯಹೃದ್ಗತನಾದ ಇಂದಿರಾಪತಿ

ಇಂದಿರಾಪತಿಮಾನಂದಜ್ಞಾನಾದಿಗುಣವಿಗ್ರಹಮ್ ।
ನಮಾಮಿ ಸರ್ವದೋಷಾತಿದೂರಂ ಮಧ್ವಾರ್ಯಹೃದ್ಗತಮ್ ॥

ಆನಂದಜ್ಞಾನಮೊದಲಾದ ಗುಣಗಳನ್ನೇ ದೇಹವಾಗುಳ್ಳ, ಸರ್ವದೋಷಗಳಿಂದ ಅತ್ಯಂತ ದೂರನಾದ, ಮಧ್ವಾಚಾರ್ಯರ ಹೃದಯದಲ್ಲಿರುವ ಲಕ್ಷ್ಮೀಪತಿಯನ್ನು ನಮಸ್ಕರಿಸುತ್ತೇನೆ.

## ಗುರುಗಳಿಗೆ ನಮನ

ಶ್ರೀಮದಾನಂದತೀರ್ಥಾರ್ಯಾನಗಣ್ಯಗುಣವಾರಿಧೀನ್ ।
ಶರ್ವಗುರ್ವಾದಿಗೀರ್ವಾಣದೇಶಿಕಾನ್ ಪ್ರಣಮಾಮ್ಯಹಮ್ ॥

ಎಣಿಸಲಶಕ್ಯವಾದ ಗುಣಗಳ ಸಮುದ್ರರಾದ, ರುದ್ರ ಬೃಹಸ್ಪತಿ ಮೊದಲಾದ ದೇವತೆಗಳಿಗೆ ಗುರುಗಳಾದ ಶ್ರೀಮದಾನಂದತೀರ್ಥರೆಂಬ ಪೂಜ್ಯರನ್ನು ನಾನು ಭಕ್ತಿಶ್ರದ್ಧಾಪೂರ್ವಕವಾಗಿ ನಮಸ್ಕರಿಸುತ್ತೇನೆ.

## ಸುಧಾವನ್ನು ಉದ್ಧರಿಸಿದ ಜಯಾರ್ಯರು

ಅನುವ್ಯಾಖ್ಯಾನದುಗ್ಧಾಬ್ಧಿಂ ವಿಮಥ್ಯ ಮತಿಭೂಭೃತಾ ।
ಸಮುದ್ಧೃತಾ ಸುಧಾ ಯೈಸ್ತಾನ್ ಜಯಾರ್ಯಾನ್ ಪ್ರಣಮಾಮ್ಯಹಮ್ ॥

ತಮ್ಮ ಬುದ್ಧಿಯೆಂಬ ಪರ್ವತದಿಂದ ಅನುವ್ಯಾಖ್ಯಾನವೆಂಬ ಕ್ಷೀರಸಮುದ್ರವನ್ನು ಮಥಿಸಿ ಯಾರಿಂದ ಸುಧೆಯು ಹೊರತರಲ್ಪಟ್ಟಿತೋ ಅಂತಹ ಜಯತೀರ್ಥರೆಂಬ ಪೂಜ್ಯರನ್ನು ನಾನು ಭಕ್ತಿಶ್ರದ್ಧಾ-ಪೂರ್ವಕವಾಗಿ ನಮಸ್ಕರಿಸುತ್ತೇನೆ.

## ಬುದ್ಧಿಶುದ್ಧಿಗಾಗಿ ವಿಟ್ಠಲಾರ್ಯರನ್ನು ಭಜಿಸುತ್ತೇನೆ

ನೃಸಿಂಹಾಚಾರ್ಯವರ್ಯಾಂಶ್ಚ ಜ್ಞಾನಾದಿಗುಣವಾರಿಧೀನ್ ।
ತತ್ಪ್ರಶಿಷ್ಯಾನ್ ವಿಟ್ಠಲಾರ್ಯಾನ್ ಭಜೇಽಹಂ ಬುದ್ಧಿಶುದ್ಧಯೇ ॥

ಜ್ಞಾನಾದಿ ಸದ್ಗುಣಗಳ ಸಮುದ್ರರಾದ ನೃಸಿಂಹಾಚಾರ್ಯ ಎಂಬ ಶ್ರೇಷ್ಠರನ್ನು ಹಾಗೂ ಅವರ ಪ್ರಶಿಷ್ಯರಾದ ವಿಟ್ಠಲಾಚಾರ್ಯರನ್ನು ಬುದ್ಧಿಶುದ್ಧಿಗಾಗಿ ನಾನು ಭಜಸುತ್ತೇನೆ.

## ಶಕುನಿಸೂತ್ರಯೋರಿತಿ ಸಾಧು

ಸ್ಮೃತಿಶಬ್ದಸ್ಯಾಲ್ಪಾಚ್ತರತ್ವೇಽಪ್ಯಾಮ್ನಾಯಸ್ಯ ಸ್ಮೃತಿಂ ಪ್ರತಿ ಮೂಲತ್ವೇನಾಭ್ಯರ್ಹಿತತ್ವಾತ್ "ಅಲ್ಪಾ-ಚ್ತರಮ್ ಇತ್ಯನಿತ್ಯತ್ವಾತ್ ಶಕುನಿಸೂತ್ರಯೋರಿತಿ ಸಾಧು" ಇತಿ ಟೀಕಾಕೃತೈವಾನ್ಯತ್ರೋಕ್ತತ್ವಾಚ್ಚ, 'ಲಕ್ಷಣಹೇತ್ವೋ'ರಿತಿ ನಿರ್ದೇಶಃ ಪೂರ್ವನಿಪಾತಲಿಂಗಮ್ ಇತಿ ವೃತ್ತಿಕಾರೇಣೈವೋಕ್ತತ್ವಾಚ್ಚ ಪೂರ್ವನಿಪಾತಾಭಾವಃ ।

'ಅಶೇಷ-ಆಮ್ನಾಯ-ಸ್ಮೃತಿಹೃದಯದೀಪ್ತಾಯ' – ಎಂಬಲ್ಲಿ ಆಮ್ನಾಯ ಸ್ಮೃತಿ ಎಂಬ ಪದಗಳಿಗೆ ಸಮಾಸ ಮಾಡಿದಾಗ ಯಾವುದನ್ನು ಪೂರ್ವದಲ್ಲಿ ಪ್ರಯೋಗ ಮಾಡಬೇಕು ಎಂಬ ಶಂಕೆಗೆ ಉತ್ತರ 'ಅಲ್ಪಾಚ್ ತರಂ ಪೂರ್ವಂ' ಎಂದು. ಅಂದರೆ ಯಾವ ಶಬ್ದದಲ್ಲಿ ಅಚ್ ಅಕ್ಷರಗಳು (ಸ್ವರಾಕ್ಷರಗಳು)

ಕಡಿಮೆ ಇವೆಯೋ ಅದನ್ನು ಪೂರ್ವದಲ್ಲಿ ಪ್ರಯೋಗ ಮಾಡಬೇಕು. ಅಲ್ಪಾಕ್ಷರವುಳ್ಳದ್ದು ಸ್ಮೃತಿ ಎಂಬ ಶಬ್ದವೇ ಹೊರತು ಆಮ್ನಾಯ ಎಂಬ ಶಬ್ದವಲ್ಲ. ಹಾಗಾಗಿ ಸ್ಮೃತಿ ಎಂಬ ಶಬ್ದವನ್ನೇ ಪೂರ್ವದಲ್ಲಿ ಹೇಳಬೇಕು. ಆದರೆ ಸುಧಾದಲ್ಲಿ ಬಹು ಅಚ್ ಅಕ್ಷರವುಳ್ಳ ಆಮ್ನಾಯ ಎಂಬ ಪದವನ್ನು ಮೊದಲು ಹೇಳಿದ್ದು ಎಷ್ಟು ಸರಿ. ಇದಕ್ಕೆ ಒಟ್ಟು ಮೂರು ಉತ್ತರ.

(ಅ) 'ಅಭ್ಯರ್ಹಿತಂ ಪೂರ್ವಂ ನಿಪತತಿ ಇತಿ ವಕ್ತವ್ಯಮ್' - ಎಂಬ ವಾರ್ತಿಕದ ಪ್ರಕಾರ ಯಾವುದು ಅತ್ಯಂತ ಪೂಜ್ಯವಾದ ವಸ್ತುವೋ ಅದನ್ನು ಪೂರ್ವತ್ರ ಪ್ರಯೋಗ ಮಾಡಬೇಕು. ಪ್ರಕೃತ ಸ್ಮೃತಿಗಳಿಗೆ ವೇದವೇ ಮೂಲವಾದ್ದರಿಂದ ವೇದಗಳು ಅತ್ಯಂತ ಪೂಜ್ಯ. ಹಾಗಾಗಿ ಆಮ್ನಾಯಶಬ್ದಕ್ಕೆ ಪೂರ್ವನಿಪಾತ.

(ಆ) ಟೀಕಾಚಾರ್ಯರೇ ಬೇರೆಯ ತಮ್ಮ ಗ್ರಂಥದಲ್ಲಿ ಅಲ್ಪಾಚ್‌ತರಂ ಎಂಬ ಸೂತ್ರವು ಅನಿತ್ಯ ಎಂದು ಹೇಳಿ, 'ಶಕುನಿಸೂತ್ರಯೋಃ' ಎಂಬ ಸಮಾಸದಲ್ಲಿ ಪೂರ್ವನಿಪಾತವನ್ನು ಸಮರ್ಥನೆ ಮಾಡಿದ್ದಾರೆ.

(ಇ) 'ಲಕ್ಷಣಹೇತ್ವೋಃ ಕ್ರಿಯಾಯಾಃ' - ಎಂದು ಪಾಣಿನಿಸೂತ್ರದಲ್ಲಿಯೇ ಅಲ್ಪ ಅಚ್ ಇರುವುದಕ್ಕೂ ಪೂರ್ವದಲ್ಲಿ ಪ್ರಯೋಗವನ್ನು ಮಾಡಿಲ್ಲ. ಹೊರತು ಲಕ್ಷಣ ಎಂಬ ಬಹು ಅಚ್ ಅಕ್ಷರವುಳ್ಳ ಶಬ್ದವನ್ನೇ ಹೇಳಿದ್ದಾರೆ. ಹಾಗಾಗಿ ಇಲ್ಲಿಯೂ ಆಮ್ನಾಯಶಬ್ದವನ್ನು ಮೊದಲು ಹೇಳಿದ್ದು ತಪ್ಪೇನಲ್ಲ.

टीका - एवं स्थाननवकेऽपि भेद एव दृष्टान्ता अभिहिताः । नत्वेकोऽपि दृष्टान्तोऽभेदविषयोऽभिहितः । ततो नायमभेदोपदेश इत्युक्तं तद्विवृणोति – नहीति ॥

(वि.नि) – नहि शकुनिसूत्रयोर्नानावृक्षरसानां नदीसमुद्रयोर्जीववृक्षयोरणिमधानयोर्लवणोदकयोर्गान्धारपुरुषयोरज्ञप्राणादिनियामकयोः स्तेनापहार्ययोश्चैक्यम् ।

टीका – "अल्पाच्तरम्' इत्यस्य अनित्यत्वाच्छकुनिसूत्रयोरिति साधु।

ಒಂಭತ್ತು ದೃಷ್ಟಾಂತಗಳೂ ಕೂಡ ಭೇದವಿಷಯಕವೇ ಆಗಿವೆ. ಅದರಲ್ಲಿ ಒಂದೂ ದೃಷ್ಟಾಂತವು ಅಭೇದವಿಷಯಕವಾಗಿಲ್ಲ. ಆದ್ದರಿಂದ ತತ್ವಮಸಿ ಎಂಬುದು ಅಭೇದವಿಷಯಕವಲ್ಲ ಎಂದು ಹೇಳಿದ್ದನ್ನು ವಿವರಿಸುತ್ತಿದ್ದಾರೆ - ನ ಹಿ ಎಂಬುದಾಗಿ.

ದಾರದಿಂದ ಕಟ್ಟಲ್ಪಟ್ಟ ಪಕ್ಷಿ, ನಾನಾವೃಕ್ಷಗಳ ರಸಗಳು, ನದಿಗಳು ಮತ್ತು ಸಮುದ್ರ, ಜೀವ ಮತ್ತು ವೃಕ್ಷ, ನ್ಯಗ್ರೋಧಫಲದಲ್ಲಿಯ ಬೀಜ ಮತ್ತು ಅದರಲ್ಲಿಯ ಸೂಕ್ಷ್ಮಸತ್ವ, ಉಪ್ಪು ಮತ್ತು ನೀರು, ಗಾಂಧಾರದೇಶ ಮತ್ತು ಅಲ್ಲಿಂದ ಕಣ್ಣುಕಟ್ಟತರಲ್ಪಟ್ಟ ಪುರುಷ, ಪ್ರಾಣಾದಿಗಳ ನಿಯಾಮಕ ಮತ್ತು

ಅವನಿಲ್ಲದೇ ತಿಳಿದುಕೊಳ್ಳಲು ಯೋಗ್ಯತೆ ಇಲ್ಲದ ವ್ಯಕ್ತಿ, ಕಳ್ಳತನ ಮಾಡಿದವ ಮತ್ತು ಅವನು ಕದ್ದ ವಸ್ತು ಇವುಗಳಲ್ಲಿ ಐಕ್ಯವಿದೆಯೆಂದು ಹೇಳುವುದು ಸಾಧ್ಯವಿಲ್ಲ.

ಸೂತ್ರಶಕುನ್ಯೋಃ ಎಂದು ಪ್ರಯೋಗಮಾಡಬೇಕಾದ ಕಡೆ ಶಕುನಿಸೂತ್ರಯೋಃ ಎಂಬ ಪ್ರಯೋಗ ಹೇಗೆ ಎಂದು ಪ್ರಶ್ನೆ. ಏಕೆಂದರೆ ಅಲ್ಪಾಚ್ತರಂ ಪೂರ್ವಂ ಎಂಬ ಸೂತ್ರದಲ್ಲಿ ದ್ವಂದ್ವಸಮಾಸದಲ್ಲಿ ಯಾವ ಪದವು ಅಲ್ಪಾಚ್-ವುಳ್ಳದ್ದೋ ಅದನ್ನು ಪೂರ್ವದಲ್ಲಿ ಪ್ರಯೋಗಿಸಬೇಕು ಎಂದು ಪೂರ್ವ-ನಿಪಾತವನ್ನು ಹೇಳಿದ್ದರಿಂದ ಇಲ್ಲಿ ಸೂತ್ರ ಎಂಬ ಅಲ್ಪಾಚ್ಕವಾದ ಶಬ್ದಕ್ಕೆ ಪೂರ್ವನಿಪಾತ ಬಂದು ಸೂತ್ರಶಕುನ್ಯೋಃ ಎಂದಾಗಬೇಕು. ಇಲ್ಲಿ ಅಲ್ಪಾಚ್ತರಮ್ ನಲ್ಲಿರುವ ತರಪ್ ಪ್ರತ್ಯಯವು ಸ್ವಾರ್ಥದಲ್ಲಿಯೇ ಬಂದಿದೆ. ಅಂದರೆ ಅಲ್ಪಾಚ್ತರಂ ಎನ್ನುವುದಕ್ಕೆ ಅಲ್ಪ ಎಂದಷ್ಟೇ ಅರ್ಥ.

ಇದಕ್ಕೆ ಉತ್ತರ – ಅಲ್ಪಾಚ್ತರಮ್ ಎಂಬ ಸೂತ್ರವು ಅನಿಯತ ಎಂದು 'ನಾಸಿಕಾಸ್ತನಯೋರ್ಧ್ಮಾ-ಧೇಟೋಃ' ಮುಂತಾದ ಕಡೆ ಸೂತ್ರದಲ್ಲಿ ಅಲ್ಪಾಚ್ಕವಾದ ಶಬ್ದವನ್ನು ದ್ವಂದ್ವಸಮಾಸವಾಗಿದ್ದರೂ ಪೂರ್ವದಲ್ಲಿ ಪ್ರಯೋಗ ಮಾಡದೇ ನಂತರ ಪ್ರಯೋಗ ಮಾಡಿದ್ದರಿಂದ ಗೊತ್ತಾಗುವುದು. ಇದೇ ರೀತಿಯ ನಿರ್ದೇಶಗಳು ಹಲವು ಸೂತ್ರಗಳಲ್ಲಿ ಕಾಣಬಹುದು. 'ಆನ್ಮಹತಃ ಸಮಾನಾಧಿಕರಣ-ಜಾತೀಯಯೋಃ' ಎಂಬ ಸೂತ್ರದಲ್ಲಿ ಜಾತೀಯ ಎಂಬ ಅಲ್ಪಾಚ್ಕಪದವನ್ನು ಪರದಲ್ಲಿ ಪ್ರಯೋಗ ಮಾಡಿದ್ದಾರೆ. ಹಾಗೆ 'ಸಮುದ್ರ-ಅಭ್ರಾದ್ಘಃ' ಎಂಬ ಸೂತ್ರದಲ್ಲಿ ಅಭ್ರಶಬ್ದವನ್ನು ಪರತ್ರ ಪ್ರಯೋಗಿಸಿದ್ದಾರೆ. ಇನ್ನು ಕೆಲವರು ಅಭ್ಯರ್ಹಿತಂ ಪೂರ್ವಂ ಎಂದು ಶ್ರೇಷ್ಠ ಅಥವಾ ಪೂಜ್ಯವಾದ ವಸ್ತುವನ್ನು ಹೇಳುವ ಶಬ್ದವು ಬಹ್ವಚ್ಕವಾಗಿದ್ದರೂ ಪೂರ್ವತ್ರ ಪ್ರಯೋಗಿಸಬೇಕು ಎಂದು ಹೇಳಿದ್ದರಿಂದ ಅಲ್ಪಾಚ್ತರಮ್ ಎಂಬ ಸೂತ್ರವು ಅನಿತ್ಯ ಎಂದು ತಿಳಿಯುತ್ತದೆ ಎನ್ನುತ್ತಾರೆ. ಪ್ರಕೃತದಲ್ಲಿ ದಾರಕ್ಕಿಂತ ಪಕ್ಷಿಯು ಚೇತನವಾದ್ದರಿಂದ ಅಭ್ಯರ್ಹಿತವಾಗಿರುವ ಕಾರಣ ಪಕ್ಷಿವಾಚಕವಾದ ಶಕುನಿಶಬ್ದಕ್ಕೆ ಪೂರ್ವನಿಪಾತಬಂದಿದೆ ಎಂದು ವರ್ಣಿಸುವರು.

(ರಾ.ಟಿ.) ಸೂತ್ರಪದಸ್ಯ ಅಲ್ಪಾಚ್ತರತ್ವಾತ್ ಸೂತ್ರಶಕುನ್ಯೋಃ ಇತಿ ಭಾವ್ಯಮ್ ಇತ್ಯತ ಆಹ – ಅಲ್ಪಾಚ್ತರಮಿತ್ಯಸ್ಯ ಅನಿತ್ಯತ್ವಾದಿತಿ ॥ ಅಲ್ಪಾಚ್ತರಮಿತಿ ಸೂತ್ರೇ ತರಪ್ ಸ್ವಾರ್ಥೇ, ದ್ವಂದ್ವಸಮಾಸೇ ಯತ್ ಅಲ್ಪಾಚ್ಕಂ ಪದಂ ತತ್ಪೂರ್ವಂ ಪ್ರಯೋಜ್ಯಮಿತಿ ಪೂರ್ವನಿಪಾತೋಕ್ತೇಃ ಅನಿಯತತ್ವಾತ್ ಕ್ವಚಿದನ್ಯಥಾಪಿ ನಿರ್ದೇಶಃ ಯುಕ್ತಃ ಇತ್ಯರ್ಥಃ । ಅನಿಯತತ್ವಂ ನಾಸಿಕಾಸ್ತನಯೋರ್ಧ್ಮಾಧೇಟೋಃ ಇತ್ಯಾದಿಸೌತ್ರನಿರ್ದೇಶಾದಿತಿ ಭಾವಃ ।

(ಶ್ರೀ.ಟಿ.) ನನು ಅಲ್ಪಾಚ್ತರಂ ಪೂರ್ವಮಿತಿ ದ್ವಂದ್ವಸಮಾಸೇ ಯದಲ್ಪಾಚ್ತರಂ ತತ್ಪ್ರಾಕ್-ಪ್ರಯೋಜ್ಯಮಿತಿ ಸೂತ್ರಾತ್ 'ಧವಖದಿರೌ' ಇತಿವತ್ ಸೂತ್ರಶಕುನ್ಯೋರಿತಿ ವಕ್ತವ್ಯಮ್ । ಶಕುನಿ-ಸೂತ್ರಯೋರಿತಿ ಕಥಮುಕ್ತಮ್ ಇತ್ಯತ ಆಹ – ಅನಿತ್ಯತ್ವಾದಿತಿ ॥ 'ಆನ್ಮಹತಃ ಸಮಾನಾಧಿಕರಣ-

ಜಾತೀಯಯೋಃ ಸಮುದ್ರಾಭ್ರಾದ್ಘ:' ಇತ್ಯತ್ರ ಅಲ್ಪಾಚ್ತರಸ್ಯಾಪಿ ಜಾತೀಯಶಬ್ದಸ್ಯ ಅಭ್ರಶಬ್ದಸ್ಯ ಚ ಪಶ್ಚಾತ್ ಪ್ರಯೋಗೇಣ ಅನಿತ್ಯತ್ವಂ ಜ್ಞಾಯತೇ ಇತ್ಯರ್ಥಃ। ಕೇಚಿತ್ತು ಅಭ್ಯರ್ಹಿತಂ ಪೂರ್ವಮಿತಿ ಅಭ್ಯರ್ಹಿತಸ್ಯಾಪಿ ಪೂರ್ವಂ ಪ್ರಯೋಗೋಕ್ತೇಃ ಅಲ್ಪಾಚ್ತರಮಿತ್ಯಸ್ಯ ಅನಿತ್ಯತ್ವಂ ಜ್ಞಾಯತೇ । ಪ್ರಕೃತೇ ಚ ಸೂತ್ರಾಪೇಕ್ಷಯಾ ಶಕುನೇಃ ಚೇತನತ್ವೇನ ಅಭ್ಯರ್ಹಿತತ್ವಾತ್ ಪ್ರಥಮಪ್ರಯೋಗಃ ಇತಿ ಭಾವಃ ಇತ್ಯಾಹುಃ।

## 'ಯೇನ ಪ್ರಾದುರಭಾವಿ ...' ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा -**

येन प्रादुरभावि भूमिवलये व्यस्तारि गोसन्ततिः
प्राबोधि श्रुतिपङ्कजं करुणया प्राकाशि तत्वं परम्।
ध्वान्तं ध्वंसमनायि साधुनिकरश्चाकारि सन्मार्गग-
स्तेन व्यासदिवाकरेण सततं मा त्याजि मे मानसम् ॥२॥

ಅನ್ವಯಾರ್ಥ - ಯೇನ = ಯಾರಿಂದ (ಯಾರು); ಭೂಮಿವಲಯೇ = ಭೂಮಂಡಲದಲ್ಲಿ; ಪ್ರಾದುರಭಾವಿ = ಅವತರಿಸಲ್ಪಟ್ಟಿತೋ (ಅವತರಿಸಿದರೋ); ಯೇನ = ಯಾರಿಂದ, ಗೋಸಂತತಿಃ = ಗೋ - ಬ್ರಹ್ಮಸೂತ್ರ-ಮಹಾಭಾರತ ಮುಂತಾದ ಗ್ರಂಥಗಳ, ಸಂತತಿಃ = ಸಮೂಹವು; ವ್ಯಸ್ತಾರಿ = ವಿಸ್ತರಿಸಲ್ಪಟ್ಟಿತೋ; ಯೇನ = ಯಾರಿಂದ; ಶ್ರುತಿಪಂಕಜಂ = ಶ್ರುತಿ -ವೇದಗಳೆಂಬ ಪಂಕಜಂ - ಕಮಲವು; ಪ್ರಾಬೋಧಿ = ಅರಳಲ್ಪಟ್ಟಿತೋ; ಯೇನ = ಯಾರಿಂದ; ಪರಂ ತತ್ತ್ವಂ = ಶ್ರೇಷ್ಠವಾದ ತತ್ತ್ವವು; ಕರುಣಯಾ = ಸಜ್ಜನರ ಮೇಲಿನ ಕರುಣೆಯಿಂದ; ಪ್ರಾಕಾಶಿ = ಪ್ರಕಾಶಿಸಲ್ಪಟ್ಟಿತೋ; ಯೇನ = ಯಾರಿಂದ; ಧ್ವಾಂತಂ = ನಿಬಿಡವಾದ ಕತ್ತಲೆಯು; ಧ್ವಂಸಂ = ಧ್ವಂಸವಾಗಿ; ಅನಾಯಿ = ಮಾಡಲ್ಪಟ್ಟಿತೋ; ಚ = ಮತ್ತು; ಯೇನ = ಯಾರಿಂದ; ಸಾಧುನಿಕರಃ = ಸಜ್ಜನರ ಸಮೂಹವು; ಸನ್ಮಾರ್ಗಗಃ = ಸತ್ = ಒಳ್ಳೆಯ, ಮಾರ್ಗ - ಮಾರ್ಗದಲ್ಲಿ, ಗಃ - ಇದ್ದದ್ದಾಗಿ; ಅಕಾರಿ = ಮಾಡಲ್ಪಟ್ಟಿತೋ; ತೇನ = ಅಂತಹ; ವ್ಯಾಸದಿವಾಕರೇಣ = ವ್ಯಾಸ - ವೇದವ್ಯಾಸರೆಂಬ, ದಿವಾಕರೇಣ - ಸೂರ್ಯನಿಂದ; ಮೇ = ನನ್ನ; ಮಾನಸಂ = ಮನಸ್ಸು; ಸತತಂ = ಎಂದಿಗೂ; ಮಾ ತ್ಯಾಜಿ = ಬಿಡಲ್ಪಡದೇ ಇರಲಿ.

ಸಾರ - ಈ ಪದ್ಯದಲ್ಲಿ ವೇದವ್ಯಾಸರನ್ನು ಪ್ರಾರ್ಥಿಸಿದ್ದಾರೆ. ವೇದವ್ಯಾಸರು ಸೂರ್ಯನಂತೆ ಇದ್ದಾರೆ. ಅದು ಹೀಗೆ - ಸೂರ್ಯನು ಭೂಮಿಗೆ ಬಂದಾಗ ತನ್ನ ಕಿರಣಗಳನ್ನು ಎಲ್ಲ ಕಡೆ

ಪಸರಿಸುವನು. ಹಾಗೆ ಕಮಲವನ್ನು ಅರಳಿಸುತ್ತಾನೆ. ಪದಾರ್ಥಗಳನ್ನು ತೋರುವಂತೆ ಪ್ರಕಾಶ-ಬೀರುತ್ತಾನೆ. ಕತ್ತಲೆಯನ್ನು ನಾಶ ಮಾಡುತ್ತಾನೆ. ಸಂಚಾರಕ್ಕಾಗಿ ದಾರಿಯನ್ನು ತೋರಿಸುತ್ತಾನೆ. ಹಾಗೆಯೇ ವೇದವ್ಯಾಸರೆಂಬ ಸೂರ್ಯರು ಭೂಮಿಯಲ್ಲಿ ಅವತರಿಸಿದಾಗ ಮಹಾಭಾರತ, ಪುರಾಣ, ಬ್ರಹ್ಮಸೂತ್ರ ಮೊದಲಾದವುಗಳನ್ನು ಹರಡಿದರು. ಅರ್ಥಾತ್ ರಚನೆ ಮಾಡಿದರು. ವೇದವೆಂಬ ಕಮಲವನ್ನು ಅರಳಿಸಿದರು. ಕರುಣೆಯಿಂದ ಪರತತ್ತ್ವವನ್ನು ಪ್ರಕಾಶಮಾಡಿದರು. ಘನನಿಬಿಡವಾದ ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡಿದರು. ಸಜ್ಜನರ ಸಮೂಹಕ್ಕೆ ಒಳ್ಳೆಯ ದಾರಿಯಲ್ಲಿ ಇರುವಂತೆ ಮಾಡಿದರು. ಇಂತಹ ವೇದವ್ಯಾಸರೆಂಬ ಸೂರ್ಯನು ಎಂದಿಗೂ ನನ್ನ ಮನಸ್ಸನ್ನು ಬಿಡದಿರಲಿ.

ವ್ಯಾ.ವಿ. - ಕರುಣಯಾ ಎಂಬ ಶಬ್ದವನ್ನು ಪ್ರತಿಯೊಂದು ವಾಕ್ಯದಲ್ಲೂ 'ಯೇನ' ಎಂಬುವುದರಂತೆ ಅನ್ವಯಿಸಿಕೊಳ್ಳಬೇಕು. ಹಾಗೆಯೇ ಸತತಂ ಎಂಬ ಪದವನ್ನೂ ಯಥಾಯೋಗ್ಯವಾಗಿ ಆಯಾಯ ವಾಕ್ಯಗಳಲ್ಲಿ ಅನ್ವಯಿಸಬಹುದು. ಮಾನಸಂ ಎಂಬ ಪದಕ್ಕೆ ಮನಸ್ಸು ಎಂದೇ ಅರ್ಥ. 'ಸ್ವಾಂತಂ ಹೃನ್- ಮಾನಸಂ ಮನಃ' ಎಂದಿದೆ ಕೋಶ.

## ಗುರುತ್ವೋಪಪಾದಕವಾದ ಗೋಸಂತತಿ

(ವಾಕ್ಯಾರ್ಥಚಂದ್ರಿಕಾ) — ಗುರುತ್ವೋಪಪಾದಕಶಾಸ್ತ್ರಪ್ರಭವತ್ವೋಪಪಾದನೇ ಕಿಂಚಿತ್ ದ್ವಿತೀಯಸ್ಯ ಪದ್ಯಸ್ಯ ವ್ಯಾಖ್ಯಾನರೂಪೇ **"ಯೇನ"** ಇತಿ ಪದ್ಯೇ ವೇದವಿಭಾಗಃ, ವೇದಾರ್ಥೋಪಬೃಂಹಕೇತಿ-ಹಾಸಪುರಾಣಾದಿನಿರ್ಮಾಣಂ, ತನ್ನಿರ್ಣಾಯಕಬ್ರಹ್ಮಸೂತ್ರನಿರ್ಮಾಣಂ ಚೇತಿ ತ್ರಿವಿಧೋಽಪಿ ಗೋಸಂತತಿವಿಸ್ತಾರೋಽಭಿಮತಃ । ತತ್ರಾದ್ಯಸ್ಯ **'ಪ್ರಾಬೋಧಿ'** ಇತ್ಯುಕ್ತೇ ಮಂದೈರಧ್ಯೇಯತ್ವರೂಪೇ ಪ್ರಾಬೋಧೇ ಹೇತುತ್ವಮ್ । ದ್ವಿತೀಯ-ತೃತೀಯಯೋಸ್ತು **'ಪ್ರಾಕಾಶಿ'** ಇತ್ಯಾದ್ಯುಕ್ತಪ್ರಕಾಶಾದಿ-ಹೇತುತ್ವಮಿತಿ ದ್ರಷ್ಟವ್ಯಮ್ । **'ಕರುಣಯಾ'** ಇತ್ಯೇತತ್ **'ಪ್ರಾದುರಭಾವಿ'** ಇತ್ಯಾದೌ ಸರ್ವತ್ರ ಸಂಬಧ್ಯತೇ । ಅನೇನ 'ಪ್ರಾದುರ್ಭೂತ' ಇತಿ ಪದ್ಯತಾತ್ಪರ್ಯಮಪ್ಯುಕ್ತಂ ಭವತಿ । ಲುಙ್-ಪ್ರಾಯಪಾಠಭಂಗಪರಿಜಿಹೀರ್ಷಯಾ ಆಹ — **ಮೇತಿ** ॥ ಮಾಙ್-ಯೋಗೇ ಲುಙಃ ಸರ್ವ-ಲಕಾರಾಪವಾದಕತ್ವಾನ್ನ ತ್ಯಜ್ಯತಾಮಿತ್ಯರ್ಥಃ ।

ವೇದವ್ಯಾಸರು ಗುರುತ್ವವನ್ನು ಪಡೆದಿದ್ದಾರೆ ಎನ್ನಬೇಕಾದರೆ ಅದಕ್ಕೆ ಪ್ರಯೋಜಕವಾದ ಧರ್ಮಗಳು ಅವರಲ್ಲಿರಬೇಕು. ಆ ಧರ್ಮಗಳು ಶಾಸ್ತ್ರಪ್ರಭವತ್ವ ಮೊದಲಾದವುಗಳು. ಇದನ್ನು ಉಪಪಾದನೆ ಮಾಡಲು 'ಯೇನ ಪ್ರಾದುರಭಾವಿ' ಎಂಬೀ ಪದ್ಯದಲ್ಲಿ ಕೆಲವು ಧರ್ಮಗಳನ್ನು ತಿಳಿಸಿದ್ದಾರೆ. ಈ ಶ್ಲೋಕವು 'ತಮೇವ ಶಾಸ್ತ್ರಪ್ರಭವಂ' ಎಂಬ ಅನುವ್ಯಾಖ್ಯಾನದ ದ್ವಿತೀಯಪದ್ಯದ ವ್ಯಾಖ್ಯಾನ-

ರೂಪವಾಗಿದೆ. ಈ ಶ್ಲೋಕದಲ್ಲಿ 'ಯೇನ ಗೋಸಂತತಿಃ ವ್ಯಸ್ತಾರಿ' ಎಂದಿದ್ದಾರೆ. ಇದರ ಅರ್ಥ ಯಾವ ವೇದವ್ಯಾಸರಿಂದ ಗೋಸಂತತಿಃ ಅಂದರೆ ವೇದವಿಭಾಗವು ಹಾಗೆ ವೇದಾರ್ಥಉಪ-ಬೃಂಹಕವಾದ ಇತಿಹಾಸ, ಪುರಾಣಗಳ ನಿರ್ಮಾಣ ಹಾಗೂ ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳ ನಿರ್ಮಾಣ ಎಂಬ ರೀತಿಯಾಗಿ ಮೂರೂ ವಿವಕ್ಷಿತವಾಗಿವೆ. ಇದರಲ್ಲಿ ಮೊದಲನೆಯ ಕಾರ್ಯದಿಂದ ಅರ್ಥಾತ್ ವೇದವಿಭಾಗವನ್ನು ಮಾಡಿದ್ದರಿಂದ ಮಂದರಿಗೆ ಅಧ್ಯಯನ ಮಾಡಲು ಅನುಕೂಲವಾಯಿತು. ಇನ್ನು ಎರಡು ಮೂರನೆಯ ಕಾರ್ಯಗಳಿಂದ ಪರಾಪರತತ್ವಗಳ ಪ್ರಕಾಶ-ವಾಗಲು ಅನುಕೂಲವಾಯಿತು. 'ಕರುಣಯಾ' ಎಂಬ ಪದವನ್ನು ಪ್ರಾದುರಭಾವಿ ಮುಂತಾದ ಎಲ್ಲ ಕಡೆ ಅನ್ವಯಮಾಡಬೇಕು.ಇದರಿಂದ 'ಪ್ರಾದುರ್ಭೂತಃ' ಎಂಬ ಪದ್ಯದ ತಾತ್ಪರ್ಯವನ್ನೂ ಹೇಳಿದಂತಾಯಿತು.

ಲುಜ್ ಪ್ರಕಾರವನ್ನು ಅನೇಕ ಬಾರಿ ಈ ಶ್ಲೋಕದಲ್ಲಿ ಪ್ರಯೋಗಿಸಿದ್ದಾರೆ. ಆದರೆ ಕೊನೆಯಲ್ಲಿ 'ನ ತ್ಯಜ್ಯತಾಂ ಮೇ ಮಾನಸಂ' ಎಂಬ ಅರ್ಥ ಸಿಗಬೇಕಾದರೆ ಯದ್ಯಪಿ ತ್ಯಜ್ಯತಾಂ ಎಂಬ ಪ್ರಯೋಗದ ಅವಶ್ಯಕತೆ ಇದೆ. ಆದರೆ ಪ್ರಾಯಪಾಠಭಂಗವಾದೀತು ಎಂಬ ಕಾರಣದಿಂದ ಅದನ್ನು ಪರಿಹರಿಸಲು ಮಾ ಎಂಬ ಶಬ್ದವನ್ನು ಹಾಕಿದ್ದಾರೆ. ಈಗ ಮಾಜ್ ಸಂಬಂಧವಿದ್ದಾಗ ಲುಜ್ ಲಕಾರವನ್ನೇ ಅಂದರೆ ತ್ಯಾಜಿ ಎಂಬ ಪ್ರಯೋಗ ಮಾಡಬೇಕಾದ್ದರಿಂದ ಪ್ರಾಯಪಾಠಭಂಗವಾಗದೇ ವಿವಕ್ಷಿತಾರ್ಥವಾದ ಲೋಡರ್ಥವು ಸಿಗುವುದು.

## ವೇದವ್ಯಾಸರಿಗೆ ಪರದೇವತಾ-ಐಕ್ಯ, ಶಾಸ್ತ್ರಪ್ರಭವತ್ವ, ಜಗದ್ಗುರೂಣಾಂ ಗುರುತ್ವಗಳ ಅಸಂಭವಶಂಕಾ

(ಆಸಂದ) — 'ತಮೇವ' ಇತಿ ಶ್ಲೋಕೇ ಗುರುತ್ವೇನ ವೇದವ್ಯಾಸವಂದನಂ ಕ್ರಿಯತೇ । ತತ್ರ 'ತಮೇವ' ಇತ್ಯನೇನ ವ್ಯಾಸಸ್ಯ ಪರದೇವತೈಕ್ಯಮುಕ್ತಂ, ತದಯುಕ್ತಮ್ । ವೇದವ್ಯಾಸಸ್ಯ ಜನ್ಮಾದಿಮತ್ತ್ವೇನ ಮೂಲರೂಪಸ್ಯ ಚ ಜನ್ಮಾದಿಶೂನ್ಯತ್ವೇನ ವಿರುದ್ಧಧರ್ಮಾಧಿಕರಣಯೋ-ರೈಕ್ಯಾಯೋಗಾತ್ । 'ಶಾಸ್ತ್ರಪ್ರಭವಮ್' ಇತ್ಯೇತತ್ ತದ್ಗುರುತ್ವೋಪಪಾದನಾರ್ಥಮುಕ್ತಮ್ । ತತ್ರ ಪುತ್ರಾದಿಶಾಸ್ತ್ರಸ್ಯ ಪ್ರಭವಮ್ ಉತ್ಪಾದಕಮಿತಿ ಪ್ರತೀಯತೇ, ತದಯುಕ್ತಮ್ । ಪುತ್ರಾದೇ-ರಪೌರುಷೇಯತ್ವೇನ ತದುತ್ಪಾದಕತ್ವಾಯೋಗಾತ್ । 'ಜಗದ್ಗುರೂಣಾಂ ಗುರುಮ್' ಇತ್ಯತ್ರ ಜಗದ್ಗುರೂಣಾಂ = ಬ್ರಹ್ಮಾದೀನಾಮೇವ ಉಪದೇಷ್ಟೃತ್ವೇನ ಗುರುರ್ನಾನ್ಯೇಷಾಮ್ ಇತಿ ಪ್ರತೀ-ಯತೇ, ಅತಃ 'ತಮೇವ' ಇತಿ ಶ್ಲೋಕೇ ಕಿಂಚಿದ್ವ್ಯಾಚಷ್ಟೇ – **ಯೇನೇತಿ** ॥

ಈ ಶ್ಲೋಕವು ಅನುವ್ಯಾಖ್ಯಾನದ 'ತಮೇವ ಶಾಸ್ತ್ರಪ್ರಭವಂ' ಎಂಬ ಶ್ಲೋಕಕ್ಕೆ ವ್ಯಾಖ್ಯಾನ-ರೂಪವಾಗಿದೆ. ಅಲ್ಲಿ ಬರುವ ಕೆಲವು ಆಕ್ಷೇಪಗಳಿಗೆ ಇಲ್ಲಿ ಸಮಾಧಾನ ಸಿಗುವುದು.

ಅದು ಹೀಗೆ - 'ತಮೇವ' ಎಂಬ ಅನುವ್ಯಾಖ್ಯಾನದಲ್ಲಿ ಮೊದಲನೆಯ ಪದ್ಯದಲ್ಲಿ ನಮಸ್ಕರಿಸಿದ ನಾರಾಯಣನ ಅವತಾರವೇ ಆದ ವೇದವ್ಯಾಸರನ್ನು ನಮಸ್ಕರಿಸುತ್ತೇನೆ ಎಂದಿದ್ದಾರೆ. ಆದರೆ ಇದು ಸರಿಯಲ್ಲ. ಏಕೆಂದರೆ ಎರಡು ವಸ್ತುಗಳಿಗೆ ಐಕ್ಯವನ್ನು ಹೇಳಬೇಕಾದರೆ ಅವುಗಳಲ್ಲಿ ವಿರುದ್ಧ-ಧರ್ಮಗಳಿರಬಾರದು. ಪ್ರಕೃತ ವೇದವ್ಯಾಸರಿಗೆ ಮೂಲರೂಪಿಯಾದ ನಾರಾಯಣನಿಗೆ ಐಕ್ಯವನ್ನು ಹೇಳಲು ಅಸಾಧ್ಯ. ಏಕೆಂದರೆ ವೇದವ್ಯಾಸರಿಗೆ ಜನ್ಮವಿದೆ. ನಾರಾಯಣನಿಗೆ ಜನ್ಮವಿಲ್ಲ. ಅಲ್ಲದೆ ವೇದವ್ಯಾಸರು ಶಾಸ್ತ್ರಕ್ಕೆ ಕರ್ತೃಗಳು ಎಂದು ಶಾಸ್ತ್ರಪ್ರಭವ ಎಂಬ ಪದ ತಿಳಿಸುತ್ತದೆ. ತನ್ಮೂಲಕ ಅವರಲ್ಲಿ ಗುರುತ್ವವಿದೆ ಎಂದು ತಿಳಿಯುವುದು. ಆದರೆ ಶಾಸ್ತ್ರ ಎಂಬ ಪದಕ್ಕೆ ವೇದ ಎಂದು ಗ್ರಹಿಸಿದಲ್ಲಿ ಅದಕ್ಕೆ ಕರ್ತೃ ಅರ್ಥಾತ್ ಅದರ ಉತ್ಪತ್ತಿಯನ್ನು ಮಾಡಿದವರು ವೇದವ್ಯಾಸರು ಎಂಬರ್ಥ ಬರುವುದು. ಇದು ಸರಿಯಲ್ಲ. ವೇದವು ಅಪೌರುಷೇಯವಾದ್ದರಿಂದ. ಇನ್ನು 'ಜಗದ್ಗು-ರೂಣಾಂ ಗುರುಂ' ಎಂದು ವೇದವ್ಯಾಸರು ಜಗತ್ತಿಗೆ ಗುರುಗಳಾದ ಬ್ರಹ್ಮಾದಿ ದೇವತೆಗಳಿಗೆ ಗುರುಗಳು ಎಂದಿದ್ದಾರೆ. ಹಾಗಾದರೆ ಬ್ರಹ್ಮಾದಿದೇವತೆಗಳನ್ನು ಬಿಟ್ಟು ಬೇರೆಯವರಿಗೆ ಗುರುಗಳಲ್ಲ ಎಂದು ತೋರುವುದು. ಇಷ್ಟು ಆಕ್ಷೇಪಗಳಿಗೆ ಉತ್ತರವಾಗಿದೆ ಈ ಶ್ಲೋಕ.

## ವೇದವ್ಯಾಸರಲ್ಲಿ – ಪ್ರಾದುರ್ಭಾವ, ವೇದಪ್ರಬೋಧಕತ್ವ, ಗೋಸಂತತಿವಿಸ್ತಾರಾದಿಗಳಿಂದ ಅಸಂಭವಶಂಕಾಪರಿಹಾರ

(ಆನಂದ) — ತಥಾ ಚ ವ್ಯಾಸಸ್ಯ ಪ್ರಾದುರ್ಭಾವಮಾತ್ರಸತ್ತ್ವೇನ ಉತ್ಪತ್ತ್ಯಾದೇರಭಾವಾತ್ ಪರದೇವತೈಕ್ಯಂ ಯುಕ್ತಮ್ । 'ಪ್ರಾಬೋಧಿ ಶ್ರುತಿಪಂಕಜಮ್' ಇತ್ಯನೇನ ಪ್ರುತ್ಯಾದೇರುತ್ಪನ್ನಸ್ಯ ಪ್ರಬೋಧಕತ್ವಮೇವ, ನ ತು ಕರ್ತೃತ್ವಮ್ ಇತ್ಯುಕ್ತತ್ವಾನ್ನ ಅಪೌರುಷೇಯತ್ವವಿರೋಧಃ । **'ವ್ಯಸ್ತಾರಿ ಗೋಸಂತತಿಃ' 'ಪ್ರಾಕಾಶಿ ತತ್ವಂ ಪರಂ' 'ಧ್ವಾಂತಂ ಧ್ವಂಸಮನಾಯಿ'** ಇತ್ಯಾದಿ ವಿಶೇಷಣ-ತ್ರಯೇಣ ಸಂಪ್ರದಾಯಪ್ರವರ್ತಕತ್ವೇನ ಗುರುತ್ವಮುಪಪಾದಿತಮ್ ।

'ಯೇನ ಪ್ರಾದುರಭಾವಿ' ಎಂದು ವೇದವ್ಯಾಸರಿಗೆ ಭೂಮಿಯಲ್ಲಿ ಪ್ರಾದುರ್ಭಾವವೇ ಹೊರತು ಜನ್ಮವಲ್ಲ ಎಂದು ತಿಳಿಸಿದ್ದರಿಂದ ನಾರಾಯಣನೊಂದಿಗೆ ಐಕ್ಯವು ಕೂಡುತ್ತದೆ. 'ಶ್ರುತಿಪಂಕಜಂ ಪ್ರಾಬೋಧಿ' ಎನ್ನುವುದರಿಂದ ವೇದವೆಂಬ ಕಮಲವನ್ನು ವೇದವ್ಯಾಸರೆಂಬ ಸೂರ್ಯವು ಅರಳಿಸಿತು ಎಂದು ಹೇಳಿದ್ದರಿಂದ, ವೇದಕ್ಕೆ ಪ್ರಭವ ಎಂದರೆ, ನಷ್ಟಪ್ರಾಯವಾದ ವೇದದ ಉದ್ಬೋಧನೆಯನ್ನು ಮಾಡಿದವರು ಎಂದರ್ಥ ಹೊರತು ಕರ್ತೃಗಳಲ್ಲ. ಹಾಗಾಗಿ ಆಕ್ಷೇಪಕ್ಕೆ ಅವಕಾಶವಿಲ್ಲ.

'ಗೋಸಂತತಿಃ ವ್ಯಸ್ತಾರಿ' 'ಪರಂ ತತ್ವಂ ಪ್ರಾಕಾಶಿ' 'ಧ್ವಾಂತಂ ಧ್ವಂಸಮನಾಯಿ' ಎಂಬ ಮೂರು

ವಿಶೇಷಣಗಳಿಂದ ಸಂಪ್ರದಾಯಪ್ರವರ್ತಕರಾದ್ದರಿಂದ ಎಲ್ಲರಿಗೂ ಗುರುಗಳು ಎಂದು ಹೇಳಿದಂತಾಯಿತು.

## ವ್ಯಾಸ-ಸೂರ್ಯರಲ್ಲಿ ಇರುವ ವಿಶೇಷ

(ಶ್ರೀನಿಧಿ) — ಅತ್ರ 'ಪ್ರಾಬೋಧಿ' ಇತ್ಯಾದಿ 'ಧ್ವಂಸಮನಾಯಿ' ಇತ್ಯಂತಂ ಸೂರ್ಯೇ ಯುಗಪತ್, ವ್ಯಾಸೇ ತು ಕ್ರಮೇಣ ಇತಿ ವಿಶೇಷಃ ।

ಈ ಶ್ಲೋಕದಲ್ಲಿ ವೇದವ್ಯಾಸರನ್ನು ಸೂರ್ಯನಿಗೆ ಹೋಲಿಸಿದ್ದಾರೆ. ಸೂರ್ಯನಲ್ಲಿರುವ ಧರ್ಮಗಳೆಲ್ಲವೂ ಇವರಲ್ಲಿದೆ ಎಂದು. ಅಂದರೆ ಸೂರ್ಯ ಭೂಮಿವಲಯಕ್ಕೆ ಬಂದಾಗ ಕಮಲಗಳು ಅರಳುವವು. ಕತ್ತಲೆಯು ದೂರವಾಗುವುದು ಇತ್ಯಾದಿ. ವೇದವ್ಯಾಸರು ಭೂಮಿವಲಯಕ್ಕೆ ಬಂದಾಗ ಶ್ರುತಿಗಳೆಂಬ ಕಮಲಗಳು ಅರಳುವವು, ಅಜ್ಞಾನವೆಂಬ ಕತ್ತಲೆಯು ದೂರವಾಗುವುದು ಇತ್ಯಾದಿ. ಈ ಕಾರ್ಯಗಳೆಲ್ಲ ಇಬ್ಬರಲ್ಲೂ ಸಮಾನವಾದರೂ ಒಂದು ವ್ಯತ್ಯಾಸವಿದೆ. ಶ್ಲೋಕದಲ್ಲಿ ಹೇಳಿದ 'ಪ್ರಾಬೋಧಿ' ಎಂಬ ಪದದಿಂದಾರಂಭಿಸಿ 'ಧ್ವಾಂತಂ ಧ್ವಂಸಮನಾಯಿ' ಎಂಬಲ್ಲಿಯವರೆಗೆ ನಿರ್ದೇಶಿಸಿದ ಕಾರ್ಯಗಳೇನಿವೆ ಅದು ಸೂರ್ಯನ ವಿಷಯದಲ್ಲಿ ಒಟ್ಟಿಗೆ ಆಗುವವು. ವೇದವ್ಯಾಸರಲ್ಲಿ ಕ್ರಮವಾಗಿ ಎಂದು ತಿಳಿಯುವುದು.

## ಪಾಂಡುರಂಗೀ ನರಸಿಂಹಾಚಾರ್ಯರ ವಾಕ್ಯಾರ್ಥರತ್ನಮಾಲಾ ಟಿಪ್ಪಣೀ - ಮಂಗಳಾಚರಣೆ

### ಬ್ರಹ್ಮರುದ್ರಾದಿದೇವತೆಗಳನ್ನು ಕಾಪಾಡುವ ಶ್ರೀ ಲಕ್ಷ್ಮೀನರಸಿಂಹ

ಸದ್ಬೋಧೋರುಸುಖೋನ್ನತದ್ಯುತಿವರೌದಾರ್ಯಾಗ್ರ್ಯವೀರ್ಯಾತುಲ-
ಸ್ವಾತಂತ್ರ್ಯಾದಿಗುಣಾರ್ಣವಂ ಜನಿಮೃತಿಭ್ರಾಂತ್ಯಾದಿದೋಷಾತಿಗಮ್ ।
ವೈರಾಗ್ರ್ಯೋನ್ನತಭಕ್ತಿಸಂಶ್ರುತಿಮತಿಧ್ಯಾನೈಸ್ತ್ವ ಸಾಕ್ಷಾತ್ಕೃತಂ
ಸದ್ಭಿಃ ಪ್ರಾಪ್ಯಮಜೇಶಪೂರ್ವಸುರಪಂ ಲಕ್ಷ್ಮೀನೃಸಿಂಹಂ ಭಜೇ ॥

ಲಕ್ಷ್ಮೀನರಸಿಂಹನನ್ನು ಭಜಿಸುತ್ತೇನೆ. ಅವನು ಒಳ್ಳೆಯ ಜ್ಞಾನ, ಬಹಳವಾದ ಸುಖ, ಉನ್ನತವಾದ ಕಾಂತಿ, ಶ್ರೇಷ್ಠವಾದ ಔದಾರ್ಯ, ಶ್ರೇಷ್ಠವಾದ ವೀರ್ಯ, ಅತುಲವಾದ ಸ್ವಾತಂತ್ರ್ಯ ಮೊದಲಾದ ಗುಣಗಳ ಸಮುದ್ರನಾಗಿದ್ದಾನೆ. ಹುಟ್ಟು ಸಾವು ಭ್ರಾಂತಿ ಮೊದಲಾದ ದೋಷಗಳನ್ನು ಮೀರಿದ್ದಾನೆ. ವೈರಾಗ್ಯ, ಶ್ರೇಷ್ಠವಾದ ಭಕ್ತಿ, ಸಮ್ಯಕ್-ಶ್ರವಣ-ಮನನ-ನಿದಿಧ್ಯಾಸನಗಳಿಂದ ಸಾಕ್ಷಾತ್ಕಾರವಿಷಯನಾಗುವನು. ಸಜ್ಜನರಿಂದ ಹೊಂದಲ್ಪಡುವವನು. ಬ್ರಹ್ಮರುದ್ರ ಮೊದಲಾದ ದೇವತೆಗಳನ್ನು ಕಾಪಾಡುವವನು.

## ಜೈಮಿನ್ಯಾದಿಋಷಿಗಳನ್ನು ಬೋಧಿಸಿದ ಶ್ರೀವೇದವ್ಯಾಸರು

ವೇದವ್ಯಾಸಂ ವೇದಮುದ್ಧೃತ್ಯ ವೇದವ್ಯಾಖ್ಯಾನಾರ್ಥಂ ಭಾರತಾದ್ಯಂ ಚ ಸೂತ್ರಮ್ ।
ಕೃತ್ವಾಽಜೇಶೇಂದ್ರಾದಿದೇವೇಷು ದತ್ವಾ ಜೈಮಿನ್ಯಾದೀನ್ ಬೋಧಯಂತಂ ನಮಾಮಿ ॥

ವೇದವನ್ನು ಉದ್ಧರಿಸಿ ಅದರ ವ್ಯಾಖ್ಯಾನಕ್ಕೋಸ್ಕರ ಬ್ರಹ್ಮಸೂತ್ರ, ಮಹಾಭಾರತ ಮೊದಲಾದ ಗ್ರಂಥಗಳನ್ನು ಮಾಡಿ, ಬ್ರಹ್ಮರುದ್ರ ಇಂದ್ರಾದಿದೇವತೆಗಳಿಗೆ ನೀಡಿ, ಜೈಮಿನಿ ಮೊದಲಾದ ಋಷಿಗಳಿಗೆ ಬೋಧಿಸಿದ ವೇದವ್ಯಾಸರನ್ನು ನಮಸ್ಕರಿಸುತ್ತೇನೆ.

## ವೈಷ್ಣವಮಾರ್ಗ ಅವಭಾಸಕರಾದ ಶ್ರೀಮಧ್ವಾಚಾರ್ಯರು

ಶ್ರೀಮಧ್ವಾಚಾರ್ಯವರ್ಯೋಽನಿಲವಪುರತುಲಂ ಬ್ರಹ್ಮಸೂತ್ರಸ್ಯ ಭಾಷ್ಯಂ
ಕೃತ್ವಾ ದುರ್ವಾದಿಭಾಷ್ಯಾಣ್ಯಪವದಿತುಮನುವ್ಯಾಕೃತಿಂ ಚಾನುವರ್ತ್ಯ ।
ತತ್ರತ್ಯನ್ಯಾಯದೀಪ್ತ್ಯೈ ವರನಯವಿವೃತಿಂ ಚಾಕರೋತ್ ಸತ್ಸುಖಾರ್ಥಂ
ತಂ ಮೇ ಸದ್ಬೋಧಸಿದ್ಧ್ಯೈ ಗುರುಗಮನುಭಜೇ ವೈಷ್ಣವಾಧ್ವಾವಭಾಸಮ್ ॥

ಯಾವ ಮಧ್ವಾಚಾರ್ಯರೆಂಬ ಶ್ರೇಷ್ಠಗುರುಗಳು ವಾಯುವಿನ ಅವತಾರಭೂತರಾದವರು, ಅತುಲವಾದ ಬ್ರಹ್ಮಸೂತ್ರಭಾಷ್ಯವನ್ನು ಮಾಡಿ, ದುರ್ವಾದಿಗಳ ಭಾಷ್ಯವನ್ನು ನಿರಾಕರಿಸಲು ಅನುವ್ಯಾಖ್ಯಾನವನ್ನೂ ಮಾಡಿ, ಆ ಗ್ರಂಥಗಳಲ್ಲಿರುವ ನ್ಯಾಯಗಳ ಪ್ರಕಾಶಕ್ಕೋಸ್ಕರ ಶ್ರೇಷ್ಠವಾದ ನ್ಯಾಯವಿವರಣವನ್ನು ಸಜ್ಜನರ ಸುಖಕ್ಕೋಸ್ಕರ ಮಾಡಿದರೋ ಅಂತಹ ವೈಷ್ಣವಮಾರ್ಗವನ್ನು ತೋರಿಸಿದ ನನ್ನ ಗುರುಗಳ ಅಂತರ್ಯಾಮಿಯಾದ ಮಧ್ವಾಚಾರ್ಯರನ್ನು ಒಳ್ಳೆಯ ಬುದ್ಧಿಯ ಸಿದ್ಧಿಗೋಸ್ಕರ ಭಜಿಸುತ್ತೇನೆ

## ಬದ್ಧಾಂಜಲಿಯಾಗಿ ಭಾರತೀದೇವಿಗೆ ನಮಸ್ಕಾರ

ವಾಕ್ಚೇತಸೋರ್ಮಾನಿನೀಂ ಭಾರತೀಂ ತ್ವಾಂ ಟೀಕಾಕೃದುಕ್ತೌ ಪರಿಗಚ್ಛತೋ ಮೇ ।
ವಾಕ್ಚೇತಸೋಃ ಸಂಸ್ಕುರು ಸನ್ನಿಧಾನಂ ಬದ್ಧಾಂಜಲಿಸ್ತ್ವಾಂ ಪ್ರಣಮಾಮಿ ಮೂರ್ಧ್ನಾ ॥

ಮಾತು ಹಾಗೂ ಮನಸ್ಸುಗಳಿಗೆ ಅಭಿಮಾನಿನಿಯಾದ ಭಾರತೀದೇವಿಯನ್ನು ಕುರಿತು . ಕೈಮುಗಿ- ದವನಾಗಿ ಶಿರಬಾಗಿ ನಮಿಸುತ್ತೇನೆ. ದೇವಿಯೇ ನೀನು ಟೀಕಾಚಾರ್ಯರ ಮಾತಿನಲ್ಲಿ ಹೋಗುತ್ತಿರುವ ನನ್ನ ಮನಸ್ಸು ಹಾಗೂ ಮಾತುಗಳಲ್ಲಿ ನಿನ್ನ ಸನ್ನಿಧಾನವನ್ನು ಚೆನ್ನಾಗಿ ಇಡು.

## ನನ್ನ ಮಾತು ಹಾಗೂ ಮನಸ್ಸಿನಲ್ಲಿ ಶ್ರೀಜಯತೀರ್ಥರ ಮಾತು ಪ್ರತಿದಿನ ಪ್ರಕಾಶಿಸಲಿ

ಶ್ರೀಮಧ್ವೋಕ್ತಿವಿಕಾಸಿನೀ ವರಗುರುಪ್ರೌಢಪ್ರಸಾದಾರ್ಜಿತಾ
ದುರ್ವಾದೀರಿತಮೂಕತಾಪಸರಣೀ ಗಂಭೀರಭಾವಾನ್ವಿತಾ ।

ಶುದ್ಧಾ ಶ್ರೀಜಯರಾಜವಾಗನುದಿನಂ ಮದ್ವಾಗ್ಹೃದೋರ್ಭಾಸತಾಂ
ಯದ್ಭಾನಾತ್ ಮಮ ವಾಗಶೇಷವಿದುಷಾಮಲ್ಪಾಪಿ ಮಾನ್ಯಾ ಭವೇತ್ ॥

ಶ್ರೀಜಯತೀರ್ಥಗುರುರಾಜರ ಮಾತು ಪ್ರತಿದಿನವೂ ನನ್ನ ಹೃದಯ ಹಾಗೂ ಮಾತಿನಲ್ಲಿ ಪ್ರಕಾಶಿಸಲಿ. ಯಾವ ಆ ಜಯರಾಜರ ಮಾತಿನ ಪ್ರಕಾಶದಿಂದ ನನ್ನ ಮಾತು ಚಿಕ್ಕದಾಗಿದ್ದರೂ ಎಲ್ಲ ವಿದ್ವಾಂಸರಿಗೆ ಮಾನ್ಯವಾಗಿ ಆಗುತ್ತದೆ. ಆ ಜಯತೀರ್ಥರ ಮಾತು ಮಧ್ವಾಚಾರ್ಯರ ಮಾತು-ಗಳನ್ನು ಸ್ಫುಟಪಡಿಸುವುದು. ಶ್ರೇಷ್ಠರಾದ ಗುರುಗಳ ಅತ್ಯುತ್ಕೃಷ್ಟವಾದ ಪ್ರಸಾದದಿಂದ ಸಂಪಾದಿತವಾದದ್ದು. ದುರ್ವಾದಿಗಳಿಂದ ಬಂದ ಮೂಕತ್ವವನ್ನು ಅಪಹರಿಸುವುದು. ಗಂಭೀರವಾದ ಅಭಿಪ್ರಾಯದಿಂದ ಕೂಡಿರುವುದು. ಹಾಗೂ ನಿರ್ಮಲವಾಗಿರುವುದು.

## ಬುದ್ಧಿಯ ವೀರ್ಯಸಿದ್ಧಿಗಾಗಿ ಶ್ರೀವ್ಯಾಸರಾಜರ ಭಜನೆ

ಯಃ ಶ್ರೀಮಾನ್ ವ್ಯಾಸತೀರ್ಥಃ ಸುಖಮುನಿಗುರುಸಂಪ್ರೋಕ್ತಭಾಷ್ಯಾನುಭಾಷ್ಯ-
ನ್ಯಾಯವ್ಯಾಖ್ಯಾತಸೂತ್ರೇ ಜಯಮುನಿರಚಿತವ್ಯಾಕೃತೌ ಚಾತಿಧೀರಃ ।
ಚಕ್ರೇ ದುರ್ವಾದಿಭಂಗಂ ಸುಜನಸುಮತಯೇ ಚಾಕರೋಚ್ಚಂದ್ರಿಕಾದಿ-
ಗ್ರಂಥಂ ಜೀವೇಶಭೇದಾದಿಪರಮನುಭಜೇ ತಂ ಧಿಯೋ ವೀರ್ಯಸಿದ್ಧ್ಯೈ ॥

ಯಾವ ಪೂಜ್ಯರಾದ ವ್ಯಾಸತೀರ್ಥರು ಪೂರ್ಣಪ್ರಜ್ಞಮುನಿಗಳು ಹೇಳಿದ ಭಾಷ್ಯಾನುಭಾಷ್ಯ-ನ್ಯಾಯವಿವರಣ ಮೊದಲಾದವುಗಳಿಂದ ವ್ಯಾಖ್ಯಾನಗೊಂಡ ಬ್ರಹ್ಮಸೂತ್ರದಲ್ಲಿ ಹಾಗೂ ಜಯ-ತೀರ್ಥರ ನ್ಯಾಯಸುಧೆಯಲ್ಲಿ ಅತ್ಯಂತ ಜ್ಞಾನಿಗಳೋ ಯಾವ ಪೂಜ್ಯರಾದ ವ್ಯಾಸತೀರ್ಥರು ಸಾತ್ವಿಕರ ಒಳ್ಳೆಯ ಬುದ್ಧಿಗಾಗಿ ಜೀವೇಶಭೇದ ಮೊದಲಾದ ತತ್ತ್ವಗಳನ್ನು ಪ್ರತಿಪಾದನೆ ಮಾಡುವ ಚಂದ್ರಿಕಾದಿಗ್ರಂಥಗಳನ್ನು ರಚಿಸಿದರೋ, ಯಾರು ದುರ್ವಾದಿಗಳಿಗೆ ಭಂಗವನ್ನುಂಟುಮಾಡಿದರೋ ಅಂತಹವರನ್ನು ಬುದ್ಧಿಯ ವೀರ್ಯತೆಯ ಸಿದ್ಧಿಗೋಸ್ಕರ ಭಜಿಸುತ್ತೇನೆ.

## ಶ್ರೀರಘೂತ್ತಮಾದಿಗುರುಗಳು ಸಚ್ಛಾಸ್ತ್ರೋಕ್ತವಾದ ಮಾರ್ಗದಲ್ಲಿ ನನ್ನ ಮನಸ್ಸಿರುವಂತೆ ಮಾಡಲಿ

ರಘೂತ್ತಮಾದ್ಯಾ ಗುರವೋ ಜ್ಞಾನಭಕ್ತ್ಯಾದಿಶಾಲಿನಃ ।
ಮನ್ಮಾನಸಂ ವರ್ತಯಂತು ಸಚ್ಛಾಸ್ತ್ರೋಕ್ತಸುವರ್ತ್ಮನಿ ॥

ರಘೂತ್ತಮರೇ ಮೊದಲಾದ ಜ್ಞಾನಭಕ್ತ್ಯಾದಿಸಂಪನ್ನರಾದ ಗುರುಗಳು ಸಚ್ಛಾಸ್ತ್ರಗಳಲ್ಲಿ ಹೇಳಿದ ಒಳ್ಳೆಯ ದಾರಿಯಲ್ಲಿ ನನ್ನ ಮನಸ್ಸನ್ನು ಇರುವಂತೆ ಮಾಡಲಿ.

## ವಿದ್ಯಾದಿಗಳ ಪ್ರಾಪ್ತಿಗಾಗಿ ವಿದ್ಯಾಧೀಶಯತಿಗಳು

ಯೇನಾಲಾಭಿ ಸಮಸ್ತಶಾಸ್ತ್ರಜಮಹಾಜ್ಞಾನಂ ಸಮಾಃ ಷೋಡಶಂ
ಯೇನಾಬೋಧಿ ರಮೇಶತತ್ತ್ವಮಪವಾದ್ಯುಕ್ತಿಶ್ಚ ದೂರೀಕೃತಾ ।
ಯೇನಾಕಾರಿ ವಿರಕ್ತಿರಚ್ಯುತಪದೇ ಭಕ್ತಿಶ್ಚ ಲೋಕಶ್ರುತಾ
ವಿದ್ಯಾಧೀಶಯತಿಃ ಸ ಮೇ ಪರಗುರುಃ ವಿದ್ಯಾದಿಪ್ರಾಪ್ತ್ಯೈ ಭವೇತ್ ॥

ಯಾರಿಂದ ಸಮಸ್ತಶಾಸ್ತ್ರಗಳ ಮಹಾಜ್ಞಾನವು ಹದಿನಾರುವರ್ಷಗಳ ಕಾಲ ಸಿಕ್ಕಿತೋ, ಯಾರಿಂದ ಭಗವಂತನ ತತ್ತ್ವವು ತಿಳಿಸಲ್ಪಟ್ಟಿತೋ, ಯಾರಿಂದ ಪ್ರತಿವಾದಿಗಳ ಮಾತು ದೂರಮಾಡಲ್ಪಟ್ಟಿತೋ, ಯಾರಿಂದ ಲೋಕಪ್ರಸಿದ್ಧವಾದ ವೈರಾಗ್ಯವು ಉಂಟುಮಾಡಲ್ಪಟ್ಟಿತೋ, ಯಾರಿಂದ ಭಗವಂತನ ಪಾದಗಳಲ್ಲಿ ಭಕ್ತಿಯು ಉಂಟುಮಾಡಲ್ಪಟ್ಟಿತೋ ಅಂತಹ ಶ್ರೇಷ್ಠಗುರುಗಳಾದ ವಿದ್ಯಾಧೀಶಯತಿ-ಗಳು ನನ್ನ ವಿದ್ಯೆ ಮೊದಲಾದವುಗಳ ಪ್ರಾಪ್ತಿಗಾಗಿ ಆಗಲಿ.

## ಒಣಗಿದ ಮರಗಳನ್ನೂ ರಸಭರಿತವನ್ನಾಗಿ ಮಾಡಿದ ಮಹಾತ್ಮರು

ಯದ್ಧಸ್ತನಿಃಸೃತರಮೇಶಪದಾಭಿಷೇಕತೀರ್ಥೇನ ಶುಷ್ಕತರವಃ ಸರಸಾ ಗಯಾಯಾಮ್ ।
ಜಾತಾ ವಿಪಶ್ಯತಿ ಜನೇ ಬಹುದೇಶಸಂಸ್ಥೇ ತಂ ದೈವತಂ ಪರಪುಮಾಂಸಮಹಂ ನಮಾಮಿ ॥

ದೇವತಾಪುರುಷರಾದ ಶ್ರೇಷ್ಠರನ್ನು ನಾನು ನಮಸ್ಕರಿಸುತ್ತೇನೆ. ಅವರಾದರೋ ಗಯಾಕ್ಷೇತ್ರದಲ್ಲಿ ಬಹಳ ದೇಶದ ಜನರ ಸಮ್ಮುಖದಲ್ಲಿ ತಮ್ಮ ಕೈಯಿಂದ ಪ್ರೋಕ್ಷಿಸಲ್ಪಟ್ಟ, ಭಗವಂತನ ಪಾದಗಳಲ್ಲಿ ಅಭಿಷೇಕಮಾಡಿದ ತೀರ್ಥದಿಂದ, ಒಣಗಿದ ಮರಗಳನ್ನು ರಸಭರಿತವನ್ನಾಗಿ ಮಾಡಿದರು.

## ವ್ಯಾಪ್ತಶಿಷ್ಯರಿಂದ ಸನ್ನತರಾದ ಆನಂದಭಟ್ಟಾರಕರು

ಪುಣ್ಯಸ್ತಂಭನಿವಾಸಿಗೌತಮಸರಿತ್–ಸ್ನಾನಾಗ್ನಿಹೋತ್ರಾದಿ–
ಸದ್ಧೌತಾರ್ಷಾದಿಗುರೂಕ್ತಕರ್ಮನಿಚಯಶ್ರೀಶಪ್ರಪೂಜಾರತಮ್ ।
ಶ್ರೀಮದ್ಧ್ವೀಯಸುಶಾಸ್ತ್ರಕಂಟಕಹರಾಂಸ್ತದ್ವ್ಯಾಕೃತೌ ಪಂಡಿತಾನ್
ವಂದೇ ವ್ಯಾಪ್ತಸುಶಿಷ್ಯಸನ್ನತಿಯುತಾನಾನಂದಭಟ್ಟಾರಕಾನ್ ॥

ಪುಣ್ಯಸ್ತಂಭನಗರದಲ್ಲಿ ವಾಸವಾಗಿದ್ದು ಗೋದಾವರೀ ನದಿಯಲ್ಲಿ ಸ್ನಾನ ಅಗ್ನಿಹೋತ್ರ ಮೊದಲಾದ ಹೋಮ ಋಷಿಸಂಬಂಧಿಯಾದ ಗುರುಗಳು ಹೇಳಿದ ಅನೇಕ ಕರ್ಮಗಳನ್ನು ಆಚರಣೆ ಮಾಡುತ್ತ ಭಗವಂತನ ಪೂಜೆಯಲ್ಲಿ ಆಸಕ್ತರಾಗಿದ್ದ, ಮಧ್ವಶಾಸ್ತ್ರಕ್ಕೆ ಮುಳ್ಳುಗಳಂತೆ ಇರುವುದನ್ನು ನಿವಾರಣೆ

ಮಾಡುತ್ತ ಆ ಮಧ್ವಶಾಸ್ತ್ರಗಳ ವ್ಯಾಖ್ಯಾನಮಾಡುವುದರಲ್ಲಿ ಪಂಡಿತರಾಗಿದ್ದ, ವ್ಯಾಪಕವಾದ ಶಿಷ್ಯ-ಸಮೂಹದಿಂದ ನಮಸ್ಕೃತರಾದ ಆನಂದಭಟ್ಟಾರಕರನ್ನು ನಮಸ್ಕರಿಸುತ್ತೇನೆ.

## ಚಿಕ್ಕಪ್ಪಂದಿರಾದ ಶ್ರೀ ಶ್ರೀನಿವಾಸಾಚಾರ್ಯರು

ಇನೋದಯಸ್ನಾನಸುರಾರ್ಚನಾಗ್ನಿಹೋತ್ರಾದಿಸತ್ಕರ್ಮರತಾತಿಶುದ್ಧಮ್ ।
ಶ್ರೀಶ್ರೀನಿವಾಸಾಭಿಧಮಾರ್ಯವರ್ಯಂ ಪಿತೃವ್ಯಮಾನೌಮ್ಯತಿಧೀರಶಿಷ್ಯಕಮ್ ॥

ಸೂರ್ಯೋದಯಕ್ಕಿಂತ ಮೊದಲು ಸ್ನಾನ, ದೇವತೆಗಳ ಅರ್ಚನ, ಅಗ್ನಿಹೋತ್ರ ಮೊದಲಾದ ಸತ್ಕರ್ಮಗಳಲ್ಲಿ ಆಸಕ್ತರಾಗಿದ್ದ, ಅತಿಬುದ್ಧಿವಂತರಾದ ಶಿಷ್ಯರ ಸಮೂಹವುಳ್ಳ ಪೂಜ್ಯರಲ್ಲಿ ಶ್ರೇಷ್ಠ-ರಾದ ಚಿಕ್ಕಪ್ಪಂದಿರಾದ ಶ್ರೀಶ್ರೀನಿವಾಸ ಎಂಬ ಹೆಸರಿನವರನ್ನು ಚೆನ್ನಾಗಿ ನಮಸ್ಕರಿಸುತ್ತೇನೆ.

## ಶ್ರೀ ಸತ್ಯನಾಥತೀರ್ಥರು ಅಪಾಯದಿಂದ ಕಾಪಾಡಲಿ

ಶ್ರೀಮತ್ಸತ್ಯನಿಧಿಪ್ರಭೂತಯತಿರಾಟ್ ಶ್ರೀಸತ್ಯನಾಥಾಧಿಪಃ
ಸತ್ಯಾಭಿ(ಭೀ)ನವತೀರ್ಥಸದ್ಗುರುವರೇ ಸಂವೃದ್ಧಭಾಗ್ಯಪ್ರದಃ ।
ಶ್ರೀಕೃಷ್ಣಪ್ರತಿನಾಥರಾಮಭಜಕಶ್ಚಿತ್ರೈರ್ನವೈಃ ಸಾಧನೈಃ
ಭಕ್ತಂ ಮಾಂ ನರಸಿಂಹಮಾಶು ಕೃಪಯಾ ಪಾಯಾದಪಾಯಾತ್ ಪ್ರಭುಃ ॥

ಶ್ರೀಸತ್ಯಾಭಿನವತೀರ್ಥರೆಂಬ ಸದ್ಗುರುಗಳಲ್ಲಿ ಅಭಿವೃದ್ಧಿಹೊಂದಿದ ಭಾಗ್ಯವನ್ನು ದಯಪಾಲಿಸಿದ, ವಿಚಿತ್ರವಾದ ಹೊಸದಾದ ಸಾಧನಗಳಿಂದ ಶ್ರೀಕೃಷ್ಣ-ವೇದವ್ಯಾಸ-ರಾಮರನ್ನು ಭಜಿಸುವ, ಸಮರ್ಥರಾದ, ಶ್ರೀಮತ್ಸತ್ಯನಿಧಿತೀರ್ಥರಿಂದ ಪ್ರಾದುರ್ಭವಿಸಿದ ಯತಿಶ್ರೇಷ್ಠರಾದ ಶ್ರೀಸತ್ಯ-ನಾಥತೀರ್ಥರು ಕಾರುಣ್ಯದಿಂದ ಭಕ್ತನಾದ ನರಸಿಂಹನೆಂಬ ನನ್ನನ್ನು ಅಪಾಯದಿಂದ ಕಾಪಾಡಲಿ.

## ಶ್ರೀಮದ್ದೇಶನ ಶ್ರೇಷ್ಠ ಅರ್ಚನೆಯಲ್ಲಿ ಆಸಕ್ತಮನಸ್ಸುಳ್ಳ ಶ್ರೀಕೇಶವಾರ್ಯರು

ವಿದ್ಯಾಧೀಶಗುರೋರಶೇಷಸಮಯಾನಭ್ಯಸ್ಯ ಮಾಧ್ವೀಯ-
ಸತ್ತಂತ್ರಾರ್ಥಂ ಪ್ರವಿಚಾರ್ಯ ಚಾನುಹೃದಯಂ ಶಾಸ್ತ್ರಪ್ರವಕ್ತಾಽಭವತ್ ।
ದುರ್ವಾದೀಂದ್ರಸುಭಂಗಕೃದ್ವರನದೀಸ್ನಾನಾಗ್ನಿಹೋತ್ರಾದಿಕೃತ್
ಶ್ರೀಮದ್ದೇಶವರಾರ್ಚನೇ ರತಮನಾಃ ಶ್ರೀಕೇಶವಾರ್ಯಾಹ್ವಯಃ ॥

ವಿದ್ಯಾಧೀಶಗುರುಗಳಿಂದ ಸಕಲಶಾಸ್ತ್ರಗಳನ್ನು ಅಭ್ಯಾಸಮಾಡಿ, ಮಧ್ವಾಚಾರ್ಯರ ಶಾಸ್ತ್ರಾರ್ಥವನ್ನು ಹೃದಯಸ್ಪರ್ಶಿಯಾಗಿ ಚೆನ್ನಾಗಿ ವಿಚಾರಮಾಡಿ, ಶಾಸ್ತ್ರವನ್ನು ಪ್ರವಚನಮಾಡುವವರಾದರು. ಬಲಿಷ್ಠರಾದ ದುರ್ವಾದಿಗಳ ಭಂಗವನ್ನು ಮಾಡಿದವರು. ಶ್ರೇಷ್ಠನದೀಸ್ನಾನಅಗ್ನಿಹೋತ್ರಾದಿಗಳನ್ನು

ಮಾಡಿದವರು. ಮಧ್ವೇಶನ ಶ್ರೇಷ್ಠವಾದ ಅರ್ಚನೆಯಲ್ಲಿ ಆಸಕ್ತಮನಸ್ಕರು ಶ್ರೀಕೇಶವಾರ್ಯ ಎಂಬ ಹೆಸರಿನವರು.

## ತಂದೆಗೆ ನಮಸ್ಕಾರ

ಯದ್ವ್ಯಾಖ್ಯಾನಸ್ಯ ಶಾಲಾ ತ್ವಹಮಹಮಿಕಯಾ ಶಿಷ್ಯಸಂಘೇನ ಪೂರ್ಣಾ
ವ್ಯಾಖ್ಯಾಚಾತುರ್ಯದೂರೀಕೃತಕುಮತಿಜನಾ ಶಿಷ್ಯವಾಕ್ಸಾರಯುಕ್ತಾ ।
ಸಾಯಂ ಜ್ಞಾತ್ಯಾದಿಶಿಷ್ಯಪ್ರಸುತವರನರಾವಲ್ಲ್ಯಪೂರ್ವಾನ್ನಜಾತ-
ಪ್ರೀತ್ಯಾ ಯುಕ್ತಾ ಗುರುಂ ತಂ ಪಿತರಮಪಿ ಪತಿಂ ನೌಮಿ ಮೇ ರೂಪದೀಪಮ್ ॥

ಯಾರ ಪಾಠಶಾಲೆಯು ನಾನು ಮೊದಲು ನಾನು ಮೊದಲು ಎನ್ನುವ ಶಿಷ್ಯಸಮುದಾಯದಿಂದ ಪೂರ್ಣವಾಗಿದೆಯೋ, ಎಲ್ಲಿ ಯಾರ ವ್ಯಾಖ್ಯಾಚಾತುರ್ಯದಿಂದ ಕುತ್ಸಿತ ಬುದ್ಧಿಯುಳ್ಳ ಜನರೆಲ್ಲ ದೂರಮಾಡಲ್ಪಟ್ಟರೋ, ಯಾವುದು ಶಿಷ್ಯರ ಶ್ರೇಷ್ಠವಾದ ಮಾತಿನಿಂದ ಕೂಡಿರುವಂತಹದೋ, ಸಂಜೆಯ ಹೊತ್ತು ಬಳ್ಳಿಯಂತಿರುವ ಬಂಧುಮೊದಲಾದ ಶಿಷ್ಯರು ಮೊಮ್ಮಕ್ಕಳು ಶ್ರೇಷ್ಠಜನರುಗಳಿಗೆ ಅಪೂರ್ವವಾದ ಅನ್ನಾದಿಗಳನ್ನು ನೀಡಿ ಪೋಷಣೆಮಾಡುವುದರಿಂದ ಉಂಟಾದ ಪ್ರೀತಿಯಿಂದ ಯುಕ್ತವಾಗಿ ಇದ್ದಿತೋ ಅಂತಹ ಸ್ವಾಮಿಯಾದ ಗುರುವಾದ ಕಾಂತಿಸಂಪನ್ನರಾದ ತಂದೆಯನ್ನು ನಮಸ್ಕರಿಸುತ್ತೇನೆ.

## ಅವರು ಹೇಳಿದ ಅರ್ಥ-ಆಲೋಚನೆ ಬಿಟ್ಟು ಬೇರೆ ಯಾವ ಸೇವೆಯನ್ನು ತಾನೆ ಮಾಡಲಿ?

ಯಸ್ಯಾನುಗ್ರಹಲೇಶತೋಽಹಮಭವಂ ವಿದ್ವತ್ಸುಮಾನಾಶ್ರಯೋ
ಯದ್ವಾಚಾನುಗತೇರ್ಮದೀಯವಚನಂ ವಿದ್ವನ್ಮನೋಗೋಚರಃ ।
ಯೋ ಮಚ್ಛಿಕ್ಷಣಸಿದ್ಧಯೇ ಮಮ ಕರೇಣಾಲೇಖಯದ್ ವ್ಯಾಕೃತೀ-
ಸ್ತತ್ಸೇವಾಂ ಕರವಾಣಿ ಕಾಂ ತದುದಿತಾರ್ಥಾಲೋಚನಾದೇಃ ಪರಾಮ್ ॥

ಯಾರ ಅನುಗ್ರಹದ ಲೇಶದಿಂದ ನಾನು ವಿದ್ವಾಂಸರ ಗೌರವಕ್ಕೆ ಪಾತ್ರನಾಗಿದ್ದೇನೋ, ಯಾರ ಮಾತನ್ನು ಅನುಸರಿಸುವುದರಿಂದ ನನ್ನ ಮಾತು ವಿದ್ವಾಂಸರ ಮನಸ್ಸಿಗೆ ಗೋಚರವಾಗಿದೆಯೋ, ಯಾರು ನನ್ನ ಶಿಕ್ಷಣಕ್ಕೋಸ್ಕರ ನನ್ನ ಕೈಯಿಂದ ವ್ಯಾಖ್ಯಾನಗಳನ್ನು ಬರೆಸಿದರೋ, ಅವರು ಹೇಳಿದ ಅರ್ಥಗಳ ಆಲೋಚನೆ ಮೊದಲಾದವುಗಳನ್ನು ಮಾಡುವುದು ಬಿಟ್ಟು ಬೇರೆ ಯಾವ ಸೇವೆಯನ್ನು ತಾನೆ ಮಾಡಲಿ.

### ಪೋಷಿಸಿದ ತಾಯಿಗೆ ನಮಸ್ಕಾರ

ರುಗ್ಮಿಣ್ಯಾಯೀಮಾತೃಪಾದೌ ಪ್ರವಂದೇ ಸುಷ್ಠ್ವನ್ನಾದೇರ್ದಾನತೋ ಲಾಲನಾಚ್ಚ ।
ಮಾಂ ಸಂಪಾತ್ಯ ಜ್ಞಾನಿವರ್ಗೇ ನಿವೇಶಯೋಗ್ಯಂ ಕೃತ್ವಾಶೀರ್ವಚೋರಕ್ಷಿತಾರೌ ॥

ಪೂಜ್ಯರಾದ ರುಗ್ಮಿಣೀ ತಾಯಿಯ ಪಾದದ್ವಯಗಳನ್ನು ಚೆನ್ನಾಗಿ ನಮಸ್ಕರಿಸುತ್ತೇನೆ. ಯಾವ ತಾಯಿಯು ಚೆನ್ನಾಗಿ ಅನ್ನಾದಿಗಳನ್ನು ನೀಡುವ ಮೂಲಕ, ಪ್ರೀತಿಯನ್ನು ನೀಡುವ ಮೂಲಕ ನನ್ನನ್ನು ಪೋಷಣೆ ಮಾಡಿ ಜ್ಞಾನಿಗಳ ಸಮೂಹದಲ್ಲಿ ಸೇರಿಕೊಳ್ಳುವಂತಹ ಯೋಗ್ಯತೆಯನ್ನುಂಟುಮಾಡಿ ಆಶೀರ್ವಾದದಿಂದ ರಕ್ಷಣೆ ಮಾಡಿದರೋ ಅಂತಹ ಅವರ ಪಾದಗಳನ್ನು ನಮಸ್ಕರಿಸುತ್ತೇನೆ.

### ಜ್ಯೇಷ್ಠಭ್ರಾತೃವಾದ ಶ್ರೀ ಶ್ರೀನಿವಾಸಾಚಾರ್ಯರು

ಯೋ ವೈ ಶಾಸ್ತ್ರಚತುಷ್ಟಯೇಽತಿನಿಪುಣೋ ದೂರೀಕೃತಾಜ್ಞಾನಕೋ
ದುರ್ವಾದೀಂದ್ರವಿದಾರಣೇತಿಚತುರೋ ದಾನೇ ತು ಕರ್ಣೋಪಮಃ ।
ಗುರ್ವಾನುಗ್ರಹವಾರಿಧಿರ್ಮಯಿ ಪರಸ್ನೇಹಂ ದಯಾತೋಽಕರೋತ್
ಜ್ಯೇಷ್ಠಭ್ರಾತರಮಾಶ್ರಯೇ ಸುಮತಯೇ ಶ್ರೀಶ್ರೀನಿವಾಸಂ ಗುರುಮ್ ॥

ಯಾರು ನಾಲ್ಕು ಶಾಸ್ತ್ರದಲ್ಲಿ ಅತ್ಯಂತ ನಿಪುಣರಾಗಿದ್ದಾರೋ, ಯಾರಲ್ಲಿ ಅಜ್ಞಾನವು ದೂರ-ವಾಗಿತ್ತೋ, ಯಾರು ಬಲಿಷ್ಠರಾದ ದುರ್ವಾದಿಗಳನ್ನು ಸೀಳಿಹಾಕುವುದರಲ್ಲಿ ಅತ್ಯಂತ ಚತುರರೋ, ಯಾರು ದಾನದಲ್ಲಿ ಕರ್ಣನಂತೆಯೋ, ಯಾರು ಗುರುಗಳ ಅನುಗ್ರಹಸಮುದ್ರವನ್ನು ಪಡೆದವರೋ, ಯಾರು ನನ್ನಲ್ಲಿ ಕಾರುಣ್ಯದಿಂದ ಅತ್ಯುತ್ತಮವಾದ ಸ್ನೇಹವನ್ನು ಮಾಡಿದರೋ ಅಂತಹ ಗುರುಗಳಾದ ಅಣ್ಣನಾದ ಶ್ರೀನಿವಾಸರನ್ನು ಸದ್ಬುದ್ಧಿಗಾಗಿ ಆಶ್ರಯಿಸುತ್ತೇನೆ.

### ನಮಸ್ಕರಿಸಿದ ಎಲ್ಲರ ಕೃಪೆಯಿಂದ ವಾಕ್ಯಾರ್ಥಚಂದ್ರಿಕಾಕ್ಕೆ ಟಿಪ್ಪಣೀ ರಚನೆ

ಅಥೋಕ್ತನಮ್ಯಕೃಪಯಾ ಗುರುಶಿಕ್ಷಾನುಸಾರತಃ ।
ಯಥಾಮತಿ ವ್ಯಾಕರಿಷ್ಯೇ ಸೌಧವಾಕ್ಯಾರ್ಥಚಂದ್ರಿಕಾಮ್ ॥

ಇಲ್ಲಿಯವರೆಗೂ ನಮಸ್ಕರಿಸಿದ ಎಲ್ಲರ ಕೃಪೆಯಿಂದ ಗುರುಗಳು ಹೇಳಿಕೊಟ್ಟ ರೀತಿಯಲ್ಲಿ ನನ್ನ ಬುದ್ಧ್ಯನುಸಾರ ಸುಧೆಯ ವಾಕ್ಯಾರ್ಥಚಂದ್ರಿಕಾವನ್ನು ವ್ಯಾಖ್ಯಾನಿಸುತ್ತೇನೆ.

### ಎಡವಿದರೂ ಜ್ಞಾನಿಗಳ ಮುಂದೆ ನಿಂದ್ಯನಲ್ಲ

ಶ್ರೀಮಚ್ಛ್ರೀಗುರುತದ್ಗುರೂದಿತಮಹಾಟೀಕಾವಿವೃತ್ಯಾದಿಕಂ
ನಾನಾಶಾಸ್ತ್ರಗಮರ್ಮವಾಕ್ಯರಚನಾಶೈಲೀವಿದಾಂ ಶೋಭತೇ ।

ಅಪ್ಯೇವಂ ಗುರುಪಾದಚಿಂತನಬಲಾತ್ ಸ್ಮೃತ್ವೋರುತಚ್ಛಿಕ್ಷಿತಂ
ನ್ಯಾಯಾಂಸ್ತತ್ರ ಯತನ್ ಸ್ಖಲನ್ನಪಿ ಪುನರ್ನಿಂದ್ಯೋ ನ ಸುಜ್ಞಾನಿನಾಮ್ ॥

ಅನೇಕಶಾಸ್ತ್ರಗಳಲ್ಲಿ ಇರುವ ಸೂಕ್ಷ್ಮವಾದ ವಾಕ್ಯಗಳ ರಚನೆಯ ಶೈಲಿಯನ್ನು ತಿಳಿದವರಿಗೆ ಪೂಜ್ಯರಾದ ಗುರುಗಳು ಪರಮಗುರುಗಳು ಅವರ ಗುರುಗಳು ಹೇಳಿದ ಮಹಾಟೀಕೆಗಳ ವಿವರಣೆ ಮುಂತಾದವುಗಳು ಶೋಭಿಸುತ್ತವೆ. ಹೀಗಿದ್ದರೂ ಗುರುಗಳ ಪಾದಚಿಂತನೆಯ ಬಲದಿಂದ, ಬಹಳಷ್ಟು ಅವರು ಹೇಳಿಕೊಟ್ಟದ್ದನ್ನು ಹಾಗೆ ಸ್ಮರಣೆಮಾಡಿಕೊಂಡು, ಹಾಗೆ ಅನೇಕ ನ್ಯಾಯಗಳನ್ನು ಸ್ಮರಿಸುತ್ತ ವ್ಯಾಖ್ಯಾನ ಮಾಡುವುದರಲ್ಲಿ ಪ್ರಯತ್ನಮಾಡುತ್ತ ಎಡವಿದರೂ ಒಳ್ಳೆಯ ಜ್ಞಾನಿಗಳ ಮುಂದೆ ನಿಂದಿತನಾಗುವುದಿಲ್ಲ.

## ಪ್ರಾಯಪಾಠಭಂಗ ಎಂಬ ಕಾರಣದಿಂದ ತ್ಯಾಜಿ ಎಂಬ ಪ್ರಯೋಗ

ನ ತ್ಯಜ್ಯತಾಮ್ ಇತಿ ಪ್ರಾರ್ಥನಾಯಾಂ ಲೋಟಿ ಪ್ರಯೋಕ್ತವ್ಯೇ 'ತ್ಯಾಜಿ' ಇತಿ ಲುಙ್ ಪ್ರಯೋಗಃ ಕುತಃ? ಇತ್ಯತೋ 'ಪ್ರಾದುರ್ಭಾವಿ' ಇತ್ಯಾದಿ ಲುಙ್ ಪ್ರಾಯಪಠಿತಮಿದಂ ಕ್ರಿಯಾ-ಪದಂ ಯದಿ ಲೋಡಂತಂ ತರ್ಹಿ ಅರ್ಥಾನುಗುಣ್ಯೇಽಪಿ ಪ್ರಾಯಪಾಠಭಂಗಃ ಆಯಾತಿ । ಆಶಿಷೋಽಭಿಪ್ರೇತತಯಾ ಲುಙರ್ಥಸ್ತು ನ ವಿವಕ್ಷಿತಃ । ತಸ್ಮಾತ್ ಲೋಡರ್ಥಪ್ರತಿಪತ್ತ್ಯಾ ಚ ಭವಿತವ್ಯಮ್ । ಪ್ರಾಯಪಾಠಭಂಗಶ್ಚ ಮಾಸ್ತು ಇತ್ಯಾಶಯೇನ ನಿಷೇಧಾರ್ಥಕಮಾಶಬ್ದಪ್ರಯೋಗಃ ಕೃತಃ । ಮಾಙಶ್ಚ ಯೋಗೇ ಲುಙಃ ಸರ್ವಲಕಾರಾಪವಾದಕತಯಾ ಲೋಡರ್ಥಕ ಏವಾಯಂ ಲುಙುಕ್ತಃ ಇತ್ಯಾಹ – **ಲುಙ್ ಪ್ರಾಯಪಾಠೇತಿ** ॥

'ಮಾ ತ್ಯಾಜಿ ಮೇ ಮಾನಸಂ' ಎಂದು. ಇಲ್ಲಿ ಮಾ ಎಂಬ ಶಬ್ದವನ್ನು ಬಳಸಿದ್ದರ ಔಚಿತ್ಯವನ್ನು ಹೀಗೆ ತಿಳಿಸಿದ್ದಾರೆ - ನನ್ನ ಮನಸ್ಸನ್ನು ವೇದವ್ಯಾಸರೆಂಬ ಸೂರ್ಯರೇ। ನೀವು ಬಿಡದಿರಿ ಎಂದು ಪ್ರಾರ್ಥಿಸಿದ್ದಾರೆ. ಪ್ರಾರ್ಥನೆಯ ಸಂದರ್ಭದಲ್ಲಿ 'ನ ತ್ಯಜ್ಯತಾಂ' ಎಂದು ಲೋಟ್ ಲಕಾರದ ಪ್ರಯೋಗವನ್ನು ಮಾಡಬೇಕು. 'ತ್ಯಾಜಿ' ಎಂದು ಲುಙ್ ಲಕಾರದ ಪ್ರಯೋಗವನ್ನು ಮಾಡಿದ್ದು ಏಕೆ ಎಂಬ ಪ್ರಶ್ನೆಗೆ ಉತ್ತರವಿದೆ. ಶ್ಲೋಕದ ಪ್ರಾರಂಭದಿಂದಲೂ ಪ್ರಾದುರಭಾವಿ, ವ್ಯಸ್ತಾರಿ, ಪ್ರಾಬೋಧಿ ಮುಂತಾದ ಒಂದೇ ರೀತಿಯ ಲುಙ್ ಲಕಾರದ ಪ್ರಯೋಗಗಳನ್ನು ಮಾಡುತ್ತ ಕೊನೆಗೆ ಲೋಟ್ ಲಕಾರವನ್ನು ಪ್ರಯೋಗಿಸಿದಲ್ಲಿ ಪ್ರಾಯಃಪಾಠವಿರೋಧ ಬರುವುದು. ಪ್ರಾಯಃಪಾಠ ಎಂದರೆ ಒಂದೇ ರೀತಿಯ ಶಬ್ದಗಳನ್ನು ಅಪೇಕಬಾರಿ ಒಂದು ಪ್ರಘಟ್ಟಕದಲ್ಲಿ ಅಥವಾ ಒಂದು ಶ್ಲೋಕದಲ್ಲಿ ಬಳಸುವುದು ಮಧ್ಯೆ ಅಥವಾ ಕೊನೆಗೆ ಬೇರೆ ರೀತಿಯದ್ದನ್ನು ಪ್ರಯೋಗಿಸಿದರೆ ಪ್ರಾಯಪಾಠ ಎನಿಸುವುದು. ಈ ಕಾರಣದಿಂದ ಮಾ ಎಂಬ ಶಬ್ದವನ್ನು ಹಾಕಿದರು. ಮಾ ಶಬ್ದವನ್ನು ಹಾಕಿದಾಗ ಎಲ್ಲ ಲಕಾರಗಳಿಗೆ ಅಪವಾದವಾಗಿ ಲುಙ್-ಲಕಾರವನ್ನೇ ಪ್ರಯೋಗಮಾಡಬೇಕೆಂದು ನಿಯಮವಿದೆ.

## ಕಂಬದಿಂದ ಪ್ರಕಟವಾದಂತೆ ಸತ್ಯವತೀದೇವಿಯಲ್ಲಿ ವೇದವ್ಯಾಸರ ಪ್ರಾದುರ್ಭಾವ

(ರಸರಂಜನೀ) – ತತಶ್ಚ ಭೂಮಿವಲಯೇ ಭೂಪ್ರದೇಶವಿಶೇಷೇ ಸ್ತಂಭಾದಾವಿವ ಭೂಮಿ-ವಲಯೇ ಯಮುನಾದ್ವೀಪೇ ಪರಾಶರಾತ್ ಸತ್ಯವತ್ಯಾಂ ಪ್ರಾದುರಭಾವೀತಿ । ಇದಮುದಿತಂ ಭವತಿ — ನೃಸಿಂಹಾದಿಪ್ರಾದುರ್ಭಾವಂ ಪ್ರತಿ ಸ್ತಂಭಾದೇರಿವ ವ್ಯಾಸವ್ಯಕ್ತಿಂ ಪ್ರತಿ ವಾಸವ್ಯಾ ಅಪ್ಯವಧಿತ್ವೇನ ನ ತು ತತೋ ಮಾತ್ರಯಾಽಪಿ ವಿಶೇಷಃ । ಪುರಾಣಾದಿವಚನಂ ತು ಅಯೋಗ್ಯ-ಜನವ್ಯಾಮೋಹನಾಯ ಕೃತವಿಡಂಬನಾನುವಾದಮಾತ್ರಪರಮಿತಿ ಯುಕ್ತಮುಕ್ತಮಿತಿ । ಯಥಾಹುಃ —

'ಯಥಾ ನೃಸಿಂಹಾಕೃತಿರಾವಿರಾಸೀತ್ ಸ್ತಂಭಾತ್ ತಥಾ ನಿತ್ಯತನುಸ್ತತೋ ವಿಭುಃ ।
ಆವಿರ್ಭವೇತ್ ಯೋಷಿತಿ ನೋ ಮಲೋತ್ಥಃ ತಥಾಪಿ ಮೋಹಾಯ ನಿದರ್ಶಯೇತ್ ತಥಾ'
(ಮ.ಭಾ.ತಾ.ನಿ.10/49)

ಇತಿ । ತರ್ಹಿ ಸ್ಥಾನಾನಂತರಂ ವಿಹಾಯ ತಸ್ಯಾಂ ಕುತಃ ಪ್ರಾದುರ್ಭಾವ ಇತ್ಯತ ಉಕ್ತಂ – **ಕರುಣಯಾ ಇತಿ** ॥ ತದೀಯತಪಸ್ತುಷ್ಟೇನ ಹರಿಣಾ ತಸ್ಮೈ ತವ ಪುತ್ರೋ ಭವಿತಾಹಮಿತಿ ವರೋ ದತ್ತಃ, ಅತಃ ಸ್ವಪ್ರತಿಜ್ಞಾಪರಿಪಾಲನಾಯ ತಸ್ಮಿನ್ ಕರುಣಯೈವ ತದೀಯಕ್ಷೇತ್ರೇ ಪ್ರಾದುರ್ಭೂತೋ ನ ತ್ವನ್ಯತ್ರೋತ್ಪತ್ತುಮಶಕ್ಯೇತಿ । ಯಮಾಹುಃ –

'ವಸಿಷ್ಠನಾಮಾ ಕಮಲೋದ್ಭವಾತ್ಮಜಃ ಸುತೋಽಸ್ಯ ಶಕ್ತಿಃ ತನಯಃ ಪರಾಶರಃ ।
ತಸ್ಯೋತ್ತಮಂ ಸೋಽಪಿ ತಪೋಽಚರದ್ಧರಿಃ ಸುತೋ ಮಮ ಸ್ಯಾದಿತಿ ತದ್ಧರಿರ್ದದೌ ॥
ಉವಾಚ ಚೈನಂ ಭಗವಾನ್ ಸುತೋಷಿತೋ ವಸೋರ್ಮದೀಯಸ್ಯ ಸುತಾಸ್ತಿ ಶೋಭನಾ ।
..........
ನಾಮ್ನಾ ತು ಸಾ ಸತ್ಯವತೀತಿ ತಸ್ಯಾಂ ತವಾತ್ಮಜೋಽಹಂ ಭವಿತಾಸ್ಮ್ಯಜೋಽಪಿ' ಇತಿ ।
— ಮ.ಭಾ.ತಾ.ನಿ.(10/42-46)

ಯೇನ ಭೂಮಿವಲಯೇ ಪ್ರಾದುರಭಾವಿ - ವೇದವ್ಯಾಸರು ಭೂಮಿಯಲ್ಲಿ ಅವತರಿಸಿದರು. ಅರ್ಥಾತ್ ಪ್ರಾದುರ್ಭೂತರಾದರು ಹೊರತು ಹುಟ್ಟಿದರು ಎನ್ನಲಾಗುವುದಿಲ್ಲ. ಆದ್ದರಿಂದಲೇ ಹುಟ್ಟಿಲ್ಲದ ನಾರಾಯಣನೊಂದಿಗೆ ಐಕ್ಯವನ್ನು ವೇದವ್ಯಾಸರಿಗೆ ಹೇಳಬೇಕು. ಇದನ್ನು ಹೀಗೆ ವಿವರಿಸಿದ್ದಾರೆ. ಹೇಗೆ ನರಸಿಂಹದೇವರು ಸ್ತಂಭದಿಂದ ಪ್ರಾದುರ್ಭೂತರಾದರು ಅರ್ಥಾತ್ ಹುಟ್ಟಿದ್ದಾರೆ ಎಂದೆನ್ನುವುದಿಲ್ಲವೋ ಹಾಗೆಯೇ ಯಮುನಾದ್ವೀಪದಲ್ಲಿ ಪರಾಶರರಿಂದ ಸತ್ಯವತಿ-ಯಲ್ಲಿ ಪ್ರಾದುರ್ಭೂತರಾದರು. ಇಲ್ಲಿ ಗಮನಿಸಬೇಕಾದ ಅಂಶ ಇದು. ಭಗವಂತ ಒಂದೊಂದು

ರೂಪದಿಂದ ಬರುವುದಕ್ಕೆ ಒಂದೊಂದು ಸ್ಥಳಗಳನ್ನು ಆರಿಸುವನು. ಅವುಗಳಲ್ಲಿ ಸತ್ಯವತಿದೇವಿ-ಯನ್ನು ಸ್ತಂಭದಂತೆ ಹೊರಬರಲು ಅವಧಿಯನ್ನಾಗಿ ಆಶ್ರಯಿಸಿದನಷ್ಟೆ. ಮುಂಚೆ ಅವರ ತಪಸ್ಸಿನ ಪ್ರಭಾವದಿಂದ ಅವರಿಗೆ ವರವನ್ನು ಕೊಟ್ಟನು. ಆ ವರದ ಪಾಲನೆಗಾಗಿ ಅವಳಲ್ಲಿ ಪ್ರಾದು-ರ್ಭವಿಸಿದನು. ಹಾಗಾದರೆ ಪುರಾಣದಲ್ಲಿ ವೇದವ್ಯಾಸರು ಸತ್ಯವತಿಯಿಂದ ಜನಿಸಿದರು ಅಥವಾ ಹುಟ್ಟಿದರು ಎನ್ನುವ ಮಾತು ಹೇಗೆ ಸರಿ ಎಂದರೆ ಅಯೋಗ್ಯಜನರಿಗೆ ಭ್ರಾಂತಿಬರಲು ಭಗವಂತ ಮಾಡಿದ ವಿಡಂಬನೆಯನ್ನು ಅನುವಾದ ಮಾಡಿದ್ದು ಎಂದು ಅರ್ಥೈಸಬೇಕು.

## ನರಸಿಂಹಾಕೃತಿಯ ಪ್ರಾದುರ್ಭಾವದಂತೆ ವೇದವ್ಯಾಸರ ಪ್ರಾದುರ್ಭಾವ

ತಾತ್ಪರ್ಯನಿರ್ಣಯದಲ್ಲಿ ಬಂದ ಒಂದು ಮಾತು -

'ಯಥಾ ನೃಸಿಂಹಾಕೃತಿರಾವಿರಾಸೀತ್ ಸ್ತಂಭಾತ್ ತಥಾ ನಿತ್ಯತನುಸ್ತ್ವತೋ ವಿಭುಃ ।
ಆವಿರ್ಭವೇತ್ ಯೋಷಿತಿ ನೋ ಮಲೋತ್ಥಃ ತಥಾಪಿ ಮೋಹಾಯ ನಿದರ್ಶಯೇತ್ ತಥಾ' (10/49)

ಎಂಬುದಾಗಿ.

ಸಮರ್ಥನಾದ ಭಗವಂತನು ನರಸಿಂಹರೂಪದಿಂದ ಕಂಬದಲ್ಲಿ ಪ್ರಕಟಗೊಂಡ. ಅದರಂತೆ ಸ್ತ್ರೀಯಲ್ಲಿ ವ್ಯಾಸರೂಪದಿಂದ ಪ್ರಕಟಗೊಂಡನಷ್ಟೆ ಹೊರತು ಶುಕ್ರಶೋಣಿತಾದಿಮಲದಿಂದ ಹುಟ್ಟಿದವನಲ್ಲ. ಏಕೆಂದರೆ ಅವನ ದೇಹ ನಿತ್ಯವಾದುದು. ಆದರೂ ಹುಟ್ಟಿದಂತೆ ಕಾಣಿಸಿ-ಕೊಳ್ಳುತ್ತಾನೆ. ಇದಾದರೂ ಅಯೋಗ್ಯಜನರನ್ನು ಮೋಹಗೊಳಿಸುವುದಕ್ಕಾಗಿ ಎಂದು ತಿಳಿಯಬೇಕು.

## ಪರಾಶರರಿಗೆ ಶ್ರೀಹರಿಯ ವರಪ್ರದಾನ

'ವಸಿಷ್ಠನಾಮಾ ಕಮಲೋದ್ಭವಾತ್ಮಜಃ ಸುತೋಽಸ್ಯ ಶಕ್ತಿಃ ತನಯಃ ಪರಾಶರಃ ।
ತಸ್ಯೋತ್ತಮಂ ಸೋಽಪಿ ತಪೋಽಚರದ್ಧರಿಃ ಸುತೋ ಮಮ ಸ್ಯಾದಿತಿ ತದ್ಧರಿರ್ದದೌ ॥
ಉವಾಚ ಚೈನಂ ಭಗವಾನ್ ಸುತೋಽಷಿತೋ ವಸೋರ್ಮದೀಯಸ್ಯ ಸುತಾಸ್ತಿ ಶೋಭನಾ ।
ನಾಮ್ನಾ ತು ಸಾ ಸತ್ಯವತೀತಿ ತಸ್ಯಾಂ ತವಾತ್ಮಜೋಽಹಂ ಭವಿತಾಸ್ಯಜೋಽಪಿ ॥'

"ಕಮಲಸಂಭವನಾದ ಬ್ರಹ್ಮನ ಪುತ್ರನಿಗೆ ವಸಿಷ್ಠನೆಂದು ಹೆಸರು. ಅವನ ಮಗ ಶಕ್ತಿ. ಶಕ್ತಿಯ ಮಗ ಪರಾಶರ. ಪರಾಶರನು ಶ್ರೀಹರಿಯು ತನಗೆ ಮಗನಾಗಿ ಅವತರಿಸಬೇಕೆಂದು ಉತ್ತಮವಾದ ತಪಸ್ಸು ಮಾಡಿದ. ಹರಿ ಅವನಿಗೆ ವರವನ್ನಿತ್ತು ನುಡಿದ - 'ನನ್ನ ಭಕ್ತನಾದ ವಸುಚಕ್ರವರ್ತಿಗೆ ಪುಣ್ಯವತಿ-ಯಾದ ಮಗಳಿದ್ದಾಳೆ. ಅವಳ ಹೆಸರು ಸತ್ಯವತಿ ಎಂದು. ನಾನು ಜನನರಹಿತನಾಗಿದ್ದರೂ ಅವಳಲ್ಲಿ ನಿನ್ನ ಮಗನಾಗಿ ಹುಟ್ಟುತ್ತೇನೆ' ಎಂದು. (ಮ.ಭಾ.ತಾ.ನಿ. 10-42,46)

## ಪ್ರಭವ ಎಂದರೆ ಉತ್ಪತ್ತಿಯೋ ಅಭಿವ್ಯಕ್ತಿಯೋ ಉಭಯವೋ?

(ರಸರಂಜನೀ) – ತತ್ರ ಪ್ರಭವಶಬ್ದ ಉತ್ಪತ್ತ್ಯರ್ಥೋಽಭಿವ್ಯಕ್ತ್ಯರ್ಥ ಉಭಯಾರ್ಥೋ ವಾ । ನಾದ್ಯಃ । ವೇದೇಽಸಿದ್ಧೇಃ । ನ ದ್ವಿತೀಯಃ । ನಿರ್ಣಾಯಕೇ ನಿರ್ಣೇಯೇ ಪೌರುಷೇಯೇ ಚಾಸಿದ್ಧೇಃ । ನಾಪಿ ತೃತೀಯಃ । ಸಕೃದುಕ್ತಸ್ಯ ಶಬ್ದಸ್ಯ ವಿರುದ್ಧಾನೇಕಾರ್ಥತ್ವಸ್ಯ ಕ್ವಾಪ್ಯದರ್ಶನಾತ್ ।

"ತಮೇವ ಶಾಸ್ತ್ರಪ್ರಭವಂ" ಎಂಬ ಅನುವ್ಯಾಖ್ಯಾನಪದ್ಯದ ಶಂಕೆಗಳನ್ನು ನಿವಾರಿಸುವಂತೆ ಈ ಪದ್ಯವಿದೆ. ಅಲ್ಲಿ ಬರುವ ಒಂದು ಶಬ್ದ ಪ್ರಭವ ಎಂಬುವುದು. ಶಾಸ್ತ್ರ ಎಂಬ ಪದದಿಂದ ವೇದ ಹಾಗೂ ಅದಕ್ಕಿಂತ ಬೇರೆಯಾದ ಪುರಾಣಾದಿಗಳನ್ನು ಗ್ರಹಿಸಿದಾಗ ಪ್ರಭವ ಶಬ್ದಕ್ಕೆ ಯಾವ ಅರ್ಥವನ್ನು ಸ್ವೀಕರಿಸುತ್ತೀರಿ? ಎಂಬ ಪ್ರಶ್ನೆ ಬರುತ್ತದೆ.

ಪ್ರಭವ ಎಂದರೆ ಉತ್ಪತ್ತಿಯೋ, ಅಭಿವ್ಯಕ್ತಿಯೋ, ಅಥವಾ ಎರಡೂ ಅರ್ಥವೋ?

ಉತ್ಪತ್ತಿ ಎಂದಾದರೆ ವೇದ ಅಪೌರುಷೇಯವಾದ್ದರಿಂದ ಅವುಗಳಿಗೆ ಉತ್ಪತ್ತಿ ವೇದವ್ಯಾಸರಿಂದ ಎಂದು ಹೇಳಲು ಅಸಾಧ್ಯ. ಹಾಗಾಗಿ ಶಾಸ್ತ್ರಪ್ರಭವರು ವೇದವ್ಯಾಸರಾಗುವುದಿಲ್ಲ.

ಇನ್ನು ಅಭಿವ್ಯಕ್ತಿ ಎಂಬರ್ಥ ಸ್ವೀಕರಿಸಿದರೆ ನಿರ್ಣಾಯಕವಾದ ಬ್ರಹ್ಮಸೂತ್ರ ಹಾಗೂ ನಿರ್ಣೇಯ-ವಾದ ಇತರ ಪೌರುಷೇಯಆಗಮಗಳಿಗೆ ಉತ್ಪತ್ತಿಯು ವೇದವ್ಯಾಸರಿಂದ ಆಗಿದೆ ಎಂಬರ್ಥ ಸಿಗಲಾರದು. ಹಾಗಾಗಿ ಉತ್ಪತ್ತಿ ಹಾಗೂ ಅಭಿವ್ಯಕ್ತಿ ಎಂಬ ಎರಡೂ ಅರ್ಥಗಳನ್ನು ಪ್ರಭವಶಬ್ದಕ್ಕೆ ಒಪ್ಪಬೇಕು. ಆದರೆ 'ಸಕೃದುಕ್ತಸ್ಯ ಶಬ್ದಸ್ಯ ವಿರುದ್ಧ ಅನೇಕಾರ್ಥತ್ವಸ್ಯ ಕ್ವಾಪ್ಯದರ್ಶನಾತ್' ಎನ್ನುವಂತೆ ಒಂದು ಬಾರಿ ಕೇಳಿದ ಪ್ರಭವಶಬ್ದಕ್ಕೆ ವಿರುದ್ಧವಾದ ಉತ್ಪತ್ತಿ ಹಾಗೂ ಅಭಿವ್ಯಕ್ತಿ ಎಂಬ ಎರಡು ಅರ್ಥಗಳನ್ನು ಸ್ವೀಕರಿಸುವಂತೆ ಇಲ್ಲ. ಹಾಗಾಗಿ ಯಾವ ಪಕ್ಷವನ್ನೂ ಒಪ್ಪಲು ಬರುವುದಿಲ್ಲ. ಹಾಗಾಗಿ ಶಾಸ್ತ್ರಪ್ರಭವ ವೇದವ್ಯಾಸರು ಹೇಗೆ? ಅದಕ್ಕೆ ಉತ್ತರವಿದು –

## ಉಭಯಾರ್ಥಕವಾದ ಪ್ರಭವಶಬ್ದ

(ರಸರಂಜನೀ) – ಅಯಮತ್ರ ಉತ್ತರಕ್ರಮಃ । — ಯತ್ ತಾವತ್ಪೃಷ್ಟಂ ತತ್ರೋಭಯಾರ್ಥ ಇತಿ ಬ್ರೂಮಃ । ನ ಚಾದರ್ಶನಮ್ । 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದೌ ಸಕೃಚ್ಛ್ರುತಸ್ಯಾಪಿ ಸಂಭೂತಪದಸ್ಯಾಕಾಶಶಬ್ದೋಪಾತ್ತೇಷು ಹರಿತದಭಿಮಾನಿತದ್ದೇಹಭೂತೇಷು ಯಥಾಯೋಗಂ ಪ್ರಾದುರ್ಭಾವಾಭಿಮಾನಪರಿಣಾಮರೂಪಸಂಭವಸಮರ್ಪಕತ್ವಸ್ಯ ದರ್ಶನಾತ್ ।

ಮೂರನೆಯ ಪಕ್ಷವನ್ನು ಅರ್ಥಾತ್ ಎರಡೂ ಅರ್ಥಗಳನ್ನು ಪ್ರಭವ ಎಂಬ ಶಬ್ದಕ್ಕೆ ಸ್ವೀಕರಿಸುತ್ತೇವೆ. ಒಂದು ಬಾರಿ ಕೇಳಿದ ಶಬ್ದಕ್ಕೂ ಅನೇಕಾರ್ಥಗಳನ್ನು ಸ್ವೀಕರಿಸುವುದು ಕಂಡಿದೆ. ಉದಾ – 'ಆತ್ಮನ

ಆಕಾಶಃ ಸಂಭೂತಃ' ಎನ್ನುವ ವಾಕ್ಯದಲ್ಲಿ ಸಂಭೂತ ಎಂಬ ಪದಕ್ಕೆ ಅನೇಕವಿರುದ್ಧವಾದ ಅರ್ಥಗಳನ್ನು ಸ್ವೀಕರಿಸಿದ್ದಿದೆ. ಆಕಾಶಶಬ್ದಕ್ಕೆ ಒಟ್ಟು ಮೂರು ಅರ್ಥ - ಹರಿ, ಆಕಾಶಾಭಿಮಾನಿದೇವತೆ ಹಾಗೂ ಅವನ ದೇಹ. ಈ ಮೂರಕ್ಕೆ ಕ್ರಮವಾಗಿ ಸಂಭೂತಿಯು ಅಂದರೆ ಹರಿಗೆ ಪ್ರಾದುರ್ಭಾವವಾಯಿತು, ಅಭಿಮಾನಿ ದೇವತೆಗೆ ಅಭಿಮಾನದ ಉತ್ಪತ್ತಿಯಾಯಿತು, ದೇಹವು ಪರಿಣಾಮವನ್ನು ಪಡೆಯಿತು - ಎಂದು.

## ಶಾಸ್ತ್ರನಿರ್ಮಾಣದಿಂದ ವೇದವ್ಯಾಸರಿಗೆ ಪ್ರಯೋಜನವಿದೆಯೇ?

(ರಸರಂಜನೀ) – ನಾರಾಯಣಾವತಾರತ್ವೇನ ಕೃತಕೃತ್ಯಸ್ಯ ವ್ಯಾಸಸ್ಯ ಪ್ರಯೋಜನಾಭಾವೇನ ಶಾಸ್ತ್ರನಿರ್ಮಾಣಾಸಂಭವಾಚ್ಚ ಇತ್ಯತ ಆಹ – **ಕರುಣಯಾ ಶ್ರುತಿಪಂಕಜಂ ಪ್ರಾಬೋಧಿ ಗೋಸಂತತಿರ್ವ್ಯಸ್ತಾರೀತಿ ॥ ಪೂರ್ವಾಪರೀಭಾವವಿವಕ್ಷಯಾ ತಥೋಕ್ತಿಃ** । ಶ್ರುತಿಪಂಕಜಪ್ರಬೋಧಾದೇಃ ಪ್ರಾಥಮ್ಯಾದಿಕಂ ಚ ಪ್ರಥಮಭಾಗವತಾದೌ ಪ್ರಸಿದ್ಧಮ್ । ಅತ್ರ ಶ್ರುತಿಶಬ್ದಸಮಭಿವ್ಯಾಹಾರಾದ್ ವಾಕ್ಯಸಾಮಾನ್ಯಾರ್ಥಕಸ್ಯ ಗೋಶಬ್ದಸ್ಯ ಗೋಬಲೀವರ್ದನ್ಯಾಯೇನ ಶ್ರುತ್ಯತಿರಿಕ್ತಪೌರುಷೇಯವಾಕ್ಯಪರತ್ವಮ್ । ತತ ಏವ 'ವ್ಯಸ್ತಾರಿ' ಇತ್ಯಸ್ಯ ಉತ್ಪತ್ತ್ಯರ್ಥತ್ವಂ ಚ ಸಿದ್ಧ್ಯತಿ । 'ಪ್ರಾಬೋಧಿ' ಇತ್ಯಸ್ಯಾಭಿವ್ಯಕ್ತ್ಯರ್ಥಂ ತು ಸ್ಫುಟಮೇವ । 'ಕರುಣಯಾ' ಇತ್ಯೇತತ್ಸಾವಧಾರಣಮ್ ।

ವೇದವ್ಯಾಸರು ನಾರಾಯಣನ ಅವತಾರ. ಆದ್ದರಿಂದ ವೇದವ್ಯಾಸರು ಕೃತಕೃತ್ಯರು. ಪಡೆಯಬೇಕಾದದ್ದೆಲ್ಲವನ್ನೂ ಪಡೆದವರು ಎಂದರ್ಥ. ಆದ್ದರಿಂದ ಪ್ರಯೋಜನವೇ ಇಲ್ಲವಾದಾಗ ಶಾಸ್ತ್ರನಿರ್ಮಾಣಮಾಡಲು ಸಾಧ್ಯವಿಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ – 'ಕರುಣಯಾ ಶ್ರುತಿಪಂಕಜಂ ಪ್ರಾಬೋಧಿ, ಕರುಣಯಾ ಗೋಸಂತತಿಂ ವ್ಯಸ್ತಾರಿ' ಎಂದಿದ್ದಾರೆ. ಮೊದಲು ವೇದೋದ್ಧಾರ ನಂತರ ಇತಿಹಾಸಪುರಾಣಾದಿಗಳ ರಚನೆ ಎಂಬ ಪೂರ್ವಾಪರೀಭಾವವನ್ನು ಇಟ್ಟುಕೊಂಡು ಶ್ಲೋಕದಲ್ಲಿ ವ್ಯಸ್ತಾರಿಗೋಸಂತತಿಃ ಎಂದು ಮೊದಲು ಹೇಳಿದರೂ ಈ ವ್ಯಾಖ್ಯಾನದಲ್ಲಿ ಕರುಣಯಾ ಶ್ರುತಿಪಂಕಜಂ ಪ್ರಾಬೋಧಿ ಎಂದು ಮೊದಲು ಹೇಳಿ ನಂತರ ಗೋಸಂತತಿಃ ವ್ಯಸ್ತಾರಿ ಎಂದಿದ್ದಾರೆ. ಮೊದಲಿಗೆ ವೇದೋದ್ಧಾರವನ್ನೇ ವೇದವ್ಯಾಸರು ಮಾಡಿದ್ದು ಎಂಬ ವಿಷಯವು ಪ್ರಥಮಸ್ಕಂಧ ಭಾಗವತ ಮೊದಲಾದ ಕಡೆ ಪ್ರಸಿದ್ಧ. ಗೋ ಎಂಬ ಪದ ಯದ್ಯಪಿ ವಾಕ್ಯ ಎಂಬರ್ಥವನ್ನು ಹೇಳುತ್ತಿದೆ. ಆದ್ದರಿಂದಲೇ ಗೋ ಎಂದರೆ ವೇದವೂ ಕೂಡ ಅರ್ಥವಾಗಿ ಲಭ್ಯ. ಆದರೂ ಶ್ರುತಿಪಂಕಜಂ ಎಂದು ಶ್ರುತಿಶಬ್ದವನ್ನು ಪ್ರತ್ಯೇಕವಾಗಿ ಹೇಳಿದ್ದರಿಂದ ಅದರ ಜೊತೆಗೆ ಉಚ್ಚರಿತವಾದ ಗೋ ಎಂಬ ಪದದಿಂದ ಗೋಬಲೀವರ್ದನ್ಯಾಯೇನ ಶ್ರುತ್ಯತಿರಿಕ್ತವಾದ ಪೌರುಷೇಯವಾಕ್ಯವನ್ನು ಗ್ರಹಣಮಾಡಬೇಕು. ಪೌರುಷೇಯವಾಕ್ಯಗಳಿಗೆ ಉತ್ಪತ್ತಿ ಇರುವುದರಿಂದಲೇ ವ್ಯಸ್ತಾರಿ ಎಂಬ ಪದಕ್ಕೆ ಉತ್ಪತ್ತಿ ಎಂಬರ್ಥವು ಸಿದ್ಧ. ಪೌರುಷೇಯವಾಕ್ಯಗಳಿಗೆ ಉತ್ಪತ್ತಿ ಎಂಬುವುದಕ್ಕೆ

ಕರ್ತೃವಿದ್ವಾನೆ ಎಂದು ತಾತ್ಪರ್ಯ. ಪ್ರಾಬೋಧಿ ಎನ್ನುವುದಕ್ಕಾದರೋ ಅಭಿವ್ಯಕ್ತಿ ಎಂಬರ್ಥವು ಸ್ಫುಟ. ಕರುಣಯಾ ಎಂಬುದನ್ನು ಸಾವಧಾರಣವಾಗಿ 'ಕರುಣಯಾ ಏವ' ಎಂದು ವ್ಯಾಖ್ಯಾನಿಸಬೇಕು.

## ಪ್ರಥಮಸ್ಕಂಧಭಾಗವತದಲ್ಲಿ — ವೇದವ್ಯಾಸರು ಮೊದಲಿಗೆ ಮಾಡಿದ್ದು ವೇದೋದ್ಧಾರ

* — ಪ್ರಥಮಸ್ಕಂಧಭಾಗವತ ಅಧ್ಯಾಯ 4ರಲ್ಲಿ ಬರುವ ಶ್ಲೋಕಗಳಿವು —

ಸೂತ ಉವಾಚ —

ವ್ಯದಧಾದ್ಯಜ್ಞಸಂತತ್ಯೈ ವೇದಮೇಕಂ ಚತುರ್ವಿಧಂ ॥ 19॥

ಋಗ್ಯಜುಃಸಾಮಾಥರ್ವಾಖ್ಯಾ ವೇದಾಶ್ಚತ್ವಾರ ಉದ್ಧೃತಾಃ ।

ಇತಿಹಾಸಪುರಾಣಂ ಚ ಪಂಚಮೋ ವೇದ ಉಚ್ಯತೇ ॥ 20 ॥

ವೇದವ್ಯಾಸರು ಒಂದು ದಿನ ಸರಸ್ವತೀನದಿಯಲ್ಲಿ ಸ್ನಾನಮಾಡಿದ ಮೇಲೆ ಸೂರ್ಯೋದಯ ಕಾಲದಲ್ಲಿದ್ದಾಗ ಆಲೋಚನೆ ಮಾಡಿದರು. ಕಲಿಕಾಲದ ಮಹಿಮೆಯಿಂದ ಎಲ್ಲ ಕಡೆಯೂ ಕಷ್ಟವೇ ಆಗಿದೆ. ಹಾಗಾಗಿ ಪ್ರಜೆಗಳಿಗೆ ಅನುಕೂಲವಾಗಲು ಮೊದಲಿಗೆ ಯಜ್ಞಸಂಪ್ರದಾಯವನ್ನು ಉಳಿಸಬೇಕೆಂದು ವೇದವಿಭಾಗ ಮಾಡಿದರು. ಅನಂತರ ಮೊದಲೇ ಅಪಾರವಾದ ವೇದಸಮೂಹವು ನಾಲ್ಕು ಬಗೆಯಾಗಿತ್ತು. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬುದಾಗಿ. ಆ ನಾಲ್ಕರಲ್ಲೂ ಕೆಲವು ಮಂತ್ರಗಳನ್ನು ಸ್ವೀಕರಿಸಿ ನಾಲ್ಕು ವೇದವನ್ನು ಮತ್ತೆ ಉದ್ಧಾರ ಮಾಡಿದರು. ಇವನ್ನು ಉಪವೇದ ಎನ್ನುವರು. ಇವುಗಳ ಅರ್ಥಜ್ಞಾನಕ್ಕೆ ಮಹಾಭಾರತ ಪುರಾಣಾದಿಗಳ ರಚನೆ ಇವುಗಳನ್ನು ಐದನೇ ವೇದ ಎಂದು ಕರೆಯುವುದಿದೆ.

## ಗೋಬಲೀವರ್ದನ್ಯಾಯ

* — गाम् आनय बलीवर्दमपि आनय इति उक्ते कोऽपि बलीवर्दम् आनयति एतत् कार्यं गामानय इत्यनेन वाक्येनैव भवति बलीवर्दमानय इत्यस्य वाक्यस्य आवश्यकता नास्ति। यतः गोशव्दस्य गौः बलीवर्द इति अर्थद्वयम् अस्ति ।

अक्षा भद्रो बलीवर्द ऋषभो वृषभो वृषः । अनड्वान् सौरभेयो गौः ॥(अमरकोशः)

गोपदस्य स्त्रीवाचकत्वमेव प्रसिद्धं न तु बलीवर्दवाचकत्वम् । तथापि गोबलीवर्द इति समासप्रयोगः बलीवर्दस्य विशिष्टबोधार्थम् इति ज्येष्ठाः । यथा– बलीवर्दस्य गोविशेषत्वेऽपि बलीवर्दस्य झटिति गोत्वेन बोधनार्थं यथा प्रयोगः, तथा अन्ययोः सामान्यविशेषरूपयोः झटिति बोधनार्थं प्रयोगः, तत्र अस्य प्रवृत्तिः । (भामती पृष्ठम् ५१८,५३७)

तुल्यन्यायः - ब्राह्मणवसिष्ठन्यायः

यत्र विशेषणकृतं प्राशस्त्यम् अभिप्रेतं तत्र ब्राह्मणवसिष्ठन्यायस्य प्रयोगो भवति। यत्र भेदः अभिप्रेतो भवति तत्र गोबलीवर्दन्यायस्य प्रयोगो भवति। लिङ्गभेदेन प्रसिद्धिः अप्रसिद्धिर्वा सूचिता भवति। बलीवर्दस्य अप्रसिद्धिकारणेन तस्य पृथक् उल्लेखः कृतः।

– (याज्ञवल्क्यस्मृतिः -मिताक्षरा ३-३१२-

* – 'ಗಾಮಾನಯ ಬಲೀವರ್ದಮಪಿ ಆನಯ' ಗೋವನ್ನು ಕರೆದುಕೊಂಡು ಬಾ, ಬಲೀವರ್ದವನ್ನೂ ಕರೆದುಕೊಂಡು ಬಾ - ಎಂದು ಹೇಳಿದಾಗ ಯಾವನೋ ಒಬ್ಬ ಬಲೀವರ್ದವನ್ನು ಕರೆದುಕೊಂಡು ಬರುತ್ತಾನೆ. ಆದರೆ ಇದಕ್ಕಾಗಿ 'ಗಾಮಾನಯ' ಎನ್ನುವ ವಾಕ್ಯವೇ ಸಾಕು. ಬಲೀವರ್ದಮಾನಯ ಎಂಬ ವಾಕ್ಯದ ಆವಶ್ಯಕತೆ ಇಲ್ಲ. ಏಕೆಂದರೆ ಗೋಶಬ್ದಕ್ಕೆ ಹಸು ಬಲೀವರ್ದ (ಎತ್ತು) ಎಂಬೆರಡರ್ಥಗಳೂ ಇವೆ. ಈ ವಿಷಯದಲ್ಲಿ ಅಮರಕೋಶವು ಪ್ರಮಾಣವಾಗಿದೆ. ಜ್ಯೇಷ್ಠರು ಹೀಗೆ ಹೇಳುತ್ತಾರೆ – ಗೋಪದವು ಸ್ತ್ರೀಯಾದ ವ್ಯಕ್ತಿಯನ್ನು ಹೇಳುವುದೆಂದೇ ಪ್ರಸಿದ್ಧ. ಅದು ಬಲೀವರ್ದ-ವನ್ನು ಹೇಳುವುದಿಲ್ಲ. ಹಾಗಾಗಿ ಗೋಬಲೀವರ್ದ ಎಂಬ ಪ್ರಯೋಗವು ಬಲೀವರ್ದದ ವಿಶೇಷ-ವಾದ ಜ್ಞಾನಕ್ಕಾಗಿ ಎಂದು. ಹೇಗೆ ಬಲೀವರ್ದವು ಗೋವಿನ ಒಂದು ಪ್ರಭೇದವಾಗಿದ್ದರೂ ಬಲೀವರ್ದದ ಗೋತ್ವೇನ ಬೋಧವು ಶೀಘ್ರವಾಗಿ ಬರಲು ಹೇಗೆ ಪ್ರಯೋಗ ಮಾಡುತ್ತೇವೆಯೋ ಹಾಗೆ ಸಾಮಾನ್ಯವಿಶೇಷಭಾವವು ಝಟಿತಿ ತಿಳಿಯಲಿ ಎಂದು ಪ್ರಯೋಗವನ್ನು ಹೀಗೆ ಮಾಡುತ್ತಾರೆ. ಇದರಂತೆ ಬ್ರಾಹ್ಮಣವಸಿಷ್ಠನ್ಯಾಯವು. ಒಟ್ಟಿನಲ್ಲಿ ಎಲ್ಲಿ ವಿಶೇಷಣಕೃತಪ್ರಾಶಸ್ತ್ಯವಿದೆಯೋ ಅಲ್ಲಿ ಬ್ರಾಹ್ಮಣವಸಿಷ್ಠನ್ಯಾಯ. ಎಲ್ಲ ಭೇದವು ಅಭಿಪ್ರೇತವೋ ಅಲ್ಲಿ ಗೋಬಲೀವರ್ದನ್ಯಾಯಪ್ರಯೋಗ.

## ವ್ಯಾಸದಿವಾಕರೇಣ ಎಂಬಲ್ಲಿ ಯಾವ ಸಮಾಸ?

(ಏರೀಬಾಳಾಚಾರ್ಯರು) – ನನು 'ವ್ಯಾಸದಿವಾಕರೇಣ' ಇತ್ಯತ್ರ ಕಃ ಸಮಾಸಃ? ನ ತಾವದ್ 'ವ್ಯಾಸಶ್ಚಾಸೌ ದಿವಾಕರಶ್ಚೇ'ತಿ ಕರ್ಮಧಾರಯಃ । ವಿಶೇಷಣವಿಶೇಷ್ಯಾಭಾವಾಭಾವಾತ್ ನಾಪಿ 'ವ್ಯಾಸೋ ದಿವಾಕರಃ ಇವ' ಇತ್ಯುಪಮಿತಸಮಾಸಃ । ಸಾಮಾನ್ಯಪ್ರಯೋಗಸತ್ತ್ವೇನ ಉಪಮಿತಂ ವ್ಯಾಘ್ರಾದಿಭಿಃ ಸಾಮಾನ್ಯಾಪ್ರಯೋಗ ಇತ್ಯಸ್ಯಾಪ್ರಸಕ್ತೇಃ । ಅತ ಏವ 'ಭಾಷ್ಯಾಬ್ಧಿಃ ಕ್ವಾತಿಗಂಭೀರ' ಇತಿ ಕೈಯಟಪ್ರಯೋಗಂ ಪ್ರಾಮಾದಿಕಂ ಮನ್ಯಂತೇ । ಅನ್ಯೇ ತ್ವಿಹ ಗಾಂಭೀರ್ಯೇಣ ಸಾಮ್ಯಂ ನ ವಿವಕ್ಷಿತಮ್ । ಕಿಂತು ವಿತನದುರವಗಾಹತ್ವಾದಿನಾ ಇತೀಹ ತದಪ್ರಯೋಗೋಽಸ್ತ್ಯೇವೇತಿ ಭಟ್ಟೋಜಿಪ್ರಭೃತಯಃ ಸಮಾದಧತ ಇತಿ ಚೇನ್ನ ।

ವ್ಯಾಸದಿವಾಕರೇಣ - ಈ ಪದದಲ್ಲಿ ಯಾವ ಸಮಾಸ? ವ್ಯಾಸರೆಂಬ ಸೂರ್ಯನು ಎಂದು

ಕರ್ಮಧಾರಯಸಮಾಸವನ್ನು ಅರ್ಥಾತ್ ವ್ಯಾಸಶ್ಚಾಸೌ ದಿವಾಕರಶ್ಚ ಎಂದು ಮಾಡಲು ಬರುವುದಿಲ್ಲ. ಏಕೆಂದರೆ, ವಿಶೇಷಣ ಹಾಗೂ ವಿಶೇಷ್ಯಗಳಿಗೆ ಕರ್ಮಧಾರಯಸಮಾಸ. ಕೃಷ್ಣಸರ್ಪಃ ಎಂಬಂತೆ. ಕಪ್ಪಾದ ಹಾವು ಎಂಬ ಅರ್ಥವುಳ್ಳ ಕೃಷ್ಣಶ್ಚಾಸೌ ಸರ್ಪಶ್ಚ ಎಂದು. ಇಲ್ಲಿ ಕಪ್ಪುಬಣ್ಣ ವಿಶೇಷಣ ಸರ್ಪವು ವಿಶೇಷ್ಯ. ಅದರಂತೆ ಇಲ್ಲಿ ವ್ಯಾಸ ಹಾಗೂ ದಿವಾಕರ ಇವೆರಡು ವಿಶೇಷ್ಯ-ವಿಶೇಷಣಗಳಾಗಿಲ್ಲ ಹೊರತು ಕೇವಲ ವಿಶೇಷ್ಯಗಳೇ ಆಗಿವೆ.

ಇನ್ನು 'ವ್ಯಾಸಃ ದಿವಾಕರ ಇವ' ಎಂದು ವೇದವ್ಯಾಸರು ದಿವಾಕರನಂತೆ ಎಂಬ ಅರ್ಥದಲ್ಲಿ ಉಪಮಿತಸಮಾಸವನ್ನು ಅಂದರೆ ಉಪಮಾನ ಅಂದರೆ ದೃಷ್ಟಾಂತವನ್ನು ಕೊಟ್ಟು ಮಾಡುವ ಸಮಾಸವೂ ಸಾಧ್ಯವಿಲ್ಲ. ಏಕೆಂದರೆ ಆ ಸಮಾಸವನ್ನು ಹೇಳುವ ಸೂತ್ರದಲ್ಲಿ 'ಉಪಮಿತಂ ವ್ಯಾಘ್ರಾದಿಭಿಃ ಸಾಮಾನ್ಯ-ಅಪ್ರಯೋಗೇ' ಎಂದು ಸಾಮಾನ್ಯಧರ್ಮವಾಚಕಶಬ್ದ (ಉಪಮಾನ ಉಪಮೇಯಗಳಲ್ಲಿರುವ ಸಾಧಾರಣಧರ್ಮವನ್ನು ಹೇಳುವ ಶಬ್ದ) ಪ್ರಯೋಗಮಾಡದೇ ಇರುವ ಕಡೆ ವ್ಯಾಘ್ರ ಮೊದಲಾದ ಶಬ್ದಗಳಿಗೆ ದೃಷ್ಟಾಂತಹೇಳುವ ಶಬ್ದದೊಂದಿಗೆ ಸಮಾಸವನ್ನು ಹೇಳಿದ್ದಾರೆ. ಇಲ್ಲಿಯಾದರೋ ಸಾಧಾರಣಧರ್ಮವಾಚಕಶಬ್ದಪ್ರಯೋಗವಿದೆ. ಆದ್ದರಿಂದ ಆ ಸಮಾಸವೂ ಅಲ್ಲ. ಆದ್ದರಿಂದಲೇ ಕೆಲವರು ಮಹಾಭಾಷ್ಯವ್ಯಾಖ್ಯಾನಮಾಡಿದ ಕೈಯ್ಯಟನ 'ಭಾಷ್ಯಾಬ್ಧಿಃ ಕ್ವಾತಿಗಂಭೀರಃ' ಎಂಬ ಪ್ರಯೋಗವನ್ನು ಪ್ರಾಮಾದಿಕ ಎನ್ನುತ್ತಾರೆ. ಭಟ್ಟೋಜಿದೀಕ್ಷಿತ ಮುಂತಾದವರೂ ಸಮರ್ಥನೆ ಮಾಡಿದ್ದೂ ಇದೆ.

भाष्याब्धिः क्वातिगम्भीरः क्वाहं मन्दमतिस्ततः ।
छात्राणामुपहास्यत्वं यास्यामि पिशुनात्मनाम् ॥ - (महाभाष्यप्रदीपः कैयटः)

औद्धत्यं परिहरति – भाष्येति ॥ मयूरव्यंसकादिसमासः रूपकं च इति बोध्यम् । पिशुनत्वं दुष्टत्वम् । रूपकमिति ॥ एतेन अतिगम्भीरत्वस्य साधारणधर्मस्य उपादानात् कथमुपमितसमासः इत्याशङ्क्य तेन तत्वं न विवक्षितम् । किन्तु अन्यथा इति दीक्षिताद्युक्तमपास्तम् । सूचकत्वस्य अफलत्वादाह – दुष्टत्वमिति ॥ – उपमितं व्याघ्रादिभिः सामान्याप्रयोगे (पा.सू. २-१-५६)

उपमेयं व्याघ्रादिभिः सह प्राग्वत्साधारणधर्मस्याप्रयोगे सति। विशेष्यस्य पूर्वनिपातार्थं सूत्रम् । पुरुषव्याघ्रः । नृसोमः । व्याघ्रादिराकृतिगणः । सामान्याप्रयेगे किम् । पुरुषो व्याघ्र इव शूरः ॥ (सिद्धान्तकौमुदी)

### ಈ ಸಮಾಸಗಳು ಆಶ್ರಯಣೀಯವಾಗಿವೆ

(ಏರೀಬಾಳಾಚಾರ್ಯರು) – 'ವ್ಯಾಸಾಖ್ಯಶ್ಚಾಸೌ ದಿವಾಕರಶ್ಚ' ಇತಿ ವಾ 'ವ್ಯಾಸ ಏವ ದಿವಾಕರಃ'

ಇತಿ ವಾ ಸಮಾಸಸಂಭವಾತ್ । ಶಾಕಪಾರ್ಥಿವಾದಿಷ್ವಸ್ಯೋಪಸಂಖ್ಯೇಯತ್ವಾತ್ । ತಥಾಚ — ಮಾಘಃ –

'ಅವಿರತರತಲೀಲಾಯಾಸಜಾತಶ್ರಮಾಣಾಂ
ಉಪಶಮಮುಪಯಾಂತಂ ನಿಃಸಹೇಽಂಗೇಽಂಗನಾನಾಂ ।
ಪುನರುಷಸಿ ವಿವಿಕ್ತೈರ್ಮಾತರಿಶ್ವಾವಚೂರ್ಣ್ಯ
ಜ್ವಲಯತಿ ಮದನಾಗ್ನಿಂ ಮಾಲತೀನಾಂ ರಜೋಭಿಃ ॥'

ಇತಿ । ವ್ಯಾಚಖ್ಯೌ ಚ ತತ್ರ ಮಲ್ಲಿನಾಥಃ – 'ಮದನ ಏವಾಗ್ನಿರ್ಮದನಾಗ್ನಿಃ' ಇತಿ । ಏತೇನ 'ಸೋಽಯಂ ವ್ಯಾಸಸುಧಾನಿಧಿರ್ಭವತು ಮೇ' ಇತ್ಯಾದಯೋ ವ್ಯಾಖ್ಯಾತಾಃ । ಯದ್ವಾ 'ಅಸ್ಮದೀಯಂ ಗುಣಾರ್ಣವಮ್' (1-1-145) ಇತ್ಯನುವ್ಯಾಖ್ಯಾನವ್ಯಾಖ್ಯಾನಸುಧಾಯಾಮ್ 'ಅರ್ಣವ ಇವಾಚರತಿ ಇತ್ಯರ್ಣವ' ಇತ್ಯುಕ್ತದಿಶಾ 'ದಿವಾಕರ ಇವಾಚರತಿ ಇತಿ ದಿವಾಕರಃ' ಇತಿ ವ್ಯಾಖ್ಯೇಯಮ್ । ವಿಶೇಷಣವಿಶೇಷ್ಯಭಾವಸ್ಯ ಕಾಮಚಾರಿತ್ವಾದ್ ವಿಶೇಷಣಸ್ಯ ಪರ-ನಿಪಾತಃ ।

ಪ್ರಕೃತದಲ್ಲಿ ಹೇಗೆ ಎಂದರೆ - ವ್ಯಾಸಾಖ್ಯಶ್ಚಾಸೌ ದಿವಾಕರಶ್ಚ ಎಂದು ಅಥವಾ ವ್ಯಾಸ ಏವ ದಿವಾಕರಃ ಎಂದಾಗಲೀ ಸಮಾಸವನ್ನು ಮಾಡಬಹುದು. ಅರ್ಥಾತ್ ಕರ್ಮಧಾರಯಸಮಾಸವೂ ಅಲ್ಲ. ಉಪಮಿತಸಮಾಸವೂ ಅಲ್ಲ. ಹೊರತು ಮಧ್ಯಮಪದಲೋಪೀಸಮಾಸ. ಉದಾ —ಶಾಕ-ಪ್ರಿಯಃ ಪಾರ್ಥಿವಃ - ಶಾಕಪಾರ್ಥಿವಃ ಎಂಬಲ್ಲಿ ಮಧ್ಯಮಪದವಾದ ಪ್ರಿಯ ಎಂಬ ಪದವು ಲೋಪವಾಗಿ ಆಗಿರುವ ಸಮಾಸ. ಅದರಂತೆ ಇಲ್ಲಿಯೂ ಆಖ್ಯ ಅಥವಾ ಏವ ಎಂಬ ಶಬ್ದವನ್ನು ಲೋಪಮಾಡಿರುವ ಸಮಾಸ. ಆದ್ದರಿಂದ 'ಶಾಕಪಾರ್ಥಿವಾದೀನಾಮುಪಸಂಖ್ಯಾನಮ್' ಎಂಬ ವಾರ್ತಿಕದಲ್ಲಿ ಶಾಕಪಾರ್ಥಿವ ಮೊದಲಾದ ಶಬ್ದಗಳಲ್ಲಿ ವ್ಯಾಸದಿವಾಕರ ಎಂಬ ಶಬ್ದವನ್ನು ಸೇರಿಸಬೇಕು.

**ಮದನ ಏವ ಅಗ್ನಿಃ – ಮದನಾಗ್ನಿಃ**

ಆದ್ದರಿಂದಲೇ ಮಲ್ಲಿನಾಥನೂ ಕೂಡ ತಾನು ಮಾಘಕಾವ್ಯಕ್ಕೆ ವ್ಯಾಖ್ಯಾನ ಮಾಡುತ್ತ -

'ಅವಿರತರತಲೀಲಾಯಾಸಜಾತಶ್ರಮಾಣಾಂ ... ಮಾಲತೀನಾಂ ರಜೋಭಿಃ ॥'

(11-17 - ಮಾಘಕಾವ್ಯ)

ಮದನಾಗ್ನಿಃ ಎಂಬ ಪದಕ್ಕೆ ಮದನ ಏವ ಅಗ್ನಿಃ ಎಂದು ಹೇಳಿದ್ದಾನೆ.

– ಅವಿರತೇತಿ ॥ ಅವಿರತರತಲೀಲಯಾಸೇನ ಅವಿಚ್ಛಿನ್ನಸುರತಕ್ರೀಡಾಪ್ರಯಾಸೇನ ಜಾತ-ಶ್ರಮಾಣಾಮ್ ಅಂಗನಾನಾಂ ಸಂಬಂಧಿನಿ ನಿಃಸಹತ ಇತಿ ನಿಃಸಹೇಽಕ್ಷಮೇ । ಪಚಾದ್ಯಚ್ । ಅಂಗೇ ಉಪಶಮಮ್ ಉಪಯಾಂತಂ ಶಾಮ್ಯಂತಂ ಮದನ ಏವಾಗ್ನಿಃ ತಂ ಪುನಃ ಉಷಸಿ ಮಾತರ್ಯಂತರಿಕ್ಷೇ ಶ್ವಯತಿ ವರ್ಧತ ಇತಿ ಮಾತರಿಶ್ವಾ । 'ಶ್ವನ್ನುಕ್ಷನ್' ಇತ್ಯಾದಿನಾ ಔಣಾದಿಕೋ ನಿಪಾತಃ । ವಿವಿಕ್ತೈರಮಲೈಃ ಅನಾದ್ಯೈಶ್ಚ ಮಾಲತೀನಾಂ ಜಾತೀಕುಸುಮಾನಾಮ್ । 'ಸುಮನಾ ಮಾಲತೀ ಜಾತಿಃ' ಇತ್ಯಮರಃ । ರಜೋಭಿಃ ಪರಾಗೈಃ । ಕರೀಷೈರಿವೇತಿ ಭಾವಃ । ಅವ-ಚೂರ್ಣ್ಯಾವಧ್ವಸ್ಯ । ಸಂಯುಜ್ಯೇತಿ ಭಾವಃ । ಜ್ವಲಯತಿ ಉದ್ದೀಪಯತಿ । ಪ್ರಾಭಾತಿಕಮಾಲ-ತೀತವಾತಸ್ಪರ್ಶಾತ್ ಪುನರುದ್ಬುದ್ಧೋ ಮದನ ಇತ್ಯರ್ಥಃ ।

ಈ ರೀತಿ ಹೇಳಿದ್ದರಿಂದಲೇ 'ಸೋಽಯಂ ವ್ಯಾಸಸುಧಾನಿಧಿರ್ಭವತು ಮೇ' ಎಂಬಲ್ಲಿ ವ್ಯಾಸಸುಧಾ-ನಿಧಿಃ ಮುಂತಾದ ಪದಗಳನ್ನು ವ್ಯಾಖ್ಯಾನ ಮಾಡಿದಂತಾಯಿತು.

## ಅರ್ಣವ ಇವ ಆಚರತಿ ಎನ್ನುವಂತೆ - ದಿವಾಕರಃ

ಅಥವಾ – 'ಅಸ್ಮದೀಯಂ ಗುಣಾರ್ಣವಂ' ಎಂದು ಈಕ್ಷತ್ಯಧಿಕರಣ ಅನುವ್ಯಾಖ್ಯಾನಸಂದರ್ಭದಲ್ಲಿ ಗುಣಾರ್ಣವ ಎಂಬ ಶಬ್ದದಲ್ಲಿ ಅರ್ಣವ ಶಬ್ದಕ್ಕೆ ಅರ್ಣವ ಇವ ಆಚರತಿ ಎಂಬ ಅರ್ಥವನ್ನು ಸ್ವೀಕರಿಸಿದಂತೆ ಇಲ್ಲಿಯೂ 'ದಿವಾಕರ ಇವ ಆಚರತಿ ವ್ಯಾಸಃ' ಎಂಬ ಅರ್ಥವನ್ನು ಸ್ವೀಕರಿಸಿದಾಗ ದಿವಾಕರ ಎಂಬ ಪದವು ವಿಶೇಷಣವಾಗುವುದರಿಂದ ಅದರಿಂದ ವ್ಯಾಸ ಎಂಬ ಪದಕ್ಕೆ ಕರ್ಮಧಾರಯ ಸಮಾಸವನ್ನೇ ಮಾಡಬಹುದು. ಆದರೆ ವಿಶೇಷಣವು ಮೊದಲು ಪ್ರಯೋ-ಗಿಸಲ್ಪಡಬೇಕು ಎಂಬ ನಿಯಮವಿದ್ದರೂ ಕಾಮಚಾರೀ ಎಂದು ವಿಶೇಷಣವಿಶೇಷ್ಯಭಾವವನ್ನು ಹೇಳುವವನ ಇಚ್ಛೆಗನುಸಾರವಾಗಿ ಬದಲಾಯಿಸಬಹುದಾದ್ದರಿಂದ, ಅರ್ಥಾತ್ ವ್ಯಾಸ ಎಂಬು-ವುದನ್ನೇ ವಿಶೇಷಣವನ್ನಾಗಿಸಿ ಪರನಿಪಾತವನ್ನು ಅರ್ಥಾತ್ ಪರದಲ್ಲಿ ಪ್ರಯೋಗ ಮಾಡಬಹುದು.

सुधा- अर्णव इवाऽचरतीति क्विपि कृते अर्णवतेः पचाद्यचि कृते अर्णवशब्दस्त्रिलिङ्गः साधुः ।

* * *

## ಸನ್ಮಾರ್ಗಗಃ - ಶಬ್ದದ ವಿಶೇಷಾರ್ಥ

(ಕಾಶೀಟಿಪ್ಪಣೀ) – (ಸಾಧುನಿಕರ ಇತಿ ॥) ಸನ್ ಮೋಕ್ಷಪ್ರಾಪಕತ್ವೇನ ಸಮೀಚೀನಃ, ಸತೋ ವಾ ನಿತ್ಯಸುಖಲಕ್ಷಣಮೋಕ್ಷಸ್ಯ ಯೋ ಮಾರ್ಗ ಉಪಾಸ್ತ್ಯಾದಿರೂಪಃ ತದ್ಗ ಇತ್ಯರ್ಥಃ । ತಥಾಚ – ಮೋಕ್ಷಸಾಧನ-ಉಪಾಸ್ತ್ಯಾದಿಪ್ರಯೋಜಕಪರತತ್ತ್ವಾವಬೋಧಸಂಪಾದಕತ್ವೇನ ಶಾಸ್ತ್ರಪ್ರಭವತ್ವ-ಮರ್ಥವದಿತಿ ಹೃದಯಮ್ ।

ಯೇನ ಸಾಧುನಿಕರಃ ಸನ್ಮಾರ್ಗಗಃ ಅಕಾರಿ - ಎಂಬಲ್ಲಿ ಸಜ್ಜನರ ಸಮುದಾಯಕ್ಕೆ ಒಳ್ಳೆಯ ಮಾರ್ಗವು ಯಾರಿಂದ ಮಾಡಲ್ಪಟ್ಟಿತೋ ಎಂದಿದ್ದಾರೆ.

ಇಲ್ಲಿ ಸನ್ಮಾರ್ಗಗಃ ಎಂಬಲ್ಲಿ ಈ ರೀತಿಯಾದ ಅರ್ಥ - ಮಾರ್ಗ ಎಂಬ ಶಬ್ದಕ್ಕೆ ಉಪಾಸನೆ ಮೊದಲಾದ ಮಾರ್ಗ ಎಂದರ್ಥ. ಆ ಮಾರ್ಗದಲ್ಲಿ ಇರುವ ಸಮೀಚೀನತೆಯನ್ನು ಸತ್ ಎಂಬ ಶಬ್ದವು ಹೇಳುತ್ತಿದೆ. ಆ ಸಮೀಚೀನತೆಯು ಮೋಕ್ಷಪ್ರಾಪಕತ್ವವೇ. ಅರ್ಥಾತ್ ಮೋಕ್ಷಸಿಗುವಂತೆ ಮಾಡುವಿಕೆಯೇ ಆಗಿದೆ. ಅಥವಾ ಸತಃ ಎಂದರೆ ನಿತ್ಯವಾದ ವಸ್ತು. ಅಂದರೆ ನಿತ್ಯಸುಖರೂಪವಾದ ಮೋಕ್ಷ ಎಂದರ್ಥ. ಅದರ ಮಾರ್ಗ ಎಂದು.

ಹಾಗಾಗಿ ಒಟ್ಟು ಅರ್ಥ ಹೀಗೆ - ಮೋಕ್ಷಕ್ಕೆ ಬೇಕಾದ ಉಪಾಸನೆ ಮೊದಲಾದವುಗಳಿಗೆ ಉಪಯೋಗಿಯಾದ ಪರತತ್ವದ ಜ್ಞಾನವನ್ನು ಸಂಪಾದನೆ ಮಾಡುವ ಶಾಸ್ತ್ರಗಳಿಗೆ ಯಥಾಯೋಗ್ಯ ಉತ್ಪತ್ತಿ ಹಾಗೂ ಅಭಿವ್ಯಕ್ತಿಯನ್ನು ಉಂಟುಮಾಡುವವರು ವೇದವ್ಯಾಸರೆಂಬ ಸೂರ್ಯರು ಎಂದರ್ಥ.

## ನಿಷೇಧದ್ವಯೋಕ್ತಿಯ ಔಚಿತ್ಯ

**(ಕಾಶೀಟಪ್ಪಣೀ) ಮಾ ತ್ಯಾಜೀತಿ ॥ 'ಮಾಙ್ ಯೋಗೇ' ಲುಙಃ ಸರ್ವಲಕಾರಾಪವಾದಕತ್ವಾತ್ ಲೋಡರ್ಥೇ ಲುಙ್ । ನ ತ್ಯಜ್ಯತಾಮಿತ್ಯರ್ಥಃ । ಸಂಬಂಧ್ಯತಾಮ್ ಇತ್ಯೇವೋಕ್ತೇ ಸಂಬಂಧ-ಮಾತ್ರಸ್ಯ ನಿತ್ಯಸಿದ್ಧತ್ವಾತ್ ಸ್ಮೃತಿವಿಷಯತ್ವರೂಪಸಂಬಂಧಸ್ಯ ಚಾಧುನೈವ ಸತ್ತ್ವಾತ್ ಪ್ರಾರ್ಥನಾಽ-ನುಪಪತ್ತಿರತಃ ಸಂತತಸ್ಮೃತಿವಿಷಯತ್ವರೂಪಸಂಬಂಧಲಾಭಾಯ ನಿಷೇಧದ್ವಯೋಕ್ತಿಃ ।**

'ಮಾ ತ್ಯಾಜಿ ಮೇ ಮಾನಸಂ' ಎಂದಿದೆ. ಇಲ್ಲಿ 'ನ ತ್ಯಜ್ಯತಾಂ' ಬಿಡದೇ ಇರಲ್ಪಡಲಿ ಎಂಬರ್ಥದಲ್ಲಿ 'ಮಾ ತ್ಯಾಜಿ' ಎಂಬ ಪದವಿದೆ. ಇಲ್ಲಿ 'ಸಂಬಧ್ಯತಾಂ' ಎಂದು ನನ್ನ ಮನಸ್ಸಿಗೂ ನಿಮಗೂ ಸಂಬಂಧ ಇರಲಿ ಎಂದೇ ಪ್ರಯೋಗಿಸಬಹುದಿತ್ತು. ಮಾ ಎಂದು ಒಂದು ನಿಷೇಧ. ತ್ಯಾಜಿ ಎಂಬಲ್ಲಿ ಇನ್ನೊಂದು ನಿಷೇಧ. ಇವೆರಡನ್ನೂ ಹೇಳಿದ್ದು ಏಕೆ? ಎಂದರೆ,

ಅದು ಹೀಗೆ - ಕೇವಲ ನನ್ನ ಮನಸ್ಸಿಗೂ ನಿಮಗೂ ಸಂಬಂಧವಾಗಲಿ ಎಂದರೆ ಭಗವಂತನ ಸಂಬಂಧ ನಮಗೆ ಎಲ್ಲ ದೇಶಕಾಲಗಳಲ್ಲಿಯೂ ಇದ್ದೇ ಇರುವುದರಿಂದ ಅದನ್ನು ಸಂಬಂಧವಾಗಲಿ ಎಂದು ಪ್ರಾರ್ಥಿಸುವುದು ಅನುಚಿತ. ಇನ್ನು ನಮ್ಮ ಸ್ಮರಣೆಗೆ ವಿಷಯವಾಗುವ ರೀತಿಯ ಸಂಬಂಧವು ಆಗಲಿ ಎಂದು ಸಂಬಂಧವಿಶೇಷವನ್ನು ಪ್ರಾರ್ಥನೆ ಮಾಡುತ್ತಿರುವುದು ಎಂದು ಹೇಳಿದರೂ ಅದು ಪ್ರಾರ್ಥನೆ ಮಾಡುವ ಈ ಪದ್ಯವನ್ನು ಹೇಳಬೇಕಾದ ಕಾಲದಲ್ಲಿಯೇ ಇರುವುದರಿಂದ ಅದಕ್ಕಾಗಿ ಪ್ರಾರ್ಥನೆ ಬೇಕಾಗಿಲ್ಲ. ಅದಕ್ಕಾಗಿ 'ಸಂತತಸ್ಮರಣೆಗೆ ವಿಷಯವಾಗಬೇಕು' ಎಂಬ ಅಭಿಪ್ರಾಯದಲ್ಲಿ

ಸತತ-ಸ್ಮೃತಿವಿಷಯತ್ವ ಎಂಬ ಸಂಬಂಧ ಭಗವಂತನಿಗೂ ನಮ್ಮ ಮನಸ್ಸಿಗೂ ಆಗಲಿ ಎಂದು ಅರ್ಥಸಿಗುವುದಕ್ಕಾಗಿ 'ಮಾ ತ್ಯಾಜ' ಎಂದಿದ್ದಾರೆ.

* ಮಾಙಿ ಲುಙ್ - (ಪಾ.ಸೂ. 3-3-175) ಮಾಙಿ ಉಪಪದೇ ಧಾತೋಃ ಲುಙ್ ಪ್ರತ್ಯಯೋ ಭವತಿ । ಸರ್ವಲಕಾರಾಣಾಮಪವಾದಃ । ಮಾ ಕಾರ್ಷೀತ್, ಮಾ ಹಾರ್ಷೀತ್, ಕಥಂ ಮಾ ಭವತು ತಸ್ಯ ಪಾಪಂ, ಮಾ ಭವಿಷ್ಯತಿ ಇತಿ? ಅಸಾಧುರೇವಾಯಂ । ಕೇಚಿದಾಹುಃ ಅಙಿತ್ ಅಪರಃ ಮಾಶಬ್ದಃ ವಿದ್ಯತೇ, ತಸ್ಯಾಯಂ ಪ್ರಯೋಗಃ ।

## ಸೂರ್ಯನ ದೃಷ್ಟಾಂತದಿಂದ ಪ್ರಾರ್ಥಿಸಿದ್ದು ಸರಿಯೇ?

(ಕಾಶೀ) — ನನು ಸೂರ್ಯೇ ಸರ್ವದಾ ಮಾನಸಾಪರಿತ್ಯಾಗಸ್ಯಾಭಾವಾತ್ ಕಥಂ ತದ್ದೃಷ್ಟಾಂತೇನ ತತ್ಪ್ರಾರ್ಥನಮಿತಿ ಚೇತ್ । ಉಚ್ಯತೇ – ಸೂರ್ಯಧರ್ಮಾಂತರಾಣಾಮತಿಶಯೇನ ಭಗವತ್ಯು-ಪಲಭ್ಯಾತ್ ಮಾನಸಾಪರಿತ್ಯಾಗಸ್ಯಾಪ್ಯತಿಶಯೇನ ಪ್ರಾರ್ಥನಮ್ । ನ ಹಿ ಸೂರ್ಯೇಣ ಪ್ರಾದುರ್ಭಾವಾನಂತರಮೇವ ಭೂಮಿವಲಯೇ ಗೋಸಂತತಿವಿಸ್ತಾರಾದಿಕಮ್ ಅಕಾರಿ, ಕಿಂತು ತದೇಕದೇಶ ಏವ । ನಾಪಿ ಕರುಣಯಾ । ನಾಪಿ ಪರಂ ತತ್ವಂ ಪ್ರಾಕಾಶಿ । ನಾಪಿ ಧ್ವಾಂತಂ ಧ್ವಂಸಂ ಪರಮತ್ಯಂತಮ್ ಅನಾಯಿ । ಪುನರ್ಧ್ವಾಂತಸಂಭವಾತ್ । ಅತೋ ಗೋಸಂತತಿ-ವಿಸ್ತಾರಾದೌ ಸಾದ್ಯಸ್ಕಭೂವಲಯಸಂಬಂಧಿತ್ವಾದ್ಯತಿಶಯೋಪಲಂಭಾತ್ ಮಾನಸಾಪರಿತ್ಯಾಗೇಽಪಿ ಸಾರ್ವದಿಕತ್ವರೂಪಾತಿಶಯಪ್ರಾರ್ಥನಮುಪಪನ್ನಮೇವೇತಿ ।

ಸೂರ್ಯನಿಗೂ ವೇದವ್ಯಾಸರಿಗೂ ಕೆಲವು ಧರ್ಮಗಳಲ್ಲಿ ಹೋಲಿಕೆಯಿದ್ದರೂ ಸೂರ್ಯನಿಗಿಂತ ವೇದವ್ಯಾಸರು ಅಧಿಕರೇ. ಏಕೆಂದರೆ, ಸೂರ್ಯ ತಾನು ಪ್ರಾದುರ್ಭವಿಸಿದ ಕೂಡಲೇ ಭೂ-ಪ್ರದೇಶದಲ್ಲಿ ಎಲ್ಲ ಕಡೆ ತನ್ನ ಕಿರಣಗಳ ವಿಸ್ತಾರ ಮಾಡುವುದಿಲ್ಲ. ಭೂಭಾಗದ ಏಕದೇಶದಲ್ಲಿ ಮಾತ್ರ. ಇನ್ನು ಜನರ ಮೇಲಿನ ಕರುಣೆಯಿಂದಲೂ ಪ್ರಾದುರ್ಭಾವ ಕಿರಣವಿಸ್ತಾರ ಇವ್ಯಾವುದನ್ನೂ ಮಾಡುವುದಿಲ್ಲ. ಇನ್ನು ನಿಬಿಡವಾದ ಕತ್ತಲೆಯನ್ನು ಮತ್ತೆ ಬರದಂತೆ ನಾಶ ಮಾಡುವುದಿಲ್ಲ. ವೇದವ್ಯಾಸರಾದರೋ ಇದಕ್ಕಿಂತ ವಿಪರೀತರಾಗಿದ್ದಾರೆ.

ಹೀಗೆ ಗೋಸಂತತಿಯ ವಿಸ್ತಾರ ಮುಂತಾದವುಗಳು ವೇದವ್ಯಾಸರಿಂದ ಒಂದೇ ದಿನದಲ್ಲಿ ನಡೆಯುವ ಯಜ್ಞದಂತೆ ಹುಟ್ಟಿದ ಸಮನಂತರವೇ ಬೇಗನೇ ಪುರಾಣಾದಿಗಳ ರಚನೆ ವೇದವಿಭಾಗಾದಿಗಳು ಉಂಟಾದವು ಎಂಬ ಅತಿಶಯ ಕಂಡಿದೆ.

ಆದ್ದರಿಂದ ನನ್ನ ಮನಸ್ಸನ್ನು ಬಿಡಬಾರದು ಎಂಬ ವಿಷಯಲ್ಲಿ ಸರ್ವದಾ ಇರಬೇಕು ಎಂಬ ಅತಿಶಯಪ್ರಾರ್ಥನೆ ಮಾಡಿದ್ದು ಸರಿಯಾಗಿಯೇ ಇದೆ.

## ವೇದವ್ಯಾಸರ ಪ್ರಾರ್ಥನೆ ಏಕೆ?

(ರಸರಂಜಿನೀ)— ಏವಂ ಮೋಕ್ಷಸಾಧನಜಿಜ್ಞಾಸಾವಿಷಯತ್ವರೂಪಪರದೇವತಾತ್ವೇ ಲಕ್ಷ್ಮೀ-ಸಮೇತಂ ಶ್ರೀಹರಿಂ ನತ್ವಾ, ಭಗವಾನ್ ಖಲು ಏಕೇನ ರೂಪೇಣ ಸರ್ವಂ ಕರ್ತುಂ ಶಕ್ತೋಽಪಿ ಸ್ವೇಚ್ಛಯೈವ ಏಕೇನ ರೂಪೇಣ ಮೋಕ್ಷಾಂತರಂಗಸಾಧನಧ್ಯಾನಾದಿರೂಪೋಪಾಸನವಿಷಯೋ ಭವತಿ । ಅನ್ಯೇನ ತು ತತ್ಸಾಧನಜ್ಞಾನಾದಿದಃ, ಅಪರೇಣ ಚ ತತ್ಸಾಧನಸಂಪಾದಕಃ । ತತ್ರ ಜ್ಞಾನಾದ್ಯರ್ಥಮವತೀರ್ಣೋ ಭಗವಾನ್ ಬಾದರಾಯಣಃ, ಸ ಏವ ಅಜ್ಞಾನಿನಾ ಜ್ಞಾನಾರ್ಥಂ ಜ್ಞಾನಿನಾ ತು ತದ್ರಕ್ಷಣಾಯ ಅವಶ್ಯಂ ಪ್ರಾರ್ಥನೀಯ ಇತಿ ಶಿಷ್ಯಾನ್ ಶಿಕ್ಷಯನ್ 'ತಮೇವ' ಇತಿ ಶ್ಲೋಕಂ ತದ್ವಿವರಣರೂಪಂ 'ಪ್ರಾದುರ್ಭೂತಃ' ಇತಿ ಶ್ಲೋಕಂ ಚ ವಿವೃಣ್ವನ್ ತದನು-ಗುಣಗುಣೋಪೇತೋಪಮಾನಾಭಾವೇನ ಸ್ತುವನ್ ತತೋ ಜ್ಞಾನತಿರೋಭಾವಾಭಾವಮಾಶಾಸ್ತೇ — ಯೇನೇತಿ ॥

ಯೇನ ಪ್ರಾದುರಭಾವಿ ಭೂಮಿವಲಯೇ — ಈ ಹಿಂದೆ ಪರದೇವತೆಯಾದ ಲಕ್ಷ್ಮೀಸಮೇತನಾದ ಶ್ರೀಹರಿಗೆ ನಮಸ್ಕಾರ ಮಾಡಿದ್ದಾರೆ. ಪರದೇವತೆಯೆಂದರೆ ಮೋಕ್ಷಸಾಧನವಾದ ವಿಚಾರಕ್ಕೆ ವಿಷಯನಾದವನು ಎಂದರ್ಥ. ಭಗವಂತ ಒಬ್ಬನೇ ಒಂದೇ ರೂಪದಿಂದ ಎಲ್ಲವನ್ನು ಮಾಡಲು ಶಕ್ತಿಯನ್ನು ಪಡೆದಿದ್ದಾನೆ. ಆದರೂ ತನ್ನ ಇಚ್ಛೆಯಿಂದಲೇ ಒಂದೇ ರೂಪದಿಂದ ಮೋಕ್ಷಕ್ಕೆ ಅಂತರಂಗಸಾಧನವೆನಿಸುವ ಧ್ಯಾನರೂಪವಾದ ಉಪಾಸನೆಗೆ ವಿಷಯನಾಗುವನು. ಬೇರೆ ರೂಪದಿಂದ ಮೋಕ್ಷಸಾಧನವಾದ ಜ್ಞಾನವನ್ನು ನೀಡುವನು. ಇನ್ನೊಂದು ರೂಪದಿಂದ ಜ್ಞಾನಕ್ಕೆ ಸಾಧನವಾದದ್ದನ್ನು ಸಂಪಾದಿಸಿ ಕೊಡುವನು. ಈ ರೀತಿಯ ಅನೇಕ ರೂಪಗಳಲ್ಲಿ ಜ್ಞಾನಾದಿ-ಗಳಿಗೋಸ್ಕರ ಅವತಾರ ಮಾಡಿದ ಪೂಜ್ಯರಾದ ವೇದವ್ಯಾಸರು ಜ್ಞಾನಕ್ಕೋಸ್ಕರ ಜ್ಞಾನವಿಲ್ಲದ-ವರಿಂದ ಪ್ರಾರ್ಥಿಸಲ್ಪಡುವವರಾಗಿದ್ದಾರೆ. ಜ್ಞಾನಿಗಳಾದರೂ ಪಡೆದ ಜ್ಞಾನದ ರಕ್ಷಣೆಗೋಸ್ಕರ ವೇದವ್ಯಾಸರನ್ನು ಅವಶ್ಯವಾಗಿ ಪ್ರಾರ್ಥನೆ ಮಾಡಬೇಕು. ಈ ಅಂಶಗಳನ್ನು ಶಿಷ್ಯರಿಗೆ ಶಿಕ್ಷಣ ನೀಡುತ್ತ 'ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ' ಎಂಬ ಅನುವ್ಯಾಖ್ಯಾನಶ್ಲೋಕದ ವ್ಯಾಖ್ಯಾನವಾದ 'ಪ್ರಾದುರ್ಭೂತಃ ಹರಿಃ ವ್ಯಾಸಃ' ಎಂಬ ಶ್ಲೋಕವನ್ನೂ ವಿವರಿಸುತ್ತಾ ಅದಕ್ಕೆ ಅನುಗುಣವಾದ ಗುಣಗಳುಳ್ಳ ವಸ್ತುವಿನ ಜೊತೆಗೆ ಹೋಲಿಸುತ್ತ ಸ್ತೋತ್ರಮಾಡುತ್ತಾ ಆ ವೇದವ್ಯಾಸರಿಂದ ಜ್ಞಾನದ ಮರೆಮಾಚುವಿಕೆಯನ್ನು ಪರಿಹರಿಸಬೇಕು ಎಂದು ಪ್ರಾರ್ಥಿಸುತ್ತಿದ್ದಾರೆ — 'ಯೇನ' ಎಂಬ ಪದ್ಯದಿಂದ.

## ವ್ಯಾಸರು ನಾರಾಯಣನೇ?

(ರಸರಂಜಿನೀ) — 'ತಮೇವ ಶಾಸ್ತ್ರಪ್ರಭವಂ' ಇತ್ಯತ್ರ ನಾರಾಯಣಸ್ಯೈವ ಶಾಸ್ತ್ರಪ್ರಭವತ್ವಂ

ಪ್ರತೀಯತೇ । ತದಯುಕ್ತಮ್ । ವ್ಯಾಸಕೃತತ್ವಪ್ರಸಿದ್ಧಿವಿರೋಧಾತ್ । ನ ಚ ನಾರಾಯಣ ಏವ ವ್ಯಾಸಃ । ಜನನವಿರೋಧಾತ್। ನ ಚ ಜನನಂ ಪ್ರಾದುರ್ಭಾವರೂಪತಯಾ 'ಪ್ರಾದುರ್ಭೂತ' ಇತಿ ಶ್ಲೋಕೇ ಭಾಷ್ಯಕೃತೈವ ವ್ಯಾಖ್ಯಾತಮಿತಿ ವಾಚ್ಯಮ್ । ಪುರಾಣಾದೌ ದೇವದತ್ತಾದಿಸಾಮ್ಯೇನ ಸ್ತ್ರೀಪುರುಷಸಂಯೋಗೋದ್ಭೂತತ್ವಸ್ಯ ಸ್ಫುಟಂ ಪ್ರತೀತ್ಯಾ ತದ್ಬಾಧಾದಿತ್ಯತ ಆಹ — **ಭೂಮಿವಲಯೇ ಪ್ರಾದುರಭಾವೀತಿ ॥** ಅತ್ರ ಭೂಮಿವಲಯಪದಮಾವರ್ತನೀಯಮ್ । ಏಕಂ ಲುಪ್ತೋಪಮಾನಮ್ ।

"ತಮೇವ ಶಾಸ್ತ್ರಪ್ರಭವಂ" ಎಂಬಲ್ಲಿ ನಾರಾಯಣನೇ ಶಾಸ್ತ್ರಪ್ರಭವ ಎಂದು ತೋರುತ್ತಿದ್ದಾನೆ. ಇದು ಸರಿಯಲ್ಲ. ವೇದವ್ಯಾಸರು ಶಾಸ್ತ್ರದ ಕರ್ತೃಗಳು ಎಂದು ಪ್ರಸಿದ್ಧಿ ಇರುವುದರಿಂದ. ಅಲ್ಲ! ನಾರಾಯಣನೇ ವೇದವ್ಯಾಸರು ಎಂದರೆ ಹೀಗೆನ್ನಲು ಸಾಧ್ಯವಿಲ್ಲ. ವೇದವ್ಯಾಸರಿಗೆ ಜನನವಿದೆ ನಾರಾಯಣನಿಗೆ ಜನನವಿಲ್ಲ. ಅಲ್ಲ! ಜನನ ಎಂದರೆ ವೇದವ್ಯಾಸರ ಪ್ರಾದುರ್ಭಾವ ಎಂದಷ್ಟೇ ಅರ್ಥ ಎಂದು 'ಪ್ರಾದುರ್ಭೂತಃ' ಎಂಬ ಶ್ಲೋಕದಲ್ಲಿ ಭಾಷ್ಯಕಾರರೇ ವ್ಯಾಖ್ಯಾನ ಮಾಡಿದ್ದಾರೆ ಎಂದರೆ ಅದು ಸರಿಯಲ್ಲ. ಪುರಾಣಾದಿಗಳಲ್ಲಿ ದೇವದತ್ತಾದಿಮನುಷ್ಯರಂತೆ ಸ್ತ್ರೀಪುರುಷರ ಸಂಯೋಗದಿಂದ ಹುಟ್ಟಿದ್ದು ಸ್ಪಷ್ಟವಾಗಿ ತೋರುತ್ತಿರುವುದರಿಂದ ಪುರಾಣಾನುಗುಣವಾಗಿಯೇ ಜನನವಿದೆ ಎಂದು ಹೇಳಬೇಕು. ಇಲ್ಲದಿದ್ದರೆ ಪುರಾಣದ ವಿರೋಧ ಬರುವುದು. ಇದರ ಪರಿಹಾರಕ್ಕಾಗಿ "ಭೂಮಿವಲಯೇ ಪ್ರಾದುರಭಾವಿ" ಎಂದಿದ್ದಾರೆ.

ಈ ಶ್ಲೋಕದಲ್ಲಿ 'ಭೂಮಿವಲಯೇ' ಎಂಬ ಪದವನ್ನು ಆವೃತ್ತಿಮಾಡಿಕೊಳ್ಳಬೇಕು. ಒಂದು ಭೂಮಿವಲಯ ಎಂಬ ಪದವು ಲುಪ್ತೋಪಮಾನವಾಗಿದೆ. ಅಂದರೆ ಇವ ಎಂಬ ಅದರ ಮುಂದೆ ಇರುವ ಶಬ್ದವು ಲೋಪವಾಗಿದೆ ಎಂದರ್ಥ. ಹಾಗಾಗಿ 'ಯೇನ ಭೂಮಿವಲಯೇ ಇವ ಭೂಮಿವಲಯೇ ಪ್ರಾದುರಭಾವಿ' ಎಂದು ವಾಕ್ಯವನ್ನು ಯೋಜಿಸಿದಂತಾಯಿತು. ಇದರ ಅರ್ಥ - ಯಾವ ವ್ಯಕ್ತಿಯು 'ಭೂಮಿವಲಯೇ' ಎಂದರೆ ಪೃಥ್ವಿಯ ಒಂದು ವಿಧವಾದ ಪ್ರದೇಶದಲ್ಲಿ ಅರ್ಥಾತ್ ಸ್ತಂಭದಲ್ಲಿ ಇರುವಂತೆ ಅಂದರೆ ಸ್ತಂಭದಿಂದ ಪ್ರಕಟಗೊಂಡಂತೆ, ಭೂಮಿವಲಯೇ = ಯಮುನಾದ್ವೀಪದಲ್ಲಿ ಪರಾಶರರಿಂದ ಸತ್ಯವತಿಯಲ್ಲಿ ವೇದವ್ಯಾಸರು ಪ್ರಾದುರ್ಭವಿಸಿದರು ಎಂದು.

## ಸೂರ್ಯದೃಷ್ಟಾಂತವೂ ಕೂಡ ಇದೇ ಅರ್ಥಕ್ಕೆ ಸೂಚಕ

(ರಸರಂಜಿನೀ) — ಸೂರ್ಯದೃಷ್ಟಾಂತೋಽಪಿ ಏತಮೇವಾರ್ಥಂ ಸೂಚಯತಿ । ಅತ ಏವ — 'ಇತ್ಯಾಹ ತತ್ಪರಂ ಬ್ರಹ್ಮ ವ್ಯಾಸಾಖ್ಯಂ ಜ್ಞಾನರಶ್ಮಿಮತ್' ಇತ್ಯೇತದ್ ವ್ಯಾಖ್ಯಾನವ್ಯಾಜೇನ ಅಪಾಂತರತಮೋ ನಾಮ ಕಶ್ಚಿನ್ಮುನಿರ್ವ್ಯಾಸೋ ಬಭೂವೇತಿ ಪ್ರವಾದದರ್ಶನಾತ್ ಶಿಷ್ಯಾಣಾಂ

ಸೂತ್ರಕಾರೇ ಭಕ್ತಿಮಾಂದ್ಯಂ ಮಾ ಭೂತ್ ಇತ್ಯತೋಽವಿಶೇಷಣೋಪಾದಾನಮ್ ಇತ್ಯನೇ-ನೈತದ್ ವ್ಯನಕ್ತಿ ।

ಸೂರ್ಯನ ದೃಷ್ಟಾಂತವನ್ನು ವೇದವ್ಯಾಸರಿಗೆ ನೀಡಿದ್ದು ಕೂಡ ಈ ಅರ್ಥವನ್ನು ಸೂಚಿಸುತ್ತದೆ. – ಆದ್ದರಿಂದಲೇ 'ಇತ್ಯಾಹ ತತ್ಪರಂ ಬ್ರಹ್ಮ ವ್ಯಾಸಾಖ್ಯಂ ಜ್ಞಾನರಶ್ಮಿಮತ್' ಎಂಬ ಅನುವ್ಯಾಖ್ಯಾನದ ವ್ಯಾಖ್ಯಾನವನ್ನು ಮಾಡುವಾಗ ಅದರ ನೆಪದಿಂದ ವೇದವ್ಯಾಸರು ಅಪಾಂತರತಮ ಎಂಬ ಯಾರೋ ಒಬ್ಬ ಮುನಿಗಳು ಎಂದು ಏನು ಪ್ರವಾದವಿದೆ ಅದು ಸರಿಯಲ್ಲ. ಹಾಗಿದ್ದ ಪಕ್ಷದಲ್ಲಿ ಶಿಷ್ಯರುಗಳಿಗೆ ಸೂತ್ರಕಾರರಲ್ಲಿ ಮಂದವಾದ ಭಕ್ತಿಯು ಉಂಟಾದೀತು। ಅದಕ್ಕಾಗಿ 'ಜ್ಞಾನರಶ್ಮಿಮತ್' ಎಂದು ಯಾವುದೇ ವಿಶೇಷಣಕೊಡದೆ ಹೇಳಿದ್ದಾರೆ. ಈ ಪದವೇ ವೇದವ್ಯಾಸರು ಅಪಾಂತರತಮರಲ್ಲ ಎಂಬ ಅಭಿಪ್ರಾಯವನ್ನು ತಿಳಿಸುತ್ತಿದೆ.

(ಸುಧಾ) ज्ञानं रश्मय इव ज्ञानरश्मयः । व्याप्तज्ञानवदित्यर्थः । "अपान्तरतमो नाम कश्चन मुनिर्व्यासो बभूव" इति प्रवाददर्शनाच्छिष्याणां सूत्रकारे भक्तिमान्द्यं मा भूदित्यतो विशेषणो-पादनम् ।

## ವ್ಯಾಸರ ಪ್ರಸಿದ್ಧವಾದ ದ್ವೈಪಾಯನನಾಮವೇ ಏತತ್ಸಾಧಕ

(ರಸರಂಜಿನೀ) – ಅಥವಾ ಬಾಧಕಂ ಪರಿಹೃತ್ಯ ಸಾಧಕಂ ವದನ್ ಯತಃ ಪ್ರಸಿದ್ಧತರಂ ತದೀಯಂ ದ್ವೈಪಾಯನನಾಮಧೇಯಮೇವ ಏತತ್ಸಾಧಯತಿ । ಕಿಂ ತತಃ ಸಾಧಕಾಂತರಚಿಂತಯಾ ಇತಿ ತದೇವಾರ್ಥಪ್ರದರ್ಶನಮಿಷೇಣ ದರ್ಶಯತಿ – ಯೇನೇತಿ ॥ ಅನೇನ ಯಮುನಾ-ಮಧ್ಯಪ್ರದೇಶ ಏವಾಯನಮ್ = ಉತ್ಪತ್ತಿಸ್ಥಾನಂ ಯಸ್ಯ ಸ ಏವ ದ್ವೈಪಾಯನ ಇತಿ ವ್ಯುತ್ಪತ್ತಿಂ ಸೂಚಯತಿ ।

ಯೇನ ಪ್ರಾದುರಭಾವಿ – ಅಥವಾ ಬಾಧಕವನ್ನು ಪರಿಹರಿಸಿ ಸಾಧಕವನ್ನು ಈಗ ಹೇಳುತ್ತಾರೆ. ಏಕೆಂದರೆ, ದ್ವೈಪಾಯನ ಎಂಬ ಹೆಸರೇ ವೇದವ್ಯಾಸರು ಜನ್ಮವನ್ನು ಪಡೆದಿಲ್ಲ ಪ್ರಾದುರ್ಭಾವವನ್ನು ಹೊಂದಿದ್ದಾರೆ ಎಂದು ಸಾಧನೆ ಮಾಡುತ್ತಿದೆ. ಆದ್ದರಿಂದ ಬೇರೆ ಸಾಧಕಗಳ ಆವಶ್ಯಕತೆಯಾದರೂ ಏನಿದೆ? ಎಂಬ ಅಭಿಪ್ರಾಯದಿಂದ ದ್ವೈಪಾಯನ ಎಂಬ ಶಬ್ದದ ಅರ್ಥವನ್ನು ತೋರಿಸುವ ನೆಪದಿಂದ 'ಯೇನ' ಎಂಬೀ ಪದ್ಯ ಹೊರಟಿದೆ. 'ಯೇನ ಪ್ರಾದುರಭಾವಿ' ಎಂಬೀ ಭಾಗದಿಂದ ದ್ವೈಪಾಯನಶಬ್ದಕ್ಕೆ ಈ ರೀತಿ ವ್ಯುತ್ಪತ್ತಿಯನ್ನು ತಿಳಿಯಬೇಕು – ದ್ವೀಪಃ ಎಂದರೆ ಯಮುನಾನದಿಯ ಮಧ್ಯಪ್ರದೇಶ. ಅದೇ ಆಶ್ರಯವಾಗಿ ಅರ್ಥಾತ್ ಉತ್ಪತ್ತಿಸ್ಥಾನವಾಗಿ ಯಾರಿಗೆ ಇದೆಯೋ ಅವರನ್ನೇ ದ್ವೈಪಾಯನ ಎನ್ನುತ್ತಾರೆ.

## ವಾಸವೀಸೂನು ನಂದಸೂನು ಎಂದು ಕರೆದಿದ್ದು ಹೇಗೆ?

(ರಸರಂಜಿನೀ) — ನನು ವ್ಯಾಸಸ್ಯ ಏವಂವಿಧತ್ವೇ ಕಥಂ ಭವದ್ಭಿರೇವ 'ವಾಸವೀಸೂನಮ್' ಇತಿ ತಜ್ಞಾತತ್ವಮುಕ್ತಮ್? ಇತ್ಯತಃ ಸೂನುಪದಾರ್ಥಂ ವಾ ವಿವೃಣೋತಿ — ಯೇನೇತಿ ॥ ಯೋಜನಾ ತು ಪೂರ್ವವದೇವ । ತಥಾ ಚಾನೇನ ಅಭಿಪ್ರಾಯೇಣ 'ನಂದಸೂನುರಯಂ ಆರ್ತಜನಾನಾಂ ಶರ್ಮದಃ' 'ಜಾತಃ ಪರಾಶರಾದ್ ಯೋಗೀ ವಾಸವ್ಯಾಂ ಕಲಯಾ ಹರೇಃ' ಇತ್ಯಾದಾವಿವ ರೂಪಾದಿಪದಪ್ರಯೋಗೇऽಪಿ ನೋಕ್ತವಿರೋಧ ಇತಿ ।

ಅಲ್ಲ! ವೇದವ್ಯಾಸರಿಗೆ ಈ ರೀತಿ ಪ್ರಾದುರ್ಭಾವವನ್ನು ಹೇಳುವುದಾದರೆ ಹೇಗೆ ತಾನೇ ನೀವೇ 'ವಾಸವೀಸೂನುಂ' (ಗುಣಗಣನಿಲಯಂ ಪತಿಂ ರಮಾಯಾಃ ಜಗದಘದಹನಂ ಚ ವಾಸವೀ-ಸೂನುಮ್ - ಪ್ರಮೇಯದೀಪಿಕಾ) ಎಂದು ಹೇಳಿದ್ದು. ಸತ್ಯವತಿಯ ಮಗ ಎಂದು ಹೇಳಬೇಕಾದರೆ ಸತ್ಯವತಿಯಿಂದ ಜನ್ಮವನ್ನು ಪಡೆದಿರಲೇಬೇಕು ಎಂದಭಿಪ್ರಾಯ. ಅದಕ್ಕಾಗಿ ಸೂನು ಎಂಬ ಪದದ ಅರ್ಥವನ್ನು ಇಲ್ಲಿ ವಿವರಿಸಿದ್ದಾರೆ 'ಯೇನ ಪ್ರಾದುರಭಾವಿ' ಎಂದು. ಮೊದಲು ವ್ಯಾಖ್ಯಾನ-ಮಾಡಿದಾಗ ಮಾಡಿದ ಯೋಜನೆಯಂತೆ ಇಲ್ಲಿಯೂ ತಿಳಿಯಬೇಕು. ಹಾಗಾಗಿ ಇದೇ ಅಭಿಪ್ರಾಯ-ದಿಂದ -

'ಹಂತ ಚಿತ್ರಮಬಲಾ ಶ್ರುಣುತೇದಂ ಹಾರಹಾಸ ಉರಸಿ ಸ್ಥಿತವಿದ್ಯುತ ।
ನಂದಸೂನುಃ ಅಯಂ ಆರ್ತಜನಾನಾಂ ಶರ್ಮದಃ(ನರ್ಮದಃ) ಯರ್ಹಿ ಕೂಜಿತವೇಣುಃ ॥'

- (ಭಾಗ.10.35.4)

ಈ ನಂದನ ಮಗನಾದ ಕೃಷ್ಣನು ದುಃಖಿತರಾದ ಜನರಿಗೆ ಸುಖವನ್ನು ನೀಡುವವನು -ಎಂಬ ಅರ್ಥವುಳ್ಳ ಭಾಗವತವಾಕ್ಯವಿದೆ. 'ಜಾತಃ ಪರಾಶರಾದ್ ಯೋಗೀ ವಾಸವ್ಯಾಂ ಕಲಯಾ ಹರೇಃ' (ಭಾಗ.1.4.14) (ಜಾತಃ = ಅವತೀರ್ಣಃ - ವಿಜಯಧ್ವಜೀಯ) ಎಂಬ ಸ್ಥಳದಲ್ಲಿ ಹೇಗೆ ವ್ಯಾಖ್ಯಾನ-ವಿದೆಯೋ ಹಾಗೆ ಇಲ್ಲಿಯೂ ಮಾಡಬೇಕು.

— ಗೋಪಿಯರು ಪರಸ್ಪರ ಮಾತನಾಡಿಕೊಳ್ಳುತ್ತಿದ್ದಾರೆ — ಹೇ ಅಬಲೆಯರೇ। ಇದೊಂದು ದೊಡ್ಡ ಆಶ್ಚರ್ಯಕರವಾದ ಸಂಗತಿ. ಇದನ್ನು ಕೇಳಿ. ಶ್ರೀಕೃಷ್ಣನ ಎದೆಯು ಹಾರದಿಂದ ಶೋಭಿಸುತ್ತಿದೆ. ಆ ಎದೆಯಲ್ಲಿ ಮಿಂಚಿನಂತೆ ಹೊಳೆವ ಲಕ್ಷ್ಮಿಯನ್ನು ಇಟ್ಟುಕೊಂಡಿದ್ದಾನೆ. ಇವನು ವೇಣುಗಾನ ಮಾಡಿ ದುಃಖದಿಂದ ಬಳಲಿದ ಜನರಿಗೆ ಸುಖವನ್ನು ನೀಡುತ್ತಾನೆ.

(ಸತ್ಯಧರ್ಮತೀರ್ಥೀಯ) — ಹೇ ಅಬಲಾ। ಹಾರಭಾಸಃ = ಹಾರಸ್ಯ ಭಾ ಯಸ್ಯ ಭಾ, ಯೇನ ತಸ್ಯ ಕೃಷ್ಣಸ್ಯ ಇದಂ ಚಿತ್ರಂ ಕರ್ಮ ಶೃಣುತ ಇತ್ಯನ್ವಯಃ । ಹಂತ = ಹರ್ಷಃ । ಹಾರಹಾಸ ಇತಿ ಪಾಠೇ

ಹಾರವತ್ ಮುಕ್ತಾಸರವತ್ ಶುಭ್ರಃ ಹಾಸಃ ಯಸ್ಯ ಸಃ ಇತಿ ನಂದನಂದನವಿಶೇಷಣಮ್ । ಹಾರಃ = ಮುಕ್ತಾವಲೀ । ಹಾರೋ ಮುಕ್ತಾವಲೀ ಇತಿ ಅಮರವಿಶ್ವೌ । ಸ್ಥಿತಾ ವಿದ್ಯುದ್ವಿಶೇಷೇಣ ದ್ಯೋತಮಾನೇತಿ ವಿದ್ಯುದ್ರಮಾ ಯಸ್ಯ ಸಃ । ತತ್-ಸ್ಥಾನಮಾಹ — ಉರಸೀತಿ ॥ ಆರ್ತಜನಾನಾಂ ಶರ್ಮದಃ ಸುಖದೋಽಯಂ ನಂದಸೂನುರ್ಯರ್ಹಿ ಯದಾ ಕೂಜಿತವೇಣುಃ ತದಾ ವೃಂದಶಃ ಸಂಘಶೋ ವ್ರಜವೃಷೋ ವ್ರಜೇಂದ್ರೋ ನಂದಸೂನುರಿತಿ ವಾ ।

## ಹಲವು ರೀತಿಯಾದ ಪ್ರಶ್ನೋತ್ತರಗಳು

(ರಸರಂಜಿನೀ) — ಯದಪ್ಯುಕ್ತಂ ಪ್ರಯೋಜನಾಭಾವೇನ ನಿರ್ಮಾಣಾಯೋಗ ಇತಿ । ತತ್ರೋ-ತ್ತರಂ — **ಕರುಣಯಾ ಇತಿ** ॥ ಸ್ವಪ್ರಯೋಜನಾಭಾವೇಽಪಿ ಕ್ಲಿಶ್ಯಮಾನಜನೇಷು ಕರುಣಯಾ ನಿರ್ಮಾಣೋಪಪತ್ತಿರಿತಿ । ಯದಾ ಕರುಣಯೈವ ನಿರ್ಮಾಣಸಂಭವಸ್ತದಾ ಸುತರಾಂ ಸಂಜಾತ-ಕರುಣಗೀರ್ವಾಣಗಣಪ್ರಾರ್ಥನಯಾ ಇತ್ಯೇವಾರ್ಥ ಇತಿ ।

ನನು ಶ್ರೀಹರಿರ್ದಯಯಾ ದಯಾಲುಪ್ರಾರ್ಥನಯಾ ಚ ಶಾಸ್ತ್ರಂ ಚಕ್ರ ಇತ್ಯನುಪಪನ್ನಮ್ । ಹರೇರ್ಹರಿದಾಸಾನಾಂ ಚ ಪ್ರಾಣಿಷು ದಯೋತ್ಪತ್ತೌ ನಿಮಿತ್ತಾಭಾವಾತ್ । ಕ್ಲಿಶ್ಯಮಾನಜನಾನ್ ಖಲು ದೃಷ್ಟ್ವಾ ದಯೋತ್ಪದ್ಯತೇ ದಯಾಲೂನಾಮ್ । ನ ಚ ಸ್ವಯೋಗ್ಯಗುಣೋಪಸಂಹಾರೇಣ ಶ್ರೀಹರಿಂ ಧ್ಯಾಯತಾಂ ಕ್ಲೇಶಸಂಭಾವನಾಪಿ ಸಂಭವತಿ ಯೇಽಪಿ (ತ್ರಲರಯೇಣ) ಭವಂತಿ । ನ ತೇ ಪೃಥಗ್ ಜನವತ್ ಅತಿವಿಘ್ನಕರಾ ಭವಂತಿ । ನ ಚ ಕರುಣಾಸ್ವಭಾವ ಏವ । ಇತಃ ಪೂರ್ವಮಪಿ ತನ್ನಿರ್ಮಾಣಾಪತ್ತೇಃ । ಸ್ವಭಾವಸ್ಯ ತದಾನೀಮನಪಾಯಾತ್ । ಚಕ್ರ ಇತಿ ಆತ್ಮನೇಪದಪ್ರಯೋಗೋಽಪ್ಯನುಪಪನ್ನಃ । ಸ್ವಪ್ರಯೋಜನಾಭಾವಸ್ಯ ಭವದ್ಭಿರೇವಾಂಗೀಕೃತ-ತ್ವಾತ್ । ನ ಚ ದಯಾಲೂನಾಂ ಪರಪ್ರಯೋಜನಮಪಿ ಸ್ವಪ್ರಯೋಜನಮಿವೇತಿ ವಾಚ್ಯಮ್ । ಪರಪ್ರಯೋಜನಸ್ಯಾಪ್ಯದರ್ಶನಾತ್ ಇತ್ಯತ ಆಹ — **'ಯೇನ ಪರಂ ತತ್ವಂ ಪ್ರಾಕಾಶಿ' 'ಧ್ವಾಂತಂ ಧ್ವಂಸಮನಾಯಿ' 'ಸಾಧುನಿಕರಃ ಸನ್ಮಾರ್ಗಗೋಽಕಾರಿ'** ಇತಿ । ಚಶಬ್ದೋಽತ್ರ ಸಮು-ಚ್ಚಯಾರ್ಥೋ ಮುಕ್ತಿಗಶ್ಚೇತಿ ।

ಇನ್ನು ಕರುಣಯಾ ಎಂಬುದಕ್ಕೆ ಹೀಗೆ ಅವತಾರಿಕೆಯನ್ನು ನೀಡಿದ್ದಾರೆ — ಈ ಹಿಂದೆ ಪ್ರಯೋಜನವಿಲ್ಲದಿರುವುದರಿಂದ ಭಗವಂತನು ಯಾವುದೇ ವಸ್ತುವನ್ನು ನಿರ್ಮಾಣ ಮಾಡಲು ಸಾಧ್ಯವಿಲ್ಲ ಎಂಬ ಆಕ್ಷೇಪಕ್ಕೆ —

ಉತ್ತರ — ತನಗೆ ಪ್ರಯೋಜನವಿಲ್ಲದಿದ್ದರೂ ಕಷ್ಟಪಡುವ ಜನರ ಮೇಲಿನ ಕರುಣೆಯಿಂದ ಶಾಸ್ತ್ರನಿರ್ಮಾಣವನ್ನು ಮಾಡಿದ್ದಾರೆ ಎಂದು. ಹೀಗೆ ಯಾವಾಗ ತನಗಿರುವ ಕರುಣೆಯಿಂದಲೇ

ನಿರ್ಮಾಣಮಾಡುವುದು ಕೂಡುವುದೋ, ಆಗ ಸಜ್ಜನರ ಮೇಲೆ ಕಾರುಣ್ಯವುಳ್ಳ ದೇವತೆಗಳು ಪ್ರಾರ್ಥನೆಮಾಡಿದಾಗ ನಿರ್ಮಾಣ ಮಾಡದಿರಲು ಹೇಗೆ ಸಾಧ್ಯ?

ಅಲ್ಲ। ಶ್ರೀಹರಿಯು ಕಾರುಣ್ಯದಿಂದ ಹಾಗೂ ಕಾರುಣ್ಯವುಳ್ಳ ಬ್ರಹ್ಮಾದಿಗಳ ಪ್ರಾರ್ಥನೆಯಿಂದ ಶಾಸ್ತ್ರವನ್ನು ರಚನೆ ಮಾಡಿದ್ದಾನೆ ಎನ್ನುವುದು ಸರಿಯಲ್ಲ. ಏಕೆಂದರೆ ಹರಿಗೆ ಹಾಗೂ ಹರಿದಾಸರಿಗೆ ಜೀವಿಗಳ ಮೇಲೆ ಕಾರುಣ್ಯ ಬರುವುದಕ್ಕೆ ಯಾವುದೇ ಕಾರಣವಿಲ್ಲವಾದ್ದರಿಂದ. ಕಷ್ಟಪಡುವ ಜನರನ್ನು ನೋಡಿ ತಾನೇ ಕಾರುಣ್ಯ ದಯಾಳುಗಳಿಗೆ ಹುಟ್ಟಬೇಕು. ಕಷ್ಟವಾದರೋ ತಮ್ಮ ಯೋಗ್ಯತಾನುಗುಣವಾದ ಗುಣಗಳನ್ನು ಹರಿಯಲ್ಲಿ ಚಿಂತನೆ ಮಾಡುವವರಿಗೆ ಇರುವುದಿಲ್ಲ. ಇದ್ದರೆ ಅವರನ್ನು ನೋಡಿ ಕಾರುಣ್ಯ ಉಕ್ಕಿಬಂದೀತು। ಅಲ್ಲ। ಸ್ವಯೋಗ್ಯತೆಗನುಗುಣವಾಗಿ ಹರಿಯಲ್ಲಿ ಗುಣವನ್ನು ಉಪಸಂಹಾರ ಮಾಡಲು ಬರದಿರುವ ಸಾತ್ವಿಕರ ಮೇಲೆ ಉಂಟಾಗುವ ಕಷ್ಟವನ್ನು ನೋಡಿ ಕಾರುಣ್ಯ ಉಕ್ಕಿಬಂದೀತು ಎಂದು ಹೇಳೋಣ ಎಂದರೆ, ಇದು ಸರಿಯಲ್ಲ. ಏಕೆಂದರೆ ಕಾರುಣ್ಯಬರುವ ರೀತಿಯ ಅಂತಹ ಕಷ್ಟಗಳು ಅವರಿಗೆ ಇರುವುದಿಲ್ಲ.

ಅಲ್ಲ। ಭಗವಂತನಲ್ಲಿ ಕಾರುಣ್ಯವೆಂಬ ಗುಣವು ಸ್ವಭಾವವೇ ಆಗಿದೆ. ಹಾಗಾದರೆ ಈಗ ಶಾಸ್ತ್ರರಚನೆ ಮಾಡುವುದಕ್ಕಿಂತ ಹಿಂದಿನ ಕಾಲದಲ್ಲಿಯೇ ಶಾಸ್ತ್ರರಚನೆ ಆಗಬೇಕಾಗಿತ್ತು. ಕಾರುಣ್ಯವು ಯಾವಾಗಲೂ ಸ್ವಭಾವವಾಗಿ ಇದ್ದುದ್ದರಿಂದ. ಸ್ವಭಾವವು ನಿತ್ಯಸಿದ್ಧವಾಗಿದೆ.

ಅಲ್ಲದೇ ಚಕ್ರೇ ಎಂಬ ಆತ್ಮನೇಪದಪ್ರಯೋಗವು ಮಾಡಿದ್ದು ಸರಿಯಲ್ಲ. ತಮಗೆ ಪ್ರಯೋಜನ-ವಿಲ್ಲವೆಂದು ನೀವೇ ಒಪ್ಪಿರುವುದರಿಂದ. ಅಲ್ಲ। ದಯಾಶಾಲಿಗಳಿಗೆ ಬೇರೆಯವರ ಪ್ರಯೋಜವೂ ತಮ್ಮ ಪ್ರಯೋಜನದಂತೆ ಎಂದು ಹೇಳೋಣ. ಇದೂ ಸರಿಯಲ್ಲ. ಪರಪ್ರಯೋಜನವು ಏನೂ ಇಲ್ಲವಾದ್ದರಿಂದ. ಈ ಪ್ರಶ್ನೆಗಳಿಗೆ ಉತ್ತರವಾಗಿ 'ಯೇನ' ಎಂಬ ಪದ್ಯ ಹೊರಟಿದೆ.

ಯಾವ ವೇದವ್ಯಾಸರಿಂದ ಪರತತ್ವದ ಪ್ರಕಾಶವಾಯಿತೋ ಹಾಗೂ ನಿಬಿಡವಾದ ಕತ್ತಲೆಯು ನಿವಾರಿಸಲ್ಪಟ್ಟಿತೋ ಸಜ್ಜನರ ಸಮೂಹವು ಒಳ್ಳೆಯ ಮಾರ್ಗದಲ್ಲಿ ಹೋಗುವಂತೆ ಮಾಡಲ್ಪಟ್ಟಿತೋ ಎಂದು ಹೇಳಿದ್ದರಿಂದ ಪರತತ್ವಪ್ರಕಾಶ ಕತ್ತಲೆಯ ನಿರಾಸ ಹಾಗೂ ಸನ್ಮಾರ್ಗಪ್ರಕಾಶಗಳು ಇವುಗಳನ್ನೇ ಪರರ ಪ್ರಯೋಜನವೆಂದಂತಾಯಿತು.

ಈ ಶ್ಲೋಕದಲ್ಲಿ 'ಸಾಧುನಿಕರಶ್ಚಾಕಾರಿ' ಎಂಬಲ್ಲಿರುವ ಚಶಬ್ದವು ಸಮುಚ್ಚಯಾರ್ಥಕವಾಗಿದೆ. ಸಜ್ಜನರ ಸಮೂಹವನ್ನು ಮುಕ್ತಿಮಾರ್ಗದಲ್ಲಿ ಹೋಗುವಂತೆ ವೇದವ್ಯಾಸರು ಮಾಡುವವರು ಎಂದರ್ಥ ಬರುವುದರಿಂದ ಮುಕ್ತಿಮಾರ್ಗದ ಸಂಪಾದನೆ ಎನ್ನುವುದು ಪರರಿಗೆ ಸಿಗುವ ಪ್ರಯೋಜನವಾಗಿದೆ.

### ಶಾಸ್ತ್ರಶಬ್ದದಿಂದ ಏನನ್ನು ಗ್ರಹಿಸಬೇಕು?

(ರಸರಂಜನೀ) — ನನು ಶಾಸ್ತ್ರಶಬ್ದೇನ ಬ್ರಹ್ಮಮೀಮಾಂಸಾಶಾಸ್ತ್ರಂ ತನ್ನಿರ್ಣೇತವ್ಯಾರ್ಥಂ ವೇದಾದಿಕಂ ವಿವಕ್ಷಿತಮ್ । ನಿರ್ಣೇಯಮಾತ್ರಗ್ರಹಣೇ ನಿರ್ಣಾಯಕಶಾಸ್ತ್ರನಿರ್ಮಾಣಪ್ರಸಂಗೇ-ನಾವತಾರಪ್ರಯೋಜನಾಸಿದ್ಧೇಃ । ನಿರ್ಣಾಯಕಸ್ಯ ನಿರ್ಣೇಯಸಿದ್ಧ್ಯುತ್ತರಕಾಲೀನತ್ವೇನ ತನ್ಮಾತ್ರ-ಗ್ರಹಣಾಯೋಗಾತ್ ।

ಚಕ್ರೇ ಶಾಸ್ತ್ರಮನುತ್ತಮಮ್ — ಎಂಬ ಅನುವ್ಯಾಖ್ಯಾನದ ಮೂರನೆಯ ಪದ್ಯದಲ್ಲಿ ವೇದವ್ಯಾಸರು ಶಾಸ್ತ್ರ ರಚನೆ ಮಾಡಿದ್ದಾರೆಂದು ಹೇಳಿದ್ದಾರೆ. ಅಲ್ಲಿ ಕೇವಲ ನಿರ್ಣೇಯಶಾಸ್ತ್ರವಾದ ವೇದವನ್ನು ತೆಗೆದುಕೊಂಡರೆ ನಿರ್ಣಾಯಕಶಾಸ್ತ್ರವನ್ನು ನಿರ್ಮಾಣಮಾಡಲು ಅವತಾರಮಾಡಿದ್ದಾರೆಂಬ ಪ್ರಯೋಜನ ಸಿದ್ಧವಾಗುತ್ತಿರಲಿಲ್ಲ. ಏಕೆಂದರೆ ನಿರ್ಣಾಯಕಶಾಸ್ತ್ರವು ನಿರ್ಣೇಯಶಾಸ್ತ್ರದ ಸಿದ್ಧಿಯ ನಂತರ ಮಾಡತಕ್ಕದ್ದಾಗಿರುವುದರಿಂದ ಎಂದು ಭಾವ. ಹಾಗಾಗಿ ಶಾಸ್ತ್ರಶಬ್ದದಿಂದ ಕೇವಲ ನಿರ್ಣೇಯಶಾಸ್ತ್ರವನ್ನು ಸ್ವೀಕರಿಸಬಾರದು.

### ಹಿಂದೆ ಮಾಡಿದ ಎಲ್ಲ ಪ್ರಶ್ನೆಗಳಿಗೆ ಉತ್ತರ

(ರಸರಂಜನೀ) — ಅಯಮತ್ರ ಸಮುದಾಯಾರ್ಥಃ । ಆಸುರಪ್ರಕೃತಯೋ ಹಿ ಭೂಮಾವ-ವತೀರ್ಯ ಸೌಗತಚಾರ್ವಾಕಮತಾನಿ ಪ್ರಥಿತವಂತಃ, ತದಾ ಶ್ರೀವಾಸುದೇವೋ ಯುಗಕಾರ್ಯ-ಪ್ರವೃತ್ತಯೇ ಕ್ಷಣದಾನುವೃತ್ತಯೇ ಸವಿತೇವ ಸತಾಂ ಮಾನಸಾತ್ ತಿರೋಬಭೂವ । ತಥೈವ ಚ ದುರ್ದರ್ಶನೋತ್ಥಂ ಮಿಥ್ಯಾಜ್ಞಾನಾದಿರೂಪಂ ತಮೋ ಮಾನಸೇ ವ್ಯಾಪ್ತಮ್, ತತಃ ಶ್ರೀಹರಿ-ಭಕ್ತ್ಯಾದಿರೂಪಕೈವಲ್ಯಮಾರ್ಗಾತ್ ಸಂತೋ ಭ್ರಷ್ಟಾಃ, ಪಶುಪ್ರಾಯಾ ಭೋಗಮಾತ್ರನಿರತಾ ಬಭೂವುಃ । ತತಃ ಸಂಪ್ರಾಪ್ತಂ ತೇಷಾಂ ಭಯಮಾಲೋಕ್ಯ ಜಾತಕರುಣೈರಮರೈರ್ಥಿತೋ ದಯಾಲುನಾಥೋ ವ್ಯಾಸರೂಪೇಣ ಭೂವಲಯೇ ಸತ್ಯವತ್ಯಾಮ್ ಅವತೀರ್ಯ, ಅಪ-ಪಾಠಾದಿನಾ ತಿರೋಹಿತಾನ್ ವೇದಾನ್ ವ್ಯಂಜಯಿತ್ವಾ, ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ತದುಪಬೃಂಹಣಾರ್ಥಾನ್ ಅನ್ಯಾಂಶ್ಚ ಗ್ರಂಥಾನ್ ಪ್ರಕಟಯಿತ್ವಾ, ಸ್ವವಾಕ್ಯೈರ್ಯಥಾಯೋಗಂ ಪರತತ್ವಂ ಜ್ಞಾಪಯಿತ್ವಾ ಮಾನಸೇ ಸ್ಥಿತಮುಕ್ತತಮಃ ತಸ್ಮಾದ್ ವ್ಯಾಪಯಿತ್ವಾಽಸತಃ ಸದುಪ-ದ್ರವರೂಪವ್ಯಾಪಾರಾನ್ ನಿವರ್ತಯಿತ್ವಾ ದುರ್ಮಾರ್ಗಂ ದುರ್ಗತಿಂ ಚ, ಸತಃ ಸುಮಾರ್ಗಂ ಸುಗತಿಂ ಚ ಪ್ರಾಪಯಿತ್ವಾ ಪ್ರಭಾಸತ ಇತಿ ।

ಭಗವತ್ತಿರೋಭಾವಾದಿರೂಪಸ್ಯ ಕಾದಾಚಿತ್ಕಸ್ಯ ಕ್ಲೇಶಕಾರಣಸ್ಯ ತಜ್ಞಾನಾಜ್ಞಾನನಿರಸನಭಕ್ತ್ಯಾದಿ-ರೂಪಪರಪ್ರಯೋಜನಸ್ಯ ಚ ಸೂಚನೇನ ದಯಾಲುತ್ವೇಽಪೀದಾನೀಮೇವ ಕ್ಲೇಶವಿಶೇಷಪ್ರಾಪ್ತ್ಯಾ

ತನ್ನಿವೃತ್ತಯೇ ಇದಾನೀಮೇವ ತನ್ನಿರ್ಮಾಣೋಪಪತ್ತಿರಿತಿ ಆದ್ಯಶಂಕಾಪರಿಹಾರಃ । ದಯಾಲೂನಾಂ ತಸ್ಯೈವ ಸ್ವಪ್ರಯೋಜನತುಲ್ಯತ್ವೇನ ಆತ್ಮನೇಪದಪ್ರಯೋಗೋಪಪತ್ತಿರಿತಿ ದ್ವಿತೀಯಶಂಕಾನಿರಾಸಶ್ಚೇತಿ ।

ಒಟ್ಟು ಸಾರಾಂಶ ಹೀಗಿದೆ – ಅಸುರಸ್ವಭಾವದವರು ಭೂಮಿಗೆ ಬಂದು ಬೌದ್ಧ ಚಾರ್ವಾಕ ಮೊದಲಾದ ಮತಗಳನ್ನು ಪ್ರವರ್ತಿಸಿದರು ಎಂಬುದು ಪ್ರಸಿದ್ಧವಷ್ಟೇ. ಆಗ ಶ್ರೀವಾಸುದೇವನು ಯುಗಧರ್ಮದ ಪ್ರವೃತ್ತಿಗೋಸ್ಕರ ಅಸ್ತಂಗತನಾಗುವ ಸೂರ್ಯನಂತೆ ಕ್ಷಣಕಾಲ ಸಜ್ಜನರ ಮನಸ್ಸಿನಿಂದ ಮರೆಯಾದನು. ಆಗಲೇ ಕೆಟ್ಟ ದರ್ಶನ(ಮತ)ಗಳಿಂದ ಬಂದ ಮಿಥ್ಯಾಜ್ಞಾನವೇ ಮೊದಲಾದ ಕತ್ತಲೆಯು ಸಜ್ಜನರ ಮನಸ್ಸಿನಲ್ಲಿ ಹರಡಿತು. ಅನಂತರ ಹರಿಭಕ್ತಿ ಮುಂತಾದ ಮೋಕ್ಷಮಾರ್ಗದಿಂದ ಸಜ್ಜನರು ಭ್ರಷ್ಟರಾಗಿ ಪಶುಗಳಂತೆ ಭೋಗದಲ್ಲಿ ಮಾತ್ರ ಆಸಕ್ತರಾಗಿದ್ದರು. ಅನಂತರ ಅವರಿಗೆ ಬಂದ ಭಯವನ್ನು ನೋಡಿ ದೇವತೆಗಳಿಗೆ ಕಾರುಣ್ಯವು ಉಂಟಾಯಿತು. ಆ ದೇವತೆಗಳ ಪ್ರಾರ್ಥನೆಯಂತೆ ಕಾರುಣ್ಯಮೂರ್ತಿಯಾದ ದೇವರು ವೇದವ್ಯಾಸರ ರೂಪದಿಂದ ಭೂಮಿಯಲ್ಲಿ ಸತ್ಯವತೀದೇವಿಯಿಂದ ಅವತಾರಮಾಡಿ ಅಪಪಾಠ ಮೊದಲಾದವುಗಳಿಂದ ಮುಚ್ಚಲ್ಪಟ್ಟ ವೇದಗಳನ್ನು ವ್ಯಕ್ತಪಡಿಸಿದರು. ಅದರ ಅರ್ಥನಿರ್ಣಯಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ಹಾಗೂ ಇತರ ತದುಪಕಾರಿಯಾದ ಗ್ರಂಥಗಳನ್ನು ಪ್ರಕಟಪಡಿಸಿದರು. ಹೀಗೆ ಪರತತ್ವವನ್ನು ತಮ್ಮ ವಾಕ್ಯಗಳಿಂದ ತಿಳಿಸಿಕೊಟ್ಟು ಸಾತ್ವಿಕರ ಮನಸ್ಸಿನಲ್ಲಿ ಇದ್ದ ತಮಸ್ಸನ್ನು ನಾಶ ಮಾಡಿ ದುರ್ಮಾರ್ಗ ಹಾಗೂ ದುರ್ಗತಿಯನ್ನು ಅಸಜ್ಜನರಿಗೆ ಹಾಗೂ ಸಜ್ಜನರಿಗೆ ಸುಮಾರ್ಗವನ್ನು ಸುಗತಿಯನ್ನು ಹೊಂದುವಂತೆ ಮಾಡಿ ಶೋಭಿಸಿದರು.

'ಜನರ ಕಷ್ಟಗಳಿಗೆ ಕಾರಣವನ್ನಾಗಿ ಭಗವಂತನ ಮರೆಯಾಗುವಿಕೆಯನ್ನು ಹೇಳಿದರು. ಹಾಗೆ ಭಗವಂತನ ಮರೆಯಾಗುವಿಕೆಯಿಂದ ಅವನ ಜ್ಞಾನರಹಿತರಾಗಿ ಅಜ್ಞಾನನಿರಸನವಾಗದೆ ಭಕ್ತ್ಯಾದಿ ರಹಿತರಾಗಿದ್ದರು' – ಹೀಗೆ ಸೂಚಿಸುವುದರಿಂದ ಇದೇ ಕಾರಣಕ್ಕಾಗಿ, ಈ ಕಷ್ಟದ ಸಮಯದಲ್ಲಿ ದಯಾಳುಗಳು ಸಜ್ಜನರಿಗೆ ಬಂದ ಕಷ್ಟಗಳನ್ನು ಪರಿಹರಿಸುವುದಕ್ಕೆ ಶಾಸ್ತ್ರನಿರ್ಮಾಣವನ್ನು ಮಾಡಿದರು. ಇದು ಮೊದಲನೆಯ ಶಂಕೆಗೆ ಪರಿಹಾರ.

ಇನ್ನು ದಯಾಳುಗಳಿಗೆ ಪರರ ಪ್ರಯೋಜನವೇ ಸ್ವಪ್ರಯೋಜನಕ್ಕೆ ಸಮಾನವಾದದ್ದರಿಂದ 'ಚಕ್ರೇ' ಎಂದು ಆತ್ಮನೇಪದವನ್ನು ಪ್ರಯೋಗಿಸಿದ್ದು ಉಚಿತವಾಗಿದೆ. ಇದರಿಂದ ಎರಡನೇ ಶಂಕೆ ಪರಿ-ಹಾರವಾಯಿತು.

### ಸೂರ್ಯ ಹಾಗೂ ವೇದವ್ಯಾಸರ ಕಾರ್ಯಗಳ ಸಾಮ್ಯವೈಷಮ್ಯಚಿಂತನೆ

(ರಸರಂಜನೀ) – ಸೂರ್ಯೋ ಹಿ ಭೂಪ್ರದೇಶೇ ಪ್ರಾದುರ್ಭವತಿ । ತತಃ ಸ್ವಕರನಿಕರಂ

ವಿಸ್ತಾರಯತಿ । ಪಂಕಜಂ ಪ್ರಬೋಧಯತಿ । ಪದಾರ್ಥಸಾರ್ಥಂ ಪ್ರಕಾಶಯತಿ । ಧ್ವಾಂತಂ ಧುನೋತಿ । ಸಾರ್ಥಸಾರ್ಥಂ ಸ್ವಾರ್ಥಸಾಧನಸಮರ್ಥಂ ಕರೋತಿ । ಚೋರನಿಕರಾಂಶ್ಚ ಸ್ವ-ವ್ಯಾಪಾರತೋ ವ್ಯಾವರ್ತಯತಿ । ಸರ್ವಥಾಽಪ್ಯುದಯಾಸ್ತಮಯೋರ್ಮಾನಸಗಿರಿಂ ನ ತ್ಯಜತೀತಿ ಪ್ರಸಿದ್ಧಮ್ । ತತ್ರ ಯದಿ ತ್ವಂ ಮೇ ಮಾನಸಂ ತ್ಯಜಸಿ ತದಾ –

'ಜ್ಞಾನಸೂರ್ಯಮೃತೇ ಬ್ರೂಯಾತ್ ತಮೇಕಂ ಬಾದರಾಯಣಮ್'

— (3-3-ಶ್ಲೋ28 ಅನುವ್ಯಾಖ್ಯಾನ)

ಇತ್ಯಾದಿ ನಿಖಿಲನಿಜಭಜಕಜನಸಿದ್ಧಾ ಸೂರ್ಯತ್ವಪ್ರಸಿದ್ಧಿರೇವ ನ ಸಿದ್ಧ್ಯೇದಿತಿ ಭಾವೇನ ಭಾವಭರೇಣ ಭಾವೇ ತಸ್ಯ ಸದಾಭಾವಮೇವ ಭಾವಯತೇ । ತೇನ ವ್ಯಾಸದಿವಾಕರೇಣ ಮಾನಸಂ ಸತತಂ ಮಾ ತ್ಯಾಜ । ಮಾಙ್-ಯೋಗೇ ಲುಙಃ ಸರ್ವಲಕಾರಾಪವಾದಕತ್ವೇನ । ಉಪಲಕ್ಷಣಮೇತತ್ । ವಾಗಪಿ ಗ್ರಾಹ್ಯಾ । ದೃಷ್ಟಾಂತಸೌಕರ್ಯಾಯ ಮಾನಸಸ್ಯ ಕಂಠತೋ ಗ್ರಹಣಮ್ । ಸಂಭವತಿ ಸೂರ್ಯಸ್ಯ ಸ್ವನಾಯಕಮರ್ಯಾದಾರಕ್ಷಣಾಯ ವಾಽಪೇಕ್ಷಿತಪ್ರಾಪ್ತಯೇ ವಾ ಏಕತ್ರೈವಾವಸ್ಥಾನಮ್ । ಅಸ್ಯ ಪುನಃ ಅನನ್ಯಾಧಿಪತೇರೇವ ಆಪ್ತಸಮಸ್ತಕಾಮಸ್ಯ ಕಥ-ಮೇಕತ್ರೈವಾವಸ್ಥಾನಮ್ । ನ ಚಾಸಂಭಾವಿತಂ ಕೋಽಪಿ ಕುಶಲಃ ಕಾಮಯತ ಇತ್ಯತ ಉಕ್ತಮ್ — **ಕರುಣಯೈವೇತಿ** ॥ ಸ್ವೇಚ್ಛಯೈವ ನಾನ್ಯಪ್ರಯತ್ನೇನ ಇತ್ಯರ್ಥಃ । ಸಂಭವತಿ ಸ್ವತಂತ್ರಸ್ಯಾಪಿ ಕರುಣಯಾವಸ್ಥಾನಂ ಸೈವ ಕಥಮಿತ್ಯತ ಉಕ್ತಂ — **ಮೇ ಮೋಕ್ಷಯೋಗ್ಯಸ್ಯೇತಿ**। ('")ಮೋಕ್ಷ-ಯೋಗ್ಯೇಷು ಅನಾದಿತ ಏವ ನಿರವಗ್ರಹಾನುಗ್ರಹೋಽಸ್ತೀತಿ ಪ್ರಸಿದ್ಧಮ್ । ಅನೇನ 'ಸತಾಂ ಭೂತಿದಃ' ಇತ್ಯೇತದ್ ವಿವೃತಮ್ । ಭೂತಿಶಬ್ದಾರ್ಥಸ್ಯ ಜ್ಞಾನವೈರಾಗ್ಯಾದೇಃ ತದ್ದಾನಪ್ರಕಾರಸ್ಯ ಚ ಸ್ಫುಟೀಕರಣಾತ್ ಅನೇನೈವ 'ವ್ಯಾಸದಿವಾಕರೇಣ' ಇತಿ ಸ್ತೋಕ್ತವ್ಯಾಸಪದಾರ್ಥೋಽಪಿ ವ್ಯಾಖ್ಯಾತಃ । ವಿಸ್ತಾರಕಸ್ಯ ವಿಸ್ತೃತತ್ವಾತ್ ।

ಸೂರ್ಯನಾದರೋ ಭೂಮಿಯಲ್ಲಿ ಪ್ರಾದುರ್ಭಾವ ಹೊಂದುವನು. ಅನಂತರ ತನ್ನ ಕಿರಣಗಳನ್ನು ಎಲ್ಲ ಕಡೆ ವಿಸ್ತಾರಪಡಿಸುವನು. ಕಮಲಗಳನ್ನು ಅರಳಿಸುವನು. ಪದಾರ್ಥಗಳನ್ನು ಪ್ರಕಾಶ-ಪಡಿಸುವನು. ಕತ್ತಲೆಯನ್ನು ನಾಶಮಾಡುವನು. ಜನರ ಸಮೂಹಕ್ಕೆ ತಮ್ಮ ಅರ್ಥವನ್ನು ಸಾಧನೆ ಮಾಡುವುದಕ್ಕೆ ಸಾಮರ್ಥ್ಯವನ್ನು ನೀಡುವನು. ಕಳ್ಳರ ಗುಂಪನ್ನು ತಮ್ಮ ವ್ಯಾಪಾರದಿಂದ ನಿವೃತ್ತಿ-ಗೊಳಿಸುವನು. ಸೂರ್ಯನು ಉದಯಕಾಲ ಅಥವಾ ಮುಳುಗುವ ಕಾಲದಲ್ಲಿ ತಾನು ಆಶ್ರಯಿಸಿದ ಪರ್ವತವನ್ನು ಎಂದಿಗೂ ಬಿಡುವುದಿಲ್ಲ. ಇದರಂತೆ ವೇದವ್ಯಾಸರೆಂಬ ಸೂರ್ಯರೇ ನೀವು ಒಂದು ವೇಳೆ ನನ್ನ ಮನಸ್ಸನ್ನು ತ್ಯಾಗಮಾಡಿದರೆ 'ಜ್ಞಾನಸೂರ್ಯಂ ಋತೇ ಬ್ರೂಯಾತ್ ತಮೇಕಂ

ಬಾದರಾಯಣಮ್' - ಮುಂತಾದ ನಿನ್ನನ್ನು ಭಜಿಸುವ ಎಲ್ಲ ಭಕ್ತಜನರಲ್ಲಿ ಪ್ರಸಿದ್ಧವಾದ ಸೂರ್ಯನ ಹೋಲಿಕೆಯು ನಿಮಗೆ ಸಿದ್ಧವಾಗುತ್ತಿರಲಿಲ್ಲ ಎಂಬ ಭಾವನೆಯಿಂದ ಭಕ್ತಿಯ ಪರಾಕಾಷ್ಠತೆಯಿಂದ ಯಾವಾಗಲೂ ವೇದವ್ಯಾಸರ ಸನ್ನಿಧಾನವನ್ನು ಪ್ರಾರ್ಥನೆ ಮಾಡಿದ್ದಾರೆ.

'ಯೇನ' ಎಂಬ ಶ್ಲೋಕದಲ್ಲಿರುವ ಶಬ್ದದ ಪ್ರತಿಯಾಗಿ 'ತೇನ' ಎಂಬ ಶಬ್ದವನ್ನು ಇಟ್ಟುಕೊಂಡಾಗ ಹೀಗೆ ಅನ್ವಯಿಸಬೇಕು. 'ತೇನ ವ್ಯಾಸದಿವಾಕರೇಣ ಸತತಂ ಮಾನಸಂ ಮಾ ತ್ಯಾಜ' - ಆ ವೇದವ್ಯಾಸರೆಂಬ ಸೂರ್ಯನು ಸದಾ ನನ್ನ ಮನಸ್ಸನ್ನು ತ್ಯಾಗಮಾಡದೇ ಇರಲಿ - ಎಂದು. ಮಾಙ್ ಎಂಬ ಶಬ್ದದ ಸಂಬಂಧವಿದ್ದಾಗ ಲುಙ್‌ಲಕಾರವು ಎಲ್ಲ ಲಕಾರಗಳಿಗೆ ಅಪವಾದವಾಗಿ ಬರುವುದರಿಂದ ನ ತ್ಯಜ್ಯತಾಂ ಎಂಬ ಅರ್ಥದಲ್ಲಿ 'ಮಾ ತ್ಯಾಜ' ಎಂಬ ಪದವಿದೆ. ಒಟ್ಟಿನಲ್ಲಿ ಲೋಟ್ ಅರ್ಥದಲ್ಲಿ ಲುಙ್‌ಲಕಾರದ ಪ್ರಯೋಗ ಇಲ್ಲಿ ಆಗಿದೆ. ಇದು ಉಪಲಕ್ಷಣ. ಮನಸ್ಸಿನ ಜೊತೆಗೆ ವಾಗಿಂದ್ರಿಯವನ್ನೂ ಗ್ರಹಿಸಬೇಕು. ಕೇವಲ ದೃಷ್ಟಾಂತದ ಸೌಕರ್ಯಕ್ಕಾಗಿ ಮಾನಸ ಎಂಬ ಪದವನ್ನು ಕಂಠತಃ ಹೇಳಿದ್ದು.

ಸೂರ್ಯನು ತನ್ನ ಅಪೇಕ್ಷಿತಲಾಭಕ್ಕಾಗಿ ಅಥವಾ ತನ್ನಲ್ಲಿರುವ ನಾಯಕತ್ವದ ಮರ್ಯಾದೆಯ (ಸ್ಥಿತಿಯ) ರಕ್ಷಣೆಗಾಗಿ ಒಂದೇ ಕಡೆ ಇರುತ್ತಾನೆ. ನಾಯಕನು ತಾನಿದ್ದಲ್ಲೇ ಎಲ್ಲವನ್ನೂ ಸಂಪಾದಿಸಲು ಶಕ್ತನಾಗಿರಬೇಕು. ಎಲ್ಲರೂ ಅವನ ಬಳಿಯೇ ಬಂದು ಅವನಿಗೆ ಸಮರ್ಪಿಸುವುದು ಇತ್ಯಾದಿಗಳನ್ನು ಮಾಡಿದರೆ ಅವನು ನಾಯಕನಾಗಿಯೇ ಇದ್ದಾನೆ ಎಂದರ್ಥ. ಸೇವಕರೇ ತಾನೇ ಇನ್ನೊಬ್ಬರ ಬಳಿ ಹೋಗಿ ಪ್ರಾರ್ಥಿಸುವುದು, ಸಂಚರಿಸುವುದು ಮುಂತಾದವನ್ನು ಮಾಡುವುದು!। ಈ ಭಗ-ವಂತನಾದರೋ ಮೋಕ್ಷದಲ್ಲಿಯೂ ತನಗೆ ಬೇರೆ ಅಧಿಪತಿಗಳನ್ನು ಹೊಂದಿಲ್ಲ. ಎಲ್ಲ ಕಾಮನೆಗಳನ್ನು ಪಡೆದಿರುವುದರಿಂದ ಇನ್ನೇನೂ ಫಲದ ಲಾಭಕ್ಕಾಗಿ ಸೂರ್ಯನಂತೆ ತಿರುಗುವುದು ಬೇಕಾಗಿಲ್ಲ. ಒಂದೇ ಕಡೆ ಇರುವಿಕೆ ಹೇಗೆ ತಾನೆ ಇರಲು ಸಾಧ್ಯ? ಏಕೆಂದರೆ ಅಸಂಭಾವಿತವಾದದ್ದನ್ನು ಯಾವ ಬುದ್ಧಿವಂತನೂ ಬಯಸುವುದಿಲ್ಲ ಎಂಬುದಕ್ಕೆ ಉತ್ತರವಾಗಿ 'ಕರುಣಯಾ' ಎಂದಿದ್ದಾರೆ.

ಇದರ ಅಭಿಪ್ರಾಯ – ಸ್ವೇಚ್ಛೆಯಿಂದಲೇ ಹೊರತು ಬೇರೆಯವರ ಪ್ರಯತ್ನದಿಂದಲ್ಲ ಎಂದರ್ಥ. ಸ್ವತಂತ್ರನಾದ ವ್ಯಕ್ತಿಗೂ ಕರುಣೆಯಿಂದ ಇರುವಿಕೆಯು ಸಂಭಾವಿತ. ಅದೇ ಹೇಗೆ? ಎನ್ನುವ ಪ್ರಶ್ನೆಗೆ ಉತ್ತರವಾಗಿ ಮೋಕ್ಷಯೋಗ್ಯಸ್ಯ ಎಂದಿದ್ದಾರೆ. ಮೋಕ್ಷಕ್ಕೆ ಯೋಗ್ಯರಾದ ವ್ಯಕ್ತಿಗಳಲ್ಲಿ ಅನಾದಿಕಾಲ-ದಿಂದಲೇ ಯಾವುದೇ ಅಡೆತಡೆಗಳಿಲ್ಲದ ಭಗವಂತನ ಅನುಗ್ರಹವು ಇರುವುದು ಎಂಬುದು ಪ್ರಸಿದ್ಧ. ಇದರಿಂದ 'ಸೋಽಯಂ ವ್ಯಾಸಸುಧಾನಿಧಿರ್ಭವತು ಮೇ ಭೂತ್ಯೈ ಸತಾಂ ಭೂತಿದಃ' (ತತ್ವಪ್ರಕಾಶಿಕೆ) ಎಂಬ ಅಂಶವನ್ನು ವಿವರಿಸಿದಂತಾಯಿತು. ಭೂತಿಶಬ್ದದ ಅರ್ಥ - ಜ್ಞಾನವೈರಾಗ್ಯ ಮೊದಲಾದವುಗಳು. ಅವುಗಳ ದಾನಕ್ರಮವನ್ನು ಸ್ಫುಟವಾಗಿ ಹೇಳುವುದರಿಂದ ತಾವು ಹೇಳಿದ

ವ್ಯಾಸಪದದ ಅರ್ಥವೂ ವ್ಯಾಸದಿವಾಕರೇಣ ಎಂಬುದರಿಂದ ವ್ಯಾಖ್ಯಾನಮಾಡಿದಂತಾಯಿತು. ವ್ಯಾಸ ಎಂದರೆ ವಿಸ್ತಾರವನ್ನು ಮಾಡುವವರು. ಪ್ರಕೃತದಲ್ಲಿ ಗೋಸಂತತಿಯ ವಿಸ್ತಾರವನ್ನು ಮಾಡಿದವರು. ಹೀಗಾಗಿ ವಿಸ್ತೃತವಾದದ್ದು ಗೋಸಂತತಿ, ವಿಸ್ತಾರಕರು ವೇದವ್ಯಾಸರು ಆಗಿದ್ದಾರೆ. ಇಂತಹ ವಿಸ್ತಾರಕರಾದ ವೇದವ್ಯಾಸರು ಭಗವಂತನಾದ್ದರಿಂದ ಎಲ್ಲ ಕಡೆ ಇದ್ದಾರೆಯೂ ಕೂಡ. ಹೀಗೆ ವ್ಯಾಸಪದದ ವ್ಯಾಖ್ಯಾನವನ್ನು ಮಾಡಿದಂತಾಗುವುದು.

(**) किञ्च सर्वतोऽपि बलीयान् ईश्वरानुग्रहः इति तावत् सुप्रसिद्धम् । अस्ति चासौ मोक्षयोग्येषु (जीवेषु) अनादित इति वक्ष्यते ।

ಎಂದು ರಚನಾನುಪಪತ್ತ್ಯಧಿಕರಣದಲ್ಲಿ (2-2-1) ಬರುವ ಸುಧಾವಾಕ್ಯ.

** ಯಾಂಚಾಮಂದರಲೋಲಿತಾದ್ಯತ ಉದ್ಯೈದ್ವಿದ್ಯೇಂದಿರಾ ನಿರ್ಜರೈಃ
ಜಾತೋ ಭಾರತಪಾರಿಜಾತಸುತರುಃ ಸದ್ಬ್ರಹ್ಮಸೂತ್ರಾಮೃತಮ್ ।
ಆಸೀತ್ತಂತ್ರಪುರಾಣಸನ್ಮಣಿಗಣೋ ಜಾತಃ ಶುಕೇಂದುಃ ಸದಾ
ಸೋಽಯಂ ವ್ಯಾಸಸುಧಾನಿಧಿರ್ಭವತು ಮೇ ಭೂತ್ಯೈ ಸತಾಂ ಭೂತಿದಃ ॥

ವೇದವ್ಯಾಸರು ಕ್ಷೀರಸಮುದ್ರದಂತಿದ್ದಾರೆ. ಇವರು ದೇವತೆಗಳ ಪ್ರಾರ್ಥನೆಯೆಂಬ ಮಂದರ-ಪರ್ವತದಿಂದ ಚೆನ್ನಾಗಿ ಮಥಿಸಲ್ಪಟ್ಟರು. ಆವಾಗ ವಿದ್ಯೆಯೆಂಬ ಲಕ್ಷ್ಮೀದೇವಿಯು, ಮಹಾ-ಭಾರತವೆಂಬ ಪಾರಿಜಾತವೃಕ್ಷವು, ಬ್ರಹ್ಮಸೂತ್ರವೆಂಬ ಅಮೃತವು, ಪಂಚರಾತ್ರ ಹಾಗು ಪುರಾಣ-ಗಳೆಂಬ ಉತ್ತಮಮಣಿಗಳು, ಶುಕಾಚಾರ್ಯರೆಂಬ ಚಂದ್ರನು ಇವರಿಂದ ಹುಟ್ಟಿದವು. ಹೇಗೆ ಕ್ಷೀರಸಮುದ್ರವು ದೇವತೆಗಳು ಬಯಸಿದ ಸಂಪತ್ತೆಲ್ಲವನ್ನೂ ನೀಡಿತೋ ಅದರಂತೆ ಸಂಪತ್ಪ್ರದರಾದ ಶ್ರೀವೇದವ್ಯಾಸರೆಂಬ ಕ್ಷೀರಸಮುದ್ರವೂ ಸಹ ನಮಗೆ ಸಂಪತ್ತನ್ನು ನೀಡಲಿ.

** ತದ್ದಾನಪ್ರಕಾರಸ್ಯ ಚ ಸ್ಫುಟೀಕರಣಾತ್ –

* ಕಾಮಿತಾಖಿಲದಾತೃತ್ವಸಾಮ್ಯಾತ್ ವಿದ್ಯೇಂದಿರಾತ್ವೇನ, ನಾನಾಪರ್ವೋಪೇತತ್ವಾತ್ ನಾನಾ-ಶಾಖೋಪಬೃಂಹಿತತ್ವಾತ್ ವಾ ಭಾರತಂ ಪಾರಿಜಾತತ್ವೇನ, ಜರಾಮೃತಿನಿವೃತ್ತ್ಯುಪಾಯತ್ವಾದ್ ಬ್ರಹ್ಮಸೂತ್ರಮ್ ಅಮೃತತ್ವೇನ, ನಾನಾತತ್ತ್ವಾರ್ಥಪ್ರಕಾಶಕತ್ವಾದಿನಾ ಪುರಾಣಾನಿ ಮಣಿ-ಗಣತ್ವೇನ, ತತ್ತ್ವೋಪದೇಶೇನ ಆಹ್ಲಾದಕತ್ವಾತ್ ಶುಕಃ ಇಂದುತ್ವೇನ ಉಕ್ತಃ ಇತಿ ಜ್ಞೇಯಮ್ । ಏವಂರೂಪೇಣ ಭೂತಿದಃ ಶಾಸ್ತ್ರಪ್ರಭವತ್ವಾದಿನಾ ಗುರುಶ್ಚೇತಿ ಭಾವಃ । (ಭಾವದೀಪ)

ವೇದವ್ಯಾಸರಿಂದ ಬಂದ ವಿದ್ಯೆಯು ನಮಗೆ ಕಾಮಿತವಾದದ್ದೆಲ್ಲವನ್ನೂ ಕೊಡುವ ಲಕ್ಷ್ಮಿಯ ಗುಣ-ಸಾಮ್ಯ ಇರುವುದರಿಂದ ವಿದ್ಯಾಲಕ್ಷ್ಮೀ ಎನಿಸಿದೆ. ಇವರಿಂದ ಬಂದ ಭಾರತವು ನಾನಾ ಪರ್ವ-

ಗಳನ್ನು ನಾನಾ ಶಾಖೆಗಳನ್ನು ಹೊಂದಿರುವುದರಿಂದ ಪಾರಿಜಾತ ವೃಕ್ಷವಾಗಿದೆ. ಮುಪ್ಪು ಸಾವುಗಳ ನಿವೃತ್ತಿಗೆ ಉಪಾಯವಾದ್ದರಿಂದ ಬ್ರಹ್ಮಸೂತ್ರವು ಅಮೃತವಾಗಿದೆ. ಅನೇಕ ತತ್ವಗಳ ಅರ್ಥವನ್ನು ಪ್ರಕಾಶಿಸುವುದು ಮೊದಲಾದ ಧರ್ಮದಿಂದ ಪುರಾಣಗಳು ಮಣಿಗಳ ಸಮೂಹವಾಗಿದೆ. ಇವರಿಂದ ಬಂದ ಶುಕಮುನಿಗಳು ತತ್ತ್ವೋಪದೇಶವನ್ನು ಮಾಡುವ ಮೂಲಕ ಸಂತೋಷಪಡಿಸುವದರಿಂದ ಚಂದ್ರನಾಗಿದ್ದಾರೆ. ಈ ರೀತಿಯಾಗಿ ವೇದವ್ಯಾಸರು ಸಂಪತ್ತ್ರದರಾಗಿದ್ದಾರೆ.

## ಜ್ಞಾನಸೂರ್ಯರು ವೇದವ್ಯಾಸರು

** को नाम गतिसामान्यमनन्तागमसम्पदः ।
ज्ञानसूर्यमृते ब्रूयात् तमेकं बादरायणम् ॥२७॥ ಅನುವ್ಯಾ

ಹೇಗೆ ಸೂರ್ಯನು ತನ್ನ ಬೆಳಕಿನಿಂದ ಜಗತ್ತನ್ನು ಪ್ರಕಾಶಪಡಿಸುತ್ತಾನೋ ಹಾಗೆಯೇ ವೇದವ್ಯಾಸರು ತಮ್ಮ ಜ್ಞಾನವೆಂಬ ಬೆಳಕಿನಿಂದ ಇಡೀ ಸಜ್ಜನಲೋಕವನ್ನು ಬೆಳಗಿಸುತ್ತಾರೆ. ಆದ್ದರಿಂದಲೇ ಇವರು ಜ್ಞಾನಸೂರ್ಯರು. ಇವರನ್ನು ಬಿಟ್ಟು ಬೇರೆ ಯಾರು ತಾನೇ ಅಪರಿಮಿತವಾದ ಸಕಲ ವೇದಸಂಪತ್ತಿ-ನಿಂದ ಉಂಟಾಗುವ ಜ್ಞಾನ ಒಂದೇ ತರಹದ್ದು ಎಂದು ಹೇಳಲು ಸಾಧ್ಯ?

** ज्ञानेन सूर्य इव ज्ञानसूर्यः । यथा सूर्यः स्वतेजसा विश्वस्य प्रकाशकः, तथाऽयं ज्ञानेनेति । "विना वातम्" इत्यादिप्रयोगदर्शनाद् विनायोग इव ऋतेऽपि द्वितीया भवत्येव । इदमुक्तं भवति किं सर्वज्ञो विपरीतं गतिसामान्यं ब्रूयात्, उतापरः? नाऽद्यः, सर्वज्ञोक्त्योर्विरोधायोगात् । योगे वा द्वयोः सार्वज्ञ्यानुपपत्तेः । द्वितीये सम्प्रतिपन्नसर्वज्ञसूत्रकारवचनविरोधात् मिथ्यादृष्टिर्वा प्रतारको वाऽसौ स्यादिति कथमनिर्णय इति । – (श्रीमन्न्यायसुधा - ३-३-२८)

ಜ್ಞಾನದಿಂದ ಸೂರ್ಯನಂತೆ ಇರುವವನು ಜ್ಞಾನಸೂರ್ಯನೆನಿಸಿಕೊಳ್ಳುತ್ತಾನೆ. ಅಭಿಪ್ರಾಯವಿದು – ಸರ್ವಜ್ಞನಾದ ವ್ಯಕ್ತಿಯು ವಿಪರೀತವಾದ ಗತಿಸಾಮಾನ್ಯವನ್ನು ಹೇಳುವನೋ ಅಥವಾ ಬೇರೆಯ-ವನೋ? ಮೊದಲನೆಯ ಪಕ್ಷದಲ್ಲಿ ಇಬ್ಬರು ಸರ್ವಜ್ಞರ ಮಾತಿಗೆ ವಿರೋಧ ಕೂಡುವುದಿಲ್ಲ. ಕೂಡಿದರೆ ಇಬ್ಬರು ಸರ್ವಜ್ಞರಲ್ಲ ಎಂದಾದೀತು. ಎರಡನೆಯ ಪಕ್ಷದಲ್ಲಿ ನಮಗೆ ಸರ್ವಜ್ಞ ಎಂದು ಸಂಪ್ರತಿಪತ್ತಿ ಇರುವ ಸೂತ್ರಕಾರರ ಮಾತಿನ ವಿರೋಧ ಬರುವುದರಿಂದ ಇನ್ನೊಬ್ಬನ ಜ್ಞಾನವು ಮಿಥ್ಯಾಜ್ಞಾನ ಎನಿಸಿಕೊಳ್ಳುವುದು ಅಥವಾ ಅವನು ಮೋಸಮಾಡುವನು ಎಂದಾಗುವುದು.

## ವೇದವ್ಯಾಸರಲ್ಲಿ ಮಹಸ್ತ್ವ, ಪಿತೃತ್ವ, ಪತಿತ್ವ, ಗುರುತ್ವಗಳು

(ರಸರಂಜನೀ) – ಅಥವಾ 'ಯೇನ' ಇತ್ಯಂಶೇನ 'ವಾಸವೀಸೂನುಮ್' ಇತ್ಯೇತತ್ ಸ್ಫುಟೀಕೃತ್ಯ ಯದಾ ಆದ್ಯಪದ್ಯೇ ಜಗದಘದಹನತ್ವಂ ರಮಾಪತಿವಿಶೇಷಣಮಿತಿ ಸೂಚಿತಂ ತನ್ನ ತಾವದೇವ,

ಕಿಂತು ವಾಸವೀಸೂನುವಿಶೇಷಣಮಪೀತಿ ಜ್ಞಾಪಯನ್ ತಸ್ಯ ಜಗದಘದಹನತ್ವಪ್ರಕಾರಂ ಪ್ರಕಟಯತೀತಿ 'ವ್ಯಸ್ತಾರಿ' ಇತ್ಯಾರಭ್ಯ 'ಸನ್ಮಾರ್ಗಗಃ' ಇತ್ಯಂತಮವತರಣೀಯಮ್ । ಅರ್ಥ-ಸ್ತೂತ್ತ್ರೋಲಿತ ಏವೇತಿ । ಅನೇನೈವ ಪದ್ಯೇನ —

'ದುರಂತದುರಿತಧ್ವಾಂತವಿಪಾಟನಪಟೀಯಸೇ ।
ಬಾದರಾಯಣಸಂಜ್ಞಾಯ ಪರಸ್ಮೈ ಮಹಸೇ ನಮಃ'

ಇತ್ಯುಕ್ತಂ ಮಹಸ್ತ್ವಂ ಪಿತರಂ ಪತಿಂ ಗುರುತಮಮ್ ಇತ್ಯುಕ್ತಂ ಗುರುತ್ವಂ ಚ ವಿವೃತಂ ವೇದಿತ-ವ್ಯಮಿತಿ ॥

ಅಥವಾ 'ಯೇನ' ಎಂಬ ಭಾಗದಿಂದ ವಾಸವೀಸೂನು ಎಂಬ ಪದವನ್ನು ಸ್ಪಷ್ಟಪಡಿಸಿ ಮೊದಲನೆಯ ಪದ್ಯದಲ್ಲಿ ಜಗದಘದಹನತ್ವ ಎಂಬುದು ರಮಾಪತಿಗೆ ವಿಶೇಷಣ ಎಂದು ಸೂಚಿಸಲ್ಪಟ್ಟಿದೆ. ಅದಷ್ಟಕ್ಕೇ ಅಲ್ಲದೇ ವಾಸವೀಸೂನು ಎಂಬ ಪದಕ್ಕೂ ವಿಶೇಷಣವಾಗಿದೆ ಎಂದು ತಿಳಿಸುತ್ತ ವೇದವ್ಯಾಸರು ಜಗದಘದಹನರಾಗಿದ್ದಾರೆ ಎನ್ನುವುದನ್ನು ಪ್ರಕಟಪಡಿಸಲು ವ್ಯಸ್ತಾರಿ ಎಂಬ ಭಾಗದಿಂದ ಪ್ರಾರಂಭಿಸಿ 'ಸನ್ಮಾರ್ಗಗಃ' ಎಂಬಲ್ಲಿಯವರೆಗೆ ಅವತರಣಿಕೆಯನ್ನು ನೀಡಬೇಕು.

ಈ ಪದ್ಯದಿಂದಲೇ 'ನಾಶಪಡಿಸಲಸಾಧ್ಯವಾದ ಪಾಪಗಳೆಂಬ ಕತ್ತಲೆಯನ್ನು ಸೀಳಿಹಾಕುವುದರಲ್ಲಿ ಸಮರ್ಥರಾದ ಬಾದರಾಯಣ ಎಂಬ ಹೆಸರಿರುವ ಸರ್ವೋತ್ತಮನಾದ ತೇಜೋರೂಪನಾದ ಭಗವಂತನಿಗೆ ನಮಸ್ಕಾರ' (ನ್ಯಾಯವಿವರಣ ಟೀಕಾ) ಎಂಬ ಶ್ಲೋಕದಲ್ಲಿ ಹೇಳಿದ ಮಹಸ್ತ್ವವನ್ನು ಪಿತೃತ್ವವನ್ನು ಪತಿತ್ವವನ್ನು ಹಾಗೂ ಗುರುತಮಂ ಎಂಬ ಪದದಿಂದ ಹೇಳಲ್ಪಟ್ಟ ಗುರುತ್ವವನ್ನು ವಿವರಣೆ ಮಾಡಿದಂತಾಯಿತು ಎಂದು ತಿಳಿಯಬೇಕು.

## ಆದ್ಯಗುರುತ್ವ ಹೊಂದಿರುವ ವೇದವ್ಯಾಸರು

(ಲಘುರಸರಂಜನೀ) — ತತ್ರಾದ್ಯಂ ಗುರುತ್ವಂ ಬಾದರಾಯಣೇಽಸ್ತೀತಿ ಮನಸಿ ತತ್ತಿರೋ-ಭಾವಾಭಾವಮಾಶಾಸ್ತೇ — **ಯೇನೇತಿ** ॥ ಯೇನೇತಿ ಸರ್ವತ್ರ ಯೋಜ್ಯಮ್ । ತಸ್ಯ 'ತೇನ' ಇತ್ಯನ್ವಯಃ । ತೇನ ವ್ಯಾಸದಿವಾಕರೇಣ ಮೇ ಮೋಕ್ಷಯೋಗ್ಯಸ್ಯ ಮಾನಸಂ ಮನಃ ಸತತಂ ಶ್ರವಣಾದಿಸರ್ವಸಾಧನಾನುಷ್ಠಾನಕಾಲೇ ಮಾ ತ್ಯಾಜಿ ನ ತ್ಯಜ್ಯತಾಮ್ । ಅತ್ರ **'ಶ್ರುತಿಪಂಕಜಂ ಪ್ರಾಬೋಧಿ'** ಇತ್ಯನೇನ ಅಪಪಾಠಾದಿನಾ ತಿರೋಹಿತಂ ವೇದಂ ಸ್ವಯಮುಚ್ಚಾರ್ಯ ಸಮ್ಯಗ-ಭಿವ್ಯಕ್ತೀಕರಣಪೂರ್ವಕಂ ನಿರ್ಣೇಯವೇದವಿಭಾಗಾದಿಕಂ ವ್ಯಸ್ತಾರಿ । **'ಗೋಸಂತತಿಃ'** ಇತ್ಯನೇನ ನಿರ್ಣೇಯಭಾರತಪುರಾಣಾದಿನಿರ್ಮಾಣಂ ವೇದಾದಿಸರ್ವಶಾಸ್ತ್ರನಿರ್ಣಾಯಕಬ್ರಹ್ಮಸೂತ್ರ-ನಿರ್ಮಾಣಂ ಚೋಚ್ಯತೇ । ತೇನ 'ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ' 'ಪರವಿದ್ಯಾಖ್ಯಂ ಚಕ್ರೇ

ಶಾಸ್ತ್ರಮನುತ್ತಮಮ್' ಇತ್ಯೇತದ್ ವಿವೃತಂ ಭವತಿ । ಯೇನ ಪರಂ ತತ್ತ್ವಂ ಭಗವತ್ಸ್ವರೂಪಂ ಪ್ರಕಾಶಿ, ಯೇನ ಪರಂ ಬಾಹ್ಯವಿಲಕ್ಷಣಂ ಧ್ವಾಂತಮಜ್ಞಾನಂ ಧ್ವಂಸಮನಾಯಿ ಇತ್ಯನೇನ 'ಜಗದ್ಗುರೂಣಾಂ ಗುರುಮ್' ಇತ್ಯೇತದ್ ವಿವೃತಂ ಭವತಿ । ಅತ್ರ '**ಸಾಧುನಿಕರಃ**' ಮೋಕ್ಷ-ಯೋಗ್ಯತಾಲಕ್ಷಣಸಾಧುವತಾಂ ಸಮುದಾಯಃ । '**ಸನ್ಮಾರ್ಗಗಃ**' ಮೋಕ್ಷಸಾಧನಜ್ಞಾನವಾನ್ '**ಅಕಾರಿ**' ಇತ್ಯನೇನ ಮೋಕ್ಷಯೋಗ್ಯಾನಾಂ ಮೋಕ್ಷಸಾಧನೋಪದೇಶಕತ್ವಂ ಗುರುತ್ವಮ್ ಇತಿ ಸಾಮಾನ್ಯತೋ ಗುರುತ್ವಂ ವಿವೃತಂ ಭವತಿ ।

ವೇದವ್ಯಾಸರು ಎಲ್ಲರಿಗಿಂತಲೂ ಮೊದಲನೆಯ ಗುರು. ಹಾಗಾಗಿ ಅವರನ್ನು ತಮ್ಮ ಮನಸ್ಸಿನಲ್ಲಿ ಯಾವಾಗಲೂ ಪ್ರಕಟಗೊಳ್ಳುತ್ತಿರಬೇಕು ಮರೆಯಾಗಬಾರದು ಎಂದು ಈ ಪದ್ಯದಲ್ಲಿ ಪ್ರಾರ್ಥಿಸು-ತ್ತಿದ್ದಾರೆ. ಶ್ಲೋಕದಲ್ಲಿರುವ 'ಯೇನ' ಎಂಬ ಶಬ್ದಕ್ಕೆ ಎಲ್ಲ ಪದಗಳೊಂದಿಗೆ ಅನ್ವಯವಿದೆ. 'ಯೇನ ಪ್ರಾದುರಭಾವಿ' 'ಯೇನ ವ್ಯಸ್ತಾರಿ' 'ಯೇನ ಪ್ರಾಬೋಧಿ' ಇತ್ಯಾದಿ ಯಥಾಯೋಗ್ಯವಾಗಿ ತಿಳಿಯ-ಬೇಕು. 'ಯೇನ' ಎಂಬ ಶಬ್ದಕ್ಕೆ ಶ್ಲೋಕದ ಕೊನೆಯ ಸಾಲಿನಲ್ಲಿ ಬರುವ 'ತೇನ' ಎಂಬುದರೊಂದಿಗೆ ಅನ್ವಯ. ಒಂದೇ ಶ್ಲೋಕದಲ್ಲಿ ಬರುವ ಯತ್, ತತ್‌ಶಬ್ದಗಳಿಗೆ ಸಮಾನವಾದ ಅರ್ಥವಿರು-ವುದರಿಂದ.

'ತೇನ ವ್ಯಾಸದಿವಾಕರೇಣ ಮೇ ಮಾನಸಂ ಸತತಂ ಮಾ ತ್ಯಾಜಿ' ಎಂಬುದಕ್ಕೆ ಈ ರೀತಿ ಪದ-ಪದಾರ್ಥ. ತೇನ ವ್ಯಾಸದಿವಾಕರೇಣ - ಆ ವೇದವ್ಯಾಸರೆಂಬ ಸೂರ್ಯನಿಂದ, ಮೇ - ಮೋಕ್ಷ-ಯೋಗ್ಯವಾದ ನನ್ನ, ಮಾನಸಂ - ಮನಸ್ಸು, ಸತತಂ - ಶ್ರವಣಮನನ ಮೊದಲಾದ ಎಲ್ಲ ಸಾಧನಗಳನ್ನೂ ಅನುಷ್ಠಾನಮಾಡುವ ಸಮಯದಲ್ಲಿ, ಮಾ ತ್ಯಾಜಿ - ಬಿಡಲ್ಪಡದೇ ಇರಲಿ.

ಶ್ರುತಿಪಂಕಜಂ ಪ್ರಾಬೋಧಿ - ಎಂಬುದರಿಂದ ಈ ಅಂಶವು ತಿಳಿಯುವುದು. ಅಪಪಾಠ ಮೊದಲಾದ ಕಾರಣದಿಂದ ಮುಚ್ಚಲ್ಪಟ್ಟ ವೇದವನ್ನು ವೇದವ್ಯಾಸರು ತಾವೇ ಉಚ್ಚಾರಣೆ ಮಾಡಿ ಚೆನ್ನಾಗಿ ಅಭಿವ್ಯಕ್ತಿಯನ್ನು ಮಾಡುವ ಮೂಲಕ ನಿರ್ಣಯ ಶಾಸ್ತ್ರವೆನಿಸುವ ವೇದದ ವಿಭಾಗ ಮುಂತಾದವನ್ನು ಮಾಡಿ ವಿಸ್ತಾರಗೊಳಿಸಿದರು.

ಗೋಸಂತತಿಃ ಎಂಬುವುದರಿಂದ ನಿರ್ಣಯಶಾಸ್ತ್ರವೆನಿಸುವ ಮಹಾಭಾರತ, ಪುರಾಣ ಮೊದ-ಲಾದವುಗಳ ನಿರ್ಮಾಣವನ್ನು ಹಾಗೂ ವೇದ ಮೊದಲಾದ ಎಲ್ಲ ಶಾಸ್ತ್ರಗಳ ನಿರ್ಣಾಯಕವಾದ ಬ್ರಹ್ಮಸೂತ್ರನಿರ್ಮಾಣವನ್ನು ಹೇಳುತ್ತಿದ್ದಾರೆ. ಇದರಿಂದಾಗಿ 'ತಮೇವ ಶಾಸ್ತ್ರಂ ಪ್ರಭವಂ ಪ್ರಣಮ್ಯ' ಎಂಬ ಅನುವ್ಯಾಖ್ಯಾನದ ಎರಡನೆಯ ಪದ್ಯಾಂಶವು, ಹಾಗೂ 'ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರ-ಮನುತ್ತಮಮ್' ಎಂಬ ಮೂರನೆಯ ಪದ್ಯಾಂಶವು ವಿವರಣೆ ಮಾಡಿದಂತಾಯಿತು.

'ಯೇನ ಪರಂ ತತ್ತ್ವಂ ಪ್ರಕಾಶಿ' 'ಯೇನ ಪರಂ ಧ್ವಾಂತಂ ಧ್ವಂಸಮನಾಯಿ' ಎಂಬ ಭಾಗದಿಂದ ಅನುವ್ಯಾಖ್ಯಾನದ ಎರಡನೆಯ ಪದ್ಯದಲ್ಲಿ ಬರುವ 'ಜಗದ್ಗುರೂಣಾಂ ಗುರುಮ್' ಎಂಬ ಅಂಶವನ್ನು ವಿವರಿಸಿದಂತಾಯಿತು. ಪರತತ್ತ್ವವೆಂದರೆ ಭಗವತ್ಸ್ವರೂಪ ಎಂದರ್ಥ. ಇನ್ನು ಪರವಾದ ಧ್ವಾಂತ ಎಂದರೆ ಬಾಹ್ಯವಿಲಕ್ಷಣವಾದ ಅಜ್ಞಾನ ಎಂದರ್ಥ.

ಸಾಧುನಿಕರಃ – ಮೋಕ್ಷಯೋಗ್ಯತೆ ಇರುವ ಸಜ್ಜನರ ಸಮುದಾಯ ಎಂದರ್ಥ. ಸನ್ಮಾರ್ಗಗಃ ಅಕಾರಿ – ಮೋಕ್ಷಸಾಧನವಾದ ಜ್ಞಾನವುಳ್ಳವರನ್ನಾಗಿ ಮಾಡಲ್ಪಡುವುದು ಎಂಬುವುದರಿಂದ ಮೋಕ್ಷಯೋಗ್ಯರಿಗೆ ಮೋಕ್ಷಸಾಧನವನ್ನು ಉಪದೇಶಮಾಡುವುದೇ ಗುರುತ್ವ ಎಂದು ಸಾಮಾನ್ಯ-ವಾಗಿ ಗುರುತ್ವವನ್ನು ವಿವರಣೆ ಮಾಡಿದಂತಾಯಿತು.

## ಜ್ಞಾನಕಾರ್ಯಕ್ಕಾಗಿ ವೇದವ್ಯಾಸರೂಪದಿಂದ ಭಗವಂತನ ಅವತಾರ

(ಲಘುರಸರಂಜಿನೀ) – ಅಥವಾ ಹರೇರ್ನಮ್ಯತ್ವಪ್ರಯೋಜಕಧರ್ಮೋಪಪಾದನಾವಸರೇ ಅಧಿಕಾರಿವಿಶೇಷಾನ್ ಪ್ರತಿ ಇಷ್ಟಸಾಧನತ್ವಮೇವ ಇಷ್ಟಮ್ ಇತ್ಯುಪಪಾದಿತೇ, ಇಷ್ಟಂ ಚ ಮೋಕ್ಷತತ್ಸಾಧನಭೇದೇನಾಪಿ ದ್ವಿವಿಧಮ್ । ತಯೋರಾದ್ಯಂ ಮುಖ್ಯಮ್, ದ್ವಿತೀಯಮ-ಮುಖ್ಯಮ್ । ತತ್ರ ಮುಖ್ಯೇಷ್ಟಸಾಧನಂ ಬಿಂಬಾಪರಪರ್ಯಾಯೋ ಹರಿರೇವ ।

"ಸಮೋಽಪಿ ಭಗವಾನ್ ಸ್ವಬಿಂಬದರ್ಶನ ಏವೈನಂ ಮೋಚಯತಿ"

ಇತಿ ನ್ಯಾಯವಿವರಣೋದಾಹೃತಶ್ರುತೇಃ ।

"ಯೇಷಾಂ ಬಹಿರುಪಾಸನೇನ ಮೋಕ್ಷಸ್ತೇಷಾಮಪಿ ಹೃದ್ಯುಪಾಸನಂ ಕಿಂಚಿತ್ ಕಾರ್ಯಮೇವ" (ಅಜಾತಶತ್ರುಬ್ರಾಹ್ಮಣಮ್ 1.15) ಇತಿ ಬೃಹದ್ಭಾಷ್ಯಾಚ್ಚ । ಅಮುಖ್ಯೇಷ್ಟಸಾಧನಮಪಿ ಯದ್ಯಪಿ ಸ ಏವ, ತಥಾಪಿ ನ ತೇನೈವ ರೂಪೇಣ । ದತ್ತವ್ಯಾಸಕಪಿಲಋಷಭಹಯಗ್ರೀವಾದಿಜ್ಞಾನಕಾರ್ಯ ರೂಪವೈಯರ್ಥ್ಯಾಪತ್ತೇಃ । ಯಥೋಕ್ತಂ ಭಾರತತಾತ್ಪರ್ಯನಿರ್ಣಯೇ –

"ಕೃಷ್ಣರಾಮಾದಿರೂಪೇಷು ಬಲಕಾರ್ಯೋ ಜನಾರ್ದನಃ ।
ದತ್ತವ್ಯಾಸಾದಿರೂಪೇಷು ಜ್ಞಾನಕಾರ್ಯಸ್ತಥಾ ಪ್ರಭುಃ" ಇತಿ ।
ಕಿಂತು ಸ್ವೇಚ್ಛಾಪರಿಗೃಹೀತಜ್ಞಾನಕಾರ್ಯವೇದವ್ಯಾಸರೂಪೇಣೇತ್ಯಾಶಯೇನ ಮಾನಸೇ ತತ್ತಿರೋ-ಭಾವಾಭಾವಮಾಶಾಸ್ತೇ – ಯೇನೇತಿ ॥ ಯೇನ ವ್ಯಾಸದಿವಾಕರೇಣ ಭೂಮಿವಲಯೇ ಪ್ರಾದುರಭಾವಿ ತೇನ ವ್ಯಾಸದಿವಾಕರೇಣ ಸತತಂ ಮೇ ಮಾನಸಂ ಮಾ ತ್ಯಾಜಿ । ಮಾಙ್ ಯೋಗೇ ಲುಙ್ । ಸರ್ವಲಕಾರಾಪಾದಕತ್ವಾನ್ನ ತ್ಯಜ್ಯತಾಮಿತಿ ಯೋಜನಾ ।

ಅತ್ರ ಯೇನ ಸಾಧುನಿಕರೋ ಮೋಕ್ಷಯೋಗ್ಯಜನಸಮುದಾಯಃ, ಸನ್ಮಾರ್ಗಗಃ ಸತೋ ನಿರ್ದುಷ್ಟಸ್ಯ ಮೋಕ್ಷಸ್ಯ ಯೋ ಮಾರ್ಗಃ –

'ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ'

ಇತ್ಯಾದಿಶ್ರುತ್ಯುಕ್ತೋಽಪರೋಕ್ಷಜ್ಞಾನಾಖ್ಯಃ ಉಪಾಯಃ ತದ್ಗಃ ತದ್ವಾನ್ **ಅಕಾರಿ** ಇತ್ಯನೇನ ವ್ಯಾಸಸ್ಯ ಸಾಕ್ಷಾತ್ ಪರಂಪರಯಾ ವಾ ಮೋಕ್ಷಸಾಧನಾಪರೋಕ್ಷಜ್ಞಾನದಾತೃತ್ವಮುಕ್ತಮ್ । ಅನೇನ 'ಗುರುರ್ಗುರೂಣಾಮ್' ಇತಿ ಚತುರ್ಥಪದ್ಯೇ 'ಗುರೂಣಾಂ ಗುರುಃ' ಇತಿ ಪದಂ ಗುರೂಣಾ-ಮಪರೋಕ್ಷಾರ್ಥಂ ಜಗತಃ ತತ್ತ್ವೋಪದೇಶಕಾನಾಂ ಬ್ರಹ್ಮಾದೀನಾಂ ಗುರುಃ ತದರ್ಥಮೇವ ತತ್ತ್ವೋಪದೇಷ್ಟೇತಿ ವಿವೃತಂ ಭವತಿ ।

ಅಥವಾ – ಹರಿಯು ನಮಸ್ಕರಿಸಲು ಯೋಗ್ಯ ಎಂದು ಉಪಪಾದನೆ ಮಾಡಲು ನಮ್ಯತ್ವಕ್ಕೆ ಪ್ರಯೋಜಕವಾದ ಅಧಿಕೃತತ್ವ ಇಷ್ಟತ್ವ ಮೊದಲಾದ ಧರ್ಮಗಳನ್ನು ಸಮರ್ಥಿಸುವಾಗ ಕೆಲವು ಅಧಿಕಾರಿಗಳನ್ನು ಕುರಿತು ಭಗವಂತನು ಇಷ್ಟ ಎನ್ನುವುದಕ್ಕೆ ಇಷ್ಟಸಾಧನ ಎಂದೇ ಅರ್ಥ ಎಂದು ತಿಳಿಸಿದ್ದಾರೆ.

ಆ ಇಷ್ಟವಾದ ವಸ್ತುವು ಎರಡು ರೀತಿಯಾಗಿದೆ. (1) ಮೋಕ್ಷ, (2) ಮೋಕ್ಷಸಾಧನ. ಇವುಗಳಲ್ಲಿ ಮೊದಲನೆಯದ್ದು ಮುಖ್ಯ, ಎರಡನೆಯದ್ದು ಅಮುಖ್ಯ. ಮೊದಲನೆಯ ಇಷ್ಟವಾದ ಮೋಕ್ಷಕ್ಕೆ ಸಾಧನವಾದದ್ದು ಬಿಂಬರೂಪಿಯಾದ ಹರಿಯೇ. 'ಸಮೋಽಪಿ ಭಗವಾನ್ ಸ್ವಬಿಂಬದರ್ಶನೇ ಏವ ಏನಂ ಮೋಚಯತಿ' - ಎಲ್ಲ ಭಗವಂತನ ರೂಪಗಳೂ ಸಮಾನವಾಗಿದ್ದರೂ ಜೀವಿಗೆ ತನ್ನ ಬಿಂಬ-ದರ್ಶನವಾದಾಗಲೇ ಅವನನ್ನು ಮುಕ್ತಿಗೊಳಿಸುತ್ತಾನೆ ಎಂಬ ಅರ್ಥವುಳ್ಳ ನ್ಯಾಯವಿವರಣದಲ್ಲಿ ಉದಾಹರಿಸಿದ ಶ್ರುತಿ ಇರುವುದರಿಂದ.

## ಬಿಂಬದರ್ಶನವೇ ಮೋಚಕ - ನ್ಯಾಯವಿವರಣ

** – ನ ಚ ಭಗವತಃ ಸರ್ವತ್ರ ಗುಣಸಾಮ್ಯಾದ್ಯಸ್ಯ ಕಸ್ಯಾಪಿ ರೂಪಸ್ಯ ದರ್ಶನಾತ್ ಸರ್ವೇಷಾಂ ಮುಕ್ತಿಃ ।

'ಸಮೋಽಪಿ ಭಗವಾನ್ ಸ್ವಬಿಂಬದರ್ಶನ ಏವೈನಂ ಮೋಚಯತಿ ।
ಯಥಾ ಸಮೇಷ್ವಪಿ ಕರ್ಮಸು ಸ್ವಕೃತಮೇವೈನಂ ಭೋಜಯತಿ'

ಇತಿ ಶ್ರುತ್ಯುಕ್ತಸ್ವಕೃತಪ್ರಾಪ್ತಿದೃಷ್ಟಾಂತಾತ್ ॥ 3-3- ಶ್ಲೋ.32 ॥ (ನ್ಯಾಯವಿವರಣ)

– ಭಗವಂತನ ಎಲ್ಲ ರೂಪಗಳಲ್ಲಿಯೂ ಗುಣಗಳು ಸಮಾನವಾಗಿರುವುದರಿಂದ ಯಾವುದಾದರೂ ಒಂದು ರೂಪದ ಉಪಾಸನೆಯಿಂದಲೂ ಎಲ್ಲರಿಗೂ ಮುಕ್ತಿಯು ಲಭಿಸುತ್ತದೆ ಎಂದು ಆಕ್ಷೇಪವನ್ನು

ಮಾಡಬಾರದು. ಏಕೆಂದರೆ 'ಹೇಗೆ ಎಲ್ಲ ಕರ್ಮಗಳು ಸಮಾನವಾಗಿದ್ದರೂ ತಾನು ಮಾಡಿದ ಕರ್ಮವು ಮಾತ್ರ ತನಗೆ ಫಲವನ್ನು ಕೊಡುತ್ತದೋ ಅದರಂತೆ ಭಗವಂತನು ಎಲ್ಲ ರೂಪಗಳಲ್ಲಿಯೂ ಗುಣಗಳು ಸಮಾನವಾಗಿದ್ದರೂ ಸಾಧಕನ ಬಿಂಬದರ್ಶನವು ಅವನಿಗೆ ಆದಾಗ ಮಾತ್ರ ಪರಮಾತ್ಮನು ಅವನನ್ನು ಸಂಸಾರದಿಂದ ಬಿಡಿಸುತ್ತಾನೆ' ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಕೃತ-ಪ್ರಾಪ್ತಿಯ ದೃಷ್ಟಾಂತವು ಇರುವುದರಿಂದ.

## ನ ಸಾಮಾನ್ಯಾಧಿಕರಣದ ಪಂಚಾಂಗಗಳು – ಭಾವಬೋಧ

— ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ — ಇತ್ಯತ್ರ 'ಬ್ರಹ್ಮವಿದಾಪ್ನೋತಿ ಪರಮ್' ಇತ್ಯಾದ್ಯುಕ್ತೇರ್ಬಿಂಬಾಬಿಂಬಸಾಧಾರಣ್ಯಾದ್ ಭಗವದ್ದರ್ಶನಂ ಬಿಂಬರೂಪವಿಷಯಂ ಮುಕ್ತಿಸಾಧನಮ್ ಉತ ಯತ್ಕಿಂಚಿದ್ರೂಪವಿಷಯಮಿತಿ ಸಂದೇಹೇ ಯತ್ಕಿಂಚಿದ್ರೂಪವಿಷಯಮಿತಿ ಪೂರ್ವಃ ಪಕ್ಷಃ । ಬಿಂಬರೂಪವಿಷಯಮೇವೇತಿ ಸಿದ್ಧಾಂತಃ ।

ತತ್ರ 'ಗುಣಸಾಮ್ಯಮ್' ಇತ್ಯುಕ್ತಪೂರ್ವಪಕ್ಷನ್ಯಾಯಂ ಶ್ರುತ್ಯುದಾಹರಣಪೂರ್ವಕಂ ವಿವೃಣ್ವನ್ ಪ್ರತಿಕ್ಷಿಪತಿ — ನ ಚ ಭಗವತ ಇತಿ ॥ ಸರ್ವತ್ರ ಗುಣಸಾಮ್ಯಾದಿತಿ ॥ ಸರ್ವತ್ರಾವತಾರಾದೌ ಮೋಕ್ಷದಾತೃತ್ವಾದಿಗುಣಸಾಮ್ಯಾದಿತ್ಯರ್ಥಃ । ಅನ್ಯಥಾ 'ನ ಸ್ಥಾನತೋऽಪಿ' ಇತ್ಯಾದ್ಯುಕ್ತಿ-ವಿರೋಧಃ । ಸಿದ್ಧಾಂತೇऽಪಿ ಅವತಾರದರ್ಶನೇನಾಪಿ ಕೇಷಾಂಚಿತ್ ಮುಕ್ತ್ಯಂಗೀಕಾರಾತ್ ಸರ್ವೇಷಾಮ್ ಇತ್ಯುಕ್ತಮ್ ।

ಏವಂ ಚ ಸರ್ವರೂಪಾಣಾಂ ಗುಣಸಾಮಾನ್ಯಾದ್ ಯಸ್ಯ ಕಸ್ಯಾಪಿ ರೂಪಸ್ಯ ದರ್ಶನೇನ ಮುಕ್ತಿಃ ಸ್ಯಾದಿತಿ ನ ಬಿಂಬೋಪಾಸನಾನಿಯತಿರಿತಿ ನೇತಿ ಭಾವಃ । ಅಯಂ ಚ ನ್ಯಾಯಃ, ಯಥಾ ಮರಣತ್ವಸಾಮ್ಯೇऽಪಿ ನ ಯತ್ಕಿಂಚಿನ್ಮರಣಾನಂತರಂ ಮುಕ್ತಿಃ ಕಿಂ ತು ವಿಶಿಷ್ಟಮರಣಾನಂತರಮೇವ, ಏವಂ ಭಗವದ್ರೂಪಾಣಾಂ ಗುಣಸಾಮ್ಯೇऽಪಿ ನ ಯಸ್ಯ ಕಸ್ಯಾಪಿ ರೂಪಸ್ಯ ದರ್ಶನಾನ್ಮುಕ್ತಿಃ, ಕಿಂತು ಸ್ವಬಿಂಬದರ್ಶನಾದೇವೇತಿ ವದತಾ 'ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವತ್' ಇತ್ಯನೇನ ಸೂಚಿತಃ । ತದ್ಧೇತುತ್ವೇನ 'ಕೃತಪ್ರಾಪ್ತಿಃ' ಇತ್ಯುಕ್ತಸಿದ್ಧಾಂತನ್ಯಾಯಂ ಪ್ರಮಾಣೋದಾಹರಣ-ಪೂರ್ವಕಂ ವಿವೃಣೋತಿ — ಸಮೇಷ್ವಿತಿ ॥ ಸಮೇಷು - ಅನ್ಯಕೃತೇಷು ಕರ್ಮಸು ಸ್ವಕೃತಕರ್ಮಣಾ ಕರ್ಮತ್ವಸಮೇಷು ಇತ್ಯರ್ಥಃ । ಏನಂ ಕರ್ಮಕರ್ತಾರಮ್ । ಏವಂ ಚ ಸಮೇಷ್ವಪಿ ಕರ್ಮಸು ಸ್ವಕೃತಪ್ರಾಪ್ತವತ್ ಸಮೇಷ್ವಪಿ ಭಗವದ್ರೂಪೇಷು ಬಿಂಬದರ್ಶನಮೇವ ಮುಕ್ತಿಸಾಧನಮಿತಿ ಬಿಂಬೋಪಾಸ್ತಿನಿಯತಿರಿತಿ ಭಾವಃ ।

ಅಯಂ ಚ ನ್ಯಾಯೋ 'ಮೃತ್ಯುವತ್' ಇತ್ಯಸ್ಯೋಪಲಕ್ಷಣತ್ವೇನ ಯಥಾ ಕರ್ಮತ್ವಸಾಮ್ಯೇऽಪಿ ಸ್ವಕೃತೇನೈವ ಕರ್ಮಣಾ ಫಲಪ್ರಾಪ್ತಿರ್ನ ತು ಯೇನ ಕೇನಾಪಿ ಕರ್ಮಣೇತಿ ಕೃತಪ್ರಾಪ್ತಿರೂಪ-ದೃಷ್ಟಾಂತಸ್ಯಾಪಿ ಕಥನಾತ್ ಸೂಚಿತಃ ॥ (ಭಾವಬೋಧ)

– 'ಬ್ರಹ್ಮವಿದಾಪ್ನೋತಿ ಪರಮ್' ಎಂಬ ಮಾತಿನಂತೆ ಬ್ರಹ್ಮಜ್ಞಾನಿಯು ಬ್ರಹ್ಮನನ್ನು ಹೊಂದು-ತ್ತಾನೆ. ಇಲ್ಲಿ ಬಿಂಬರೂಪನ ಜ್ಞಾನ ಅಥವಾ ಬಿಂಬಾತಿರಿಕ್ತರೂಪದ ಜ್ಞಾನ ಎಂದು ತಿಳಿಸದೆ ಸಾಮಾನ್ಯವಾಗಿ ಬ್ರಹ್ಮಜ್ಞಾನಿಯಾದವನಿಗೆ ಪರಬ್ರಹ್ಮಾಪ್ತಿಯನ್ನು ಫಲವನ್ನಾಗಿ ಹೇಳಿದ್ದಾರೆ. ಇಲ್ಲಿ ಬಿಂಬರೂಪವನ್ನು ವಿಷಯೀಕರಿಸುವ ಜ್ಞಾನವು ಮೋಕ್ಷಸಾಧನವೋ ಅಥವಾ ಯತ್ಕಿಂಚಿತ್-ರೂಪವನ್ನು ವಿಷಯೀಕರಿಸುವ ಜ್ಞಾನವು ಮೋಕ್ಷಸಾಧನವೋ? ಎಂದು ಸಂದೇಹ. ಪೂರ್ವಪಕ್ಷವು ಯತ್ಕಿಂಚಿತ್ ರೂಪವಿಷಯಕವಾದ ಜ್ಞಾನವು ಮೋಕ್ಷಸಾಧನ ಎಂದು. ಸಿದ್ಧಾಂತವು ಬಿಂಬ-ರೂಪವಿಷಯಕವಾದ ಜ್ಞಾನವೇ ಮೋಕ್ಷಸಾಧನ ಎಂದು.

ಇನ್ನು ಸಿದ್ಧಾಂತದಲ್ಲಿಯೂ ಕೂಡ ಅವತಾರದರ್ಶನವಾದಾಗಲೂ ಕೆಲವರಿಗೆ ಮುಕ್ತಿಯನ್ನು ಒಪ್ಪಿದ್ದಾರೆ. ಆದರೆ ಎಲ್ಲರಿಗೂ ಹೀಗೆ ಒಪ್ಪಿಲ್ಲ. ಇಲ್ಲಿ ಪೂರ್ವಪಕ್ಷದ ಅಭಿಪ್ರಾಯ ಹೀಗೆ– ಎಲ್ಲ ಭಗವದ್ರೂಪಗಳಲ್ಲಿ ಗುಣಸಾಮ್ಯ ಇರುವುದರಿಂದ ಒಂದರ ಜ್ಞಾನ ಮಾತ್ರ ಮೋಕ್ಷಸಾಧನ ಇನ್ನೊಂದರ ಜ್ಞಾನವು ಮೋಕ್ಷಸಾಧನವಲ್ಲ ಎಂದು ಹೇಗೆ ಹೇಳಲು ಸಾಧ್ಯ. ಹಾಗೇನಾದರೂ ಹೇಳಿದ್ದರೆ 'ನ ಸ್ಥಾನತೋಽಪಿ' ಮುಂತಾದ ಅಧಿಕರಣದ ವಿರೋಧ ಬರುವುದು. ಸ್ಥಾನಭೇದೇನ ಸ್ಥಿತಿ ಇದ್ದರೂ ಭಗವದ್ರೂಪಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಹೀಗೆ ಎಲ್ಲ ರೂಪಗಳಿಗೂ ಗುಣಸಾಮ್ಯ ಇರುವುದರಿಂದ ಯಾವುದಾದರೂ ಒಂದು ರೂಪದ ದರ್ಶನದಿಂದಲೂ ಮುಕ್ತಿ-ಯಾಗಬಹುದು. ಆದ್ದರಿಂದ ಬಿಂಬೋಪಾಸನನಿಯಮವಿಲ್ಲ.

ಇದಕ್ಕೆ ಉತ್ತರ – ಹೇಗೆ ಮರಣತ್ವಸಮಾನವಾಗಿದ್ದರೂ ಯಾವುದೋ ಒಂದು ಮರಣವಾದ ಮೇಲೆ ಮುಕ್ತಿಯಲ್ಲ ಹೊರತು ಒಂದು ವಿಶಿಷ್ಟವಾದ ಮರಣವಾದ ಮೇಲೆ. ಹಾಗೆಯೇ ಭಗವದ್ರೂಪಗಳಲ್ಲಿ ಗುಣಸಾಮ್ಯವಿದ್ದರೂ ಯಾವುದೋ ಒಂದು ರೂಪದ ದರ್ಶನದಿಂದ ಮುಕ್ತಿಯಲ್ಲ ಹೊರತು ತನ್ನ ಬಿಂಬರೂಪದ ದರ್ಶನದಿಂದಲೇ ಎಂದು ತಿಳಿಯಬೇಕು.

ಸಮೇಷು ಎಂದು ಕೃತಪ್ರಾಪ್ತಿಃ ಎಂಬ ಸಿದ್ಧಾಂತನ್ಯಾಯವನ್ನು ಪ್ರಮಾಣೋದಾಹರಣ ಕೊಡುವು-ದರ ಮೂಲಕ ವಿವರಿಸುತ್ತಿದ್ದಾರೆ. ಎಲ್ಲ ಕರ್ಮಗಳೂ ಸಮಾನವಾಗಿದ್ದರೂ ತಾನು ಮಾಡಿದ ಕರ್ಮವೇ ತನಗೆ ಫಲದಾಯಕವಾದಂತೆ ಎಲ್ಲ ಭಗವದ್ರೂಪಗಳು ಸಮಾನವಾಗಿದ್ದರೂ ಬಿಂಬರೂಪದ ದರ್ಶನವೇ ಮುಕ್ತಿಸಾಧನವಾದ್ದರಿಂದ ಬಿಂಬೋಪಾಸನನಿಯಮವಿದೆ.

## ಬಾಹ್ಯೋಪಾಸಕರಿಗೂ ಹೃದಯದಲ್ಲಿ ಉಪಾಸನೆ ಆವಶ್ಯಕ

– "ಕೇಷಾಂಚಿತ್ ಸರ್ವಗತ್ವೇನ ಕೇಷಾಂಚಿದ್ಧೃದಯೇ ಹರಿಃ । ಕೇಷಾಂಚಿದ್ ಬಹಿರೇವಾಸೌ ಉಪಾಸ್ಯಃ ಪುರುಷೋತ್ತಮಃ ॥" ಎಂಬ ಸ್ಮೃತಿಯ ಪ್ರಕಾರ ಹೃದಯದಲ್ಲಿ ಉಪಾಸನೆ ಮಾಡಿದರೆ ಮಾತ್ರ ಮೋಕ್ಷ ಎಂಬ ಮಾತು ಸರಿಯಲ್ಲ ಎನಿಸುತ್ತದೆ. ಅದಕ್ಕೆ ಉತ್ತರವಾಗಿ ಬೃಹದ್ಭಾಷ್ಯದಲ್ಲಿ

ಹೀಗೆ ಬಂದಿದೆ – ಯಾವ ವ್ಯಕ್ತಿಗೆ ಬಾಹ್ಯೋಪಾಸನೆಯಿಂದ ಮೋಕ್ಷವನ್ನು ಹೇಳಿದ್ದಾರೋ ಅವರೂ ಕೂಡ ತಮ್ಮ ಹೃದಯದಲ್ಲಿ ಉಪಾಸನೆಯನ್ನು ಸ್ವಲ್ಪವಾದರೂ ಮಾಡಲೇ ಬೇಕು. ಇನ್ನು ಅಮುಖ್ಯ-ವಾದ ಇಷ್ಟಸಾಧನವಾದರೋ ಅವನಿಂದಲೇ ಸಿಗಬೇಕು. ಆದರೂ ಆ ಬಿಂಬರೂಪದಿಂದಲೇ ಎಂದು ಹೇಳುವುದು ಸರಿಯಲ್ಲ. ಹಾಗಿದ್ದಲ್ಲಿ ದತ್ತ, ವ್ಯಾಸ, ಕಪಿಲ, ಋಷಭ, ಹಯಗ್ರೀವ ಮೊದಲಾದ ಭಗವದ್ರೂಪಗಳಿಂದ ಆದ ಜ್ಞಾನಕಾರ್ಯವು ವ್ಯರ್ಥ ಎಂದಾದೀತು. ಭಾರತತಾತ್ಪರ್ಯ-ನಿರ್ಣಯದಲ್ಲಿ ಯಾವ ಯಾವ ಭಗವದ್ರೂಪಗಳು ಯಾವುದಕ್ಕೋಸ್ಕರ ಬಂದಿವೆ ಎಂಬುದನ್ನು ವಿವರಿಸುವಾಗ ಹೀಗೆಂದಿದ್ದಾರೆ – 'ಜನಾರ್ದನನು ಕೃಷ್ಣರಾಮಾದಿರೂಪಗಳಲ್ಲಿ ಬಲಕಾರ್ಯವನ್ನು ಮಾಡಿದ್ದಾನೆ. ಹಾಗೂ ಸಮರ್ಥನಾದ ಭಗವಂತನು ದತ್ತವ್ಯಾಸ ಮೊದಲಾದ ರೂಪಗಳಲ್ಲಿ ಜ್ಞಾನಕಾರ್ಯವನ್ನು ಮಾಡಿದ್ದಾನೆ'. ಹೀಗೆ ಬಿಂಬರೂಪದಿಂದಲೇ ಮೋಕ್ಷಸಾಧನವಾದ ಜ್ಞಾನಪ್ರಾಪ್ತಿ ಎಂದೊಪ್ಪದೇ ತನ್ನ ಇಚ್ಛೆಯಿಂದಲೇ ಪರಿಗ್ರಹಿಸಿದ ಜ್ಞಾನಕಾರ್ಯವನ್ನು ಮಾಡುವ ವೇದವ್ಯಾಸರೂಪದಿಂದ ಮೋಕ್ಷಸಾಧನವಾದ ಜ್ಞಾನದ ಪ್ರಾಪ್ತಿ ಎಂದು ಹೇಳಬೇಕು. ಆದ್ದರಿಂದ ವೇದವ್ಯಾಸರು ತಮ್ಮ ಮನಸ್ಸನ್ನು ಬಿಡದೇ ಇರಲಿ ಎಂದು ಪ್ರಾರ್ಥಿಸುತ್ತಿದ್ದಾರೆ.

ಯಾವ ವೇದವ್ಯಾಸರೆಂಬ ಸೂರ್ಯನಿಂದ ಭೂಪ್ರದೇಶದಲ್ಲಿ ಪ್ರಾದುರ್ಭಾವಗೊಳಲ್ಪಟ್ಟಿತೋ ಅಂತಹ ವ್ಯಾಸರೆಂಬ ಸೂರ್ಯನಿಂದ ಯಾವಾಗಲೂ ನನ್ನ ಮನಸ್ಸು ಬಿಡಲ್ಪಡದೇ ಇರಲಿ.

ಮಾಙ್ ಎಂಬ ಶಬ್ದದ ಸಂಬಂಧವಿದ್ದಾಗ ಎಲ್ಲ ಲಕಾರಗಳಿಗೆ ಅಪವಾದವಾಗಿ ಲುಙ್ ಲಕಾರವು ಬಂದಿದೆ. ಆದರೆ ಅರ್ಥಮಾತ್ರ 'ನ ತ್ಯಜ್ಯತಾಂ' ಎಂದು ಲೋಡರ್ಥದಲ್ಲಿ ಲುಙ್ ಲಕಾರವಿದೆ ಎಂದು ಭಾವ.

## "ಯೇನ ಸಾಧುನಿಕರಃ ಸನ್ಮಾರ್ಗಗಃ ಅಕಾರಿ"

''ಯೇನ ಸಾಧುನಿಕರಃ ಸನ್ಮಾರ್ಗಗಃ ಅಕಾರಿ'' – ಯಾವ ಸಜ್ಜನರ ಸಮೂಹವು ಅಂದರೆ ಮೋಕ್ಷಕ್ಕೆ ಯೋಗ್ಯರಾದ ಜನಸಮುದಾಯವು, ಸನ್ಮಾರ್ಗಗಃ - ನಿರ್ದುಷ್ಟವಾದ ಮೋಕ್ಷಕ್ಕೆ ಯಾವ ಮಾರ್ಗ-ವಿದೆಯೋ ಅದರಲ್ಲಿರುವಂತೆ ಮಾಡಲ್ಪಟ್ಟಿತು. ಆ ಮಾರ್ಗವಾದರೋ ಅಪರೋಕ್ಷಜ್ಞಾನವೆಂಬ ಉಪಾಯವೇ ಆಗಿದೆ. ಇದನ್ನು 'ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ' - 'ಯಾರು ಭಗವಂತನನ್ನು ಸಕಲಗುಣಪರಿಪೂರ್ಣ ಮುಂತಾದ ರೀತಿಯಲ್ಲಿ ತಿಳಿದವನಾಗಿ ಅಪರೋಕ್ಷಜ್ಞಾನವನ್ನು ಸಂಪಾದಿಸಿರುವನೋ ಅವನಿಗೇ ಮೋಕ್ಷವಾಗುವುದು. ಅಪರೋಕ್ಷಜ್ಞಾನವನ್ನು ಬಿಟ್ಟು ಬೇರೆಯ ಮಾರ್ಗ ಮೋಕ್ಷಕ್ಕೆ ಇಲ್ಲ' ಎಂಬರ್ಥವುಳ್ಳ ಅನೇಕ-ಶ್ರುತಿಗಳಿರುವುದರಿಂದ. ಹೀಗೆ ವೇದವ್ಯಾಸರು ಸಾಕ್ಷಾತ್ತಾಗಿ ಅಥವಾ ಪರಂಪರೆಯಾಗಿ ಮೋಕ್ಷಕ್ಕೆ ಸಾಧನವಾದ ಅಪರೋಕ್ಷಜ್ಞಾನವನ್ನು ಕೊಡುವವರು ಎಂದು ಹೇಳಿದಂತಾಯಿತು. ಇದರಿಂದ

'ಗುರುರ್ಗುರೂಣಾಂ' ಎಂಬ ನಾಲ್ಕನೆಯ ಪದ್ಯದಲ್ಲಿ ಗುರೂಣಾಂ ಗುರುಃ ಎಂಬ ಪದವನ್ನು ಗುರೂಣಾಂ - ಅಪರೋಕ್ಷಜ್ಞಾನಕ್ಕೋಸ್ಕರ ಜಗತ್ತಿಗೆ ತತ್ತ್ವವನ್ನುಪದೇಶಿಸುವ ಬ್ರಹ್ಮಾದಿಗಳಿಗೆ ಗುರುಃ - ಅಪರೋಕ್ಷಜ್ಞಾನಕ್ಕೋಸ್ಕರ ತತ್ತ್ವವನ್ನು ಉಪದೇಶಿಸಿದವರು ಎಂದು ವಿವರಣೆ ಮಾಡಿ-ದಂತಾಯಿತು.

## ಬ್ರಹ್ಮದರ್ಶನಕ್ಕೆ ಬೇಕಾದದ್ದು ಯಾವುದು?

(ಲಘುರಸರಂಜಿನೀ) — ನನು ನಿವರ್ತಕತ್ವಾಭಾವಾತ್ ಕಥಂ ಧ್ವಾಂತಂ ಪ್ರತಿ ಧ್ವಂಸಪ್ರಾಪಣಮ್ ಇತ್ಯತ ಉಕ್ತಂ ಯೇನ ಪರಂ ಸರ್ವೋತ್ತಮಂ ತತ್ತ್ವಂ ಹರಿಸ್ವರೂಪಮಿತಿ ಯಾವತ್ । ತಥಾ ಪರಂ ಅನ್ಯದಪಿ ತತ್ತ್ವಂ ಪರತತ್ತ್ವಜ್ಞಾನೋಪಯುಕ್ತಂ ಬ್ರಹ್ಮಾದಿಸ್ವರೂಪಮಪಿ ಪ್ರಾಕಾಶಿ । ಸಾಕ್ಷಾದ-ಸಾಕ್ಷಾದ್ವಾ ಶಾಸ್ತ್ರಾಣಿ ಶ್ರಾವಯಿತ್ವಾ ಪ್ರಕಾಶಿತಂ ಕೃತಮಿತಿ । ತಥಾ ಚ –

ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನವಿಪರ್ಯಯೌ ।
ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಮ್ ॥

ಇತ್ಯುಕ್ತದಿಶಾ ಶ್ರವಣಾದಿಜನಿತಸ್ತತ್ತ್ವಪ್ರಕಾಶ ಏವ ಧ್ವಾಂತನಿವರ್ತಕ ಇತಿ ಭಾವಃ ।

ಅನೇನ 'ತಮೇವ' ಇತಿ ದ್ವಿತೀಯಪದ್ಯೇ 'ಜಗದ್ಗುರೂಣಾಂ ಗುರುಮಂಜಸೈವ' ಇತಿ ಪದಂ ಜಗತಃ ಗುರೂಣಾಂ ಶಾಸ್ತ್ರಸ್ಯ ಪ್ರವಕ್ತ್ಯಣಾಂ ಬ್ರಹ್ಮಾದೀನಾಮಂಜಸಾ ಮುಖ್ಯತಯಾ ನ ತು ವಯೋಧಿಕತ್ವಾದಿಮಾತ್ರೇಣ ಗುರುಂ ಶಾಸ್ತ್ರಸ್ಯ ಪ್ರವಕ್ತಾರಮಿತಿ ಯಾವದಿತಿ ವಿವೃತಂ ಭವತಿ ।

ಅಲ್ಲ! ಅಪರೋಕ್ಷಜ್ಞಾನ ಬರುವುದಕ್ಕೆ ಪ್ರತಿಬಂಧಕವಾದ ಅನಾದಿಯಾದ ಅಜ್ಞಾನ-ಸಂಶಯವಿಪರ್ಯಯಗಳಿದ್ದಾಗ ಹೇಗೆ ಅಪರೋಕ್ಷಜ್ಞಾನವು ಬರಲು ಸಾಧ್ಯ? ಎಂದರೆ, ಅದು ಹೀಗೆ – ವೇದವ್ಯಾಸರು ಬಾಹ್ಯವಿಲಕ್ಷಣವಾದ ಅಜ್ಞಾನಸಂಶಯವಿಪರ್ಯಯಗಳೆಂಬ ಕತ್ತಲೆಯನ್ನು ನಿವಾರಿಸುತ್ತಾರೆ. ಅಲ್ಲ! ನಿವರ್ತಕವಿಲ್ಲದಿರುವುದರಿಂದ ಹೇಗೆ ತಾನೆ ಅಜ್ಞಾನ-ಸಂಶಯ-ವಿಪ-ರ್ಯಯಗಳ ಧ್ವಂಸವಾದೀತು? ಎಂದರೆ ಅದಕ್ಕೆ ಉತ್ತರ - ವೇದವ್ಯಾಸರು ತಿಳಿಸಿಕೊಟ್ಟ ಸರ್ವೋತ್ತಮವಾದ ಹರಿತತ್ತ್ವದ ಪ್ರಕಾಶದಿಂದ ಹಾಗೂ ಬೇರೆ ತತ್ತ್ವವಾದ ಪರತತ್ತ್ವಜ್ಞಾನಕ್ಕೆ ಉಪಯೋಗಿಯಾದ ಬ್ರಹ್ಮಾದಿಗಳ ಸ್ವರೂಪಪ್ರಕಾಶದಿಂದಲೂ ಅಜ್ಞಾನಾದಿಗಳು ನಿವಾರಣೆ-ಯಾಗುವುದು. ಒಟ್ಟಾಗಿ ಸಾಕ್ಷಾತ್ತಾಗಿಯೋ ಪರಂಪರೆಯಾಗಿಯೋ ವೇದವ್ಯಾಸರು ಶಾಸ್ತ್ರಗಳನ್ನು ಶ್ರವಣ ಮಾಡಿಸಿ ಪರಾಪರತತ್ತ್ವಗಳ ಪ್ರಕಾಶವನ್ನುಂಟು ಮಾಡಿದ್ದಾರೆ. ಹಾಗಾಗಿ "ಶ್ರವಣಮಾಡಿ, ಮನನಮಾಡಿ ಹಾಗೂ ನಿದಿಧ್ಯಾಸನ ಮಾಡಿದಾಗ ಭಗವದ್ವಿಷಯಕವಾದ ಅಜ್ಞಾನಸಂಶಯ-ವಿಪರ್ಯಯಗಳು ನಷ್ಟವಾಗಿ ಬ್ರಹ್ಮನ ಅಪರೋಕ್ಷಜ್ಞಾನವನ್ನು ಹೊಂದುತ್ತಾನೆ" ಎಂದು ಹೇಳಿದ

ಪ್ರಕಾರ ಶ್ರವಣ-ಮನನಾದಿಗಳಿಂದ ಉಂಟಾದ ಪರಾಪರತತ್ವದ ಪ್ರಕಾಶವೇ ಅಜ್ಞಾನಾದಿ ರೂಪವಾದ ಕತ್ತಲೆಗೆ ನಿವರ್ತಕವಾಗಿದೆ ಎಂದು ತಿಳಿಯಬೇಕು.

ಇದರಿಂದ 'ತಮೇವ' ಎಂಬ ಅನುವ್ಯಾಖ್ಯಾನದ ಎರಡನೆಯ ಪದ್ಯದಲ್ಲಿ 'ಜಗದ್ಗುರೂಣಾಂ ಗುರು-ಮಂಜಸ್ಯೈವ' ಎಂಬ ಪದವು, ಜಗತ್ತಿಗೆ ಗುರುಗಳಾದ ಅಂದರೆ ಶಾಸ್ತ್ರದ ಪ್ರವಕ್ತೃಗಳಾದ ಬ್ರಹ್ಮಾದಿಗಳು ಮುಖ್ಯವಾಗಿಯೇ ಗುರುಗಳಾಗಿದ್ದಾರೆ ಹೊರತು ವಯಸ್ಸಿನಿಂದ ಅಧಿಕವಷ್ಟೇ ಅಲ್ಲ. ಹೀಗಾಗಿ ಶಾಸ್ತ್ರದ ವಿಶೇಷವಕ್ತೃಗಳಾಗಿದ್ದಾರೆ ವೇದವ್ಯಾಸರು ಎಂಬಿಷ್ಟನ್ನು ವಿವರಿಸುತ್ತಿದೆ.

### ತತ್ವದ ನಿಶ್ಚಯವೇ ಬ್ರಹ್ಮನ ಸಾಕ್ಷಾತ್ಕಾರಕ್ಕೆ ಸೋಪಾನ

* ಅಸಂಶಯೇನ ತತ್ತ್ವಸ್ಯ ನಿರ್ಣಯೇ ಬ್ರಹ್ಮದರ್ಶನಮ್ ।
  ಸಮ್ಯಗ್ವಿಷಮವಿಜ್ಞಾನತಾರತಮ್ಯಾನುಸಾರತಃ ॥ 3-3-ಶ್ಲೋ.95 ॥ – (ಅನುವ್ಯಾ.)

– 'ಸಚ್ಛಾಸ್ತ್ರಮಭ್ಯಸೇತ್ ನಿತ್ಯಂ' ಎಂದು ಹೇಳಿದ್ದರಿಂದ ಸಚ್ಛಾಸ್ತ್ರದ ಶ್ರವಣ ಮನನಗಳನ್ನು ಅವಶ್ಯ ಮಾಡಬೇಕು. ಇದು ಸರಿಯಲ್ಲ. ನಿದಿಧ್ಯಾಸನದಿಂದಲೇ ಬ್ರಹ್ಮದರ್ಶನವಾಗುತ್ತದೆ-ಯಾದ್ದರಿಂದ. ಇಲ್ಲದಿದ್ದರೆ ನಿದಿಧ್ಯಾಸನವೇ ವ್ಯರ್ಥವಾಗಲಿ ಎಂಬಾಕ್ಷೇಪಕ್ಕೆ ಉತ್ತರವಾಗಿ ಈ ಪದ್ಯ ಹೊರಟಿದೆ. ತಾತ್ಪರ್ಯಾರ್ಥ ಹೀಗಿದೆ — ನಿದಿಧ್ಯಾಸನವು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವೇ ಆಗಿದೆ. ಆ ನಿದಿಧ್ಯಾಸನಸಿದ್ಧ್ಯಂಗವಾಗಿ ಶ್ರವಣಮನನಗಳು ಆವಶ್ಯಕ. ಅದು ಹೀಗೆ - ಅಸಂಶಯೇನ = ಸಂಶಯ ಹಾಗೂ ವಿಪರ್ಯಯಗಳು ಇಲ್ಲದಿದ್ದಾಗ, ತತ್ತ್ವಸ್ಯ ನಿರ್ಣಯೇ = ತತ್ವನಿಶ್ಚಯ-ವಾಗುತ್ತಿರಲು (ನಿದಿಧ್ಯಾಸನದಿಂದ ಎಂದು ಶೇಷಪೂರಣೆ), ಬ್ರಹ್ಮದರ್ಶನಂ = ಪರಬ್ರಹ್ಮನ ಸಾಕ್ಷಾತ್ಕಾರವು ಆಗುತ್ತದೆ.

### ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ... — ಬ್ರಹ್ಮತರ್ಕ

(ಸುಧಾ) किञ्च शब्दस्यापि ब्रह्मज्ञानसाधनत्वं "यतो वाचो निवर्तन्ते" इति श्रुतिविरुद्धं कथमङ्गीकार्यम्? "तद्वास्य विजिज्ञौ" इत्यादिश्रुतयस्तु परोक्षज्ञानेनापि सार्थकाः । परम्परया अपरोक्षज्ञानसाधनत्ववादिन्यो वा । स्पष्टं हि स्मृतयो वदन्ति –

"श्रुत्वा मत्वा तथा ध्यात्वा तदज्ञानविपर्ययौ ।
संशयं च पराणुद्य लभते ब्रह्मदर्शनम्" इति, (ಬ್ರ.ಸೂ.ಭಾ. 3-3-43) (ಬ್ರಹ್ಮತರ್ಕೇ)

– ವಾಕ್ಯಮೇವ ಪಠತಿ – ಶ್ರುತ್ವೇತ್ಯಾದಿನಾ ॥ ಶ್ರುತ್ವಾ ಮತ್ವಾ । ತಸ್ಯ = ವಿಷ್ಣೋಃ ಸಂಶಯಂ ವಿಷ್ಣುವಿಷಯಕಂ ಯದಜ್ಞಾನಂ ವಿಪರ್ಯಯಶ್ಚ । ತತ್ರ ಶ್ರವಣೇನಾಜ್ಞಾನಮ್, ಮನನೇನ ಚ ವಿಪರ್ಯಯಸಂಶಯೌ ಚ । ಪರಾಣುದ್ಯ = ನಿರಾಕೃತ್ಯ । ಅನಂತರಂ ಧ್ಯಾತ್ವಾ ಬ್ರಹ್ಮದರ್ಶನಂ

ಲಭತೇ ಇತಿ । ಅನೇನ ಕ್ತ್ವಾಪ್ರತ್ಯಯೇನ ಲ್ಯಪಾ ಚ ಪೂರ್ವಕಾಲಿಕತ್ವಪ್ರತೀತೇಃ ಹೇತು-ಹೇತುಮದ್ಭಾವೇನಾವಗತೇ ತತ್ರ ಸಂಶಯಾದಿನಿವೃತ್ತೇಃ ಪೂರ್ವಕಾಲಿಕತ್ವಪ್ರತೀತ್ಯಾ ದ್ವಾರತ್ವ-ಮೇವಾವಗಮ್ಯತೇ । ದರ್ಶನಸ್ಯ ತು ಲಾಭತ್ವೋಕ್ತ್ಯಾ ಮುಖ್ಯಫಲತ್ವಾವಗಮಾದಿತಿ ಜ್ಞಾತವ್ಯಮ್ । ಅತಃ ಸರ್ವೋಪಾಸನಸ್ಯ ಕರ್ತವ್ಯತ್ವಾತ್ ಉಕ್ತಂ ಯುಕ್ತಮಿತಿ ಸಿದ್ಧಮ್ ॥

ವಿಷ್ಣುವಿನ ಬಗ್ಗೆ ಶಾಸ್ತ್ರಶ್ರವಣಮಾಡಿ ಮನನ ಮಾಡಿದ ನಂತರ ವಿಷ್ಣುವಿನ ಬಗ್ಗೆ ಇದ್ದ ಅಜ್ಞಾನ ಶ್ರವಣದಿಂದ ನಾಶವಾಗುತ್ತದೆ. ಮನನದಿಂದ ವಿಪರೀತಜ್ಞಾನ ಹಾಗೂ ಸಂಶಯಗಳು ನಾಶ-ವಾಗುತ್ತವೆ. ಇದಾದಮೇಲೆ ನಿದಿಧ್ಯಾಸನ ಮಾಡಿದಾಗ ಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ. ಈ ಶ್ಲೋಕದಲ್ಲಿ ಕ್ತ್ವಾಪ್ರತ್ಯಯ ಹಾಗೂ ಲ್ಯಪ್‌ಪ್ರತ್ಯಯದಿಂದ ಶ್ರವಣಮನನಗಳು ಹಾಗೂ ನಿದಿ-ಧ್ಯಾಸನವು ಪೂರ್ವಕಾಲಿಕ ಎಂದು ತೋರುವುದು. ಹಾಗೆಯೇ ಕಾರ್ಯಕಾರಣಭಾವವೂ ತೋರುವುದು. ಇನ್ನು ಸಂಶಯಾದಿನಿವೃತ್ತಿಗಳು ಪೂರ್ವಕಾಲಿಕ ಎಂದು ತೋರುವುದರಿಂದ ಅವು ದ್ವಾರವಾಗಿ ಅರ್ಥಾತ್ ಅವಾಂತರಫಲವಾಗಿವೆ. ಇನ್ನು ಸಾಕ್ಷಾತ್ಕಾರವಾದರೋ ಲಾಭವಾಗುತ್ತದೆ ಎಂದು ಹೇಳಿದ್ದರಿಂದ ಅದೇ ಮುಖ್ಯಫಲ.

## ನೇಕ್ಷಾ ಕ್ವಚನ ಬಾಧ್ಯತೇ - ಬ್ರಹ್ಮಾಂಡಪುರಾಣ

"श्रुणुयाद् यावदज्ञानं मतिर्यावदयुक्तता ।
ध्यानं च यावदीक्षा स्यान्नेक्षा क्व च न बाध्यते" इति ब्रह्माण्डे । (ಬ್ರ.ಸೂ.ಭಾ. 4-1-12)
(सुधा -३-३-१-सू ३)

— ಯಾವತ್ = ಯಾವತ್ಪರ್ಯಂತಮ್ ಅಜ್ಞಾನಂ, ತಾವತ್ಪರ್ಯಂತಂ ಶೃಣುಯಾತ್ = ಶ್ರವಣಂ ಕುರ್ಯಾತ್ । ಅಜ್ಞಾನನಿವೃತ್ತಿಪರ್ಯಂತಮಿತ್ಯರ್ಥಃ । ಅಯುಕ್ತತಾ ಯುಕ್ತಿವಿರುದ್ಧತ್ವಾದಿಭ್ರಮಃ ಸಂಶಯೋ ವಾ ಯಾವತ್ ಅಸ್ತಿ ತಾವತ್ಪರ್ಯಂತಂ ಮತಿಃ = ಮನನಂ ಕಾರ್ಯಮ್ । ಯಾವತ್ = ಯದಾ ಈಕ್ಷಾ = ಅಪರೋಕ್ಷಜ್ಞಾನಂ ಸ್ಯಾತ್ = ಭವತಿ, ತಾವತ್ = ತಾವತ್ಕಾಲಪರ್ಯಂತಂ ಧ್ಯಾನಂ ಸ್ಯಾತ್ ।

ನನು ಅಜ್ಞಾನನಿವೃತ್ತಿಪರ್ಯಂತಂ ಶ್ರವಣಂ, ಸಂಶಯಾದಿನಿವೃತ್ತಿಪರ್ಯಂತಂ ಮನನಂ, ಈಕ್ಷಾ-ಪರ್ಯಂತಂ ಧ್ಯಾನಮ್ । ತತ್ರ ಈಕ್ಷಾ ಕಾದಾಚಿತ್ಕೀ ಉತ ಮೋಕ್ಷಪರ್ಯಂತಸ್ಥಾಯಿನೀ । ಆದ್ಯೇ ಮೋಕ್ಷಸಾಧನತ್ವಾನುಪಪತ್ತಿಃ । ದ್ವಿತೀಯೇ ಪುನಃ ಧ್ಯಾನವಿಧಿವಿರೋಧಃ ಇತ್ಯತ ಆಹ — ನೇಕ್ಷಾ ಇತಿ ॥ ಕಾದಾಚಿತ್ಕೀ ಏವ ಈಕ್ಷಾ । ನ ಚ ಮೋಕ್ಷಹೇತುತ್ವಾಭಾವಲಕ್ಷಣಬಾಧಃ ಇತಿ ವಾಚ್ಯಮ್ । ಕ್ವಚನ = ಕದಾಚಿದಪಿ ಈಕ್ಷಾ ಕಾದಾಚಿತ್ಕೀ ಅಪಿ ಮೋಕ್ಷಸಾಧನಂ ಭವತ್ಯೇವ । ಅತಃ ನ ಬಾಧಃ ।

ಪ್ರಕಾರ ಶ್ರವಣ-ಮನನಾದಿಗಳಿಂದ ಉಂಟಾದ ಪರಾಪರತತ್ತ್ವದ ಪ್ರಕಾಶವೇ ಅಜ್ಞಾನಾದಿ ರೂಪವಾದ ಕತ್ತಲೆಗೆ ನಿವರ್ತಕವಾಗಿದೆ ಎಂದು ತಿಳಿಯಬೇಕು.

ಇದರಿಂದ 'ತಮೇವ' ಎಂಬ ಅನುವ್ಯಾಖ್ಯಾನದ ಎರಡನೆಯ ಪದ್ಯದಲ್ಲಿ 'ಜಗದ್ಗುರೂಣಾಂ ಗುರು-ಮಂಜಸ್ಯೈವ' ಎಂಬ ಪದವು, ಜಗತ್ತಿಗೆ ಗುರುಗಳಾದ ಅಂದರೆ ಶಾಸ್ತ್ರದ ಪ್ರವಕ್ತೃಗಳಾದ ಬ್ರಹ್ಮಾದಿಗಳು ಮುಖ್ಯವಾಗಿಯೇ ಗುರುಗಳಾಗಿದ್ದಾರೆ ಹೊರತು ವಯಸ್ಸಿನಿಂದ ಅಧಿಕವಷ್ಟೇ ಅಲ್ಲ. ಹೀಗಾಗಿ ಶಾಸ್ತ್ರದ ವಿಶೇಷವಕ್ತೃಗಳಾಗಿದ್ದಾರೆ ವೇದವ್ಯಾಸರು ಎಂಬಿಷ್ಟನ್ನು ವಿವರಿಸುತ್ತಿದೆ.

## ತತ್ವದ ನಿಶ್ಚಯವೇ ಬ್ರಹ್ಮನ ಸಾಕ್ಷಾತ್ಕಾರಕ್ಕೆ ಸೋಪಾನ

* ಅಸಂಶಯೇನ ತತ್ತ್ವಸ್ಯ ನಿರ್ಣಯೇ ಬ್ರಹ್ಮದರ್ಶನಮ್ ।
  ಸಮ್ಯಗ್ವಿಷಮವಿಜ್ಞಾನತಾರತಮ್ಯಾನುಸಾರತಃ ॥ 3-3-ಶ್ಲೋ.95 ॥ – (ಅನುವ್ಯಾ.)

– 'ಸಚ್ಛಾಸ್ತ್ರಮಭ್ಯಸೇತ್ ನಿತ್ಯಂ' ಎಂದು ಹೇಳಿದ್ದರಿಂದ ಸಚ್ಛಾಸ್ತ್ರದ ಶ್ರವಣ ಮನನಗಳನ್ನು ಅವಶ್ಯ ಮಾಡಬೇಕು. ಇದು ಸರಿಯಲ್ಲ. ನಿದಿಧ್ಯಾಸನದಿಂದಲೇ ಬ್ರಹ್ಮದರ್ಶನವಾಗುತ್ತದೆ-ಯಾದ್ದರಿಂದ. ಇಲ್ಲದಿದ್ದರೆ ನಿದಿಧ್ಯಾಸನವೇ ವ್ಯರ್ಥವಾಗಲಿ ಎಂಬಾಕ್ಷೇಪಕ್ಕೆ ಉತ್ತರವಾಗಿ ಈ ಪದ್ಯ ಹೊರಟಿದೆ. ತಾತ್ಪರ್ಯಾರ್ಥ ಹೀಗಿದೆ – ನಿದಿಧ್ಯಾಸನವು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವೇ ಆಗಿದೆ. ಆ ನಿದಿಧ್ಯಾಸನಸಿದ್ಧ್ಯಂಗವಾಗಿ ಶ್ರವಣಮನನಗಳು ಆವಶ್ಯಕ. ಅದು ಹೀಗೆ – ಅಸಂಶಯೇನ = ಸಂಶಯ ಹಾಗೂ ವಿಪರ್ಯಯಗಳು ಇಲ್ಲದಿದ್ದಾಗ, ತತ್ತ್ವಸ್ಯ ನಿರ್ಣಯೇ = ತತ್ತ್ವನಿಶ್ಚಯ-ವಾಗುತ್ತಿರಲು (ನಿದಿಧ್ಯಾಸನದಿಂದ ಎಂದು ಶೇಷಪೂರಣೆ), ಬ್ರಹ್ಮದರ್ಶನಂ = ಪರಬ್ರಹ್ಮನ ಸಾಕ್ಷಾತ್ಕಾರವು ಆಗುತ್ತದೆ.

## ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ... — ಬ್ರಹ್ಮತರ್ಕ

(ಸುಧಾ) किञ्च शब्दस्यापि ब्रह्मज्ञानसाधनत्वं "यतो वाचो निवर्तन्ते" इति श्रुतिविरुद्धं कथमङ्गीकार्यम्? "तद्वास्य विजिज्ञौ" इत्यादिश्रुतयस्तु परोक्षज्ञानेनापि सार्थकाः। परम्परया अपरोक्षज्ञानसाधनत्ववादिन्यो वा। स्पष्टं हि स्मृतयो वदन्ति –

"श्रुत्वा मत्वा तथा ध्यात्वा तदज्ञानविपर्ययौ।
संशयं च पराणुद्य लभते ब्रह्मदर्शनम्" इति, (ಬ್ರ.ಸೂ.ಭಾ. 3-3-43) (ಬ್ರಹ್ಮತರ್ಕೇ)

– ವಾಕ್ಯಮೇವ ಪಠತಿ – ಶ್ರುತ್ವೇತ್ಯಾದಿನಾ ॥ ಶ್ರುತ್ವಾ ಮತ್ವಾ । ತಸ್ಯ = ವಿಷ್ಣೋಃ ಸಂಶಯಂ ವಿಷ್ಣುವಿಷಯಕಂ ಯದಜ್ಞಾನಂ ವಿಪರ್ಯಯಶ್ಚ । ತತ್ರ ಶ್ರವಣೇನಾಜ್ಞಾನಮ್, ಮನನೇನ ಚ ವಿಪರ್ಯಯಸಂಶಯೌ ಚ । ಪರಾಣುದ್ಯ = ನಿರಾಕೃತ್ಯ । ಅನಂತರಂ ಧ್ಯಾತ್ವಾ ಬ್ರಹ್ಮದರ್ಶನಂ

ಲಭತೇ ಇತಿ । ಅನೇನ ಕ್ತ್ವಾಪ್ರತ್ಯಯೇನ ಲ್ಯಪಾ ಚ ಪೂರ್ವಕಾಲಿಕತ್ವಪ್ರತೀತೇಃ ಹೇತು-ಹೇತುಮದ್ಭಾವೇನಾವಗತೇ ತತ್ರ ಸಂಶಯಾದಿನಿವೃತ್ತೇಃ ಪೂರ್ವಕಾಲಿಕತ್ವಪ್ರತೀತ್ಯಾ ದ್ವಾರತ್ವ-ಮೇವಾವಗಮ್ಯತೇ । ದರ್ಶನಸ್ಯ ತು ಲಾಭತ್ವೋಕ್ತ್ಯಾ ಮುಖ್ಯಫಲತ್ವಾವಗಮಾದಿತಿ ಜ್ಞಾತವ್ಯಮ್ । ಅತಃ ಸರ್ವೋಪಾಸನಸ್ಯ ಕರ್ತವ್ಯತ್ವಾತ್ ಉಕ್ತಂ ಯುಕ್ತಮಿತಿ ಸಿದ್ಧಮ್ ॥

ವಿಷ್ಣುವಿನ ಬಗ್ಗೆ ಶಾಸ್ತ್ರಶ್ರವಣಮಾಡಿ ಮನನ ಮಾಗಿದ ನಂತರ ವಿಷ್ಣುವಿನ ಬಗ್ಗೆ ಇದ್ದ ಅಜ್ಞಾನ ಶ್ರವಣದಿಂದ ನಾಶವಾಗುತ್ತದೆ. ಮನನದಿಂದ ವಿಪರೀತಜ್ಞಾನ ಹಾಗೂ ಸಂಶಯಗಳು ನಾಶ-ವಾಗುತ್ತವೆ. ಇದಾದಮೇಲೆ ನಿದಿಧ್ಯಾಸನ ಮಾಡಿದಾಗ ಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ. ಈ ಶ್ಲೋಕದಲ್ಲಿ ಕ್ತ್ವಾಪ್ರತ್ಯಯ ಹಾಗೂ ಲ್ಯಪ್‌ಪ್ರತ್ಯಯದಿಂದ ಶ್ರವಣಮನನಗಳು ಹಾಗೂ ನಿದಿ-ಧ್ಯಾಸನವು ಪೂರ್ವಕಾಲಿಕ ಎಂದು ತೋರುವುದು. ಹಾಗೆಯೇ ಕಾರ್ಯಕಾರಣಭಾವವೂ ತೋರುವುದು. ಇನ್ನು ಸಂಶಯಾದಿನಿವೃತ್ತಿಗಳು ಪೂರ್ವಕಾಲಿಕ ಎಂದು ತೋರುವುದರಿಂದ ಅವು ದ್ವಾರವಾಗಿ ಅರ್ಥಾತ್ ಅವಾಂತರಫಲವಾಗಿವೆ. ಇನ್ನು ಸಾಕ್ಷಾತ್ಕಾರವಾದರೋ ಲಾಭವಾಗುತ್ತದೆ ಎಂದು ಹೇಳಿದ್ದರಿಂದ ಅದೇ ಮುಖ್ಯಫಲ.

## ನೇಕ್ಷಾ ಕ್ವಚನ ಬಾಧ್ಯತೇ - ಬ್ರಹ್ಮಾಂಡಪುರಾಣ

"श्रुणुयाद् यावदज्ञानं मतिर्यावदयुक्तता ।
ध्यानं च यावदीक्षा स्यान्नेक्षा क्व च न बाध्यते" इति ब्रह्माण्डे । (ಬ್ರ.ಸೂ.ಭಾ. 4-1-12)
(सुधा -३-३-१-सू ३)

— ಯಾವತ್ = ಯಾವತ್ಪರ್ಯಂತಮ್ ಅಜ್ಞಾನಂ, ತಾವತ್ಪರ್ಯಂತಂ ಶ್ರುಣುಯಾತ್ = ಶ್ರವಣಂ ಕುರ್ಯಾತ್ । ಅಜ್ಞಾನನಿವೃತ್ತಿಪರ್ಯಂತಮಿತ್ಯರ್ಥಃ । ಅಯುಕ್ತತಾ ಯುಕ್ತಿವಿರುದ್ಧತ್ವಾದಿಭ್ರಮಃ ಸಂಶಯೋ ವಾ ಯಾವತ್ ಅಸ್ತಿ ತಾವತ್ಪರ್ಯಂತಂ ಮತಿಃ = ಮನನಂ ಕಾರ್ಯಮ್ । ಯಾವತ್ = ಯದಾ ಈಕ್ಷಾ = ಅಪರೋಕ್ಷಜ್ಞಾನಂ ಸ್ಯಾತ್ = ಭವತಿ, ತಾವತ್ = ತಾವತ್ಕಾಲಪರ್ಯಂತಂ ಧ್ಯಾನಂ ಸ್ಯಾತ್ ।

ನನು ಅಜ್ಞಾನನಿವೃತ್ತಿಪರ್ಯಂತಂ ಶ್ರವಣಂ, ಸಂಶಯಾದಿನಿವೃತ್ತಿಪರ್ಯಂತಂ ಮನನಂ, ಈಕ್ಷಾ-ಪರ್ಯಂತಂ ಧ್ಯಾನಮ್ । ತತ್ರ ಈಕ್ಷಾ ಕಾದಾಚಿತ್ಕೀ ಉತ ಮೋಕ್ಷಪರ್ಯಂತಸ್ಥಾಯಿನೀ । ಆದ್ಯೇ ಮೋಕ್ಷಸಾಧನತ್ವಾನುಪಪತ್ತಿಃ । ದ್ವಿತೀಯೇ ಪುನಃ ಧ್ಯಾನವಿಧಿವಿರೋಧಃ ಇತ್ಯತ ಆಹ — ನೇಕ್ಷಾ ಇತಿ ॥ ಕಾದಾಚಿತ್ಕೀ ಏವ ಈಕ್ಷಾ । ನ ಚ ಮೋಕ್ಷಹೇತುತ್ವಾಭಾವಲಕ್ಷಣಬಾಧಃ ಇತಿ ವಾಚ್ಯಮ್ । ಕ್ವಚನ = ಕದಾಚಿದಪಿ ಈಕ್ಷಾ ಕಾದಾಚಿತ್ಕೀ ಅಪಿ ಮೋಕ್ಷಸಾಧನಂ ಭವತ್ಯೇವ । ಅತಃ ನ ಬಾಧಃ ।

ಪ್ರಕಾರ ಶ್ರವಣ-ಮನನಾದಿಗಳಿಂದ ಉಂಟಾದ ಪರಾಪರತತ್ವದ ಪ್ರಕಾಶವೇ ಅಜ್ಞಾನಾದಿ ರೂಪವಾದ ಕತ್ತಲೆಗೆ ನಿವರ್ತಕವಾಗಿದೆ ಎಂದು ತಿಳಿಯಬೇಕು.

ಇದರಿಂದ 'ತಮೇವ' ಎಂಬ ಅನುವ್ಯಾಖ್ಯಾನದ ಎರಡನೆಯ ಪದ್ಯದಲ್ಲಿ 'ಜಗದ್ಗುರೂಣಾಂ ಗುರು-ಮಂಜಸೈವ' ಎಂಬ ಪದವು, ಜಗತ್ತಿಗೆ ಗುರುಗಳಾದ ಅಂದರೆ ಶಾಸ್ತ್ರದ ಪ್ರವಕ್ತೃಗಳಾದ ಬ್ರಹ್ಮಾದಿಗಳು ಮುಖ್ಯವಾಗಿಯೇ ಗುರುಗಳಾಗಿದ್ದಾರೆ ಹೊರತು ವಯಸ್ಸಿನಿಂದ ಅಧಿಕವಷ್ಟೇ ಅಲ್ಲ. ಹೀಗಾಗಿ ಶಾಸ್ತ್ರದ ವಿಶೇಷವಕ್ತೃಗಳಾಗಿದ್ದಾರೆ ವೇದವ್ಯಾಸರು ಎಂಬಿಷ್ಟನ್ನು ವಿವರಿಸುತ್ತಿದೆ.

### ತತ್ವದ ನಿಶ್ಚಯವೇ ಬ್ರಹ್ಮನ ಸಾಕ್ಷಾತ್ಕಾರಕ್ಕೆ ಸೋಪಾನ

* ಅಸಂಶಯೇನ ತತ್ತ್ವಸ್ಯ ನಿರ್ಣಯೇ ಬ್ರಹ್ಮದರ್ಶನಮ್ ।
ಸಮ್ಯಗ್ವಿಷಮವಿಜ್ಞಾನತಾರತಮ್ಯಾನುಸಾರತಃ ॥ 3-3-ಶ್ಲೋ.95 ॥ – (ಅನುವ್ಯಾ.)

– 'ಸಚ್ಛಾಸ್ತ್ರಮಭ್ಯಸೇತ್ ನಿತ್ಯಂ' ಎಂದು ಹೇಳಿದ್ದರಿಂದ ಸಚ್ಛಾಸ್ತ್ರದ ಶ್ರವಣ ಮನನಗಳನ್ನು ಅವಶ್ಯ ಮಾಡಬೇಕು. ಇದು ಸರಿಯಲ್ಲ. ನಿದಿಧ್ಯಾಸನದಿಂದಲೇ ಬ್ರಹ್ಮದರ್ಶನವಾಗುತ್ತದೆ-ಯಾದ್ದರಿಂದ. ಇಲ್ಲದಿದ್ದರೆ ನಿದಿಧ್ಯಾಸನವೇ ವ್ಯರ್ಥವಾಗಲಿ ಎಂಬಾಕ್ಷೇಪಕ್ಕೆ ಉತ್ತರವಾಗಿ ಈ ಪದ್ಯ ಹೊರಟಿದೆ. ತಾತ್ಪರ್ಯಾರ್ಥ ಹೀಗಿದೆ — ನಿದಿಧ್ಯಾಸನವು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವೇ ಆಗಿದೆ. ಆ ನಿದಿಧ್ಯಾಸನಸಿದ್ಧ್ಯಂಗವಾಗಿ ಶ್ರವಣಮನನಗಳು ಆವಶ್ಯಕ. ಅದು ಹೀಗೆ – ಅಸಂಶಯೇನ = ಸಂಶಯ ಹಾಗೂ ವಿಪರ್ಯಯಗಳು ಇಲ್ಲದಿದ್ದಾಗ, ತತ್ವಸ್ಯ ನಿರ್ಣಯೇ = ತತ್ವನಿಶ್ಚಯ-ವಾಗುತ್ತಿರಲು (ನಿದಿಧ್ಯಾಸನದಿಂದ ಎಂದು ಶೇಷಪೂರಣೆ), ಬ್ರಹ್ಮದರ್ಶನಂ = ಪರಬ್ರಹ್ಮನ ಸಾಕ್ಷಾತ್ಕಾರವು ಆಗುತ್ತದೆ.

### ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ... — ಬ್ರಹ್ಮತರ್ಕ

(ಸುಧಾ) किञ्च शब्दस्यापि ब्रह्मज्ञानसाधनत्वं "यतो वाचो निवर्तन्ते" इति श्रुतिविरुद्धं कथमङ्गीकार्यम्? "तद्वास्य विजिज्ञौ" इत्यादिश्रुतयस्तु परोक्षज्ञानेनापि सार्थकाः । परम्परया अपरोक्षज्ञानसाधनत्ववादिन्यो वा । स्पष्टं हि स्मृतयो वदन्ति –

"श्रुत्वा मत्वा तथा ध्यात्वा तदज्ञानविपर्ययौ ।
संशयं च पराणुद्य लभते ब्रह्मदर्शनम्" इति, (ಬ್ರ.ಸೂ.ಭಾ. 3-3-43) (ಬ್ರಹ್ಮತರ್ಕೇ)

– ವಾಕ್ಯಮೇವ ಪಠತಿ – ಶ್ರುತ್ವೇತ್ಯಾದಿನಾ ॥ ಶ್ರುತ್ವಾ ಮತ್ವಾ । ತಸ್ಯ = ವಿಷ್ಣೋಃ ಸಂಶಯಂ ವಿಷ್ಣುವಿಷಯಕಂ ಯದಜ್ಞಾನಂ ವಿಪರ್ಯಯಶ್ಚ । ತತ್ರ ಶ್ರವಣೇನಾಜ್ಞಾನಮ್, ಮನನೇನ ಚ ವಿಪರ್ಯಯಸಂಶಯೌ ಚ । ಪರಾಣುದ್ಯ = ನಿರಾಕೃತ್ಯ । ಅನಂತರಂ ಧ್ಯಾತ್ವಾ ಬ್ರಹ್ಮದರ್ಶನಂ

ಲಭತೇ ಇತಿ । ಅನೇನ ಕ್ತ್ವಾಪ್ರತ್ಯಯೇನ ಲ್ಯಪಾ ಚ ಪೂರ್ವಕಾಲಿಕತ್ವಪ್ರತೀತೇಃ ಹೇತು-ಹೇತುಮದ್ಭಾವೇನಾವಗತೇ ತತ್ರ ಸಂಶಯಾದಿನಿವೃತ್ತೇಃ ಪೂರ್ವಕಾಲಿಕತ್ವಪ್ರತೀತ್ಯಾ ದ್ವಾರತ್ವ-ಮೇವಾವಗಮ್ಯತೇ । ದರ್ಶನಸ್ಯ ತು ಲಾಭತ್ವೋಕ್ತ್ಯಾ ಮುಖ್ಯಫಲತ್ವಾವಗಮಾದಿತಿ ಜ್ಞಾತವ್ಯಮ್ । ಅತಃ ಸರ್ವೋಪಾಸನಸ್ಯ ಕರ್ತವ್ಯತ್ವಾತ್ ಉಕ್ತಂ ಯುಕ್ತಮಿತಿ ಸಿದ್ಧಮ್ ॥

ವಿಷ್ಣುವಿನ ಬಗ್ಗೆ ಶಾಸ್ತ್ರಶ್ರವಣಮಾಡಿ ಮನನ ಮಾಡಿದ ನಂತರ ವಿಷ್ಣುವಿನ ಬಗ್ಗೆ ಇದ್ದ ಅಜ್ಞಾನ ಶ್ರವಣದಿಂದ ನಾಶವಾಗುತ್ತದೆ. ಮನನದಿಂದ ವಿಪರೀತಜ್ಞಾನ ಹಾಗೂ ಸಂಶಯಗಳು ನಾಶ-ವಾಗುತ್ತವೆ. ಇದಾದಮೇಲೆ ನಿದಿಧ್ಯಾಸನ ಮಾಡಿದಾಗ ಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ. ಈ ಶ್ಲೋಕದಲ್ಲಿ ಕ್ತ್ವಾಪ್ರತ್ಯಯ ಹಾಗೂ ಲ್ಯಪ್‌ಪ್ರತ್ಯಯದಿಂದ ಶ್ರವಣಮನನಗಳು ಹಾಗೂ ನಿದಿ-ಧ್ಯಾಸನವು ಪೂರ್ವಕಾಲಿಕ ಎಂದು ತೋರುವುದು. ಹಾಗೆಯೇ ಕಾರ್ಯಕಾರಣಭಾವವೂ ತೋರುವುದು. ಇನ್ನು ಸಂಶಯಾದಿನಿವೃತ್ತಿಗಳು ಪೂರ್ವಕಾಲಿಕ ಎಂದು ತೋರುವುದರಿಂದ ಅವು ದ್ವಾರವಾಗಿ ಅರ್ಥಾತ್ ಅವಾಂತರಫಲವಾಗಿವೆ. ಇನ್ನು ಸಾಕ್ಷಾತ್ಕಾರವಾದರೋ ಲಾಭವಾಗುತ್ತದೆ ಎಂದು ಹೇಳಿದ್ದರಿಂದ ಅದೇ ಮುಖ್ಯಫಲ.

## ನೇಕ್ಷಾ ಕ್ವಚನ ಬಾಧ್ಯತೇ - ಬ್ರಹ್ಮಾಂಡಪುರಾಣ

"श्रुणुयाद् यावदज्ञानं मतिर्यावदयुक्तता ।
ध्यानं च यावदीक्षा स्यान्नेक्षा क्व च न बाध्यते" इति ब्रह्माण्डे । (ಬ್ರ.ಸೂ.ಭಾ. 4-1-12)
(सुधा -३-३-१-सू ३)

— ಯಾವತ್ = ಯಾವತ್ಪರ್ಯಂತಮ್ ಅಜ್ಞಾನಂ, ತಾವತ್ಪರ್ಯಂತಂ ಶ್ರುಣುಯಾತ್ = ಶ್ರವಣಂ ಕುರ್ಯಾತ್ । ಅಜ್ಞಾನನಿವೃತ್ತಿಪರ್ಯಂತಮಿತ್ಯರ್ಥಃ । ಅಯುಕ್ತತಾ ಯುಕ್ತಿವಿರುದ್ಧತ್ವಾದಿಭ್ರಮಃ ಸಂಶಯೋ ವಾ ಯಾವತ್ ಅಸ್ತಿ ತಾವತ್ಪರ್ಯಂತಂ ಮತಿಃ = ಮನನಂ ಕಾರ್ಯಮ್ । ಯಾವತ್ = ಯದಾ ಈಕ್ಷಾ = ಅಪರೋಕ್ಷಜ್ಞಾನಂ ಸ್ಯಾತ್ = ಭವತಿ, ತಾವತ್ = ತಾವತ್ಕಾಲಪರ್ಯಂತಂ ಧ್ಯಾನಂ ಸ್ಯಾತ್ ।

ನನು ಅಜ್ಞಾನನಿವೃತ್ತಿಪರ್ಯಂತಂ ಶ್ರವಣಂ, ಸಂಶಯಾದಿನಿವೃತ್ತಿಪರ್ಯಂತಂ ಮನನಂ, ಈಕ್ಷಾ-ಪರ್ಯಂತಂ ಧ್ಯಾನಮ್ । ತತ್ರ ಈಕ್ಷಾ ಕಾದಾಚಿತ್ಕೀ ಉತ ಮೋಕ್ಷಪರ್ಯಂತಸ್ಥಾಯಿನೀ । ಆದ್ಯೇ ಮೋಕ್ಷಸಾಧನತ್ವಾನುಪಪತ್ತಿಃ । ದ್ವಿತೀಯೇ ಪುನಃ ಧ್ಯಾನವಿಧಿವಿರೋಧಃ ಇತ್ಯತ ಆಹ — ನೇಕ್ಷಾ ಇತಿ ॥ ಕಾದಾಚಿತ್ಕೀ ಏವ ಈಕ್ಷಾ । ನ ಚ ಮೋಕ್ಷಹೇತುತ್ವಾಭಾವಲಕ್ಷಣಬಾಧಃ ಇತಿ ವಾಚ್ಯಮ್ । ಕ್ವಚನ = ಕದಾಚಿದಪಿ ಈಕ್ಷಾ ಕಾದಾಚಿತ್ಕೀ ಅಪಿ ಮೋಕ್ಷಸಾಧನಂ ಭವತ್ಯೇವ । ಅತಃ ನ ಬಾಧಃ ।

ಎಲ್ಲಿಯವರೆಗೂ ಅಜ್ಞಾನವೋ ಅಲ್ಲಿಯವರೆಗೂ ಶ್ರವಣಮಾಡಬೇಕು. ಅಂದರೆ ಅಜ್ಞಾನ ಹೋಗುವವರೆಗೂ ಎಂದರ್ಥ. ಯುಕ್ತಿವಿರೋಧ ಇದೆ ಎನ್ನುವ ಭ್ರಮೆಯಾಗಲೀ ಅಥವಾ ಸಂಶಯವಾಗಲೀ ಎಲ್ಲಿಯವರೆಗೂ ಇರುವುದೋ ಅಲ್ಲಿಯವರೆಗೂ ಮನನವನ್ನು ಮಾಡಬೇಕು. ಯಾವಾಗ ಅಪರೋಕ್ಷಜ್ಞಾನವಾಗುತ್ತದೆಯೋ ಅಲ್ಲಿಯವರೆಗೂ ಧ್ಯಾನಮಾಡಬೇಕು.

ಅಲ್ಲ। ಅಜ್ಞಾನಹೋಗುವವರೆಗೂ ಶ್ರವಣ, ಸಂಶಯಾದಿಗಳ ನಿವೃತ್ತಿಯವರೆಗೂ ಮನನ, ಅಪರೋಕ್ಷಜ್ಞಾನಪರ್ಯಂತ ಧ್ಯಾನ ಇವುಗಳಲ್ಲಿ ಅಪರೋಕ್ಷಜ್ಞಾನವು ಕದಾಚಿತ್ ಉಂಟಾಗುತ್ತದೋ ಅಥವಾ ಮೋಕ್ಷಪರ್ಯಂತ ಇರುತ್ತದೋ? ಮೊದಲನೆಯ ಪಕ್ಷದಲ್ಲಿ ಅದು ಮೋಕ್ಷಸಾಧನವೇ ಆಗಬಾರದು. ಕದಾಚಿತ್ ಇರುವುದರಿಂದ. ಎರಡನೆಯ ಪಕ್ಷದಲ್ಲಿ ಧ್ಯಾನವಿಧಿವಿರೋಧ ಎನ್ನುವುದಕ್ಕೆ ಉತ್ತರವಾಗಿ ಕಾದಾಚಿತ್ಕವಾದುದ್ದೇ ಈಕ್ಷಾ ಎಂದಿದ್ದಾರೆ. ಹಾಗಾದರೆ ಮೋಕ್ಷಕ್ಕೆ ಕಾರಣವಾಗಬಾರದು ಎಂಬ ಬಾಧ ಬರುತ್ತದೆಯಲ್ಲವೇ? ಇಲ್ಲ. ಯಾವಾಗಲಾದರೊಮ್ಮೆ ಬರುವ ಅಪರೋಕ್ಷಜ್ಞಾನವು ಮೋಕ್ಷಸಾಧನವಾಗುವುದು. ಆದ್ದರಿಂದ ಬಾಧ ಇಲ್ಲ.

## ಅನಂತವಾದ ವೇದಗಳನ್ನು ಶ್ರವಣಮಾಡಲು ಸಾಧ್ಯವೇ?

(ಲಘುರಸರಂಜನೀ) — ನನು ಯದುಕ್ತಂ ಶ್ರಾವಯಿತ್ವಾ ತತ್ವಂ ಪ್ರಕಾಶೀತಿ । ತನ್ನ ಯುಕ್ತಮ್ । ಶ್ರವಣೀಯಾಭಾವಾತ್ । ನ ಚ ವೇದಾಃ ಶ್ರವಣೀಯಾಃ । ತೇಷಾಮಾನಂತ್ಯೇನ ಶ್ರೋತುಮಶಕ್ಯತ್ವಾದಪಪಾತಾದಿನಾ ತಿರೋಹಿತತ್ವಾಚ್ಚ ಇತ್ಯತ ಉಕ್ತಮ್ — **ಯೇನ ಶ್ರುತಿಪಂಕಜಂ ಪ್ರಾಬೋಧೀತಿ** ॥ ಅಪಪಾತಾದಿನಾ ತಿರೋಹಿತಂ ಪ್ರಾಗೇವ ಚತುರ್ಧಾ ವಿಭಕ್ತಂ ಋಜ್ಞೈಗದಾದಿರೂಪಂ ವ್ಯಕ್ತೀಕೃತ್ಯೈಕೈಕಸ್ಮಾದೇಕೈಕೋ ಭಾಗ ಇತಿ ಚತುರ್ಧಾ ವ್ಯಭಜತ್ । ಏಕೈಕಂ ಚಾವಾಂತರಮೃಗಾದಿವೇದಂ ಚತುರ್ವಿಂಶತ್ಯಾದಿಶಾಖಾಭೇದೇನ ವ್ಯಭಜದಿತಿ ಭಾವಃ । ತದುಕ್ತಂ —

'ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ ।
ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ।
ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ'

ಇತಿ । ಶ್ರುತೀನಾಂ ಪಂಕಜಾಭೇದಪ್ರತಿಪಾದನಮಪಿ ಇಮಮೇವಾಶಯಂ ದ್ಯೋತಯತಿ । ಯಥಾ ಪೂರ್ವಸ್ಥಿತಮೇವ ಪಂಕಜಂ ಕೇನಚಿನ್ನಿಮಿತ್ತೇನ ಮುಕುಲೀಭಾವಮಾಪನ್ನಂ ದಿವಾಕರಕರಸ್ಪರ್ಶನೇನ ವಿಕಸಿತಂ ವಿಭಕ್ತದಲಂ ಚ ದೃಷ್ಟಂ ತಥಾಽನಾದಿಕಾಲಮಾರಭ್ಯ ಸ್ಥಿತಾ ಏವ ಶ್ರುತಯೋಽಪಪಾತಾದಿನಾ ತಿರೋಹಿತಾಃ ವೇದವ್ಯಾಸೇನ ಸಮ್ಯಗುಚ್ಚಾರಣೇನಾಭಿವ್ಯಂಜಿತಾ ವಿಭಕ್ತಾಶ್ಚ ಕೃತಾ ನತ್ವಪೂರ್ವಾ ಇದಾನೀಮೇವ ನಿರ್ಮಿತಾ ಇತಿ । ತಥಾ ಚ ವೇದಾ ಏವ ಶ್ರವಣೀಯಾಃ, ತಚ್ಛ್ರವಣಾದಿನಾ ತತ್ತ್ವಪ್ರಕಾಶೋ ಭವತೀತಿ ಭಾವಃ ।

ಅಲ್ಲ! ಶ್ರವಣಮಾಡಿಸಿ ತತ್ವವನ್ನು ಪ್ರಕಾಶಪಡಿಸುತ್ತಾರೆ ಎಂದು ಹಿಂದೆ ಹೇಳಿದ್ದು ಸರಿಯಲ್ಲ. ಏಕೆಂದರೆ, ಕೇಳಲು ಯೋಗ್ಯವಾದ ವಸ್ತುವೇ ಇಲ್ಲ. ಅಲ್ಲ! ವೇದಗಳೇ ಶ್ರವಣೀಯವಾದವುಗಳು ಎಂದರೆ ಅವುಗಳು ಅನಂತವಾಗಿರುವುದರಿಂದ ಕೇಳಲು ಅಸಾಧ್ಯವಾಗಿದೆ ಹಾಗೂ ಅಪ-ಪಾತಾದಿಗಳ ಕಾರಣದಿಂದ ಮುಚ್ಚಲ್ಪಟ್ಟಿದೆಯೂ ಕೂಡ ಎಂಬ ಪ್ರಶ್ನೆಗಳಿಗೆ ಉತ್ತರವಾಗಿ 'ಯೇನ ಶ್ರುತಿಪಂಕಜಂ ಪ್ರಾಬೋಧಿ' ಎಂದಿದ್ದಾರೆ.

ಇದರ ಅಭಿಪ್ರಾಯ – ಅಪಪಾತಾದಿಗಳಿಂದ ಮುಚ್ಚಲ್ಪಟ್ಟ ವೇದವನ್ನು ಮೊದಲೇ ನಾಲ್ಕು ವಿಧವಾಗಿ ವಿಭಾಗಹೊಂದಿರುವುದನ್ನು ಋಕ್, ನಿಗದ ಮೊದಲಾದ ಪ್ರಕಾರದಿಂದ ವ್ಯಕ್ತಮಾಡಿ ಒಂದೊಂದರಿಂದ ಒಂದೊಂದು ಭಾಗ ಎಂಬ ರೀತಿಯಲ್ಲಿ ವಿಭಾಗ ಮಾಡಿದರು. ಅದರಲ್ಲೂ ಅವಾಂತರವಾದ ಏಕೈಕ ಋಗಾದಿವೇದಗಳನ್ನು ಇಪ್ಪತ್ತನಾಲ್ಕು ಮುಂತಾದ ಸಂಖ್ಯಾವಿಶೇಷ-ಗಳಲ್ಲಿ ಶಾಖಾಗಳಲ್ಲಿರುವ ಭೇದದಿಂದ ವಿಭಜಿಸಿದ್ದಾರೆ. ಇವೆಲ್ಲವನ್ನೂ ಪ್ರಮಾಣಗಳಲ್ಲಿ ನೋಡ-ಬಹುದು. –

"ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ ।
ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ॥" (ಋಗ್ಭಾಷ್ಯ ಶ್ಲೋ. 163)
"ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ ॥" (ಭಾಗ.ತಾ.1-3-21)

ಎಂದು ಮಂದಮತಿಗಳಾದ ಸಜ್ಜನರನ್ನು ನೋಡಿ ವೇದವ್ಯಾಸರು ಕರುಣೆಯಿಂದ ವೇದವೆಂಬ ಒಂದೇ ಮರವನ್ನು ಅನೇಕ ಶಾಖೆಗಳನ್ನುಳ್ಳದ್ದಾಗಿ ಮಾಡಿ ವಿಸ್ತರಿಸಿದ್ದಾರೆ.

ವೇದಗಳಿಗೆ ಕಮಲದ ಅಭೇದವನ್ನು ಹೇಳಿದ್ದು ಈ ಅಭಿಪ್ರಾಯವನ್ನು ತೋರಿಸುತ್ತಿದೆ. ಹೇಗೆ ಮೊದಲು ಇದ್ದ ಕಮಲವೇ ಯಾವುದೋ ಒಂದು ಕಾರಣದಿಂದ ಮುದುಡುವಿಕೆಯನ್ನು ಪಡೆದದ್ದಾಗಿ ಸೂರ್ಯನ ಕಿರಣಗಳ ಸ್ಪರ್ಶದಿಂದ ಅರಳಿದ್ದು ದಳಗಳ ವಿಭಾಗವನ್ನು ಹೊಂದಿದ್ದಾಗಿ ಕಂಡಿದೆಯೋ ಅದರಂತೆ ಇಲ್ಲಿಯೂ ಅನಾದಿಕಾಲದಿಂದ ಪ್ರಾರಂಭಿಸಿ ಇರುವ ಶ್ರುತಿಗಳೇ ಅಪಪಾತ ಮೊದಲಾ-ದವುಗಳಿಂದ ಮುಚ್ಚಲ್ಪಟ್ಟದ್ದಾಗಿ ವೇದವ್ಯಾಸರ ಒಳ್ಳೆಯ ಉಚ್ಚಾರಣೆಯಿಂದ ಅಭಿವ್ಯಕ್ತವಾಗಿ ವಿಭಾಗಯುಕ್ತವಾಗಿ ಮಾಡಲ್ಪಟ್ಟಿತು ಹೊರತು ಅಪೂರ್ವವಾದದ್ದನ್ನೇ ಈಗ ನಿರ್ಮಾಣಮಾಡಿದ್ದು ಎಂದಲ್ಲ. ಹಾಗಾಗಿ ವೇದಗಳೇ ಶ್ರವಣೀಯವಾಗಿವೆ. ಅವುಗಳ ಶ್ರವಣಮನನಾದಿಗಳಿಂದ ತತ್ವ-ಪ್ರಕಾಶವಾಗುವುದು ಎಂದು ಭಾವ.

* ಭಾಗ.ತಾ. – ಹದಿನೇಳನೇ ಅವತಾರದಲ್ಲಿ ಶ್ರೀಹರಿ ಪರಾಶರಮುನಿಯಿಂದ ಸತ್ಯವತೀದೇವಿಯಲ್ಲಿ ವ್ಯಾಸರೂಪದಿಂದ ಅವತರಿಸಿ ಅಲ್ಪಬುದ್ಧಿಯವರಿಗಾಗಿ ವೇದವೃಕ್ಷಗಳನ್ನು ನಾನಾ ಶಾಖೆಗಳನ್ನಾಗಿ ವಿಭಾಗಿಸಿದ.

## ಋಚಃ ಸ ಋಚ ಉದ್ಧೃತ್ಯ — ಋಗ್ಭಾಷ್ಯಟೀಕಾ ಟಿಪ್ಪಣೀ

**ಋಗ್ಭಾಷ್ಯಟೀಕಾ - ಋಚ ಇತಿ ॥ ಋಙ್-ನಿಗದಸಾಮಾನೀತಿ ಮೂಲವೇದಾದ್ ಉದ್ಧೃತಾ ಉಪವೇದಾ ಉಚ್ಯಂತೇ । ತತೋ ಮೂಲವೇದಾದುಪವೇದಾಃ ತತಶ್ಚ ಅವಾಂತರವೇದಾ ಉದ್ಧೃತಾ ಇತ್ಯೇತದೇವಂ ಪುರಾಣವಚನಾದವಗಮ್ಯತ ಇತ್ಯರ್ಥಃ ।

(ಋಗ್ಭಾಷ್ಯಟಿಪ್ಪಣೀ) ಋಙ್-ನಿಗದಸಾಮಾನೀತಿ ॥ ಅನೇನ 'ಋಚಃ ಸ ಋಚ ಉದ್ಧೃತ್ಯ' ಇತಿ ಭಾಷ್ಯಸ್ಯೈವಂ ಯೋಜನಾ ಸೂಚಿತಾ । 'ಮೂಲವೇದಾದ್ ಉದ್ಧೃತಾಯಾಃ' ಇತಿ ಶೇಷಃ । ಮೂಲ-ವೇದಾದ್ ಉದ್ಧೃತಾಯಾಃ ಋಚಃ ಉಪವೇದರೂಪಋಗ್ರಾಶೇಃ ಋಚಃ ಕಾಶ್ಚಿದ್ ಋಚ ಉದ್ಧೃತ್ಯ ಋಗ್ವೇದನಾಮಕಪ್ರಬಂಧಂ ಕೃತವಾನ್ । ಏವಂ ಮೂಲವೇದಾದ್ ಉದ್ಧೃತಾತ್ ನಿಗದಾದ್ ಯಜೂಂಷಿ ಉದ್ಧೃತ್ಯ ಯಜುರ್ವೇದಂ ತಥಾ ಸಾಮತಃ ಸಾಮಾನಿ ಉದ್ಧೃತ್ಯ ಸಾಮವೇದಂ ಕೃತವಾನಿತಿ । ಆಥರ್ವಣೇಽಪಿ ಇದಮುಪಲಕ್ಷಣಮ್ ।

ಮೂಲವೇದಶ್ಚೋಪವೇದಃ ತಥಾ ಅವಾಂತರ ಏವ ಚ ।
ಶಾಖೋಪಶಾಖಾಭೇದೇನ ವೇದೋಽನೇಕವಿಧೋ ಮತಃ ॥

ಮೂಲವೇದ ಉಪವೇದ ಹಾಗೂ ಅವಾಂತರವೇದ, ಹಾಗೆ ಶಾಖಾ-ಉಪಶಾಖಾಗಳು ಈ ರೀತಿಯಾಗಿ ವೇದವು ಅನೇಕವಿಧವಾಗಿದೆ. ಋಕ್ ಯಜುಃ ಇತ್ಯಾದಿಯಾಗಿ ಹೆಸರು ಇಲ್ಲದಿದ್ದಾಗ ಯಾವಾಗ ಒಟ್ಟಾಗಿ ವೇದರಾಶಿಗಳಿದ್ದವೋ ಅರ್ಥಾತ್ ಕೃತಯುಗದಲ್ಲಿದ್ದಾಗ ಮೂಲವೇದ ಎಂದೇ ಹೆಸರು. ಇದಕ್ಕೆ ಪ್ರಮಾಣ ಹೀಗಿದೆ —

ಪಂಚರಾತ್ರಂ ಋಗಾದ್ಯಾಶ್ಚ ಸರ್ವಮೇಕಂ ಪುರಾಭವತ್ ।
ಮೂಲವೇದ ಇತಿ ಹ್ಯಾಖ್ಯಾ ಕಾಲೇ ಕೃತಯುಗೇ ತದಾ ॥

ನೈವರ್ಕ್-ಸಾಮಾದಿನಾಮಾನಿ ತದಾ ವೇದಸ್ಯ ಚಾಭವನ್ ।

ಎಂದು. ಹೀಗೆ ಕೃತಯುಗದಲ್ಲಿ ಸಂಜ್ಞೆ ಇಲ್ಲದಿದ್ದಾಗ ಮೂಲವೇದ ಎನಿಸಿತ್ತು. ನಂತರ ತ್ರೇತಾ-ಯುಗದಲ್ಲಿ ಉಪವೇದವಾಯಿತು. ಅಂದರೆ ಮೂಲವೇದದಲ್ಲಿ ಋಕ್, ನಿಗದ, ಸಾಮ(ಅಥರ್ವ) ಎಂದು ವಿಭಾಗವಾಯಿತು.

ಏಕೋ ವೇದ ಕೃತೇ ಹ್ಯಾಸೀತ್ ತ್ರೇತಾಯಾಂ ಸ ತ್ರಿಧಾಭವತ್ । ಎಂದು.

ಆ ಉಪವೇದವೇ ದ್ವಾಪರಯುಗದಲ್ಲಿ ಗೌತಮರ ಶಾಪ ಮೊದಲಾದ ಕಾರಣದಿಂದ ನಷ್ಟಪ್ರಾಯ-ವಾಗಿತ್ತು. ಇದನ್ನು ವೇದವ್ಯಾಸರು ಋಗ್ವೇದದಿಂದ ಋಗ್ವೇದವನ್ನು, ಯಜುರ್ವೇದವನ್ನು ನಿಗದದಿಂದ, ಸಾಮವನ್ನು ಸಾಮದಿಂದ ಏಕೈಕದೇಶೇನ ಉದ್ಧರಿಸಿ ನಾಲ್ಕುವೇದಗಳನ್ನಾಗಿ

ಮಾಡಿದರು. ಇಲ್ಲಿ ಅಥರ್ವವೇದವು ನಿಗಮದಲ್ಲೇ ಸೇರುವುದು. ಈ ರೀತಿ ವಿಭಕ್ತವಾದ ಋಗ್ವೇದಾದಿಗಳಿಗೆ ಅವಾಂತರವೇದ ಎಂದು ಹೆಸರು. ಆ ವೇದಗಳು ಶಾಖೋಪಶಾಖೆಗಳಿಂದ ಭಿನ್ನವಾಗಿದ್ದು ಕಂಡುಬರುತ್ತದೆ. ಋಗ್ವೇದ 24ಪ್ರಕಾರ, ಯಜುರ್ವೇದ 101 ಪ್ರಕಾರ, ಸಾಮವೇದ 1000 ಪ್ರಕಾರ, ಅಥರ್ವವೇದ 11 ಪ್ರಕಾರವಾಗಿ.

### ವೇದಾರ್ಥಜ್ಞಾನಕ್ಕೆ ಉಪಾಯವೇನು?

(ಲಘುರಸರಂಜಿನೀ) — ನನು ವೇದಾರ್ಥಜ್ಞಾನೋಪಾಯಾಭಾವಾತ್ ಕಥಂ ತೈರಪಿ ತತ್ತ್ವಪ್ರಕಾಶ ಇತ್ಯತ ಉಕ್ತಮ್ 'ಯೇನ ಗೋಸಂತತಿಃ' 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪ-ಬೃಂಹಯೇತ್' ಇತ್ಯುಕ್ತೇಃ 'ವೇದಾರ್ಥಜ್ಞಾನೋಪಾಯಭೂತೋ ಭಾರತಪುರಾಣಾಖ್ಯವಾಕ್ಯ-ಸಮೂಹಸ್ತಥಾ ವೇದ-ಭಾರತಾದ್ಯ-ಶೇಷನಿರ್ಣೇಯಾರ್ಥನಿರ್ಣಾಯಕನ್ಯಾಯಗ್ರಥನಾತ್ಮಕ-ಬ್ರಹ್ಮಮೀಮಾಂಸಾಶಾಸ್ತ್ರಾಖ್ಯವಾಕ್ಯಸಮೂಹಶ್ಚ ವ್ಯಸ್ತಾರಿ' ಇತಿ । ಅನೇನ 'ತಮೇವ' ಇತಿ ದ್ವಿತೀಯಪದ್ಯೇ 'ಶಾಸ್ತ್ರಪ್ರಭವಮ್' ಇತಿ ಪದಂ ಶಾಸ್ತ್ರಶಬ್ದೇನ ಪ್ರಕೃತತ್ವಾತ್ ಬ್ರಹ್ಮ-ಮೀಮಾಂಸಾಶಾಸ್ತ್ರಂ ವೇದಾದಿಕಂ ಚೋಚ್ಯತೇ । ಪ್ರಭವತ್ಯುತ್ಪದ್ಯತೇ ಪ್ರಥಮಮುಪಲಭ್ಯತೇ ವಾ ಯಸ್ಮಾತ್ ಸ ಪ್ರಭವಃ । ಯಥಾಸಂಭವಂ ಶಾಸ್ತ್ರಸ್ಯ ಪ್ರಭವಃ ತಮಿತಿ । ತಥಾ 'ಗುರು-ರ್ಗುರೂಣಾಮ್' ಇತಿ ಚತುರ್ಥಪದ್ಯೇ ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವ ಇತಿ ಪದಂ ಚ ಗುರೂಣಾಮಶೇಷಾರ್ಥಪ್ರತಿಪಾದಕಾನಾಂ ಸವಿಸ್ತರಾಣಾಂ ವೇದಾದಿಶಾಸ್ತ್ರಾಣಾಂ ಗುರು-ರ್ಮುಖ್ಯಃ ಪ್ರಭವೋ ನ ತು ಸಂಪ್ರದಾಯಮಾತ್ರಸ್ಯ ಪ್ರವರ್ತಕ ಇತಿ ವಿವೃತಂ ಭವತಿ ।

ಅಲ್ಲ! ವೇದಾರ್ಥಜ್ಞಾನಕ್ಕೆ ಉಪಾಯವಿಲ್ಲವಾದ್ದರಿಂದ ಹೇಗೆ ವೇದಗಳಿಂದ ತತ್ತ್ವ-ಪ್ರಕಾಶವಾಗುವುದು ಸಾಧ್ಯ? ಎಂಬ ಪ್ರಶ್ನೆಗೆ ಉತ್ತರವಾಗಿ 'ಯೇನ ಗೋಸಂತತಿಃ ವ್ಯಸ್ತಾರಿ' ಎಂದು ಹೇಳಿದಂತೆ ಇತಿಹಾಸ ಪುರಾಣಗಳಿಂದ ವೇದದ ಉಪಬೃಂಹಣವನ್ನು ಮಾಡಬೇಕು ಎಂಬ ಮಾತಿರುವುದರಿಂದ ವೇದಾರ್ಥಜ್ಞಾನಕ್ಕೆ ಉಪಾಯವಾದ ಮಹಾಭಾರತ ಪುರಾಣಗಳೆಂಬ ವಾಕ್ಯಸಮುದಾಯವು ಹಾಗೂ ವೇದಭಾರತ ಮೊದಲಾದ ಎಲ್ಲ ನಿರ್ಣೇಯಶಾಸ್ತ್ರಗಳ ಅರ್ಥವನ್ನು ನಿರ್ಣಯಿಸುವ ನಿರ್ಣಾಯಕಶಾಸ್ತ್ರವಾದ ಯುಕ್ತಿಸಮುದಾಯ ರೂಪವಾದ ಬ್ರಹ್ಮಸೂತ್ರವಾಕ್ಯಗಳ ಸಮೂಹವು ವೇದವ್ಯಾಸರಿಂದ ವಿಸ್ತಾರಗೊಳಿಸಲ್ಪಟ್ಟಿತು. ಇದರಿಂದ 'ತಮೇವ' ಎಂಬ ಎರಡನೆಯ ಪದ್ಯದಲ್ಲಿ 'ಶಾಸ್ತ್ರಪ್ರಭವಂ' ಎಂಬ ಶಬ್ದದಿಂದ ಶಾಸ್ತ್ರವಾದ ಬ್ರಹ್ಮಸೂತ್ರವನ್ನು ಹಾಗೂ ವೇದಾದಿಗಳನ್ನು ಸ್ವೀಕರಿಸಬೇಕು. ಏಕೆಂದರೆ ಪ್ರಭವ ಎಂದರೆ ಯಾರಿಂದ ಮೊದಲನೆಯ ಪ್ರಕಾಶವೋ ಯಾರಿಂದ ಮೊದಲನೆಯ ಉತ್ಪತ್ತಿಯೋ ಅವರು ಎಂದರ್ಥ. ಹೀಗೆ ಯಥಾ-ಯೋಗ್ಯವಾಗಿ ಶಾಸ್ತ್ರಕ್ಕೆ ಪ್ರಭವರಾದವರೇ ಶಾಸ್ತ್ರಪ್ರಭವ ಎನ್ನಿಸುವರು.

ಹಾಗೆ ಗುರುರ್ಗುರೂಣಾಂ ಎಂಬ ನಾಲ್ಕನೆಯ ಪದ್ಯದಲ್ಲಿ "ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವಃ" ಎಂಬ ಪದವನ್ನು ಗುರೂಣಾಂ ಎಂದರೆ ಎಲ್ಲ ಅರ್ಥಗಳನ್ನೂ ಪ್ರತಿಪಾದನೆ ಮಾಡುವ ವಿಸ್ತಾರವಾದ ವೇದಾದಿಶಾಸ್ತ್ರಗಳಿಗೆ ಗುರುಃ ಮುಖ್ಯವಾದ ಪ್ರಭವರಾಗಿದ್ದಾರೆ ಹೊರತು ಸಂಪ್ರ-ದಾಯಕ್ಕೆ ಮಾತ್ರ ಪ್ರವರ್ತಕರಲ್ಲ ಎಂದು ವಿವರಣೆ ಮಾಡಿದಂತಾಯಿತು.

** 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬ್ರಂಹಯೇತ್' (ಗೀ.ಭಾ. ಉಪೋದ್ಘಾತ)

## ಸನ್ಮಾರ್ಗವನ್ನು ಹೊಂದಲು ಮುಖ್ಯಪ್ರಾಣನ ಅನುಗ್ರಹ ಆವಶ್ಯಕ

(ಲಘುರಸರಂಜಿನೀ) — ನನು ಸಾಧುನಿಕರಸ್ಯ ಉಕ್ತವಿಧಸನ್ಮಾರ್ಗಪ್ರಾಪಣಮಧಿಕಾರ್ಯುತ್ತಮ-ಪ್ರಾಣನಾಯಕಾನುಗ್ರಹಾಭಾವೇ ಕಥಂ ಸ್ಯಾದಿತ್ಯತಃ, ತಮಪಿ ಸಂಪಾದಯತೀತ್ಯಾಹ — **ಸಾಧು-ನಿಕರಃ ಸನ್ಮಾರ್ಗಗಃ ।** `ಅಸತಃ ಸದಜಾಯತ ಬ್ರಹ್ಮ ವಾ ಅಸತ್ ಸದ್ವಾವ ಪ್ರಾಣಃ' ಇತ್ಯಾದಿ-ಶ್ರುತೇಃ ತತಃ ಪ್ರಾಣಸ್ಯ ತದನುಗ್ರಹಸ್ಯೇತಿ ಯಾವತ್ । ಯೋ ಮಾರ್ಗಃ ತನ್ಮಾಹಾತ್ಮ್ಯ-ಶ್ರವಣಾದಿರೂಪ ಉಪಾಯಃ ತದ್ಗಸ್ತಾಕಾರೀತಿ ।

ಅಲ್ಲ! ಸಜ್ಜನರ ಸಮೂಹವು ಮೋಕ್ಷಮಾರ್ಗವನ್ನು ತಲುಪಲು ಅಧಿಕಾರಿಗಳಲ್ಲಿ ಉತ್ತಮರಾದ ಪ್ರಾಣದೇವರ ಅನುಗ್ರಹವಿಲ್ಲದಿದ್ದರೆ ಅಸಾಧ್ಯ. ಹಾಗಾಗಿ ಆ ಅರ್ಥವನ್ನೂ ಇಲ್ಲಿ ಟೀಕಾಚಾರ್ಯರು ಸಂಪಾದಿಸಿಕೊಡುತ್ತಿದ್ದಾರೆ - ಸಾಧುನಿಕರಃ ಸನ್ಮಾರ್ಗಗಃ ಎಂಬ ಭಾಗದಿಂದ. ಸತ್ ಎಂದರೆ ಪ್ರಾಣ ಎಂದರ್ಥ 'ಅಸತಃ ಸದಜಾಯತ ಬ್ರಹ್ಮವಾ ಅಸತ್ ಸತ್ ವಾವ ಪ್ರಾಣಃ' ಮುಂತಾದ ಶ್ರುತಿ ಇರುವುದರಿಂದ. ಹಾಗಾಗಿ "ಸತಃ ಯಃ ಮಾರ್ಗಃ" ಎಂದರೆ ಪ್ರಾಣದೇವರ ಅನುಗ್ರಹದ ಯಾವ ಮಾರ್ಗವಿದೆಯೋ ಅವರ ಮಹಿಮಾಶ್ರವಣಮನನಾದಿಉಪಾಯಗಳು. ಇಂತಹ ಉಪಾಯಗಳನ್ನು ಹೊಂದುವಂತೆ ಯಾರಿಂದ ಮಾಡಲ್ಪಟ್ಟಿತೋ ಎಂದು 'ಯೇನ ಸಾಧುನಿಕರಃ ಸನ್ಮಾರ್ಗಗಃ ಅಕಾರಿ' ಎಂಬ ಭಾಗದ ಅರ್ಥ.

## ದೇವದತ್ತಾದಿವ್ಯಕ್ತಿಗಳಿಗಿಂತ ವಿಲಕ್ಷಣರಾದ ಬಾದರಾಯಣರು

(ಲಘುರಸರಂಜಿನೀ) — ನನು ದೇವದತ್ತಾದಿವತ್ ಸ್ತ್ರೀಪುರುಷಸಂಬಂಧಾಭಿಜಾತಸ್ಯ ಬಾದ-ರಾಯಣಸ್ಯ ಉಕ್ತವಿಧಾನೇಕಕಾರ್ಯಕಾರಿತ್ವಮಸಂಭಾವಿತಮ್ ಇತ್ಯತ ತದ್ವೈಲಕ್ಷಣ್ಯಮಾಹ — **ಯೇನ ಭೂಮಿವಲಯೇ ॥** ಭೂಮಿರ್ವಲಯ ಇವ ಭೂಮಿವಲಯಃ ತಸ್ಮಿನ್ ವರ್ತುಲೇ ಯಮುನಾದ್ವೀಪೇ ಇತಿ ಯಾವತ್ । ಪ್ರಾದುರಭಾವೀತಿ ॥ ಅಯಮಾಶಯಃ — ನ ಬಾದ-ರಾಯಣೋ ದೇವದತ್ತಾದಿಸ್ತ್ರೀಪುರುಷಮಲಾಭಿಸಂಜಾತಃ । ತದ್ದೇಹಸ್ಯ ನಿತ್ಯತ್ವಾತ್ । ಕಿಂತು ಯಥಾ ನೃಸಿಂಹಾಕೃತಿರಾವಿರಾಸೀತ್ ಸ್ತಂಭಾತ್ ತಥಾ ಅಯಮಪಿ ಆವಿರ್ಭೂತ ಏವ

ಸತ್ಯವತ್ಯಾಮ್ । ಅತ ಏವ ಸತ್ಯವತ್ಯಾಂ ಪ್ರಾದುರಭಾವೀತಿ ವಕ್ತವ್ಯೇ ಯಥಾ ಭೂಮಿವಲಯಸ್ಯ ವ್ಯಾಸಾಭಿವ್ಯಕ್ತಿಸ್ಥಾನತ್ವಮಾತ್ರಂ ನ ಪುನರತ್ರ ಕಿಂಚಿದಪಿ ವಿಶೇಷಾಧಾಯಕತ್ವಂ ತಥಾ ಸತ್ಯವತ್ಯಾಮ್ ಅಪಿ ಆವಿರ್ಭಾವಾಧಿಕರಣತ್ವಮೇವ ಇತೀಮಂ ವಿಶೇಷಂ ದ್ಯೋತಯಿತುಂ ಭೂಮಿವಲಯೇ ಪ್ರಾದುರಭಾವೀತ್ಯುಕ್ತಮ್ । ಅತ ಏವ ಭಾಷ್ಯಾದೌ ಭಗವಾನ್ನಾರಾಯಣೋ ವ್ಯಾಸತ್ವೇನಾವ-ತತಾರೇತಿ ಕೇವಲೋಕ್ತಿಃ ।

ಕ್ವಚಿತ್ 'ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್' ಇತ್ಯಾದಿಸ್ತ್ರೀಪುರುಷ-ಸಂಬಂಧಾಭಿಜಾತತ್ವೋಕ್ತಿಸ್ತು ಭಗವತಾ ಅಯೋಗ್ಯಜನಮೋಹನಾಯ ಪ್ರದರ್ಶಿತಚರಿತಾ-ನುವಾದಮಾತ್ರಮ್ । ಯಥೋಕ್ತಂ ಭಾರತತಾತ್ಪರ್ಯನಿರ್ಣಯೇ —

ಯಥಾ ನೃಸಿಂಹಾಕೃತಿರಾವಿರಾಸೀತ್ ಸ್ತಂಭಾತ್ತಥಾ ನಿತ್ಯತನುತ್ವತೋ ವಿಭುಃ ।
ಆವಿರ್ಭವೇದ್ಯೋಷಿತಿ ನೋ ಮಲೋತ್ಥಸ್ತಥಾಽಪಿ ಮೋಹಾಯ ನಿದರ್ಶಯೇತ್ತಥಾ ॥10-49॥

ಇತಿ । ಅತೋ ದೇವದತ್ತಾದಿವಿಲಕ್ಷಣೋ ಬಾದರಾಯಣ ಇತಿ ।

ಪ್ರಾದುರಭಾವಿ — ಅಲ್ಲ! ದೇವದತ್ತ ಮೊದಲಾದ ಮನುಷ್ಯರಂತೆ ಸ್ತ್ರೀಪುರುಷಸಂಬಂಧದಿಂದ ಹುಟ್ಟಿದ ವೇದವ್ಯಾಸರಿಗೆ ನೀವು ಹೇಳಿದ ಅನೇಕ ದೊಡ್ಡಕಾರ್ಯಗಳನ್ನು ಮಾಡಿರುವುದು ಅಸಂಭಾವಿತವಾಗಿದೆ. ಎಂದು ಆಕ್ಷೇಪ. ಪರಿಹಾರ — ದೇವದತ್ತಾದಿವ್ಯಕ್ತಿಗಳಿಗೂ ವೇದವ್ಯಾಸರಿಗೂ ವೈಲಕ್ಷಣ್ಯವನ್ನು ತೋರಿಸುತ್ತಾರೆ - ಯೇನ ಪ್ರಾದುರಭಾವಿ ಎಂಬ ಭಾಗದಿಂದ. ಇದರಿಂದಾಗಿ ವೇದವ್ಯಾಸರಿಗೆ ಉತ್ಪತ್ತಿ ಇಲ್ಲ ಎಂದು ತಿಳಿಸಿದಂತಾಯಿತು. ಸ್ತ್ರೀಪುರುಷರ ಸಂಬಂಧದಿಂದ ಹುಟ್ಟು ಪಡೆದವರಲ್ಲ ಎಂದು ಅಭಿಪ್ರಾಯ. ಯೇನ ಭೂಮಿವಲಯೇ - ಎಂಬಲ್ಲಿ ಭೂಮಿಯು ವಲಯ-ದಂತೆ ಇರುವುದನ್ನು ಭೂಮಿವಲಯ ಎನ್ನುತ್ತಾರೆ. ವಲಯ ಎಂದರೆ ಬಳೆ. ಅಂತಹ ವರ್ತುಲವಾದ ಯಮುನಾದ್ವೀಪದಲ್ಲಿ ಎಂದರ್ಥ. ಒಟ್ಟಭಿಪ್ರಾಯವಿದು — ವೇದವ್ಯಾಸರು ದೇವದತ್ತಾದಿ ಮನುಷ್ಯನಂತೆ ಸ್ತ್ರೀಪುರುಷರ ಮಲದಿಂದ ಹುಟ್ಟಿದವರಲ್ಲ ಅವರ ದೇಹ ನಿತ್ಯವಾದ್ದರಿಂದ. ಹಿಂದೆ ನರಸಿಂಹದೇವರ ಆಕೃತಿಯು ಸ್ತಂಭದಿಂದ ಹೇಗೆ ಪ್ರಕಟಗೊಂಡಿತೋ ಅದರಂತೆ ವೇದವ್ಯಾಸರು ಸತ್ಯವತೀದೇವಿಯಲ್ಲಿ ಅವತಾರ ಮಾಡಿದ್ದಾರೆ. ಆದ್ದರಿಂದಲೇ 'ಸತ್ಯವತ್ಯಾಂ ಪ್ರಾದುರಭಾವಿ' ಎಂದು ಹೇಳಬೇಕಾಗಿದ್ದ ಕಡೆ ಭೂಮಿವಲಯೇ ಪ್ರಾದುರಭಾವಿ ಎಂದು ಹೇಳಿದ್ದಾರೆ. ಇದರಿಂದಾಗಿ ಹೇಗೆ ಭೂಮಿಯು ಅರ್ಥಾತ್ ಯಮುನಾದ್ವೀಪವು ಹೇಗೆ ವೇದವ್ಯಾಸರ ಅಭಿವ್ಯಕ್ತಿಗೆ ಒಂದು ಸ್ಥಾನವಾಗಿದೆಯೋ ಹೊರತಾಗಿ ಏನೂ ಆ ಸ್ಥಾನದಿಂದ ವಿಶೇಷತೆಗಳು ವೇದವ್ಯಾಸರಲ್ಲಿ ಉಂಟಾ-ಗುವುದಿಲ್ಲ. ಹಾಗೆ ಸತ್ಯವತೀದೇವಿಯು ಆವಿರ್ಭಾವಕ್ಕೆ ಅಧಿಕರಣವಾಗಿದ್ದಾಳೆ ಎಂಬ ಈ

ವ್ಯತ್ಯಾಸವನ್ನು ತೋರಿಸಲು 'ಭೂಮಿವಲಯೇ ಪ್ರಾದುರಭಾವಿ' ಎಂದು ಹೇಳಿದ್ದಾರೆ. ಆದ್ದರಿಂದಲೇ ಭಾಷ್ಯದ ಮೊದಲಿಗೆ "ಭಗವಾನ್ ನಾರಾಯಣಃ ವ್ಯಾಸತ್ವೇನ ಅವತತಾರ" ಎಂದು ಕೇವಲ ವೇದವ್ಯಾಸರ ಉಲ್ಲೇಖವನ್ನು ಮಾಡಿ ಅವತಾರವನ್ನು ಹೇಳಿದ್ದಾರೆ. ಆದರೆ ಕೆಲವು ಕಡೆ ಭಗವಂತನೇ ಸ್ತ್ರೀಪುರುಷರ ಸಂಬಂಧದಿಂದ ಹುಟ್ಟಿದವನು ಎಂದು ಹೇಳಿದ್ದಾನೆ – "ಪರಾಶರ-ರಿಂದ ಸತ್ಯವತಿಯಲ್ಲಿ ಮಹಾಯೋಗಿಗಳಾದ ವೇದವ್ಯಾಸರು ಹುಟ್ಟಿದರು" ಎಂದು. ಇದು ಅಯೋಗ್ಯಜನರ ವ್ಯಾಮೋಹಕ್ಕೋಸ್ಕರ ವೇದವ್ಯಾಸರಿಂದ ತೋರಿಸಲ್ಪಟ್ಟ ಚರಿತ್ರೆಯನ್ನು ಅನುವಾದಮಾಡಿದ್ದಷ್ಟೇ ಎಂದು ತಿಳಿಯಬೇಕು. ಇದನ್ನು ಭಾರತತಾತ್ಪರ್ಯನಿರ್ಣಯದಲ್ಲಿ (10ನೇ ಅಧ್ಯಾಯ) ಹೇಳಿದ್ದಾರೆ. –

ಯೋಷಿತ್ಸು ಪುಂಸೋ ಹ್ಯಜನೀವ ದೃಶ್ಯತೇ ನ ಜಾಯತೇ ಕ್ವಾಪಿ ಬಲಾದಿವಿಗ್ರಹಃ ॥ 38 ॥
ಯಥಾ ನೃಸಿಂಹಾಕೃತಿರಾವಿರಾಸೀತ್ ಸ್ತಂಭಾತ್ತಥಾ ನಿತ್ಯತನುತ್ತತೋ ವಿಭುಃ ।
ಆವಿರ್ಭವೇದ್ಯೋಷಿತಿ ನೋ ಮಲೋತ್ಥಸ್ತಥಾऽಪಿ ಮೋಹಾಯ ನಿದರ್ಶಯೇತ್ತಥಾ ॥49॥

ಇಲ್ಲಿ ದೇವದತ್ತನಿಂದ ವೈಲಕ್ಷಣ್ಯವನ್ನು ವೇದವ್ಯಾಸರಿಗೆ ತೋರಿಸಿಕೊಟ್ಟಿದ್ದಾರೆ.

## ವ್ಯಾಸೇನ ಎಂದು ಹೇಳಬೇಕಾಗಿದ್ದಲ್ಲಿ ವ್ಯಾಸದಿವಾಕರೇಣ ಎಂದದ್ದು ಏಕೆ?

(ಲಘುರಸರಂಜಿನೀ) – ನನ್ವಸ್ತು ಬಾದರಾಯಣಸ್ಯ ದೇವದತ್ತಾದಿವೈಲಕ್ಷಣ್ಯಾದುಕ್ತಾನೇಕಕಾರ್ಯ-ಕಾರಿತ್ವಂ ಸಂಭಾವಿತಮ್ । ತನ್ನಿಶ್ಚಯಸ್ತು ಕಥಮಿತ್ಯಾಶಂಕಾಪರಿಹಾರಕತಯಾ 'ವ್ಯಾಸೇನ' ಇತಿ ವಕ್ತವ್ಯೇ 'ವ್ಯಾಸದಿವಾಕರೇಣ' ಇತಿ ವ್ಯಾಸಸ್ಯ ದಿವಾಕರಾಖ್ಯತೇಜಸ್ತ್ವಮುಕ್ತಮ್ । ತಥಾ ಚ ಯಥಾ ದಿವಾಕರೋ ಭೂಮ್ಯಾಃ ವಲಯವದ್ವಿದ್ಯಮಾನೇ ಮಾನಸಗಿರೌ ಆವಿರ್ಭೂಯಾನಂತರಮೇವ ಕಿರಣಸಂತತಿಂ ವಿಸ್ತಾರಯತಿ, ಪಂಕಜಂ ಪ್ರಬೋಧಯತಿ ಘಟಪಟಾದಿತತ್ತ್ವಂ ಪ್ರಕಾಶಯತಿ, ಧ್ವಾಂತಂ ಧ್ವಂಸಂ ಪ್ರಾಪಯತಿ, ಪಾಂಥನಿಕರಂ ಮಾರ್ಗಂ ನಯತಿ ತೇಜಃಸ್ವಭಾವತ್ವಾದೇವ । ತಥಾ ಬಾದರಾಯಣೋऽಪಿ ಪ್ರಾದುರ್ಭಾವಾನಂತರಮೇವ ಗೋಸಂತತಿವಿಸ್ತಾರಾದಿಕಂ ಕರೋತಿ ತೇಜಸ್ತ್ವಾದೇವ ಇತಿ ಕಾತ್ರ ಕಥಂತಾ । ನ ಹಿ ಪ್ರೇಕ್ಷಾವತ್-ಪ್ರವೃತ್ತಿರ್ವಿಫಲಾ ಸಂಭಾವಿನೀ ಇತ್ಯತ ಉಕ್ತಮ್ – **ಕರುಣಯೇತಿ** ॥ ನಷ್ಟಧರ್ಮಜ್ಞಾನಲೋಕಕೃಪಾಲುಭಿರ್ಬ್ರಹ್ಮರುದ್ರೇಂದ್ರಾದಿಭಿಃ ಕೃತೇನ ಪ್ರಾರ್ಥನೇನ ಸಂಜಾತಯಾ ಕರುಣಯಾ - ಇತ್ಯರ್ಥಃ । ತಥಾಚ – ಸ್ವಪ್ರಯೋ-ಜನಾಭಾವೇऽಪಿ ಪರಪ್ರಯೋಜನಾರ್ಥಃ ಪ್ರಾದುರ್ಭಾವಃ । ದೃಶ್ಯಂತೇ ಹಿ ಕೇವಲಂ ಕೃಪಾ-ಪಾರವಶ್ಯೇನ ಪರೋಪಕಾರಾರ್ಥಂ ಪ್ರವರ್ತಮಾನಾಃ ಸುತರಾಂ ತೈರರ್ಥಿತಾ ಇತಿ ಭಾವಃ ।

ಅಲ್ಲ! ವೇದವ್ಯಾಸರಿಗೆ ದೇವದತ್ತನಿಗಿಂತ ವೈಲಕ್ಷಣ್ಯವಿದ್ದದ್ದರಿಂದ ನಾವು ಹೇಳಿದ ಅನೇಕ-

ಕಾರ್ಯಗಳನ್ನು ಅವರು ಮಾಡುವುದು ಸಂಭಾವಿತ. ಆದರೆ ಅದರ ನಿಶ್ಚಯವಾದರೂ ಹೇಗೆ? ಎಂಬ ಪ್ರಶ್ನೆಗೆ ಪರಿಹಾರವನ್ನು ಕೊಡುತ್ತಾ "ವ್ಯಾಸೇನ" ಎಂದು ಹೇಳಬೇಕಾದ ಕಡೆ "ವ್ಯಾಸ-ದಿವಾಕರೇಣ" ಎಂದು ವೇದವ್ಯಾಸರನ್ನು ಸೂರ್ಯನೆಂಬ ತೇಜಸ್ಸಿಗೆ ಹೋಲಿಸಿದ್ದಾರೆ. ಹಾಗಾಗಿ ಹೇಗೆ ಸೂರ್ಯನು ಭೂಮಿಯ ವಲಯದಂತೆ ಇರುವ ಮಾನಸಗಿರಿಯಲ್ಲಿ ಪ್ರಾದುರ್ಭವಿಸಿ ತದನಂತರವೇ ತನ್ನ ಎಲ್ಲ ಕಿರಣಗಳ ಸಮೂಹವನ್ನು ವಿಸ್ತಾರ ಪಡಿಸುತ್ತಿದ್ದಾನೆ. ಕಮಲಗಳನ್ನು ಅರಳಿಸಿದ್ದಾನೆ. ಘಟಪಟ ಮೊದಲಾದ ತತ್ವಗಳನ್ನು ಪ್ರಕಾಶಗೊಳಿಸಿದ್ದಾನೆ. ನಿಬಿಡವಾದ ಕತ್ತಲೆಯನ್ನು ಧ್ವಂಸವನ್ನಾಗಿ ಮಾಡಿದ್ದಾನೆ. ದಾರಿಹೋಕರ ಸಮೂಹವನ್ನು ಮಾರ್ಗದಲ್ಲಿ ಕರೆದು-ಕೊಂಡು ಹೋಗುತ್ತಿದ್ದಾನೆ. ತೇಜಸ್ಸಿನ ಸ್ವಭಾವವುಳ್ಳವನಾದ್ದರಿಂದ. ಹಾಗೆ ಬಾದರಾಯಣರೂ ಕೂಡ ಪ್ರಾದುರ್ಭವಿಸಿದ ಕೂಡಲೇ ಗ್ರಂಥಗಳ ಸಂತತಿಯನ್ನು ವಿಸ್ತಾರಮಾಡಿದ್ದಾರೆ. ತೇಜಸ್ತ್ವ ಇರುವುದರಿಂದಲೇ ಎಂದು ಹೇಳಬೇಕಾಗಿದೆಯೇನು? ಹೇಳಬೇಕಾಗಿಲ್ಲ ಎಂದು ಅಭಿಪ್ರಾಯ. ಇದನ್ನು ನ್ಯಾಯವಿವರಣೆ ಟೀಕೆಯಲ್ಲಿ 'ಬಾದರಾಯಣಸಂಜ್ಞಾಯ ಪರಸ್ಮೈ ಮಹಸೇ ನಮಃ' - 'ತೇಜೋರೂಪಿಯಾದ ಬಾದರಾಯಣರಿಗೆ ನಮಸ್ಕಾರ' ಎಂದಿದ್ದಾರೆ.

ಕರುಣಯಾ — ಅಲ್ಲ। ವೇದವ್ಯಾಸರಿಗೆ ಪ್ರಾದುರ್ಭಾವವನ್ನು ಏಕೆ ಒಪ್ಪುತ್ತೀರಿ? ಪ್ರಾದುರ್ಭಾವಕ್ಕೆ ಪ್ರಯೋಜನವೇನಿಲ್ಲ. ಹಾಗಾಗಿ ಬುದ್ಧಿವಂತರಾದವರು ವಿಫಲವಾದ ಕಾರ್ಯದಲ್ಲಿ ತೊಡಗುವುದಿಲ್ಲ. ಇವರು ಏಕೆ ತೊಡಗಿದರು ಎನ್ನುವುದಕ್ಕೆ (ಅವತಾರ ಮಾಡಿದರು) ಉತ್ತರವಾಗಿ 'ಕರುಣಯಾ' ಎಂದಿದ್ದಾರೆ. ಜ್ಞೇಯವಾದ ಪರತತ್ವ-ಅಪರತತ್ವಗಳ ಹಾಗೂ ಧರ್ಮದ ಜ್ಞಾನವು ನಶಿಸುತ್ತಿರಲು ಲೋಕದ ಜನರ ಮೇಲೆ ಕಾರುಣ್ಯವುಳ್ಳ ಬ್ರಹ್ಮರುದ್ರಇಂದ್ರ ಮೊದಲಾದ ದೇವತೆಗಳು ಮಾಡಿದ ಪ್ರಾರ್ಥನೆಯಿಂದ ಉಂಟಾದ ಕರುಣೆ ಎಂದರ್ಥ. ತಥಾ ಚ - ತಮಗೆ ಪ್ರಯೋಜನವಿಲ್ಲದಿದ್ದರೂ ಬೇರೆಯವರ ಪ್ರಯೋಜನಕ್ಕಾಗಿ ಪ್ರಾದುರ್ಭಾವವನ್ನು ಹೇಳಿದಂತಾಯಿತು. ಕೇವಲ ಕೃಪೆಯ ಪರಾಕಾಷ್ಠತೆಯಿಂದ ಪರರಿಗೆ ಉಪಕಾರ ಮಾಡುವುದಕ್ಕೋಸ್ಕರ ಪ್ರವೃತ್ತಿಮಾಡುವ ಜನರು ಕಾಣಿಸುತ್ತಾರಷ್ಟೆ.

ಪ್ರಾರ್ಥನೆ ಮಾಡಿದರಂತೂ ಅಂತಹ ಜನರು ಅವಶ್ಯವಾಗಿ ಬೇರೆಯವರ ಉಪಕಾರಕ್ಕೋಸ್ಕರ ಪ್ರವೃತ್ತಿ ಮಾಡಿಯೇ ಮಾಡುತ್ತಾರೆ.

### ವೇದವ್ಯಾಸರು ಸಜ್ಜನರ ಸಮೂಹಕ್ಕೆ ಸನ್ಮಾರ್ಗಪ್ರಾಪಕರು ಹೇಗೆ?

(ಲಘುರಸರಂಜನೀ) — ನನು ನ ತಾವದ್ ಬಾದರಾಯಣಃ ಸಾಧನಜಾತಂ ಸಾಧುನಿಕರಾಯ ಸಾಕ್ಷಾದುಪದಿಶತೀತಿ ಯುಕ್ತಮ್ । ಚತುರ್ಮುಖೇತರೇಷಾಂ ಸಾಕ್ಷಾತ್ ತದುಪದೇಶಾ-ಯೋಗಾತ್ । ನಾಪಿ ಚತುರ್ಮುಖದ್ವಾರಾ । ಸರ್ವೇಷಾಂ ಸಾಕ್ಷಾತ್ ತದುಪದೇಶಂ ಪ್ರತ್ಯಕ್ಷ-

**ಯೋಗ್ಯತ್ವಾತ್ । ನ ಚಾಯಮುಪದೇಶಃ ಸಾಧಾರಣಪ್ರಮೇಯಮಾತ್ರವಿಷಯಃ । ಯೇನ ಇಂದ್ರಾದೇರಪಿ ಕದಾಚಿದ್ ವಿರಿಂಚಮುಖಾದುಪದೇಶ ಇವ ನಾರದಾದೇರಿವ ಚ ಯುಜ್ಯೇತ । ಕಿಂತು ಸಾಕ್ಷಾತ್ ಮೋಚಕಾತಿಗೋಪ್ಯಬಿಂಬರೂಪಾದಿವಿಷಯಃ । ನ ಚೇದೃಶ ಉಪದೇಶೋ ಜಂತುಮಾತ್ರಸ್ಯ ವಿರಿಂಚಾದ್ ಹರೇರ್ವಾ ಯುಜ್ಯತೇ । ತತಃ ಕಥಂ ಸಾಧುನಿಕರಸ್ಯ ಸನ್ಮಾರ್ಗ-ಪ್ರಾಪಣಮಿತ್ಯತ ಉಕ್ತಮ್ — ಸತತಂ ಸರ್ವಸಾಧನಾನುಷ್ಠಾನಕಾಲೇಽಪಿ ವ್ಯಾಸದಿವಾಕರೇಣ ಮೇ ಮಾನಸಂ ಮಾ ತ್ಯಾಜೀತಿ ॥**

ಅಲ್ಲ! ವೇದವ್ಯಾಸರು ಸನ್ಮಾರ್ಗದ ಸಾಧನಗಳನ್ನು ಸಜ್ಜನರ ಸಮೂಹಕ್ಕೆ ಸಾಕ್ಷಾತ್ ಉಪದೇಶ ಮಾಡುತ್ತಾರೆ ಎಂಬುದು ಸರಿಯಿಲ್ಲ. ಚತುರ್ಮುಖಬ್ರಹ್ಮದೇವರನ್ನು ಬಿಟ್ಟು ಬೇರೆಯವರು ಸಾಕ್ಷಾತ್ ಆ ಭಗವಂತನಿಂದ ಉಪದೇಶಹೊಂದಲು ಅಯೋಗ್ಯರಾದ್ದರಿಂದ. ಇನ್ನು ಚತುರ್ಮುಖನ ಮುಖಾಂತರ ಎಂದೂ ಹೇಳಲು ಬರುವುದಿಲ್ಲ. ಎಲ್ಲರೂ ಸಾಕ್ಷಾತ್ತಾಗಿ ಚತುರ್ಮುಖನಿಂದ ಉಪದೇಶಪಡೆಯಲು ಅಯೋಗ್ಯರೇ ಆಗಿದ್ದಾರೆ. ಅಲ್ಲ! ಚತುರ್ಮುಖನು ನೀಡುವ ಉಪದೇಶ ಕೇವಲ ಸಾಧಾರಣಪ್ರಮೇಯವನ್ನು ವಿಷಯೀಕರಿಸುವುದು ಎಂದರೆ ಇಲ್ಲ. ಹಾಗಿದ್ದಲ್ಲಿ ಇಂದ್ರಾದಿ-ದೇವತೆಗಳಿಗೂ ಕೂಡ ಬ್ರಹ್ಮದೇವರ ಮುಖದಿಂದ ಯಾವಾಗಲಾದರೂ ಉಪದೇಶವಾದಂತೆ ನಾರದಾದಿಗಳಿಗೂ ಕೂಡ ಉಪದೇಶವಾದಂತೆ ನಮಗೂ ಅದು ಸೂಕ್ತವಾಗುತ್ತಿತ್ತು. ಆದರೆ ಚತುರ್ಮುಖಬ್ರಹ್ಮದೇವರು ಆಯಾಯಾ ಅಧಿಕಾರಿಗಳಿಗೆ ನಮಗೆ ಸಾಕ್ಷಾತ್ ಮೋಕ್ಷವನ್ನು ನೀಡುವ ಅತಿ ಗೋಪ್ಯವಾದ ಬಿಂಬರೂಪವನ್ನು ಉಪದೇಶಿಸುತ್ತಿದ್ದಾರೆ. ಇಂತಹ ಉಪದೇಶವಾದರೋ ಎಲ್ಲ ರೀತಿಯ ಜನರಿಗೆ ಬ್ರಹ್ಮದೇವರಿಂದಲೂ ಪರಿಯಿಂದಲೂ ಕೂಡುವುದಿಲ್ಲ. ಹಾಗಾಗಿ ಸಜ್ಜನರ ಸಮೂಹಕ್ಕೆ ಸನ್ಮಾರ್ಗವನ್ನು ಕೊಡಿಸುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ – "ಯಾವಾಗಲೂ ಎಲ್ಲ ರೀತಿಯ ಸಾಧನಗಳನ್ನು ಅನುಷ್ಠಾನ ಮಾಡಬೇಕಾದರೆ ವೇದವ್ಯಾಸರೆಂಬ ಸೂರ್ಯನು ನನ್ನ ಮನಸ್ಸನ್ನು ಬಿಡದೇ ಇರಲಿ ಎಂದು ಮಾ ತ್ಯಾಜಿ ಎಂದಿದ್ದಾರೆ.

## ಬಹಿಷ್ಠರೂಪದಿಂದ ಶಾಸ್ತ್ರನಿರ್ಮಾಣ; ಮನೋನಿಷ್ಠರೂಪದಿಂದ ರಹಸ್ಯಸಂಪಾದನೆ

(ಲಘುರಸರಂಜನೀ) — ಇದಮುದಿತಂ ಭವತಿ — ಅಸ್ಯೈವ ಅಧಿಕಾರಿಮಾತ್ರಸ್ಯಾಪಿ ಹರಿ-ವಿರಿಂಚಾಭ್ಯಾಮುಪದೇಶೋ ಬಿಂಬಾದೇರೇವ । ನ ಚೈತದುಕ್ತರೀತ್ಯಾ ದುರ್ಘಟಮ್ । ಸಾಕ್ಷಾದ್ ಬಹಿಷ್ಠರೂಪೇಣ ತದನಂಗೀಕಾರಾತ್ । ತಸ್ಯೈವ ದುರ್ಘಟತಯಾಽಭಿಪ್ರೇತತ್ವಾತ್ । ಅಂತರ್ಗತ-ರೂಪೇಣ ಪರೋಕ್ಷೇಣೋಪದೇಶಸ್ಯ ಸ್ವೀಕಾರಾತ್ । ಅನ್ಯಥಾ 'ಬ್ರಹ್ಮೋಪದೇಶೇನೈವ ಸರ್ವೇಷಾಂ ಮುಕ್ತಿಃ' ಇತ್ಯಸ್ಯಾಸಾಮಂಜಸ್ಯಪ್ರಸಂಗಾತ್ । ತಥಾ ಚ ಬಾದರಾಯಣೋ ಬಹಿಷ್ಠರೂಪೇಣ ಶಾಸ್ತ್ರನಿರ್ಮಾಣಾದಿಕಂ ವಿಧಾಯ ಮನೋನಿಷ್ಠೇನ ರೂಪಾಂತರೇಣ ತದರ್ಥ-

ಪಬೋಧಾದಿಸಾಧನಜಾತಂ ರಹಸ್ಯಮಪಿ ಸಂಪಾದಯತೀತಿ ನ ಕಿಂಚಿದತ್ರ ದುರ್ಘಟಮಿತಿ । ನಿಪುಣತರಮೇತದುಪಪಾದಿತಂ ಭಾಗವತಸಾರೋದ್ಧಾರೇ ಗುರುವಿಚಾರಪ್ರಕರಣೇ ಅಸ್ಮದ್ಗುರು-ಚರಣೈಃ ।

ಒಟ್ಟಭಿಪ್ರಾಯ - ಎಲ್ಲ ಅಧಿಕಾರಿಗಳಿಗೂ ಹರಿ ಹಾಗೂ ಬ್ರಹ್ಮದೇವರಿಂದ ಬಿಂಬರೂಪದ ಉಪದೇಶವೇ ಆಗುವುದು. ಅಲ್ಲ ಹಿಂದೆ ಆಕ್ಷೇಪಿಸಿದ ರೀತಿಯಲ್ಲಿ ಇದು ಸರಿಯಲ್ಲ ಎಂದರೆ ಉತ್ತರ - ಸಾಕ್ಷಾತ್ ಬಾಹ್ಯರೂಪದಿಂದ ಉಪದೇಶವನ್ನು ಕೊಡುವರು ಎಂದೊಪ್ಪಿಲ್ಲ. ಅದನ್ನೇ ಇಲ್ಲಿಯವರೆಗೂ ಕೂಡಿಸಲು ಅಸಾಧ್ಯ ಎಂದದ್ದು. ಅದಕ್ಕಾಗಿ ಅಂತರ್ಗತವಾದ ರೂಪದಿಂದ ಪರೋಕ್ಷವಾಗಿ ಉಪದೇಶವನ್ನು ಸ್ವೀಕರಿಸಬೇಕು. ಇಲ್ಲದಿದ್ದರೆ ಬ್ರಹ್ಮನ ಉಪದೇಶದಿಂದಲೇ ಎಲ್ಲರಿಗೂ ಮುಕ್ತಿ ಎಂಬುದು ಅಸಮಂಜಸ ಎಂದಾದೀತು! ಹಾಗಾಗಿ ವೇದವ್ಯಾಸರು ಬಾಹ್ಯ-ರೂಪದಿಂದ ಶಾಸ್ತ್ರನಿರ್ಮಾಣಾದಿಗಳನ್ನು ಮಾಡಿ ಮನಸ್ಸಿನಲ್ಲಿರುವ ಇನ್ನೊಂದು ರೂಪದಿಂದ ಆ ಶಾಸ್ತ್ರಾರ್ಥದ ಜ್ಞಾನವನ್ನು ಸಂಪಾದಿಸಿ ಕೊಡುವ ರಹಸ್ಯವಾದ ವಿಷಯಗಳನ್ನು ತಿಳಿಸುತ್ತಾರೆ. ಆದ್ದರಿಂದ ಇಲ್ಲಿ ಯಾವುದೇ ದುರ್ಘಟವಾದ ವಿಷಯವಿಲ್ಲ. ಈ ವಿಷಯವನ್ನು ಭಾಗವತ-ಸಾರೋದ್ಧಾರದಲ್ಲಿ ನಮ್ಮ ಗುರುಗಳು ಗುರುವಿಚಾರಪ್ರಕರಣದಲ್ಲಿ ಅತ್ಯಂತ ನೈಪುಣ್ಯತೆಯಿಂದ ಉಪಪಾದನೆ ಮಾಡಿದ್ದಾರೆ.

## ವ್ಯಾಸರಾಗಿ ಯಾರು ಬಂದರು?

(ಲಘುರಸರಂಜನೀ) — ನನು ವ್ಯಾಸಸ್ಯ ಕೇನಾವಿರ್ಭಾವಃ । ನಾರಾಯಣೇನೇತಿ ಚೇತ್ । ತರ್ಹಿ ಹರೇಃ ಕಿಮಾಯಾತಮ್ । ನ । ಹರಿನಾರಾಯಣಯೋರೈಕ್ಯಾತ್ । ತದೇವ ಕಥಂ ನಿಶ್ಚಿತಮಿತಿ ಚೇತ್ । ನ । 'ಭಗವಾನ್ನಾರಾಯಣೋ ವ್ಯಾಸತ್ವೇನ ಅವತತಾರ' 'ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ' 'ಪ್ರಾದುರ್ಭೂತೋ ಹರಿರ್ವ್ಯಾಸಃ' ಇತಿ ಭಾಷ್ಯಕಾರೀಯವಾಕ್ಯಪ್ರಾಬಲ್ಯಾನ್ಯಥಾನುಪ-ಪತ್ತೇರೇವ ನಿಶ್ಚಾಯಕತ್ವಾದಿತಿ ।

ಅಲ್ಲ! ವೇದವ್ಯಾಸರಿಗೆ ಯಾರಿಂದ ಆವಿರ್ಭಾವ. ನಾರಾಯಣನಿಂದ ಎಂದರೆ ಹರಿಗೆ ಏನಾ-ಯಿತು? ಇದು ಸರಿಯಲ್ಲ. ಹರಿನಾರಾಯಣರೂ ಒಂದೇ ಆದ್ದರಿಂದ. ಅದು ಹೇಗೆ ನಿಶ್ಚಿತ ಎಂದರೆ 'ಭಗವಾನ್ ನಾರಾಯಣಃ ವ್ಯಾಸತ್ವೇನ ಅವತತಾರ', 'ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ'. 'ಪ್ರಾದುರ್ಭೂತೋ ಹರಿರ್ವ್ಯಾಸಃ' ಎಂಬ ಭಾಷ್ಯಕಾರರ ವಾಕ್ಯಗಳ ಪ್ರಾಬಲ್ಯದಿಂದ ಎಂದು ಉತ್ತರ.

## 'ವ್ಯಾಪ್ತಿರ್ಯಸ್ಯ ನಿಜೇ ..' ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा –**

व्याप्तिर्यस्य निजे निजेन महसा पक्षे सपक्षे स्थिति-
र्व्यावृत्तिश्च विपक्षतोऽथ विषये सक्तिर्नवै बाधिते ।
नैवास्ति प्रतिपक्षयुक्तिरतुलं शुद्धं प्रमाणं स मे
भूयात् तत्वविनिर्णयाय भगवानानन्दतीर्थो मुनिः ॥३॥

**ಅನ್ವಯಾರ್ಥ** - ಯಸ್ಯ = ಯಾರಿಗೆ; ನಿಜೇನ ಮಹಸಾ = ತಮ್ಮ ಸಹಜವಾದ ಜ್ಞಾನದಿಂದ; ನಿಜೇ ಪಕ್ಷೇ = ತಮ್ಮ ಹಾಗೂ ಪರರ ಪಕ್ಷದಲ್ಲಿ (ಸಿದ್ಧಾಂತದಲ್ಲಿ ಅಥವಾ ಪರಮಾತ್ಮನಲ್ಲಿ ಅಥವಾ ಸಾಧ್ಯದಲ್ಲಿ); ಸ್ಥಿತಿಃ = ಇರುವಿಕೆಯು; ಯಸ್ಯ = ಯಾರಿಗೆ; ಸಪಕ್ಷೇ = ತನ್ನ ಸಿದ್ಧಾಂತಕ್ಕೆ ಸಮಾನವಾದ ಪಕ್ಷವಾದ ಮಹಾಭಾರತಾದಿಗಳಲ್ಲಿ; ಸ್ಥಿತಿಃ = ಇರುವಿಕೆಯು; ಚ = ಮತ್ತು; ಯಸ್ಯ = ಯಾರಿಗೆ; ವಿಪಕ್ಷತಃ = ತನ್ನ ಸಿದ್ಧಾಂತಕ್ಕೆ ವಿರುದ್ಧಪಕ್ಷಗಳಾದ ಪಾಷಂಡ ಮೊದಲಾದ ಆಗಮಗಳಿಂದ; ವ್ಯಾವೃತ್ತಿಃ = ಇಲ್ಲದಿರುವಿಕೆಯು; ಅಥ = ಅನಂತರ; ಬಾಧಿತೇ = ಪ್ರಮಾಣಗಳಿಂದ ಬಾಧವಿರುವ; ವಿಷಯೇ = ವಿಷಯದಲ್ಲಿ; ಸಕ್ತಿಃ = ಸ್ನೇಹವು; ನ ವೈ = ಇಲ್ಲವೆಂದು ಪ್ರಸಿದ್ಧವೋ; ಯಸ್ಯ = ಯಾರಿಗೆ; ಪ್ರತಿಪಕ್ಷಯುಕ್ತಿಃ = ಪ್ರತಿಪಕ್ಷ - ಪ್ರತಿವಾದಿಗಳ, ಯುಕ್ತಿಃ - ಸಂಬಂಧವು; ನೈವ ಅಸ್ತಿ = ಯಾವತ್ತೂ ಇರುವುದಿಲ್ಲವೋ; ಸಃ = ಅಂತಹ; ಅತುಲಂ = ದೃಷ್ಟಾಂತರಹಿತರಾದ; ಶುದ್ಧಂ ಪ್ರಮಾಣಂ = ದೋಷರಹಿತವಾದ ಅನುಮಾನಪ್ರಮಾಣರೂಪರಾದ; ಭಗವಾನ್ = ಷಡ್ಗುಣೋ-ಪೇತರಾದ; ಆನಂದತೀರ್ಥೋ ಮುನಿಃ = ಆನಂದಕರವಾದ ಶಾಸ್ತ್ರವನ್ನು ರಚಿಸಿರುವ ಮುನಿಗಳಾದ ಮಧ್ವಾಚಾರ್ಯರು; ಮೇ = ನನಗೆ; ತತ್ತ್ವನಿರ್ಣಯಾಯ = ಪರಾಪರತತ್ತ್ವಗಳ ನಿರ್ಣಯಕ್ಕಾಗಿ; ಭೂಯಾತ್ = ಆಗಲಿ.

ಸಾರ – ಈ ಪದ್ಯದಲ್ಲಿ ಆನಂದತೀರ್ಥರನ್ನು ಅಂದರೆ ಮಧ್ವಾಚಾರ್ಯರನ್ನು ಪ್ರಾರ್ಥಿಸಿದ್ದಾರೆ. ನನಗೆ ನೀವು ತತ್ವನಿರ್ಣಯಕ್ಕಾಗಿ ಆಗಿರಿ. ಇಲ್ಲಿ ಅನುಮಾನಪ್ರಮಾಣಕ್ಕೆ ಆಚಾರ್ಯರನ್ನು ಹೋಲಿಸಿ-ದ್ದಾರೆ. ಅನುಮಾನಪ್ರಮಾಣದಲ್ಲಿ ಪಕ್ಷ, ಸಪಕ್ಷ, ವಿಪಕ್ಷ, ಅಬಾಧಿತತ್ವ, ಅಸತ್ಪ್ರತಿಪಕ್ಷಿತತ್ವ ಎಂಬ ಐದು ಅಂಗಗಳಿವೆ. ಹಾಗೆಯೇ ಇವರಿಗೂ ಕೂಡ ಪಕ್ಷ ಸಪಕ್ಷ ಮೊದಲಾದ ಅಂಗಗಳಿವೆ. ಹಾಗಾಗಿ ಶುದ್ಧಪ್ರಮಾಣರಾಗಿದ್ದಾರೆ. ಅಂತೆಯೇ ಪ್ರಸಿದ್ಧ ಅನುಮಾನಕ್ಕಿಂತಲೂ ಹೆಚ್ಚಿನ ಗುಣವನ್ನು ಪಡೆದಿ-ರುವುದರಿಂದ ಇವರಿಗೆ ಸಮಾನವಾದ ಮತ್ತೊಂದು ಪ್ರಮಾಣವೂ ಇಲ್ಲ ಎಂದು.

## ನಿಜೇ ನಿಜೇನ ಮಹಸಾ ಪಕ್ಷೇ ವ್ಯಾಪ್ತಿಃ

**कम्वा** – व्याप्तिरिति ॥ यस्या**नन्दतीर्थमुने**र्निजे **स्वीयपक्षे** –

'अशेषगुणपूर्णत्वं सर्वदोषसमुज्झितिः ।
विष्णोरन्यच्च तत्तन्त्रमिति सम्यग्विनिर्णयः ।
स्वतन्त्रत्वं सदा तस्य तस्य भेदश्च सर्वतः ॥ (अनुव्या. ३.३. श्लो८२)

**इत्यादिना वक्ष्यमाणे सत्सिद्धान्तरूपे** निजेन महसा **अविनाशिना ज्ञानेन व्याप्तिः साकल्येन तद्विषयत्वमिति यावत् । 'निजौ स्वीयाविनाशिनौ' इत्यभिधानात् ।**

'एवं प्रलयकालेऽपि प्रतिभातपरावरः ।
मुख्यवायुर्नित्यसमः ....' (मातरिश्वाधिकरण २-३.श्लो.२०)

**इति वक्ष्यमाणरीत्या मुख्यवायोर्वृत्तिरूपज्ञानस्य प्रलयकाले नाशाभाव इति द्रष्टव्यम् । 'महस्तूत्सवतेजसोः' इत्यभिधानात् तेजोवाची महश्शब्दः अर्थ-प्रकाशकज्ञानवाची च भवति । 'पक्ष परिग्रहे' इत्यस्मान्निष्पन्नः पक्षशब्दः स्वपरि-गृहीतसत्सिद्धान्तवाची ।**

ಯಾವ ಆನಂದತೀರ್ಥರೆಂಬ ಮುನಿಗಳಿಗೆ ತಮ್ಮ ಪಕ್ಷವಾದ - "ಅಶೇಷಗುಣಪೂರ್ಣತ್ವಂ ..... ತಸ್ಯ ಭೇದಶ್ಚ ಸರ್ವತಃ" - ಭಗವಂತನು ಸಕಲಗುಣಪರಿಪೂರ್ಣನು, ಸರ್ವದೋಷವಿದೂರನು, ತನಗಿಂತ ಇತರವಾದ ಸಮಸ್ತಜಗತ್ತೂ ಅವನ ಅಧೀನವೆಂಬ ಸಮೀಚೀನವಾದ ನಿಶ್ಚಯವು ಸದಾ ಭಗವಂತನು ಸ್ವತಂತ್ರನು ಹಾಗೂ ಎಲ್ಲ ವಸ್ತುಗಳಿಂದ ಅವನಿಗೆ ಭೇದವಿದೆ. ಮುಂತಾದ ರೀತಿಯಲ್ಲಿ ಮುಂದೆ ಹೇಳುವ ಸತ್ಸಿದ್ಧಾಂತವೆನ್ನಿಸಿಕೊಳ್ಳುವುದರಲ್ಲಿ ತನ್ನ ನಾಶರಹಿತವಾದ ಜ್ಞಾನದಿಂದ ವ್ಯಾಪ್ತಿಯು ಇದೆ. ಅರ್ಥಾತ್ ಸಂಪೂರ್ಣವಾಗಿ ಅವರ ಜ್ಞಾನಕ್ಕೆ ಆ ಸತ್ಸಿದ್ಧಾಂತವು ವಿಷಯವಾಗಿದೆ - ಎಂದು. "ನಿಜೌ ಸ್ವೀಯಾವಿನಾಶಿನೌ" ನಿಜಶಬ್ದವು ಸ್ವೀಯ (ತನ್ನ ಸಂಬಂಧಿಯಾದ) ಹಾಗೂ ಅವಿನಾಶಿ ಎಂಬ ಅರ್ಥದಲ್ಲಿದೆ ಎನ್ನುವ ಕೋಶವಿರುವುದರಿಂದ.

"ಏವಂ ಪ್ರಲಯಕಾಲೇऽಪಿ ಪ್ರತಿಭಾತಪರಾವರಃ । ಮುಖ್ಯವಾಯುಃ ನಿತ್ಯಸಮಃ" — ಎಂದು ಮುಂದೆ ಹೇಳುವ ಪ್ರಮಾಣರೀತ್ಯಾ ಮುಖ್ಯಪ್ರಾಣನು ನಿತ್ಯಸಮ ಎನಿಸಿಕೊಳ್ಳುವನು. ಏಕೆಂದರೆ ಪ್ರಲಯಕಾಲದಲ್ಲಿಯೂ ಶರೀರವಿಲ್ಲದಿದ್ದಾಗ ತನ್ನ ಯೋಗಪ್ರಭಾವಸಹಕೃತವಾದ ಮನೋವೃತ್ತಿಯಿಂದ ಸಕಲವನ್ನೂ ಅರ್ಥಾತ್ ಅತೀತಾನಾಗತವಿಷಯಗಳನ್ನು ವಿಷಯೀಕರಿಸುತ್ತಿರುವನು.

"ಮಹಸ್ಸೂತ್ಸವತೇಜಸೋಃ" - ಮಹಸ್-ಶಬ್ದವಾದರೋ ಉತ್ಸವ ಹಾಗೂ ತೇಜಸ್ಸು ಎಂಬರ್ಥ-ದಲ್ಲಿದೆ - ಎಂದು ಹೇಳುವ ಕೋಶದಿಂದ ತೇಜಸ್ಸು ಎಂಬ ಅರ್ಥವನ್ನು ಹೇಳುವ ಮಹಸ್-ಶಬ್ದವು ಅರ್ಥಪ್ರಕಾಶಕವಾದ ಜ್ಞಾನವೆಂಬ ಅರ್ಥವನ್ನು ಹೇಳುವುದು. ಪಕ್ಷ-ಪರಿಗ್ರಹೇ - ಪರಿಗ್ರಹ ಎನ್ನುವ ಅರ್ಥದಲ್ಲಿರುವ ಪಕ್ಷಧಾತುವಿನಿಂದ ಹುಟ್ಟಿದ ಪಕ್ಷ ಎಂಬ ಶಬ್ದವು ತನ್ನಿಂದ ಹಾಗೂ ಪರರಿಂದ ಸ್ವೀಕರಿಸಲ್ಪಟ್ಟ ಸಿದ್ಧಾಂತವೆಂಬ ಅರ್ಥವನ್ನು ಹೇಳುವುದು.

## ಪರಸಿದ್ಧಾಂತ ಹಾಗೂ ಅಪರಸಿದ್ಧಾಂತ

**ವ್ಯಾ.ವಿ. -ಕಂ. ರಾ. ಟಿಪ್ಪಣಿಯಲ್ಲಿ ಸತ್ಸಿದ್ಧಾಂತದ ಕೆಲವಂಶಗಳನ್ನು ಉಲ್ಲೇಖಿಸಿದ್ದಾರೆ. ಅದರ ಶೇಷಾಂಶ ಹೀಗಿದೆ -**

**ಅದೋಷತ್ವಸ್ಯ ಸಿದ್ಧ್ಯರ್ಥಂ ಯದಭೇದೇ ತದನ್ವಯಃ ।**
**ತತ್‌ತಂತ್ರತ್ವಂ ಚ ಮುಕ್ತಾನಾಂ ಅಪಿ ತದ್ಗುಣಪೂರ್ತಯೇ ॥**
**ಮುಕ್ತಾನಾಮಪಿ ಭೇದಶ್ಚ ನ ಹಿ ಭಿನ್ನಮಭಿನ್ನತಾಮ್ ।**
**ಗಚ್ಛೇದ್ದೃಷ್ಟಂ ಕ್ವಚಿತ್ ತಸ್ಯಾಪ್ಯಭಾವೋಽನುಭವೋಪಗಃ॥**
**ಪೂರ್ವಾಭೇದೇ ದೋಷವತ್ವಮ್ ಈಶಸ್ಯೇತ್ಯತಿಭಿನ್ನತಾ ।**
**ನಾರಾಯಣೇನ ಮುಕ್ತಾನಾಂ ಅಪಿ ಸಮ್ಯಕ್ ಇತಿ ಸ್ಥಿತಿಃ ॥**
**ಭೇದಾಭೇದೇಽಪ್ಯಭೇದೇನ ದೋಷಾಣಾಮಪಿ ಸಂಭವಃ ।**
**ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ ॥**
**ಬ್ರಹ್ಮಾ ಸರಸ್ವತೀ ವೀಂದ್ರಶೇಷರುದ್ರಾಶ್ಚ ತತ್‌ಸ್ತ್ರಿಯಃ ।**
**ಶಕ್ರಕಾಮೌ ತದನ್ಯೇ ಚ ಕ್ರಮಾನ್ಮುಕ್ತಾವಪೀತಿ ಚ ।**
**ಸತ್ಸಿದ್ಧಾಂತ ಇತಿ ಜ್ಞೇಯೋ ನಿರ್ಣೀತೋ ಹರಿಣಾ ಸ್ವಯಮ್ ।**
**ಏತದ್ವಿರೋಧಿ ಯತ್ಸರ್ವಂ ತಮಸೇಽಂಧಾಯ ಕೇವಲಮ್ ॥**

**- ಸರ್ವವೇದಾಂತಪ್ರತ್ಯಯಾಧಿಕರಣಮ್ ಅನುವ್ಯಾಖ್ಯಾನ (3-3-1)**

**— ಒಂದು ವೇಳೆ ವಿಷ್ಣುವಿಗೆ ಜಗತ್ತಿನಿಂದ ಅಭೇದವು ಇದ್ದರೆ, ಅಸ್ವಾತಂತ್ರ್ಯವೂ ಇದ್ದರೆ ಅವನಿಗೆ ದೋಷಸಂಬಂಧವೂ ಹಾಗೂ ಗುಣಪೂರ್ತ್ಯಾದ್ಯಭಾವವೂ ಬರುತ್ತದೆ. ಹಾಗಾಗಿ ಅದೋಷತ್ವದ ಸಿದ್ಧಿಗಾಗಿ, ಸಕಲಜಗಜ್ಜನ್ಮಾದಿಕಾರಣತ್ವದ ಸಿದ್ಧಿಗಾಗಿಯೂ ಪ್ರಕೃತಿ ಜೀವಜಡಾದಿಗಳಿಂದ ಭೇದವನ್ನು ಅಂಗೀಕರಿಸಲೇಬೇಕು. ಆ ವಿಷ್ಣುವು ಗುಣಪೂರ್ಣನೆಂದು, ಮುಕ್ತರಿಗೂ ಕೂಡ ಆ ಹರಿಯ ಅಧೀನತ್ವವು ಒಪ್ಪಬೇಕು. ಏಕೆಂದರೆ ಹರ್ಯಧೀನತ್ವವು ಮುಕ್ತರಿಗಿಲ್ಲದಿದ್ದರೆ ಶ್ರೀಹರಿಗೆ ಪೂರ್ಣವಾದ ಐಶ್ವರ್ಯವು ಸಿದ್ಧವಾಗಲಾರದು. ಪೂರ್ಣೈಶ್ವರ್ಯನಾಗದಿದ್ದರೆ ಗುಣಪೂರ್ತಿಯು**

ಸಿದ್ಧಿಸಲಾರದು. ಮುಕ್ತರಿಗೂ ಕೂಡ ಶ್ರೀಹರಿಯಿಂದ ಅತ್ಯಂತಭೇದವನ್ನು ಒಪ್ಪಬೇಕು. ಶ್ರೀಹರಿಯಿಂದ ಮುಕ್ತರು ಭಿನ್ನಾಭಿನ್ನರು ಅಂದರೆ ಸಂಸಾರದಲ್ಲಿ ಭಿನ್ನರು ಮುಕ್ತರಾದ ಮೇಲೆ ಅಭಿನ್ನರು ಎಂದೂ ಹೇಳಬಾರದು. ಮೊದಲು ಭಿನ್ನವಾದದ್ದಕ್ಕೆ ಆಮೇಲೆ ಅಭೇದವು ಎಲ್ಲಿಯೂ ಕಂಡಿಲ್ಲ. ಹಾಗೂ ಭಿನ್ನವಾದುದು ಅಭೇದವನ್ನು ಹೊಂದುತ್ತದೆ ಎಂಬ ಅರ್ಥವು ಅನುಭವಸಿದ್ಧವಾಗಿಲ್ಲ.

ಸಂಸಾರದಲ್ಲಿ ಅಭೇದವನ್ನು ಒಪ್ಪಿ ಮುಕ್ತಿಯಲ್ಲಿ ಅಭೇದವು ಕಾಣುತ್ತದೆ ಎಂದರೆ ಅದು ಸರಿಯಲ್ಲ. ಏಕೆಂದರೆ ಮೊದಲು ಜೀವಪರಮಾತ್ಮರಲ್ಲಿ ಅಭೇದವಿದ್ದರೆ ಭಗವಂತನಿಗೂ ದೋಷ ಬಂದೇ ಬರುವುದು. ಸತ್ಯವಾದ್ದರಿಂದ ಸಂಸಾರವು ಸುಳ್ಳು ಎಂದು ಹೇಳಲಂತೂ ಬರುವುದಿಲ್ಲ. ಹೀಗೆ ಮುಕ್ತರಿಗೂ ಪರಮಾತ್ಮರಿಗೂ ಅತ್ಯಂತ ಭೇದವಿದೆ ಎಂದು ಹೇಳಬೇಕು. ಅಲ್ಲ ಪರಮಾತ್ಮನಲ್ಲಿ ದೋಷ ಬರದಿರಲು ಅತ್ಯಂತ ಭೇದವನ್ನೇ ಸಂಸಾರಿಯೊಂದಿಗೆ ಹಾಗೂ ಮುಕ್ತನೊಂದಿಗೆ ಏಕೆ ಒಪ್ಪಬೇಕು. ಭೇದಾಭೇದವನ್ನು ಒಪ್ಪಿದರೂ ಪರಮಾತ್ಮನಲ್ಲಿ ದೋಷ ಬರುವುದಿಲ್ಲವಲ್ಲ ಎಂದರೆ ಇದು ಸರಿಯಲ್ಲ. ಏಕೆಂದರೆ ಈ ಪಕ್ಷದಲ್ಲಿಯೂ ಸಂಸಾರದಲ್ಲಿ ಭೇದಾಭೇದಗಳನ್ನು ಜೀವನೊಂದಿಗೆ ಪರಮಾತ್ಮನಿಗೆ ಒಪ್ಪಬೇಕು. ಹಾಗಾಗಿ ಭೇದಸಹಿತವಾದ ಅಭೇದವಿದೆ ಎಂದರೆ ಅಭೇದದಿಂದ ದೋಷಗಳ ಪ್ರಾಪ್ತಿ ಪುನಃ ಇದ್ದೇ ಇದೆ. ಭೇದವನ್ನು ಒಪ್ಪಿಯೂ ಏನೂ ಉಪಯೋಗವಿಲ್ಲ ಎಂದಾಯಿತು. ಅಲ್ಲ ಭೇದವನ್ನು ಒಪ್ಪಿದ್ದರಿಂದ ದೋಷಗಳ ಪ್ರಾಪ್ತಿ ಇಲ್ಲವೆಂದರೆ ಅಭೇದವನ್ನು ಒಪ್ಪಿದ್ದು ವ್ಯರ್ಥವಾಯಿತು. ಆದ್ದರಿಂದ ಸಂಸಾರಿ ಹಾಗೂ ಪರಮಾತ್ಮನಿಗೆ, ಮುಕ್ತರಿಗೆ ಹಾಗೂ ಪರಮಾತ್ಮನಿಗೆ ಭೇದವನ್ನೇ ಒಪ್ಪಬೇಕು.

ಇಲ್ಲಿಯವರೆಗೂ ಸತ್ಸಿದ್ಧಾಂತದಲ್ಲಿ ಪರಸತ್ಸಿದ್ಧಾಂತವನ್ನು ಹಾಗೂ ಆನುಷಂಗಿಕಸತ್ಸಿದ್ಧಾಂತವನ್ನು ನಿರೂಪಣೆ ಮಾಡಿದರು. ಆನುಷಂಗಿಕಸತ್ಸಿದ್ಧಾಂತವೆಂದರೆ ತಾನು ಪ್ರಧಾನಪ್ರಮೇಯವಾಗದೇ ಇದ್ದು ಪ್ರಧಾನಪ್ರಮೇಯಸಿದ್ಧಿಗೆ ಉಪಯೋಗಿಯಾದ ಸಿದ್ಧಾಂತ.

ಇದೀಗ ಅಪರಸಿದ್ಧಾಂತವನ್ನು ನಿರೂಪಣೆ ಮಾಡಲಾಗುವುದು – ಪರಮಾತ್ಮನ ನಂತರ ಪರಮಾತ್ಮನ ಅಧೀನಳಾದ ಲಕ್ಷ್ಮಿಯು ದೋಷರಹಿತಳು. ಆದ್ದರಿಂದ ತಾತ್ಪರ್ಯ ಹೀಗೆ - ಭಗವಂತನೊಬ್ಬನಿಂದಲೇ ಮಾತ್ರ ಅವಳಲ್ಲಿ ಪಾರತಂತ್ರ್ಯವಿದೆ. ಮಿಕ್ಕಿದೆಲ್ಲರಿಗಿಂತ ಸ್ವತಂತ್ರಳೇ ಆಗಿದ್ದಾಳೆ. ಈ ಅರ್ಥದಲ್ಲಿ ದೋಷರಹಿತಳು ಎಂದಿದ್ದಾರೆ. ಇದೇ ರೀತಿ ಕ್ರಮವಾಗಿ ಮುಕ್ತಿಯಲ್ಲೂ ಕೂಡ ಬ್ರಹ್ಮದೇವರು, ಸರಸ್ವತೀ ದೇವಿ, ಗರುಡದೇವರು, ಶೇಷದೇವರು, ರುದ್ರದೇವರು ಅವರ ಪತ್ನಿಯರು, ಇಂದ್ರ ಹಾಗೂ ಕಾಮ ಮತ್ತು ಬೇರೆ ದೇವತೆಗಳು ತಾರತಮ್ಯವನ್ನು ಹೊಂದಿರುವರು. ಇವೆಲ್ಲವನ್ನೂ ಸತ್ಸಿದ್ಧಾಂತವೆಂದು ಸ್ವಯಂ ಶ್ರೀಹರಿಯೇ ನಿರ್ಣಯಿಸಿದ್ದಾನೆ. ಇದಕ್ಕೆ ವಿರುದ್ಧವಾದ ಸಿದ್ಧಾಂತಗಳೆಲ್ಲವೂ ಅಂಧಂತಮಸ್ಸಿಗೆ ಕಾರಣ ಎಂದು ತಿಳಿಯಬೇಕು.

## ಪ್ರಾತಿಭಜ್ಞಾನ ಎಂದರೇನು?

** यथा वियदनादि, जन्मवद्योक्तमेवमित्यर्थः । प्रतिभातपरावरः = शरीराभावेऽपि प्रातिभेनैव ज्ञानेन विषयीकृतातीतानागतो यतः, तस्मान्नित्यसम इति शब्दितः ।

– ಪ್ರಾತಿಭಜ್ಞಾನವೆಂದರೆ ಯೋಗಪ್ರಭಾವಲಬ್ಧ ಅತಿಶಯವಿಶೇಷಮನೋವೃತ್ತಿರೂಪ ಎಂದು (ಶೇಷವಾಕ್ಯಾರ್ಥಚಂದ್ರಿಕಾ), ಹಾಗೇ ಯೋಗರ್ಧಿಲಬ್ಧಅತಿಶಯವೃತ್ತಿರೂಪಜ್ಞಾನ - (ಪರಿಮಳ-ಟಿಪ್ಪಣೀ) ಎಂದು ವಿವರಿಸಿದ್ದಾರೆ. ಇಂತಹ ಜ್ಞಾನದಿಂದ ಅತೀತಾನಾಗತಾದಿಸಕಲವಿಷಯಗಳೂ ಗೋಚರವಾಗುತ್ತವೆ.

## ನಿಜೇನ ಮಹಸಾ ನಿಜೇ ಪಕ್ಷೇ = ಪರಮಾತ್ಮನಿ ವ್ಯಾಪ್ತಿಃ

**कम्वा – यद्वा, 'पक्षः सहायगरुदन्तिकसाध्यभित्तिमित्रेषु चुल्लिविवरे नृपकुञ्जरे च' इत्यभिधानात् आनन्दतीर्थमुनेः परममित्रभूतः परमात्मा** पक्षशब्देनोच्यते। **तथाच –** निजे पक्षे = **परमात्मनि** निजेन महसा = **अविनाशिना ज्ञानेन व्याप्तिः।**

**सर्ववेदेषु ये चोक्ता गुणाः सर्वे सुमङ्गलाः ।**
**ज्ञानेन भगवान् ब्रह्मा वेत्ति लक्ष्मीस्ततोऽधिकान् ॥**

**– इति वचनात् सर्ववेदोक्तसकलपरमात्मधर्मविषयकत्वमिति यावत् ।**

ಅಥವಾ, "ಪಕ್ಷಃ ಸಹಾಯ-ಗರುದ್-ಅಂತಿಕ-ಸಾಧ್ಯ-ಭಿತ್ತಿ-ಮಿತ್ರೇಷು ಚುಲ್ಲಿವಿವರೇ ನೃಪಕುಂಜರೇ ಚ" - ಪಕ್ಷವೆಂಬ ಶಬ್ದವು ಸಹಾಯ - ರೆಕ್ಕೆ - ಸಮೀಪ- ಸಾಧಿಸಲು ಯೋಗ್ಯವಾದದ್ದು- ಗೋಡೆ- ಮಿತ್ರ- ಒಲೆಯ ರಂಧ್ರ- ರಾಜಶ್ರೇಷ್ಠ ಎಂಬ ಅರ್ಥಗಳಲ್ಲಿ ಇದೆ ಎನ್ನುವ ಕೋಶದ ಬಲದಿಂದ ಆನಂದ-ತೀರ್ಥಮುನಿಗಳಿಗೆ ಪರಮಮಿತ್ರನಾದ ಪರಮಾತ್ಮನು ಪಕ್ಷಶಬ್ದದಿಂದ ಇಲ್ಲಿ ಹೇಳಲ್ಪಡುತ್ತಾನೆ. ಹಾಗಾಗಿ -

"ಸರ್ವವೇದೇಷು ಯೇ ಚೋಕ್ತಾಃ ... ಲಕ್ಷ್ಮೀಸ್ತತೋಽಧಿಕಾನ್" - ಸಕಲ ವೇದಗಳಲ್ಲಿ ಹೇಳಿದ ಎಲ್ಲ ಅತ್ಯಂತ ಮಂಗಳಕರವಾದ ಭಗವಂತನ ಗುಣಗಳೇನಿವೆಯೋ ಅವುಗಳೆಲ್ಲವನ್ನೂ ಜ್ಞಾನದಿಂದ ಪೂಜ್ಯರಾದ ಬ್ರಹ್ಮದೇವರು ತಿಳಿಯುತ್ತಾರೆ; ಅವರಿಗಿಂತಲೂ ಹೆಚ್ಚಾಗಿ ಲಕ್ಷ್ಮೀದೇವಿಯು ತಿಳಿಯುತ್ತಾಳೆ - ಎಂಬ ವಚನದಿಂದ ಅವರ ಜ್ಞಾನವು ಸಕಲವೇದಗಳಲ್ಲಿ ಹೇಳಲ್ಪಟ್ಟ ಎಲ್ಲಾ ಪರಮಾತ್ಮನ ಧರ್ಮಗಳನ್ನು ವಿಷಯೀಕರಿಸುವುದು - ಎಂದರ್ಥವಾಗುವುದು. ಅಂದರೆ ಬ್ರಹ್ಮದೇವರ ಜ್ಞಾನದಲ್ಲಿ ಸರ್ವವೇದೋಕ್ತಸಕಲಪರಮಾತ್ಮಧರ್ಮವಿಷಯೀಕಾರಿತ್ವ ಎಂಬ ಧರ್ಮವಿದೆ ಎಂದರ್ಥ.

**ನಿಜೇನ ಮಹಸಾ ನಿಜೇ ಪಕ್ಷೇ = ಸ್ವೀಯೇ ಸಾಧ್ಯೇ ವ್ಯಾಪ್ತಿಃ**

**कम्बा – अथवा, 'पक्षः सहायगरुदन्तिकसाध्य..' इत्युदाहृताभिधानात् पक्षशब्दः साध्यवाची। तथाच** निजे पक्षे – **स्वीये साध्ये – प्रतिवादिनं प्रति स्वेन साधनीयार्थे** निजेन महसा **व्याप्तिः।**

ಅಥವಾ, ಈ ಹಿಂದೆ ಉದಾಹರಿಸಿದ ಕೋಶದಂತೆ ಪಕ್ಷಶಬ್ದವು ಸಾಧ್ಯವೆಂಬ ಅರ್ಥವನ್ನು ಹೇಳುವುದು. ಹಾಗಾಗಿ ತಮ್ಮ ಪಕ್ಷ ಎಂದರೆ ತನ್ನ ಸಾಧ್ಯದಲ್ಲಿ ಅರ್ಥಾತ್ ಪ್ರತಿವಾದಿಯನ್ನು ಕುರಿತು ತನ್ನಿಂದ ಸಾಧಿಸಲ್ಪಡುವ ಅರ್ಥದಲ್ಲಿ ತನ್ನ ವಿಚಾರರಹಿತವಾದ ಜ್ಞಾನದಿಂದ ವ್ಯಾಪ್ತಿಯು ಇದೆ ಎಂದು ಸಿದ್ಧವಾಯಿತು.

**ಸಪಕ್ಷೇ ಸ್ಥಿತಿಃ, ವಿಪಕ್ಷತೋ ವ್ಯಾವೃತ್ತಿಃ, ಬಾಧಿತೇ ವಿಷಯೇ ನ ಸಕ್ತಿಃ, ಪ್ರತಿಪಕ್ಷಯುಕ್ತಿಃ ನ ವೈ**

**कम्बा –** सपक्षे स्थितिः **समानपक्षे = स्वसिद्धान्तसमानसिद्धान्ते व्यासकृतभारतादौ, तेषां ब्रह्मसूत्रव्याख्यानकाले सपक्षत्वात्। तत्सम्मत्या सूत्रयोजनायाः क्रियमाणत्वात्,** निजेन महसा स्थितिः। व्यावृत्तिश्च विपक्षतो = **विरुद्धपक्षाद् = विरुद्धसिद्धान्तात् व्यावृत्तिर्नाम तस्यासत्त्वेन विपर्यीकरणम्। प्रसिद्धधूमवत्वानुमानस्य तु** निजे पक्षे = **पर्वतादौ** निजेन महसा = **स्वीयेन वह्निना व्याप्तिः,** सपक्षे **महानसादौ स्थितिः, विपक्षतो ह्रदादेर्व्यावृत्तिः,** बाधिते विषये सक्तिः = **सम्बन्धो** न वै, प्रतिपक्षयुक्तिः = **साध्यविपरीतसाधिका युक्तिर्नैवास्तीत्यर्थः स्फुटः।**

ಸಪಕ್ಷದಲ್ಲಿ ಸ್ಥಿತಿ ಎಂದರೆ ಸಮಾನಪಕ್ಷವಾದ ಅರ್ಥಾತ್ ತನ್ನ ಸಿದ್ಧಾಂತಕ್ಕೆ ಸಮಾನಸಿದ್ಧಾಂತವಾದ ವೇದವ್ಯಾಸರು ರಚನೆ ಮಾಡಿದ ಮಹಾಭಾರತ ಮೊದಲಾದವುಗಳಲ್ಲಿ ಎಂದರ್ಥ. ಏಕೆಂದರೆ, ಬ್ರಹ್ಮಸೂತ್ರ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಅವುಗಳು ಸಪಕ್ಷವಾಗಿವೆ. ಅವುಗಳ ಸಮ್ಮತಿಯಿಂದ ಬ್ರಹ್ಮಸೂತ್ರ- ಯೋಜನೆಯನ್ನು ಮಾಡುವುದರಿಂದ. ತನ್ನ ವಿಚಾರರಹಿತವಾದ ಜ್ಞಾನದಿಂದ ಸ್ಥಿತಿಯು ಅರ್ಥಾತ್ ಇರುವಿಕೆಯು ಇದೆ ಎಂದರ್ಥ. "ವ್ಯಾವೃತ್ತಿಶ್ಚ" ಎಂದರೆ ವಿಪಕ್ಷದಿಂದ ಅರ್ಥಾತ್ ವಿರುದ್ಧ-ಸಿದ್ಧಾಂತವಾದುದರಿಂದ ವ್ಯಾವೃತ್ತಿಯು. ಇದರ ತಾತ್ಪರ್ಯ ಆ ವಿರುದ್ಧಸಿದ್ಧಾಂತವನ್ನು ಅಸತ್ - ಎಂಬುದಾಗಿ ವಿಷಯೀಕರಿಸುವುದೆಂದು.

ಪ್ರಸಿದ್ಧವಾದ "ಪರ್ವತೋ ವಹ್ನಿಮಾನ್ ಧೂಮಾತ್" ಮುಂತಾದ ಧೂಮವು ಹೇತುವಾಗಿರುವ

ಅನುಮಾನವಾದರೋ ತನ್ನ ಪಕ್ಷದಲ್ಲಿ ಅಂದರೆ ಪರ್ವತ ಮುಂತಾದುದರಲ್ಲಿ ತನ್ನ ಸಂಬಂಧಿಯಾದ ತೇಜೋರೂಪವಾದ ವಹ್ನಿಯಿಂದ ವ್ಯಾಪ್ತಿಯನ್ನು ಹೊಂದಿದೆ. ಸಪಕ್ಷವಾದ ಅಡುಗೆ ಮನೆ ಮೊದಲಾದವುಗಳಲ್ಲಿ ವಹ್ನಿಯ ಇರುವಿಕೆಯು ವಿಪಕ್ಷವಾದ ಸರೋವರ ಮೊದಲಾದವುಗಳಿಂದ ವಹ್ನಿಯ ಇಲ್ಲದಿರುವಿಕೆಯು, ಪ್ರಮಾಣಬಾಧಿತವಾದ ವಿಷಯದಲ್ಲಿ ಸಂಬಂಧವು ಹಾಗೂ ಸಾಧ್ಯಕ್ಕೆ ವಿಪರೀತವಾದುದನ್ನು ಸಾಧಿಸುವ ಯುಕ್ತಿಯು ಇಲ್ಲವೇ ಇಲ್ಲ ಎಂಬ ಈ ಎಲ್ಲಾ ಅರ್ಥಗಳು ಸ್ಫುಟವಾಗಿವೆ.

**ವ್ಯಾ.ವಿ. - ಈ ಶ್ಲೋಕದಲ್ಲಿ ಆನಂದತೀರ್ಥಮುನಿಗಳನ್ನು ಶುದ್ಧವಾದ ಅನುಮಾನಪ್ರಮಾಣಕ್ಕೆ ಹೋಲಿಸಲಾಗಿದೆ. ಹೇಗೆ ಅನುಮಾನಪ್ರಮಾಣವು ಪಂಚಾಂಗ ಉಪೇತವಾಗಿದೆಯೋ ಅರ್ಥಾತ್ ಪಕ್ಷ- ಸಪಕ್ಷ- ವಿಪಕ್ಷ- ಅಸತ್ಪ್ರತಿಪಕ್ಷಿತತ್ವ- ಅಬಾಧಿತತ್ವಗಳಿಂದ ಕೂಡಿದೆಯೋ ಹಾಗೆಯೇ ಆಚಾರ್ಯರು ಪಕ್ಷ ಮುಂತಾದ ಐದು ಅವಯವಗಳಿಂದ ಕೂಡಿದ್ದಾರೆ.**

**ಇಲ್ಲಿ ಪಕ್ಷಶಬ್ದಕ್ಕೆ ಕೋಶಬಲದಿಂದ ಒಟ್ಟು ಮೂರು ಅರ್ಥವನ್ನು ತಿಳಿಸಿದ್ದಾರೆ. (1) ಸಿದ್ಧಾಂತ, (2) ಪರಮಾತ್ಮ, (3) ಸಾಧ್ಯ. ವ್ಯಾವೃತ್ತಿ = ಅಸತ್ತ್ವೇನ ವಿಷಯೀಕರಣಂ.**

## ಪಂಚಾಂಗಗಳ ಇನ್ನೊಂದು ರೀತಿಯ ಯೋಜನೆ

**कम्बा – आनन्दतीर्थमुनेर्विपक्षे** बाधितेऽ**भद्रे विषये** सक्तिः **स्नेहो न वै। प्रमाणबाधिते वा मनःप्रवृत्तिर्न वै।** प्रतिपक्षयुक्तिः = **प्रतिपक्षयोगो नैवास्तीति योज्यम्। यस्यानन्दतीर्थमुनेः** निजे पक्षे = **व्याख्येयत्वेन परिगृहीते ब्रह्मसूत्रात्मकशास्त्रे** निजेन महसा व्याप्तिः, सपक्षे **भारतादौ** निजेन महसा स्थितिः, विपक्षतः **पाषण्डागमाद् व्यावृत्तिरित्यपि योज्यम्।**

ಆನಂದತೀರ್ಥಮುನಿಗಳಿಗೆ ತಮಗೆ ವಿರುದ್ಧವಾದ ಸಿದ್ಧಾಂತದಲ್ಲಿ ಬಾಧಿತೇ - ಅಂದರೆ ಅಮಂಗಳಕರವಾದ ವಿಷಯದಲ್ಲಿ ಸಕ್ತಿ - ಅಂದರೆ ಸ್ನೇಹವು ಇಲ್ಲವೇ ಇಲ್ಲ. ಪ್ರಮಾಣಗಳ ಬಾಧವಿರುವ ಕಡೆ ಆಚಾರ್ಯರ ಮನಸ್ಸಿನ ಪ್ರವೃತ್ತಿಯು ಇಲ್ಲವೇ ಇಲ್ಲ - ಎಂದು ಇನ್ನೊಂದು ಅರ್ಥ. ಪ್ರತಿಪಕ್ಷಯುಕ್ತಿ - ಎಂದರೆ ವಿರುದ್ಧವಾದ ಪಕ್ಷದ ಸಂಬಂಧವು ಇಲ್ಲವೇ ಇಲ್ಲ ಎಂದು ಯೋಜನೆ ಮಾಡಿಕೊಳ್ಳಬೇಕು. ಯಾವ ಆನಂದತೀರ್ಥಮುನಿಗಳಿಗೆ ತನ್ನ ಪಕ್ಷದಲ್ಲಿ ಅಂದರೆ ವ್ಯಾಖ್ಯಾನಮಾಡಲು ಸ್ವೀಕರಿಸಿದ ಬ್ರಹ್ಮಸೂತ್ರವೆಂಬ ಶಾಸ್ತ್ರದಲ್ಲಿ ತನ್ನ ವಿನಾಶರಹಿತವಾದ ಜ್ಞಾನದಿಂದ ವ್ಯಾಪ್ತಿಯು ಇದೆ. ಸಪಕ್ಷವಾದ ಭಾರತ ಮೊದಲಾದವುಗಳಲ್ಲಿ ತನ್ನ ವಿನಾಶರಹಿತವಾದ ಜ್ಞಾನದಿಂದ ಸ್ಥಿತಿಯು ಅಂದರೆ ಇರುವಿಕೆಯು ಇದೆ. ವಿಪಕ್ಷವಾದ ಪಾಷಂಡಆಗಮದಿಂದ ಬೇರ್ಪಡುವಿಕೆಯು ಇದೆ ಎಂದು ಯೋಜನೆ ಮಾಡಿಕೊಳ್ಳಬೇಕು.

## ಸಪಕ್ಷಶಬ್ದ ಸಾಧುತ್ವ ಹಾಗೂ ಸೂಚಕವಾದ ನಿಜೇನ ಎಂಬ ಪದ

**कम्बा – 'समानस्य छन्दस्यमूर्धप्रभृत्युदर्केषु' इत्यत्र 'समानस्येति योगविभाग इष्टसिद्ध्यर्थः क्रियते। तेन सपक्ष इत्यादि सिद्ध्यती'ति काशिकोक्तेः** सपक्षशब्दः **साधुः। वायोः प्रलयेऽपि स्वरूपातिरिक्तज्ञाननाशाभावरूपमाहात्म्यसूचनाय 'निजेन' इति पदम्। प्रसिद्धानुमाने तु स्वीयवाचिना निजपदेन स्वकारणत्वस्य विवक्षितत्वाद् व्याप्तिग्राहकतर्कसूचनार्थम्।**

"ಸಮಾನಸ್ಯ ಛಂದಸಿ ಅಮೂರ್ಧಪ್ರಭೃತ್ಯುದರ್ಕೇಷು" ಎಂಬ ಸೂತ್ರದಲ್ಲಿ ಸಮಾನಸ್ಯ ಎಂದು ಸೂತ್ರಾಂಶವನ್ನು ವಿಭಾಗ ಮಾಡುವುದು ಇಷ್ಟವಾದ ರೂಪದ ಸಿದ್ಧಿಗೋಸ್ಕರ; ಇದರಿಂದಾಗಿ ಸಪಕ್ಷಃ ಮುಂತಾದ ರೂಪಗಳು ಸಿದ್ಧವಾಗುವುದು ಎಂದು ಕಾಶಿಕಾಗ್ರಂಥದಲ್ಲಿ ಹೇಳಿದ್ದರಿಂದ ಸಪಕ್ಷ ಎಂಬ ಶಬ್ದವು ಸಾಧುವಾಗಿದೆ. ವಾಯುದೇವರಿಗೆ ಪ್ರಲಯಕಾಲದಲ್ಲಿಯೂ ತಮ್ಮ ಸ್ವರೂಪಜ್ಞಾನಕ್ಕಿಂತ ಬೇರೆಯಾದ ವೃತ್ತಿಜ್ಞಾನಕ್ಕೆ ನಾಶವಿಲ್ಲ ಎಂಬ ಮಹಿಮೆಯನ್ನು ಸೂಚಿಸುವುದಕ್ಕೋಸ್ಕರ "ನಿಜೇನ" ಎಂಬ ಪದವು ಇದೆ. ಪ್ರಸಿದ್ಧ ಧೂಮಾನುಮಾನದಲ್ಲಿಯಾದರೋ ತನ್ನ ಸಂಬಂಧಿ ಎನ್ನುವ ಅರ್ಥವನ್ನು ಕೊಡುವ ನಿಜ ಎಂಬ ಪದದಿಂದ ತನಗೆ ಕಾರಣವಾದದ್ದನ್ನು ವಿವಕ್ಷೆ ಮಾಡಿದ್ದರಿಂದ ನಿಜ ಎಂಬ ಪದವು ಅನುಮಾನದಲ್ಲಿ ವ್ಯಾಪ್ತಿಯನ್ನು ಗ್ರಹಿಸುವ ತರ್ಕವನ್ನು ಸೂಚನೆ ಮಾಡುವುದಕ್ಕೋಸ್ಕರ ಎಂದು ತಿಳಿಯಬೇಕು.

## ಸಪಕ್ಷಶಬ್ದ ಸಾಧುತ್ವ – ಕಾಶಿಕಾ ಹಾಗೂ ಸಿದ್ಧಾಂತಕೌಮುದೀ

'ಸಮಾನಸ್ಯ ಛಂದಸಿ ಅಮೂರ್ಧಪ್ರಭೃತ್ಯುದರ್ಕೇಷು' (ಪಾ.ಸೂ.6-3-84) ಇದರ ಅರ್ಥ - ಸಮಾನಶಬ್ದಕ್ಕೆ ಸ ಎಂಬ ಆದೇಶವು ಛಂದಸ್ಸಿನಲ್ಲಿ ಬರುವುದು, ಉತ್ತರಪದವಿದ್ದಾಗ. ಆದರೆ ಆ ಉತ್ತರಪದವು ಮೂರ್ಧಪ್ರಭೃತಿಉದಕ ಇವುಗಳಾಗಿರಬಾರದು. ಉದಾ - ಅನುಭ್ರಾತಾ ಸಗರ್ಭ್ಯಃ. ಸಮಾನವಾದ ಗರ್ಭದಲ್ಲಿ ಹುಟ್ಟಿದವನು ಎಂದರ್ಥ. ಈ ಸೂತ್ರದ ಸಂದರ್ಭದಲ್ಲಿ ಕಾಶಿಕಾದಲ್ಲಿ ಇರುವ ಪಂಕ್ತಿಗಳು - 'ಸಮಾನಸ್ಯ ಇತಿ ಯೋಗವಿಭಾಗಃ ಇಷ್ಟಸಿದ್ಧ್ಯರ್ಥಃ ಕ್ರಿಯತೇ। ತೇನ ಸಪಕ್ಷಃ ಸಾಧರ್ಮ್ಯಂ ಸಜಾತೀಯಃ ಇತ್ಯೇವಮಾದಯಃ ಸಿದ್ಧಾಃ ಭವಂತಿ' ಎಂದು.

ಸಿದ್ಧಾಂತಕೌಮುದಿಯಲ್ಲಿ ಇನ್ನೊಂದು ಪ್ರಕಾರದಿಂದಲೂ ಸಪಕ್ಷ ಮುಂತಾದ ಶಬ್ದಗಳ ಸಿದ್ಧಿಯನ್ನು ತೋರಿಸಿದ್ದಾರೆ. ಅಲ್ಲಿ ಹೀಗಿದೆ - ಅಥವಾ ಸಹಶಬ್ದಃ ಸದೃಶವಚನೋಽಪ್ಯಸ್ತಿ। ಸದೃಶಃ ಸಖ್ಯಾ ಸಸಖಿ ಇತಿ ಯಥಾ। ತೇನ ಅಯಂ ಅಸ್ವಪದವಿಗ್ರಹೋ ಬಹುವ್ರೀಹಿಃ। ಸಮಾನಃ ಪಕ್ಷಃ ಅಸ್ಯ ಇತ್ಯಾದಿ। - ಎಂಬುದಾಗಿ.

## ಭಾಷ್ಯಕರ್ತೃಗಳು ಪ್ರಮಾಣರೂಪರು

(ಆನಂದ) – ಧ್ಯಾನಂ ಚ ನ ಜ್ಞಾನಂ ವಿನಾ, ತಚ್ಚ ಪ್ರಮಾಣೇನ ವಿನಾ ನ ಸಂಭವತಿ, ಇತ್ಯತಃ ತಜ್ಜ್ಞಾನಜನಕಂ ಕಿಂ ಪ್ರಮಾಣಮ್? ಇತ್ಯತಃ ಪ್ರಮಾಣತ್ವೇನ ಭಾಷ್ಯಕರ್ತ್ಯನ್ ಅಭಿಷ್ಟೌತಿ – ವ್ಯಾಪ್ತಿರಿತಿ ॥ 'ಸ ಆನಂದತೀರ್ಥಮುನಿಃ ತತ್ತ್ವನಿರ್ಣಯಾಯ ಮೇ ಪ್ರಮಾಣಂ ಭೂಯಾತ್' ಇತ್ಯನ್ವಯಃ ।

ಧ್ಯಾನವಾದರೋ ಜ್ಞಾನವಿಲ್ಲದೆಯೇ ಅಸಾಧ್ಯ; ಜ್ಞಾನವಾದರೋ ಪ್ರಮಾಣವಿಲ್ಲದೆಯೇ ಕೂಡುವುದಿಲ್ಲ ಎಂಬ ಅಭಿಪ್ರಾಯದಿಂದ ಜ್ಞಾನಕ್ಕೆ ಜನಕವಾದ ಪ್ರಮಾಣ ಯಾವುದು? ಎಂಬುದಕ್ಕೆ ಉತ್ತರವಾಗಿ ಭಾಷ್ಯಕಾರರೇ ಪ್ರಮಾಣ ಎಂದು ಹೇಳುವ ಮೂಲಕ ಅವರನ್ನು ಸ್ತೋತ್ರಮಾಡುತ್ತಿದ್ದಾರೆ – ವ್ಯಾಪ್ತಿಃ ಎಂದು. ಆ ಆನಂದತೀರ್ಥಮುನಿಗಳು ತತ್ವನಿರ್ಣಯಕ್ಕಾಗಿ ನನಗೆ ಪ್ರಮಾಣರಾಗಲಿ ಎಂದು ಅನ್ವಯ.

## ಆನಂದತೀರ್ಥರು ಯಾವ ಪ್ರಮಾಣ? ಪ್ರತ್ಯಕ್ಷವೋ? ಅನುಮಾನವೋ? ಆಗಮವೋ?

(ಆನಂದ) – ನನ್ವಾನಂದತೀರ್ಥಃ ಪ್ರತ್ಯಕ್ಷಪ್ರಮಾಣಂ ವಾಽನುಮಾನಂ ವಾಽಗಮೋ ವಾ । ನಾದ್ಯಃ ತಸ್ಯ ಇಂದ್ರಿಯರೂಪತ್ವಾಭಾವಾತ್ । ನ ದ್ವಿತೀಯಃ ವ್ಯಾಪ್ತ್ಯಾದೇರಭಾವಾತ್ । ನ ತೃತೀಯಃ ತಸ್ಯ ಶಬ್ದರೂಪತ್ವಾಭಾವಾದಿತಿ ಚೇತ್ ಮೈವಮ್ । ತಸ್ಯಾನುಮಾನರೂಪ-ಪ್ರಮಾಣತ್ವಾಭಾವಾತ್ । ನ ದ್ವಿತೀಯಃ ವ್ಯಾಪ್ತ್ಯಾದೇರಭಾವಾತ್ । ನ ತೃತೀಯಃ ತಸ್ಯ ಶಬ್ದ-ರೂಪತ್ವಾಭಾವಾದಿತಿ ಚೇತ್ ಮೈವಮ್ । ತಸ್ಯಾನುಮಾನರೂಪಪ್ರಮಾಣತ್ವಾಭ್ಯುಪಗಮಾತ್ ।

ಅಲ್ಲ! ಆನಂದತೀರ್ಥರು ಪ್ರತ್ಯಕ್ಷಪ್ರಮಾಣವೋ, ಅನುಮಾನಪ್ರಮಾಣವೋ, ಆಗಮಪ್ರಮಾಣ-ವೋ? ಪ್ರತ್ಯಕ್ಷಪ್ರಮಾಣವಲ್ಲ. ಆನಂದತೀರ್ಥರು ಇಂದ್ರಿಯರಲ್ಲವಾದ್ದರಿಂದ. ಅನುಮಾನವಲ್ಲ ವ್ಯಾಪ್ತ್ಯಾದಿಗಳು ಇಲ್ಲದಿರುವುದರಿಂದ. ಆಗಮವಲ್ಲ ಶಬ್ದರೂಪವಲ್ಲವಾದ್ದರಿಂದ ಎಂದರೆ –

ಮೈವಮ್ - ಇದು ಸರಿಯಲ್ಲ; ಅವರನ್ನು ಅನುಮಾನಪ್ರಮಾಣ ಎಂದೊಪ್ಪಿರುವುದರಿಂದ.

## ಅನುಮಾನಾಭಾಸದಲ್ಲೂ ಪ್ರಯೋಗಿಸುವ ಅನುಮಾನಶಬ್ದಪ್ರಯೋಗ ಆಚಾರ್ಯರಲ್ಲಿ ಮಾಡಲಾಗಿದೆಯೇ?

(ಆನಂದ) – ನನ್ವನುಮಾನಶಬ್ದಸ್ಯ ಅನುಮಾನಾಭಾಸೇಽಪಿ ಪ್ರಯೋಗಾತ್ ಕಿಮಯಮನು-ಮಾನಾಭಾಸಃ? ನೇತ್ಯಾಹ – **ಶುದ್ಧಮಿತಿ** ॥ ವ್ಯಭಿಚಾರಾದಿಹೇತುದೋಷಶೂನ್ಯಮಿತ್ಯರ್ಥಃ । ತರ್ಹಿ ಧೂಮಾನುಮಾನವತ್ ಇದಮನುಮಾನಮಿತಿ ನೇತ್ಯಾಹ – **ಅತುಲಮಿತಿ** ॥ ಪ್ರಸಿದ್ಧಾನು-

ಮಾನವಿಲಕ್ಷಣಮಿತ್ಯರ್ಥಃ । ತಥಾಪಿ ವ್ಯಾಪ್ತ್ಯಾದ್ಯಭಾವಾತ್ ಕಥಮನುಮಾನತ್ವಮಿತ್ಯತ ಉಕ್ತಮ್ – ವ್ಯಾಪ್ತಿರ್ಯಸ್ಯೇತಿ ॥ 'ಯಸ್ಯ ನಿಜೇನ ಮಹಸಾ' ಸ್ವರೂಪಭೂತೇನ ತೇಜೋರೂಪೇಣ ಹರಿಣಾ ವ್ಯಾಪ್ತಿರಸ್ತಿ 'ನಿಜೇ ಪಕ್ಷೇ ಸಪಕ್ಷೇ ಸ್ಥಿತಿಃ' 'ವಿಪಕ್ಷತೋ ವ್ಯಾವೃತ್ತಿಃ' 'ಬಾಧಿತೇ ವಿಷಯೇ ಸಕ್ತಿರ್ನ ವೈ' 'ಯಸ್ಯ ಪ್ರತಿಪಕ್ಷಯುಕ್ತಿರ್ನೈವಾಸ್ತಿ' ಇತಿ ಸಂಬಂಧಃ । ಏವಂ ಚ ಪಂಚರೂಪೋ-ಪಪನ್ನತ್ವಾದ್ ಯುಕ್ತಮಸ್ಯಾನುಮಾನತ್ವಮಿತಿ ಭಾವಃ ।

ಅಲ್ಲ! ಅನುಮಾನಶಬ್ದವನ್ನು ಅನುಮಾನಾಭಾಸದಲ್ಲೂ ಪ್ರಯೋಗಿಸುವುದು ಕಂಡಿರುವುದರಿಂದ ಇವರು ಅನುಮಾನಾಭಾಸರೇ ಎಂದರೆ ಇಲ್ಲ; ಇವರು 'ಶುದ್ಧಮ್' ಅಂದರೆ ವ್ಯಭಿಚಾರಾದಿ ಹೇತುದೋಷಗಳಿಂದ ರಹಿತರಾಗಿದ್ದಾರೆ. ಹಾಗಾದರೆ ಧೂಮಾನುಮಾನದಂತೆ ಇವರು ಅನುಮಾನರೇ? ಎಂದರೆ ಇಲ್ಲ; 'ಅತುಲಮ್' ಎಂದುತ್ತರ. ಪ್ರಸಿದ್ಧಾನುಮಾನಕ್ಕಿಂತ ವಿಲಕ್ಷಣ-ವಾಗಿದ್ದಾರೆ. ಇಷ್ಟಾದರೂ ವ್ಯಾಪ್ತ್ಯಾದಿಗಳಿಲ್ಲವಾದ್ದರಿಂದ ಅನುಮಾನ ಹೇಗೆ? ಎಂದರೆ 'ವ್ಯಾಪ್ತಿ-ರ್ಯಸ್ಯ' ಎಂಬುದಾಗಿ ಉತ್ತರಿಸಿದ್ದಾರೆ. 'ಯಸ್ಯ' ಯಾವ ಆನಂದತೀರ್ಥರಿಗೆ 'ನಿಜೇನ ಮಹಸಾ' ತಮ್ಮ ಸ್ವರೂಪಭೂತವಾದ ತೇಜೋರೂಪದಿಂದ ಹರಿಯೊಂದಿಗೆ ವ್ಯಾಪ್ತಿಯು ಇದೆ. ಹಾಗೇ 'ಸಪಕ್ಷೇ ಸ್ಥಿತಿಃ' 'ವಿಪಕ್ಷತೋ ವ್ಯಾವೃತ್ತಿಃ' 'ಬಾಧಿತೇ ಸಕ್ತಿಃ ನ ವೈ' 'ಯಸ್ಯ ಪ್ರತಿಪಕ್ಷಯುಕ್ತಿರ್ನೈವ ಅಸ್ತಿ' ಎಂದು ಸಂಬಂಧವನ್ನು ತಿಳಿಯಬೇಕು. ಈ ರೀತಿ ಐದು ಅಂಶಗಳಿಂದ ಕೂಡಿರುವುದರಿಂದ ಆನಂದತೀರ್ಥರು ಅನುಮಾನಪ್ರಮಾಣರಾಗಿದ್ದಾರೆ.

## ಅನುಮಾನದಲ್ಲಿ ಸಾಧ್ಯ ಏನು?

(ಆನಂದ) – ನನು ಆನಂದತೀರ್ಥಸ್ಯ ಹೇತುತ್ವೇ ಅತ್ರ ಕಿಂ ಸಾಧ್ಯಮ್? ಹರಿರ್ವಾ ಸರ್ವೋತ್ತಮತ್ವಂ ವಾ । ನಾದ್ಯಃ । ತಥಾತ್ವೇ ಪಕ್ಷಾಭಾವಪ್ರಸಕ್ತೇಃ । ನ ಚ ಸಜ್ಜನಾನಾಮೇವ ಪಕ್ಷತ್ವಮಿತಿ ವಾಚ್ಯಮ್ । ತಥಾ ಸತಿ ಸಪಕ್ಷಾಭಾವೇನ ಪಂಚರೂಪೋಪಪನ್ನತ್ವಾಭಾವಾಪತ್ತೇಃ । ನ ದ್ವಿತೀಯಃ । ಹರಿನಿಷ್ಠಸರ್ವೋತ್ತಮತ್ವಸ್ಯ ಅನ್ಯತ್ರಾಸಂಭವೇನ ವ್ಯಾಪ್ತಿಗ್ರಹಣಾಯೋಗಾದಿತಿ ಚೇತ್ ಮೈವಮ್ । 'ಹರಿಃ ಸರ್ವೋತ್ತಮಃ ಆನಂದತೀರ್ಥವತ್ತ್ವಾತ್' ಇತಿ ಸರ್ವೋತ್ತಮತ್ವಸ್ಯೈವ ಸಾಧ್ಯತ್ವಾತ್ ।

ಆನಂದತೀರ್ಥರು ಅನುಮಾನವಾದರೆ ಆಗ ಅನುಮಾನದಲ್ಲಿ ಸಾಧ್ಯ ಯಾವುದು? ಹರಿಯೋ ಅಥವಾ ಅವನ ಸರ್ವೋತ್ತಮತ್ವವೋ? ಅಂದರೆ ಹರಿಯನ್ನು ಆ ಯುಕ್ತಿಯು ಸಾಧಿಸುತ್ತಿದೆಯೋ ಅಥವಾ ಹರಿಯಲ್ಲಿರುವ ಸರ್ವೋತ್ತಮತ್ವವನ್ನೋ?

ಹರಿಯನ್ನು ಸಾಧಿಸುತ್ತಿದೆ ಎನ್ನಲು ಬರುವುದಿಲ್ಲ. ಆಗ ಪಕ್ಷವೇ ಇಲ್ಲ ಎಂದಾಯಿತು. ಅಲ್ಲ ಸಜ್ಜನರೇ

ಪಕ್ಷ. ಅವರಲ್ಲಿ ಹರಿಯನ್ನು ಆನಂದತೀರ್ಥರೆಂಬ ಯುಕ್ತಿಯು ಸಾಧಿಸುತ್ತಿದೆ ಎಂದು ಹೇಳೋಣ ಎಂದರೆ ಇಲ್ಲ. ಆಗ ಅನುಮಾನದಲ್ಲಿ ಸಪಕ್ಷ ಎಂಬ ಅಂಗ ಇಲ್ಲವೆಂದಾಗಿ ಐದು ಅಂಗಗಳು ಅನುಮಾನಕ್ಕೆ ಬರಲಾರವು. ಐದು ಅಂಗಗಳಿರುವುದೇ ಅನುಮಾನವಾಗುವುದೆಂದು ಪ್ರಸಿದ್ಧ.

ಎರಡನೆಯ ಕಲ್ಪವು ಅಂದರೆ ಹರಿಯಲ್ಲಿರುವ ಸರ್ವೋತ್ತಮತ್ವವನ್ನು ಆನಂದತೀರ್ಥರೆಂಬ ಯುಕ್ತಿಯು ಸಾಧಿಸುತ್ತದೆ ಎಂದರೆ, ಅನುಮಾನದಲ್ಲಿ ವ್ಯಾಪ್ತಿಗ್ರಹಣವಾಗುವುದಿಲ್ಲ. ಏಕೆಂದರೆ ಹರಿಯಲ್ಲಿರುವ ಸರ್ವೋತ್ತಮತ್ವ ಎಲ್ಲೆಲ್ಲಿ ಆನಂದತೀರ್ಥರಿರುತ್ತಾರೋ ಅಲ್ಲಲ್ಲಿ ಇರಬೇಕು ಎಂದು ಹೇಳಲು ಸಾಧ್ಯವಾಗಬೇಕು. ಅರ್ಥಾತ್ ಅನೇಕ ಸ್ಥಳಗಳಲ್ಲಿ ಸಾಧ್ಯವು ಪ್ರಸಿದ್ಧವಾದರೆ ಮಾತ್ರ ವ್ಯಾಪ್ತಿಗ್ರಹಣವಾಗುವುದು. ಇಲ್ಲಿಯಾದರೋ ಹರಿಯಲ್ಲಿರುವ ಸರ್ವೋತ್ತಮತ್ವ ಬೇರೆಲ್ಲೆಡೆಯೂ ಪ್ರಸಿದ್ಧವಲ್ಲ. ಅದು ಹರಿಯಲ್ಲಿ ಮಾತ್ರ.

ಈ ಎಲ್ಲ ಪ್ರಶ್ನೆಗಳಿಗೆ ಉತ್ತರವಾಗಿ ಹೀಗೆ ಅನುಮಾನ ಪ್ರಯೋಗವನ್ನು ಮಾಡಬೇಕು. ಈ ಅನುಮಾನದಲ್ಲಿ ಪಕ್ಷ- ಹರಿ, ಸರ್ವೋತ್ತಮತ್ವ - ಸಾಧ್ಯ, ಆನಂದತೀರ್ಥವತ್ವ - ಹೇತು. ಹಾಗಾಗಿ 'ಹರಿಃ, ಸರ್ವೋತ್ತಮಃ ಆನಂದತೀರ್ಥವತ್ವಾತ್' ಎಂದು ಅನುಮಾನದ ಆಕಾರವಾಗುವುದು.

## ವ್ಯಭಿಚಾರವಿದೆಯೇ?

(ಆನಂದ) — ನ ಚೈವಂ ಸರ್ವೋತ್ತಮತ್ವಸ್ಯಾನ್ಯತ್ರಾಸಂಭವೇನ ಸಪಕ್ಷಾಭಾವಾದ್ ವ್ಯಾಪ್ತಿ-ಗ್ರಹಣಾಯೋಗ ಇತಿ ವಾಚ್ಯಮ್ । ರಾಮಕೃಷ್ಣಾದ್ಯವತಾರಾಣಾಮೇವ ಸಪಕ್ಷತ್ವಾತ್ ತತ್ರ ಚಾನಂದತೀರ್ಥವತ್ತ್ವಸ್ಯ ಸರ್ವೋತ್ತಮತ್ವಸ್ಯ ಚ ಸತ್ತ್ವಾನ್ನ ಕಶ್ಚಿದ್ದೋಷಃ । ನ ಚ ಪ್ರೇರಕತ್ವೇನ ಆನಂದತೀರ್ಥವತ್ತ್ವಸ್ಯ ಸಜ್ಜನಾದಿಷ್ವಪಿ ಸತ್ತ್ವೇನ ತತ್ರ ಸಾಧ್ಯಾಭಾವಾದ್ ವ್ಯಭಿಚಾರ ಇತಿ ವಾಚ್ಯಮ್ । ತದಧೀನತ್ವೇನ ಆನಂದತೀರ್ಥವತ್ತ್ವಸ್ಯ ವಿವಕ್ಷಿತತ್ವಾತ್ ಸಜ್ಜನಾದಿಷು ತದಭಾವಾನ್ನ ವ್ಯಭಿಚಾರಃ ।

ಅಲ್ಲ ಸರ್ವೋತ್ತಮತ್ವ ಸಾಧ್ಯವಾದರೆ ವ್ಯಾಪ್ತಿಗ್ರಹವಾಗುವುದಿಲ್ಲ ಎಂಬ ದೋಷ ಬರುವುದು ಎಂದು ಹಿಂದೆ ಹೇಳಿದೆಯಲ್ಲ. ಎಂದರೆ ಇಲ್ಲ. ಹರಿಯಲ್ಲಿರುವ ಸರ್ವೋತ್ತಮತ್ವವು ಅನೇಕ ಸ್ಥಳಗಳಲ್ಲಿ ಪ್ರಸಿದ್ಧವೇ. ಎಲ್ಲಿ ಎಂದರೆ ಹರಿಯ ಅವತಾರವಾದ ರಾಮಕೃಷ್ಣಾದಿಗಳಲ್ಲಿ ಸರ್ವೋತ್ತಮತ್ವ ಪ್ರಸಿದ್ಧವೇ.

ಅಲ್ಲ ವ್ಯಭಿಚಾರದೋಷವಿದೆ. ಸಜ್ಜನ ಮುಂತಾದವರಲ್ಲಿ ಹೇತುವಾದ ಆನಂದತೀರ್ಥರಿದ್ದಾರೆ. ಅರ್ಥಾತ್ ಆನಂದತೀರ್ಥರು ಸಜ್ಜನರಿಗೆ ಪ್ರತಿಕಾರ್ಯದಲ್ಲೂ ಪ್ರೇರಕರಾದ್ದರಿಂದ ಪ್ರೇರಕತಾ-ಸಂಬಂಧೇನ ಆನಂದತೀರ್ಥರು ಸಜ್ಜನರಲ್ಲಿ ಇದ್ದಾರೆ. ಆದರೆ ಸಾಧ್ಯವಾದ ಸರ್ವೋತ್ತಮತ್ವವು

ಅವರಲ್ಲಿ ಇಲ್ಲ. ಅದಕ್ಕೆ ಹೇತುವನ್ನು ಹೀಗೆ ವಿವಕ್ಷೆ ಮಾಡಬೇಕು. ಪ್ರೇರಕತಾಸಂಬಂಧೇನ ಆನಂದತೀರ್ಥವತ್ತ್ವ ಎಂಬುದು ಹೇತುವಲ್ಲ. ಹೊರತು ತದಧೀನತ್ವೇನ ಆನಂದತೀರ್ಥವತ್ತ್ವ ಎಂಬುದು ಹೇತು. ಈಗ ಹೇತುವಾಕ್ಯದ ಅರ್ಥ - ಎಲ್ಲಿ ಹೇತುವನ್ನು ಹೇಳುವೆವೋ ಅವರ ಅಧೀನವಾಗಿ ಆನಂದತೀರ್ಥರಿರಬೇಕು. ಸಜ್ಜನರಲ್ಲಿಯಾದರೋ ಪ್ರೇರಕರಾಗಿ ಆನಂದತೀರ್ಥ-ರಿದ್ದರೂ ಸಜ್ಜನರ ಅಧೀನವಾಗಿ ಆನಂದತೀರ್ಥರಿಲ್ಲ ಬದಲಾಗಿ ಆನಂದತೀರ್ಥರ ಅಧೀನರೇ ಸಜ್ಜನರು.

## ವ್ಯಭಿಚಾರ ದುಷ್ಪರಿಹರವೇ?

(ಆನಂದ) ನ ಚ ಲಕ್ಷ್ಮ್ಯಾಃ ತದಧೀನತ್ವೇನಾಽನಂದತೀರ್ಥವತ್ತ್ವೇಽಪಿ ಸರ್ವೋತ್ತಮತ್ವಾಭಾವಾದ್ ವ್ಯಭಿಚಾರೋ ದುಷ್ಪರಿಹರ ಏವೇತಿ ವಾಚ್ಯಮ್ । ತತ್ಸ್ವತಂತ್ರತ್ವೇನ ಆನಂದತೀರ್ಥವತ್ತ್ವಸ್ಯ ವಿವಕ್ಷಿತತ್ವಾತ್ ಲಕ್ಷ್ಮ್ಯಾಶ್ಚ ಸ್ವಾತಂತ್ರ್ಯಾಭಾವಾನ್ನ ವ್ಯಭಿಚಾರಃ । ಹೇತುಸಿದ್ಧಿಸ್ತು ಆಗಮಾದೇವ ದ್ರಷ್ಟವ್ಯಾ ।

ಇಷ್ಟಾದರೂ ಲಕ್ಷ್ಮಿಯಲ್ಲಿ ಅನುಮಾನಕ್ಕೆ ವ್ಯಭಿಚಾರದೋಷ. ಹರಿಯಲ್ಲಿರುವ ಸರ್ವೋತ್ತಮತ್ವ ಲಕ್ಷ್ಮಿಯಲ್ಲಿಲ್ಲ. ಆದರೆ ಅಲ್ಲಿ ತದಧೀನತ್ವೇನ ಆನಂದತೀರ್ಥವತ್ತ್ವ ಎಂಬ ಹೇತುವಿದೆ. ಅದಕ್ಕೆ ತತ್ಸ್ವತಂತ್ರತ್ವೇನ ಆನಂದತೀರ್ಥವತ್ತ್ವ ಎಂದು ಹೇತುವನ್ನು ವಿವಕ್ಷೆ ಮಾಡುತ್ತೇವೆ. ಈಗ ಆನಂದ-ತೀರ್ಥರು ಲಕ್ಷ್ಮಿಯ ಅಧೀನರಾದರೂ ಲಕ್ಷ್ಮಿಯು ಸ್ವತಂತ್ರಳಲ್ಲವಾದ್ದರಿಂದ ವ್ಯಭಿಚಾರವಿಲ್ಲ. ಇಲ್ಲಿ ಹೇತುಸಾಧ್ಯಗಳ ವ್ಯಾಪ್ತಿಗ್ರಹಣವು ವೇದಾದಿಶಾಸ್ತ್ರಗಳಿಂದ ಸಿದ್ಧ.

## ಸಜ್ಜನಾಃ ಹರಿಮಂತಃ ಆನಂದತೀರ್ಥವತ್ತ್ವಾತ್

(ಆನಂದ) ಯದ್ವಾ 'ಸಜ್ಜನಾಃ ಹರಿಮಂತಃ ಆನಂದತೀರ್ಥವತ್ತ್ವಾತ್'। ನ ಚ ಸಪಕ್ಷಾಭಾವಃ । ಸಜ್ಜನೈಕದೇಶಸ್ಯೈವ ಪಕ್ಷತ್ವೇನ ಏಕದೇಶಾಂತರಸ್ಯ ಸಪಕ್ಷತ್ವೋಪಪತ್ತೇಃ । ನ ಚ ವಿನಿಗಮಕಾ-ಭಾವಾತ್ ಕಸ್ಯೈಕದೇಶಸ್ಯ ಪಕ್ಷತ್ವಮಿತಿ ವಾಚ್ಯಮ್ । ಅನವರತಂ ಪೂರ್ಣಗುಣತ್ವಪ್ರಕಾರಕ-ಹರಿಸ್ಮೃತಿಮದಭಿನ್ನಭಕ್ತಸ್ತ್ರೀಚತುರ್ಮುಖೇತರರುದ್ರಾದಿಸಜ್ಜನೈಕದೇಶಸ್ಯ ಪಕ್ಷತ್ವೇನ ತಸ್ಯ ಸಪಕ್ಷ-ತ್ವೋಪಪತ್ತೇಃ ।

ಅಥವಾ ಸಜ್ಜನಾಃ ಹರಿಮಂತಃ ಆನಂದತೀರ್ಥವತ್ತ್ವಾತ್ - ಎಂಬೀರೀತಿಯಾಗಿ ಅನುಮಾನ-ಪ್ರಯೋಗ. ಅಲ್ಲ ಇಲ್ಲಿ ಸಪಕ್ಷವಿಲ್ಲ. ಸಜ್ಜನರ ಇನ್ನೊಂದು ಭಾಗವೇ ಸಪಕ್ಷವಾಗಬಹುದಾದ್ದರಿಂದ. ಅರ್ಥಾತ್ ಕೆಲವು ಸಜ್ಜನರು ಮಾತ್ರ ಪಕ್ಷ. ಹಾಗಾಗಿ ಇನ್ನುಳಿದ ಸಜ್ಜನರ ಭಾಗವು ಸಪಕ್ಷವಾಗುತ್ತವೆ. ಅಲ್ಲ ಯಾವ ಸಜ್ಜನರು ಪಕ್ಷ, ಯಾವ ಸಜ್ಜನರು ಸಪಕ್ಷ ಎಂದು ನಿರ್ಧರಿಸುವುದು ಹೇಗೆ? ಅದು

ಹೀಗೆ - ನಿರಂತರವಾಗಿ ಹರಿಯು ಸಕಲಗುಣಪರಿಪೂರ್ಣ ಎಂಬ ಸ್ಮರಣೆ ಇರುವ ಭಕ್ತರಾದ ಲಕ್ಷ್ಮೀ, ಚತುರ್ಮುಖ ಹಾಗೂ ಅವರಿಗಿಂತ ಬೇರೆಯಾದ ರುದ್ರಾದಿ ಸಜ್ಜನರ ಒಂದು ಭಾಗವೇ ಇಲ್ಲಿ ಪಕ್ಷ.

## ದೈತ್ಯರು ವಿಪಕ್ಷವಾಗುವುದು ಹೇಗೆ?

(ಆನಂದ) — ನ ಚ ನಿಶ್ಚಿತಸಾಧ್ಯಾಭಾವವತ ಏವ ವಿಪಕ್ಷತ್ವೇನ ಪ್ರಕೃತೇ ಚ ಹರೇರ್ವ್ಯಾಪಕತ್ವೇನ ಹರಿಮತ್ತ್ವಸ್ಯ ಸರ್ವತ್ರ ವಿಪಕ್ಷೀಭೂತದೈತ್ಯಾದಿಷು ಸತ್ತ್ವೇನ ಕಥಂ ತೇಷಾಂ ವಿಪಕ್ಷತ್ವಮಿತಿ ವಾಚ್ಯಮ್ । 'ದೂರಾತ್ ದೂರತರಂ ಯತ್ತು ತದೇವಾಂತಿಕಮಂತಿಕಾತ್' ಇತ್ಯಾದೌ ತಜ್ಜ್ಞಾನ-ವತ್ತ್ವೇನ ತದ್ದೂರತ್ವಸ್ಯೈವ ಪರಿಪೂರ್ಣಗುಣತ್ವೇನ ಹರಿಸ್ಮೃತಿಮತ್ತ್ವಸ್ಯೈವ ಹರಿಮತ್ತ್ವಾತ್ ಪ್ರಕೃತೇ ಹರಿಮತ್ತ್ವಸ್ಯ ವಿವಕ್ಷಿತತ್ವಾತ್ ತಸ್ಯ ಚ ತೇಷ್ವಸತ್ತ್ವೇನ ವಿಪಕ್ಷತ್ವೋಪಪತ್ತೇಃ ।

ಈ ಅನುಮಾನಕ್ಕೆ ವಿಪಕ್ಷವಿಲ್ಲ ಎಂದಾಯಿತು. ಯದ್ಯಪಿ ವಿಪಕ್ಷರಾದವರು ದೈತ್ಯರು. ಆದರೆ ದೈತ್ಯರಲ್ಲಿಯೂ ಹರಿಯು ಇದ್ದಾನೆ. ಏಕೆಂದರೆ ಹರಿಯು ಸರ್ವತ್ರ ವ್ಯಾಪ್ತ. ಹಾಗಾಗಿ ಅಲ್ಲಿ ನಿಶ್ಚಿತಸಾಧ್ಯಾಭಾವವತ್ತ್ವ ಬರುವುದಿಲ್ಲ. ಅರ್ಥಾತ್ ಸಾಧ್ಯವಿಲ್ಲ ಎಂಬ ನಿಶ್ಚಯ ದೈತ್ಯರಲ್ಲೂ ಇಲ್ಲ. ವ್ಯಾಪಕವಾಗಿ ಅಲ್ಲಿಯೂ ಹರಿಯು ಇದ್ದಾನಾದ್ದರಿಂದ. ಅದಕ್ಕೆ ಉತ್ತರವಿದು - 'ದೂರಾತ್ ದೂರತರಂ ಯತ್ತು ತದೇವಾಂತಿಕಮಂತಿಕಾತ್' ಎಂಬಲ್ಲಿ ಹೇಳಿದಂತೆ ಯಾರಿಗೆ ಹರಿಯ ಜ್ಞಾನ-ವಿದೆಯೋ ಅವರೇ ಹರಿಯ ಸಮೀಪದಲ್ಲಿರುವರು. ಯಾರಿಗೆ ಹರಿಯ ಜ್ಞಾನವಿಲ್ಲವೋ ಅವರು ಅವರಿಗಿಂತ ದೂರವಿರುವವರು ಎಂದು ಹೇಳಿದಂತೆ ಇಲ್ಲಿ ಯಾರು ಪರಿಪೂರ್ಣಗುಣವುಳ್ಳವನು ಶ್ರೀಹರಿ ಎಂಬ ಸ್ಮರಣೆಯನ್ನು ಹೊಂದಿರುವವರೋ ಅವರೇ ಹರಿಮಂತರು ಎನಿಸುವರು. ಹಾಗಾಗಿ ಪರಿಪೂರ್ಣಗುಣತ್ವೇನ ಹರಿಸ್ಮೃತಿಮತ್ತ್ವ ಎಂಬುವುದೇ ಸಾಧ್ಯದ ಅಭಿಪ್ರೇತಾರ್ಥ. ಇದು ದೈತ್ಯರಲ್ಲಿ ಇಲ್ಲ. ಹಾಗಾಗಿ ವಿಪಕ್ಷರಾಗಬಹುದು.

* — ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್ ।
ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ 11-7॥ ದ್ವಾದಶಸ್ತೋತ್ರ

ಯತ್ತು = ಯಾವ ಭಗವಂತನ ಸ್ವರೂಪವು, ದೂರಾತ್ ದೂರತರಂ = ಅಭಕ್ತರಿಗೆ ದೂರಕ್ಕಿಂತ ತುಂಬಾ ದೂರ ಅಂದರೆ ಅತ್ಯಂತ ದೂರ ಎಂದು ತಾತ್ಪರ್ಯ. ತದೇವ = ಅದೇ ಸ್ವರೂಪವು, ಅಂತಿಕಾದ್ ಅಂತಿಕಮ್ = ತನ್ನ ಭಕ್ತರಿಗೆ ಅತ್ಯಂತ ಸಮೀಪದಲ್ಲಿರುವುದು. ಇಂತಹ ಬ್ರಹ್ಮೇಂದ್ರಾ-ದ್ಯಭಿವಂದಿತಂ = ಬ್ರಹ್ಮ ಇಂದ್ರ ಮೊದಲಾದ ದೇವತೆಗಳಿಂದ ವಂದಿಸಲ್ಪಟ್ಟ, ಆನಂದಸ್ಯ = ಸುಖರೂಪಿಯಾದ ಪರಮಾತ್ಮನ, ಪದಂ = ಸ್ವರೂಪವನ್ನು, ವಂದೇ = ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ.

ಈ ಶ್ಲೋಕದಲ್ಲಿ ಅತ್ಯಂತಸಮೀಪದಲ್ಲಿ ಭಗವಂತನಿದ್ದಾನೆ ಎನ್ನುವುದರ ಭಾವ ಅವರಿಗೆ ಬೇಗ ಅನುಗ್ರಹ ಮಾಡಲು ಉತ್ಸುಕನಾಗಿದ್ದಾನೆ. ಅತ್ಯಂತ ದೂರದಲ್ಲಿದ್ದಾನೆ ಎಂದರೆ ಅನುಗ್ರಹೋನ್ಮುಖ-ನಾಗಿಲ್ಲ ಎಂದರ್ಥ.

ಅಥವಾ ಭಕ್ತರಿಗೆ ಭಗವಂತನು ಅತ್ಯಂತ ಹತ್ತಿರ ಎಂದರೆ ಸದಾ ಅವನ ಗುಣಪೂರ್ಣತ್ವ ಮೊದಲಾದ ಜ್ಞಾನವನ್ನು ಭಕ್ತರು ಹೊಂದಿರುವುದು. ಅಭಕ್ತರಿಗೆ ಇದಕ್ಕಿಂತ ವಿಪರೀತ ಎಂದು ತಿಳಿಯಬೇಕು. ಹಾಗಾಗಿ ಭಗವಂತ ಅವರಿಗೆ ಬಹಳ ದೂರನಿದ್ದಾನೆ.

### ಆನಂದತೀರ್ಥರು ದೈತ್ಯರಲ್ಲೂ ಇರುವುದರಿಂದ ವ್ಯಭಿಚಾರ ಇದೆಯಲ್ಲ?

(ಆನಂದ) — ನ ಚ ಪ್ರೇರಕತ್ವೇನ ಆನಂದತೀರ್ಥವತ್ತ್ವಸ್ಯ ದೈತ್ಯೇಷ್ವಪಿ ಸತ್ತ್ವೇನ ವ್ಯಭಿಚಾರ ಇತಿ ವಾಚ್ಯಮ್ । ಆನಂದತೀರ್ಥವತ್ತ್ವೇನ ತಜ್ಜ್ಞಾನವತ್ತ್ವಸ್ಯ ಆನಂದತೀರ್ಥವತ್ತ್ವಸ್ಯ ವಿವಕ್ಷಿತತ್ವಾತ್ ತಸ್ಯ ಚ ತತ್ರ ಅಭಾವಾನ್ನ ವ್ಯಭಿಚಾರಃ । ವ್ಯಾಪ್ತಿಸ್ತು 'ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ (ತತ್ರೈವ ವಾಯುಃ)' (ಮ.ಭಾ.ತಾ.ನಿ 5-46) ಇತ್ಯುಕ್ತಾ ದ್ರಷ್ಟವ್ಯಾ ।

ಇಷ್ಟಾದರೂ ದೈತ್ಯರಲ್ಲಿ ಸಾಧ್ಯವಿಲ್ಲ ಆದರೆ ಹೇತುವಿದೆ ಎಂದು ವ್ಯಭಿಚಾರವಿದೆ. ಇಲ್ಲಿ ಹೇತುವು ಆನಂದತೀರ್ಥವತ್ವ ಎಂಬುದು. ಎಲ್ಲರಿಗೂ ಆನಂದತೀರ್ಥರು ಪ್ರೇರಕರಾದ್ದರಿಂದ ದೈತ್ಯರಲ್ಲಿಯೂ ಪ್ರೇರಕತಾಸಂಬಂಧೇನ ಆನಂದತೀರ್ಥವತ್ವ ಎಂಬ ಹೇತುವು ಬರುವುದು. ಅದಕ್ಕೆ ಉತ್ತರವಿದು - ಈಗ ತಾನೆ ಹೇಳಿದಂತೆ ಪ್ರೇರಕತ್ವೇನ ಆನಂದತೀರ್ಥರಿದ್ದರೂ ಪ್ರೇರಕತ್ವೇನ ಆನಂದತೀರ್ಥರ ಜ್ಞಾನ ಅರ್ಥಾತ್ ನಮಗೆ ಆನಂದತೀರ್ಥರು ಪ್ರೇರಕರಾಗಿದ್ದಾರೆ ಎಂಬುವ ಜ್ಞಾನ ದೈತ್ಯರಿಗೆ ಇಲ್ಲವಾದ್ದರಿಂದ ಪ್ರೇರಕತ್ವೇನ ಆನಂದತೀರ್ಥವತ್ವ ಎಂಬ ಹೇತುವು ಬರುವುದಿಲ್ಲ. ಈ ಅನುಮಾನದಲ್ಲಿ 'ಯತ್ರ ಯತ್ರ ಆನಂದತೀರ್ಥವತ್ತ್ವಂ ತತ್ರ ತತ್ರ ಹರಿಮತ್ತ್ವಂ' ಎಂಬ ವ್ಯಾಪ್ತಿಗ್ರಹವು ಯಾವ ಪ್ರಮಾಣದಿಂದ ಸಿದ್ಧ ಎಂದರೆ ಆಗಮದಿಂದ ಎಂದುತ್ತರ. ಆಗಮವಾದರೋ 'ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ' ಎಂದು ತಿಳಿಯಬೇಕು.

### 'ಆನಂದತೀರ್ಥಃ ಹರಿಮಾನ್ ಆನಂದತೀರ್ಥತ್ವಾತ್'

(ಆನಂದ) ಅಥವಾ 'ಆನಂದತೀರ್ಥಃ ಹರಿಮಾನ್ ಆನಂದತೀರ್ಥತ್ವಾತ್' ಇತಿ ಹೇತುಃ । ನ ಚೈವಂ ಮೂಲವಿರೋಧಃ । ಆನಂದತೀರ್ಥಪದಸ್ಯ ಭಾವಪ್ರಧಾನತ್ವಾತ್ ನ ಚೈವಂ ಸತಿ ಸಪಕ್ಷೇ ತತ್ರಾಪ್ರವೇಶಿತತ್ವಾದ್ ಅಸಾಧಾರಣ್ಯಮಿತಿ ವಾಚ್ಯಮ್ । ಆನಂದತೀರ್ಥಾನಾಮನೇಕತ್ವೇನ ತೇಷಾ-ಮೇವ ಸಪಕ್ಷತ್ವೋಪಪತ್ತೇಃ । ಕಸ್ಯಚಿದಾನಂದತೀರ್ಥಸ್ಯ ಪಕ್ಷತ್ವಾತ್ । ಅನವರತತತ್ಸ್ಮೃತಿಮತ್ತ್ವ-ಸ್ಯೈವ ಹರಿಮತ್ತ್ವಸ್ಯ ವಿವಕ್ಷಿತತ್ವಾನ್ನ ಕೋಽಪಿ ದೋಷಃ ।

ಅಥವಾ - 'ಆನಂದತೀರ್ಥಃ ಹರಿಮಾನ್ ಆನಂದತೀರ್ಥತ್ವಾತ್' ಎಂದನುಮಾನ. ಅಲ್ಲ ಮೂಲ-ವಿರೋಧ. ಮೂಲದಲ್ಲಿ ಆನಂದತೀರ್ಥ ಎಂಬ ಪದವಿದೆ. ಆನಂದತೀರ್ಥತ್ವ ಎಂಬುವುದೇ ಹೇತು. ಅದಕ್ಕೆ ಆನಂದತೀರ್ಥ ಎಂಬ ಮೂಲದಲ್ಲಿರುವ ಪದವು ಆನಂದತೀರ್ಥತ್ವ ಎಂಬ ಧರ್ಮವನ್ನು ಹೇಳುವ ಉದ್ದೇಶದಿಂದ ಹೇಳಿರುವ ಪದ. ಅರ್ಥಾತ್ ಭಾವಪ್ರಧಾನನಿರ್ದೇಶ ಎಂದರೆ 'ಧರ್ಮದ ಜ್ಞಾನಬರಲಿ ಎಂಬ ಉದ್ದೇಶದಿಂದ ಧರ್ಮಿಯನ್ನು ಹೇಳುವ ಶಬ್ದವನ್ನು ಹೇಳುವುದು'. ಹೀಗಾದರೆ ಈ ಅನುಮಾನಕ್ಕೆ ಸಪಕ್ಷವೇ ಇಲ್ಲವೆಂದಾಯಿತು. ಏಕೆಂದರೆ, ಆನಂದತೀರ್ಥತ್ವ ಎಂಬುದು ಪಕ್ಷದಲ್ಲಿ ಮಾತ್ರ ಇರುವ ಧರ್ಮ. ಆದ್ದರಿಂದ ಅಸಾಧಾರಣ್ಯ ಎಂಬ ದೋಷ. ಅದಕ್ಕೆ ಆನಂದತೀರ್ಥರು ಕಲ್ಪಭೇದೇನ ಅನೇಕರಿದ್ದಾರೆ. ಆದ್ದರಿಂದ ಒಬ್ಬ ಆನಂದ-ತೀರ್ಥರನ್ನು ಪಕ್ಷ ಮಾಡಿ ಇನ್ನೆರಲ್ಲನ್ನೂ ಸಪಕ್ಷ ಮಾಡಿ ಅನುಮಾನಪ್ರಯೋಗ ಮಾಡಬಹುದು. ಇನ್ನು ಇಲ್ಲಿ ಸಾಧ್ಯ ಹರಿಮತ್ವ. ಇದಾದರೋ ಅನವರತವಾಗಿ ಯಾರಿಗೆ ಹರಿಸ್ಮರಣೆಯಿದೆಯೋ ಅವರಲ್ಲಿಯೇ ಹರಿಮತ್ವ ಬರುವುದು ಎಂಬ ಅಭಿಪ್ರಾಯದಿಂದ ಹೇಳಿದ್ದು. ಆದ್ದರಿಂದ ಯಾವುದೇ ದೋಷಕ್ಕೂ ಅವಕಾಶವಿಲ್ಲ.

**ವೇದಾದಿಶಾಸ್ತ್ರಂ ಪ್ರತಿಪಾದ್ಯತ್ವೇನ ಹರಿಮತ್, ತತ್ಪ್ರತಿಪಾದಕತ್ವೇನ ಆನಂದತೀರ್ಥವತ್ವಾತ್**

(ಆನಂದ) ಯದ್ವಾ, ವೇದಾದಿಶಾಸ್ತ್ರಂ ಪ್ರತಿಪಾದ್ಯತ್ವೇನ ಹರಿಮತ್, ತತ್ಪ್ರತಿಪಾದಕತ್ವೇನ ಆನಂದತೀರ್ಥವತ್ವಾತ್ । ಅತ್ರ ಸದಾಗಮಾನಾಂ ಸಪಕ್ಷತ್ವಾತ್ ದುಃಶಾಸ್ತ್ರಾಣಾಂ ವಿಪಕ್ಷತ್ವಮ್ । ತಥಾ ಚ ನ ಕಶ್ಚಿದ್ದೋಷಃ । 'ಬಾಧಿತೇ ವಿಷಯೇ ಸಕ್ತಿರ್ನ ವೈ' ಇತ್ಯನೇನ ವಿಷ್ಣುಸರ್ವೋ-ತ್ತಮತ್ವಾದಿರೂಪಾರ್ಥಸ್ಯ ಸ್ಮೃತೀನಾಂ ನ ಕದಾಪಿ ಬಾಧ ಇತ್ಯುಕ್ತಂ ಭವತಿ ।

ಅಥವಾ - ವೇದಾದಿಶಾಸ್ತ್ರಂ, ಪ್ರತಿಪಾದ್ಯತ್ವೇನ ಹರಿಮತ್, ತತ್ಪ್ರತಿಪಾದಕತ್ವೇನ ಆನಂದ-ತೀರ್ಥವತ್ವಾತ್ - ಈ ಅನುಮಾನದ ಅರ್ಥ - ವೇದಪುರಾಣ ಮೊದಲಾದ ಗ್ರಂಥಗಳು ಹರಿಯನ್ನುಳ್ಳದ್ದಾಗಿವೆ. ಅರ್ಥಾತ್ ಇವುಗಳೆಲ್ಲವೂ ಹರಿಯನ್ನು ಪ್ರತಿಪಾದನೆ ಮಾಡುವುದರಿಂದ, ಪ್ರತಿಪಾದ್ಯತಾಸಂಬಂಧೇನ ಹರಿಯು ಇವುಗಳಲ್ಲಿ ಇರುವನು. ಅರ್ಥಾತ್ ಹರಿನಿಷ್ಠಪ್ರತಿಪಾದ್ಯತಾನಿ ರೂಪಿತಪ್ರತಿಪಾದಕತಾವತ್ ವೇದಾದಿಶಾಸ್ತ್ರಂ ಎಂದು. ಇನ್ನು ವೇದಾದಿಶಾಸ್ತ್ರಗಳನ್ನು ಆನಂದ-ತೀರ್ಥರು ಪ್ರತಿಪಾದನೆ ಮಾಡುವವರಾದ್ದರಿಂದ ತತ್ಪ್ರತಿಪಾದಕತ್ವೇನ ಆನಂದತೀರ್ಥವತ್ವ ಎಂಬ ಹೇತುವು ಪಕ್ಷದಲ್ಲಿದೆ. ಈ ಅನುಮಾನಕ್ಕೆ ಸಪಕ್ಷವಾದದ್ದು ಸದಾಗಮಗಳು. ವಿಪಕ್ಷವಾದದ್ದು ದುಃಶಾಸ್ತ್ರಗಳು. ಆದ್ದರಿಂದ ಯಾವುದೇ ದೋಷವಿಲ್ಲ.

ಇನ್ನು ಆನಂದತೀರ್ಥರೆಂಬ ಯುಕ್ತಿಗೆ 'ಬಾಧಿತೇ ವಿಷಯೇ ಸಕ್ತಿರ್ನ ವೈ' ಎಂದಿರುವಂತೆ ವಿಷ್ಣು-ಸರ್ವೋತ್ತಮತ್ವ ಎಂಬರ್ಥಕ್ಕೆ ಯಾವುದೇ ಸ್ಮೃತಿಗಳ ಬಾಧವೂ ಇಲ್ಲ.

## ಶ್ರೌತಾನುಮಾನರಾದ ಆನಂದತೀರ್ಥರಿಗೆ ಪ್ರತಿಪಕ್ಷಯುಕ್ತಿ ಇಲ್ಲ

(ಆನಂದ) ನ ಚ ಪ್ರತಿಪಕ್ಷಯುಕ್ತಿರ್ನೈವಾಸ್ತಿ ಇತ್ಯಯುಕ್ತಮ್, ಪರಶಾಸ್ತ್ರಾಣಾಂ ಜಾಗರೂಕತ್ವಾದಿತಿ ವಾಚ್ಯಮ್ । ಸಮಯಪಾದೇ ತದಾಭಾಸತ್ವಸ್ಯೋಕ್ತತ್ವೇನ ತಾಸಾಂ ಬಾಧಕತ್ವಾಯೋಗಾತ್ । ನ ಚಾನಂದತೀರ್ಥಃ ಶ್ರುತಿಮೂಲಕಾನುಮಾನಂ ವಾ ಶುಷ್ಕಾನುಮಾನಂ ವಾ । ನಾದ್ಯಃ, ತದದರ್ಶನಾತ್ । ನಾಂತ್ಯಃ, ತಸ್ಯ ಕಾಮಚಾರಿತ್ವಾದಿತಿ ವಾಚ್ಯಮ್ । 'ಆನಂದರೂಪಸ್ಯ ಪರಸ್ಯ ಪಾತ್ರಧೀರಾನಂದಸಂದಾಯಿಸುಶಾಸ್ತ್ರಕೃತ್ ಸ ಯತ್' (ಮ.ವಿ. 5-2) ಇತ್ಯಾನಂದತೀರ್ಥಪದೇನೈವ ಪ್ರಮಾಣಸ್ಯೋಕ್ತತ್ವೇನ ಶ್ರೌತಾನುಮಾನತ್ವಾತ್ । ಅತ ಏವ 'ಅತುಲಂ' = ಅಸದೃಶಂ ಪ್ರಮಾಣಮ್ । ತಥಾಚ ಪಂಚರೂಪೋಪಪನ್ನತ್ವಾತ್ ನಿರ್ದೋಷತ್ವಾದನ್ವಯವ್ಯತಿರೇಕಿಆನಂದತೀರ್ಥಾಖ್ಯೋ ಹೇತುಃ ಪ್ರಮಾಣಮಿತಿ ನ ಕಶ್ಚಿದ್ದೋಷಃ ।

ಇನ್ನು ಪ್ರತಿಪಕ್ಷಯುಕ್ತಿ ಇಲ್ಲವೇ ಇಲ್ಲ ಎಂಬ ಮಾತು ಹೇಗೆ ಸರಿ? ಎಂಬ ಆಕ್ಷೇಪ ಬರಬಹುದು. ಏಕೆಂದರೆ ಪರಪಕ್ಷಗಳಾದ ಸಾಂಖ್ಯ ಮೊದಲಾದ ಸಿದ್ಧಾಂತಗಳು ಇದ್ದೇ ಇವೆಯಲ್ಲ ಎಂದರೆ, ಅವುಗಳನ್ನು ಸಮಯಪಾದದಲ್ಲಿ ಮುಂದೆ ಆಭಾಸ ಎಂದು ತೋರಿಸುವುದರಿಂದ ಅವುಗಳು ಪ್ರತಿಪಕ್ಷವಾಗಲಿಕ್ಕೇ ಸಾಧ್ಯವಿಲ್ಲ.

ಹೀಗೆ ಅಲೌಕಿಕನಾದ ಹರಿಯನ್ನು ಸಮರ್ಥನೆ ಮಾಡುವುದರಿಂದ ಅತುಲವಾದ ಪ್ರಮಾಣವಾಗಿ ಆನಂದತೀರ್ಥರು ಇದ್ದಾರೆ. ತಥಾ ಚ - ಅನ್ವಯವ್ಯತಿರೇಕಿಯಾದ ಅರ್ಥಾತ್ ಅನ್ವಯವ್ಯಾಪ್ತಿ ವ್ಯತಿರೇಕವ್ಯಾಪ್ತಿಯುಳ್ಳ ಆನಂದತೀರ್ಥಾಖ್ಯೋ ಹೇತುಃ ಪ್ರಮಾಣಂ ಪಂಚರೂಪೋಪಪನ್ನತ್ವಾತ್, ನಿರ್ದೋಷತ್ವಾತ್' ಎಂದು ಹೇಳಿದಂತಾಯಿತು.

ಆನಂದರೂಪಸ್ಯ ಪರಸ್ಯ ಪಾತ್ರಧೀರಾನಂದಸಂದಾಯಿಸುಶಾಸ್ತ್ರಕೃತ್ ಸ ಯತ್ |
ಆನಂದತೀರ್ಥೇತಿಪದಂ ಗುರೂದಿತಂ ಬಭೂವ ತಸ್ಯಾತ್ಯನುರೂಪರೂಪಕಮ್ || 2 ||

ಯತ್ = ಯಾವ ಕಾರಣದಿಂದ, ಸಃ = ಆ ಪೂರ್ಣ- ಪ್ರಜ್ಞರು, ಆನಂದರೂಪಸ್ಯ = ಸುಖಸ್ವರೂಪನಾದ, ಪರಸ್ಯ = ಸರ್ವೋತ್ತಮನಾದ ಶ್ರೀಹರಿಗೆ, ಪಾತ್ರಧೀಃ = ಆವಾಸಸ್ಥಾನವಾದ ಬುದ್ಧಿಯುಳ್ಳವರಾಗಿದ್ದಾರೋ, ಆನಂದಸಂದಾಯಿ = ಆನಂದವನ್ನು ಕೊಡುವ, ಸುಶಾಸ್ತ್ರಕೃತ್= ಒಳ್ಳೆಯ ಶಾಸ್ತ್ರವನ್ನು ಮಾಡುವವರೋ, ತತ್ = ಆ ಕಾರಣದಿಂದ, ಗುರೂದಿತಂ = ಗುರುಗಳಿಂದ ಹೇಳಲ್ಪಟ್ಟ, ಆನಂದತೀರ್ಥೇತಿಪದಂ = 'ಆನಂದತೀರ್ಥ' ಎಂಬ ಹೆಸರು, ತಸ್ಯ = ಆ ಪೂರ್ಣಪ್ರಜ್ಞರಿಗೆ, ಅತ್ಯನುರೂಪರೂಪಕಂ = ಅತಿಶಯವಾಗಿ ಅನುಕೂಲವಾದ ಸ್ವರೂಪವುಳ್ಳದ್ದು, ಬಭೂವ = ಆಯಿತು.

## ಇತರ ಹೇತುಗಳು ಸತುಲ, ಇವರು ಅತುಲ

(ಚಷಕ) – ಪರ್ವತಾದೌ ವಹ್ನ್ಯಾದಿಕಂ ಧೂಮೇನಾಲೋಕೇನ ಭಸ್ಮನಾ ಚ ಸಾಧ್ಯತ ಇತಿ ತಾನಿ ಸಾಧನಾನಿ ಸತುಲಾನಿ, ಪ್ರಕೃತಸಾಧನಾಭಿಮತಭಗವತ್ವಾದಾತಿರೇಕೇಣ ತಾದೃಶಸಾಧ್ಯಾನುಮಾಪನ-ಸಮರ್ಥವೈಕಲ್ಯಾದಿದಮ್ ಅತುಲಮಿತಿ ಹೃದಯಮ್ ।

ಅತುಲಂ ಶುದ್ಧಂ ಪ್ರಮಾಣಂ ಸ ಮೇ ಆನಂದತೀರ್ಥೋ ಮುನಿಃ – ಆನಂದತೀರ್ಥರು ಅತುಲ-ವಾದ ಯುಕ್ತಿಯಾಗಿದ್ದಾರೆ. ಅರ್ಥಾತ್ ಇವರಿಗೆ ಹೋಲಿಕೆಯಿರುವ ಪ್ರಮಾಣವೇ ಇಲ್ಲ. ಇವರೇ ಸಾಧ್ಯವನ್ನು ಸಾಧಿಸಬೇಕು. ಲೋಕದಲ್ಲಿಯಾದರೋ ಪ್ರಸಿದ್ಧವಾದ 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬ ಸ್ಥಳದಲ್ಲಿ ಪರ್ವತದಲ್ಲಿ ವಹ್ನಿಯನ್ನು ಸಾಧಿಸುವುದಕ್ಕೆ ಸಾಧನವಾದದ್ದು ಧೂಮ ಯದ್ಯಪಿ ಆಗಿದೆ. ಆದರೆ ಅದು ಉತ್ಕೃಷ್ಟವಾದ ಸಾಧನವಲ್ಲ. ಧೂಮ ಇಲ್ಲದೆಯೂ ಪರ್ವತದಲ್ಲಿ ವಹ್ನಿಯನ್ನು ಸಾಧಿಸಲು ಬರುವುದರಿಂದ. ಅದು ಹೀಗೆ - ಪರ್ವತೋ ವಹ್ನಿಮಾನ್ ವಹ್ನ್ಯಾಲೋಕಾತ್ - ಅಥವಾ ಪರ್ವತೋ ವಹ್ನಿಮಾನ್ ಭಸ್ಮವತ್ವಾತ್. ಈ ರೀತಿ ವಹ್ನಿಯ ಕಾಂತಿಪುಂಜದಿಂದ ಅರ್ಥಾತ್ ಬೆಳಕಿನಿಂದ ಅಥವಾ ಪದಾರ್ಥಗಳ ಭಸ್ಮದಿಂದ ಪರ್ವತದಲ್ಲಿ ಅಗ್ನಿಯನ್ನು ಸಾಧಿಸಬಹುದು. ಇಲ್ಲಿ ಧೂಮ ಎಂಬ ಹೇತುವಿಗೆ ಹೋಲಿಕೆಯನ್ನು ಕೊಡಬಹುದು. ಆದರೆ ಪ್ರಕೃತದಲ್ಲಿ 'ಬ್ರಹ್ಮಮೀಮಾಂಸಾಶಾಸ್ತ್ರಂ ನಿಖಿಲಪೂರ್ತ್ಯವದ್ಯಗಂಧವೈಧುರ್ಯೋಭಯ-ವಿಶಿಷ್ಟವಾನ್ ಸ್ವಪ್ರತಿಪಾದಕತಾಸಂಬಂಧೇನ' ಅರ್ಥಾತ್ ಬ್ರಹ್ಮಸೂತ್ರವು ನಿಖಿಲಗುಣ-ಪರಿಪೂರ್ಣನಾದ ಯಾವುದೇ ದೋಷರಹಿತನಾದ ನಾರಾಯಣನನ್ನು ಪ್ರತಿಪಾದನೆ ಮಾಡುತ್ತಿದೆ ಎಂಬ ಸಾಧನೆ ಶ್ರೀಮದಾಚಾರ್ಯರಿಂದ ಮಾತ್ರ ಸಾಧ್ಯ. ಆದ್ದರಿಂದ ಇವರಿಗೆ ಹೋಲಿಕೆ ಇರುವ ಪ್ರಮಾಣವೇ ಇಲ್ಲ.

## ಪಾಂಘ್ರೀ ಶ್ರೀನಿವಾಸಾಚಾರ್ಯಟಿಪ್ಪಣೀ ಮಂಗಳಾಚರಣೆ –

ಶ್ರೀಃ ॥ ಭಾರತೀರಮಣಪೂಜ್ಯಾಯ ನಮಃ –

## ವ್ಯತಿರೇಕಿಯಾದ ಆನಂದತೀರ್ಥವತ್ವಹೇತು

ಅಯಮತ್ರ ಪ್ರಯೋಗಃ – 'ಹರಿಃ ಸರ್ವೋತ್ತಮಃ ಆನಂದತೀರ್ಥವತ್ವಾತ್' । ವ್ಯತಿರೇಕೀ ಅಪಿ ಅಯಂ ಹೇತುಃ, ಆನಂದತೀರ್ಥವತ್ತ್ವಂ ಸಾಧ್ಯಾಭಾವವ್ಯಾಪಕೀಭೂತ-ಅಭಾವಪ್ರತಿಯೋಗೀತಿ ಜ್ಞಾನೇನ । 'ಯತ್ರ ಯತ್ರ ಆನಂದತೀರ್ಥವತ್ತ್ವಂ ತತ್ರ ತತ್ರ ಸರ್ವೋತ್ತಮತ್ವಂ, ವ್ಯಾಸವತ್' ಇತಿ ಅನ್ವಯ ಏವ ಪರ್ಯವಸ್ಯತಿ । ಇತಿ ಅಭಿಪ್ರೇತ್ಯ ಏವಮುಕ್ತಮ್ — ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿರಿತಿ ॥ ಹರೇಃ ಹರಿತ್ವೇನ ಪಕ್ಷತ್ವಂ ವ್ಯಾಸತ್ವೇನ ಸಪಕ್ಷತ್ವ-

ಮಿತಿ । **ವ್ಯಾವೃತ್ತಿರಿತಿ** ॥ ವಿಪಕ್ಷಃ ಜಡಜೀವಾದಿ, ತಸ್ಮಾದ್ ವ್ಯಾವೃತ್ತಿಃ । ತತ್ರಾಯಂ ಹೇತುರವಿದ್ಯಮಾನ ಇತಿ । ವ್ಯಭಿಚಾರಾದಿಶೂನ್ಯ ಇತ್ಯರ್ಥಃ । ನನು ವಿಪಕ್ಷಭೂತೇ ಬ್ರಹ್ಮಾದಿಜಗತಿ ಪ್ರೇರಕತ್ವೇನ ಆನಂದತೀರ್ಥವತ್ತ್ವಸ್ಯ ಸತ್ತ್ವಾತ್ ಕಥಂ ತದ್ವ್ಯಾವೃತ್ತಿಃ ಇತಿ ಚೇತ್, ನ । ತದ-ಧೀನತ್ವರೂಪಧರ್ಮಾವಚ್ಛಿನ್ನಾನಂದತೀರ್ಥವತ್ತ್ವಸ್ಯ ಹೇತುತ್ವೇನ ವಿವಕ್ಷಿತತ್ವಾತ್ ತಸ್ಯ ಚ ವಿಪಕ್ಷೇ ಅಭಾವಾತ್ ।

ಹರಿಃ ಸರ್ವೋತ್ತಮಃ ಆನಂದತೀರ್ಥವತ್ವಾತ್ ವ್ಯಾಸವತ್ - ಎಂದನುಮಾನ. ವ್ಯಾಸರಲ್ಲಿ ಆನಂದತೀರ್ಥರು ಇದ್ದಾರೆ. ಅದು ಹೇಗೆಂದರೆ, ವ್ಯಾಸರು ಆನಂದತೀರ್ಥರಿಗೆ ಪ್ರೇರಕರಾಗಿದ್ದಾರೆ. ಹಾಗಾಗಿ ಪ್ರೇರ್ಯತಾಸಂಬಂಧೇನ ಆನಂದತೀರ್ಥರು ವ್ಯಾಸರಲ್ಲಿ ಬರುತ್ತಾರೆ. ಹಾಗೇ ಸರ್ವೋ-ತ್ತಮತ್ವವು ವ್ಯಾಸರಲ್ಲಿ ಇದೆ, ಭಗವಂತನ ಅವತಾರರಾದ್ದರಿಂದ. ಅದರಂತೆ ಹರಿಯಲ್ಲಿಯೂ ಆನಂದತೀರ್ಥರಿದ್ದಾರೆ ಆದ್ದರಿಂದ ಸರ್ವೋತ್ತಮತ್ವ ಹರಿಯಲ್ಲಿದೆ ಎಂದು ಸಾಧಿಸುತ್ತೇವೆ. ಈ ಅನುಮಾನಕ್ಕೆ ವಿಪಕ್ಷ ಜೀವಜಡಾದಿಗಳು. ಸರ್ವೋತ್ತಮತ್ವ ಎಂಬ ಸಾಧ್ಯವಿಲ್ಲವಾದ್ದರಿಂದ. ಅಲ್ಲ ವಿಪಕ್ಷವಾದ ಜೀವಜಡಾದಿಗಳಲ್ಲಿ ವ್ಯಭಿಚಾರ ಬರುವುದು. ಸರ್ವೋತ್ತಮತ್ವವಿಲ್ಲದಿರುವ ಅವು-ಗಳಲ್ಲಿ ಪ್ರೇರಕತಾಸಂಬಂಧೇನ ಆನಂದತೀರ್ಥರೆಂಬ ಹೇತು ಬರುತ್ತದೆಯಾದ್ದರಿಂದ ಎಂದರೆ ಇಲ್ಲ. ತದಧೀನತ್ವಧರ್ಮಾವಚ್ಛಿನ್ನಆನಂದತೀರ್ಥವತ್ವ ಎಂಬುದು ಹೇತು. ಅರ್ಥಾತ್ ತದಧೀನತ್ವ-ಧರ್ಮನಿಷ್ಠಅವಚ್ಛೇದಕತಾನಿರೂಪಿತಅವಚ್ಛೇದ್ಯತಾಶ್ರಯಆನಂದತೀರ್ಥನಿಷ್ಠಆಧೇಯತಾ-ನಿರೂಪಿತಅಧಿಕರಣತಾವತ್ವ ಎಂದು. ತದಧೀನತ್ವಧರ್ಮವು ಆನಂದತೀರ್ಥನಿಷ್ಠಆಧೇಯತಾ-ವಚ್ಛೇದಕ ಎಂದು ವಿವಕ್ಷೆ ಮಾಡಿದಾಗ ಆನಂದತೀರ್ಥರು ಜೀವಜಡಾದಿಗಳ ಅಧೀನರಲ್ಲ-ವಾದ್ದರಿಂದ ಹೇತುವೂ ಇಲ್ಲ. ಆದ್ದರಿಂದ ವ್ಯಭಿಚಾರಕ್ಕೆ ಅವಕಾಶವಿಲ್ಲ.

## ಬಾಧ ಎಂದರೇನು?

(ಪಾಂಘ್ರೀ ಟಿಪ್ಪಣೀ) — **ಸಕ್ತಿರಿತಿ** ॥ ಯಸ್ಯ ಬಾಧಿತೇ ಅರ್ಥೇ ಸಕ್ತಿರ್ನಾಸ್ತಿ । ಆನಂದತೀರ್ಥ-ವತ್ತ್ವಹೇತುಃ ಬಾಧಿತೋ ನ ಭವತಿ ಇತ್ಯರ್ಥಃ । ಬಾಧೋ ನಾಮ ಪಕ್ಷತಾವಚ್ಛೇದಕಾವಚ್ಛಿನ್ನೇ ಸಾಧ್ಯತಾವಚ್ಛೇದಕಾವಚ್ಛಿನ್ನಪ್ರತಿಯೋಗಿತಾಕಸಾಧ್ಯಾಭಾವಃ । ಹರಿತ್ವಾವಚ್ಛಿನ್ನೇ ಸರ್ವೋತ್ತಮತ್ವಾ-ವಚ್ಛಿನ್ನಪ್ರತಿಯೋಗಿತಾಕಸರ್ವೋತ್ತಮತ್ವಾಭಾವೇ ಹಿ ಸ ಸ್ಯಾತ್ । ನ ಚ ಸೋಽಸ್ತಿ ಹರೌ । ಸರ್ವೋತ್ತಮತ್ವಸ್ಯ ಅನೇಕಪ್ರಮಾಣಸಿದ್ಧತ್ವಾತ್ ಇತಿ ।

'ಸಕ್ತಿರ್ನ ವೈ ಬಾಧಿತೇ' ಎಂದು ಬಾಧ ಇರುವ ವಿಷಯದಲ್ಲಿ ಆಸಕ್ತಿಯು ಆನಂದತೀರ್ಥರಿಗೆ ಇರುವುದಿಲ್ಲ. ಅರ್ಥಾತ್ ಬಾಧದೋಷರಹಿತವಾಗಿದೆ ಆನಂದತೀರ್ಥರೆಂಬ ಯುಕ್ತಿ. ಬಾಧ ಎಂದರೆ

ಏನು? ಪಕ್ಷತಾವಚ್ಛೇದಕಾವಚ್ಛಿನ್ನೇ ಸಾಧ್ಯತಾವಚ್ಛೇದಕಾವಚ್ಛಿನ್ನಪ್ರತಿಯೋಗಿತಾಕಸಾಧ್ಯಾಭಾವಃ - ಎಂದು. ಪ್ರಕೃತದಲ್ಲಿ ಬಾಧ ಇದ್ದರೆ ಹೀಗೆ ಹೇಳಬೇಕು - ಹರಿತ್ವಾವಚ್ಛಿನ್ನೇ ಸರ್ವೋತ್ತಮತ್ವಾವಚ್ಛಿನ್ನಪ್ರತಿಯೋಗಿತಾಕಸರ್ವೋತ್ತಮತ್ವಾಭಾವಃ - ಎಂದು.

ಅಂದರೆ, ಅನುಮಾನಪ್ರಯೋಗಮಾಡುವುದಕ್ಕಿಂತ ಮೊದಲೇ ಅನುಮಾನದಲ್ಲಿ ಸಾಧ್ಯವಾಗಿರುವ ಹರಿಸರ್ವೋತ್ತಮತ್ವಕ್ಕೆ ವಿರುದ್ಧವಾಗಿ ಹರಿಯಲ್ಲಿ ಸರ್ವೋತ್ತಮತ್ವವಿಲ್ಲ ಎಂದು ಗ್ರಹಿಸುವ ಪ್ರಮಾಣವಿದ್ದರೆ ಆಗ ಅನುಮಾನಕ್ಕೆ ಅದರ ವಿರೋಧ ಬರುವುದರಿಂದ ಬಾಧ ಎಂಬ ದೋಷವು ಬರುತ್ತದೆ. ಪ್ರಕೃತದಲ್ಲಿ ಹರಿತ್ವ ಇರುವ ಹರಿಯಲ್ಲಿ ಸರ್ವೋತ್ತಮತ್ವವಿಶಿಷ್ಟಸರ್ವೋತ್ತಮತ್ವದ ಅಭಾವವು ಇಲ್ಲ. ಹೊರತು ವಿಪರೀತವಾಗಿ ಹರಿತ್ವವಿರುವ ಹರಿಯಲ್ಲಿ ಸರ್ವೋತ್ತಮತ್ವವನ್ನೇ ಸಾಧಿಸುವ ಅನೇಕ ಪ್ರಮಾಣಗಳಿವೆ. ಹಾಗಾಗಿ ಅನೇಕಪ್ರಮಾಣದಿಂದ ಹರಿಯಲ್ಲಿ ಸರ್ವೋತ್ತಮತ್ವ ಸಿದ್ಧ.

## ಸಿದ್ಧವಾದದ್ದು ಸಾಧನಾರ್ಹ ಹೇಗೆ? ಪಕ್ಷಸಾಧ್ಯಗಳಿಗೆ ಭೇದವೇ ಅಥವಾ ಅಭೇದವೇ?

(ಪಾಂಫ್ಲೇಟಪ್ಪಣೀ) — ನನು ಸಿದ್ಧತ್ವೇ ಕಥಂ ಸಾಧನಮಿತಿ ಚೇತ್, ನ । ಸಿದ್ಧಮಪಿ ಅಸಿದ್ಧಂ ಭ್ರಾಂತ್ಯಾ ಮನ್ವಾನಂ ಶಿಷ್ಯಂ ಪ್ರತಿ ತತ್ಸಾಧನಮ್ । ನನು ಪಕ್ಷಸಾಧ್ಯಯೋಃ ಭೇದೋ ಅಭೇದೋ ವಾ ವಿವಕ್ಷಿತಃ । ನಾದ್ಯಃ । 'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ' (ಕಠ. 2-1-14) ಇತಿ ನಿಷೇಧಾತ್ । ನ ದ್ವಿತೀಯಃ । ಸಾಧನಾಯೋಗಾತ್ । ಇತಿ ಚೇತ್, ಮೈವಂ: ಸವಿಶೇಷಾಭೇದಾಂಗೀಕಾರೇಣ ಉಪಪತ್ತೇಃ ।

ಅಲ್ಲ ಹಾಗಾದರೆ ಸಿದ್ಧವಾಗಿರುವ ಸರ್ವೋತ್ತಮತ್ವವನ್ನು ಇಲ್ಲಿ ಸಾಧಿಸುವುದಾದರೂ ಏಕೆ?

ಇದಕ್ಕೆ ಉತ್ತರ - ಅನೇಕ ಪ್ರಮಾಣಗಳಿಂದ ಸಿದ್ಧವಾದರೂ ಭ್ರಾಂತಿಯಿಂದ ಅದು ಸಿದ್ಧವಾಗಿಲ್ಲ ಎಂದು ತಿಳಿದ ಶಿಷ್ಯನನ್ನು ಕುರಿತು ಸಾಧನೆ ಮಾಡುತ್ತಿರುವುದು ಎಂದಭಿಪ್ರಾಯ. ಇನ್ನು ಅನುಮಾನದಲ್ಲಿ ಪಕ್ಷಸಾಧ್ಯಗಳಿಗೆ ಭೇದವಿದೆಯೋ ಇಲ್ಲವೋ. ಅರ್ಥಾತ್ ಹರಿಗೂ ಹಾಗೂ ಸರ್ವೋತ್ತಮತ್ವ ಎಂಬ ತನ್ನ ಧರ್ಮಕ್ಕೂ ಭೇದವಿದೆಯೋ ಇಲ್ಲವೋ. ಭೇದ ಇದೆ ಎಂದರೆ ಶ್ರುತಿವಿರೋಧ. 'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು ವಿಧಾವತಿ' ಎಂದು ಭಗವಂತನಿಗೂ ಅವನ ಧರ್ಮಗಳಿಗೂ ಭೇದವನ್ನು ಕಂಡಲ್ಲಿ ಅನಿಷ್ಟವಿದೆ ಎಂದು ಹೇಳಿದೆ. ಅಭೇದವಿದ್ದಲ್ಲಿ ಸಾಧನೆ ಮಾಡುವ ಅವಶ್ಯಕತೆಯೇ ಇಲ್ಲ. ಸರ್ವೋತ್ತಮತ್ವಅಭಿನ್ನನಾದ ಹರಿಯು ಮೊದಲೇ ಸಿದ್ಧನಾದ್ದರಿಂದ.

ಉತ್ತರ - ಸವಿಶೇಷಾಭೇದವನ್ನು ಹರಿ ಹಾಗೂ ತದ್ಧರ್ಮವಾದ ಸರ್ವೋತ್ತಮತ್ವಕ್ಕೂ

ಒಪ್ಪಿರುವುದರಿಂದ ವಿಶೇಷವು ಭೇದಪ್ರತಿನಿಧಿಯಾದ್ದರಿಂದ ಭೇದಕಾರ್ಯವನ್ನು ಇಲ್ಲಿ ಮಾಡುತ್ತಿದೆ ಎಂದು ತಿಳಿಯಬೇಕು.

## ಬಾಧದೋಷ ಹಾಗೇ ಇದೆಯಲ್ಲ?

(ಪಾಂಫ್ರೀಟಿಪ್ಪಣೀ) — ನನು ಅತ್ರ ಬಾಧಃ ತದವಸ್ಥಃ ಹರೌ ಸರ್ವೋತ್ತಮತ್ವಾಭಾವತ್ವಾವಚ್ಛಿನ್ನ-ಪ್ರತಿಯೋಗಿತಾಕಸರ್ವೋತ್ತಮತ್ವಾಭಾವಾಭಾವೇಽಪಿ ವ್ಯಧಿಕರಣಧರ್ಮಾವಚ್ಛಿನ್ನವ್ಯಾಸಜ್ಯವೃತ್ತಿ-ಧರ್ಮಾವಚ್ಛಿನ್ನಪ್ರತಿಯೋಗಿತಾಕಸರ್ವೋತ್ತಮತ್ವಾಭಾವಸ್ಯ ಸತ್ತ್ವಾತ್ ಇತಿ ಮೈವಮ್ । ವ್ಯಧಿ-ಕರಣಧರ್ಮಾನವಚ್ಛಿನ್ನವ್ಯಾಸಜ್ಯವೃತ್ತಿಧರ್ಮಾನವಚ್ಛಿನ್ನಪ್ರತಿಯೋಗಿತಾಕಸಾಧ್ಯಾಭಾವಸ್ಯ ವಿವಕ್ಷಿತ-ತ್ವಾತ್ ।

ಇಷ್ಟಾದರೂ ಬಾಧದೋಷ ಹಾಗೇ ಇದೆ. ಹೇಗೆಂದರೆ ಹರಿಯಲ್ಲಿ ಸರ್ವೋತ್ತಮತ್ವ ಇಲ್ಲ ಎಂಬುದನ್ನು ಎರಡು ರೀತಿ ಸಾಧಿಸಬಹುದು. ಒಂದು ವ್ಯಧಿಕರಣಧರ್ಮದಿಂದ ಸರ್ವೋತ್ತಮತ್ವ ಇಲ್ಲವೆಂದು ಹೇಳುವುದು. ಅಥವಾ ಉಭಯಾಭಾವವನ್ನು ಹರಿಯಲ್ಲಿ ಹೇಳುವ ಮುಖಾಂತರ ಸರ್ವೋತ್ತಮತ್ವವಿಲ್ಲ ಎನ್ನುವುದು.

ಅದು ಹೀಗೆ – ಸರ್ವೋತ್ತಮತ್ವವು ಹರಿಯಲ್ಲಿ ಒಂದು ರೀತಿಯಲ್ಲಿದ್ದರೂ ಘಟತ್ವೇನ ಸರ್ವೋ-ತ್ತಮತ್ವವು ಅಥವಾ ಪಟತ್ವೇನ ಸರ್ವೋತ್ತಮತ್ವವು ಹರಿಯಲ್ಲಿ ಇಲ್ಲ. ಹಾಗೆಯೇ ಅಜ್ಞತ್ವ ಸರ್ವೋತ್ತಮತ್ವ ಉಭಯ ಹರಿಯಲ್ಲಿ ಇಲ್ಲ ಎಂದು ಹೇಳಬಹುದು. 'ಏಕಸತ್ವೇಽಪಿ ದ್ವಯಂ ನಾಸ್ತಿ' ಎಂಬ ನಿಯಮದಂತೆ ಸರ್ವೋತ್ತಮತ್ವ ಹರಿಯಲ್ಲಿದ್ದರೂ ಅಜ್ಞತ್ವ-ಸರ್ವೋತ್ತಮತ್ವ ಎಂಬೆರೆಡು ಇಲ್ಲ ಎಂದು ಹೇಳಲು ಬರುತ್ತದೆ. ಅದಕ್ಕೆ ಉತ್ತರ – ಬಾಧಲಕ್ಷಣದಲ್ಲಿ 'ಪಕ್ಷತಾವಚ್ಛೇದಕಾವಚ್ಛಿನ್ನೇ ಸಾಧ್ಯತಾವಚ್ಛೇದಕಾವಚ್ಛಿನ್ನ-ಸಾಧ್ಯನಿಷ್ಠಪ್ರತಿಯೋಗಿತಾಕಾಭಾವಃ' ಎಂಬಲ್ಲಿ ಸಾಧ್ಯನಿಷ್ಠಪ್ರತಿ-ಯೋಗಿತಾದಲ್ಲಿ ವ್ಯಧಿಕರಣಧರ್ಮಅನವಚ್ಛಿನ್ನತ್ವ-ವ್ಯಾಸಜ್ಯವೃತ್ತಿಧರ್ಮಾನವಚ್ಛಿನ್ನತ್ವವನ್ನು ಕೊಡುತ್ತೇವೆ. ಹಾಗಾಗಿ ಅಂತಹ ಅಭಾವಗಳನ್ನು ತೆಗೆದುಕೊಂಡು ಬಾಧವನ್ನು ಹೇಳಲು ಬರುವುದಿಲ್ಲ.

## ವಿಷ್ಣುವಿಗೂ ತದ್ಧರ್ಮಗಳಿಗೂ ಭೇದದರ್ಶನ ಸಲ್ಲದು

* — ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।
ಏವಂ ಧರ್ಮಾನ್ ಪೃಥಕ್ ಪಶ್ಯಂಸ್ತಾನೇವಾನುವಿಧಾವತಿ ॥ ಕಠ.ಉ. 2-1-14 ॥

ಭಾ– ಭೇದಾಭೇದ ಏವ ನಿಷಿಧ್ಯತೇ ನ ತು ಭೇದ ಇತ್ಯಾಶಂಕಾಂ ನಿವರ್ತಯಿತುಮ್ 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಇತಿ ಭಗವದ್ಧರ್ಮಾಣಾಮವಯವಗುಣಕರ್ಮಣಾಂ ಭೇದದರ್ಶನೇ

ಪೃಥಗ್ ದೋಷಮಾಹ । ಪರ್ವತೇಷು ದುರ್ಗೇ ಶಿಖರೇ ವೃಷ್ಟಮಧೋ ವಿಧಾವತಿ । ಏವಂ ವಿಷ್ಣೋರ್ಧರ್ಮಾನ್ ಪೃಥಕ್ ಪಶ್ಯನ್ನಂಧಂತಮೋ ವಿಧಾವತಿ ।

* - ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ ಇತ್ಯತ್ರ ಏವಂ = ಪೂರ್ವೋಕ್ತ-ಮಿಥ್ಯಾಜ್ಞಾನಿವತ್ ಧರ್ಮಾನ್ ಪೃಥಕ್ ಪಶ್ಯನ್ ಪುರುಷಃ ತಾನ್ = ಮಿಥ್ಯಾಬೋಧಾನ್ ಅನು = ಅನುಸೃತ್ಯ ವಿಧಾವತಿ = ವಿವಿಧತಯಾ ಅಂಧಂತಮಸಿ ಧಾವತಿ । ಕಲಿಮಾರಭ್ಯ ಮನುಷ್ಯಾಧಮ-ಪರ್ಯಂತಂ ಮಿಥ್ಯಾಜ್ಞಾನೇಽಪಿ ತಾರತಮ್ಯಸದ್ಭಾವಾತ್ । ಅಂಧಂತಮಸಿ ತಾರತಮ್ಯೇನ ದುಃಖಮನುಭವತೀತಿ ಭಾವಃ । ಮಿಥ್ಯಾಜ್ಞಾನಮತಿದೃಢಂ ಚೇತ್ ಅಂಧಂತಮಸ್ಯೇವ ಧಾವತಿ । ಮಿಶ್ರಜೀವವತ್ ಅದೃಢಂ ಚೇತ್ ಕದಾಚಿದಸ್ತಿ ಕದಾಚಿನ್ನಾಸ್ತಿ ಚೇತ್ ಅಧಮಜೀವಾದ್ವಿಲಕ್ಷಣಂ ಮಧ್ಯಮಗತೌ ಧಾವತಿ । (ಪ್ರಕಾಶಿಕಾ)

ಏವಂ = ಹಿಂದೆ ಹೇಳಿದ ಮಿಥ್ಯಾಜ್ಞಾನಿಯಂತೆ ಧರ್ಮಗಳನ್ನು ಪ್ರತ್ಯೇಕವಾಗಿ ಕಾಣುವ ಮನುಷ್ಯನು ಆ ಮಿಥ್ಯಾಜ್ಞಾನಾನುಸಾರಿಯಾಗಿ ಅನೇಕ ರೀತಿಯಾಗಿ ಅಂಧಂತಮಸ್ಸಿನಲ್ಲಿ ಬೀಳುತ್ತಾನೆ. ಕಲಿಯನ್ನು ಪ್ರಾರಂಭಮಾಡಿ ಮನುಷ್ಯಾಧಮನವರೆಗೆ ಮಿಥ್ಯಾಜ್ಞಾನವಿದ್ದರೂ ಅದರಲ್ಲಿ ತಾರತಮ್ಯವಿದೆ. ಅಂಧಂತಮಸ್ಸಿನಲ್ಲಿ ತಾರತಮ್ಯೇನ ದುಃಖವುಂಟಾಗುತ್ತದೆ ಎಂದು ಅಭಿಪ್ರಾಯ. ಮಿಥ್ಯಾಜ್ಞಾನ ಅತಿದೃಢವಾದರೆ ಅಂಧಂತಮಸ್ಸಿಗೇ ಹೋಗುತ್ತಾರೆ. ಮಿಶ್ರಜೀವರಂತೆ ಮಿಥ್ಯಾಜ್ಞಾನವು ದೃಢ-ವಾಗದಿದ್ದರೆ ಅಂದರೆ ಕದಾಚಿತ್ ಇರುವುದು ಕದಾಚಿತ್ ಇರುವುದಿಲ್ಲ ಎಂಬ ಪಕ್ಷದಲ್ಲಿ ಮಧ್ಯಮಗತಿಯನ್ನು ಹೊಂದುತ್ತಾರೆ. ಇದು ಅಧಮಜೀವರಿಗೆ ಸಿಗುವಂತಹ ಗತಿಯಲ್ಲ. ಹೀಗೆ ಭಗವಂತನ ಧರ್ಮಗಳಾದ ಅವಯವಗುಣಕರ್ಮಗಳಿಗೂ ಭೇದಾಭೇದವನ್ನು ನಿಷೇಧಮಾಡು-ತ್ತಿಲ್ಲ ಹೊರತು ಭೇದವನ್ನೇ ನಿಷೇಧ ಮಾಡುತ್ತಿದ್ದಾರೆ. ಹಾಗಾಗಿ ಭೇದದೃಷ್ಟಿಯನ್ನು ಮಾಡಿದರೆ ದೋಷವಿದೆ. ಹೇಗೆಂದರೆ ಪರ್ವತದ ಶಿಖರದ ಮೇಲೆ ಬಿದ್ದ ಮಳೆಯ ನೀರು ಕೆಳಗಡೆ ಹೇಗೆ ಧಾವಿಸುತ್ತದೋ ಹಾಗೆ ವಿಷ್ಣುವಿಗೂ ಅವನ ಧರ್ಮಗಳಿಗೂ ಭೇದವನ್ನು ಕಂಡ ಪುರುಷನು ಅಂಧಂತಮಸ್ಸಿಗೆ ಧಾವಿಸುತ್ತಾನೆ.

## ಆನಂದತೀರ್ಥರೆಂಬ ಯುಕ್ತಿಗೆ ಸತ್ಪ್ರತಿಪಕ್ಷ ಇದೆ ಎಂಬ ಶಂಕೆ ಹಾಗೂ ಪರಿಹಾರ

(ಪಾಂಫ್ರೀಟಿಪ್ಪಣೀ) — ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಮ್ ಇತಿ ॥ ಪ್ರತಿಪಕ್ಷಯುಕ್ತಿಃ ಸತ್ಪ್ರತಿಪಕ್ಷಯುಕ್ತಿಃ ಪ್ರಕರಣಸಮಯುಕ್ತಿಶ್ಚ ಯಸ್ಯ ನೈವಾಸ್ತಿ । ಪ್ರಕರಣಸಮಾದಿದೋಷಶೂನ್ಯ ಇತ್ಯರ್ಥಃ । ನನು ಗೃಹೀತಾಪ್ರಾಮಾಣ್ಯಕಪಕ್ಷವಿಶೇಷ್ಯಕಾಭಿಮತಸಂಸರ್ಗಕಸಾಧ್ಯವತ್ತ್ವೋಪ-ಸ್ಥಿತಿಕಾಲೀನತದಭಾವವ್ಯಾಪ್ಯವತ್ತ್ವೋಪಸ್ಥಿತಿವಿಷಯತ್ವಂ ಸತ್ಪ್ರತಿಪಕ್ಷಾದಿತ್ವಮ್ । ತಚ್ಚ 'ವಿಮತಃ ಸರ್ವೋತ್ತಮಃ ತದಧೀನಸತ್ವಧರ್ಮಾವಚ್ಛಿನ್ನಾನಂದತೀರ್ಥವತ್ತ್ವಾತ್' ಇತಿ ಅನುಮಾನೇ

ವರ್ತತೇ; 'ವಿಮತಃ ನ ಸರ್ವೋತ್ತಮಃ ಆನಂದತೀರ್ಥವತ್ತ್ವಾತ್, ವಿಮತಃ ನ ಸರ್ವೋತ್ತಮಃ ಚತ್ತ್ವಾತ್, ಇತ್ಯಾದಿಪ್ರಯೋಗಸೌಲಭ್ಯಾತ್ ಇತಿ ಚೇನ್ನ; ಪಾರತಂತ್ರ್ಯಸ್ಯ ಉಪಾಧಿತ್ವಾತ್ । 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್' (ಕಠ 2-2-13) ಇತ್ಯಾದಿಷು ಭಗವತಃ ಚೇತನ-ಚೇತನತ್ವಶ್ರವಣಾತ್ । ಚಿತ್ತ್ವಾಭಾವೇನ ಅಸಿದ್ಧೇಶ್ಚ । ಅತ ಏವ ಅತುಲಂ = ಸಮಕಕ್ಷವಿರೋಧ್ಯ-ನುಮಾನಶೂನ್ಯಮ್ ।

'ನೈವಾಸ್ತಿ ಪ್ರತಿಪಕ್ಷಯುಕ್ತಿಃ' ಎಂದು ಪ್ರತಿಪಕ್ಷದ ಸಂಬಂಧ ಆನಂದತೀರ್ಥರೆಂಬ ಯುಕ್ತಿಗೆ ಇಲ್ಲವೇ ಇಲ್ಲ ಎಂದಿದ್ದಾರೆ. ಆದರೆ ಪ್ರತಿಪಕ್ಷವನ್ನು ಹೇಳಬಹುದು. 'ವಿಮತಃ ಸರ್ವೋತ್ತಮಃ ತದಧೀನತ್ವ-ಧರ್ಮಾವಚ್ಛಿನ್ನ-ಆನಂದತೀರ್ಥವತ್ತ್ವಾತ್' ಎಂಬ ಅನುಮಾನಕ್ಕೆ ಸಪ್ರತಿಪಕ್ಷತ್ವದೋಷವಿದೆ. ಅರ್ಥಾತ್ ಈ ಅನುಮಾನವನ್ನು ಅಪ್ರಮಾಣ ಎಂದು ಗ್ರಹಿಸುವ ಏತದನುಮಾನಕಾಲೀನವಾದ ಸಾಧ್ಯಾಭಾವವ್ಯಾಪ್ಯವತ್ತಾಉಪಸ್ಥಿತಿಯನ್ನು ವಿಷಯೀಕರಿಸುವ ಪ್ರತಿಪಕ್ಷಾನುಮಾನವಿದೆ. 'ವಿಮತಃ ನ ಸರ್ವೋತ್ತಮಃ ಆನಂದತೀರ್ಥವತ್ತ್ವಾತ್' 'ವಿಮತಃ ನ ಸರ್ವೋತ್ತಮಃ ಚತ್ವಾತ್' ಮುಂತಾದ ಪ್ರಯೋಗಗಳು ಮಾಡಲು ಬರುವುದರಿಂದ. ಅದಕ್ಕೆ ಪ್ರತಿಪಕ್ಷಾನುಮಾನಗಳಿಗೆ ಉಪಾಧಿದೋಷವಿದೆ ಎಂದುತ್ತರ. ಪಾರತಂತ್ರ್ಯವೇ ಪ್ರಕೃತಾನುಮಾನಗಳಲ್ಲಿ ಉಪಾಧಿ. ಅರ್ಥಾತ್ ಸರ್ವೋತ್ತಮತ್ವ-ಅಭಾವಕ್ಕೆ ಪ್ರಯೋಜಕವಾದದ್ದು ಆನಂದತೀರ್ಥವತ್ವ ಎಂಬ ಹೇತುವಾಗಲೀ ಚತ್ವ ಎಂಬ ಹೇತುವಾಗಲೀ ಆಗುವುದಿಲ್ಲ. ಹೊರತು ಪಾರತಂತ್ರ್ಯವೇ ಸರ್ವೋತ್ತಮತ್ವಾಭಾವಪ್ರಯೋಜಕ. ಚಿತ್ತ್ವವು ಭಗವಂತನಲ್ಲಿ ಇಲ್ಲ ಆದ್ದರಿಂದ ಅಸಿದ್ಧಿದೋಷವೂ ಇದೆ. 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ' ಎಂದು ಚೇತನರಿಗೆ ಚೇತನ ಎಂದು ಚೇತನಚೇತನತ್ವವು ಭಗವಂತನಲ್ಲಿ ಹೇಳಲ್ಪಟ್ಟಿದೆ. ಹೀಗೆ ವಿರೋಧಿಯಾದ ಅನುಮಾನವು ಇಲ್ಲದೇ ಇರುವ ಯುಕ್ತಿಯಾಗಿದ್ದಾರೆ ಆನಂದತೀರ್ಥರು. ಹಾಗಾಗಿ ಅತುಲರಾಗಿದ್ದಾರೆ.

## ಭಗವಂತ ನಿತ್ಯನಿಗೂ ನಿತ್ಯ; ಚೇತನರಿಗೂ ಚೇತನ

* — ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್
  ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥ 1 (ಉ)

* — (ಭಾಷ್ಯ) ಚೇತನಾಭಾಸಕೋ ಜೀವಃ ಪರಮಶ್ಚೇತನೋ ಹರಿಃ ।
  ಸ್ವತಂತ್ರತ್ವಾತ್ ಸ್ವತಂತ್ರೋ ಹಿ ನೈವ ದೋಷೇಣ ಲಿಪ್ಯತೇ' ಇತಿ ಮಹಾಕೌರ್ಮೇ ॥

ಜೀವನು ಚೇತನ-ಆಭಾಸನೆನಿಸುತ್ತಾನೆ. ಪರಮಚೇತನನು ಹರಿಯಾಗಿದ್ದಾನೆ. ಪರಮಾತ್ಮನು ಸ್ವತಂತ್ರನಾದ್ದರಿಂದ ಯಾವುದೇ ದೋಷದ ಲೇಪಕ್ಕೂ ಅವಕಾಶವಿಲ್ಲ.

(ವೇದೇಶೀಯಖಂಡಾರ್ಥ) – ಯಃ ನಿತ್ಯಾನಾಂ ನಿತ್ಯಃ = ಪರಮನಿತ್ಯಃ = ಅನಿತ್ಯತ್ವಾದಿಚತುರ್ವಿಧ-ನಾಶರಹಿತ ಇತಿ ಯಾವತ್, ನಿತ್ಯಾನಾಂ ನಿತ್ಯತ್ವಪ್ರದೋ ವಾ । ಚೇತನಾನಾಂ ಚೇತನಃ = ಪರಮ-ಚೇತನಃ = ಚೇತನಾನಾಂ ಚೇತನತ್ವಪ್ರದೋ ವಾ । ಯಶ್ಚ ಸ್ವಯಂ ಏಕ ಏವ ಬಹೂನಾಂ ಪುರುಷಾಣಾಂ ಕಾಮಾನ್ = ಕಾಮ್ಯಾನ್ ವಿದಧಾತಿ, ತಂ ಆತ್ಮಸಂಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಮೇವ ಶಾಶ್ವತೀ = ಪುನರಾವೃತ್ತಿಶೂನ್ಯಾ, ಶಾಂತಿಃ = ಮೋಕ್ಷಃ ನೇತರೇಷಾಮ್ । 'ಮೋಕ್ಷಃ ಶಾಂತಿಶ್ಚ ಶರಣಂ ನಿರ್ವಾಣಂ ಚಾಭಿಧೀಯತೇ' - ಇತಿ ಬ್ರಾಹ್ಮೇ ।

* (ರಾಘವೇಂದ್ರತೀರ್ಥರ ಖಂಡಾರ್ಥ) — ನಿತ್ಯಾನಾಂ ವಸ್ತೂನಾಂ ನಿತ್ಯಃ = ಅತಿಶಯೇನ ನಿತ್ಯಃ। ಚೇತನಾನಾಂ ಚೇತನಃ = ಮುಖ್ಯಚೇತನಃ । ಅನ್ಯೇ ಚೇತನಾಭಾಸಾಃ । ತದಧೀನಾಃ ಇತಿ ಯಾವತ್ । ಪರಮಚೇತನತ್ವಾತ್ ಸ್ವತಂತ್ರಃ, ಸ್ವತಂತ್ರತ್ವಾತ್ ದುಃಖಾಶ್ಲೇಷ ಇತಿ ಭಾವಃ । ಬಹೂನಾಂ ಚೇತನಾನಾಂ ಶಾಂತಿಃ = ಸುಖಮ್ ।

ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ ।
ನಾಶಶ್ಚತುರ್ವಿಧಃ ಪ್ರೋಕ್ತಃ ...

ಎಂದು ಹೇಳಿದಂತೆ ಈ ನಾಲ್ಕುರೀತಿಯಾದ ನಾಶ ಇಲ್ಲದಿರುವವನು ನಿತ್ಯರಿಗೂ ನಿತ್ಯ ಎನಿಸುತ್ತಾನೆ. ಇವನನ್ನು ಪರಮನಿತ್ಯ ಎಂದು ವ್ಯವಹರಿಸುತ್ತಾರೆ. ಅಥವಾ ನಿತ್ಯರಿಗೂ ನಿತ್ಯ ಎಂದರೆ ನಿತ್ಯವಸ್ತು-ಗಳಿಗೂ ನಿತ್ಯತ್ವವನ್ನು ನೀಡುವವನು ಎಂದರ್ಥ. ಚೇತನರಿಗೂ ಚೇತನನೆಂದರೆ ಪರಮಚೇತನ ಅರ್ಥಾತ್ ಚೇತನರಿಗೂ ಚೇತನತ್ವಪ್ರದ. ಹೀಗೆ ಒಬ್ಬನೇ ಸ್ವತಂತ್ರನಾದ ಇವನು ಬಹಳ ಮನುಷ್ಯರ ಕಾಮನಾವಿಷಯಗಳನ್ನು ಉಂಟುಮಾಡುತ್ತಾನೆ. ಇಂತಹವನನ್ನು ಯಾರು ಕಾಣುತ್ತಾರೋ ಅಂತಹ ಜ್ಞಾನಿಗಳಿಗೆ ಮತ್ತೆ ಸಂಸಾರಕ್ಕೆ ಬರದ ರೀತಿಯಲ್ಲಿ ಮೋಕ್ಷ ಸಿಗುವುದು. ಹೀಗಾಗಿ ಬೇರೆ ಜೀವರು ಚೇತನಾಭಾಸರೆಂದು ಅರ್ಥಾತ್ ಭಗವಂತನ ಅಧೀನರಾಗಿದ್ದಾರೆ ಎಂದು ತಿಳಿಯಬೇಕು. ಇವನು ಪರಮಚೇತನನಾದ್ದರಿಂದ ಸ್ವತಂತ್ರ. ಸ್ವತಂತ್ರನಾದ್ದರಿಂದ ದುಃಖ ಇಲ್ಲ. ಉಪನಿಷತ್ತಿನಲ್ಲಿ ಬರುವ ಶಾಂತಿಪದಕ್ಕೆ ಮೋಕ್ಷ ಎಂದರ್ಥ. ಶಾಶ್ವತೀ ಎಂದರೆ ಪುನರಾವೃತ್ತಿರಹಿತ.

## ಆನಂದತೀರ್ಥಹೇತುವು ಶುದ್ಧವಲ್ಲ ಎಂಬ ಶಂಕೆ ಹಾಗೂ ಪರಿಹಾರ

(ಪಾಂಪ್ರೀಟಪ್ಪಣೀ) — ಶುದ್ಧಮ್ = ವಿರೋಧಾದಿದೋಷಶೂನ್ಯಂ ಶ್ರುತಿವಿರೋಧಾದಿದೋಷ-ಶೂನ್ಯಂ ಚ । ನನು ಆನಂದತೀರ್ಥವತ್ತ್ವಹೇತುಃ ವಿರುದ್ಧಃ ಪ್ರಲಯಾ(ದಿ-ಅ)ವಚ್ಛಿನ್ನಸಾಧ್ಯ-ವ್ಯಾಪಕೀಭೂತಾಭಾವಪ್ರತಿಯೋಗಿತ್ವಾತ್ । ನ ಹಿ ಪ್ರಲಯಾದ್ಯವಚ್ಛೇದೇನ ಆನಂದತೀರ್ಥಃ ಅಸ್ತಿ । ಅಸಿದ್ಧಶ್ಚ ಅಯಂ ಹೇತುಃ । ಪಕ್ಷತಾವಚ್ಛೇದಕವಿಶಿಷ್ಟೇ ಹೇತುತಾವಚ್ಛೇದಕಾವಚ್ಛಿನ್ನಸ್ಯ ಅಭಾವೋಽಸಿದ್ಧಿಃ । ಸಾ ಚ ಪ್ರಕೃತೇ ವರ್ತತೇ । (ನ ಚ) ವಿಮತಿವಿಷಯತ್ವಲಕ್ಷಣಪಕ್ಷತಾ-

ವಚ್ಛೇದಕವತ್ತ್ವವಿಶಿಷ್ಟೇ ಹರೌ ಹೇತುತಾವಚ್ಛೇದಕೀಭೂತಾನಂದತೀರ್ಥವತ್ತ್ವತ್ವಾವಚ್ಛಿನ್ನಾನಂದತೀರ್ಥವತ್ತ್ವಂ ಹೇತುಃ, ಅತೋ ನ ವಿರುದ್ಧಃ, ನಾಪಿ ಅಸಿದ್ಧ ಇತಿ ವಾಚ್ಯಮ್ । ಪ್ರತಿವಾದ್ಯಸಮ್ಮತೇಃ । ನ ಹಿ ಪ್ರತಿವಾದಿನಯೇ ಜಗದುತ್ಪತ್ತೇಃ ಪ್ರಾಕ್ ಪ್ರಲಯೇ ವಾ ಆನಂದತೀರ್ಥೋ ವರ್ತತೇ । ಇತಿ ಚೇತ್, ಮೈವಮ್ । ಪ್ರಲಯಾದ್ಯವಚ್ಛೇದೇನಾಪಿ ಪಕ್ಷೇ ಹೇತೋಃ ಅಂಗೀಕಾರಾತ್ । ಸಯುಕ್ತಿಕಂ ಚ ಏತತ್ । ಜಯಾದ್ವಾರಾ ಸಂಕರ್ಷಣೇ ಲೀನಸ್ಯ ಹನುಮದಾದ್ಯನಂತವ್ಯೂಹಾತ್ಮಕಸ್ಯ ಆನಂದತೀರ್ಥಸ್ಯೈವ ಕಲ್ಪಾಂತರೇ ಬ್ರಹ್ಮತ್ವಾಂಗೀಕಾರಾತ್ । ಆನಂದತೀರ್ಥಾಭಾವೇ ಕಥಂ ತತ್ ಸ್ಯಾದಿತಿ ।

'ಶುದ್ಧಂ ಪ್ರಮಾಣಂ ಸ ಮೇ' ಎಂದು ಆಚಾರ್ಯರು ಶುದ್ಧವಾದ ಪ್ರಮಾಣ ಎಂದಿದ್ದಾರೆ. ಶುದ್ಧ ಎಂದರೆ ವಿರೋಧಮುಂತಾದ ದೋಷಗಳಿಂದ ರಹಿತರಾದವರು. ಶ್ರುತಿವಿರೋಧ ಮೊದಲಾದ ದೋಷಗಳಿಂದಲೂ ರಹಿತರಾದವರು - ಎಂದು. ಅಲ್ಲ ಆನಂದತೀರ್ಥವತ್ತ್ವ ಎಂಬ ಹೇತು ವಿರುದ್ಧವಾಗಿದೆ. ಪ್ರಲಯಾವಚ್ಛೇದೇನ ಸಾಧ್ಯವ್ಯಾಪಕೀಭೂತ-ಅಭಾವಪ್ರತಿಯೋಗಿತ್ವವತ್ತಾಗಿದೆ ಎಂದರ್ಥ. ಪ್ರಲಯಕಾಲದಲ್ಲಿ ಆನಂದತೀರ್ಥರೇ ಇಲ್ಲವಾದ್ದರಿಂದ ಸಾಧ್ಯವಾದ ಸರ್ವೋತ್ತಮತ್ವಕ್ಕೆ ವ್ಯಾಪಕವಾದ ಅಭಾವ ಎಂದರೆ ಆನಂದತೀರ್ಥವತ್ವ-ಅಭಾವ. ಅದಕ್ಕೆ ಪ್ರತಿಯೋಗಿ ಆನಂದತೀರ್ಥವತ್ವ. ಪ್ರತಿಯೋಗಿತ್ವ ಆನಂದತೀರ್ಥವತ್ವದಲ್ಲಿ ಬರುತ್ತದೆ. ಅಲ್ಲದೆ ಪ್ರಲಯಾವಚ್ಛೇದೇನ ಹರಿ ಇರುವ ಕಾಲದಲ್ಲಿ ಆನಂದತೀರ್ಥರಿಲ್ಲ. ಹಾಗಾಗಿ ಪಕ್ಷದಲ್ಲಿ ಹೇತುವು ಬರಲಿಲ್ಲ. ಆದ್ದರಿಂದ ಹೇತ್ವಸಿದ್ಧಿದೋಷವಿದೆ. ಅಲ್ಲ? ನಾವು ಹೇತುವನ್ನು ವಿಮತಿವಿಷಯತ್ವರೂಪವಾದ ಪಕ್ಷತಾವಚ್ಛೇದಕದಿಂದ ಕೂಡಿದ ಹರಿಯಲ್ಲಿ ಹೇತುತಾವಚ್ಛೇದಕವಾದ ಆನಂದತೀರ್ಥವತ್ವತ್ವದಿಂದ ಅವಚ್ಛಿನ್ನವಾದ ಆನಂದತೀರ್ಥವತ್ವ ಎಂಬುದಾಗಿ ವಿವಕ್ಷೆ ಮಾಡುತ್ತೇವೆ. ಹೀಗೆ ಹೇಳಿದಾಗ ವಿರೋಧವೂ ಇಲ್ಲ ಅಸಿದ್ಧಿಯೂ ಇಲ್ಲ ಎಂದರೆ ಇದು ಸರಿಯಲ್ಲ. ಪ್ರತಿವಾದಿಗೆ ಇದು ಅಸಮ್ಮತವಾದ್ದರಿಂದ. ಏಕೆಂದರೆ ಪ್ರತಿವಾದಿಯ ಸಿದ್ಧಾಂತದಲ್ಲಿ ಜಗತ್ತಿನ ಉತ್ಪತ್ತಿಗಿಂತ ಮೊದಲು ಅಥವಾ ಪ್ರಲಯಕಾಲದಲ್ಲಿ ಆನಂದತೀರ್ಥರು ಇರಲಿಲ್ಲ. ಹೀಗೆ ಆಕ್ಷೇಪಿಸಿದರೆ ಅದು ಕೂಡುವುದಿಲ್ಲ. ಏಕೆಂದರೆ ಪ್ರಲಯಕಾಲಾವಚ್ಛೇದೇನ ಆನಂದತೀರ್ಥರು ಪಕ್ಷದಲ್ಲಿ ಇದ್ದಾರೆ ಎಂದು ಒಪ್ಪಿರುವುದರಿಂದ. ಈ ವಿಷಯವು ಯುಕ್ತಿಸಹಿತವಾದದ್ದು.

ಯುಕ್ತಿಯು ಹೀಗಿದೆ - ಸಂಕರ್ಷಣನ ಪತ್ನಿಯಾದ ಜಯಾ ಮುಖಾಂತರ ಸಂಕರ್ಷಣನಲ್ಲಿ ಲೀನರಾದ ಹನುಮಂತ ಮೊದಲಾದ ಅನಂತವ್ಯೂಹವನ್ನು ಹೊಂದಿದ ಆನಂದತೀರ್ಥರೇ ಬೇರೆಯ ಕಲ್ಪದಲ್ಲಿ ಬ್ರಹ್ಮರಾಗುತ್ತಾರೆ. ಹೀಗೆ ಪ್ರಲಯಕಾಲದಲ್ಲಿ ಆನಂದತೀರ್ಥರೇ ಇಲ್ಲದಿದ್ದರೆ ಕಲ್ಪಾಂತರದಲ್ಲಿ ಬ್ರಹ್ಮತ್ವವನ್ನು ಯಾರು ಪಡೆದಾರು?

## ಪ್ರಕಾರಾಂತರೇಣ ಆನಂದತೀರ್ಥವತ್ವಹೇತುವು ವಿರುದ್ಧವೂ ಅಲ್ಲ ಅಸಿದ್ಧವೂ ಅಲ್ಲ ಎಂದು ಕೆಲವರ ಮತ

**(ಪಾಂಫ್ರೀಟಪ್ಪಣೀ)** — ಪರಸ್ತು ಆನಂದತೀರ್ಥವತ್ತ್ವಂ ಹೇತುಃ ನ ವಿರುದ್ಧಃ । ಪ್ರಲಯಾದ್ಯವಚ್ಛಿನ್ನ(ಸಾಧ್ಯ)ವ್ಯಾಪಕೀಭೂತಾಭಾವಪ್ರತಿಯೋಗಿತ್ವೇಽಪಿ ಕಾಲವಿಶೇಷವಿವಕ್ಷಾನವಚ್ಛಿನ್ನಸಾಧ್ಯವ್ಯಾಪಕೀಭೂತಾಭಾವಪ್ರತಿಯೋಗಿತ್ವಾತ್ । ನಾಪಿ ಅಸಿದ್ಧಃ । ಪಕ್ಷತಾವಚ್ಛೇದಕಸಾಮಾನಾಧಿಕರಣ್ಯೇನ ಹೇತೋಃ ಅಭಾವೇಽಪಿ ಪಕ್ಷತಾವಚ್ಛೇದಕಾವಚ್ಛೇದೇನ ತತ್ಸತ್ತ್ವಾದಿತ್ಯಾದಿ ಪ್ರತ್ಯಾಖ್ಯಾತಪ್ರಾಯಮ್ ಇತ್ಯಾದಿ ದಿಕ್ ।

ಇನ್ನು ಕೆಲವರು 'ಆನಂದತೀರ್ಥವತ್ವ' ಎಂಬ ಹೇತುವು ವಿರುದ್ಧವಲ್ಲ ಎಂಬುದಕ್ಕೆ ಈ ರೀತಿ ಸಮರ್ಥನೆ ನೀಡುವರು. ಆನಂದತೀರ್ಥರೆಂಬ ಯುಕ್ತಿಯಲ್ಲಿ ಪ್ರಲಯಕಾಲಾವಚ್ಛೇದೇನ ಸಾಧ್ಯ-ವ್ಯಾಪಕೀಭೂತ- ಅಭಾವಪ್ರತಿಯೋಗಿತ್ವ ಬಂದರೂ ನಾವು ಹೇಳಿದಂತೆ ಕಾಲವಿವಕ್ಷಾನವಚ್ಛಿನ್ನ-ಸಾಧ್ಯವ್ಯಾಪಕೀಭೂತ-ಅಭಾವಪ್ರತಿಯೋಗಿತ್ವವಿಲ್ಲ. ಏಕೆಂದರೆ ಕಾಲವಿವಕ್ಷೆಯನ್ನು ಮಾಡದೇ ಇರುವ ಸಾಧ್ಯವನ್ನು ವಿವಕ್ಷೆ ಮಾಡಿದ್ದರಿಂದ. ಇನ್ನು ಅಸಿದ್ಧಿಯೂ ಇಲ್ಲ. ಪಕ್ಷತಾವಚ್ಛೇದಕ-ಸಾಮಾನಾಧಿಕರಣ್ಯೇನ ಹೇತುವು ಇಲ್ಲದಿದ್ದರೂ ಪಕ್ಷತಾವಚ್ಛೇದಕಾವಚ್ಛೇದೇನ ಹೇತುವಿದೆ ಎಂದು.

## ಆನಂದತೀರ್ಥವತ್ವಹೇತುವು ವ್ಯಭಿಚರಿತವೇ?

**(ಪಾಂಫ್ರೀಟಪ್ಪಣೀ)** — ನನು ಆನಂದತೀರ್ಥವತ್ತ್ವಂ ವ್ಯಭಿಚರಿತಂ ರಮಾಯಾಂ ತದಧೀನ-ಧರ್ಮಾಕ್ರಾಂತಾನಂದತೀರ್ಥವತ್ತ್ವಸ್ಯ ಸತ್ತ್ವೇಽಪಿ ಸರ್ವೋತ್ತಮತ್ವಸ್ಯ ಅಭಾವಾದಿತಿ ಚೇನ್ನ । ಸ್ವತಂತ್ರಾಧೀನತ್ವಧರ್ಮಾವಚ್ಛಿನ್ನಾನಂದತೀರ್ಥವತ್ತ್ವಸ್ಯ ಹೇತುತ್ವೇನ ವಿವಕ್ಷಿತತ್ವಾದಿತಿ ।

ಅಲ್ಲ ಆನಂದತೀರ್ಥವತ್ವ ಎಂಬ ಹೇತುವು ವ್ಯಭಿಚರಿತ. ತದಧೀನಧರ್ಮಾಕ್ರಾಂತ-ಆನಂದ-ತೀರ್ಥವತ್ವ ಎಂಬ ಹೇತುವು ರಮೆಯಲ್ಲಿ ಇದ್ದರೂ ಅರ್ಥಾತ್ ರಮೆಗೆ ಆನಂದತೀರ್ಥರು ಅಧೀನರಾಗಿರುವುದರಿಂದ ಹೇತುವು ಬಂದರೂ ಸರ್ವೋತ್ತಮತ್ವ ಎಂಬ ಸಾಧ್ಯವು ರಮೆಯಲ್ಲಿ ಇಲ್ಲವಾದ್ದರಿಂದ ವ್ಯಭಿಚಾರದೋಷವಿದೆ ಎಂದರೆ ಇಲ್ಲ. ಸ್ವತಂತ್ರ-ತದಧೀನತ್ವಧರ್ಮಾವಚ್ಛಿನ್ನ-ಆನಂದತೀರ್ಥವತ್ವ ಎಂಬುದನ್ನು ಹೇತುವನ್ನಾಗಿ ವಿವಕ್ಷೆ ಮಾಡಿದ್ದರಿಂದ. ಇಲ್ಲಿ ಸ್ವತಂತ್ರ ಎಂಬ ಪದದಿಂದ ರಮೆಯನ್ನು ತೆಗೆದುಕೊಳ್ಳಲು ಬರುವುದಿಲ್ಲ. ಕೇವಲ ಭಗವಂತ ಮಾತ್ರ ಸ್ವತಂತ್ರ-ನಾದ್ದರಿಂದ.

## ಇಲ್ಲಿ ನ್ಯಾಯಾನುಸಂಧಾನರೂಪ-ಅನುಮಾನವೇ ವಿವಕ್ಷಿತ

**(ಕಾಶೀ)** – ನನ್ವನುಮಾನಮಿವ ಆಚಾರ್ಯಃ ತತ್ವನಿರ್ಣಯಾಯ ಭೂಯಾತ್ ಇತಿ ವಿವಕ್ಷಿ-

ತಾರ್ಥೋ ನ ಯುಕ್ತಃ । ಕೇವಲಾನುಮಾನಸ್ಯ ತತ್ತ್ವನಿರ್ಣಯಕತ್ವಾಭಾವಾದಿತಿ ಚೇನ್ನ । ಆಗಮಜನ್ಯಾಪ್ರಾಮಾಣ್ಯಶಂಕಾದ್ಯನಾಸ್ಕಂದಿತತತ್ತ್ವನಿರ್ಣಯಸ್ಯ ನ್ಯಾಯಾನುಸಂಧಾನರೂಪಾನು-ಮಾನಾಪೇಕ್ಷತ್ವಾತ್ । ತಾದೃಶಸ್ಯೈವ ಚ ಪ್ರಕೃತೇ ವಿವಕ್ಷಿತತ್ವಾನ್ನ ಕಶ್ಚಿದ್ದೋಷಃ ।

ಅಲ್ಲ? ಅನುಮಾನಪ್ರಮಾಣದಂತೆ ಆಚಾರ್ಯರು ನನ್ನ ತತ್ವನಿರ್ಣಯಕ್ಕೆ ಕಾರಣರಾಗಲಿ ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ, ಅಪ್ರಾಮಾಣ್ಯಶಂಕೆ ಮೊದಲಾದವುಗಳಿಂದ ಕೂಡಿದ ಅನುಮಾನವು ತತ್ವನಿರ್ಣಯಕ್ಕೆ ಕಾರಣವಾಗುವುದಿಲ್ಲ. ಉತ್ತರ - ವೇದಾದಿಶಾಸ್ತ್ರಗಳಿಂದ ಹುಟ್ಟಿದ ಅಪ್ರಾಮಾಣ್ಯ-ಶಂಕೆಯಿಂದ ಕೂಡದೇ ಇರುವ ತತ್ವನಿರ್ಣಯಕ್ಕೆ ನ್ಯಾಯಾನುಸಂಧಾನರೂಪವಾದ ಅನುಮಾನದ ಅಪೇಕ್ಷೆ ಇರುವುದರಿಂದ. ಅದಕ್ಕಾಗಿ ಅಂತಹದ್ದನ್ನೇ ಇಲ್ಲಿ ವಿವಕ್ಷೆ ಮಾಡುತ್ತೇವೆ. ಆದ್ದರಿಂದ ಯಾವುದೇ ದೋಷವಿಲ್ಲ.

## ಶ್ರೀಸತ್ಯವ್ರತತೀರ್ಥರ ಸುಧಾಟಿಪ್ಪಣೀ ಮಂಗಳಾಚರಣೆ

## ಯಥಾಮತಿ ಸುಧಾವಾಕ್ಯವ್ಯಾಖ್ಯಾನ

ವೇದವ್ಯಾಸಂ ಮೂಲರಾಮಂ ನತ್ವಾ ದಿಗ್ವಿಜಯಂ ತಥಾ ।
ಗುರೂನಪಿ ಸುಧಾವಾಕ್ಯವ್ಯಾಖ್ಯಾಂ ಕುರ್ವೇ ಯಥಾಮತಿ ॥

ವೇದವ್ಯಾಸದೇವರನ್ನು ಮೂಲರಾಮನನ್ನು ದಿಗ್ವಿಜಯರಾಮನನ್ನು ಹಾಗೂ ಗುರುಗಳನ್ನೂ ನಮಸ್ಕರಿಸಿ ಯಥಾಮತಿ ಸುಧಾವಾಕ್ಯಗಳಿಗೆ ವ್ಯಾಖ್ಯಾನವನ್ನು ಮಾಡುತ್ತೇವೆ.

## ವ್ಯಾಪ್ತಿರ್ಯಸ್ಯ - ಶ್ಲೋಕದ ಪದಾರ್ಥಕಥನ

(ಸತ್ಯವ್ರತತೀರ್ಥೀಯ) – ಆನಂದತೀರ್ಥಪಕ್ಷೇ – ನಿಜೇ ಪಕ್ಷೇ – ಸೂತ್ರಕಾರಸಿದ್ಧಾಂತೇ, ವ್ಯಾಪ್ತಿಃ – ಅಶೇಷಸ್ಯ ತಸ್ಯಾಂಗೀಕಾರಃ, ನಿಜೇನ ಮಹಸಾ – ಸ್ವಸಾಮರ್ಥ್ಯೇನ, ನ ತು ತಪಃ-ಪ್ರಭಾವಾದ್ಯಾಸಾದಿತವರಾದಿನಾ ಇತ್ಯರ್ಥಃ । ಸಪಕ್ಷೇ – ತತ್ಸಜಾತೀಯೇ ವೈಶೇಷಿಕಾದಿಸಿದ್ಧಾಂತೇ, ಸ್ಥಿತಿಃ – ತದೇಕದೇಶಸ್ವೀಕಾರಃ, ಭೇದಸತ್ಯತ್ವಾದಿಸ್ವೀಕಾರಾತ್ । ವಿಪಕ್ಷತೋ ವ್ಯಾವೃತ್ತಿಃ – ವಿರುದ್ಧಪ್ರಮೇಯಾನಂಗೀಕಾರಃ । ಸಕ್ತಿಃ ಆಸಕ್ತಿರಾಗ್ರಹ ಇತಿ ಯಾವತ್ । ಪ್ರತಿಪಕ್ಷಯುಕ್ತಿಃ – ಪ್ರತಿವಾದಿಯೋಗಃ ।

ಆನಂದತೀರ್ಥರ ಪಕ್ಷದಲ್ಲಿ – 'ನಿಜೇ ಪಕ್ಷೇ' ಸೂತ್ರಕಾರರ ಸಿದ್ಧಾಂತ ಎಂದರ್ಥ. ವ್ಯಾಪ್ತಿಃ – ಅದರಲ್ಲಿ ಸಂಪೂರ್ಣವಾಗಿ ಅಂಗೀಕಾರವಿದೆ. ನಿಜೇನ ಮಹಸಾ –ತಮ್ಮ ಸಾಮರ್ಥ್ಯದಿಂದ ಹೊರತು ತಪಸ್ಸಿನ ಪ್ರಭಾವ ಮೊದಲಾದವುಗಳಿಂದ ಪಡೆದ ವರ ಮೊದಲಾದವುಗಳಿಂದ

ಎಂದರ್ಥವಲ್ಲ. ಸಪಕ್ಷೇ - ಸೂತ್ರಕಾರರ ಸಿದ್ಧಾಂತಕ್ಕೆ ಸಮಾನವಾದ ವೈಶೇಷಿಕಾದಿ ಸಿದ್ಧಾಂತದಲ್ಲಿ, ಸ್ಥಿತಿಃ - ವೈಶೇಷಿಕಸಿದ್ಧಾಂತದ ಒಂದು ಭಾಗವನ್ನು ಒಪ್ಪುವುದು. ಭೇದವು ಸತ್ಯ ಮುಂತಾದ-ವುಗಳನ್ನು ಅವರೂ ಒಪ್ಪಿರುವುದರಿಂದ. ವಿಪಕ್ಷತೋ ವ್ಯಾವೃತ್ತಿಃ - ವಿರುದ್ಧವಾದ ಪ್ರಮೇಯವನ್ನು ಒಪ್ಪದೇ ಇರುವುದು. ಸಕ್ತಿಃ - ಆಸಕ್ತಿ ಆಗ್ರಹ ಎಂದಭಿಪ್ರಾಯ. ಪ್ರತಿಪಕ್ಷಯುಕ್ತಿಃ - ಪ್ರತಿವಾದಿಗಳ ಸಂಬಂಧ.

## ಅನುಮಾನವೈಲಕ್ಷಣ್ಯಸಮರ್ಥನೆ ಹಾಗೂ ಅನುಮಾನಪಕ್ಷೇ ಯೋಜನಾ

(ಸತ್ಯವ್ರತತೀರ್ಥೀಯ) – ಯದ್ವಾ ಕ್ವಚಿತ್ ಪಂಚರೂಪೋಪಪನ್ನಸ್ಯಾಪಿ ಧೂಮಾದ್ಯನುಮಾನಸ್ಯ ಹ್ರದಾದಿಸ್ಥಲಾಂತರೇ ಪಂಚರೂಪೋಪಪನ್ನತ್ವಾಭಾವಾತ್ ತದ್ವೈಲಕ್ಷಣ್ಯಪ್ರತಿಪಾದನಾಯ 'ಸಕ್ತಿರ್ನ ವೈ' ಇತಿ 'ನೈವಾಸ್ತಿ' ಇತಿ ಚೋಕ್ತಮ್ । ತಥಾ ಚ 'ವ್ಯಾಪ್ತಿಃ' ಇತ್ಯಾದಾವಪಿ ತದನುವೃತ್ತ್ಯಾ-ತುಲ್ಯತ್ವೋಪಪಾದಕಂ ದ್ರಷ್ಟವ್ಯಮ್ ।

ಅನುಮಾನಪಕ್ಷೇ ತು — ನಿಜೇನ ಮಹಸಾ - ವ್ಯಾಪ್ತ್ಯಾಖ್ಯಸಾಮರ್ಥ್ಯೇನ, ನಿಜೇ ಪಕ್ಷೇ - ಸ್ವಸಾಧ್ಯಧರ್ಮವಿಶಿಷ್ಟೇ ಧರ್ಮಿಣಿ, ವ್ಯಾಪ್ತಿಃ - ವ್ಯಾಪ್ತ್ಯಾ ವರ್ತನಮ್ । ಅನ್ಯಥಾ ಭಾಗಾ-ಸಿದ್ಧ್ಯಾಪತ್ತೇರಿತಿ ಯೋಜ್ಯಮ್ । ಶಿಷ್ಟಂ ಸ್ಪಷ್ಟಮ್ । **ಶುದ್ಧಂ** = ಪಂಚರೂಪೋಪಪನ್ನಮ್ ।

ಅಥವಾ ಕೆಲವು ಕಡೆ ಐದು ಅಂಶಗಳನ್ನು ಧೂಮಾನುಮಾನವು ಹೊಂದಿದ್ದರೂ ಕೂಡ ಪ್ರದಃ ವಹ್ನಿಮಾನ್ ಇತ್ಯಾದಿ ಸ್ಥಳಗಳಲ್ಲಿ ಐದೂ ಅಂಶಗಳನ್ನು ಹೊಂದದೇ ಇರುವುದರಿಂದ ಆ ಧೂಮಾನುಮಾನದಿಂದ ಆಚಾರ್ಯರಿಗೆ ವೈಲಕ್ಷಣ್ಯವನ್ನು ಪ್ರತಿಪಾದನೆ ಮಾಡಲು ಸಕ್ತಿಃ , ನ ವೈ ಎಂದು ಅನ್ವಯ ಮಾಡಬೇಕು. ಈಗ ಯಾವ ಸಂದರ್ಭದಲ್ಲೂ ಸಕ್ತಿ ಇಲ್ಲದೇ ಇರುವರು ಎಂದು ಹೇಳಿದ್ದರಿಂದ ಆ ಧೂಮಾನುಮಾನಕ್ಕಿಂತ ವೈಲಕ್ಷಣ್ಯವು ಸಿದ್ಧವಾಯಿತು. ಆದ್ದರಿಂದಲೇ ಅತುಲತ್ವವೂ ಕೂಡ. ಇದೇ ರೀತಿ ವ್ಯಾಪ್ತಿಃ ಮುಂತಾದ ಪದಗಳಲ್ಲಿಯೂ ನ ವೈ ಎಂಬ ಪದಗಳನ್ನು ಅನ್ವಯಿಸಿ ಅತುಲ್ಯತ್ವವನ್ನು ಆಚಾರ್ಯರಿಗೆ ಇದೆ ಎಂದು ಪ್ರತಿಪಾದಿಸಬೇಕು.

ಅನುಮಾನಪಕ್ಷೇ ತು — ನಿಜೇನ ಮಹಸಾ - ವ್ಯಾಪ್ತಿಯೆಂಬ ಸಾಮರ್ಥ್ಯದಿಂದ, ನಿಜೇ ಪಕ್ಷೇ - ಹೇತುವಿನಿಂದ ಸಾಧಿಸಲ್ಪಡುವ ಸಾಧ್ಯಧರ್ಮದಿಂದ ಕೂಡಿದ ಧರ್ಮಿಯಲ್ಲಿ, ವ್ಯಾಪ್ತಿಃ - ವ್ಯಾಪ್ತವಾಗಿ ಇರುವಿಕೆಯು. ಸಾಧ್ಯವಿಶಿಷ್ಟಧರ್ಮಿಯಲ್ಲಿ ಹೇತುವು ಸಂಪೂರ್ಣವಾಗಿ ಇಲ್ಲದಿದ್ದರೆ ಭಾಗಾಸಿದ್ಧಿ ಮೊದಲಾದ ದೋಷಗಳು ಬರುತ್ತಿತ್ತು. ಶುದ್ಧಂ – ಪಂಚರೂಪಗಳಿಂದ ಕೂಡಿರುವುದು.

## ಗುರ್ವರ್ಥದೀಪಿಕಾಕಾರರಿಂದ ವ್ಯಾಪ್ತಿರ್ಯಸ್ಯ .. ಎಂಬ ಶ್ಲೋಕದ ಪ್ರತಿಪದಾರ್ಥಚಿಂತನೆ

(ಗುರ್ವರ್ಥದೀಪಿಕಾ) — **ಯಸ್ಯ** - ಅನ್ವಯವ್ಯತಿರೇಕ್ಯನುಮಾನೋಪಮಯಾ ಪ್ರಮಾಣತ್ವೇನ

ನಿರೂಪಿತಸ್ಯ ಆನಂದತೀರ್ಥಮುನೇಃ । ನಿಜೇ ಪಕ್ಷೇ – ವಿಷ್ಣುಸರ್ವೋತ್ತಮತ್ವಸಗುಣತ್ವಸಾಕಾರತ್ವ-ಜಗತ್ಸತ್ಯತ್ವಾದಿರೂಪಪ್ರಮೇಯೇ । ನಿಜೇನ ಸ್ವಾಭಾವಿಕೇನ । ಮಹಸಾ ಶ್ರುತಿಸ್ಮೃತ್ಯಾದಿಪ್ರಮಾಣೈರು-ಪಪಾದನಸಾಮರ್ಥ್ಯೇನ ಸಹ ವ್ಯಾಪ್ತಿರಸ್ತಿ । ಯಥಾ ಧೂಮಾನುಮಾನಸ್ಯ ನಿಜೇ ಪಕ್ಷೇಽಂಶತೋ ಬಾಧಭಾಗಾಸಿದ್ಧ್ಯೋಃ ಪರಿಹಾರಾಯ ನಿಜೇನ ಮಹಸಾ ಸಹ ವ್ಯಾಪ್ತಿರಸ್ತಿ ತಥೇತಿ ಪಕ್ಷ-ಧರ್ಮತ್ವಾಖ್ಯಂ ಪ್ರಥಮಂ ರೂಪಮುಪಪಾದಿತಮ್ । ಸಪಕ್ಷೇ ಪ್ರಾಮಾಣಿಕತ್ವೇನ ಸ್ವಪಕ್ಷಸಮಾನೇ ನಿರ್ಣೀತತ್ವಾತ್ ಸಪಕ್ಷಸ್ಥಾನೀಯೇ ಜ್ಯೋತಿಷ್ಟೋಮಾದೇಃ ಸ್ವರ್ಗಸಾಧನತ್ವಾದೌ ಪ್ರಮೇಯೇ ನಿಜೇನ ಮಹಸಾ ಸಹ ಸ್ಥಿತಿರಸ್ತಿ । ನ ತು ವ್ಯಾಪ್ತಿಃ । ಕದಾಚಿತ್ ಪ್ರಸಂಗವಶಾತ್ ತಮಪ್ಯರ್ಥಂ ಸಾಧಯತಿ ನ ತು ನಿಯಮೇನ । ಅತಃ ಸಪಕ್ಷೇ ಸತ್ತ್ವಾಖ್ಯಂ ದ್ವಿತೀಯಂ ರೂಪಮಪಿ ನಿಷ್ಪನ್ನಮ್ । ವಿಪಕ್ಷತಃ – ವಿಪಕ್ಷಾದ್ ವ್ಯಾವೃತ್ತ್ಯಾಖ್ಯಂ ರೂಪಂ ಸಂಪಾದಿತಮ್ । ಬಾಧಿತೇ ಶಶಶೃಂಗಸತ್ತ್ವಾದೌ ಸಕ್ತಿರೇವ ನ । ಅನೇನಾಬಾಧಿತವಿಷಯತ್ವಾಖ್ಯಂ ರೂಪಮುಪಪಾದಿತಮ್ । **ಪ್ರತಿಪಕ್ಷಯುಕ್ತಿರ್ನೈವಾಸ್ತಿ** – ಇತ್ಯನೇನ ಅಸತ್ಪ್ರತಿಪಕ್ಷತ್ವಂ ಸ್ಪಷ್ಟೀಕೃತಮ್ । **ಅತುಲಮ್** = ಅಲೌಕಿಕವಿಷಯಕವತ್ವಾದಸದೃಶಮ್ । ಅತ ಏವ ಶುದ್ಧಂ ಪ್ರಮಾಣಂ ಪ್ರಮಾಣಸ್ಥಾನೀಯಃ ಸ **ಭಗವಾನ್ ಆನಂದತೀರ್ಥೋ ಮುನಿಃ ತತ್ತ್ವನಿರ್ಣಯಾಯ ಭೂಯಾದಿತಿ** ಸಮಗ್ರೋಪ-ಮಾಗರ್ಭಂ ರೂಪಕಮ್ ।

ಯಸ್ಯ – ಅನ್ವಯವ್ಯತಿರೇಕಿ ಅನುಮಾನಕ್ಕೆ ಹೋಲುವ ಪ್ರಮಾಣ ಎಂದು ನಿರೂಪಣೆ ಮಾಡಲ್ಪಟ್ಟ ಆನಂದತೀರ್ಥ ಮುನಿಗಳಿಗೆ, ನಿಜೇ ಪಕ್ಷೇ - ವಿಷ್ಣುಸರ್ವೋತ್ತಮತ್ವ, ಸಗುಣತ್ವ, ಸಾಕಾರತ್ವ, ಜಗತ್ಸತ್ಯತ್ವ ಮೊದಲಾದ ಪ್ರಮೇಯದಲ್ಲಿ, ನಿಜೇನ - ಸ್ವಾಭಾವಿಕವಾದ, ಮಹಸಾ - ಶ್ರುತಿಸ್ಮೃತಿ ಮೊದಲಾದ ಪ್ರಮಾಣಗಳಿಂದ ಉಪಪಾದನೆ ಮಾಡುವ ಸಾಮರ್ಥ್ಯದೊಂದಿಗೆ ವ್ಯಾಪ್ತಿಯಿದೆ. ಹೇಗೆ ಧೂಮಾನುಮಾನಕ್ಕೆ ತನ್ನ ಪಕ್ಷದಲ್ಲಿ ಒಂದಂಶದಿಂದ ಬಾಧದೋಷವು ಹಾಗೂ ಭಾಗಾಸಿದ್ಧಿ-ದೋಷವು ಬರದಿರಲು ನಿಜೇನ ಮಹಸಾ ಸಹ ವ್ಯಾಪ್ತಿಃ ಅಸ್ತಿ - ಎಂದು ಹೇಳುತ್ತೇವೆಯೋ ಹಾಗೆ ಎಂದಭಿಪ್ರಾಯ. ಇದರಿಂದ ಅನುಮಾನದ ಅಂಗವಾದ ಪಕ್ಷಧರ್ಮತಾವನ್ನು ತೋರಿಸಿದಂತಾ-ಯಿತು. ಸಪಕ್ಷೇ - ತನ್ನ ಪಕ್ಷಕ್ಕೆ ಸಮಾನವಾದದ್ದು ಹಾಗೂ ಪ್ರಮಾಣಸಿದ್ಧವಾದದ್ದು ಎಂದು ನಿಶ್ಚಯವಾಗಿರುವುದನ್ನು ಸಪಕ್ಷ ಎನ್ನುತ್ತಾರೆ. ಅದರಲ್ಲಿ ಎಂದರ್ಥ. ಸಪಕ್ಷಸ್ಥಾನದಲ್ಲಿರುವ ಜ್ಯೋತಿ-ಷ್ಟೋಮಾದಿಯಾಗಗಳು ಸ್ವರ್ಗಕ್ಕೆ ಸಾಧನ ಎಂಬ ಪ್ರಮೇಯದಲ್ಲಿ ನಿಜೇನ ಮಹಸಾ ಸಹ - ತಮ್ಮ ಉಪಪಾದನ ಸಾಮರ್ಥ್ಯದಿಂದ ಸ್ಥಿತಿಯು ಇದೆ ಹೊರತು ವ್ಯಾಪ್ತಿಯಲ್ಲ. ಏಕೆಂದರೆ ಕೆಲವು ಸಲ ಪ್ರಸಂಗವಶಾತ್ ಜ್ಯೋತಿಷ್ಟೋಮವು ಸ್ವರ್ಗಸಾಧನ ಎಂದು ಸಾಧಿಸುತ್ತಾರೆ. ಅದನ್ನೇ ಸಾಧಿಸುತ್ತಾರೆ ಎಂಬ ನಿಯಮವಿಲ್ಲ. ಇದರಿಂದ ವಿಪಕ್ಷಾದ್ ವ್ಯಾವೃತ್ತಿ ಎಂಬ ಅಂಶವನ್ನು ಸಮರ್ಥಿಸಿದಂತಾಯಿತು.

ಬಾಧಿತವಾದ ಶಶಶೃಂಗಸತ್ತ್ವ ಮೊದಲಾದವುಗಳಲ್ಲಿ ಆಸಕ್ತಿಯು ಇಲ್ಲ. ಇದರಿಂದ ಅಬಾಧಿತ-ವಿಷಯತ್ವ ಎಂಬ ಐದನೆಯ ಅನುಮಾನದ ಅಂಗವನ್ನು ತೋರಿಸಿದಂತಾಯಿತು. ಪ್ರತಿಪಕ್ಷಯುಕ್ತಿಃ ನೈವಾಸ್ತಿ - ಎಂಬುದರಿಂದ ಅಸತ್ಪ್ರತಿಪಕ್ಷತ್ವವನ್ನು ಸ್ಪಷ್ಟಪಡಿಸಿದ್ದಾರೆ. ಅತುಲಂ - ಅಲೌಕಿಕವಾದ ವಿಷಯವನ್ನು ವಿಷಯೀಕರಿಸುವುದರಿಂದ ಹೋಲಿಕೆಯಿಲ್ಲದಿರುವಂತಹದ್ದು. ಆದ್ದರಿಂದಲೇ ಶುದ್ಧಂ ಪ್ರಮಾಣಂ - ಪ್ರಮಾಣದ ಸ್ಥಾನದಲ್ಲಿರುವ ಆ ಪೂಜ್ಯರಾದ ಆನಂದತೀರ್ಥಮುನಿಗಳು ತತ್ತ್ವ-ನಿರ್ಣಯಕ್ಕೆ ಕಾರಣರಾಗಲಿ. ಇಲ್ಲಿ ಸಮಗ್ರ ಉಪಮೆಗಳು ಸೇರಿರುವ ರೂಪಕಾಲಂಕಾರವಿದೆ.

## ವಾಯುವೂ ಅಮೃತ ಹಾಗೂ ನಿತ್ಯಸಮ

(ಕುಂಡಲಗಿರೀಯ) — ಭಾಷ್ಯಕಾರಂ ಶ್ರೀಮದಾನಂದತೀರ್ಥಭಗವತ್ಪಾದಂ ತತ್ತ್ವನಿರ್ಣಾಯಕತ್ವ-ಪ್ರಯೋಜಕಧರ್ಮವತ್ತಯಾ ಪ್ರಾರ್ಥಯತೇ — ವ್ಯಾಪ್ತಿರಿತಿ ॥ ಯಸ್ಯ ಆನಂದತೀರ್ಥಮುನೇಃ, ನಿಜೇನ ಮಹಸಾ ನಿಜೇನ = ನಿತ್ಯೇನ ಅವಿನಾಶಿನಾ ಇತಿ ಯಾವತ್ । ಮಹಸಾ ಜ್ಞಾನೇನ ವೃತ್ತಿರೂಪೇಣ ವ್ಯಾಪ್ತಿಃ ನಿಯತಸಂಬಂಧಃ 'ನಿಜ ಆತ್ಮೀಯನಿತ್ಯಯೋಃ' 'ನಿಜೌ ಸ್ವೀಯಾವ-ವಿನಾಶನೌ', 'ಮಹಸ್ತೂತ್ಸವತೇಜಸೋಃ' । ಏವಂ ಪ್ರಲಯಕಾಲೇಽಪಿ ಪ್ರತಿಭಾತಪರಾವರಃ । 'ಅತಿರೋಹಿತವಿಜ್ಞಾನಾದ್ ವಾಯುರಪ್ಯಮೃತಃ ಸ್ಮೃತಃ' 'ಮುಖ್ಯವಾಯುರ್ನಿತ್ಯಸಮಃ' ಇತ್ಯಾದೇಃ । 'ಯಸ್ಯ' ಇತ್ಯುತ್ತರತ್ರಾನ್ವೇತಿ । ಪಕ್ಷೇ ವ್ಯಾಚಿಖ್ಯಾಸಿತತಯಾ ಪರಿಗೃಹೀತೇ ಬ್ರಹ್ಮ-ಮೀಮಾಂಸಾಶಾಸ್ತ್ರೇ ನಿಜೇನ ಮಹಸಾ ಶಬ್ದತೋಽರ್ಥತಶ್ಚಾಶೇಷವಿಶೇಷವಿಷಯೀಕರಣ-ಲಕ್ಷಣವ್ಯಾಪನರೂಪಾ ಸ್ಥಿತಿಃ ।

ಭಾಷ್ಯಕಾರರಾದ ಶ್ರೀಮದಾನಂದತೀರ್ಥಭಗವತ್ಪಾದರನ್ನು ತತ್ತ್ವನಿರ್ಣಯಕ್ಕೆ ಕಾರಣರು ಎನ್ನಲು ಬೇಕಾದ ಧರ್ಮವುಳ್ಳವರನ್ನಾಗಿ ಪ್ರಾರ್ಥಿಸುತ್ತಾರೆ — ವ್ಯಾಪ್ತಿಃ ಎಂದು.

'ಯಸ್ಯ' ಎಂದರೆ ಆನಂದತೀರ್ಥಮುನಿಗಳು ಎಂದರ್ಥ. ಅವರು ತಮ್ಮ 'ನಿಜೇನ' ಅಂದರೆ ನಿತ್ಯವಾದ ನಾಶವಿಲ್ಲದಿರುವ 'ಮಹಸಾ' ವೃತ್ತಿರೂಪವಾದ ಜ್ಞಾನದಿಂದ, 'ವ್ಯಾಪ್ತಿಃ' ನಿಯತ-ಸಂಬಂಧವನ್ನು ಪಡೆದಿದ್ದಾರೆ. ಇದಕ್ಕೆ ಕೋಶಗಳು ಹೀಗಿವೆ. 'ನಿಜ ಆತ್ಮೀಯನಿತ್ಯಯೋಃ' ಆತ್ಮೀಯ ನಿತ್ಯ ಎಂಬ ಅರ್ಥದಲ್ಲಿ ನಿಜಶಬ್ದವಿದೆ. 'ನಿಜೌ ಸ್ವೀಯೌ ಅವಿನಾಶಿನೌ' ಹಾಗೂ 'ಮಹಸ್ತು ಉತ್ಸವತೇಜಸೋಃ' ಎಂದು. ಈ ರೀತಿ 'ಪ್ರಲಯಕಾಲದಲ್ಲಿಯೂ ವೃತ್ತಿರೂಪಜ್ಞಾನವನ್ನು ಹೊಂದಿದವರು. ಜ್ಞಾನದ ತಿರೋಧಾನ ಎಂಬುದು ಅವರಿಗಿರುವುದಿಲ್ಲ. ಆದ್ದರಿಂದಲೇ ವಾಯುಃ ಅಮೃತನೆಂದು ಕರೆಯಲ್ಪಟ್ಟಿದ್ದಾರೆ.' ಹಾಗೂ 'ಮುಖ್ಯವಾಯುರ್ನಿತ್ಯಸಮಃ' ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿದೆ.

ಯಸ್ಯ ಎಂಬ ಪದಕ್ಕೆ ಮುಂದಿನ ಪದಗಳೊಂದಿಗೂ ಅನ್ವಯ ಮಾಡಬೇಕು. 'ಯಸ್ಯ ಪಕ್ಷೇ ಸ್ಥಿತಿಃ' 'ಯಸ್ಯ ವಿಪಕ್ಷೇ ವ್ಯಾವೃತ್ತಿಃ' ಇತ್ಯಾದಿಯಾಗಿ.

ಪಕ್ಷೇ ಎಂದರೆ ವ್ಯಾಖ್ಯಾನಮಾಡಲು ಇಚ್ಛೆ ಪಟ್ಟಿರುವ ಬ್ರಹ್ಮಮೀಮಾಂಸಾಸೂತ್ರದಲ್ಲಿ ಎಂದರ್ಥ. ಇದರಲ್ಲಿ ತಮ್ಮ ಮಹಸಾ ಅಂದರೆ ತಮ್ಮ ನಿತ್ಯವಾದ ಜ್ಞಾನದಿಂದ ಬ್ರಹ್ಮಸೂತ್ರದ ಪ್ರತಿಯೊಂದು ಶಬ್ದಗಳನ್ನು ಹಾಗೂ ಅರ್ಥಗಳನ್ನು ಸಂಪೂರ್ಣವಾಗಿ ವಿಷಯೀಕರಿಸುತ್ತಾರೆ. ಇದೇ 'ವ್ಯಾಪ್ತಿಯಿಂದ ಸ್ಥಿತಿ' ಎನಿಸುತ್ತದೆ.

## ಈಶಾವಾಸ್ಯೋಪನಿಷತ್ತಿನಲ್ಲಿ ಮುಖ್ಯಪ್ರಾಣನ ಮಹಿಮೆ

** 'ಅತಿರೋಹಿತವಿಜ್ಞಾನಾದ್ವಾಯುರಪ್ಯಮೃತಃ ಸ್ಮೃತಃ ।
ಮುಖ್ಯಾಮೃತಃ ಸ್ವಯಂ ರಾಮಃ ಪರಮಾತ್ಮಾ ಸನಾತನಃ ॥' ಇತಿ ರಾಮಸಂಹಿತಾಯಾಮ್

— ವಾಯುದೇವರನ್ನು ಅಮೃತ ಎನ್ನುತ್ತಾರೆ. ಅಮೃತ ಎಂದರೆ ನಿತ್ಯ ಎಂದರ್ಥ. ಅವರ ವಿಶೇಷವಾದ ವೃತ್ತಿರೂಪವಾದ ಜ್ಞಾನವು ಪ್ರಲಯಕಾಲದಲ್ಲಿಯೂ ತಿರೋಧಾನವಿಲ್ಲದೇ ಇರುವುದರಿಂದ. ಹೀಗೆ ಪ್ರಲಯಕಾಲದಲ್ಲಿ ದೇಹನಾಶವಿದ್ದರೂ ವಾಯುವನ್ನು ಅಮೃತ ಎನ್ನುವುದು ಅವನ ವಿಶೇಷವಾದ ವೃತ್ತಿರೂಪವಾದ ಜ್ಞಾನಕ್ಕೆ ತಿರೋಧಾನವಿಲ್ಲದೇ ಇರುವುದರಿಂದ. ಪರಮಾತ್ಮನಾದರೋ ದೇಹನಾಶಾದಿರಹಿತ ಎಂದು ಪ್ರಲಯಕಾಲದಲ್ಲೂ ಪ್ರಸಿದ್ಧನೇ. ಹಾಗಾಗಿ ಅವನು ಮುಖ್ಯನಾಗಿಯೇ ಅಮೃತ ಎನಿಸುವನು. — ಈ ವಿಷಯವು ರಾಮಸಂಹಿತೆಯೆಂಬ ಪಂಚರಾತ್ರದ ಒಂದು ಭಾಗದಲ್ಲಿ ಹೇಳಲ್ಪಟ್ಟಿದೆ.

ಖಂಡಾರ್ಥಃ -- ನನು ಪರಮೇಶ್ವರಸ್ಯ ಯತ್ಕಲ್ಯಾಣರೂಪತ್ವಮುಕ್ತಂ, ಯಚ್ಚ ಸೋಽಹಮಸ್ಮೀತಿ ಜೀವಾಂತರ್ಗತಸ್ಯ ನಿತ್ಯಾಸ್ತಿತ್ವಮುಕ್ತಂ ತನ್ನ ಯುಕ್ತಮ್ । ದೇಹನಾಶಸ್ಯ ಪ್ರತ್ಯಕ್ಷಾದಿಸಿದ್ಧತಯಾ ತದಂತರ್ಗತಸ್ಯ ಜೀವಸ್ಯೇವ ಮರಣಾದ್ಯವಶ್ಯಂಭಾವಾದಿತ್ಯಾಶಂಕಾಂ ಕೈಮುತ್ಯೇನ ನಿರಾಹ-ವಾಯುರಿತಿ ॥ ಯದ್ಯಪೀದಂ ಶರೀರಂ ಭಸ್ಮಾಂತಂ ತಥಾಽಪಿ ತದಂತರ್ಗತಸ್ಯ ಹರೇರ್ನ ಮರಣಾದಿ ದೋಷಪ್ರಸಕ್ತಿಃ । ಕುತಃ? ಅನಿಲಂ ಅಃ ಬ್ರಹ್ಮೈವ ನಿಲಂ ನಿಲಯನಮ್ ಆಶ್ರಯೋ ಯಸ್ಯ ಸೋಽನಿಲಃ ಪರಮೇಶ್ವರಾಶ್ರಿತೋ ವಾಯುರಪಿ ಯದಾಽಮೃತಃ ನಿತ್ಯಃ ಅಥ ತದಾ ಪರಮೇಶ್ವರೋಽಮೃತಃ ಇತಿ ಕಿಮು ವಕ್ತವ್ಯಮಿತ್ಯರ್ಥಃ । ಅನಿಲಾಮೃತಪದಯೋಃ ಲಿಂಗ-ವ್ಯತ್ಯಯೋ ಜ್ಞೇಯಃ । ವಾಯೋರಮೃತತ್ವಂ ನಿತ್ಯಜ್ಞಾನತ್ವೇನ ಜ್ಞೇಯಮ್ । 'ಅತಿರೋಹಿತ-ವಿಜ್ಞಾನಾದ್ ವಾಯುರಪ್ಯಮೃತಃ ಸ್ಮೃತಃ' ಇತ್ಯುಕ್ತೇಃ । 'ಏತೇನ ಮಾತರಿಶ್ವಾ ವ್ಯಾಖ್ಯಾತಃ' (ಬ್ರ.ಸೂ. 2.3.8.) ಇತ್ಯತ್ರ ಭಾಷ್ಯಾದೌ ತಥಾ ನಿರ್ಣಯಾಚ್ಚೇತಿ ॥ 18॥

– ಪರಮೇಶ್ವರನನ್ನು ಮಂಗಳಮಯ ಎಂದಿದ್ದಾರೆ. ಅಲ್ಲದೇ ಸೋಽಹಮಸ್ಮಿ ಎಂದು ಜೀವನ ಒಳಗಡೆ ನಿತ್ಯವಾಗಿ ಇದ್ದಾನೆ ಎಂದೂ ಹೇಳಿದ್ದಾರೆ. ಇವೆರಡೂ ಸರಿಯಲ್ಲ. ಏಕೆಂದರೆ ಜೀವನ ದೇಹವು ನಾಶವಾಗುತ್ತಿರುವುದು ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗಿದೆ ಎಂದ ಮೇಲೆ ಆ ಜೀವನಿಗೆ ಮರಣವು ಅವಶ್ಯ. ಅದರಂತೆ ಹರಿಗೂ ಮರಣವು ಅವಶ್ಯಂಭಾವಿ. ಮನೆಯು ಸುಟ್ಟಾಗ ಮನೆಯ ಒಳಗಿರುವ ವಸ್ತುವಿನಂತೆ ಎಂದರೆ ಉತ್ತರಿಸುತ್ತಾರೆ – ವಾಯುಃ ಅಪಿ ಅಮೃತಃ ಸ್ಮೃತಃ - ಎಂದು. ನಿಜ. ಈ ಶರೀರವು ನಾಶವಾಗುತ್ತದೆ. ಆದರೂ ಅದರ ಒಳಗಡೆ ಇರುವ ಹರಿಗೆ ಮರಣಾದಿದೋಷಪ್ರಸಕ್ತಿ ಇಲ್ಲ. ಏಕೆಂದರೆ ಅನಿಲನಾದ ವಾಯುವು ಅಮೃತನಾಗಿದ್ದಾನೆ. ಅನಿಲ ಎಂದರೆ ಅ = ಬ್ರಹ್ಮನೇ, ನಿಲಂ = ಆಶ್ರಯನು ಯಾರಿಗೋ ಅವನು ಅನಿಲ. ಈ ಅನಿಲನಾದ ವಾಯುವು ನಿತ್ಯನಾಗಿದ್ದಾನೆ ಎಂದ ಮೇಲೆ ಸುತರಾಂ ಬ್ರಹ್ಮನೂ ಕೂಡ ನಿತ್ಯನೇ ಆಗಿರುವನು ಎಂಬುದು ಸಿದ್ಧ. ವಾಯುವನ್ನು ಅಮೃತ ಎಂದಿದ್ದು ಪ್ರಲಯಕಾಲದಲ್ಲಿಯೂ ಅವನ ಯೋಗಪ್ರಭಾವಲಬ್ಧ-ಅತಿಶಯೋಪೇತವಾದ ವೃತ್ತಿರೂಪಜ್ಞಾನಕ್ಕೆ ನಾಶವಿಲ್ಲ ಎಂಬ ಅಭಿಪ್ರಾಯದಿಂದ ಎಂದು ತಿಳಿಯಬೇಕು.

## ಮುಖ್ಯವಾಯು ಪ್ರತಿಭಾತಪರಾವರ - ಅನುವ್ಯಾಖ್ಯಾನ

** ಏವಂ ಪ್ರಲಯಕಾಲೇಽಪಿ ಪ್ರತಿಭಾತಪರಾವರಃ ।
ಮುಖ್ಯವಾಯುರ್ನಿತ್ಯಸಮಃ ಶರೀರೋತ್ಪತ್ತಿಕಾರಣಾತ್ ॥ ಅನುವ್ಯಾ. 2ಅ.3ಪಾ.ಶ್ಲೋ20 ॥

** य वियदनादि, जन्मवचोक्तमेवमित्यर्थः । प्रतिभातपरावरः शरीराभावेऽपि प्रातिभेनैव ज्ञानेन ·ग्यीकृतातीतानागतो यतः, तस्मान्नित्यसम इति शब्दितः । शरीरोत्पत्तिकारणात्, परार्थे· शेषेण इत्येतयोर्हेतुहेतुमद्भावः । एवशब्दस्य पराधीनविशेषणैवेत्यन्वयः । मुख्य-वाय· ·यनेन भूतप्रकरणेऽपि न भूतवायुविषयमिदं सूत्रम् । तत्राधिकाशङ्काभावात् । अत एव नावान्तराभिमानिविषयम । किन्नाम । तत्परमाभिमानिविषयमेवेति सूचयति । स्वरूपातिरिक्तस्य प्रातिभज्ञानस्याप्यनुपपत्रवादाकाशदेवतातो विशेषो युज्यत इति भावः । (सुधा)

### 'ಸಕ್ತಿರ್ನ ವೈ' ಎಂಬಲ್ಲಿನ ವೈಶಬ್ದದಿಂದ ಸೂಚಿತವಾದದ್ದೇನು?

(ಕುಂಡಲಗಿರೀಯ) – ಬಾಧಿತವಿಷಯೇ ಸಕ್ತಿಃ ದುಷ್ಟೇ ಪ್ರಮಾಣಬಾಧಿತೇ ವಾ ವಿಷಯೇ ಮನಸಃ ಸಂಗೋ ನ ವೈ । ನಾಸ್ತ್ಯೇವ । 'ವೈ' ಇತ್ಯನೇನ –

'ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ ನ ಕರ್ಹಿಚಿನ್ಮೇ ಮನಸೋ ಮೃಷಾ ಗತಿಃ ।
ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ ॥

ಇತಿ ಭಾಗವತವಚನಂ ಸೂಚಯತಿ । ಪ್ರತಿಪಕ್ಷಯುಕ್ತಿಃ ಅಜ್ಞಾನಮಿಥ್ಯಾಮತ್ಯಾದಿನಿಯಾಮಕ-ಕಲ್ಯಾದ್ಯಸುರಸಂಬಂಧಃ ನಾಸ್ತ್ಯೇವ । ಇದಂ ಚ –

ಮುಖ್ಯವಾಯೌ ಯದಾ ದೇವಾಃ ಶರೀರಸ್ಥೇ ಚ ಸೂರ್ಯಗೇ ।
ವಿಷ್ಣುಂ ಉದ್ಗೀಥನಾಮಾನಂ ತದಾ ತಂ ಚ ವಿದದ್ವಸುಃ ॥
ಯದಾ ವಿದದ್ವಸುಃ ಪ್ರಾಣಂ ವಿಧ್ವಸ್ತಾಸ್ತೇ ತದಾಸುರಾಃ ।
ಆಖಣಾಶ್ಮಾನಮೇವಾಪ್ಯ ಲೋಷ್ಟೋ ವಿಧ್ವಂಸತೇ ಯಥಾ ॥
ಪ್ರತಿಮಾಂ ಪ್ರೇಯಸೀಂ ಪ್ರಾಪ್ಯ ವಿಷ್ಣೋಃ ಪ್ರಾಣಂ(ಪ್ರೀಣನ್) ತಥಾಸುರಾಃ ।

ಇತ್ಯಾದಿಛಾಂದೋಗ್ಯಭಾಷ್ಯೋದಾಹೃತವಚನನಿಚಯಾತ್ ಸಿದ್ಧಮ್ ।

### ದುರ್ವಿಷಯದಲ್ಲಿ ವಾಯುವಿನ ಮನಸ್ಸಿಗೆ ಸಂಗವಿಲ್ಲ – ಭಾಗವತ

ಬಾಧಿತವಿಷಯೇ ಸಕ್ತಿಃ ನ ವೈ ಎಂದರೆ ದುಷ್ಟವಾದ ಅಥವಾ ಪ್ರಮಾಣದಿಂದ ಬಾಧ ಇರುವ ವಿಷಯದಲ್ಲಿ ಮನಸ್ಸಿನ ಸಂಗ ಇಲ್ಲವೇ ಇಲ್ಲ ಎಂದಭಿಪ್ರಾಯ. ವೈ ಎನ್ನುವುದರಿಂದ –

"ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ ನ ಕರ್ಹಿಚಿನ್ಮೇ ಮನಸೋ ಮೃಷಾ ಗತಿಃ ॥
ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ ॥ (2-6-33)

ಎಂಬ ಭಾಗವತದ ಮಾತನ್ನು ಸೂಚಿಸುತ್ತಿದ್ದಾರೆ. ಬ್ರಹ್ಮದೇವರು ನಾರದರಿಗೆ ಹೇಳುವ ಮಾತಿದು – "ನನ್ನ ಮಾತು ಎಂದಿಗೂ ಸುಳ್ಳಾಗಿರುವುದಿಲ್ಲ. ನನ್ನ ಮನಸ್ಸು ಎಂದಿಗೂ ಕೆಟ್ಟ ವಿಷಯದಲ್ಲಿ ಹೋಗುವುದಿಲ್ಲ. ನನ್ನ ಇಂದ್ರಿಯಗಳು ಕೆಟ್ಟಮಾರ್ಗದಲ್ಲಿ ಸಾಗುವುದಿಲ್ಲ. ಏಕೆಂದರೆ ನಾನು ಹೃದಯ-ದಲ್ಲಿ ಹರಿಯನ್ನು ಔತ್ಸುಕ್ಯದಿಂದ ಧರಿಸಿದ್ದೇನೆ" ಎಂದು.

* ಸಾಕಲ್ಯೇನ ತಸ್ಯ ಕೇನಾಪಿ ಜ್ಞಾತುಮೇವಾಶಕ್ಯತ್ವಾತ್ ಇತ್ಯುತ್ತರಂ ವಕ್ತುಂ ಸರ್ವದೇವಾ-ದ್ಯುತ್ತಮಸ್ಯ ಮಮ ವಾಯೋಶ್ಚ ತಾವತ್ಸಾಕಲ್ಯೇನ ತಜ್ಞಾನೇ ಶಕ್ತಿರ್ನಾಸ್ತೀತ್ಯಾಹ – ನ ಮೇ ಭಾರತೀತಿ ಶ್ಲೋಕದ್ವಯೇನ ॥ 'ಮೇ' ಇತ್ಯೇತದ್ ವಾಯೋರಿತ್ಯಸ್ಯಾಪಿ ಉಪಲಕ್ಷಕಮ್ । ತಂ ಭಗವಂತಂ ನಾಧ್ಯಗಚ್ಛತ್ । 'ಅಧಿ' ಇತಿ ವಿಶೇಷಣಾತ್ ಮದ್ಯೋಗ್ಯತಾಪೇಕ್ಷಯಾಧಿಕ್ಯೇನ ನಾಜ್ಞಾಸಿಷಮಿತ್ಯರ್ಥಃ । ಇದಮಪ್ಯುಪಲಕ್ಷಣಮ್ । ವಾಯುರಪಿ ನಾಧಿಗಚ್ಛತೀತಿ ಗ್ರಾಹ್ಯಮ್ । ನನು ಸಾಕಲ್ಯೇನ ತದಜ್ಞಾನಂ ನಾಶಕ್ತಿನಿಬಂಧನಂ ಕಿಂತು ಇಂದ್ರಿಯಜಯಾದಿತದಜ್ಞಾನ-ಸಾಮಗ್ರ್ಯಭಾವನಿಬಂಧನಮೇವ - ಇತ್ಯತಃ ಸಾ ಸರ್ವಾಽಪ್ಯಸ್ತೀತಿ ವಕ್ಷ್ಯನ್ ತಾವದಿಂದ್ರಿಯ-ಜಯ ಆವಯೋಃ ಸ್ವಭಾವಸಿದ್ಧ ಇತ್ಯಾಹ ಆದ್ಯೇನ । ಭಾರತೀ ವಾಗಿಂದ್ರಿಯಮ್ । ಅಂಗ! ಹೇ ನಾರದ। ಮೃಷಾಽವಿದ್ಯಮಾನಾರ್ಥಕವಾಕ್ಯಪ್ರಯೋಗರೂಪೇ ವಾ ವಿಷಯೇ । ಪ್ರವರ್ತಮಾನಾ

ನೋಪಲಕ್ಷ್ಯಂತೇ । ಮಯಾऽನ್ಯೇನ ವಾ ನ ದೃಶ್ಯತ ಇತ್ಯರ್ಥಃ । ಮೃಷಾऽವಿದ್ಯಮಾನೇ ವ್ಯರ್ಥೇ ವಾऽರ್ಥೇ । ಹೃಷೀಕಾಣಿ = ವಾಙ್ಮನಸೇತರೇಂದ್ರಿಯಾಣಿ । ಕುತೋ ಯುವಯೋರಿಂದ್ರಿಯಜಯ ಔತ್ಪತ್ತಿಕ ಇತ್ಯತೋऽತ್ರ ಕಾರಣಮಾಹ । ಯತೋ ಯಸ್ಮಾನ್ಮೇ ಆವಾಭ್ಯಾಮ್ । ಔತ್ಕಂಠ್ಯಂ ಭಕ್ತ್ಯುದ್ರೇಕಃ ತದ್ಯುಕ್ತೇನ ಹೃದಾ ಮನಸಾ । ಹರಿರ್ಧೃತೋ ಧ್ಯಾತಸ್ತಸ್ಮಾದಿತಿ ॥ – (ಪ್ರಕಾಶಿಕಾ)

– ಶ್ಲೋಕದಲ್ಲಿ ಹೃಷೀಕ ಎಂದರೆ ವಾಕ್ ಮನಸ್ಸನ್ನು ಬಿಟ್ಟು ಬೇರೆ ಇಂದ್ರಿಯಗಳನ್ನು ಗ್ರಹಿಸಬೇಕು. ಔತ್ಕಂಠ್ಯ = ಭಕ್ತ್ಯುದ್ರೇಕ ಎಂದರ್ಥ. ಧೃತಃ = ಧ್ಯಾನಿಸಲ್ಪಟ್ಟವನು. ಮೃಷಾ = ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವ ವಾಕ್ಯವನ್ನು ಪ್ರಯೋಗ ಮಾಡುವುದು.

## ಪ್ರಸಿದ್ಧವಾದ ಧೂಮಾನುಮಾನದಲ್ಲಿ ವ್ಯಾಪ್ತ್ಯಾದಿಅಂಗಗಳ ಪ್ರದರ್ಶನ

(ಕುಂಡಲಗಿರೀಯ)– ಪ್ರಸಿದ್ಧೇ ಅನ್ವಯವ್ಯತಿರೇಕಿಣಿ ಧೂಮಾನುಮಾನೇ ವ್ಯಾಪ್ತ್ಯಾದಿಕಂ ಸ್ಪಷ್ಟಮವಗಮ್ಯತೇ । ತಥಾಹಿ – ಯಸ್ಯ ಧೂಮವತ್ತ್ವಹೇತೋಃ ನಿಜೇನ ಸ್ವಕಾರಣತಯಾ ಸ್ವೀಯೇನ ಮಹಸಾ ವಹ್ನಿನಾ ವ್ಯಾಪ್ತಿಃ । ಅವ್ಯಭಿಚರಿತಸಾಮಾನಾಧಿಕರಣ್ಯಂ ಪಕ್ಷಧರ್ಮತ್ವಾದಿ ಪಂಚರೂಪೋಪಪನ್ನತ್ವಂ ಚ ಪ್ರಸಿದ್ಧಮೇವ । ಅತ ಏವ ಸ ಧೂಮವತ್ತ್ವಹೇತುಃ **ಅತುಲಂ ಶುದ್ಧಂ ಪ್ರಮಾಣಮಿವ ಪ್ರಮಾಣಂ ಮೇ ತತ್ತ್ವನಿರ್ಣಯಾಯ ಭೂಯಾತ್** । **ಶುದ್ಧಂ ಪ್ರಮಾಣಂ ಯಥಾ ತತ್ತ್ವನಿರ್ಣಯಾಯ** ಭವತಿ ತಥಾ ತತ್ತ್ವನಿರ್ಣಾಯಕತ್ವೋಪಯುಕ್ತ-ಗುಣಸಂಪನ್ನಃ ಭಗವಾನ್ ಭಾಷ್ಯಕಾರಃ **ಮೇ ತತ್ತ್ವನಿರ್ಣಯಾಯ** ಭವತು ಇತ್ಯರ್ಥಃ ।

ಪ್ರಸಿದ್ಧವಾದ ಅನ್ವಯವ್ಯತಿರೇಕಿ ಎನಿಸುವ ಧೂಮಾನುಮಾನದಲ್ಲಿ ವ್ಯಾಪ್ತ್ಯಾದಿಅಂಗಗಳು ಸ್ಪಷ್ಟವಾಗಿ ತಿಳಿಯುತ್ತವೆ. ಅದು ಹೀಗೆ – ಯಸ್ಯ ಎಂದರೆ ಧೂಮಹೇತುವಿಗೆ, ನಿಜೇನ - ತನ್ನ ಕಾರಣವಾದ, ಮಹಸಾ ಅಂದರೆ ವಹ್ನಿಯಿಂದ ವ್ಯಾಪ್ತಿಯು ಇದೆ. ಧೂಮಾನುಮಾನಕ್ಕೆ ಅವ್ಯಭಿಚರಿತ-ಸಾಮಾನಾಧಿಕರಣ್ಯವು ಪಕ್ಷಧರ್ಮತಾದಿ ಐದು ಅಂಗಗಳಿಂದ ಕೂಡಿರುವಿಕೆಯು ಪ್ರಸಿದ್ಧವೇ ಆಗಿದೆ. ಆದ್ದರಿಂದಲೇ ಆ ಧೂಮ ಎಂಬ ಹೇತುವು ಅತುಲವಾದ ಶುದ್ಧವಾದ ಪ್ರಮಾಣವಾಗಿದೆ. ಅದರಂತೆ ಆನಂದತೀರ್ಥರೆಂಬ ಪ್ರಮಾಣವು ನಮಗೆ ತತ್ತ್ವನಿರ್ಣಯಕ್ಕೆ ಕಾರಣವಾಗಲಿ ಎಂದು ಪ್ರಾರ್ಥಿಸಿದ್ದಾರೆ. ಈ ರೀತಿ ತತ್ತ್ವನಿರ್ಣಾಯಕತ್ವ ಎಂಬ ಗುಣದಿಂದ ಭಾಷ್ಯಕಾರರು ಕೂಡಿರು-ವವರಾಗಿದ್ದಾರೆ.

## ತತ್ತ್ವನಿರ್ಣಾಯಕತ್ವವೇ ಇಲ್ಲಿ ಅಭಿಮತ

(ಕುಂಡಲಗಿರೀಯ) – ಅತ ಏವಾನಂದತೀರ್ಥಮುನೇಃ ಕೇವಲಪ್ರಮಾಣತ್ವಂ ವಾ ಅನು-ಪ್ರಮಾಣತ್ವಂ ವಾ । ನಾದ್ಯಃ ಪ್ರಮಿತಿಕೇವಲಪ್ರಮಾಣಾತ್ಮಕಸ್ಯ ತಸ್ಯಾಸ್ಮದೀಯತತ್ತ್ವಹೇತುತ್ವಾ-

ಭಾವಾತ್ । ಅನುಮಾನಾಂಗವ್ಯಾಪ್ತ್ಯಾದ್ಯುಕ್ತ್ಯಯೋಗಾಚ್ಚ । ನ ದ್ವಿತೀಯಃ । ಅಕ್ಷಾದ್ಯನಾತ್ಮಕಸ್ಯ ತಸ್ಯಾನುಪ್ರಮಾಣತ್ವಾಯೋಗಾತ್ । ತಸ್ಯಾನುಮಾನತ್ವೇ ಪಕ್ಷಸಾಧ್ಯಸಪಕ್ಷಾದೇಃ ದುರ್ನಿರೂಪತ್ವಾ- ಚ್ಚೇತಿ ನಿರಸ್ತಮ್ । ಉಕ್ತರೀತ್ಯಾ ಪ್ರಮಾಣಸ್ಯೇವ ತತ್ತ್ವನಿರ್ಣಾಯಕತ್ವಸ್ಯೈವ ಅತ್ರಾಭಿಮತತ್ವಾತ್ ।

ಆನಂದತೀರ್ಥಮುನಿಗಳು ಕೇವಲ ಪ್ರಮಾಣವೋ ಅನುಪ್ರಮಾಣವೋ? ಕೇವಲಪ್ರಮಾಣವಾದಲ್ಲಿ ಅವರು ಜ್ಞಾನರೂಪರಾದ್ದರಿಂದ ನಮ್ಮ ಜ್ಞಾನಕ್ಕೆ ಅವರು ಕಾರಣರು ಎಂದಾಗುವುದಿಲ್ಲ. ಅಲ್ಲದೆ ಅನುಮಾನಾಂಗವಾದ ವ್ಯಾಪ್ತಿಯನ್ನು ಹೇಳುವುದು ಅನುಪಯುಕ್ತವಾಗುವುದು. ಆಚಾರ್ಯರು ಅನುಪ್ರಮಾಣವೂ ಅಲ್ಲ. ಏಕೆಂದರೆ, ಇಂದ್ರಿಯಾದಿಗಳಲ್ಲದ ಅವರು ಅನುಪ್ರಮಾಣವಾಗಲು ಸಾಧ್ಯವಿಲ್ಲ. ಅಷ್ಟೇ ಅಲ್ಲದೆ ಅವರು ಅನುಮಾನವಾದರೆ ಪಕ್ಷ, ಸಾಧ್ಯ, ಸಪಕ್ಷ ಮೊದಲಾದವು- ಗಳನ್ನು ನಿರೂಪಣೆ ಮಾಡುವುದು ಅಸಾಧ್ಯ ಎಂದು. ಹೀಗೆ ಕೇವಲ ಪ್ರಮಾಣವೂ ಅಲ್ಲದ ಅನುಪ್ರಮಾಣವೂ ಅಲ್ಲದ ಆಚಾರ್ಯರು ಪ್ರಮಾಣರಾಗಲು ಸಾಧ್ಯವಿಲ್ಲ ಎಂದಾಕ್ಷೇಪ.

ಉತ್ತರ – ನಾವು ಹಿಂದೆ ತಿಳಿಸಿದಂತೆ "ಪ್ರಮಾಣದಂತೆ ಆಚಾರ್ಯರು ತತ್ತ್ವನಿರ್ಣಯವನ್ನು ಉಂಟುಮಾಡುವರು" ಎಂದಿಷ್ಟೇ ಇಲ್ಲಿ ಅಭಿಮತವಾಗಿದೆ.

## ಮುಖ್ಯಪ್ರಾಣದೇವರಿಗೆ ಅಸುರಸಂಬಂಧವಿಲ್ಲ - ಛಾಂದೋಗ್ಯ

ಪ್ರತಿಪಕ್ಷಯುಕ್ತಿಃ – ಅಂದರೆ ಅಜ್ಞಾನ, ಮಿಥ್ಯಾಜ್ಞಾನಮೊದಲಾದ ಜ್ಞಾನಗಳಿಗೆ ನಿಯಾಮಕರಾದ ಕಲಿ ಮುಂತಾದ ಅಸುರರ ಸಂಬಂಧವು ಇಲ್ಲವೇ ಇಲ್ಲ. ಇದಾದರೋ –

'ಮುಖ್ಯವಾಯೌ ಯದಾ ದೇವಾಃ ಶರೀರಸ್ಥೇ ಚ ಸೂರ್ಯಗೇ ।
ವಿಷ್ಣುಂ ಉದ್ಗೀಥನಾಮಾನಂ ತದಾ ತಂ ಚ ವಿದಧ್ವಸುಃ ॥
ಯದಾ ವಿದಧ್ವಸುಃ ಪ್ರಾಣಂ ವಿಧ್ವಸ್ತಾಸ್ತೇ ತದಾಸುರಾಃ ।
ಆಖಣಾಶ್ಮಾನಮೇವಾಪ್ಯ ಲೋಷ್ಟೋ ವಿಧ್ವಂಸತೇ ಯಥಾ ॥
ಪ್ರತಿಮಾಂ ಪ್ರೇಯಸೀಂ ಪ್ರಾಪ್ಯ ವಿಷ್ಣೋಃ ಪ್ರಾಣಂ ತಥಾಸುರಾಃ ।'

ಎಂದು ಛಾಂದೋಗ್ಯಭಾಷ್ಯದಲ್ಲಿ ಉದಾಹರಿಸಿದ ವಚನದಿಂದ ಸಿದ್ಧವಾಗಿದೆ. 'ಮುಖ್ಯವಾಯೌ ಯದಾ' ಎಂಬ ಭಾಷ್ಯದಲ್ಲಿ ಉದಾಹರಿಸಿದ ವಚನವು ಈ ಅಂಶವನ್ನು ಉದ್ದೇಶಿಸಿ ಹೊರಟಿದೆ – ಉದ್ಗೀಥ ಎಂಬ ಹೆಸರಿನ ವಿಷ್ಣುವಿಗೆ ವಿಶಿಷ್ಟವಾದ ಪ್ರತೀಕ ವಾಯುದೇವರೇ ಆಗಿದ್ದಾರೆ. ಆದ್ದರಿಂದ ಆ ವಾಯುವು ಜೀವೋತ್ತಮ ಎಂಬ ಜ್ಞಾನ ಹೊಂದಿ, ಅವನಿಗಿಂತಲೂ ಭಗವಂತನು ಉತ್ತಮ ಎಂದು ಉಪಾಸನೆ ಮಾಡಿದಾಗ ಭಗವಂತನು ಚೆನ್ನಾಗಿ ಫಲವನ್ನು ಕೊಡುವವನು ಎಂದು ತೋರಿಸುತ್ತಿದ್ದಾರೆ – ವಾಯೌ ಮುಖ್ಯಧಿಯಾ ಎಂಬ ವಾಕ್ಯದಿಂದ. ಅದೇ ಸಂದರ್ಭದಲ್ಲಿ

'ಮುಖ್ಯವಾಯೌ ಯದಾ ದೇವಾಃ' ಎಂಬ ವಚನವನ್ನು ಉದಾಹರಿಸುತ್ತಾ 'ಸರ್ವದೇವೋತ್ತಮೋ ವಿಷ್ಣುಮುಪಾಸೀತ ತತೋಽಧಿಕಮ್' ಎಂದು ಉಪಸಂಹರಿಸಿದ್ದಾರೆ.

ಅರ್ಥಾತ್ – ಯಾವಾಗ ದೇವತೆಗಳು ದೇಹದಲ್ಲಿರುವ ಮತ್ತು ಸೂರ್ಯನಲ್ಲಿರುವ ಮುಖ್ಯ-ಪ್ರಾಣದೇವರಲ್ಲಿ ಉದ್ಗೀಥನಾಮಕನಾದ ಶ್ರೀಹರಿಯನ್ನು ಉಪಾಸಿಸಿದರೋ ಆಗ ಅಸುರರು ಆ ಮುಖ್ಯಪ್ರಾಣನನ್ನು ಕೆಡಿಸಲು ಪ್ರಯತ್ನಿಸಿದರು. ಆದರೆ ಆ ಅಸುರರೇ ಮುಖ್ಯಪ್ರಾಣನಿಂದ ನುಚ್ಚು ನೂರಾದರು. ಹೇಗೆ ತುಂಡರಿಸಲಾಗದ ಬಂಡೆಕಲ್ಲಿಗೆ ಬಡಿದ ಮಣ್ಣಿನ ಹೆಂಟೆಯು ಪುಡಿಪುಡಿ-ಯಾಗುವುದೋ ಹಾಗೆ. ಶ್ರೀವಿಷ್ಣುವಿಗೆ ಪ್ರಿಯತಮಪ್ರತಿಮೆಯಾದ ಪ್ರಾಣನನ್ನು ತಡೆಯಲು ಹೊರಟ ಅಸುರರೂ ಪುಡಿಪುಡಿಯಾದರು.

(ಉದ್ಗೀಥಾಖ್ಯಸ್ಯ ವಿಷ್ಣೋರ್ವಿಶಿಷ್ಟಪ್ರತಿಮಾ ವಾಯುರೇವ। ಅತಸ್ತಸ್ಯ ಸರ್ವೋತ್ತಮತ್ವ-ಜ್ಞಾನಪೂರ್ವಕಂ ತಸ್ಮಿಂಸ್ತತೋಽಪ್ಯುತ್ತಮತ್ವೇನೋಪಾಸಿತ ಏವ ಭಗವಾನ್ ಸಮ್ಯಕ್ ಫಲಂ ದದಾತೀತಿ ದರ್ಶಯತಿ ।– ಛಾಂದೋಗ್ಯಭಾಷ್ಯ)

## ಭಾಷ್ಯಕಾರರು ಅನುಮಾನಪ್ರಮಾಣ ಎಂಬ ವ್ಯುತ್ಪಾದನೆಯ ಪ್ರಯಾಸಬೇಕಾಗಿಲ್ಲ

(ಕುಂಡಲಗಿರೀಯ) – ತೇಜೋವಾಚೀ ಮಹಃಶಬ್ದಃ ಪ್ರಕಾಶಾರ್ಥೋಽಪಿ ಭವತೀತಿ ಮಹಃಶಬ್ದಸ್ಯ ಜ್ಞಾನಾರ್ಥತ್ವಮುಚಿತಮೇವ । ನಿಜೇನ ಮಹಸಾ ಸ್ವರೂಪಸಾಮರ್ಥ್ಯೇನ ವ್ಯಾಪ್ತಿಃ । ನಿಷ್ಠಾ ಇತ್ಯ-ಪ್ಯಾಹುಃ । ಸುಧಾಕೃತಃ ತತ್ತ್ವನಿರ್ಣಾಯಕಭಾಷ್ಯಕಾರಪ್ರಾರ್ಥನಮಪಿ ಪುತ್ರಾದ್ಯನುಗೃಹೀತಮ್ । ಭಕ್ತ್ಯಾದಿನಾ ಪ್ರಸನ್ನಸ್ಯ ಗುರೋಃ ಅರ್ಥಪ್ರಕಾಶಕತ್ವಸ್ಯ –

'ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥' ;

'ಆಚಾರ್ಯವಾನ್ ಪುರುಷೋ ವೇದ' ಇತ್ಯಾದಿಶ್ರುತ್ಯಾ ಪ್ರತಿಪಾದಿತತ್ವಾತ್ । ಅತ ಏವಾತ್ರ ಶ್ಲೋಕೇ ಅನುಮಾನಪ್ರಮಾಣಸಾಧಾರಣವ್ಯಾಪ್ತ್ಯಾದಿಪದಪ್ರಯೋಗಮಾತ್ರಸಾಮ್ಯೇನ ಭಾಷ್ಯಕಾರ-ಸ್ಯಾನುಮಾನಪ್ರಮಾಣತ್ವವ್ಯುತ್ಪಾದನಪ್ರಯಾಸೋಽಪಿ ನ ಕರ್ತವ್ಯಃ । ಉಕ್ತರೀತ್ಯೈವ ತದುಪಪತ್ತೇಃ । ಅತ ಏವಾತ್ರ ಶ್ಲೋಕೇ ಶ್ಲೇಷಲುಪ್ತೋಪಮಯೋರಂಗಾಂಗಿಭಾವೇನ ಸಂಕರಃ ।

'ಮಹಸ್' ಶಬ್ದವು ತೇಜಸ್ಸು ಎಂಬರ್ಥವನ್ನು ಹೇಳುತ್ತಿದೆ. ಆದರೂ ಪ್ರಕಾಶ ಎಂಬ ಅರ್ಥವನ್ನು ಹೇಳಬಹುದು. ಆದ್ದರಿಂದ ಮಹಸ್‌ಶಬ್ದಕ್ಕೆ ಜ್ಞಾನ ಎಂಬ ಅರ್ಥ ಉಚಿತ. ನಿಜೇನ - ತಮ್ಮ, ಮಹಸಾ - ಸ್ವರೂಪಸಾಮರ್ಥ್ಯದಿಂದ ವ್ಯಾಪ್ತಿಃ - ನಿಷ್ಠೆಯು ಎಂದು ಹೀಗೆಯೂ ಅರ್ಥವನ್ನು ಹೇಳು-ತ್ತಾರೆ. ಸುಧಾಕಾರರು ತತ್ವನಿರ್ಣಯಕಾರಣೀಭೂತರಾದ ಭಾಷ್ಯಕಾರರನ್ನು ಪ್ರಾರ್ಥನೆ ಮಾಡಿ-

ದ್ದಾರೆ. ಈ ರೀತಿಯ ಪ್ರಾರ್ಥನೆ ವೇದಸಂವಾದಿಯಾಗಿದೆ. ಅಲ್ಲದೆ ಪ್ರಾರ್ಥನೆಯು ಅರ್ಥಪ್ರಕಾಶಕವಾಗುವುದು. ಏಕೆಂದರೆ ಭಕ್ತಿಯೇ ಮೊದಲಾದವುಗಳಿಂದ ಪ್ರಸನ್ನನಾದ ಗುರುವು ಅರ್ಥವನ್ನು ಹೊಳೆಯುವಂತೆ ಮಾಡುತ್ತಾನೆ.

'ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥'

'ಆಚಾರ್ಯವಾನ್ ಪುರುಷೋ ವೇದ' - ಶಿಷ್ಯನು ಗುರುಗಳನ್ನು ಭಕ್ತಿಯಿಂದ ಸೇವಿಸಿದರೆ ಶಾಸ್ತ್ರಾರ್ಥಗಳು ಹೊಳೆಯುತ್ತವೆ - ಇತ್ಯಾದಿ ಮಾತುಗಳಿಂದ ಹಿಂದೆ ಹೇಳಿದ ಅರ್ಥವು ಸಿದ್ಧವಾಗುತ್ತದೆ.

ಹೀಗೆ ನಿರೂಪಣೆ ಮಾಡಿದ್ದರಿಂದಲೇ ಈ ಶ್ಲೋಕದಲ್ಲಿ ಅನುಮಾನಪ್ರಮಾಣಕ್ಕೆ ನೀಡಿದ ವ್ಯಾಪ್ತ್ಯಾದಿಪದಪ್ರಯೋಗಗಳ ಸಾಮ್ಯತೆಯನ್ನು ಇಟ್ಟುಕೊಂಡು ಭಾಷ್ಯಕಾರರಲ್ಲಿ ಅನುಪ್ರಮಾಣತ್ವ ಇದೆ ಉಪಪಾದನೆ ಮಾಡುವ ಪ್ರಯತ್ನವೂ ಕೂಡ ಮಾಡಬೇಕಾಗಿಲ್ಲ. ನಾವು ಹೇಳಿದಂತೆ ತತ್ವನಿರ್ಣಯಕಾರಣೀಭೂತತ್ವೇನ ಪ್ರಮಾಣದ ಸಾಮ್ಯವಷ್ಟೇ. ಆದ್ದರಿಂದಲೇ ಈ ಶ್ಲೋಕದಲ್ಲಿ ಶ್ಲೇಷಲುಪ್ತೋಪಮಾಗಳಿಗೆ ಅಂಗಾಂಗಿಭಾವವಿರುವುದರಿಂದ ಸಂಕರ.

## ಶ್ಲೇಷಾಲಂಕಾರವೆಂದರೇನು?

* – श्लेषालङ्कारः – श्लेषः नाम श्लिष्टैः पदैः अनेकार्थाभिधाने श्लेष इष्यते। अर्थात अनेकार्थवाचकं पदं श्लिष्टपदम् अस्ति। एकवारम् उच्चारितं पदम् अनेकार्थस्य वाचकं भवति। अयञ्च श्लेषालङ्कारः अष्टविधः भवति। यथा – वर्णगतः, प्रत्ययगतः, लिङ्गगतः, प्रकृतिगतः, पदगतः, विभक्तिगतः, वचनगतः, भाषागतः च इति। साहित्यदर्पणे कविराजः विश्वनाथः कारिकाम् आह-

"श्लिष्टैः पदैरनेकार्थाभिधाने श्लेष इष्यते।
वर्णप्रत्ययलिङ्गानां प्रकृत्योः पदयोरपि॥
श्लेषाद्विभक्तिवचनभाषाणामष्टधा च सः।" इति।

ಸಾಹಿತ್ಯದರ್ಪಣಗ್ರಂಥದಲ್ಲಿ ವಿಶ್ವನಾಥನು ಶ್ಲೇಷಾಲಂಕಾರದ ಬಗ್ಗೆ ಹೀಗೆ ಹೇಳಿದ್ದಾನೆ. ಶ್ಲಿಷ್ಟವಾದ ಪದಗಳಿಂದ ಅನೇಕಾರ್ಥಗಳನ್ನು ಹೇಳಿದರೆ ಶ್ಲೇಷ ಎನಿಸುತ್ತದೆ. ಅರ್ಥಾತ್ ಅನೇಕಾರ್ಥಗಳನ್ನು ಹೇಳುವ ಪದಕ್ಕೆ ಶ್ಲಿಷ್ಟಪದ ಎನ್ನುತ್ತಾರೆ. ಒಮ್ಮೆ ಉಚ್ಚರಿತವಾದ ಪದವು ಅನೇಕಾರ್ಥಗಳನ್ನು ಹೇಳುತ್ತದೆ. ಈ ಶ್ಲೇಷಾಲಂಕಾರವು ಎಂಟು ವಿಧವಾಗಿದೆ. ವರ್ಣಗತ ಪ್ರತ್ಯಯಗತ ಮುಂತಾದ ರೀತಿಯಲ್ಲಿ.

## ಪೂರ್ಣೋಪಮಾ ಎಂದರೇನು?

* – पूर्णोपमायाः लक्षणम् आह –

"सा पूर्णा यदि सामान्यधर्म औपम्यवाचि च। उपमेयं चोपमानं भवेत् वाच्यम्" ॥ इति।

अन्वयः - यदि सामान्यधर्मः औपम्यवाचिशब्दः उपमेयं उपमानं च भवेत् सा पूर्णा उपमा इति वाच्यम्।

सामान्यार्थः - यस्मिन् उपमालङ्कारे सामान्यधर्मः, औपम्यवाचिशब्दः, उपमेयम्, उपमानम् भवेत् चेत् सा पूर्णोपमा इति वक्तव्यम्। पूर्णोपमायाः चत्वारि अङ्गानि सन्ति। तानि च - १) उपमेयम्, २) उपमानम्, ३) साधारणधर्मः, ४) सादृश्यवाचकशब्दः।

ಪೂರ್ಣೋಪಮಾ ಎಂದರೆ ಯಾವ ಉಪಮಾಲಂಕಾರದಲ್ಲಿ ಸಾಮಾನ್ಯಧರ್ಮ ಔಪಮ್ಯವನ್ನು ಹೇಳುವ ಶಬ್ದ ಅಂದರೆ ಸಾದೃಶ್ಯವನ್ನು ಹೇಳುವ ಶಬ್ದ (ಇವ ಇತ್ಯಾದಿ) ಉಪಮೇಯ, ಉಪಮಾನ ಈ ರೀತಿ ನಾಲ್ಕೂ ಅಂಗಗಳು ಇರಬೇಕು.

## ಲುಪ್ತೋಪಮಾ ಎಂದರೇನು?

लुप्तोपमालङ्कारः – लुप्ता उपमा यत्र सा लुप्तोपमा। अत्र उपमाशब्देन उपमाघटकपदार्थानां (उपमानोपमेयादीनाम्) ग्रहणं भवति। लुप्तो नाम अनुलिखितः। चतुर्षु उपमाघटकपदार्थेषु एकस्य द्वयोः त्रयाणां वा अनुल्लेखः स्यात्। लुप्तोपमायाः लक्षणम् –

'लुप्ता सामान्यधर्मादेः एकस्य यदि वा द्वयोः।
त्रयाणां वानुपादाने श्रौत्यार्थी सापि पूर्ववत् ॥" इति।

अन्वयः - सामान्यधर्मादेः एकस्य द्वयोः त्रयाणां वा अनुपादाने लुप्ता। सापि पूर्ववत् श्रौत्यार्थी।

सामान्यार्थः - सामान्यधर्मः, उपमेयम्, उपमानम्, औपम्यवाचकशब्दः इति एतेषु एकस्य द्वयोः त्रयाणां वा अनुपादानं भवति चेत् सा लुप्तोपमा इति कथ्यते। अर्थात् उपमायाः चतुर्षु कस्यापि एकस्य, द्वयोः उत वा त्रयाणां अंगानां वा लोपः यत्र भवति चेत् सा लुप्तोपमा इति मन्तव्यम्। सा लुप्तोपमा द्विविधा भवति। ते च श्रौती, आर्थी इति। पूर्ववत् इत्यस्य अर्थस्तु पूर्णोपमावत् लुप्तोपमा अपि श्रौत्यार्थीभेदेन द्विविधा इति।

ಲುಪ್ತೋಪಮಾ - ಉಪಮಾವು ಎಲ್ಲಿ ಲುಪ್ತಗೊಂಡಿದೆಯೋ ಅದು ಲುಪ್ತೋಪಮಾ. ಉಪಮಾ

ಲೋಪವಾಗಿರುವುದು ಅಂದರೆ ಉಪಮಾಲಂಕಾರದಲ್ಲಿ ಪೂರ್ಣೋಪಮಾಲಂಕಾರಕ್ಕೆ ಬೇಕಾದ ನಾಲ್ಕು ಅಂಗಾಂಗಳ ಮಧ್ಯೆ ಒಂದು ಅಥವಾ ಎರಡು ಅಥವಾ ಮೂರು ಅಂಗಗಳ ಲೋಪವಾಗಿರುವುದು. ಇದು ಎರಡು ರೀತಿ ಶ್ರೌತೀ, ಆರ್ಥೀ ಎಂದು.

ಪ್ರಕೃತ 'ವ್ಯಾಪ್ತಿರ್ಯಸ್ಯ ನಿಜೇ' ಎಂಬ ಸುಧಾಶ್ಲೋಕದಲ್ಲಿ ಪೂರ್ಣೋಪಮಾ ಅಂಗವಾದ ಸಾದೃಶ್ಯವಾಚಕಶಬ್ದ ಅಂದರೆ ಇವ ಶಬ್ದ ಇಲ್ಲ. ಇನ್ನು ಪಕ್ಷೇ ವ್ಯಾಪ್ತಿಃ, ಸಪಕ್ಷೇ ಸ್ಥಿತಿಃ ಮುಂತಾದ ಪದಗಳು ಸಕೃದುಚ್ಚರಿತವಾದರೂ ಅನೇಕಾರ್ಥಬೋಧಕವಾಗಿವೆ. ಹಾಗಾಗಿ ಶ್ಲೇಷಲುಪ್ತೋಪಮಾ ಅಲಂಕಾರಗಳಿವೆ. ಇವುಗಳಲ್ಲಿ ಅಂಗಾಂಗಿಭಾವ ಇರುವುದರಿಂದ ಸಂಕರವಾಗಿದೆ.

## ಆಚಾರ್ಯವಾನ್ ಪುರುಷೋ ವೇದ

तस्य यथाऽभिहननं प्रमुच्य प्रब्रूयादेतां दिशं गन्धारा एतां दिशं व्रजेति स ग्रामाद् ग्रामं पृच्छन् पण्डितो मेधावी गन्धारानेवोपसम्पद्येतैवमेवेहाऽचार्यवान् पुरुषो वेद तस्य तावदेव चिरं यावन्न विमोक्ष्येऽथ सम्पत्स्यत इति ॥२॥

– यथा सम्यक् तद्वाक्यं श्रुत्वा कश्चित् कृपावांस्तस्याभिहननं बन्धनं प्रमुच्य मुक्त्वा ब्रूयात् । एतां दिशमस्यां दिशि गन्धाराः सन्ति । अत एतां दिशं व्रजेति । सः तेनोपदिष्टाद् ग्रामान्निर्गत्यापरं ग्रामं पृच्छन् पण्डितः प्राज्ञो मेधावी स्मृतिमान् गन्धारानेवोपसम्पद्यते पश्यति प्राप्नोति च । एवमेव अनाद्यविद्यादिभिराच्छादितनिजज्ञानः पुरुषो जीवः संसारे पतितः परमेश्वरानुग्रहाज्जातजिज्ञासः आचार्यवान् गुरूपदेशं लब्ध्वेति यावत् । क्रमापन्नानि श्रवणादीनि साधनान्यनुष्ठाय स्वजन्मभूमिं भगवन्तं वेद पश्यति प्राप्नोतीति चेत्यर्थः । (वेदेशीय)

– ಹೇಗೆ ಬಂಧಿತನಾದ ಒಬ್ಬನ ಒಳ್ಳೆಯ ಮಾತುಗಳನ್ನು ಕೇಳಿ ಯಾವನೋ ಒಬ್ಬ ಕೃಪಾಲು ಅವನನ್ನು ಬಂಧನದಿಂದ ಮುಕ್ತಿಗೊಳಿಸಿ ಹೀಗೆ ಹೇಳುತ್ತಾನೆ. 'ಈ ದಿಕ್ಕಿಗೆ ಗಾಂಧಾರದೇಶ ಇದೆ ಆ ದಿಕ್ಕಿಗೆ ಹೊರಡು' ಎಂದು. ಈ ರೀತಿ ಉಪದೇಶಪಡೆದುಕೊಂಡ ವ್ಯಕ್ತಿಯು ಗ್ರಾಮದಿಂದ ಹೊರಕ್ಕೆ ಹೋಗಿ ಇನ್ನೊಂದು ಗ್ರಾಮಕ್ಕೆ ಹೋಗುತ್ತ ಪಂಡಿತನಾಗಿ ಪ್ರಾಜ್ಞನಾಗಿ ಮೇಧಾವಿಯಾಗಿ ಒಳ್ಳೆಯ ಸ್ಮರಣಶಕ್ತಿಯನ್ನು ಹೊಂದಿದವನಾಗಿ ಗಾಂಧಾರದೇಶವನ್ನೇ ಹೊಂದುತ್ತಾನೆ. ನೋಡುತ್ತಾನೆ. ಹೀಗೆಯೇ ಅನಾದಿಯಾದ ಅವಿದ್ಯೆಯಿಂದ ಮುಚ್ಚಲ್ಪಟ್ಟ ಜ್ಞಾನವುಳ್ಳ ಜೀವನು ಸಂಸಾರದಲ್ಲಿ ಬಿದ್ದು ಪರಮೇಶ್ವರನ ಅನುಗ್ರಹದಿಂದ ಜಿಜ್ಞಾಸೆಯು ಹುಟ್ಟಿ ಗುರೂಪದೇಶವನ್ನು ಪಡೆದು ಕ್ರಮವಾಗಿ ಶ್ರವಣ, ಮನನ, ನಿದಿಧ್ಯಾಸನಗಳನ್ನು ಅನುಷ್ಠಾನಮಾಡಿ ತನ್ನ ಜನ್ಮಕ್ಕೆ ಕಾರಣನಾದ ಭಗವಂತನನ್ನು ನೋಡುತ್ತಾನೆ ಹೊಂದುತ್ತಾನೆಯೂ ಕೂಡ.

## ಪೂರ್ಣೋಪಮಾ ಎಂದರೇನು?

* – पूर्णोपमायाः लक्षणम् आह -

"सा पूर्णा यदि सामान्यधर्म औपम्यवाचि च। उपमेयं चोपमानं भवेत् वाच्यम्" ॥ इति।

अन्वयः - यदि सामान्यधर्मः औपम्यवाचिशब्दः उपमेयं उपमानं च भवेत् सा पूर्णा उपमा इति वाच्यम्।

सामान्यार्थः - यस्मिन् उपमालङ्कारे सामान्यधर्मः, औपम्यवाचिशब्दः, उपमेयम्, उपमानम् भवेत् चेत् सा पूर्णोपमा इति वक्तव्यम्। पूर्णोपमायाः चत्वारि अङ्गानि सन्ति। तानि च - १) उपमेयम्, २) उपमानम्, ३) साधारणधर्मः, ४) सादृश्यवाचकशब्दः।

ಪೂರ್ಣೋಪಮಾ ಎಂದರೆ ಯಾವ ಉಪಮಾಲಂಕಾರದಲ್ಲಿ ಸಾಮಾನ್ಯಧರ್ಮ ಔಪಮ್ಯವನ್ನು ಹೇಳುವ ಶಬ್ದ ಅಂದರೆ ಸಾದೃಶ್ಯವನ್ನು ಹೇಳುವ ಶಬ್ದ (ಇವ ಇತ್ಯಾದಿ) ಉಪಮೇಯ, ಉಪಮಾನ ಈ ರೀತಿ ನಾಲ್ಕೂ ಅಂಗಗಳು ಇರಬೇಕು.

## ಲುಪ್ತೋಪಮಾ ಎಂದರೇನು?

लुप्तोपमालङ्कारः – लुप्ता उपमा यत्र सा लुप्तोपमा। अत्र उपमाशब्देन उपमाघटकपदार्थानां (उपमानोपमेयादीनाम्) ग्रहणं भवति। लुप्तो नाम अनुलिखितः। चतुर्षु उपमाघटकपदार्थेषु एकस्य द्वयोः त्रयाणां वा अनुल्लेखः स्यात्। लुप्तोपमायाः लक्षणम् –

'लुप्ता सामान्यधर्मादेः एकस्य यदि वा द्वयोः।
त्रयाणां वानुपादाने श्रौत्यार्थी सापि पूर्ववत् ॥" इति।

अन्वयः - सामान्यधर्मादेः एकस्य द्वयोः त्रयाणां वा अनुपादाने लुप्ता। सापि पूर्ववत् श्रौत्यार्थी।

सामान्यार्थः - सामान्यधर्मः, उपमेयम्, उपमानम्, औपम्यवाचकशब्दः इति एतेषु एकस्य द्वयोः त्रयाणां वा अनुपादानं भवति चेत् सा लुप्तोपमा इति कथ्यते। अर्थात् उपमायाः चतुर्षु कस्यापि एकस्य, द्वयोः उत वा त्रयाणां अंगानां वा लोपः यत्र भवति चेत् सा लुप्तोपमा इति मन्तव्यम्। सा लुप्तोपमा द्विविधा भवति। ते च श्रौती, आर्थी इति। पूर्ववत् इत्यस्य अर्थस्तु पूर्णोपमावत् लुप्तोपमा अपि श्रौत्यार्थीभेदेन द्विविधा इति।

ಲುಪ್ತೋಪಮಾ - ಉಪಮಾವು ಎಲ್ಲಿ ಲುಪ್ತಗೊಂಡಿದೆಯೋ ಅದು ಲುಪ್ತೋಪಮಾ. ಉಪಮಾ

ಲೋಪವಾಗಿರುವುದು ಅಂದರೆ ಉಪಮಾಲಂಕಾರದಲ್ಲಿ ಪೂರ್ಣೋಪಮಾಲಂಕಾರಕ್ಕೆ ಬೇಕಾದ ನಾಲ್ಕು ಅಂಗಾಂಗಳ ಮಧ್ಯೆ ಒಂದು ಅಥವಾ ಎರಡು ಅಥವಾ ಮೂರು ಅಂಗಗಳ ಲೋಪವಾಗಿರುವುದು. ಇದು ಎರಡು ರೀತಿ ಶ್ರೌತೀ, ಆರ್ಥೀ ಎಂದು.

ಪ್ರಕೃತ 'ವ್ಯಾಪ್ತಿರ್ಯಸ್ಯ ನಿಜೇ' ಎಂಬ ಸುಧಾಶ್ಲೋಕದಲ್ಲಿ ಪೂರ್ಣೋಪಮಾ ಅಂಗವಾದ ಸಾದೃಶ್ಯ-ವಾಚಕಶಬ್ದ ಅಂದರೆ ಇವ ಶಬ್ದ ಇಲ್ಲ. ಇನ್ನು ಪಕ್ಷೇ ವ್ಯಾಪ್ತಿಃ, ಸಪಕ್ಷೇ ಸ್ಥಿತಿಃ ಮುಂತಾದ ಪದಗಳು ಸಕೃದುಚ್ಚರಿತವಾದರೂ ಅನೇಕಾರ್ಥಬೋಧಕವಾಗಿವೆ. ಹಾಗಾಗಿ ಶ್ಲೇಷಲುಪ್ತೋಪಮಾ ಅಲಂಕಾರಗಳಿವೆ. ಇವುಗಳಲ್ಲಿ ಅಂಗಾಂಗಿಭಾವ ಇರುವುದರಿಂದ ಸಂಕರವಾಗಿದೆ.

## ಆಚಾರ್ಯವಾನ್ ಪುರುಷೋ ವೇದ

तस्य यथाऽभिहननं प्रमुच्य प्रब्रूयादेतां दिशं गन्धारा एतां दिशं व्रजेति स ग्रामाद् ग्रामं पृच्छन् पण्डितो मेधावी गन्धारानेवोपसम्पद्येतैवमेवेहाऽचार्यवान् पुरुषो वेद तस्य तावदेव चिरं यावन्न विमोक्ष्येऽथ सम्पत्स्यत इति ॥२॥

– यथा सम्यक् तद्वाक्यं श्रुत्वा कश्चित् कृपावांस्तस्याभिहननं बन्धनं प्रमुच्य मुक्त्वा ब्रूयात् । एतां दिशमस्यां दिशि गन्धाराः सन्ति । अत एतां दिशं व्रजेति । सः तेनोपदिष्टाद् ग्रामान्निर्गत्यापरं ग्रामं पृच्छन् पण्डितः प्राज्ञो मेधावी स्मृतिमान् गन्धारानेवोपसम्पद्यते पश्यति प्राप्नोति च । एवमेव अनाद्यविद्यादिभिराच्छादितनिजज्ञानः पुरुषो जीवः संसारे पतितः परमेश्वरानुग्रहाज्जातजिज्ञासः आचार्यवान् गुरूपदेशं लब्ध्वेति यावत् । क्रमापन्नानि श्रवणादीनि साधनान्यनुष्ठाय स्वजन्मभूमिं भगवन्तं वेद पश्यति प्राप्नोतीति चेत्यर्थः । (वेदेशीय)

– ಹೇಗೆ ಬಂಧಿತನಾದ ಒಬ್ಬನ ಒಳ್ಳೆಯ ಮಾತುಗಳನ್ನು ಕೇಳಿ ಯಾವನೋ ಒಬ್ಬ ಕೃಪಾಲು ಅವನನ್ನು ಬಂಧನದಿಂದ ಮುಕ್ತಿಗೊಳಿಸಿ ಹೀಗೆ ಹೇಳುತ್ತಾನೆ. 'ಈ ದಿಕ್ಕಿಗೆ ಗಾಂಧಾರದೇಶ ಇದೆ ಆ ದಿಕ್ಕಿಗೆ ಹೊರಡು' ಎಂದು. ಈ ರೀತಿ ಉಪದೇಶಪಡೆದುಕೊಂಡ ವ್ಯಕ್ತಿಯು ಗ್ರಾಮದಿಂದ ಹೊರಕ್ಕೆ ಹೋಗಿ ಇನ್ನೊಂದು ಗ್ರಾಮಕ್ಕೆ ಹೋಗುತ್ತ ಪಂಡಿತನಾಗಿ ಪ್ರಾಜ್ಞನಾಗಿ ಮೇಧಾವಿಯಾಗಿ ಒಳ್ಳೆಯ ಸ್ಮರಣಶಕ್ತಿಯನ್ನು ಹೊಂದಿದವನಾಗಿ ಗಾಂಧಾರದೇಶವನ್ನೇ ಹೊಂದುತ್ತಾನೆ. ನೋಡುತ್ತಾನೆ. ಹೀಗೆಯೇ ಅನಾದಿಯಾದ ಅವಿದ್ಯೆಯಿಂದ ಮುಚ್ಚಲ್ಪಟ್ಟ ಜ್ಞಾನವುಳ್ಳ ಜೀವನು ಸಂಸಾರದಲ್ಲಿ ಬಿದ್ದು ಪರಮೇಶ್ವರನ ಅನುಗ್ರಹದಿಂದ ಜಿಜ್ಞಾಸೆಯು ಹುಟ್ಟಿ ಗುರೂಪದೇಶವನ್ನು ಪಡೆದು ಕ್ರಮವಾಗಿ ಶ್ರವಣ, ಮನನ, ನಿದಿಧ್ಯಾಸನಗಳನ್ನು ಅನುಷ್ಠಾನಮಾಡಿ ತನ್ನ ಜನ್ಮಕ್ಕೆ ಕಾರಣನಾದ ಭಗವಂತನನ್ನು ನೋಡುತ್ತಾನೆ ಹೊಂದುತ್ತಾನೆಯೂ ಕೂಡ.

## ನಿರ್ಣಾಯಕಗ್ರಂಥ, ನಿರ್ಣಯಕರಣಯುಕ್ತಿ ಹಾಗೂ ನಿರ್ಣಯ

(ವಿಟ್ಠಲಭಟ್ಟೀಯ) – ನಿರ್ಣಾಯಕಗ್ರಂಥಮಾರಭಮಾಣೋ ನಿರ್ಣಯಕರಣಯುಕ್ತಿರೂಪ-ಪ್ರಮಾಣಸಾವೃತ್ಯಂ ವದನ್ ನಿರ್ಣಯಾಯ ಪ್ರಾರ್ಥಯತೇ – ವ್ಯಾಪ್ತಿರಿತಿ ॥ ಅತ್ರ ಪಕ್ಷಶಬ್ದೇನ ನಿರ್ಣೇತವ್ಯತ್ವೇನ ಪ್ರಕೃತತ್ವಾದ್ ವೇದಾಃ ಗೃಹ್ಯಂತೇ । 'ನಿಜೇ' ಇತ್ಯನೇನ ಪರೇಷಾಮ್ ಅಪ-ವ್ಯಾಖ್ಯಾಕರ್ತೃತ್ವೇನ ತದೀಯತ್ವಂ ವ್ಯಾವರ್ತಯತಿ । ತತ್ರ ವ್ಯಾಪ್ತಿರ್ನಾಮ ಪಾಠೋಽರ್ಥಜ್ಞಾನಂ ಪ್ರತಿಪಾದನಸಾಮರ್ಥ್ಯಂ ವಾಽನಂತವೇದಾನಾಮಪಿ । ನಿಜೇನ ಮಹಸಾ ಸ್ವಪ್ರತಿಭಯೈವ । ಸಪಕ್ಷಶಬ್ದೇನ ಭಗವತ್ಪರತಯಾ ನಿರ್ಣೀತಾಃ ಪಂಚರಾತ್ರಾದ್ಯಾಃ ಗೃಹ್ಯಂತೇ । ಸ್ಥಿತಿಶಬ್ದಾರ್ಥಃ ಪೂರ್ವವದನುತ್ಪನ್ನಗ್ರಂಥಪಾಠಾಭಾವೇನ ವ್ಯಾಪ್ತಿರಿತಿ ನೋಕ್ತಮ್ । ವಿಪಕ್ಷಶಬ್ದೇನ ಶೈವಾದ್ಯಾ-ಗಮಾಃ । ಬಾಧಿತೇ ವಿಷಯೇ ಸಕ್ತಿರ್ನಾಸ್ತಿ ವಿಷ್ಣುಸರ್ವೋತ್ತಮತ್ವಸ್ಯಾಬಾಧಿತತ್ವಾತ್ । ವೈ ಇತ್ಯನೇನಾಚಾರ್ಯಾಣಾಂ ಅದೃಷ್ಟಬುದ್ಧಿತ್ವಂ ಶ್ರುತ್ಯಾದಿಸಿದ್ಧಮಿತಿ ಸೂಚಯತಿ । ಪ್ರತಿಪಕ್ಷಯುಕ್ತಿಃ ಪ್ರತಿವಾದಿಯೋಗಃ ನೈವಾಸ್ತಿ । 'ಏವ' ಇತಿ ಸರ್ವಾತ್ಮನಾ ಪ್ರತಿಪಕ್ಷಾಭಾವಂ ಸೂಚಯತಿ । ಅತ ಏವ **ಅತುಲಮ್** । ಅಥವಾ ವ್ಯಾಪ್ತಿರಿತ್ಯಾದೌ ಸರ್ವತ್ರ 'ಏವ'ಶಬ್ದಃ ಸಂಬಧ್ಯತೇ । ತೇನ ಭಾಗಾಸಿದ್ಧ್ಯಾದಿಶಂಕಾಕಲಂಕರಹಿತಮಿತಿ ಲಕ್ಷ್ಯತೇ । ಅತ ಏವಾತುಲಂ **ಶುದ್ಧಂ** ಚ । **ಪ್ರಮಾಣಂ** = ಪರತತ್ವಾದಿಪ್ರಮಾಂ ಪ್ರತಿ ಕಾರಣಮ್ । ಇತ್ಥಂ ತದುಪಾಸ್ತ್ಯಾವೇವ ಪ್ರಸಾದಾತ್ ತತ್ತ್ವ-ನಿರ್ಣಯೋ ಭವತಿ ।

ಟೀಕಾಚಾರ್ಯರು ನಿರ್ಣಾಯಕಗ್ರಂಥವನ್ನು ಆರಂಭಿಸುತ್ತಿದ್ದಾರೆ. ಅದಕ್ಕಾಗಿ ನಿರ್ಣಯವನ್ನು ಉಂಟುಮಾಡುವ ಯುಕ್ತಿಗಳು ಬೇಕು. ಆ ಯುಕ್ತಿಗಳಿಗೆ ಹೋಲುವ ಆಚಾರ್ಯರನ್ನು ನಿರ್ಣಯ-ಕ್ಕೋಸ್ಕರ ಪ್ರಾರ್ಥಿಸುತ್ತಿದ್ದಾರೆ – ವ್ಯಾಪ್ತಿಃ ಎಂದು. ಇಲ್ಲಿ ಪಕ್ಷ ಎಂಬ ಶಬ್ದದಿಂದ ನಿರ್ಣಯಿಸಬೇಕಾದ ವೇದಗಳನ್ನು ಗ್ರಹಿಸಬೇಕು. 'ನಿಜೇ' ಎನ್ನುವುದರಿಂದ ಬೇರೆಯವರು ಅಪವ್ಯಾಖ್ಯಾನ-ಮಾಡುವುದರಿಂದ ಅವರ ಪಕ್ಷವನ್ನು ವ್ಯಾವೃತ್ತಿಗೊಳಿಸುತ್ತಿದ್ದಾರೆ. 'ನಿಜೇ ಪಕ್ಷೇ ವ್ಯಾಪ್ತಿಃ' ಎಂಬಲ್ಲಿ 'ವ್ಯಾಪ್ತಿಃ' ಎಂದರೆ ಪಾಠ. ಅರ್ಥಜ್ಞಾನ ಅಥವಾ ಪ್ರತಿಪಾದನಸಾಮರ್ಥ್ಯ ಎಂದು. ಅನಂತ-ವೇದಗಳನ್ನು ಹೇಳಲು ಶಕ್ತಿ ಇರುವ ತಿಳಿಯಲು ಶಕ್ತಿ ಇರುವ ವ್ಯಾಖ್ಯಾನಮಾಡಲು ಸಾಮರ್ಥ್ಯ-ವಿರುವವರು ಎಂದರ್ಥ.

'ನಿಜೇನ ಮಹಸಾ' ತಮ್ಮ ಪ್ರತಿಭೆಯಿಂದಲೇ ಎಂದರ್ಥ. 'ಸಪಕ್ಷ' ಎಂಬ ಶಬ್ದದಿಂದ ಭಗವಂತನ ಪರವಾಗಿರುವ ಈಗಾಗಲೇ ನಿರ್ಣಯವಾಗಿರುವ ಅರ್ಥಗಳುಳ್ಳ ಪಂಚರಾತ್ರಾದಿಗಳನ್ನು ಗ್ರಹಿಸಬೇಕು. ..... 'ವಿಪಕ್ಷೇ' ಎಂಬ ಶಬ್ದದಿಂದ ಶೈವಾದ್ಯಾಗಮಗಳನ್ನು ತೆಗೆದುಕೊಳ್ಳಬೇಕು. ಬಾಧಿತವಿಷಯದಲ್ಲಿ ಆಸಕ್ತಿಯು ಇಲ್ಲ. ಏಕೆಂದರೆ ವಿಷ್ಣುಸರ್ವೋತ್ತಮತ್ವಪ್ರಮೇಯವು ಅಬಾಧಿತ-

ವಾದ್ದರಿಂದ ಅದರಲ್ಲೇ ಅಸಕ್ತಿ ಅನ್ಯತ್ರ ಬಾಧಿತವಾದುದರಲ್ಲಿ ಇಲ್ಲ ಎಂದರ್ಥ. 'ವೈ' ಎನ್ನುವ ಶಬ್ದದಿಂದ ಆಚಾರ್ಯರಲ್ಲಿರುವ ಅದ್ಯಷ್ಟಬುದ್ಧಿತ್ವ, ವೇದ ಮೊದಲಾದ ಪ್ರಮಾಣಗಳಿಂದ ಸಿದ್ಧ ಎಂದು ಸೂಚನೆ ಮಾಡಲ್ಪಟ್ಟಿದೆ. 'ಪ್ರತಿಪಕ್ಷಯುಕ್ತಿಃ ನ ವೈ' ಪ್ರತಿವಾದಿಗಳ ಸಂಬಂಧ ಇಲ್ಲವೇ ಇಲ್ಲ. ಇಲ್ಲಿ 'ಏವ'ಕಾರದ ಅರ್ಥದಲ್ಲಿರುವ 'ವೈ' ಎಂಬ ಶಬ್ದದಿಂದ ಎಂದಿಗೂ ಪ್ರತಿಪಕ್ಷ ಇಲ್ಲದಿರುವವರು ಎಂದು ಸೂಚಿಸಲ್ಪಟ್ಟಿದೆ. ಆದ್ದರಿಂದಲೇ ಅತುಲವಾಗಿದೆ ಆಚಾರ್ಯರೆಂಬ ಪ್ರಮಾಣ.

ಅಥವಾ – ವ್ಯಾಪ್ತಿಃ ಮುಂತಾದ ಎಲ್ಲ ಕಡೆ ಏವ ಎಂಬ ಶಬ್ದವನ್ನು ಅನ್ವಯಿಸಿಕೊಳ್ಳಬೇಕು. ಇದರಿಂದ ಭಾಗಾಸಿದ್ಧಿ ಮೊದಲಾದ ದೋಷಗಳು ಇಲ್ಲ ಎಂದಾಗುವುದು. ಆದ್ದರಿಂದಲೇ ಅತುಲವಾದ ಪ್ರಮಾಣ ಹಾಗೂ ಶುದ್ಧವಾದ ಪ್ರಮಾಣವಾಗಿದೆ. ಪ್ರಮಾಣ ಎಂದರೇನು? ಪ್ರಮಾಣ ಎಂದರೆ ಪರತತ್ವ-ಅಪರತತ್ವ ಮೊದಲಾದವುಗಳ ಯಥಾರ್ಥಜ್ಞಾನಕ್ಕೆ ಕಾರಣವಾಗುವುದು. ಇಂತಹ ಆಚಾರ್ಯರ ಉಪಾಸನೆ ಮಾಡಿದಾಗ ಮಾತ್ರ ಅವರ ಪ್ರಸಾದವಾಗುತ್ತದೆ. ಅದರ ಮೂಲಕ ತತ್ವನಿರ್ಣಯವಾಗುವುದು.

## ಭಗವಂತನ ದಾಸಶ್ರೇಷ್ಠನಾದ ಸರ್ವವೇದ-ಮುಖ್ಯಾಭಿಮಾನಿಯಾದ ಪ್ರಾಣದೇವ

(ರಸರಂಜನೀ) – ಅಧುನಾ ನ ಕೇವಲಂ ವ್ಯಾಸರೂಪೀ ವಾಸುದೇವ ಏವ ಸ್ವದಾಸಾನಾಂ ವೇದವಾಕ್ಯೈಃ ಮಿಥ್ಯಾಜ್ಞಾನಾದಿಪರಿಹಾರೇಣ ಮನಸಾ ಶ್ರೀಹರಿತತ್ತ್ವಪ್ರಕಾಶಕಃ, ಕಿಂತು ತದ್ದಾಸೋತ್ತಮಃ ಸರ್ವವೇದಮುಖ್ಯಾಭಿಮಾನೀ ಪ್ರಾಣನಾಯಕೋಽಪಿ । ತತೋ ವೇದ-ವಿಚಾರಪರೈರ್ಮುಮುಕ್ಷುಭಿರವಶ್ಯಮುಪಾಸ್ಯ ಇತ್ಯೇಥಮರ್ಥಂ ಪಾಶುಪತಾದಿಪರಿತ್ಯಾಗೇನ ವೇದ-ಜನ್ಯಜ್ಞಾನಸ್ಯ ಪ್ರಾರ್ಥನೀಯತ್ವೇ ತತೋ ವಿಶೇಷಂ ಚ ಸೂಚಯನ್ ಗುರುಂ ಶ್ರೀಮದಾ-ನಂದತೀರ್ಥಂ ಪರಮಪುರುಷಾರ್ಥಮರ್ಥಯತೇ – ವ್ಯಾಪ್ತಿರಿತಿ ॥ **'ಯಸ್ಯ ವ್ಯಾಪ್ತ್ಯಾದಿ ಯಚ್ಚಾತುಲಂ ಶುದ್ಧಂ ಪ್ರಮಾಣಂ ಸ ಆನಂದತೀರ್ಥಃ ತತ್ತ್ವವಿನಿರ್ಣಯಾಯ ಭೂಯಾತ್'** ಇತಿ ಯೋಜನಾ । ಯಸ್ಯ ವೇದರೂಪಪ್ರಮಾಣಸ್ಯ ಪಕ್ಷೇ ಸಾಧ್ಯೇ ವಸ್ತುತಃ ಸಕಲಗುಣ-ಪೂರ್ಣತ್ವನಿರ್ದೋಷತ್ವಾದಿನಾ ಸ್ವಜ್ಞಾಪನೀಯೇ ಹರೌ ವ್ಯಾಪ್ತಿರ್ವ್ಯಾಪನಂ ಮಹಾ-ತಾತ್ಪರ್ಯಮ್ । ಅಶೇಷತೋಽಪಿ ವಾಕ್ಯೈಃ ತತ್ಪ್ರತಿಪಾದಕತ್ವಂ ವಾಽಸ್ತಿ । ಕಿಂ ಮಾಯಿವ-ಲ್ಲಕ್ಷಣಯಾ,, ನೇತ್ಯಾಹ । ನಿಜೇನ ಮಹಸಾ ಔತ್ಪತ್ತಿಕೇನ ಸಾಮರ್ಥ್ಯೇನ ಶಕ್ತ್ಯೇತಿ । 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ' ಇತಿ ಜೈಮಿನ್ಯುಕ್ತೇಃ । ತರ್ಹಿ ಧರ್ಮಾದೇಃ ದತ್ತಜಲಾಂಜಲಿತಾ ।

ಇಷ್ಟುರವರೆಗೆ ವೇದವ್ಯಾಸರೂಪಿಯಾದ ಭಗವಂತನನ್ನು ಪ್ರಾರ್ಥನೆ ಮಾಡಿದರು. ಏಕೆಂದರೆ ಆ ವೇದವ್ಯಾಸರು ತನ್ನ ಭಕ್ತರಿಗೆ ಮಿಥ್ಯಾಜ್ಞಾನಾದಿದೋಷಗಳನ್ನು ಪರಿಹರಿಸಿ ವೇದವಾಕ್ಯಗಳಿಂದ ಹರಿಯ ತತ್ವವನ್ನು ಭಕ್ತರ ಮನಸ್ಸಿನಲ್ಲಿ ಪ್ರಕಾಶಪಡಿಸುತ್ತಾರೆ. ಈ ಕಾರ್ಯವು ವೇದವ್ಯಾಸರಿಂದ

ಹೇಗೆ ಆಗುವುದೋ ಅದೇ ರೀತಿ ಅವರ ದಾಸಶ್ರೇಷ್ಠರಾದ ಸರ್ವವೇದಗಳಿಗೆ ಮುಖ್ಯಾಭಿಮಾನಿ-ಯಾದ ಪ್ರಾಣದೇವರಿಂದಲೂ ಆಗುವುದು. ಅದಕ್ಕಾಗಿ ವೇದವಿಚಾರವನ್ನು ಮಾಡಲು ಹೊರಟ ಮೋಕ್ಷೇಚ್ಛೆ ಇರುವ ಜೀವಿಗಳು ಇವರ ಉಪಾಸನೆಯನ್ನೂ ಅವಶ್ಯವಾಗಿ ಮಾಡಬೇಕು. ಹಾಗಾಗಿ ಇಲ್ಲಿ 'ಪಾಶುಪತ ಮುಂತಾದ ಆಗಮಗಳನ್ನು ಪರಿತ್ಯಜಿಸಿ ವೇದದಿಂದುಂಟಾಗುವ ಜ್ಞಾನವನ್ನು ಕೊಡಿ' ಎಂದು ಪ್ರಾರ್ಥಿಸಬೇಕು. ಇಂತಹ ಜ್ಞಾನಕ್ಕಾಗಿ ಅವರಲ್ಲಿರುವ ವಿಶೇಷತೆಯನ್ನು ಸೂಚಿಸುತ್ತ ಶ್ರೀಮದಾನಂದತೀರ್ಥರನ್ನು ಪ್ರಾರ್ಥಿಸುತ್ತಿದ್ದಾರೆ - ವ್ಯಾಪ್ತಿಃ ಎಂದು.

ಯಾವ ಪ್ರಮಾಣವು ವ್ಯಾಪ್ತಿ ಮೊದಲಾದ ಅಂಗಗಳಿಂದ ಕೂಡಿ ಅತುಲವಾಗಿದೆಯೋ ಶುದ್ಧ-ವಾಗಿದೆಯೋ ಅಂತಹ ಪ್ರಮಾಣವೆಂದರೆ ಅನಂದತೀರ್ಥರೇ. ಇವರು ನನ್ನ ತತ್ವನಿರ್ಣಯಕ್ಕೆ ಕಾರಣರಾಗಲಿ ಎಂದು ಯೋಜನೆ.

**ಯಸ್ಯ ಪಕ್ಷೇ ವ್ಯಾಪ್ತಿಃ** ಎನ್ನುವುದಕ್ಕೆ ವಿವರಣೆ — ಯಸ್ಯ ಎಂದರೆ ವೇದವೆಂಬ ಪ್ರಮಾಣ. ಇದರಿಂದ ತಿಳಿಯಲ್ಪಡುವವನು ಸಕಲಗುಣಪರಿಪೂರ್ಣನಾದ ಸಕಲದೋಷವಿದೂರನಾದ ಹರಿಯು. ಇಂತಹ ಹರಿಯು ಇಲ್ಲಿ ಸಾಧ್ಯ. ಇವನಲ್ಲಿಯೇ ಇಡೀ ವೇದಕ್ಕೆ ವ್ಯಾಪ್ತಿಯಿದೆ ಅಂದರೆ ವೇದದ ಮಹಾತಾತ್ಪರ್ಯಕ್ಕೆ ವಿಷಯನಾದವನು ಇಂತಹ ಹರಿ. ಅಥವಾ ಎಲ್ಲ ವೇದವಾಕ್ಯಗಳೂ ಆ ಹರಿಯನ್ನು ಪ್ರತಿಪಾದಿಸುತ್ತಿವೆ ಎಂದರ್ಥ. ಪ್ರತಿಪಾದನೆಯಾದರೋ ಯಾವ ವೃತ್ತಿಯಿಂದ. ಲಕ್ಷಣಾವೃತ್ತಿಯಿಂದಲೋ ಶಕ್ತಿವೃತ್ತಿಯಿಂದಲೋ ಎಂದು ಸಂಶಯ. ಮಾಯಾವಾದಿಗಳಂತೆ ದ್ವೈತಿಗಳು ಲಕ್ಷಣಾವೃತ್ತಿಯಿಂದ ಎಂದು ಹೇಳುವುದಿಲ್ಲ. ಹೊರತು ಶಕ್ತಿವೃತ್ತಿಯಿಂದಲೇ ಎಂದು ಹೇಳುತ್ತಾರೆ. ಈ ಅಂಶವನ್ನು 'ನಿಜೇನ ಮಹಸಾ' ಎಂಬುದರಿಂದ ತಿಳಿಸಿದ್ದಾರೆ. 'ನಿಜೇನ ಮಹಸಾ' ಎಂದರೆ ಸಹಜವಾದ ಸಾಮರ್ಥ್ಯದಿಂದ. ಇದನ್ನು ಜೈಮಿನಿಋಷಿಗಳು —

'ಔತ್ಪತ್ತಿಕಸ್ತು ಶಬ್ದಸ್ಯ ಅರ್ಥೇನ ಸಂಬಂಧಃ । ತಸ್ಯ ಜ್ಞಾನಮುಪದೇಶಃ । ಅವ್ಯತಿರೇಕಶ್ಚಾನುಪಲಬ್ಧೇ ತತ್ಪ್ರಾಮಾಣ್ಯಂ ಬಾದರಾಯಣಸ್ಯ ಅನಪೇಕ್ಷತ್ವಾತ್ ।' (1-1-5)

ತಿಳಿಸಿದ್ದಾರೆ. ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧವು ಸ್ವಾಭಾವಿಕ ಎಂದು ಈ ಸೂತ್ರದಲ್ಲಿ ತಿಳಿಸಿದ್ದಾರೆ. ಹಾಗಾದರೆ ಎಲ್ಲ ವೇದವಾಕ್ಯಗಳೂ ಭಗವಂತನನ್ನು ಹೇಳಿದರೆ ಧರ್ಮಾದಿಗಳಿಗೆ ಜಲಾಂಜಲಿಯನ್ನು(ತರ್ಪಣವನ್ನು) ಕೊಟ್ಟಂತೆ ಆಯಿತು. ಅರ್ಥಾತ್ ಯಾವುದೇ ವಾಕ್ಯಗಳೂ ಧರ್ಮಾದಿಗಳನ್ನು ಹೇಳಲಿಲ್ಲವೆಂದಾದರೆ ಧರ್ಮಾದಿಗಳೇ ಇಲ್ಲವೆಂದಾಗುವುದು.

## ಔತ್ಪತ್ತಿಕಸ್ತು ಶಬ್ದಸ್ಯ ... ಜೈಮಿನಿಸೂತ್ರಾರ್ಥ

** ಔತ್ಪತ್ತಿಕಸ್ತು ಶಬ್ದಸ್ಯ -ಸೂತ್ರಾರ್ಥಸ್ತು ಶಬ್ದಸ್ಯ ಅರ್ಥೇನ ಸಂಬಂಧಃ ಔತ್ಪತ್ತಿಕಃ = ಸ್ವಾಭಾವಿಕಃ.

ಉಪದೇಶಃ = ವೇದಾತ್ಮಾ, ತಸ್ಯ ಜ್ಞಾನಂ = ಜ್ಞಾಪಕಃ, ಅವ್ಯತಿರೇಕಃ = ವಿಪರ್ಯಯಾಜನಕಃ, ಚಶಬ್ದಾತ್ ಸಂಶಯಾಜನಕಶ್ಚ। ಬೋಧಕತ್ವೇ ಸತಿ ಸಂಶಯವಿಪರ್ಯಯಾಜನಕ ಇತಿ ಯಾವತ್ । ತತ್ = ತಸ್ಮಾತ್ । ಅನುಪಲಬ್ಧೇಃ = ಮಾನಾಂತರಾನವಗತೇಽರ್ಥೇ, ಪ್ರಮಾಣಂ ಅನಪೇಕ್ಷತ್ವಾತ್ = ಅನ್ಯಾನಪೇಕ್ಷತ್ವಾದಿತಿ । ಬಾದರಾಯಣಗ್ರಹಣಂ ಪೂಜಾರ್ಥಮ್ । (ಜಿಜ್ಞಾಸಾಧಿಕರಣ - ಪರಿಮಳ)

— ಶಬ್ದಾರ್ಥಗಳಿಗಿರುವ ಸಂಬಂಧ ಸ್ವಾಭಾವಿಕ. ಆದ್ದರಿಂದ ವೇದವಾಕ್ಯಗಳು ಆ ಸಂಬಂಧಕ್ಕೆ ಜ್ಞಾಪಕವಾಗಿವೆಯಷ್ಟೆ. ಹಾಗಾಗಿ ವೇದಶ್ರವಣ ಮಾಡಿದಾಗ ಅದರಿಂದ ಬರುವ ಜ್ಞಾನವು ಸಂಶಯ ವಿಪರೀತಜ್ಞಾನ ಅದಿಲ್ಲದಿದ್ದರೆ ಪ್ರಮಾಣಾಂತರದಿಂದ ಆ ಅರ್ಥಜ್ಞಾನವು ಅಸಂಭಾವಿತವಾಗಿದ್ದಲ್ಲಿ ಸ್ವತಃಪ್ರಮಾಣವಾಗಿಯೇ ಬರುವುದು. ಸೂತ್ರದಲ್ಲಿ ಬಾದರಾಯಣರನ್ನು ಗ್ರಹಣಮಾಡಿದ್ದು ಗೌರವ-ಸೂಚನೆಗಾಗಿ.

## ಸಪಕ್ಷೇ ಸ್ಥಿತಿಃ, ನಿಜೇನ ಮಹಸಾ, ನಿಜೇ ಪಕ್ಷೇ ಎಂದರೇನು?

(ರಸರಂಜನೀ) — ಯದಿ ತತ್ಪ್ರತಿಪಾದಕತ್ವಮಪಿ ತದಾ ಸಾಮ್ಯಪ್ರಸಕ್ತಿರಿತ್ಯತ ಉಕ್ತಮ್ — ಸಪಕ್ಷೇ ಧರ್ಮಾದೌ ಸ್ಥಿತಿರವಾಂತರಂ ತತ್ಪರತ್ವಮೇಕದೇಶತಸ್ತತ್ಪ್ರತಿಪಾದಕತ್ವಂ ವಾ ನ ಪುನರ್ವ್ಯಾಪ್ತಿರಿತಿ । ಕಿಂ ಲಕ್ಷಣಯಾ, ನೇತ್ಯಾಹ — ನಿಜೇನ ಮಹಸೇತಿ ॥ ತಥಾತ್ವೇಽನೇಕಾರ್ಥತ್ವಪ್ರಸಂಗ ಇತಿ ಚೇತ್ । ಸ್ಯಾದಯಂ ಪ್ರಸಂಗೋ ಯದಿ ದ್ವಯೋರಪಿ ಸಾಮ್ಯೇನ ಪ್ರತಿಪಾದ್ಯತ್ವಮುರರೀ-ಕುರ್ಮಃ । ನ ಚೈವಮ್ । ಕಿಂ ನಾಮ ಹರೇಃ ಪರಮಮುಖ್ಯಯಾ ವೃತ್ತ್ಯಾ ಅನ್ಯಸ್ಯ ತು ಮುಖ್ಯಯಾ । ಅತಃ ಕ್ವಾತಿಪ್ರಸಂಗಾವಕಾಶ ಇತ್ಯಾಶಯೇನೋಕ್ತಂ – ನಿಜೇ ಪರಮಮುಖ್ಯೇ ಪಕ್ಷ ಇತಿ ॥ ಸಮಾನೇಽನುಕೂಲೇ ಶ್ರೀಹರಿಪ್ರತಿಪತ್ತಿಸಾಧನಭೂತೇ ಪಕ್ಷೇ ಸಾಧ್ಯೇ ಸ್ವವಿಷಯ ಇತಿ ಚ ।

ಇಲ್ಲ; ಧರ್ಮಾದಿಗಳನ್ನು ವೇದವಾಕ್ಯಗಳು ಹೇಳುತ್ತಿವೆ ಎಂದೊಪ್ಪೋಣ. ಆದರೆ ಈ ಪಕ್ಷದಲ್ಲಿ ಧರ್ಮಾದಿಗಳಿಗೂ ಭಗವಂತನಿಗೂ ಸಮಾನತೆಯು ಬಂತು. ಇದರ ಪರಿಹಾರಕ್ಕೋಸ್ಕರ 'ಸಪಕ್ಷೇ ಸ್ಥಿತಿಃ' ಎಂದಿದ್ದಾರೆ. ಸಪಕ್ಷೇ ಎಂದರೆ ಧರ್ಮಾದಿಗಳು, ಅವುಗಳಲ್ಲಿ ಸ್ಥಿತಿ ಎಂದರೆ ಅವಾಂತರ-ತಾತ್ಪರ್ಯ. ಅಥವಾ ಏಕದೇಶತಃ ವೇದಪ್ರತಿಪಾದ್ಯತ್ವ ಅವುಗಳಲ್ಲಿ ಇದೆ ಎಂದರ್ಥ. ಹೊರತಾಗಿ ಭಗವಂತನಲ್ಲಿ ವೇದವಾಕ್ಯಗಳಿಗೆ ವ್ಯಾಪ್ತಿ ಇರುವಂತೆ ಅಲ್ಲ. ಇಷ್ಟಾದರೂ ವೇದವಾಕ್ಯಗಳು ಧರ್ಮಾದಿಗಳನ್ನು ಲಕ್ಷಣಾವೃತ್ತಿಯಿಂದ ಹೇಳುತ್ತಿವೆಯೋ ಅಥವಾ ಅಭಿಧಾವೃತ್ತಿಯಿಂದಲೋ ಎಂಬ ಸಂಶಯ ಬರುತ್ತದೆ.

ಉತ್ತರ - ಲಕ್ಷಣಾವೃತ್ತಿಯಿಂದಲ್ಲ ಎಂಬ ಅಭಿಪ್ರಾಯದಿಂದ 'ನಿಜೇನ ಮಹಸಾ' ಎಂದಿದ್ದಾರೆ.

ಸ್ವಾಭಾವಿಕವಾದ ಸಂಬಂಧವಿದೆ ಎಂದು ಹಿಂದೆ ಹೇಳಿದ್ದರಿಂದ ಅಭಿಧಾವೃತ್ತಿಯಿಂದಲೇ ಧರ್ಮಾದಿಗಳು ಪ್ರತಿಪಾದ್ಯ. ಹಾಗಾದರೆ ಒಂದೇ ಶಬ್ದಕ್ಕೆ ಅನೇಕಾರ್ಥತ್ವಪ್ರಸಂಗ ಬರುತ್ತದೆ ಅಂದರೆ ಇಲ್ಲ. ನೀವು ಹೇಳಿದಂತೆ ಒಂದು ವೇಳೆ ಭಗವಂತನನ್ನೂ ಹಾಗೂ ಧರ್ಮಾದಿಗಳನ್ನೂ ಸಮಾನವಾಗಿ ಶಬ್ದಗಳು ಪ್ರತಿಪಾದನೆ ಮಾಡುತ್ತಿವೆ ಎಂದಾದರೆ ಆಗ ಒಪ್ಪೋಣ. ಆದರೆ ಹಾಗಲ್ಲ. ಕಿಂತು ಹರಿಯನ್ನು ಪರಮಮುಖ್ಯವೃತ್ತಿಯಿಂದ ಶಬ್ದಗಳು ಪ್ರತಿಪಾದನೆ ಮಾಡುತ್ತವೆ. ಧರ್ಮಾದಿ-ಗಳನ್ನು ಮುಖ್ಯವೃತ್ತಿಯಿಂದ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಅತಿಪ್ರಸಂಗಕ್ಕೆ ಅವಕಾಶವಿಲ್ಲ ಎಂಬ ಅಭಿಪ್ರಾಯದಿಂದ 'ನಿಜೇ ಪಕ್ಷೇ' ಎಂದರೆ ಪರಮಮುಖ್ಯವಾದ ಪಕ್ಷ ಎಂದರ್ಥ.
ಸಪಕ್ಷ ಎಂದರೆ ಸಮಾನವಾದ ಅಂದರೆ ಅನುಕೂಲವಾದ ಶ್ರೀಹರಿಜ್ಞಾನಕ್ಕೆ ಸಾಧನಭೂತವಾದ ಪಕ್ಷದಲ್ಲಿ ಎಂದರ್ಥ.

## ಜನಿತೋತ ವಿಷ್ಣೋಃ - ವಿಷ್ಣುವಿಗೆ ತಂದೆಯಿದ್ದಾನೆಯೇ?

(ರಸರಂಜನೀ) — ಸಕಲಗುಣಪೂರ್ಣತ್ವನಿರ್ದೋಷತ್ವಾದಿಮದ್ಭಗವದಾವೇದಕೋ ವೇದ ಇತ್ಯಯುಕ್ತಮ್ । 'ಜನಿತೋತ ವಿಷ್ಣೋಃ' ಇತ್ಯಾದೌ ಜನ್ಮಾದಿದೋಷಪ್ರತಿಪಾದನಾದಿತ್ಯತ ಉಕ್ತಂ ವಿಪಕ್ಷತಉಕ್ತಪಕ್ಷಶಬ್ದಾರ್ಥವಿರುದ್ಧಾತ್ ಸದೋಷಾದ್ವಸ್ತುನೋ ವ್ಯಾವೃತ್ತಿರಸಂಬಂಧಸ್ತತ್ಪ್ರತಿಪಾದ-ಕತ್ವಾಭಾವ ಇತಿ । ತತ್ಕುತ ಇತ್ಯತೋ ಯಚ್ಚ ಪ್ರಮಾಣಮಿತಿ ಹೇತುಗರ್ಭಂ ವಿಶೇಷಣಮ್ । ಯತೋ 'ಜನಿತೋತ ವಿಷ್ಣೋಃ' ಇತ್ಯಾದಿವೇದಭಾಗೋಽಪ್ಯುಕ್ತವಿಧವಸ್ತುಪ್ರಮಾಯಾ ಏವ ಕರಣಮತ ಇತಿ । ಅನ್ಯಥೈವ ಪ್ರತೀತ್ಯಾ ಕಥಮೇತತ್? ಇತ್ಯತಸ್ತತ್ಪ್ರತೀತೇರಪರಾಮರ್ಶ-ಪೂರ್ವಕತ್ವಾತ್ । ಅನ್ಯಥಾ ಗುಣಾಃ ಪ್ರುತಾ ಇತಿ ಪ್ರುತ್ಯೈವ ಸರ್ವತ್ರಾಪಿ ವೇದೇ ಗುಣಾ ಏವ ಪ್ರತಿಪಾದ್ಯಂತೇ, ದೋಷಪ್ರತೀತಿಸ್ತು ಅಜ್ಞಾನನಿಬಂಧನಾ ಇತಿ,

•ಸಕಲದೋಷರಹಿತನಾಗಿ ಸಕಲಗುಣಪೂರ್ಣನಾಗಿ ಭಗವಂತನನ್ನು ವೇದಗಳು ತಿಳಿಸಿಕೊಡುತ್ತವೆ ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ 'ಜನಿತೋತ ವಿಷ್ಣೋಃ' ಎಂಬ ಮಂತ್ರದಲ್ಲಿ ವಿಷ್ಣುವಿಗೆ ಜನ್ಮಾದಿ ದೋಷಗಳನ್ನು ಹೇಳಿದ್ದಾರೆ. ಇದಕ್ಕೆ ಉತ್ತರ — ವಿಪಕ್ಷತಃ ವ್ಯಾವೃತ್ತಿಃ - ಎಂದು. ಅಂದರೆ ವಿಪಕ್ಷತಃ - ನಾವು ಹೇಳಿದ ಪಕ್ಷಶಬ್ದದ ಅರ್ಥಕ್ಕಿಂತ ವಿರುದ್ಧವಾದ ದೋಷಗಳಿಂದ ಕೂಡಿರುವುದು ಎಂದರ್ಥ. ಅಂತಹ ಸದೋಷವಾದ ವಸ್ತುವಿನಿಂದ ವ್ಯಾವೃತ್ತಿಃ ಅರ್ಥಾತ್ ಸಂಬಂಧವಿಲ್ಲ. ಅಂದರೆ ಸದೋಷವಾದ ವಸ್ತುಗಳನ್ನು ವೇದಗಳು ಪ್ರತಿಪಾದನೆ ಮಾಡುತ್ತಿಲ್ಲ ಎಂದು ಪರಿಹರಿಸಿದ್ದಾರೆ. ಅದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ 'ಯಚ್ಚ ಪ್ರಮಾಣಂ' ಎಂದಿದ್ದಾರೆ. ಏಕೆಂದರೆ ಜನಿತೋತ ವಿಷ್ಣೋಃ ಎಂಬ ವೇದಭಾಗವು ಕೂಡ ಸಕಲಗುಣಪೂರ್ಣನಾದ ದೋಷದೂರನಾದ ಭಗವಂತನ ಯಥಾರ್ಥಜ್ಞಾನಕ್ಕೆ ಕಾರಣವಾಗಿದೆ. ಅಲ್ಲ! ಅನ್ಯಥೈವ ಪ್ರತೀತಿಯು ಆ ಮಂತ್ರದಿಂದ ಬರುತ್ತಿದೆ.

ಆದ್ದರಿಂದ ಅದಕ್ಕಿಂತ ವಿಪರೀತವಾಗಿ ಹೇಗೆ ವ್ಯಾಖ್ಯಾನ ಮಾಡಲು ಸಾಧ್ಯ. ಅದಕ್ಕೆ ಉತ್ತರವಾಗಿ ಆ ಪ್ರತೀತಿಯು ವಿಚಾರಪೂರ್ವಕವಾಗಿ ಬರದೇ ಇದ್ದದ್ದು ಎಂದು ತಿಳಿಯಬೇಕು. ಹಾಗಿಲ್ಲದಿದ್ದರೆ 'ಗುಣಾ ಶ್ರುತಾಃ' ಎಂಬ ವೇದಮಂತ್ರದಿಂದಲೇ ಎಲ್ಲಾ ವೇದಗಳೂ ಗುಣಗಳನ್ನೇ ಹೇಳುತ್ತಿರು-ವುದು. ದೋಷ ತೋರುತ್ತಿದ್ದರೆ ಅದು ಅಜ್ಞಾನಾದಿನಿಮಿತ್ತ.

## ಜನಿತೋತ ವಿಷ್ಣೋಃ ವೇದಮಂತ್ರಾರ್ಥ

** ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ ।
ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ ॥ (9ಮಂ.96ಸೂ.5ಮಂತ್ರ)

ಮತೀನಾಂ ಜನಿತಾ = ಉಪದೇಶಾದಿಗಳಿಂದ ಸದ್ಬುದ್ಧಿಯನ್ನು ಹುಟ್ಟಿಸುವವರು. ಜನಿತಾ ದಿವಃ ಜನಿತಾ ಪೃಥಿವ್ಯಾಃ ಜನಿತಾ ಅಗ್ನೇಃ - ಸೂರ್ಯ ಇಂದ್ರ, ಅಗ್ನಿ ಇವರೆಲ್ಲರನ್ನೂ ಸತ್ಯವೆಂದು ತೋರಿಸಿರುವರು. ಹೀಗೆ ಅವರಿಗೂ ಇವರು ಜನಕರಾಗಿದ್ದಾರೆ. ಉತ ವಿಷ್ಣೋಃ ಜನಿತಾ = ವಿಷ್ಣುವಿನ ಸರ್ವೋತ್ತಮತ್ವ, ಸತ್ಯತ್ವ ಮುಂತಾದ ವಿಷಯಗಳನ್ನು ಪ್ರತಿಪಾದನೆ ಮಾಡಿದ್ದರಿಂದ ವಿಷ್ಣುವಿಗೂ ಈ ಅರ್ಥದಲ್ಲಿ ಜನಕರು.

## ಸುಧಾದಲ್ಲಿ ಜನಿತೋತ ವಿಷ್ಣೋಃ

** ननु तथाऽपि विष्णावसम्भवीदं लक्षणम्। "जनितोत विष्णोः" इत्यादौ तस्य जन्मादिदोषश्रवणात्। नहि जन्मादिदोषवतोऽस्मदादेरिव जगज्जन्मादिकारणत्वं सम्भवतीत्यत आह गुणा इति।

गुणाः श्रुता इति ह्यस्मान्न दोषोऽर्थः श्रुतेर्भवेत्। (अनुव्या.)

"गुणाः श्रुताः सुविरुद्धाश्च देवे सन्त्यश्रुता अपि नैवात्र शङ्का।
चिन्त्या अचिन्त्याश्च तथैव दोषाः श्रुताश्च नाज्ञैर्हि तथा प्रतीताः"
इत्यस्माद् वाक्याद् विष्णोर्जन्मादिदोषो "जनितोत विष्णोः" इत्यादिश्रुतेरर्थो न भवेत्, हि यस्मात् तस्मान्नासम्भवीदं लक्षणम्।

इदमुक्तं भवति – वाक्यार्थावगमे हि व्याख्यानं मुख्यं कारणम्। यथाऽऽहुः "व्याख्यानतो विशेषप्रतिपत्तिः" इति। तत्रापि यदीयं व्याख्येयं तदीयमेव चेद् व्याख्यानं तदा सुतरां ततोऽर्थावगतिः। तत्र "गुणाः श्रुताः" इति श्रुतिरेव सर्वाः श्रुतीर्व्याख्याति। सर्वाः श्रुतयो विष्णोरनन्तानलौकिकान् गुणानेव वदन्ति। न कुत्रापि दोषान्। दोषवादप्रतीतिस्तु शब्द-शक्तितात्पर्यापरिज्ञाननिमित्तैवेति। एवं श्रुत्यैव सर्वासु श्रुतिषु व्याख्यातासु कथं

तद्विरुद्धदोषपरतया व्याख्यानं युज्यते? तस्माद् विष्णुरिति यजमानस्य यज्ञस्य वा नाम। तौ सोमाद् भवत इति "सोमो जनितोत विष्णोः" इत्युच्यत इत्यादिव्याख्येयमिति। - (सुधा)

ಜನ್ಮಾಧಿಕರಣದ ಸುಧಾಭಾಗದಲ್ಲಿ 'ಜನಿತೋತ ವಿಷ್ಣೋಃ' ಎಂಬ ಶ್ರುತಿಯ ವಿಚಾರ ಬಂದಿದೆ. ಭಗವಂತನು ಜಗಜ್ಜನ್ಮಾದಿಕಾರಣನು ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಜನಿತೋತ ವಿಷ್ಣೋಃ ಮುಂತಾದ ಶ್ರುತಿಗಳಲ್ಲಿ ಭಗವಂತನಲ್ಲಿ ಜನ್ಮಾದಿದೋಷಗಳು ಇವೆ ಎಂದು ಶ್ರುತವಾಗುತ್ತಿರುವುದರಿಂದ. ದೋಷಗಳಿದ್ದಮೇಲೆ ಅವನು ನಮ್ಮಂತೆ ಇಡೀ ಜಗತ್ತಿನ ಜನ್ಮಾದಿಗಳಿಗೆ ಕಾರಣವಾಗಲು ಸಾಧ್ಯವಿಲ್ಲ. ಇದಕ್ಕೆ ಉತ್ತರವಾಗಿ ಶ್ರುತಿಗೆ ಶ್ರುತಿಯೇ ವ್ಯಾಖ್ಯಾನಮಾಡುವುದು ಪ್ರಬಲವಾದ್ದರಿಂದ 'ಜನಿತೋತ ವಿಷ್ಣೋಃ' ಎಂಬ ಶ್ರುತಿಗೆ ವ್ಯಾಖ್ಯಾನವಾಗಿ 'ಗುಣಾಃ ಶ್ರುತಾಃ' ಎಂಬ ಶ್ರುತಿಯು ಭಗವಂತನಿಗೆ ಎಂದಿಗೂ ದೋಷಬರಲು ಸಾಧ್ಯವಿಲ್ಲ ಎಂದು ಹೇಳುತ್ತಿರುವುದರಿಂದ ಭಗವಂತನಲ್ಲಿ ಆಪಾತತಃ ದೋಷಗಳಿವೆ ಎಂದು ಹೇಳುತ್ತಿರುವ ಶ್ರುತಿಗಳಲ್ಲಿ ಅರ್ಥಾಂತರವನ್ನು ಮಾಡಬೇಕು. ಆದ್ದರಿಂದಲೇ ವಿಷ್ಣು ಎಂದರೆ ಯಜಮಾನ ಅಥವಾ ಯಜ್ಞಕ್ಕೆ ಹೆಸರು. ಅವುಗಳೆರಡೂ ಸೋಮದಿಂದ ಉಂಟಾಗುತ್ತವೆ ಎಂದು ಆ ಶ್ರುತಿಯ ಅರ್ಥ. ಯಜಮಾನತ್ವವು ದೀಕ್ಷಾವಿಶೇಷ-ಸಂಸ್ಕಾರೋಪೇತನಾದವನಿಗೆ ಉಂಟಾಗುವುದು. ಅಂದರೆ ಯಾಗಾಧೀನವಾದದ್ದು ಯಜಮಾನತ್ವ. ಈ ಯಜಮಾನತ್ವವು ಹಾಗೂ ಯಾಗವು, ಸೋಮವು ಇದ್ದಾಗ ಸಂಪನ್ನವಾಗುವುದು.

— ಸನ್ನ್ಯಾಯರತ್ನಾವಲಿಯಲ್ಲಿ 'ಸೋಮಃ ವಿಷ್ಣೋಃ ಜನಿತಾ' ಎಂಬುದಕ್ಕೆ ಹೀಗೆ ಅರ್ಥವನ್ನು ವಿವರಿಸಿದ್ದಾರೆ. ಸೋಮದಿಂದ ಎಂದರೆ ಕ್ಷೀರಾಬ್ಧಿಶಯನನಾದ ಮೂಲರೂಪದಿಂದ ವಿಷ್ಣುವಿನ ಪ್ರಾದುರ್ಭಾವವಾಯಿತು ಎಂದು.

ಗುಣಾಃ = ಜ್ಞಾನಾನಂದಾದಿಗುಣಗಳು, ಶ್ರುತಾಃ = ವೇದದಲ್ಲಿ ಪ್ರಸಿದ್ಧವಾಗಿವೆ. ಸುವಿರುದ್ಧಾಃ = ಲೋಕದೃಷ್ಟಿಯಿಂದ ವಿರುದ್ಧವೆನಿಸಿದವು, ಅಶ್ರುತಾಃ = ವಿಶೇಷಾಕಾರೇಣ ಶ್ರುತಿಯಿಂದ ಸಿದ್ಧ-ವಾಗಿಲ್ಲವಾದರೂ, ಚಿಂತ್ಯಾಃ = ರಮಾದಿ ದೇವತೆಗಳಿಂದ ಧ್ಯಾನಮಾಡಲು ಯೋಗ್ಯವಾಗಿವೆ. ಚ = ಮತ್ತು, ಅಚಿಂತ್ಯಾಃ = ವಿಶೇಷವಾಗಿ ಧ್ಯಾನಿಸಲು ಅಯೋಗ್ಯವಾಗಿಯೂ ಇವೆ. ಭಗವಂತನಲ್ಲಿ ವಿರುದ್ಧವಾದ ಅಶ್ರುತವಾದ ವಿರುದ್ಧಗುಣಗಳಿವೆ ಎಂದು ಶಂಕೆ ಮಾಡಬಾರದು. ದೋಷಾಃ ನೈವ ಶ್ರುತಾಃ = ದೋಷಗಳು ಎಂದಿಗೂ ಶ್ರುತಿಯಲ್ಲಿ ಹೇಳಿಲ್ಲ. ಕೆಲವು ಕಡೆ ಹೇಳಿದೆ ಎಂದಾದರೂ ಅಲ್ಲಿ ಅಜ್ಞೈಃ = ವೇದತಾತ್ಪರ್ಯವನ್ನು ತಿಳಿಯದೇ ಇರುವವರಿಂದ, ತಥಾ = ಹಾಗೆ ದೋಷವೆಂದು, ಪ್ರತೀತಾ ಏವ = ತಿಳಿಯುತ್ತಿವೆ ಎಂದೇ ಹೇಳಬೇಕು.

### ಚಶಬ್ದ, ಅಥಶಬ್ದ, ವಿಪಕ್ಷ ಶಬ್ದಗಳ ವಿವರಣೆ

(ರಸರಂಜನೀ) — ಸರ್ವಶ್ರುತೀನಾಂ ವ್ಯಾಖ್ಯಾತತ್ವೇ ನ ತದ್ವಿರೋಧೋ ಮಹಾತಾತ್ಪರ್ಯ-

ವಿರೋಧಶ್ಚೇತಿ ಚಶಬ್ದೇನ ಸೂಚಯತಿ । ವೇದೇ ಸ್ವವಿರೋಧಾಭಾವಾದಿಧರ್ಮಸಮುಚ್ಚಾ-ಯಕೋಽಥಶಬ್ದಃ । **ವಿಪಕ್ಷಶಬ್ದಃ ಸ್ವವಿರೋಧದ್ಯೋತಕಃ ।**

ಈ ರೀತಿಯಾಗಿ ಎಲ್ಲ ವೇದಗಳನ್ನು 'ಗುಣಾ ಶ್ರುತಾಃ' ಎಂಬ ವೇದಮಂತ್ರವು ವ್ಯಾಖ್ಯಾನ ಮಾಡುತ್ತಿದೆ. ಆದ್ದರಿಂದ 'ಜನಿತೋತ ವಿಷ್ಣೋಃ' ಎನ್ನುವುದಕ್ಕೆ ಮಹಾತಾತ್ಪರ್ಯದ ವಿರೋಧವಿದೆ. ಹಾಗೂ 'ಜನಿತೋತ ವಿಷ್ಣೋಃ' ಎನ್ನುವುದರ ವಿರೋಧವು ಗುಣಪ್ರತಿಪಾದಕಶ್ರುತಿಗಳಿಗೆ ಇಲ್ಲ ಎಂದು ತಿಳಿಯುವುದು. ಮಹಾತಾತ್ಪರ್ಯದ ವಿರೋಧವಿದೆ ಎಂಬ ಅಂಶವಾದರೋ ಶ್ಲೋಕ-ದಲ್ಲಿರುವ ವ್ಯಾವೃತ್ತಿಶ್ಚ ಎಂಬಲ್ಲಿನ 'ಚ'ಶಬ್ದದಿಂದ ತಿಳಿಯುವುದು.

ಇನ್ನು ವೇದವಾಕ್ಯಗಳಿಗೆ ಪರಸ್ಪರವಿರೋಧವಿಲ್ಲ ಎಂಬ ಧರ್ಮವನ್ನು ಸಮುಚ್ಚಯಮಾಡಲು ವಿಪಕ್ಷತೋಽಥ ಎಂಬಲ್ಲಿನ 'ಅಥ' ಎಂಬ ಶಬ್ದವಿದೆ. ವಿಪಕ್ಷ ಎಂಬ ಶಬ್ದವು ತನಗೆ ತನ್ನ ವಿರೋಧ-ವನ್ನು ತಿಳಿಸುತ್ತಿದೆ.

## ವೇದಕ್ಕೆ ತನ್ನಿಂದ ವಿರೋಧವಿಲ್ಲದಿದ್ದರೂ ಪ್ರಮಾಣಾಂತವಿರೋಧವಿದೆ ಎಂಬ ಆಶಂಕೆ ಹಾಗೂ ಪರಿಹಾರ

(ರಸರಂಜನೀ) — ನನ್ವೀದೃಶಪರತತ್ತ್ವಪ್ರತಿಪಾದಕತ್ವೇ ವೇದಸ್ಯ ಸ್ವವಿರೋಧಾಭಾವೇಽಪಿ ಪ್ರಮಾಣಾಂತರವಿರೋಧಃ ಸ್ಯಾದೇವೇತಿ ಚೇತ್ । ಕೋಽಭಿಪ್ರಾಯಃ । ಕಿಂ ಪ್ರಬಲಪ್ರಮಾಣ-ವಿರೋಧಃ ಸ್ಯಾದಿತಿ ಕಿಂ ವಾ ಸಮಬಲಪ್ರಮಾಣವಿರೋಧಃ । ಹೀನಬಲಸ್ಯ ಪ್ರಬಲವಿರೋಧೇನ ಸ್ವಯಮುತ್ಥಾನಶೂನ್ಯಸ್ಯ ಶಂಕಿತುಮಶಕ್ಯತ್ವಾತ್ । ಆದ್ಯಸ್ತಾವನ್ನ ಸಂಭವತೀತ್ಯಾಹ — ಬಾಧಿತೇ ವಿಷಯೇ ಸಕ್ತಿಃ ಸಂಬಂಧಃ ಪ್ರಮಾಣಾಂತರಬಾಧಿತಾರ್ಥಪ್ರತಿಪಾದಕತ್ವಂ ನೇತಿ ॥ ಪ್ರಮಾಣ-ಬಾಧೋ ನ - ಇತಿ ಯಾವತ್ । ಪ್ರಮಾಣಬಾಧಪ್ರಕಾರಪ್ರದರ್ಶನಾಯ ತಥೋಕ್ತಿಃ । ಯದ್ವಕ್ಷ್ಯತಿ 'ಅಯಾಥಾರ್ಥ್ಯಸ್ಯ ವಿಷಯವಿಪರ್ಯಾಸಾನತಿರೇಕಾತ್' ಇತಿ । ಅತ್ರ ಪ್ರಬಲಪ್ರಮಾಣವಿರೋಧ-ಸೂಚನಾಯ ಬಾಧಿತಪದಪ್ರಯೋಗಃ ಕುತಃ? ಇತ್ಯತಃ ಯಚ್ಚ ಶುದ್ಧಂ ನಿರ್ದೋಷಮಿತಿ ಹೇತುಗರ್ಭವಿಶೇಷಣಮ್ । ಸ ದೋಷಮೇವ ಹಿ ಬಾಧ್ಯತೇ । ನ ಪುನರ್ನಿರ್ದೋಷ-ಮನ್ಯಥಾತಿಪ್ರಸಂಗಾದಿತಿ । ನಿರ್ದೋಷತ್ವಹೇತುಭೂತಮಪೌರುಷೇಯತ್ವರೂಪಂ ನಿತ್ಯತ್ವಂ ಚ 'ವಾಚಾ ವಿರೂಪ ನಿತ್ಯಯಾ' ಇತ್ಯಾದೌ ಪ್ರಸಿದ್ಧಮಿತಿ 'ವೈ'ಶಬ್ದೇನಾಚಷ್ಟೇ ।

ದ್ವಿತೀಯೋಽಪ್ಯಯುಕ್ತ ಇತ್ಯಾಹ — **ಪ್ರತಿಪಕ್ಷಯುಕ್ತಿರ್ನಾಸ್ತೀತಿ** ॥ ಕುತಃ? ಇತ್ಯತೋ ಯಚ್ಚ 'ಅತುಲಮ್ ಅಸದೃಶಮ್' ಇತಿ ।

ಭಗವಂತನು ಸಕಲಗುಣಪರಿಪೂರ್ಣ ದೋಷದೂರ ಎಂದು ಪರತತ್ತ್ವವನ್ನು ವೇದವು ಪ್ರತಿಪಾದನೆ ಮಾಡಿದರೆ ಯದ್ಯಪಿ ವೇದಕ್ಕೆ ತನ್ನಿಂದ ತನಗೆ ವಿರೋಧವಿಲ್ಲ. ಆದರೆ ಬೇರೆಯ ಪ್ರಮಾಣದ ವಿರೋಧ ಬಂದೇ ಬರುವುದು ಎಂಬ ಆಕ್ಷೇಪ ಇದೆ. ಇಲ್ಲಿ ಬೇರೆ ಪ್ರಮಾಣದ ವಿರೋಧ ಎಂದರೆ ಏನರ್ಥ? ಪ್ರಬಲಪ್ರಮಾಣದ ವಿರೋಧ ಬರುತ್ತಿದೆ ಎಂದೋ? ಸಮಬಲಪ್ರಮಾಣದ ವಿರೋಧ ಬರುತ್ತಿದೆ ಎಂದೋ? ಹೀನಬಲವಾದ ಪ್ರಮಾಣವು ಪ್ರಬಲವಾದ ಪ್ರಮಾಣದ ವಿರೋಧ ಬಂದಾಗ ಸ್ವಯಂ ತಾನು ಪ್ರವೃತ್ತಿಮಾಡಲು ಸಾಧ್ಯವಿಲ್ಲವಾದ್ದರಿಂದ ಆ ವಿಕಲ್ಪವನ್ನೇ ಶಂಕೆ ಮಾಡಲು ಸಾಧ್ಯವಿಲ್ಲ. ಇನ್ನು ಮೊದಲನೆಯ ವಿಕಲ್ಪವು ಸರಿಯಿಲ್ಲ. 'ಬಾಧಿತವಾದ ವಿಷಯದಲ್ಲಿ ಸಕ್ತಿ' ಎಂದರೆ ಸಂಬಂಧವು. ಅಂದರೆ ಬೇರೆ ಪ್ರಮಾಣದಿಂದ ಬಾಧಿತವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತಿದೆ ಎಂಬುದು ಇಲ್ಲ. ಪ್ರಮಾಣಬಾಧವಿಲ್ಲ ಎಂದು ತಾತ್ಪರ್ಯ. 'ಅಯಾಥಾರ್ಥ್ಯಸ್ಯ ವಿಷಯವಿಪರ್ಯಾಸ-ಅನತಿರೇಕಾತ್' ಎನ್ನುವಂತೆ ಯಾವುದು ಅಯಥಾರ್ಥ-ಜ್ಞಾನವಾಗುವುದೋ ಅದು ತನ್ನ ವಿಷಯವನ್ನು ವಿಪರ್ಯಸ್ತವಾಗಿ ಗ್ರಹಿಸುತ್ತಿದೆ ಎಂದು ತಾತ್ಪರ್ಯ. ಪ್ರಕೃತದಲ್ಲಿ ಬಾಧಿತವಾದ ಅರ್ಥ ಎಂದರೆ ವಿಪರ್ಯಸ್ತವಾದ ಅರ್ಥ.

ಇಲ್ಲಿ ಪ್ರಬಲಪ್ರಮಾಣ ವಿರೋಧವಿದೆ ಎಂಬ ಸೂಚನೆಯನ್ನು ಮಾಡುವುದಕ್ಕೋಸ್ಕರ ಬಾಧಿತ ಎಂಬ ಪದವನ್ನು ಏಕೆ ಪ್ರಯೋಗಮಾಡಿದ್ದಾರೆ? ಹಾಗೆ 'ಶುದ್ಧಂ ನಿರ್ದೋಷಂ ಯಚ್ಚ' ಎಂದು ಹೇತುಗರ್ಭವಾದ ವಿಶೇಷಣವನ್ನು ಏಕೆ ಕೊಟ್ಟಿದ್ದಾರೆ?

ಉತ್ತರ – ಸದೋಷವಾದ ವಾಕ್ಯಕ್ಕೆ ಬಾಧ ಬರುತ್ತದೆ ಹೊರತು ನಿರ್ದೋಷವಾದ ವಾಕ್ಯಕ್ಕೆ ಅಲ್ಲ. ಹೀಗಲ್ಲದಿದ್ದರೆ ಅತಿಪ್ರಸಂಗ ಬರುವುದರಿಂದ. ನಿರ್ದೋಷತ್ವವು ವಾಕ್ಯದಲ್ಲಿ ಬರಬೇಕಾದರೆ ಅಪೌರುಷೇಯತ್ವವು ಅಥವಾ ನಿತ್ಯತ್ವವು ಇರಬೇಕು. ಇದಾದರೋ 'ವಾಚಾ ವಿರೂಪ ನಿತ್ಯಯಾ' ಮುಂತಾದ ಶ್ರುತಿಯಲ್ಲಿ ಪ್ರಸಿದ್ಧವಾಗಿದೆ ಎಂಬುದನ್ನು ಶ್ಲೋಕದಲ್ಲಿರುವ ವೈಶಬ್ದವು ತಿಳಿಸುತ್ತಿದೆ. ಎರಡನೆಯ ಪಕ್ಷವಾದ ಸಮಬಲಪ್ರಮಾಣವಿರೋಧವು ಪ್ರಕೃತದಲ್ಲಿ ಇಲ್ಲ. ಈ ಅಂಶವನ್ನು 'ಪ್ರತಿಪಕ್ಷಯುಕ್ತಿರ್ನ ವೈ' ಎಂಬುದರಿಂದ ತಿಳಿಸಿದ್ದಾರೆ. ಅದು ಏಕೆ ಎಂದರೆ 'ಯಚ್ಚ ಅತುಲಂ ಅಸದೃಶಂ' ಎಂದು ಹೇಳಿದ್ದಾರೆ.

### ಅಯಾಥಾರ್ಥ್ಯಸ್ಯ ವಿಷಯವಿಪರ್ಯಾಸಾನತಿರೇಕಾತ್

** ज्ञानकारणमात्राधीनोत्पत्तिकमिति स्वीकरोति साङ्ख्यः । तच्चानुपपन्नमित्यतोऽप्यसौ नाऽप्तः । कथं प्रामाण्याप्रामाण्ययोः स्वतस्त्वमनुपपन्नमित्यत आह मायित्वदिति । प्रामाण्याप्रामाण्ययो-र्ज्ञानकारणमात्रजन्यत्वे साङ्ख्यस्य वचनेनोत्पन्नं ज्ञानं प्रमाणमप्रमाणं चेत्युभयात्मकं वा स्यात्, परस्परविरोधेनोभयविकलं वा ज्ञानमात्रमुत्पद्यते, निःस्वभावस्य ज्ञानस्यानुपपत्त्या नोत्पद्यते

वा? आद्ये सदसद्विलक्षणं विश्वं मन्यमानो मायावादी यथा स्वोक्तनिषेधी, सद्विलक्षणमित्युक्त्या प्राप्तस्य असत्त्वस्य, स्वयमेव असद्विलक्षणमिति निषेधात्। असद्विलक्षणमित्युक्त्या च प्राप्तस्य सत्त्वस्य स्वयमेव सद्विलक्षणमिति निषेधात्। तथा साङ्ख्योऽपि स्वोक्ताखिलनिषेधी स्यात्। तद्वाक्यजनितज्ञानस्य याथार्थ्ये हि प्रकृतिर्जगत्कारणमित्यादिकोऽर्थो यो लब्धः, स एवार्थस्तस्यायाथार्थ्ये निषिद्धः स्यात्। अयाथार्थ्यस्य विषयविपर्यासानतिरेकात्। उभयस्वतस्त्वे वस्तुनो विरुद्धाकारद्वयालिङ्गितत्वं प्रसज्येतेति भावः। (सुधा २-२-१)

ರಚನಾನುಪಪತ್ತ್ಯಧಿಕರಣಸುಧಾದಲ್ಲಿ 'ಅಯಾಥಾರ್ಥ್ಯಸ್ಯ ವಿಷಯವಿಪರ್ಯಾಸಾನತಿರೇಕಾತ್' ಎಂಬ ಪಂಕ್ತಿ ಬಂದಿದೆ. ಸಂದರ್ಭ ಹೀಗಿದೆ – ಪ್ರಾಮಾಣ್ಯಾಪ್ರಾಮಾಣ್ಯಗಳೆರಡೂ ಸಾಂಖ್ಯಮತದಲ್ಲಿ ಸ್ವತಃ. ಅಂದರೆ ಜ್ಞಾನಕಾರಣದಿಂದಲೇ ಪ್ರಾಮಾಣ್ಯವು ಅಪ್ರಾಮಾಣ್ಯವು ಎರಡೂ ಹುಟ್ಟುತ್ತದೆ. ಈ ಪಕ್ಷದಲ್ಲಿ ಸಾಂಖ್ಯನು ಪ್ರಕೃತಿಯು ಜಗತ್ಕಾರಣ ಎಂದು ಹೇಳಿದಾಗ ಅದರಿಂದ ಜನ್ಯವಾದ ಜ್ಞಾನದಲ್ಲಿ ಯಾಥಾರ್ಥ್ಯ ಇದೆ ಎಂದಾಯಿತು. ಹಾಗೆಯೇ ಅಯಾಥಾರ್ಥ್ಯವೂ ಇದೆ ಎಂದೂ ಆಗುವುದು. ಯಾಥಾರ್ಥ್ಯ ಅಯಾಥಾರ್ಥ್ಯಗಳೆರಡೂ ಸ್ವತಃ ಎಂದು ಅವನ ಮತವಿರುವುದರಿಂದ. ಅಯಾಥಾರ್ಥ್ಯವಿದ್ದ ಪಕ್ಷದಲ್ಲಿ ಪ್ರಕೃತಿಯು ಜಗತ್ಕಾರಣವಲ್ಲ ಎಂದಾಯಿತು. ಏಕೆಂದರೆ ಜ್ಞಾನವು ಅಯಥಾರ್ಥವಾದರೆ ವಿಷಯದಲ್ಲಿ ವೈಪರೀತ್ಯ ಇದೆ ಎಂದರ್ಥ.

## ವಿರೋಧಿಪ್ರಮಾಣಾಂತರ ಪ್ರತ್ಯಕ್ಷವೋ ಅನುಮಾನವೋ ಆಗಮವೋ?

(ರಸರಂಜನೀ) — ಕಥಮಿತ್ಯತಃ ಸಮಬಲಂ ವಿರೋಧಿಪ್ರಮಾಣಂ ಕಿಮಾಗಮಃ ಕಿಂ ವಾಽನು-ಮಾನಮ್ ಉತ ಪ್ರತ್ಯಕ್ಷಮ್ ।

ಆದ್ಯೇಽಪಿ ಅಪೌರುಷೇಯಃ ತದನ್ಯೋ ವಾ । ನಾದ್ಯಃ ತದಭಾವಾತ್ । ಉರ್ವರಿತೇ ಪಕ್ಷ-ತ್ರಯೇಽಪಿ ಕಿಂ ತೇಷಾಂ ವೇದೋಪಜೀವಕತ್ವಮಸ್ತಿ ನ ವಾ? । ಆದ್ಯೇ ಕಥಂ ವಿರೋಧಃ? ವಿರೋಧೇ ವಾ ತೇಷಾಮೇವಾಪ್ರಾಮಾಣ್ಯಂ ಕಥಂ ನ ಭವೇತ್? ದ್ವಿತೀಯೇ ತೇಷಾಂ ತತ್ರ ಪ್ರವೇಶಾಯೋಗೇನ ಪ್ರತಿಪಕ್ಷತ್ವಾಸಂಭವ ಇತಿ ಸರ್ವಥಾಪಿ ನ ಪ್ರತಿಪಕ್ಷಸಂಭವ ಇತ್ಯಾಶಯೇ-ನೋಕ್ತಮ್ — ಏವೇತಿ ॥ ನ ಪ್ರತಿಪಕ್ಷೋ ನಾಮ ವಸ್ತುತೋಽಸ್ತಿ । ತಥಾ ಸತಿ ವಸ್ತು-ವಿಕಲ್ಪಾಪಾತಾತ್ । ಕಿಂತು ವಿಶೇಷಾನಿರ್ಧಾರಣಾಯಾಮೇವ । ತನ್ನಿರ್ಧಾರಣಾಯಾಂ ತು ಪ್ರಬಲೇನ ದುರ್ಬಲಸ್ಯ ಬಾಧ ಏವ ಇತ್ಯಾಶಯವತಾ ಉಕ್ತಮ್ — ಯುಕ್ತಿರ್ಯೋಗಃ ಸಂಭವ-ಚ್ಛಂಕಾಮಾತ್ರಮಿತಿ ಯಾವದಿತಿ । 'ಯಚ್ಚ ಅತುಲಮ್ ಅನುಪಮಸದೃಶಂ ಮುಖ್ಯಂ ಪ್ರಮಾಣಮ್' ಇತ್ಯಾವೃತ್ತ್ಯಾ ಯೋಜ್ಯಮ್ । ವೇದಪ್ರಾಮಾಣ್ಯಮುಖ್ಯಿತ್ವಂ ಚ ಕರಣೇಷ್ವಿತಿ

ಬೋಧ್ಯಮ್ । ಸ ತದಭಿಮಾನೀ । 'ಕೃತ್ಸ್ನೋ ಹಿ ಏಷ ಆತ್ಮಾ ಯದ್ಬೃಹತೀ' ಇತ್ಯಾದಿವದಭಿ-ಮಾನಿತ್ವಪ್ರದರ್ಶನಾಯೈವ ಅಭೇದೋಕ್ತಿಃ ।

ಸಮಾನವಾದ ಬಲವುಳ್ಳ ವಿರೋಧಿಯಾದ ಪ್ರಮಾಣವು ಆಗಮವೋ ಅಥವಾ ಅನುಮಾನವೋ ಅಥವಾ ಪ್ರತ್ಯಕ್ಷವೋ?

ಆಗಮದಲ್ಲಿಯೂ ಅಪೌರುಷೇಯವೋ ಅದಕ್ಕಿಂತ ಬೇರೆಯದೋ? ಮೊದಲನೆಯ ಕಲ್ಪ ಹೇಳಲು ಬರುವುದಿಲ್ಲ. ಅಪೌರುಷೇಯವಾದದ್ದೇ ಇಲ್ಲವಾದ್ದರಿಂದ. ಇನ್ನು ಮಿಕ್ಕಿದ ಮೂರು ಪಕ್ಷಗಳಲ್ಲಿಯೂ ವೇದೋಪಜೀವಕತ್ವ ಅರ್ಥಾತ್ ವೇದವನ್ನು ಅವಲಂಬಿಸಿರುವುದು ಇದೆಯೋ ಇಲ್ಲವೋ? ಇದೆ ಎಂದರೆ ಹೇಗೆ ವಿರೋಧ? ವಿರೋಧವಿದ್ದರೆ ಆ ಮೂರಕ್ಕೆ ಅಪ್ರಾಮಾಣ್ಯ ಏಕೆ ಬರಬಾರದು? ವೇದೋಪಜೀವಕತ್ವ ಮೂರಕ್ಕೂ ಇಲ್ಲ ಎಂಬ ಪಕ್ಷದಲ್ಲಿ ಪೌರುಷೇಯ ಆಗಮ ಮೊದಲಾದ ಮೂರಕ್ಕೆ ವೇದದ ವಿಷಯದಲ್ಲಿ ಪ್ರವೇಶವೇ ಇಲ್ಲವಾದ್ದರಿಂದ ಪ್ರತಿಪಕ್ಷತ್ವವಿಲ್ಲ. ಹಾಗಾಗಿ ಸರ್ವಥಾ ಪ್ರತಿಪಕ್ಷ ಇಲ್ಲ ಎಂಬ ಅಭಿಪ್ರಾಯದಿಂದ 'ನೈವಾಸ್ತಿ' ಎಂಬಲ್ಲಿನ 'ಏವ' ಎಂಬ ಶಬ್ದದಿಂದ ಹೇಳಿದ್ದಾರೆ.

ಪ್ರತಿಪಕ್ಷ ಎಂಬುದು ವಸ್ತುತಃ ಇಲ್ಲವೇ ಇಲ್ಲ. ಅದಿದ್ದರೆ ವಸ್ತುವಿನಲ್ಲಿ ವಿಕಲ್ಪ ಬರುವುದು. ಅರ್ಥಾತ್ ವಿರುದ್ಧಧರ್ಮಾಧಿಕರಣತ್ವದ ಪ್ರಾಪ್ತಿ. ಹಾಗಾಗಿ ಒಂದು ಕೋಟಿಯು ನಿರ್ಧಾರವಾಗದಿದ್ದಾಗಲೇ ಪ್ರತಿಪಕ್ಷವು ಇದೆ. ನಿರ್ಧಾರಣವಾದರೆ ಪ್ರಬಲವಾದ ಪ್ರಮಾಣದಿಂದ ದುರ್ಬಲವಾದ ಪ್ರಮಾಣಕ್ಕೆ ಬಾಧವೇ ಎಂದು ತಿಳಿಯಬೇಕು.

ಯುಕ್ತಿ ಎಂದರೆ ಯೋಗ ಎಂದರ್ಥ. ಅರ್ಥಾತ್ ಸಂಭಾವಿತವಾದ ಶಂಕೆ. ಶ್ಲೋಕದಲ್ಲಿನ 'ಯಚ್ಚ ಅತುಲಂ ಪ್ರಮಾಣಂ' ಎಂಬ ಶಬ್ದಗಳನ್ನು ಆವೃತ್ತಿಯಿಂದ ಯೋಜನೆ ಮಾಡಿಕೊಳ್ಳಬೇಕು. ಅತುಲಂ ಎಂಬುದಕ್ಕೆ ಅನುಪಮ ಎಂದರ್ಥ. ಅನುಪಮವಾದದ್ದು ಮುಖ್ಯವಾಗುತ್ತದೆ. ಆದ್ದರಿಂದ ಅತುಲಂ ಎಂದರೆ ಮುಖ್ಯಪ್ರಮಾಣ ಎಂದರ್ಥ.

ವೇದಪ್ರಾಮಾಣ್ಯಮುಖ್ಯತ್ವವಾದರೋ ಕರಣಗಳಲ್ಲಿಯೇ ಎಂದು ತಿಳಿಯಬೇಕು. 'ಪ್ರಮಾಣಂ ಸ ಮೇ' ಎಂಬಲ್ಲಿನ ಸಃ ಎಂದರೆ ಕರಣಗಳ ಅಭಿಮಾನಿ ಎಂದರ್ಥ. ಹಾಗಾದರೆ ಅಭಿಮಾನಿಯು ಪ್ರಮಾಣದ ಅಭೇದವನ್ನು ಪಡೆಯಬೇಕಾಯಿತು. ಸಃ ಪ್ರಮಾಣಂ ಎಂದು ಹೇಳಿದ್ದರಿಂದ. ಆದರೆ ಇದು ಬಾಧಿತ. ಅಭಿಮಾನಿಯು ಪ್ರಮಾಣವಲ್ಲ. ಅದಕ್ಕಾಗಿ ಅಭೇದವನ್ನು ಹೇಳಿದ ತಾತ್ಪರ್ಯ ಒಂದು ವಿಶೇಷತೆಯನ್ನು ತಿಳಿಸಲು. 'ಕೃತ್ಸ್ನೋ ಹಿ ಏಷ ಆತ್ಮಾ ಯದ್ಬೃಹತೀ' - ಇಡೀ ಜಗತ್ತು ಆತ್ಮಾ ಎಂದರೆ ಇಲ್ಲ; ಹೊರತು ಇಡೀ ಜಗತ್ತಿಗೆ ಅಭಿಮಾನಿ ಎಂದು ತಾತ್ಪರ್ಯ ಎಂದು ತೋರಿಸುವಂತೆ ಇಲ್ಲಿಯೂ ತಿಳಿಯಬೇಕು.

## 'ದಶಪ್ರಮತಿ' 'ಅಲವಬೋಧ' ಮುಂತಾದ ಪದಗಳನ್ನು ಬಿಟ್ಟು ಆನಂದತೀರ್ಥ ಎಂಬ ಪದ ಹೇಳಿದ್ದು ಏಕೆ

(ರಸರಂಜನೀ)— ಆದರನೈರಂತರ್ಯಾಭ್ಯಾಂ ಶ್ರೀಗುರುಚರಣಾರವಿಂದಧ್ಯಾನಾದಿಮತ್ತ್ವರೂಪಶಿಷ್ಯ-ಲಕ್ಷಣಸ್ಯ ಅಸ್ಮಿನ್ ಮುಖ್ಯತಯಾ ಸತ್ತ್ವೇನ ತದೀಯಪರಮಾನುಗ್ರಹಪಾತ್ರತಯಾ ಏತದುಪಾ-ಸನಯಾ ಅಮಾತ್ಯಸೇವಯಾ ರಾಜ್ಞ ಇವ ಶ್ರೀವೇದವ್ಯಾಸಸ್ಯಾಪಿ ಪ್ರೀತಿಃ ಸ್ಯಾತ್, ಅತೋಽಪಿ ಏತದುಪಾಸನಮ್ ಅತ್ಯಾದರೇಣ ಭಾವ್ಯಮಿತಿ ಸೂಚಯಿತುಂ ದಶಪ್ರಮತ್ಯಲವಬೋಧಾದಿಪದಂ ವಿಹಾಯ ಆನಂದತೀರ್ಥಃ — ಆನಂದರೂಪಃ = ಶ್ರೀವೇದವ್ಯಾಸ ಏವ ತೀರ್ಥಂ = ಗುರು-ರ್ಯಸ್ಯ ಧ್ಯಾನಾದಿಗೋಚರತಯಾ 'ಸ' ಇತ್ಯುಕ್ತಮ್ । 'ತೀರ್ಥಮಂತ್ರಾದ್ಯುಪಾಧ್ಯಾಯಶಾಸ್ತ್ರೇ-ಷ್ವಂಭಸಿ ಪಾವನೇ' ಇತ್ಯಭಿಧಾನಾತ್ । ಯಥಾಹುಃ —

ನಂದಿತೀರ್ಥೋರುಸನ್ನಾಮಿನೋ ನಂದಿನಃ ಸಂದಧಾನಾಃ ಸದಾಽನಂದದೇವೇ ಮತಿಮ್ ।
ಮಂದಹಾಸಾರುಣಾಪಾಂಗದತ್ತೋನ್ನತಿಂ ... ಇತಿ ।

ಈ ಶ್ಲೋಕದಲ್ಲಿ 'ದಶಮತಿ' 'ದಶಪ್ರಮತಿ' 'ಅಲವಬೋಧ' ಮುಂತಾದ ಪದಗಳನ್ನು ಬಿಟ್ಟು ಆನಂದತೀರ್ಥ ಎಂಬ ಪದವನ್ನು ಹೇಳಲು ಕಾರಣವೇನು? ಆದರ(ಸ್ನೇಹ), ನೈರಂತರ್ಯ-ಗಳಿಂದ(ಅವಿಚ್ಛಿನ್ನವಾಗಿ) ಗುರುಗಳ ಪಾದಾರವಿಂದವನ್ನು ಧ್ಯಾನಮಾಡುವವನೇ ಶಿಷ್ಯನಾಗುತ್ತಾನೆ. ಇಂತಹ ಶಿಷ್ಯನ ಲಕ್ಷಣವು ಮಧ್ವಾಚಾರ್ಯರಲ್ಲೇ ಮುಖ್ಯವಾಗಿದೆ. ಆದ್ದರಿಂದ ವೇದವ್ಯಾಸರ ಪರಮಾನುಗ್ರಹಕ್ಕೆ ಪಾತ್ರರಾದ ಆಚಾರ್ಯರ ಉಪಾಸನೆಯಿಂದ ವೇದವ್ಯಾಸರಿಗೂ ಪ್ರೀತಿ-ಯಾಗುವುದು. ಹೇಗೆ ಅಮಾತ್ಯನ ಸೇವೆಯಿಂದ ರಾಜನಿಗೆ ಪ್ರೀತಿಯಾಗುವುದೋ ಹಾಗೆ ಎಂದು ತಿಳಿಯಬೇಕು. ಈ ಕಾರಣದಿಂದ ಮಧ್ವಾಚಾರ್ಯರ ಉಪಾಸನೆಯನ್ನು ಅತಿ ಆದರದಿಂದ ಮಾಡ-ಬೇಕು ಎಂದು ಸೂಚನೆ ಮಾಡಲು ಆನಂದತೀರ್ಥ ಎಂದಿದ್ದಾರೆ. ಆನಂದ ಎಂದರೆ ವೇದವ್ಯಾಸರು ಎಂದರ್ಥ. ಅವರು ಆನಂದರೂಪರಾದ್ದರಿಂದ. ಅವರನ್ನೇ ತೀರ್ಥ ಎಂದರೆ ಗುರುಗಳನ್ನಾಗಿ ಧ್ಯಾನಕ್ಕೆ ಗೋಚರವನ್ನಾಗಿ ಯಾರು ಹೊಂದಿದ್ದಾರೋ ಅವರೇ ಆನಂದತೀರ್ಥರೆನ್ನಿಸುತ್ತಾರೆ. ತೀರ್ಥ ಎಂಬ ಶಬ್ದವು ಗುರು ಎಂಬರ್ಥವನ್ನು ಹೇಳುತ್ತಿದೆ ಎಂಬಲ್ಲಿ "ತೀರ್ಥಮಂತ್ರಾದಿ ಉಪಾ-ಧ್ಯಾಯಶಾಸ್ತ್ರೇಷ್ವಂಭಸಿ ಪಾವನೇ" ಎಂದು ಕೋಶವಿದೆ. ಇದಕ್ಕೆ ಸಂವಾದವೂ ಇದೆ —

### ಪ್ರೀಣಯಾಮೋ ವಾಸುದೇವಂ – ನಂದಿತೀರ್ಥೋರುಸನ್ನಾಮಿನಃ

ನಂದಿತೀರ್ಥೋರುಸನ್ನಾಮಿನೋ ನಂದಿನಃ
ಸಂದಧಾನಾಃ ಸದಾಽನಂದದೇವೇ ಮತಿಮ್ ।

ಮಂದಹಾಸಾರುಣಾಪಾಂಗದತ್ತೋನ್ನತಿಂ
ನಂದಿತಾಶೇಷದೇವಾದಿವೃಂದಂ ಸದಾ ॥
ಪ್ರೀಣಯಾಮೋ ವಾಸುದೇವಂ ದೇವತಾಮಂಡಲಾಖಂಡಮಂಡನಮ್ ॥
ಪ್ರೀಣಯಾಮೋ ವಾಸುದೇವಮ್ ॥ 8/12 ದ್ವಾದಶಸ್ತೋತ್ರ ॥

** ಆನಂದದೇವೇ = ಸುಖರೂಪಿಯಾದ ವಾಸುದೇವನಲ್ಲಿ, ಮತಿಂ = ಬುದ್ಧಿಯನ್ನು, ಸಂದಧಾನಾಃ = ಚೆನ್ನಾಗಿ ಇಟ್ಟಿರುವ, ನಂದಿನಃ = ಪರಮಾತ್ಮನ ಸಾಕ್ಷಾತ್ಕಾರದಿಂದ ಸುಖವುಳ್ಳ, ನಂದಿತೀರ್ಥ-ಉರು ಸನ್ನಾಮಿನಃ = ಆನಂದತೀರ್ಥರೆಂಬ ಉತ್ಕೃಷ್ಟ ಹಾಗೂ ನಿರ್ದುಷ್ಟವಾದ ಹೆಸರುಳ್ಳ, ವಯಂ = ನಾವು, ಮಂದಹಾಸಾರುಣಾಪಾಂಗದತ್ತೋನ್ನತಿಂ = ಮಂದಹಾಸದಿಂದ ಕೂಡಿದ ಕೆಂಪಾದ ಕುಡಿನೋಟದಿಂದ ಕೊಡಲ್ಪಟ್ಟ ಅಭ್ಯುದಯವುಳ್ಳ, ಸದಾ = ಯಾವಾಗಲೂ, ನಂದಿತಾ-ಶೇಷದೇವಾದಿವೃಂದಂ = ಸಂತೋಷಪಡುವಂತೆ ಮಾಡಲ್ಪಟ್ಟ ಎಲ್ಲ ದೇವತಾದಿ-ಸಮುದಾಯವುಳ್ಳ, ದೇವತಾಮಂಡಲಾಖಂಡಮಂಡನಂ = ದೇವತೆಯ ಸಮುದಾಯಕ್ಕೆ ಶ್ರೇಷ್ಠ-ಅಲಂಕಾರನಾದ, ವಾಸುದೇವಂ = ವಾಸುದೇವನನ್ನು, ಪ್ರೀಣಯಾಮಃ = ಸಂತೋಷಪಡಿಸೋಣ.

** ನಂದೀತಿ ॥ ನಂದಿತೀರ್ಥೋರುಸನ್ನಾಮಿನೋ ನಂದಿನಃ ಸಂದಧಾನಾಃ ಸದಾನಂದದೇವೇ ಮತಿಮ್ । (ವಯಂ) ಮಂದಹಾಸಾರುಣಾಪಾಂಗದತ್ತೋನ್ನತಿಮ್ ॥ ಭಕ್ತೇಭ್ಯಃ ಮಂದಹಾಸೋ ಮಂದಸ್ಮಿತಂ ತೇನೋಪೇತೋ ಯ ಅರುಣಾಪಾಂಗಃ ದೃಗಂತನಿರೀಕ್ಷಣಮಿತಿ ಯಾವತ್ । ತೇನ ದತ್ತಾ ಉನ್ನತಿರ್ಮಹಿಮಾ ಅಭ್ಯುದಯೋ ವಾ ಯೇನ ತಮ್ । ಅತ ಏವ ಸದಾ ನಂದಿತಾಶೇಷ-ದೇವಾದಿವೃಂದಂ ನಂದಿತಂ ಸಂತೋಷಂ ಪ್ರಾಪಿತಮ್ ಅಶೇಷದೇವಾದಿವಂದ್ಯಮ್ । ಅಶೇಷಾಃ ಯೇ ದೇವಾದಯಃ ತೇಷಾಂ ವೃಂದಂ ಯೇನ ತಾದೃಶಮ್ । ದೇವತಾಮಂಡಲಾಖಂಡ-ಮಂಡನಂ ವಾಸುದೇವಂ ಪ್ರೀಣಯಾಮಃ ॥ (ದ್ವಾದಶಸ್ತೋತ್ರವ್ಯಾಖ್ಯಾನ ವಿಶ್ವಪತಿತೀರ್ಥರು)

ಇಲ್ಲಿ ನಂದಿತೀರ್ಥ ಎಂಬ ಒಳ್ಳೆಯ ನಾಮ ಆಚಾರ್ಯರಿಗೆ ಇದೆ. ಇದಕ್ಕೆ ಕಾರಣ ಆನಂದಿಯಾದ ಅರ್ಥಾತ್ ಆನಂದರೂಪನಾದ ಭಗವಂತನಲ್ಲಿ ತಮ್ಮ ಬುದ್ಧಿಯನ್ನು ಇಟ್ಟದ್ದು.

## ಅದನ್ನೇ ನಾವು ಪ್ರಾರ್ಥಿಸಬೇಕು

(ರಸರಂಜನೀ) — ನ ಮೀಮಾಂಸಕಾದಿವತ್ ವೇದತೋ ಧರ್ಮಾದಿಜ್ಞಾನಂ ಪ್ರಾರ್ಥ್ಯತೇ । ಕಿಂತು ವಿಶಿಷ್ಟೋ ನಿಶ್ಚಯಃ । ವಿಶಿಷ್ಟತಾ ಚ ಮೋಕ್ಷಾಂತರಂಗಸಾಧನತಾ । ಸಾ ಚ ಆಧ್ಯಾತ್ಮಿಕ-ವಿವಕ್ಷಿತತತ್ವನಿರ್ಣಯಸ್ಯೈವ । ಯದ್ವಕ್ಷ್ಯತಿ – 'ತಸ್ಯ ಸನ್ನಿಹಿತತ್ವತಃ' ಇತಿ । ಅತಃ ಸ ಏವ ಅಸ್ಮತ್ಪ್ರಾರ್ಥನೀಯ ಇತ್ಯಾಶಯೇನೋಕ್ತಮ್ — ವೀತಿ ॥ ಅನೇನ ಪಾಶುಪತಾದಿಜನ್ಯಜ್ಞಾನಸ್ಯ

ಪರಿತ್ಯಾಗೇ ಹೇತುಃ ಸೂಚಿತಃ । ತಸ್ಯ ವೇದವಿರೋಧಿನೋ ವೇದೋಕ್ತವಿಶಿಷ್ಟಪುರುಷಾರ್ಥಹೇತುತ್ವಾಭಾವಾದಿತಿ ।

ಮೀಮಾಂಸಕರೇ ಮೊದಲಾದವರಂತೆ ವೇದದಿಂದ ಧರ್ಮ ಮೊದಲಾದವುಗಳ ಜ್ಞಾನ ಬರಲಿ ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸುತ್ತಿರುವುದಲ್ಲ. ಹೊರತು ವಿಶಿಷ್ಟವಾದ ನಿಶ್ಚಯಕ್ಕಾಗಿ ಪ್ರಾರ್ಥಿಸುತ್ತಿರುವುದು. ನಿಶ್ಚಯದಲ್ಲಿ ವಿಶಿಷ್ಟತ್ವವೆಂದರೆ ಮೋಕ್ಷಾಂತರಂಗಸಾಧನತ್ವ. ಅದಾದರೋ ಆಧ್ಯಾತ್ಮಿಕವಿವಕ್ಷಿತವಾದ ತತ್ವನಿರ್ಣಯವೇ. ಅದನ್ನು ಮುಂದೆ ಹೇಳುತ್ತಾರೆಯೂ ಕೂಡ – 'ಅಧ್ಯಾತ್ಮಪ್ರವಣೋ ಭೂತ್ವಾ ತಸ್ಯ ಸನ್ನಿಹಿತತ್ವತಃ' (ಅನುವ್ಯಾಖ್ಯಾನ 3-3-ಶ್ಲೋಕ3) ಎಂಬಲ್ಲಿ. ಆದ್ದರಿಂದ ಇಂತಹ ನಿಶ್ಚಯವನ್ನೇ ನಾವು ಪ್ರಾರ್ಥಿಸಬೇಕು ಎಂಬ ಅಭಿಪ್ರಾಯದಿಂದ "ತತ್ವವಿನಿರ್ಣಯ" ಎಂಬಲ್ಲಿ 'ವಿ' ಎಂಬ ಶಬ್ದವಿದೆ. ಹೀಗೆ ಹೇಳಿದ್ದರಿಂದ ಪಾಶುಪತ ಮೊದಲಾದ ಆಗಮದಿಂದ ಬರುವ ಜ್ಞಾನವನ್ನು ಬಿಡಲು ಕಾರಣವನ್ನು ಸೂಚನೆ ಮಾಡಿದಂತಾಯಿತು. ಅವುಗಳು ವೇದಕ್ಕೆ ವಿರೋಧಿಗಳು. ಆದ್ದರಿಂದ ವೇದದಲ್ಲಿ ಹೇಳಿದ ವಿಶಿಷ್ಟವಾದ ಪುರುಷಾರ್ಥಕ್ಕೆ ಅವುಗಳು ಕಾರಣಗಳಾಗುವುದಿಲ್ಲ.

** 'ಅಧ್ಯಾತ್ಮಪ್ರವಣೋ ಭೂತ್ವಾ ತಸ್ಯ ಸನ್ನಿಹಿತತ್ವತಃ' – ಸಂದರ್ಭ ಹೀಗಿದೆ. ದ್ವಿತೀಯಾಧ್ಯಾಯದಲ್ಲಿ ಬರುವ ಮೂರು ನಾಲ್ಕನೆ ಪಾದಗಳಿಗೆ ಭೇದವಿಲ್ಲ ಎಂದು ಪ್ರಶ್ನೆ. ಏಕೆಂದರೆ ಎರಡೂ ಯುಕ್ತಿವಿರೋಧವನ್ನೇ ಪರಿಹರಿಸುತ್ತವೆ. ಅದಕ್ಕೆ ಉತ್ತರವಾಗಿ ಎರಡಕ್ಕೂ ವ್ಯತ್ಯಾಸವಿದೆ ಎಂದು ಈ ಭಾಗದಿಂದ ತಿಳಿಸುತ್ತಿದ್ದಾರೆ. ನಾಲ್ಕನೆಯ ಪಾದವು ಅಧ್ಯಾತ್ಮವಿಷಯಕಶ್ರುತಿಗಳಿಗೆ ಬಹುಯುಕ್ತಿವಿರೋಧವನ್ನು ಪರಿಹರಿಸುತ್ತಿದೆ. ಆದ್ದರಿಂದ ಮೂರನೆಯ ಪಾದವು ಯುಕ್ತಿಸಹಿತಶ್ರುತಿವಿರೋಧಪರಿಹರಿಸುವುದರಿಂದ ಭೇದವಿದೆ. ಎರಡರಲ್ಲೂ ಶ್ರುತಿವಿರೋಧಪರಿಹಾರಮಾಡುತ್ತಿದ್ದಾಗ ಮೊದಲು ಯಾವ ಶ್ರುತಿಗಳ ಪರಿಹಾರ ಮಾಡಬೇಕು ಎಂಬ ಸಂಶಯಬಂದಾಗ ಅಧ್ಯಾತ್ಮವಿಷಯಕವಾದ ಶ್ರುತಿಗಳ ವಿರೋಧಪರಿಹಾರವನ್ನು ಕೊನೆಯದಾಗಿ ಮಾಡಬೇಕು. ಇದನ್ನು ಉಪಪಾದಿಸಲು ಸನ್ನಿಹಿತತ್ವತಃ ಎಂದಿದ್ದಾರೆ. ಇದರ ಅಭಿಪ್ರಾಯ ಆಧ್ಯಾತ್ಮಿಕವಾದದ್ದು ದೇಹೇಂದ್ರಿಯಾದಿಪದಾರ್ಥಗಳು. ಅದನ್ನು ಸರಿಯಾಗಿ ತಿಳಿದರೆ ಮೋಕ್ಷ ಸಿಗುವುದು. ವಿಪರೀತವಾಗಿ ತಿಳಿದಲ್ಲಿ ಬಂಧನಕ್ಕೆ ಕಾರಣವಾಗುವವು. ಹಾಗಾಗಿ ಅಂತರಂಗಸಾಧನವಾದದ್ದು ದೇಹೇಂದ್ರಿಯಾದಿ ಪದಾರ್ಥಗಳ ವಿಪರೀತಜ್ಞಾನ. ಹಾಗೂ ಸಮ್ಯಗ್-ಜ್ಞಾನ. ಇನ್ನು ಬಾಹ್ಯಪದಾರ್ಥಗಳ ಜ್ಞಾನವಾದರೋ ಬಂಧಮೋಕ್ಷಗಳಿಗೆ ಅಂತರಂಗಸಾಧನವಾಗಿಲ್ಲ. ಹಾಗಾಗಿ ದೇಹೇಂದ್ರಿಯಾದಿಗಳಿಗೆ ಸಂಬಂಧಪಟ್ಟ ವಿರೋಧಪರಿಹಾರವು ಮುಕ್ತಿಗೆ ಸನ್ನಿಹಿತವಾದುದರಿಂದ ನಾಲ್ಕನೆಯ ಪಾದದಲ್ಲೇ ಅದರ ಪರಿಹಾರ ಉಚಿತ. ಯಾವುದು ಅಂತರಂಗಸಾಧನವೋ ಅದೇ ಚರಮವಾಗುವುದರಿಂದ.

## ಗುರುಕೃಪಾಲಬ್ಧವಾದ ಐಶ್ವರ್ಯವುಳ್ಳವನು ಯಾರೂ ಕಂಡಿಲ್ಲವಲ್ಲ?

(ರಸರಂಜನೀ) — ನನ್ವಸ್ತು ಸರ್ವಂ ಗುರುಕೃಪಾಲಬ್ಧಮಸ್ತು ತಥಾಪಿ ಏತಲ್ಲಬ್ಧೈಶ್ವರ್ಯವಾನ್ ಕೋಽಪಿ ನ ದೃಷ್ಟಃ । ಅತಃ ಕಥಮೇತತ್ಪ್ರಾರ್ಥನಾ? ಇತ್ಯತ ಉಕ್ತಂ — ಭಗವಾನ್ ದಾತ್ವಿತ-ಯೇತಿ । ಸರ್ವಪ್ರಕಾರೇಣೋತ್ಸಾಹಕರಣೇಽಪಿ ಯೇ ಜ್ಞಾನಯೋಗ್ಯಾಸ್ತ ಏವ ಜ್ಞಾನಂ ಪ್ರಾಪ್ನು-ವಂತಿ ನಾನ್ಯೇ । ಅತಸ್ತವ ಯೋಗ್ಯತಾಭಾವೇ ಕಥಂ ಪ್ರಾರ್ಥನಯಾಪಿ ತತ್ಪ್ರಾಪ್ತಿಃ ಸ್ಯಾದಿತ್ಯತಃ — ಮೇ ಜ್ಞಾನಯೋಗ್ಯಸ್ಯೇತ್ಯುಕ್ತಮ್ । ಜ್ಞಾನಯೋಗ್ಯಸ್ಯಾಪಿ ತವೇದಾನೀಂ ಜ್ಞಾನಪ್ರತಿಬಂಧಕಸತ್ತ್ವಾತ್ ಕಥಂ ಪ್ರಾರ್ಥಿತೋಽಪ್ಯಸೌ ಪ್ರಾರ್ಥಿತಂ ದದ್ಯಾತ್ ಇತ್ಯತಃ –

'ಭಿನತ್ಕನೀನ (ಭಿನತ್ಕರ್ತಾ ನ) ಓದನಂ ಪಚ್ಯಮಾನಂ ಪರೋ ಗಿರಾ'

ಇತ್ಯಾದಿಸಿದ್ಧಕರ್ಮವಿಶೇಷಪರಿಪಾಕಕಾಲಸಾಕ್ಷಾತ್ಕರಣಪೂರ್ವಕತನ್ನಾಶಾದಿಸಾಮರ್ಥ್ಯವಿಶಿಷ್ಟಗುರು-ಕೃಪಾಲಬ್ಧಂ ತದಸ್ಯಾಪ್ಯಸ್ತಿ ಅತೋಽನವರತಂ ಪ್ರಾರ್ಥಿತಸ್ತಾದೃಶಕಾಲವಿಶೇಷಂ ಸಾಕ್ಷಾತ್ಕೃತ್ಯ ನಿರ್ಣಯನಿರೋಧಂ ನ್ಯಕ್ಕೃತ್ಯ ನಿರ್ಣೇಯಂ ದದಾತಿ ।. ಕಿಂ ತತ್ರ ಪ್ರತಿಬಂಧಕಚಿಂತಯಾ ಅಸ್ಮಾಕಮ್? ಇತ್ಯಾಶಯೇನೋಕ್ತಂ – ಮುನಿಃ ತತ್ತತ್ಕಾಲಕರ್ತವ್ಯಕಾರ್ಯವಿಶೇಷನಿರ್ಣಯವಾ-ನಿತಿ । ಯಥೋಕ್ತಮ್ — 'ವೇತ್ತಾ ವೇದ್ಯಸ್ಯ ಸರ್ವಸ್ಯ ಮುನಿಃ ಸದ್ಭಿರುದಾಹೃತಃ' ಇತಿ ।

ಅಲ್ಲ! ಪ್ರಾರ್ಥಿಸುವ ವ್ಯಕ್ತಿಗಳಿಗೆ ಎಲ್ಲವೂ ಗುರುಗಳ ಕೃಪೆಯಿಂದ ಸಿಗಲಿ. ಆದರೂ ಈ ರೀತಿ ಗುರುಗಳಿಂದ ಪಡೆದ ಐಶ್ವರ್ಯವುಳ್ಳವನು ಯಾರೂ ಕಂಡಿಲ್ಲ. ಆದ್ದರಿಂದ ಈ ರೀತಿಯ ಪ್ರಾರ್ಥನೆ ಮಾಡುವುದು ಎಷ್ಟು ಉಚಿತ? ಎಂಬ ಪ್ರಶ್ನೆಗೆ ಉತ್ತರವಾಗಿ "ಭಗವಾನ್" ಎಂದಿದ್ದಾರೆ. ಇಲ್ಲಿ ಆನಂದತೀರ್ಥಮುನಿಗಳು ಭಗವಾನ್ ಅಂದರೆ ಸಮಗ್ರವಾದ ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಜ್ಞಾನ, ವಿಜ್ಞಾನಗಳನ್ನು ಹೊಂದಿರುವವರು. ಹಾಗೂ ಇವುಗಳನ್ನು ತಮ್ಮ ಭಕ್ತರಿಗೆ ಕೊಡುವವರು ಎಂದರ್ಥ.

ಎಲ್ಲ ಕ್ರಮದಿಂದಲೂ ಗುರುಗಳನ್ನು ಪ್ರಾರ್ಥಿಸಿದರೂ ಯಾರು ಜ್ಞಾನಯೋಗ್ಯರೋ ಅವರಿಗೆ ಮಾತ್ರ ಜ್ಞಾನಪ್ರಾಪ್ತಿಯಾಗುವುದು. ಬೇರೆಯವರಿಗಲ್ಲ. ಆದ್ದರಿಂದ ನಿಮಗೆ ಯೋಗ್ಯತೆಯಿಲ್ಲದಿದ್ದಾಗ ಪ್ರಾರ್ಥನೆ ಮಾಡಿಯಾದರೂ ಏನು ಫಲ? ಎಂಬುದಕ್ಕೆ ಉತ್ತರವಾಗಿ 'ಮೇ' ಎಂದಿದ್ದಾರೆ. ಜ್ಞಾನಯೋಗ್ಯನಾದ ನನಗೆ ಎಂದಿದರ ಅರ್ಥ. ಅಲ್ಲ! ಜ್ಞಾನಯೋಗ್ಯರಾಗಿದ್ದರೂ ನಿಮಗೆ ಈಗ ಜ್ಞಾನಬರಲು ಪ್ರತಿಬಂಧಕವಿರುವುದರಿಂದ ನೀವು ಪ್ರಾರ್ಥನೆ ಮಾಡಿದರೂ ಆನಂದತೀರ್ಥ-ಮುನಿಗಳು ಪ್ರಾರ್ಥಿತವಾದದ್ದನ್ನು ಹೇಗೆ ಕೊಡಲು ಸಾಧ್ಯ? ಎಂಬ ಪ್ರಶ್ನೆಗೆ ಉತ್ತರ — ಪ್ರತಿ-ಬಂಧಕಗಳನ್ನು ನಾಶಮಾಡುವ ಮೂಲಕ ಒಂದು ಕಾಲವಿಶೇಷದಲ್ಲಿ ಗುರುಗಳೇ ಪ್ರಾರ್ಥಿತ-ವಾದದ್ದನ್ನು ನೀಡುವರು.

ಇವೇ ಮುಂತಾದ ವಾಕ್ಯಗಳಿಂದ ಕರ್ಮವಿಶೇಷಗಳ ಪರಿಪಾಕದ ಕಾಲವನ್ನು ಸಾಕ್ಷಾತ್ಕಾರ ಮಾಡುವ ಮೂಲಕ ಅದರ ನಾಶಾದಿಗಳನ್ನು ಮಾಡುವ ಸಾಮರ್ಥ್ಯವಿರುವ ಗುರುಗಳ ಕೃಪೆಯಿಂದ ಸಿಗುವಿಕೆಯು ಇವರಿಗೂ ಇದೆ. ಆದ್ದರಿಂದಲೇ ನಿರಂತರ ಪ್ರಾರ್ಥನೆ ಮಾಡಿದ್ದರಿಂದ ಆನಂದತೀರ್ಥ-ಮುನಿಗಳು ಆ ಕಾಲವನ್ನು ಸಾಕ್ಷಾತ್ಕಾರ ಮಾಡಿಕೊಂಡು ಪ್ರತಿಬಂಧಕವನ್ನು ನಿವಾರಣೆ ಮಾಡಿ ನಿರ್ಣಯವನ್ನು (ಪುರುಷಾರ್ಥವನ್ನು) ನೀಡುತ್ತಾರೆ. ಆದ್ದರಿಂದ ಪ್ರತಿಬಂಧಕ ಚಿಂತೆ ಏಕೆ? ಇದೆಲ್ಲವನ್ನೂ ಪರಿಹರಿಸಲು 'ಮುನಿಃ' ಎಂದಿದ್ದಾರೆ. ಮುನಿ ಎಂದರೆ ಆಯಾಯಾ ಕಾಲದಲ್ಲಿ ಮಾಡಬೇಕಾದ ಕಾರ್ಯಗಳ ನಿಶ್ಚಯ ಇರುವವನು. ಇದನ್ನು ಹೀಗೆ ಹೇಳಿದ್ದಾರೆ — 'ವೇತ್ತಾ ವೇದ್ಯಸ್ಯ ಸರ್ವಸ್ಯ ಮುನಿಃ ಸದ್ಭಿರುದಾಹೃತಃ' - 'ತಿಳಿಯಬೇಕಾದ ಎಲ್ಲವನ್ನೂ ತಿಳಿದಿರುವವನನ್ನೇ ಮುನಿಯೆಂದು ಜ್ಞಾನಿಗಳು ಹೇಳುತ್ತಾರೆ'.

## ಭಿನತ್ ಕನೀನ ಓದನಂ - ವೇದಮಂತ್ರಾರ್ಥ

ಉದಾ —

अतीदु शक्र ओहत इन्द्रो विश्वा अति द्विषः ।
भिनत्कनीन ओदनं पच्यमानं परो गिरा ॥११॥
अर्भको न कुमारकोऽधि तिष्ठन्न् अवं रथम् ।
स पक्षन् महिषं मृगं पित्रे मात्रे विभुक्रतुम् ॥१२॥ (अथर्ववेदः काण्ड २० सूक्त ९२)

अतीदु शक्र ओहत इन्द्रो विश्वा अति द्विषः ।
भिनत्कनीनं ओदनं पच्यमानं परो गिरा ॥ (ऋग्वेद ८.६९.१४)

ಶಕ್ರಃ = ಶಕ್ತರಾದ, ಇಂದ್ರಃ = ವೇದವ್ಯಾಸರು, ವಿಶ್ವಾ = ಎಲ್ಲ, ದ್ವಿಷಃ = ಅಜ್ಞಾನಪಾಪಾದಿಗಳಿಂದ, ಅತಿ = ತನ್ನ ಭಕ್ತರನ್ನು ದಾಟಿಸಿ, ಅತಿ = ಅತಿಶಯವಾಗಿ, ಓಹತೇ ಇತ್ ಉ = ತನ್ನನ್ನು ಹೊಂದಿಸಿಕೊಡುತ್ತಾರೆಯಷ್ಟೆ. ಪರಃ = ಸರ್ವೋತ್ತಮನಾದ, ಕನೀನಃ = ಕನ್ಯಾವಸ್ಥೆಯಲ್ಲಿ ಸತ್ಯ-ವತಿಯಲ್ಲಿ ಹುಟ್ಟಿದ ವೇದವ್ಯಾಸರು, ಗಿರಾ = ವೇದವಾಕ್ಯಶ್ರವಣಾದಿಗಳಿಂದಲೇ, ಪಚ್ಯಮಾನಂ = ಪಾಕವನ್ನು ಹೊಂದುವ, ಓದನಂ = ಕರ್ಮಬಂಧವನ್ನು, ಭಿನತ್ = ನಾಶಪಡಿಸಿದರು.

(ಕರ್ಮನಿರ್ಣಯ) ವಿಶ್ವಾನ್ ದ್ವಿಷೋಽಜ್ಞಾನಪಾಪಾದೀನತೀತ್ಯ ಶಕ್ರೋ ವಿಷ್ಣುಃ ಸ್ವಭಕ್ತಾನತಿ-ವಹತ್ಯೇವ ಹಿ । 'ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್' ।

'ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್' ಇತ್ಯಾದಿಪ್ರಸಿದ್ಧಮ್ ಉಶಬ್ದೇನಾಹ ॥'

ದ್ವಿಷೋऽತೀತ್ಯಾತಿಶಯೇನಾತ್ಮಾನಂ ಪ್ರತ್ಯೋಹತ ಇತ್ಯತಿಶಬ್ದದ್ವಯಾರ್ಥಃ । ಓದನಂ ಉಂದತ್ವೇಃ ಕರ್ಮಬಂಧನಮಭಿನದ್ ಭಗವಾನ್ । ಕಾನೀನೋ ಬಾದರಾಯಣಃ । ಪರಃ ಪರಮಾತ್ಮಾ । ಗಿರ್‍ೈವ ಪಚ್ಯಮಾನಂ ಪರಿಪಾಕಕಾಲೇ ।

'ಸಂಶ್ಲೇಷಾದೋದನಂ ಕರ್ಮ ಪಚ್ಯಮಾನಂ ಗಿರ್‍ೈವ ಹಿ ।
ಅಭಿನದ್ ಭಗವಾನ್ವ್ಯಾಸಃ ಸ್ವಭಕ್ತಾನಾಮಶೇಷತಃ' ಇತಿ ವ್ಯಾಸಸಂಹಿತಾಯಾಮ್ ॥

– ಎಲ್ಲ ರೀತಿಯಾದ ಅಜ್ಞಾನ ಪಾಪ ಮೊದಲಾದುದನ್ನು ಕಳೆದು ಭಕ್ತರನ್ನು ವಿಷ್ಣುವು ದಾಟಿಸಿ ತನ್ನನ್ನು ಹೊಂದುವಂತೆ ಮಾಡುತ್ತಾನೆ. ಇದು ವೇದದಲ್ಲಿಯೂ ಪ್ರಸಿದ್ಧ. ಯಾರನ್ನು ತನ್ನ ಭಕ್ತರನ್ನಾಗಿ ಸ್ವೀಕರಿಸುವ ಇಚ್ಛೆ ಬರುತ್ತದೋ ಆಗ ತನ್ನ ಸ್ವರೂಪವನ್ನು ಪ್ರದರ್ಶಿಸಿ ಅನುಗ್ರಹಿಸುತ್ತಾನೆ. ಕೃಷ್ಣ ಭಗವದ್ಗೀತೆಯಲ್ಲಿ ಹೇಳಿದ ಮಾತು ಪ್ರಸಿದ್ಧವಾಗಿದೆ. ಇದನ್ನು "ಉ" ಎಂಬ ಶಬ್ದವು ಸೂಚಿಸುತ್ತಿದೆ ಎಂದಿದ್ದಾರೆ.

"ಪಾರ್ಥನೇ! ಯಾರು ಸಕಲಕರ್ಮಗಳನ್ನು ನನಗೆ ಸಮರ್ಪಣೆ ಮಾಡಿ ನನ್ನಲ್ಲೇ ಮನಸ್ಸನ್ನಿಟ್ಟು ಧ್ಯಾನ ಮಾಡುತ್ತಾರೋ ಅಂತಹ ಭಕ್ತರನ್ನು ಮೃತ್ಯು ಎಂಬ ಸಂಸಾರಸಮುದ್ರದಿಂದ ಕೂಡಲೇ ಉದ್ಧರಿಸುವೆನು" ಎಂದು.

ಇನ್ನು ಎರಡು ಅತಿಶಬ್ದಗಳು ಶ್ರುತಿಯಲ್ಲಿವೆ. ಅವುಗಳು ಎಲ್ಲ ರೀತಿಯಾದ ಅಜ್ಞಾನ ಪಾಪಾದಿಗಳನ್ನು ನಾಶಮಾಡಿ, ಅರ್ಥಾತ್ ಅವುಗಳಿಂದ ಮುಕ್ತರನ್ನಾಗಿ ಮಾಡಿ ತನ್ನನ್ನು ಹೊಂದುವಂತೆ ಮಾಡುತ್ತಾನೆ ಎಂದು ಹೇಳುತ್ತಿವೆ. ಕರ್ಮದಿಂದ ಉಂಟಾದ ಸಂಸಾರಬಂಧನವು ಓದನ ಎಂಬ ಶಬ್ದದಿಂದ ಹೇಳಲ್ಪಡುತ್ತಿದೆ. ಇದನ್ನು ಸತ್ಯವತಿಯಲ್ಲಿ ಅವತರಿಸಿದ ವೇದವ್ಯಾಸರು ನಾಶಗೊಳಿಸುತ್ತಾರೆ. ಯಾವಾಗ ಎಂದರೆ ಪರಿಪಕ್ವಕಾಲಬಂದಾಗ ಎಂದು ತಿಳಿಯಬೇಕು. ಅಂದರೆ ವೇದಾದಿಶ್ರವಣಾದಿಗಳನ್ನು ಮಾಡಿದ ಮೇಲೆ ಯೋಗ್ಯವಾದ ಕಾಲ ಬಂದಾಗ ಅಶೇಷಕರ್ಮಬಂಧನವನ್ನು ನಾಶಮಾಡುತ್ತಾರೆ ಎಂದು.

## ವೇದವ್ಯಾಸರು ಕಾನೀನ ಎಂದರೇನು?

ಶ್ರೀವೇದವ್ಯಾಸದೇವರಲ್ಲಿ ಸಂಪೂರ್ಣಾಧ್ಯಯನವನ್ನು ನಡೆಸಿರುವ ಶ್ರೀಮದಾನಂದತೀರ್ಥಭಗವತ್ಪಾದರು "ಕರ್ಮನಿರ್ಣಯ" ಗ್ರಂಥದಲ್ಲಿ 'ಅತೀದು ಶಕ್ರ ಓಹತ' ಎನ್ನುವ ಶ್ರುತಿಯಲ್ಲಿಯ 'ಭಿನತ್ ಕನೀನ ಓದನಂ ಪಚ್ಯಮಾನಂ ಪರೋ ಗಿರಾ' ಎಂಬ ಶ್ರುತಿಭಾಗಕ್ಕೆ 'ಅಭಿನದ್ ಭಗವಾನ್

ಕಾನೀನೋ ಬಾದರಾಯಣಃ' ಎಂಬುದಾಗಿ ವ್ಯಾಖ್ಯಾನ ಮಾಡಿರುವರು. ಈ ಬಗ್ಗೆ ಸರ್ವಜ್ಞಕಲ್ಪರಾದ ಶ್ರೀಮಟ್ಟೀಕಾಕೃತ್ಪಾದರು 'ಕಾನೀನ'ಶಬ್ದಕ್ಕೆ ಟೀಕೆ ಬರೆಯುತ್ತಾ 'ಕನ್ಯಾಯಾಃ ಕನೀನ ಚ । ವೃದ್ಧ್ಯಭಾವಶ್ಛಾಂದಸಃ । ಅಪತ್ಯತ್ವೋಕ್ತ್ಯಾ ಪ್ರಾಪ್ತಂ ಪ್ರಾಕೃತತತ್ತ್ವಭ್ರಾಂತಿಮಪಾಕರ್ತುಂ ಪರ ಇತ್ಯುಕ್ತಮ್' ಎಂದು ಅಪ್ಪಣೆ ಕೊಡಿಸಿದರು. ಈ ಟೀಕಾವಚನಕ್ಕೆ ವಿವರಣೆಯನ್ನು ನೀಡುತ್ತಾ ಶ್ರೀಮದ್ರಾಘವೇಂದ್ರತೀರ್ಥರು ತಮ್ಮ 'ಭಾವದೀಪ'ದಲ್ಲಿ ಹೀಗೆ ಹೇಳಿರುವರು. 'ಕನೀನ ಇತ್ಯಸ್ಯ ಕಾನೀನ ಇತ್ಯುಕ್ತಿಂ ಸಾಧಯತಿ - ನ ತು ಕನ್ಯಾಯಾ ಇತಿ । ಕನ್ಯಾಶಬ್ದಾದಪತ್ಯೇಽರ್ಥೇ ಪರಃ ಪ್ರತ್ಯಯಃ ಕನ್ಯಾಪದಸ್ಯ ಕನೀನಾದೇಶಶ್ಚ ಭವತೀತಿ ಸೂತ್ರಾರ್ಥಃ । ತರ್ಹಿ ತದ್ಧಿತೇಷ್ವಚಾಮಾದೇಃ ಇತಿ ವೃದ್ಧ್ಯಾ ಭಾವ್ಯಮ್ । ಮಂತ್ರೇ ಕಥಂ ಕನೀನ ಇತ್ಯುಕ್ತಿರಿತ್ಯತ ಆಹ - ವೃದ್ಧ್ಯಭಾವ ಇತಿ ಅಪತ್ಯತ್ವೋಕ್ತ್ಯಾ ಇತಿ ॥ ಛಾಂದಸಕನೀನಶಬ್ದೇನೇತಿ ಭಾವಃ । ತಥೇತಿ । ಪ್ರಾಕೃತತತ್ತ್ವಭ್ರಮನಿರಾಸೋ ಯಥಾ ಭವತಿ ತಥೇತ್ಯರ್ಥಃ ॥

ಇಲ್ಲಿ ಸರ್ವಜ್ಞಕಲ್ಪರಾದ ಶ್ರೀಟೀಕಾಚಾರ್ಯರು ಉದಾಹರಿಸಿದ 'ಕನ್ಯಾಯಾಃ ಕನೀನ ಚ' ಎಂಬ ಪಾಣಿನಿಸೂತ್ರದಲ್ಲಿ 'ಯೋಗವಿಭಾಗಾದಿಷ್ಟಸಿದ್ಧಿಃ' ಎಂಬ ವ್ಯಾಕರಣಪರಿಭಾಷಾನುಸಾರವಾಗಿ 'ಕನ್ಯಾಯಾಃ' ಎಂದೂ ಮತ್ತು 'ಕನೀನ ಚ' ಎಂದೂ ಪಾಣಿನಿಸೂತ್ರವನ್ನು ಎರಡಾಗಿ ವಿಭಾಗ ಮಾಡಬೇಕು. ಇದರಲ್ಲಿ ಮೊದಲನೆಯ 'ಕನ್ಯಾಯಾಃ' ಎಂಬ ಯೋಗಕ್ಕೆ, ಅಂದರೆ ಸೂತ್ರಕ್ಕೆ ಅಪತ್ಯಾರ್ಥದಲ್ಲಿ 'ಕಾನೀನ'ಶಬ್ದ ಸಿದ್ಧಿಸುವುದು. ಇಲ್ಲಿ ಕಾನೀನಃ ಅಂದರೆ ಕರ್ಣ ಎಂದರ್ಥ. ಕೆಳಸೂತ್ರದಿಂದ ಮೇಲಿನ ಸೂತ್ರಕ್ಕೆ ಕನೀನ ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳತಕ್ಕದ್ದು. ಇದನ್ನೇ ಅಪಕರ್ಷಾನುವೃತ್ತಿ ಎಂದೆನ್ನುವರು. ಈ ವ್ಯಾಖ್ಯಾನವು ಅಪತ್ಯಾರ್ಥದಲ್ಲಿ ಕುಂತೀ-ಗರ್ಭಸಂಜಾತನಾದ ಕರ್ಣನ ವಿಷಯದಲ್ಲಿ ಸರಿಹೋಗುವುದು. ಕಾನೀನಃ = ಕರ್ಣಃ. ಆದರೆ ಅಗಣ್ಯಗುಣಮಂಡಿತರಾದ, ಸರ್ವೋತ್ತಮರಾದ ಶ್ರೀವೇದವ್ಯಾಸರ ವಿಷಯದಲ್ಲಿ 'ಕನೀನ ಚ' ಎಂಬ ಸೂತ್ರವನ್ನು ಯೋಜನೆ ಮಾಡತಕ್ಕದ್ದು. ಇಲ್ಲಿ ಕೇವಲ ಸ್ವಾರ್ಥದಲ್ಲಿ ಮಾತ್ರವೇ ತದ್ಧಿತಪ್ರತ್ಯಯ ಬರುವುದು. ಅಪತ್ಯಾರ್ಥದಲ್ಲಿ ಅಲ್ಲವೇ ಅಲ್ಲ. ಆದ ಕಾರಣ 'ಕನೀನ ಏವ ಕಾನೀನಃ' ಎಂದು ವ್ಯಾಖ್ಯಾನಿಸಬೇಕು. ಸರ್ವಜ್ಞಕಲ್ಪರಾದ ಶ್ರೀಮಟ್ಟೀಕಾಕೃತ್ಪಾದರು ಇಂತಹ ರಹಸ್ಯಾಭಿಪ್ರಾಯವನ್ನೇ ಹೃದಯದಲ್ಲಿಟ್ಟುಕೊಂಡು 'ಕನ್ಯಾಯಾಃ ಕನೀನ ಚ' ಎಂಬ ಪಾಣಿನಿಸೂತ್ರವನ್ನುದಾಹರಿಸಿರುವರು. ಶ್ರೀವೇದವ್ಯಾಸರ ವಿಷಯದಲ್ಲಿ ಅಪತ್ಯಾರ್ಥವು ಅಲ್ಲವೇ ಅಲ್ಲ. ಕೇವಲ 'ಸ್ವಾರ್ಥ'ದಲ್ಲಿ ಮಾತ್ರವೇ ಎಂದು ಶ್ರೀಜಯತೀರ್ಥಶ್ರೀಮಚ್ಚರಣರ ಆಕೂತವು. ಈ ರಹಸ್ಯವನ್ನೇ ಮನಸ್ಸಿನಲ್ಲಿಟ್ಟುಕೊಂಡು ಶ್ರೀಮನ್ಮಂತ್ರಾಲಯಮಹಾಪ್ರಭುಗಳು ಈ ಖುಗರ್ಥವನ್ನೇ ವ್ಯಾಖ್ಯಾನಿಸುತ್ತಾ 'ಕನೀನಃ ಪರಃ ಸರ್ವೋತ್ತಮೋ ಬಾದರಾಯಣಃ' ಎಂದು ಸುಸ್ಪಷ್ಟವಾಗಿ ಪ್ರತಿಪಾದಿಸಿರುವರು. ಅಂದರೆ 'ಕನೀನಃ ಕಮನೀಯೋ ಭವತಿ' ಎನ್ನುವ ನಿರುಕ್ತಶಾಸ್ತ್ರವಚನಾನುಸಾರವಾಗಿ 'ಕನೀನಃ = ಕಮನೀಯಃ =

ಅತ್ಯಂತಸುಂದರಾಕೃತಿಃ ಪರಃ ಸರ್ವೋತ್ತಮೋ ಬಾದರಾಯಣಃ' ಎಂಬುದಾಗಿ ಶ್ರೀಮನ್ಮಧ್ವರಾಯರ ಆಶಯವೆಂದು ಶ್ರೀಟೀಕಾಕೃತ್ಪಾದರ ಹಾರ್ದವೆಂದು ಶ್ರೀಮಂತ್ರಾಲಯಪ್ರಭುಗಳ ಅಭಿಪ್ರಾಯವು. ಈ ವಿಷಯವನ್ನೇ ಪುನಃ ನಿರ್ಧಾರಣೆ ಮಾಡುತ್ತಾ ಅವ್ಯವಹಿತಕರ್ಮನಿರ್ಣಯೋದಾಹೃತ 'ಅರ್ಭಕೋ ನ ಕುಮಾರಕೋ' ಎನ್ನುವ ಮಂತ್ರವನ್ನು ವ್ಯಾಖ್ಯಾನಿಸುವ ಸಂದರ್ಭದಲ್ಲಿ ಶ್ರೀಟೀಕಾ-ಕೃತ್ಪಾದರು 'ನ ಹಿ ಕುಮಾರಕೋ ನ ಕಸ್ಯಾಪ್ಯಪತ್ಯಮ್' ಎಂಬುದಾಗಿ ವ್ಯಾಖ್ಯಾನಿಸಿ ಸಾತ್ವಿಕ-ಜನರನ್ನನುಗ್ರಹಿಸಿದರು. ಈ ಪರಮರಹಸ್ಯವಾದ ಶ್ರೀಟೀಕಾಕೃತ್ಪಾದರ ವಚನವನ್ನು ವಿವರಣೆ ಮಾಡುತ್ತಾ ಶ್ರೀಮಂತ್ರಾಲಯಪ್ರಭುಗಳು 'ಕನೀನಶಬ್ದೋ ವ್ಯಾಸ ಉಪಚರಿತಃ ಪ್ರಕಾರಾಂತರೇಣ ವಾ ನಿರ್ವಕ್ತಿ' ಎಂದು ಸ್ಪಷ್ಟೀಕರಿಸುತ್ತಾ ಋಗರ್ಥದಲ್ಲಿ 'ಯದ್ವಾ ನ ಕುಮಾರಕಃ ನ ಕಸ್ಯಾಪ್ಯ-ಪತ್ಯಭೂತಃ' ಎಂದು ನಿರೂಪಿಸಿರುವರು. ಏತಾವತಾ ಶ್ರೀವೇದವ್ಯಾಸರ ವಿಷಯದಲ್ಲಿ ಅಪತ್ಯಾರ್ಥಕತದ್ಧಿತಪ್ರತ್ಯಯವು ಬರುವುದೇ ಇಲ್ಲವೆಂದು ಈ ಮೂರ್ವರ ನಿಶ್ಚಿತಾಭಿಪ್ರಾಯವು.

ಶ್ರೀಮನ್ಮಧ್ವಗುರುಗಳ 'ಕಾನೀನೋ ಬಾದರಾಯಣಃ' ಎಂಬ ವಾಕ್ಯಗತಕಾನೀನಶಬ್ದವು ಕೇವಲ ಸ್ವಾರ್ಥದಲ್ಲೇ ಪ್ರಯೋಗಿಸಲ್ಪಟ್ಟಿದೆ. 'ಕನೀನ ಏವ ಕಾನೀನಃ' ಎಂಬುದಾಗಿ ಈ ವಾಕ್ಯಾರ್ಥವು. ಶ್ರೀ-ಬಾದರಾಯಣರ ವಿಷಯದಲ್ಲಿ 'ಕನ್ಯಾಯಾ ಅಪತ್ಯಂ' ಎಂದು ವ್ಯಾಖ್ಯಾನಿಸಬಾರದು. ಅಪತ್ಯಾ-ರ್ಥದಲ್ಲಿಯಾದರೆ ಶ್ರೀಮನ್ಮಹಾಭಾರತಶಾಸ್ತ್ರಕ್ಕೆ ವಿರುದ್ಧವು. ಕಾರಣ ಪತಂಜಲಮಹಾ-ಭಾಷ್ಯದಲ್ಲಿ 'ಕನ್ಯಾಯಾಃ ಕನ್ಯೋಕ್ತಾಯಾಃ ಕನ್ಯಾಭಿಮತಾಯಾಃ ಸುದರ್ಶನಾಯಾ ಯದಪತ್ಯಂ ಸ ಕಾನೀನ ಇತಿ'(3/1/116) ಎಂದು ವ್ಯಾಖ್ಯಾನಿಸಲ್ಪಟ್ಟಿದೆ. ಈ ಬಗ್ಗೆ ಪ್ರದೀಪಕಾರ ಕೈಯ್ಯಟೋ-ಪಾಧ್ಯಾಯನು 'ಸುದರ್ಶನಾಯಾ ಇತಿ । ಪ್ರಕಟದರ್ಶನಾಯಾಃ ಅಗುಪ್ತತ್ವಾದಿತ್ಯರ್ಥಃ । ಅನ್ಯೇತ್ಯಾಹುಃ । ಮುನಿದೇವತಾ ಮಹಾತ್ಮ್ಯಾದ್ವಾ ಪುಂಯೋಗೇಽಪ್ಯಕ್ಷತಯೋನಿರ್ಭವತಿ । ಯಥಾ ಕುಂತೀ ಮಂತ್ರಾಹೂತದಿನಕರೋತ್ಪಾದಿತಕರ್ಣಾಖ್ಯಪುತ್ರಾಪಿ ಪುನಃ ಕನ್ಯೇವಾಭೂತ್ । ತದಪತ್ಯಂ ಕಾನೀನಶಬ್ದಾಭಿಧೇಯಮ್ ।'. ಇದನ್ನೇ ಪ್ರದೀಪೋದ್ಯೋತಕಾರನಾದ ನಾಗೇಶಭಟ್ಟನು ಸ್ಪಷ್ಟೀ-ಕರಿಸಿದನು. ಅಂತತೋಗತ್ಯಾ ಮಹಾಭಾಷ್ಯಕಾರನಾದ ಪತಂಜಲಿ, ಕೈಯ್ಯಟೋಪಾಧ್ಯಾಯ, ನಾಗೇಶಭಟ್ಟ 'ಕಾನೀನಃ = ಕರ್ಣಃ' ಎಂದು ಉದಾಹರಿಸಿ ವ್ಯಾಖ್ಯಾನಿಸಿರುವರೇ ಹೊರತು 'ಕಾನೀನೋ ವ್ಯಾಸಃ' ಎಂದು ಹೇಳಲಿಲ್ಲ. ಇದನ್ನು ಸಾತ್ವಿಕರು ಗಮನಿಸತಕ್ಕದ್ದು. ಇದೇ ವಿಷಯವನ್ನು ಶ್ರೀಭಾವಿಸಮೀರರೂ, ಅಸಮಸಮರೂ ಆದ ಶ್ರೀವಾದಿರಾಜಪೂಜ್ಯಚರಣರು ಶ್ರೀಮನ್ಮಹಾ-ಭಾರತತಾತ್ಪರ್ಯನಿರ್ಣಯಭಾವಪ್ರಕಾಶಿಕೆ(10/37)ಯಲ್ಲಿ ಹೀಗೆ ಸಾತ್ವಿಕಜನೋದ್ಧಾರಾರ್ಥ-ವಾಗಿ ವಿಪುಲೀಕರಿಸಿದರು --

'ಉತ್ತಾರಯಂತೀಮಥೇತ್ಯತ್ರ ಅಥಶಬ್ದೇನ ವಸಿಷ್ಠಯಾಜ್ಞವಲ್ಕ್ಯಾದೀನಾಂ ಸದಸಿ ವಿವಾಹ-

ಹೋಮೇ ಕೃತೇ ಸತಿ ಪಿತ್ರಾ ವಸುಚಕ್ರವರ್ತಿನಾ, ಧಾರಾಪೂರ್ವಕಂ ದಾನಾಂತರಮಿತಿ ಭಾರತೇ ಪ್ರಸಿದ್ಧಕಥಾಂ ಸ್ಮಾರಯತಿ । ಏವಂ ಚ ಸಮುದ್ರಗಾಂ ಮಾರ್ತಂಡಸುತಾಂ ಯಮುನಾಂ ತಾರಯಂತೀಂ ತಾಂ ಕನ್ಯಾಂ ಅಧಿಜಗಾಮೇತಿ ಯೋಜನಾ । ತಸ್ಮಾತ್ 'ಕಾನೀನೋ ವ್ಯಾಸಃ' ಇತಿ ಯದವಿದುಷಾಂ ವಚನಂ ತದ್ಭಾರತಕಥಾಪರಿಜ್ಞಾನಶೂನ್ಯತ್ವನಿಮಿತ್ತಮ್ । ವ್ಯಾಸಸ್ಯ ತು ಜನ್ಮ ಭಾರತೋಕ್ತರೀತ್ಯಾ ಪರಮ ಸುಶೋಭನಮೇವೇತಿ ಮಹಾಭಾರತತಾತ್ಪರ್ಯನಿರ್ಣಯಕೃತೋ ಭಾವಃ ॥'

ಹೀಗಿರಲಾಗಿ ಸರ್ವೋತ್ತಮರಾದ ಶ್ರೀವೇದವ್ಯಾಸರಿಗೆ ಗರ್ಭವಾಸಾದಿ ಕ್ಲೇಶಗಳೆಲ್ಲಿ? 'ಯಥಾ ನರಸಿಂಹಾಕೃತಿರಾವಿರಾಸೀತ್' ಎಂಬುವ ನಿರ್ಣಯವಚನದಂತೆ ಎಂದು ತಿಳಿಯತಕ್ಕದ್ದು. ವಸಿಷ್ಠ, ಯಾಜ್ಞವಲ್ಕ್ಯಾದಿಗಳ ಸಮಕ್ಷಮದಲ್ಲಿ ವಿವಾಹಹೋಮಪ್ರಕ್ರಿಯಕ್ಕನುಸಾರವಾಗಿ ವಸುಚಕ್ರವರ್ತಿ ಧಾರಾಪೂರ್ವಕವಾಗಿ ಪರಾಶರರಿಗೆ ಕನ್ಯಾದಾನ ಮಾಡಿದರೆಂಬುದಾಗಿ ಭಾರತಾಖ್ಯಾಯಿಕೆ-ಯುಂಟೆಂದು ಶ್ರೀಭಾವಿಸಮೀರರು ಪ್ರತಿಪಾದಿಸುತ್ತಾ 'ಕಾನೀನೋ ವ್ಯಾಸಃ (ಕನ್ಯಾಯಾ ಅಪತ್ಯಂ ಪುಮಾನ್) ಎಂದು ಅವಿದ್ವಾಂಸರಾದ ಮೂಢರು ಅರ್ಥಾತ್ ಕಾಶಿಕಾವೃತ್ತಿಕಾರನಾದ ಜಯಾದಿತ್ಯನು, ಅವನ ಅನುಯಾಯಿಗಳು ಭಾರತಕಥಾಪರಿಜ್ಞಾನಶೂನ್ಯರು ಎಂದು ಆಕ್ಷೇಪಿಸಿದರು. ಶ್ರೀವೇದವ್ಯಾಸರ ಜನ್ಮ, ವಿವಾಹಾನಂತರವೇ ಜರುಗಿದೆ ಎಂದೂ, ಅದು ಪರಮಶೋಭನವೆಂದೂ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಕಾರರಾದ ಶ್ರೀಮಧ್ವಾಚಾರ್ಯರ ಭಾವವು ಇದೇ ಎಂಬುದಾಗಿ ಶ್ರೀಭಾವಿಸಮೀರರು ಸ್ಪಷ್ಟಗೊಳಿಸಿದರು.

ಆದರೆ ಕೆಲವು ಆಧುನಿಕರು ಭಾವಪ್ರಕಾಶಿಕಾಗ್ರಂಥೋಕ್ತ ಈ ಸಂದರ್ಭವನ್ನೂ ಪ್ರಕ್ಷಿಪ್ತವೆನ್ನುತ್ತಾರೆ. 'ಸತ್ಯವತಿ, ಪರಾಶರರ ವಿವಾಹವಾಗಿಲ್ಲ' ಎಂದೇ ಶ್ರೀಮನ್ಮಹಾಭಾರತೋಕ್ತಿ ಮತ್ತು ಸತ್ಯವತಿಯ ಕನ್ಯಾವಸ್ಥೆಯಲ್ಲಿಯೇ ಶ್ರೀವೇದವ್ಯಾಸರು ಜನಿಸಿದರು ಎಂದು ಪ್ರತಿಪಾದಿಸುತ್ತಿರುವರು. ಆದರೆ ಈ ವಾದವು ಸರಿಯಲ್ಲ. ಇದು ದುರ್ವಾದ. ಸಚ್ಛಾಸ್ತ್ರವಿರುದ್ಧವು.

ಶ್ರೀಮನ್ಮಹಾಭಾರತವೂ ಕೂಡ ಶ್ರೀಸತ್ಯವತೀಪರಾಶರರ ಅಭೂತಪೂರ್ವವಾದ ವಿವಾಹವನ್ನು ಚಿತ್ರಿಸುತ್ತದೆ. ತದ್ಯಥಾ --

### ಸತ್ಯವತೀಪರಾಶರರ ವಿವಾಹ - ಮಹಾಭಾರತ

ವೈಶಂಪಾಯನಃ —

ಯಾಜ್ಞವಲ್ಕ್ಯಂ ಸಮಾಹೂಯ ವಿವಾಹಾಚಾರ್ಯಮಿತ್ಯುತ |
ವಸುಂ ಚಾಪಿ ಸಮಾಹೂಯ ವಸಿಷ್ಠೋ ಮುನಿಭಿಃ ಸಹ |
ವಿವಾಹಂ ಕಾರಯಾಮಾಸ ಶ್ರುತಿದೃಷ್ಟೇನ ಕರ್ಮಣಾ ||130||

ಅತ್ಯಂತಸುಂದರಾಕೃತಿಃ ಪರಃ ಸರ್ವೋತ್ತಮೋ ಬಾದರಾಯಣಃ' ಎಂಬುದಾಗಿ ಶ್ರೀಮನ್ಮಧ್ವರಾಯರ ಆಶಯವೆಂದು ಶ್ರೀಟೀಕಾಕೃತ್ಪಾದರ ಹಾರ್ದವೆಂದು ಶ್ರೀಮಂತ್ರಾಲಯಪ್ರಭುಗಳ ಅಭಿಪ್ರಾಯವು. ಈ ವಿಷಯವನ್ನೇ ಪುನಃ ನಿರ್ಧಾರಣೆ ಮಾಡುತ್ತಾ ಅವ್ಯವಹಿತಕರ್ಮನಿರ್ಣಯೋದಾಹೃತ 'ಅರ್ಭಕೋ ನ ಕುಮಾರಕೋ' ಎನ್ನುವ ಮಂತ್ರವನ್ನು ವ್ಯಾಖ್ಯಾನಿಸುವ ಸಂದರ್ಭದಲ್ಲಿ ಶ್ರೀಟೀಕಾಕೃತ್ಪಾದರು 'ನ ಹಿ ಕುಮಾರಕೋ ನ ಕಸ್ಯಾಪ್ಯಪತ್ಯಮ್' ಎಂಬುದಾಗಿ ವ್ಯಾಖ್ಯಾನಿಸಿ ಸಾತ್ವಿಕಜನರನ್ನನುಗ್ರಹಿಸಿದರು. ಈ ಪರಮರಹಸ್ಯವಾದ ಶ್ರೀಟೀಕಾಕೃತ್ಪಾದರ ವಚನವನ್ನು ವಿವರಣೆ ಮಾಡುತ್ತಾ ಶ್ರೀಮಂತ್ರಾಲಯಪ್ರಭುಗಳು 'ಕನೀನಶಬ್ದೋ ವ್ಯಾಸ ಉಪಚರಿತಃ ಪ್ರಕಾರಾಂತರೇಣ ವಾ ನಿರ್ವಕ್ತಿ' ಎಂದು ಸ್ಪಷ್ಟೀಕರಿಸುತ್ತಾ ಋಗರ್ಥದಲ್ಲಿ 'ಯದ್ವಾ ನ ಕುಮಾರಕಃ ನ ಕಸ್ಯಾಪ್ಯಪತ್ಯಭೂತಃ' ಎಂದು ನಿರೂಪಿಸಿರುವರು. ಏತಾವತಾ ಶ್ರೀವೇದವ್ಯಾಸರ ವಿಷಯದಲ್ಲಿ ಅಪತ್ಯಾರ್ಥಕತದ್ಧಿತಪ್ರತ್ಯಯವು ಬರುವುದೇ ಇಲ್ಲವೆಂದು ಈ ಮೂರ್ವರ ನಿಶ್ಚಿತಾಭಿಪ್ರಾಯವು.

ಶ್ರೀಮನ್ಮಧ್ವಗುರುಗಳ 'ಕಾನೀನೋ ಬಾದರಾಯಣಃ' ಎಂಬ ವಾಕ್ಯಗತಕಾನೀನಶಬ್ದವು ಕೇವಲ ಸ್ವಾರ್ಥದಲ್ಲೇ ಪ್ರಯೋಗಿಸಲ್ಪಟ್ಟಿದೆ. 'ಕನೀನ ಏವ ಕಾನೀನಃ' ಎಂಬುದಾಗಿ ಈ ವಾಕ್ಯಾರ್ಥವು. ಶ್ರೀಬಾದರಾಯಣರ ವಿಷಯದಲ್ಲಿ 'ಕನ್ಯಾಯಾ ಅಪತ್ಯಂ' ಎಂದು ವ್ಯಾಖ್ಯಾನಿಸಬಾರದು. ಅಪತ್ಯಾರ್ಥದಲ್ಲಿಯಾದರೆ ಶ್ರೀಮನ್ಮಹಾಭಾರತಶಾಸ್ತ್ರಕ್ಕೆ ವಿರುದ್ಧವು. ಕಾರಣ ಪತಂಜಲಮಹಾಭಾಷ್ಯದಲ್ಲಿ 'ಕನ್ಯಾಯಾಃ ಕನ್ಯೋಕ್ತಾಯಾಃ ಕನ್ಯಾಭಿಮತಾಯಾಃ ಸುದರ್ಶನಾಯಾ ಯದಪತ್ಯಂ ಸ ಕಾನೀನ ಇತಿ'(3/1/116) ಎಂದು ವ್ಯಾಖ್ಯಾನಿಸಲ್ಪಟ್ಟಿದೆ. ಈ ಬಗ್ಗೆ ಪ್ರದೀಪಕಾರ ಕೈಯ್ಯಟೋಪಾಧ್ಯಾಯನು 'ಸುದರ್ಶನಾಯಾ ಇತಿ । ಪ್ರಕಟದರ್ಶನಾಯಾಃ ಅಗುಪ್ತತ್ವಾದಿತ್ಯರ್ಥಃ । ಅನ್ಯೇತ್ಯಾಹುಃ । ಮುನಿದೇವತಾ ಮಹಾತ್ಮ್ಯಾದ್ವಾ ಪುಂಯೋಗೇಽಪ್ಯಕ್ಷತಯೋನಿರ್ಭವತಿ । ಯಥಾ ಕುಂತೀ ಮಂತ್ರಾಹೂತದಿನಕರೋತ್ಪಾದಿತಕರ್ಣಾಖ್ಯಪುತ್ರಾಪಿ ಪುನಃ ಕನ್ಯೇವಾಭೂತ್ । ತದಪತ್ಯಂ ಕಾನೀನಶಬ್ದಾಭಿಧೇಯಮ್ ।'. ಇದನ್ನೇ ಪ್ರದೀಪೋದ್ಯೋತಕಾರನಾದ ನಾಗೇಶಭಟ್ಟನು ಸ್ಪಷ್ಟೀಕರಿಸಿದನು. ಅಂತತೋಗತ್ಯಾ ಮಹಾಭಾಷ್ಯಕಾರನಾದ ಪತಂಜಲಿ, ಕೈಯ್ಯಟೋಪಾಧ್ಯಾಯ, ನಾಗೇಶಭಟ್ಟ 'ಕಾನೀನಃ = ಕರ್ಣಃ' ಎಂದು ಉದಾಹರಿಸಿ ವ್ಯಾಖ್ಯಾನಿಸಿರುವರೇ ಹೊರತು 'ಕಾನೀನೋ ವ್ಯಾಸಃ' ಎಂದು ಹೇಳಲಿಲ್ಲ. ಇದನ್ನು ಸಾತ್ವಿಕರು ಗಮನಿಸತಕ್ಕದ್ದು. ಇದೇ ವಿಷಯವನ್ನು ಶ್ರೀಭಾವಿಸಮೀರರೂ, ಅಸಮಸಮರೂ ಆದ ಶ್ರೀವಾದಿರಾಜಪೂಜ್ಯಚರಣರು ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಪ್ರಕಾಶಿಕೆ(10/37)ಯಲ್ಲಿ ಹೀಗೆ ಸಾತ್ವಿಕಜನೋದ್ಧಾರಾರ್ಥವಾಗಿ ವಿಪುಲೀಕರಿಸಿದರು --

'ಉತ್ತಾರಯಂತೀಮಥೇತ್ಯತ್ರ ಅಥಶಬ್ದೇನ ವಸಿಷ್ಠಯಾಜ್ಞವಲ್ಕ್ಯಾದೀನಾಂ ಸದಸಿ ವಿವಾಹ-

ಹೋಮೇ ಕೃತೇ ಸತಿ ಪಿತ್ರಾ ವಸುಚಕ್ರವರ್ತಿನಾ, ಧಾರಾಪೂರ್ವಕಂ ದಾನಾಂತರಮಿತಿ ಭಾರತೇ ಪ್ರಸಿದ್ಧಕಥಾಂ ಸ್ಮಾರಯತಿ । ಏವಂ ಚ ಸಮುದ್ರಗಾಂ ಮಾರ್ತಂಡಸುತಾಂ ಯಮುನಾಂ ತಾರಯಂತೀಂ ತಾಂ ಕನ್ಯಾಂ ಅಧಿಜಗಾಮೇತಿ ಯೋಜನಾ । ತಸ್ಮಾತ್ 'ಕಾನೀನೋ ವ್ಯಾಸಃ' ಇತಿ ಯದವಿದುಷಾಂ ವಚನಂ ತದ್ಭಾರತಕಥಾಪರಿಜ್ಞಾನಶೂನ್ಯತ್ವನಿಮಿತ್ತಮ್ । ವ್ಯಾಸಸ್ಯ ತು ಜನ್ಮ ಭಾರತೋಕ್ತರೀತ್ಯಾ ಪರಮ ಸುಶೋಭನಮೇವೇತಿ ಮಹಾಭಾರತತಾತ್ಪರ್ಯನಿರ್ಣಯಕೃತೋ ಭಾವಃ ॥'

ಹೀಗಿರಲಾಗಿ ಸರ್ವೋತ್ತಮರಾದ ಶ್ರೀವೇದವ್ಯಾಸರಿಗೆ ಗರ್ಭವಾಸಾದಿ ಕ್ಲೇಶಗಳೆಲ್ಲಿ? 'ಯಥಾ ನರಸಿಂಹಾಕೃತಿರಾವಿರಾಸೀತ್' ಎಂಬುವ ನಿರ್ಣಯವಚನದಂತೆ ಎಂದು ತಿಳಿಯತಕ್ಕದ್ದು. ವಸಿಷ್ಠ, ಯಾಜ್ಞವಲ್ಕ್ಯಾದಿಗಳ ಸಮಕ್ಷಮದಲ್ಲಿ ವಿವಾಹಹೋಮಪ್ರಕ್ರಿಯಕ್ಕನುಸಾರವಾಗಿ ವಸುಚಕ್ರವರ್ತಿ ಧಾರಾಪೂರ್ವಕವಾಗಿ ಪರಾಶರರಿಗೆ ಕನ್ಯಾದಾನ ಮಾಡಿದರೆಂಬುದಾಗಿ ಭಾರತಾಖ್ಯಾಯಿಕೆ-ಯುಂಟೆಂದು ಶ್ರೀಭಾವಿಸಮೀರರು ಪ್ರತಿಪಾದಿಸುತ್ತಾ, 'ಕಾನೀನೋ ವ್ಯಾಸಃ (ಕನ್ಯಾಯಾ ಅಪತ್ಯಂ ಪುಮಾನ್) ಎಂದು ಅವಿದ್ವಾಂಸರಾದ ಮೂಢರು ಅರ್ಥಾತ್ ಕಾಶಿಕಾವೃತ್ತಿಕಾರನಾದ ಜಯಾದಿತ್ಯನು, ಅವನ ಅನುಯಾಯಿಗಳು ಭಾರತಕಥಾಪರಿಜ್ಞಾನಶೂನ್ಯರು ಎಂದು ಆಕ್ಷೇಪಿಸಿದರು. ಶ್ರೀವೇದವ್ಯಾಸರ ಜನ್ಮ, ವಿವಾಹಾನಂತರವೇ ಜರುಗಿದೆ ಎಂದೂ, ಅದು ಪರಮಶೋಭನವೆಂದೂ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಕಾರರಾದ ಶ್ರೀಮಧ್ವಾಚಾರ್ಯರ ಭಾವವು ಇದೇ ಎಂಬುದಾಗಿ ಶ್ರೀಭಾವಿಸಮೀರರು ಸ್ಪಷ್ಟಗೊಳಿಸಿದರು.

ಆದರೆ ಕೆಲವು ಆಧುನಿಕರು ಭಾವಪ್ರಕಾಶಿಕಾಗ್ರಂಥೋಕ್ತ ಈ ಸಂದರ್ಭವನ್ನೂ ಪ್ರಕ್ಷಿಪ್ತವೆನ್ನುತ್ತಾರೆ. 'ಸತ್ಯವತಿ, ಪರಾಶರರ ವಿವಾಹವಾಗಿಲ್ಲ' ಎಂದೇ ಶ್ರೀಮನ್ಮಹಾಭಾರತೋಕ್ತಿ ಮತ್ತು ಸತ್ಯವತಿಯ ಕನ್ಯಾವಸ್ಥೆಯಲ್ಲಿಯೇ ಶ್ರೀವೇದವ್ಯಾಸರು ಜನಿಸಿದರು ಎಂದು ಪ್ರತಿಪಾದಿಸುತ್ತಿರುವರು. ಆದರೆ ಈ ವಾದವು ಸರಿಯಲ್ಲ. ಇದು ದುರ್ವಾದ. ಸಚ್ಛಾಸ್ತ್ರವಿರುದ್ಧವು.

ಶ್ರೀಮನ್ಮಹಾಭಾರತವೂ ಕೂಡ ಶ್ರೀಸತ್ಯವತೀಪರಾಶರರ ಅಭೂತಪೂರ್ವವಾದ ವಿವಾಹವನ್ನು ಚಿತ್ರಿಸುತ್ತದೆ. ತದ್ಯಥಾ --

## ಸತ್ಯವತೀಪರಾಶರರ ವಿವಾಹ - ಮಹಾಭಾರತ

ವೈಶಂಪಾಯನಃ —
ಯಾಜ್ಞವಲ್ಕ್ಯಂ ಸಮಾಹೂಯ ವಿವಾಹಾಚಾರ್ಯಮಿತ್ಯುತ ।
ವಸುಂ ಚಾಪಿ ಸಮಾಹೂಯ ವಸಿಷ್ಠೋ ಮುನಿಭಿಃ ಸಹ ।
ವಿವಾಹಂ ಕಾರಯಾಮಾಸ ಶ್ರುತಿದೃಷ್ಟೇನ ಕರ್ಮಣಾ ॥130॥

ವಸುಃ —

ಪರಾಶರ ಮಹಾಪ್ರಾಜ್ಞ ತವ ಪುತ್ರಪ್ರದಾಮಿಮಾಮ್ ।
ಪ್ರತೀಚ್ಛಯೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ ॥131॥

ವೈಶಂಪಾಯನಃ —

ವಸೋಸ್ತು ವಚನಂ ಶ್ರುತ್ವಾ ಯಾಜ್ಞವಲ್ಕ್ಯಮತೇ ಸ್ಥಿತಃ ।
ಕೃತಕೌತುಕಮಾಂಗಲ್ಯಃ ಪಾಣಿನಾ ಪಾಣಿಮಸ್ಪೃಶತ್ ॥132॥

ಪ್ರಭೂತಾಜ್ಯೇನ ಹವಿಷಾ ಹುತ್ವಾ ಮಂತ್ರೈರ್ಹುತಾಶನಮ್ ।
ತ್ರಿರಗ್ನಿಂ ತು ಪರಿಕ್ರಮ್ಯ ಸಮಭ್ಯರ್ಚ್ಯ ಹುತಾಶನಮ್ ॥133॥

ಮಹರ್ಷೀನ್ ಯಾಜ್ಞವಲ್ಕ್ಯಾದೀನ್ ದಕ್ಷಿಣಾಭಿಃ ಪ್ರತೋಷ್ಯ ಚ ।
ಲಬ್ಧಾನುಜ್ಞೋ ವಿವಾಹ್ಯಾಶು ಪ್ರದಕ್ಷಿಣಮಥಾಕರೋತ್ ॥133॥

ಪರಾಶರೇ ಕೃತೋದ್ವಾಹೇ ದೇವಾಃ ಸರ್ಷಿಗಣಾಸ್ತದಾ ।
ಹೃಷ್ಟಾ ಜಗ್ಮುಃ ಕ್ಷಣಾದೇವ ವೇದವ್ಯಾಸೋ ಭವತ್ವಿತಿ ॥135॥

ಏವಂ ಸತ್ಯವತೀ ಹೃಷ್ಟಾ ಪೂಜಾಂ ಲಬ್ಧ್ವಾ ಯಥೇಪ್ಸಿತಃ ।
ಪರಾಶರೇಣ ಸಂಯುಕ್ತಾ ಸದ್ಯೋ ಗರ್ಭಂ ಸುಷಾವ ಸಾ ॥136॥

ಜಜ್ಞೇ ಚ ಯಮುನಾದ್ವೀಪೇ ಪಾರಾಶರ್ಯಃ ಸುವೀರ್ಯವಾನ್ ।
ಜಾತಮಾತ್ರಃ ಸ ವವೃಧೇ ಸಪ್ತವರ್ಷೋಽಭವತ್ ತದಾ ॥137॥

ಸ್ನಾತ್ವಾಽಭಿವಾದ್ಯ ಪಿತರಂ ತಸ್ಥೌ ವ್ಯಾಸಃ ಸಮಾಹಿತಃ ।
ಸ್ವಸ್ತೀತಿ ವಚನಂ ಚೋಕ್ತ್ವಾ ದದೌ ಕಲಶಮುತ್ತಮಮ್ ॥138॥

ಗೃಹೀತ್ವಾ ಕಲಶಂ ಪಾರ್ಶ್ವೇ ತಸ್ಥೌ ವ್ಯಾಸಃ ಸಮಾಹಿತಃ ।
ತತೋ ದಾಶಭಯಾತ್ ಪತ್ನೀ ಸ್ನಾತ್ವಾ ಕನ್ಯಾ ಬಭೂವ ಸಾ॥139॥

ವಸಿಷ್ಠರು, ಯಾಜ್ಞವಲ್ಕ್ಯರನ್ನು ವಿವಾಹಪುರೋಹಿತರೆಂದು ಕರೆದು ವಸುವನ್ನೂ ಆಹ್ವಾನಿಸಿ, ಋಷಿಗಳ ಜೊತೆಯಲ್ಲಿ ಸೇರಿ ಶ್ರೌತವಿಧಾನದಿಂದ ವಿವಾಹವನ್ನು ಮಾಡಿಸಿದರು. ಮಹಾಪ್ರಾಜ್ಞರಾದ ಪರಾಶರರೇ, ನಿಮಗೆ ಪುತ್ರಪ್ರದಳಾದ ಇವಳನ್ನು ಸ್ವೀಕರಿಸಿ. ನಿಮಗೆ ಮಂಗಳವಾಗಲಿ. ಇವಳ ಪಾಣಿಯನ್ನು ನಿಮ್ಮ ಪಾಣಿಯಿಂದ ಗ್ರಹಣ ಮಾಡಿ. ಪರಾಶರರು ವಸುವಿನ ಮಾತನ್ನು ಕೇಳಿ ಯಾಜ್ಞವಲ್ಕ್ಯರ ಅಭಿಪ್ರಾಯದಂತೆ ಕಂಕಣಬಂಧವುಳ್ಳ ತಮ್ಮ ಪಾಣಿಯಿಂದ ಸತ್ಯವತಿಯ ಪಾಣಿಯನ್ನು ಗ್ರಹಣಮಾಡಿದರು. ಮಂತ್ರಪೂರ್ವಕವಾಗಿ ಒಳ್ಳೆಯ ಆಜ್ಯರೂಪ ಹವಿಸ್ಸಿನಿಂದ

ಅಗ್ನಿಯಲ್ಲಿ ಹೋಮವನ್ನು ಮಾಡಿ, ಮೂರುಸಲ ಅಗ್ನಿಪ್ರದಕ್ಷಿಣೆಯನ್ನು ಮಾಡಿ, ಅಗ್ನಿಗೆ ನಮಸ್ಕರಿಸಿ ಮಹರ್ಷಿಗಳಾದ ಯಾಜ್ಞವಲ್ಕ್ಯ ಮೊದಲಾದವರನ್ನು ದಕ್ಷಿಣೆಯಿಂದ ಸಂತೋಷಪಡಿಸಿ ಅವರ ಅನುಮತಿಯನ್ನು ಪಡೆದು, ವಿವಾಹವನ್ನು ಮಾಡಿಕೊಂಡು ಪರಾಶರರು ಅವರಿಗೆ ಪ್ರದಕ್ಷಿಣೆಯನ್ನು ಮಾಡಿದರು. ಪರಾಶರರು ವಿವಾಹಮಾಡಿಕೊಳ್ಳುತ್ತಿರಲು ಬಂದಿದ್ದ ದೇವತೆಗಳು ಮತ್ತು ಋಷಿಗಣಗಳು ಸಂತುಷ್ಟರಾಗಿ, ವೇದವ್ಯಾಸರ ಅವತಾರವಾಗಲಿ ಎಂದು ಹೇಳಿ ಒಂದು ಕ್ಷಣದಲ್ಲಿ ಹೊರಟುಹೋದರು. ಹೀಗೆ ಸತ್ಯವತಿಯು ತನ್ನ ಮನಸ್ಸಿಗೆ ಒಪ್ಪುವಂತೆ ಸತ್ಕಾರವನ್ನು ಪಡೆದು ಸಂತುಷ್ಟಳಾಗಿ ಪರಾಶರರ ಸಮಾಗಮವನ್ನು ಹೊಂದಿ, ತಕ್ಷಣದಲ್ಲಿಯೇ ಗರ್ಭವನ್ನು ಪ್ರಸವಿಸಿದಳು. ಯಮುನಾನದಿಯ ಆ ದ್ವೀಪದಲ್ಲಿ ಮಹಾಸಾಮರ್ಥ್ಯೋಪೇತರಾದ ಪರಾಶರರ ಮಗನಾಗಿ ವ್ಯಾಸರು ಜನಿಸಿದರು. ಹುಟ್ಟಿದ ತಕ್ಷಣವೇ ಅವರು ಬೆಳೆದು ಏಳುವರ್ಷದವರಾದರು. ವ್ಯಾಸರು ಸ್ನಾನವನ್ನು ಮಾಡಿ, ತಂದೆಗೆ ನಮಸ್ಕರಿಸಿ ಸಮಾಧಾನದಿಂದ ಕೂಡಿದವರಾಗಿ ನಿಂತುಕೊಂಡರು. ಪರಾಶರರು ಮಂಗಳವಾಗಲಿ ಎಂದು ಹೇಳಿ ಒಳ್ಳೆಯ ಕಮಂಡಲುವನ್ನು ನೀಡಿದರು. ವ್ಯಾಸರು ಕಮಂಡಲುವನ್ನು ಸ್ವೀಕರಿಸಿ ಪಾರ್ಶ್ವದಲ್ಲಿ ವಿನಯಶೀಲರಾಗಿ ನಿಂತರು. ಅನಂತರ ದಾಶನ ಭಯದಿಂದ ಸತ್ಯವತಿಯು ಸ್ನಾನವನ್ನು ಮಾಡಿ ಪುನಃ ಕನ್ಯೆಯೇ ಆದಳು.

(ಮಹಾಭಾರತ ಆದಿಪರ್ವ ಸಂಭವಪರ್ವ ಅ.57)

— ಪಂ॥ ಆನಂದತೀರ್ಥಶರ್ಮಾ, ಆತ್ಮಕೂರು.

## ಸಾಕ್ಷ್ಯಭಿಮಾನಿಯಾದ ಮಾರುತಾವತಾರರಾದ ಆಚಾರ್ಯರ ಪ್ರಾರ್ಥನೆ

(ರಸರಂಜನೀ) — ಉಕ್ತವಿಧೋಪಾಸನಸಾಧನಂ ಜ್ಞಾನಂ ವೇದಾದಿನಾ ಇತಿ, ತನ್ಮುಖ್ಯಾಭಿಮಾನಿತಯಾ ಮುಖ್ಯಾವತಾರಶ್ರೀಮದಾನಂದತೀರ್ಥಗುರುಚರಣೋಪಾಸನಾ ಕಾರ್ಯಾ ಇತ್ಯುಕ್ತಮ್, ಇದಾನೀಂ ನ ಸಾಕ್ಷಾದ್ ವೇದಜಾತಂ ವೃತ್ತಿಜ್ಞಾನಮೀದೃಶೋಪಾಸನಯಾಲಂ ಕಿಂತು ಸಾಕ್ಷಿರೂಪಜ್ಞಾನೋಪೋದ್ಬಲಕಂ ನ ಮುಖೇನೈವ ಅತ ಉಕ್ತವಿಧೋಪಾಸನಾ ಸಾಕ್ಷಾತ್ ಸಾಧನಸಾಕ್ಷಿರೂಪಜ್ಞಾನಾಭಿವ್ಯಕ್ತ್ಯೈ ತದಭಿಮಾನಿತ್ವೇನಾಪಿ ತದುಪಾಸನಂ ಕಾರ್ಯಮಿತಿ ಸೂಚಯನ್ ತತ್ರಾದರಜನನಾಯ ತತ್ಸ್ವರೂಪಂ ನಿರೂಪಯನ್ ತದಭಿಮಾನಿನಂ ಮಾರುತಾವತಾರಂ ಪ್ರತ್ಯಭಿಮತಮರ್ಥಮಾಶಾಸ್ತೇ — ವ್ಯಾಪ್ತಿರಿತಿ ॥ ಪೂರ್ವವದೇವ ಯೋಜನಾ ।

ಗುರುಗಳ ಉಪಾಸನೆಯು ಜ್ಞಾನದಿಂದ ಸಾಧ್ಯ. ಆ ಜ್ಞಾನವು ವೇದಗಳಿಂದ ಬರುವುದು. ಆ ವೇದಕ್ಕೆ ಮುಖ್ಯಾಭಿಮಾನಿಯಾದ ವಾಯುದೇವರ ಮುಖ್ಯಾವತಾರರಾದ ಆನಂದತೀರ್ಥರ ಪಾದಗಳ ಉಪಾಸನೆಯಿಂದ ಆ ವೇದದ ಜ್ಞಾನವು ಚೆನ್ನಾಗಿ ಬರುವುದು ಎಂದು ಇಲ್ಲಿಯವರೆಗೂ ಹೇಳಿದರು. ಈಗ ಸಾಕ್ಷಾತ್ತಾಗಿ ವೇದದಿಂದ ಬಂದ ವೃತ್ತಿಜ್ಞಾನವು ಗುರುಗಳ ಉಪಾಸನೆಗೆ

ಸಮರ್ಥವಲ್ಲ ಕಿಂತು ಸಾಕ್ಷಿರೂಪಜ್ಞಾನದಿಂದ ಉಪೋದ್ಬಲಿತವಾದ ವೃತ್ತಿಜ್ಞಾನವೇ ಸಮರ್ಥ-ವಾಗಿದೆ. ಆದ್ದರಿಂದ ಪ್ರಧಾನವಾಗಿ ವೃತ್ತಿಜ್ಞಾನವು ಉಪಾಸನೆಗೆ ಉಪಯೋಗಿಯಲ್ಲ ಎಂದು ಆಕ್ಷೇಪ.

ಉತ್ತರ – ಉಪಾಸನೆಗೆ ಸಾಕ್ಷಾತ್ ಸಾಧನವಾದದ್ದು ಸಾಕ್ಷಿರೂಪಜ್ಞಾನ. ಅದರ ಅಭಿವ್ಯಕ್ತಿಯಾಗಲು ಅದರ ಅಭಿಮಾನಿಯಾದ ಮುಖ್ಯಪ್ರಾಣನನ್ನು ಉಪಾಸನೆ ಮಾಡಬೇಕು. ಆದುದರಿಂದ ಅಲ್ಲಿ ಆದರವನ್ನು ಹುಟ್ಟಿಸಲು ಸಾಕ್ಷಿಯ ಸ್ವರೂಪವನ್ನು ವಿವರಿಸುತ್ತ ಅದಕ್ಕೆ ಅಭಿಮಾನಿಯಾದ ಮಾರುತಾವತಾರರಾದ ಆನಂದತೀರ್ಥರನ್ನು ಕುರಿತು ಅಭೀಷ್ಟಪ್ರಾರ್ಥನೆಯನ್ನು ಮಾಡುತ್ತಿದ್ದಾರೆ – ವ್ಯಾಪ್ತಿಃ ಎಂದು.

**ನಿಜೇನ ಮಹಸಾ ಯಸ್ಯ ಪಕ್ಷೇ ವ್ಯಾಪ್ತಿಃ, ಸಪಕ್ಷೇ ಚ ಸ್ಥಿತಿಃ**

(ರಸರಂಜನೀ) – ಯಸ್ಯ = ಮುಕ್ತಿಯೋಗ್ಯಜನಸಂಬಂಧಿಚೈತನ್ಯಾಪರಪರ್ಯಾಯಸಾಕ್ಷಿರೂಪ-ಪ್ರಮಾಣಸ್ಯ ಪಕ್ಷೇ = ಮಿತ್ರೇ ಹರೌ ವ್ಯಾಪ್ತಿಃ = ಸರ್ವೇಭ್ಯೋಽತಿಶಯೇನ ವೃತ್ತಿಃ । ಸ್ವಾತ್ಮೀಯ-ಸಮಸ್ತವಸ್ತುಭ್ಯೋಽತಿಶಯೇನ ಪ್ರೇಷ್ಠತಯಾ ವಿಷಯೀಕರಣಮಿತಿ ಯಾವತ್ । 'ಪಕ್ಷಃ ಸಹಾಯ ಗರುದಂತಿಕಸಾಧ್ಯಭಿತ್ತಿಮಿತ್ರೇಷು ಚುಲ್ಲಿವಿವರೇ ನೃಪಕುಂಜರೇ ಚ' ಇತ್ಯಭಿಧಾನಾತ್ ।

ಸಾ ಕಿಮೌಪಾಧಿಕೀ, ನೇತ್ಯಾಹ । 'ನಿಜೇನ ಮಹಸಾ' ಸ್ವಾಭಾವಿಕೇನೈವ ಸಾಮರ್ಥ್ಯೇನ ಇತಿ । ಭಕ್ತಿಜ್ಞಾನಾದಿರೂಪಸ್ಯ ಜೀವಸ್ಯ ತಥಾ ತದ್ವಿಷಯೀಕಾರಿತ್ವಂ ಸ್ವಭಾವ ಏವೇತಿ ಸಿದ್ಧಮೇವೇತಿ । ತರ್ಹಿ ತದ್ದಾಸೇಷು ದ್ವೇಷ ಔದಾಸೀನ್ಯಂ ವಾ ಸ್ಯಾದಿತಿ ತತ್ರಾಹ – ಸಪಕ್ಷೇ ದಾಸವರ್ಗೇ ವೃತ್ತಿರಿತಿ ॥ ಕಿಮನ್ನದಾನಾದಿನಿಬಂಧನಾ, ನೇತ್ಯಾಹ – ನಿಜೇನ ಮಹಸೇತಿ ॥ ತತ್ರಾಪಿ ಯದಿ ತಾದೃಶ್ಯೇವ ವೃತ್ತಿಃ ತರ್ಹ್ಯುಭಯೋರಪಿ ಸಾಮ್ಯಾಪಾತ ಇತ್ಯತ ಉಕ್ತಂ – ಸ್ಥಿತಿರ್ವೃತ್ತಿರೇವ ನ ತು ಪೂರ್ವವದ್ ವ್ಯಾಪ್ತಿಃ । ತರ್ಹಿ ವೈಷಮ್ಯಾಪತ್ತಿರಿತಿ ಚೇತ್ । ಸ್ಯಾದಿಯಮಾಪತ್ತಿರ್ಯದಿ ತತ್ತತ್-ಸ್ಥಿತ್ಯತಿಕ್ರಮೇಣ ವೃತ್ತಿಃ ಸ್ಯಾತ್ । ನ ಚೈವಮ್ । ಕಿಂ ನಾಮ ಪರಮಮಿತ್ರಭೂತೇ ಹರೌ ವ್ಯಾಪ್ತಿಃ ತದ್ದಾಸತಯಾ ತದನುಗ್ರಹಕ್ರಮಾನುಸಾರೇಣ ಮಿತ್ರಭೂತೇಽನ್ಯತ್ರ ವೃತ್ತಿಮಾತ್ರಮತಃ ಕ್ವಾಪತ್ತೇ-ರವಸರ ಇತ್ಯಭಿಪ್ರಾಯೇಣೋಕ್ತಂ – ನಿಜೇ ಪರಮಮುಖ್ಯೇ ಪಕ್ಷ ಇತಿ ॥ ಸಮಾನತಯಾ ಶ್ರೀಹರ್ಯನುಕೂಲತಯಾ ಪಕ್ಷೇ ಇತಿ ಚ ।

'ಯಸ್ಯ' ಎಂದರೆ ಸಾಕ್ಷಿಪ್ರಮಾಣಕ್ಕೆ ಎಂದರ್ಥ. ಸಾಕ್ಷಿಪ್ರಮಾಣ ಎಂದರೆ ಇಲ್ಲಿ ವಿವಕ್ಷಿತವಾದದ್ದು ಮುಕ್ತಿಯೋಗ್ಯರಾದ ಜನರಿಗೆ ಸಂಬಂಧಪಟ್ಟ ಚೈತನ್ಯವೇ ಆಗಿದೆ. ಇದಕ್ಕೆ ಪಕ್ಷದಲ್ಲಿ ಅಂದರೆ ಮಿತ್ರನಾದ ಹರಿಯಲ್ಲಿ ವ್ಯಾಪ್ತಿಃ - ಎಲ್ಲರಿಗಿಂತಲೂ ಅತಿಶಯೇನ ವೃತ್ತಿಯು(ಇರುವಿಕೆಯು) ಇದೆ.

ತನಗಿಂತ ಹಾಗೂ ತನಗೆ ಸಂಬಂಧಿಸಿದ ಎಲ್ಲ ವಸ್ತುಗಳಿಗಿಂತ ಅತಿ ಹೆಚ್ಚು ಇಷ್ಟನಾದವನು ಹರಿ ಎಂದು ಭಾವ. ಪಕ್ಷಶಬ್ದವು ಮಿತ್ರ ಎಂಬ ಅರ್ಥವನ್ನು ಹೇಳುತ್ತಿದೆ. 'ಪಕ್ಷಃ ಸಹಾಯ ಗರುದಂತಿಕ-ಸಾಧ್ಯಭಿತ್ತಿಮಿತ್ರೇಷು ಚುಲ್ಲಿವಿವರೇ ನೃಪಕುಂಜರೇ ಚ' ಎಂದು ಕೋಶವಿದೆ.

ಭಗವಂತನು ಅತ್ಯಂತ ಇಷ್ಟನಾಗಿದ್ದು ಯಾವುದಾದರೂ ಕಾರಣದಿಂದಲೋ ಅಥವಾ ಸ್ವಾಭಾವಿಕ-ವಾಗಿಯೋ ಎಂದರೆ "ನಿಜೇನ ಮಹಸಾ" ಎಂದಿದ್ದಾರೆ. ಅಂದರೆ ಸ್ವಾಭಾವಿಕವಾದ ಸಾಮರ್ಥ್ಯ-ದಿಂದಲೇ ಎಂದು ಉತ್ತರ. ಭಕ್ತಿ-ಜ್ಞಾನಸ್ವರೂಪನಾದ ಜೀವನಿಗೆ ಭಗವಂತನು ಅತ್ಯಂತ ಇಷ್ಟ ಅನ್ನಿಸುವುದು ಜೀವನ ಸ್ವಭಾವವೇ ಆಗಿದೆ ಎಂಬುದು ಸಿದ್ಧವಾದ ವಿಷಯ. ಹಾಗಾದರೆ ಭಗವಂತನ ದಾಸರುಗಳಲ್ಲಿ ದ್ವೇಷವೋ ಔದಾಸೀನ್ಯವೋ ಬರಬೇಕಾಗಿತ್ತು ಎಂದರೆ ಅದಕ್ಕೆ ಉತ್ತರವನ್ನು 'ಸಪಕ್ಷೇ ವೃತ್ತಿಃ' ಎಂದು ಹೇಳುತ್ತಾರೆ. ಸಪಕ್ಷೇ ಎಂದರೆ ದಾಸವರ್ಗ ಎಂದರ್ಥ. ಅದರಲ್ಲಿ ವೃತ್ತಿ ಎಂದರೆ ಇರುವಿಕೆಯು. ದಾಸರಿಗೆ ಅನ್ನದಾನಾದಿಗಳನ್ನು ಮಾಡುವ ಮೂಲಕ ಅಲ್ಲಿ ವೃತ್ತಿಯಾಗಿದ್ದಾನೆ ಎಂದರೆ ಅಲ್ಲ. 'ನಿಜೇನ ಮಹಸಾ' ಎಂದು ಹೇಳಿರುವುದರಿಂದ ಅಲ್ಲಿಯೂ ಸ್ವಾಭಾವಿಕವಾಗಿಯೇ ಇದ್ದಾನೆ ಎಂದರ್ಥ. ಇನ್ನು ಭಗವಂತನಲ್ಲಿ ಇದ್ದ ಹಾಗೆ ಭಗವಂತನ ಭಕ್ತರಲ್ಲಿಯೂ ಇರುವುದಾದರೆ ಸಮಾನತೆಯು ಬರಲಿ ಎಂದಾಕ್ಷೇಪಿಸುವಂತಿಲ್ಲ. ಏಕೆಂದರೆ, ಭಗವಂತನಲ್ಲಿ ವ್ಯಾಪ್ತಿಯನ್ನು ಹೇಳಿದ್ದಾರೆ. ಸಪಕ್ಷದಲ್ಲಿ ಸ್ಥಿತಿಯನ್ನು ಹೇಳಿದ್ದಾರೆ. ಹಾಗಾದರೆ ವೈಷಮ್ಯ ಬಂತಲ್ಲವೇ ಎಂದರೆ ಇಲ್ಲ. ಏಕೆಂದರೆ ಈ ಆಪತ್ತಿಯು ಒಂದು ವೇಳೆ ಅವರಲ್ಲಿರುವ ಸ್ಥಿತಿಯನ್ನು ಅತಿಕ್ರಮಣ ಮಾಡಿ ಬೇರೆಯವರಲ್ಲಿ ಸಾಕ್ಷಿಪ್ರಮಾಣವು ಇದ್ದರೆ ಸರಿಯಾಗುತ್ತಿತ್ತು. ಆದರೆ ಪರಮಮಿತ್ರನಾದ ಹರಿಯಲ್ಲಿ ವ್ಯಾಪ್ತಿಯಿದೆ. ಆ ಹರಿಯ ದಾಸರುಗಳಲ್ಲಿ ಕ್ರಮವಾಗಿ ವೃತ್ತಿತ್ವವು ಇದೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ ಎಂಬ ಅಭಿಪ್ರಾಯದಿಂದ ನಿಜೇ ಪಕ್ಷೇ ಎಂದಿದ್ದಾರೆ. ಇಲ್ಲಿ ನಿಜೇ ಎಂಬ ಶಬ್ದಕ್ಕೆ ಪರಮಮುಖ್ಯ ಎಂದರ್ಥ. ಇನ್ನು ಸಪಕ್ಷ ಎಂದರೆ ಸಮಾನವಾದ ಪಕ್ಷ. ಅರ್ಥಾತ್ ಶ್ರೀಹರಿಗೆ ಭಕ್ತರು ಎಂದರ್ಥ.

## ವಿಪಕ್ಷತೋ ವ್ಯಾವೃತ್ತಿಃ

(ರಸರಂಜನೀ) — ಶ್ರೀಹರಿದಾಸವರ್ಗಾದನ್ಯತ್ರಾಪಿ ಈದೃಶವೃತ್ತೌ ಸಾಮ್ಯಾಪತ್ತಿಃ, ಪ್ರಕಾರಾಂತರೇಣ ವೃತ್ತೌ ತು ವೈಷಮ್ಯಾಪತ್ತಿಃ ಇತ್ಯುಭಯಥಾಽಪಿ ವಿಪತ್ತಿರಿತ್ಯತ ಉಕ್ತಮ್ — ವಿಪಕ್ಷತಃ, ಉಕ್ತ-ಪಕ್ಷಶಬ್ದಾರ್ಥವಿರೋಧಿಭೂತಾತ್ ತತ ಏವ ತದೀಯದ್ವೇಷಾದಿವಿಷಯಾದ್ಭೂತವರ್ಗಾದ್ ವ್ಯಾವೃತ್ತಿರುಕ್ತವಿಧವೃತ್ತ್ಯಭಾವ ಇತಿ । ಚಶಬ್ದೋ 'ವಿಪಕ್ಷತೋ ವ್ಯಾವೃತ್ತಿಃ' ಇತ್ಯಸ್ಯ 'ಶೃಣ್ವೇ ವೀರ ಮುಗ್ರಮ್' ಇತ್ಯಾದಿಶ್ರುತಿಪ್ರಸಿದ್ಧಿದ್ಯೋತಕಃ ।

ಅಲ್ಲ! ಹರಿಯ ದಾಸರ ಗುಂಪನ್ನು ಬಿಟ್ಟು ಬೇರೆ ಕಡೆ ಈ ರೀತಿ ಸಾಕ್ಷಿಪ್ರಮಾಣವು ಇದ್ದರೆ

ಸಮಾನತೆಯು ಬಂದೀತು ಎಂಬ ಆಪತ್ತಿ. ಇಲ್ಲ ಬೇರೆಕ್ರಮದಲ್ಲಿ ಇದೆ ಎಂದು ಒಪ್ಪಿದರೆ ವೈಷಮ್ಯಾಪತ್ತಿ ಒದಗುವುದು. ಈ ರೀತಿ ಎರಡೂ ಪಕ್ಷದಲ್ಲಿ ದೋಷವಿದೆ ಎನ್ನುವುದಕ್ಕೆ ಉತ್ತರವಾಗಿ – ವಿಪಕ್ಷತಃ ವ್ಯಾವೃತ್ತಿಃ ಎಂದು ಹೇಳಿದ್ದಾರೆ. ವಿಪಕ್ಷ ಎಂದರೆ ನಾವು ಹೇಳಿದ ಪಕ್ಷಶಬ್ದದ ಅರ್ಥಕ್ಕೆ ವಿರೋಧಿಯಾದದ್ದನ್ನು ತೆಗೆದುಕೊಳ್ಳಬೇಕು. ಅರ್ಥಾತ್ ಆ ಹರಿಯ ದ್ವೇಷಾದಿಗಳನ್ನು ಮಾಡುವ ಜೀವರಾಶಿಗಳಿಂದ ಎಂದು ವಿಪಕ್ಷತಃ ಎಂಬ ಶಬ್ದಕ್ಕೆ ಅರ್ಥ. ಅವರಿಂದ ವ್ಯಾವೃತ್ತಿ ಎಂದರೆ ವೃತ್ತಿಯು ಇರುವುದಿಲ್ಲ ಎಂದು. ಚ ಎಂಬ ಶಬ್ದವು ವಿಪಕ್ಷತೋ ವ್ಯಾವೃತ್ತಿ ಎಂಬ ಅಂಶಕ್ಕೆ ಪೋಷಕವಾದ 'ಶೃಣ್ವೇ ವೀರಮುಗ್ರಮುಗ್ರಂ ದಮಾಯನ್' ಇತ್ಯಾದಿ ಶ್ರುತಿಗಳ ಪ್ರಸಿದ್ಧಿಯನ್ನು ತೋರಿಸುತ್ತಿದೆ.

## ದ್ವೇಷವೆಂದೋ ಔದಾಸೀನ್ಯವೆಂದೋ ಹೇಳದೆ ವ್ಯಾವೃತ್ತಿಃ ಎಂದಿದ್ದು ಏಕೆ?

(ರಸರಂಜನೀ) – ಇದಮುದಿತಂ ಭವತಿ – ದಾಸಸಮೂಹಾದನ್ಯೇ ದ್ವಿವಿಧಾಃ । ದಾನವ-ಮಾನವಭೇದಾತ್ । ತತ್ರಾದ್ಯಾ ದ್ವೇಷಿಣಃ, ಅಂತ್ಯಾ ಔದಾಸೀನ್ಯೋಪೇತಾಃ । ಔದಾಸೀನ್ಯಂ ಚೋಚ್ಚಸ್ಯ ನೀಚಸಾಮ್ಯೇನಾರ್ಚನಾದಿಕಮಪಿ ನ ತ್ವನರ್ಚನಮೇವೇತಿ ನಿಯಮಃ । ಉಭಯೇಽಪಿ ಹಿ ಹರಿವಿರೋಧಿನ ಏವ । ಪರಮಮಿತ್ರದ್ವೇಷೌದಾಸೀನ್ಯಯೋರುಭಯೋರಪಿ ವಿರೋಧ-ಶಬ್ದಾರ್ಥತ್ವೇನ ಪ್ರಸಿದ್ಧತ್ವಾತ್ । ತತ್ರ ಪ್ರಥಮೇಷು ದ್ವೇಷೋ ದ್ವಿತೀಯೇಷ್ವೌದಾಸೀನ್ಯಮಿತಿ ಪ್ರಕಾರಾಂತರೇಣ ವೃತ್ತೇಃ ಸ್ವೀಕಾರಾತ್ । ನ ಚ ವೈಷಮ್ಯಾಪಾತಃ । ಯಥಾಸ್ಥಿತ್ಯನತಿಕ್ರಮಾತ್ । ಹರಿದ್ವೇಷ್ಯತ್ವಾದೇಃ ಶ್ರುತ್ಯಾದಿಸಿದ್ಧತ್ವಾತ್ । ಏತದಭಿಪ್ರಾಯೇಣೈವ 'ದ್ವೇಷ' ಇತಿ ವಾ 'ಔದಾ-ಸೀನ್ಯಮಿ'ತಿ ವಾ ಅನುಕ್ತ್ವಾ 'ವ್ಯಾವೃತ್ತಿಃ' ಇತ್ಯುಕ್ತಮಿತಿ । ವಸ್ತುತಸ್ತು ಸ್ನಿಗ್ಧಾ ಏವ ಶ್ರೀಹರಿ-ದ್ವೇಷವಿಷಯಾದಿಷು ಪ್ರೀತಿಪ್ರದರ್ಶನೇ ಹರಿರ್ನ ಶಿಕ್ಷಯೇದಿತಿ ಭಯಾದಿನಿಮಿತ್ತೇನೈವ ತಥಾ ದರ್ಶಯಂತೀತಿ ಶಂಕಾ ಮಾ ಭೂದಿತ್ಯಾಹ – ನಿಜೇನೈವ ಮಹಸೇತಿ ॥ ಹೇಯೇ ರಾಗವತಃ ಕಥಮನ್ಯತ್ರೋಕ್ತವಿಧಃ ಸ್ನೇಹೋ ಘಟತ ಇತ್ಯತ ಆಹ – ಬಾಧಿತೇ ಹೇಯೇ ಗೇಹಾದೌ ವಿಷಯೇ ಸಕ್ತಿರ್ನೇತಿ ॥ ಸಾಕ್ಷಿಣಿ ಧರ್ಮಸಮುಚ್ಚಾಯಕೋಽಥಶಬ್ದಃ । ಸಕ್ತ್ಯಭಾವೋಽಪೀತಿ । ಅನ್ಯತ್ರ ಸ್ನೇಹಾಭಾವೋಽಪಿ ಕಿಂ ನೈಮಿತ್ತಿಕೋ ನೇತ್ಯಾಹ – ನಿಜೇನೈವ ಮಹಸೇತಿ ॥

ಒಟ್ಟು ಅಭಿಪ್ರಾಯ – ಹರಿಯ ಭಕ್ತರಿಗಿಂತ ಬೇರೆಯವರು ಎರಡು ತರಹ ಇರುವರು. ದಾನವರು ಹಾಗೂ ಮಾನವರು. ಇವರುಗಳಲ್ಲಿ ಮೊದಲನೆಯವರು ದ್ವೇಷಿಗಳು; ಕೊನೆಯವರು ಔದಾಸೀನ್ಯವುಳ್ಳವರು. ಔದಾಸೀನ್ಯ ಎಂದರೆ ಪೂಜೆ ಮಾಡದಿರುವುದು ಎಂದೇ ಅರ್ಥವಲ್ಲ ಹೊರತು ಉತ್ತಮರನ್ನು ಅಧಮರ ಜೊತೆಗೆ ಪೂಜೆ ಮಾಡುವುದು ಕೂಡ. ಇಬ್ಬರೂ ಕೂಡ ಹರಿಯ ವಿರೋಧಿಗಳೇ. ಏಕೆಂದರೆ ವಿರೋಧ ಎಂಬ ಶಬ್ದದ ಅರ್ಥವಾಗಿ ಪರಮಮಿತ್ರನಾದ ಶ್ರೀಹರಿಯ

ದ್ವೇಷ, ಔದಾಸೀನ್ಯ ಎರಡೂ ಪ್ರಸಿದ್ಧ. ಇವರಿಬ್ಬರಲ್ಲಿ ಮೊದಲನೆಯವರಲ್ಲಿ ದ್ವೇಷ ಎರಡನೆಯವರಲ್ಲಿ ಔದಾಸೀನ್ಯ ಎಂದು ಇನ್ನೊಂದು ಕ್ರಮದಲ್ಲಿಯೂ ಸ್ವೀಕರಿಸಬಹುದು. ಅಲ್ಲ। ಈ ರೀತಿಯ ವ್ಯತ್ಯಾಸವೇಕೆ? ಎಂದರೆ ಅವರ ಸ್ವಭಾವಾನುಗುಣವಾಗಿ ಹೇಳಿದ್ದು. ಹರಿಯ ಮೇಲಿರುವ ದ್ವೇಷ ಹರಿಯ ಮೇಲಿರುವ ಔದಾಸೀನ್ಯ ಇವೆಲ್ಲವೂ ವೇದಾದಿಪ್ರಮಾಣಗಳಿಂದ ಸಿದ್ಧವಾಗಿದೆ. ಇದೇ ಅಭಿಪ್ರಾಯದಿಂದಲೇ ದ್ವೇಷ ಎಂದಾಗಲೀ ಔದಾಸೀನ್ಯವೆಂದಾಗಲೀ ಸ್ಪಷ್ಟವಾಗಿ ಹೇಳದೇ ವ್ಯಾವೃತ್ತಿ ಎಂದಿದ್ದಾರೆ. ವಸ್ತುತಸ್ತು ಭಗವಂತನಲ್ಲಿ ಸ್ನೇಹವಿರುವವರು ಎಂದು ಪ್ರಸಿದ್ಧರಾದವರು ಹರಿಯ ಮೇಲೆ ದ್ವೇಷವಿರುವವರಲ್ಲಿ ಪ್ರೀತಿಯನ್ನು ತೋರಿಸಿದರೆ ನಮಗೆ ಹರಿಯು ಶಿಕ್ಷೆಯನ್ನು ನೀಡುತ್ತಾನೆ ಎಂಬ ಭಯ ಮೊದಲಾದ ಕಾರಣದಿಂದಲೇ ಹಾಗೆ ಪ್ರೀತಿಭಾವವನ್ನು ತೋರಿಸುತ್ತಾರೆ ಎಂದು ಶಂಕೆಬರದಿರಲಿ ಎಂಬ ಅಭಿಪ್ರಾಯದಿಂದ 'ನಿಜೇನೈವ ಮಹಸಾ' ಎಂದಿದ್ದಾರೆ. ಹೇಯವಾದ ವಸ್ತುಗಳಲ್ಲಿ ರಾಗ ಇದ್ದಾಗ ಹರಿಯಲ್ಲಿ ಇಂತಹ ಸ್ನೇಹವು ಕೂಡುತ್ತದೆ ಎಂದರೆ ಅದಕ್ಕೆ ಹೇಳುತ್ತಾರೆ — ಬಾಧಿತೇ ಅರ್ಥಾತ್ ಹೇಯವಾದ ಮನೆ ಮೊದಲಾದ ವಿಷಯಗಳಲ್ಲಿ ಆಸಕ್ತಿಯು ಇಲ್ಲ ಎಂದು. ಸಾಕ್ಷಿಯಲ್ಲಿ ಇಂತಹ ಧರ್ಮವನ್ನು ಸಮುಚ್ಚಯಮಾಡಲು 'ಅಥ' ಶಬ್ದವನ್ನು ಬಳಸಿದ್ದಾರೆ. ಆಗ 'ಸಕ್ತ್ಯಭಾವೋಽಪಿ' - ಎಂಬ ಅರ್ಥ ಸಿಗುವುದು. ಬೇರೆ ಕಡೆ ಸ್ನೇಹವಿಲ್ಲದೇ ಇರುವುದಾದರೋ ಯಾವುದಾದರೂ ಕಾರಣದಿಂದಲೇ ಎಂದರೆ, ಇಲ್ಲ ಎಂದು ತಿಳಿಸುತ್ತಾರೆ 'ನಿಜೇನೈವ ಮಹಸಾ' ಎಂಬುದರಿಂದ.

## ಉಗ್ರಮುಗ್ರಂ ದಮಾಯನ್

* ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ ಅನ್ಯಮನ್ಯಮತಿನೇನೀಯಮಾನಃ ।
ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ '
(ಋಗ್ವೇದ 6ಮಂ. 47ಸೂ. 16ಋಕ್) (ತಾ.ನಿ. 1/99)

ವೀರಃ = ಸರ್ವಶಕ್ತನಾದ , ಇಂದ್ರಃ = ಮಹಾಐಶ್ವರ್ಯವಂತನಾದ ಪರಮಾತ್ಮನು , ಉಗ್ರಂ ಉಗ್ರಂ = ಅಸುರಸ್ವಭಾವದ ಪ್ರತಿಯೊಬ್ಬನನ್ನೂ , ದಮಯನ್ = ಶಿಕ್ಷಿಸುವವನಾಗಿ , ಅನ್ಯಂ ಅನ್ಯಂ = ಅಸುರಭಿನ್ನಸ್ವಭಾವದ (ದೇವಸ್ವಭಾವದ) ಪ್ರತಿಯೊಬ್ಬನನ್ನೂ, ಅತಿನೇನೀಯಮಾನಃ = ಸಂಸಾರದಿಂದ ದಾಟಿಸುವನೆಂದು , ಶೃಣ್ವೇ = ಶ್ರುತಿಗಳಲ್ಲಿ ಕೇಳಲ್ಪಡುತ್ತಾನೆ (ಪ್ರತಿಪಾದಿಸಲ್ಪಡುತ್ತಾನೆ) . ಏಧಮಾನ್ ದ್ವಿಟ್ = ಸ್ವಯೋಗ್ಯತೆಯನ್ನು ಅತಿಕ್ರಮಿಸುವವರನ್ನು ಸಹಿಸದವನು , ಉಭಯಸ್ಯ ರಾಜಾ = ದೇವಾಸುರಸ್ವಭಾವದವರಿಗೆಲ್ಲ ಸ್ವಾಮಿಯು, ಮನುಷ್ಯಾನ್ ವಿಶಃ = ಮಧ್ಯವರ್ತಿಗಳಾದ (ಮನುಷ್ಯಮಧ್ಯಮರಾದ) ರಾಜಸರನ್ನು , ಚೋಷ್ಕೂಯತೇ = ನಿತ್ಯವೂ ಸುತ್ತಿಸುತ್ತಾನೆ.

** वीरोऽध्यवसितान्तगामी । इन्द्रः परमेश्वरः । उग्रमुग्रं सर्वान् दुष्टप्रकृतीन् दमयन्

नित्यनरकं प्रापयन् अन्यमन्यं सर्वान् सत्स्वभावानतिनेनीयमानः संसारं भृशमतिक्रामयन् स्वयोग्यतातिरेकेणैधमानं द्वेष्टीत्येधमानद्विट् । शृण्वे श्रूयते । कुत उभयस्य देवतासुरवर्गस्य राजा यतः । किञ्च मनुष्यान्विशः प्रजाश्चोष्कूयते नित्यं परिवर्तयति । (ಸುಧಾ - ಅನು. 3-4- ಶ್ಲೋ 108)

** ತತ್ರ ದೇವಾ ಮುಕ್ತಿಯೋಗ್ಯಾ ಇತ್ಯಾದಿನೋಕ್ತಮರ್ಥಂ ಶ್ರುತ್ಯಾಽಪಿ ಸಮರ್ಥ್ಯತೇ – ಶೃಣ್ವ ಇತಿ ॥ ವೀರಃ ಅಧ್ಯವಸಿತಾಂತಗಾಮೀ ಶ್ರೀನಾರಾಯಣಃ ಉಗ್ರಮುಗ್ರಂ ಲೋಕೋಪದ್ರವಕರಣಾತ್ ಕ್ರೂರಂ ಕ್ರೂರಂ ದೈತ್ಯಜನಂ ದಮಾಯನ್ ದಮಯನ್ ಅಂಧೇತಮಸಿ ದಂಡಯನ್ । ದಮನಸ್ಯ ದೀರ್ಘಕಾಲೀನತ್ವಸೂಚನಾಯ ಸಂಹಿತಾಯಾಂ ದೀರ್ಘಃ । ಅನ್ಯಮನ್ಯಮ್ ಉಗ್ರಾದನ್ಯಮನ್ಯಂ ಶಾಂತಂ ಬ್ರಹ್ಮಾದಿಸಜ್ಜನಗಣಮ್ ಅತಿ ಅತಿಶಯಿತಂ ಸ್ಥಾನಂ ನೇನೀಯಮಾನಃ ನಿತರಾಂ ನಯನ್ ಶೃಣ್ವೇ । ಶುಶ್ರುವೇ ಶ್ರೂಯತೇ ವಾ । ಉಭಯೇಷಾಮಪಿ ಸ್ವಾಧೀನತ್ವಾತ್ ನ ಕೇನಾಪಿ ವ್ಯತ್ಯಾಸಃ ಕರ್ತುಂ ಶಕ್ಯತ ಇತಿ ಭಾವೇನಾಹ – ಉಭಯಸ್ಯೇತಿ ॥ ಉಭಯಸ್ಯ ದೇವವರ್ಗಸ್ಯಾಸುರವರ್ಗಸ್ಯ ಚ ರಾಜಾ ನಿಯಾಮಕಃ । ಇಂದ್ರಃ = ಪರಮೈಶ್ವರ್ಯವಾನ್ ನಾರಾಯಣಃ । ಭಕ್ತಂ ಬಲಿಂ ಕಸ್ಮಾದಧೋಲೋಕಮನಯತ್ ಇತ್ಯತ ಉಕ್ತಮ್ – ಏಧಮಾನದ್ವಿಡಿತಿ ॥ ಏಧಮಾನಮ್ ಉಗ್ರತಪಆದಿಶಕ್ತ್ಯಾ ವರ್ಧಮಾನಂ ದ್ವೇಷ್ಟಿ ತದತಿಕ್ರಮಂ ನ ಸಹತ ಇತಿ ಸ ತಥೋಕ್ತಃ । ಅತ ಏವ ಸ್ವಾಧಿಕಗರುಡದ್ರೋಹಕರ್ತುಃ ಕಾಲಿಯಸ್ಯ ಮರ್ದನಮ್ । ಉಭಯೋರಂತೇ ಮಹದೈಶ್ವ-ರ್ಯದಾನಾತ್ ತಾತ್ಕಾಲಿಕ ಏವ ದ್ವೇಷೋ ನ ತು ದೈತ್ಯಾದಾವಿವ ಸದಾತನ ಇತಿ ಜ್ಞೇಯಮ್ । ವಿಶಃ ಕೃಷೀವಲಾದಿರಿವ । ಪ್ರಾಯಃ ಸ್ವೋದರಪೂರಣೋಪಯುಕ್ತಮಧ್ಯಮಾರ್ಗಮೇವ ವಿಶಂತೀತಿ ವಿಶಃ । ವಿಶೋ ಮನುಷ್ಯಾನ್ । ದೈತ್ಯಾದಿವತ್ ನಾತ್ಯುಗ್ರಾನ್ । ದೇವಾದಿವನ್ನಾತಿಶಾಂತಾನ್ । ಯದ್ವಾ ಕದಾಚಿದ್ ಅಧಮಾನ್ ವಿಶಂತಿ । ಕದಾಚಿದ್ ಉತ್ತಮಾನ್ ವಿಶಂತೀತಿ ಮಧ್ಯಮಜೀವಾನ್ ಚೋಷ್ಕೂಯತೇ । ಸ್ವರೂಪಭೂತಸುಖದುಃಖಾಖ್ಯನಿತ್ಯಸಂಸಾರ ಏವ ಪ್ರವರ್ತಯತಿ । 'ಚಕೂ ಪರಿವರ್ತನೇ' ಇತಿ ಧಾತುಃ । – (ತಾತ್ಪರ್ಯನಿರ್ಣಯಭಾವಪ್ರಕಾಶಿಕಾ)

– ಏಧಮಾನದ್ವಿಟ್ ಎಂದು ಭಗವಂತನಿಗೆ ಹೆಸರು. ಏಧಮಾನ ಎಂದರೆ ಉಗ್ರವಾದ ತಪಸ್ಸು ಮೊದಲಾದುದರಿಂದ ಸ್ವಯೋಗ್ಯತಾತಿಕ್ರಮೇಣ ಬೆಳೆಯುತ್ತಿರುವವನು ಎಂದರ್ಥ. ಅವನನ್ನು ದ್ವೇಷ್ಟಿ = ದ್ವೇಷಿಸುತ್ತಾನೆ ಅಂದರೆ ಯೋಗ್ಯತಾತಿಕ್ರಮಣ ಮಾಡಿ ಫಲ ಹೊಂದುವ ವಿಷಯದ ಬಗ್ಗೆ ಭಗವಂತನು ಸಹಿಸುವುದಿಲ್ಲ. ಆದ್ದರಿಂದಲೇ ಕಾಳಿಂಗನಿಗಿಂತ ಅಧಿಕನಾದ ಗರುಡನಿಗೆ ದ್ರೋಹ-ಮಾಡಿದ ಕಾಳಿಂಗನನ್ನು ಮರ್ದನಮಾಡಿದ ಶ್ರೀಕೃಷ್ಣ. ವಿಶಃ ಎಂದರೆ ಕೃಷೀವಲಾದಿಗಳಂತೆ ಹೆಚ್ಚಾಗಿ ತಮ್ಮ ಉದರ ಪೂರಣೆಗೆ ಬೇಕಾದ ಮಧ್ಯಮಾರ್ಗದಲ್ಲೇ ಪ್ರವೇಶಿಸುವವರು ಎಂದರ್ಥ.

ದಮಯನ್ ಎನ್ನುವ ಬದಲು ದಮಾಯನ್ ಎಂದು ದೀರ್ಘವಾಗಿ ಹೇಳಿದ್ದು ದೀರ್ಘಕಾಲದವರೆಗೆ ದೈತ್ಯಜನರಿಗೆ ಆಗುವ ಗತಿಯನ್ನು ತೋರಿಸುತ್ತಿದೆ.

**ಏತಾದೃಶಪ್ರಮಾಣ ಸಾಕ್ಷಿಯೇ ಎಂದು ಸೂಚಿಸಲು ಶುದ್ಧಂ ಅತುಲಂ ಪ್ರಮಾಣಂ ಎಂದಿದ್ದಾರೆ**

(ರಸರಂಜನೀ) — ನನು ಲೋಕೇ ಕಸ್ಮಿಂಶ್ಚಿದ್ರಾಜಾದೌ ದೃಢತರಸಹಜಸ್ನೇಹವತಾಮಪಿ ಬಲವನ್ನಿಮಿತ್ತಸನ್ನಿವೇಶೇನ ತತ್ರತೀಪಾದಿಕಾರಿಣಾಮನರ್ಥಪ್ರಾಪ್ತಿದರ್ಶನಾದ್ಧರೌ ತದ್ಭಾಸೇಷು ಸ್ನಿಗ್ಧಾನಾಮಪಿ ಪ್ರಬಲನಿಮಿತ್ತವಶೇನ ತದೀಯದ್ವೇಷಾದಿಸಂಪತ್ತ್ಯಾನರ್ಥಪ್ರಾಪ್ತೌ ಕಸ್ತೇಷಾಂ ವಿಶೇಷೋ ವಿರೋಧಿಭ್ಯ ಇತ್ಯತ ಆಹ — **ನಿಜೇನ ಮಹಸಾ ಪ್ರತಿಪಕ್ಷಾಣಾಂ ಮೋಕ್ಷವಿರೋಧಿನಾಂ ತದ್ವಿರೋಧಿಕಾರ್ಯಕಾರಣಾದೀನಾಂ ಯುಕ್ತಿರ್ಯೋಗೋ ನಾಸ್ತೀತಿ** । ಸ್ವಾಭಾವಿಕಾನಾಂ ತೇಷಾಮಸತ್ತ್ವೇಽಪಿ ನಿಮಿತ್ತಾಂತರವಶೇನ ಕಿಂ ನ ಸ್ಫುರಿತಿ ಶಂಕಾಪಿ ನಾಸ್ತೀತ್ಯಾಹ – **ಏವೇತಿ** ॥ ಅಯಮಾಶಯಃ — ಸ್ವರೂಪಾನುಬಂಧಿನೋಽನಿಷ್ಟಾಚರಣಾದಯಃ ಸರ್ವಥಾ ಮುಕ್ತಿಯೋಗ್ಯಾನಾಂ ನ ಸಂತ್ಯೇವ । ಯೇ ಚ ಪ್ರಾರಬ್ಧವಶಾತ್ ಶಾಪಾದಿನಿಮಿತ್ತೇನ ಭವವಿಶೇಷೈರ್ದೃಶ್ಯಂತೇ ತೇಽಪ್ಯಾವಿಷ್ಟಾ ಸುರಕೃತಾ ಏವ ತತಸ್ತೇಷಾಮೇವ ಫಲದಾ ಅತ ಏವ ಪ್ರತಿಪಕ್ಷೋ ನಾಸ್ತ್ಯೇವೇತ್ಯೇವ ವಕ್ತವ್ಯೇ ನಿಮಿತ್ತವಶಾತ್ ತದೀಯತಯಾ ದೃಶ್ಯಮಾನಾನಾಂ ತೇಷಾಂ ಗತಿಂ ವಕ್ತುಂ ಯುಕ್ತಿಃ ಸಂಬಂಧಃ ಫಲಜನಕತ್ವರೂಪ ಇತ್ಯುಕ್ತಮಿತಿ । ಏತಾದೃಶಂ ಪ್ರಮಾಣಂ ಸಾಕ್ಷ್ಯೇವೇತಿ ಸೂಚನಾಯ —

'**ಶುದ್ಧಮತುಲಂ ಪ್ರಮಾಣಮಿತಿ**',

' ............... ಶುದ್ಧಂ ಸಂಸಾರಗೇಷ್ವಪಿ ।

ನಿರ್ದೋಷತ್ವಾತಿನಿಯಮಾತ್ ತದ್ವಲಿಷ್ಠತಮಂ ಮತಮ್'

ಇತ್ಯಾದಿಪ್ರಸಿದ್ಧಯೋಃ ನಿರ್ದೋಷತಾತಿನಿಯಮಾಸದೃಶತ್ವಯೋಃ ಸಂಕೀರ್ತನಮ್ । ಸ ತದಭಿಮಾನೀ । ಅಭೇದವ್ಯಪದೇಶಗತಿಃ ಪ್ರಾಗ್ವತ್ । ಪ್ರಾರ್ಥಿತೋ ಹರಿರಪಿ ನ ಸಾಕ್ಷಾದ್ ಜ್ಞಾನಾದಿ ಯಚ್ಛತಿ ಕಿಂತು ಸ್ವರೂಪೇಂದ್ರಿಯಾಭಿಮಾನಿಪ್ರಾಣದ್ವಾರೇಣಾತೋಽಪಿ ಏತದುಪಾಸನಮಾವಶ್ಯಕಮ್ ಇತ್ಯಭಿಪ್ರಾಯೇಣೋಕ್ತಮ್– **ಆನಂದತೀರ್ಥ ಇತಿ** ॥

ಅಲ್ಲ! ಲೋಕದಲ್ಲಿ ಯಾರೋ ಒಬ್ಬ ರಾಜನಲ್ಲಿ ಅತ್ಯಂತದೃಢವಾದ ಸ್ವಾಭಾವಿಕವಾದ ಸ್ನೇಹ ಇರುವವರಾದರೂ ಯಾವಾಗಲಾದರೊಮ್ಮೆ ಪ್ರಬಲವಾದ ಕಾರಣದಿಂದ ಆ ರಾಜನಿಗೆ ವಿರೋಧವನ್ನು ಮಾಡಿದರೆ ಅನರ್ಥ ಕಂಡಿದೆ. ಹಾಗೆ ಹರಿಯಲ್ಲಿ ಹಾಗೂ ಹರಿಯ ಭಕ್ತರಲ್ಲಿ ಸ್ನೇಹ ಹೊಂದಿದ್ದವರೂ ಪ್ರಬಲವಾದ ಕಾರಣದಿಂದ ಅವರಲ್ಲಿ ದ್ವೇಷವನ್ನು ಮಾಡಿದರೆ ಅನರ್ಥ

ಉಂಟಾಗುತ್ತದೆ. ಹಾಗಾಗಿ ಹರಿಭಕ್ತರಿಗೂ ಹರಿಯ ವಿರೋಧಿಗಳಿಗೂ ಏನು ವ್ಯತ್ಯಾಸ? ಎನ್ನುವುದಕ್ಕೆ 'ನಿಜೇನ ಮಹಸಾ ಪ್ರತಿಪಕ್ಷಯುಕ್ತಿರ್ನಾಸ್ತಿ.' ಎಂಬುದರಿಂದ ಉತ್ತರಿಸಿದ್ದಾರೆ. ಮೋಕ್ಷವಿರೋಧಿಯಾದ ಆ ಭಗವಂತನ ದ್ವೇಷ ಹಾಗೂ ಅವನ ಭಕ್ತರಲ್ಲಿ ದ್ವೇಷ ಮಾಡುವುದು ಹಾಗೂ ಮಾಡಿಸುವುದು ಇತ್ಯಾದಿಗಳ ಸಂಬಂಧವು ಹರಿಭಕ್ತರಿಗೆ ಇರುವುದಿಲ್ಲ. ಅಲ್ಲ! ಸ್ವಾಭಾವಿಕವಾಗಿ ಅವರಲ್ಲಿ ಇಲ್ಲದಿದ್ದರೂ ಬೇರೆ ಕಾರಣದಿಂದಾಗಿ ಇರಬಹುದಲ್ಲವೇ ಎಂಬ ಶಂಕೆಗೂ ಈಗ ಅವಕಾಶವಿಲ್ಲ. ಅದಕ್ಕೋಸ್ಕರವೇ ಪ್ರತಿಪಕ್ಷಯುಕ್ತಿರ್ನೈವ ಎಂಬಲ್ಲಿ 'ಏವ' ಎಂದಿದ್ದಾರೆ. ಇದರ ಅಭಿಪ್ರಾಯ – ಮುಕ್ತಿಯೋಗ್ಯರು ತಮಗೆ ಅನಿಷ್ಟವಾದ ಆಚರಣೆಗಳನ್ನು ಸರ್ವಥಾ ತಮ್ಮ ಸ್ವರೂಪಾನು-ಗುಣವಾಗಂತೂ ಮಾಡುವುದಿಲ್ಲ. ಇನ್ನು ಯಾರು ಪ್ರಾರಬ್ಧದಿಂದಾಗಿ ಶಾಪಾದಿಗಳ ಕಾರಣದಿಂದ ಪಾಪಾಚರಣೆಗಳನ್ನು ಮಾಡುತ್ತಿದ್ದಾರೆಯೋ ಅವರಾದರೋ ದೇವತೆಗಳ ವಶವಾಗಿ ಮಾಡುತ್ತಿದ್ದಾರೆ. ಹಾಗಾಗಿ ಆ ಮಾಡಿದ ಕಾರ್ಯದ ಫಲವು ದೇವತೆಗಳಿಗೆ ಸಿಗುವುದು. ಆದ್ದರಿಂದಲೇ ಪ್ರತಿಪಕ್ಷೋ ನಾಸ್ತ್ಯೇವ ಎಂದೇ ಹೇಳಬೇಕಾಗಿತ್ತು. ಇದನ್ನು ಬಿಟ್ಟು ಪ್ರಬಲವಾದ ಕಾರಣದಿಂದ ಹರಿಯ ಭಕ್ತರು ಎನ್ನುವವರಲ್ಲೂ ಕಾಣುವ ಅನಿಷ್ಟಾಚರಣೆಗಳಿಗೆ ಒಂದು ಗತಿಯನ್ನು ಹೇಳಲು 'ಯುಕ್ತಿಃ' ಅಂದರೆ ಸಂಬಂಧವು ಫಲಜನಕವಾಗಿದೆ ಎಂದು ಹೇಳಿದ್ದಾರೆ. ಈ ವಿಷಯಗಳಲ್ಲಿ ಪ್ರಮಾಣವಾಗಿರುವುದು ಸಾಕ್ಷಿಯೇ ಆಗಿದೆ ಎಂದು ಸೂಚನೆ ಮಾಡಲು 'ಶುದ್ಧಂ ಅತುಲಂ ಪ್ರಮಾಣಂ' ಎಂದು –

"ಶುದ್ಧಂ ಸಂಸಾರಗೇಷ್ವಪಿ । ನಿರ್ದೋಷತ್ವಾತಿನಿಯಮಾತ್ ತದ್ಬಲಿಷ್ಠತಮಂ ಮತಮ್ ।"
(ನವಿಲಕ್ಷಣತ್ವಾಧಿಕರಣಅನುವ್ಯಾಖ್ಯಾನ)

ಇತ್ಯಾದಿಕಡೆ ನಿರ್ದೋಷತ್ವದ ಅತ್ಯಂತ ನಿಯಮವನ್ನು ಹಾಗೂ ಅಸದೃಶತ್ವವನ್ನು ಸಂಕೀರ್ತನೆ ಮಾಡಿದ್ದಾರೆ. "ಸಃ" ಎಂದರೆ ಸಾಕ್ಷಿಪ್ರಮಾಣಕ್ಕೆ ಅಭಿಮಾನಿ ಎಂದರ್ಥ. ಅಭೇದವ್ಯವಹಾರವನ್ನು ಹಿಂದೆ ನಿರೂಪಣೆ ಮಾಡಿದಂತೆ ತಿಳಿಯಬೇಕು.

ಭಕ್ತರು ಹರಿಯನ್ನು ಪ್ರಾರ್ಥಿಸಿದರೆ ಅವನು ಸಾಕ್ಷಾತ್ತಾಗಿ ಜ್ಞಾನಾನಂದಾದಿಗಳನ್ನು ನೀಡುವುದಿಲ್ಲ. ಕಿಂತು ಭಕ್ತರ ಸ್ವರೂಪೇಂದ್ರಿಯಕ್ಕೆ ಅಭಿಮಾನಿಯಾದ ಪ್ರಾಣದೇವರ ದ್ವಾರಾ ನೀಡುತ್ತಾನೆ. ಆದ್ದರಿಂದ ಅವರ ಉಪಾಸನೆಯನ್ನೂ ಮಾಡಬೇಕು ಎಂಬ ಅಭಿಪ್ರಾಯದಿಂದ ಆನಂದತೀರ್ಥ ಎಂದಿದ್ದಾರೆ.

## ಸಾಕ್ಷೀಂದ್ರಿಯಸಾಧನೆ - ನ ವಿಲಕ್ಷಣತ್ವಾಧಿಕರಣ

** सुखदुःखादिविषयं शुद्धं संसारगेष्वपि ॥२८॥ (अनुव्या.)

न केवलमीशरमामुक्तेषु किन्तु संसारगेष्वपि शुद्धमिन्द्रियमङ्गीकरणीयम्। कुतः?

सुखदुःखादिविषयम् । अयमर्थः अस्ति तावत् संसारिणां सुखदुःखेच्छादिविषयोऽपरोक्षावभासः । लिङ्गाद्यननुसन्धानेनैवाहं सुखीत्यादिस्पष्टावभासदर्शनात् । न चेन्द्रियविषयतामन्तरेणा-परोक्षावभासित्वं सुखादीनां युक्तम् । धर्मादेरपि तत्प्रसङ्गात् । तस्मात् सुखदुःखादिविषयमिन्द्रिय-मङ्गीकर्तव्यम् । तदेव शुद्धमिति ।

अस्तु सुखदुःखादिविषयमिन्द्रियं संसारिषु । तच्छुद्धमिति कुतः? प्राकृतेनापि तदपरोक्षावभासोपपत्तेरित्यत आह निर्दोषत्वेति ।

निर्दोषत्वातिनियमात् तद् बलिष्ठतमं मतम् ॥ (अनुव्या.)

तत् सुखादिविषयमिन्द्रियं तावद् बलिष्ठतमं सर्वथाऽप्यबाध्यं मतं सर्वेषां सम्मतम् । नहि कदाचिदप्यसति सुखे अहं सुखीति प्रत्ययोऽस्ति । नापि सति नास्मि सुखीति । तथाहि सति इन्द्रियस्य बाध्यता स्यात् । बलिष्ठतमता चेन्द्रियस्य निर्दोषत्वादिनियमादेव उपपद्यते नान्यथा । सदोषाणां बाधदर्शननियमात् । निर्दोषत्वातिनियमश्च शुद्धस्यैव धर्मो न प्राकृतस्य इति सुखादिविषयस्येन्द्रियस्य शुद्धतासिद्धिरिति ।

एतदुक्तं भवति सुखादिकमिन्द्रियविषयः, अपरोक्षावभासित्वात्; घटवत् । सुखादिविषयमिन्द्रियं शुद्धम्, निर्दोषतानियमवत्त्वात्; ईश्वरादीन्द्रियवत् । विमतं निर्दोषतातिनियमवत्, सर्वथाऽप्यबाध्यत्वात्; तद्वदेवेति ।

यद्यपि मुक्तानां शुद्धेन्द्रियवत्त्वेन संसारिणां तद्वत्ता शक्यसाधना, तस्य तत्स्वरूपतावगमात् । स्वरूपस्य चानागन्तुकत्वात् । तथाऽपि साक्षिणो यत् प्रत्यक्षत्वमुक्तम्, तद् विभावयितुमयं प्रमाणान्तरोपन्यासः । सुखादिविषयं स्वरूपभूतं चैतन्येन्द्रियं हि साक्षीत्युच्यते, तदभिव्यक्तं ज्ञानं चेति ।

— ಸಂಸಾರಿಗಳಲ್ಲೂ ಈಶ್ವರ, ರಮಾ, ಮುಕ್ತರುಗಳಲ್ಲಿ ಒಪ್ಪುವಂತೆ ಶುದ್ಧವಾದ ಇಂದ್ರಿಯವೊಂದನ್ನು ಒಪ್ಪಬೇಕು. ಅದರ ಹೆಸರು ಸಾಕ್ಷಿ ಎಂದು. ಇದಕ್ಕೆ ವಿಷಯವಾದದ್ದು ಸುಖದುಃಖಾದಿಗಳು. ಸುಖದುಃಖಾದಿಗಳನ್ನು ವಿಷಯೀಕರಿಸುವ ಇಂದ್ರಿಯವು ಪ್ರಾಕೃತೇಂದ್ರಿಯವಾಗಲು ಸಾಧ್ಯವಿಲ್ಲ. ಏಕೆಂದರೆ ಪ್ರಾಕೃತೇಂದ್ರಿಯವಿಷಯವಾದುದ್ದಕ್ಕೆ ಬಾಧವು ಕಂಡಿದೆ. ಇದು ಸರ್ಪವಲ್ಲ, ಇದು ರಜತವಲ್ಲ ಇತ್ಯಾದಿಯಾಗಿ. ಆದರೆ ಯಾರಿಗೂ ಸುಖ ಇಲ್ಲದಿದ್ದಾಗ 'ಅಹಂ ಸುಖೀ' ಎಂಬ ಜ್ಞಾನವಾಗಲೀ ಸುಖ ಇದ್ದಾಗ 'ನಾಸ್ಮಿ ಸುಖೀ' ಎಂದಾಗಲೀ ಜ್ಞಾನವಿಲ್ಲ. ಹಾಗಾಗಿ ಸುಖದುಃಖಾದಿಗಳನ್ನು ಗ್ರಹಿಸುವ ಇಂದ್ರಿಯ ಸರ್ವಥಾ ಅಬಾಧ್ಯವಾಗಿದೆ. ಹಾಗೂ ದೋಷ-

ರಹಿತವಾಗಿದೆ. ದೋಷರಹಿತವಾಗಿರುವಿಕೆ ಎಂಬುದಾದರೂ ಶುದ್ಧವಾದ ಇಂದ್ರಿಯದ ಧರ್ಮವಾಗಬೇಕೇ ಹೊರತು ಪ್ರಾಕೃತೇಂದ್ರಿಯದ್ದಲ್ಲ. ಆದ್ದರಿಂದ ಸಾಕ್ಷಿ ಎಂದರೆ ಸುಖ-ದುಃಖಾದಿಗಳನ್ನು ವಿಷಯೀಕರಿಸುವ ಸ್ವರೂಪಭೂತವಾದ ಚೈತನ್ಯೇಂದ್ರಿಯ ಅಥವಾ ಅದರಿಂದ ಅಭಿವ್ಯಕ್ತವಾದ ಜ್ಞಾನ.

## ಸಚ್ಛಾಸ್ತ್ರಾಭ್ಯಾಸರೂಪ-ಉಪಾಸನಾಧಿಕಾರಿಗಳಿಂದ ಮಾಡಬೇಕಾದ ಪ್ರಾಣನಾಯಕನ ಪ್ರಾರ್ಥನೆ

(ರಸರಂಜನೀ) — ಉಪಾಸನಾ ಹಿ ದ್ವಿವಿಧಾ । ಸಚ್ಛಾಸ್ತ್ರಾಭ್ಯಾಸರೂಪಾ ಧ್ಯಾನರೂಪಾ ಚೇತಿ । ತತ್ರ ಪ್ರಥಮೋಪಾಸನಾಧಿಕಾರಿಭಿಃ ಸ್ವಾಪೇಕ್ಷಿತಪುರುಷಾರ್ಥಾನುಸಾರಿಧರ್ಮವತ್ತಯಾ ಪ್ರಾಣ-ನಾಯಕಸ್ಯ ಪ್ರಾರ್ಥನಾ ಕಾರ್ಯೇತಿ ಶಿಷ್ಯಾನ್ ಶಿಕ್ಷಯತಿ — ವ್ಯಾಪ್ತಿರಿತಿ ॥ ಯಸ್ಯಾನಂದತೀರ್ಥಸ್ಯ ನಿಜೇ ಪಕ್ಷೇ ವಿಷ್ಣ್ವಶೇಷಗುಣಪೂರ್ತ್ಯಾದೌ ಪರಸತ್ಸಿದ್ಧಾಂತೇ ನಿಜೇನ ಮಹಸಾ ಸ್ವಯೋಗ್ಯೇನ ಸ್ವಾಭಾವಿಕೇನ ಚ ಜ್ಞಾನರೂಪಸಾಮರ್ಥ್ಯೇನ ವ್ಯಾಪ್ತಿಃ । ಸರ್ವಾಧಿಕಾರಿಭ್ಯೋ ವಿಶೇಷೇಣಾಪ್ತಿಃ ಪ್ರಾಪ್ತಿರ್ವಿಷಯೀಕರಣಂ ನಿಷ್ಠಾ ಚ । ಸಪಕ್ಷೇ ರಮಾಗುಣಪೂರ್ತ್ಯಾದಿರೂಪೇ ಬ್ರಹ್ಮಾದಿ-ತಾರತಮ್ಯಾದಿರೂಪೇ ಚಾಪರಸತ್ಸಿದ್ಧಾಂತೇ ಯಥಾಕ್ರಮಂ ನಿಜೇನ ಸ್ವಯೋಗ್ಯೇನ ಸ್ವಾಭಾವಿಕೇನ ಚ ಮಹಸಾ ಜ್ಞಾನೇನ ಸ್ಥಿತಿರ್ವ್ಯಾಪ್ತಿರ್ವಿಷಯೀಕರಣಂ ನಿಷ್ಠಾ ಚ, ವಿಪಕ್ಷತ ಏತದ್ವಿರೋಧಿಪಕ್ಷಾದ್ ವ್ಯಾವೃತ್ತಿಃ ತಾದೃಶಜ್ಞಾನನಿಷ್ಠಯೋರಭಾವ ಇತಿ ಯಾವತ್ । ಏತಜ್ಜ್ಞಾನವಿಷಯೀಭೂತಮೇ-ತದವಿದ್ಯಮಾನಮೇವ ಕಿಂ ನ ಸ್ಯಾತ್ ತತಶ್ಚ ಏತದ್ವಿಷಯಕನಿರ್ಣಯಪ್ರಾರ್ಥನಾಽಯುಕ್ತೈವ ಇತ್ಯತ ಆಹ — ಬಾಧಿತೇ ವಿಷಯೇ ಸಕ್ತಿರ್ಜ್ಞಾನದ್ವಾರಾ ಸಂಬಂಧೋ ನಾಸ್ತಿ । ಜ್ಞಾನಸ್ಯ ಬಾಧಿತಾರ್ಥಕತ್ವಂ ದೋಷವಶಾದೇವ ಕಲ್ಪ್ಯಮನ್ಯಥಾಽತಿಪ್ರಸಂಗಾತ್ ।

ಉಪಾಸನೆಯು ಎರಡು ರೀತಿಯಾಗಿದೆ. ಒಳ್ಳೆಯ ಶಾಸ್ತ್ರಗಳ ಅಭ್ಯಾಸ; ಹಾಗೂ ಧ್ಯಾನ ಎಂದು. ಇವುಗಳಲ್ಲಿ ಮೊದಲನೆಯ ಉಪಾಸನೆಗೆ ಅಧಿಕಾರಿಗಳಾದವರು ತಮಗೆ ಅಪೇಕ್ಷಿತವಾದ ಜ್ಞಾನಾದಿ ಪುರುಷಾರ್ಥಗಳಿಗೆ ಅನುಗುಣವಾಗಿ ಆ ಧರ್ಮಗಳಿರುವಂತೆ ವಾಯುದೇವರನ್ನು ಪ್ರಾರ್ಥನೆ ಮಾಡಬೇಕೆಂದು ಶಿಷ್ಯರಿಗೆ ಶಿಕ್ಷಣವನ್ನು ಮಾಡುತ್ತಿದ್ದಾರೆ — ವ್ಯಾಪ್ತಿಃ ಎಂದು. ಯಸ್ಯ - ಎಂದರೆ ಆನಂದತೀರ್ಥರಿಗೆ ಎಂದರ್ಥ. ನಿಜೇ ಪಕ್ಷೇ - ಪರಸತ್ಸಿದ್ಧಾಂತವಾದ ಭಗವಂತನು ಅಶೇಷ-ಗುಣಪೂರ್ಣ, ದೋಷವಿದೂರ ಮುಂತಾದವುಗಳಲ್ಲಿ, ನಿಜೇನ ಮಹಸಾ - ತಮ್ಮ ಯೋಗ್ಯತೆ-ಗನುಗುಣವಾಗಿ ಹಾಗೂ ಸ್ವಾಭಾವಿಕವಾಗಿ, ಜ್ಞಾನವೆಂಬ ಸಾಮರ್ಥ್ಯದಿಂದ ವ್ಯಾಪ್ತಿಯಿದೆ. ವ್ಯಾಪ್ತಿ ಎಂದರೆ ಎಲ್ಲ ಅಧಿಕಾರಿವರ್ಗದವರಿಗಿಂತ ವಿಶೇಷವಾಗಿ ಇಂತಹ ಸಿದ್ಧಾಂತದ ಜ್ಞಾನವನ್ನು ಹೊಂದಿದ್ದಾರೆ. ಅಥವಾ — ಅವರ ಜ್ಞಾನವು ಇಂತಹ ಸತ್ಸಿದ್ಧಾಂತದಲ್ಲಿ ನಿಷ್ಠೆಯನ್ನು ಹೊಂದಿದೆ.

ಸಪಕ್ಷೇ – ಅಪರಸತ್ಸಿದ್ಧಾಂತವೆನಿಸುವ ಲಕ್ಷ್ಮಿಯು ಗುಣಪೂರ್ಣಳು; ಹಾಗೂ ಬ್ರಹ್ಮಾದಿಗಳ ತಾರತಮ್ಯ ಎಂಬ ವಿಷಯಗಳಲ್ಲಿ ಕ್ರಮವಾಗಿ ಸ್ವಯೋಗ್ಯತಾನುಗುಣವಾಗಿ ಸ್ವಾಭಾವಿಕವಾಗಿಯೂ, ಮಹಸಾ - ಜ್ಞಾನದಿಂದ, ಸ್ಥಿತಿಃ - ಇರುವಿಕೆಯು ಅರ್ಥಾತ್ ವಿಷಯೀಕರಿಸುವಿಕೆ ಹಾಗೂ ನಿಷ್ಠೆ.

ವಿಪಕ್ಷತಃ ವ್ಯಾವೃತ್ತಿಃ – ಹಿಂದೆ ತಿಳಿಸಿದ ಅಪರಸಿದ್ಧಾಂತ ಹಾಗೂ ಪರಸಿದ್ಧಾಂತಕ್ಕೆ ವಿರುದ್ಧವಾದ ಪಕ್ಷದಿಂದ ವ್ಯಾವೃತ್ತಿಯಿದೆ. ಅರ್ಥಾತ್ ಆ ಸಿದ್ಧಾಂತಗಳು ಇವರ ಜ್ಞಾನಕ್ಕೆ ವಿಷಯವಾಗುವುದಿಲ್ಲ. ನಿಷ್ಠೆಯೂ ಇರುವುದಿಲ್ಲ. ಇವರ ಜ್ಞಾನಕ್ಕೆ ವಿಷಯವಾದದ್ದು ಅಸತ್ಯ. ಹಾಗಾಗಿ ಅದರ ವಿಷಯಕವಾದ ನಿಶ್ಚಯವನ್ನು ಪ್ರಾರ್ಥನೆ ಮಾಡುವುದು ಸರಿಯಲ್ಲ ಎಂದರೆ ಉತ್ತರಿಸುತ್ತಾರೆ – ಬಾಧಿತೇ. ಪ್ರಮಾಣಗಳ ಬಾಧ ಇರುವ ವಿಷಯದಲ್ಲಿ ಸಕ್ತಿಃ - ಅಂದರೆ ಸಂಬಂಧವು ಜ್ಞಾನದ್ವಾರಾ ಇರುವುದಿಲ್ಲ. ಏಕೆಂದರೆ, ಜ್ಞಾನದ ವಿಷಯವು ಬಾಧಿತವಾಗಬೇಕಾದರೆ ದೋಷದಿಂದಲೇ ಕಲ್ಪನೆ ಮಾಡಬೇಕು. ಇಲ್ಲದಿದ್ದರೆ ಸಮೀಚೀನವಾದ ಜ್ಞಾನದ ವಿಷಯವೂ ಬಾಧಿತವಾಗಬೇಕಾದೀತು ಎಂಬ ಅತಿಪ್ರಸಂಗ ಬರುತ್ತದೆ.

## ಪ್ರತಿಪಕ್ಷಯುಕ್ತಿರ್ನಾಸ್ತಿ, ಶುದ್ಧಂ, ಅತುಲಂ ಇತ್ಯಾದಿಪದಗಳ ವಿವರಣೆ

(ರಸರಂಜಿನೀ) – ನ ಚಾತ್ರ ದೋಷಾವಕಾಶೋಽಸ್ತಿ । ಋಜುತ್ವವ್ಯಾಘಾತಾದಿತಿ 'ವೈ'ಶಬ್ದೇನಾಚಷ್ಟೇ । ನನು ಏತದ್ವಿರೋಧಿಪ್ರಮಾಣದರ್ಶನೇ ಪ್ರತಿಬದ್ಧಮೀದೃಶಮೇತದ್ ಧ್ಯಾನಂ ನ ನಿಷ್ಠಾಮಾಸಾದಯತಿ । ಅತಸ್ತಾದೃಶಾನಾಮಪ್ಯಶಕ್ಯಾ ನಿಷ್ಠಾ ಕಥಮಸ್ಮದಭ್ಯರ್ಥನೀಯಾ ಭವೇದಿತ್ಯತ ಆಹ – ಪ್ರತಿಪಕ್ಷಯುಕ್ತಿರ್ನಾಸ್ತಿ ಇತಿ ॥ ಯತಃ ಕಸ್ಯಚಿತ್ ಪ್ರಮಾಣಸ್ಯ ಉಕ್ತಾರ್ಥಪ್ರತಿಪಾದಕತ್ವಮೇವ ಯತಶ್ಚಾಪಾತತ ಉಕ್ತಾರ್ಥವಿರೋಧಿನಃ ಪ್ರಮಾಣಸ್ಯ ಸಾವಕಾಶತ್ವಮೇವ ನಿರವಕಾಶಸ್ಯ ತ್ವೇತದ್ವಿರೋಧೇನಾಪ್ರಾಮಾಣ್ಯಮೇವಾತಃ ಕೇನಾಪಿ ಪ್ರಕಾರೇಣ ಪ್ರತಿಪಕ್ಷೋ ನಾಸ್ತೀತಿ 'ಏವ'ಕಾರೇಣಾಹ । ಯುಕ್ತಿಶಬ್ದಸ್ವಾರಸ್ಯಂ ಪ್ರಥಮವ್ಯಾಖ್ಯಾವತ್ । ಯಶ್ಚ ಪ್ರಮಾಣಂ ಪ್ರವರ್ತಕಃ 'ವಿಪ್ರಾಃ ಪ್ರಮಾಣಮ್' ಇತಿವತ್ । ಪ್ರವರ್ತಕತ್ವಮಪಿ ನಾನ್ಯಸಾಧಾರಣ್ಯೇನ ಕಿಂತು ಮುಖ್ಯಮೇವ ಇತ್ಯಾಶಯೇನ 'ಅತುಲಮ್' ಇತ್ಯುಕ್ತಮ್ ।

ಕಿಂ ವಿಪ್ರಲಂಭಾದಿನಾ ಪ್ರವರ್ತಕತ್ವಮ್, ನೇತ್ಯಾಹ – **ಶುದ್ಧಂ ನಿರ್ದೋಷಮಿತಿ** ॥ ಕಥಂ ಸತ್ಸಿದ್ಧಾಂತಪ್ರವರ್ತಕತ್ವಮ್ ಇತ್ಯತೋ ದ್ವೇಧಾಸ್ತೀತಿ ಇತ್ಯಾಶಯೇನ ಆನಂದತೀರ್ಥಶಾಸ್ತ್ರಂ ಯಸ್ಮಾತ್ ಸ ಇತಿ, ಮುನಿರುಪದೇಶಕ ಇತಿ ಚಾಹ । ಏತತ್ಸಂಭಾವನಾಯಾಹ – ಭಗವಾನಿತಿ ॥ ಶಾಸ್ತ್ರಾಭ್ಯಾಸೋಪಯುಕ್ತೋಕ್ತಸಿದ್ಧಾಂತಗೋಚರವಿಶಿಷ್ಟನಿರ್ಣಯಾಭಾವೇ ತದಯೋಗೇನ ಸ ಏವ ಪ್ರಾರ್ಥನೀಯ ಇತಿ ಭಾವೇನಾಹ – ವಿನಿರ್ಣಯಾಯೇತಿ ॥

ಪ್ರಕೃತ ಇವರಲ್ಲಿ ದೋಷಗಳಿರುವುದಿಲ್ಲ. ಒಂದು ವೇಳೆ ದೋಷಗಳಿದ್ದರೆ ಇವರು ಋಜುಗಳು ಎಂಬ ಮಾತಿಗೆ ವಿರೋಧ ಬರುವುದು ಎಂಬ ಅಂಶವನ್ನು 'ವೈ' ಎಂಬ ಶಬ್ದದಿಂದ ಹೇಳುತ್ತಿದ್ದಾರೆ. ಅಲ್ಲ। ಪರಾಪರಸಿದ್ಧಾಂತದ ವಿರೋಧಿಯಾದ ಪ್ರಮಾಣಕಂಡರೆ ಅವರ ಜ್ಞಾನವು ಪ್ರತಿಬದ್ಧವಾಗಿ ಆ ಜ್ಞಾನಕ್ಕೆ ಆ ಸಿದ್ಧಾಂತಗಳು ವಿಷಯವಾಗುವುದಿಲ್ಲ. ಅದೇ ರೀತಿ ಅವರು ಮಾಡುವ ಧ್ಯಾನವು ನಿಷ್ಠೆಯನ್ನೂ ಹೊಂದುವುದಿಲ್ಲ. ಹಾಗಾಗಿ ಅವರಿಗೆ ಅಶಕ್ಯವಾದ ನಿಷ್ಠೆಯನ್ನು ಅವರಿಂದ ನಾವು ಪ್ರಾರ್ಥಿಸುವುದು ಹೇಗೆ? ಎನ್ನುವುದಕ್ಕೆ ಉತ್ತರವಾಗಿ - ಪ್ರತಿಪಕ್ಷಯುಕ್ತಿರ್ನಾಸ್ತಿ ಎಂದಿದ್ದಾರೆ. ಅಂದರೆ ಯಾವ ಪ್ರಮಾಣವು ವಿರೋಧಿ ಎಂದು ತೋರಿಸುತ್ತೀರೋ ಅದನ್ನು ನಾವು ಹೇಳಿದ ಅರ್ಥದಲ್ಲಿ ಸಮನ್ವಯ ಮಾಡಬಹುದು. ಅಥವಾ ನೀವು ವಿರೋಧಿಯೆಂದು ತೋರಿಸುತ್ತಿರುವ ಪ್ರಮಾಣಕ್ಕೆ ಆ ಅರ್ಥವಿರುವುದಿಲ್ಲ. ಇನ್ನು ನಿರವಕಾಶದ ಪ್ರಮಾಣದ ವಿರೋಧವು ನೀವು ಹೇಳಿದ ಪ್ರಮಾಣಕ್ಕೆ ಬರುವುದು. ಇತ್ಯಾದಿರೀತಿಯಲ್ಲಿ ಯಾವ ಪ್ರಕಾರದಿಂದಲೂ ಪ್ರತಿಪಕ್ಷದ ಸಂಬಂಧವು ಬರಲು ಸಾಧ್ಯವಿಲ್ಲ ಎಂಬುದನ್ನು 'ಏವ' ಎಂಬ ಶಬ್ದದಿಂದ ತಿಳಿಸಿದ್ದಾರೆ.

ಯುಕ್ತಿ ಎಂಬ ಶಬ್ದದ ಸ್ವಾರಸ್ಯವನ್ನು ಮೊದಲನೆಯ ವ್ಯಾಖ್ಯಾನದಂತೆ ತಿಳಿಯಬೇಕು. "ಯಶ್ಚ ಪ್ರಮಾಣಂ" ಎನ್ನುವುದಕ್ಕೆ ಯಾವುದು ಪ್ರವರ್ತಕವೋ ಎಂದರ್ಥ. ಪ್ರಮಾಣಶಬ್ದಕ್ಕೆ ಪ್ರವರ್ತಕಃ ಎಂಬರ್ಥವು 'ವಿಪ್ರಾಃ ಪ್ರಮಾಣಮ್' ಎಂಬಲ್ಲಿರುವಂತೆ ಎಂದು ತಿಳಿಯಬೇಕು. ಪ್ರವರ್ತಕತ್ವವು ಆಚಾರ್ಯರಿಗೆ ಬೇರೆಯವರಂತೆ ಅಲ್ಲದೆ ಮುಖ್ಯವಾದದ್ದೇ ಎಂದು ತಿಳಿಯಬೇಕು ಎಂಬ ಅಭಿಪ್ರಾಯದಿಂದ "ಅತುಲಂ" ಎಂದಿದ್ದಾರೆ. ಮೋಸಮಾಡುವ ಇಚ್ಛೆಯಿಂದ ಪ್ರವರ್ತಕರಾಗಿದ್ದಾರೆ ಎಂಬ ಸಂಶಯವನ್ನು ಪರಿಹರಿಸಲು "ಶುದ್ಧಂ ನಿರ್ದೋಷಂ" ಎಂದಿದ್ದಾರೆ.

ಇವರು ಹೇಗೆ ಸತ್ಸಿದ್ಧಾಂತಪ್ರವರ್ತಕರು ಎಂದರೆ ಎರಡು ರೀತಿಯಿಂದ ಎಂದು ಉತ್ತರಿಸುತ್ತಿದ್ದಾರೆ. 'ಆನಂದಕರಂ ತೀರ್ಥಂ ಯಸ್ಮಾತ್' - ಆನಂದಪ್ರದವಾದ ಶಾಸ್ತ್ರವನ್ನು ರಚನೆ ಮಾಡಿದ್ದರಿಂದ. ಹಾಗೂ ಉಪದೇಶಕರಾದ್ದರಿಂದ ಎಂದು ತಿಳಿಯಬೇಕು. ಇದು ಸಂಭಾವಿತ ಎಂದು "ಭಗವಾನ್" ಎಂದಿದ್ದಾರೆ. ಶಾಸ್ತ್ರಾಭ್ಯಾಸಕ್ಕೆ ಬೇಕಾದ ಪರಾಪರಸಿದ್ಧಾಂತಗಳ ವಿಶಿಷ್ಟವಾದ ನಿಶ್ಚಯ ಇಲ್ಲದಿದ್ದರೆ ಧ್ಯಾನಮಾಡುವುದು ಸಾಧ್ಯವಿಲ್ಲ. ಹಾಗಾಗಿ ಆ ನಿಶ್ಚಯವನ್ನೇ ಪ್ರಾರ್ಥನೆ ಮಾಡಬೇಕು ಎಂಬ ಅಭಿಪ್ರಾಯದಿಂದ "ವಿನಿರ್ಣಯಾಯ" ಎಂದಿದ್ದಾರೆ.

## ಧ್ಯಾನರೂಪೋಪಾಸನಾಧಿಕಾರಿಗಳಿಂದ ಮಾಡಬೇಕಾದ ಪ್ರಾಣನಾಯಕನ ಪ್ರಾರ್ಥನೆ ಹಾಗೂ ಈ ಪಕ್ಷದಲ್ಲಿ ವ್ಯಾಪ್ತಿರ್ಯಸ್ಯ ನಿಜೇ ಎಂಬುದರ ವಿವರಣೆ

(ರಸರಂಜನೀ) — ಪರಾಪರತತ್ವಸಂಶಯವಿರುದ್ಧಪಕ್ಷಹೇಯತ್ವಾಜ್ಞಾನವಿಷಯಭಾಗತದಾಕಾಂಕ್ಷಾ ರೂಪದೋಷಲೇಶವತಾಪಿ ದ್ವಿತೀಯೋಪಾಸನಾಧಿಕಾರೋ ನ ಸಿಧ್ಯತಿ, ಅತಸ್ತದ್ದೋಷ-

ದೂರೀಕರಣಾಯ ತದನುಕೂಲಗುಣೋಪಸಂಹಾರೇಣ• ಕರುಣಾನಾಯಕಸ್ತವನಮೇವಾನು-ಪವನಮಾದರೇಣ ದ್ವಿತೀಯೋಪಾಸನಾಧಿಕರಿಭಿಃ ಕರಣೀಯಮಿತಿ ಸ್ವಾನುಗ್ರಾಹ್ಯಾನ್ ಗ್ರಾಹಯತಿ – ವ್ಯಾಪ್ತಿರಿತಿ ॥ ಯಸ್ಯ ನಿಜೇ ಪಕ್ಷೇ ಮುಖ್ಯೇ ಸಾಧ್ಯೇ ಶ್ರೀಹರೌ ನಿಜೇನ ಮಹಸಾ ಸ್ವೀಯೇನ ಸ್ವಯೋಗ್ಯೇನ ಜ್ಞಾನಾಖ್ಯಸಾಮರ್ಥ್ಯೇನ ವ್ಯಾಪ್ತಿರ್ವಾಪ್ಯವಿಷಯೀಕರಣಾನ್ನಿಶ್ಚಯ ಇತಿ ಯಾವತ್ । ಸಪಕ್ಷೇ ಪಕ್ಷಾನುಕೂಲೇಽಪರತತ್ತ್ವೇ ಸ್ಥಿತಿಸ್ತಥಾ ತಥ್ಯೇನ ನಿರ್ಣಯ ಇತಿ ನಿಷ್ಕರ್ಷಃ । ವಿಪಕ್ಷತೋ ವಿರುದ್ಧಪಕ್ಷತೋ ವ್ಯಾವೃತ್ತಿಃ, ತದ್ಧೇಯತ್ವಜ್ಞಾನಮಿತಿ ನಿಷ್ಕರ್ಷಃ । ಬಾಧಿತೇ ವಿಷಯಸಕ್ತಿ-ರ್ಭೋಗೋ ನ ಚ । ಅಥಶಬ್ದ ಉಪಾಸನಾಸಾಧನಸಮುಚ್ಚಯೇ । ಹೇಯಭೋಗಾಭಾವಸ್ಯ 'ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ' ಇತ್ಯಾದಿಪ್ರಸಿದ್ಧಿಂ ವೈಶಬ್ದೇನ ಸೂಚಯತಿ । ಪ್ರತಿಪಕ್ಷಾಣಾಂ ಮೋಕ್ಷವಿರೋಧಿನಾಂ ಮನಸಾಪ್ಯನ್ಯಕಾಮಾನಾಂ ಯುಕ್ತಿರ್ಯೋಗೋ ನಾಸ್ತಿ ।

ಯದಾ ಖಲು ಯದನುಗ್ರಹಪಾತ್ರಾಣಾಂ ಸತಾಂ ನ ಕಿಮಪ್ಯಾಕಾಂಕ್ಷ್ಯಮಸ್ತೀತಿ –

'ಮತ್ತೋಽಪ್ಯನಂತಾತ್ ಪರತಃ ಪರಸ್ಮಾತ್ ಸ್ವರ್ಗಾಪವರ್ಗಾಧಿಪತೇಃ ನ ಕಿಂಚಿತ್ ।
ಯೇಷಾಂ ಕಿಮು ಸ್ಯಾತ್ ಇತರೇಣ ತೇಷಾಂ ಅಕಿಂಚಿನಾನಾಂ ಮಯಿ ಭಕ್ತಿಭಾಜಾಮ್ ॥'

ಇತ್ಯಾದಿ ಪ್ರಮಾಣಪ್ರಸಿದ್ಧಂ, ತದಾ ಕಿಮು ವಾಚ್ಯಂ ತಸ್ಯ ಇತ್ಯಾಶಯೇನೋಕ್ತಂ – ಏವೇತಿ ॥ ಸ್ವಯಂ ಶ್ರೀಹರ್ಯನುಗ್ರಹಸಂಪತ್ತಯೇ ಏತಾದೃಶಗುಣವಾನ್ ಭೂತ್ವಾನ್ಯಾನಪಿ ಸ್ವಭಕ್ತಾನ್ ತಥೈವ ಪ್ರವರ್ತಯತೀತ್ಯಾಶಯೇನೋಕ್ತಮ್ – ಯಚ್ಚ ಪ್ರಮಾಣಂ ಪ್ರವರ್ತಕ ಇತಿ ॥

ಅತ್ರ ಪ್ರಮಾಣಂ ಹಿ ಭವಾನ್ ಪರಮೇಷ್ಠೀ ಯಥಾತ್ಮಭೂಃ ।
ಅಪರೇ ಹ್ಯ(ಚಾ)ನುತಿಷ್ಠಂತಿ ಪೂರ್ವೇಷಾಂ ಪೂರ್ವಜೈಃ ಕೃತಮ್ - ಇತ್ಯಾದಿವತ್ ।

ತದಪಿ ನ ಇತರಸಮಕಕ್ಷ್ಯತಯಾ ಇತ್ಯಾಹ – ಅತುಲಮಿತಿ ॥ ಕಿಮನ್ಯಾನ್ ವಂಚಯಿತುಮೇವಂ ಕುರುತ ಇತ್ಯತೋ ನೇತ್ಯಾಹ – ಶುದ್ಧಮಿತಿ ॥ ಸ ಉಕ್ತವಿಧೋಪಾಸನಾಸಾಧನಸಂಪತ್ತಿ-ಪೂರ್ವಕೋಪಾಸನಾಸಿದ್ಧಿಸಂಪಾದನದ್ವಾರಾ ತತ್ಸಾಕ್ಷಾತ್ಕಾರಾಯ ಭೂಯಾದಿತಿ ಯೋಜನಾ । ಉಪಾಸನಾಸಾಧನಜಾತಸ್ಯ ತತ್ಸಾಕ್ಷಾತ್ಕಾರಸ್ಯ ಚ ದಾತೃತ್ವಸಂಭಾವನಾಯ – ಭಗವಾನ್ ಇತಿ ॥ ಉಪಾಸನಾಸಿದ್ಧಿಸಂಪಾದನಸಂಪ್ರತಿಪತ್ತಯೇ – ಮುನಿರಿತಿ ॥ ಏತತ್ಸರ್ವಮಸ್ಯ ನ ಸ್ವಾತಂತ್ರ್ಯೇಣ ಕಿಂತ್ವನಾದಿತಃ ಶ್ರೀಹರಿಧ್ಯಾನಾದಿಲಬ್ಧಮಿತಿ ಸೂಚನಾಯ – ಆನಂದತೀರ್ಥ ಇತಿ ॥ ಪ್ರಥಮ-ವ್ಯಾಖ್ಯಾವದ್ ವ್ಯಾಖ್ಯೇಯಮ್ । ಅನೇನ –

" .................. ... ಭಾಷ್ಯಂ ಯದಾಸ್ಯಾಂಬುಜಾತ್ ।
ಆವಿರ್ಭೂತಮಮಂದಬೋಧಭಗವತ್ಪಾದಾನ್ ಪ್ರಪದ್ಯೇಽಥ ತಾನ್"

ಇತಿ ಸ್ವವ್ಯಾಖ್ಯೇಯಮೂಲಕರ್ತೃತೋಪಾಧಿನಾ ತತ್ಪ್ರತಿಪತ್ತಿಃ ಪ್ರಾರ್ಥಿತಾ ।

ಪರಾಪರತತ್ತ್ವಗಳ ಸಂಶಯವಿರುವವರಿಗೆ ಹಾಗೂ ಅದಕ್ಕೆ ವಿರುದ್ಧವಾದ ಪಕ್ಷವು ಹೇಯ ಎನ್ನುವ ಜ್ಞಾನ ಇಲ್ಲದಿರುವವರಿಗೆ ಮತ್ತು ಹೇಯವಾದದ್ದನ್ನು ಬಯಸುವವರಿಗೆ ಹೀಗೆ ಈ ಎಲ್ಲದೋಷಗಳ ಲೇಶ ಇದ್ದವರಿಗೂ ಧ್ಯಾನರೂಪವಾದ ಎರಡನೆಯ ಉಪಾಸನೆಯನ್ನು ಮಾಡಲು ಸಾಧ್ಯವಿಲ್ಲ. ಅದಕ್ಕಾಗಿ ಆ ದೋಷ ದೂರವಾಗಬೇಕು. ಹಾಗೂ ಧ್ಯಾನಕ್ಕೆ ಅನುಕೂಲವಾದ ಗುಣಗಳು ಬರಬೇಕು. ಇದಕ್ಕೋಸ್ಕರ ಕರುಣಾಮೂರ್ತಿಯಾದ ಆ ವಾಯುದೇವರನ್ನೇ ಅತಿ ಆದರದಿಂದ ದ್ವಿತೀಯೋ-ಪಾಸನೆ ಮಾಡುವ ಅಧಿಕಾರಿಗಳು ಪ್ರಾರ್ಥಿಸಬೇಕು ಎಂಬುದನ್ನು ತಮ್ಮ ಶಿಷ್ಯರಿಗೆ ತಿಳಿಸುತ್ತಿದ್ದಾರೆ — ವ್ಯಾಪ್ತಿಃ ಎಂದು.

'ಯಸ್ಯ' - ಯಾರಿಗೆ ನಿಜೇ ಪಕ್ಷೇ - ಮುಖ್ಯಸಾಧ್ಯವಾದ ಶ್ರೀಹರಿಯಲ್ಲಿ, ನಿಜೇನ ಮಹಸಾ - ತನಗೆ ಯೋಗ್ಯವಾದ ಜ್ಞಾನವೆಂಬ ಸಾಮರ್ಥ್ಯದಿಂದ ವ್ಯಾಪ್ತಿಃ - ವ್ಯಾಪ್ಯವಾದದ್ದನ್ನು ವಿಷಯೀಕರಿಸುವುದರಿಂದ ನಿಶ್ಚಯವಿದೆ. ಸಪಕ್ಷೇ - ಪಕ್ಷಕ್ಕೆ ಅನುಕೂಲವಾದ ಅಪರತತ್ತ್ವದಲ್ಲಿ ಸ್ಥಿತಿಯು ಇದೆ. ಹಾಗೂ ಅದು ಸತ್ಯ ಎಂಬ ನಿಶ್ಚಯವೂ ಇದೆ. ವಿಪಕ್ಷತಃ - ವಿರುದ್ಧವಾದ ಪಕ್ಷದಿಂದ ವ್ಯಾವೃತ್ತಿಃ - ಅದು ಹೇಯ ಎಂಬ ಜ್ಞಾನವಿದೆ. ಬಾಧಿತೇ - ಬಾಧಿತವಾದ ವಿಷಯದಲ್ಲಿ ಸಕ್ತಿಃ - ಭೋಗವು ನ ಚ - ಇರುವುದಿಲ್ಲ. ಅಥ ಎಂಬ ಶಬ್ದವು ಉಪಾಸನೆಗೆ ಸಾಧನವಾದದ್ದನ್ನು ಸಮುಚ್ಚಯ ಮಾಡುತ್ತದೆ.

ಇನ್ನು ಆಚಾರ್ಯರಿಗೆ ಹೇಯವಿಷಯದಲ್ಲಿ ಭೋಗ ಇಲ್ಲ ಎನ್ನುವುದು ಪ್ರಮಾಣಸಿದ್ಧ ಎಂಬುದನ್ನು 'ವೈ'ಶಬ್ದದಿಂದ ಸೂಚಿಸುತ್ತಿದ್ದಾರೆ. 'ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ ಯನ್ಮೇ ಹೃದೌ-ತ್ಕಂಠ್ಯವತಾ ಧೃತೋ ಹರಿಃ' (ಭಾಗ.) ಇತ್ಯಾದಿ ಪ್ರಮಾಣದಿಂದ.

ಪ್ರತಿಪಕ್ಷ ಎಂದರೆ ಮೋಕ್ಷವಿರೋಧಿಗಳು ಎಂದರ್ಥ. ಅವುಗಳಲ್ಲಿ ಮನಸಾ ಅಪಿ ಬೇರೆಯಕಡೆ ಕಾಮನೆಯು ಇರುವುದಿಲ್ಲ. ಹೀಗೆ ಯಾವಾಗ ಆಚಾರ್ಯರ ಅನುಗ್ರಹಕ್ಕೆ ಪಾತ್ರರಾದ ಸಜ್ಜನರಿಗೆ ಯಾವುದೇ ಭೋಗವು ಅಪೇಕ್ಷಿತವಾದದ್ದು ಇಲ್ಲವೋ ಆಗ ವಾಯುದೇವರಿಗೆ ಇಲ್ಲ ಎಂಬುದು ಸುತರಾಂ ಸಿದ್ಧವಾದ ವಿಷಯ. ಈ ವಿಷಯದಲ್ಲಿ ಪ್ರಮಾಣವಾಗಿ —

## ಪರಮಾತ್ಮನೇ ನಮಗೆ ಸರ್ವಸ್ವ

'ಮತ್ತೋಽಪ್ಯನಂತಾತ್ ಪರತಃ ಪರಸ್ಮಾತ್ ಸ್ವರ್ಗಾಪವರ್ಗಾಧಿಪತೇಃ ನ ಕಿಂಚಿತ್ ।
ಯೇಷಾಂ ಕಿಮು ಸ್ಯಾತ್ ಇತರೇಣ ತೇಷಾಂ ಅಕಿಂಚನಾನಾಂ ಮಯಿ ಭಕ್ತಿಭಾಜಾಮ್ ॥

- (ಭಾಗ 5.5.25)

* ನಾನು ಅನಂತ ಅರ್ಥಾತ್ ನಾಶವಿಲ್ಲದೇ ಇರುವವನು. ಪರಿಮಿತಿ ಇಲ್ಲದೇ ಇರುವವನು. ಪರಾತ್ಪರ ಎಂದರೆ ಶ್ರೇಷ್ಠರಾದ ಲಕ್ಷ್ಮ್ಯಾದಿಗಳಿಗಿಂತಲೂ ಶ್ರೇಷ್ಠ. ಸ್ವರ್ಗಮೋಕ್ಷಗಳಿಗೆ ಅಧಿಪತಿ. ಇಂಥ ನನ್ನಿಂದಲೂ ಕೂಡ ಈ ಬ್ರಾಹ್ಮಣರಿಗೆ ಏನೂ ಆಗಬೇಕಾಗಿಲ್ಲ. ಅಂಥ ಬ್ರಾಹ್ಮಣರಿಗೆ ನನಗಿಂತ ಬೇರೆಯವರಾದ ರಾಜರುಗಳಿಂದ ಏನಾಗಬೇಕಾಗಿದೆ? ಏಕೆಂದರೆ ಇವರು ನನ್ನಲ್ಲಿ ಭಕ್ತಿಯುಳ್ಳವರು. 'ಪರಮಾತ್ಮನೇ ನಮಗೆ ಸರ್ವಸ್ವ' ಎನ್ನುವ ಅಕಿಂಚನರು. ಅಂದರೆ ಅ - ಅಂದರೆ ಪರಮಾತ್ಮ, ಅವನೇ ಕಿಂಚನ ಅರ್ಥಾತ್ ದ್ರವ್ಯದಂತೆ ಪ್ರಾರ್ಥಿಸಲ್ಪಡುವವನು. ದ್ರವ್ಯ ಎಂದರೆ ಲೌಕಿಕವಾದ ಸಂಪತ್ತು. ಅದನ್ನು ಹೇಗೆ ಪ್ರಾರ್ಥಿಸುತ್ತಾರೋ ಹಾಗೆ ನನ್ನಲ್ಲಿ ಭಕ್ತಿ ಇರುವ ಜನರು ನನ್ನನ್ನೇ ಪ್ರಾರ್ಥಿಸುತ್ತಾರೆ. ಭಗವಂತನು ಹೇಳುವ ಮಾತಿದು. (ಋಷಭನಾಮಕ ಪರಮಾತ್ಮ ತನ್ನ ಮಕ್ಕಳಿಗೆ ಹೇಳುತ್ತಿರುವ ಮಾತು)

** 'ಅಕಿಂಚನಾನಾಮಪಿ' — ಬ್ರಾಹ್ಮಣೇಷ್ವಪಿ ಯೇ ನಿಸ್ಪೃಹಾ ಮದ್ಭಕ್ತಾಶ್ಚ ತೇ ಅತಿಶಯೇನ ಪೂಜ್ಯಾ ಇತ್ಯಾಶಯೇನಾಹ — ಮತ್ತೋऽಪೀತಿ ॥ ಅನಂತಾದಿತ್ಯಾದಿವಿಶೇಷಣತ್ರಯೇಣ ಸ್ವಸ್ಯ ಸರ್ವದಾ ಸರ್ವತ್ರಾನನ್ಯಾಧೀನತಯಾ ಪ್ರಾರ್ಥಿತಪ್ರಧಾನಸಾಮರ್ಥ್ಯಮುಕ್ತಮಿತಿ ಜ್ಞಾತವ್ಯಮ್ । 'ನ ಕಿಂಚಿತ್ ಪ್ರಾರ್ಥನೀಯಮಸ್ತಿ' ಇತಿ ಶೇಷಃ । ತೇಷಾಮಿತರೇಣೋಕ್ತವಿಪರೀತೇನ ರಾಜಾದಿನಾ ಕಿಮು ಪ್ರಾರ್ಥನೀಯಂ ಸ್ಯಾತ್, ನ ಕಿಮಪಿ । ಅತ್ರ ಹೇತುಕಥನಾಯೋಕ್ತಮ್ — ಅಕಿಂಚನಾನಾ-ಮಿತಿ ॥ ಅಃ ಪರಮಾತ್ಮೈವ ಕಿಂಚನಂ ದ್ರವ್ಯವತ್ ಪ್ರಾರ್ಥನೀಯೋ ತೇಷಾಮ್ ಇತ್ಯರ್ಥಃ । ತದಪಿ ಕುತಃ? ಇತ್ಯತ ಉಕ್ತಮ್ — ಮಯಿ ಭಕ್ತಿಭಾಜಾಮಿತಿ ॥

ಸ್ವತಃ ಶ್ರೀಹರಿಯ ಅನುಗ್ರಹವನ್ನು ಪಡೆಯಲು ಈ ರೀತಿಯ ಗುಣಗಳನ್ನು ಹೊಂದಿ ಬೇರೆಯ ತನ್ನ ಭಕ್ತರಿಗೂ ಅದೇ ರೀತಿ ಪ್ರವೃತ್ತಿಮಾಡುವಂತೆ ಪ್ರೇರಿಸುತ್ತಾರೆ. ಈ ವಿಷಯದಲ್ಲಿ ಪ್ರಮಾಣ —

### ಅತ್ರ ಪ್ರಮಾಣಂ ಹಿ ಭವಾನ್

ಅತ್ರ ಪ್ರಮಾಣಂ ಹಿ ಭವಾನ್ ಪರಮೇಷ್ಠೀ ಯಥಾತ್ಮಭೂಃ ।
ಅಪರೇ ಹ್ಯ(ಚಾ)ನುತಿಷ್ಠಂತಿ ಪೂರ್ವೇಷಾಂ ಪೂರ್ವಜೈಃ ಕೃತಮ್ ॥ (ಭಾಗ. 2-8-25)

* ನೀವು ಪರಮಾಪ್ತರು. ಹಿಂದಿನವರೆಲ್ಲರೂ ತಮ್ಮ ಹಿರಿಯರು ಹೇಳಿದಂತೆಯೇ ಅನುಷ್ಠಾನ ಮಾಡಿಕೊಂಡು ಬಂದುದರಿಂದ ಎಲ್ಲರಿಗೂ ಹಿರಿಯರಾದ ಬ್ರಹ್ಮದೇವರೇ ಎನ್ನುವುದು ಪರಮಾಪ್ತರು ನಿಜ. ಅದರಂತೆ ಅವರಿಂದ ನಾರದರ ಮತ್ತು ವೇದವ್ಯಾಸರ ಮೂಲಕ ಉಪದೇಶಪಡೆದ ನೀವೂ ಕೂಡ ಅವರಂತೆಯೇ ಆಪ್ತರು. (ಪರೀಕ್ಷಿತರಾಜ ಶುಕಮುನಿಗಳಿಗೆ ಹೇಳಿದ ಮಾತಿದು) ಈ ಶ್ಲೋಕಕ್ಕೆ ಪೀಠಿಕೆಯನ್ನು ಹೀಗೆ ನೀಡಿದ್ದಾರೆ. - ಮಹಾಮುನಿಗಳೆನಿಸಿದವರಿಗೂ ಬೃಹಸ್ಪತ್ಯಾಚಾರ್ಯರು ಮುಂತಾದವರಂತೆ ಮೋಸಮಾಡುವ ಇಚ್ಛೆಯು ಸಂಭಾವಿತವೇ ಆಗಿದೆ. ಆದರೆ ಅದೂ ಕೂಡ

ನಿಮಗಿಲ್ಲ ಎಂಬ ಅಭಿಪ್ರಾಯದಿಂದ "ಅತ್ರ ಪ್ರಮಾಣಂ" ಎಂಬ ಶ್ಲೋಕ ಹೊರಟಿದೆ. ನಾನು ಇಲ್ಲಿಯವರೆಗೂ ಕೇಳಿದ ವಿಷಯಗಳಲ್ಲಿ ನೀವೇ ಪ್ರಮಾಣ ಅಂದರೆ ಆಪ್ತರು ವಿಪ್ರಲಂಭಕರಲ್ಲ. ಏಕೆಂದರೆ ಈ ಎಲ್ಲ ಅರ್ಥಗಳಲ್ಲಿ ಪರಮಾತ್ಮನ ಮಗನಾದ ಬ್ರಹ್ಮದೇವರೇ ಪ್ರಮಾಣರಾಗಿದ್ದಾರೆ, ಅತ್ಯಂತ ಆಪ್ತರಾಗಿದ್ದಾರೆ ಎಂದು ಭಾವ. ಹಾಗಾಗಿ ಬ್ರಹ್ಮದೇವರು ಪ್ರಮಾಣರಾದಂತೆ ನೀವೂ (ಶುಕಮುನಿಗಳು) ಪ್ರಮಾಣರೇ. ಶ್ಲೋಕದಲ್ಲಿರುವ ಪೂರ್ವೇಷಾಂ ಎಂದರೆ ಮರೀಚಿ ಮೊದಲಾದ ಋಷಿಗಳಿಗಿಂತಲೂ ಪೂರ್ವಜರಾದ ಬ್ರಹ್ಮಾದಿಗಳು ಎಂದು ಗ್ರಹಿಸಿ ಬ್ರಹ್ಮಾದಿಗಳು ಮಾಡಿದ ಅನುಷ್ಠಾನವನ್ನು ಇತರ ಋಷಿಗಳೂ ಅನುಷ್ಠಾನ ಮಾಡುತ್ತಾರೆ. ಬ್ರಹ್ಮದೇವರು ಆಪ್ತರಲ್ಲ ಎಂದಾದಲ್ಲಿ ಸಕಲಶಿಷ್ಟರೂ ವಿಪ್ರತಿಪತ್ತಿ ಇಲ್ಲದೇ ಅವರು ಹೇಳಿದ ಅನುಷ್ಠಾನ ಮಾಡುವುದು ಅಸಂಭವ ಆದೀತು।। ಆದ್ದರಿಂದ ಹಿರಿಯರ ಸಂಪ್ರದಾಯದಿಂದ ಬಂದದ್ದನ್ನು ಹೇಳುವ ನೀವು ಆಪ್ತರೆಂಬುದು ಸರಿಯಾಗಿಯೇ ಇದೆ.

** 'ಪರಮೇಷ್ಠೀ' — (ಭಾಗ.ತಾ.) ಯಸ್ಮಾದನುತಿಷ್ಠಂತಿ ತಸ್ಮಾತ್ ಪರಮೇಷ್ಠೀ ಪ್ರಮಾಣಮ್ ।

* ಮಹಾಮುನೀನಾಮಪಿ ಬೃಹಸ್ಪತ್ಯಾದೀನಾಮಿವ ವಿಪ್ರಲಂಭಕತ್ವಂ ಸಂಭಾವಿತಂ ತದಪಿ ತ್ವಯಿ ನಾಸ್ತೀತ್ಯಾಹ — ಅತ್ರ ಪ್ರಮಾಣಮಿತಿ ॥ ಅತ್ರ = ಪೃಷ್ಟೇಷ್ವರ್ಥೇಷು, ಭವಾನ್ ಪ್ರಮಾಣಮ್ ಆಪ್ತೋ ನ ವಿಪ್ರಲಂಭಕಃ । ಕುತಃ? ಹಿ ಯಸ್ಮಾದತ್ರಾನ್ಯತ್ರ ಚಾರ್ಥೇಷು ಆತ್ಮಭೂಃ ಪರಮಾತ್ಮ ಪುತ್ರಃ । ಅತ್ರ ಪರಮೇಷ್ಠೀ ಪ್ರಮಾಣಮಾಪ್ತತಮಃ । ತಥಾತ್ವೇಽಪಿ ಕುತೋ ಯಥಾ ಪರಮೇಷ್ಠೀ ಅತ್ರ ಪ್ರಮಾಣಂ ತಥಾ ಭವಾನ್ । ನಾರದವ್ಯಾಸದ್ವಾರಾಗತಪರಮೇಷ್ಠಿಸಂಪ್ರದಾಯವತ್ ಕೃತತ್ವಾತ್ ತ್ವಯಾ ಇತಿ ಭಾವಃ । ನನ್ವೇವಮ್ ಉತ್ತರಾರ್ಧವೈಯರ್ಥ್ಯಮ್ ಇತ್ಯಾಶಂಕಾಯಾಂ ಪರಮೇಷ್ಠಿನಃ ಸರ್ವಶಾಸ್ತ್ರಾರ್ಥೇಷು ಆಪ್ತತ್ವಸಮರ್ಥನಾಯ ತದುಪಯೋಗ ಇತ್ಯಾಶಯೇನ ತದ್ಯೋಜನಾಂ ದರ್ಶಯತಿ — ಯಸ್ಮಾದಿತಿ ॥ ಅನೇನ ಹಿಶಬ್ದಾರ್ಥೋ ದರ್ಶಿತಃ । ಪೂರ್ವೇಷಾಂ ಮರೀಚ್ಯಾದೀನಾಂ ಪೂರ್ವಜೈರ್ಬ್ರಹ್ಮಾದಿಭಿಃ ಕೃತಂ ಶಾಸ್ತ್ರಾರ್ಥಮ್ ಅಪರೇಽನ್ಯೇಽಪಿ ಋಷಯೋಽನುತಿಷ್ಠಂತಿ ತಸ್ಮಾತ್ ಪರಮೇಷ್ಠೀ ಪ್ರಮಾಣಮ್ । ನ ಹಿ ಪರಮೇಷ್ಠಿನ ಆಪ್ತತ್ವಾಭಾವೇ ಸರ್ವೇಷಾಂ ಶಿಷ್ಟಾನಾಮವಿಗಾನೇನ ತದುಕ್ತಾನುಷ್ಠಾನಂ ಸಂಭವತಿ । ಅತೋ ಯಥಾ ಪರಮೇಷ್ಠೀ ಅತ್ರ ಪ್ರಮಾಣಂ ತಥಾ ತತ್ಸಂಪ್ರದಾಯವಕ್ತಾ ಭವಾನಪ್ಯತ್ರ ಪ್ರಮಾಣಮಿತಿ ಪೂರ್ವೋಕ್ತಂ ಯುಕ್ತಮಿತಿ ಭಾವಃ ॥ (ಭಾಗವತಪ್ರಕಾಶಿಕಾ)

ಈ ರೀತಿಯ ಬ್ರಹ್ಮದೇವರ ಅನುಷ್ಠಾನವಾದರೋ ಬ್ರಹ್ಮಾತಿರಿಕ್ತರಲ್ಲಿ ಅವರಿಗೆ ಸಮಾನವಾಗಿ ಕಾಣುವುದಿಲ್ಲ ಎಂಬುದನ್ನು ಅತುಲಂ ಎಂಬುದರಿಂದ ತಿಳಿಸಿದ್ದಾರೆ. ಬೇರೆಯವರನ್ನು ವಂಚಿಸಲು ಹೀಗೆ ಮಾಡುತ್ತಾರೆಯೋ ಎಂದರೆ ಇಲ್ಲ ಎಂದು 'ಶುದ್ಧಂ' ಎಂಬುದರಿಂದ ತಿಳಿಸಿದ್ದಾರೆ.

ಆಚಾರ್ಯರು ಹಿಂದೆ ಹೇಳಿದ ಉಪಾಸನಾಸಾಧನಗಳನ್ನು ಪಡೆದು ಉಪಾಸನಾಸಿದ್ಧಿಯನ್ನು ಮಾಡಿಕೊಂಡು ತನ್ಮೂಲಕ ತತ್ವಸಾಕ್ಷಾತ್ಕಾರಕ್ಕೆ ಕಾರಣರಾಗಲಿ ಎಂದು ಯೋಜನೆ ಮಾಡಬೇಕು.

ಉಪಾಸನಾಸಾಧನಗಳನ್ನು ಹಾಗೂ ತತ್ವಸಾಕ್ಷಾತ್ಕಾರ ನೀಡುವಲ್ಲಿ ಸಂಭಾವನೆಯನ್ನು ತೋರಿಸಲು "ಭಗವಾನ್" ಎಂದಿದ್ದಾರೆ. ಉಪಾಸನಾಸಿದ್ಧಿಯ ಸಂಪಾದನೆಯ ಜ್ಞಾನಕ್ಕೋಸ್ಕರ "ಮುನಿಃ" ಎಂದಿದ್ದಾರೆ. ಇದೆಲ್ಲವೂ ಆಚಾರ್ಯರಲ್ಲಿ ಇಲ್ಲದೆ ಅನಾದಿಕಾಲದಿಂದ ಶ್ರೀಹರಿಯ ಧ್ಯಾನದಿಂದ ಸಿಕ್ಕಿರುವುದು ಎಂದು ಸೂಚಿಸಲು "ಆನಂದತೀರ್ಥಃ" ಎಂದಿದ್ದಾರೆ. ಇದನ್ನು ಮೊದಲನೇ ವ್ಯಾಖ್ಯಾನದಂತೆ ವ್ಯಾಖ್ಯಾನಿಸಬೇಕು. ಇದರಿಂದ "ಭಾಷ್ಯಂ ಯದಸ್ಯಾಂಬುಜಾತ್ ಆವಿರ್ಭೂತಮ-ಮಂದಬೋಧಭಗವತ್ಪಾದಾನ್ ಪ್ರಪದ್ಯೇऽಥ ತಾನ್" ತಮ್ಮಿಂದ ವ್ಯಾಖ್ಯಾನಮಾಡಲ್ಪಡುವ ಮೂಲಕ್ಕೆ ಕರ್ತೃವಾಗಿದ್ದಾರೆ ಎಂಬ ಮೂಲಕ ಅವರಿಂದ ಜ್ಞಾನವನ್ನು (ಟೀಕಾಚಾರ್ಯರು) ಪ್ರಾರ್ಥನೆ ಮಾಡಿದ್ದಾರೆ.

## ಭಾಷ್ಯಕಾರರಾದ ಶ್ರೀಮದಾಚಾರ್ಯರ ಪ್ರಾರ್ಥನೆ

** स्वांतध्वान्तनिकृन्तने जितमहावैकर्तनांशुव्रजं
निर्दोषं जितचन्द्रचन्द्रिकमलं तापत्रयोन्मूलने ।
गाम्भीर्ये जितसिन्धुराजममितं भाष्यं यदास्याम्बुजा-
दाविर्भूतममन्दबोधभगवत्पादान् प्रपद्येऽथ तान् ॥ ३ ॥ (ತತ್ವಪ್ರಕಾಶಿಕಾ)

भाष्यस्य व्याख्येयत्वप्रयोजकसफलत्वगंभीरत्वादि दर्शयन् भाष्यकृतं प्रणमति ॥ स्वान्तेति ॥ अलं समर्थम् । निकृन्तन इत्यत्राप्यन्वेति । वैकर्तनांशुव्रजचन्द्रचन्द्रिकयोस्स्वान्तध्वान्त-निकृन्तने तापत्रयोन्मूलने चाशक्तत्वाद्भाष्येण जितत्वम् । निर्दोषमिति तयोर्जये हेत्वन्तरम् । तापह्रासादिदोषित्वात्तयोः । अमितं अमितार्थमिति हेतोर्जितसिन्धुराजत्वम् । तदुक्तं भाष्यं चात्यर्थविस्तरमित्यनुभाष्ये । अथ तस्मादेवंरूपभाष्याविर्भावकत्वादवसरप्राप्तान्प्रपद्य इति चार्थः । अत्र निकर्तन इति पाठः साधुः । निकृन्तन इति पाठे तु कृती छेदने इति धात्वन्तरस्य रूपं ध्येयं । तथाहि गीतगोविन्दे । विरहिनिकृन्तनकुन्तमुखाकृतिकेत(कि)-कदन्तुरिताशं इति प्रयोगः । 'एकेन नखनिकृन्तनेन' इति श्रुतौ च ॥ ३ ॥

'ಪೂರ್ಣಪ್ರಮತಿಗಳಾದ ಪೂಜ್ಯಸ್ವರೂಪರಾದ ಶ್ರೀಮದಾನಂದತೀರ್ಥರನ್ನು ಶರಣು ಹೊಂದು-ತ್ತೇನೆ' ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ.

ಸೂರ್ಯನ ಕಿರಣಗಳು, ಹಾಗೂ ಚಂದ್ರನ ಕಿರಣಗಳು ಬಾಹ್ಯವಾದ ಅಂಧಕಾರವನ್ನಷ್ಟೇ ನಾಶಪಡಿಸುತ್ತವೆ. ಆದರೆ ಬ್ರಹ್ಮಸೂತ್ರಭಾಷ್ಯವು ಒಳಗಿನ ಅಜ್ಞಾನಾಂಧಕಾರವನ್ನೂ ನಾಶಪಡಿಸುವ

ಮೂಲಕ ಸೂರ್ಯನ ಹಾಗೂ ಚಂದ್ರನ ಕಿರಣಗಳನ್ನು ಗೆದ್ದಿದೆ. ಈ ಭಾಷ್ಯವು ದೋಷರಹಿತವಾಗಿದೆ. ಗಾಂಭೀರ್ಯದಲ್ಲಿ ಸಮುದ್ರವನ್ನು ಗೆದ್ದಿದೆ. ಅಂದರೆ ಭಾಷ್ಯವು ಅಪರಿಮಿತವಾದ ಅರ್ಥದಿಂದೊಳ-ಗೂಡಿ ಸಮುದ್ರವನ್ನೂ ಮೀರಿಸಿದೆ. ಇಂತಹ ಅತ್ಯುತ್ಕೃಷ್ಟವಾದ ಭಾಷ್ಯವು ಶ್ರೀಮದಾಚಾರ್ಯರ ಮುಖಕಮಲದಿಂದ ಆವಿರ್ಭಾವಹೊಂದಿದೆ.

– ನಿಕರ್ತನೇ ಎಂಬ ಪಾಠವು ಸಾಧುವಾಗಿದೆ. ಹಾಗಾಗಿ ಸ್ವಾಂತಧ್ವಾಂತನಿಕರ್ತನೇ ಎಂಬ ಪಾಠವು ಸ್ವೀಕಾರ್ಯ. ನಿಕೃಂತನೇ ಎಂಬ ಪಾಠವಿದೆಯೆಂಬ ಪಕ್ಷದಲ್ಲಿ 'ಕೃತೀ ಛೇದನೇ' ಎಂಬ ಬೇರೆ ಧಾತುವಿನ ಮೂಲಕ ನಿಷ್ಪತ್ತಿ ಮಾಡಬೇಕು. ನಿಕೃಂತನ ಎಂಬ ಶಬ್ದಪ್ರಯೋಗ ಗೀತಗೋವಿಂದ ಹಾಗೂ ಶ್ರುತಿಗಳಲ್ಲೂ ಕಾಣಬಹುದು.

ವಿಕರ್ತನ ಎಂದರೆ ಸೂರ್ಯ. ಕತ್ತಲೆಯನ್ನು ನಾಶ ಮಾಡುವುದರಿಂದ ಈ ಹೆಸರು. ವೈಕರ್ತನಾಂಶು ಎಂದರೆ ಸೂರ್ಯನ ಕಿರಣಗಳು. ವ್ರಜ ಎಂದರೆ ಸಮೂಹ.

### ಭಾಷ್ಯಂ ಯದಾಸ್ಯಾಂಬುಜಾತ್ ಹಾಗೂ ಸಾಧಕೇಶೋ ನರೋತ್ತಮಃ ಎಂಬುದರ ವಿವರಣೆ ಮಾಡಿದಂತಾಯಿತು

(ರಸರಂಜನೀ) — ನ ಚ ತಾವತಾ ಸರ್ವಜನಪ್ರತಿಪತ್ತಿವಿಷಯಾ ಪ್ರಾಪ್ತಿಃ । ತದ್ವ್ಯಾಖ್ಯಾಪ್ರತಿಪತ್ತಿ-ವಿಷಯತ್ವೇಽಪಿ ತದನ್ಯಪ್ರತಿಪತ್ತಿವಿಷಯತ್ವಾಭಾವಾತ್ । ನ ಚ ನಿರ್ನಿಮಿತ್ತಂ ಪ್ರತಿಪತ್ತಿರ್ಯುಕ್ತಾ - ಇತ್ಯಾಶಂಕಾಯಾಃ ಸರ್ವವೇದಾರ್ಥಜ್ಞಾನಜನಕತ್ವ-ಸ್ವರೂಪೇಂದ್ರಿಯಪ್ರೇರಕತ್ವತತ್ತದ್ಯೋಗ್ಯಗುಣ-ದಾತೃತ್ವಪ್ರಬಲಪ್ರತಿಬಂಧನಿವರ್ತಕತ್ವರೂಪೋಪಪಾದಕಪ್ರತಿಪಾದನಮಿಷೇಣ ಅವಿಶೇಷಿತಮುಖ್ಯ-ಗುರುತ್ವೋಪಪಾದನದ್ವಾರಾ ನಿರಸನೇನ ತತ್ಪದ್ಯಂ ವಿವೃತಂ ಭವತಿ । ತದನೇನ ವೃತ್ತಿಜ್ಞಾನ-ಸಾಕ್ಷಿಜ್ಞಾನಸಾಧಕಗುಣಪ್ರದಾನವಿರೋಧಿದೋಷನಿರಸನರೂಪಾನ್ಯಾಶಕ್ಯಸಾಧಕತ್ವಪ್ರಕಾರ-ಪ್ರಕಟನೇನ 'ಸಾಧಕೇಶೋ ನರೋತ್ತಮಃ' ಇತಿ ಮಹಾಭಾರತತಾತ್ಪರ್ಯನಿರ್ಣಯವಾಕ್ಯಂ ವಿವೃತಂ ಭವತೀತಿ ।

ಇಷ್ಟರಿಂದಲೇ ಎಲ್ಲ ಜನರ ಪ್ರತಿಪತ್ತಿಗೂ ವಿಷಯವಾಗುವುದಿಲ್ಲ. ಕೇವಲ ಆ ಗ್ರಂಥದ ವ್ಯಾಖ್ಯಾತೃ-ವಿನ ಜ್ಞಾನಕ್ಕೆ ಮಾತ್ರ ವಿಷಯವಾಗುವುದು. ಅಲ್ಲ ಅವರಿಂದ ಈ ರೀತಿಯ ಜ್ಞಾನಪ್ರಾಪ್ತಿಗೆ ಯಾವುದಾದರೊಂದು ಕಾರಣವನ್ನು ಹೇಳಬೇಕು. ಇದಕ್ಕೆ ಉತ್ತರ - ಎಲ್ಲ ವೇದಾರ್ಥಜ್ಞಾನಜನಕರೂ, ಸ್ವರೂಪೇಂದ್ರಿಯಕ್ಕೆ ಪ್ರೇರಕರೂ, ಅವರವರ ಯೋಗ್ಯತಾನುಗುಣವಾದ ಗುಣಗಳನ್ನು ಕೊಡು-ವವರೂ, ಪ್ರಬಲವಾದ ಪ್ರತಿಬಂಧಕವನ್ನು ನಿವೃತ್ತಿ ಮಾಡುವವರೂ ಈ ಎಲ್ಲ ಅಂಶಗಳನ್ನು ಉಪಪಾದನೆ ಮಾಡುವ ನೆಪದಿಂದ ಎಲ್ಲರಿಗೂ ಮುಖ್ಯಗುರುಗಳು ವಾಯುದೇವರು ಎಂದು

ತಿಳಿಸುತ್ತ "ಭಾಷ್ಯಂ ಯದಾಸ್ಯಾಂಬುಜಾತ್" ಎಂಬ ಪದ್ಯವನ್ನು ವಿವರಿಸಿದಂತೆ ಆಯಿತು. ಇದರಿಂದ ವೃತ್ತಿಜ್ಞಾನ ಸಾಕ್ಷಿಜ್ಞಾನ ಸಾಧಕವಾದ ಗುಣಗಳನ್ನು ಕೊಡುವುದು ವಿರೋಧಿ ದೋಷಗಳನ್ನು ಪರಿಹರಿಸುವುದು ಈ ರೀತಿಯಾದ ಬೇರೆಯವರು ಮಾಡಲು ಅಸಾಧ್ಯವಾದ ಕಾರ್ಯಗಳನ್ನು ಮಾಡುವುದನ್ನು ತಿಳಿಸಿದ್ದರಿಂದ "ಸಾಧಕೇಶೋ ನರೋತ್ತಮಃ" ಎಂಬ ಮಹಾಭಾರತತಾತ್ಪರ್ಯ-ನಿರ್ಣಯದ(3-6) ವಾಕ್ಯವನ್ನು ವಿವರಣೆ ಮಾಡಿದಂತಾಯಿತು.

** ನಾರಾಯಣೋ ವ್ಯಾಸ ಇತಿ ವಾಚ್ಯವಕ್ತೃಸ್ವರೂಪತಃ ।
ಏಕಸ್ಸ ಭಗವಾನುಕ್ತಃ ಸಾಧಕೇಶೋ ನರೋತ್ತಮಃ ॥ (ಮ.ಭಾ.ತಾ.ನಿ. 3-6)

* ಅರ್ಥಮುಕ್ತ್ವಾ ನಮ್ಯತ್ವೇ ಹೇತುಮಾಹ – ನಾರಾಯಣೋ ವ್ಯಾಸ ಇತಿ ॥ ವಾಚ್ಯವಕ್ತೃಸ್ವರೂಪತಃ ಇತ್ಯನೇನ ವಾಚ್ಯತಯಾ ನಾರಾಯಣಗ್ರಹಣಂ ವಕ್ತೃತಯಾ ವ್ಯಾಸಗ್ರಹಣಮಿತಿ ಏಕಸ್ಯೈವ ದ್ವಿರ್ಗ್ರಹಣೇ ನಿಮಿತ್ತಂ ಸೂಚಿತಂ । ಅತ ಏವೋಭಯೋರ್ನಮನಮಿತಿ ಭಾವಃ । ಸಾಧಕೇಶಃ ಸಾಧಕೇಷು ವ್ಯಾಸಮುಖಾತ್ ಶ್ರುತ್ವಾ ಯೇ ಭಾರತಾರ್ಥಸಾಧಕಾಃ ಶುಕಾದಯಃ ತೇಷಾಮ್ ಈಶ ಇತ್ಯರ್ಥಃ । ಭಾರತಾರ್ಥವೇತ್ತೃಷೂತ್ತಮತ್ವಾತ್ ತತ್ಕರುಣಾಭಾವೇ ಅನ್ಯಸ್ಯಾರ್ಥಬೋಧೋ ನ ಸ್ಯಾದಿತಿ ತನ್ನಮನಮಿತಿ ಭಾವಃ ॥ (ಭಾವಪ್ರಕಾಶಿಕಾ)

## ಪ್ರಮಾಣದ ಬಗ್ಗೆ ವಾದಿಗಳ ವಿವಾದ, ತತ್ಪರಿಹಾರಕ್ಕಾಗಿ ಪ್ರಾಣನ ಪ್ರಸಾದಾಪೇಕ್ಷೆ

(ರಸರಂಜನೀ)— ಅಥವಾ — ಕೇಚಿತ್ ಪ್ರತ್ಯಕ್ಷಾದಿಪ್ರಮಾಣಪ್ರಮಿತಮಪಿ ಪ್ರಮೇಯಜಾತ-ಮೇವಾಲಪಂತಿ । ಅನ್ಯೇ ತು ಪುನಃ ಕಿಂಚಿದಭ್ಯುಪಗಚ್ಛಂತೋಽಪಿ ಅವ್ಯಕ್ತಾದಿತತ್ವಂ ನೇಚ್ಛಂತಿ । ಏವಮೇವ ಬಹವೋ ಬಹುಧಾನ್ಯಥಾ ಭಾಷಂತೇ । ಏವಂ ಪ್ರಮಾಣಸ್ವರೂಪೇಽಪಿ । ಪ್ರತ್ಯಕ್ಷಮೇಕಮೇವ ಪ್ರಮಾಣಮಿತಿ ಪ್ರಲಪಂತ್ಯೇಕೇ । ಅಪರೇ ದ್ವಯಮೇವ ಇತ್ಯಪರಥಾ ಸರ್ವಂತಿ । ತದುಭಯಮಪಿ ನೇತಿ ವದಂತೋ ವಾಚಾಲಾಃ ಪ್ರಮಾಣಾನಿ ಪ್ರಪಂಚಯಂತೋಽಪಿ ಪ್ರಮಿತಾನ್ಯವಜಾನತೇ । ತದೇವಮಾದಿ-ಅನೇಕವಿಧದುರ್ಮತದೂರೀಕರಣೇನ ಪ್ರಾಜ್ಞಮತ-ಪ್ರಸಾಧಕಾನಾಂ ಪರೀಕ್ಷಕಾಣಾಂ ಯಥಾರ್ಥೋಭಯಸ್ವರೂಪನಿರ್ಣಯೋಽಪೇಕ್ಷಿತಃ ಸ್ವವಶೀಕೃತ-ರಮೇಶಪ್ರಮಾಣಪ್ರಮೇಯಾಧೀಶಪ್ರಾಣಾಧೀಶಪ್ರಸಾದಾಧೀನ ಇತಿ ತದರ್ಥಪ್ರಸಿದ್ಧಪ್ರಮಾಣ-ರೂಪೋಪಮಾನಾಧಿಕ್ಯೇನ ಸ್ತುತಿಪ್ರಕಾರಪ್ರಕಟನೇನ ನಿಜಾನ್ ಪರೀಕ್ಷಕಾನ್ ಅನುಗೃಹ್ಣಾತಿ — ವ್ಯಾಪ್ತಿರಿತಿ ॥

ಅಥವಾ — ಕೆಲವರು ಪ್ರತ್ಯಕ್ಷಾದಿಪ್ರಮಾಣದಿಂದ ಸಿದ್ಧವಾಗಿದ್ದರೂ ಪ್ರಮೇಯವನ್ನು ಅಪಲಾಪ ಮಾಡುತ್ತಾರೆ. ಇನ್ನು ಕೆಲವರು ಕೆಲವು ಪ್ರಮೇಯಗಳನ್ನೊಪ್ಪಿದರೂ ಅವ್ಯಕ್ತಾದಿತತ್ವಗಳನ್ನು

ಒಪ್ಪುವುದಿಲ್ಲ. ಹೀಗೆ ಅನೇಕ ಜನರು ಅನೇಕರೀತಿಯಾಗಿ ಮಾತನಾಡುತ್ತಾರೆ. ಹೀಗೆ ಪ್ರಮಾಣ-ಸ್ವರೂಪದ ವಿಷಯದಲ್ಲಿಯೂ ಕೂಡ. 'ಪ್ರತ್ಯಕ್ಷವು ಒಂದೇ ಪ್ರಮಾಣ' ಎಂದು ಪ್ರಲಾಪಮಾಡುತ್ತಾರೆ; ಕೆಲವರು ಎರಡೇ ಎಂದು ಹೇಳುತ್ತಾರೆ. ಕೆಲವರು ಎರಡೂ ಅಲ್ಲ ಎಂದು ಬಾಯಿ ಮೇಲೆ ಮಾಡುವವರು (ವಾಚಾಲರು). ಪ್ರಮಾಣಗಳ ವಿಸ್ತಾರವನ್ನು ಪ್ರತಿಪಾದನೆ ಮಾಡುತ್ತ ಪ್ರಮಾಣ-ಸಿದ್ಧವಾದ ವಸ್ತುಗಳನ್ನು ತಿರಸ್ಕರಿಸುತ್ತಾರೆ. ಹೀಗೆ ಅನೇಕ ವಿಧವಾದ ದುರ್ಮತಗಳನ್ನು ಖಂಡಿಸುತ್ತ ಜ್ಞಾನಿಗಳಿಗೆ ಸಮ್ಮತವಾದ ಮತವನ್ನು ಸಾಧನೆ ಮಾಡುವ ಸಾಧಕರಾದ ಪರೀಕ್ಷಕರಿಗೆ ಯಥಾರ್ಥವಾದ ಪ್ರಮೇಯಪ್ರಮಾಣಗಳೆಂಬ ಎರಡರ ಸ್ವರೂಪದ ನಿರ್ಣಯವು ಅಪೇಕ್ಷಿತವಾಗಿದೆ. ಇದಾದರೋ ರಮೇಶನನ್ನೇ ತಮ್ಮ ವಶವನ್ನಾಗಿಟ್ಟುಕೊಂಡ, ಪ್ರಮಾಣ ಪ್ರಮೇಯಗಳಿಗೆ ಅಧಿಪತಿಯಾದ ಪ್ರಾಣದೇವರ ಪ್ರಸಾದದಿಂದಲೇ ಸಾಧ್ಯ ಎಂಬ ಕಾರಣದಿಂದ ಪ್ರಮಾಣವನ್ನು ದೃಷ್ಟಾಂತವನ್ನಾಗಿ ಕೊಟ್ಟು ಅದಕ್ಕಿಂತ ಅಧಿಕವಾಗಿ ಆಚಾರ್ಯರಿದ್ದಾರೆ ಎಂದು ಸ್ತೋತ್ರಮಾಡುತ್ತ ತಮ್ಮ ಶಿಷ್ಯರನ್ನು ಕುರಿತು ತೋರಿಸುತ್ತಿದ್ದಾರೆ — ವ್ಯಾಪ್ತಿಃ ಎಂಬುದಾಗಿ.

## ಸಪಕ್ಷೇ ಅಸ್ಥಿತಿಃ ಎಂದೂ ಪದಚ್ಛೇದ

(ರಸರಂಜನೀ) — 'ವ್ಯಾವೃತ್ತಿಶ್ಚ' ಇತಿ ಚಶಬ್ದೋಽವಧಾರಣಾರ್ಥೋಽನೇನಾಪಿ ಸಂಬಧ್ಯತೇ । 'ನ ಚ' (ನ ವೈ) ಇತ್ಯೇತದತ್ರಾಪ್ಯನುಕೃಷ್ಯತೇ । 'ವೈ'ಶಬ್ದಃ ತುಶಬ್ದಾರ್ಥಃ । 'ಸಪಕ್ಷೇ ಸ್ಥಿತಿಃ' ಇತ್ಯತ್ರ ಅಕಾರಪ್ರಶ್ಲೇಷೇಣಾಪಿ ಪದಂ ಭೇದ್ಯಮ್ । ಪ್ರತ್ಯಕ್ಷಪ್ರಮಾಣೇ ತಾವತ್ ಚಕ್ಷುರಾದೌ ನಿಜೇ ವಿಷಯ ಏವ ನಿಜೇನ ಮಹಸಾ ಸ್ಥಿತಿಃ = ಗ್ರಾಹಕತ್ವಸಾಮರ್ಥ್ಯಮ್ । ನ ತು ಪ್ರತ್ಯಕ್ಷಪ್ರಮಾಣತ್ವೇನ ಸ್ವಸಜಾತೀಯರಸನಾದಿವಿಷಯೇ ರಸಾದೌ । ಏವಂ ತತ್ತನ್ಮಾತ್ರವಿಷಯೇಽನುಮಾನಾದೌ ।

ವ್ಯಾವೃತ್ತಿಶ್ಚ ಎಂಬಲ್ಲಿನ ಚಶಬ್ದವು ಅವಧಾರಣ ಎಂಬ ಅರ್ಥವನ್ನು ಹೊಂದಿದ್ದು ವ್ಯಾಪ್ತಿಃ ಎಂಬಲ್ಲಿಯೂ ಅನ್ವಯವನ್ನು ಹೊಂದುತ್ತದೆ. ವ್ಯಾಪ್ತಿರೇವ ಎಂದರ್ಥ. ನ ವೈ ಎಂಬ ಪದವು ಇಲ್ಲಿಯೂ ಅನುಕರ್ಷವಾಗುತ್ತದೆ. ವೈಶಬ್ದಕ್ಕೆ ತುಶಬ್ದಾರ್ಥವನ್ನು ಹೇಳಬೇಕು. ಸಪಕ್ಷೇ ಸ್ಥಿತಿಃ ಎಂಬಲ್ಲಿಯೂ ಅಕಾರವನ್ನು ಪ್ರಶ್ಲೇಷ(ವರ್ಣಗಳ ಏಕೀಭಾವ) ಮಾಡಿ ಸಪಕ್ಷೇಽಸ್ಥಿತಿಃ ಎಂದು ಪದವನ್ನು ಭೇದಿಸಬೇಕು.

ಪ್ರತ್ಯಕ್ಷಪ್ರಮಾಣದಲ್ಲಿಯಾದರೋ ಮೊದಲಿಗೆ ಚಕ್ಷುರಾದೀಂದ್ರಿಯಗಳಲ್ಲಿ ತಮ್ಮ ವಿಷಯದಲ್ಲಿ ಮಾತ್ರ ತಮಗೆ ಗ್ರಹಿಸುವ ಸಾಮರ್ಥ್ಯವಿದೆ. ಹೊರತು ಪ್ರತ್ಯಕ್ಷಪ್ರಮಾಣತ್ವ ಇರುವ ಇಂದ್ರಿಯತ್ವೇನ ಸಜಾತೀಯವಾದ ರಸನೇಂದ್ರಿಯ ಮೊದಲಾದವುಗಳ ವಿಷಯಗಳಾದ ರಸಾದಿಗಳ ಗ್ರಾಹಕತ್ವ-ಸಾಮರ್ಥ್ಯ ಇಲ್ಲ. ಈ ರೀತಿ ಆಯಾಯಾ ನಿಯತವಿಷಯಗಳುಳ್ಳ ಅನುಮಾನಾದಿಗಳನ್ನು ತಿಳಿಯಬೇಕು.

## ಪ್ರಮಾಣತ್ರಯವೈಲಕ್ಷಣ್ಯ ಆಚಾರ್ಯರಲ್ಲಿದೆ

(ರಸರಂಜನೀ) — ಏವಂ ಪ್ರಮಾಣತ್ರಯಸ್ಯಾಪಿ ಸ್ವವಿಷಯಗ್ರಾಹಕತ್ವತದ್ವಿರೋಧ್ಯಭಾವಗ್ರಾಹಕತ್ವ-ಮಪ್ಯಸ್ತಿ ಉಭಯೋರೇಕಪ್ರಮಾಣಗ್ರಾಹ್ಯತ್ವಸ್ಯ ಸರ್ವಪರೀಕ್ಷಕಸಮ್ಮತತ್ವಾತ್ । ಅಸ್ಯ ತು ತದ್ವೈ-ಶೇಷ್ಯಮಸ್ತೀತಿ ಶ್ಲೇಷೇಣ ವ್ಯನಕ್ತಿ । ಯಸ್ಯ ಆನಂದತೀರ್ಥಪ್ರಮಾಣಸ್ಯ ವ್ಯಾಪ್ತಿರಸಂಕೋಚೇನ ಗ್ರಾಹಕತ್ವಮೇವ । ಸರ್ವಗ್ರಾಹಕತ್ವಾತ್ । ಉಪಮಾನೇಽಪಿ ಸತ್ವೇ ತದಾಧಿಕ್ಯಾಯೋಗಾತ್ ತದಸತ್ವಮುಪಪಾದಯನ್ ಏವಕಾರವ್ಯಾವರ್ತ್ಯಂ ದರ್ಶಯತಿ — ನಿಜೇ ಪಕ್ಷೇ ಸ್ವವಿಷಯೇ ಸ್ಥಿತಿ-ರ್ಗ್ರಾಹಕತಯಾ । ಸಪಕ್ಷೇ ಸ್ವಸಮಾನಪ್ರಮಾಣವಿಷಯೇಽಸ್ಥಿತಿರಿತಿ ನನು, ಇತಿ । ಯದ್ಯಪ್ಯಸ್ಯಾಂ ಯೋಜನಾಯಾಂ ಪಕ್ಷಪದಾತ್ ಪೂರ್ವಮೇವ ನಿಜಪದಂ ನಿವೇಶನೀಯಮನ್ವಯ-ಸೌಕರ್ಯಾತ್ । ತಥಾಽಪ್ಯನುಪ್ರಾಸಲಾಭಾಯ 'ನಿಜೇನ' ಇತ್ಯತ್ರ ನಿಕ್ಷೇಪಃ ।

ತಥಾ ವಿಪಕ್ಷತೋ ವಿರುದ್ಧವಿಷಯಾದ್ ವ್ಯಾವೃತ್ತಿರೇವ ನ ತು ಸ್ಥಿತಿರಿತಿ । ವ್ಯಾಪ್ತಿರಸಂಕೋಚ ಏವ ಇತಿ ಕುತಃ? ಪ್ರಮಾಣಾಂತರವತ್ ಸಂಕೋಚ ಏವ ಕಿಂ ನ ಸ್ಯಾತ್? ಇತ್ಯತ ಆಹ — **ಅತುಲ-ಮಿತಿ** ॥ 'ಅಥ'ಶಬ್ದಃ 'ತಸ್ಮಾತ್' ಇತ್ಯರ್ಥೋಽತ್ರಾಪ್ಯನುಕೃಷ್ಯತೇ । ಯಸ್ಮಾದತುಲಂ ತಸ್ಮಾದಿತಿ । ಸತಿ ಸಮಾನೇ ಪ್ರಮಾಣೇ ಕಸ್ಯಚಿದ್ವಿಷಯಸ್ಯ ತೇನಾಪಹಾರಾತ್ ಸಂಕೋಚಃ ಕಲ್ಪನೀಯಃ । ತದಭಾವೇ ತು ನಿರ್ನಿಮಿತ್ತಸಂಕೋಚಸ್ಯ ಅನಾಶಂಕನೀಯತ್ವಾದಸಂಕೋಚ ಏವ ಸಿದ್ಧ ಇತಿ । ಕುತಃ ಏತತ್? ಇತ್ಯತ ಆಹ — **ನೈವೇತಿ** ॥ 'ವೈ'ಶಬ್ದೋಽತ್ರಾಪ್ಯನುವರ್ತತೇ । ಏವಾಸ್ತೀತಿ ತತ್ರಾಪಿ । ಯತಃ ಪ್ರತಿಪಕ್ಷಯುಕ್ತಿರ್ನೈವಾಸ್ತೀತಿ ವೈ ಶ್ರುತ್ಯಾದಿಪ್ರಸಿದ್ಧಮ್ ಅತ ಇತಿ ।

ಒಟ್ಟು ಮೂರು ಪ್ರಮಾಣಗಳಿಗೂ ಸ್ವವಿಷಯಗ್ರಾಹಕತ್ವ ತದ್ವಿರೋಧ್ಯಭಾವಗ್ರಾಹಕತ್ವ ಎರಡೂ ಇದೆ. ಏಕೆಂದರೆ ಎರಡೂ ಒಂದೇ ಪ್ರಮಾಣದಿಂದ ತಿಳಿಯುವುದು ಎಂದು ಎಲ್ಲ ಪರೀಕ್ಷಕರೂ ಒಪ್ಪಿದ್ದಾರೆ.

ಆಚಾರ್ಯರಿಗಾದರೋ ಹಿಂದೆ ಹೇಳಿದ ಪ್ರಮಾಣಗಳಿಗಿಂತ ವಿಶೇಷತೆ ಇದೆ ಎಂಬುದನ್ನು ಶ್ಲೇಷಾ-ಲಂಕಾರದಿಂದಾಗಿ ವ್ಯಕ್ತಪಡಿಸುತ್ತಾರೆ. ಯಸ್ಯ - ಯಾವ ಆನಂದತೀರ್ಥರೆಂಬ ಪ್ರಮಾಣಕ್ಕೆ, ವ್ಯಾಪ್ತಿಃ - ಅಸಂಕೋಚೇನ ಗ್ರಾಹಕತ್ವವಿದೆ. ಎಲ್ಲವನ್ನೂ ಗ್ರಹಿಸುವುದು ಎಂದು ತಾತ್ಪರ್ಯ. ಈ ಸರ್ವಗ್ರಾಹಕತ್ವವು ದೃಷ್ಟಾಂತದಲ್ಲಿಯೂ ಇದ್ದರೆ ಅದಕ್ಕಿಂತ ಆಚಾರ್ಯರೆಂಬ ಪ್ರಮಾಣವು ಅಧಿಕವಾಗುವುದಿಲ್ಲ. ಅದಕ್ಕಾಗಿ ಏವಶಬ್ದದಿಂದ ವ್ಯಾವೃತ್ತಿಮಾಡುವುದನ್ನು ತೋರಿಸುತ್ತಾರೆ. ನಿಜೇ ಪಕ್ಷೇ - ಸ್ವವಿಷಯವಾದುದ್ದರಲ್ಲಿ, ಗ್ರಾಹಕತಯಾ ಸ್ಥಿತಿಯು ಇದೆ. ಇನ್ನು ಸಪಕ್ಷೇ ಅಂದರೆ ತಮಗೆ ಸಮಾನವಾದ ಪ್ರಮಾಣದ ವಿಷಯದಲ್ಲಿ ಸ್ಥಿತಿಯು ಇಲ್ಲ ಎಂಬುದು ಅಸಾಧ್ಯ. ಯದ್ಯಪಿ ಈ

ರೀತಿಯ ಯೋಜನೆಯಲ್ಲಿ ಪಕ್ಷಪದಕ್ಕಿಂತ ಮೊದಲೇ ನಿಜಪದವನ್ನು ಸೇರಿಸಬೇಕು. ಅನ್ವಯ-ಸೌಕರ್ಯ ಇರುವುದರಿಂದ. ಆದರೂ ಅನುಪ್ರಾಸದ ಲಾಭಕ್ಕಾಗಿ ನಿಜೇನ ಎಂಬಲ್ಲಿ ಸೇರಿಸಿದ್ದಾರೆ.

ಹಾಗೆಯೇ ವಿಪಕ್ಷತಃ – ವಿರುದ್ಧವಾದ ವಿಷಯವುಳ್ಳದ್ದರಿಂದ ವ್ಯಾವೃತ್ತಿಯೇ ಹೊರತು ಸ್ಥಿತಿಯಲ್ಲ. ವ್ಯಾಪ್ತಿಸಂಕೋಚವೇ ಯಾಕೆ? ಪ್ರಮಾಣಾಂತರದಂತೆ ಆಚಾರ್ಯರೆಂಬ ಪ್ರಮಾಣಕ್ಕೂ ಸಂಕೋಚವಿರಲಿ ಎಂದರೆ ಅದನ್ನು ಪರಿಹರಿಸಲು 'ಅತುಲಂ' ಎಂದಿದ್ದಾರೆ. ಅಥ ಎಂಬ ಶಬ್ದವು ತಸ್ಮಾತ್ ಎಂಬ ಅರ್ಥವನ್ನು ನೀಡುತ್ತಿದೆ. ಅದನ್ನು ಇಲ್ಲಿಯೂ ಅನುಕರ್ಷ ಮಾಡಿಕೊಳ್ಳಬೇಕು. ಯಾವಕಾರಣದಿಂದ ಅಸದೃಶವಾಗಿದೆಯೋ ಆ ಕಾರಣದಿಂದ ಎಂದು ಅರ್ಥ. ಸಮಾನವಾದ ಪ್ರಮಾಣವಿದ್ದಾಗ ಯಾವುದಾದರೂ ವಿಷಯಕ್ಕೆ ಅಪಹಾರವಾಗುವುದರಿಂದ ಒಂದು ಪ್ರಮಾಣಕ್ಕೆ ವಿಷಯಸಂಕೋಚವನ್ನು ಮಾಡಬೇಕು. ಸಮಾನವಾದ ಪ್ರಮಾಣವಿಲ್ಲದಿದ್ದಾಗ ಕಾರಣವಿಲ್ಲದೆ ಸಂಕೋಚವನ್ನು ಶಂಕೆಯೂ ಮಾಡಬಾರದ್ದರಿಂದ ಅಸಂಕೋಚವೇ ಸಿದ್ಧವಾಗುವುದು. ಇದು ಯಾವುದರಿಂದ ಸಿದ್ಧವಾಯಿತು? ಎಂದು ತೋರಿಸಲು ನೈವ ಎಂದಿದ್ದಾರೆ. ವೈ ಎಂಬ ಶಬ್ದವು ಈ ವಾಕ್ಯದಲ್ಲಿ ಅನ್ವಯವಾಗುತ್ತದೆ. ಏವ ಅಸ್ತಿ ಎಂಬ ಪದಗಳು ಅಲ್ಲಿಯೂ ಅನುವೃತ್ತವಾಗುತ್ತವೆ. 'ಯತಃ ಪ್ರತಿಪಕ್ಷಯುಕ್ತಿಃ ನೈವ ಅಸ್ತೀತಿ ವೈ ಶ್ರುತ್ಯಾದಿಸಿದ್ಧಮ್, ಅತಃ ಇತಿ' ಯಾವ ಕಾರಣದಿಂದ ಪ್ರತಿಪಕ್ಷಯುಕ್ತಿಗಳ ಸಂಬಂಧವು ಇರುವುದಿಲ್ಲ ಎಂಬುದು ಶ್ರುತ್ಯಾದಿಸಿದ್ಧವೋ ಆ ಕಾರಣದಿಂದ ಎಂದರ್ಥ.

## ವಿಪಕ್ಷತೋ ನ ವೃತ್ತಿಃ ಎಂದು ಏಕೆ ಹೇಳಲಿಲ್ಲ? ಹಾಗೂ ಕ್ರಮೋಲ್ಲಂಘನೆ ಏಕೆ?

(ರಸರಂಜನೀ) — ನನು ತಥಾಪಿ ವಿಪಕ್ಷತೋ ವ್ಯಾವೃತ್ತಿರೇವ ನ ತು ವೃತ್ತಿರಿತಿ ಕುತಃ? ಇತ್ಯತ ಉಕ್ತಮ್ — ಶುದ್ಧಂ ನಿರ್ದೋಷಮಿತಿ ॥ ಹೇಯೇಽಪಿ ವಿಷಯೇ ಸಕ್ತಿರ್ಹಿ ರಾಗಾದಿದೋಷ-ಮೂಲೈವ । ನ ಚ ನಿರ್ದೋಷೋ ದೋಷೀ ಕಿಂ ನ ಸ್ಯಾತ್? ಇತಿ ಶಂಕಾಪಿ ಯುಕ್ತಾ । ತತಃ ಕಾರಣಾಭಾವಾದೇವ ಕಾರ್ಯಾಭಾವ ಇತಿ । ಸತ್ಯಮೇತತ್, ಸತಿ ಪ್ರಮಾಣೇ ತದೇವ ಕಥಮ್? ಇತ್ಯತೋಽತ್ರಾಪಿ ತದ್ದರ್ಶಯತಿ — ಅಥೇತಿ ॥ ಯಸ್ಮಾದ್ಬಾಧಿತೇ ವಿಷಯೇ ಸಕ್ತಿರ್ನೈವಾಸ್ತೀತಿ ಪ್ರಮಾಣಪ್ರಮಿತಂ ತಸ್ಮಾದಿತಿ । ಯದ್ಯಪಿ 'ನೈವ' ಇತಿ 'ಅಥ' ಇತಿ ಕ್ರಮೇ ಏವ ಪ್ರಮಾಣ-ಪ್ರದರ್ಶನಂ ಕಾರ್ಯಮ್ । ತಥಾಪ್ಯಾಚಾರ್ಯಸ್ಯ ಪ್ರತಿಪಕ್ಷಯೋರ್ಗೋಕ್ತ್ಯಪೇಕ್ಷಯಾ ಹೇಯ-ಸಕ್ತಿವಚನಮತ್ಯಂತಮವಚಮಿತಿ ಸೂಚಯಿತುಂ ಕ್ರಮೋಲ್ಲಂಘನಮ್ । ಅತ ಏವ ಪ್ರಸ್ತುತತ್ವಾತ್ ಬಾಧಿತೇ ಸ್ಥಿತಿರಿತಿ ವಾ ವೃತ್ತಿರಿತಿ ವಾ ವಕ್ತವ್ಯೇ 'ಸಕ್ತಿಃ' ಇತ್ಯಾಹ, ತತ್ವಯೋಃ ಪ್ರಮಾಣಾ-ವರಪ್ರಮೇಯಯೋಃ ಪ್ರಾರ್ಥ್ಯಮಾನಸ್ಯ ನಿರ್ಣಯಸ್ಯಾಯಥಾರ್ಥತ್ವೇ ಕರಿಷ್ಯಮಾಣವ್ಯಾಖ್ಯಾನಸ್ಯ ಪೂತಿಕೂಷ್ಮಾಂಡೋಪಮತ್ವಪ್ರಾಪ್ತಿರಿತ್ಯತ ಉಕ್ತಮ್ — ವೀತಿ ॥ ವಿಶಿಷ್ಟತ್ವಂ ಚ ನಿರ್ದೋ-

ಷತಾಪರಪರ್ಯಾಯಂ ಯಾಥಾರ್ಥ್ಯಮಿತಿ । ಅನ್ಯದ್ ಯಥಾಯೋಗಂ ಪ್ರಾಗ್ವತ್ । ಇತಿ ತೃತೀಯಪದ್ಯವ್ಯಾಖ್ಯಾ ।

ಅಲ್ಲ! ಇಷ್ಟಾದರೂ ವಿಪಕ್ಷದಿಂದ ವ್ಯಾವೃತ್ತಿಯೇ ಹೊರತು ವೃತ್ತಿಯಲ್ಲ ಏಕೆ ಎಂಬ ಪ್ರಶ್ನೆಗೆ ಉತ್ತರವಾಗಿ 'ಶುದ್ಧಂ ನಿರ್ದೋಷಂ' ಎಂದಿದ್ದಾರೆ. ಹೇಯವಾದ ವಿಷಯದಲ್ಲಿಯೂ ಸಂಬಂಧವು ಅಥವಾ ಸ್ನೇಹವು ರಾಗಾದಿದೋಷಗಳ ಮೂಲಕವೇ ಉಂಟಾಗುವುದು. ಇನ್ನು ದೋಷವಿಲ್ಲದಿರುವವನು ದೋಷಿ ಯಾಕಾಗಬಾರದು? ಎಂಬ ಶಂಕೆಯಂತೂ ಸರಿಯಲ್ಲ. ಏಕೆಂದರೆ, ಕಾರಣವಾದ ದೋಷಗಳೇ ಇಲ್ಲ ಎಂದ ಮೇಲೆ ಕಾರ್ಯವು ಇರುವುದಿಲ್ಲ. ನಿಜ। ಇದು ಸರಿ. ಪ್ರಮಾಣಗಳಿದ್ದಾಗ ಅದು ಹೇಗೆ ಎಂಬ ಪ್ರಶ್ನೆ ಉಳಿಯುವುದು. ಅದನ್ನು ಇಲ್ಲಿ "ಅಥ" ಎಂಬುದಾಗಿ ತೋರಿಸುತ್ತಾರೆ. ಯಾವ ಕಾರಣದಿಂದ ಬಾಧಿತವಾದ ಅರ್ಥಾತ್ ಹೇಯವಾದ ವಿಷಯದಲ್ಲಿ ಸ್ನೇಹವು ಇಲ್ಲವೇ ಇಲ್ಲ ಎಂಬುದು ಪ್ರಮಾಣದಿಂದ ಸಿದ್ಧವಾಗಿದೆಯೋ ಆ ಕಾರಣದಿಂದ ಎಂದರ್ಥ. ಯದ್ಯಪಿ 'ನೈವ, ಅಥ' ಈ ಎರಡುಶಬ್ದಗಳ ಕ್ರಮದಲ್ಲಿಯೇ ಪ್ರಮಾಣವನ್ನು ತೋರಿಸುವುದು ಸರಿ. ಆದರೂ ಆಚಾರ್ಯರು ಪ್ರತಿಪಕ್ಷದ ಸಂಬಂಧವನ್ನು ಹೇಳುವ ಮಾತನ್ನು ಪ್ರಯೋಗಿಸುವುದಕ್ಕಿಂತ ಹೇಯವಿಷಯದಲ್ಲಿ ಆಸಕ್ತಿ ಇರುವ ಮಾತುಗಳು ಅತ್ಯಂತ ಅನಾವಶ್ಯಕ ಎಂದು ಸೂಚನೆ ಮಾಡಲು ಕ್ರಮವನ್ನು ಉಲ್ಲಂಘಿಸಿದ್ದಾರೆ. ಆದ್ದರಿಂದಲೇ ಪ್ರಸ್ತುತವಾದ್ದರಿಂದ ಬಾಧಿತವಾದುದರಲ್ಲಿ ಸ್ಥಿತಿ ಎಂದಾಗಲಿ ವೃತ್ತಿ ಎಂದಾಗಲೀ ಹೇಳದೇ ಸಕ್ತಿ ಎಂದದ್ದು ಪ್ರಮಾಣ ಹಾಗೂ ಅವರ ಪ್ರಮೇಯಗಳನ್ನು ಪ್ರಾರ್ಥಿಸುತ್ತಿರುವ ವ್ಯಕ್ತಿಗೆ ನಿಶ್ಚಯವು ಅಯಥಾರ್ಥವಾದರೆ ಮುಂದೆ ಮಾಡುವ ವ್ಯಾಖ್ಯಾನವು ಪೂತಿಕೂಷ್ಮಾಂಡ(ಕೊಳೆತ ಕುಂಬಳಕಾಯಿ)ದಂತೆ ಆಗುವುದು. ಮೇಲ್ನೋಟಕ್ಕೆ ಚೆನ್ನಾಗಿದ್ದರೂ ಒಳಗೆ ಸರಿಯಿಲ್ಲ. ಈ ಅಭಿಪ್ರಾಯವನ್ನು ತಿಳಿಸಲು 'ವಿ'ಎಂದಿದ್ದಾರೆ. ವಿನಿರ್ಣಯ ಎಂಬಲ್ಲಿನ ವಿಶಬ್ದದ ಅರ್ಥವಾದ ವಿಶಿಷ್ಟತ್ವವು ಯಾಥಾರ್ಥ್ಯ ಎಂದು. ಇನ್ನು ಮಿಕ್ಕಿದ ಅಂಶಗಳನ್ನು ಯಥಾಯೋಗವಾಗಿ ತಿಳಿಯಬೇಕು. (ರಸರಂಜನಿಯಲ್ಲಿ ಮೂರನೇ ಪದ್ಯದ ವ್ಯಾಖ್ಯಾನವು ಮುಗಿಯಿತು).

## ದ್ವಿತೀಯಗುರುತ್ವನಿಮಿತ್ತ ಶ್ರೀಮದಾನಂದತೀರ್ಥರ ಪ್ರಾರ್ಥನೆ - ವ್ಯಾಪ್ತಿರಿತಿ

(ಲಘುರಸರಂಜನೀ) — ದ್ವಿತೀಯಂ ಗುರುತ್ವಂ ಶ್ರೀಮದಾನಂದತೀರ್ಥೇಽಸ್ತೀತಿ ತಂ ವಿಶಿಷ್ಟ-ನಿರ್ಣಯಂ ಪ್ರಾರ್ಥಯತೇ — ವ್ಯಾಪ್ತಿರಿತಿ ॥ 'ಯಸ್ಯ' ಇತಿ 'ಅಸ್ತಿ' ಇತಿ ಚ ಸರ್ವತ್ರಾನ್ವೇತಿ । 'ಯಸ್ಯ' - ಆನಂದತೀರ್ಥಸ್ಯ 'ನಿಜೇನ ಮಹಸಾ' - ಸ್ವರೂಪಸಾಮರ್ಥ್ಯೇನ 'ನಿಜೇ ಪಕ್ಷೇ' - ಬ್ರಹ್ಮಮೀಮಾಂಸಾಶಾಸ್ತ್ರೇ, 'ವ್ಯಾಪ್ತಿಃ' - ವ್ಯಾಪನಂ = ತದರ್ಥಾವಬೋಧಕಬಹುಗ್ರಂಥ-ನಿರ್ಮಾಣಪೂರ್ವಕಮ್ ಅಶೇಷಸೂತ್ರಾರ್ಥವರ್ಣನಮಿತಿ ಯಾವತ್ । ಸಪಕ್ಷೇ ಸಮಾನಾ-

ರ್ಥತಯಾ ಪಕ್ಷಸಮಾನೇ ಭಾರತಾದ್ಯಶೇಷನಿರ್ಣೇಯಶಾಸ್ತ್ರೇ ಸ್ಥಿತಿಃ, ತತ್ರ ತತ್ರ ವಿಪ್ರತಿಪನ್ನ-ವಾಕ್ಯೇಷು ಬ್ರಹ್ಮಮೀಮಾಂಸಾಶಾಸ್ತ್ರನಿರ್ಣೀತಾರ್ಥಸ್ಥಾಪನಮಿತಿ ಯಾವತ್ । ವಿಪಕ್ಷತೋ ನಿರ್ಣೇಯನಿರ್ಣಾಯಕವಿರೋಧಿಶಾಸ್ತ್ರಾಂತರತೋ ವ್ಯಾವೃತ್ತಿಃ = ತದಭ್ಯಾಸಾದೌ ಅಪ್ರವೃತ್ತಿಃ । 'ದುಃಶಾಸ್ತ್ರಂ ತು ಪರಿತ್ಯಜೇತ್' ಇತ್ಯುಕ್ತೇಃ । ಅಥ 'ಬಾಧಿತೇ ವಿಷಯೇ ಸಕ್ತಿರ್ನ ವೈ' ನೈವ ಅವಿದ್ಯಮಾನಾರ್ಥಪ್ರತಿಪಾದನೇ ಕದಾಪಿ ನ ಪ್ರವೃತ್ತಿರಿತಿ ಯಾವತ್ । 'ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ' ಇತ್ಯಾದ್ಯುಕ್ತೇಃ । ಪ್ರತಿಪಕ್ಷಯುಕ್ತಿಃ = ವಿರೋಧಿಪ್ರಮಾಣಯೋಗಃ । ಸ್ವೋಕ್ತಾರ್ಥೇ ಪರೋಪನ್ಯಸ್ತಪ್ರಮಾಣವಿರೋಧೋ ನೈವ । ಅತ ಏವ **'ಅತುಲಮ್'** ಅಸದೃಶಂ **'ಶುದ್ಧಂ ಪ್ರಮಾಣಂ'** ವಿಶಿಷ್ಟಾರ್ಥಪ್ರಮಾಕರಣಂ ಸ ಆನಂದತೀರ್ಥೋ ವಿಶಿಷ್ಟನಿರ್ಣಯ-ಜನನೇನ ಆನಂದಕರಂ ತೀರ್ಥಂ ಶಾಸ್ತ್ರಂ ಯಸ್ಮಾತ್ ಸ ತಥಾ ತನ್ನಾಮಾ ಮುನಿಃ ತತ್ತ್ವ-ನಿರ್ಣಯಾಯ ಭಗವದಾದಿಸ್ವರೂಪವಿಶಿಷ್ಟನಿರ್ಣಯಾಯ ಭೂಯಾದಿತಿ ಯೋಜನಾ । ಉಕ್ತ-ಸರ್ವಾರ್ಥಸಂಭಾವನಾಯೋಕ್ತಂ — ಭಗವಾನಿತಿ ॥

ಮೊದಲನೆಯ ಗುರುಗಳು ವೇದವ್ಯಾಸರು. ಎರಡನೆಯ ಗುರುಗಳು ಶ್ರೀಮದಾನಂದತೀರ್ಥರು. ಇವರನ್ನು ಈಗ ವಿಶಿಷ್ಟವಾದ ನಿಶ್ಚಯವನ್ನು ನೀಡಿ ಎಂದು ಪ್ರಾರ್ಥಿಸುತ್ತಿದ್ದಾರೆ — ವ್ಯಾಪ್ತಿಃ ಎಂಬ ಶ್ಲೋಕದಿಂದ. ಈ ಶ್ಲೋಕದಲ್ಲಿರುವ ಯಸ್ಯ ಎಂಬ ಪದವು ಹಾಗೂ ಅಸ್ತಿ ಎಂಬ ಪದವು ಎಲ್ಲ ಕಡೆ ಅನ್ವಯವನ್ನು ಹೊಂದುತ್ತದೆ. 'ಯಸ್ಯ' ಅಂದರೆ ಯಾವ ಆನಂದತೀರ್ಥರ 'ನಿಜೇನ ಮಹಸಾ' ಸ್ವರೂಪಸಾಮರ್ಥ್ಯದಿಂದ ನಿಜೇ ಪಕ್ಷೇ - ತಮ್ಮ ಪಕ್ಷವಾದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ, ವ್ಯಾಪ್ತಿಃ - ವ್ಯಾಪಿಸಿರುವಿಕೆಯು ಅಂದರೆ ಬ್ರಹ್ಮಮೀಮಾಂಸಾಶಾಸ್ತ್ರದ ಅರ್ಥವನ್ನು ತಿಳಿಸಿಕೊಡುವ ಅನೇಕ ಗ್ರಂಥಗಳನ್ನು ನಿರ್ಮಾಣಮಾಡುವ ಮುಖಾಂತರ ಸಕಲ ಸೂತ್ರಗಳ ಅರ್ಥವನ್ನು ವರ್ಣನೆ ಮಾಡುವುದು ಎಂದು.

ಸಪಕ್ಷೇ — ಸಮಾನವಾದ ಅರ್ಥ ಇರುವುದರಿಂದ ಸಪಕ್ಷ ಎಂದು ಕರೆಯಿಸಿಕೊಳ್ಳಲ್ಪಡುವ ಪಕ್ಷಕ್ಕೆ ಸಮಾನವಾದ ಭಾರತ ಮೊದಲಾದ ಎಲ್ಲ ನಿರ್ಣೇಯವಾದ ಶಾಸ್ತ್ರಗಳಲ್ಲಿ, ಸ್ಥಿತಿಃ - ಇರುವಿಕೆಯು ಅಂದರೆ ಅಲ್ಲಲ್ಲಿ ವಿವಾದ ಇರುವ ವಾಕ್ಯಗಳಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರದಿಂದ ನಿಶ್ಚಿತವಾದ ಅರ್ಥವನ್ನು ಸ್ಥಾಪನೆ ಮಾಡುವುದು ಎಂದು. ವಿಪಕ್ಷತಃ - ನಿರ್ಣೇಯವಾದ ಹಾಗೂ ನಿರ್ಣಾಯಕವಾದ ಶಾಸ್ತ್ರಗಳಿಗೆ ವಿರೋಧಿಯಾದ ಬೇರೆ ಶಾಸ್ತ್ರಗಳಲ್ಲಿ, ವ್ಯಾವೃತ್ತಿಃ - ಅದರ ಅಭ್ಯಾಸಾದಿಗಳಲ್ಲಿ ಪ್ರವೃತ್ತಿ ಇಲ್ಲದಿರುವುದು. "ಸಚ್ಛಾಸ್ತ್ರಮಭ್ಯಸೇನ್ನಿತ್ಯಂ ದುಃಶಾಸ್ತ್ರಂ ತು ಪರಿತ್ಯಜೇತ್" (ಅನುವ್ಯಾಖ್ಯಾನ 3-3-ಶ್ಲೋ 90) ಎಂಬ ಮಾತಿರುವುದರಿಂದ. ಅನಂತರ ಬಾಧಿತವಾದ ವಿಷಯದಲ್ಲಿ ಸ್ನೇಹವು ಇಲ್ಲವೇ ಇಲ್ಲ ಎಂದರೆ ಅಸತ್ಯವಾದ ಅರ್ಥವನ್ನು

ತಿಳಿಸುವುದರಲ್ಲಿ ಎಂದಿಗೂ ಪ್ರವೃತ್ತಿ ಇಲ್ಲದಿರುವುದು. 'ನ ಭಾರತೀ ಮೇऽಂಗ ಮೃಷೋಪಲಕ್ಷ್ಯತೇ' ಇತ್ಯಾದಿ ಮಾತಿರುವುದರಿಂದ. ಪ್ರತಿಪಕ್ಷಯುಕ್ತಿಃ ಅಂದರೆ ವಿರೋಧಿಯಾದ ಪ್ರಮಾಣದ ಸಂಬಂಧ. ಇದು ತಾವು ಹೇಳಿದ ಅರ್ಥದಲ್ಲಿ ಎಂದಿಗೂ ಇರುವುದಿಲ್ಲ ಎಂದು ತಿಳಿಯಬೇಕು.

ಈ ಎಲ್ಲ ಕಾರಣದಿಂದಲೇ ಆನಂದತೀರ್ಥರು ಅತುಲರಾಗಿದ್ದಾರೆ. ಅಂದರೆ ಅಸದೃಶರಾಗಿದ್ದಾರೆ. ಹಾಗೆ ಶುದ್ಧವಾದ ಪ್ರಮಾಣವಾಗಿದ್ದಾರೆ. ಪ್ರಮಾಣ ಎಂದರೆ ವಿಶಿಷ್ಟವಾದ ಅರ್ಥದ ಯಥಾರ್ಥ-ಜ್ಞಾನವನ್ನು ತಂದುಕೊಡುವುದು.

ಹೀಗೆ ವಿಶಿಷ್ಟವಾದ ನಿರ್ಣಯವನ್ನು (ನಿಶ್ಚಯವನ್ನು) ತಂದು ಕೊಡುವುದರಿಂದ ಆನಂದಪ್ರದವಾದ ಶಾಸ್ತ್ರವನ್ನು ರಚನೆ ಮಾಡಿರುವುದರಿಂದ ಆನಂದತೀರ್ಥರೆನಿಸಿದ ಮುನಿಗಳು ತತ್ತ್ವನಿರ್ಣಯಾಯ - ಅಂದರೆ ಭಗವಂತನೇ ಮೊದಲಾದವರ ಸ್ವರೂಪದ ವಿಶಿಷ್ಟವಾದ ನಿರ್ಣಯಕ್ಕೋಸ್ಕರ ಕಾರಣರಾಗಲಿ ಎಂದು ಯೋಜನೆ.

ಈ ಎಲ್ಲ ಅರ್ಥದ ಸಂಭಾವನೆಗೋಸ್ಕರ (ಲಾಭಕ್ಕಾಗಿ) 'ಭಗವಾನ್' ಎಂದು ಹೇಳಿದ್ದಾರೆ.

## ದುಃಶಾಸ್ತ್ರಂ ತು ಪರಿತ್ಯಜೇತ್

** एतदेव च सच्छास्त्रं दुःशास्त्रं तु ततः परम् ।
सच्छास्त्रमभ्यसेन्नित्यं दुःशास्त्रं तु परित्यजेत् । ॥ ।८८ ॥

(सुधा) एतद् वेदादिकम् । ततः परं तद्विरुद्धं तदुदासीनं च । "ऋगाद्या भारतं चैव" इत्याद्यागमोऽत्र स्फुट एव । दुःशास्त्रं नाभ्यसेदिति वक्तव्ये परित्यजेदिति वचनं न केवलं तत्रोदासीनत्वम्, किन्तु हेयतया ज्ञानमपि भाव्यमिति ज्ञापयितुम् । अत्र च "असच्छास्त्राधिगमनम्" इति पातकेषु परिगणनं प्रमाणम् । स्फुटानि चाऽचार्येणान्यत्रात्रार्थे वाक्यान्युदाहृतानि ।

ವೇದಾದಿಗಳೇ ಸಚ್ಛಾಸ್ತ್ರ. ವೇದವಿರುದ್ಧವಾದದ್ದು, ವೇದಹೇಳಿದ ವಿಷಯಗಳಲ್ಲಿ ಉದಾಸೀನವಾದದ್ದು ದುಃಶಾಸ್ತ್ರ ಎಂದು ಪರಿಗಣಿಸಬೇಕು. ಸಚ್ಛಾಸ್ತ್ರಗಳು ಯಾವುವು ಎಂಬುದು 'ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್ । ಮೂಲರಾಮಾಯಣಂ ..' ಮುಂತಾದ ಆಗಮ-ಗಳಿಂದ ಪ್ರಸಿದ್ಧ. ಇಲ್ಲಿ ದುಃಶಾಸ್ತ್ರವನ್ನು ಅಭ್ಯಾಸಮಾಡಬಾರದು ಎಂದು ಹೇಳಬೇಕಾದಲ್ಲಿ 'ಪರಿತ್ಯಾಗ ಮಾಡಬೇಕು' ಎಂಬ ಮಾತು ಕೇವಲ ಅಲ್ಲಿ ಉದಾಸೀನವಲ್ಲ, ಅದು ಹೇಯ ಎಂಬ ಜ್ಞಾನವೂ ಬರಬೇಕು ಎಂದು ತಿಳಿಸಲು ಎಂದು ತಿಳಿಯಬೇಕು. ಇಲ್ಲಿ ಪಾತಕಗಳಲ್ಲಿ ಅಸಚ್ಛಾಸ್ತ್ರವನ್ನು ಓದುವುದು ಎನ್ನುವುದನ್ನೂ ಪರಿಗಣಿಸಿದ್ದಾರೆ.

ರ್ಥತಯಾ ಪಕ್ಷಸಮಾನೇ ಭಾರತಾದ್ಯಶೇಷನಿರ್ಣೇಯಶಾಸ್ತ್ರೇ ಸ್ಥಿತಿಃ, ತತ್ರ ತತ್ರ ವಿಪ್ರತಿಪನ್ನ-ವಾಕ್ಯೇಷು ಬ್ರಹ್ಮಮೀಮಾಂಸಾಶಾಸ್ತ್ರನಿರ್ಣೀತಾರ್ಥಸ್ಥಾಪನಮಿತಿ ಯಾವತ್ । ವಿಪಕ್ಷತೋ ನಿರ್ಣೇಯನಿರ್ಣಾಯಕವಿರೋಧಿಶಾಸ್ತ್ರಾಂತರತೋ ವ್ಯಾವೃತ್ತಿಃ = ತದಭ್ಯಾಸಾದೌ ಅಪ್ರವೃತ್ತಿಃ । 'ದುಃಶಾಸ್ತ್ರಂ ತು ಪರಿತ್ಯಜೇತ್' ಇತ್ಯುಕ್ತೇಃ । ಅಥ 'ಬಾಧಿತೇ ವಿಷಯೇ ಸಕ್ತಿರ್ನ ವೈ' ನೈವ ಅವಿದ್ಯಮಾನಾರ್ಥಪ್ರತಿಪಾದನೇ ಕದಾಪಿ ನ ಪ್ರವೃತ್ತಿರಿತಿ ಯಾವತ್ । 'ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ' ಇತ್ಯಾದ್ಯುಕ್ತೇಃ । ಪ್ರತಿಪಕ್ಷಯುಕ್ತಿಃ = ವಿರೋಧಿಪ್ರಮಾಣಯೋಗಃ । ಸ್ವೋಕ್ತಾರ್ಥೇ ಪರೋಪನ್ಯಸ್ತಪ್ರಮಾಣವಿರೋಧೋ ನೈವ । ಅತ ಏವ **'ಅತುಲಮ್'** ಅಸದೃಶಂ **'ಶುದ್ಧಂ ಪ್ರಮಾಣಂ'** ವಿಶಿಷ್ಟಾರ್ಥಪ್ರಮಾಕರಣಂ ಸ ಆನಂದತೀರ್ಥೋ ವಿಶಿಷ್ಟನಿರ್ಣಯ-ಜನನೇನ ಆನಂದಕರಂ ತೀರ್ಥಂ ಶಾಸ್ತ್ರಂ ಯಸ್ಮಾತ್ ಸ ತಥಾ ತನ್ನಾಮಾ ಮುನಿಃ ತತ್ತ್ವ-ನಿರ್ಣಯಾಯ ಭಗವದಾದಿಸ್ವರೂಪವಿಶಿಷ್ಟನಿರ್ಣಯಾಯ ಭೂಯಾದಿತಿ ಯೋಜನಾ । ಉಕ್ತ-ಸರ್ವಾರ್ಥಸಂಭಾವನಾಯೋಕ್ತಂ — ಭಗವಾನಿತಿ ॥

ಮೊದಲನೆಯ ಗುರುಗಳು ವೇದವ್ಯಾಸರು. ಎರಡನೆಯ ಗುರುಗಳು ಶ್ರೀಮದಾನಂದತೀರ್ಥರು. ಇವರನ್ನು ಈಗ ವಿಶಿಷ್ಟವಾದ ನಿಶ್ಚಯವನ್ನು ನೀಡಿ ಎಂದು ಪ್ರಾರ್ಥಿಸುತ್ತಿದ್ದಾರೆ — ವ್ಯಾಪ್ತಿಃ ಎಂಬ ಶ್ಲೋಕದಿಂದ. ಈ ಶ್ಲೋಕದಲ್ಲಿರುವ ಯಸ್ಯ ಎಂಬ ಪದವು ಹಾಗೂ ಅಸ್ತಿ ಎಂಬ ಪದವು ಎಲ್ಲ ಕಡೆ ಅನ್ವಯವನ್ನು ಹೊಂದುತ್ತದೆ. 'ಯಸ್ಯ' ಅಂದರೆ ಯಾವ ಆನಂದತೀರ್ಥರ 'ನಿಜೇನ ಮಹಸಾ' ಸ್ವರೂಪಸಾಮರ್ಥ್ಯದಿಂದ ನಿಜೇ ಪಕ್ಷೇ - ತಮ್ಮ ಪಕ್ಷವಾದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ, ವ್ಯಾಪ್ತಿಃ - ವ್ಯಾಪಿಸಿರುವಿಕೆಯು ಅಂದರೆ ಬ್ರಹ್ಮಮೀಮಾಂಸಾಶಾಸ್ತ್ರದ ಅರ್ಥವನ್ನು ತಿಳಿಸಿಕೊಡುವ ಅನೇಕ ಗ್ರಂಥಗಳನ್ನು ನಿರ್ಮಾಣಮಾಡುವ ಮುಖಾಂತರ ಸಕಲ ಸೂತ್ರಗಳ ಅರ್ಥವನ್ನು ವರ್ಣನೆ ಮಾಡುವುದು ಎಂದು.

ಸಪಕ್ಷೇ — ಸಮಾನವಾದ ಅರ್ಥ ಇರುವುದರಿಂದ ಸಪಕ್ಷ ಎಂದು ಕರೆಯಿಸಿಕೊಳ್ಳಲ್ಪಡುವ ಪಕ್ಷಕ್ಕೆ ಸಮಾನವಾದ ಭಾರತ ಮೊದಲಾದ ಎಲ್ಲ ನಿರ್ಣೇಯವಾದ ಶಾಸ್ತ್ರಗಳಲ್ಲಿ, ಸ್ಥಿತಿಃ - ಇರುವಿಕೆಯು ಅಂದರೆ ಅಲ್ಲಲ್ಲಿ ವಿವಾದ ಇರುವ ವಾಕ್ಯಗಳಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರದಿಂದ ನಿಶ್ಚಿತವಾದ ಅರ್ಥವನ್ನು ಸ್ಥಾಪನೆ ಮಾಡುವುದು ಎಂದು. ವಿಪಕ್ಷತಃ - ನಿರ್ಣೇಯವಾದ ಹಾಗೂ ನಿರ್ಣಾಯಕವಾದ ಶಾಸ್ತ್ರಗಳಿಗೆ ವಿರೋಧಿಯಾದ ಬೇರೆ ಶಾಸ್ತ್ರಗಳಲ್ಲಿ, ವ್ಯಾವೃತ್ತಿಃ - ಅದರ ಅಭ್ಯಾಸಾದಿಗಳಲ್ಲಿ ಪ್ರವೃತ್ತಿ ಇಲ್ಲದಿರುವುದು. "ಸಚ್ಛಾಸ್ತ್ರಮಭ್ಯಸೇನ್ನಿತ್ಯಂ ದುಃಶಾಸ್ತ್ರಂ ತು ಪರಿತ್ಯಜೇತ್" (ಅನುವ್ಯಾಖ್ಯಾನ 3-3-ಶ್ಲೋ 90) ಎಂಬ ಮಾತಿರುವುದರಿಂದ. ಅನಂತರ ಬಾಧಿತವಾದ ವಿಷಯದಲ್ಲಿ ಸ್ನೇಹವು ಇಲ್ಲವೇ ಇಲ್ಲ ಎಂದರೆ ಅಸತ್ಯವಾದ ಅರ್ಥವನ್ನು

ತಿಳಿಸುವುದರಲ್ಲಿ ಎಂದಿಗೂ ಪ್ರವೃತ್ತಿ ಇಲ್ಲದಿರುವುದು. 'ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ' ಇತ್ಯಾದಿ ಮಾತಿರುವುದರಿಂದ. ಪ್ರತಿಪಕ್ಷಯುಕ್ತಿಃ ಅಂದರೆ ವಿರೋಧಿಯಾದ ಪ್ರಮಾಣದ ಸಂಬಂಧ. ಇದು ತಾವು ಹೇಳಿದ ಅರ್ಥದಲ್ಲಿ ಎಂದಿಗೂ ಇರುವುದಿಲ್ಲ ಎಂದು ತಿಳಿಯಬೇಕು.

ಈ ಎಲ್ಲ ಕಾರಣದಿಂದಲೇ ಆನಂದತೀರ್ಥರು ಅತುಲರಾಗಿದ್ದಾರೆ. ಅಂದರೆ ಅಸದೃಶರಾಗಿದ್ದಾರೆ. ಹಾಗೆ ಶುದ್ಧವಾದ ಪ್ರಮಾಣವಾಗಿದ್ದಾರೆ. ಪ್ರಮಾಣ ಎಂದರೆ ವಿಶಿಷ್ಟವಾದ ಅರ್ಥದ ಯಥಾರ್ಥ-ಜ್ಞಾನವನ್ನು ತಂದುಕೊಡುವುದು.

ಹೀಗೆ ವಿಶಿಷ್ಟವಾದ ನಿರ್ಣಯವನ್ನು (ನಿಶ್ಚಯವನ್ನು) ತಂದು ಕೊಡುವುದರಿಂದ ಆನಂದಪ್ರದವಾದ ಶಾಸ್ತ್ರವನ್ನು ರಚನೆ ಮಾಡಿರುವುದರಿಂದ ಆನಂದತೀರ್ಥರೆನಿಸಿದ ಮುನಿಗಳು ತತ್ತ್ವನಿರ್ಣಯಾಯ – ಅಂದರೆ ಭಗವಂತನೇ ಮೊದಲಾದವರ ಸ್ವರೂಪದ ವಿಶಿಷ್ಟವಾದ ನಿರ್ಣಯಕ್ಕೋಸ್ಕರ ಕಾರಣರಾಗಲಿ ಎಂದು ಯೋಜನೆ.

ಈ ಎಲ್ಲ ಅರ್ಥದ ಸಂಭಾವನೆಗೋಸ್ಕರ (ಲಾಭಕ್ಕಾಗಿ) 'ಭಗವಾನ್' ಎಂದು ಹೇಳಿದ್ದಾರೆ.

## ದುಃಶಾಸ್ತ್ರಂ ತು ಪರಿತ್ಯಜೇತ್

** एतदेव च सच्छास्त्रं दुःशास्त्रं तु ततः परम् ।
सच्छास्त्रमभ्यसेन्नित्यं दुःशास्त्रं तु परित्यजेत् । ॥ ।८८ ॥

(सुधा) एतद् वेदादिकम् । ततः परं तद्विरुद्धं तदुदासीनं च । "ऋगाद्या भारतं चैव" इत्याद्यागमोऽत्र स्फुट एव । दुःशास्त्रं नाभ्यसेदिति वक्तव्ये परित्यजेदिति वचनं न केवलं तत्रोदासीनत्वम्. किन्तु हेयतया ज्ञानमपि भाव्यमिति ज्ञापयितुम् । अत्र च "असच्छास्त्राधिगमनम्" इति पातकेषु परिगणनं प्रमाणम् । स्फुटानि चाऽचार्येणान्यत्रात्रार्थे वाक्यान्युदाहृतानि ।

ವೇದಾದಿಗಳೇ ಸಚ್ಛಾಸ್ತ್ರ. ವೇದವಿರುದ್ಧವಾದದ್ದು, ವೇದಹೇಳಿದ ವಿಷಯಗಳಲ್ಲಿ ಉದಾಸೀನವಾದದ್ದು ದುಃಶಾಸ್ತ್ರ ಎಂದು ಪರಿಗಣಿಸಬೇಕು. ಸಚ್ಛಾಸ್ತ್ರಗಳು ಯಾವುವು ಎಂಬುದು 'ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್ । ಮೂಲರಾಮಾಯಣಂ ..' ಮುಂತಾದ ಆಗಮಗಳಿಂದ ಪ್ರಸಿದ್ಧ. ಇಲ್ಲಿ ದುಃಶಾಸ್ತ್ರವನ್ನು ಅಭ್ಯಾಸಮಾಡಬಾರದು ಎಂದು ಹೇಳಬೇಕಾದಲ್ಲಿ 'ಪರಿತ್ಯಾಗ ಮಾಡಬೇಕು' ಎಂಬ ಮಾತು ಕೇವಲ ಅಲ್ಲಿ ಉದಾಸೀನವಲ್ಲ, ಅದು ಹೇಯ ಎಂಬ ಜ್ಞಾನವೂ ಬರಬೇಕು ಎಂದು ತಿಳಿಸಲು ಎಂದು ತಿಳಿಯಬೇಕು. ಇಲ್ಲಿ ಪಾತಕಗಳಲ್ಲಿ ಅಸಚ್ಛಾಸ್ತ್ರವನ್ನು ಓದುವುದು ಎನ್ನುವುದನ್ನೂ ಪರಿಗಣಿಸಿದ್ದಾರೆ.

## ಭಗವಂತನೇ ಬೇರೆ ಬೇರೆ ರೂಪದಿಂದ ಬೇರೆ ಬೇರೆ ಕಾರ್ಯಗಳನ್ನು ಮಾಡುವನು

(ಲಘುರಸರಂಜನೀ) –

"ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತಿಪ್ರಬೋಧಕಃ ।
ದೂರತೋಽಪ್ಯತಿಶಕ್ತಃ ಸ ಲೀಲಯಾ ಕೇವಲಂ ಪ್ರಭುಃ ॥"

"ತತ್ರ ತತ್ರ ಸ್ಥಿತೋ ವಿಷ್ಣುಃ ತತಚ್ಛಕ್ತೀಃ ಪ್ರಬೋಧಯನ್ ।
ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ" (ಅನುವ್ಯಾ.2-3-11)

ಇತ್ಯಾದ್ಯುಕ್ತೇಃ । ಶ್ರೀಹರಿರೇತೇನೈವ ತತ್ರಾಪಿ ವೈಕುಂಠಾದಿದೂರಸ್ಥಾನಸ್ಥಿತೇನೈವ ರೂಪೇಣ ಸರ್ವತ್ರ ಸರ್ವಕಾರ್ಯಕರಣಸಮರ್ಥೋಽಪಿ ಕೇವಲಂ ಲೀಲಯೈವ ಏಕೇನ ಜೀವಸ್ಥಿತೇನ ಹರಿನಾಮಕೇನ ರೂಪೇಣ ಮೋಕ್ಷಸಾಧನಾಪರೋಕ್ಷಜ್ಞಾನವಿಷಯೋ ಭವತಿ । ಅಪರೇಣ ಬಹಿಃಸ್ಥಿತೇನ ವ್ಯಾಸಾದಿನಾಮ್ನಾ ರೂಪೇಣ ಜ್ಞಾನಸಾಧನಸಚ್ಛಾಸ್ತ್ರಾಣಿ ಕರೋತಿ । ಅನ್ಯೇನ ತು ತತ್ತಚ್ಚಿತ್ತಗತೇನ ಚಿತ್ತಗತವಾಸುದೇವಾಖ್ಯರೂಪೇಣ ಶ್ರವಣಾದಿಸಾಧನಾನ್ಯನುಷ್ಠಾಪಯಿತ್ವಾ ಪರಾಪರತತ್ತ್ವವಿಷ-ಯಕಪರೋಕ್ಷಾಪರೋಕ್ಷಜ್ಞಾನೇ ಜನಯತಿ ।

ತತ್ರಾಪಿ ಶ್ರೀಹರಿರ್ನ ವಿರಿಂಚಪ್ರಾಣೇತರೇಷಾಂ ಸಾಕ್ಷಾದುಪದಿಶತಿ । ಸರ್ವೇಷಾಂ ತದ-ಯೋಗ್ಯತ್ವಾದ್ವಾ –

'ಶಕ್ತೋಽಪಿ ಹ್ಯನ್ಯಥಾಕರ್ತುಂ ಸ್ವೇಚ್ಛಾನಿಯಮತೋ ಹರಿಃ ।
ಕಾರಣೈರ್ನಿಯತೈರೇವ ಕರೋತೀದಂ ಜಗತ್ಸದಾ'

ಇತ್ಯಾದ್ಯುಕ್ತಸ್ವನಿಯಮಸಂರಕ್ಷಣಾರ್ಥತ್ವಾದ್ವಾ ದೇವೇಷು ಪರಮಾನುಗ್ರಹಾದ್ವಾ ।

"ತತ್ರ ತತ್ರ ಸ್ಥಿತೋ ವಿಷ್ಣುಃ ..." "ತತ್ರ ತತ್ರ ಸ್ಥಿತೋ ವಿಷ್ಣುಃ ತತಚ್ಛಕ್ತೀಃ ಪ್ರಬೋಧಯನ್ । ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ" ಮುಂತಾದ ಮಾತುಗಳಿವೆ. ಇದರಿಂದ ಶ್ರೀಹರಿಯು ದೂರವಿರುವ ವೈಕುಂಠಾದಿಸ್ಥಾನಗಳಲ್ಲಿ ಇದ್ದೇ ಎಲ್ಲ ಕಡೆ ಕಾರ್ಯಗಳನ್ನು ಮಾಡಲು ಸಮರ್ಥ-ನಾಗಿದ್ದರೂ ಕೇವಲ ಲೀಲೆಯಿಂದಾಗಿ ಒಬ್ಬ ಜೀವನಲ್ಲಿ ಹರಿ ಎಂಬ ಹೆಸರಿನಿಂದಿದ್ದು, ಅದೇ ರೂಪದಿಂದ ಅವನಿಗೆ ಮೋಕ್ಷಕ್ಕೆ ಸಾಧನವಾದ ಅಪರೋಕ್ಷಜ್ಞಾನಕ್ಕೆ ವಿಷಯನಾಗುತ್ತಾನೆ. ಇನ್ನೊಂದು ರೂಪದಿಂದ ಹೊರಗಡೆ ಇದ್ದು ವೇದವ್ಯಾಸ ಎಂಬ ಹೆಸರಿನಿಂದ ಪರೋಕ್ಷ-ಜ್ಞಾನಸಾಧನವಾದ ಒಳ್ಳೆಯ ಶಾಸ್ತ್ರಗಳನ್ನು ರಚನೆ ಮಾಡಿದ್ದಾನೆ. ಇನ್ನೊಂದು ರೂಪದಿಂದಲಾದರೋ ಆಯಾಯಾ ಜೀವರ ಚಿತ್ತದಲ್ಲಿದ್ದು ಚಿತ್ತದಲ್ಲಿರುವ ವಾಸುದೇವ ಎಂಬ ರೂಪದಿಂದ ಆ ಜೀವನಿಗೆ

ಶ್ರವಣ ಮೊದಲಾದ ಸಾಧನಗಳನ್ನು ಅನುಷ್ಠಾನ ಮಾಡುವಂತೆ ಮಾಡಿ ಪರತತ್ವ ಹಾಗೂ ಅಪರತತ್ವಗಳ ಪರೋಕ್ಷ ಅಪರೋಕ್ಷಜ್ಞಾನಗಳನ್ನು ಉಂಟುಮಾಡುತ್ತಾನೆ. ಅಲ್ಲಿಯೂ ಶ್ರೀಹರಿಯು ಬ್ರಹ್ಮಪ್ರಾಣರನ್ನು ಬಿಟ್ಟು ಬೇರೆಯವರಿಗೆ ಸಾಕ್ಷಾತ್ತಾಗಿ ಉಪದೇಶ ಕೊಡುವುದಿಲ್ಲ. ಎಲ್ಲರೂ ಅದಕ್ಕೆ ಅಯೋಗ್ಯರಾದ್ದರಿಂದ ಅಥವಾ "ಶಕ್ತೋಽಪಿ ಹ್ಯನ್ಯಥಾಕರ್ತುಂ ಸ್ವೇಚ್ಛಾನಿಯಮತೋ ಹರಿಃ । ಕಾರಣೈಃ ನಿಯತೈರೇವ ಕರೋತೀದಂ ಜಗತ್ಸದಾ ॥" ಮುಂತಾದ ರೀತಿಯಾಗಿ ತನ್ನಿಂದಲೇ ಹೇಳಲ್ಪಟ್ಟ ನಿಯಮವನ್ನು ರಕ್ಷಣೆ ಮಾಡುವುದಕ್ಕೋಸ್ಕರ ಅಥವಾ ದೇವತೆಗಳ ಮೇಲೆ ಪರಮಾನುಗ್ರಹವಿರುವುದರಿಂದ ಎಂದು ತಿಳಿಯಬೇಕು.

## ತತ್ತಚ್ಛಕ್ತಿಪ್ರಬೋಧಕಃ

(सुधा) यद्यपि स प्रभुर्विष्णुर्दूरतोऽपि तत्तच्छक्तिप्रबोधनेऽतिशक्तस्तथापि केवलं लीलया तत्रतत्र स्थितस्तत्तत्तच्छक्तीनां प्रबोधको भवतीति ज्ञापयितुं सर्वगतत्वमिह प्रविचार्यत इति सम्बन्धः ।

ಯದ್ಯಪಿ ವಿಷ್ಣುಃ 'ಏಕಃ' ಅನ್ಯಾನಪೇಕ್ಷ ಏವಾಬಾದಿಜನನೇ 'ಮಹಾಶಕ್ತಿಃ' ಪೂರ್ಣ-ಸಾಮರ್ಥ್ಯೋಪೇತಃ । ತಥಾಪಿ ಲೀಲಯೈವ 'ತತ್ರ- ತತ್ರ' ಅಗ್ನ್ಯಾದಿಷು 'ಸ್ಥಿತಃ ಸನ್' ಸ್ಥಿತ್ವಾ 'ತತ್ತಚ್ಛಕ್ತೀಃ' ಅಗ್ನ್ಯಾದಿಸಾಮರ್ಥ್ಯಾನಿ ಪ್ರಬೋಧಯನ್ ತದ್-ದ್ವಾರಾ 'ಸರ್ವಮ್' ಅಬಾದಿಕಂ 'ಅಂಜಸಾ' ಸಮ್ಯಕ್ 'ಕುರುತೇ' ಜನಯತೀತ್ಯರ್ಥಃ । 'ಅಂಜಸಾ' ಇತ್ಯನೇನ ಉತ್ಪಾದನ-ಪ್ರಕಾರಾಭಿಜ್ಞತ್ವಂ ಸೂಚಿತಮ್ । ತಥಾಚಾಗ್ನ್ಯಾದಿಗತೇಶ್ವರವಿಷಯಂ ಶ್ರುತ್ಯಾದಿಕಮಿತಿ ನ ತದನುಪಪತ್ತಿರಿತಿ ಭಾವಃ। 'ಇತಿ ಚ ವಾಮನೇ' ಇತ್ಯನ್ವಯಃ। 'ಅಗ್ನೇರಾಪಃ' 'ಇತ್ಯಾದಿಶ್ರುತಿಗತಿರುಕ್ತಾ' ಇತಿ ಶೇಷಃ। (ಬ್ರ.ಸೂ.2-3-11) (ಭಾಷ್ಯದೀಪಿಕಾ.)

ಯದ್ಯಪಿ ವಿಷ್ಣುವು ಬೇರೆ ಯಾವುದೇ ವಸ್ತುವನ್ನು ಅಪೇಕ್ಷಿಸದೇ ನೀರು ಮೊದಲಾದುದನ್ನು ಸೃಷ್ಟಿಸಲು ಪರಿಪೂರ್ಣವಾದ ಸಾಮರ್ಥ್ಯವನ್ನು ಹೊಂದಿದ್ದಾನೆ. ಆದರೂ ಲೀಲೆಯಿಂದಲೇ ಅಗ್ನಿ ಮೊದಲಾದ ಪದಾರ್ಥಗಳಲ್ಲಿದ್ದು ಅಗ್ನಿ ಮೊದಲಾದವುಗಳ ಸಾಮರ್ಥ್ಯವನ್ನು ಉದ್ಬೋಧನೆ ಮಾಡುತ್ತ ಅದರ ಮುಖಾಂತರ ಚೆನ್ನಾಗಿ ನೀರು ಮೊದಲಾದ ಪದಾರ್ಥಗಳ ಸೃಷ್ಟಿಯನ್ನು ಮಾಡುವನು.

ಅಂಜಸಾ ಎಂದಿದ್ದರಿಂದ ನೀರು ಮುಂತಾದ ಪದಾರ್ಥಗಳ ಉತ್ಪತ್ತಿಗೆ ಬೇಕಾದ ಕ್ರಮವನ್ನು ತಿಳಿದಿದ್ದಾನೆ ಎಂದು ಸೂಚನೆಮಾಡಿದಂತಾಯಿತು. ಈ ರೀತಿ ವ್ಯಾಖ್ಯಾನ ಮಾಡಿದ್ದರಿಂದ ಅಗ್ನೇರಾಪಃ ಎಂಬ ಶ್ರುತಿಯಲ್ಲಿ ಅಗ್ನಿಪದವು ಅಗ್ನಿಯಲ್ಲಿರುವ ಈಶ್ವರನನ್ನು ಹೇಳುತ್ತಿದೆ ಎಂದು ತಿಳಿಸಿದಂತಾಯಿತು.

## ಸ್ವತಂತ್ರನಾಗಿದ್ದರೂ ಸ್ವನಿಯಮಾನುಗುಣವಾಗಿಯೇ ಕಾರ್ಯಮಾಡುವನು

* अन्यथा, कारणैर्विना कर्तुं शक्तोऽपि हरिः कारणान्तराण्युपादायैव करिष्यामीति स्वेच्छानियमतः कारणैरेवेदं जगत् सदा सृजति। एवमन्यथा, प्रकृत्याऽहङ्कारम्, अहङ्कारेण महान्तमित्येवम्, तथा प्रकृतिं निमित्तीकृत्य, कालादिकं चोपादानीकृत्य कर्तुम्, तथा नियतैः स्वनियतसत्ताशक्त्यादिमद्भिरेव कारणैरिदं जगत् सदा करोतीति योजना।

(2-1-ಶ್ಲೋ 92) इदमुक्तं भवति यदुक्तमीश्वरस्य कारणोपादानादिनियमोऽस्ति, नवेति। तत्रास्तीति ब्रूमः। तथाच प्रकृत्यादीनां कारणत्वं युक्तम्। स च नियमो न कुलालादेरिव तान्यपहाय व्यत्यस्य वाऽकरणे शक्त्यभावनिबन्धनः। येन तस्य स्वातन्त्र्यम्, तेषां च पारतन्त्र्यं न स्यात्। किन्नाम। स्वेच्छायत्त एव। ततः स्वातन्त्र्यादिकमपि युक्तम्। नच तानि स्वाधीनसत्ताशक्त्यादिमन्ति, येनैश्वर्यं निरर्गलं न स्यात्। किन्तु भगवत्येव तदीयं सत्तादिकमायतते। ततस्तत्साचिव्यमतिशयेनैश्वर्यस्य द्योतकमेव। यथोक्तम् –

"साधनानां साधनत्वं यदाऽऽत्माधीनमिष्यते।
तदा साधनसम्पत्तिरैश्वर्यद्योतिका भवेत्" इति।

ननु शक्तस्यापीश्वरस्य तन्नियमानुसारेणेच्छा कुत इति चेत्। किं कारणं पृच्छसि, उत ज्ञापकम्? आद्ये स्वभावोऽयमिति वदामः। द्वितीये तु श्रुतिप्रसिद्धेरिति। तदिदमुक्तं हिशब्देन। श्रुतिं चोदाहरिष्यति।

– ಭಗವಂತನು ಪ್ರಕೃತಿ ಮೊದಲಾದ ಕಾರಣಗಳಿಲ್ಲದಿದ್ದರೂ ಸೃಷ್ಟಿಯನ್ನು ಮಾಡಲು ಶಕ್ತ ಆದರೂ ಅವುಗಳಲ್ಲಿ ಕೆಲವನ್ನು ಉಪಾದಾನವನ್ನಾಗಿ ಕೆಲವನ್ನು ನಿಮಿತ್ತವನ್ನಾಗಿ ಮಾಡಿಕೊಂಡು ಒಂದೇ ರೀತಿಯ ತಾನು ಸಂಕಲ್ಪಿಸಿದ ಕ್ರಮದಿಂದಲೇ ಈ ಜಗತ್ತನ್ನು ಸೃಷ್ಟಿಮಾಡುವನು. ಆ ಕಾರಣಗಳೆಲ್ಲವೂ ಸ್ವಸತ್ತಾ-ಪ್ರವೃತ್ತ್ಯಾದಿ ವಿಷಯಗಳಲ್ಲಿ ಇವನ ಅಧೀನವೇ ಆಗಿವೆ. ಅಲ್ಲ ಈಶ್ವರನು ಶಕ್ತನಾದರೂ ಈ ರೀತಿ ಕಾರಣಗಳನ್ನು ಅಪೇಕ್ಷಿಸಿಯೇ ಅದೇ ಕ್ರಮದಲ್ಲಿ ಸೃಷ್ಟಿಮಾಡುತ್ತೇನೆ ಎಂಬ ನಿಯಮವನ್ನು ಅನುಸರಿಸುವ ಇಚ್ಛೆಯು ಏಕೆ ಎಂದರೆ ಕಾರಣವನ್ನು ಕೇಳುವುದಾದರೆ ಇದು ಅವನ ಸ್ವಭಾವ ಎಂದುತ್ತರ. ಇದಕ್ಕೆ ಜ್ಞಾಪಕ ಏನು ಎಂದು ಕೇಳಿದರೆ ಶ್ರುತಿಯಲ್ಲಿ ಪ್ರಸಿದ್ಧ ಎಂದುತ್ತರ.

## ಬ್ರಹ್ಮ ಹಾಗೂ ವಾಯುಗಳ ಉಪದೇಶ

(ಲಘುರಸರಂಜನೀ) – ಕಿಂತು ವಿರಿಂಚಾದಿದ್ವಾರೈವ ಇತ್ಯುಕ್ತಮ್ । ತತ್ರ ವಿರಿಂಚಪ್ರಾಣಯೋ-ರ್ಮಧ್ಯೇ ವಿರಿಂಚಸ್ಯ ಮಹತ್ತತ್ತ್ವಾತ್ಮಕತ್ವಚತ್ತಾಭಿಮಾನಿತಯಾ ಸರ್ವಪ್ರಾಣಿಹೃದಿಸ್ಥಿತಸ್ಯ ಸ್ವಾಂತ-

ರ್ಯಾಮಿಣಾ ವಾಸುದೇವೇನ ಪ್ರೇರಿತಸ್ಯ ಮೋಕ್ಷಸಾಧನಾಪರೋಕ್ಷಜ್ಞಾನವಿಷಯಬಿಂಬ-ರೂಪೋಪದೇಶಕತ್ವಮಾತ್ರಮ್ । ಪ್ರಾಣಸ್ತು –

'ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾನಿ ಜನಯತ್ಯಸೌ ।
ಮನಃಸ್ಥೇನ ವಿಶೇಷೇಣ ಕಾರ್ಯೈಃ ಕರ್ಮಕೃದೇವ ಚ ।
ಪೃಥಕ್ ಸ್ಥಿತೇನ ರೂಪೇಣ ಜೀವಂ ಧಾರಯತಿ ಪ್ರಭುಃ ॥
ಜೀವಸ್ಥಿತೇನ ರೂಪೇಣ ವೇದಯತ್ಯಹಮಿತ್ಯಪಿ ।
ಪ್ರಾಣ ಏಕೋ ವಶೇ ನಿತ್ಯಂ ಬಾಹ್ಯಾಂತಃಕರಣೇಶ್ವರಃ ।
ತಾನ್ಯೇತಾನ್ಯವಶಾನ್ಯೇವ ತಥಾಪಿ ಕೃಪಯೈವ ಸಃ ।
ಪೃಥಕ್ ಶಬ್ದೋಽಪಿ ತದ್ಗೈಸ್ತು ಸ್ವರೂಪೈಃ ತದ್ಗಕಾರ್ಯಕೃತ್ ।
ತಸ್ಯೇತೋ ಭಗವಾನ್ವಿಷ್ಣುಃ ಏವಮೇಷ ಯಥಾನ್ಯಗಃ ।' (ನ್ಯಾಯ.ವಿ.4-2-2)

ಇತ್ಯಾದಿಶ್ರುತೇಃ ಕೃಪಯೈವ ಸರ್ವಜೀವತದುಪಕಾರಿದೇಹೇಂದ್ರಿಯೇಷು ಬಹುರೂಪೈಃ ಸ್ಥಿತ್ವಾ ಆದೌ ನಿಷ್ಕಾಮಭಗವದರ್ಥಕರ್ಮಾಣಿ ಕಾರಯಿತ್ವಾ ಶುದ್ಧಾಂತಃಕರಣಾನಾಂ ಶ್ರವಣಾದ್ಯನು-ಕೂಲತಯಾ ತದಿಂದ್ರಿಯಾಣಿ ನಿಯಮ್ಯ ಸರ್ವಸ್ಯಾಪಿ ಮೋಕ್ಷಸಾಧನಸ್ಯ ಪ್ರಾಯೇಣ ಮಾನಸತ್ವಾತ್ ತದಪಿ ತದಾನುಕೂಲ್ಯೇನ ವಿಶೇಷೇಣ ನಿಯಮ್ಯ ತತ್ಪ್ರತಿಬಂಧಕಾನಿ ದುರಿತಾನಿ ದೂರೀಕೃತ್ಯ ಮೋಕ್ಷಸಾಧನಬಿಂಬಾಪರೋಕ್ಷಾಯ ಕದಾಸ್ಮಾಭಿಃ ಶ್ರವಣಾದೀನಿ ಸಾಧನಜಾತಾನಿ ಸಂಪಾದಿತಾನಿ ಭವಂತೀತಿ ಜೀವಾನಾಮುತ್ಸುಕತಾಂ ಜಿಜ್ಞಾಸಾಂ ಜನಯತಿ ।

ಆದರೆ ಶ್ರೀಹರಿಯು ಬ್ರಹ್ಮಾದಿಗಳ ಮುಖಾಂತರ ಜೀವರಿಗೆ ಉಪದೇಶ ನೀಡುತ್ತಾನೆ. ಅಲ್ಲಿ ಬ್ರಹ್ಮ ಹಾಗೂ ಪ್ರಾಣದೇವರ ಮಧ್ಯೆ ಬ್ರಹ್ಮನು ಮಹತ್ತತ್ವಾತ್ಮಕವಾದ ಚಿತ್ತಕ್ಕೆ ಅಭಿಮಾನಿಯಾದ್ದರಿಂದ ಎಲ್ಲ ಜೀವರ ಹೃದಯದಲ್ಲಿ ಇದ್ದಾನೆ. ಈ ಬ್ರಹ್ಮನು ತನ್ನ ಅಂತರ್ಯಾಮಿಯಾದ ವಾಸುದೇವರೂಪಿ ಪರಮಾತ್ಮನಿಂದ ಪ್ರೇರಿತನಾಗಿ ಮೋಕ್ಷಕ್ಕೆ ಸಾಧನವಾದ ಅಪರೋಕ್ಷಜ್ಞಾನಕ್ಕೆ ವಿಷಯವಾದ ಬಿಂಬರೂಪದ ಉಪದೇಶವನ್ನು ಮಾತ್ರ ಮಾಡುವನು. ಪ್ರಾಣನಾದರೋ "ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾನಿ ಜನಯತ್ಯಸೌ" ಮುಂತಾದ ಶ್ರುತಿಗಳಿಂದ ತಿಳಿಯುವ ಹಾಗೆ ಎಲ್ಲ ಜೀವರಿಗೆ ಉಪಕಾರಿಯಾದ ದೇಹ ಇಂದ್ರಿಯಗಳಲ್ಲಿ ಅನೇಕರೂಪದಿಂದ ಇರುತ್ತಾನೆ. ಇದ್ದು ಮೊದಲಿಗೆ ನಿಷ್ಕಾಮ ಕರ್ಮಗಳನ್ನು ಭಗವಂತನಿಗೋಸ್ಕರ ಮಾಡಿಸಿ ಅಂತಃಕರಣವನ್ನು ಶುದ್ಧಮಾಡುತ್ತಾನೆ. ಅನಂತರ ಶ್ರವಣ ಮನನಾದಿಗಳಿಗೆ ಅನುಕೂಲವಾಗುವಂತೆ ಆ ಜೀವನ ಇಂದ್ರಿಯಗಳನ್ನು ನಿಯಮನ ಮಾಡಿ ಎಲ್ಲರಿಗೂ ಮೋಕ್ಷಸಾಧನವಾದದ್ದು ಪ್ರಾಯೇಣ ಮನಸ್ಸೇ ಆದ್ದರಿಂದ ಅದನ್ನೂ

ಕೂಡ ಶ್ರವಣಾದಿಗಳಿಗೆ ಅನುಕೂಲವಾಗುವಂತೆ ವಿಶೇಷವಾಗಿ ನಿಯಮನ ಮಾಡುತ್ತಾನೆ. ಅಲ್ಲದೆ ಶ್ರವಣಾದಿಗಳಿಗೆ ಪ್ರತಿಬಂಧಕವಾದ ದುರಿತಗಳನ್ನು ಪಾಪಗಳನ್ನು ದೂರ ಮಾಡುತ್ತಾನೆ. ಆಮೇಲೆ ಮೋಕ್ಷಕ್ಕೆ ಸಾಧನವಾದ ಬಿಂಬಾಪರೋಕ್ಷಜ್ಞಾನಕ್ಕೆ ಸಾಧನವಾದ ಶ್ರವಣಾದಿಗಳನ್ನು ಯಾವಾಗ ಸಂಪಾದನೆ ಮಾಡಬೇಕು ಎಂದು ಜೀವರಿಗೆ ಅತ್ಯುತ್ಕಟವಾದ ಜಿಜ್ಞಾಸೆಯನ್ನು ಉಂಟುಮಾಡುತ್ತಾನೆ.

## ಮನೋಧಿಕರಣದ ನ್ಯಾಯವಿವರಣೆ

** ಮನಸ್ಸು (ಮನೋನಿಯಾಮಕರಾದ ರುದ್ರದೇವರು) ಪ್ರಾಣನಂತೆ ಸರ್ವಪ್ರವೃತ್ತಿಗಳಿಗೂ ಕಾರಣವಾಗಿದೆ. ಮನಸ್ಸಿದ್ದರೆ ಪ್ರವೃತ್ತಿ, ಮನಸ್ಸಿಲ್ಲವಾದರೆ ಪ್ರವೃತ್ತಿ ಇಲ್ಲ ಎಂದು ಅನ್ವಯ-ವ್ಯತಿರೇಕಗಳಿಂದ ಸಿದ್ಧವಾಗಿದೆ. ಆದ್ದರಿಂದ ಮನಸ್ಸಿಗೆ ಪ್ರಾಣನಲ್ಲಿ ಲಯವಿಲ್ಲ ಎಂದು ಮನೋಧಿಕರಣದ ಪೂರ್ವಪಕ್ಷ. ಪೂರ್ವಪಕ್ಷದ ಯುಕ್ತಿ "ಕಾರ್ಯಕರತ್ವ" ಸಿದ್ಧಾಂತದ ಯುಕ್ತಿ 'ಆಧ್ಯತಾ'.

ಪೂರ್ವಪಕ್ಷಕ್ಕುತ್ತರವಾಗಿ ಹಾಗೂ ಸಿದ್ಧಾಂತನ್ಯಾಯವನ್ನು ಪುಷ್ಟೀಕರಿಸಲು ಈ ನ್ಯಾಯವಿವರಣದ ಶ್ಲೋಕಗಳು ಹೊರಟಿವೆ. ಶ್ಲೋಕಗಳ ಭಾವಾರ್ಥ ಹೀಗಿದೆ –

ಈ ಪ್ರಾಣನು ಎಲ್ಲ ಇಂದ್ರಿಯಗಳಲ್ಲಿರುವ ತನ್ನ ಸ್ವರೂಪಗಳಿಂದ ಜ್ಞಾನಗಳನ್ನು ಹುಟ್ಟಿಸುತ್ತಾನೆ. ಮನಸ್ಸಿನಲ್ಲಿರುವ ವಿಶೇಷರೂಪದಿಂದ ಕಾಮನೆಗಳನ್ನು ಹುಟ್ಟಿಸಿ ಕಾರ್ಯಗಳನ್ನು ಮಾಡಿಸುತ್ತಾನೆ. ಪ್ರತ್ಯೇಕವಾದ ಮತ್ತೊಂದು ರೂಪದಿಂದ ವಾಯುವು ಜೀವನನ್ನು ಧರಿಸಿದ್ದಾನೆ. ಜೀವನಲ್ಲಿರುವ ರೂಪದಿಂದ 'ಅಹಂ' ಎಂಬ ಜ್ಞಾನವನ್ನು ಹುಟ್ಟಿಸುತ್ತಾನೆ. ಪ್ರಾಣನೊಬ್ಬನೇ ಹೊರಗಿನ ಮತ್ತು ಒಳಗಿನ ಇಂದ್ರಿಯಗಳಿಗೂ ಸ್ವಾಮಿಯಾಗಿದ್ದಾನೆ. ಈ ಇಂದ್ರಿಯಗಳು ದ್ವಾರವಲ್ಲದಿದ್ದರೂ ಅವನು ಜ್ಞಾನವನ್ನು ಹುಟ್ಟಿಸಲು ಸಮರ್ಥನು. ಹಾಗಿದ್ದರೂ ಪರತಂತ್ರಗಳಾದ ಇಂದ್ರಿಯಗಳಲ್ಲಿದ್ದು ಕಾರ್ಯವನ್ನು ಮಾಡಿಸುವುದರಿಂದ ಇಂದ್ರಿಯಾಭಿಮಾನಿದೇವತೆಗಳಿಗೆ ಮೋಕ್ಷದಲ್ಲಿ ಆನಂದಾತಿ-ಶಯವುಂಟುಮಾಡುವುದಕ್ಕೆ ಅವನು ಕೃಪೆಯಿಂದ ಕೆಲಸ ಮಾಡುತ್ತಾನೆ. ಈ ಪ್ರಾಣನಿಗೆ ವಿಷ್ಣುವು ಒಡೆಯನಾಗಿದ್ದಾನೆ. ಪ್ರಾಣನು ಹೇಗೆ ಎಲ್ಲ ಇಂದ್ರಿಯಗಳಲ್ಲಿದ್ದು ಕಾರ್ಯವನ್ನು ಮಾಡಿಸುವನೋ ಅದರಂತೆ ವಿಷ್ಣುವೂ ಪ್ರಾಣನಲ್ಲಿದ್ದು ಸಕಲಕಾರ್ಯಗಳನ್ನು ಮಾಡಿಸುತ್ತಾನೆ.

ಈ ಶ್ರುತಿಗಳಿಂದ ಪ್ರಾಣನಿಗೇ ಸ್ವಾಮಿತ್ವವು ಶ್ರುತವಾಗಿದೆ. (ಎಲ್ಲ ಇಂದ್ರಿಯಗಳಿಗೂ ಪ್ರಾಣನೇ ಸ್ವಾಮಿಯಾದ್ದರಿಂದ ಮನೋಭಿಮಾನಿಯಾದ ರುದ್ರನಿಗೆ ಪ್ರಾಣನಲ್ಲಿ ಲಯ ಎಂಬುದು ಸಿದ್ಧಾಂತ).

** ಇಂದ್ರಿಯಸ್ಥೈರಿತಿ ॥ ಇಂದ್ರಿಯಸ್ಥೈಃ ಚಕ್ಷುರಾದಿನಿಯಾಮಕಸೂರ್ಯಾದಿಪುಂಸ್ಥಿತೈಃ । ಮನಃಸ್ಥೇನ ಮನೋನಿಯಾಮಕರುದ್ರಸ್ಥಿತೇನ । ವಿಶೇಷೇಣ ರೂಪೇಣ । ಜ್ಞಾನಾನಿ ಜನಯತೀತಿ ಸಂಬಂಧಃ ।

ಮನಸಃ ಸರ್ವಜ್ಞಾನಹೇತುತ್ವಾದಿತಿ ಭಾವಃ । ಕಾರ್ಮ್ಯೈಃ = ಕರ್ಮೇಂದ್ರಿಯನಿಯಾಮಕದೇವತಾ-ಗತ್ಯೈಃ । ನನು ಪ್ರಾಣಃ ಕಿಮಿಂದ್ರಿಯಾದಿದೇವತಾಃ ಪರಿತ್ಯಜ್ಯ ಜ್ಞಾನಜನನಾದೌ ಶಕ್ತೋ ನ ವಾ । ಆದ್ಯೇ ತತ್ರಾವಸ್ಥಾನವೈಯರ್ಥ್ಯಮ್ । ದ್ವಿತೀಯೇ ಕಥಂ ತಸ್ಯ ಆಢ್ಯತಾ? ಇತ್ಯತ ಆಹ —ತಾನೀತಿ ॥ ಅಪಿ = ಯದ್ಯಪಿ, ಪ್ರಾಣಃ ಪೃಥಕ್ = ತದ್ದ್ವಾರತಾಮಂತರೇಣ ಕಾರ್ಯಕರಣೇ ಶಕ್ತಃ ತಥಾಪಿ ಇಂದ್ರಿಯನಿಯಮನಾತ್ ತೇಷಾಂ ಫಲಾಧಿಕ್ಯಂ ಭವೇದಿತಿ ತೇಷು ಕೃಪಯಾ ಅವಶಾನ್ಯೇವ - ಪರತಂತ್ರಾಣ್ಯೇವ, ದ್ವಾರತ್ವೇನಾದಾಯ, ತದ್ಗತರೂಪವಿಶೇಷೈಃ ತದ್ಗಕಾರ್ಯಕೃತ್ - ತೇಷು ಗತಕಾರ್ಯಂ ತದ್ಗಕಾರ್ಯಂ, ತೈಃ ಕ್ರಿಯಮಾಣಮಿತಿ ಯಾವತ್ । ತತ್ಕರೋತೀತ್ಯರ್ಥಃ ।

ಏವಂ ಪ್ರಾಣಾಂತಃ ಪ್ರಾಣಕಾರ್ಯಕೃದಿತ್ಯರ್ಥಃ । ಅನೇನ 'ಸೋಽಧ್ಯಕ್ಷಃ' ಇತ್ಯತ್ರ ಸಿದ್ಧಾಂತೇ ಪ್ರಮಾಣಮುಕ್ತಂ ವೇದಿತವ್ಯಮ್ । ಏವಂ ಚ ಮನಸೋಽಪೇಕ್ಷಯಾ ಪ್ರಾಣಸ್ಯ ಆಢ್ಯತಾ ಮನಸಃ ಪ್ರಾಣೇ ಲಯ ಇತ್ಯುಕ್ತಂ ಯುಕ್ತಮಿತಿ ಭಾವಃ । ಅಯಂ ಚ ನ್ಯಾಯಃ ಪ್ರಾಣಃ ಇತ್ಯನೇನ ಪ್ರಕರ್ಷೇಣಾನಿತೀತಿ ರುದ್ರಾದಿಭ್ಯೋಽಪ್ಯತಿಶಯೇನ ಚೇಷ್ಟಕತ್ವೋಕ್ತ್ಯಾ ಸೂಚಿತಃ । - (ಭಾ.ಬೋಧ)

## ಏಕಾಂತಭಕ್ತರಾದ ಜಯತೀರ್ಥರು ಪ್ರಾಣಾವತಾರರಾದ ಶ್ರೀಮದಾಚಾರ್ಯರನ್ನು ಪ್ರಾರ್ಥಿಸುತ್ತಿದ್ದಾರೆ.

(ಲಘುರಸರಂಜನೀ)— ಅಥ ರೂಪಾಂತರೇಣಾಪಿ ಆನಂದತೀರ್ಥನಾಮ್ನಾ ಭೂಮಾವವತೀರ್ಯ ಸ್ವಾಂತಃಸ್ಥೇನ ಹರಿಣಾ ಪ್ರೇರಿತಃ ತತ್ತದ್ಯೋಗ್ಯತಾಪರಿಪಾಕಕಾಲಾನುಸಾರೇಣ ತೇಷಾಂ ತೇಷಾಂ ತಾನಿ ತಾನಿ ಸಾಧನಾನ್ಯುಪದಿಶ್ಯ ಶ್ರವಣಮಾರಭ್ಯ ಮೂರ್ತ್ಯಂತರಾಪರೋಕ್ಷಜ್ಞಾನಪರ್ಯಂತಂ ನಿರ್ಣಯಂ ಸಂಪಾದಯತಿ । ಯದ್ಯಪ್ಯನಿಮಿತ್ತಬಂಧುತ್ವಾದಿದಂ ಸರ್ವಮಪಿ ಸಾಧನಜಾತಂ ಕೃಪಯಾ ಸ್ವಯಮೇವ ಸಾಧಯತಿ । ತಥಾ ಮಹತ್ಸು ಪ್ರಾರ್ಥನಾದಿರೂಪಂ ವಿಜ್ಞಾಪನಂ ಶಿಷ್ಟಧರ್ಮ ಇತಿ ಶಿಷ್ಯಾನ್ ಶಿಕ್ಷಯಿತುಂ ವಾ ಅನೇಕಾಂತಭಕ್ತಾನಾಂ ಮೋಕ್ಷ ಇವ ತತ್ಸಾಧನಾನ್ಯಪಿ ಪ್ರಾರ್ಥನೀಯಾನಿ ಸಂತೀತಿ ತತ್ಸ್ವಭಾವಾನುಕರಣಯಾ ವಾ ಏಕಾಂತಭಕ್ತಾನಾಮಪಿ 'ಸರ್ವಮನ್ಯತ್ ತದರ್ಥಕಮ್' ಇತ್ಯುಕ್ತೇಃ ಮೋಕ್ಷತತ್ಸಾಧನಾದೇಃ ಸರ್ವಸ್ಯಾಪಿ ಭಗವದರ್ಥತ್ವೇನ ಅಭ್ಯರ್ಚ-ನೀಯತ್ವಾದ್ವಾ ಏಕಾಂತಭಕ್ತೋ ಜಯತೀರ್ಥಶ್ರೀಮಚ್ಚರಣಃ ಪ್ರಾಣಾವತಾರಾತ್ ಶ್ರೀಮದಾ-ನಂದತೀರ್ಥಾದ್ ವಿಶಿಷ್ಟತತ್ವನಿರ್ಣಯಮರ್ಥಯತೇ — ವ್ಯಾಪ್ತಿರಿತಿ ॥

ಅನಂತರ ಬೇರೆ ರೂಪದಿಂದಲೂ ಅಂದರೆ ಆನಂದತೀರ್ಥ ಎಂಬ ಹೆಸರಿನಿಂದ ಭೂಮಿಯಲ್ಲಿ ಅವತರಿಸಿ ತನ್ನ ಒಳಗಡೆ ಇರುವ ಹರಿಯಿಂದ ಪ್ರೇರಿತನಾಗಿ ಆಯಾಯಾ ಜೀವರ ಯೋಗ್ಯತೆಯು ಪರಿಪಾಕವಾಗುವ ಕಾಲವನ್ನು ಅನುಸರಿಸಿ ಆಯಾಯಾ ಜೀವರಿಗೆ ಆಯಾಯಾ ಸಾಧನಗಳನ್ನು

ಉಪದೇಶಮಾಡುತ್ತಾನೆ. ಶ್ರವಣದಿಂದಾರಂಭಿಸಿ ಇನ್ನೊಂದು ಭಗವನ್ಮೂರ್ತಿಯ ಅಪರೋಕ್ಷಜ್ಞಾನ ಬರುವವರೆಗೆ ನಿಶ್ಚಯವನ್ನು ಸಂಪಾದಿಸಿಕೊಡುತ್ತಾನೆ. ಯದ್ಯಪಿ ಪ್ರಾಣದೇವ ಅನಿಮಿತ್ತಬಂಧು ಆದ್ದರಿಂದ ಇವೆಲ್ಲ ಶ್ರವಣಾದಿ- ಸಾಧನಗಳನ್ನು ದಯೆಯಿಂದ ತಾನೇ ಸಾಧಿಸಿಕೊಡುತ್ತಾನೆ. ಆದರೂ ದೊಡ್ಡವರಲ್ಲಿ ಪ್ರಾರ್ಥನೆ ಮಾಡುವುದು ಅರ್ಥಾತ್ ವಿಜ್ಞಾಪನೆ ಏನಿದೆ ಅದು ಶಿಷ್ಯರುಗಳ ಧರ್ಮವಾದ್ದರಿಂದ ಶಿಷ್ಯರಿಗೆ ಶಿಕ್ಷಣ ಕೊಡಲು ಅಥವಾ ಅನೇಕಾಂತಭಕ್ತರಿಗೆ ಮೋಕ್ಷದಂತೆ ಆ ಮೋಕ್ಷಸಾಧನವಾದವುಗಳನ್ನೂ ಪ್ರಾರ್ಥನೆ ಮಾಡಬೇಕು ಎಂಬ ಅವರ ಸ್ವಭಾವವನ್ನು ಅನುಕರಣೆ ಮಾಡುತ್ತ ಅಥವಾ ಏಕಾಂತಭಕ್ತರಿಗೂ ಕೂಡ 'ಸರ್ವಮನ್ಯತ್ ತದರ್ಥಕಮ್' ಎಂದು ಹೇಳಿದಂತೆ ಮೋಕ್ಷ ಹಾಗೂ ಮೋಕ್ಷಸಾಧನವಾದ ಎಲ್ಲವನ್ನೂ ಭಗವಂತನಿಗೋಸ್ಕರವೇ ಪ್ರಾರ್ಥನೆ ಮಾಡುವುದರಿಂದ ಏಕಾಂತಭಕ್ತರಾದ ಜಯತೀರ್ಥಶ್ರೀಮಚ್ಚರಣರು ಪ್ರಾಣಾವತಾರಿಯಾದ ಶ್ರೀಮದಾನಂದತೀರ್ಥರಿಂದ ವಿಶಿಷ್ಟವಾದ ತತ್ವನಿರ್ಣಯವನ್ನು ಪ್ರಾರ್ಥಿಸುತ್ತಾರೆ — ವ್ಯಾಪ್ತಿ ಎಂಬ ಪದ್ಯದಿಂದ.

## ತಾದರ್ಥ್ಯೇ ಚತುರ್ಥೀ ಹೇಗೆ? ಹಾಗೆ ಆನಂದತೀರ್ಥಪದಪ್ರಯೋಗದ ಸ್ವಾರಸ್ಯ

(ಲಘುರಸರಂಜನೀ) — **ಆನಂದತೀರ್ಥೋ ಮೇ ತತ್ವವಿನಿರ್ಣಯಾಯ** ತಾದರ್ಥ್ಯೇ ಚತುರ್ಥೀ '**ಭೂಯಾತ್**' ಇತಿ ಯೋಜನಾ । ನನ್ವಾನಂದತೀರ್ಥಸ್ಯ ನ ತಾವತ್ಕರ್ತೃಭಾವೇನ ನಿರ್ಣಯಾರ್ಥತ್ವಮ್ । 'ಮೇ' ಇತ್ಯಸ್ಮಚ್ಛಬ್ದಾರ್ಥಸ್ಯ ಕರ್ತೃತ್ವಾತ್ । ನಾಪಿ ಕರ್ಮಭಾವೇನ । ತತ್ತ್ವಸ್ಯ ತತ್ತ್ವಾತ್ । ನಾಪಿ ಕರಣಭಾವೇನ । ಇಂದ್ರಿಯಾದೀನಾಂ ಜ್ಞಾನಕರಣತಯಾ ಪ್ರಸಿದ್ಧ-ತ್ವಾತ್ । ಅತಃ ಕಥಮಾನಂದತೀರ್ಥಸ್ಯ ವಿನಿರ್ಣಯಾಯೇತಿ ತಾದರ್ಥ್ಯಮುಕ್ತಮಿತಿ ಚೇತ್ । ಕರಣಭಾವೇನ ತಾವತ್ ತಾದರ್ಥ್ಯಮಿತಿ ಬ್ರೂಮಃ । ಅತ ಏವ ಸನ್ನ್ಯಾಸಿನಾಂ ಜ್ಞಾನೋಪ-ದೇಶಾತಿರಿಕ್ತಕಾರ್ಯಾಭಾವಾದಾನಂದತೀರ್ಥಸ್ಯಾಪಿ ತಥಾತ್ವೇನ ಜ್ಞಾನಾಸಾಧಾರಣಕಾರಣತ್ವ-ರೂಪಜ್ಞಾನಕರಣತ್ವಬೋಧನಾಯ 'ಆನಂದತೀರ್ಥ' ಇತಿ ಸನ್ನ್ಯಾಸಪ್ರಸಿದ್ಧತೀರ್ಥಪದ-ಪ್ರಯೋಗಃ, ಅನ್ಯಥಾ 'ಪೂರ್ಣಬೋಧ' ಇತ್ಯಾದ್ಯವಕ್ಷ್ಯತ್ ।

ಆನಂದತೀರ್ಥರು ನನ್ನ ತತ್ವವಿನಿರ್ಣಯಕ್ಕೆ ಕಾರಣರಾಗಲಿ ಎಂದು. ಅಂದರೆ 'ಆನಂದತೀರ್ಥಃ ಮೇ ತತ್ವವಿನಿರ್ಣಯಾಯ ಭೂಯಾತ್' ಎಂದು ವಾಕ್ಯಯೋಜನೆಯನ್ನು ಮಾಡಬೇಕು. ಇಲ್ಲಿ ತತ್ವವಿನಿರ್ಣಯಾಯ ಎಂಬಲ್ಲಿ ಇರುವ ಚತುರ್ಥೀ ತಾದರ್ಥ್ಯಚತುರ್ಥೀ ಎನಿಸುತ್ತದೆ. 'ತಸ್ಮೈ ಇತಿ ತದರ್ಥಃ ತದರ್ಥಸ್ಯ ಭಾವಃ ತಾದರ್ಥ್ಯಂ ತಸ್ಮಿನ್ ತಾದರ್ಥ್ಯೇ. -ಅದಕ್ಕೋಸ್ಕರ ಎಂಬ ಅರ್ಥದಲ್ಲಿ ಚತುರ್ಥೀ ಇದೆ.

ಇಲ್ಲೊಂದು ಪ್ರಶ್ನೆ – ಅಲ್ಲ! ಆನಂದತೀರ್ಥರು ತತ್ತ್ವನಿರ್ಣಯಕ್ಕೋಸ್ಕರವಾಗಲಿ ಎಂದರೆ ಅವರು ತತ್ತ್ವನಿರ್ಣಯಕ್ಕೆ ಕರ್ತೃಗಳು ಎಂದರ್ಥವೋ, ಕರ್ಮ ಎಂದರ್ಥವೋ, ಕರಣ ಎಂದರ್ಥವೋ? ಮೊದಲನೆಯ ಕಲ್ಪ ಸರಿಯಿಲ್ಲ. 'ಮೇ' ಎಂದು ಈ ಶ್ಲೋಕದಲ್ಲಿ ಅಸ್ಮಚ್ಛಬ್ದದ ಅರ್ಥವನ್ನು ಕರ್ತೃವನ್ನಾಗಿ ಹೇಳಿರುವುದರಿಂದ. ಆನಂದತೀರ್ಥರಾದರೋ ಈ ಶ್ಲೋಕದ ಅಸ್ಮಚ್ಛಬ್ದದ ಅರ್ಥವಾಗಿಲ್ಲ. ಎರಡನೆಯ ಕಲ್ಪವೂ ಸರಿಯಿಲ್ಲ. ತತ್ತ್ವವಿನಿರ್ಣಯಾಯ ಭೂಯಾತ್ ಎಂದಾಗ ಇಲ್ಲಿ ಪಡೆಯಬೇಕಾದದ್ದು ತತ್ತ್ವದ ವಿಶಿಷ್ಟವಾದ ಜ್ಞಾನಕ್ಕೆ ವಿಷಯವಾದ ತತ್ತ್ವಗಳು. ಆದ್ದರಿಂದ ಅವುಗಳೇ ಕರ್ಮಗಳು. ಮೂರನೆಯ ಕಲ್ಪವೂ ಸರಿಯಿಲ್ಲ. ಜ್ಞಾನಕ್ಕೆ ಕರಣವಾದದ್ದು ಇಂದ್ರಿಯಗಳು ಎಂದು ಪ್ರಸಿದ್ಧಿಯಿದೆಯಾದ್ದರಿಂದ. ಆದ್ದರಿಂದ ಆನಂದತೀರ್ಥರು ವಿನಿರ್ಣಯಕ್ಕೋಸ್ಕರ ಎಂದಾಗಲಿ ಎಂದು ತಾದರ್ಥ್ಯೇ ಚತುರ್ಥಿಯನ್ನು ಹೇಗೆ ಹೇಳಿದರು. ಕರಣವಾಗಿ ಆನಂದತೀರ್ಥರನ್ನು ವಿವಕ್ಷೆಮಾಡಿದಾಗ ತಾದರ್ಥ್ಯೇ ಚತುರ್ಥೀಯು ಸರಿಯೆನಿಸುವುದು. ಆದ್ದರಿಂದಲೇ ಸನ್ಯಾಸಿಗಳಿಗೆ ಜ್ಞಾನೋಪದೇಶ ಬಿಟ್ಟು ಬೇರೆ ಕಾರ್ಯವಿಲ್ಲವಾದ್ದರಿಂದ ಆನಂದತೀರ್ಥರು ಸನ್ಯಾಸಿಗಳಾದ ಪ್ರಯುಕ್ತ ಅವರಲ್ಲಿ ಜ್ಞಾನವನ್ನು ಕುರಿತು ಅಸಾಧಾರಣಕಾರಣತ್ವವಿದೆ. ಹಾಗಾಗಿ ಜ್ಞಾನಕರಣತ್ವವಿದೆ ಎಂದು ತಿಳಿಸಲು ಆನಂದತೀರ್ಥ ಎಂದು ಸನ್ಯಾಸಿಗಳಲ್ಲಿ ಪ್ರಸಿದ್ಧವಾದ ತೀರ್ಥಪದವನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ ಪೂರ್ಣಬೋಧಃ ಇತ್ಯಾದಿ ನಾಮಗಳನ್ನು ಹೇಳುತ್ತಿದ್ದರು.

## ಪ್ರತ್ಯಕ್ಷಾದಿ ಮೂರೂ ಅಭಿಪ್ರೇತ ಎಂದು ತಿಳಿಸಲು ಪ್ರಮಾಣಂ ಎಂದು ಸಾಮಾನ್ಯಕಥನ

(ಲಘುರಸರಂಜನೀ)— ನನು ಜ್ಞಾನಕರಣತ್ವಂ ಪ್ರತ್ಯಕ್ಷಾದ್ಯನ್ಯತಮೇನ ಸಹಚರಿತಮೇವೋಪಲಬ್ಧಮ್ । ಅತಃ ಆನಂದತೀರ್ಥಃ ಕಿಂ ಪ್ರತ್ಯಕ್ಷರೂಪಂ ಕರಣಮ್ ಉತಾನುಮಾನರೂಪಮ್ ಅಥಾಗಮರೂಪಮ್ । ನ ತ್ರಿತಯಮಪಿ । ಪ್ರಸಿದ್ಧಿಬಾಧಾತ್ ತೇಷಾಂ ವೈಯರ್ಥ್ಯಾಚ್ಚ ಇತ್ಯತಃ ತ್ರಿತಯರೂಪಮಪಿ ಕರಣಮಿತ್ಯಾಶಯೇನ ಉಕ್ತಮ್ – ಪ್ರಮಾಣಮಿತಿ ॥ ಅತ ಏವ ಪ್ರತ್ಯಕ್ಷಮಿತಿ ವಾ ಅನುಮಾನಮಿತಿ ವಾ ಆಗಮ ಇತಿ ವಾ ವಕ್ತವ್ಯೇ ಪ್ರತ್ಯಕ್ಷಾದಿತ್ರಿತಯಮಪಿ ಅಭಿಪ್ರೇತಮಿತಿ ದ್ಯೋತನಾಯ 'ಪ್ರಮಾಣಮ್' ಇತಿ ಸಾಮಾನ್ಯಪದಪ್ರಯೋಗಃ ।

ಅಲ್ಲ! ಜ್ಞಾನಕರಣವಾದರೆ ಅದು ಪ್ರತ್ಯಕ್ಷ ಅನುಮಾನ ಆಗಮಗಳಲ್ಲಿ ಒಂದಾಗಬೇಕು. ಏಕೆಂದರೆ 'ಯತ್ರ ಯತ್ರ ಜ್ಞಾನಕರಣತ್ವಂ ತತ್ರ ತತ್ರ ಪ್ರತ್ಯಕ್ಷಾದ್ಯನ್ಯತಮತ್ವಮ್' ಎಂದು ಜ್ಞಾನಕರಣತ್ವಕ್ಕೂ ಪ್ರತ್ಯಕ್ಷಾದ್ಯನ್ಯತಮತ್ವಕ್ಕೂ ಸಾಹಚರ್ಯವು(ವ್ಯಾಪ್ತಿಯು) ಕಂಡಿದೆ. ಆದ್ದರಿಂದ ಆನಂದತೀರ್ಥರನ್ನು ಪ್ರತ್ಯಕ್ಷಪ್ರಮಾಣವೆನ್ನುತ್ತೀರೋ ಅನುಮಾನ ಪ್ರಮಾಣ ಎನ್ನುತ್ತೀರೋ ಆಗಮಪ್ರಮಾಣ ಎನ್ನುತ್ತೀರೋ? ಮೂರೂ ಅಲ್ಲ ಎಂದುತ್ತರ. ಆನಂದತೀರ್ಥರಲ್ಲಿ ಪ್ರತ್ಯಕ್ಷ ಅನುಮಾನ ಆಗಮ ವ್ಯವಹಾರಪ್ರಸಿದ್ಧಿಯಿಲ್ಲ. ಅಲ್ಲದೆ ಇವರೇ ಮೂರು ಪ್ರಮಾಣಗಳಾದರೆ ಅವುಗಳನ್ನು ಒಪ್ಪುವುದು

ವ್ಯರ್ಥ. ಇದಕ್ಕೆ ಉತ್ತರವಾಗಿ ವಸ್ತುತಃ ಅವರೇ ಮೂರು ರೀತಿಯ ಪ್ರಮಾಣವು ಎಂಬ ಅಭಿಪ್ರಾಯದಿಂದ 'ಪ್ರಮಾಣಂ' ಎಂದು ಹೇಳಿದ್ದಾರೆ. ಆದ್ದರಿಂದಲೇ ಈ ಶ್ಲೋಕದಲ್ಲಿ 'ಪ್ರತ್ಯಕ್ಷಂ ಎಂದೋ 'ಅನುಮಾನಂ' ಎಂದೋ 'ಆಗಮಃ' ಎಂದೋ ಹೇಳಬೇಕಾಗಿತ್ತು. ಆದರೆ ಅವುಗಳನ್ನು ಹೇಳದೇ ಪ್ರತ್ಯಕ್ಷಾದಿ ಮೂರಕ್ಕೂ ಸಾಧಾರಣವಾದ 'ಪ್ರಮಾಣಂ' ಎಂಬ ಶಬ್ದವನ್ನು ಬಳಸಿದ್ದಾರೆ. ಇದರಿಂದ ಆನಂದತೀರ್ಥರು ಪ್ರತ್ಯಕ್ಷಾದಿ ಮೂರೂ ಪ್ರಮಾಣಗಳಾಗಿದ್ದಾರೆ ಎಂದು ತಿಳಿಸಿದ್ದಾರೆ.

### ಆಚಾರ್ಯರು ಇಂದ್ರಿಯಾದಿಕರಣಗಳನ್ನು ದ್ವಾರವನ್ನಾಗಿಸಿ ಕರಣರಾಗಿದ್ದಾರೆ

(ಲಘುರಸರಂಜನೀ) — ಇಂದ್ರಿಯಾದಿಷು ಪ್ರತ್ಯಕ್ಷತ್ವಾದಿಪ್ರಸಿದ್ಧಿಸ್ತು ಅಯಸಿ ದಗ್ಧೃಶಬ್ದಪ್ರಸಿದ್ಧಿರಿವ ಪ್ರತ್ಯಕ್ಷಾದಿಶಬ್ದಮುಖ್ಯಾರ್ಥಮುಖ್ಯಪ್ರಾಣಸನ್ನಿಧಿನಿಮಿತ್ತಾ ಅಮುಖ್ಯೈವ । ಮುಖ್ಯಪ್ರಾಣಸ್ಯ ಪ್ರತ್ಯಕ್ಷಾದಿಶಬ್ದಮುಖ್ಯಾರ್ಥತ್ವಂ ಚ 'ಸರ್ವವೇದವಾಚ್ಯತ್ವಂ ವಾಯೋರಪ್ಯಸ್ತಿ' ಇತ್ಯೈತರೇಯ-ಭಾಷ್ಯಾದ್ಯುಕ್ತಸರ್ವವೇದವಾಚ್ಯತ್ವಾದೇವ ಸಿದ್ಧಮ್ । ವೇದೈಕದೇಶಪ್ರತ್ಯಕ್ಷಾದಿಶಬ್ದಾವಾಚ್ಯತ್ವೇ ಸರ್ವ-ವೇದವಾಚ್ಯತ್ವಾಯೋಗಾತ್ । ಅತೋ ನ ಪ್ರಸಿದ್ಧಿಬಾಧಃ । ನಾಪಿ ತೇಷಾಂ ವೈಯರ್ಥ್ಯಮ್ । —

"ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾನಿ ಜನಯತ್ಯಸೌ ।
ಮನಃಸ್ಥೇನ ವಿಶೇಷೇಣ ಕಾರ್ಯೈಃ ಕರ್ಮಕೃದೇವ ಚ ।
ಪೃಥಕ್ ಸ್ಥಿತೇನ ರೂಪೇಣ ಜೀವಂ ಧಾರಯತಿ ಪ್ರಭುಃ ॥
ಜೀವಸ್ಥಿತೇನ ರೂಪೇಣ ವೇದಯತ್ಯಹಮಿತ್ಯಪಿ ।
ಪ್ರಾಣ ಏಕೋ ವಶೇ ನಿತ್ಯಂ ಬಾಹ್ಯಾಂತಃಕರಣೇಶ್ವರಃ ।
ತಾನ್ಯೇತಾನ್ಯವಶಾನ್ಯೇವ ತಥಾಪಿ ಕೃಪಯೈವ ಸಃ ।
ಪೃಥಕ್ ಶಬ್ದೋಽಪಿ ತದ್ಯೈಸ್ತು ಸ್ವರೂಪೈಃ ತದ್ಗಕಾರ್ಯಕೃತ್ ।" (ನ್ಯಾ.ವಿ.)

ಇತ್ಯಾದ್ಯುಕ್ತೇಃ ಇಂದ್ರಿಯಾದಿಕರಣದ್ವಾರೈವ ತಸ್ಯ ಕರಣತ್ವಾತ್ । ದ್ವಾರಿಣಾ ಚ ದ್ವಾರವೈಯರ್ಥ್ಯೇ ಅತಿಪ್ರಸಂಗಾತ್ । ನ ತು ಪ್ರತ್ಯಕ್ಷತ್ವಾದಿಕಂ ಪ್ರಾಯಃ ಸಹಾನವಸ್ಥಿತಮುಪಲಬ್ಧಮ್ । ಅತ ಏಕಸ್ಯೈವ ಆನಂದತೀರ್ಥಸ್ಯ ಪ್ರತ್ಯಕ್ಷಾದಿಪ್ರಮಾಣತ್ರಯಾತ್ಮಕತ್ವೇ ಪ್ರತ್ಯಕ್ಷತ್ವಾದೀನಾಂ ಸಹಾವಸ್ಥಾನಂ ವಿರುದ್ಧಮ್ । ಕಿಂಚ ಪ್ರತ್ಯಕ್ಷಮಜ್ಞಾತಕರಣಂ ಅನುಮಾನಾಗಮೌ ತು ಜ್ಞಾತಕರಣೇ ಇತಿ ಜ್ಞಾತ-ಕರಣತ್ವಾಜ್ಞಾತಕರಣತ್ವಯೋಃ ಸಹಾವಸ್ಥಾನಮಪಿ ವಿರುದ್ಧಮೇವೇತ್ಯತ ಉಕ್ತಮ್— ಭಗವಾನಿತಿ ॥ ಭಗಃ 'ಶ್ರೀಕಾಮಮಾಹಾತ್ಮ್ಯವೀರ್ಯಯತ್ನಾರ್ಕಕೀರ್ತಿಷು' ಇತ್ಯಭಿಧಾನಾತ್ ಉಕ್ತಧರ್ಮಾಣಾಂ ಸಹಾವಸ್ಥಾನಾದಿರೂಪಾಘಟಿತಘಟಕಮಾಹಾತ್ಮ್ಯವಾನ್ ಇತ್ಯರ್ಥಃ ।

ಇಂದ್ರಿಯಾದಿಗಳಲ್ಲಿ ಪ್ರತ್ಯಕ್ಷತ್ವವಿದೆ. ಅಂದರೆ ಪ್ರತ್ಯಕ್ಷಶಬ್ದವ್ಯವಹಾರ ಇಂದ್ರಿಯದಲ್ಲಿ ಪ್ರಸಿದ್ಧ. ಆದರೆ

ಇಂತಹ ಪ್ರಸಿದ್ಧಿಯು ಅಮುಖ್ಯವಾದದ್ದೇ ಆಗಿದೆ. ಅದು ಹೀಗೆ – ಇದು ಕಬ್ಬಿಣದಲ್ಲಿ ಬಳಸುವ ದಗ್ಧಶಬ್ದದ ಪ್ರಸಿದ್ಧಿಯಂತೆ. ದಗ್ಧ ಎಂದರೆ ದಾಹವನ್ನು ಉಂಟುಮಾಡುವಂತಹದ್ದು. ಇದಾದರೋ ಯದ್ಯಪಿ ಅಗ್ನಿಯ ಧರ್ಮ. ಆದರೆ ಆ ಬೆಂಕಿಯ ಸಂಪರ್ಕವಿರುವ ಕಬ್ಬಿಣದಲ್ಲೂ ದಾಹಕತ್ವ-ವಿರುವುದರಿಂದ ಅದನ್ನೂ ದಗ್ಧ ಎಂದು ಕರೆಯುವುದು ಪ್ರಸಿದ್ಧ. ಅದರಂತೆ ಇಲ್ಲಿ ಪ್ರತ್ಯಕ್ಷ ಮೊದಲಾದ ಶಬ್ದಗಳ ಅರ್ಥ ಮುಖ್ಯಪ್ರಾಣ. ಆ ಮುಖ್ಯಪ್ರಾಣನ ಸನ್ನಿಧಾನದಿಂದ ಇಂದ್ರಿಯಾದಿ-ಗಳಲ್ಲಿಯೂ ಅಮುಖ್ಯವಾಗಿ ಪ್ರತ್ಯಕ್ಷ ಮೊದಲಾದ ಶಬ್ದಗಳ ವ್ಯವಹಾರವಿದೆ. ಅಲ್ಲ। ಮುಖ್ಯಪ್ರಾಣನು ಪ್ರತ್ಯಕ್ಷಾದಿಶಬ್ದಗಳಿಗೆ ಮುಖ್ಯಾರ್ಥ ಹೇಗೆ ಎನ್ನುವುದಕ್ಕೆ ಇದು ಉತ್ತರ – ಐತರೇಯಭಾಷ್ಯ ಮೊದಲಾದವುಗಳಲ್ಲಿ ಸಕಲವೇದವಾಚ್ಯತ್ವವನ್ನು ವಾಯುದೇವರಿಗೂ ಹೇಳಿದ್ದಿದೆ. ವೇದದ ಒಂದು ಭಾಗವಾದ ಪ್ರತ್ಯಕ್ಷಾದಿಶಬ್ದಗಳಿಂದ ಮುಖ್ಯಪ್ರಾಣನು ಮುಖ್ಯವಾಗಿ ಹೇಳಲ್ಪಟ್ಟಿಲ್ಲ ಎಂದರೆ ಅವನು ಸರ್ವವೇದವಾಚ್ಯನಾಗುವುದಿಲ್ಲ. ಆದ್ದರಿಂದ ಪ್ರಸಿದ್ಧಿಬಾಧವೂ ಇಲ್ಲ ಪ್ರತ್ಯೇಕವಾಗಿ ಪ್ರತ್ಯಕ್ಷಾದಿ-ಪ್ರಮಾಣಗಳನ್ನೊಪ್ಪುವುದಕ್ಕೆ ವೈಯರ್ಥ್ಯವೂ ಇಲ್ಲ.

"ಇಂದ್ರಿಯಸ್ಥೈಃ ಸ್ವರೂಪೈಸ್ತು ....... ತದ್ಗೈಸ್ತು ಸ್ವರೂಪೈಃ ತದ್ಗಕಾರ್ಯಕೃತ್ ।"

ಮುಂತಾದ ಮಾತುಗಳಿಗನುಸಾರವಾಗಿ ಇಂದ್ರಿಯಾದಿಕರಣಗಳ ಮುಖಾಂತರವೇ ಮುಖ್ಯಪ್ರಾಣನು ಕರಣನಾದ್ದರಿಂದ. ದ್ವಾರಿಯಿಂದ ದ್ವಾರವೈಯರ್ಥ್ಯವನ್ನು ಶಂಕಿಸುವುದು ಸರಿಯಲ್ಲ. ಅಂದರೆ ದ್ವಾರಿಯಾದ ಮುಖ್ಯಪ್ರಾಣನೇ ಸಾಕು ದ್ವಾರವಾದ ಇಂದ್ರಿಯಗಳೇ ಬೇಡ ಎನ್ನುವುದು ಸರಿಯಲ್ಲ. ಹೀಗೆಂದರೆ ಎಲ್ಲ ಕಾರ್ಯಗಳಲ್ಲಿ ಬೇಕಾದ ವ್ಯಾಪಾರಗಳನ್ನೇ ಒಪ್ಪದಿರುವ ಪ್ರಸಂಗ ಬಂದೀತು।

ಇನ್ನು ಪ್ರತ್ಯಕ್ಷತ್ವ, ಅನುಮಾನತ್ವ, ಆಗಮತ್ವ ಇವುಗಳೆಲ್ಲವೂ ಜೊತೆಯಾಗಿ ಇರುವುದು ಎಲ್ಲಿಯೂ ಕಂಡಿಲ್ಲ. ಆದರೆ ಒಬ್ಬರೇ ಆನಂದತೀರ್ಥರು ಪ್ರತ್ಯಕ್ಷಾದಿಪ್ರಮಾಣಗಳಾದರೆ ಪ್ರತ್ಯಕ್ಷತ್ವ, ಅನುಮಾನತ್ವ, ಆಗಮತ್ವಗಳು ಒಂದೇ ಕಡೆ ಇರಬೇಕಾದೀತು। ಎಂಬ ಪ್ರಸಂಗ. ಅಲ್ಲದೆ ಪ್ರತ್ಯಕ್ಷವು ಅಜ್ಞಾತವಾಗಿ ಕರಣವಾಗಿದೆ. ಅಂದರೆ ಇಂದ್ರಿಯದಿಂದ ಜ್ಞಾನಬರಬೇಕಾದರೆ ಇಂದ್ರಿಯದ ಜ್ಞಾನ ವ್ಯಕ್ತಿಗೆ ಅನಾವಶ್ಯಕ. ಆದರೆ ಅನುಮಾನಾಗಮಗಳಿಂದ ಜ್ಞಾನಬರಬೇಕಾದರೆ ಅವುಗಳ ಜ್ಞಾನ ವ್ಯಕ್ತಿಗೆ ಇರಬೇಕು. ಹಾಗಾಗಿ ಜ್ಞಾತಕರಣತ್ವ, ಅಜ್ಞಾತಕರಣತ್ವ ಇವೆರಡೂ ಒಂದೇ ಕಡೆ ಇರಲು ಸಾಧ್ಯವಿಲ್ಲ. ಆದರೆ ಆನಂದತೀರ್ಥರಲ್ಲಿ ಪ್ರತ್ಯಕ್ಷಾದಿಪ್ರಮಾಣಾತ್ಮಕತ್ವವನ್ನು ಒಪ್ಪಿದರೆ ಜ್ಞಾತ-ಕರಣತ್ವ, ಅಜ್ಞಾತಕರಣತ್ವಗಳ ಸಮಾವೇಶ ಆಗಬೇಕಾದೀತು। ಈ ಪ್ರಶ್ನೆಗಳಿಗೆ ಉತ್ತರವಾಗಿ – ಭಗವಾನ್ ಎಂದಿದ್ದಾರೆ. ಭಗ ಎಂದರೆ – 'ಶ್ರೀ-ಕಾಮ-ಮಾಹಾತ್ಮ್ಯ-ವೀರ್ಯ-ಯತ್ನ- ಅರ್ಕ-ಕೀರ್ತಿಷು' ಎಂಬ ಕೋಶದಂತೆ. ಇಲ್ಲಿ ಹೇಳಿರುವ ಧರ್ಮಗಳು ಒಟ್ಟಿಗೆ ಆ ಮುಖ್ಯಪ್ರಾಣನಲ್ಲಿ ಇರುವವು. ಅಂದರೆ ಮುಖ್ಯಪ್ರಾಣನು ಅಘಟಿತವಾದದ್ದನ್ನು ಘಟನೆ ಮಾಡುವ ಮಾಹಾತ್ಮ್ಯ-

ವುಳ್ಳವನು. ಪ್ರಕೃತದಲ್ಲಿ ಜ್ಞಾತಕರಣತ್ವಾದಿವಿರುದ್ಧಧರ್ಮಗಳ ಸಹಾವಸ್ಥಾನವು ಎಲ್ಲಿಯೂ ಕೂಡುವುದಿಲ್ಲ. ಆದರೆ ಮುಖ್ಯಪ್ರಾಣನು ತನ್ನಲ್ಲಿ ಇವುಗಳನ್ನು ಏಕತ್ರ ಇರಿಸುವಂತಹ ಮಾಹಾತ್ಮ್ಯವನ್ನು ಪಡೆದಿರುವನು. ಪ್ರಕೃತ ಭಗಶಬ್ದಾರ್ಥವಾಗಿ ಮಾಹಾತ್ಮ್ಯ ಎಂಬುದು ಪ್ರಧಾನಾಂಶವಾಗಿದೆ.

## ವ್ಯಾಪ್ತಿರ್ಯಸ್ಯ ಎಂಬ ಶ್ಲೋಕಕ್ಕೆ ಅಪೂರ್ವವಾದ ವಿವರಣೆ

(ಲಘುರಸರಂಜನೀ) — ನನು ಪ್ರಮಾಣತ್ವಾಭಿಮತಾನಾಮಪಿ ಪ್ರತ್ಯಕ್ಷಾದೀನಾಂ ಕದಾಚಿತ್ಕಾಚಾದಿದೋಷಸಂಬಂಧೇನಾಯಥಾರ್ಥತ್ವದರ್ಶನಾತ್ ಪ್ರಕೃತಪ್ರಮಾಣಸ್ಯಾಪಿ ತಥಾತ್ವೇ ಕಥಂ ತತ್ತ್ವನಿರ್ಣಯಾರ್ಥತಾ? ಇತ್ಯತ ಉಕ್ತಮ್ — **ಶುದ್ಧಂ ನಿರ್ದೋಷಮಿತಿ** ॥ ನನು ಕೇ ತೇ ದೋಷಾಃ? ಕಥಂ ಚ ತದಭಾವಃ? ಇತ್ಯತೋ ದೋಷಾಭಾವಮುಪಪಾದಯಿತುಂ ಯತ್ 'ಆನಂದತೀರ್ಥಸ್ಯ ಪ್ರಮಾಣಮ್' ಇತಿ ಸಾಮಾನ್ಯತಃ ಪ್ರಮಾಣತ್ರಿತಯರೂಪತ್ವಮುಕ್ತಂ ತದೇವ ವಿವಿಚ್ಯ ದರ್ಶಯತಿ — **ವ್ಯಾಪ್ತಿರಿತ್ಯಾದಿನಾ** ॥

ಆನಂದತೀರ್ಥಸ್ಯ ಪ್ರತ್ಯಕ್ಷಪ್ರಮಾಣತ್ವಪಕ್ಷೇ ತಾವದೇವಮುಪಪಾದನೀಯಮ್ । ನಾತ್ರ ಆನಂದತೀರ್ಥೋ ಬಾಹ್ಯಪ್ರತ್ಯಕ್ಷತಯಾ ವಿವಕ್ಷಿತಃ । ತಸ್ಯಾಧ್ಯಾತ್ಮಿಕತತ್ತ್ವನಿರ್ಣಯಾರ್ಥತ್ವಾತ್ । ತೇಷಾಂ ಚ ಬಾಹ್ಯಪ್ರತ್ಯಕ್ಷಾವಿಷಯತ್ವಾತ್ । ಕಿಂತು ಸಾಕ್ಷಿಪ್ರತ್ಯಕ್ಷತಯಾ । ತಥಾ ಚ — ಯಸ್ಯಾನಂದತೀರ್ಥಾಖ್ಯಮೋಕ್ಷಯೋಗ್ಯಸಾಕ್ಷಿಪ್ರತ್ಯಕ್ಷಸ್ಯ 'ನಿಜೇ' ಸ್ವಕೀಯೇ 'ಪಕ್ಷೇ' 'ಪಕ್ಷಃ ಸಹಾಯ ಗರುದಂತಿಕಸಾಧ್ಯಭಿತ್ತಿಮಿತ್ರೇಷು ಚುಲ್ಲಿವಿವರೇ ನೃಪಕುಂಜರೇ' ಇತ್ಯಭಿಧಾನಾತ್ 'ಸಾಧ್ಯೇ' ಸಾಧ್ಯತ್ವಸ್ಯ ಸಾಧನಜ್ಞಾಪನೀಯತ್ವರೂಪತ್ವಾತ್ ಸ್ವಜ್ಞಾಪನೀಯೇ ಬಿಂಬರೂಪಾದಾವಿತಿ ಯಾವತ್ । ವಿಷಯಸಪ್ತಮೀಯಮ್ । 'ನಿಜೇನ ಮಹಸಾ' ಪ್ರತಿಬಂಧಾಭಾವೇ ಸ್ವರೂಪಸಾಮರ್ಥ್ಯೇನೈವ । 'ವ್ಯಾಪ್ತಿಃ' ವ್ಯಾಪನಂ ಮೋಕ್ಷಯೋಗ್ಯಂ ತೃಣಜೀವಮಾರಭ್ಯ ಚತುರ್ಮುಖಪರ್ಯಂತಂ ಯಸ್ಯ ಯಾವಂತೋ ಗುಣಾಃ ಕ್ರಿಯಾರೂಪಾಣಿ ಚ ಜ್ಞಾತುಂ ಧ್ಯಾತುಂ ಸಾಕ್ಷಾತ್ಕರ್ತುಂ ಚ ಯೋಗ್ಯಾಃ ತಸ್ಯ ತಾವತಾಂ ಗುಣಕ್ರಿಯಾದೀನಾಂ ಜ್ಞಾಪನಶಕ್ತಿರಿತಿ ಯಾವತ್ । ಅನೇನಾವಶ್ಯಂ ಯಾವತ್ ಸ್ವಜ್ಞಾಪನೀಯಂ ತಾವಚ್ಚಕ್ಯಭಾವಾಖ್ಯೋ ದೋಷೋ ನಾಸ್ತೀತಿ ಸೂಚಿತಮ್ ।

ಅಲ್ಲ! ಪ್ರಮಾಣ ಎಂದು ಅಭಿಮತವಾದ ಪ್ರತ್ಯಕ್ಷಾದಿಗಳಿಗೆ ಕೆಲವೊಮ್ಮೆ ಕಾಚಕಾಮಲಾದಿ-ದೋಷಗಳ ಸಂಬಂಧದಿಂದ ಅಪ್ರಾಮಾಣ್ಯವು ಕಂಡಿರುವುದರಿಂದ ಪ್ರಕೃತಪ್ರಮಾಣವಾದ ಆನಂದತೀರ್ಥರಿಗೂ ಕೆಲವೊಮ್ಮೆ ಆ ರೀತಿ ದೋಷಗಳ ಸಂಬಂಧಬಂದಾಗ ತತ್ವನಿರ್ಣಯಕ್ಕೆ ಅವರು ಕಾರಣವಾಗುವುದು ಹೇಗೆ? ಉತ್ತರ — ಶುದ್ಧಂ ನಿರ್ದೋಷಂ ಎಂದು.

ಅಲ್ಲ। ದೋಷಗಳು ಎಂದರೆ ಯಾವವು? ಅವುಗಳು ಏಕೆ ಆನಂದತೀರ್ಥರಲ್ಲಿ ಇಲ್ಲ? ಎಂಬುದನ್ನು ನಿರೂಪಣೆ ಮಾಡಲು (ಸಮರ್ಥಿಸಲು) ಆನಂದತೀರ್ಥರನ್ನು ಪ್ರಮಾಣ ಎಂದು ಸಾಮಾನ್ಯವಾಗಿ ಮೂರೂ ಪ್ರಮಾಣಗಳು ಅವರೇ ಎಂದು ಏನು ಹೇಳಿದ್ದಾರೆ; ಅದನ್ನು ವಿವೇಕದಿಂದ ವಿಮ-ರ್ಶಿಸುತ್ತಾರೆ — ವ್ಯಾಪ್ತಿಃ ಎಂಬುದಾಗಿ.

ಆನಂದತೀರ್ಥರು ಪ್ರತ್ಯಕ್ಷಪ್ರಮಾಣ ಎಂಬ ಪಕ್ಷದಲ್ಲಿ ಹೀಗೆ ಉಪಪಾದನೆ ಮಾಡಬೇಕು. ಆನಂದತೀರ್ಥರು ಬಾಹ್ಯಪ್ರತ್ಯಕ್ಷವಲ್ಲ. ಅವರಿಂದ ಆಧ್ಯಾತ್ಮಿಕ ತತ್ವಗಳ ನಿರ್ಣಯವಾಗುವುದರಿಂದ. ಅದಕ್ಕೋಸ್ಕರವೇ ಅವರ ಅವತಾರವಾದ್ದರಿಂದ. ಇನ್ನು ಆಧ್ಯಾತ್ಮಿಕತತ್ವಗಳಾದರೋ ಬಾಹ್ಯ-ಪ್ರತ್ಯಕ್ಷಕ್ಕೆ ವಿಷಯವಾಗದೇ ಸಾಕ್ಷಿಪ್ರತ್ಯಕ್ಷಕ್ಕೆ ವಿಷಯವಾಗಿವೆ. ಹಾಗಾಗಿ "ಯಸ್ಯ" - ಮೋಕ್ಷಕ್ಕೆ ಯೋಗ್ಯವಾದ ಆನಂದತೀರ್ಥರೆಂಬ ಸಾಕ್ಷಿಪ್ರತ್ಯಕ್ಷಕ್ಕೆ. 'ನಿಜೇ' - ತನಗೆ ಸಂಬಂಧಪಟ್ಟ, ಪಕ್ಷೇ - ಸಾಧ್ಯದಲ್ಲಿ, 'ಪಕ್ಷಃ ಸಹಾಯ-ಗರುದಂತಿಕ-ಸಾಧ್ಯಭಿತ್ತಿಮಿತ್ರೇಷು ಚುಲ್ಲಿವಿವರೇ ನೃಪಕುಂಜರೇ ಚ' ಎಂಬ ಅಭಿಧಾನವಿರುವುದರಿಂದ ಸಾಧ್ಯ ಎಂಬರ್ಥದ ಲಾಭವಾಗುವುದು. ಸಾಧ್ಯದಲ್ಲಿ ಸಾಧ್ಯತ್ವವನ್ನು ಅರ್ಥಾತ್ ಸಾಧನಜ್ಞಾಪನೀಯತ್ವವನ್ನು ತಿಳಿಯಬೇಕು. ಹಾಗಾಗಿ ಸಾಧ್ಯೇ ಅಂದರೆ ತಮ್ಮಿಂದ ತಿಳಿಸಿಕೊಡಲ್ಪಡುವ ಬಿಂಬರೂಪಾದಿಗಳಲ್ಲಿ ಎಂದು ತಾತ್ಪರ್ಯ. ಪ್ರತಿಯೊಂದು ಅನುಮಾನಗಳಲ್ಲಿ ಸಾಧ್ಯದಲ್ಲಿರುವ ಸಾಧ್ಯತ್ವವು ಸಾಧನದಿಂದ ಅರ್ಥಾತ್ ಹೇತುವಿನಿಂದ ತಿಳಿಯಲ್ಪಡುತ್ತದೆ. (ಸಾಧಿಸಲ್ಪಡುತ್ತದೆ).

'ಪಕ್ಷೇ' ಎಂಬಲ್ಲಿರುವ ಸಪ್ತಮೀಯು ವಿಷಯ ಅನ್ವುವ ಅರ್ಥದಲ್ಲಿದೆ. 'ನಿಜೇನ ಮಹಸಾ' – ಪ್ರತಿಬಂಧಕ ಇಲ್ಲದೇ ಸ್ವರೂಪಸಾಮರ್ಥ್ಯದಿಂದಲೇ ಎಂದರ್ಥ. ವ್ಯಾಪ್ತಿಃ ಅಂದರೆ ವ್ಯಾಪಿಸುವಿಕೆ. ಅರ್ಥಾತ್ ಮೋಕ್ಷಯೋಗ್ಯವಾದ ತೃಣಜೀವರನ್ನಾರಂಭಿಸಿ ಚತುರ್ಮುಖದೇವರ ಪರ್ಯಂತ ಯಾರಿಗೆ ಎಷ್ಟು ಗುಣಗಳು, ಕ್ರಿಯೆಗಳು, ರೂಪಗಳು ತಿಳಿಯಲು ಧ್ಯಾನಿಸಲು ಸಾಕ್ಷಾತ್ಕಾರ ಮಾಡಿ-ಕೊಳ್ಳಲು ಯೋಗ್ಯವಾಗಿವೆಯೋ ಅಷ್ಟೂ ಅವರ ಗುಣಕ್ರಿಯರೂಪಗಳನ್ನು ತಿಳಿಸುವ ಶಕ್ತಿ ಇದೆ ಎಂದು. ಇದರಿಂದ ಅವಶ್ಯವಾಗಿ ತಮ್ಮಿಂದ ಬೇರೆಯವರಿಗೆ ತಿಳಿಯಲ್ಪಡಬೇಕಾದ ಅಂಶವೇನಿದೆ ಅದನ್ನು ಸಮಗ್ರವಾಗಿ ತಿಳಿಸುವ ಶಕ್ತಿ ಇಲ್ಲ ಎಂಬ ದೋಷವು ಇರುವುದಿಲ್ಲ ಎಂದು ಸೂಚನೆ ಮಾಡಿದಂತಾಯಿತು.

### ಹಿಂದೆ ವ್ಯಾಪ್ತಿ ಎಂದು ಹೇಳಿ ಇಲ್ಲಿ ಸ್ಥಿತಿಃ ಎಂದಿದ್ದು ಏಕೆ?

(ಲಘುರಸರಂಜನೀ) — ತಥಾ ಯಸ್ಯ 'ಸಪಕ್ಷೇ' ಮೋಕ್ಷಾರ್ಥಂ ಜ್ಞೇಯತ್ವೇನ ಧರ್ಮೇಣ ಪಕ್ಷಸಮಾನೇಽನಂತರೂಪಗುಣಕ್ರಿಯಾದೌ ಪ್ರಮೇಯೇ ಸ್ಥಿತಿರ್ಜ್ಞಾಪಕತಯಾವಸ್ಥಾನಂ ಚ ಜ್ಞಾಪ-ಕತ್ವಮಾತ್ರಮಿತಿ ಯಾವತ್ । ಅತ್ರ ಪಕ್ಷಶಬ್ದಾರ್ಥಸ್ಯ ಕ್ಲೃಪ್ತಗುಣಕ್ರಿಯಾದೇಃ ಪೃಥಕ್ ಪೃಥಗ್

ಜ್ಞಾನಮಾವಶ್ಯಕಮ್ । ತಥಾ ಜ್ಞಾನಂ ವಿನಾ ಮೋಕ್ಷಾಸಿದ್ಧೇಃ ಸಪಕ್ಷಶಬ್ದಾರ್ಥಸ್ಯಾನಂತರೂಪ-ಗುಣಕ್ರಿಯಾದೇಸ್ತು ನ ತಥಾ ಜ್ಞಾನಮಾವಶ್ಯಕಮ್ । ಅಶಕ್ಯತ್ವಾದಯೋಗ್ಯತ್ವಾಚ್ಚ । ಕಿಂತು ಕೇಷಾಂಚಿತ್ ಕ್ರಿಯಾಸಾಮಾನ್ಯೇನ ಕೇಷಾಂಚಿದ್ಗುಣಸಾಮಾನ್ಯೇನ ಕೇಷಾಂಚಿದ್ ರೂಪ-ಸಾಮಾನ್ಯೇನ ಇತ್ಯಾದಿರೂಪೇಣ ಜ್ಞಾನಮಾತ್ರಮಿತೀಮಂ ವಿಶೇಷಂ ದ್ಯೋತಯಿತುಂ ತತ್ರ 'ವ್ಯಾಪ್ತಿ'ರಿತಿ ಅತ್ರ 'ಸ್ಥಿತಿ'ರಿತಿ ಚೋಕ್ತಮ್ । ಅನೇನಾವಶ್ಯಕಪ್ರಮೇಯಜ್ಞಾಪಕಸ್ಯಾಪಿ ತದುಪ-ಯುಕ್ತಪ್ರಮೇಯಜ್ಞಾಪನಾಭಾವೋ ದೋಷಃ ಸೋಽಪಿ ನಾಸ್ತೀತಿ ಸೂಚಿತಮ್ ।

ಹಾಗೆಯೇ 'ಯಸ್ಯ'- ಯಾರಿಗೆ 'ಸಪಕ್ಷೇ'- ಮೋಕ್ಷಕ್ಕೋಸ್ಕರ ತಿಳಿಯಬೇಕಾದ್ದರಿಂದ ಪಕ್ಷಕ್ಕೆ ಸಮಾನವಾದ ಅನಂತಗುಣರೂಪಕ್ರಿಯಾ ಮೊದಲಾದ ಪ್ರಮೇಯದಲ್ಲಿ 'ಸ್ಥಿತಿಃ'- ಜ್ಞಾಪಕವಾಗಿ ಇದ್ದಾರೆ. ಇಲ್ಲಿ ಪಕ್ಷಶಬ್ದದ ಅರ್ಥವಾದ ಈಗಾಗಲೇ ಸಿದ್ಧವಾದ ರೂಪಗುಣಕ್ರಿಯೆಮೊದಲಾ-ದವುಗಳ ಜ್ಞಾನವು ಪ್ರತ್ಯೇಕ ಪ್ರತ್ಯೇಕವಾಗಿರುವುದು ಆವಶ್ಯಕ. ಹಾಗೆ ಜ್ಞಾನವಿಲ್ಲದೇ ಮೋಕ್ಷಸಿಗುವುದಿಲ್ಲವಾದ್ದರಿಂದ ಸಪಕ್ಷಶಬ್ದದ ಅರ್ಥವಾದ ಅನಂತರೂಪಗುಣಕ್ರಿಯಾದಿಗಳ ಜ್ಞಾನ ಹಾಗೆ ಆವಶ್ಯಕವಲ್ಲ. ಅಶಕ್ಯ ಹಾಗೂ ಅಯೋಗ್ಯವಾದ್ದರಿಂದಲೂ ಹೊರತಾಗಿ ಕೆಲವರಿಗೆ ಕ್ರಿಯಾಸಾಮಾನ್ಯೇನ, ಕೆಲವರಿಗೆ ಗುಣಸಾಮಾನ್ಯೇನ, ಕೆಲವರಿಗೆ ರೂಪಸಾಮಾನ್ಯೇನ ಮುಂತಾದ ರೀತಿಯಿಂದ ಜ್ಞಾನವಿರುವುದು ಎಂಬ ಈ ವಿಶೇಷವನ್ನು ತೋರಿಸಲು ಅಲ್ಲಿ ವ್ಯಾಪ್ತಿ ಎಂದು ಹೇಳಿ ಇಲ್ಲಿ ಮಾತ್ರ ಸ್ಥಿತಿ ಎಂದು ಹೇಳಿದ್ದಾರೆ. ಅಂದರೆ ಕೆಲವರು ಭಗವಂತನ ಎಲ್ಲ ಗುಣಗಳ ಜ್ಞಾನವನ್ನು ಪಡೆದಿರುವರು. ಕೆಲವರು ಕ್ರಿಯಾಜ್ಞಾನ, ಕೆಲವರು ರೂಪಜ್ಞಾನ ಎಂದು ಭಾವ. ಇದರಿಂದ ಆವಶ್ಯಕವಾದ ಪ್ರಮೇಯಗಳನ್ನು ತಿಳಿಸಬೇಕಾಗಿದ್ದು. ಅಂತಹ ಪ್ರಮೇಯಗಳನ್ನು ತಿಳಿಸದೇ ಇರುವಿಕೆ ಎಂಬ ದೋಷವು ಇಲ್ಲ ಎಂದು ಸೂಚಿಸಿದಂತಾಯಿತು.

## ವಿಪಕ್ಷತೋ ವ್ಯಾವೃತ್ತಿಃ ಹಾಗೂ ಬಾಧಿತೇ ನ ಸಕ್ತಿಃ

(ಲಘುರಸರಂಜನೀ) — ತಥಾ ಯಸ್ಯ ವಿಪಕ್ಷತಃ ಉಕ್ತವಿಪರೀತಪಕ್ಷಾತ್ ಸ್ವಾತಂತ್ರ್ಯೇಣ ವಿಷ್ಣ್ವನ್ಯದೇವತೋಪಾಸನಾದೇರ್ವ್ಯಾವೃತ್ತಿಃ ಸರ್ವಥಾ ತತ್ರಾಪ್ರವೃತ್ತಿಶ್ಚ । ಅನೇನ ದೇವಾನಾಂ ವಿಷ್ಣುಸಾಮ್ಯೇನ ಜ್ಞಾಪನರೂಪೋ ದೋಷೋ ನಾಸ್ತೀತಿ ಸೂಚಿತಮ್ । ನನು ಯದಿ ಸಾಕ್ಷಿ-ಪ್ರತ್ಯಕ್ಷಸ್ಯ ಅತಥ್ಯವಿತಥ್ಯಪ್ರದರ್ಶನೇಽಪಿ ಶಕ್ತಿಸ್ತದಾ ಕಥಂ ತಜ್ಜ್ಞಾಪಿತೇ ಅನ್ಯತ್ರಾಪ್ಯಾಶ್ವಾಸ ಇತ್ಯತ ಉಕ್ತಂ 'ಯಸ್ಯ ಬಾಧಿತೇ ವಿಷ್ಣೌ ಪ್ರಮಾಣವಿರುದ್ಧೇ ವಿಷಯೇ ಅತಥ್ಯಾದೌ ಸಕ್ತಿಃ ಸಂಬಂಧೋ ನ ವಾ' ಇತಿ । 'ಅಥ' – ವಿಶೇಷಣಾಂತರಸಮುಚ್ಚಯಾರ್ಥಃ । ಸಾಕ್ಷಿಪ್ರತ್ಯಕ್ಷಸ್ಯ ನಿರ್ದೋಷತ್ವಾತ್ ಕಾಲತ್ರಯೇಽಪಿ ವಿಷ್ಣೌ ಪ್ರಮಾಣಬಾಧಿತಾರ್ಥಗ್ರಾಹಿತ್ವಂ ನಾಸ್ತೀತಿ 'ವೈ'ಶಬ್ದೇನಾಹ ।

ಯಥೋಕ್ತಮ್ — 'ಸಾಕ್ಷಿಸಿದ್ಧಸ್ಯ ನ ಕ್ವಾಪಿ ಬಾಧ್ಯತ್ವಂ ತದದೋಷತಃ' ಇತಿ । ಯಃ ಕದಾಚಿತ್ ತದವಭಾಸಃ ಸಮಾನದರ್ಶನೇನೈವ । ಯಥೋಕ್ತಮ್ — 'ಯತ್ಕ್ವಚಿತ್ ವ್ಯಭಿಚಾರಿ ಸ್ಯಾತ್ ದರ್ಶನಂ ಮಾನಸಂ ಹಿ ತತ್' ಇತಿ । ಅನೇನಾಶ್ವಾಸಜನಕಾತಥ್ಯಾದಿಪ್ರದರ್ಶನರೂಪೋ ದೋಷೋ ನಾಸ್ತೀತಿ ಸೂಚಿತಮ್ ।

ಹಾಗೆ ಯಾರಿಗೆ 'ವಿಪಕ್ಷತಃ' - ಪಕ್ಷಕ್ಕಿಂತ ವಿರುದ್ಧವಾದ ಸ್ವತಂತ್ರವಾಗಿ ವಿಷ್ಣುವನ್ನುಬಿಟ್ಟು ಬೇರೆ ದೇವತೆಗಳ ಉಪಾಸನಾದಿಗಳಿಂದ ಅಂದರೆ ವಿಪಕ್ಷದಿಂದ ವ್ಯಾವೃತ್ತಿಃ - ಎಂದಿಗೂ ಪ್ರವೃತ್ತಿ-ಮಾಡದಿರುವಿಕೆಯು. ಇದರಿಂದ ದೇವತೆಗಳು ವಿಷ್ಣುಸಮಾನವಾಗಿ ಇದ್ದಾರೆ ಎಂಬ ತಿಳಿಸುವಿಕೆ ಎಂಬ ದೋಷವು ಇರುವುದಿಲ್ಲ ಎಂದು ಸೂಚಿಸಿದಂತಾಯಿತು. ಅಲ್ಲ। ಒಂದುವೇಳೆ ಸಾಕ್ಷಿಪ್ರತ್ಯಕ್ಷಕ್ಕೆ ಅಸತ್ಯ ಮಿಥ್ಯಾ ಇವುಗಳನ್ನು ತೋರಿಸುವ ಶಕ್ತಿಯಿದ್ದರೆ ಆಗ ಸಾಕ್ಷಿಪ್ರತ್ಯಕ್ಷದಿಂದ ತಿಳಿಯುವ ಬೇರೆ ವಸ್ತುಗಳಲ್ಲಿ ವಿಶ್ವಾಸ ಹೇಗೆ? ಎನ್ನುವ ಪ್ರಶ್ನೆಗೆ ಉತ್ತರವಿದು — 'ಯಸ್ಯ' - ಯಾರಿಗೆ ವಿಷ್ಣುವಿನ ವಿಷಯದಲ್ಲಿ ವಿರುದ್ಧವಾದ ಪ್ರಮಾಣಗಳಿಂದ ತಿಳಿಯಲ್ಪಡುವ ಅಸತ್ಯತ್ವ ಮಿಥ್ಯಾತ್ವಗಳಲ್ಲಿ, ಸಕ್ತಿಃ - ಸಂಬಂಧವು ಇರುವುದಿಲ್ಲ. ಈ ಶ್ಲೋಕದಲ್ಲಿರುವ ಅಥ ಎಂಬ ಪದವು ಬೇರೆ ವಿಶೇಷಣಗಳನ್ನು ಸಮುಚ್ಚಯ ಮಾಡಲು ಇದೆ. ಸಾಕ್ಷಿಪ್ರತ್ಯಕ್ಷವು ದೋಷರಹಿತವಾದ್ದರಿಂದ ಮೂರು ಕಾಲದಲ್ಲಿಯೂ ವಿಷ್ಣುವಿನಲ್ಲಿ ಪ್ರಮಾಣಬಾಧಿತವಾದ ಅರ್ಥವನ್ನು ಗ್ರಹಿಸುವುದಿಲ್ಲ ಎಂಬ ಅಂಶವನ್ನು ವೈ ಎಂಬ ಶಬ್ದದಿಂದ ಹೇಳಿದ್ದಾರೆ. 'ಸಾಕ್ಷಿಸಿದ್ಧಸ್ಯ ನ ಕ್ವಾಪಿ ಬಾಧ್ಯತ್ವಂ ತದದೋಷತಃ' (ಅನು.ವ್ಯಾ.1-4-94) ಎಂದು ಯಾವಾಗಲಾದರೂ ಒಮ್ಮೆ ಪ್ರಮಾಣಬಾಧಿತಾರ್ಥದ ಜ್ಞಾನಬಂದರೆ ಅದು ಮಾನಸದರ್ಶನದಿಂದಲೇ(ಮನಸ್ಸಿನಿಂದಲೇ) ಎಂದು ತಿಳಿಯಬೇಕು. 'ಯತ್ಕ್ವಚಿತ್ ವ್ಯಭಿಚಾರಿ ಸ್ಯಾತ್ ದರ್ಶನಂ ಮಾನಸಂ ಹಿ ತತ್' (ಅನುವ್ಯಾ.3-4-143). ಇದರಿಂದ ವಿಶ್ವಾಸವನ್ನು ತಂದು-ಕೊಡುವ ಅತಥ್ಯಾದಿಪ್ರದರ್ಶನರೂಪವಾದ ದೋಷವು ಇರುವುದಿಲ್ಲ ಎಂದು ಸೂಚಿಸಿದಂತಾಯಿತು.

## ಸಾಕ್ಷಿಯು ಸದಾ ನಿರ್ದುಷ್ಟ

** क्वापि काले तस्य साक्षिणः अदोषत्वात् । औत्सर्गिकं हि प्रत्ययानां प्रामाण्यम् । अप्रामाण्यं तु दोषापवादात् । नच साक्षिज्ञानं दोषजन्यम्, तस्य अनादित्वात् । एवमेवायथार्थत्वे मुक्तावपि (तथात्व)तथाप्रसङ्गात् । अविद्यादोषसंसर्गात्साक्षिणः बाध्यार्थ-प्रतिभास(सि)त्वमिति चेन्न, अविद्यासम्बन्धस्य त्वन्मते अनुपपत्तेः उक्तत्वात् । अस्माभिरपि अविद्यायाः कार्यान्तरस्यैव अभ्युपगतत्वादिति । (ಸುಧಾ)

** यद्दर्शनं क्वचिच्छुक्तिरजतादौ विषये व्यभिचारि बाधितं स्यात्तच्चक्षुरादिकरणकं मनः-परिणतिरूपमेव न साक्षिरूपम्। कुत एतत् । मानसदर्शनस्य बाध्यत्वाङ्गीकारेऽनिष्टा-

ಜ್ಞಾನಮಾವಶ್ಯಕಮ್ । ತಥಾ ಜ್ಞಾನಂ ವಿನಾ ಮೋಕ್ಷಾಸಿದ್ಧೇಃ ಸಪಕ್ಷಶಬ್ದಾರ್ಥಸ್ಯಾನಂತರೂಪ-ಗುಣಕ್ರಿಯಾದೇಸ್ತು ನ ತಥಾ ಜ್ಞಾನಮಾವಶ್ಯಕಮ್ । ಅಶಕ್ಯತ್ವಾದಯೋಗ್ಯತ್ವಾಚ್ಚ । ಕಿಂತು ಕೇಷಾಂಚಿತ್ ಕ್ರಿಯಾಸಾಮಾನ್ಯೇನ ಕೇಷಾಂಚಿದ್ಗುಣಸಾಮಾನ್ಯೇನ ಕೇಷಾಂಚಿದ್ ರೂಪ-ಸಾಮಾನ್ಯೇನ ಇತ್ಯಾದಿರೂಪೇಣ ಜ್ಞಾನಮಾತ್ರಮಿತೀಮಂ ವಿಶೇಷಂ ದ್ಯೋತಯಿತುಂ ತತ್ರ 'ವ್ಯಾಪ್ತಿ'ರಿತಿ ಅತ್ರ 'ಸ್ಥಿತಿ'ರಿತಿ ಚೋಕ್ತಮ್ । ಅನೇನಾವಶ್ಯಕಪ್ರಮೇಯಜ್ಞಾಪಕಸ್ಯಾಪಿ ತದುಪ-ಯುಕ್ತಪ್ರಮೇಯಜ್ಞಾಪನಾಭಾವೋ ದೋಷಃ ಸೋಽಪಿ ನಾಸ್ತೀತಿ ಸೂಚಿತಮ್ ।

ಹಾಗೆಯೇ 'ಯಸ್ಯ'- ಯಾರಿಗೆ 'ಸಪಕ್ಷೇ'- ಮೋಕ್ಷಕ್ಕೋಸ್ಕರ ತಿಳಿಯಬೇಕಾದ್ದರಿಂದ ಪಕ್ಷಕ್ಕೆ ಸಮಾನವಾದ ಅನಂತಗುಣರೂಪಕ್ರಿಯಾ ಮೊದಲಾದ ಪ್ರಮೇಯದಲ್ಲಿ 'ಸ್ಥಿತಿಃ'- ಜ್ಞಾಪಕವಾಗಿ ಇದ್ದಾರೆ. ಇಲ್ಲಿ ಪಕ್ಷಶಬ್ದದ ಅರ್ಥವಾದ ಈಗಾಗಲೇ ಸಿದ್ಧವಾದ ರೂಪಗುಣಕ್ರಿಯೆಮೊದಲಾ-ದವುಗಳ ಜ್ಞಾನವು ಪ್ರತ್ಯೇಕ ಪ್ರತ್ಯೇಕವಾಗಿರುವುದು ಆವಶ್ಯಕ. ಹಾಗೆ ಜ್ಞಾನವಿಲ್ಲದೇ ಮೋಕ್ಷಸಿಗುವುದಿಲ್ಲವಾದ್ದರಿಂದ ಸಪಕ್ಷಶಬ್ದದ ಅರ್ಥವಾದ ಅನಂತರೂಪಗುಣಕ್ರಿಯಾದಿಗಳ ಜ್ಞಾನ ಹಾಗೆ ಆವಶ್ಯಕವಲ್ಲ. ಅಶಕ್ಯ ಹಾಗೂ ಅಯೋಗ್ಯವಾದ್ದರಿಂದಲೂ ಹೊರತಾಗಿ ಕೆಲವರಿಗೆ ಕ್ರಿಯಾಸಾಮಾನ್ಯೇನ, ಕೆಲವರಿಗೆ ಗುಣಸಾಮಾನ್ಯೇನ, ಕೆಲವರಿಗೆ ರೂಪಸಾಮಾನ್ಯೇನ ಮುಂತಾದ ರೀತಿಯಿಂದ ಜ್ಞಾನವಿರುವುದು ಎಂಬ ಈ ವಿಶೇಷವನ್ನು ತೋರಿಸಲು ಅಲ್ಲಿ ವ್ಯಾಪ್ತಿ ಎಂದು ಹೇಳಿ ಇಲ್ಲಿ ಮಾತ್ರ ಸ್ಥಿತಿ ಎಂದು ಹೇಳಿದ್ದಾರೆ. ಅಂದರೆ ಕೆಲವರು ಭಗವಂತನ ಎಲ್ಲ ಗುಣಗಳ ಜ್ಞಾನವನ್ನು ಪಡೆದಿರುವರು. ಕೆಲವರು ಕ್ರಿಯಾಜ್ಞಾನ, ಕೆಲವರು ರೂಪಜ್ಞಾನ ಎಂದು ಭಾವ. ಇದರಿಂದ ಆವಶ್ಯಕವಾದ ಪ್ರಮೇಯಗಳನ್ನು ತಿಳಿಸಬೇಕಾಗಿದ್ದು. ಅಂತಹ ಪ್ರಮೇಯಗಳನ್ನು ತಿಳಿಸದೇ ಇರುವಿಕೆ ಎಂಬ ದೋಷವು ಇಲ್ಲ ಎಂದು ಸೂಚಿಸಿದಂತಾಯಿತು.

## ವಿಪಕ್ಷತೋ ವ್ಯಾವೃತ್ತಿಃ ಹಾಗೂ ಬಾಧಿತೇ ನ ಸಕ್ತಿಃ

(ಲಘುರಸರಂಜನೀ) — ತಥಾ ಯಸ್ಯ ವಿಪಕ್ಷತಃ ಉಕ್ತವಿಪರೀತಪಕ್ಷಾತ್ ಸ್ವಾತಂತ್ರ್ಯೇಣ ವಿಷ್ಣ್ವನ್ಯದೇವತೋಪಾಸನಾದೇರ್ವ್ಯಾವೃತ್ತಿಃ ಸರ್ವಥಾ ತತ್ರಾಪ್ರವೃತ್ತಿಶ್ಚ । ಅನೇನ ದೇವಾನಾಂ ವಿಷ್ಣುಸಾಮ್ಯೇನ ಜ್ಞಾಪನರೂಪೋ ದೋಷೋ ನಾಸ್ತೀತಿ ಸೂಚಿತಮ್ । ನನು ಯದಿ ಸಾಕ್ಷಿ-ಪ್ರತ್ಯಕ್ಷಸ್ಯ ಅತಥ್ಯವಿತಥ್ಯಪ್ರದರ್ಶನೇಽಪಿ ಶಕ್ತಿಸ್ತದಾ ಕಥಂ ತಜ್ಜ್ಞಾಪಿತೇ ಅನ್ಯತ್ರಾಪ್ಯಾಶ್ವಾಸ ಇತ್ಯತ ಉಕ್ತಂ 'ಯಸ್ಯ ಬಾಧಿತೇ ವಿಷ್ಣೌ ಪ್ರಮಾಣವಿರುದ್ಧೇ ವಿಷಯೇ ಅತಥ್ಯಾದೌ ಸಕ್ತಿಃ ಸಂಬಂಧೋ ನ ವಾ' ಇತಿ । 'ಅಥ' – ವಿಶೇಷಣಾಂತರಸಮುಚ್ಚಯಾರ್ಥಃ । ಸಾಕ್ಷಿಪ್ರತ್ಯಕ್ಷಸ್ಯ ನಿರ್ದೋಷತ್ವಾತ್ ಕಾಲತ್ರಯೇಽಪಿ ವಿಷ್ಣೌ ಪ್ರಮಾಣಬಾಧಿತಾರ್ಥಗ್ರಾಹಿತ್ವಂ ನಾಸ್ತೀತಿ 'ವೈ'ಶಬ್ದೇನಾಹ ।

ಯಥೋಕ್ತಮ್ — 'ಸಾಕ್ಷಿಸಿದ್ಧಸ್ಯ ನ ಕ್ವಾಪಿ ಬಾಧ್ಯತ್ವಂ ತದದೋಷತಃ' ಇತಿ । ಯಃ ಕದಾಚಿತ್ ತದವಭಾಸಃ ಸಮಾನದರ್ಶನೇನೈವ । ಯಥೋಕ್ತಮ್ — 'ಯತ್ಕ್ವಚಿತ್ ವ್ಯಭಿಚಾರಿ ಸ್ಯಾತ್ ದರ್ಶನಂ ಮಾನಸಂ ಹಿ ತತ್' ಇತಿ । ಅನೇನಾಶ್ವಾಸಜನಕಾತಥ್ಯಾದಿಪ್ರದರ್ಶನರೂಪೋ ದೋಷೋ ನಾಸ್ತೀತಿ ಸೂಚಿತಮ್ ।

ಹಾಗೆ ಯಾರಿಗೆ 'ವಿಪಕ್ಷತಃ' - ಪಕ್ಷಕ್ಕಿಂತ ವಿರುದ್ಧವಾದ ಸ್ವತಂತ್ರವಾಗಿ ವಿಷ್ಣುವನ್ನುಬಿಟ್ಟು ಬೇರೆ ದೇವತೆಗಳ ಉಪಾಸನಾದಿಗಳಿಂದ ಅಂದರೆ ವಿಪಕ್ಷದಿಂದ ವ್ಯಾವೃತ್ತಿಃ - ಎಂದಿಗೂ ಪ್ರವೃತ್ತಿ-ಮಾಡದಿರುವಿಕೆಯು. ಇದರಿಂದ ದೇವತೆಗಳು ವಿಷ್ಣುಸಮಾನವಾಗಿ ಇದ್ದಾರೆ ಎಂಬ ತಿಳಿಸುವಿಕೆ ಎಂಬ ದೋಷವು ಇರುವುದಿಲ್ಲ ಎಂದು ಸೂಚಿಸಿದಂತಾಯಿತು. ಅಲ್ಲ। ಒಂದುವೇಳೆ ಸಾಕ್ಷಿಪ್ರತ್ಯಕ್ಷಕ್ಕೆ ಅಸತ್ಯ ಮಿಥ್ಯಾ ಇವುಗಳನ್ನು ತೋರಿಸುವ ಶಕ್ತಿಯಿದ್ದರೆ ಆಗ ಸಾಕ್ಷಿಪ್ರತ್ಯಕ್ಷದಿಂದ ತಿಳಿಯುವ ಬೇರೆ ವಸ್ತುಗಳಲ್ಲಿ ವಿಶ್ವಾಸ ಹೇಗೆ? ಎನ್ನುವ ಪ್ರಶ್ನೆಗೆ ಉತ್ತರವಿದು — 'ಯಸ್ಯ' - ಯಾರಿಗೆ ವಿಷ್ಣುವಿನ ವಿಷಯದಲ್ಲಿ ವಿರುದ್ಧವಾದ ಪ್ರಮಾಣಗಳಿಂದ ತಿಳಿಯಲ್ಪಡುವ ಅಸತ್ಯತ್ವ ಮಿಥ್ಯಾತ್ವಗಳಲ್ಲಿ, ಸಕ್ತಿಃ - ಸಂಬಂಧವು ಇರುವುದಿಲ್ಲ. ಈ ಶ್ಲೋಕದಲ್ಲಿರುವ ಅಥ ಎಂಬ ಪದವು ಬೇರೆ ವಿಶೇಷಣಗಳನ್ನು ಸಮುಚ್ಚಯ ಮಾಡಲು ಇದೆ. ಸಾಕ್ಷಿಪ್ರತ್ಯಕ್ಷವು ದೋಷರಹಿತವಾದ್ದರಿಂದ ಮೂರು ಕಾಲದಲ್ಲಿಯೂ ವಿಷ್ಣುವಿನಲ್ಲಿ ಪ್ರಮಾಣಬಾಧಿತವಾದ ಅರ್ಥವನ್ನು ಗ್ರಹಿಸುವುದಿಲ್ಲ ಎಂಬ ಅಂಶವನ್ನು ವೈ ಎಂಬ ಶಬ್ದದಿಂದ ಹೇಳಿದ್ದಾರೆ. 'ಸಾಕ್ಷಿಸಿದ್ಧಸ್ಯ ನ ಕ್ವಾಪಿ ಬಾಧ್ಯತ್ವಂ ತದದೋಷತಃ' (ಅನು.ವ್ಯಾ.1-4-94) ಎಂದು ಯಾವಾಗಲಾದರೂ ಒಮ್ಮೆ ಪ್ರಮಾಣಬಾಧಿತಾರ್ಥದ ಜ್ಞಾನಬಂದರೆ ಅದು ಮಾನಸದರ್ಶನದಿಂದಲೇ(ಮನಸ್ಸಿನಿಂದಲೇ) ಎಂದು ತಿಳಿಯಬೇಕು. 'ಯತ್ಕ್ವಚಿತ್ ವ್ಯಭಿಚಾರಿ ಸ್ಯಾತ್ ದರ್ಶನಂ ಮಾನಸಂ ಹಿ ತತ್' (ಅನುವ್ಯಾ.3-4-143). ಇದರಿಂದ ವಿಶ್ವಾಸವನ್ನು ತಂದು-ಕೊಡುವ ಅತಥ್ಯಾದಿಪ್ರದರ್ಶನರೂಪವಾದ ದೋಷವು ಇರುವುದಿಲ್ಲ ಎಂದು ಸೂಚಿಸಿದಂತಾಯಿತು.

## ಸಾಕ್ಷಿಯು ಸದಾ ನಿರ್ದುಷ್ಟ

** क्वापि काले तस्य साक्षिणः अदोषत्वात् । औत्सर्गिकं हि प्रत्ययानां प्रामाण्यम् । अप्रामाण्यं तु दोषापवादात् । नच साक्षिज्ञानं दोषजन्यम्, तस्य अनादित्वात् । एवमेवायथार्थत्वे मुक्तावपि (तथात्व)तथाप्रसङ्गात् । अविद्यादोषसंसर्गात्साक्षिणः बाध्यार्थ-प्रतिभास(सि)त्वमिति चेन्न, अविद्यासम्बन्धस्य त्वन्मते अनुपपत्तेः उक्तत्वात् । अस्माभिरपि अविद्यायाः कार्यान्तरस्यैव अभ्युपगतत्वादिति । (ಸುಧಾ)

** यद्दर्शनं क्वचिच्छुक्तिरजतादौ विषये व्यभिचारि बाधितं स्यात्तच्चक्षुरादिकरणकं मनः-परिणतिरूपमेव न साक्षिरूपम्। कुत एतत् । मानसदर्शनस्य बाध्यत्वाङ्गीकारेऽनिष्टा-

भावात् । साक्षिणस्तु तथात्वे सर्वव्यवहारविलोपप्रसङ्गस्योक्तत्वात्। तदिदमुक्तं हिशब्देन । सम्भवति चास्य मानसत्वमन्यथाख्यातिसमर्थनादिति । (ಸುಧಾ)

– ಸಾಕ್ಷಿಯು ಸದಾ ದೋಷರಹಿತವಾಗಿದೆ. ಅದರಿಂದ ಜನ್ಯವಾದ ಜ್ಞಾನವು ಯಾವತ್ತೂ ಪ್ರಮಾಣವೇ. ಅಲ್ಲ ಹಾಗಾದರೆ ಶುಕ್ತಿರಜತದ ವಿಷಯದಲ್ಲಿ ಬಂದ ಜ್ಞಾನವು ಸಾಕ್ಷಿರೂಪವಾದಲ್ಲಿ ಆ ಜ್ಞಾನವು ಪ್ರಮಾಣವಾಗಿಲ್ಲವಲ್ಲ ಎಂದರೆ ಉತ್ತರ – ಅಲ್ಲಿ ಬಾಧಿತವಾದ ಜ್ಞಾನವು ಚಕ್ಷುಸ್ಸನ್ನು ಕರಣ ಮಾಡಿಕೊಂಡು ಬಂದ ಮನಃಪರಿಣತಿರೂಪವಾದ ಜ್ಞಾನವೇ ಹೊರತು ಸಾಕ್ಷಿರೂಪವಲ್ಲ. ಏಕೆಂದರೆ, ಸಾಕ್ಷಿಯು ಬಾಧ್ಯ ಎಂದರೆ ಸಕಲವ್ಯವಹಾರಲೋಪಪ್ರಸಂಗ ಬಂದೀತು. ಇನ್ನು ಸಾಕ್ಷಿಜ್ಞಾನವು ದೋಷಜನ್ಯವಲ್ಲ ಅನಾದಿಯಾದ್ದರಿಂದ ಎಂದು ತಿಳಿಯಬೇಕು. ಮನಸ್ಸಿನಲ್ಲಿ ರಾಗಾದಿದೋಷಗಳು ಸಂಭಾವಿತವಾದ್ದರಿಂದ ಮಾನಸಜ್ಞಾನವು ಅಪ್ರಮಾಣವಾಗಬಹುದು.

## ಸಾಕ್ಷಿಗೆ ಸಹಜಶಕ್ತಿಪ್ರತಿಬಂಧಕತ್ವ ಹಾಗೂ ವಿಪರೀತಕಾರ್ಯಜನಕಶಕ್ತ್ಯಂತರೋತ್ಪಾದಕತ್ವ ಇದೆಯೇ

(ಲಘುರಸರಂಜನೀ) – ನನ್ವಸ್ತು ಏವಂವಿಧಾ ಶಕ್ತಿಃ ಸಾಕ್ಷಿಪ್ರತ್ಯಕ್ಷಸ್ಯ ಸ್ವಭಾವತಃ । ತಥಾಪ್ಯಾಗಂತುಕದೋಷಸಂಬಂಧಾತ್ ಕದಾಚಿತ್ ಪೂರ್ವಶಕ್ತಿಪ್ರತಿಬಂಧೋ ವಾ ವಿಪರೀತಕಾರ್ಯಜನನಶಕ್ತ್ಯುತ್ಪಾದೋ ವಾ ಕಿಂ ನ ಸ್ಯಾತ್, ಚಕ್ಷುರಾದೌ ತಥಾ ದರ್ಶನಾತ್? ಇತ್ಯತ ಉಕ್ತಂ – ಯಸ್ಯ ಪ್ರತಿಪಕ್ಷಸ್ಯ ಪೂರ್ವಶಕ್ತಿಪ್ರತಿಬಂಧಕಸ್ಯ ಶಕ್ತ್ಯಂತರಾಧಾಯಕಸ್ಯ ವಾ ದೋಷಸ್ಯ ಮುಕ್ತಿ-ರ್ಯೋಗಃ ಸ್ವಸ್ಮಿನ್ ಸಂಬಂಧೋ ನೈವಾಸ್ತೀತಿ –

'ಸಾಕ್ಷೀ ನಿರ್ದೋಷ ಏವೈಕಃ ಸದಾಂಗೀಕಾರ್ಯ ಏವ ನಃ ।
ನಿರ್ದೋಷತ್ವಾತಿನಿಯಮಾತ್ ತದ್ವಲಿಷ್ಠತಮಂ ಮತಮ್'

ಇತ್ಯಾದೇಃ ಕಾಲತ್ರಯೇಽಪಿ ಸಾಕ್ಷಿಪ್ರತ್ಯಕ್ಷಸ್ಯ ದೋಷಸಂಬಂಧ ಏವ ನಾಸ್ತೀತಿ 'ಏವ'ಶಬ್ದೇನಾಹ । ಅನೇನ ಪ್ರತಿಪಕ್ಷಯೋಗಾತ್ ಕದಾಚಿದಪಿ ಪ್ರತಿಬಧ್ಯತ್ವಾದಿರೂಪೋ ದೋಷೋ ನಾಸ್ತೀತಿ ಸೂಚಿತಮಿತಿ । ನನು ಸಾಕ್ಷಿಣೋಽಪಿ ಸಹಜಶಕ್ತಿಪ್ರತಿಬಂಧೋ ವಿಪರೀತಕಾರ್ಯಜನಕ-ಶಕ್ತ್ಯಂತರೋತ್ಪಾದಕತ್ವಾನ್ಯತ್ರೋಕ್ತಃ । ಯಥೋಕ್ತಂ ವಿಷ್ಣುತತ್ತ್ವನಿರ್ಣಯಟೀಕಾಯಾಮ್ – 'ಬುದ್ಧಿದೋಷನಿರಾಸಮಾತ್ರಕಾರಣತ್ವಾತ್ ಯುಕ್ತೀನಾಮ್' ಇತಿ ಮೂಲವ್ಯಾಖ್ಯಾನಾವಸರೇ, "ಅಯಮಭಿಸಂಧಿಃ । ಸಾಕ್ಷ್ಯೈವ ಜ್ಞಾನಂ ತತ್ಪ್ರಾಮಾಣ್ಯಂ ಚ ವಿಷಯೀಕರ್ತುಂ ಕ್ಷಮಃ । ಕಿಂತು ಕಾರಣಾಂತರೋಪನಿಪಾತಜೇನ ಮಾನಸಾಪರಾಧೇನ ಪ್ರತಿಬದ್ಧೋ ಜ್ಞಾನಮಾತ್ರಂ ಗೃಹೀತ್ವಾ ಪ್ರಾಮಾಣ್ಯಗ್ರಹಣಸ್ಯ ನೇಷ್ಟೇ । ಯಥಾ ಸ್ವಯಮೇವ ಗತಿಸಮರ್ಥೋಽಪಿ ಗಜೋ ಗೋಕ್ಷುರಕಾದಿನಾ ಪ್ರತಿಬದ್ಧೋ ನ ಚಲಿತುಂ ಕ್ಷಮತ" – ಇತಿ ।

ಈ ರೀತಿಯಾದ ಶಕ್ತಿಯು ಸಾಕ್ಷಿಪ್ರತ್ಯಕ್ಷಕ್ಕೆ ಸ್ವಾಭಾವಿಕವಾಗಿ ಇರಲಿ. ಆದರೆ ಆಗಂತುಕವಾದ ದೋಷದ ಸಂಬಂಧದಿಂದ ಕೆಲವು ಸಲ ಪೂರ್ವಶಕ್ತಿಯ ತಡೆಯುವಿಕೆ ಉಂಟಾಗುವುದೋ ಅಥವಾ ವಿಪರೀತವಾದ ಕಾರ್ಯವನ್ನು ಹುಟ್ಟಿಸುವ ಶಕ್ತಿಯು ಹುಟ್ಟುವುದೋ ಏಂದೇಕಾಗಬಾರದು? ಚಕ್ಷುರಾದೀಂದ್ರಿಯಗಳಲ್ಲಿ ಆಗಂತುಕದೋಷಸಂಬಂಧದಿಂದ ಈ ಎರಡುವಿಧವಾದ ಕಾರ್ಯಗಳು ಕಾಣುವುದರಿಂದ.

ಉತ್ತರ - ಯಸ್ಯ ಯಾವ ಪ್ರತಿಪಕ್ಷಕ್ಕೆ ಅರ್ಥಾತ್ ಮೊದಲಿನ ಶಕ್ತಿಗೆ ಪ್ರತಿಬಂಧಕವಾದ ವಸ್ತುವಿಗೆ ಅಥವಾ ಮತ್ತೊಂದು ಶಕ್ತಿಯನ್ನು ಆಧಾನ ಮಾಡುವುದಕ್ಕೆ ಅಂದರೆ ದೋಷಕ್ಕೆ ಎಂದು ಭಾವ. ಯುಕ್ತಿಃ - ಸಂಬಂಧವು ತಮ್ಮಲ್ಲಿ ಇಲ್ಲವೋ ಎಂದರ್ಥ.

'ಸಾಕ್ಷೀ ನಿರ್ದೋಷ ಏವೈಕಃ ಸದಾಂಗೀಕಾರ್ಯ ಏವ ನಃ । (2-3-ಶ್ಲೋ.70)

'ನಿರ್ದೋಷತ್ವಾತಿನಿಯಮಾತ್ ತದ್ಬಲಿಷ್ಠತಮಂ ಮತಮ್' (2-1-ಶ್ಲೋ.31)

ಮುಂತಾದ ಮಾತುಗಳಿಂದ ಮೂರು ಕಾಲದಲ್ಲಿಯೂ ಸಾಕ್ಷಿಪ್ರತ್ಯಕ್ಷಕ್ಕೆ ದೋಷದ ಸಂಬಂಧವೇ ಇಲ್ಲ ಎಂಬುದನ್ನು 'ಏವ'ಶಬ್ದದಿಂದ ಹೇಳಿದ್ದಾರೆ. ಇದರಿಂದ ಪ್ರತಿಪಕ್ಷದ ಸಂಬಂಧದಿಂದ ಯಾವಾಗಲಾದರೊಮ್ಮೆ ಸಾಕ್ಷಿಯು ಪ್ರತಿಬದ್ಧವಾಗಲಿ ಎಂಬ ದೋಷವು ಇರುವುದಿಲ್ಲ ಎಂದು ಸೂಚಿಸಿದಂತಾಯಿತು.

ಅಲ್ಲ। ಸಾಕ್ಷಿಗೂ ಸಹಜಶಕ್ತಿಯ ತಡೆಯುವಿಕೆ, ವಿಪರೀತಕಾರ್ಯವನ್ನು ಹುಟ್ಟಿಸುವ ಬೇರೆಯ ಶಕ್ತಿಯ ಉತ್ಪತ್ತಿ ಎಂಬ ಎರಡು ಅಂಶಗಳು ಬೇರೆ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ವಿಷ್ಣುತತ್ವನಿರ್ಣಯಟೀಕೆಯಲ್ಲಿ - 'ಬುದ್ಧಿದೋಷನಿರಾಸಮಾತ್ರಕಾರಣತ್ವಾತ್ ಯುಕ್ತೀನಾಂ' ಎಂಬ ಆಚಾರ್ಯರ ಮೂಲಕ್ಕೆ ವ್ಯಾಖ್ಯಾನಮಾಡುವಾಗ "ಇದು ಅಭಿಪ್ರಾಯ – ಸಾಕ್ಷಿಯೇ ಜ್ಞಾನವನ್ನು ಹಾಗೂ ಅದರ ಪ್ರಾಮಾಣ್ಯವನ್ನು ವಿಷಯೀಕರಿಸಲು ಸಮರ್ಥ. ಆದರೆ ಕಾರಣಾಂತರ ಒದಗಿದಾಗ ಅದ-ರಿಂದುಂಟಾದ ಮನಸ್ಸಿನ ಅಪರಾಧದಿಂದ ಪ್ರತಿಬದ್ಧವಾದ ಸಾಕ್ಷಿಯು ಕೇವಲ ಜ್ಞಾನವನ್ನು ಗ್ರಹಿಸಿ ಅದರ ಪ್ರಾಮಾಣ್ಯವನ್ನು ಗ್ರಹಿಸಲು ಸಮರ್ಥವಾಗುವುದಿಲ್ಲ. ಹೇಗೆ ತಾನೇ ನಡೆಯಲು ಸಾಮರ್ಥ್ಯವಿದ್ದರೂ ಆನೆಯು ಗೋಕ್ಷುರಕ ಎಂಬ ಒಂದು ವಿಧವಾದ ಮುಳ್ಳಿನಿಂದ ಪ್ರತಿಬದ್ಧವಾಗಿ ನಡೆಯಲು ಅಸಮರ್ಥವಾಗುತ್ತದೋ ಹಾಗೆ" ಎಂದು ಹೇಳಿದ್ದಾರೆ.

## ಸಾಕ್ಷಿಯು ಯಾವಾಗಲೂ ಯಥಾರ್ಥವೇ?

** (तस्मात् सर्वप्रसिद्धस्य व्यवहारस्य सिद्धये ।)
साक्षी निर्दोष एवैकः सदाऽङ्गीकार्य एव नः ॥

यस्मात् साक्षिणः क्वचिदयथार्थत्वेऽविश्वसनीयत्वापत्त्या करणदोषाद्यनिश्चयप्रसङ्गेन ज्ञानानां भ्रमत्वाभ्रमत्वनिर्धारणाभावप्रसक्त्याऽर्थतथात्वातथात्वनिर्णयाभावानुषङ्गेण निःशङ्कोऽविसंवादी व्यवहारो लुप्येत। नच तल्लोपोऽङ्गीकर्तुं शक्यः। सर्वलोकप्रसिद्धत्वात्। तथाविधस्य च लौकिकैः परीक्षकैश्चोल्लङ्घनायोगात्। प्रमितार्थाननुमतावुन्मत्तत्वप्रसङ्गात्। तस्मात् सर्वलोकप्रसिद्धस्य निःशङ्कस्य अविसंवादिनो व्यवहारस्य कार्यभूतस्य सिद्ध्ये वस्तुतथात्वातथात्वनिश्चयः कारणभूतोऽङ्गीकार्यः। तत्सिद्ध्ये करणदोषादिनिश्चयद्वारा साक्षिणा ज्ञानानां भ्रमत्वाभ्रमत्वनिर्णयोऽङ्गीकार्यः। तत्सिद्ध्ये साक्षिणो विश्वसनीयत्वम्, तत्सिद्ध्ये च साक्षी सदा निर्दोषो यथार्थ एव नः परीक्षकाणामङ्गीकार्य इति।

ಸಾಕ್ಷಿಯನ್ನು ಯಾವಾಗಲೂ ಯಥಾರ್ಥ ಎಂದೇ ಒಪ್ಪಬೇಕು. ಇಲ್ಲದಿದ್ದರೆ ಕರಣವಾದ ಇಂದ್ರಿಯಾದಿಗಳಲ್ಲಿ ದೋಷಗಳಿವೆ ಎಂಬ ನಿಶ್ಚಯ ಬರದೇ ನಮಗೆ ಬಂದ ಜ್ಞಾನ ಭ್ರಮೆಯೋ ಭ್ರಮೆಯಲ್ಲವೋ ಎಂದು ನಿರ್ಧರಿಸಲು ಸಾಧ್ಯವಾಗದೇ ವಸ್ತು ತಥಾತ್ವ ಅತಥಾತ್ವ ನಿಶ್ಚಯವು ಆಗದೆ ನಿಃಶಂಕಪ್ರವೃತ್ತಿಯು ಕೂಡದೇ ಇರಬೇಕಾದೀತು. ಅಂತಹ ಪ್ರವೃತ್ತಿಯೇ ಬೇಡ ಎನ್ನಲು ಸಾಧ್ಯವಿಲ್ಲ. ಸಕಲಲೋಕಪ್ರಸಿದ್ಧವಾದ್ದರಿಂದ. ಹಾಗಾಗಿ ಅವಿಸಂವಾದ ರಹಿತವಾದ ಅರ್ಥಾತ್ ಬಾಧಕಪ್ರತ್ಯಯ ರಹಿತವಾದ ನಿಃಶಂಕಪ್ರವೃತ್ತಿಯಾಗಬೇಕಾದರೆ ವಸ್ತುವಿನ ತಥಾತ್ವಾಥಾತ್ವನಿಶ್ಚಯಗಳು ಬೇಕು ಎಂದು ಒಪ್ಪಬೇಕು. ಇದಾಗಬೇಕಾದರೆ ಕರಣಗಳಲ್ಲಿ ದೋಷ ಇದೆಯೋ ಇಲ್ಲವೋ ಎಂಬ ನಿಶ್ಚಯ ಬೇಕು. ಅದಕ್ಕಾಗಿ ಸಾಕ್ಷಿಯಿಂದ ಕರಣದೋಷನಿಶ್ಚಯವಾದರೆ ತತ್ಕರಣಜನ್ಯವಾದ ಜ್ಞಾನವು ಭ್ರಮೆಯೆಂದು ತೀರ್ಮಾನಿಸಬಹುದು. ಇದೆಲ್ಲವೂ ಸಾಕ್ಷಿಯು ಸದಾ ವಿಶ್ವಸನೀಯವಾಗಬೇಕು ಎಂಬ ಪಕ್ಷದಲ್ಲಿ ಕೂಡುವುದು. ಸದಾ ವಿಶ್ವಾಸಾರ್ಹತೆಯು ಬರುವುದು ಅದು ಸದಾ ಯಥಾರ್ಥವಾಗಿದ್ದರೆ ಮಾತ್ರ. ಆದ್ದರಿಂದ ಸಕಲಪ್ರಸಿದ್ಧವ್ಯವಹಾರಸಿದ್ಧಿಗಾಗಿ ಸಾಕ್ಷಿಯು ನಿರ್ದುಷ್ಟ ಎಂದು ಪರೀಕ್ಷಕರು ಒಪ್ಪಲೇಬೇಕು.

## ಸಾಕ್ಷಿಯಲ್ಲಿ ಉಭಯನಿಷೇಧ ಮಾಡಿದರೆ ಆ ಗ್ರಂಥವಿರೋಧವಿದೆಯಲ್ಲ!!

(ಲಘುರಸರಂಜನೀ)— ತಥಾ 'ತತ್ರೈವಾನುಪದಂ ದುಷ್ಟಬುದ್ಧೀನಾಮೇವಾಪ್ರಾಮಾಣ್ಯಶಂಕಾ' ಇತಿ 'ಪರತೋ ಪ್ರಾಮಾಣ್ಯಮ್' ಇತ್ಯೇತನ್ಮೂಲವ್ಯಾಖ್ಯಾನಾವಸರೇ । — "(ದುಷ್ಟೇತಿ ॥) ಜ್ಞಾನಗ್ರಾಹಕಃ ಸಾಕ್ಷೀ ಪ್ರಮಾಣತಯೈವ ಗೃಹ್ಣಾತೀತ್ಯುತ್ಸರ್ಗತ ಏವ । ವಿಸಂವಾದಲಕ್ಷಣಾತ್ ಪರತೋಽಪವಾದಾದಪ್ರಾಮಾಣ್ಯಂ ಚ ಗೃಹ್ಣಾತಿ । ಸಹಕಾರಿಣಃ ಸಹಜಶಕ್ತಿಂ ಪ್ರತಿಬಧ್ಯ ವಿಪರೀತಶಕ್ತಿಂ ಜನಯತೀತಿ ಹಿ ಪ್ರಸಿದ್ಧಮ್ । ದಾವದಹನದಗ್ಧಾನಾಂ ವೇತ್ರಬೀಜಾನಾಂ ವೇತ್ರಾಂಕುರಮಜನಯಿತ್ವಾ ಕದಲೀಕಾಂಡಜನಕತ್ವದರ್ಶನಾತ್" ಇತಿ । ಅತಃ ಕಥಮತ್ರ ಸಾಕ್ಷಿಣಿ ತದು-

ಭಯನಿಷೇಧೇ ತದ್ವಿರೋಧೋ ನ ಸ್ಯಾದಿತಿ ಚೇನ್ನೈವಮ್ । ವಿಷಯಭೇದೇನಾವಿರೋಧಾತ್ । ತಥಾಹಿ – ಅತ್ರ ಚಕ್ಷುಷಃ ಕಾಚಾದಿಭಿರಿವ ಸಾಕ್ಷಿಣಃ ಸ್ವಸಂಬದ್ಧದೋಷೈಃ ಸ್ವರೂಪೋಪಮರ್ದೇನ ಸಹಜಶಕ್ತಿಪ್ರತಿಬಂಧಸ್ಯ ನಿಷೇಧಃ ಕ್ರಿಯತೇ । ತತ್ರ ತು ದೀಪಸ್ಯ ಪಟಲೇನೇವ ತದ-ಸಂಬದ್ಧೈರ್ಮಾನಸೈರ್ದೋಷೈಃ ಪ್ರತಿಬಂಧಕ ಉಕ್ತಃ । ನ ಚೈತಾದೃಶಃ ಪ್ರತಿಬಂಧಃ ಕರಣಸ್ಯ ದೋಷಮಾವಹತಿ । ತಸ್ಯ ತದಾನೀಮಪಿ ಸ್ವರೂಪಾನುಪಮರ್ದೇನ ಜಾಗ್ರತತ್ವಾತ್ । ಅಪಸೃತೇ ತು ಪ್ರತಿಬಂಧೇಽನ್ಯಾನಪೇಕ್ಷಯಾ ತದೈವ ಕಾರ್ಯಕರಣಸಮರ್ಥತ್ವಾಚ್ಚ ।

ಹಾಗೆ ಅಲ್ಲಿಯೇ ಈ ಭಾಗದ ಅನಂತರ ದುಷ್ಟಬುದ್ಧಿಗಳಿಗೆ ಅಪ್ರಾಮಾಣ್ಯಶಂಕೆಬರುವುದು. ಅರ್ಥಾತ್ ಯಾರ ಬುದ್ಧಿಯಲ್ಲಿ ದೋಷಗಳಿವೆಯೋ ಅವರಿಗೆ ಮಾತ್ರ ಅಪ್ರಾಮಾಣ್ಯಶಂಕೆ ಬರುವುದು. ಈ ಎಲ್ಲ ಅಂಶಗಳು ವಿಷ್ಣುತತ್ವ ನಿರ್ಣಯದಲ್ಲಿ 'ಪರತೋ ಪ್ರಾಮಾಣ್ಯಂ' ಎಂಬ ಮೂಲದ ಟೀಕೆಯಲ್ಲಿ ಬಂದಿದೆ.

ಜ್ಞಾನವನ್ನು ಗ್ರಹಿಸುವ ಸಾಕ್ಷಿಯು ಪ್ರಮಾಣವಾಗಿಯೇ ಗ್ರಹಿಸುತ್ತದೆ ಎಂಬುದು ಸಾಮಾನ್ಯನಿಯಮ. ವಿಸಂವಾದ ಒದಗಿದಾಗ ಅರ್ಥಾತ್ ಅಪವಾದವು ಕಂಡಾಗ ಅಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಸಹಕಾರಿಗಳು ಕಾರಣದ ಸಹಜಶಕ್ತಿಯನ್ನು ತಡೆದು ವಿಪರೀತಶಕ್ತಿಯನ್ನು ಹುಟ್ಟಿಸುತ್ತವೆ ಎಂಬುದು ಪ್ರಸಿದ್ಧವಷ್ಟೇ. ಉದಾ – ಕಾಡ್ಗಿಚ್ಚಿನಿಂದ ದಗ್ಧವಾದ (ಸುಡಲ್ಪಟ್ಟ) ಬಿದಿರಿನ ಬೀಜವು ಬಿದಿರನ ಅಂಕುರವನ್ನು ಹುಟ್ಟಿಸದೆ ಬಾಳೆಯ ಕಾಂಡವನ್ನು ಹುಟ್ಟಿಸುತ್ತದೆ ಎಂದು ಕಂಡಿರುವುದರಿಂದ. ಹಾಗಾಗಿ ಸಾಕ್ಷಿಗೆ ಸಹಜಶಕ್ತಿಪ್ರತಿಬಂಧನಿಷೇಧ ವಿಪರೀತಶಕ್ತ್ಯಾಧಾನನಿಷೇಧ ಎಂಬ ಎರಡು ನಿಷೇಧಗಳನ್ನು ಹೇಳಿದರೆ ಹಿಂದೆ ಹೇಳಿದ ಭಾಗದಿಂದ ವಿರೋಧ ಬರುವುದು – ಹೀಗೆಂದರೆ ಇಲ್ಲ. ವಿಷಯವ್ಯತ್ಯಾಸವಿರುವುದರಿಂದ ವಿರೋಧವಿಲ್ಲ.

ಅದು ಹೀಗೆ – ಕಣ್ಣಿಗೆ ಕಾಚಾದಿದೋಷಗಳಂತೆ ಸಾಕ್ಷಿಗೆ ತನ್ನ ಸಂಬಂಧಿಯಾದ ದೋಷಗಳಿದ್ದಲ್ಲಿ ಸ್ವರೂಪವು ಉಪಮರ್ದವಾಗಿ ಸಹಜಶಕ್ತಿಪ್ರತಿಬಂಧವಾದೀತು! ಆಗ ಅದನ್ನು ನಿಷೇಧಮಾಡಲು ಅಸಾಧ್ಯವೆಂದಾದೀತು. ಆದರೆ ಇಲ್ಲಿ ಸಾಕ್ಷಿಗೆ ಸ್ವಸಂಬಂಧಿದೋಷಗಳು ಇಲ್ಲ. ಇನ್ನು ಮಾನಸ-ದೋಷಗಳಿಂದ ಪ್ರತಿಬಂಧವನ್ನು ಹೇಳಬೇಕು. ಆ ಮಾನಸದೋಷಗಳು ಸಾಕ್ಷಿಗೆ ಸಂಬಂಧ ಪಡದೆ ಇರುವವು. ದೀಪಕ್ಕೆ ಪಟಲದಂತೆ (ದೀಪದ ಮುಸುಕು) ಎಂದು ತಿಳಿಯಬೇಕು. ಆದರೆ ಈ ರೀತಿ ಪ್ರತಿಬಂಧವು ಕರಣಗಳಿಗೆ ದೋಷವನ್ನು ತಂದೊಡ್ಡುವುದಿಲ್ಲ. ಈ ರೀತಿಯ ದೋಷಗಳಿದ್ದಾಗಲೂ ಕರಣದ ಸ್ವರೂಪವು ಉಪಮರ್ದವಾಗದೇ ಹಾಗೆ ಇರುವುದರಿಂದ. ಪ್ರತಿಬಂಧನಿವೃತ್ತಿಯಾದ ಮೇಲೆ ಕರಣವು ಬೇರೆಯ ವಸ್ತುವನ್ನು ಅಪೇಕ್ಷಿಸದೇ ತನ್ನ ಕಾರ್ಯವನ್ನು ತಾನೇ ಮಾಡಲು ಸಮರ್ಥವಾಗುತ್ತದೆ.

ನಿಜೇನ ಮಹಸಾ ವ್ಯಾಪ್ತಿಃ - ತಮ್ಮ ಸಾಮರ್ಥ್ಯದಿಂದ ನಿಷ್ಠೆಯು ಅರ್ಥಾತ್ ಆಸ್ತಿಕ್ಯಬುದ್ಧಿಯು. ಸಪಕ್ಷೇ - ಪರಸ್ಪರ ತಮ್ಮ ತಪಸ್ಸಿನಲ್ಲಿ ಸ್ಥಿತಿಃ - ನಿಷ್ಠೆಯು ಅರ್ಥಾತ್ ಸಮ್ಮತಿಯು. ವಿಪಕ್ಷತಃ - ಭ್ರಷ್ಟರಾದ ಜನರಿಂದ, ವ್ಯಾವೃತ್ತಿಃ - ಅನಾದರವು ಇತ್ಯಾದಿ ಯಥಾಯೋಗ್ಯವಾಗಿ ಯೋಜನೆ ಮಾಡಬೇಕು.

## ಯಮಧರ್ಮನಿಂದ ನಾಲ್ಕು ರೂಪಗಳಿಂದ ಹರಿಯ ಅವತಾರ

ಇದನ್ನು ಭಾಗವತದಲ್ಲಿ —

ಧರ್ಮಸ್ಯ ದಕ್ಷದುಹಿತರ್ಯಜನಿ ಸ್ವಮೂರ್ತ್ಯಾ ನಾರಾಯಣೋ ನರ ಇತಿ ಸ್ವತಪಃ ಪ್ರಭಾವಃ ।
ದೃಷ್ಟ್ವಾತ್ಮನೋ ಭಗವತೋ ನಿಯಮಾವಲೋಪಂ ದೇವ್ಯಸ್ತ್ವನಂಗಪೃತನಾ ಘಟಿತುಂ ನ ಶೇಕುಃ ॥
— ಭಾಗವತ ॥2-7-6॥

* ದಕ್ಷಪ್ರಜಾಪತಿಯ ಮಗಳಾದ ಮೂರ್ತಿದೇವಿಯಲ್ಲಿ ಯಮಧರ್ಮನಿಂದ ನರ, ನಾರಾಯಣ, ಹರಿ, ಕೃಷ್ಣ ಎಂಬ ನಾಲ್ಕು ರೂಪಗಳಿಂದ ಶ್ರೀಹರಿ ಅವತರಿಸಿದ. ಸದಾ ತನ್ನನ್ನು ತಾನು ಅಪರೋಕ್ಷದಿಂದ ಕಾಣುವ ಈ ನಾರಾಯಣನ ತಪೋಭಂಗಮಾಡಲು ಮನ್ಮಥ ಅಪ್ಸರಸ್ತ್ರೀಯರಿಗೆ ಸಾಧ್ಯವಾಗಲಿಲ್ಲ.

** ತತಶ್ಚಾಯಂ ಶ್ಲೋಕಾರ್ಥಃ — ಧರ್ಮಸ್ಯ ಸಕಾಶಾದ್ ದಕ್ಷದುಹಿತರಿ ದಕ್ಷಕನ್ಯಾಯಾಂ ಮೂರ್ತಿಸಂಜ್ಞಾಯಾಂ ಧರ್ಮಪತ್ನ್ಯಾಂ ಸ್ವಮೂರ್ತ್ಯಾ ಸ್ವರೂಪಭೂತದೇಹೇನ ನಾರಾಯಣೋ ನರೋ ಹರಿಃ ಕೃಷ್ಣ ಇತಿ ನಾಮ್ನಾ ಅಜನಿ । ಕೀದೃಶಃ । ಲೋಕಶಿಕ್ಷಾರ್ಥಂ ಸ್ವತಪಸಃ ಪ್ರಭಾವಃ ಪ್ರತಾಪೋ ಯಸ್ಮಿನ್ ಸ ಸ್ವತಪಃ । ಲೋಕಶಿಕ್ಷಾರ್ಥಂ ತಪಃಕುರ್ವಾಣೌ ನರನಾರಾಯಣೌ ಬದರ್ಯಾಂ ಸಹ್ಯೈವ ತಿಷ್ಠತ ಇತಿ ತಯೋರೇವ ಸ್ವಪದೇನ ಗ್ರಹಣಮ್ । ಸ್ವತಪಃ ಪ್ರಭಾವ ಇತ್ಯುಕ್ತಮೇವ ವಿವೃಣೋತಿ — ದೃಷ್ಟ್ವಾತ್ಮನ ಇತಿ ॥ ನಿತ್ಯಮಪರೋಕ್ಷೀಕೃತನಿಜಸ್ವರೂಪಸ್ಯ ಇತ್ಯರ್ಥಃ । ಅನೇನ ಕದಾಚಿದ್ ಹರ್ಯಪರೋಕ್ಷಜ್ಞಾನಿನೋಽಪಿ ನಿಯಮಾವಲೋಪಃ ಕೇನಾಪಿ ಕರ್ತುಂ ನ ಶಕ್ಯತೇ ಕಿಮು ಸದಾಽಪರೋಕ್ಷಜ್ಞಾನಿನೋಽಸ್ಯೇತಿ ಸೂಚಯತಿ । ಹೇತ್ವಂತರಮಾಹ — ಭಗವತ ಇತಿ ॥ ನಿಯಮಾವಲೋಪಂ ತಪ ಆದೇರ್ಭಂಗಮ್ । ದೇವ್ಯಸ್ತು ದೇವಸ್ತ್ರಿಯೋಽಪಿ । ಕಥಂಭೂತಾಃ । ಅನಂಗಸ್ಯ ಕಾಮಸ್ಯ ಪೃತನಾ ಇವ ಪೃತನಾಃ ಸೇನಾಸ್ಥಾನೀಯಾ ಘಟಿತುಂ ಕರ್ತುಂ ನ ಶೇಕುಃ । ಶಕ್ತಾ ನ ಜಾತಾ ಇತ್ಯರ್ಥಃ । (ಪ್ರಕಾಶಿಕಾ)

— ಕಿಂಚ ಸ್ವತೋಽಪ್ಯಧಿಕಸೌಂದರ್ಯಮಂದಿರಾಣಾಂ ಭಗವತಾ ತತ್‌ಕ್ಷಣಸೃಷ್ಟಾನಾಂ ಸ್ತ್ರೀಣಾಂ ದರ್ಶನಾತ್ ಲಜ್ಜಿತಾಃ ತತೋಽನ್ವವರ್ತತೇತ್ಯಸ್ಮಿನ್ನರ್ಥೇ ತುಶಬ್ದಃ ಯದ್ಯಪ್ಯನಂಗಪೃತನಾಸ್ತಥಾಪಿ - ಇತ್ಯಸ್ಮಿನ್ನರ್ಥೇ ವಾ ॥ (ವಿಜಯಧ್ವಜೀಯ)

## ಧರ್ಮತನಯರಲ್ಲಿ ಮೂರು ಹರಿಯ ಸ್ವರೂಪವೇ? ತತ್ಸನ್ನಿಧಾನಯುಕ್ತನಾದ ನರ

ನರಃ ಎಂದರೆ ಶೇಷ. ಇದನ್ನು ದ್ವಿತೀಯಭಾಗವತತಾತ್ಪರ್ಯದಲ್ಲಿ –

'ನರೋ ನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವ ಚ ।
ಚತ್ವಾರೋ ಧರ್ಮತನಯಾ ಹರಿರೇವ ತ್ರಯೋ ಮತಾಃ ।
ಅನಂತೋ ನರನಾಮಾऽತ್ರ ತಸ್ಮಿಂಸ್ತು ನರನಾಮವಾನ್ ।
ವಿಶೇಷೇಣ ಸ್ವಯಂ ವಿಷ್ಣುರ್ನಿವಸತ್ಯಂಬುಜೇಕ್ಷಣಃ ।
ತಸ್ಮಾಚ್ಚತುರ್ಧಾ ಧರ್ಮಸ್ಯ ಜಾತೋ ವಿಷ್ಣುರಿತೀರ್ಯತೇ' ಇತಿ ಷಾಡ್ಗುಣ್ಯೇ ॥

— ಭಾ.ಗ.ತಾ.2-7-6॥

ಎಂದು ತಿಳಿಸಿದ್ದಾರೆ.

-- ಅತ್ರೇದಂ ತಾತ್ಪರ್ಯಮ್ – ನಾರಾಯಣೋ ಹರಿಃ ಕೃಷ್ಣ ಇತಿ ತ್ರಯೋ ವಿಷ್ಣೋಃ ಸಾಕ್ಷಾದವತಾರಾ ನರನಾಮ್ನ್ಯಂತರ್ಯಾಮಿತಯಾ ನರನಾಮಾऽವತೀರ್ಣ ಇತಿ । ತತ್ರ ಲೋಕಶಿಕ್ಷಾರ್ಥಂ ತಪಃ ಕುರ್ವಾಣೋ ಬದರ್ಯಾಂ ವಸಂತೌ ಸದೈವ ತಿಷ್ಠತ ಇತಿ ನಾರಾಯಣೋ ನರ ಇತ್ಯೇತಾವೇವೋಕ್ತೌ ಇತಿ ಜ್ಞಾತವ್ಯಮ್ 'ನರೋ ನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವ ಚ' ಇತ್ಯಾದಿವಚನಾತ್ । (ವಿಜಯಧ್ವಜೀಯ)

ಯಮಧರ್ಮನ ಮಕ್ಕಳಾಗಿ ಅವತರಿಸಿದ ನಾಲ್ಕು ರೂಪಗಳೂ ವಿಷ್ಣುವಿನದ್ದೇ ಎಂದು ಹೇಳುವರು. ಆದರೆ ನರ, ನಾರಾಯಣ, ಹರಿ, ಕೃಷ್ಣ ಇವರಲ್ಲಿ ನರ ಎಂದರೆ ಶೇಷದೇವರು. ಹಾಗಾಗಿ ನಾಲ್ಕು ರೂಪಗಳು ವಿಷ್ಣುವಿನದ್ದೇ ಎಂದು ಹೇಗೆ ಹೇಳಿದ್ದು? ಎಂದರೆ ಆ ಶೇಷನಲ್ಲಿ ನರ ಎಂಬ ಹೆಸರಿನ ಕಮಲದಂತಹ ಕಣ್ಣುಳ್ಳ ವಿಷ್ಣುವೇ ಸ್ವಯಂ ವಿಶೇಷವಾಗಿ ಸನ್ನಿಹಿತನಾಗಿದ್ದಾನೆ. ಹಾಗಾಗಿ ಅನಂತನಿಗೂ ನರ ಎಂಬ ಹೆಸರು ಬಂದಿದೆ. ಅಂತೂ ಭಗವಂತನು ಅವನಲ್ಲಿ ವಿಶೇಷವಾದ ತನ್ನ ಸನ್ನಿಧಾನವನ್ನಿಟ್ಟು ಕಾರ್ಯಗಳನ್ನು ಮಾಡುವುದರಿಂದ ಭಗವಂತನ ಅವತಾರವೇ ಅದು ಎಂದು ಉದ್ಗಾರ ಮಾಡಿದ್ದಾರೆ. ಈ ವಿಷಯವು ಷಾಡ್ಗುಣ್ಯ ಎಂಬ ಗ್ರಂಥದಲ್ಲಿ ಬಂದಿದೆ ಎಂದು ಭಾಗವತತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು ತಿಳಿಸಿದ್ದಾರೆ. ನರನಾರಾಯಣರು ಲೋಕಶಿಕ್ಷಣೆಗೋಸ್ಕರ ತಪಸ್ಸನ್ನು ಮಾಡಬೇಕೆಂದು ಬದರಿಯಲ್ಲಿ ವಾಸಮಾಡುತ್ತಾ ಜೊತೆಗೇ ಇದ್ದಾರೆ. ಆದ್ದರಿಂದ 'ನಾರಾಯಣೋ ನರಃ' ಎಂದು ಇಬ್ಬರಿಗೆ ಮಾತ್ರ ಒತ್ತುಕೊಟ್ಟು ನಿರ್ದೇಶ ಮಾಡಿದ್ದಾರೆ. "ನಾರಾಯಣೋ ನರ ಇತಿ ಸ್ವತಪಃ ಪ್ರಭಾವಃ" ಎಂದು. ಏಕೆಂದರೆ ಭಾಗವತತಾತ್ಪರ್ಯನಿರ್ಣಯದಲ್ಲಿ ಉದಾಹರಿಸಿದ ಮಾತಿನಲ್ಲಿ ನರ, ನಾರಾಯಣ, ಹರಿ, ಕೃಷ್ಣ ಎಂದು ನಾಲ್ಕು ಯಮಧರ್ಮರಾಜನ ಮಕ್ಕಳು ಎಂದು ಸ್ಪಷ್ಟವಾಗಿ ಹೇಳಿದೆ.

## ಆಶ್ರಮವಿವೇಕ ಎಂಬ ಗ್ರಂಥ

ಮುನಿತ್ವವಾದರೋ -

ಗಾರ್ಹಸ್ಥ್ಯಂ ಚ ಯತಿತ್ವಂ ಚ ದೇವೇಷ್ವೇಕತ್ವಮಾಗತಮ್ ।
ಪ್ರಾಧಾನ್ಯೋಕ್ತಿರ್ಯತಿತ್ವಸ್ಯ ಗಾರ್ಹಸ್ಥ್ಯಸ್ಯ ಕ್ವಚಿದ್ ಕ್ವಚಿತ್ ॥ ಇತ್ಯಾಶ್ರಮವಿವೇಕೇ
— (ಭಾಗ.ತಾ. 11.16.19)

— ಆಶ್ರಮಗಳಲ್ಲಿ ಸನ್ಯಾಸ ಶ್ರೇಷ್ಠ ಎಂದ ಮಾತ್ರಕ್ಕೆ ಗೃಹಸ್ಥಾಶ್ರಮಿಗಳಾದ ಬ್ರಹ್ಮಾದಿದೇವತೆಗಳಿಗಿಂತ ಸನಕಾದಿಮುನಿಗಳು ಶ್ರೇಷ್ಠರೆಂದಾಗುವುದಿಲ್ಲ. ಏಕೆಂದರೆ ದೇವತೆಗಳು ಕೇವಲ ಗೃಹಸ್ಥಾಶ್ರಮಿಗಳಲ್ಲ. ಅವರು ಏಕಕಾಲಕ್ಕೆ ನಾಲ್ಕು ಆಶ್ರಮಧರ್ಮಗಳನ್ನೂ ಆಚರಿಸುವವರು. ಹೀಗಾಗಿ ದೇವತೆಗಳು ಆಚರಿಸುವ ಆಶ್ರಮಗಳಲ್ಲಿ ಕೆಲವೆಡೆ ಸನ್ಯಾಸ ಶ್ರೇಷ್ಠವೆಂದೂ, ಕೆಲವೆಡೆ ಗೃಹಸ್ಥಾಶ್ರಮ ಶ್ರೇಷ್ಠವೆಂದೂ ಹೇಳುವುದುಂಟು ಎಂದು ಆಶ್ರಮವಿವೇಕ ಎಂಬ ಗ್ರಂಥದಲ್ಲಿದೆ.

ಎಂಬ ಈ ಭಾಗವತತಾತ್ಪರ್ಯನಿರ್ಣಯದ ಮಾತಿನಿಂದ ಯಥಾಯೋಗ್ಯವಾಗಿ ಗೃಹಸ್ಥಾಶ್ರಮ ಸನ್ಯಾಸಾಶ್ರಮಗಳಲ್ಲಿ ಯಾವುದು ಶ್ರೇಷ್ಠ ಎಂಬ ವಿಚಾರ ಬಂದಾಗ ಹೀಗೆ ಉಪಪಾದನೆ ಮಾಡಬೇಕು. ನರನಾರಾಯಣರು ಬದರಿಯಲ್ಲಿ ಲೋಕಶಿಕ್ಷಣೆಗೋಸ್ಕರ ತಪಸ್ಸನ್ನು ಆಚರಿಸಿದರು ಎಂದು ಪುರಾಣಪ್ರಸಿದ್ಧವಷ್ಟೇ.

** ನಾಗೇಂದ್ರಾಣಾಮನಂತೋಽಹಂ ಮೃಗೇಂದ್ರಃ ಶೃಂಗಿದಂಷ್ಟ್ರಿಣಾಂ ।
ಆಶ್ರಮಾಣಾಮಹಂ ತುರ್ಯೋ ವರ್ಣಾನಾಂ ಪ್ರಥಮೋಽನಘ ॥(ಭಾಗ.11-16-19)

— ತುರ್ಯಃ ಚತುರ್ಥೋ ಯತ್ಯಾಶ್ರಮಃ (ವಿಜಯಧ್ವಜೀಯ)

— ಹೇ ಅನಘ। ನಾನು ಶ್ರೇಷ್ಠನಾಗಗಳಲ್ಲಿ ಶೇಷನಾಗಿದ್ದೇನೆ, ಕೊಂಬು ಮತ್ತು ಕೋರೆಹಲ್ಲು ಇರುವವುಗಳಲ್ಲಿ ಸಿಂಹನಾಗಿದ್ದೇನೆ. ಆಶ್ರಮಗಳಲ್ಲಿ ನಾನು ನಾಲ್ಕನೆಯ ಸನ್ಯಾಸ, ವರ್ಣಗಳಲ್ಲಿ ಮೊದಲನೆಯದಾದ ಬ್ರಾಹ್ಮಣ.

## ಏಕೋಕ್ತ್ಯಾ ರಾಮಕೃಷ್ಣರ ಪ್ರಾರ್ಥನೆ - ವ್ಯಾಪ್ತಿರ್ಯಸ್ಯ ಎಂಬ ಶ್ಲೋಕದಿಂದ

(ಪಿರೀ ಬಾಳಾಚಾರ್ಯರು)— ಶ್ರೀರಾಮಕೃಷ್ಣೌ ಪ್ರಾರ್ಥಯಂತೇ – ವ್ಯಾಪ್ತಿರಿತ್ಯಾದಿನಾ ॥ 'ಯಸ್ಯ' ಶ್ರೀರಾಮಸ್ಯ ಕೃಷ್ಣಸ್ಯ ವಾ 'ನಿಜೇ ಪಕ್ಷೇ' – ಕ್ರಮಾತ್ ಸೀತಾಭೈಷ್ಮ್ಯಾಪಹರಣಾದೌ ವ್ಯಾಪ್ತಿರ್ನಿಷ್ಠಾ । 'ಸಪಕ್ಷೇ'- ಸುಗ್ರೀವಾರ್ಜುನಾದಿಪರಿರಕ್ಷಣೇ ಕ್ರಮಾತ್ । ಸ್ಥಿತಿಃ – ನಿಷ್ಠಾ । ತಯೋರ್ಹನುಮದ್ಭೀಮಾರ್ಥತ್ವಾತ್ ಸಪಕ್ಷತ್ವಂ ಜ್ಞೇಯಮ್ । ತದುಕ್ತಂ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ–

ಸೋಽವತಾರೇ ತಸ್ಮಾತ್ಸ ಮಾರುತಿಕೃತೇ ರವಿಜಂ ರರಕ್ಷ । ....
ಏವಂ ಸ ಕೃಷ್ಣತನುರರ್ಜುನಮಪ್ಯರಕ್ಷದ್ಭೀಮಾರ್ಥಮೇವ – ಇತಿ ।

ಸಃ ರಾಮಃ । ರವಿಜಂ ಸುಗ್ರೀವಮ್ । ಶಿಷ್ಟಂ ಪ್ರಾಗ್ವತ್ । ಏವಂ ಹನೂಮದ್ಭೀಮಮಧ್ವಾದಿ-ಪರತಯಾ ಪ್ರಕಾರಾಂತರೇಣಾಪೀದಂ ಪದ್ಯಂ ನೇಯಮಪಿ ಗ್ರಂಥವಿಸ್ತರತ್ರಾಸಾದೇವೋಪ-ರಮ್ಯತೇ । ಆಚಾರ್ಯಪರತಾಮೇವ ಪೂರ್ವಾಚಾರ್ಯಾಃ ಸಮಭ್ಯಧುಃ । ತಥಾಪಿ ನ ನ್ಯಷೇಧಂಸ್ತೇ ಪದ್ಯಸ್ಯಾಸ್ಯೇತರಾರ್ಥತಾಂ –

ನ್ಯಾಯಮಪ್ರತಿಷಿದ್ಧಂ ಯತ್ತದಿಹಾನುಮತಂ ಹೃದಿ ।
ಏತಸ್ಯಾಲಂಬ್ಯ ವಿವೃತಿರಿತರಾರ್ಥತಯೋಚಿತಾ ॥ ಇತಿ ।

ಈಗ ರಾಮಕೃಷ್ಣರನ್ನು ಪ್ರಾರ್ಥಿಸುತ್ತಿದ್ದಾರೆ — ವ್ಯಾಪ್ತಿಃ ಎಂಬುದಾಗಿ. ಯಸ್ಯ - ಶ್ರೀರಾಮನಿಗೆ ಅಥವಾ ಶ್ರೀಕೃಷ್ಣನಿಗೆ, ನಿಜೇ ಪಕ್ಷೇ - ತಮಗೆ ಕ್ರಮವಾಗಿ ಸಂಬಂಧಪಟ್ಟ ಸೀತಾಹರಣ ಹಾಗೂ ರುಕ್ಮಿಣೀಹರಣದಲ್ಲಿ ವ್ಯಾಪ್ತಿಃ - ನಿಷ್ಠೆಯು. ಸಪಕ್ಷೇ - ಸುಗ್ರೀವ ಅರ್ಜುನಾದಿಗಳನ್ನು ರಕ್ಷಣೆ ಮಾಡು-ವುದರಲ್ಲಿ ಸ್ಥಿತಿಃ - ನಿಷ್ಠೆಯು. ಇವರಿಬ್ಬರೂ ಹನುಮಂತನಿಗೋಸ್ಕರ ಹಾಗೂ ಭೀಮನಿಗೋಸ್ಕರ ರಕ್ಷಿತರಾದ್ದರಿಂದ ಸಪಕ್ಷರೆಂದು ತಿಳಿಯಬೇಕು. ಇದನ್ನು ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಹೀಗೆ ಹೇಳಿದ್ದಾರೆ —

ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ
ತತ್ರೈವ ವಾಯುರಿತಿ ವೇದವಚಃಪ್ರಸಿದ್ಧಮ್ ।
ಕಸ್ಮಿನ್ನಹಂತ್ವಿತಿ ತಥೈವ ಹಿ ಸೋಽವತಾರೇ
ತಸ್ಮಾತ್ಸ ಮಾರುತಿಕೃತೇ ರವಿಜಂ ರರಕ್ಷ ॥ 5-46 ॥
ಏವಂ ಸ ಕೃಷ್ಣತನುರರ್ಜುನಮಪ್ಯರಕ್ಷ-
ದ್ಭೀಮಾರ್ಥಮೇವ ತದರಿಂ ರವಿಜಂ ನಿಹತ್ಯ ।
ಪೂರ್ವಂ ಹಿ ಮಾರುತಿಮವಾಪ ರವೇಃ ಸುತೋಽಯಂ
ತೇನಾಸ್ಯ ವಾಲಿನಮಹನ್ ರಘುಪಃ ಪ್ರತೀಪಮ್ ॥ 5-47 ॥

(46ನೇ ಶ್ಲೋಕ) ಸಃ ಎಂದರೆ ರಾಮ. ರವಿಜ ಎಂದರೆ ಸುಗ್ರೀವ. ಉಳಿದದ್ದು ಹಿಂದಿನ ಯೋಜನೆ-ಗಳಂತೆ ಅನ್ವಯ ಮಾಡಬೇಕು. ಈ ರೀತಿ ಹನುಮದ್ಭೀಮಮಧ್ವ ಮೊದಲಾದ ಅವತಾರಗಳ ಪರವಾಗಿ ಈ ಶ್ಲೋಕವನ್ನು ಅನುಸಂಧಾನ ಮಾಡಿಕೊಳ್ಳಬೇಕು. ಆದರೂ ಗ್ರಂಥವಿಸ್ತರದ ಭಯದಿಂದ ಇಲ್ಲಿಯೇ ವಿರಾಮವನ್ನು ಮಾಡುತ್ತೇವೆ.

## ದೇಹೇಽಪಿ ಯತ್ರ ಪವನಃ ಎಂಬುದರ ವಿವರಣೆ

— ಅಪೇಃ ಅಭಿವ್ಯಾಪ್ತ್ಯರ್ಥಕತ್ವಾತ್ ಜಾತಾವೇಕವಚನಸದ್ಭಾವಾಚ್ಚ ದೇಹೇಽಪಿ ಸರ್ವಪ್ರಾಣಿ-ದೇಹೇಷ್ವಪಿ 'ಯತ್ರ ಪವನಃ ತತ್ರ ಹರಿಃ ಯತೋ ಯತ್ರಾಸೌ ಹರಿಃ ತತ್ರೈವ ವಾಯುಃ' ಇತಿ 'ಕಸ್ಮಿನ್ ವಹಂತು' ಇತಿ ವೇದವಚಃ ಪ್ರಸಿದ್ಧಮಿತಿ ಯೋಜನಾ । ದ್ವಿವಿಧಾ ಅಪಿ ವ್ಯಾಪ್ತಿಃ ದೇಹಿನಾಂ ದೇಹೇಷ್ವೇವ ನ ತು ಸರ್ವತ್ರೇತಿ ಭಾವೇನ ದೇಹೇಽಪೀತ್ಯುಕ್ತಮ್ । ಅನ್ಯಥಾ ಹರೇಃ ಸರ್ವಗತತ್ವೇನ ವಾಯೋಸ್ತು ಮಹತ್ತತ್ತ್ವಪ್ರದೇಶ ಏವ ಸ್ಥಿತತ್ವೇನ 'ಯತ್ರ ಹರಿಃ ತತ್ರೈವ ವಾಯುಃ' ಇತಿ ದ್ವಿತೀಯವ್ಯಾಪ್ತೇಃ ಅಸಂಭವಾದಿತಿ ಭಾವಃ । 'ಕಸ್ಮಿನ್ವಹಂತು' ಇತಿ ಪ್ರತೀಕಗ್ರಹಣೇನ 'ಕಸ್ಮಿನ್ವಹ-ಮುತ್ಕ್ರಾಂತ ಉತ್ಕ್ರಮಿಷ್ಯಾಮಿ ಕಸ್ಮಿನ್ವಹಂ ಸ್ಥಿತೇ ಸ್ಥಾಸ್ಯಾಮೀತಿ ಸಪ್ರಾಣಮಸೃಜತ' (ಷಟ್ಪ್ರಶ್ನೋ-ಪನಿಷತ್ 6/3) ಇತಿ ಶ್ರುತಿಂ ಸಂಗೃಹ್ಣಾತಿ । ಯಸ್ಮಿನ್ ಗತೇ ಅಹಮಪಿ ಪ್ರೇಮವಶಾತ್ ಗಮಿಷ್ಯಾಮಿ ಯಸ್ಮಿನ್ ಸ್ಥಿತೇ ಅಹಮಪಿ ಸ್ಥಾಸ್ಯಾಮಿ ತಾದೃಶಂ ಭಕ್ತಂ ಸೃಜಾಮೀತ್ಯಾಲೋಚ್ಯ ಸ ಪರಮಾತ್ಮಾ ಪ್ರಾಣಮಸೃಜತ ಇತಿ ಶ್ರುತೇರರ್ಥಃ ॥ ತೇನ ಕಾರಣೇನ ಅಸ್ಯ ಸುಗ್ರೀವಸ್ಯ ಪ್ರತೀಪಂ ವಾಲಿನಂ ಅಹನ್ ಹತವಾನ್ । 'ಹನ ಹಿಂಸಾಗತ್ಯೋಃ' ಇತಿ ಧಾತೋಃ ಲಙಿ ಅಹನಿತ್ಯೇವ ಹಿ ರೂಪ-ನಿಷ್ಪತ್ತಿರ್ಭವತಿ ॥ (ಮ.ಭಾ.ತಾ.ನಿ. ಭಾವಪ್ರಕಾಶಿಕಾ)

ಕಲ್ಪಾದಿಯಲ್ಲಿ ಆ ಪರಮಪುರುಷನು ಯೋಗ್ಯರ ಸಾಧನೆಗಾಗಿ ಕಲೆಗಳನ್ನು ಸೃಷ್ಟಿಮಾಡುತ್ತಾನೆ ಎಂದು ಇಚ್ಛಿಸಿ ನಿಶ್ಚಿತಜ್ಞಾನಾತ್ಮಕಆಲೋಚನೆಯನ್ನು ವ್ಯಕ್ತ ಮಾಡಿದನು. ಹೇಗೆಂದರೆ, ಸಜೀವ ಶರೀರದ ದೆಸೆಯಿಂದ ಯಾವಚೇತನನು ಬಿಟ್ಟು ಹೋದರೆ ನಾನೂಕೂಡ ಬಿಟ್ಟು ಹೋಗುವೆನು? ಯಾವ ಚೇತನನು ಶರೀರಸನ್ನಿಹಿತವಾಗಿದ್ದರೆ ನಾನೂ ಕೂಡ ಆತನ ಜೊತೆ-ಯಲ್ಲಿ ಆ ಶರೀರದಲ್ಲೇ ಇದ್ದು ಬಿಡುವೆನು? ಅಂಥ ನನ್ನನು ವಶೀಕರಣಮಾಡಲು ಸಮರ್ಥನಾದ ಭಕ್ತಿಜ್ಞಾನಾದಿಸಂಪನ್ನನು ಯಾರು? ಅಂಥವನಿದ್ದರೆ ಅವನಿಗಾಗಿ ಸರ್ವಕಲೆಗಳನ್ನೂ ಸೃಷ್ಟಿ-ಮಾಡುವೆನು? ಎಂದು ಆಲೋಚಿಸಿ ಅಂತಹವನು ಮುಖ್ಯಪ್ರಾಣನು ಎಂದು ನಿಶ್ಚಯಿಸಿ ಜೀವಕಲಾಭಿಮಾನಿಯಾಗಿ ಪ್ರಾಣನನ್ನು ಮೊದಲು ಸೃಷ್ಟಿಸಿದನು.

## ನರನಾರಾಯಣಾದಿಭಗವದ್ರೂಪಗಳ ಪರವಾಗಿ ವ್ಯಾಖ್ಯಾನಮಾಡಿದರೂ ದೋಷವಿಲ್ಲ

ಯದ್ಯಪಿ ಪೂರ್ವಾಚಾರ್ಯರೆಲ್ಲರೂ ಕೇವಲ ಮಧ್ವಾಚಾರ್ಯರ ಪರವಾಗಿಯೇ ಈ ಶ್ಲೋಕವನ್ನು ವ್ಯಾಖ್ಯಾನಿಸಿದ್ದಾರೆ. ಆದರೂ ಬೇರೆ ಅವತಾರಗಳ ಪರವಾಗಿ ಮಾಡುವುದಕ್ಕೆ ಅವರು ನಿಷೇಧವನ್ನೇನೂ ಮಾಡಿಲ್ಲ. ನಿಷೇಧಮಾಡಿಲ್ಲವಾದ್ದರಿಂದ ಅವರು ಮನಸ್ಸಿನಲ್ಲಿ ಒಪ್ಪಿದ್ದಾರೆಂಬುದು ಸಂಭಾವಿತ. ಹಾಗಾಗಿ ಅದನ್ನು ಅವಲಂಬಿಸಿಕೊಂಡು ಬೇರೆಯ ಅರ್ಥಪರವಾಗಿ ವಿವರಣೆ ಮಾಡುವುದು ಉಚಿತ. ಇದರ ಸಾರವೇ ಮುಂದಿನ ಶ್ಲೋಕ — 'ನ್ಯಾಯಮಪ್ರತಿಷಿದ್ಧಂ ಯತ್

ತದಿಹಾನುಮತಂ ಹೃದಿ । ಏತಸ್ಯಾಲಂಬ್ಯ ವಿವೃತಿಃ ಇತರಾರ್ಥತಯೋಚಿತಾ' ಎಂದು ತಿಳಿಯ. ಬೇಕು.

## ಆಚಾರ್ಯರಿಗೆ ಪ್ರತಿಪಕ್ಷಯೋಗ ಕಾಣಿಸುತ್ತಿದೆಯಲ್ಲ!

(ಎರೀಬಾಳಾಚಾರ್ಯರು) — ಅತ್ರ ಯದ್ಯಪಿ 'ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ' ಇತಿ ಪ್ರಮಾಣಾನುಸಾರೇಣ ಬ್ರಹ್ಮಮೀಮಾಂಸಾಶಾಸ್ತ್ರಾನಿರ್ಣೇಯಸ್ಯ ಶಬ್ದರಾಶೇರಲೀಕತಯಾ ಬ್ರಹ್ಮಮೀಮಾಂಸಾಶಾಸ್ತ್ರಸ್ಯೈವ ಸಂದಿಗ್ಧಶಾಸ್ತ್ರಾರ್ಥತ್ವೇ ಸುತರಾಂ ತನ್ನಿರ್ಣಯೇ ಯಸ್ಯ ವೇದೇತಿ-ಹಾಸಾದೇಃ ತಥಾತ್ವೇನ ಸಪಕ್ಷತ್ವೋಕ್ತಿರಯುಕ್ತಾ । ಏವಂ ಬೌದ್ಧಶಾಸ್ತ್ರವಿರುದ್ಧಸಿದ್ಧಾಂತತಾ ಚೋದನಾಪಿ ನೋಚಿತಾ । ಅನ್ಯಥಾ – 'ಪೃಷ್ಟಶ್ಚ ತೈರಾಹ ನಿಜಂ ಹೃದಿಸ್ಥಂ ಬೌದ್ಧಾಗಮಾರ್ಥಂ ಸ್ಮೃತಿಬಂಧಮೋಚನಮ್' ಇತಿ ದ್ವಾತ್ರಿಂಶದಧ್ಯಾಯನಿರ್ಣಯೋಕ್ತಿವಿರೋಧಪ್ರಸಂಗಾತ್ । ಏವಂ 'ಪ್ರತಿಪಕ್ಷಯುಕ್ತಿಃ ಪ್ರತಿವಾದಿಯೋಗೋ ನೈವ' ಇತ್ಯುಕ್ತಿರಪಿ ನೌಚಿತೀಮರ್ಹತಿ । ಶ್ರೀಸುಮಧ್ವ-ವಿಜಯೇ ಬಹುಶಃ ಪ್ರತಿವಾದಿಯೋಗಾಭಿಧಾನಾತ್ । ತಥಾಪಿ ವೇದೇತಿಹಾಸಾದೇರಪರವಿದ್ಯಾತ್ವೇನ ಸಪಕ್ಷತ್ವೋಕ್ತಿಃ । ಬೌದ್ಧಾದೇರ್ವಿರುದ್ಧಸಿದ್ಧಾಂತೋಕ್ತಿರ್ಯಥಾಶ್ರುತಾಭಿಪ್ರಾಯೇಣ । ವಸ್ತುತಸ್ತು 'ವಿಪಕ್ಷತೋ ವಿರುದ್ಧಸಿದ್ಧಾಂತಾತ್' ಇತ್ಯೇವ ತತ್ರ ಪಾಠೋ ದೃಶ್ಯತ ಇತಿ ನೈಷಾ ಶಂಕೋ-ನ್ಮಿಷತಿ । 'ಪ್ರತಿಪಕ್ಷಯುಕ್ತಿಃ ಪ್ರತಿವಾದಿಯೋಗಃ' ಇತ್ಯತ್ರ ಚ ಯೋಗಶಬ್ದಃ ಸಾಮರ್ಥ್ಯವಾಚೀ । ಉಪಾಯವಾಚೀ ವಾ ಜ್ಞೇಯಃ । ಪ್ರಾಪ್ತೋಽಪಿ ಪ್ರತಿವಾದಿನಃ ಸ್ವಪಕ್ಷಸಾಧನಾಯೇಷ್ಟೇ । ಪ್ರತ್ಯುತ ಜುಗುಪ್ಸಿತಮೇವ ಭಾಷತೇ ಇತಿ ಭಾವಃ । ತದುಕ್ತಮ್ –

ಆಜಾದೇಶಾತ್ ಉತ್ತರಂ ರಾದಿಶಬ್ದಂ ಶ್ರುತ್ವಾ ನಾರೇತ್ಯುಕ್ತವಂತಂ ಪದಂ ತಮ್ ।
ವ್ಯಾಖ್ಯಾಲೌಲ್ಯಾದೈತರೇಯಾದಿಸೂಕ್ತೇ ಪೃಥ್ವೀದೇವಾ ನಿಂದನೀಯಂ ನಿನಿಂದುಃ ॥ (12–40)

ಇತ್ಯಾದಿ ತತ್ರ ತತ್ರ ಸುಮಧ್ವವಿಜಯೇ ।

ವೇದೇತಿಹಾಸಾದಿಗಳನ್ನು ಸಪಕ್ಷ ಎಂಬ ಶಬ್ದದಿಂದ ಗ್ರಹಿಸಬೇಕು. ಯದ್ಯಪಿ 'ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ' (ಬ್ರ.ಸೂ.ಭಾ. 1-1-1) ಎಂಬ ಪ್ರಮಾಣಾನುಸಾರವಾಗಿ ಬ್ರಹ್ಮ-ಸೂತ್ರದಿಂದ ನಿರ್ಣೇಯವಾಗದೇ ಇರುವ ಶಬ್ದರಾಶಿಯು ಅಸತ್ಯವಾದ್ದರಿಂದ ಬ್ರಹ್ಮ-ಮೀಮಾಂಸಾಶಾಸ್ತ್ರವೇ ಸಂದಿಗ್ಧವಾದ ಅರ್ಥವುಳ್ಳದ್ದಾಗಿ ಸುತರಾಂ ಅದರ ನಿರ್ಣಯವಾಗದೇ ಇದ್ದಾಗ ವೇದೇತಿಹಾಸಾದಿಗಳನ್ನು ಸಪಕ್ಷವಾಗಿ ಆಶ್ರಯಿಸಿದ್ದು ಹೇಗೆ? ಅದೇ ರೀತಿ ಬೌದ್ಧಶಾಸ್ತ್ರ-ವೆಂಬ ವಿರುದ್ಧವಾದ ಸಿದ್ಧಾಂತದ ಬಗ್ಗೆ ಪ್ರಶ್ನೆಯು ಸರಿಯಲ್ಲ. ಏಕೆಂದರೆ ಮೂವತ್ತೆರಡನೆಯ ಅಧ್ಯಾಯದ ತಾತ್ಪರ್ಯನಿರ್ಣಯದ ಮಾತಿನ ವಿರೋಧ ಬರುವುದು —

### ತಾತ್ಪರ್ಯನಿರ್ಣಯದ ವಿರೋಧ

ನಾರಾಯಣೋಽಪ್ಯಾಪ್ಯ ಸುರೇಂದ್ರವೃಂದಂ ವೃತ್ತಂ ಚ ತೇಷಾಮಖಿಲಂ ನಿಗದ್ಯ ।
ಪೃಷ್ಟಶ್ಚ ತೈರಾಹ ನಿಜಂ ಹೃದಿಸ್ಥಂ ಬೌದ್ಧಾಗಮಾರ್ಥಂ ಸೃತಿಬಂಧಮೋಚನಮ್ ॥ 150 ॥

ಎಂಬುದಾಗಿ.

– ನಾರಾಯಣಃ ಬುದ್ಧರೂಪಃ ಸುರೇಂದ್ರವೃಂದಂ ಆಪ್ಯ, ತೇಷಾಂ ದೇವಾನಾಂ ಅಖಿಲಂ ವೃತ್ತಂ ಸ್ವಕೃತವೃತ್ತಾಂತಂ ನಿಗದ್ಯ ಉಕ್ತ್ವಾ ತೈಃ ದೇವೈಃ ಪೃಷ್ಟಃ ಬುದ್ಧಶಾಸ್ತ್ರಾಭಿಪ್ರಾಯಪೃಷ್ಟಃ ಸನ್ ಸೃತೇಃ ಸಂಸಾರಸ್ಯ, ಬಂಧಸ್ಯ ಮೋಚನಂ ನಾಶಕಂ ನಿಜಂ ಹೃದಿಸ್ಥಂ ಬೌದ್ಧಾಗಮಸ್ಯ ಅರ್ಥಮ್ । ಸ್ವಾಭಿಪ್ರೇತಾರ್ಥಮಿತ್ಯರ್ಥಃ । ಆಹ ॥

ಆದರೂ ವೇದ, ಇತಿಹಾಸಾದಿಗಳನ್ನು ಅಪರವಿದ್ಯೆಯೆಂದು ಗ್ರಹಿಸಿ ಸಪಕ್ಷವನ್ನಾಗಿ ಹೇಳಿದ್ದು. ಬೌದ್ಧಾದಿಶಾಸ್ತ್ರಗಳನ್ನು ವಿರುದ್ಧಸಿದ್ಧಾಂತ ಎಂದಿದ್ದು ಯಥಾಶ್ರುತಾಭಿಪ್ರಾಯೇಣ. ವಸ್ತುತಸ್ತು ವಿಪಕ್ಷತಃ ಎನ್ನುವುದಕ್ಕೆ ವಿರುದ್ಧಸಿದ್ಧಾಂತಾತ್ ಎಂಬುದಾಗಿಯೇ ಅಲ್ಲಿ ಪಾಠವು ಕಾಣುತ್ತಿದೆ. ಆದ್ದರಿಂದ ಈ ಶಂಕೆಗೆ ಅವಕಾಶವಿಲ್ಲ.

'ಪ್ರತಿಪಕ್ಷಯುಕ್ತಿಃ' – 'ಪ್ರತಿವಾದಿಯೋಗಃ' ಎಂಬಲ್ಲಿ ಯೋಗ ಎಂಬ ಶಬ್ದಕ್ಕೆ ಉಪಾಯ ಅಥವಾ ಸಾಮರ್ಥ್ಯ ಎಂದರ್ಥ. ವಾದಿಯು ಪ್ರಾಪ್ತನಾಗಿದ್ದರೂ ಪ್ರತಿವಾದಿಗೆ ಸ್ವಪಕ್ಷಸಾಧನೆಯನ್ನು ಮಾಡಲು ಬರುವುದಿಲ್ಲ. ಹೊರತು ಜುಗುಪ್ಸಿತವಾದದ್ದನ್ನೇ ಮಾತನಾಡುತ್ತಾನೆ ಎಂದರ್ಥ. ಇದನ್ನು ಸುಮಧ್ವವಿಜಯದಲ್ಲಿ –

ಆಜಾದೇಶಾತ್ ಉತ್ತರಂ ರಾದಿಶಬ್ದಂ ಶ್ರುತ್ವಾ ನಾರೇತ್ಯುಕ್ತವಂತಂ ಪದಂ ತಮ್ ।
ವ್ಯಾಖ್ಯಾಲೌಲ್ಯಾದೈತರೇಯಾದಿಸೂಕ್ತೇ ಪೃಥ್ವೀದೇವಾ ನಿಂದನೀಯಂ ನಿನಿಂದುಃ ॥ (12-40)

ಮುಂತಾದ ಕಡೆ ಅಲ್ಲಲ್ಲಿ ಕಾಣಬೇಕು.

ಪೃಥ್ವೀದೇವಾಃ = ಬ್ರಾಹ್ಮಣರು, ಐತರೇಯಾದಿಸೂಕ್ತೇ = ಋಗ್ವೇದದ ಮೊದಲನೆಯ ಸೂಕ್ತದಲ್ಲಿರುವ 'ಅಗ್ನಿನಾರಯಿಮಶ್ನುವತ್' ಇತ್ಯಾದಿ ಋಕ್ಕಿನಲ್ಲಿ, ಆಜೌದೇಶಾತ್ = 'ಆಜೋಽನಾಽಸ್ತ್ರಿಯಾಂ' ಎಂಬ ಪಾಣಿನಿಸೂತ್ರದಿಂದ ತೃತೀಯಾ- ವಿಭಕ್ತಿಯ ಏಕವಚನಕ್ಕೆ ಆದೇಶವಾಗಿ ಬರುವ 'ನಾ' ಎಂಬುದಕ್ಕಿಂತ, ಉತ್ತರಂ = ಮುಂದೆ ಇರುವ, ರಾದಿಶಬ್ದಂ = ರೇಫವು ಆದಿಯಾಗಿ ಉಳ್ಳ ರಯಿ ಶಬ್ದವನ್ನು, ಶ್ರುತ್ವಾ = ಕೇಳಿ, ವ್ಯಾಖ್ಯಾಲೌಲ್ಯಾತ್ = ವ್ಯಾಖ್ಯಾನ ಮಾಡುವ ದುರಾಸೆಯಿಂದ, ನಾರೇತಿ ಪದಂ = 'ನಾರ' ಎಂಬ ಶಬ್ದವನ್ನು, ಉಕ್ತವಂತಂ = ಹೇಳಿದ, ನಿಂದನೀಯಂ ತಂ = ನಿಂದಿಸಲು ಯೋಗ್ಯನಾದ ಆ ಪುಂಡರೀಕಪುರಿಯನ್ನು, ನಿನಿಂದುಃ = ನಿಂದಿಸಿದರು.

ತದಿಹಾನುಮತಂ ಹೃದಿ । ಏತಸ್ಯಾಲಂಬ್ಯ ವಿವೃತಿಃ ಇತರಾರ್ಥತಯೋಚಿತಾ' ಎಂದು ತಿಳಿಯ-ಬೇಕು.

## ಆಚಾರ್ಯರಿಗೆ ಪ್ರತಿಪಕ್ಷಯೋಗ ಕಾಣಿಸುತ್ತಿದೆಯಲ್ಲ!

(ಏರೀಬಾಳಾಚಾರ್ಯರು) — ಅತ್ರ ಯದ್ಯಪಿ 'ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ' ಇತಿ ಪ್ರಮಾಣಾನುಸಾರೇಣ ಬ್ರಹ್ಮಮೀಮಾಂಸಾಶಾಸ್ತ್ರಾನಿರ್ಣೇಯಸ್ಯ ಶಬ್ದರಾಶೇರಲೀಕತಯಾ ಬ್ರಹ್ಮಮೀಮಾಂಸಾಶಾಸ್ತ್ರಸ್ಯೈವ ಸಂದಿಗ್ಧಶಾಸ್ತ್ರಾರ್ಥತ್ವೇ ಸುತರಾಂ ತನ್ನಿರ್ಣಯೇ ಯಸ್ಯ ವೇದೇತಿ-ಹಾಸಾದೇಃ ತಥಾತ್ವೇನ ಸಪಕ್ಷತ್ವೋಕ್ತಿರಯುಕ್ತಾ । ಏವಂ ಬೌದ್ಧಶಾಸ್ತ್ರವಿರುದ್ಧಸಿದ್ಧಾಂತತಾ ಚೋದನಾಪಿ ನೋಚಿತಾ । ಅನ್ಯಥಾ – 'ಪೃಷ್ಟಶ್ಚ ತೈರಾಹ ನಿಜಂ ಹೃದಿಸ್ಥಂ ಬೌದ್ಧಾಗಮಾರ್ಥಂ ಸೃತಿಬಂಧಮೋಚನಮ್' ಇತಿ ದ್ವಾತ್ರಿಂಶದಧ್ಯಾಯನಿರ್ಣಯೋಕ್ತಿವಿರೋಧಪ್ರಸಂಗಾತ್ । ಏವಂ 'ಪ್ರತಿಪಕ್ಷಯುಕ್ತಿಃ ಪ್ರತಿವಾದಿಯೋಗೋ ನೈವ' ಇತ್ಯುಕ್ತಿರಪಿ ನೌಚಿತೀಮರ್ಹತಿ । ಶ್ರೀಸುಮಧ್ವ-ವಿಜಯೇ ಬಹುಶಃ ಪ್ರತಿವಾದಿಯೋಗಾಭಿಧಾನಾತ್ । ತಥಾಪಿ ವೇದೇತಿಹಾಸಾದೇರಪರವಿದ್ಯಾತ್ವೇನ ಸಪಕ್ಷತ್ವೋಕ್ತಿಃ । ಬೌದ್ಧಾದೇರ್ವಿರುದ್ಧಸಿದ್ಧಾಂತೋಕ್ತಿರ್ಯಥಾಶ್ರುತಾಭಿಪ್ರಾಯೇಣ । ವಸ್ತುತಸ್ತು 'ವಿಪಕ್ಷತೋ ವಿರುದ್ಧಸಿದ್ಧಾಂತಾತ್' ಇತ್ಯೇವ ತತ್ರ ಪಾಠೋ ದೃಶ್ಯತ ಇತಿ ನೈಷಾ ಶಂಕೋ-ನ್ಮಿಷತಿ । 'ಪ್ರತಿಪಕ್ಷಯುಕ್ತಿಃ ಪ್ರತಿವಾದಿಯೋಗಃ' ಇತ್ಯತ್ರ ಚ ಯೋಗಶಬ್ದಃ ಸಾಮರ್ಥ್ಯವಾಚೀ । ಉಪಾಯವಾಚೀ ವಾ ಜ್ಞೇಯಃ । ಪ್ರಾಪ್ತೋऽಪಿ ಪ್ರತಿವಾದಿನಃ ಸ್ವಪಕ್ಷಸಾಧನಾಯೇಷ್ವೇ । ಪ್ರತ್ಯುತ ಜುಗುಪ್ಸಿತಮೇವ ಭಾಷತೇ ಇತಿ ಭಾವಃ । ತದುಕ್ತಮ್ –

ಆಜಾದೇಶಾತ್ ಉತ್ತರಂ ರಾದಿಶಬ್ದಂ ಶ್ರುತ್ವಾ ನಾರೇತ್ಯುಕ್ತವಂತಂ ಪದಂ ತಮ್ ।
ವ್ಯಾಖ್ಯಾಲೌಲ್ಯಾದೈತರೇಯಾದಿಸೂಕ್ತೇ ಪೃಥ್ವೀದೇವಾ ನಿಂದನೀಯಂ ನಿನಿಂದುಃ ॥ (12–40)

ಇತ್ಯಾದಿ ತತ್ರ ತತ್ರ ಸುಮಧ್ವವಿಜಯೇ ।

ವೇದೇತಿಹಾಸಾದಿಗಳನ್ನು ಸಪಕ್ಷ ಎಂಬ ಶಬ್ದದಿಂದ ಗ್ರಹಿಸಬೇಕು. ಯದ್ಯಪಿ 'ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ' (ಬ್ರ.ಸೂ.ಭಾ. 1-1-1) ಎಂಬ ಪ್ರಮಾಣಾನುಸಾರವಾಗಿ ಬ್ರಹ್ಮ-ಸೂತ್ರದಿಂದ ನಿರ್ಣೇಯವಾಗದೇ ಇರುವ ಶಬ್ದರಾಶಿಯು ಅಸತ್ಯವಾದ್ದರಿಂದ ಬ್ರಹ್ಮ-ಮೀಮಾಂಸಾಶಾಸ್ತ್ರವೇ ಸಂದಿಗ್ಧವಾದ ಅರ್ಥವುಳ್ಳದ್ದಾಗಿ ಸುತರಾಂ ಅದರ ನಿರ್ಣಯವಾಗದೇ ಇದ್ದಾಗ ವೇದೇತಿಹಾಸಾದಿಗಳನ್ನು ಸಪಕ್ಷವಾಗಿ ಆಶ್ರಯಿಸಿದ್ದು ಹೇಗೆ? ಅದೇ ರೀತಿ ಬೌದ್ಧಶಾಸ್ತ್ರ-ವೆಂಬ ವಿರುದ್ಧವಾದ ಸಿದ್ಧಾಂತದ ಬಗ್ಗೆ ಪ್ರಶ್ನೆಯು ಸರಿಯಲ್ಲ. ಏಕೆಂದರೆ ಮೂವತ್ತೆರಡನೆಯ ಅಧ್ಯಾಯದ ತಾತ್ಪರ್ಯನಿರ್ಣಯದ ಮಾತಿನ ವಿರೋಧ ಬರುವುದು –

## ತಾತ್ಪರ್ಯನಿರ್ಣಯದ ವಿರೋಧ

ನಾರಾಯಣೋಽಪ್ಯಾಪ್ಯ ಸುರೇಂದ್ರವೃಂದಂ ವೃತ್ತಂ ಚ ತೇಷಾಮಖಿಲಂ ನಿಗದ್ಯ ।
ಪೃಷ್ಟಶ್ಚ ತೈರಾಹ ನಿಜಂ ಹೃದಿಸ್ಥಂ ಬೌದ್ಧಾಗಮಾರ್ಥಂ ಸೃತಿಬಂಧಮೋಚನಮ್ ॥ 150 ॥

ಎಂಬುದಾಗಿ.

– ನಾರಾಯಣಃ ಬುದ್ಧರೂಪಃ ಸುರೇಂದ್ರವೃಂದಂ ಆಪ್ಯ, ತೇಷಾಂ ದೇವಾನಾಂ ಅಖಿಲಂ ವೃತ್ತಂ ಸ್ವಕೃತವೃತ್ತಾಂತಂ ನಿಗದ್ಯ ಉಕ್ತ್ವಾ, ತೈಃ ದೇವೈಃ ಪೃಷ್ಟಃ ಬುದ್ಧಶಾಸ್ತ್ರಾಭಿಪ್ರಾಯಪೃಷ್ಟಃ ಸನ್ ಸೃತೇಃ ಸಂಸಾರಸ್ಯ, ಬಂಧಸ್ಯ ಮೋಚನಂ ನಾಶಕಂ ನಿಜಂ ಹೃದಿಸ್ಥಂ ಬೌದ್ಧಾಗಮಸ್ಯ ಅರ್ಥಮ್ । ಸ್ವಾಭಿಪ್ರೇತಾರ್ಥಮಿತ್ಯರ್ಥಃ । ಆಹ ॥

ಆದರೂ ವೇದ, ಇತಿಹಾಸಾದಿಗಳನ್ನು ಅಪರವಿದ್ಯೆಯೆಂದು ಗ್ರಹಿಸಿ ಸಪಕ್ಷವನ್ನಾಗಿ ಹೇಳಿದ್ದು. ಬೌದ್ಧಾದಿಶಾಸ್ತ್ರಗಳನ್ನು ವಿರುದ್ಧಸಿದ್ಧಾಂತ ಎಂದಿದ್ದು ಯಥಾಶ್ರುತಾಭಿಪ್ರಾಯೇಣ. ವಸ್ತುತಸ್ತು ವಿಪಕ್ಷತಃ ಎನ್ನುವುದಕ್ಕೆ ವಿರುದ್ಧಸಿದ್ಧಾಂತಾತ್ ಎಂಬುದಾಗಿಯೇ ಅಲ್ಲಿ ಪಾಠವು ಕಾಣುತ್ತಿದೆ. ಆದ್ದರಿಂದ ಈ ಶಂಕೆಗೆ ಅವಕಾಶವಿಲ್ಲ.

'ಪ್ರತಿಪಕ್ಷಯುಕ್ತಿಃ' – 'ಪ್ರತಿವಾದಿಯೋಗಃ' ಎಂಬಲ್ಲಿ ಯೋಗ ಎಂಬ ಶಬ್ದಕ್ಕೆ ಉಪಾಯ ಅಥವಾ ಸಾಮರ್ಥ್ಯ ಎಂದರ್ಥ. ವಾದಿಯು ಪ್ರಾಪ್ತನಾಗಿದ್ದರೂ ಪ್ರತಿವಾದಿಗೆ ಸ್ವಪಕ್ಷಸಾಧನೆಯನ್ನು ಮಾಡಲು ಬರುವುದಿಲ್ಲ. ಹೊರತು ಜುಗುಪ್ಸಿತವಾದದ್ದನ್ನೇ ಮಾತನಾಡುತ್ತಾನೆ ಎಂದರ್ಥ. ಇದನ್ನು ಸುಮಧ್ವವಿಜಯದಲ್ಲಿ –

ಆಜಾದೇಶಾತ್ ಉತ್ತರಂ ರಾದಿಶಬ್ದಂ ಶ್ರುತ್ವಾ ನಾರೇತ್ಯುಕ್ತವಂತಂ ಪದಂ ತಮ್ ।
ವ್ಯಾಖ್ಯಾಲೌಲ್ಯಾದೈತರೇಯಾದಿಸೂಕ್ತೇ ಪೃಥ್ವೀದೇವಾ ನಿಂದನೀಯಂ ನಿನಿಂದುಃ ॥ (12-40)

ಮುಂತಾದ ಕಡೆ ಅಲ್ಲಲ್ಲಿ ಕಾಣಬೇಕು.

ಪೃಥ್ವೀದೇವಾಃ = ಬ್ರಾಹ್ಮಣರು, ಐತರೇಯಾದಿಸೂಕ್ತೇ = ಋಗ್ವೇದದ ಮೊದಲನೆಯ ಸೂಕ್ತದಲ್ಲಿರುವ 'ಅಗ್ನಿನಾರಯಿಮಶ್ನುವತ್' ಇತ್ಯಾದಿ ಋಕ್ಕಿನಲ್ಲಿ, ಆಜಾದೇಶಾತ್ = 'ಆಙೋಽನಾಽಸ್ತ್ರಿಯಾಂ' ಎಂಬ ಪಾಣಿನಿಸೂತ್ರದಿಂದ ತೃತೀಯಾ- ವಿಭಕ್ತಿಯ ಏಕವಚನಕ್ಕೆ ಆದೇಶವಾಗಿ ಬರುವ 'ನಾ' ಎಂಬುದಕ್ಕಿಂತ, ಉತ್ತರಂ = ಮುಂದೆ ಇರುವ, ರಾದಿಶಬ್ದಂ = ರೇಫವು ಆದಿಯಾಗಿ ಉಳ್ಳ ರಯಿ ಶಬ್ದವನ್ನು, ಶ್ರುತ್ವಾ = ಕೇಳಿ, ವ್ಯಾಖ್ಯಾಲೌಲ್ಯಾತ್ = ವ್ಯಾಖ್ಯಾನ ಮಾಡುವ ದುರಾಸೆಯಿಂದ, ನಾರೇತಿ ಪದಂ = 'ನಾರ' ಎಂಬ ಶಬ್ದವನ್ನು, ಉಕ್ತವಂತಂ = ಹೇಳಿದ, ನಿಂದನೀಯಂ ತಂ = ನಿಂದಿಸಲು ಯೋಗ್ಯನಾದ ಆ ಪುಂಡರೀಕಪುರಿಯನ್ನು, ನಿನಿಂದುಃ = ನಿಂದಿಸಿದರು.

## ಆನಂದತೀರ್ಥಪಕ್ಷದಲ್ಲಿ ವ್ಯಾಪ್ತಿರ್ಯಸ್ಯ ಎಂಬುದರ ಸಮನ್ವಯ

(ಯಾದುಪತ್ಯ) – ಆನಂದತೀರ್ಥಪಕ್ಷೇ — 'ನಿಜಃ ಪಕ್ಷೋ' ಬ್ರಹ್ಮಮೀಮಾಂಸಾಶಾಸ್ತ್ರಮ್, ವಿಪ್ರತಿಪತ್ತ್ಯಾ ಸಂದಿಗ್ಧಸಾಧ್ಯಾರ್ಥವತ್ತ್ವಾತ್ । ತತ್ರ 'ವ್ಯಾಪ್ತಿಃ' ನಿಷ್ಠಾ, ನ ತು ಪರಭಾಷ್ಯಕಾರಸ್ಯೇವಾ-ನಾದರಃ, ತೇನ ಶ್ರುತಿಸೂತ್ರಯೋಃ ವಿರೋಧೇ ಸೂತ್ರಾಣಾಂ ಕಥಂಚಿದ್ ಯೋಜ್ಯತ್ವಸ್ಯೋಕ್ತ-ತ್ವಾತ್ । 'ನಿಜೇನ' ಸ್ವಾಭಾವಿಕೇನೈವ, ನ ವರಾದಿಲಬ್ಧೇನ, 'ಮಹಸಾ' ಸ್ವಸಾಧ್ಯಜ್ಞಾಪನಸಾಮರ್ಥ್ಯೇನ ಇತ್ಯರ್ಥಃ । 'ಸಪಕ್ಷೇ' ನಿರ್ಣೇತವ್ಯಾರ್ಥವತ್ತಯಾ ನಿಶ್ಚಿತೇ ವೇದೇತಿಹಾಸಾದೌ, 'ಸ್ಥಿತಿಃ' ನಿಷ್ಠಾ । 'ವಿಪಕ್ಷತಃ' ವಿರುದ್ಧರಾದ್ಧಾಂತತೋ, 'ವ್ಯಾವೃತ್ತಿಃ' ತತ್ರಾನಾದರಃ । 'ಸಕ್ತಿಃ' ಆಸಕ್ತಿಃ, ಆಗ್ರಹ ಇತಿ ಯಾವತ್ । ಋಜುಯೋಗಿನಾಮದುಷ್ಟಬುದ್ಧಿತ್ವಸ್ಯ ವೇದಾದಿಪ್ರಸಿದ್ಧತ್ವಾದಿತಿ ಹೇತುಂ 'ವೈ'ಶಬ್ದೇನ ಸೂಚಯತಿ । 'ಪ್ರತಿಪಕ್ಷಯುಕ್ತಿಃ' ಪ್ರತಿವಾದಿಯೋಗಃ । ಅನುಮಾನೇ ಸರ್ವತ್ರ ಕಥಂಚಿತ್ ಪ್ರತಿಪಕ್ಷಯೋಗಃ ಸಂಭಾವಿತಃ । 'ಉಪಾಧಿಪ್ರತಿಪಕ್ಷೌ ತು ಕ್ವ ನಾಮಾತೀವ ದುರ್ವಚೌ' ಇತ್ಯುಕ್ತೇಃ; ಅಸ್ಯ ತು ಸರ್ವಥಾ ಪ್ರತಿಪಕ್ಷಯೋಗಸಂಭಾವನಾಪಿ ನಾಸ್ತೀತ್ಯಭಿಪ್ರಾಯೇಣ 'ನೈವ' ಇತ್ಯುಕ್ತಮ್ ।

ಆನಂದತೀರ್ಥರ ಪಕ್ಷದಲ್ಲಿ – 'ಪಕ್ಷ' ಎಂದರೆ ಬ್ರಹ್ಮಮೀಮಾಂಸಾಶಾಸ್ತ್ರ, ಏಕೆಂದರೆ ಅದರಿಂದ ಸಾಧ್ಯವಾದ ಅರ್ಥವು ವಿಪ್ರತಿಪತ್ತಿಯ ನಿಮಿತ್ತ ಸಂದಿಗ್ಧವಾಗಿದೆ. ಅಂತಹ ಅರ್ಥವುಳ್ಳ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ 'ವ್ಯಾಪ್ತಿಃ' - ನಿಷ್ಠೆಯು, ಹೊರತು ಬೇರೆಯ ಭಾಷ್ಯಕಾರರಂತೆ ಅನಾದರವಿಲ್ಲ. ಏಕೆಂದರೆ ಪರಭಾಷ್ಯಕಾರರು ಶ್ರುತಿಸೂತ್ರಗಳಿಗೆ ವಿರೋಧ ಬಂದಾಗ ಸೂತ್ರಗಳನ್ನೇ ಯಾವುದೋ ಒಂದು ಕ್ರಮದಲ್ಲಿ ಯೋಜನೆ ಮಾಡಬೇಕೆಂದು ಹೇಳಿ ಸೂತ್ರದಲ್ಲಿ ಅನಾದರವನ್ನು ತೋರಿಸಿದ್ದಾರೆ. 'ನಿಜೇನ' - ಸ್ವಾಭಾವಿಕವಾದ, ಮಹಸಾ - ತನ್ನಿಂದ ಸಾಧ್ಯವಾದದನ್ನು ತಿಳಿಸುವ ಸಾಮರ್ಥ್ಯವಿರುವುದರಿಂದ ಎಂದರ್ಥ. ವರಾದಿಬಲದಿಂದಲ್ಲ ಎಂದಭಿಪ್ರಾಯ. 'ಸಪಕ್ಷೇ' - ನಿರ್ಣಯಿಸಬೇಕಾದ ಇನ್ನೂ ನಿಶ್ಚಯವಾಗದೇ ಇರುವ ಅರ್ಥವುಳ್ಳದ್ದೆಂದು ನಿಶ್ಚಿತವಾದ ವೇದೇತಿಹಾಸಾದಿಗಳಲ್ಲಿ ಸ್ಥಿತಿಃ - ನಿಷ್ಠೆಯು. ವಿಪಕ್ಷತಃ - ವಿರುದ್ಧಸಿದ್ಧಾಂತದಲ್ಲಿ, ವ್ಯಾವೃತ್ತಿಃ - ಅನಾದರವು. 'ಸಕ್ತಿಃ' - ಆಸಕ್ತಿಯು ಆಗ್ರಹ ಎಂದಭಿಪ್ರಾಯ. ಋಜುಯೋಗಿಗಳಿಗೆ ಬುದ್ಧಿದೋಷ-ವಿಲ್ಲವೆಂಬುದು ವೇದಾದಿಪ್ರಸಿದ್ಧ ಎಂಬ ಹೇತುವನ್ನು 'ವೈ' ಎಂಬ ಶಬ್ದದಿಂದ ಸೂಚಿಸುತ್ತಿದ್ದಾರೆ. ಪ್ರತಿಪಕ್ಷಯುಕ್ತಿಃ - ಪ್ರತಿವಾದಿಯ ಸಂಬಂಧ, ಅನುಮಾನದಲ್ಲಿ ಎಲ್ಲ ಕಡೆ ಯಾವುದೋ ಒಂದು ರೀತಿಯಲ್ಲಿ ಪ್ರತಿಪಕ್ಷದ ಸಂಬಂಧವು ಸಂಭಾವಿತ. 'ಉಪಾಧಿಪ್ರತಿಪಕ್ಷೌ ತು ಕ್ವನಾಮಾತೀವದುರ್ವಚೌ' ಎಂದು ಹೇಳಿದ್ದರಿಂದ. ಆನಂದತೀರ್ಥರಿಗಾದರೋ ಎಂದಿಗೂ ಪ್ರತಿಪಕ್ಷದ ಸಂಬಂಧದ ಸಂಭಾವನೆಯೂ ಇಲ್ಲ ಎಂಬ ಅಭಿಪ್ರಾಯದಿಂದ 'ನೈವ' ಎಂದು ಹೇಳಿದ್ದಾರೆ. ಆದ್ದರಿಂದಲೇ ಅತುಲವಾದ ಪ್ರಮಾಣ ಎಂದು ಹೇಳಿದ್ದೂ ಕೂಡ.

ಅನುಮಾನಪಕ್ಷದಲ್ಲಿಯಾದರೋ 'ನಿಜೇನ ಮಹಸಾ' - ವ್ಯಾಪ್ತಿಯೆಂಬ ಸಾಮರ್ಥ್ಯದಿಂದ, 'ನಿಜೇ ಪಕ್ಷೇ' ಸಾಧ್ಯಧರ್ಮದಿಂದ ಕೂಡಿರುವ ಧರ್ಮಿಯಲ್ಲಿ, 'ವ್ಯಾಪ್ತಿಃ' - ಎಲ್ಲಕಡೆ ಇರುವಿಕೆಯು, ಇಲ್ಲದಿದ್ದರೆ ಭಾಗಾಸಿದ್ಧಿಯು ಬಂದೀತು। ಉಳಿದದ್ದು ಸ್ಪಷ್ಟ. "ಶುದ್ಧಂ" - ಐದು ಅಂಶಗಳಿಂದ ಕೂಡಿರುವುದು, ಪ್ರಮಾಣಂ - ಅನುಮಿತಿರೂಪವಾದ ಯಥಾರ್ಥಜ್ಞಾನಕ್ಕೆ ಕಾರಣವಾದುದು. ಆನಂದತೀರ್ಥಮುನಿಗಳೂ ಕೂಡ ಸಕಲರ ಬುದ್ಧಿಗೆ ನಿಯಾಮಕರಾದ್ದರಿಂದ ಸಮ್ಮಂತಹವರ ಯಥಾರ್ಥವಾದ ಅನುಮಿತಿಗೆ ಕರಣರಾಗಿದ್ದಾರೆ ಎಂಬು ಉಪಪಾದಿಸಬೇಕು.

## 'ಭವತಿ ಯದನುಭಾವಾತ್' ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा -**

भवति यदनुभावादेडमूकोऽपि वाग्मी
जडमतिरपि जन्तुर्जायते प्राज्ञमौलिः ।
सकलवचनचेतोदेवता भारती सा
मम वचसि निधत्तां सन्निधिं मानसे च ॥४ ॥

ಅನ್ವಯಾರ್ಥ - ಯದನುಭಾವಾತ್ = ಯತ್ - ಯಾರ, ಅನುಭವಾತ್ - ಅನುಗ್ರಹದಿಂದ (ಸಾಮರ್ಥ್ಯದಿಂದ); ಏಡಮೂಕಃ ಅಪಿ = ಹುಟ್ಟಿನಿಂದಲೇ ಮೂಕ ಹಾಗೂ ಕಿವುಡನಾದಂತಹ ವ್ಯಕ್ತಿಯೂ; ವಾಗ್ಮೀ = ವಾಗ್ಮಿಯಾಗಿ; ಭವತಿ = ಆಗುವನೋ; ಅಪಿ = ಹಾಗೂ; ಜಡಮತಿಃ = ಜಡವಾದ ಬುದ್ಧಿಯುಳ್ಳವನು; ಜಂತುರಪಿ = ವ್ಯಕ್ತಿಯೂ ಕೂಡ; ಪ್ರಾಜ್ಞಮೌಲಿಃ = ಬುದ್ಧಿವಂತರಲ್ಲಿ ಶಿಖಾಮಣಿಯಂತೆ ಆಗುವನೋ; ಸಾ = ಅಂತಹ, ಸಕಲವಚನಚೇತೋದೇವತಾ = ಸಕಲ - ಎಲ್ಲರ, ವಚನ - ಮಾತು, ಚೇತೋ - ಮನಸ್ಸು ಇವುಗಳಿಗೆ, ದೇವತಾ = ಅಭಿಮಾನಿನಿಯಾದ; ಭಾರತೀ = ಭಾರತೀದೇವಿಯು; ಮಮ = ನನ್ನ; ವಚಸಿ = ಮಾತಿನಲ್ಲಿ; ಚ = ಮತ್ತು; ಮಾನಸೇ = ಮನಸ್ಸಿನಲ್ಲಿ; ಸನ್ನಿಧಿಂ = ಸನ್ನಿಧಾನವನ್ನು; ನಿಧತ್ತಾಂ = ಇಡಲಿ (ಸ್ಥಾಪಿಸಲಿ).

ಸಾರ - ಈ ಶ್ಲೋಕದಲ್ಲಿ ವಾಯುಪತ್ನಿಯಾದ ಭಾರತೀದೇವಿಯನ್ನು ಪ್ರಾರ್ಥಿಸಿದ್ದಾರೆ. ಭಾರತೀ-ದೇವಿಯು ಎಲ್ಲರ ಮಾತು ಹಾಗೂ ಮನಸ್ಸಿಗೆ ಅಭಿಮಾನಿನಿಯಾಗಿದ್ದಾಳೆ. ಹೀಗಾಗಿ ಅವಳ ಅನುಗ್ರಹದಿಂದ ಹುಟ್ಟಿನಿಂದ ಕಿವುಡನೂ ಹಾಗೂ ಮೂಗನೂ ಆದವನು ಒಳ್ಳೆ ವಾಗ್ಮಿಯಾಗುವನು. ಮಂದವಾದ ಬುದ್ಧಿಯುಳ್ಳ ಮನುಷ್ಯನು ಅತ್ಯಂತಬುದ್ಧಿವಂತನಾಗುವನು. ಇಂತಹ ಭಾರತೀ-ದೇವಿಯು ನನ್ನ ಮಾತಿನಲ್ಲಿ ನೆಲೆಸಲಿ. ಹಾಗೂ ಮನಸ್ಸಿನಲ್ಲಿ ಸನ್ನಿಧಾನವನ್ನು ಇಡಲಿ.

## ಜಡಮತಿ ಎಂದರೇನು?

(ವಿಟ್ಠಲಭಟ್ಟೀಯ) ಬುದ್ಧ್ಯಾರೋಹಾಯ ದೃಷ್ಟಾಂತೋಕ್ತಿ: । ಯದನುಭಾವಾತ್ ಯದನುಗ್ರಹಾತ್ । ಏಡಮೂಕಃ = ಜಾತಿಬಧಿರಮೂಕಃ । ಜಡಮತಿಃ= ಮಂದಮತಿಃ । ಜಾಡ್ಯಂ ಮಾಂದ್ಯಮಿತಿ ಪ್ರಯೋಗಾತ್ । ಜಡವದಕಿಂಚಿತ್ಕರ ಇತಿ ವಾ । ದೇವತಾ = ಅಭಿಮಾನಿನೀ ।

ಜಡಮತಿಃ - ಮಂದವಾದ ಬುದ್ಧಿಯುಳ್ಳವನು ಎಂದರ್ಥ. ಜಾಡ್ಯಂ - ಮಾಂದ್ಯಂ ಎಂದು ಜಾಡ್ಯ ಎಂಬ ಶಬ್ದವನ್ನು ಮಾಂದ್ಯ ಎಂಬರ್ಥದಲ್ಲಿ ಬಳಸುವುದು ಕಂಡಿರುವುದರಿಂದ. ಜಡ ಎಂಬ ಶಬ್ದಕ್ಕೆ ಮಂದ ಎಂಬ ಅರ್ಥ ಉಚಿತ. ಅಥವಾ ಜಡಮತಿ ಎಂದರೆ ಜಡವು ಹೇಗೆ ಯಾವುದೇ ಕಾರ್ಯವನ್ನು ಮಾಡಲು ಸಮರ್ಥವಲ್ಲವೋ ಹಾಗೆಯೇ ಬುದ್ಧಿಯು ಸಮರ್ಥವಲ್ಲದಿದ್ದರೆ ಅದನ್ನು ಜಡದಂತೆ ಇರುವ ಮತಿಯೆನ್ನುವರು.

'ದೇವತಾ' ಎಂಬ ಶಬ್ದಕ್ಕೆ ಅಭಿಮಾನಿನೀ ಎಂದರ್ಥ.

## ಭಾರತೀಶಬ್ದಾರ್ಥ

(ರಸರಂಜನೀ) ಭಾರತೀಶಬ್ದಾರ್ಥಃ ಶಬ್ದಾರ್ಥತತ್ತ್ವವಿದುಷಾಂ 'ಪ್ರಾಣೋ ಹಿ ಭರತೋ ನಾಮ ಸರ್ವಸ್ಯ ಭರಣಾತ್ ಶ್ರುತಃ । ತದ್ಭಾರ್ಯಾ ಭಾರತೀ ನಾಮ' (ಮ.ಭಾ.ತಾ.ನಿ. 18/93)ಇತ್ಯಾದಿ ಭಗತ್ಪಾದಪ್ರದರ್ಶಿತಪ್ರಕಾರೇಣ ಪ್ರಸಿದ್ಧ ಏವೇತಿ । ಏತದರ್ಥಮಪಿ ಸೇತ್ಯಾವೃತ್ಯ ಭಾರತೀಪದೇ ಯೋಜ್ಯಮ್ । ಸಾ ಪ್ರಸಿದ್ಧಾ ಭಾರತೀತಿ ।

'ಪ್ರಾಣೋ ಹಿ ಭರತೋ ನಾಮ ಸರ್ವಸ್ಯ ಭರಣಾತ್ ಶ್ರುತಃ । ತದ್ಭಾರ್ಯಾ ಭಾರತೀ ನಾಮ' ಎಂದು ಹೇಳಿದಂತೆ ಭರತ ಎಂದರೆ ಎಲ್ಲರನ್ನೂ ಧರಿಸಿ ಪೋಷಣೆ ಮಾಡುವ ವಾಯುದೇವರು. ಅವರ ಪತ್ನಿಯೇ ಭಾರತೀ.

## ಭಾರತಿಯು ಆನಂದತೀರ್ಥರ ಕಾರ್ಯಕ್ಕೆ ಅನುಕೂಲ

(ಲಘುರಸರಂಜನೀ) – ಭಾರತೀಪದೇನ ವಾಯ್ವವತಾರಾನಂದತೀರ್ಥಕಾರ್ಯಾನುಕೂಲತ್ವಂ ದ್ಯೋತಯತೀತಿ ।

ಭಾರತೀ ಎಂಬ ಪದವು ಒಂದು ವಿಶೇಷಾಂಶವನ್ನು ತಿಳಿಸುತ್ತದೆ. ಭಾರತೀ ಎನ್ನುವ ಶಬ್ದವು ಪ್ರಾಣನ ಪತ್ನಿ ಎಂಬರ್ಥವನ್ನು ತಿಳಿಸುವುದರಿಂದ ಪ್ರಕೃತದಲ್ಲಿ ಭಾರತೀದೇವಿಯ ಪ್ರಾರ್ಥನೆ ಮಾಡಿರುವುದು ಪ್ರಾಣನ ಅವತಾರರಾದ ಮಧ್ವಾಚಾರ್ಯರ ಅನುವ್ಯಾಖ್ಯಾನ ಗ್ರಂಥದ ಸರಿಯಾದ ತಿಳಿವಳಿಕೆಯಲ್ಲಿ ಅನುಕೂಲಳು ಎಂಬ ಅಭಿಪ್ರಾಯದಿಂದ ಎಂದು ತಿಳಿಯಬೇಕು.

### ವಾಗ್ಮಿತ್ವ, ಜಡತ್ವ ಎಂದರೇನು?

(ಕಾಶೀ) – ಬಧಿರಮೂಕತ್ವಾದಿವಿಶಿಷ್ಟೋಽಪಿ ಪರಪ್ರಶ್ನಾನುಗುಣಸದುತ್ತರವಕ್ತೃತ್ವರೂಪವಾಗ್ಮಿತ್ವಾದಿ ವಿಶಿಷ್ಟೋ ಭವತಿ ಕಿಮನ್ಯ ಇತ್ಯಪಿಶಬ್ದಃ । ..... ಜಡತ್ವಮೂಹಾಕ್ಷಮತ್ವಾದಿಸನ್ನಿಧಿಂ ಸಾನುಗ್ರಹಸ್ಥಿತಿಂ ಕರೋತು ಇತ್ಯರ್ಥಃ ।

ವಾಗ್ಮಿತ್ವ ಎಂದರೆ 'ಪರಪ್ರಶ್ನಾನುಗುಣಸದುತ್ತರವಕ್ತೃತ್ವಂ' ಬೇರೆಯವರು ಪ್ರಶ್ನೆ ಕೇಳಿದಾಗ ಅದಕ್ಕೆ ಅನುಗುಣವಾದ ಸರಿಯಾದ ಉತ್ತರವನ್ನು ಹೇಳುವಿಕೆ. ಜಡತ್ವ ಎಂದರೆ ಹೊಸವಿಷಯವನ್ನು ಊಹಿಸಲು ಸಾಮರ್ಥ್ಯವಿಲ್ಲದಿರುವುದು.

### ರಮಾನಿವಾಸೋಚಿತ ... ಪ್ರತಿಪದಾರ್ಥ ಹಾಗೂ ಸಾರ

रमानिवासोचितवासभूमिः सन्न्यायरत्नावलिजन्मभूमिः ।
वैराग्यभाग्यो मम पद्मनाभतीर्थामृताब्धिर्भवताद् विभूत्यै ॥५ ॥

ಅನ್ವಯಾರ್ಥ – ರಮಾನಿವಾಸೋಚಿತವಾಸಭೂಮಿಃ = ರಮಾ - ಲಕ್ಷ್ಮೀದೇವಿಗೆ ನಿವಾಸ - ಆಶ್ರಯನಾದ ವಿಷ್ಣುವಿಗೆ, ಉಚಿತ - ಯೋಗ್ಯವಾದ, ವಾಸಭೂಮಿಃ - ವಾಸಿಸುವಸ್ಥಳವಾದ; ಸನ್ನ್ಯಾಯರತ್ನಾವಲಿಜನ್ಮಭೂಮಿಃ = ಸನ್ನ್ಯಾಯರತ್ನಾವಲಿ - ಸನ್ನ್ಯಾಯರತ್ನಾವಲಿ ಎಂಬ ಗ್ರಂಥದ, ಜನ್ಮಭೂಮಿಃ - ಹುಟ್ಟಿನ ಸ್ಥಳವಾದ; ವೈರಾಗ್ಯಭಾಗ್ಯಃ = ವೈರಾಗ್ಯವೆಂಬ ಭಾಗ್ಯವುಳ್ಳ; ಪದ್ಮ-ನಾಭತೀರ್ಥಾಮೃತಾಬ್ಧಿಃ = ಪದ್ಮನಾಭತೀರ್ಥ- ಪದ್ಮನಾಭತೀರ್ಥರೆಂಬ, ಅಮೃತಾಬ್ಧಿಃ = ಅಮೃತಸಮುದ್ರವು; ಮಮ = ನನಗೆ; ವಿಭೂತ್ಯೈ = ಐಶ್ವರ್ಯಕ್ಕಾಗಿ; ಭವತಾತ್ = ಆಗಲಿ.

ಸಾರ – ಈ ಶ್ಲೋಕದಲ್ಲಿ ತಮ್ಮ ಪರಮಗುರುಗಳಾದ ಪದ್ಮನಾಭತೀರ್ಥರನ್ನು ಪ್ರಾರ್ಥಿಸು-ತ್ತಿದ್ದಾರೆ. ನನಗೆ ಪದ್ಮನಾಭತೀರ್ಥರೆಂಬ ಅಮೃತಸಮುದ್ರವು ವಿಶೇಷವಾದ ಸಂಪತ್ತಿಗೆ ಕಾರಣ-ವಾಗಲಿ ಎಂದು. ಅಮೃತಸಮುದ್ರವು ಲಕ್ಷ್ಮೀಪತಿಯಾದ ನಾರಾಯಣನಿಗೆ ಉಚಿತವಾದ ವಾಸ-ಭೂಮಿ ಹಾಗೂ ಅನೇಕ ರತ್ನಗಳಿಗೆ ಉತ್ಪತ್ತಿಸ್ಥಾನ.

ಹಾಗೆಯೇ ಶುಕ್ಲವರ್ಣವೆಂಬ ಭಾಗ್ಯವುಳ್ಳದ್ದು. ಅರ್ಥಾತ್ ಬಿಳಿಯಾದದ್ದು. ಅದರಂತೆ ಪದ್ಮನಾಭತೀರ್ಥರೆಂಬ ಅಮೃತಸಮುದ್ರವು ಲಕ್ಷ್ಮಿಗೆ ಆಶ್ರಯನಾದ ನಾರಾಯಣನಿಗೆ ಯೋಗ್ಯ-ವಾದ ವಾಸಸ್ಥಾನ. ಹಾಗೂ ಸನ್ನ್ಯಾಯರತ್ನಾವಲಿಯೆಂಬ ಗ್ರಂಥಕ್ಕೆ ಜನ್ಮಸ್ಥಾನ. ಹಾಗೇ ವೈರಾಗ್ಯ-ವೆಂಬ ಭಾಗವುಳ್ಳದ್ದು.

### ರಮಾನಿವಾಸೋಚಿತವಾಸಭೂಮಿಃ

(ಆನಂದ) – ಪರಮಗುರೂನ್ ಪ್ರಣಮತಿ – ರಮಾನಿವಾಸ ಇತಿ ॥ 'ನಿವಸತಿ ಅಸ್ಮಿನ್ನಿತಿ ನಿವಾಸಃ' ರಮಾಯಾ ನಿವಾಸೋ ರಮಾನಿವಾಸಃ । ತಸ್ಯೋಚಿತವಾಸಭೂಮಿರಿತಿ ವಿಗ್ರಹಃ ।

ನಿವಾಸ = ನಿವಸತಿ ಅಸ್ಮಿನ್ನಿತಿ ನಿವಾಸಃ. ಯಾವುದರಲ್ಲಿ ವಾಸವನ್ನು ಮಾಡುತ್ತೇವೆಯೋ ಅದನ್ನು ನಿವಾಸ ಎನ್ನುತ್ತೇವೆ. ರಮಾಯಾಃ ನಿವಾಸಃ - ರಮಾನಿವಾಸಃ. ಲಕ್ಷ್ಮೀದೇವಿಯು ವಾಸ ಮಾಡುವ ಸ್ಥಾನವೆಂದರ್ಥ. ತಸ್ಯ ಉಚಿತವಾಸಭೂಮಿಃ - ಲಕ್ಷ್ಮೀದೇವಿಪತಿಯಾದ ನಾರಾಯಣನಿಗೆ ಉಚಿತ-ವಾಸಭೂಮಿಃ - ಯೋಗ್ಯವಾದ ವಾಸಸ್ಥಾನವೆಂದರ್ಥ.

### ಉಚಿತವಾಸಭೂಮಿಃ

(ಶ್ರೀನಿಧಿ) – ಉಚಿತಶ್ಚಾಸೌ ವಾಸಶ್ಚ ಉಚಿತವಾಸಃ । ಉಚಿತಶ್ಚಾಸೌ ವಾಸಭೂಮಿಶ್ಚೇತಿ ವಾ ।

ಉಚಿತವಾಸ - ಉಚಿತಶ್ಚಾಸೌ ವಾಸಶ್ಚ ಉಚಿತವಾಸಃ - ಉಚಿತವಾದದ್ದು ವಾಸ ಎಂದರ್ಥ. ಉಚಿತಶ್ಚಾಸೌ ವಾಸಭೂಮಿಶ್ಚ ಇತಿ ವಾ - ಉಚಿತವಾದದ್ದು ವಾಸಭೂಮಿ ಎಂದರ್ಥ.

### ಪದ್ಮನಾಭರೆಂದರೆ ಮಧ್ವಾಚಾರ್ಯರು - ಮಧ್ವವಿಜಯಸಂವಾದ

(ಏರೀಬಾಳಾಚಾರ್ಯರು) – ಪದ್ಮಾನಿ ನಯತೀತಿ ಪದ್ಮನಃ ಸೂರ್ಯಃ । ತಸ್ಯಾಭೇವಾಭಾ ಯಸ್ಯ ಸಃ ಪದ್ಮನಾಭಃ । ತದುಕ್ತಂ ಸುಮಧ್ವವಿಜಯೇ –

'ದುರ್ಮಂತ್ರೈಃ ಖಲಪಟಲೈಃ ಪ್ರಚೋದ್ಯಮಾನೋ ಗ್ರಾಮೇಶೋ ವೃಷಲಪತಿಃ ಪ್ರಹರ್ತುಮೇನಮ್ ।
ಸಂಪ್ರಾಪ್ತಃ ತತ ಉತ ಯಾಂತಮ್ ಈಕ್ಷ್ಯಮಾಣಃ ಪ್ರೋದ್ಯಂತಂ ರವಿಮಿವ ವಿಸ್ಮಿತೋ ನನಾಮ'

ಇತಿ । ಯದ್ವಾ ಆ ಈಷತ್ ಸಮ್ಯಗ್ವಾಭಾ ಯಸ್ಯ ಸಃ ಆಭಃ । ಸ ನ ಭವತೀ ನಾಭಃ । ನಸಮಾಸೋಽಯಮ್ । ಪದ್ಮಃ ಚೋಲಜಃ ಪದ್ಮತೀರ್ಥೋ ಮಾಯಿಭಿಕ್ಷುರ್ನಾಭೋ ವಿಚ್ಛವಿ-ರ್ಯಸ್ಮಾತ್ ಸ ತಥೋಕ್ತಃ । ಶ್ರೀಮಧ್ವಾಚಾರ್ಯಃ । ಚಾತುರ್ಮಾಸ್ಯಾದುತ್ಥಾಯ ವಿದ್ರವಂತಂ ನಿಜಪುಸ್ತಕಸ್ತೋಮಸ್ತೇನಂ ಚೋಲಜಂ ಪದ್ಮತೀರ್ಥಂ ಮಧ್ಯೇ ಮಾರ್ಗೇ ತೂರ್ಣಂ ನಿರುಧ್ಯ ಗೋಗಣೈರ್ಭಿಷಯಿತ್ವಾ ಪಾರ್ಥಃ ಸೈಂಧವಮಿವ ತಂ ವಿಚ್ಛವಿಂ ಚಕಾರೇತ್ಯೇಷೋಽರ್ಥಃ ಸುಮಧ್ವ-ವಿಜಯೇ ದ್ವಾದಶೇ ವ್ಯಕ್ತ ಇತಿ । ವಿಸ್ತರೇಣ ನೇಹ ತಾನಿ ವಚನಾನ್ಯುದಾಹರಾಮ ಇತಿ ದಿಕ್ । ತಸ್ಮಾತ್ ತೀರ್ಥಂ ಶಾಸ್ತ್ರಂ ಯಸ್ಯ ಸ ಪದ್ಮನಾಭತೀರ್ಥಃ । ಸ ಏವಾಮೃತಾಬ್ಧಿರ್ವಿಭೂತ್ಯೈ ಭವತಾತ್ ಭೂಯಾತ್ ।

ಪದ್ಮನಾಭತೀರ್ಥಾಮೃತಾಬ್ಧಿಃ – ಪದ್ಮಾನಿ ನಯತೀತಿ ಪದ್ಮನಃ ಸೂರ್ಯಃ - ಕಮಲಗಳನ್ನು

ಅರಳಿಸುವಂತಹ ಸೂರ್ಯನಿಗೆ ಪದ್ಮನ ಎಂದು ಕರೆಯುತ್ತಾರೆ. ತಸ್ಯ ಆಭಾ ಇವ ಆಭಾ ಯಸ್ಯ ಸಃ ಪದ್ಮನಾಭಃ - ಸೂರ್ಯನ ಕಾಂತಿಯಂತೆ ಕಾಂತಿಯು ಯಾರಿಗೆ ಇದೆಯೋ ಅವರು ಪದ್ಮನಾಭರು. ಸುಮಧ್ವವಿಜಯದಲ್ಲಿ ಹೀಗೆ ತಿಳಿಸಿದ್ದಾರೆ -

### ಆಚಾರ್ಯರು ಉದಯಿಸುತ್ತಿರುವ ಸೂರ್ಯನಂತೆ

ದುರ್ಮಂತ್ರೈಃ ಖಲಪಟಲೈಃ ಪ್ರಚೋದ್ಯಮಾನೋ..... .
ಗ್ರಾಮೇಶೋ ವೃಷಲಪತಿಃ ಪ್ರಹರ್ತುಮೇನಮ್ ।
ಸಂಪ್ರಾಪ್ತಃ ತತ ಉತ ಯಾಂತಮ್ ಈಕ್ಷ್ಯಮಾಣಃ
ಪ್ರೋದ್ಯಂತಂ ರವಿಮಿವ ವಿಸ್ಮಿತೋ ನನಾಮ ॥ (16-39)

ಅರ್ಥ - ಖಲಪಟಲೈಃ = ದುಷ್ಟರ ಸಮೂಹಗಳಿಂದ, ದುರ್ಮಂತ್ರೈಃ = ಕೆಟ್ಟ ಮಂತ್ರಾಲೋಚನೆ-ಗಳಿಂದ, ಏನಂ ಪ್ರಹರ್ತುಂ ಪ್ರಚೋದ್ಯಮಾನಃ = ಈ ಮಧ್ವಾಚಾರ್ಯರನ್ನು ಹೊಡೆಯವುದಕ್ಕೆ (ಕೊಲ್ಲಲು) ಪ್ರೇರಿಸಲ್ಪಟ್ಟ, ಗ್ರಾಮೇಶಃ ವೃಷಲಪತಿಃ = ಗ್ರಾಮದ ಮುಖಂಡನಾದ ಶೂದ್ರರ ಪ್ರಭುವು, ಸಂಪ್ರಾಪ್ತಃ = ಬಂದವನಾಗಿ, ತತಃ ಉತ = ಅಲ್ಲಿಂದಲೂ, ಯಾಂತಂ = ಹೋಗುತ್ತಿರುವ, ಪ್ರೋದ್ಯಂತಂ ರವಿಂ ಇವ = ಉದಯಿಸುತ್ತಿರುವ ಸೂರ್ಯನನ್ನು ಎಂಬಂತೆ ಆಚಾರ್ಯರನ್ನು, ಈಕ್ಷಮಾಣಃ = ನೋಡುತ್ತಿರುವವನಾಗಿ, ವಿಸ್ಮಿತಃ ನನಾಮ = ಆಶ್ಚರ್ಯಪಟ್ಟು ನಮಸ್ಕರಿಸಿದನು.

ಅಥವಾ - ಆ ಈಷತ್ ಸಮ್ಯಕ್ ವಾ ಆಭಾ ಯಸ್ಯ ಸಃ ಆಭಃ – ಆ ಎಂದರೆ ಸ್ವಲ್ಪ ಅಥವಾ ಸಮೀಚೀನವಾದ ಚೆನ್ನಾಗಿ ಇರುವಂತಹ ಆಭಾ - ಕಾಂತಿಯು ಯಸ್ಯ - ಯಾರಿಗೆ ಇದೆಯೋ ಸಃ - ಅವನು ಆಭಃ ಎನಿಸುತ್ತಾನೆ. ಸಃ ನ ಭವತಿ ಇತಿ - ಆ ರೀತಿಯಾಗದೇ ಇರುವವನು ನಾಭಃ - ನಾಭ ಎನಿಸುತ್ತಾನೆ. ಪದ್ಮಃ - ಚೋಲಜಃ ಪದ್ಮತೀರ್ಥಃ ಮಾಯಿಭಿಕ್ಷುಃ - ನಾಭಃ - ವಿಚ್ಛವಿಃ ಯಸ್ಮಾತ್ ಸಃ ತಥೋಕ್ತಃ. ಅಂತಹ ಮಾಯಾವಾದಿಸನ್ಯಾಸಿಯಾದ ಪದ್ಮತೀರ್ಥನು ಯಾರಿಂದ ಕಾಂತಿಯನ್ನು ಕಳೆದುಕೊಂಡನೋ ಅವರು ಪದ್ಮನಾಭರು. ಈ ಅಂಶವು ಸುಮಧ್ವವಿಜಯ 12ನೆಯ ಸರ್ಗದಲ್ಲಿ ಸ್ಪಷ್ಟ. ಚಾತುರ್ಮಾಸ್ಯವ್ರತದಿಂದ ಶ್ರೀಮಧ್ವಾಚಾರ್ಯರು ಎದ್ದಾಗ ತಮ್ಮ ಪುಸ್ತಕಗಳ ಸಮೂಹ-ವನ್ನು ಕದ್ದು ಓಡುತ್ತಿರುವ ಚೋಲದೇಶದ ಪದ್ಮತೀರ್ಥನನ್ನು ಮಾರ್ಗಮಧ್ಯದಲ್ಲಿ ಬೇಗನೆ ತಡೆದು ಮಾತುಗಳಿಂದ ಹೆದರಿಸಿ ಅರ್ಜುನನು ಓಡುತ್ತಿರುವ ಜಯದ್ರಥನನ್ನು ಮಾರ್ಗಮಧ್ಯದಲ್ಲಿ ಹಿಡಿದು ಕಾಂತಿರಹಿತನನ್ನಾಗಿ ಮಾಡಿದಂತೆ ಕಾಂತಿರಹಿತನನ್ನಾಗಿ ಎಂದರ್ಥ.

### ಆಚಾರ್ಯರಿಂದ ಪದ್ಮತೀರ್ಥ ಕಾಂತಿರಹಿತನಾದ

ತೂರ್ಣಂ ತೀರ್ಣಾದಭ್ರಮಾರ್ಗೋಽಥ ಸಾರ್ಯಃ
ಸಂಪ್ರಾಪ್ತೋಽಸೌ ಗೋಗಣೈರ್ಭೀಷಯಿತ್ವಾ ।

ಸಂಯಮ್ಯಾಂತರ್ಯಂತ್ರಕಾಮೇನ ಹಾಸ್ಯಂ
ಸಂಪ್ರಾಪ್ತಶ್ರೀರ್ನಿರ್ಜಿತಂ ತಂ ಜಹಾಸ ॥ 12-43 ॥

ಅಥ = ಅನಂತರ, ತೂರ್ಣಂ = ಜಾಗ್ರತೆಯಾಗಿ, ತೀರ್ಣಾದಭ್ರಮಾರ್ಗಃ = ದಾಟಲ್ಪಟ್ಟ ಬಹಳಯೋಜನದೂರದ ಮಾರ್ಗವುಳ್ಳ, ಸಾರ್ಯಃ = ಜ್ಯೇಷ್ಠಯತಿಗಳಿಂದ ಸಹಿತರಾದ, ಅಣ್ಣ ಭೀಮಸೇನಸಹಿತನಾದ, ಅಸೌ = ಈ ಮಧ್ವಾಚಾರ್ಯರು, ಅರ್ಜುನನು, ತಂ = ಆ ಪದ್ಮತೀರ್ಥನನ್ನು, ಜಯದ್ರಥನನ್ನು, ಸಂಪ್ರಾಪ್ತಃ = ಹೊಂದಿದವರಾಗಿ, ಗೋಗಣ್ಯೈಃ = ಮಾತುಗಳ ಸಮೂಹದಿಂದ, ಬಾಣಗಳ ಸಮೂಹದಿಂದ, ಭೀಷಯಿತ್ವಾ = ಹೆದರಿಸಿ, ಸಂಯಮ್ಯ = ಉತ್ತರವಿಲ್ಲದವನನ್ನಾಗಿಸಿ, ಹಗ್ಗಗಳಿಂದ ಕಟ್ಟಿ, ಸಂಪ್ರಾಪ್ತಶ್ರೀಃ = ಹೊಂದಲ್ಪಟ್ಟ ಜಯಶ್ರೀ (ಶಾಸ್ತ್ರಸಂಪತ್ತು) ಉಳ್ಳವರಾಗಿ, ಹೊಂದಲ್ಪಟ್ಟ ದ್ರೌಪದಿಯುಳ್ಳವನಾಗಿ, ಅಂತರ್ಯಂತ್ರ = ಅಂತರ್ಯಾಮಿಯಾದ ಭಗವಂತನ, ಕಾಮೇನ = ಇಚ್ಛೆಯಿಂದ, ಮನಸ್ಸನ್ನು ಪ್ರೇರಿಸುವ ಮನ್ಮಥನಿಂದ, ಹಾಸ್ಯಂ = ಉಪಹಾಸಕ್ಕೆ ಗುರಿಯಾದ, ನಿರ್ಜಿತಂ = ಸೋಲಿಸಲ್ಪಟ್ಟ, (ತಂ =ಆ ಪದ್ಮತೀರ್ಥನನ್ನು, ಸೈಂಧವನನ್ನು) ಜಹಾಸ = ಹಾಸ್ಯಮಾಡಿದರು.

ಇಂತಹ ಪದ್ಮನಾಭರಿಂದ ತೀರ್ಥಂ ಅಂದರೆ ಶಾಸ್ತ್ರವು ಯಸ್ಯ ಸಃ - ಯಾರಿಗೆ ಇದೆಯೋ ಅಂತಹವರು ಪದ್ಮನಾಭತೀರ್ಥರು. ಅರ್ಥಾತ್ ಶ್ರೀಮಧ್ವಾಚಾರ್ಯರಿಂದ ಶಾಸ್ತ್ರವನ್ನು ಹೊಂದಿದ-ವರು ಪದ್ಮನಾಭತೀರ್ಥರು. ಅವರೇ ಅಮೃತಾಬ್ಧಿಃ - ಅಮೃತಸಮುದ್ರರು.

### ತತ್ವಮಾರ್ಗಕ್ಕೆ ಉಪಜೀವ್ಯರಾದ ಪದ್ಮನಾಭತೀರ್ಥರು

(ರಸರಂಜನೀ) –

ಸ ಪದ್ಮನಾಭತೀರ್ಥೋಽರ್ಕಗೋಗಣೋಽಸ್ತು ದೃಶೇ ಮಮ ।
ನ ತತ್ವಮಾರ್ಗೇ ಗಮನಂ ವಿನಾ ಯದುಪಜೀವನಮ್ ॥

ಇತ್ಯುದಿತೋಪಜೀವ್ಯತ್ವಪ್ರಕಾರಂ ಪ್ರಕಟಯನ್ ಪ್ರಾಚೀನಟೀಕಾಕಾರಾತ್ ಶ್ರೀಪದ್ಮನಾಭತೀರ್ಥಾತ್ ಐಶ್ವರ್ಯಮರ್ಥಯತೇ — **ರಮೇತಿ** ॥

ಸ ಪದ್ಮನಾಭತೀರ್ಥೋಽರ್ಕ...... — (ಗೀತಾತಾತ್ಪರ್ಯಟೀಕಾ ನ್ಯಾಯದೀಪಿಕಾ) ಎಂದು ಹೇಳಿದ ರೀತಿಯಂತೆ ತತ್ವಮಾರ್ಗದಲ್ಲಿ ಸಾಗಲು ಉಪಜೀವ್ಯರಾಗಿದ್ದಾರೆ ಪದ್ಮನಾಭತೀರ್ಥರು. ಇಂತಹ ಪ್ರಾಚೀನಟೀಕಾಕಾರರಾದ ಶ್ರೀಪದ್ಮನಾಭತೀರ್ಥರಿಂದ ಐಶ್ವರ್ಯವನ್ನು ಪ್ರಾರ್ಥಿಸುತ್ತಿದ್ದಾರೆ.
– 'ರಮಾನಿವಾಸೋಚಿತ' ಎಂಬುದಾಗಿ.

## ಸುಧಾಸಿಂಧುಪ್ರಯೋಜಕಧರ್ಮಗಳು

(ರಸರಂಜನೀ) – ಪದ್ಮನಾಭತೀರ್ಥಾಖ್ಯಃ ಸಮುದ್ರೋ ಮಮಾಧಿಕಾರಿಣಃ ವಿಶಿಷ್ಟಜ್ಞಾನಾಂತರಂಗ-ಸಾಧನಭೂತಾ ಭೂತಿಃ 'ವಿಭೂತಿಃ' ತಸ್ಯೈ ಭವತಾತ್– ಇತಿ ಯೋಜನಾ । ವಿಭೂತಿಶಬ್ದಾರ್ಥಂ ವ್ಯಂಜಯನ್ ಸುಧಾಸಿಂಧುಪ್ರಯೋಜಕಧರ್ಮಾನಾಹ – ರಮೇತ್ಯಾದಿನಾ ॥ ಅಮೃತಾಂ-ಭೋಧಿರ್ಹಿ ರಮಾಯಾಃ ನಿವಾಸಸ್ಯ ಅವಸ್ಥಾನಸ್ಯೋಚಿತಾ ಯೋಗ್ಯಾ 'ವಾಸಭೂಮಿಃ' ಪಿತೃ-ಗೇಹರೂಪ ಇತಿ । ಲಕ್ಷ್ಮೀನಿವಾಸಭೂತಸ್ಯ ಹರೇರುಚಿತಾ ಸರ್ವೈಃ ಶ್ಲಾಘ್ಯಾ ವಾಸಭೂಮಿಃ ವಾಸಯೋಗ್ಯಸ್ಥಾನಭೂತ ಇತಿ ವಾ ತಸ್ಯೈವ ತತ್ಪ್ರಿಯಸ್ಥಾನತ್ವೇನ ಪುರಾಣಾದಿಪ್ರಸಿದ್ಧತ್ವಾತ್ । ಅಯಂ ತು ಸರ್ವದಾ ಶ್ರೀಹರಿಧ್ಯಾತೃತಯಾ ವಿಶೇಷತಃ ತತ್ಸನ್ನಿಧಾನಪಾತ್ರಮಿತಿ ಸರ್ವಸಮ್ಮತ ಇತಿ । ಅನೇನ ಭಕ್ತಿಮತ್ತ್ವಂ ಸೂಚಿತಮ್ । ಭಕ್ತಿಂ ವಿನಾ ಪ್ರೀತಿಪೂರ್ವಕಶ್ರೀಹರಿಸನ್ನಿಧಾನಪಾತ್ರತ್ವಾಯೋಗಾತ್ । ತಥಾ ರತ್ನಾವಲೀನಾಂ ಜನ್ಮಭೂರಿಯಂ ತು ಸಂತೋ ನಿರ್ದೋಷಾ ಯೇ ನ್ಯಾಯಾಃ ತ ಏವ ರತ್ನಾನಿ ತೇಷಾಂ ಸಂಘವತ್ತ್ವಾತ್ ತನ್ನಾಮಕಸ್ಯ ಗ್ರಂಥಸ್ಯೋತ್ಪಾದಕಃ ಅನೇನ ಜ್ಞಾನವತ್ತ್ವಂ ಸೂಚಿತಮ್ । ತದಭಾವೇ ಗ್ರಂಥನಿರ್ಮಾಣಾಯೋಗಾತ್ । ತಥಾ ವೈರಾಗ್ಯಂ ಸೌಖ್ಯಂ ಭಾಗ್ಯಂ ಯಸ್ಯ ತಾದೃಶೋಽಯಂ ತು ವಿಷಯವಿರಕ್ತಿರೂಪಭಾಗ್ಯವಾನ್ । ಏತದ್ ವಿಶೇಷಣತ್ರಯಮುಪಜೀವ್ಯತ್ವಪ್ರಕಾರಸೂಚಕಮಿತಿ ಸುಧೀಭಿರ್ವಿಭಾವನೀಯಮ್ । ವಿಭೂತಿ-ಪ್ರಾರ್ಥನಮಪ್ಯೇತಮೇವಾರ್ಥಂ ಸಮರ್ಥಯತೇ । ಅನೇನ ಕೃಪಾಲವಪ್ರಾಪ್ಯಪ್ರಯೋಜನಪ್ರಥನೇನ ಪ್ರಾರ್ಥನೀಯತ್ವಪ್ರಯೋಜಕಪ್ರಕಟನೇನ ಚ 'ಶ್ರೀಮದ್ವೇ'ತಿ ಶ್ಲೋಕೋ ವಿವೃತ ಇತಿ ॥

ಪದ್ಮನಾಭತೀರ್ಥರೆಂಬ ಸಮುದ್ರವು ಅಧಿಕಾರಿಯಾದ ನನಗೆ ವಿಶಿಷ್ಟಜ್ಞಾನಕ್ಕೆ ಅಂತರಂಗ-ಸಾಧನವಾದ ವಿಭೂತಿಗೆ ಕಾರಣರಾಗಲಿ ಎಂದು ಯೋಜನೆ. ವಿಭೂತಿಶಬ್ದದ ಅರ್ಥವನ್ನು ವ್ಯಕ್ತಗೊಳಿಸುತ್ತ ಇವರು ಅಮೃತಸಿಂಧುವಾಗುವುದಕ್ಕೆ ಪ್ರಯೋಜಕವಾದ ಧರ್ಮಗಳನ್ನು ಹೇಳುತ್ತಾರೆ – 'ರಮಾನಿವಾಸೋಚಿತ' ಇತ್ಯಾದಿಯಾಗಿ. ಅಮೃತಸಮುದ್ರವಾದರೋ ರಮಾ-ದೇವಿಯು ನೆಲೆಸಲು ಉಚಿತವಾದ ವಾಸಭೂಮಿಯಾಗಿದೆ. ತಂದೆಯ ಮನೆಯಾಗಿದೆ ಎಂದು ಭಾವ. ಇನ್ನು ಲಕ್ಷ್ಮಿಗೆ ಆಶ್ರಯನಾದ ಹರಿಗೆ ಉಚಿತವಾದ ಅರ್ಥಾತ್ ಎಲ್ಲರೂ ಶ್ಲಾಘನೆ ಮಾಡುವ ವಾಸಭೂಮಿ ಎಂದು. ಏಕೆಂದರೆ ಭಗವಂತನಿಗೆ ಸಮುದ್ರವೇ ಪ್ರೀತಿಪಾತ್ರವಾದ ಸ್ಥಾನ ಎಂದು ಪುರಾಣಾದಿಗಳಲ್ಲಿ ಪ್ರಸಿದ್ಧಿ ಇದೆ. ಇವರಾದರೋ ಯಾವಾಗಲೂ ಹರಿಯನ್ನು ಧ್ಯಾನಮಾಡು-ವುದರಿಂದ ವಿಶೇಷವಾಗಿ ಶ್ರೀಹರಿಯ ಸನ್ನಿಧಾನಕ್ಕೆ ಪಾತ್ರರಾಗಿದ್ದಾರೆ ಎಂಬ ವಿಷಯವು ಸಕಲರಿಗೂ ಸಮ್ಮತವಾಗಿದೆ.

ಇದರಿಂದ ಅವರಲ್ಲಿ ಭಕ್ತಿ ಇದೆ ಎಂಬುದು ಸಿದ್ಧವಾಯಿತು. ಏಕೆಂದರೆ ಭಕ್ತಿಯಿಲ್ಲದೆ ಪ್ರೀತಿಯಿಂದಾಗಿ ಶ್ರೀಹರಿಯ ಸನ್ನಿಧಾನಕ್ಕೆ ಪಾತ್ರನಾಗಲು ಸಾಧ್ಯವಿಲ್ಲ. ಹಾಗೆ ಸಮುದ್ರವು ರತ್ನಗಳ ಸಮೂಹಕ್ಕೆ ಜನ್ಮಸ್ಥಾನ. ಇವರಾದರೋ ಸಂತಃ ಅಂದರೆ ದೋಷಗಳಿಲ್ಲದ ಯಾವ ನ್ಯಾಯಗಳಿವೆಯೋ ಅವುಗಳೇ ರತ್ನಗಳು. ಅವುಗಳ ಸಮೂಹವಿರುವ ಅರ್ಥಾತ್ ಆ ಹೆಸರಿನ ಗ್ರಂಥಕ್ಕೆ ಅಂದರೆ 'ಸನ್ನ್ಯಾಯ-ರತ್ನಾವಲಿ' ಎಂಬ ಗ್ರಂಥಕ್ಕೆ ಜನ್ಮಸ್ಥಾನರಾಗಿದ್ದಾರೆ. ಇದರಿಂದ ಜ್ಞಾನವಿದೆ ಎಂದು ಸೂಚನೆ ಮಾಡಿದಂತಾಯಿತು; ಜ್ಞಾನವಿಲ್ಲದಿದ್ದರೆ ಗ್ರಂಥನಿರ್ಮಾಣ ಮಾಡಲು ಸಾಧ್ಯವಿಲ್ಲವಾದ್ದರಿಂದ. ಹಾಗೆ ವೈರಾಗ್ಯ ಅಂದರೆ ಬಿಳಿಬಣ್ಣ. ಅದನ್ನೇ ಭಾಗ್ಯವಾಗಿ ಉಳ್ಳದ್ದು ಅಮೃತಸಮುದ್ರ. ಇವರಾದರೋ ವಿಷಯವೈರಾಗ್ಯ ಎಂಬ ಭಾಗ್ಯವುಳ್ಳವರು. ಈಗ ಹೇಳಿದ ಮೂರು ವಿಶೇಷಣಗಳು ಪದ್ಮನಾಭತೀರ್ಥರು ಉಪಜೀವ್ಯರು ಎಂದು ಸೂಚಿಸುತ್ತಿದೆ ಎಂಬುದನ್ನು ಜ್ಞಾನಿಗಳು ತಿಳಿಯಬೇಕು.

ವಿಭೂತಿಯನ್ನು ಪ್ರಾರ್ಥನೆ ಮಾಡಿದ್ದು ಇದೇ ಅರ್ಥವನ್ನು ಸಮರ್ಥಿಸುತ್ತಿದೆಯೂ ಕೂಡ. ಇದರಿಂದ ಕೃಪಾಲುಗಳು ಪಡೆಯಬೇಕಾದ ಪ್ರಯೋಜನವನ್ನು ವಿಸ್ತಾರವಾಗಿ ಹೇಳಿದ್ದರಿಂದ ಪ್ರಾರ್ಥನೆಗೆ ಯೋಗ್ಯವಾದ ಧರ್ಮಗಳನ್ನು ಹೇಳಿದ್ದರಿಂದ 'ಶ್ರೀಮದ್ವಸಂಸೇವನ' ಎಂಬ ಶ್ಲೋಕವನ್ನು ವಿವರಿಸಿದಂತಾಯಿತು.

** ಶ್ರೀಮದ್ವಸಂಸೇವನಲಬ್ಧಶುದ್ಧವಿದ್ಯಾಸುಧಾಂಭೋನಿಧಯೋಽಮಲಾ ಯೇ ।
ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಸ್ಯಾನ್ಮಯಿ ನಿತ್ಯಮೇಷಾಮ್ ॥ (ತತ್ವಪ್ರಕಾಶಿಕಾ)

* ಅಥ ಪರಮಗುರೂಣಾಂ ಸನ್ನ್ಯಾಯರತ್ನಾವಲಿಕಾರಾಣಾಂ ಕೃಪಾಲೇಶಂ ಪ್ರಾರ್ಥಯತೇ — ಶ್ರೀಮದ್ವೇತಿ ॥ ಯೇ ಪದ್ಮನಾಭತೀರ್ಥಾಃ ಯೇಷಾಂ ಕೃಪಾಲೇಶಃ ಮಯಿ ನಿತ್ಯಂ ಸ್ಯಾದಿತಿ ಸಂಬಂಧಃ । ತೇಷಾಮೇವ ಕೃಪಾರಾಹಿತ್ಯೇ ತತ್ಪ್ರಾರ್ಥನಮಯುಕ್ತಮ್ । ಅತ ಉಕ್ತಂ — ಕೃಪಾಲವ ಇತಿ ॥ ಕಾರುಣಿಕಾ ಇತ್ಯರ್ಥಃ । ದ್ವೇಷಾದಿದೋಷವತ್ವೇ ಕೃಪಾಲುತ್ವಮೇವಾಸಿದ್ಧಮ್ ಇತ್ಯತ ಉಕ್ತಮ್ — ಅಮಲಾ ಇತಿ ॥ ಕಸ್ಮಿನ್ ವಿಷಯೇ ಕೃಪಾಪ್ರಾರ್ಥನಮ್ ಇತ್ಯತ ಉಕ್ತಮ್ — ಶ್ರೀಮದ್ವೇತಿ ॥ ಶ್ರೀಮದಾನಂದತೀರ್ಥಸೇವಾಪ್ರಾಪ್ತನಿರ್ದೋಷ ವಿದ್ಯಯಾಽಮೃತಸಮುದ್ರಾ ಇತ್ಯರ್ಥಃ । ಅನೇನ ವಿದ್ಯಾವಿಷಯೇ ಕೃಪಾಪ್ರಾರ್ಥನಮಿತಿ ಸೂಚಿತಂ, ಯದ್ವಾ ತೀರ್ಥಪದ-ಪ್ರಯೋಗಲಬ್ಧಪ್ರಸಿದ್ಧತೀರ್ಥಸಾಮ್ಯನಿರಾಸಾಯ ವಿಶೇಷಣತ್ರಯಮ್ । (ಶರ್ಕರಾಶ್ರೀನಿವಾಸ-ತೀರ್ಥೀಯ)

— (ತತ್ವಪ್ರಕಾಶಿಕಾದಲ್ಲಿ) ತಮ್ಮ ಪರಮಗುರುಗಳಾದ ಸನ್ನ್ಯಾಯರತ್ನಾವಲಿಗ್ರಂಥದ ಕರ್ತೃಗಳಾದ ಪದ್ಮನಾಭತೀರ್ಥರ ಕೃಪಾಲೇಶವನ್ನು ಪ್ರಾರ್ಥಿಸುತ್ತಿದ್ದಾರೆ - ಶ್ರೀಮದ್ವಸಂಸೇವನಲಬ್ಧ ಎಂಬು-ದಾಗಿ. ಪದ್ಮನಾಭತೀರ್ಥರ ಕೃಪಾಲೇಶವು ನಿತ್ಯವೂ ನನ್ನಲ್ಲಿ ಉಂಟಾಗಲಿ. ಇನ್ನು ಅವರಲ್ಲೇ ಕೃಪೆ

ಇಲ್ಲದಿದ್ದರೆ ಅರ್ಥಾತ್ ಕಾರುಣ್ಯಸ್ವಭಾವ ಇಲ್ಲದಿದ್ದರೆ ಅವರ ಹತ್ತಿರ ಪ್ರಾರ್ಥನೆ ಮಾಡುವುದು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಉತ್ತರವಾಗಿ ಇನ್ನೊಂದು ಕೃಪಾಲವಃ ಎಂಬ ಪದವನ್ನು ಹಾಕಿದ್ದಾರೆ. ಇದಕ್ಕೆ ಕರುಣೆಯುಳ್ಳವರಾದ್ದರಿಂದ ಅವರಿಂದ ಕೃಪಾಲೇಶದ ಪ್ರಾರ್ಥನೆ ಯುಕ್ತ ಎಂದಭಿಪ್ರಾಯ. ದ್ವೇಷ ಮೊದಲಾದ ದೋಷಗಳಿದ್ದಾರೆ ಕೃಪಾಳುವೇ ಆಗುವುದು ಸಾಧ್ಯವಿಲ್ಲ ಎನ್ನುವುದಕ್ಕೆ ದೋಷಗಳೇ ಇಲ್ಲ ಎಂದು ತಿಳಿಸಲು 'ಅಮಲಾಃ' ಎಂಬ ಪದವನ್ನು ಹೇಳಿದ್ದಾರೆ. ಯಾರ ವಿಷಯದಲ್ಲಿ ಕೃಪೆಯನ್ನು ಪ್ರಾರ್ಥಿಸುತ್ತಿದ್ದಾರೆ ಎಂದರೆ 'ಶ್ರೀಮಧ್ವಸಂಸೇವನಲಬ್ಧಶುದ್ಧವಿದ್ಯಾ-ಸುಧಾಂಭೋನಿಧಿಗಳಿಂದ' ಎಂದುತ್ತರ. ಅರ್ಥಾತ್ ಶ್ರೀಮದಾನಂದತೀರ್ಥರ ಸೇವೆಯಿಂದ ಪಡೆದ ನಿರ್ದುಷ್ಟವಾದ ವಿದ್ಯೆಯಿಂದ ಅಮೃತಸಮುದ್ರರಾದ ಪದ್ಮನಾಭತೀರ್ಥರಿಂದ ಎಂದು ಭಾವ. ಇದರಿಂದ ವಿದ್ಯೆಯ ವಿಷಯದಲ್ಲಿ ಕೃಪಾಪ್ರಾರ್ಥನೆ ಮಾಡಿದ್ದು ಸೂಚಿತವಾಗುತ್ತದೆ. ಪಂಕಜ-ನಾಭತೀರ್ಥಾಃ ಎಂಬಲ್ಲಿ ತೀರ್ಥ ಎಂದು ಪ್ರಯೋಗಿಸಿದ್ದು ಪ್ರಸಿದ್ಧವಾದ ತೀರ್ಥಕ್ಕೆ ಇವರು ಸಮಾನರಲ್ಲ ಎಂದು ತಿಳಿಸಲು. ಅರ್ಥಾತ್ ಅದಕ್ಕಿಂತಲೂ ಉತ್ಕೃಷ್ಟರು ಎಂದರ್ಥ.

### ಸ ಪದ್ಮನಾಭತೀರ್ಥೋರ್ಕ ... – ನ್ಯಾಯದೀಪಿಕಾ

** ಶ್ರೀಮತ್ಪದ್ಮನಾಭತೀರ್ಥಭಟ್ಟಾರಕಕೃತಗೀತಾತಾತ್ಪರ್ಯನಿರ್ಣಯವ್ಯಾಖ್ಯಾನೋಪಜೀವನೇನ ವಿಸ್ತೃತವ್ಯಾಖ್ಯಾನೇ ಸ್ವಸ್ಯ ಪ್ರವೃತ್ತೇಃ ತಾನ್ ಪ್ರಾರ್ಥಯತೇ – ಸ ಇತಿ ॥ ಅತ್ರ ಕಿರಣವಚನಸಾಧಾ-ರಣಗೋಶಬ್ದಗ್ರಹಣೇನ ತತ್ಕೃತವ್ಯಾಖ್ಯಾನಸ್ಯ ಯತ್ ಸಮ್ಯಗ್-ಜ್ಞಾನಜನಕತ್ವೇನ ಸೌರರಶ್ಮಿ-ಸಾಮ್ಯಮ್ ಅಭಿಪ್ರೇತಮ್, ತದ್ವ್ಯನಕ್ತಿ – ನ ತತ್ತ್ವೇತಿ ॥ ಯಸ್ಯ ಗೋಗಣಸ್ಯೋಪಜೀವನಂ ವಿನಾ ಗೀತಾತಾತ್ಪರ್ಯನಿರ್ಣಯಾದೇಃ ಯತ್ ತತ್ತ್ವಮ್ ಅಬಾಧಿತೋಽರ್ಥಃ ತಸ್ಯ ಯೋ ಮಾರ್ಗೋಽವ-ಗತಿಸಾಧನಂ ಕರಿಷ್ಯಮಾಣಮಸ್ಮದೀಯಂ ವ್ಯಾಖ್ಯಾನಂ ತತ್ರ ಗಮನಂ ಪ್ರವೃತ್ತಿರೇವ ನಾಸ್ತಿ ಸ ಗೋಗಣ ಇತಿ ಯೋಜ್ಯಮ್ । (ಶ್ರೀನಿವಾಸತೀರ್ಥೀಯಟಿಪ್ಪಣೀ)

** ಸೂರ್ಯಕಿರಣಸಮೂಹೋ ಯಥಾ ಲೋಕಸ್ಯ ಜ್ಞಾನಾಯ ಭವತಿ, ತಥಾ ಏತೇಷಾಂ ವಾಕ್ಯ-ಸಮೂಹೋ ಮಮ ಜ್ಞಾನಾಯ ಅಸ್ತು । (ಭಾವದೀಪ)

ಶ್ರೀಮತ್ಪದ್ಮನಾಭತೀರ್ಥಭಟ್ಟಾರಕರು ಬರೆದ ಗೀತಾತಾತ್ಪರ್ಯನಿರ್ಣಯವ್ಯಾಖ್ಯಾನವನ್ನು ಅವ-ಲಂಬಿಸಿಕೊಂಡು ಜಯತೀರ್ಥರು ತಾವು ಮಾಡುವ ವಿಸ್ತೃತವಾದ ವ್ಯಾಖ್ಯಾನದಲ್ಲಿ ಪ್ರವೃತ್ತಿಗಾಗಿ ಪದ್ಮನಾಭತೀರ್ಥರನ್ನು ಪ್ರಾರ್ಥಿಸುತ್ತಿದ್ದಾರೆ – ಸಃ ಎಂಬುದಾಗಿ. ಇಲ್ಲಿ ಕಿರಣ ಹಾಗೂ ಮಾತುಗಳು ಎಂಬ ಎರಡು ಅರ್ಥವನ್ನು ಕೊಡುವ ಗೋಶಬ್ದವನ್ನು ಗ್ರಹಣಮಾಡಿದ್ದರಿಂದ ಅವರ ವ್ಯಾಖ್ಯಾನವು ಸರಿಯಾದ ಜ್ಞಾನವನ್ನು ಹುಟ್ಟಿಸುವುದರಿಂದ ಸೂರ್ಯನ ಕಿರಣಗಳಿಗೆ ಸಮಾನವಾಗಿದೆ ಎಂದಭಿ-ಪ್ರಾಯವಿದೆ. ಇದನ್ನು ವ್ಯಕ್ತಪಡಿಸುತ್ತಿದ್ದಾರೆ 'ನ ತತ್ತ್ವಮಾರ್ಗೇ' ಎಂಬುದಾಗಿ. ಯಾರ ಮಾತಿನ

ಸಮೂಹವನ್ನು ಅವಲಂಬಿಸದೇ ಗೀತಾತಾತ್ಪರ್ಯನಿರ್ಣಯಕ್ಕೆ ಅಬಾಧಿತವಾದ ಅರ್ಥವನ್ನು ತಿಳಿಸುವ ಮಾರ್ಗವಾದ, ನಾವು ಮುಂದೆ ಮಾಡುವ ವ್ಯಾಖ್ಯಾನದ ಪ್ರವೃತ್ತಿಯೇ ಇಲ್ಲವೋ ಅಂತಹ ಪದ್ಮನಾಭತೀರ್ಥರ ಮಾತು ಸೂರ್ಯರಶ್ಮಿಸಮಾನವಾಗಿದೆ.

## ಚತುರ್ಥಗುರುತ್ವವುಳ್ಳ ಪದ್ಮನಾಭತೀರ್ಥರು

(ಲಘುರಸರಂಜನೀ) – ಚತುರ್ಥಂ ಗುರುತ್ವಂ ಪದ್ಮನಾಭತೀರ್ಥೇಽಸ್ತೀತಿ ತತೋ ವೈರಾಗ್ಯಾದಿ-ವಿಭೂತಿಮಾಶಾಸ್ತೇ – **ರಮೇತಿ** ॥ 'ರಮಾನಿವಾಸೋಚಿತವಾಸಭೂಮಿಃ' ಇತ್ಯನೇನ ಪದ್ಮನಾಭ-ತೀರ್ಥಸ್ಯ ಶ್ರೀನಿವಾಸಪ್ರೇಮಪಾತ್ರತ್ವಂ ಪ್ರತೀಯತೇ । ತತಃ 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ' ಇತ್ಯುಕ್ತೇಃ ತತ್ಪ್ರೇಮಪಾತ್ರತ್ವಂ ಶ್ರೀನಿವಾಸಸ್ಯ ಚ ಪ್ರತೀಯತೇ । ತದು-ಭಯಮಪಿ ಸನ್ನ್ಯಾಯರತ್ನಾವಲೀಗ್ರಂಥಕರಣೇ ವೈರಾಗ್ಯಭಾಗ್ಯೇ ಚ ಹೇತುಃ । ನ ಹಿ ಶ್ರೀನಿವಾಸಪ್ರೇಮಪಾತ್ರಸ್ಯ ಪದ್ಮನಾಭತೀರ್ಥಸ್ಯ ತದ್ಗುಣಗಣವರ್ಣನಪರಸನ್ನ್ಯಾಯರತ್ನಾವಲೀ-ಕರಣಮಶಕ್ಯಂ, ಹೇಯೇಷು ವಿಷಯೇಷು ಸಕ್ತಿರ್ವಾ ಭವತಿ । ನಾಪಿ ತಸ್ಮಿನ್ ಪ್ರೇಮವತಸ್ತಸ್ಯ 'ಯೋ ಹಿ ಯತ್ರಾದರವಾನ್ ತಸ್ಯೈವ ತದ್ವಸ್ತುವಿದ್ಯಮಾನಮಪಿ ಸ್ಫುರತಿ' ಇತಿ ಟೀಕೋಕ್ತೇಃ ಶ್ರೀರಮಣಗುಣಗಣಜ್ಞಾನಸಾಧ್ಯಂ ಗ್ರಂಥಕರಣಮಸಾಧ್ಯಮ್ । ನಾಪ್ಯುಪಾದೇಯೇ ಪ್ರೇಮವತೋ ಹೇಯೇಽನುರಾಗಾದಯೋ ಭವಂತಿ । **'ಸನ್ನ್ಯಾಯರತ್ನಾವಲಿಜನ್ಮಭೂಮಿಃ' 'ವೈರಾಗ್ಯಭಾಗ್ಯಃ'** ಇತ್ಯಾಭ್ಯಾಂ ಚೋಕ್ತಗುರುತ್ವಪ್ರಯೋಜಕಧರ್ಮೋಪಪಾದನಂ ಕೃತಮಿತಿ ಜ್ಞೇಯಮ್ ।

ನಾಲ್ಕನೆಯ ಗುರುಗಳು ಪದ್ಮನಾಭತೀರ್ಥರಾದ್ದರಿಂದ ಅವರಿಂದ ವೈರಾಗ್ಯಾದಿವಿಭೂತಿಯನ್ನು ಪ್ರಾರ್ಥಿಸುತ್ತಾರೆ – 'ರಮಾನಿವಾಸೋಚಿತ' ಎಂದು. ರಮಾನಿವಾಸೋಚಿತವಾಸಭೂಮಿಃ ಎನ್ನುವುದರಿಂದ ಪದ್ಮನಾಭತೀರ್ಥರು ಶ್ರೀನಿವಾಸನಿಗೆ ಪ್ರೇಮಪಾತ್ರರು ಎಂದು ತೋರುತ್ತದೆ. ಹಾಗೆಯೇ 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮ್ ಅಹಂ ಸ ಚ ಮಮ ಪ್ರಿಯಃ' (ಗೀತಾ) ಎಂದು ಹೇಳಿದ್ದರಿಂದ ಜ್ಞಾನಿಗಳಿಗೆ ಪ್ರೀತಿಪಾತ್ರ ಶ್ರೀನಿವಾಸ ಎಂದು ತೋರುತ್ತಿದೆ. ಈ ಎರಡೂ ಸನ್ನ್ಯಾಯರತ್ನಾವಲಿಗ್ರಂಥ ಮಾಡುವುದಕ್ಕೆ ವೈರಾಗ್ಯವನ್ನು ಭಾಗ್ಯವನ್ನಾಗಿ ಪಡೆಯುವುದಕ್ಕೆ ಕಾರಣವಾಗಿವೆ. ಶ್ರೀನಿವಾಸನ ಪ್ರೇಮಕ್ಕೆ ಪಾತ್ರರಾದ ಪದ್ಮನಾಭತೀರ್ಥರು ಅವನ ಗುಣಗಳನ್ನು ವರ್ಣನೆ ಮಾಡುವ 'ಸನ್ನ್ಯಾಯರತ್ನಾವಲಿ' ಗ್ರಂಥವನ್ನು ಮಾಡುವುದು ಸಾಧ್ಯ. ಏಕೆಂದರೆ ಅವರಿಗೆ ಶ್ರೀನಿವಾಸನಲ್ಲಿ ಸ್ನೇಹ ಇದೆ. ಹೇಯವಿಷಯಗಳಲ್ಲಿ ಆಸಕ್ತಿ ಇಲ್ಲ. ಇಲ್ಲದಿದ್ದರೆ "ಯಾರಿಗೆ ಯಾವ ವಿಷಯದಲ್ಲಿ ಆದರವಿಲ್ಲವೋ ಅವರಿಗೆ ಆ ವಸ್ತು ಮುಂದಿದ್ದರೂ ಸ್ಫುರಣೆ ಆಗುವುದಿಲ್ಲ. ಹಾಗಾಗಿ ಆದರ ಎಲ್ಲಿದೆಯೋ ಅಲ್ಲಿಯೇ ಸ್ಫುರಣೆಯಾಗುವುದು" ಎಂಬ ಟೀಕೆಯ ಮಾತಿನ ಅಭಿಪ್ರಾಯದಂತೆ ರಮಾರಮಣನ ಗುಣಗಳ ಜ್ಞಾನದಿಂದ ಗ್ರಂಥಕರಣವು ಸಾಧ್ಯ. ಇನ್ನು ಉಪಾದೇಯದಲ್ಲಿ ಯಾರಿಗೆ

ಪ್ರೇಮ ಇರುವುದೋ ಅವರಿಗೆ ಹೇಯವಿಷಯದಲ್ಲಿ ಅನುರಾಗಾದಿಗಳು ಬರಲು ಸಾಧ್ಯ- ವಿಲ್ಲ. 'ಸನ್ನ್ಯಾಯರತ್ನಾವಲಿಜನ್ಮಭೂಮಿಃ' 'ವೈರಾಗ್ಯಭಾಗ್ಯ' ಎಂಬ ಎರಡರಿಂದ ಗುರುತ್ವಕ್ಕೆ ಬೇಕಾದ ಧರ್ಮಗಳನ್ನು ಉಪಪಾದನೆ ಮಾಡಿದಂತಾಯಿತು.

## ನನಗೆ ಜ್ಞಾನಿಗಳು ಪ್ರಿಯರು, ಅವರಿಗೆ ನಾನು ಪ್ರಿಯ

• – तेषां ज्ञानी नित्ययुक्त एकभक्तिर्विशिष्यते ।
प्रियो हि ज्ञानिनोऽत्यर्थमहं स च मम प्रियः ॥7/17॥

(विद्याधिराजीय) नित्ययुक्तः सदा भगवत्समाधिमान् । एकस्मिन् मय्येव प्राधान्येन भक्तिर्यस्य स एकभक्तिः । तदुक्तम् –

"यादृशी तत्र भक्तिः स्यात् तादृश्यन्यत्र नैव चेत् ।
अनन्यभक्तिः सा ज्ञेया विष्णावेव तु सा भवेत् ।
अन्यत्र वैष्णवत्वेन लक्ष्मीब्रह्महरादिषु ।
कुर्याद्भक्तिं नान्यथा तु तद्वशा एव ते यतः ॥" इति ॥१७॥

(राघवेन्द्रतीर्थीय) – नित्ययुक्तः = सदा भगवत्समाधिमान् । एकस्मिन् मय्येव प्राधान्येन भक्तिर्यस्यासौ एकभक्तिः विशिष्यते । अतिशयितो भवति । कुत इत्यतो ममातिप्रियत्वादित्याह – प्रियो हीति ॥१७॥

ಸುಕೃತಿಗಳು ಅಂದರೆ ಪುಣ್ಯಸಂಪಾದನೆ ಮಾಡಿದ ಜನರು ಭಗವಂತನನ್ನು ಭಜಿಸಲು ಸಾಧ್ಯ. ಅವನ ಭಕ್ತರು ನಾಲ್ಕುರೀತಿಯಾಗಿದ್ದಾರೆ. ಆರ್ತಃ ಅಂದರೆ ರೋಗಾದಿಗಳಿಂದ ಗ್ರಸ್ತನಾದವನು, ಜಿಜ್ಞಾಸುಃ - ತಿಳಿಯುವ ಇಚ್ಛೆ ಇರುವವನು, ಅರ್ಥಾರ್ಥೀ - ಐಶ್ವರ್ಯವನ್ನು ಅಪೇಕ್ಷಿಸುವವನು, ತತ್ವಜ್ಞಾನಿ ಎಂದು. ಈ ನಾಲ್ಕುವಿಧ ಭಕ್ತರಲ್ಲಿ ನನ್ನಲ್ಲೇ ಮನಸ್ಸಿಟ್ಟು ನನ್ನಲ್ಲಿಯೇ ಮುಖ್ಯವಾದ ಭಕ್ತಿಯನ್ನು ಇಟ್ಟಿರುವವನೋ ಅಂತಹ ತತ್ವಜ್ಞಾನಿಯೇ ಶ್ರೇಷ್ಠ. ಏಕೆಂದರೆ ಅವನಿಗೆ ನಾನು ಬಹಳ ಇಷ್ಟ, ಅವನು ನನಗೆ ಬಹಳ ಇಷ್ಟ.

ಯಾವ ರೀತಿಯಾದ ಭಕ್ತಿಯನ್ನು ವಿಷ್ಣುವಿನಲ್ಲಿ ಮಾತ್ರ ಮಾಡುತ್ತೇವೆಯೋ ಅವನಿಗಿಂತ ಬೇರೆ ಕಡೆ ಭಕ್ತಿಯು ಅದೇ ರೀತಿ ಮಾಡದಿದ್ದರೆ ಅದನ್ನೇ ಅನನ್ಯಭಕ್ತಿ ಎಂದು ಕರೆಯುತ್ತಾರೆ. ಭಗವಂತನನ್ನು ಬಿಟ್ಟು ಬೇರೆಯವರಲ್ಲಿ ಅಂದರೆ ಲಕ್ಷ್ಮಿ, ಬ್ರಹ್ಮ, ರುದ್ರ ಮೊದಲಾದವರಲ್ಲಿ ವೈಷ್ಣವರು ಎಂದು ಭಕ್ತಿಯನ್ನು ಮಾಡಬೇಕು ಹೊರತು ಮುಖ್ಯವಾದ ಭಕ್ತಿಯನ್ನಲ್ಲ. ಅಂದರೆ ಭಗವಂತನಲ್ಲಿ ಮಾಡುವ ತರಹದ ಭಕ್ತಿಯಲ್ಲ. ಏಕೆಂದರೆ ಆ ಲಕ್ಷ್ಮೀಬ್ರಹ್ಮಾದಿಗಳು ಭಗವಂತನ ಅಧೀನರೇ ಆಗಿದ್ದಾರೆ.

## ಪದ್ಮನಾಭತೀರ್ಥಾಮೃತಾಬ್ಧಿ ಹಾಗೂ ವೈರಾಗ್ಯ

(ಲಘುರಸರಂಜನೀ) — ಪದ್ಮನಾಭತೀರ್ಥ ಏವ ಅಮೃತಾಬ್ಧಿಃ ಕ್ಷೀರಸಮುದ್ರಾಃ ಅರಣ್ಯಾಖ್ಯಾ-ಮೃತಸಮುದ್ರೋ ವಾ । ಉಭಯೋರಪಿ ಸಮುದ್ರಯೋ ರಮಾನಿವಾಸೋಚಿತವಾಸಭೂಮಿತ್ವಂ ತತ ಏವ ಸ್ವಂ ಪ್ರಾಪ್ತೇಭ್ಯ ಆನಂದದಾತೃತ್ವಂ ಚಾಸ್ತಿ । 'ಭಗವತ್ಸಮೀಪಮುಪಯಾತವತಾಂ ಪ್ರಮದೋ ನ ಕೇವಲಮಲಬ್ಧತುಲಃ' ಇತಿ ಮಧ್ವವಿಜಯೋಕ್ತೇಃ । ತತ ಏವ ಚ ವೈರಾಗ್ಯರೂಪಂ ಭಾಗ್ಯಂ ಯಸ್ಮಾದಿತಿ । ವೈರಾಗ್ಯಭಾಗ್ಯತ್ವಂ ಚಾನಂದಪೂರ್ಣೈಃ, ತದರ್ಥಮೈಹಿಕವಿಷಯ-ಭೋಗರಾಗಾಯೋಗಾತ್ । ವೈರಾಗ್ಯಸ್ಯ ಭಾಗ್ಯತ್ವಂ ಚ ಸಮುದ್ರಸೇವಕಾನಾಮ್ ಆನಂದ-ಪೂರ್ಣತ್ವರೂಪಮಾಹಾತ್ಮ್ಯವ್ಯಂಜಕತ್ವಾತ್ । ಪದ್ಮನಾಭತೀರ್ಥಸ್ಯ ತು ವೈರಾಗ್ಯರೂಪಂ ಭಾಗ್ಯಂ ಯಸ್ಯೇತಿ ಯಸ್ಮಾದಿತ್ಯುಭಯಥಾಪಿ ವೈರಾಗ್ಯಭಾಗ್ಯತ್ವಂ ದ್ರಷ್ಟವ್ಯಮ್ ।

ಪದ್ಮನಾಭತೀರ್ಥರೇ ಅಮೃತಾಬ್ಧಿ - ಕ್ಷೀರಸಮುದ್ರ. ಅಥವಾ ಅರ, ಣ್ಯ ಎಂಬ ಅಮೃತಸಮುದ್ರ ('ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೆ' ಇತಿ ಲಿಂಗಂ ಚ ತಥಾ ದೃಷ್ಟಮ್ । 'ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ' ಬ್ರ.ಸೂ.ಭಾ. 1-3-15).

ಎರಡೂ ಸಮುದ್ರಗಳಿಗೆ ರಮಾನಿವಾಸೋಚಿತವಾಸಭೂಮಿತ್ವ ಇದೆ. ಆದ್ದರಿಂದಲೇ ತಮ್ಮನ್ನು ಕುರಿತು ಯಾರು ಬರುವವರೋ ಅವರಿಗೆ ಆನಂದಪ್ರದವಾಗಿವೆ ಸಮುದ್ರಗಳು. 'ಭಗವತ್ಸಮೀಪ-ಮುಪಯಾತವತಾಂ ಪ್ರಮದೋ ನ ಕೇವಲಮಲಬ್ಧತುಲಃ' ಎಂದು ಮಧ್ವವಿಜಯದಲ್ಲಿ ಹೇಳಿದ್ದ-ರಿಂದ.

ಭಗವತ್ಸಮೀಪಮುಪಯಾತವತಾಂ ಪ್ರಮದೋ ನ ಕೇವಲಮಲಬ್ಧತುಲಃ ।
ಅಪಿ ತಸ್ಯ ಲೋಕಮತಿಲೋಕಗುಣಂ ಭಜತಾಂ ಸುದುರ್ಲಭಮಭೂರಿಶುಭೈಃ ॥ ಮ.ವಿ. (11-22)

ಭಗವಂತನ ಸಮೀಪದಲ್ಲಿರುವುದನ್ನೇ ಸಾಮೀಪ್ಯಮೋಕ್ಷವೆನ್ನುತ್ತಾರೆ. ಇದನ್ನು ಪಡೆದವರ ಆನಂದಕ್ಕೆ ಹೋಲಿಕೆಯಿಲ್ಲ ಎಂದಲ್ಲ. ಏಕೆಂದರೆ ಸತ್ಯಲೋಕವೇ ಮೊದಲಾದ ಎಲ್ಲಾ ಲೋಕಗಳ ಗುಣಗಳನ್ನೂ ಮೀರಿದ, ಹೆಚ್ಚಿನ ಪುಣ್ಯವಿಲ್ಲದವರಿಗೆ ದುರ್ಲಭವಾದ ಆ ವೈಕುಂಠವನ್ನು ಹೊಂದಿದ ಸಾಲೋಕ್ಯಮುಕ್ತರ ಆನಂದವೂ ಸಾಮೀಪ್ಯಮೋಕ್ಷಪಡೆದವರ ಆನಂದದಂತೆ ಅಸದೃಶವೇ ಆಗಿರುತ್ತದೆ.

ಸಾರೂಪ್ಯ = ದೇವರ ಸಮಾನರೂಪವನ್ನು ಹೊಂದುವುದು. ಸಾಮೀಪ್ಯ = ದೇವರ ಸಮೀಪದಲ್ಲಿ ನಿತ್ಯದಲ್ಲಿಯೂ ಇರುವುದು, ಸಾಲೋಕ್ಯ = ದೇವರ ವೈಕುಂಠಲೋಕದಲ್ಲಿರುವುದು. ಈ ಮೂರು ಮೋಕ್ಷಗಳಲ್ಲಿಯೂ ಅವರವರ ಯೋಗ್ಯತಾನುಸಾರ ಅನುಭವಿಸುವ ಆನಂದವು ಸಂಪೂರ್ಣವೇ

ಆಗಿರುತ್ತದೆ. ದೊಡ್ಡಭಾಂಡದಲ್ಲಿ ತುಂಬಿದ ನೀರು ಪೂರ್ಣವೇ, ಚಿಕ್ಕ ತಂಬಿಗೆಯಲ್ಲಿ ತುಂಬಿದ ನೀರೂ ಪೂರ್ಣವೇ.

ಆದ್ದರಿಂದಲೇ ವೈರಾಗ್ಯವೆಂಬ ಭಾಗ್ಯವು ಯಾರಿಂದ ಬರುತ್ತದೋ ಅವರು ವೈರಾಗ್ಯಭಾಗ್ಯರು. ಅಲ್ಲದೆ ಆನಂದಪೂರ್ಣರಾಗಿರುವುದರಿಂದ ಆನಂದಕ್ಕೋಸ್ಕರ ಐಹಿಕವಿಷಯಭೋಗಗಳಲ್ಲಿ ಆಸಕ್ತಿಯು ಕೂಡುವುದಿಲ್ಲ. ವೈರಾಗ್ಯದಲ್ಲಿರುವ ಭಾಗ್ಯತ್ವವಾದರೋ ಸಮುದ್ರಸೇವಕರಿಗೆ ಆನಂದ-ಪೂರ್ಣತ್ವ ಎಂಬ ಮಾಹಾತ್ಮ್ಯೆಯನ್ನು ವ್ಯಕ್ತಪಡಿಸುವಿಕೆಯೇ ಆಗಿದೆ. ಪದ್ಮನಾಭತೀರ್ಥರಿಗಾದರೋ ವೈರಾಗ್ಯರೂಪವಾದ ಭಾಗ್ಯವು ಯಾರಿಗೆ ಇದೆಯೋ ಅಥವಾ ಯಾರಿಂದ ಉಂಟಾಗುವುದೋ ಎಂಬ ಎರಡರ್ಥದಲ್ಲೂ ವೈರಾಗ್ಯಭಾಗ್ಯತ್ವವನ್ನು ತಿಳಿಯಬೇಕು.

** ಓಂ ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ ಓಂ ॥ (ಬ್ರ.ಸೂ. 1-3-15)

*— ಚಶಬ್ದೌ ಪರಸ್ಪರಸಮುಚ್ಚಾಯಕೌ । ವೈಶಬ್ದಃ ಪ್ರಸಿದ್ಧ್ಯರ್ಥಃ । ಅರಃ = ಅರಾಖ್ಯಶ್ಚ ಣ್ಯಃ = ಣ್ಯಾಖ್ಯಶ್ಚ ಇತಿ ದ್ವೌ ಅರ್ಣವೌ ಬ್ರಹ್ಮಲೋಕೇ ಸ್ತಃ ಇತಿ । ಅತ್ರ ಬ್ರಹ್ಮಣಃ ಲೋಕೇ ಇತ್ಯರ್ಥಃ । ತಥಾ ಚ - ಅರಣ್ಯಾಖ್ಯಸುಧಾಸಮುದ್ರ-ಆಶ್ರಯ-ಲೋಕವತ್ತ್ವಂ ಲಿಂಗಂ ತಥಾ ಹಿ ದೃಷ್ಟಮ್ = ಶ್ರುತಿಸಿದ್ಧಮಿತ್ಯರ್ಥಃ । ತಾದೃಶಸಮುದ್ರಾಶ್ರಯಲೋಕವತ್ತ್ವಂ ವಿಷ್ಣುಲಿಂಗಮ್ ಇತಿ ಕುತಃ? ಇತ್ಯತಃ ತಥಾ ಹಿ ಇತಿ ಸೂತ್ರಖಂಡಮ್ । ತದರ್ಥಸ್ತು ತಥಾ ದೃಷ್ಟವತ್ ಸ್ಮೃತಂ ಹಿ ಸ್ಮೃತಿಸಿದ್ಧಂ ಹಿ ಇತಿ । ತಾಂ ಸ್ಮೃತಿಮುದಾಹರತಿ - ಅರಃ ಇತಿ ॥ ಅತ್ರಾಪಿ ಚಶಬ್ದೌ ಪರಸ್ಪರಸಮುಚ್ಚಾಯಕೌ । ವೈಶಬ್ದಃ ಪ್ರಸಿದ್ಧ್ಯರ್ಥಃ । ಅರಶ್ಚ ಣ್ಯಶ್ಚ ಇತ್ಯೇತತ್ ಸಂಜ್ಞೌ ದ್ವೌ ಸರ್ವಾಭಿಮತಪ್ರದೌ ಸುಧಾ-ಸಮುದ್ರೌ ತತ್ರೈವ ಬ್ರಹ್ಮಲೋಕೇ ಏವ ತಿಷ್ಠತಃ ಇತ್ಯಾದಿನಾ ಸ್ಮೃತಿವಾಕ್ಯೇನ ಏತದ-ರಣ್ಯಾಖ್ಯಸುಧಾಸಮುದ್ರಾಶ್ರಯಲೋಕವತ್ತ್ವಂ ಲಕ್ಷಣತ್ವೇನ ಅಸಾಧಾರಣಧರ್ಮತ್ವೇನ ತಸ್ಯೈವ = ವಿಷ್ಣೋರೇವ ಉಚ್ಯತೇ । (ವೇದಗರ್ಭನಾರಾಯಣಾಚಾರ್ಯರು)

— ಅರ ಹಾಗೂ ಣ್ಯ ಎಂಬ ಹೆಸರಿನ ಎರಡು ಸಮುದ್ರಗಳು ಬ್ರಹ್ಮಲೋಕದಲ್ಲಿವೆ. ಇಂತಹ ಸಮುದ್ರಕ್ಕೆ ಆಶ್ರಯವಾದ ಲೋಕವುಳ್ಳವನು ಎಂದರೆ ವಿಷ್ಣುವೇ ಆಗಬೇಕು. ಏಕೆಂದರೆ ಈ ರೀತಿಯಾದ ವಿಷಯವು ಸ್ಮೃತಿಯಿಂದ ಸಿದ್ಧವಾಗಿದೆ. ಆ ಸ್ಮೃತಿ 'ಅರಶ್ಚ ವೈ ಣ್ಯಶ್ಚ ..' ಎಂಬುದು. ಸ್ಮೃತಿಯಲ್ಲಿರುವ ಎರಡು ಚಶಬ್ದಗಳು ಪರಸ್ಪರಸಮುಚ್ಚಯ ಎಂಬ ಅರ್ಥದಲ್ಲಿವೆ. ವೈ ಎಂಬ ಶಬ್ದವು ಪ್ರಸಿದ್ಧ ಎಂಬ ಅರ್ಥದಲ್ಲಿದೆ. ಹಾಗಾಗಿ ಅರ ಹಾಗೂ ಣ್ಯ ಎಂಬ ಈ ಹೆಸರಿನ ಎರಡು ಸರ್ವಾಭೀಷ್ಟಪ್ರದವಾದ ಅಮೃತಸಮುದ್ರಗಳು ಬ್ರಹ್ಮಲೋಕದಲ್ಲಿಯೇ ಇರುವವು ಎಂದು ಹೇಳಿದ್ದರಿಂದ ಅರಣ್ಯಾಖ್ಯಸಮುದ್ರಾಶ್ರಯಲೋಕವತ್ತ್ವ ಎಂಬುದು ವಿಷ್ಣುವಿನ ಅಸಾಧಾರಣ-ಧರ್ಮವಾಗಿದೆ.

## ವೈರಾಗ್ಯಭಾಗ್ಯತ್ವವು ಈ ಸಮುದ್ರದ ಮುಖ್ಯಧರ್ಮ

(ಲಘುರಸರಂಜನೀ) — ಸಮುದ್ರಯೋ ರತ್ನಾವಲಿಜನ್ಮಭೂಮಿತ್ವಂ ತು ಪ್ರಸಿದ್ಧಮೇವ । ಅಥವಾ ಪದ್ಮನಾಭತೀರ್ಥಾಖ್ಯಾಮೃತಾಬ್ಧಿರ್ವಿದ್ಯಾಖ್ಯಾಮೃತಸಮುದ್ರ ಇತ್ಯರ್ಥಃ । ಅಥವಾ ಪದ್ಮನಾಭ-ತೀರ್ಥಾಖ್ಯಾಮೃತಾಬ್ಧಿರ್ವಿದ್ಯಾಖ್ಯಾಮೃತಸಮುದ್ರ ಇತ್ಯರ್ಥಃ । ಅತ ಏವೋಕ್ತಂ ಪೂರ್ವಪ್ರಸ್ಥಾನೇ — "ಶ್ರೀಮಧ್ವಸಂಸೇವನಲಬ್ಧಶುದ್ಧವಿದ್ಯಾಸುಧಾಂಭೋನಿಧಯ' ಇತಿ । ತಸ್ಯ ರಮಾನಿವಾಸೋ-ಚಿತವಾಸಭೂಮಿತ್ವ-ಸನ್ನ್ಯಾಯರತ್ನಾವಲಿಜನ್ಮಭೂಮಿತ್ವಯೋರಿವ ವೈರಾಗ್ಯಭಾಗ್ಯತ್ವಮಪಿ ಮುಖ್ಯ-ಮೇವ ಭವತಿ । ಯಥೋಕ್ತಂ ಭಾಗವತೇ — 'ಜ್ಞಾನಂ ಕ್ವಚಿತ್ ತಚ್ಚ ನ ಸಂಗವರ್ಜಿತಮ್'; 'ಜ್ಞಾನೇನ ವೈರಾಗ್ಯವಿಜೃಂಭಿತೇನ' 'ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ' 'ಜ್ಞಾನಂ ಚ ವಿಜ್ಞಾನ-ವಿರಾಗಯುಕ್ತಮ್' ಇತ್ಯಾದಿ । ಅತ್ರ ತದೀಯಜ್ಞಾನಂ ಪ್ರತಿ ಪ್ರಾರ್ಥನಮಪಿ ತತ್ಪ್ರಾರ್ಥನಮೇವ । ಯಥಾ 'ಜಯಂತಿ ಜಾನಕೀಭರ್ತುಶ್ಚರಣಾಂಭೋಜರೇಣವಃ' ಇತ್ಯತ್ರ ಚರಣರೇಣುಸ್ತುತಿಃ ಚರಣಸ್ತುರಿತಿ ಜ್ಞೇಯಮ್ । 'ವಿಭೂತ್ಯೈ' ಕರಿತುರಗಾದಿವಿವಿಧಭೂತ್ಯಪೇಕ್ಷಯಾ ವಿಶಿಷ್ಟೋತ್ತ-ಮಾಯಾ ಭೂತಿರ್ವೈರಾಗ್ಯಾದ್ಯೈಶ್ವರ್ಯಂ ತಸ್ಯೈ ಭವತಾದಿತಿ ॥

ಸಮುದ್ರಕ್ಕೆ ರತ್ನಾವಲಿಜನ್ಮಸ್ಥಾನತ್ವವೆಂಬುದು ಪ್ರಸಿದ್ಧವೇ ಆಗಿದೆ. ಅಥವಾ ಪದ್ಮನಾಭತೀರ್ಥರೆಂಬ ಅಮೃತಾಬ್ಧಿಯು ಎಂದರೆ ವಿದ್ಯೆಯೆಂಬ ಅಮೃತಸಮುದ್ರ ಎಂದರ್ಥ. ಆದ್ದರಿಂದಲೇ ಪೂರ್ವಪ್ರಸ್ಥಾನದಲ್ಲಿ ಹೀಗೆ ಹೇಳಿದ್ದಾರೆ.

"ಶ್ರೀಮಧ್ವಸಂಸೇವನಲಬ್ಧಶುದ್ಧವಿದ್ಯಾಸುಧಾಂಭೋನಿಧಯೋಽಮಲಾ ಯೇ ।
ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಸ್ಯಾನ್ಮಯಿ ನಿತ್ಯಮೇಷಾಮ್ ॥" -

ಈ ಸಮುದ್ರಕ್ಕೆ ರಮಾನಿವಾಸೋಚಿತವಾಸಭೂಮಿತ್ವ ಹಾಗೂ ಸನ್ನ್ಯಾಯರತ್ನಾವಲಿಜನ್ಮಭೂಮಿತ್ವ ಇವುಗಳಂತೆ ವೈರಾಗ್ಯಭಾಗ್ಯತ್ವವೂ ಮುಖ್ಯವೇ ಆಗಿದೆ. ಇದನ್ನು ಭಾಗವತದಲ್ಲಿ ತಿಳಿಸಿದ್ದಾರೆ - 'ಜ್ಞಾನಂ ಕ್ವಚಿತ್ ತಚ್ಚ ನ ಸಂಗವರ್ಜಿತಮ್' 'ಜ್ಞಾನೇನ ವೈರಾಗ್ಯವಿಜೃಂಭಿತೇನ', 'ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ', 'ಜ್ಞಾನಂ ಚ ವಿಜ್ಞಾನವಿರಾಗಯುಕ್ತಮ್' ಇತ್ಯಾದಿಯಾಗಿ. ಇಲ್ಲಿ ಅವನಿಗೆ ಸಂಬಂಧಪಟ್ಟ ಜ್ಞಾನವನ್ನು ಕುರಿತು ಮಾಡುವ ಪ್ರಾರ್ಥನೆಯು ಅವನ ಪ್ರಾರ್ಥನೆಯೇ ಆಗಿದೆ. ಉದಾ — 'ಜಯಂತಿ ಜಾನಕೀಭರ್ತುಃ ಚರಣಾಂಭೋಜರೇಣವಃ' ಎಂಬಲ್ಲಿ ಪಾದಧೂಳಿನ ಸ್ತುತಿಯು ಪಾದದ ಸ್ತುತಿಯೂ ಆದಂತೆ ತಿಳಿಯಬೇಕು. ವಿಭೂತ್ಯೈ - ಆನೆ ಕುದುರೆ ಮೊದಲಾದ ನಾನಾತರಹದ ಐಶ್ವರ್ಯಕ್ಕಿಂತ ವಿಶಿಷ್ಟವಾದ ಐಶ್ವರ್ಯವಾದ ವೈರಾಗ್ಯಾದಿಗಳಿಗೋಸ್ಕರ ಕಾರಣರಾಗಲಿ ಎಂದು.

## ಜ್ಞಾನವಿದ್ದರೂ ಫಲಸಂಗವರ್ಜಿತರಲ್ಲ

ನೂನಂ ತಮೋ ಯಸ್ಯ ನ ಮನ್ಯುನಿರ್ಜಯೋ ಜ್ಞಾನಂ ಕ್ವಚಿತ್ ತಚ್ಚ ನ ಸಂಗವರ್ಜಿತಮ್ ।
ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ ಸ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ – ಭಾಗ. 8-8-19

ತಪಸ್ಸುಳ್ಳ ವಿಶ್ವಾಮಿತ್ರಾದಿಋಷಿಗಳಲ್ಲಿ ಕೋಪವು ಗೆಲ್ಲಲ್ಪಟ್ಟಿಲ್ಲ. ಬೃಹಸ್ಪತಿ ಶಕ್ರ ಮುಂತಾದವರಲ್ಲಿ ಜ್ಞಾನವಿದೆ. ಆದರೆ ಹಣದ ಆಸೆ ಅವರನ್ನು ಬಿಟ್ಟಿಲ್ಲ. ಬ್ರಹ್ಮ ಮಹಾಪುರುಷನಾದರೂ ಅವನಿಗೂ ಕಾಮನಿಗ್ರಹವಿಲ್ಲ. ರುದ್ರ ಪರರನ್ನು ಆಶ್ರಯಿಸಿದವನೆಂದಮೇಲೆ ಅವನೆಂಥ ಈಶ್ವರ.

— ನೂನಮಿತಿ ॥ ಯಸ್ಯ ತಪೋಽಸ್ತಿ ತಸ್ಯ ಮನ್ಯುನಿರ್ಜಯೋ ನಾಸ್ತಿ ನೂನಂ ನಿಶ್ಚಯೇ 'ನೂನಂ ತರ್ಕೇಽರ್ಥನಿಶ್ಚಯೇ' ಇತ್ಯಭಿಧಾನಾತ್ ಇತಿ ತರ್ಕಯಾಮಿ ವಾ —

ವಿಧಿನೋಕ್ತೇನ ಮಾರ್ಗೇಣ ಕೃಚ್ಛ್ರಚಾಂದ್ರಾಯಣಾದಿಭಿಃ ।
ಶರೀರಶೋಷಣಂ ಪ್ರಾಹುಃ ತಾಪಸಾಸ್ತಪ ಉತ್ತಮಮ್ ॥ ಇತಿ ।

ಅನೇನ ಋಷಿತಯಾ ನಾರದಾದಯಃ ಪ್ರತಿಷಿದ್ಧಾಃ । ಕ್ವಚಿತ್ ಪುಂಸಿ ಜ್ಞಾನಮಸ್ತಿ ತಸ್ಯ ಜ್ಞಾನಂ ಸಂಗವರ್ಜಿತಂ ಫಲಸ್ನೇಹರಹಿತಂ ನ ಸ್ಯಾತ್ ನೂನಮಿತ್ಯತ್ರಾಪ್ಯನುಕೃಷ್ಯತೇ ಅನೇನ ಬೃಹಸ್ಪತ್ಯಾದಯೋ ನಿಷಿದ್ಧಾಃ । ಕ್ವಚಿದ್ ಬ್ರಹ್ಮಾ ಮಹಾನಸ್ತಿ ತಸ್ಯ ಬ್ರಹ್ಮಣಃ ಕಾಮನಿರ್ಜಯೋ ನಾಸ್ತಿ "ಪ್ರಜಾಪತಿಃ ಸ್ವಾಂ ದುಹಿತರಮ್ ಅಭ್ಯಧ್ಯಾಯತ್" ಇತಿ ಶ್ರುತೇಃ । "ಕಸ್ಮೈ ದೇವಾಯ ಹವಿಷಾ ವಿಧೇಮ" ಇತಿ ಚ ಯಃ ಪರತೋ ವ್ಯಪಾಶ್ರಯಃ ಪರಮನ್ಯಮಾಶ್ರಯತ ಇತಿ ಸ ಈಶ್ವರಃ ಕಿಂ ನೈವ । ಅನೇನ ರುದ್ರಾದಿರ್ನಿವಾರಿತಃ ॥

## ವೈರಾಗ್ಯದಿಂದ ಪರೋಕ್ಷಜ್ಞಾನದ ಬಲ

** ಅಸೇವಯಾಯಂ ಪ್ರಕೃತೇರ್ಗುಣಾನಾಂ ಜ್ಞಾನೇನ ವೈರಾಗ್ಯವಿಜೃಂಭಿತೇನ ।
ಯೋಗೇನ ಮಯ್ಯರ್ಪಿತಯಾ ಚ ಭಕ್ತ್ಯಾ ಮಾಂ ಪ್ರತ್ಯಗಾತ್ಮಾನಮಿಹಾವರುಂಧೇ ।
— (ಭಾಗ. 3-25(26)-27).

ಪ್ರಕೃತಿಯಿಂದ ಉತ್ಪನ್ನವಾದ ವಿಷಯಪದಾರ್ಥಗಳನ್ನು ಸೇವಿಸಬಾರದು. ವೈರಾಗ್ಯದಿಂದ ಪರೋಕ್ಷಜ್ಞಾನಕ್ಕೆ ಬಲಬರುತ್ತದೆ. ಧ್ಯಾನಾದಿಯೋಗವನ್ನೂ ಸಾಧಿಸಿಕೊಳ್ಳಬೇಕು. ಆ ಯೋಗದಿಂದ ನನ್ನಲ್ಲಿ ಭಕ್ತಿಪಾಶದಿಂದ ಜೀವಸ್ವರೂಪಾಂತರ್ಗತನಾದ ನನ್ನನ್ನು ದೇಹದೊಳಗೆ ಕಟ್ಟಿ ಹಾಕಿ ಪ್ರತ್ಯಕ್ಷ ಕಾಣಬೇಕು.

* — ಪ್ರಕೃತೇರ್ಜಾತಾನಾಂ ಗುಣಾನಾಂ ವಿಷಯಾಣಾಮ್ ಅಸೇವಯಾ ಇತಿ ಪುನರ್ವೈರಾಗ್ಯವಚನಂ ತಸ್ಯ ಆವಶ್ಯಕತ್ವದ್ಯೋತನಾಯ । ವೈರಾಗ್ಯವಿಜೃಂಭಿತೇನ ವೈರಾಗ್ಯಾಭಿ-

ವೃದ್ಧೇನ ಜ್ಞಾನೇನ । ಪರೋಕ್ಷಜ್ಞಾನನಿಶ್ಚಯೇನ ಜಾತೇನ ಯೋಗೇನ ಧ್ಯಾನಾದಿರೂಪೇಣ । ಪ್ರತ್ಯಗಾತ್ಮಾನಂ ಜೀವಸ್ವರೂಪಾಂತರ್ಗತಂ ತದ್ಭಿನ್ನಂ ಸ್ವಯೋಗ್ಯಂ ವಾ ಹರಿಂ ಇಹ ದೇಹೇಽವರುಂಧೇ ವಶೀಕೃತವತ್ ಪಶ್ಯತಿ ॥ (ಪ್ರಕಾಶಿಕಾ)

## ವೈರಾಗ್ಯದ ಫಲ ಭಗವದಪರೋಕ್ಷಜ್ಞಾನ

** 'ಪಾನೇನ ತೇ ದೇವ ಕಥಾಸುಧಾಯಾಃ ಪ್ರವೃದ್ಧಭಕ್ತ್ಯಾ ವಿಶದಾಶಯಾ ಯೇ ।
ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ ಯಥಾಽಂಜಸಾ ತ್ವಾಽಽಪುರಕುಂಠಧಿಷ್ಣ್ಯಮ್ ॥
– ಭಾಗ. 3-5-45 (3-6-24).

ಹೇ ದೇವ! ನಿನ್ನ ಕಥೆಯೆಂಬ ಅಮೃತವನ್ನು ಕುಡಿಯುವುದರಿಂದ ಭಕ್ತರಲ್ಲಿ ಭಕ್ತಿ ಹೆಚ್ಚಾಗಿ ಅಭಿವೃದ್ಧಿಯಾಗುತ್ತದೆ. ಅಂತಃಕರಣ ಶುದ್ಧವಾಗುತ್ತದೆ. ವೈರಾಗ್ಯದ ಫಲ ಯಥಾರ್ಥವಾದ ನಿನ್ನ ಅಪರೋಕ್ಷಜ್ಞಾನ. ಅದನ್ನು ಪಡೆದು ಶಾಶ್ವತವಾಗಿ ಹೊಂದಲು ಯೋಗ್ಯವಾದ ಸ್ಥಾನವಾದ ನಿನ್ನನ್ನು ಅನಾಯಾಸವಾಗಿ ಹೊಂದುತ್ತಾರೆ.

– ಮಾರ್ಗಂತಿ ಇತ್ಯಾದಿನಾ ಯಚ್ಛ್ರವಣಾದಿರೂಪವಿಚಾರಭಕ್ತಿವೈರಾಗ್ಯಾದಿಕಂ ಜ್ಞಾನೇ ಪ್ರಾಧಾನ್ಯೇನ ಸಾಧನಮುಕ್ತಂ ತನ್ನ । ಸರ್ವೇಷಾಮಧಿಕಾರಿಣಾಮವಶ್ಯಂ ವಾಯುಜಯಾದಿಯೋಗಪ್ರಧಾನಾನಾಂ ಶ್ರವಣಾದ್ಯಪ್ರಾಧಾನ್ಯೇಽಪಿ ಮನಸೋಽವಶ್ಯತ್ವೇನ ವಾಯುಜಯಾದಿಯೋಗೇನೈವ ಶೀಘ್ರಂ ಮುಕ್ತೇಃ ಪ್ರಮಾಣಪ್ರಸಿದ್ಧತ್ವಾತ್ ಇತ್ಯಾಶಂಕಾಯಾಂ ತೇಷಾಂ ಮುಕ್ತಿರ್ನ ಸಂಪೂರ್ಣಾ ಕಿಂತು ಅಲ್ಪೈವ ಇತ್ಯಾಶಯೇನಾಹ – ಪಾನೇನೇತಿ ॥ ಹೇ ದೇವ! ತೇ ಕಥಾಸುಧಾಯಾಃ ಪಾನೇನ ಶ್ರವಣಾದಿಲಕ್ಷಣೇನ ಪ್ರವೃದ್ಧಮಾನಯಾ ಭಕ್ತ್ಯಾ ವಿಶದಾಶಯಾ ನಿರ್ಮಲಾಂತಃಕರಣಾ ಯೇ ತೇ ವೈರಾಗ್ಯಸಾರಂ ವೈರಾಗ್ಯಫಲಂ ಯಥಾ ಯಥಾರ್ಥಂ ಬೋಧಮಪರೋಕ್ಷಜ್ಞಾನಂ ಪ್ರತಿಲಭ್ಯ ಪ್ರಾಪ್ಯ ಅಂಜಸಾ ಅನಲ್ಪತಯಾಕುಂಠಧಿಷ್ಣ್ಯಮಪ್ರತಿಹತಮಂದಿರಸ್ಥಾನೀಯಂ ತ್ವಾಮಾಪುಃ ಪ್ರಾಪುಃ ॥ (ಪ್ರಕಾಶಿಕಾ)

'ಮಾರ್ಗಂತಿ ಯತ್ತೇ ಮುಖಪದ್ಮನೀಡೈಃ' ಮುಂತಾದ ಶ್ಲೋಕಗಳಿಂದ ಭಗವಂತನ ಜ್ಞಾನ ಬರುವುದಕ್ಕೆ ಪ್ರಧಾನವಾದ ಸಾಧನವನ್ನಾಗಿ ಶ್ರವಣಾದಿರೂಪವಿಚಾರಭಕ್ತಿವೈರಾಗ್ಯಮೊದಲಾದವುಗಳನ್ನು ಹೇಳಿದ್ದಾರೆ. ವಾಯುಜಯ ಮೊದಲಾದ ಯೋಗವನ್ನು ಪ್ರಧಾನವನ್ನಾಗಿಟ್ಟುಕೊಂಡ ಎಲ್ಲ ಅಧಿಕಾರಿಗಳಿಗೆ ಅವಶ್ಯವಾಗಿ ಶ್ರವಣಾದಿಗಳು ಅಪ್ರಧಾನವಾಗಿದ್ದು ಮನಸ್ಸು ವಶ್ಯವಾಗದೇ ಇದ್ದರೂ ವಾಯುಜಯಾದಿಯೋಗದಿಂದಲೇ ಬೇಗನೆ ಮುಕ್ತಿಯು ಸಿಗುವುದು ಎಂಬುದು ಪ್ರಮಾಣಸಿದ್ಧವಾದ್ದರಿಂದ ಎಂದು ಪ್ರಶ್ನೆ ಮಾಡಿದರೆ ಅದಕ್ಕೆ ಉತ್ತರವಾಗಿ ಅವರಿಗೆ ಸಿಗುವ ಮುಕ್ತಿ ಸಂಪೂರ್ಣವಾದದ್ದಲ್ಲ ಅಲ್ಪವಾದದ್ದೇ ಎಂಬ ಅಭಿಪ್ರಾಯದಿಂದ "ಪಾನೇನ" ಎಂಬ ಶ್ಲೋಕ

ಹೊರಟಿದೆ. ಹೇ ದೇವರೇ। ನಿನ್ನ ಕಥಾಮೃತವನ್ನು ಪಾನ ಮಾಡುವುದರಿಂದ ಅಂದರೆ ಕೇಳು-ವುದರಿಂದ ವೃದ್ಧಿ ಹೊಂದುತ್ತಿರುವ ಭಕ್ತಿಯಿಂದ ನಿರ್ಮಲವಾದ ಅಂತಃಕರಣವುಳ್ಳವರು ಯಾರಿದ್ದಾರೋ ಅವರು ವೈರಾಗ್ಯವೆಂಬ ಫಲವನ್ನು ತಮ್ಮ ಯೋಗ್ಯತಾನುಗುಣವಾಗಿ ಅಪರೋಕ್ಷಜ್ಞಾನವನ್ನು ಪಡೆದು ತೊಂದರೆಯಿಲ್ಲದ ನಿನ್ನ ಮಂದಿರಸ್ಥಾನದಲ್ಲಿ ಚೆನ್ನಾಗಿ ನಿನ್ನನ್ನು ಹೊಂದುವರು.

## ವಿಜ್ಞಾನವೈರಾಗ್ಯಗಳಿಂದ ಕೂಡಿದ ಜ್ಞಾನ

ಅವಿಸ್ಮೃತಿಃ ಕೃಷ್ಣಪದಾರವಿಂದಯೋಃ ಕ್ಷಿಣೋತ್ಯಭದ್ರಾಣಿ ಚ ಶಂ ತನೋತಿ ।
ಸತ್ವಸ್ಯ ಶುದ್ಧಿಂ ಪರಮಾತ್ಮಭಕ್ತಿಂ ಜ್ಞಾನಂ ಚ ವಿಜ್ಞಾನವಿರಾಗಯುಕ್ತಮ್ - (ಭಾಗ. 12-12-55)

ಶ್ರೀಕೃಷ್ಣನ ಪಾದಕಮಲಗಳ ಸದಾ ಸ್ಮರಣೆಯೊಂದೇ ಅಮಂಗಳಗಳನ್ನು ಕಳೆದು ಮಂಗಳ ಉಂಟು-ಮಾಡೀತು. ಅಂತಃಕರಣಶುದ್ಧಿಯನ್ನು ಪರಮಭಕ್ತಿಯನ್ನು ವಿಜ್ಞಾನವೈರಾಗ್ಯಯುಕ್ತವಾದ ಜ್ಞಾನವನ್ನು ಉಂಟುಮಾಡೀತು.

* ನನು ಅಚ್ಯುತಭಾವಃ ಕೇನ ಸ್ಯಾತ್, ಅತ್ರಾಹ – ಅವಿಸ್ಮೃತಿರಿತಿ ॥ ಗುಣಾನುವಾದಶ್ರವಣಾದಿಭಿಃ ಉದ್ಧೃತಾಚ್ಯುತಭಕ್ತೇಃ ಪುಂಸಃ ಶ್ರೀಧರಪಾದಪದ್ಮಯೋಃ ಅವಿಸ್ಮೃತಿಃ ನಿರಂತರಾಭ್ಯಾಸಲಕ್ಷಣಂ ಸ್ಮರಣಂ ಭವತಿ ॥ (ವಿಜಯಧ್ವಜೀಯ)

– ಅಲ್ಲ। ನಾವು ಚ್ಯುತಿರಹಿತರಾಗುವುದು ಯಾವುದರಿಂದ ಎಂದರೆ ಹೇಳುತ್ತಾರೆ – ಅವಿಸ್ಮೃತಿಃ ಎಂಬ ಪದ್ಯದಿಂದ. ಯಾವಾಗ ಭಗವಂತನ ಗುಣಗಳ ಅನುವಾದ, ಶ್ರವಣ ಮೊದಲಾದವುಗಳಿಂದ ಹೆಚ್ಚಾದ ಅಚ್ಯುತನ ಭಕ್ತಿಯು ಮನುಷ್ಯನಿಗೆ ಉಂಟಾಗಿ ಲಕ್ಷ್ಮೀಪತಿಯ ಪಾದಕಮಲಗಳಲ್ಲಿ ಅವಿಸ್ಮೃತಿ ಅಂದರೆ ನಿರಂತರ ಅಭ್ಯಾಸರೂಪವಾದ ಸ್ಮರಣೆಯು ಉಂಟಾಗುತ್ತದೋ ಅವಾಗ ಎಂದು ತಿಳಿಯಬೇಕು.

## ಆನಂದತೀರ್ಥರು ಭಾರತೀದೇವಿಯರನ್ನು ಬಿಟ್ಟು ಬೇರೆಯವರಿಂದಲೂ ಉಪದೇಶ ಕೊಡಿಸುವರು

(ಲಘುರಸರಂಜನೀ) – 'ಆನಂದತೀರ್ಥೋ ಭಾರತೀದ್ವಾರಾ ಉಪದಿಶತಿ' ಇತ್ಯುಕ್ತಮ್ । ತನ್ನ ತಾವದೇವ ಜ್ಞೇಯಮ್ । ಕಿಂತು ಬಹಿರಪಿ ಸ್ವೋಪದೇಶಯೋಗ್ಯಾನ್ ಕಾಂಶ್ಚನ ಸಾಕ್ಷಾದುಪದಿಶ್ಯ ತದ್ವಾರಾ ಅನ್ಯಾನಪ್ಯುಪದಿಶತೀತಿ । ತಥಾ ಚೋಪದೇಶಕಪರಂಪರಾಘಟಕಯಾವತ್ಪ್ರಸಾದೋ-ಽವಶ್ಯಮಾಪಾದ್ಯತ ಇತಿ ಶಿಷ್ಯಾನ್ ಶಿಕ್ಷಯಿತುಂ ಸ್ವೋಪದೇಶಕಪರಂಪರಾಯಾಮಾದ್ಯಂ ಪದ್ಮನಾಭತೀರ್ಥಾರ್ಯಂ ತಾವತ್ ತತ್ಪ್ರಸಾದಾಯ ತದ್ಗುಣಾನುವಾದೇನ ಸ್ತುವನ್ ತತೋ

ವೈರಾಗ್ಯಾದಿಸಾಧನಸಂಪತ್ತಿಮಾಶಾಸ್ತೇ — ರಮೇತಿ ॥ ಅತ್ರ ಪದ್ಮನಾಭತೀರ್ಥಸ್ಯಾಮೃತಾಬ್ಧಿತ್ವ-ವರ್ಣನೇನ ಇದಂ ಧ್ವನಯತಿ । ಯಥಾ ಸಮುದ್ರಾದ್ಬಹೂನಿ ಶಿಲಾರತ್ನಾನ್ಯುತ್ಪನ್ನಾನಿ ತಥಾ ಪದ್ಮನಾಭತೀರ್ಥಾದ್ ಬಹೂನಿ ಶಿಷ್ಯರತ್ನಾನ್ಯುತ್ಪನ್ನಾನಿ ಸಂತೀತಿ ।

ಆನಂದತೀರ್ಥರು ಭಾರತೀದೇವಿಯ ಮುಖಾಂತರ ಉಪದೇಶಿಸುತ್ತಾರೆ ಎಂದು ಹೇಳಿದ್ದರು. ಅದು ಅಷ್ಟೇ ಎಂದು ತಿಳಿಯಬಾರದು. ಹೊರತು ಹೊರಗಡೆಯೂ ಅವರವರಿಗೆ ಉಪದೇಶಕೊಡಲು ಯೋಗ್ಯರಾದ ಕೆಲವರಿಗೆ ಸಾಕ್ಷಾದುಪದೇಶಮಾಡಿ ಅವರ ಮುಖಾಂತರ ಬೇರೆಯವರಿಗೂ ಉಪದೇಶ ಮಾಡುತ್ತಾರೆ. ಹಾಗಾಗಿ ಉಪದೇಶಕರ ಪರಂಪರೆಯಲ್ಲಿ ಸೇರಿರುವ ಎಲ್ಲರ ಪ್ರಸಾದವೂ ಆವಶ್ಯಕ ಎಂದು ಶಿಷ್ಯರಿಗೆ ಶಿಕ್ಷಣಕೊಡಲು ತಮ್ಮ ಉಪದೇಶಕಪರಂಪರೆಯಲ್ಲಿ ಮೊದಲಿಗರಾದ ಪದ್ಮನಾಭತೀರ್ಥರನ್ನು ಅವರ ಪ್ರಸಾದಕ್ಕೋಸ್ಕರ ಮೊದಲಿಗೆ ಅವರ ಗುಣಗಳನ್ನು ಅನುವಾದ ಮಾಡುವ ಮೂಲಕ ಸ್ತೋತ್ರ ಮಾಡುತ್ತ ವೈರಾಗ್ಯ ಮೊದಲಾದ ಸಾಧನಸಂಪತ್ತನ್ನು ಪ್ರಾರ್ಥಿಸುತ್ತಾರೆ — ರಮಾ ಎಂದು.

ಇಲ್ಲಿ ಪದ್ಮನಾಭತೀರ್ಥರನ್ನು ಅಮೃತಾಬ್ಧಿ ಎಂದು ವರ್ಣನೆ ಮಾಡಿದ್ದರಿಂದ — ಹೇಗೆ ಸಮುದ್ರದಿಂದ ಬಹಳ ಶಿಲಾರತ್ನಗಳು ಹುಟ್ಟುತ್ತವೆಯೋ ಅದೇ ರೀತಿ ಪದ್ಮನಾಭತೀರ್ಥರಿಂದಲೂ ಬಹಳ ಶಿಷ್ಯರತ್ನಗಳು ಹುಟ್ಟಿದವು.

## ಸನ್ನ್ಯಾಯರತ್ನಾವಲಿಜನ್ಮಭೂಮಿ

(ಲಘುರಸರಂಜನೀ) – ಅತ ಏವ ಸಮೀಚೀನಾ ನ್ಯಾಯಾ ಯೇಷಾಂ ತೇ ಸನ್ನ್ಯಾಯಾಃ ಶಿಷ್ಯಾಸ್ತ ಏವ ರತ್ನಾನಿ । ತೇಷಾಮಾವಲಿಃ ಪಂಕ್ತಿಃ ಪರಂಪರೇತಿ ಯಾವತ್ । ತಸ್ಯಾ ಜನ್ಮಭೂಮಿರುತ್ಪಾದಕ ಇತ್ಯುಕ್ತಮ್ ।

ಸನ್ನ್ಯಾಯರತ್ನಾವಲಿಜನ್ಮಭೂಮಿಃ - ಸಮೀಚೀನಾಃ ನ್ಯಾಯಾಃ ಯೇಷಾಂ ತೇ ಸನ್ನ್ಯಾಯಾಃ । ಒಳ್ಳೆಯ, ಶಾಸ್ತ್ರಕ್ಕೆ ಸಂಬಂಧಪಟ್ಟ ನ್ಯಾಯಗಳು ಯಾರಿಗೆ ಇದೆಯೋ ಅವರು ಸನ್ನ್ಯಾಯರು. ಅಂದರೆ ಶಿಷ್ಯರು. ಅವರುಗಳೇ ರತ್ನಗಳು. ಅವರ ಆವಲಿ ಎಂದರೆ ಪಂಕ್ತಿ ಅಂದರೆ ಪರಂಪರೆಯು ಎಂದರ್ಥ. ಅರ್ಥಾತ್ ಒಳ್ಳೆಯ ಶಾಸ್ತ್ರನ್ಯಾಯಜ್ಞರಾದ ಶಿಷ್ಯಪರಂಪರೆಗೆ ಜನ್ಮಸ್ಥಾನವಾದವರು ಎಂದರ್ಥ.

## ಪದವಾಕ್ಯಪ್ರಮಾಣಜ್ಞಾನ್ — ಪ್ರತಿಪದಾರ್ಥ ಹಾಗೂ ಸಾರ

पदवाक्यप्रमाणज्ञान् प्रतिवादिमदच्छिदः ।
श्रीमदक्षोभ्यतीर्थाख्यानुपतिष्ठे गुरून् मम ॥६॥

ಅನ್ವಯಾರ್ಥ - ಪದವಾಕ್ಯಪ್ರಮಾಣಜ್ಞಾನ್ = ಪದ - ವ್ಯಾಕರಣಶಾಸ್ತ್ರ, ವಾಕ್ಯ - ಮೀಮಾಂಸಾಶಾಸ್ತ್ರ ಪ್ರಮಾಣ - ನ್ಯಾಯಶಾಸ್ತ್ರಗಳನ್ನು ಜ್ಞಾನ್ - ಚೆನ್ನಾಗಿ ತಿಳಿದಿರುವ; ಪ್ರತಿವಾದಿ-ಮದಚ್ಛಿದಃ = ಪ್ರತಿವಾದಿ - ಪ್ರತಿವಾದಿಗಳ ಮದ - ಮದವನ್ನು ಛಿದಃ - ಸೀಳಿಹಾಕುವ; ಶ್ರೀಮದ-ಕ್ಷೋಭ್ಯತೀರ್ಥಾಖ್ಯಾನ್ = ಪೂಜ್ಯರಾದ ಅಕ್ಷೋಭ್ಯತೀರ್ಥರೆಂಬ ಹೆಸರುಳ್ಳ; ಮಮ = ನನ್ನ; ಗುರೂನ್ = ಗುರುಗಳನ್ನು; ಉಪತಿಷ್ಠೇ = ಮನಸ್ಸಿನಿಂದ ಭಕ್ತಿಪೂರ್ವಕವಾಗಿ ಪೂಜಿಸುತ್ತೇನೆ.

ಸಾರ - ವ್ಯಾಕರಣ, ಮೀಮಾಂಸಾ, ಬ್ರಹ್ಮತರ್ಕಗಳನ್ನು ಚೆನ್ನಾಗಿ ಅರಿತಿರುವ, ಪ್ರತಿವಾದಿಗಳ ಮದವನ್ನು ಸೀಳುವ ನನ್ನ ಗುರುಗಳಾದ ಪೂಜ್ಯರಾದ ಅಕ್ಷೋಭ್ಯತೀರ್ಥ ಎಂಬ ಹೆಸರುಳ್ಳವರನ್ನು ಮನಸಾ ಪೂಜಿಸುತ್ತೇನೆ.

## ಪದವಾಕ್ಯಪ್ರಮಾಣಗಳೆಂದರೇನು ?

**कम्बा** — पदवाक्यप्रमाणेति ॥ 'पद'**शब्देन सुप्तिङन्तादिपदानुशासनरूप-व्याकरणशास्त्रमुच्यते ।** 'वाक्य'**शब्देन श्रुतिवाक्यविचारात्मकमीमांसाशास्त्रमुच्यते ।** 'प्रमाण'**शब्देन प्रमाणनिरूपणपरतर्कशास्त्रमिति ध्येयम् ।**

ಪದ ಎಂಬ ಶಬ್ದದಿಂದ ಸುಪ್-ಪ್ರತ್ಯಯವು ಕೊನೆಗಿರುವ ಹಾಗೂ ತಿಙ್-ಪ್ರತ್ಯಯವು ಕೊನೆಗಿರುವ ಪದಗಳ ಅನುಶಾಸನರೂಪವಾದ ವ್ಯಾಕರಣಶಾಸ್ತ್ರವನ್ನು ಹೇಳಿದ್ದಾರೆ. "ವಾಕ್ಯ"ವೆಂಬ ಶಬ್ದದಿಂದ ವೇದವಾಕ್ಯಗಳ ವಿಚಾರರೂಪವಾದ ಮೀಮಾಂಸಾಶಾಸ್ತ್ರವು ಹೇಳಲ್ಪಡುತ್ತದೆ. "ಪ್ರಮಾಣ"ವೆಂಬ ಶಬ್ದದಿಂದ ಪ್ರತ್ಯಕ್ಷಾದಿಪ್ರಮಾಣಗಳ ನಿರೂಪಣೆಯನ್ನು ಮಾಡುವ ತರ್ಕಶಾಸ್ತ್ರವೆಂದು ತಿಳಿಯಬೇಕು.

## ಪದವಾಕ್ಯಪ್ರಮಾಣಗಳ ವಿವರಣೆ

(ವಿಟ್ಠಲಭಟ್ಟೀಯ) ಪದ್ಯತೇ ಪ್ರತಿಪಾದ್ಯತೇ ಶಬ್ದಸಾಧುತ್ವಾದಿಕಮತ್ರೇತಿ ಪದಂ ವ್ಯಾಕರಣಮ್ । ವಾಕ್ಯಂ ಮೀಮಾಂಸಾಶಾಸ್ತ್ರಂ ರೂಢತ್ವಾತ್ । ಪ್ರಮಾಣಂ ಪದಾರ್ಥಸ್ವರೂಪನಿರ್ಧಾರಕಂ ತರ್ಕಶಾಸ್ತ್ರಮ್ ।

ಪದ್ಯತೇ = ಪ್ರತಿಪಾದ್ಯತೇ ಶಬ್ದಸಾಧುತ್ವಾದಿಕಮ್ ಅತ್ರ ಇತಿ ಪದಂ - ಎಂದು ವಿವರಿಸಿದಂತೆ 'ಈ ಶಬ್ದವು ಸಾಧು, ಈ ಶಬ್ದವು ಅಸಾಧು' ಇವೇ ಮೊದಲಾದ ವಿಷಯಗಳು ಎಲ್ಲಿ ಪ್ರತಿ-ಪಾದಿಸಲ್ಪಡುತ್ತವೋ ಅದನ್ನು ಪದ ಎನ್ನುವರು. ಅರ್ಥಾತ್ ವ್ಯಾಕರಣಶಾಸ್ತ್ರ. ವಾಕ್ಯ ಎಂಬ ಶಬ್ದವು ಮೀಮಾಂಸಾಶಾಸ್ತ್ರದಲ್ಲಿ ರೂಢವಾದ ಶಬ್ದ. ಯೌಗಿಕವಲ್ಲ. ಪ್ರಮಾಣ ಎಂದರೆ ಪದಾರ್ಥ-ಸ್ವರೂಪಗಳನ್ನು ನಿಶ್ಚಯಿಸುವ ತರ್ಕಶಾಸ್ತ್ರ.

## ದೇವತೆಗಳಲ್ಲಿ ಭಕ್ತಿಮಾಡುವಂತೆ ಗುರುಗಳಲ್ಲಿಯೂ ಮಾಡಬೇಕು

(ರಸರಂಜನೀ) — 'ಯಥಾ ದೇವೇ ತಥಾ ಗುರೌ' ಇತ್ಯುಕ್ತೇರ್ದೇವೇಷು ತತ್ತನ್ಮಾಹಾತ್ಮ್ಯಾನುಸಾರಿ-ಭಕ್ತೇರಿವ ತಾದೃಶಭಕ್ತೇರುಕ್ತವಿಧಪುರುಷಾರ್ಥಪೂರಕತ್ವೇನ ಸ್ವಾನಾಂ ತದಾವಶ್ಯಕತಾಂ ಜ್ಞಾಪಯನ್ ಶ್ರೀಗುರುಚರಣಾನ್ ವಿಚಿಂತಯತೇ — **ಪದೇತಿ** ॥ 'ಅಹಂ ಅಕ್ಷೋಭ್ಯತೀರ್ಥಾಖ್ಯಾನೇವ ಗುರೂನ್ ಉಪತಿಷ್ಠೇ' ಇತಿ ಯೋಜನಾ । ಗುರುತ್ವಂ ಕಿಂ ಪೂರ್ವೇಷಾಮಿವ ಸರ್ವಾನ್ ಪ್ರತ್ಯವಿಶೇಷೇಣ, ನೇತ್ಯಾಹ— **ಮಮೇತಿ** ॥ ತದಪಿ ಕಿಂ ನ್ಯಾಸದಾನೇನೈವ ತತ್ರಾಹ – **ಗುರೂನ್ ಉಪದೇಶಕಾನಿತಿ** ॥ ಯದಿ ಭವತಾಮುಪದೇಶಕಾಃ ಸಂತಿ ತರ್ಹಿ ತನ್ನಾಮ ವಾಚ್ಯಮ್ । ಸ್ಮೃತೇಃ ಪ್ರಸಿದ್ಧತಾದೃಶಾದಿವಿಷಯತ್ವಾದಿತ್ಯತೋಽಂಗೀಕಾರೇಣ ತದಾಹ — **ಅಕ್ಷೋಭ್ಯ-ತೀರ್ಥಾಖ್ಯಾನಿತಿ** ॥ ನನು ಯದ್ಯೇಷಾಂ ಬಹವಃ ಪಂಡಿತಾಃ ಶಿಷ್ಯಾಃ ಸ್ಯುಃ, ತದೋಪದೇಶಕತ್ವೇ ವಿಶ್ವಸಿಮಃ । ಏಕಸ್ಯ ತು ತವ ನೈಜಪ್ರತಿಭಯೈವ ಅಶೇಷಜ್ಞತ್ವಸ್ಯಾಪಿ ಸಂಭವಾದಿತ್ಯತ ಉಕ್ತಮ್— **ಶ್ರೀಮದಿತಿ** ॥ ಬಹುಪ್ರಾಜ್ಞಪ್ರಜಾವತ್ವರೂಪಶ್ರೀಮಂತ ಇತಿ ಉಕ್ತಿಮಾತ್ರಮಸಾಧಕಮಿತ್ಯತಃ ತದುಪಯುಕ್ತಿಮಾಹ । **ಪದವಾಕ್ಯಪ್ರಮಾಣಜ್ಞಾನ್** = ಮಹಾವ್ಯಾಕರಣತ್ರಿವಿಧಮೀಮಾಂಸಾಬ್ರಹ್ಮ ತರ್ಕಾಭಿಜ್ಞಾನ್ ಇತಿ ।

'ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ" (ಮ.ಭಾ.ತಾ.ನಿ. 1-102)

ದೇವತೆಗಳಲ್ಲಿ ಅವರವರ ಮಾಹಾತ್ಮ್ಯಕ್ಕನುಗುಣವಾಗಿ ಭಕ್ತಿಯನ್ನು ಮಾಡುವಂತೆ ಗುರುಗಳಲ್ಲಿಯೂ ತಾರತಮ್ಯಪ್ರಕಾರವಾಗಿ ಅದೇ ರೀತಿಯ ಭಕ್ತಿಯನ್ನು ಮಾಡಬೇಕು. ಹಾಗೆ ಮಾಡುವುದು ನಮ್ಮ ಪುರುಷಾರ್ಥಕ್ಕೆ ಸಾಧಕ. ಇದನ್ನು ತಮ್ಮವರಿಗೆ ತಿಳಿಸಲೆಂದು ಟೀಕಾಚಾರ್ಯರು ತಮ್ಮ ಗುರುಗಳನ್ನು ಸ್ಮರಿಸುತ್ತಿದ್ದಾರೆ. ಇಲ್ಲಿ ವಾಕ್ಯಯೋಜನೆಯನ್ನು ಹೀಗೆ ಮಾಡಿಕೊಳ್ಳಬೇಕು. 'ಅಹಂ ಅಕ್ಷೋಭ್ಯತೀರ್ಥಾಖ್ಯಾನೇವ ಗುರೂನ್ ಉಪತಿಷ್ಠೇ' ಎಂದು. 'ನಾನು ಗುರುಗಳಾದ ಅಕ್ಷೋಭ್ಯ-ತೀರ್ಥರೆಂಬ ಹೆಸರುಳ್ಳವರನ್ನೇ ಮನಸಾ ಸ್ತೋತ್ರಮಾಡುತ್ತೇನೆ'. ಇವರು ಮಧ್ವಾಚಾರ್ಯರು ಮೊದಲಾದವರಂತೆ ಎಲ್ಲರಿಗೂ ಗುರುಗಳೋ ಎಂಬ ಪ್ರಶ್ನೆ ಬಂದಾಗ ಉತ್ತರಿಸುತ್ತಾರೆ 'ಮಮ' ಎಂದು. ನನಗೆ ಮಾತ್ರ ಗುರುಗಳು ಎಂದು. ಗುರುಗಳು ಎಂದರೆ ಕೇವಲ ಸನ್ಯಾಸಾಶ್ರಮಕೊಟ್ಟ ಗುರುಗಳು ಮಾತ್ರ ಎಂದು ಅನ್ನಿಸುತ್ತಿತ್ತು. ಅದಕ್ಕೋಸ್ಕರ ಗುರೂನ್ ಎಂದಿದ್ದಾರೆ. ಗುರು ಎಂದರೆ ಉಪದೇಶಕರು ಎಂದರ್ಥ. ಹಾಗಾಗಿ ಸನ್ಯಾಸಾಶ್ರಮ ನೀಡಿದ್ದಲ್ಲದೇ ವಿದ್ಯೋಪದೇಶಕರೂ ಆಗಿದ್ದಾರೆ. ಹೀಗೆ ಎರಡು ರೀತಿಯಲ್ಲಿ ಗುರುಗಳಾಗಿದ್ದಾರೆ. ಹಾಗಾದರೆ ಒಂದು ವೇಳೆ ನಿಮಗೆ

ಉಪದೇಶಕರಾಗಿದ್ದರೆ ಅವರ ಹೆಸರೇನು ಎಂದು ಹೇಳಿ? ಎನ್ನುವ ಪ್ರಶ್ನೆಗೆ ಉತ್ತರವಾಗಿ 'ಅಕ್ಷೋಭ್ಯ-ತೀರ್ಥಾಖ್ಯಾನ್' ಎಂದಿದ್ದಾರೆ. ಅಲ್ಲ! ಅಕ್ಷೋಭ್ಯತೀರ್ಥರಿಗೆ ಬಹಳ ಪಂಡಿತಶಿಷ್ಯರಿದ್ದರೆ ಆಗ ಅವರು ಉಪದೇಶಕರಾಗಿದ್ದಾರೆ ಎನ್ನುವುದನ್ನು ವಿಶ್ವಾಸದಿಂದ ಒಪ್ಪಬಹುದು. ನಿಮಗೆ ನಿಮ್ಮ ಸ್ವಾಭಾವಿಕವಾದ ಪ್ರತಿಭೆಯಿಂದಲೇ ಎಲ್ಲವನ್ನೂ ತಿಳಿಯುವ ಸಂಭವವಿರುವುದರಿಂದ ಅವರನ್ನು ನೀವು ಉಪದೇಶಕರು ಎಂದು ಹೇಳಿದ್ದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ 'ಶ್ರೀಮತ್' ಎಂದಿದ್ದಾರೆ. ಶ್ರೀ ಎಂದರೆ ಸಂಪತ್ತು ಅದನ್ನುಳ್ಳವರನ್ನು ಶ್ರೀಮಾನ್ ಎಂದಿದ್ದಾರೆ. ಇಲ್ಲಿ ಸಂಪತ್ ಎಂದರೆ ಬಹುಪ್ರಾಜ್ಞಪ್ರಜಾವತ್ತ್ವವೇ ಆಗಿದೆ. ಅಂದರೆ ಬಹಳ ವಿದ್ವಾಂಸರೆಂಬ ಪ್ರಜೆಗಳನ್ನು ಹೊಂದಿರುವುದು. ಶ್ರೀಮತ್ ಎಂಬ ಪದಕ್ಕೆ ಈ ರೀತಿ ಅರ್ಥಮಾಡಿದರೂ ಕೇವಲ ಮಾತು ಯಾವುದೇ ಅರ್ಥವನ್ನು ಸಾಧಿಸುವುದಿಲ್ಲ? ಹಾಗಾಗಿ ಅದಕ್ಕೆ ಬೇಕಾದ ಯುಕ್ತಿಯನ್ನು ನೀಡಬೇಕು. ಅದನ್ನು ನೀಡಲು 'ಪದವಾಕ್ಯಪ್ರಮಾಣಜ್ಞಾನ್' ಎಂದಿದ್ದಾರೆ. ಮಹಾವ್ಯಾಕರಣ, ಮೂರು ರೀತಿಯಾದ ಮೀಮಾಂಸಾಗಳು ಅರ್ಥಾತ್ ಪೂರ್ವ, ಉತ್ತರ ಹಾಗೂ ದೈವೀಮೀಮಾಂಸಾಗಳು. ಬ್ರಹ್ಮತರ್ಕ ಇವುಗಳನ್ನು ಚೆನ್ನಾಗಿ ತಿಳಿದವರು ಎಂದರ್ಥ.

## ವ್ಯಾಕರಣಾದಿಪ್ರಸಿದ್ಧಪದಪರಿತ್ಯಾಗೇನ ಅಪ್ರಸಿದ್ಧ-ಪದಾದಿಪದಪ್ರಯೋಗವೇಕೆ?

(ರಸರಂಜನೀ)— ಅತ್ರ ಪ್ರಸಿದ್ಧಪದಪರಿತ್ಯಾಗೇನ 'ಪದ್ಯತೇ ಪದಾನಾಮರ್ಥಂ ತತ್ತ್ವತೋಽನೇನ' ಇತಿ ಯೌಗಿಕಪದಪದಸ್ಯ ಪ್ರಯೋಗೋ ವೇದವ್ಯಾಖ್ಯಾನಾದೌ ಮಹಾವ್ಯಾಕರಣಮೇವೋ-ಪಯೋಗೀ । ತದನುಸಾರೇಣೈವ ವೈದಿಕಾನಾಂ ವೈದಿಕಾನುಸಾರಿಣಾಂ ವಾ ಪ್ರಕೃತಿಪ್ರತ್ಯಯಾದಿ ಸರ್ವಂ ನಿರ್ವಾಹ್ಯಮ್ । ಅನ್ಯತ್ತು ವೇದವ್ಯಾಖ್ಯಾನರೂಪಸ್ಮೃತ್ಯರ್ಥಾನುಗುಣ್ಯೇ ಸತ್ಯೇವಾದ-ರಣೀಯಮ್ । ತದಭಾವೇ ತು ನೇತ್ಯೇತಮರ್ಥಂ ಸೂಚಯತಿ ।

ತಥಾ ಮೀಮಾಂಸಾದಿಪದಂ ಪರಿತ್ಯಜ್ಯ ವಾಕ್ಯಪದಂ ಪ್ರಯುಂಜಾನೇನಾಪಿ ಬ್ರಹ್ಮತರ್ಕಾದಿ-ಸಿದ್ಧಮಾನನ್ಯಾಯಾನುಸಂಧಾನೇ ಸತಿ ವೇದವಾಕ್ಯಸಮರ್ಥಾರ್ಥಃ ಚೇತಸಿ ಚಕಾಸ್ತಿ ಸ ಏವ ಸ್ವೀಕಾರ್ಯಃ ನ ತು ವ್ಯಾಖ್ಯಾತೃಮತಿವೈಶ್ವರೂಪ್ಯೇಣ ವಾಕ್ಯಪರಿಪೀಡನಾದಾಯಾತ ಇತ್ಯಸೂಚಿ । ಏವಂ ಪ್ರಮಾಣಪದಪ್ರಕ್ಷೇಪೇಣ ಬ್ರಹ್ಮತರ್ಕಸ್ಯೈವ ನ್ಯಾಯಶಾಸ್ತ್ರತ್ವಂ ಗೌತಮೀಯಸ್ಯ ತು ಕಲ್ಪನಾ-ಮಾತ್ರಮೂಲತಯಾ ಅಪ್ರಾಮಾಣ್ಯಮಿತಿ ಪ್ರಮಾಪಿತಮ್ । ಅಥವಾ ಪ್ರಮಾಣಶಿಕ್ಷಕತ್ವಾತ್ ಪ್ರಮಾಣಂ ಬ್ರಹ್ಮತರ್ಕಃ ।

ಇಲ್ಲಿ ಎಲ್ಲಕಡೆ, ಪ್ರಸಿದ್ಧವಾದ ವ್ಯಾಕರಣಮೀಮಾಂಸಾತರ್ಕಪದಗಳನ್ನು ಬಿಟ್ಟು ಪದ, ವಾಕ್ಯ, ಪ್ರಮಾಣ ಎಂಬ ಪದಗಳನ್ನು ಬಳಸಿರುವುದರ ಔಚಿತ್ಯವೇನು? ಎಂಬ ಪ್ರಶ್ನೆಗೆ ಇದು ಉತ್ತರ -

ಪದ ಎಂದರೆ ಪದ್ಯತೇ ಇತಿ ಪದಮ್ - ವೈದಿಕಪದಗಳ ಅರ್ಥವನ್ನು ಸರಿಯಾಗಿ ಯಾವುದರಿಂದ ತಿಳಿಯಲ್ಪಡುತ್ತದೋ ಅದು. ಹೀಗೆ ಹೇಳಿದಾಗ ವೇದವ್ಯಾಖ್ಯಾನಮೊದಲಾದವುಗಳನ್ನು ಮಾಡುವಲ್ಲಿ ಉಪಯೋಗಿಯಾದ ಮಹಾವ್ಯಾಕರಣವನ್ನೇ ಇಲ್ಲಿ ಪರಿಗ್ರಹಿಸಬೇಕು. ಏಕೆಂದರೆ ಆ ವ್ಯಾಕರಣಾನು-ಸಾರಿಯಾಗಿಯೇ ವೈದಿಕಪದಗಳ ಅಥವಾ ವೇದಾನುಸಾರಿಯಾದ ಇತರ ಪದಗಳ ಪ್ರಕೃತಿಪ್ರತ್ಯಯ ಮೊದಲಾದವುಗಳನ್ನು ತಿಳಿದುಕೊಳ್ಳಬೇಕು. ಹಾಗಾದರೆ ಬೇರೆ ಪ್ರಸಿದ್ಧವ್ಯಾಕರಣಗಳ ಗತಿಯೇನು? ಅವುಗಳ ಬಗ್ಗೆ ಅನಾದರ ಮಾಡಬೇಕೇ? ಉತ್ತರ - ವೇದವ್ಯಾಖ್ಯಾನವನ್ನು ಮಾಡುವ ಸ್ಮೃತಿಯ ಅರ್ಥಕ್ಕೆ ಅನುಗುಣವಾಗಿದ್ದರೆ ಮಾತ್ರ ಆ ವ್ಯಾಕರಣಗಳನ್ನು ಆದರ ಮಾಡಬೇಕು. ಇಲ್ಲದಿದ್ದರೆ ಇಲ್ಲ ಎಂಬೀ ಅರ್ಥವನ್ನು ತಿಳಿಸಲೆಂದೇ ಪ್ರಸಿದ್ಧವಾದ ವ್ಯಾಕರಣಪದವನ್ನು ತ್ಯಾಗಮಾಡಿ ಪದ ಎಂಬ ಶಬ್ದವನ್ನು ಉಲ್ಲೇಖಿಸಿದ್ದಾರೆ.

ಹಾಗೆ ವಾಕ್ಯ ಎಂಬ ಪದವನ್ನು ಪ್ರಯೋಗಿಸುವ ಮೂಲಕ ಯಾವ ವ್ಯಕ್ತಿಗೆ ಬ್ರಹ್ಮತರ್ಕ ಮೊದಲಾದವುಗಳಲ್ಲಿ ತಿಳಿಸಿರುವ ಪ್ರಮಾಣನ್ಯಾಯಗಳ ಅನುಸಂಧಾನವಿದೆಯೋ ಅವರಿಗೆ ಮಾತ್ರ ವೇದವಾಕ್ಯಗಳ ಸರಿಯಾದ ಅರ್ಥವು ಮನಸ್ಸಿನಲ್ಲಿ ಹೊಳೆಯುತ್ತದೆ. ಹೊರತು ಬೇರೆ ಬೇರೆ ವ್ಯಾಖ್ಯಾನಕಾರರ ಬುದ್ಧಿಯ ವೈವಿಧ್ಯತೆಗನುಗುಣವಾಗಿ ರಚಿತವಾದ ತರ್ಕವನ್ನು ಅವಲಂಬಿಸಿ ಅಲ್ಲ ಎಂದು ಸೂಚಿಸಿದ್ದಾರೆ. ಹೀಗೆ ಪ್ರಮಾಣಪದವನ್ನು ಹಾಕಿರುವುದರಿಂದ ಬ್ರಹ್ಮತರ್ಕವನ್ನೇ ನ್ಯಾಯಶಾಸ್ತ್ರವೆಂದು ಪರಿಗಣಿಸಬೇಕು. ಗೌತಮರಚಿತವಾದ ನ್ಯಾಯಶಾಸ್ತ್ರವು ಸ್ವೋತ್ಪ್ರೇಕ್ಷಾಮೂಲ-ವಾದ್ದರಿಂದ ಅಪ್ರಮಾಣ ಎಂದು ತಿಳಿಸಿದಂತೆ ಆಯಿತು. ಅಥವಾ ಪ್ರಮಾಣಗಳ ಶಿಕ್ಷಣವನ್ನು ಕೊಡುವುದು ಪ್ರಮಾಣ ಎನಿಸುತ್ತದೆ. ಅದಾದರೋ ಬ್ರಹ್ಮತರ್ಕ ಎಂದಭಿಪ್ರಾಯ.

### ಅಕ್ಷೋಭ್ಯತೀರ್ಥರು ಪರಸಿದ್ಧಾಂತಪರಾಕರಣಪ್ರಕಾರಪ್ರಾಜ್ಞರು

(ರಸರಂಜನೀ) — ಉಪದೇಶೋಪಯೋಗಿದ್ವಯಂ ಸ್ವಸಿದ್ಧಾಂತಸಾಧನಾಭಿಜ್ಞತಾ ಪರ-ಸಿದ್ಧಾಂತಪರಾಕರಣಪ್ರಕಾರಪ್ರಾಜ್ಞತಾ ಚೇತಿ । ಅತ್ರಾದ್ಯಮ್ ಉಕ್ತ್ವಾ ದ್ವಿತೀಯಮಾಹ — ಪ್ರತಿ-**ವಾದಿಮದಚ್ಛಿದ** ಇತಿ ॥ ಮಮ ಗುರೂನುಪದೇಶಕಾನ್ ಇತ್ಯುಕ್ತಮ್, ಕಿಮುಪದಿದೇಶ? ಇತ್ಯತಃ ಪದಾದಿಕಂ ಪ್ರತಿವಾದಿಪರಾಕರಣಪ್ರಕಾರಂ ಚ ಇತ್ಯೇತದ್ ದ್ವಯಮೇವ ನ ತು ಸಾಧಾರಣ್ಯೈ-ರಧೀಯಮಾನಶಬ್ದಶಾಸ್ತ್ರಾದೀತ್ಯಾಶಯೇನ ವಾದಿವಿಶೇಷಣದ್ವಯಮ್ । ಅನೇನ 'ಕಿಮಪಿ ಚ ವದಂತಃ' ಇತ್ಯತ್ರ ವಕ್ಷ್ಯಮಾಣವಿಶಿಷ್ಟವ್ಯಾಖ್ಯಾನಪ್ರಯೋಜಕತ್ವಾದ್ ಯುಕ್ತತರಂ ವ್ಯಾಖ್ಯಾನಮಿತಿ ಶಿಷ್ಯಮನೋವ್ಯಸನನಿರಸನಾಯ ಸೂಚಿತಂ ಭವತಿ ।

ಉಪದೇಶಮಾಡಲು ಎರಡು ಗುಣಗಳಿರಬೇಕು. (1) ಸ್ವಸಿದ್ಧಾಂತವನ್ನು ಸಾಧನೆ ಮಾಡುವ ತಿಳು-ವಳಿಕೆ (2) ಪರಸಿದ್ಧಾಂತವನ್ನು ನಿರಾಕರಣೆಮಾಡುವ ಕ್ರಮವನ್ನು ಚೆನ್ನಾಗಿ ತಿಳಿದಿರುವಿಕೆ.

ಇವುಗಳಲ್ಲಿ ಮೊದಲನೆಯದನ್ನು 'ಪದವಾಕ್ಯಪ್ರಮಾಣಜ್ಞಾನ್' ಎಂದು ಹೇಳಿ ಈಗ ಎರಡನೆಯದನ್ನು ತಿಳಿಸಲು 'ಪ್ರತಿವಾದಿಮದಚ್ಛಿದಃ' ಎಂದಿದ್ದಾರೆ.

ನನ್ನ ಗುರುಗಳು ಎಂದು ತಮಗೆ ಉಪದೇಶಕರನ್ನಾಗಿ ಟೀಕಾರಾಯರು ಹೇಳಿದ್ದಾರೆ. ಉಪದೇಶಕರಾಗಿದ್ದಲ್ಲಿ ಏನು ಉಪದೇಶಿಸಿದ್ದಾರೆ ಎನ್ನುವುದಕ್ಕೆ ಉತ್ತರ - ಮಹಾವ್ಯಾಕರಣ-ಮೊದಲಾದವುಗಳು ಹಾಗೂ ಪ್ರತಿವಾದಿನಿರಾಕರಣಪ್ರಕಾರ ಎಂಬ ಈ ಎರಡೇ ಆಗಿದೆ. ಹೊರತು ಎಲ್ಲ ಸಾಮಾನ್ಯಜನರು ಓದುವ ಶಬ್ದಶಾಸ್ತ್ರಮೊದಲಾದವುಗಳಲ್ಲ.

ಇದರಿಂದ ಮುಂದೆ 'ನ ಶಬ್ದಾಬ್ಧಿಂ ಗಾಢಾ' ಎಂಬ ಪದ್ಯದಲ್ಲಿ 'ಕಿಮಪಿ ಚ' ಎಂದು ವಿಶಿಷ್ಟವಾದ ವ್ಯಾಖ್ಯಾನವನ್ನು ಮಾಡಲು ಗುರುಗಳಿಂದ ಬಂದ ಈ ಗುಣಗಳು ಕಾರಣವಾಗಿರುವವು. ಆದ್ದರಿಂದ ಆ ರೀತಿ ವ್ಯಾಖ್ಯಾನಮಾಡುವುದು ಸರಿಯಾಗಿಯೇ ಇದೆ ಎಂದು ಶಿಷ್ಯರ ಮನಸ್ಸಿನಲ್ಲಿ ಮೂಡುವ ಸಂಶಯಕ್ಕೆ ಉತ್ತರವನ್ನು ನೀಡಿದಂತೆ ಆಯಿತು.

## ಅತುಲಪ್ರಜ್ಞೋಪದೇಶಕತ್ವ ಅಕ್ಷೋಭ್ಯತೀರ್ಥರಿಗೆ ಸಂಭಾವಿತವೇ ಆಗಿದೆ

(ರಸರಂಜನೀ) – ಅಥವಾ ಏಷಾಂ ಕಥಂ ಭವಾದೃಶಾತುಲಪ್ರಜ್ಞೋಪದೇಶಕತ್ವಮಿತ್ಯತಃ ತತ್ಸಂಭಾವನಾಯ — ಶ್ರೀಮದಿತಿ ॥ ತಚ್ಚ ದ್ವೇಧಾ ಇತ್ಯಾಶಯೇನ 'ಪದೇ'ತ್ಯಾದಿ ವಿಶೇಷಣ-ದ್ವಯಮ್ । ಯದ್ವಾ ಭಾಗವತಕುಲಭವಾನಾಂ ಭವತಾಂ ಗುರುಭಿರ್ಭಗವತ್ಪಾದವಿದ್ಯಾಸಂತತಿ-ಭವೈರೇವ ಭಾವ್ಯಮ್ । ಅನ್ಯೇಷಾಂ ತದಯೋಗಾತ್ । ವಿದ್ಯಾಸಂತತಿಜಾನಾಂ ಹೀದಂ ಲಕ್ಷಣಮ್ । ಯತ್ಸಂತತಂ ಮೋಕ್ಷಶಾಸ್ತ್ರಸುಧಾಂಬೋಧಿಮಗ್ನತ್ವಂ ದುಃಶಾಸ್ತ್ರದೂಷಣದಕ್ಷದೀಕ್ಷಂ ಚೇತಿ । ಯಥೋಕ್ತಂ —

'ಸದಾ ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ ।
ಸರ್ವೇ ದುರ್ವಾದಿದುರ್ವಾದಕಾಂಡಖಂಡನಮಂಡನಾಃ' (ಮಧ್ವವಿಜಯ 15.133)

ಇತಿ, ತತ್ಕಥಮೇವಮ್? ಇತ್ಯತೋ ವಿಶೇಷಣದ್ವಯಮ್ ।

ಅಥವಾ ನಿಮ್ಮಂತಹ ಅಸದೃಶವಾದ ಜ್ಞಾನವುಳ್ಳ ಶಿಷ್ಯರಿಗೆ ಅಕ್ಷೋಭ್ಯತೀರ್ಥರು ಉಪದೇಶಿಸಲು ಸಾಧ್ಯವೇ? ಎಂದರೆ ಹೌದು, ಅದು ಸಂಭಾವಿತವೇ ಎಂಬ ಅಭಿಪ್ರಾಯದಿಂದ ಶ್ರೀಮತ್ ಎಂದು ಹೇಳುತ್ತಿದ್ದಾರೆ. ಶ್ರೀಮತ್ತ್ವವು ಅಕ್ಷೋಭ್ಯತೀರ್ಥರಲ್ಲಿ ಎರಡು ರೀತಿ ಎಂದು ತಿಳಿಸಲು 'ಪದವಾಕ್ಯ-ಪ್ರಮಾಣಜ್ಞಾನ್' ಹಾಗೂ 'ಪ್ರತಿವಾದಿಮದಚ್ಛಿದಃ' ಎಂದು ಹೇಳಿದ್ದಾರೆ. ಅಥವಾ ಭಾಗವತ-ಕುಲದಲ್ಲಿ ಹುಟ್ಟಿದ ನಿಮ್ಮ ಗುರುಗಳು ಆ ಆಚಾರ್ಯರ ವಿದ್ಯಾಪರಂಪರೆಯಲ್ಲಿ ಬಂದವರೇ ಆಗಿರಬೇಕು. ಬೇರೆಯವರಿಗೆ ಅಸಾಧ್ಯವಾಗಿದ್ದರಿಂದ. ಏಕೆಂದರೆ, ವಿದ್ಯಾಸಂತತಿಯಲ್ಲಿ ಹುಟ್ಟಿದವರಿಗೆ

ಪದ ಎಂದರೆ ಪದ್ಯತೇ ಇತಿ ಪದಮ್ - ವೈದಿಕಪದಗಳ ಅರ್ಥವನ್ನು ಸರಿಯಾಗಿ ಯಾವುದರಿಂದ ತಿಳಿಯಲ್ಪಡುತ್ತದೋ ಅದು. ಹೀಗೆ ಹೇಳಿದಾಗ ವೇದವ್ಯಾಖ್ಯಾನಮೊದಲಾದವುಗಳನ್ನು ಮಾಡುವಲ್ಲಿ ಉಪಯೋಗಿಯಾದ ಮಹಾವ್ಯಾಕರಣವನ್ನೇ ಇಲ್ಲಿ ಪರಿಗ್ರಹಿಸಬೇಕು. ಏಕೆಂದರೆ ಆ ವ್ಯಾಕರಣಾನು-ಸಾರಿಯಾಗಿಯೇ ವೈದಿಕಪದಗಳ ಅಥವಾ ವೇದಾನುಸಾರಿಯಾದ ಇತರ ಪದಗಳ ಪ್ರಕೃತಿಪ್ರತ್ಯಯ ಮೊದಲಾದವುಗಳನ್ನು ತಿಳಿದುಕೊಳ್ಳಬೇಕು. ಹಾಗಾದರೆ ಬೇರೆ ಪ್ರಸಿದ್ಧವ್ಯಾಕರಣಗಳ ಗತಿಯೇನು? ಅವುಗಳ ಬಗ್ಗೆ ಅನಾದರ ಮಾಡಬೇಕೇ? ಉತ್ತರ – ವೇದವ್ಯಾಖ್ಯಾನವನ್ನು ಮಾಡುವ ಸ್ಮೃತಿಯ ಅರ್ಥಕ್ಕೆ ಅನುಗುಣವಾಗಿದ್ದರೆ ಮಾತ್ರ ಆ ವ್ಯಾಕರಣಗಳನ್ನು ಆದರ ಮಾಡಬೇಕು. ಇಲ್ಲದಿದ್ದರೆ ಇಲ್ಲ ಎಂಬೀ ಅರ್ಥವನ್ನು ತಿಳಿಸಲೆಂದೇ ಪ್ರಸಿದ್ಧವಾದ ವ್ಯಾಕರಣಪದವನ್ನು ತ್ಯಾಗಮಾಡಿ ಪದ ಎಂಬ ಶಬ್ದವನ್ನು ಉಲ್ಲೇಖಿಸಿದ್ದಾರೆ.

ಹಾಗೆ ವಾಕ್ಯ ಎಂಬ ಪದವನ್ನು ಪ್ರಯೋಗಿಸುವ ಮೂಲಕ ಯಾವ ವ್ಯಕ್ತಿಗೆ ಬ್ರಹ್ಮತರ್ಕ ಮೊದಲಾದವುಗಳಲ್ಲಿ ತಿಳಿಸಿರುವ ಪ್ರಮಾಣನ್ಯಾಯಗಳ ಅನುಸಂಧಾನವಿದೆಯೋ ಅವರಿಗೆ ಮಾತ್ರ ವೇದವಾಕ್ಯಗಳ ಸರಿಯಾದ ಅರ್ಥವು ಮನಸ್ಸಿನಲ್ಲಿ ಹೊಳೆಯುತ್ತದೆ. ಹೊರತು ಬೇರೆ ಬೇರೆ ವ್ಯಾಖ್ಯಾನಕಾರರ ಬುದ್ಧಿಯ ವೈವಿಧ್ಯತೆಗನುಗುಣವಾಗಿ ರಚಿತವಾದ ತರ್ಕವನ್ನು ಅವಲಂಬಿಸಿ ಅಲ್ಲ ಎಂದು ಸೂಚಿಸಿದ್ದಾರೆ. ಹೀಗೆ ಪ್ರಮಾಣಪದವನ್ನು ಹಾಕಿರುವುದರಿಂದ ಬ್ರಹ್ಮತರ್ಕವನ್ನೇ ನ್ಯಾಯಶಾಸ್ತ್ರವೆಂದು ಪರಿಗಣಿಸಬೇಕು. ಗೌತಮರಚಿತವಾದ ನ್ಯಾಯಶಾಸ್ತ್ರವು ಸ್ವೋತ್ಪ್ರೇಕ್ಷಾಮೂಲ-ವಾದ್ದರಿಂದ ಅಪ್ರಮಾಣ ಎಂದು ತಿಳಿಸಿದಂತೆ ಆಯಿತು. ಅಥವಾ ಪ್ರಮಾಣಗಳ ಶಿಕ್ಷಣವನ್ನು ಕೊಡುವುದು ಪ್ರಮಾಣ ಎನಿಸುತ್ತದೆ. ಅದಾದರೋ ಬ್ರಹ್ಮತರ್ಕ ಎಂದಭಿಪ್ರಾಯ.

## ಅಕ್ಷೋಭ್ಯತೀರ್ಥರು ಪರಸಿದ್ಧಾಂತಪರಾಕರಣಪ್ರಕಾರಪ್ರಾಜ್ಞರು

(ರಸರಂಜನೀ) — ಉಪದೇಶೋಪಯೋಗಿದ್ವಯಂ ಸ್ವಸಿದ್ಧಾಂತಸಾಧನಾಭಿಜ್ಞತಾ ಪರ-ಸಿದ್ಧಾಂತಪರಾಕರಣಪ್ರಕಾರಪ್ರಾಜ್ಞತಾ ಚೇತಿ । ಅತ್ರಾದ್ಯಮ್ ಉಕ್ತ್ವಾ ದ್ವಿತೀಯಮಾಹ — **ಪ್ರತಿ-ವಾದಿಮದಚ್ಛಿದ ಇತಿ ॥** ಮಮ ಗುರೂನುಪದೇಶಕಾನ್ ಇತ್ಯುಕ್ತಮ್, ಕಿಮುಪದಿದೇಶ? ಇತ್ಯತಃ ಪದಾದಿಕಂ ಪ್ರತಿವಾದಿಪರಾಕರಣಪ್ರಕಾರಂ ಚ ಇತ್ಯೇತದ್ ದ್ವಯಮೇವ ನ ತು ಸಾಧಾರಣ್ಯೇ-ರಧೀಯಮಾನಶಬ್ದಶಾಸ್ತ್ರಾದೀತ್ಯಾಶಯೇನ ವಾದಿವಿಶೇಷಣದ್ವಯಮ್ । ಅನೇನ 'ಕಿಮಪಿ ಚ ವದಂತಃ' ಇತ್ಯತ್ರ ವಕ್ಷ್ಯಮಾಣವಿಶಿಷ್ಟವ್ಯಾಖ್ಯಾನಪ್ರಯೋಜಕತ್ವಾದ್ ಯುಕ್ತತರಂ ವ್ಯಾಖ್ಯಾನಮಿತಿ ಶಿಷ್ಯಮನೋವ್ಯಸನನಿರಸನಾಯ ಸೂಚಿತಂ ಭವತಿ ।

ಉಪದೇಶಮಾಡಲು ಎರಡು ಗುಣಗಳಿರಬೇಕು. (1) ಸ್ವಸಿದ್ಧಾಂತವನ್ನು ಸಾಧನೆ ಮಾಡುವ ತಿಳು-ವಳಿಕೆ (2) ಪರಸಿದ್ಧಾಂತವನ್ನು ನಿರಾಕರಣೆಮಾಡುವ ಕ್ರಮವನ್ನು ಚೆನ್ನಾಗಿ ತಿಳಿದಿರುವಿಕೆ.

ಇವುಗಳಲ್ಲಿ ಮೊದಲನೆಯದನ್ನು 'ಪದವಾಕ್ಯಪ್ರಮಾಣಜ್ಞಾನ್' ಎಂದು ಹೇಳಿ ಈಗ ಎರಡನೆಯದನ್ನು ತಿಳಿಸಲು 'ಪ್ರತಿವಾದಿಮದಚ್ಛಿದಃ' ಎಂದಿದ್ದಾರೆ.

ನನ್ನ ಗುರುಗಳು ಎಂದು ತಮಗೆ ಉಪದೇಶಕರನ್ನಾಗಿ ಟೀಕಾರಾಯರು ಹೇಳಿದ್ದಾರೆ. ಉಪದೇಶಕರಾಗಿದ್ದಲ್ಲಿ ಏನು ಉಪದೇಶಿಸಿದ್ದಾರೆ ಎನ್ನುವುದಕ್ಕೆ ಉತ್ತರ - ಮಹಾವ್ಯಾಕರಣ-ಮೊದಲಾದವುಗಳು ಹಾಗೂ ಪ್ರತಿವಾದಿನಿರಾಕರಣಪ್ರಕಾರ ಎಂಬ ಈ ಎರಡೇ ಆಗಿದೆ. ಹೊರತು ಎಲ್ಲ ಸಾಮಾನ್ಯಜನರು ಓದುವ ಶಬ್ದಶಾಸ್ತ್ರಮೊದಲಾದವುಗಳಲ್ಲ.

ಇದರಿಂದ ಮುಂದೆ 'ನ ಶಬ್ದಾಬ್ಧೌ ಗಾಥಾ' ಎಂಬ ಪದ್ಯದಲ್ಲಿ 'ಕಿಮಪಿ ಚ' ಎಂದು ವಿಶಿಷ್ಟವಾದ ವ್ಯಾಖ್ಯಾನವನ್ನು ಮಾಡಲು ಗುರುಗಳಿಂದ ಬಂದ ಈ ಗುಣಗಳು ಕಾರಣವಾಗಿರುವವು. ಆದ್ದರಿಂದ ಆ ರೀತಿ ವ್ಯಾಖ್ಯಾನಮಾಡುವುದು ಸರಿಯಾಗಿಯೇ ಇದೆ ಎಂದು ಶಿಷ್ಯರ ಮನಸ್ಸಿನಲ್ಲಿ ಮೂಡುವ ಸಂಶಯಕ್ಕೆ ಉತ್ತರವನ್ನು ನೀಡಿದಂತೆ ಆಯಿತು.

## ಅತುಲಪ್ರಜ್ಞೋಪದೇಶಕತ್ವ ಅಕ್ಷೋಭ್ಯತೀರ್ಥರಿಗೆ ಸಂಭಾವಿತವೇ ಆಗಿದೆ

(ರಸರಂಜನೀ) – ಅಥವಾ ಏಷಾಂ ಕಥಂ ಭವಾದೃಶಾತುಲಪ್ರಜ್ಞೋಪದೇಶಕತ್ವಮಿತ್ಯತಃ ತತ್ಸಂಭಾವನಾಯ — ಶ್ರೀಮದಿತಿ ॥ ತಚ್ಚ ದ್ವೇಧಾ ಇತ್ಯಾಶಯೇನ 'ಪದೇ'ತ್ಯಾದಿ ವಿಶೇಷಣ-ದ್ವಯಮ್ । ಯದ್ವಾ ಭಾಗವತಕುಲಭವಾನಾಂ ಭವತಾಂ ಗುರುಭಿರ್ಭಗವತ್ಪಾದವಿದ್ಯಾಸಂತತಿ-ಭವೈರೇವ ಭಾವ್ಯಮ್ । ಅನ್ಯೇಷಾಂ ತದಯೋಗಾತ್ । ವಿದ್ಯಾಸಂತತಿಜಾನಾಂ ಹೀದಂ ಲಕ್ಷಣಮ್ । ಯತ್ಸಂತತಂ ಮೋಕ್ಷಶಾಸ್ತ್ರಸುಧಾಂಬೋಧಿಮಗ್ನತ್ವಂ ದುಃಶಾಸ್ತ್ರದೂಷಣದಕ್ಷದೀಕ್ಷಂ ಚೇತಿ । ಯಥೋಕ್ತಂ —

'ಸದಾ ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ ।
ಸರ್ವೇ ದುರ್ವಾದಿದುರ್ವಾದಕಾಂಡಖಂಡನಮಂಡನಾಃ' (ಮಧ್ವವಿಜಯ 15.133)

ಇತಿ, ತತ್ಕಥಮೇವಮ್? ಇತ್ಯತೋ ವಿಶೇಷಣದ್ವಯಮ್ ।

ಅಥವಾ ನಿಮ್ಮಂತಹ ಅಸದೃಶವಾದ ಜ್ಞಾನವುಳ್ಳ ಶಿಷ್ಯರಿಗೆ ಅಕ್ಷೋಭ್ಯತೀರ್ಥರು ಉಪದೇಶಿಸಲು ಸಾಧ್ಯವೇ? ಎಂದರೆ ಹೌದು, ಅದು ಸಂಭಾವಿತವೇ ಎಂಬ ಅಭಿಪ್ರಾಯದಿಂದ ಶ್ರೀಮತ್ ಎಂದು ಹೇಳುತ್ತಿದ್ದಾರೆ. ಶ್ರೀಮತ್ತ್ವವು ಅಕ್ಷೋಭ್ಯತೀರ್ಥರಲ್ಲಿ ಎರಡು ರೀತಿ ಎಂದು ತಿಳಿಸಲು 'ಪದವಾಕ್ಯ-ಪ್ರಮಾಣಜ್ಞಾನ್' ಹಾಗೂ 'ಪ್ರತಿವಾದಿಮದಚ್ಛಿದಃ' ಎಂದು ಹೇಳಿದ್ದಾರೆ. ಅಥವಾ ಭಾಗವತ-ಕುಲದಲ್ಲಿ ಹುಟ್ಟಿದ ನಿಮ್ಮ ಗುರುಗಳು ಆ ಆಚಾರ್ಯರ ವಿದ್ಯಾಪರಂಪರೆಯಲ್ಲಿ ಬಂದವರೇ ಆಗಿರಬೇಕು. ಬೇರೆಯವರಿಗೆ ಅಸಾಧ್ಯವಾಗಿದ್ದರಿಂದ. ಏಕೆಂದರೆ, ವಿದ್ಯಾಸಂತತಿಯಲ್ಲಿ ಹುಟ್ಟಿದವರಿಗೆ

ಇಂತಹ ಲಕ್ಷಣಗಳಿರುತ್ತವೆ. ಯಾವುದೆಂದರೆ ಸಂತತವಾಗಿ ಮೋಕ್ಷಶಾಸ್ತ್ರಸುಧಾಸಮುದ್ರದಲ್ಲಿ ಮುಳುಗಿರುವಿಕೆ; ದುಃಶಾಸ್ತ್ರಗಳನ್ನು ದೂಷಿಸುವುದರಲ್ಲಿ ಸಮರ್ಥವಾದ ದೀಕ್ಷೆಯನ್ನು ಹೊಂದಿರುವಿಕೆ. ಇದನ್ನು ಮಧ್ವವಿಜಯದಲ್ಲಿ ತಿಳಿಸಿದ್ದಾರೆಯೂ ಹೌದು.

## ಆಚಾರ್ಯರ ಶಿಷ್ಯರ ಬಗ್ಗೆ ಮಧ್ವವಿಜಯದ ಉದ್ಗಾರ

'ಸದಾ ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ ।
ಸರ್ವೇ ದುರ್ವಾದಿದುರ್ವಾದಕಾಂಡಖಂಡನಮಂಡನಾಃ' (ಮಧ್ವವಿಜಯ 15.133)

* – ಸರ್ವೇ = ಎಲ್ಲರೂ, ಸದಾ = ಯಾವಾಗಲೂ, ಸಕಲಸಚ್ಛಾಸ್ತ್ರ = ಎಲ್ಲ ಒಳ್ಳೆಯ ಶಾಸ್ತ್ರದ, ವ್ಯಾಖ್ಯಾಸೌಖ್ಯ = ಪ್ರವಚನದಿಂದ ಉಂಟಾದ ಆನಂದವೆಂಬ, ಅಮೃತಾಬ್ಧಿಗಾಃ = ಅಮೃತ-ಸಮುದ್ರದಲ್ಲಿ ಮಗ್ನರೂ, ದುರ್ವಾದಿದುರ್ವಾದ = ದುಷ್ಟವಾದಿಗಳ ದುಷ್ಟವಾದಗಳೆಂಬ, ಕಾಂಡ-ಖಂಡನ = ಮರದ ಕಾಂಡಗಳನ್ನು ತುಂಡರಿಸುವುದೇ, ಮಂಡನಾಃ (ಆಸನ್) = ಅಲಂಕಾರವಾಗಿ ಉಳ್ಳವರೂ (ಆಗಿದ್ದರು).

ಇದನ್ನು ತಿಳಿಸಲೆಂದೇ ವಿಶೇಷಣದ್ವಯಗಳಿವೆ.

## ಅಕ್ಷೋಭ್ಯತೀರ್ಥ ಎಂಬ ಹೆಸರು ಸಾಂಕೇತಿಕವೂ ಅಲ್ಲ ರೂಢವೂ ಅಲ್ಲ. ಹಾಗಾದರೆ ಏನು?

(ರಸರಂಜನೀ) – ನೇದಮಕ್ಷೋಭ್ಯತೀರ್ಥನಾಮ ದೇವದತ್ತಾದಿವತ್ ಸಾಂಕೇತಿಕಂ ನಾಪಿ ಪಟಾದಿಪದವದ್ರೂಢಿಮಾತ್ರೇಣ ಪ್ರವೃತ್ತಂ ಕಿಂತು ಅನನ್ಯಸಾಧಾರಣಧರ್ಮಬೋಧಕಮಪಿ ಇತ್ಯಾಶಯೇನ ವಿಶೇಷಣದ್ವಯಮ್ । ತಥಾ ಹಿ – ಅಕ್ಷೋಭ್ಯಂ ಅನ್ಯೈಃ ಚಾಲಯಿತುಮಶಕ್ಯಂ ತೀರ್ಥಂ ಯಸ್ಯ । ಅಪರಿಮಿತತಯಾ ಅನ್ಯೈರೇತಾವತಾದಿತ್ಯಜ್ಞೇಯಶಾಸ್ತ್ರವಾನ್ ಇತಿ । ತಥಾನ್ಯೈ-ರಕ್ಷೋಭ್ಯಂ ನಿಷ್ಕೃಷ್ಟಾರ್ಥತಯೋದಿತಂ ತತಶ್ಚಾಲಯಿತುಮಶಕ್ಯಂ ತೀರ್ಥಂ ಯಸ್ಯ । ಅನ್ಯೈರಪಿ ವಿಭಾವನೀಯಬುದ್ಧಿಕೌಶಲ್ಯವಾನಿತಿ ಸ ತಥೇತಿ ।

ಅಕ್ಷೋಭ್ಯತೀರ್ಥಾಖ್ಯಾನ್ – ಅಕ್ಷೋಭ್ಯಂ ಅನ್ಯೈಃ ಚಾಲಯಿತುಮಶಕ್ಯಂ ತೀರ್ಥಂ ಯಸ್ಯ ಸಃ – ಅಂದರೆ ಪ್ರತಿವಾದಿಗಳಿಂದ ಚಲಿಸಲು ಸಾಧ್ಯವಿಲ್ಲದ ಶಾಸ್ತ್ರವನ್ನು ಯಾರುಳ್ಳವರೋ ಅವರೇ ಅಕ್ಷೋಭ್ಯತೀರ್ಥರು.

ಅನ್ಯೈಃ – ಬೇರೆಯವರಿಂದ ಚಾಲಯಿತುಮಶಕ್ಯಂ – ಸಂಚಾರಮಾಡಲು ಅಶಕ್ಯವಾದ ಶಾಸ್ತ್ರವನ್ನು ಯಾರುಳ್ಳವರೋ ಅವರೇ ಅಕ್ಷೋಭ್ಯತೀರ್ಥರು. ಅಂದರೆ, ಇವರ ಶಾಸ್ತ್ರದ ಪ್ರಮೇಯವು ಇಷ್ಟೇ ಎಂದು ಅವಧಿಯನ್ನು ನಿರ್ಧರಿಸಲು ಬೇರೆಯವರಿಂದ ಅಸಾಧ್ಯ ಎಂದರ್ಥ.

ಅಥವಾ - ಅಕ್ಷೋಭ್ಯಂ - ನಿಷ್ಕೃಷ್ಟವಾಗಿ ಹೇಳಿದ ಅರ್ಥವನ್ನು ಬೇರೆಯವರಿಂದ ಅಪಲಪಿಸಲು ಅಸಾಧ್ಯವಾದ ಶಾಸ್ತ್ರವನ್ನು ಹೊಂದಿದವರು ಎಂದರ್ಥ. ಅಂದರೆ ತಮ್ಮ ಮಾತಿನಿಂದ ತಿಳಿಯಲ್ಪಟ್ಟ ಬುದ್ಧಿಕೌಶಲ್ಯವುಳ್ಳವರು.

## ಪ್ರತಿವಾದಿಪ್ರತರ್ಕಿತ-ಯುಕ್ತ್ಯಾಭಾಸನಿರಾಸಕರು ಅಕ್ಷೋಭ್ಯತೀರ್ಥರು

(ಲಘುರಸರಂಜನೀ) — ತಾವನ್ಮಾತ್ರಜ್ಞಾನಮಸ್ತೀತಿ ಭ್ರಾಂತಿವಾರಣಾಯ 'ಗುರೂನ್' ಇತಿ ವಿಶೇಷ್ಯಮ್ । ನನು ಗುರೂಪದಿಷ್ಟಮಪಿ ವಿಜ್ಞಾನಂ ನ ತಾವಚ್ಛ್ರೋತೄಣಾಂ ದೃಢನಿರೂಢಂ ಭವತಿ । ಯಾವತ್ ಪ್ರತಿವಾದಿಪ್ರತರ್ಕಿತಯುಕ್ತ್ಯಾಭಾಸನಿರಾಸ ಇತ್ಯತ ಉಕ್ತಮ್ — ಪ್ರತಿವಾದಿ-ಮದಚ್ಛಿದ ಇತಿ ॥ ಯಥೋಕ್ತಂ ಪೂರ್ವಪ್ರಸ್ಥಾನೇ – 'ದುರ್ವಾದಿವಾರಣವಿದಾರಣದಕ್ಷದೀಕ್ಷಮ್' ಇತಿ । ಶ್ರೀಮಂತಃ ಶಿಷ್ಯಸಂಪತ್ತಿಮಂತಶ್ಚ ತೇ ಅಕ್ಷೋಭ್ಯತೀರ್ಥಾಖ್ಯಾಶ್ಚ ಇತ್ಯನೇನ ಬಹುಶಿಷ್ಯ-ಸಂಪತ್ತಿರ್ದರ್ಶಿತಾ । ತತ್ರ ಮದ್ವಿಷಯೇ ವಿಶೇಷೋಽಸ್ತೀತ್ಯಾಹ — **ಮಮ ಗುರೂನ್** ಇತಿ ॥ ಸಾಕ್ಷಾತ್ ತತ್ರಾಪಿ ಅತಿಶಯೇನೋಪದೇಶಕಾನಿತಿ । ಯಥೋಕ್ತಂ ಪ್ರಮೇಯದೀಪಿಕಾಯಾಮ್ – 'ಅಕ್ಷೋಭ್ಯತೀರ್ಥಗುರುಣಾ ಶುಕವಚ್ಛಿಕ್ಷಿತಸ್ಯ ಮೇ' ಇತಿ ।

'ಪದವಾಕ್ಯಪ್ರಮಾಣಜ್ಞಾನ್' ಎಂಬ ಭಾಗದಿಂದ ಕೇವಲ ಮಹಾವ್ಯಾಕರಣ ಮೊದಲಾದವುಗಳ ಜ್ಞಾನವಿದೆ ಎಂದಷ್ಟೇ ಅಲ್ಲ ಎಂದು ತಿಳಿಸಲು 'ಗುರೂನ್' ಎಂದಿದ್ದಾರೆ. ಅಲ್ಲ। ಗುರುಗಳು ಉಪದೇಶ ಮಾಡಿದ್ದರೂ ಅದು ಕೇಳುವವರಲ್ಲಿ ದೃಢವಾಗಿ ನಿಲ್ಲಬೇಕಾದರೆ ಎಷ್ಟೆಷ್ಟು ಪ್ರತಿವಾದಿಗಳಿದ್ದಾರೋ ಅವರೆಲ್ಲರೂ ತಮ್ಮ ಬುದ್ಧಿಯಿಂದ ಉತ್ಪ್ರೇಕ್ಷೆ ಮಾಡಿದ ಯುಕ್ತಿಗಳನ್ನು ನಿರಾಕರಿಸಬೇಕು. ಈ ಗುಣವನ್ನು ಅಕ್ಷೋಭ್ಯತೀರ್ಥರು ಹೊಂದಿದ್ದರು ಎಂದು 'ಪ್ರತಿವಾದಿ-ಮದಚ್ಛಿದಃ' ಎಂಬ ಭಾಗದಿಂದ ತಿಳಿಸಿದ್ದಾರೆ. ಇದನ್ನು ಪೂರ್ವಪ್ರಸ್ಥಾನದಲ್ಲಿ 'ದುರ್ವಾದಿವಾರಣ-ವಿದಾರಣದಕ್ಷದೀಕ್ಷಂ' ಎಂದಿದ್ದಾರೆ. ಅಕ್ಷೋಭ್ಯತೀರ್ಥರಿಗೆ ಬಹಳ ಶಿಷ್ಯಸಂಪತ್ತಿದ್ದರೂ ನನ್ನ ವಿಷಯದಲ್ಲಿ ವಿಶೇಷತೆ ಇತ್ತು. ಅಷ್ಟು ಶಿಷ್ಯರುಗಳಲ್ಲಿಯೂ ನನಗೆ ಬಹಳ ಚೆನ್ನಾಗಿ ಉಪದೇಶವನ್ನು ಮಾಡಿದ್ದಾರೆ. ಇದನ್ನು ಗೀತಾಭಾಷ್ಯಟೀಕೆಯಾದ ಪ್ರಮೇಯದೀಪಿಕಾದಲ್ಲಿ ಹೀಗೆಂದಿದ್ದಾರೆ - 'ಅಕ್ಷೋಭ್ಯತೀರ್ಥಗುರುಣಾ ಶುಕವತ್ ಶಿಕ್ಷಿತಸ್ಯ ಮೇ । ವಚೋಭಿಃ ಅಮೃತಪ್ರಾಯೈಃ' ಎಂದು.

## ಅಕ್ಷೋಭ್ಯತೀರ್ಥರೆಂಬ ಮೃಗರಾಜ

ಶ್ರೀಮದ್ರಮಾರಮಣಸದ್ಗಿರಿಪಾದಸಂಗೀ ವ್ಯಾಖ್ಯಾನಿನಾದದಲಿತಾಖಿಲದುಷ್ಪದರ್ಪಮ್ ।
ದುರ್ವಾದಿವಾರಣವಿದಾರಣದಕ್ಷದೀಕ್ಷಮ್ ಅಕ್ಷೋಭ್ಯತೀರ್ಥಮೃಗರಾಜಮಹಂ ನಮಾಮಿ ॥
(ತತ್ವಪ್ರಕಾಶಿಕಾ)

ಸ್ವಗುರೂನ್ ನಮತಿ – ಶ್ರೀಮದಿತಿ । ಶ್ರೀಮದ್ರಮಾರಮಣಾಖ್ಯಸದ್ಗಿರಿಚರಣಾಖ್ಯಂ ಪ್ರತ್ಯಂತ-ಪರ್ವತಸಂಬಂಧವಾನ್ ತದಾಶ್ರಿತ ಇತಿ ಯಾವತ್ । 'ಪಾದಾಃ ಪ್ರತ್ಯಂತಪರ್ವತಾಃ' ಇತ್ಯುಕ್ತೇಃ । ಸ ಚಾಸೌ ವ್ಯಾಖ್ಯಾನಧ್ವನಿನಾ ವಿನಾಶಿತಾಖಿಲದುರ್ವಾದಿಮದಶ್ಚ ತಮ್ । ದುರ್ವಾದಿಗಜಪಾಟನ-ಸಮರ್ಥಸಂಕಲ್ಪಮಿತ್ಯರ್ಥಃ । (ವಾಕ್ಯಾರ್ಥಮಂಜರೀ)

– ಲಕ್ಷ್ಮೀಪತಿಯಾದ ನಾರಾಯಣನೆಂಬ ಶ್ರೇಷ್ಠಪರ್ವತದ ಪಾದವನ್ನು ಆಶ್ರಯಿಸಿದ್ದಾರೆ. ಅಲ್ಲಿ ತಮ್ಮ ವ್ಯಾಖ್ಯಾನವೆಂಬ ಘರ್ಜನೆಯನ್ನು ಮಾಡಿ ಕ್ರೂರಮೃಗಗಳನ್ನು ಓಡಿಸಿದ್ದಾರೆ. ಅಂದರೆ ದುರ್ವಾದಿಗಳ ದುಷ್ಟದರ್ಪವನ್ನು ಭಂಗಗೊಳಿಸಿದ್ದಾರೆ. ಈ ದುರ್ವಾದಿಗಳು ಮದಿಸಿದ ಆನೆಗಳಂತೆ ಇದ್ದಾರೆ.ಇವರನ್ನು ಸೀಳುವುದರಲ್ಲಿ ದೀಕ್ಷೆಯನ್ನು ಹೊಂದಿದವರು ಅಕ್ಷೋಭ್ಯತೀರ್ಥರು. ಅಂತಹ ಮೃಗರಾಜರಾದ(ಸಿಂಹ) ಅಕ್ಷೋಭ್ಯತೀರ್ಥರನ್ನು ನಾನು ನಮಸ್ಕರಿಸುತ್ತೇನೆ.

## ಗುರುಪರಂಪರೆಯಲ್ಲಿ ಸಾಕ್ಷಾದ್ಗುರುಗಳಾದ ಅಕ್ಷೋಭ್ಯತೀರ್ಥರು

(ಲಘುರಸರಂಜನೀ) – ಅಥ ಪರಂಪರಾಯಾಂ (ದ್ವಿತೀಯಂ) ಸಾಕ್ಷಾದ್ಗುರುಂ ಅಕ್ಷೋಭ್ಯತೀರ್ಥಂ ತತ್ರಸಾದಸಾಧನಗುಣಾನುವಾದನಪೂರ್ವಕಂ ಮನಸಾ ಪೂಜಯತಿ – ಪದೇತಿ ॥ ಅತ್ರ ಮಮ ಗುರೂನ್ = ಮದುಪದೇಶಕಾನ್ ಉಪತಿಷ್ಠೇ – ಇತ್ಯನ್ವಯಃ । ನನು ಕಸ್ಯ ಶಾಸ್ತ್ರಸ್ಯೋಪದೇಶಕಾಸ್ತ ಇತ್ಯತ ಉಕ್ತಮ್ – ಪದವಾಕ್ಯಪ್ರಮಾಣಜ್ಞಾನಿತಿ ॥ ವ್ಯಾಕರಣಮೀಮಾಂಸಾಬ್ರಹ್ಮತರ್ಕಾಭಿಜ್ಞಾನ್ ಇತ್ಯರ್ಥಃ । ತಥಾ ಚ – ಪದಾದಿಶಾಸ್ತ್ರತ್ರಯಸ್ಯೋಪದೇಶಕಾಸ್ತೇ ಮೇ । ನ ಹ್ಯನ್ಯಜ್ಞಾ ಅನ್ಯದು-ಪದಿಶಂತೀತಿ ಯುಜ್ಯತ ಇತಿ ಭಾವಃ । ನನು ಪದಾದಿಜ್ಞಾನಮಪಿ ತೇಷಾಮಸ್ಮದಾದಿಸಾಧಾರಣ-ಮೇವಾಸ್ತಿ ಚೇತ್ ಕಥಂ ತ್ವದುಪದೇಶಸಾಧನಸಾಮರ್ಥ್ಯಮ್ ಇತ್ಯತ ಉಕ್ತಮ್ – ಪ್ರತಿವಾದಿ-ಮದಚ್ಛಿದ ಇತಿ ॥ ಅತ್ರ 'ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ' ಇತಿ ಸಮಭಿ-ವ್ಯಾಹಾರಸಾಮರ್ಥ್ಯಾತ್ ಪದಾದಿಶಾಸ್ತ್ರೇಷ್ವೇವ ಯೇ ಪ್ರತಿವಾದಿನಃ ತಚ್ಛಾಸ್ತ್ರಾಭಿಜ್ಞಾಸ್ತೇಷಾಂ ಯೋ ಮದಃ ತಚ್ಛಾಸ್ತ್ರಪಾಂಡಿತ್ಯಾತಿಶಯಜನ್ಯಃ, ತಚ್ಛಿದಃ ತತೋಽಪ್ಯತಿಶಯಿತಪಾಂಡಿತ್ಯೇನ ತಜ್ಜೇತಾರ ಇತಿ ಲಭ್ಯತೇ । ನ ಹ್ಯನ್ಯಶಾಸ್ತ್ರಜ್ಞಾ ಅನ್ಯಶಾಸ್ತ್ರಮದಚ್ಛೇತ್ತಾರ ಇತಿ ಯುಜ್ಯತೇ । ಅನೇನ ಪದಾದಿಜ್ಞಾನೇ ನಾನ್ಯಸಾಧಾರಣಾಸ್ತೇ ಕಿಂ ತು ತೇಷು ಶಾಸ್ತ್ರೇಷು ಪ್ರೌಢಾ ಏವ । ಕಥಮನ್ಯಥಾ ಪ್ರತಿವಾದಿಮದಚ್ಛೇದಕತ್ವಮ್ । ತಥಾ ಚ ಮದುಪದೇಶಸಾಮರ್ಥ್ಯೇ ಕಾ ಕಥಂತೇತ್ಯುಕ್ತಂ ಭವತಿ ।

ಅತ್ರ ಯಥಾ ಪದವಾಕ್ಯಪ್ರಮಾಣಜ್ಞಾನ್ ಗುರೂನಿತಿ ವಿಶೇಷಣವಿಶೇಷಾಭ್ಯಾಂ ಪದಾದಿಶಾಸ್ತ್ರೋ-ಪದೇಶಕಾ ಇತಿ ಸೂಚಿತಂ ತಥಾ ಪ್ರತಿವಾದಿಮದಚ್ಛಿದೋ ಗುರೂನಿತಿ ವಿಶೇಷಣವಿಶೇಷಾಭ್ಯಾಂ ಪ್ರತಿವಾದಿಮದಚ್ಛೇದಪ್ರಕಾರೋಪದೇಶಕಾಶ್ಚೇತಿ ಸೂಚಿತಮಿತಿ ಜ್ಞಾತವ್ಯಮ್ ।

ಗುರುಪರಂಪರೆಯಲ್ಲಿ ಸಾಕ್ಷಾತ್ ಗುರುಗಳಾದ ಅಕ್ಷೋಭ್ಯತೀರ್ಥರನ್ನು ಅವರ ಅನುಗ್ರಹಕ್ಕೆ ಪಾತ್ರವಾದಂತಹ ಗುಣಗಳನ್ನು ವರ್ಣಿಸುತ್ತ ಮನಸಾ ಪೂಜಿಸುತ್ತಾರೆ – ಪದವಾಕ್ಯಪ್ರಮಾಣಜ್ಞಾನ್ ಎಂಬ ಪದ್ಯದಿಂದ. ಇಲ್ಲಿ 'ಮಮ ಗುರೂನ್ ಉಪತಿಷ್ಠೇ' ಎಂದನ್ವಯ. ನನ್ನ ಗುರುಗಳಾದ ಅಕ್ಷೋಭ್ಯತೀರ್ಥರನ್ನು ಮನಸಾ ಪೂಜಿಸುತ್ತೇನೆ ಎಂದು. ಅಲ್ಲ! ಗುರುಗಳು ಎಂದರೆ ಉಪದೇಶಕರು ಎಂದರ್ಥ. ನಿಮಗೆ ಅವರು ಯಾವ ಶಾಸ್ತ್ರಕ್ಕೆ ಉಪದೇಶಕರಾಗಿದ್ದಾರೆ ಎಂಬ ಪ್ರಶ್ನೆಗೆ ಉತ್ತರವಾಗಿ 'ಪದವಾಕ್ಯಪ್ರಮಾಣಜ್ಞಾನ್' ಎಂದಿದ್ದಾರೆ. ಇದರಿಂದಾಗಿ ವ್ಯಾಕರಣ, ಮೀಮಾಂಸಾ, ಬ್ರಹ್ಮತರ್ಕ-ಗಳನ್ನು ತಿಳಿದ ಅವರು ಮೂರೂ ಶಾಸ್ತ್ರಗಳನ್ನು ಉಪದೇಶಮಾಡಿದ್ದಾರೆ ಎಂದು ತಿಳಿಸಿದಂತಾಯಿತು. ಏಕೆಂದರೆ ಯಾರು ಯಾವ ಶಾಸ್ತ್ರಗಳನ್ನು ತಿಳಿದಿದ್ದಾರೋ ಅವುಗಳನ್ನೇ ಉಪದೇಶಿಸುವುದು ಯುಕ್ತ. ಬೇರೆ ಎಂಬುದು ಅಸಂಭಾವಿತ. ಅಲ್ಲ! ಪದಾದಿಗಳ ಜ್ಞಾನ ಅರ್ಥಾತ್ ವ್ಯಾಕರಣ ಮುಂತಾದ ಶಾಸ್ತ್ರಗಳ ಜ್ಞಾನ, ನಿಮ್ಮ ಗುರುಗಳಿಗೆ ಇದ್ದಂತೆ ನಮಗೂ ಇದೆ. ಹಾಗಾಗಿ ನಿಮ್ಮ ಗುರುಗಳಲ್ಲಿ ಉಪದೇಶಮಾಡುವ ವಿಶೇಷವಾದ ಸಾಮರ್ಥ್ಯವಿದೆ ಎಂದು ಹೇಗೆ ಹೇಳಿದ್ದೀರಿ? ಎನ್ನುವುದಕ್ಕೆ ಉತ್ತರವಾಗಿ 'ಪ್ರತಿವಾದಿಮದಚ್ಛಿದಃ' ಎಂದಿದ್ದಾರೆ. ಹೀಗೆ ವ್ಯಾಕರಣಶಾಸ್ತ್ರಮೊದಲಾದವುಗಳ ಜ್ಞಾನದ ಜೊತೆಗೆ ಪರವಾದಿಗಳು ಆಕ್ಷೇಪಿಸುವ ಪ್ರಶ್ನೆಗಳಿಗೂ ಹೇಳುವ ಸಾಮರ್ಥ್ಯ ಹೊಂದಿರಬೇಕು. ಅದು ಟೀಕಾಚಾರ್ಯರ ಗುರುಗಳಲ್ಲಿ ಇದೆ ಎಂದು ಭಾವ. ಇಲ್ಲಿ 'ಪದವಾಕ್ಯಪ್ರಮಾಣಜ್ಞಾನ್' ಎಂಬ ಪದದ ಹತ್ತಿರ 'ಪ್ರತಿವಾದಿಮದಚ್ಛಿದಃ' ಎಂದು ಹೇಳಿದ್ದರಿಂದ ಪ್ರಸಿದ್ಧವಾದ ವ್ಯಾಕರಣ, ಮೀಮಾಂಸಾ, ತರ್ಕಗಳಲ್ಲಿಯೇ ಯಾರು ಪ್ರತಿವಾದಿಗಳಿದ್ದಾರೋ ಅಂದರೆ ವ್ಯಾಕರಣಶಾಸ್ತ್ರಬಲ್ಲ-ವರಾದ ಪ್ರತಿವಾದಿಗಳು, ಮೀಮಾಂಸಾಶಾಸ್ತ್ರ ಬಲ್ಲ ಪ್ರತಿವಾದಿಗಳು, ತರ್ಕಬಲ್ಲ ಪ್ರತಿವಾದಿಗಳು ಯಾರಿದ್ದಾರೋ ಅವರ ಶಾಸ್ತ್ರಪಾಂಡಿತ್ಯದ ಪ್ರಖರತೆಯಿಂದ ಬಂದ ಮದವನ್ನು ಅವರಿಗಿಂತ ಹೆಚ್ಚು ಇರುವ ತಮ್ಮ ಪಾಂಡಿತ್ಯದ ಪ್ರಖರತೆಯಿಂದ ಅವರನ್ನು ಗೆದ್ದಿರುವರು ಎಂದು ತಿಳಿಯುವುದು. ಇಲ್ಲದಿದ್ದರೆ ಬೇರೆ ಶಾಸ್ತ್ರವನ್ನು ತಿಳಿದವರು ವ್ಯಾಕರಣಾದಿಶಾಸ್ತ್ರಗಳ ಪ್ರತಿವಾದಿಗಳನ್ನು ಹೇಗೆ ಗೆದ್ದಾರು? ಈ ರೀತಿ ಹೇಳಿದ್ದರಿಂದ ಪದಾದಿಗಳ ಜ್ಞಾನದಲ್ಲಿ ಬೇರೆಯವರಂತೆ ಅಲ್ಲದೆ ವಿಶಿಷ್ಟವಾದ ಪ್ರೌಢತೆಯನ್ನು ಗುರುಗಳಾದ ಅಕ್ಷೋಭ್ಯತೀರ್ಥರಲ್ಲಿದೆ ಎಂದು ಹೇಳಿದಂತಾಯಿತು. ಆದ್ದರಿಂದ ನನಗೆ ಉಪದೇಶಮಾಡುವ ಸಾಮರ್ಥ್ಯ ಅವರಿಗೆ ಇದೆ ಎಂದು ಪ್ರತ್ಯೇಕ ಹೇಳಬೇಕೇನು?

ಇಲ್ಲಿ 'ಪದವಾಕ್ಯಪ್ರಮಾಣಜ್ಞಾನ್ ಗುರೂನ್' ಎಂಬುದಕ್ಕೆ ವಿಶೇಷಣವಿಶೇಷ್ಯಭಾವ ಇರುವುದರಿಂದ ಪದಾದಿಶಾಸ್ತ್ರಗಳನ್ನು ಉಪದೇಶಿಸುವವರು ಎಂದು ಹೇಗೆ ಸೂಚನೆಮಾಡಿದ್ದಾರೋ ಅದೇ ರೀತಿ 'ಪ್ರತಿವಾದಿಮದಚ್ಛಿದಃ ಗುರೂನ್' ಎಂದು ವಿಶೇಷಣವಿಶೇಷ್ಯಭಾವ ಸ್ವೀಕರಿಸುವುದರಿಂದ ಪ್ರತಿ-ವಾದಿಗಳ ಮದವನ್ನು ಸೀಳುವಂತಹ ಕ್ರಮಗಳನ್ನೂ ನನಗೆ ಉಪದೇಶಿಸಿದ್ದಾರೆ ಎಂದೂ ಸೂಚಿತವಾಗಿದೆ.

## ಶ್ರೀಮದಕ್ಷೋಭ್ಯತೀರ್ಥಾಖ್ಯಾನ್

(ಲಘುರಸರಂಜನೀ) — ಶ್ರೀಮತ್ = ಮೋಕ್ಷಸಂಪದ್ವಿಶಿಷ್ಟಂ ಅಕ್ಷೋಭ್ಯಂ = ಅನ್ಯೈಃ ಕ್ಷೋಭಯಿತುಮಶಕ್ಯಂ ತೀರ್ಥಂ = ವೇದೇತಿಹಾಸಪುರಾಣತನ್ಮೀಮಾಂಸಾರೂಪಂ ಸಚ್ಛಾಸ್ತ್ರಂ ಯೇಷಾಂ ತೇ ಶ್ರೀಮದಕ್ಷೋಭ್ಯತೀರ್ಥಾಃ । ಶ್ರೀಮದಕ್ಷೋಭ್ಯತೀರ್ಥಾ ಇತಿ ಆಖ್ಯಾ ಯೇಷಾಂ ತೇ ತಥೇತಿ । ಅತ್ರಾಪಿ ತೀರ್ಥಸ್ಯಾಕ್ಷೋಭ್ಯತ್ವವಿಶೇಷಣೇನ ಮೋಕ್ಷಶಾಸ್ತ್ರೇಽಪಿ ತೇ ಪ್ರೌಢಾ ಏವೇತಿ ಲಭ್ಯತೇ ।

ಶ್ರೀಮದಕ್ಷೋಭ್ಯತೀರ್ಥಾಖ್ಯಾನ್ - ಶ್ರೀಮತ್ ಎಂದರೆ ಮೋಕ್ಷಸಂಪತ್ತಿನಿಂದ ಕೂಡಿದ್ದು ಎಂದರ್ಥ. ಅಂತಹ ಮೋಕ್ಷಸಂಪದ್ವಿಶಿಷ್ಟವಾದ ಅಕ್ಷೋಭ್ಯಂ - ಅಂದರೆ ಬೇರೆಯವರಿಂದ ಕ್ಷೋಭೆಗೊಳ್ಳದ, ತೀರ್ಥ ಅಂದರೆ ವೇದಇತಿಹಾಸಪುರಾಣತನ್ಮೀಮಾಂಸಾರೂಪವಾದ ಒಳ್ಳೆಯ ಶಾಸ್ತ್ರವನ್ನು ಯಾರು ಉಳ್ಳವರೋ ಅವರೇ ಅಕ್ಷೋಭ್ಯತೀರ್ಥರು. ಇಂತಹವರು ಶ್ರೀಮಂತಃ - ಸಂಪದ್ಯುಕ್ತರು ಅಂದರೆ ಮೋಕ್ಷಶಾಸ್ತ್ರವಾದ ವೇದ ಮೊದಲಾದವುಗಳಲ್ಲಿ ಪ್ರೌಢರು ಎಂದು ಅಭಿಪ್ರಾಯ.

ಶ್ರೀಮಂತಃ ಚ ತೇ ಅಕ್ಷೋಭ್ಯತೀರ್ಥಾಖ್ಯಾಶ್ಚ - ಶ್ರೀ ಎಂದರೆ ಸಂಪತ್ತು ಪ್ರಕೃತದಲ್ಲಿ ಶಿಷ್ಯಸಂಪತ್ತು, ಹಾಗಾಗಿ ಶಿಷ್ಯಸಂಪತ್ತನ್ನು ಪಡೆದ ಅಕ್ಷೋಭ್ಯತೀರ್ಥರು ಎಂದು ಈ ಪದದ ಅರ್ಥ.

## ಶ್ರೀಮದಕ್ಷೋಭ್ಯತೀರ್ಥರೆಂದು ಮಧ್ವಾಚಾರ್ಯರ ಹೆಸರು

(ಏರೀಬಾಳಾಚಾರ್ಯರು) – ಕ್ಷೋಭ್ಯೋ ನ ಭವತೀತಿ = ಅಕ್ಷೋಭ್ಯಃ । ತೀರ್ಥೇ = ಅಧ್ವರೇ ಅಕ್ಷೋಭ್ಯಃ ಅಕ್ಷೋಭ್ಯತೀರ್ಥಃ । ರಾಜದಂತಾದಿಷೂಪಸಂಖ್ಯೇಯತಯಾ ಪರನಿಪಾತಃ । ಶ್ರೀಮಾಂಶ್ಚಾಸೌ ಅಕ್ಷೋಭ್ಯತೀರ್ಥಶ್ಚ ತಥೋಕ್ತಃ । ಶ್ರೀಮಧ್ವಾಚಾರ್ಯಃ ತಸ್ಮಾತ್ ಆಖ್ಯಾ = ನಾಮ ಯೇಷಾಂ ತೇ ತಥೋಕ್ತಾಃ ತಾನ್ । ಶ್ರೀಮಧ್ವಾಚಾರ್ಯಪ್ರದತ್ತಸ್ವಾಭಿಧಾನಾತ್ ಗುರೂನಿತ್ಯರ್ಥಃ । ಶ್ರೀಮಧ್ವಾಚಾರ್ಯಃ ಸ್ವಪ್ರಿಯಶಿಷ್ಯಸ್ಯಾಧ್ವರಮುಪಾಗಮ್ಯ ತದ್ವಿಘಾತುಕಾನ್ ದುರ್ಮದಾನ್ ಪಂಡಿತಂಮನ್ಯಾನ್ ವಿಜಿತ್ಯ ವಿದ್ರಾವ್ಯ ತಂ ಧರ್ಮರಾಜಂ ಭೀಮ ಇವ ಸಾಧ್ವಯಾಜಯದಿತಿ ಶ್ರೀಸುಮಧ್ವವಿಜಯೇ ನವಮೇ ಸರ್ಗೇ ಪ್ರಸಿದ್ಧೇಯಂ ಕಥಾ ವಿಸ್ತರಭಿಯಾ ತದ್ವಚನಾನಿ ನೇಹೋದಾಹರಿಷ್ಯಾಮಃ ।

ಕ್ಷೋಭ್ಯಃ ನ ಭವತಿ ಇತಿ ಅಕ್ಷೋಭ್ಯಃ, ತೀರ್ಥೇ = ಅಧ್ವರೇ ಅಕ್ಷೋಭ್ಯಃ ಅಕ್ಷೋಭ್ಯತೀರ್ಥಃ. ಶ್ರೀಮಾಂಶ್ಚಾಸೌ ಅಕ್ಷೋಭ್ಯತೀರ್ಥಶ್ಚ ಶ್ರೀಮದಕ್ಷೋಭ್ಯತೀರ್ಥಃ = ಮಧ್ವಾಚಾರ್ಯಃ. ತಸ್ಮಾದಾಖ್ಯಾ = ನಾಮ ಯೇಷಾಂ ತೇ ತಥೋಕ್ತಾಃ ತೇ ತಾನ್ - ಇದರ ಅರ್ಥ ಹೀಗೆ. ಯಾವುದು ಕ್ಷೋಭೆಗೊಳಗಾಗುವುದಿಲ್ಲವೋ ಅದನ್ನು ಅಕ್ಷೋಭ್ಯ ಎನ್ನುವರು. ತೀರ್ಥ ಎಂದರೆ ಯಜ್ಞ ಎಂದರ್ಥ. ಯಜ್ಞದಲ್ಲಿ ಯಾರು ಕ್ಷೋಭೆಗೊಳಗಾಗುವುದಿಲ್ಲವೋ ಅವರು ಅಕ್ಷೋಭ್ಯತೀರ್ಥರು. ಪೂಜ್ಯ-

ರಾದವರು ಆ ಅಕ್ಷೋಭ್ಯತೀರ್ಥರು ಅರ್ಥಾತ್ ಇಲ್ಲಿ ಮಧ್ವಾಚಾರ್ಯರಿಗೆ ಅಕ್ಷೋಭ್ಯತೀರ್ಥರು ಎಂದು ಹೆಸರು. ಅವರಿಂದ ಯಾರಿಗೆ ಅದೇ ರೀತಿಯ ಹೆಸರು ಬಂದಿದೆಯೋ ಅವರೇ ಅಕ್ಷೋಭ್ಯತೀರ್ಥರು.

ಮಧ್ವವಿಜಯದ ಒಂಭತ್ತನೇ ಸರ್ಗದಲ್ಲಿ ಪ್ರಸಿದ್ಧವಾದ ಕಥೆ ಹೀಗಿದೆ - ಮಧ್ವಾಚಾರ್ಯರು ತಮ್ಮ ಪ್ರಿಯಶಿಷ್ಯನು ಆಚರಣೆ ಮಾಡುತ್ತಿದ್ದ ಯಜ್ಞದ ಸಂದರ್ಭದಲ್ಲಿ ಬಂದು ಅದಕ್ಕೆ ಘಾತುಕರಾದ ದುರ್ಮದದಿಂದ ಕೂಡಿದ ತಾವೇ ಪಂಡಿತರು ಎಂದು ಭಾವಿಸಿದವರನ್ನು ಗೆದ್ದು ಓಡಿಸಿ ಧರ್ಮರಾಜನನ್ನು ಭೀಮನಂತೆ ಚೆನ್ನಾಗಿ ಯಾಗ ಮಾಡಿಸಿದರು ಎಂದು.

* ವಾಸುದೇವದಯಿತೋ ಮಹಿಷ್ಠಧೀಃ ವಾಸುದೇವಮಥಸಾಧ್ವಯಾಜಯತ್ ।
ಧರ್ಮಸೂನುಮಿವ ಧಾರ್ಮಿಕಂ ಪುರಾ ಭೀಮಮೂರ್ತಿರಯಮೇವ ಮೇವ ಭೂಸುರಮ್ 47

## ಪ್ರಕಾರಾಂತರೇಣ ಅಕ್ಷೋಭ್ಯ ಎಂಬ ಪದ ಆಚಾರ್ಯರನ್ನು ಹೇಳುತ್ತಿದೆ

(ಏರೀಬಾಳಾಚಾರ್ಯರು) – ಅಥವಾ ಶ್ರೀರ್ವಿಷಮಸ್ಯಾಸ್ತೀತಿ ಶ್ರೀಮಾನ್ ಸರ್ಪಃ । ತೇನ ಕ್ಷೋಭ್ಯೋ ನ ಭವತೀತಿ ಅಕ್ಷೋಭ್ಯಃ ಶ್ರೀಮಧ್ವಾಚಾರ್ಯಃ । ತದುಕ್ತಂ ಸುಮಧ್ವವಿಜಯೇ –

ಕ್ವಚಿದಮುಂ ನಿಜಿಘಾಂಸುರಶಾಂತಿಮಾನ್ ಉಪಸಸರ್ಪ ಸ ಸರ್ಪಮಯೋಽಸುರಃ ।
ತ್ವರಿತಮುದ್ಯತವಿಸ್ತೃತಮಸ್ತಕಃ ಪ್ರತಿದದಂಶ ಯದೈನಮವಿಕ್ಷತಮ್ ।
ಮೃದುಪದಾರುಣಚಾರುತರಾಂಗುಲೀವಿಹೃತಿಪಿಷ್ಟತನುಃ ಪ್ರತತಾಮ ಸಃ ॥' ಶಿಷ್ಟಂ ಪ್ರಾಗ್ವತ್ ।

ಅಥವಾ ಶ್ರೀಃ ವಿಷಮ್ ಅಸ್ಯ ಅಸ್ತೀತಿ ಶ್ರೀಮಾನ್ ಸರ್ಪಃ - ತೇನ ಕ್ಷೋಭ್ಯೋ ನ ಭವತೀತಿ ಅಕ್ಷೋಭ್ಯಃ ಶ್ರೀ ಎಂದರೆ ವಿಷ, ವಿಷವುಳ್ಳದ್ದು ಶ್ರೀಮಾನ್ ಅಂದರೆ ಸರ್ಪ. ಸರ್ಪದಿಂದ ಕ್ಷೋಭೆ-ಗೊಳಗಾಗದವರು ಅಕ್ಷೋಭ್ಯರು ಅಂದರೆ ಮಧ್ವಾಚಾರ್ಯರು. ಮಧ್ವವಿಜಯದಲ್ಲಿ ಹೀಗೆ ತಿಳಿಸಿದ್ದಾರೆ. -

ಅವಿರಲೈರ್ಗರಲೋಷ್ಮಭಿರಾಕುಲೀಕೃತಸಮಸ್ತಜನೋ ವಿಚಚಾರ ಯಃ ।
ಕ್ವಚಿದಮುಂ ನಿಜಿಘಾಂಸುರಶಾಂತಿಮಾನ್ ಉಪಸಸರ್ಪ ಸ ಸರ್ಪಮಯೋಽಸುರಃ ॥3-38॥

ತ್ವರಿತಮುದ್ಯತವಿಸ್ತೃತಮಸ್ತಕಃ ಪ್ರತಿದದಂಶ ಯದೈನಮವಿಕ್ಷತಮ್ ।
ಮೃದುಪದಾರುಣಚಾರುತರಾಂಗುಲೀವಿಹೃತಿಪಿಷ್ಟತನುಃ ಪ್ರತತಾಮ ಸಃ ॥ 3-39॥ ಇತ್ಯಾದಿ.

### ಉಪಸಸರ್ಪ ಸ ಸರ್ಪಮಯೋಽಸುರಃ - ಮಧ್ವವಿಜಯಃ

ಅಶಾಂತಿಮಾನ್ = ಮಂತ್ರ, ಔಷಧಾದಿಗಳಿಂದ ಶಾಂತಿಯಿಲ್ಲದ. ಯಃ = ಯಾವ, ಸರ್ಪಮಯಃ =

ಸರ್ಪದ ಆಕೃತಿಯುಳ್ಳ , ಅಸುರಃ = ದೈತ್ಯನು, ಅವಿರಲೈಃ = ಬಹಳವಾದ, ಗರಲ = ವಿಷದ, ಊಷ್ಮಭಿಃ = ಬೇಗೆಗಳಿಂದ, ಆಕುಲೀಕೃತ = ವ್ಯಥೆಗೊಳಿಸಲ್ಪಟ್ಟ (ಹೆದರಿಸಲ್ಪಟ್ಟ), ಸಮಸ್ತಜನಃ = ಆ ಪ್ರದೇಶದ ಎಲ್ಲ ಜನರುಳ್ಳವನಾಗಿ, ವಿಚಚಾರ = ಸಂಚರಿಸಿದನೋ, ಸಃ = ಆ ದೈತ್ಯನು, ಅಮುಂ = ಈ ವಾಸುದೇವನನ್ನು , ನಿಜಿಘಾಂಸುಃ = ಕೊಲ್ಲಲು ಇಚ್ಛೆಯುಳ್ಳವನಾಗಿ, ಕ್ವಚಿತ್ = ಒಂದೆಡೆಯಲ್ಲಿ , ಉಪಸಸರ್ಪ = ಸಮೀಪಿಸಿದನು. ಸಃ = ಆ ಸರ್ಪಾಕಾರನಾದ ದೈತ್ಯನು, ತ್ವರಿತಂ = ಜಾಗ್ರತೆಯಾಗಿ, ಉದ್ಯತ = ಎತ್ತಲ್ಪಟ್ಟ, ವಿಸ್ಮೃತಮಸ್ತಕಃ = ಬಿಡಿಸಿದ ಹೆಡೆಯುಳ್ಳ-ವನಾಗಿ, ಯದಾ = ಯಾವಾಗ, ಅವಿಕ್ಷತಂ = ಘಾಯವಿಲ್ಲದ, ಏನಂ= ಈ ವಾಸುದೇವನನ್ನು , ಪ್ರತಿದದಂಶ = ಕಚ್ಚಿದನೋ, (ಆಗ) ಪ್ರಭು = ಸಮರ್ಥನಾದ ವಾಸುದೇವನ, ಪದ = ಪಾದದ, ಅರುಣ = ಕೆಂಪಾದ, ಚಾರುತರ = ಅತ್ಯಂತ ಮನೋಹರವಾದ, ಅಂಗುಲೀ = ಬೆರಳಿನ, ವಿಹೃತಿ = ಲೀಲೆಯಿಂದ, ಪಿಷ್ಟ = ಪುಡಿಮಾಡಲ್ಪಟ್ಟ, ತನುಃ = ಶರೀರವುಳ್ಳವನಾಗಿ, ಪ್ರತತಾಮ = ಆಯಾಸಗೊಂಡನು.

## ಮಾಯಿಭಿಕ್ಷುವಿನಿಂದ ಅಕ್ಷೋಭ್ಯರಾದ ತೀರ್ಥರು

(ಏರೀಬಾಳಾಚಾರ್ಯರು) – ಯದ್ವಾ ಶ್ರೀಃ ಪಾಂಡಿತ್ಯಸಂಪತ್ತಿರಸ್ಯಾಸ್ತೀತಿ ಶ್ರೀಮಾನ್ ವಿದ್ಯಾರಣ್ಯಃ = ಮಾಯಿಭಿಕ್ಷುಃ ತೇನ ಅಕ್ಷೋಭ್ಯಶ್ಚಾಸೌ ತೀರ್ಥಂ ಗುರುಶ್ಚೇತಿ ಶ್ರೀಮದಕ್ಷೋಭ್ಯತೀರ್ಥಮ್ ಇತ್ಯಾಖ್ಯಾ ಯೇಷಾಂ ತೇ ತಥೋಕ್ತಾಃ ತಾನ್ ಗುರೂನ್ ಇತ್ಯರ್ಥಃ । ಅಸ್ಯೈವ ತಾತ್ಪರ್ಯಕಥನಂ – ಪ್ರತಿವಾದಿಮದಚ್ಛಿದಃ ಇತಿ ॥ ತದುಕ್ತಂ ಸತ್ಯನಿಧಿವಿಲಾಸೇ —

ಮಿಥ್ಯಾವಾದೀಭಸಂಸತ್-ಪ್ರಕಟಿತವಚನಾಟೋಪಸಿಂಹಸ್ವರಸ್ಯ<br>
ಕ್ಷೋಣೀಶದ್ವಾರದೇಶೋದ್ಘುಷಿತನಿಜಜಯಾಪೂರಿತಾಶಾಂತರಸ್ಯ ।<br>
ಅಕ್ಷೋಭ್ಯಾಖ್ಯಸ್ಯ ಭಿಕ್ಷೋಃ ಪ್ರಥಯತಿ ಜಯಿತಾಮುತ್ತಮಾರಣ್ಯವಾದೇ<br>
ವೇದಾಂತಾಚಾರ್ಯನಾಮ್ನಾ ವಿರಚಿತಜಯಪದ್ಯಾತ್ಮಕೋಽಯಂ ನಿಬಂಧಃ ॥<br>
ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ ।<br>
ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥ – ಇತಿ ।

ಅಥವಾ, ಶ್ರೀ ಎಂದರೆ ಪಾಂಡಿತ್ಯ, ಅದೇ ಒಂದು ಸಂಪತ್ತು ಅದನ್ನುಳ್ಳವರು ಶ್ರೀಮಾನ್. ಅರ್ಥಾತ್ ವಿದ್ಯಾರಣ್ಯರು. ಅವರಿಂದ ಕ್ಷೋಭೆಗೊಳಗಾಗದವರು ಹಾಗೆ ನನಗೆ ಗುರುಗಳಾದವರು ಶ್ರೀಮದ-ಕ್ಷೋಭ್ಯತೀರ್ಥರು. ಇಂತಹ ಹೆಸರುಳ್ಳವರು ಶ್ರೀಮದಕ್ಷೋಭ್ಯತೀರ್ಥಾಖ್ಯರು ಎನ್ನಿಸುವರು. ಇದರ ತಾತ್ಪರ್ಯವನ್ನೇ ವಿವರಿಸಿರುವ ಪದ 'ಪ್ರತಿವಾದಿಮದಚ್ಛಿದಃ'. ಇದನ್ನು ಸತ್ಯನಿಧಿವಿಲಾಸದಲ್ಲಿ (ತೃತೀಯಸರ್ಗ 9-10) ಹೀಗೆ ತಿಳಿಸಿದ್ದಾರೆ.

## ಸತ್ಯನಿಧಿವಿಲಾಸದಲ್ಲಿ ಅಕ್ಷೋಭ್ಯತೀರ್ಥರ ವರ್ಣನೆ

ಮಿಥ್ಯಾವಾದೀಭಸಂಸತ್-ಪ್ರಕಟಿತವಚನಾಟೋಪಸಿಂಹಸ್ವರಸ್ಯ
ಕ್ಷೋಣೀಶದ್ವಾರದೇಶೋದ್ಘುಷಿತನಿಜಜಯಾಪೂರಿತಾಶಾಂತರಸ್ಯ ।
ಅಕ್ಷೋಭ್ಯಾಖ್ಯಸ್ಯ ಭಿಕ್ಷೋಃ ಪ್ರಥಯತಿ ಜಯಿತಾಮುತ್ತಮಾರಣ್ಯವಾದೇ
ವೇದಾಂತಾಚಾರ್ಯನಾಮ್ನಾ ವಿರಚಿತಜಯಪದ್ಯಾತ್ಮಕೋಽಯಂ ನಿಬಂಧಃ ॥

— ಅಕ್ಷೋಭ್ಯತೀರ್ಥರಿಗೆ ಮಾಯಾವಾದಿಸನ್ಯಾಸಿಯೊಂದಿಗೆ ವಾದನಡೆದಾಗ ಮಧ್ಯಸ್ಥರಾಗಿ ವೇದಾಂತಾಚಾರ್ಯರೆಂಬ ಆಚಾರ್ಯರು ಅಕ್ಷೋಭ್ಯತೀರ್ಥರ ಜಯವನ್ನು ಪ್ರಕಾಶಪಡಿಸುವ ಒಂದು ಪದ್ಯವನ್ನು ರಚನೆ ಮಾಡಿದ್ದಾರೆ. ಅಕ್ಷೋಭ್ಯತೀರ್ಥರು ಹೇಗಿದ್ದರು? ಜಗತ್ತನ್ನು ಮಿಥ್ಯೆ ಎನ್ನುವ ವಾದಿಗಳೇ ಆನೆಗಳು. ಆ ಆನೆಗಳ ಸಭೆಯಲ್ಲಿ ಸಿಂಹಧ್ವನಿಯನ್ನು ಮಾಡತಕ್ಕವರಾಗಿದ್ದರು. ರಾಜದ್ವಾರಗಳಲ್ಲಿ ಉದ್ಘೋಷಣೆಗೊಂಡ ಅವರ ಜಯವು ದಿಕ್ಕು ದಿಕ್ಕುಗಳಲ್ಲಿ ವ್ಯಾಪ್ತವಾಗಿತ್ತು.

— ಮಿಥ್ಯೇತಿ ॥ ಮಿಥ್ಯಾವಾದಿನಃ ಏವ ಇಭಾಃ = ಗಜಾಃ ತೇಷಾಂ ಸಂಸದಿ = ಸಭಾಯಾಂ 'ಸಭಾಸಮಿತಿಸಂಸತ್' ಇತ್ಯಮರಃ । ಪ್ರಕಟಿತಾಃ ವಚನಾನಾಂ ಆಟೋಪಾಃ ಸ್ಫೂರ್ತಯಃ ಏವ ಸಿಂಹಸ್ವನಾಃ ಯಸ್ಯ ತಸ್ಯ । ತಥೋಕ್ತಸ್ಯ ಏತದ್ವಚನಾಟೋಪಃ ಮಿಥ್ಯಾವಾದಿನಾಂ ಪಲಾಯನಹೇತು-ರಿತಿ ಭಾವಃ । ಕ್ಷೋಣೀಶಾನಾಂ ರಾಜ್ಞಾಂ ದ್ವಾರದೇಶೇ ಉದ್ಘುಷಿತಃ ಪ್ರಕಾಶಿತಃ ಯೋ ನಿಜಜಯಃ ಸ್ವೋತ್ಕರ್ಷಃ, ತೇನ ಆಪೂರಿತಾನಿ ಆಶಾಂತರಾಣಿ ದಿಗಂತರಾಣಿ ಯಸ್ಯ ತಸ್ಯ । ಅಕ್ಷೋಭ್ಯಾಖ್ಯಸ್ಯ ಭಿಕ್ಷೋಃ ಉತ್ತಮಾರಣ್ಯೇನ ಕೇನಚಿತ್ ಮಾಯಾವಾದಿಭಿಕ್ಷುಣಾ ಸಹ ವಾದೇ ಪ್ರಾಪ್ತೇ ಸತಿ ವೇದಾಂತಾಚಾರ್ಯನಾಮ್ನಾ ಮಧ್ಯಸ್ಥೇನ ವಿರಚಿತಃ ಜಯಪದ್ಯಾತ್ಮಕಃ ಜಯಪ್ರಕಾಶಕಶ್ಲೋಕ-ರೂಪಃ ಅಯಂ ನಿಬಂಧಃ ಸಂದರ್ಭಃ ಜಯಿತಾಂ ವಿಜಯಿತ್ವಂ ಪ್ರಥಯತಿ ಪ್ರಖ್ಯಾಪಯತಿ ।

## ಅಸಿನಾ ತತ್ವಮಸಿನಾ

ಅಸಿನಾ ತತ್ವಮಸಿನಾ ಪರಜೀವಪ್ರಭೇದಿನಾ ।
ವಿದ್ಯಾರಣ್ಯಮಹಾರಣ್ಯ(ಅವೈದಿಕೋತ್ತಮಾರಣ್ಯ)ಮಕ್ಷೋಭ್ಯಮುನಿರಚ್ಛಿನತ್ ॥ - ಎಂದು.

ತಮೇವ ನಿಬಂಧಂ ಪಠತಿ — ಅಸಿನೇತಿ ॥ ಅಕ್ಷೋಭ್ಯಮುನೇಃ ಉತ್ತಮಾರಣ್ಯೇನ ಸಹ ಜೀವಬ್ರಹ್ಮಣೋಃ ಭೇದಾಭೇದಕಥಾಯಾಂ ಪ್ರವೃತ್ತಾಯಾಂ, ತೇನಾಭೇದೇ ತತ್ವಮಸೀತಿ ವಾಕ್ಯಂ ಪ್ರಮಾಣೀಕೃತಮಿತಿ ಕಥಾ ಬಹಿರೇವಾನುಸಂಧೇಯಾ । ಅಕ್ಷೋಭ್ಯಮುನಿಃ, ಪರಃ ಪರಮಾತ್ಮಾ, ಜೀವಃ ಸಂಸಾರೀ ತೌ ಪ್ರಭೇತ್ತುಮ್ ಅತ್ಯಂತಭಿನ್ನತಯಾ ಪ್ರತಿಪಾದಯಿತುಂ ಶೀಲಂ ತಾತ್ಪರ್ಯಮಸ್ತೀತಿ ಪರಜೀವ-ಪ್ರಭೇದೀ । ತೇನ । 'ಸುಪ್ಯಜಾತೌ ಣಿನಿಸ್ತಾಚ್ಛೀಲ್ಯ' (3.2.78) ಇತಿ ಣಿನಿಃ ।

ಯದ್ವಾ ಪರಜೀವಯೋಃ ಪ್ರಕೃಷ್ಟಭೇದೋಽತ್ಯಂತಭೇದಃ ಪ್ರತಿಪಾದ್ಯತಯಾ ಅಸ್ತೀತಿ ಪರಜೀವ-ಪ್ರಭೇದೀ । ತೇನ । 'ಅತ ಇನಿಠನಾವಿತಿ' (5.2.115) ಮತ್ವರ್ಥೀಯ ಇನಿಃ । ಅಸಿಪಕ್ಷೇ ಪರಂ ಶತ್ರುರೂಪಂ ಜೀವಂ ಪ್ರಾಣಿನಂ ವಿದಾರಯತೀತಿ ಪರಜೀವಪ್ರಭೇದೀ । ತೇನ । ತತ್ವಮಸಿನಾ ಅತ್ರ ತತ್ವಮಸೀತಿ ಶಬ್ದಸ್ವರೂಪಂ ನಿಗೃಹ್ಯತೇ । ಅನ್ಯಥಾ ವಾಕ್ಯಾತ್ ಸುಬುತ್ಪತ್ತಿರ್ನ ಸ್ಯಾತ್ । ಶಬ್ದರೂಪ-ಪಕ್ಷೇ ತು ತಸ್ಯ ಅನುಕರಣಶಬ್ದತ್ವೇನ ಪದತ್ವಾತ್ ಸ್ವಾದ್ಯುತ್ಪತ್ತ್ಯುಪಪತ್ತೇಃ । ತೇನ ತ್ವಮ್ । ತಸ್ಮಾತ್ ತ್ವಮ್ । ತಸ್ಯ ತ್ವಂ ತಸ್ಮಿನ್ನಿತಿ ವಾ ಇತಿ ವಿಗೃಹ್ಯ ಸಮಾಸಪಕ್ಷೇ ಅತ್ಯಂತಭೇದಸ್ಯೈವ ಪ್ರಾಪ್ತೇಃ ।

ವ್ಯಾಸಪಕ್ಷೇಽಪಿ ಸುಪಾಂ ಸುಲುಗಿತ್ಯಾದಿನಾ ಉಕ್ತತೃತೀಯಾದಿವಿಭಕ್ತೀನಾಂ ತು ಲುಗ್ವಿಧಾನಾ-ಶ್ರಯಣಾದ್ವಾ । ಭೇದದೃಷ್ಟಾಂತಾನುಸಾರೇಣ ಅತ ಇತಿ ಅಕಾರಪ್ರಶ್ಲೇಷಾದ್ವಾ ಅತ್ಯಂತಭೇದಸ್ಯೈವ ಪ್ರಾಪ್ತೇಃ । ಪಕ್ಷದ್ವಯೇಽಪಿ ಸಾಮಾನಾಧಿಕರಣ್ಯಮ್, ಅಭೇದಾಂಗೀಕಾರೇ ಪದದ್ವಯಲಕ್ಷಣಾಯಾಃ ಮಾನಾಂತರವಿರೋಧಸ್ಯ ಚಾಪತ್ತೇಃ । ತಸ್ಮಾತ್ ಪರಜೀವಪ್ರಭೇದೀ ತತ್ವಮಸಿಶಬ್ದಃ । ತೇನ ಅಸಿನಾ ಖಡ್ಗೇನ ಅವೈದಿಕೋ ಯ ಉತ್ತಮಾರಣ್ಯಃ ಸ ಏವಾರಣ್ಯಮಿತಿ । ಅವೈದಿಕೋತ್ತಮಾರಣ್ಯಂ ಅತ್ರ ಅರಣ್ಯಶಬ್ದಸ್ಯ ಅಸಿನಾಽಚ್ಛಿನದಿತಿ ಲಿಂಗಾದ್ವಾ, ತಂತ್ರಧರ್ಮಾದ್ವಾ ವಿಭಾಗ ಆಶ್ರೀಯತೇ ।

'ಆವೃತ್ತಿರಭಿನ್ನಶಬ್ದಾರ್ಥೇ ವಾಕ್ಯೇ ಸಕೃದಪಿ ಶ್ರುತೇಃ ।
ಲಿಂಗಾದ್ವಾ ತಂತ್ರಧರ್ಮಾದ್ವಾ ವಿಭಾಗೋ ವ್ಯವತಿಷ್ಠತೇ ॥'

ಇತ್ಯುಕ್ತೇಃ । ಅಚ್ಛಿನತ್ = ಅಖಂಡಯತ್ । ತಸ್ಯ ಉತ್ತಮಾರಣ್ಯಸ್ಯ ಛೇದನೇ ದೋಷೋ ನಾಸ್ತೀತಿ ಸೂಚನಾಯ ಅವೈದಿಕೇತಿ ವಿಶೇಷಣಮ್ । ತಸ್ಯ ಪ್ರಚ್ಛನ್ನಬೌದ್ಧತ್ವಾತ್ ವೈದಿಕೈಸ್ತತ್ ಖಂಡನಂ ಮಂಡನಮೇವೇತಿ ಭಾವಃ ।

ಅಕ್ಷೋಭ್ಯಮುನಿಗಳಿಗೆ ಉತ್ತಮಾರಣ್ಯರ(ವಿದ್ಯಾರಣ್ಯರ) ಜೊತೆಗೆ ಜೀವಬ್ರಹ್ಮರ ವಿಷಯದಲ್ಲಿ ಭೇದವೋ ಅಭೇದವೋ ಎಂಬ ವಾದವು ನಡೆಯಿತು. ಆಗ ಪ್ರತಿವಾದಿಯು ಅಭೇದದ ವಿಷಯದಲ್ಲಿ ತತ್ವಮಸಿ ಎಂಬ ವಾಕ್ಯವನ್ನು ಪ್ರಮಾಣವನ್ನಾಗಿ ಕೊಟ್ಟರು ಎಂಬ ಕಥೆಯನ್ನು ಅನುಸಂಧಾನ ಮಾಡಿಕೊಳ್ಳಬೇಕು. ಇದರ ನಂತರ ಈ ಶ್ಲೋಕದ ಅರ್ಥವನ್ನು ತಿಳಿಯಬೇಕು. ಅಕ್ಷೋಭ್ಯಮುನಿಗಳು ಪರಜೀವಪ್ರಭೇದಿನಾ ಅಂದರೆ ಪರ ಎಂದರೆ ಪರಮಾತ್ಮ ಜೀವ ಎಂದರೆ ಸಂಸಾರಿ ಅವರಿಬ್ಬರೂ ಅತ್ಯಂತ ಭಿನ್ನರು ಎಂದು ಪ್ರತಿಪಾದನೆ ಮಾಡುವುದರಲ್ಲಿ ತಾತ್ಪರ್ಯವುಳ್ಳ ಅಥವಾ ಜೀವ ಬ್ರಹ್ಮರ ಅತ್ಯಂತಭೇದವು ಪ್ರತಿಪಾದಿಸಲ್ಪಟ್ಟದ್ದಾಗಿ ಯಾವುದಕ್ಕೆ ಇದೆಯೋ ಅದು. ಇನ್ನು ಖಡ್ಗಪಕ್ಷದಲ್ಲಿ (ಅಸಿ ಎಂದರೆ ಖಡ್ಗ) ಪರಜೀವಪ್ರಭೇದಿ ಎಂದರೆ ಪರ ಎಂದರೆ ಶತ್ರು, ಜೀವ ಎಂದರೆ ಪ್ರಾಣಿ. ಅದನ್ನು ಸೀಳಿಹಾಕುವ ಎಂದರ್ಥ. ತತ್ವಮಸಿನಾ ಎಂದರೆ ತತ್ವಮಸಿ ಎಂಬ ವಾಕ್ಯವನ್ನು ಗ್ರಹಿಸ-ಬೇಕು. ಇಂತಹ ವಾಕ್ಯದಿಂದ ಸೀಳಿಹಾಕಿದರು (ಸೋಲಿಸಿದರು). ಹೇಗೆಂದರೆ ತತ್ವಮಸಿ ಎನ್ನುವುದಕ್ಕೆ

ತತ್ ತ್ವಂ ಅಸಿ = ಅದು ನೀನಾಗಿದ್ದಿ ಎಂದಲ್ಲದೆ ತೇನ ತ್ವಂ ಅಸಿ = ಅವನಿಂದ ನೀನು, ತಸ್ಮಾತ್ ತ್ವಂ ಅಸಿ, ತಸ್ಯ ತ್ವಂ ಅಸಿ, ತಸ್ಮಿನ್ ತ್ವಂ ಅಸಿ ಎಂದು ನಾನಾರೀತಿಯಾಗಿ ವಿಗ್ರಹಮಾಡಿ ಸಮಾಸವಾಗಿದೆ ಎಂಬ ಪಕ್ಷವನ್ನು ತೋರಿಸಿ ಅತ್ಯಂತಭೇದವನ್ನೇ ತೋರಿಸಿದ್ದಾರೆ.

## ಪ್ರತಿವಾದಿಮದ – ಸೂಚಕ, ಉಪತಿಷ್ಠೇ - ವ್ಯಂಜಕ

(ಕಾಶೀ) – ಪ್ರತಿವಾದಿನಾಂ ಮದಃ ಸ್ವಪಕ್ಷಸಾಧಸಂಕಲ್ಪಸ್ತಚ್ಛಿದ ಇತ್ಯನೇನ 'ಅಸಂಶಯಃ ಸಂಶಯಚ್ಛಿತ್ ಗುರುಃ' ಇತ್ಯುಕ್ತಗುರುಲಕ್ಷಣವತ್ತ್ವಂ ಸೂಚಿತಮ್ । 'ಉಪತಿಷ್ಠೇ' ಇತ್ಯಾತ್ಮನೇ-ಪದಪ್ರಯೋಗೇಣ ಗುರೂಣಾಂ ದೇವಾವತಾರತ್ವಂ ವ್ಯಂಜಿತಮ್ । ದೇವಪೂಜಾದಾವ-ಪೂರ್ವಾತ್ ತಿಷ್ಠತೇರಾತ್ಮನೇಪದವಿಧಾನಾತ್ । ಪೂಜಾಯಾಮ್ ಇತ್ಯರ್ಥಃ ।

ಪ್ರತಿವಾದಿಮದಚ್ಛಿದಃ – ಪ್ರತಿವಾದಿಗಳ ಮದ ಎಂದರೆ ತಮ್ಮ ಪಕ್ಷಗಳನ್ನು ಸಾಧನೆ ಮಾಡುವ ಸಂಕಲ್ಪ. ಅದನ್ನು ಛಿದಃ ಎಂದರೆ ಭೇದಿಸುವವರು ಎಂದರ್ಥ. ಇದರಿಂದ ಅವರಲ್ಲಿ 'ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ' ಎಂಬಲ್ಲಿ ಹೇಳಿದ ಗುರುಗಳ ಲಕ್ಷಣವು ಇದೆ ಎಂದು ಸೂಚಿತವಾಯಿತು.

'ಉಪತಿಷ್ಠೇ' – ಉಪತಿಷ್ಠೇ ಎಂದು ಆತ್ಮನೇ ಪದವನ್ನು ಪ್ರಯೋಗಿಸಿದ್ದರಿಂದ ಗುರುಗಳು ದೇವತೆಗಳ ಅವತಾರ ಎಂಬುದನ್ನು ವ್ಯಕ್ತಮಾಡಿದ್ದಾರೆ.

* ಅಸಂಶಯಃ ಸಂಶಯಚ್ಛಿದ್ ಗುರುರುಕ್ತೋ ಮನೀಷಿಭಿಃ ।
ತಸ್ಮಾದ್ಬ್ರಹ್ಮಾ ಗುರುರ್ಮುಖ್ಯಸ್ಸರ್ವೇಷಾಮೇವ ಸರ್ವದಾ ॥ ಮ.ಭಾ.ತಾ.ನಿ. 1/121 ॥
ಅನ್ಯೇಽಪಿ ಸ್ವಾತ್ಮನೋ ಮುಖ್ಯಾಃ ಕ್ರಮಾದ್ಗುರವ ಈರಿತಾಃ ।

ಸ್ವಯಂ ಸಂಶಯವಿಲ್ಲದೇ ಪರರ ಸಂಶಯವನ್ನು ಭೇದಿಸುವವನನ್ನೇ ಜ್ಞಾನಿಗಳು ಗುರು ಎಂದು ಹೇಳುತ್ತಾರೆ. ಆದ್ದರಿಂದ ಎಲ್ಲರಿಗೂ ಮುಖ್ಯವಾದ ಗುರು ಬ್ರಹ್ಮನೇ. ಹಾಗೆಯೇ ತನಗಿಂತ ಮುಖ್ಯರಾದ ಬೇರೆ ಎಲ್ಲರೂ ಕ್ರಮವಾಗಿ ಗುರುಗಳಾಗಿದ್ದಾರೆ.

## ಶ್ರೀಮದಾನಂದತೀರ್ಥಾರ್ಯಸನ್ಮನಃ .. ಶ್ಲೋಕದ ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा –**

श्रीमदानन्दतीर्थार्यसन्मनःसरसीभुवि ।
अनुव्याख्याननलिने चञ्चरीकति मे मनः ॥७॥

ಅನ್ವಯಾರ್ಥ – ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ = ಶ್ರೀಮತ್ - ಒಳ್ಳೆಯ

ಕಾಂತಿಸಂಪನ್ನರಾದ; ಆನಂದತೀರ್ಥಾರ್ಯ - ಆನಂದತೀರ್ಥರೆಂಬ ಗುರುಗಳ, ಸನ್ಮನಃ - ನಿರ್ಮಲವಾದ ಮನಸ್ಸೆಂಬ, ಸರಸೀಭುವಿ - ಸರೋವರದಲ್ಲಿ ಹುಟ್ಟಿದ; ಅನುವ್ಯಾಖ್ಯಾನನಲಿನೇ = ಅನುವ್ಯಾಖ್ಯಾನವೆಂಬ ಕಮಲದಲ್ಲಿ; ಮೇ = ನನ್ನ; ಮನಃ = ಮನಸ್ಸು; ಚಂಚರೀಕತಿ = ಭ್ರಮರದಂತೆ ವರ್ತಿಸುತ್ತದೆ.

ಸಾರ - ಈ ಶ್ಲೋಕದಲ್ಲಿ ಟೀಕಾಚಾರ್ಯರು ತಾವು ಶ್ರೀಮನ್ನ್ಯಾಯಸುಧಾದಲ್ಲಿ ಏನು ಮಾಡುವರು ಎನ್ನುವುದನ್ನು ವ್ಯಕ್ತಪಡಿಸುತ್ತಾರೆ. ನನ್ನ ಮನಸ್ಸು ಭ್ರಮರದಂತೆ ಇದೆ. ಭ್ರಮರವು ಹೇಗೆ ಒಂದು ಸರೋವರದಲ್ಲಿ ಹುಟ್ಟಿದ ಕಮಲದಲ್ಲಿ ಪ್ರವೃತ್ತಿಯನ್ನು ಮಾಡುವುದೋ ಅದರಂತೆ ಶ್ರೀಮದಾನಂದತೀರ್ಥರೆಂಬ ಪೂಜ್ಯರ ನಿರ್ದುಷ್ಟವಾದ ಮನಸ್ಸೆಂಬ ಸರೋವರದಲ್ಲಿ ಹುಟ್ಟಿದ ಅನುವ್ಯಾಖ್ಯಾನವೆಂಬ ಕಮಲದಲ್ಲಿ ಅನೇಕ ರೀತಿಯಾಗಿ ಭ್ರಮರದಂತೆ ವರ್ತಿಸುತ್ತಿದೆ. ಹಾಗಾಗಿ ಅನೇಕ ರೀತಿಯಾಗಿ ವಿಶ್ಲೇಷಣೆಯನ್ನು ಅನುವ್ಯಾಖ್ಯಾನದ ವಾಕ್ಯಗಳಿಗೆ ಮಾಡುವೆನು ಎಂದು ಈ ಮೂಲಕ ಸೂಚಿಸಿದ್ದಾರೆ.

### ಸರಸೀಭುವಿ ಹಾಗೂ ಚಂಚರೀಕತಿ ಶಬ್ದಗಳ ವಿಚಾರ

**ಕಮ್ಬಾ** — श्रीमदानन्दतीर्थार्यसन्मनःसरसीभुवीति ॥ **'तृतीयादिषु भाषितपुंस्कं पुंवद्गालवस्य' इति सूत्रेण भाषितपुंस्कस्याजादितृतीयादिषु वैकल्पिकपुंवद्भावाद् ह्रस्वनुमोरभावः ।** चञ्चरीकतीति ॥ **चञ्चरीको भृङ्गः —**

'द्विरेफपुष्पलिट्-भृङ्गषट्-पदभ्रमरालयः ।
इन्दिन्दिरश्चञ्चरीको रोलम्बो बम्भरश्च सः ॥' - इत्यभिधानात् ।

**तद्वदाचरतीत्यर्थः । 'सर्वप्रातिपदिकेभ्यः क्विबाचारे' इति चञ्चरीकप्रातिपदिकादाचारार्थे क्विपि 'सनाद्यन्ता धातवः' इति धातुसञ्ज्ञायां शप्तिबादीति द्रष्टव्यम् ।**

"ಶ್ರೀಮದಾನಂದತೀರ್ಥಾರ್ಯಸನ್ಮನಃ ಸರಸೀಭುವಿ" ಎಂಬಲ್ಲಿ - "ತೃತೀಯಾದಿಷು ಭಾಷಿತಪುಂಸ್ಕಂ ಪುಂವತ್ ಗಾಲವಸ್ಯ" ಎಂಬ ಸೂತ್ರದಿಂದ ಪುಂ-ನಪುಂಸಕ ಲಿಂಗಗಳಲ್ಲಿ ಸಮಾನವಾದ ಪ್ರವೃತ್ತಿನಿಮಿತ್ತವುಳ್ಳ ಅಂದರೆ ಭಾಷಿತಪುಂಸ್ಕವಾದ ಶಬ್ದಕ್ಕೆ ಅಚ್-ಅಕ್ಷರವು ಮೊದಲಿರುವ ತೃತೀಯಾದಿ ವಿಭಕ್ತಿಗಳಲ್ಲಿ ವಿಕಲ್ಪವಾಗಿ ಪುಂವದ್ಭಾವವನ್ನು ವಿಧಾನ ಮಾಡಿದ್ದರಿಂದ ಸರಸೀಭುವಿ ಎನ್ನುವಲ್ಲಿ ಹ್ರಸ್ವ ಹಾಗೂ ನುಮ್-ಗಳು ಇರುವುದಿಲ್ಲ.

"ಚಂಚರೀಕತೀತಿ" - ಎಂಬಲ್ಲಿ ಚಂಚರೀಕ ಎಂದರೆ ಭ್ರಮರ ಎಂದರ್ಥ. "ದ್ವಿರೇಫ-ಪುಷ್ಪಲಿಟ್-ಭೃಂಗ- ಷಟ್ಪದ- ಭ್ರಮರ- ಆಲಯಃ । ಇಂದಿಂದಿರಃ- ಚಂಚರೀಕಃ ರೋಲಂಬೋ ಬಂಭರಶ್ಚ ಸಃ" - ಎಂಬ ಕೋಶವಿರುವುದರಿಂದ. ಇಂತಹ ಭೃಂಗದಂತೆ ಮನಸ್ಸು ಆಚರಿಸುತ್ತದೆ ಎಂದರ್ಥ.

"ಸರ್ವಪ್ರಾತಿಪದಿಕೇಭ್ಯಃ ಕ್ವಿಪ್ ಆಚಾರೇ" - ಎಲ್ಲ ಪ್ರಾತಿಪದಿಕಗಳ ಪರಕ್ಕೆ ಆಚಾರವೆಂಬ ಅರ್ಥದಲ್ಲಿ ಕ್ವಿಪ್‌ಪ್ರತ್ಯಯವು ಬರುವುದು ಎನ್ನುವ ಸೂತ್ರದಂತೆ ಚಂಚರೀಕ ಎಂಬ ಪ್ರಾತಿಪದಿಕದ ಪರಕ್ಕೆ ಆಚಾರವೆಂಬ ಅರ್ಥದಲ್ಲಿ ಕ್ವಿಪ್-ಪ್ರತ್ಯಯವು ಬರುತ್ತಿರಲು. "ಸನಾದ್ಯಂತಾಃ ಧಾತವಃ" ಸನಾದಿ ಪ್ರತ್ಯಯಗಳಲ್ಲಿ ಸೇರಿದ ಕ್ವಿಪ್-ಪ್ರತ್ಯಯವು ಕೊನೆಗಿರುವ ಶಬ್ದವಾದ ಚಂಚರೀಕ ಎಂಬುವುದಕ್ಕೆ ಈ ಸೂತ್ರದಿಂದ ಧಾತುಸಂಜ್ಞೆಯು ಬಂದು ಶಪ್-ತಿಪ್ ಮೊದಲಾದವುಗಳು ಬರುತ್ತವೆ ಎಂದು ತಿಳಿಯಬೇಕು.

## ಭಾಷಿತಪುಂಸ್ಕ ಎಂದರೇನು?

ವ್ಯಾ.ವಿ. – 'ತೃತೀಯಾದಿಷು ಭಾಷಿತಪುಂಸ್ಕಂ ಪುಂವತ್ ಗಾಲವಸ್ಯ' (ಪಾ.ಸೂ. 7-1-74) - ಇದರ ಅರ್ಥ – ಗಾಲವಾಚಾರ್ಯರ ಮತದ ಪ್ರಕಾರ ಪುಂಲಿಂಗ ನಪುಂಸಕಲಿಂಗಗಳಲ್ಲಿ ಸಮಾನವಾದ ಪ್ರವೃತ್ತಿನಿಮಿತ್ತವುಳ್ಳ ಯಾವ ಇಕ್ ಅಕ್ಷರವು ಅಂತ್ಯವಾಗಿರುವ ನಪುಂಸಕಶಬ್ದವಿದೆಯೋ ಅದಕ್ಕೆ ಅಚ್ ಅಕ್ಷರವೇ ಆದಿಯಾಗಿಯುಳ್ಳ ತೃತೀಯ ಮುಂತಾದ ವಿಭಕ್ತಿಗಳು ಪರದಲ್ಲಿದ್ದಾಗ ಪುಂವದ್ಭಾವ ಮಾಡಿ. ಅಂದರೆ ಪುಂಲಿಂಗಶಬ್ದಕ್ಕೆ ಹ್ರಸ್ವ ಹಾಗೂ ನುಮ್‌ಗಳು ಹೇಗೆ ಬರುವುದಿಲ್ಲವೋ ಹಾಗೆಯೇ ಇಂತಹ ಭಾಷಿತಪುಂಸ್ಕಶಬ್ದಗಳಿಗೂ ಬರುವುದಿಲ್ಲ.

ಭಾಷಿತಪುಂಸ್ಕ ಎಂದರೆ ಹೀಗೆ ತಿಳಿಸಿದ್ದಾರೆ – ನಪುಂಸಕೇ ಲಿಂಗಾಂತರೇ ಚ ಯಸ್ಯ ಏಕಮೇವ ವಾಚ್ಯತಾವಚ್ಛೇದಕಂ ತಚ್ಛಬ್ದಸ್ವರೂಪಂ ಭಾಷಿತಪುಂಸ್ಕಶಬ್ದೇನ ವಿವಕ್ಷಿತಮ್ - ಎಂದು. ಅರ್ಥ ಹೀಗಿದೆ – ಯಾವ ಶಬ್ದಕ್ಕೆ ನಪುಂಸಕಲಿಂಗದಲ್ಲಿ ಹಾಗೂ ಬೇರೆ ಲಿಂಗದಲ್ಲಿ ಒಂದೇ ಶಕ್ಯತಾವಚ್ಛೇದಕ ಅಥವಾ ಪ್ರವೃತ್ತಿನಿಮಿತ್ತವು ಆಗಿರುತ್ತದೋ ಅಂತಹ ಶಬ್ದಸ್ವರೂಪವನ್ನು ಭಾಷಿತಪುಂಸ್ಕ ಎಂಬ ಶಬ್ದದಿಂದ ಸ್ವೀಕರಿಸಬೇಕು. ಉದಾ – ಅನಾದಿಶಬ್ದದ ರೂಪವು ಹೀಗಿವೆ - ಅನಾದಯೇ ಅನಾದಿನೇ ಎಂದು. ಇದಕ್ಕೆ ಕಾರಣ ಈ ಶಬ್ದವು ಭಾಷಿತಪುಂಸ್ಕವಾಗಿದೆ. ಅಂದರೆ ಸ್ತ್ರೀಪುಂನಪುಂ ಈ ವ್ಯಕ್ತಿಗಳಲ್ಲಿ ಅನಾದಿಶಬ್ದವನ್ನು ಬಳಸಿದಾಗಲೆಲ್ಲ ಪ್ರವೃತ್ತಿನಿಮಿತ್ತ ಒಂದೇ ಆಗಿದೆ. ಪ್ರವೃತ್ತಿನಿಮಿತ್ತ-ವಾದರೋ ಉತ್ಪತ್ತ್ಯಭಾವ ಎಂಬುದು.

ಭಾಷಿತಪುಂಸ್ಕಂ – ಭಾಷಿತಃ ಪುಮಾನ್ ಯೇನ ಪ್ರವೃತ್ತಿನಿಮಿತ್ತೇನ ತತ್ ಭಾಷಿತಪುಂಸ್ಕಂ. ಇದನ್ನು ಒಂದು ಕಾರಿಕೆಯಲ್ಲಿ ಹೀಗೆ ಸಂಗ್ರಹಿಸುವರು –

ಯನ್ನಿಮಿತ್ತಮುಪಾದಾಯ ಪುಂಸಿ ಶಬ್ದಃ ಪ್ರವರ್ತತೇ ।
ನಪುಂಸಕೇಽಪಿ ತತ್ ಚೇತ್ ಭಾಷಿತಪುಂಸ್ಕಂ ತದುಚ್ಯತೇ ॥

## ಸರಸೀಭುನಿ ಎಂದಾಗಬೇಕಲ್ಲವೇ?

(ಶ್ರೀನಿಧಿ) – ನನು ಸರಸೀಭುವೀತ್ಯಸ್ಯ ನಲಿನವಿಶೇಷಣತ್ವಾತ್ ತಸ್ಯ ಚ ನಪುಂಸಕಲಿಂಗತ್ವಾತ್ ಅಸ್ಯಾಪಿ ನಪುಂಸಕತ್ವೇ 'ಇಕೋಽಚಿ ವಿಭಕ್ತೌ' ಇತ್ಯನೇನ ಇಗಂತತ್ವೇನ ನುಮಿ ಕೃತೇ 'ಸರಸೀಭುನಿ' ಇತಿ ಸ್ಯಾತ್ ನ ತು ಭುವೀತಿ ಚೇನ್ನ । ಸರಸೀಲಕ್ಷಣಭೂಮೌ ಉತ್ಪನ್ನೇ ನಲಿನೇ ಇತಿ ವ್ಯಧಿಕರಣಸಪ್ತಮ್ಯಾಶ್ರಯಣಾತ್ । ಅಥವಾ ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ ಇತ್ಯನೇನ ಪುಂನಪುಂಸಕಯೋರೇಕಂ ಪ್ರವೃತ್ತಿನಿಮಿತ್ತಮಾದಾಯ ಪ್ರವೃತ್ತತ್ವಾತ್ ಭಾಷಿತಪುಂಸ್ಕತ್ವೇನ ಕ್ಲೀಬತ್ವೇಽಪಿ ಪುಂವದ್ಭಾವವಿಧಾನಾನ್ನಲಿನವಿಶೇಷಣತ್ವಂ ದ್ರಷ್ಟವ್ಯಮ್ ।

ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ಅನುವ್ಯಾಖ್ಯಾನನಲಿನೇ – ಇಲ್ಲಿ ಸರೋವರದಲ್ಲಿ ಹುಟ್ಟಿದ ನಲಿನ ಎಂಬುದಾಗಿ ನಲಿನ ಎಂಬುದನ್ನು ವಿಶೇಷ್ಯವಾಗಿ ಸರಸೀಭುವಿಶಬ್ದವನ್ನು ವಿಶೇಷಣವನ್ನಾಗಿ ವಿವಕ್ಷೆ ಮಾಡಿದ್ದಾರೆ. ಈ ಪಕ್ಷದಲ್ಲಿ ಸರಸೀಭುನಿ ಎಂದಾಗಬೇಕು. ಏಕೆಂದರೆ, ವಿಶೇಷಣಗಳು ವಿಶೇಷ್ಯನಿಘ್ನವಾಗಿರುತ್ತವೆ. ಅರ್ಥಾತ್ ವಿಶೇಷ್ಯವಾಚಕಪದದ ಲಿಂಗವಚನಾದಿಗಳನ್ನು ಅನುಸರಿಸುತ್ತವೆ. ಆದ್ದರಿಂದ 'ವಿಶೇಷ್ಯೇಣ ನಿಹನ್ಯತೇ ಲಿಂಗಾದಿಕಮ್' ಎಂಬುದಾಗಿ ವಿಶೇಷ್ಯದಿಂದ ಯಾವುದರ ಲಿಂಗವಚನಗಳು ಹಾನಿಯಾಗಲ್ಪಡುತ್ತವೋ ಎಂದು ಶಬ್ದದ ವ್ಯುತ್ಪತ್ತಿಯನ್ನು ತೋರಿಸುವರು.

ಪ್ರಕೃತದಲ್ಲಿ ನಲಿನ ಎಂಬ ಶಬ್ದವು ನಪುಂಸಕಲಿಂಗದಲ್ಲಿರುವುದರಿಂದ ಅದಕ್ಕೆ ವಿಶೇಷಣವಾದ ಸರಸೀಭೂ ಎಂಬ ಶಬ್ದವು ನಪುಂಸಕಲಿಂಗದಲ್ಲಿರಬೇಕಾದ್ದರಿಂದ 'ಇಕೋಽಚಿ ವಿಭಕ್ತೌ' ಎಂಬ ಸೂತ್ರದಿಂದ ಸಪ್ತಮೀವಿಭಕ್ತಿಯಲ್ಲಿ ಅಚ್‌ವರ್ಣವೇ ಆದಿಯಾಗುಳ್ಳ ಪ್ರತ್ಯಯವು ಪರದಲ್ಲಿರುವುದರಿಂದ ಸರಸೀಭೂ ಎಂಬ ಶಬ್ದಕ್ಕೆ ಇಗಂತತ್ವವಿರುವುದರಿಂದ ನುಮಾಗಮವು ಬಂದು ಸರಸೀಭುನಿ ಎಂದಾಗಬೇಕು ಎಂದಾಕ್ಷೇಪ.

ಉತ್ತರ – ಇಲ್ಲಿ ಸರಸೀಭುವಿ ಎಂಬಲ್ಲಿರುವ ಭುವಿ ಎಂಬ ಸಪ್ತಮೀಯು ಹಾಗೂ ನಲಿನೇ ಎಂಬಲ್ಲಿರುವ ಸಪ್ತಮೀಯು ವ್ಯಧಿಕರಣ ಎಂದು. ಅರ್ಥಾತ್ ಸರಸೀಭುವಿ ಎಂಬ ಶಬ್ದದಲ್ಲಿ ಭುವಿ ಎಂಬುದಕ್ಕೆ ಹುಟ್ಟಿರುವ ಎಂದರ್ಥವಲ್ಲ. ಭೂಮಿ ಎಂದರ್ಥ. ಹೀಗಾಗಿ ಸರೋವರವೆಂಬ ಭೂಮಿಯಲ್ಲಿ ಎಂದು ಅರ್ಥ. ಈ ಅರ್ಥಕ್ಕೆ ನಲಿನೇ ಎಂಬ ಪದದ ಅರ್ಥವಾದ ಕಮಲದಲ್ಲಿ ನೇರವಾದ ಅನ್ವಯವಿಲ್ಲ. ಹಾಗಾಗಿ ಇದು ವ್ಯಧಿಕರಣ. ಸಪ್ತಮೀಮಾತ್ರ ಸಮಾನವಾಗಿದೆಯಷ್ಟೆ. ಹೊರತು ಉತ್ಪನ್ನೇ ಎಂಬ ಅಧ್ಯಾಹೃತಪದದಲ್ಲಿ ಅಥವಾ ಅರ್ಥಾತ್ ಸಿಗುವ ಉತ್ಪನ್ನ ಎಂಬರ್ಥದಲ್ಲಿ ಸರಸೀಭುವಿ ಎಂಬ ಪದಾರ್ಥವು ಅನ್ವಯ ಹೊಂದುವುದು.

## ಉಭಯಲಿಂಗಕವಾದದ್ದು ನಲಿನಶಬ್ದ

(ವಾಕ್ಯಾರ್ಥರತ್ನಮಾಲಾ) – ನನು ನಪುಂಸಕಲಿಂಗನಲಿನವಿಶೇಷಣತ್ವಾತ್ ಸರಸೀಭೂಶಬ್ದಸ್ಯ, ವಿಶೇಷಣಾನಾಂ ಚ ವಿಶೇಷ್ಯನಿಘ್ನತ್ವಾತ್ ಲಿಂಗಪ್ರಾಪ್ತ್ಯಾ ಇಕೋಽಚಿ ನುಮಿ ಸರಸೀಭುನೀತಿ ಸ್ಯಾತ್, ಇತಿ ಚೇನ್ನ । 'ವಾ ಪುಂಸಿ ಪದ್ಮಂ ನಲಿನಮ್' ಇತ್ಯತ್ರ ವಾಶಬ್ದಸ್ಯ ಪದ್ಮಮಾರಭ್ಯ ಪ್ರಸೂನಮ್ ಇತ್ಯಂತೇನ ಸಂಬಂಧಸ್ಯ ಕ್ಷೀರಸ್ವಾಮಿನೋಕ್ತೇಃ 'ಪಂಕಜನಿಕರ್ತಾರಂ ಪದ್ಮ-ಮಾನಯ' ಇತ್ಯಾದಿರೂಪೇಣ ಯೋಗಶಶಧರಶೇಷ್ಯಾದೌ ಅಭಿಯುಕ್ತಪ್ರಯೋಗದರ್ಶನೇನ ಚ ನಲಿನಶಬ್ದಸ್ಯ ಉಭಯಲಿಂಗತಾಯಾ ಏವಾಕರೇ ಸ್ಥಿತತ್ವೇನ ಅದೋಷಾತ್ ।

'ಕಾಸಾರಃ ಸರಸೀ ಸರಃ' ಎಂದು ನೀರು ಮುಂತಾದ ಪದಾರ್ಥಗಳಿಗೆ ಸಂಬಂಧಪಟ್ಟ ವಾರಿವರ್ಗದ ಅಮರಕೋಶದಲ್ಲಿ ಬಂದ ಮಾತು. ಅಲ್ಲಿ ಸರಸೀ ಎನ್ನುವುದಕ್ಕೆ ದೊಡ್ಡದಾದ ಸರೋವರ ಎಂದರ್ಥ. ಇಲ್ಲಿ ನಲಿನಶಬ್ದಕ್ಕೆ ವಿಶೇಷಣವಾದ್ದರಿಂದ ಸರಸೀಭುನಿ ಎಂದಾಗಬೇಕಲ್ಲವೇ ಎಂದಾಕ್ಷೇಪ ಬರುವುದು. ಏಕೆಂದರೆ ನಲಿನಶಬ್ದವು ನಪುಂಸಕಲಿಂಗದಲ್ಲಿದೆಯಾದ್ದರಿಂದ. ಎಂದರೆ, ಇದು ಸರಿಯಲ್ಲ. 'ವಾ ಪುಂಸಿ ಪದ್ಮಂ ನಲಿನಂ ಅರವಿಂದಂ ಮಹೋತ್ಪಲಮ್' (ಅಮರಕೋಶ. ವಾರಿವರ್ಗ) ಎಂದು ವಾ ಎಂಬ ಶಬ್ದವನ್ನು ಪದ್ಮ ಎಂಬ ಶಬ್ದದಿಂದ ಪ್ರಾರಂಭಿಸಿ ಪ್ರಸೂನ ಎಂಬ ಶಬ್ದದವರೆಗೂ ಸಂಬಂಧಪಟ್ಟಿದೆ ಎಂದು ಕ್ಷೀರಸ್ವಾಮಿಯು ಹೇಳಿರುವುದರಿಂದ ನಲಿನ ಎಂಬ ಶಬ್ದವು ಎರಡೂ ಲಿಂಗಗಳಲ್ಲಿದೆ ಎಂದೇ ಅಭಿಪ್ರಾಯ. ಹಾಗಾಗಿ ಇಲ್ಲಿ ನಲಿನಶಬ್ದವು ಪುಂಲಿಂಗ ಎಂದು ವಿವಕ್ಷೆ ಮಾಡಿದ್ದರಿಂದ ಸರಸೀಭುವಿ ಎಂದಾಗಿದೆ.

ಅಭಿಯುಕ್ತರ ಪ್ರಯೋಗವು ಹೀಗಿದೆ — ಪಂಕಜನಿಕರ್ತಾರಂ ಪದ್ಮಂ ಆನಯ ಎಂದು. ವಾಶಬ್ದದ ಸಂಬಂಧ ಪದ್ಮಶಬ್ದವನ್ನು ಪ್ರಾರಂಭಿಸಿ ಪ್ರಸೂನ ಎಂಬ ಶಬ್ದದವರೆಗೆ ಇಲ್ಲದಿದ್ದರೆ ಪದ್ಮಶಬ್ದವು ಪುಲ್ಲಿಂಗದಲ್ಲಿ ಇಲ್ಲದೇ ಇರುವುದರಿಂದ ಪಂಕಜನಿಕರ್ತಾರಂ ಪದ್ಮಂ ಎಂಬ ಪ್ರಯೋಗ ಅಸಾಧ್ಯವಾದೀತು. ಪದ್ಮಕ್ಕೆ ವಿಶೇಷಣವಾದ ಶಬ್ದ ಪಂಕಜನಿಕರ್ತಾರಂ ಎಂಬುದು. ಪದ್ಮಶಬ್ದವು ಪುಲ್ಲಿಂಗದಲ್ಲಿ ಇದ್ದಿದ್ದರಿಂದಲೇ ಅದಕ್ಕೆ ವಿಶೇಷಣವಾದ ಪಂಕಜನಿಕರ್ತೃ ಎಂಬುದು ಪಂಕಜನಿ-ಕರ್ತಾರಂ ಎಂದು ಪ್ರಯೋಗಿಸಲ್ಪಟ್ಟಿದೆ. ಇಲ್ಲದಿದ್ದರೆ 'ಪಂಕಜನಿಕರ್ತೃ ಪದ್ಮಂ' ಆನಯ ಎಂದು ಪ್ರಯೋಗಿಸಬೇಕಾಗಿತ್ತು.

## ಭ್ರಮರದಂತಿರುವ ಮನಸ್ಸಿನ ವಿವರಣೆ

(ಲಘುರಸರಂಜನೀ) — ಯಥಾ ಚಂಚರೀಕಃ ಪುಷ್ಪೇಭ್ಯೋಽನ್ಯೈರುದ್ಧರ್ತುಮಶಕ್ಯತ್ವಾತ್ ನಾನಾ-ವಿಧಾನ್ ರಸಾನ್ ಸ್ವಯಮುದ್ಧೃತ್ಯ ಮಧುರಂ ಮಧು ನಿರ್ಮಿಮೀತೇ ತಥಾ ಮನ್ಮನೋಽಪಿ

ಅನುವ್ಯಾಖ್ಯಾನೋಕ್ತಾನ್ ತಾದೃಶಾನ್ ನ್ಯಾಯಾನ್ ವ್ಯಕ್ತೀಕೃತ್ಯ ಸತಾಂ ಸುಧಾಂ ನ್ಯಾಯಸುಧಾಂ ಕರೋತೀತಿ ಚಿಕೀರ್ಷಿತಸ್ಯ ತಥಾ, ಯಥಾ ಚಂಚರೀಕಃ ಕಸ್ಮಿಂಶ್ಚಿತ್ ಸುಗಮರಸೇ ಪುಷ್ಪೇ ಸಕೃದೇವ ರಸಂ ಸ್ವೀಕರೋತಿ । ಕಸ್ಮಿಂಶ್ಚಿದ್ ದುರ್ಗಮರಸೇ ಪುಷ್ಪೇ ತು ಆದಾವೇಕಂ ರಸಂ ಸ್ವೀಕೃತ್ಯ ಪುನರುತ್ಪತ್ತ್ಯೋತ್ಪತ್ತ್ಯರಸಾಂತರಮಿತಿ ಬಹುವಾರಂ ಸ್ವೀಕರೋತಿ । ಕಸ್ಮಿಂಶ್ಚಿತ್ ಪುಷ್ಪೇ ತು ಏಕದಾ ಏಕರಸಂ ಗೃಹೀತ್ವಾ ಪುಷ್ಪಾಂತರಂಗತ್ವಾತ್ ತತ್ರತ್ಯಂ ರಸಂ ಸ್ವೀಕೃತ್ಯ ಪುನಃ ಪರ್ಯಾವೃತ್ಯಾಗತ್ಯ ಪ್ರಾಗ್ಗೃಹೀತರಸೇ ಪುಷ್ಪೇ ಪುನಾ ರಸಾಂತರಂ ಸ್ವೀಕರೋತಿ ತಥಾ ಮನ್ಮನೋಽಪಿ ಕಸ್ಯಚಿನ್ಮೂಲಸ್ಯೈಕಮೇವಾರ್ಥಂ ವಿಷಯೀಕರೋತಿ ಕಸ್ಯಚಿನ್ಮೂಲಸ್ಯ ಬಹುವಿಧ-ಮಪ್ಯರ್ಥಜಾತಮೇಕದೈವ ಕಸ್ಯಚಿನ್ಮೂಲಸ್ಯ ತು ಆದಾವೇಕಮರ್ಥಂ ವಿಷಯೀಕೃತ್ಯ ಮೂಲಾಂತರವ್ಯಾಖ್ಯಾನಾಂತರಂ ಪುನಃ ಸಿಂಹಾವಲೋಕನನ್ಯಾಯೇನ ಪುನರ್ಮೂಲೇ-ಷ್ವರ್ಥಾಂತರಂ ವಿಷಯೀಕರೋತೀತಿ, ತದನುಸಾರೇಣ ಅಹಮಪಿ ಕ್ವಚಿದೇಕೈಕಾರ್ಥನಿಬಂಧನಾತ್ಮಕಂ ಕ್ವಚಿಚ್ಚಾಶಯದ್ವಯಂ 'ಕಿಂಚ ಅಪಿ ಚ' ಇತ್ಯಾದಿ ರೂಪೇಣಾನೇಕಾರ್ಥನಿಬಂಧನಾತ್ಮಕಂ ಕ್ವಚಿತ್ ಸಿಂಹಾವಲೋಕನನ್ಯಾಯೇನ ವ್ಯವಹಿತಾರ್ಥನಿಬಂಧನಾತ್ಮಕಂ ಇತ್ಯನೇಕಪ್ರಕಾರೋಪೇತಂ ಗ್ರಂಥೀಕರೋತೀತಿ ತತ್ಪ್ರಕಾರಾಣಾಂ ಚ ವ್ಯಕ್ತಿರಿತಿ ಜ್ಞೇಯಮ್ ।

ಚಂಚರೀಕತಿ ಮೇ ಮನಃ - ಭ್ರಮರದಂತೆ ನನ್ನ ಮನಸ್ಸಿದೆ ಎಂದು ಟೀಕಾಕೃತ್ಪಾದರು ಹೇಳಿದ್ದಾರೆ. ಭ್ರಮರದಂತೆ ಎಂದರೆ ಹೀಗೆ ತಿಳಿಯಬೇಕು. ಹೇಗೆ ಭ್ರಮರವು ಅನೇಕ ಹೂವುಗಳಿಂದ ಬೇರೆಯವರು ತೆಗೆದುಕೊಳ್ಳಲು ಸಾಧ್ಯವಿಲ್ಲದ ಅನೇಕ ರೀತಿಯಾದ ರಸಗಳನ್ನು ತಾನೇ ಎತ್ತಿಕೊಂಡು ಮನೋಹರ-ವಾದ ಜೇನನ್ನು ನಿರ್ಮಾಣ ಮಾಡುತ್ತದೋ ಹಾಗೆಯೇ ನನ್ನ ಮನಸ್ಸೂ ಕೂಡ ಅನುವ್ಯಾಖ್ಯಾನದಲ್ಲಿ ಹೇಳಿದ ಅಂತಹ ನ್ಯಾಯಗಳನ್ನು ಚೆನ್ನಾಗಿ ವ್ಯಕ್ತಮಾಡಿ ಸಜ್ಜನರಿಗೆ ಅಮೃತವನ್ನು ತಂದುಕೊಡುವುದು ಎಂದು ತಿಳಿಯಬೇಕು.

ಹಾಗೆಯೇ ಭ್ರಮರವು ಯಾವುದೋ ಒಂದು ಸುಲಭವಾಗಿ ರಸಸಿಗುವ ಹೂವಿನಲ್ಲಿ ಒಮ್ಮೆಲೇ ರಸವನ್ನು ಸ್ವೀಕರಿಸುತ್ತದೆ. ಇನ್ನು ಕೆಲವು ಕಷ್ಟವಾಗಿ ರಸ ಸಿಗುವ ಹೂವಿನಲ್ಲಿಯಾದರೋ ಮೊದಲು ಒಮ್ಮೆ ರಸವನ್ನು ಸ್ವೀಕಾರ ಮಾಡಿ ಮತ್ತೆ ಬೇರೆ ಹೂವಿಗೆ ಹೋಗಿ ಅಲ್ಲಿ ರಸವನ್ನು ಸ್ವೀಕಾರ ಮಾಡಿ ಮತ್ತೆ ಹಿಂದಕ್ಕೆ ಬಂದು ಮೊದಲಿನ ಹೂವಿನಲ್ಲಿ ಬಂದು ಪ್ರಯತ್ನ ಮಾಡಿ ಅನೇಕ ರೀತಿಯಾದ ರಸಗಳನ್ನು ಸ್ವೀಕರಿಸುತ್ತದೋ ಅದೇ ರೀತಿ ನನ್ನ ಮನಸ್ಸೂ ಕೂಡ ಯಾವುದೋ ಒಂದು ಆಚಾರ್ಯರ ಮೂಲವಾಕ್ಯಕ್ಕೆ ಒಂದೇ ಅರ್ಥವನ್ನು ಸ್ವೀಕರಿಸಿ ಇನ್ನು ಯಾವುದೋ ಮೂಲಕ್ಕೆ ಅನೇಕ ರೀತಿಯಾದ ಅರ್ಥವನ್ನು ಒಮ್ಮೆಲೇ ಸ್ವೀಕರಿಸಿ ಮತ್ತೆ ಮೊದಲಿನ ಕಷ್ಟವಾದ ವಾಕ್ಯವನ್ನು ಚೆನ್ನಾಗಿ ವಿಚಾರ ಮಾಡಿ ಅದರಲ್ಲಿ ಅನೇಕ ಅರ್ಥವನ್ನು ಅಭಿವ್ಯಕ್ತಿಪಡಿಸುವುದು. ಅರ್ಥಾತ್ ಕೆಲವು ವಾಕ್ಯಗಳಿಗೆ

ಒಂದೇ ಅರ್ಥವನ್ನು ವಿವರಣೆ ಮಾಡಿ, ಕೆಲವು ವಾಕ್ಯಗಳಿಗೆ ಕಿಂಚ, ಅಪಿ ಚ ಎಂಬುದಾಗಿ ಅನೇಕಾರ್ಥಗಳನ್ನು ನಿರೂಪಣೆ ಮಾಡಿ ಕೆಲವುದಕ್ಕೆ ಸಿಂಹಾವಲೋಕನ ನ್ಯಾಯದಿಂದ ಅರ್ಥಾತ್ ಸಿಂಹವು ಹೇಗೆ ಸುಮಾರು ದೂರ ಕ್ರಮಿಸಿದ ಮೇಲೆ ಒಮ್ಮೆ ತಿರುಗಿ ಹಿಂದೆ ನೋಡುವುದೋ ಅದೇ ರೀತಿ ಒಂದು ವಿಷಯವನ್ನು ಅತಿಕ್ರಮಣ ಮಾಡುತ್ತ ಮಾಡುತ್ತ ಕೊನೆಗೆ ಸಿಂಹದಂತೆ ಹಿಂತಿರುಗಿ ಅದೇ ವಿಷಯವನ್ನು ವಿವರಿಸುವುದು. ಈ ರೀತಿ ಅನೇಕ ಪ್ರಕಾರಗಳಿಂದ ಕೂಡಿದ ಗ್ರಂಥವನ್ನು ರಚಿಸುವರು ಎಂದು ತಿಳಿಯಬೇಕು.

## ಅನುವ್ಯಾಖ್ಯಾನವನ್ನು ನಲಿನ ಎಂದಿದ್ದಾರೆ. ಅಭೇದದ ತಾತ್ಪರ್ಯ ಏನು?

(ಲಘುರಸರಂಜನೀ) — ಅನುವ್ಯಾಖ್ಯಾನಸ್ಯ ನಲಿನಾಭೇದ ಉಕ್ತಃ । ಅಭೇದಶ್ಚಾತ್ರ 'ಸಿಂಹೋ ದೇವದತ್ತಃ' 'ತತ್ತ್ವಮಸಿ' ಇತ್ಯಾದಾವಿವ ಸಾದೃಶ್ಯಸ್ವರೂಪೋ ವಿವಕ್ಷಿತಃ । 'ಸಾದೃಶ್ಯಾಭೇದ-ಸಂಶ್ರಯಾತ್'(2-3-ಶ್ಲೋ.74) ಇತಿ ಪ್ರುತಿಪಾದೀಯಾನುಭಾಷ್ಯೋಕ್ತೇಃ । ತಥಾ ಚ ಯಥಾ ಪುಷ್ಪೇಷು ನಲಿನಂ ನಾನಾರಸಸಂಪೂರ್ಣಂ ತಥಾ ಗ್ರಂಥೇಷ್ವನುವ್ಯಾಖ್ಯಾನಂ ತತ್ತದಪೇಕ್ಷಿತಾ-ನೇಕಾರ್ಥಪರಿಪೂರ್ಣಮಿತಿ ಸೂಚಯತಿ । ಯಥೋಕ್ತಮ್ — 'ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್' ಇತಿ । ಏತತ್ಸಂಭಾವನಾಯೋಕ್ತಂ – ಶ್ರೀಮದಿತಿ ॥ ಶ್ರೀಮತ್ ಸರ್ವಾಧಿಕಾರ್ಯಪೇಕ್ಷಿತಸ್ಯ ಮೋಕ್ಷಸಾಧನಬೋಧಸಾಧನತ್ವರೂಪಮಾಹಾತ್ಮ್ಯವಿಶಿಷ್ಟಮ್ ಆನಂದತೀರ್ಥಂ ಮೌಕ್ತಾನಂದಸಂದಾಯಿಶಾಸ್ತ್ರಂ ಯಸ್ಯ ಸ ಶ್ರೀಮದಾನಂದತೀರ್ಥಃ ಪೂರ್ಣ-ಪ್ರಮತಿಃ ಸ ಏವಾರ್ಥಃ ।

ಅನುವ್ಯಾಖ್ಯಾನನಲಿನೇ - ಅನುವ್ಯಾಖ್ಯಾನವೇ ಒಂದು ಕಮಲ ಎಂದು ಕಮಲದೊಂದಿಗೆ ಅನು-ವ್ಯಾಖ್ಯಾನಕ್ಕೆ ಅಭೇದವನ್ನು ಹೇಳಿದ್ದಾರೆ. ಇಲ್ಲಿ ಅಭೇದ ಎಂದರೆ ಸಾದೃಶ್ಯಾಭೇದ ಎಂದು ತಿಳಿಯಬೇಕು. ಅರ್ಥಾತ್ 'ಸಿಂಹೋ ದೇವದತ್ತಃ, ತತ್ವಮಸಿ' ಮುಂತಾದ ಕಡೆಗಳಂತೆ ಸಾದೃಶ್ಯಾ-ಭೇದ ಎಂದು ಹೇಳುವಂತೆ ಇಲ್ಲಿ ತಿಳಿಯಬೇಕು. ಹಾಗಾಗಿ ಹೇಗೆ ಹೂವುಗಳಲ್ಲಿ ಕಮಲವು ಅನೇಕ ರಸಗಳಿಂದ ಪೂರ್ಣವಾಗಿದೆಯೋ ಹಾಗೆಯೇ ಗ್ರಂಥಗಳಲ್ಲಿ ಅನುವ್ಯಾಖ್ಯಾನವು ಅಪೇಕ್ಷಿತವಾದ ಅನೇಕ ಅರ್ಥಗಳನ್ನು ಒಳಗೊಂಡಿದೆ ಎಂದು ಸೂಚನೆ ಮಾಡುತ್ತಿದ್ದಾರೆ.

ಇದನ್ನು ತಾವೇ ಹೇಳಿದ್ದಾರೆಯೂ ಕೂಡ - 'ಗ್ರಂಥೋಽಯಮಪಿ ಬಹ್ವರ್ಥಃ ಭಾಷ್ಯಂ ಚಾತ್ಯರ್ಥ-ವಿಸ್ತರಮ್' ಎಂದು. ಇದು ಸಂಭವನೀಯವೇ ಎಂದು ತಿಳಿಸಲು ಶ್ರೀಮದಾನಂದತೀರ್ಥಾರ್ಯ ಎಂಬ ಪದವನ್ನು ಹೇಳಿದ್ದಾರೆ. 'ಶ್ರೀಮತ್' - ಎಲ್ಲ ಅಧಿಕಾರಿಗಳಿಗೆ ಅಪೇಕ್ಷಿತವಾದ ಮೋಕ್ಷಕ್ಕೆ ಸಾಧನವಾದ ಯಾವ ಜ್ಞಾನವಿದೆ ಆ ಜ್ಞಾನಕ್ಕೆ ಸಾಧನವಾದದ್ದನ್ನು ತಿಳಿಸುವುದೆಂಬ ಮಾಹಾತ್ಮ್ಯ

ಇರುವ ಕಾರಣ ಮೋಕ್ಷಾನಂದಪ್ರದವಾದ ಶಾಸ್ತ್ರವನ್ನು ರಚನೆಮಾಡುವ ಆಚಾರ್ಯರು ಎಂದು ಶ್ರೀಮತ್ ಎಂಬ ಪದ ಬಂದಿದೆ.

**ಸಾದೃಶ್ಯಾಭೇದದ ಪ್ರಸಂಗ - ಸುಧಾದಲ್ಲಿ**

** ಪೌರಾಣಾನಿ ಚ ವಾಕ್ಯಾನಿ ಸಾದೃಶ್ಯಾಭೇದಸಂಶ್ರಯಾತ್ ।
ಸಾದೃಶ್ಯಾಚ್ಚ ಪ್ರಧಾನತ್ವಾತ್ ಸ್ವಾತಂತ್ರ್ಯಾದಪಿ ಚಾಭಿದಾಮ್ ॥ 74 ॥
ಆಹುರೀಶೇನ ಜೀವಸ್ಯ ನ ಸ್ವರೂಪಾಭಿದಾಂ ಕ್ವಚಿತ್ । (2.3. ಅಧಿ.14)

ತತ್ವಮಸಿ ಮುಂತಾದ ವಾಕ್ಯಗಳಲ್ಲಿ ಜೀವಬ್ರಹ್ಮರಿಗೆ ಸಾದೃಶ್ಯಾಭೇದವು ತೋರುತ್ತಿದೆ. ವಾಸ್ತವಿಕವಾದ ಅಭೇದವಲ್ಲ. ಸಾದೃಶ್ಯಾಭೇದ ಎಂದರೆ ಭಗವಂತನ ಜ್ಞಾನಾನಂದಾದಿಗಳ ಸದೃಶವಾದ ಜ್ಞಾನಾನಂದಾದಿಗಳು ಜೀವನಲ್ಲಿ ಇರುವುದರಿಂದ ಜೀವನೂ ಭಗವಂತನೂ ಒಂದೇ ಎಂಬ ವ್ಯವಹಾರವಿದೆ. ಹೀಗೆ ಆಪಾತತಃ ಅಭೇದಪ್ರತಿಪಾದಕವಾಗಿ ತೋರುತ್ತಿದೆ ತತ್ವಮಸಿ ಮುಂತಾದ ಶ್ರುತಿಗಳು. ಗೌಣಾರ್ಥಪರವಾಗಿದೆ ಎಂದು ತಾತ್ಪರ್ಯ.

** यद्यपि जीवब्रह्मणोर्भेद एव, तथाऽप्यभेदवदिति सम्बन्धः । तुशब्दो विशेषार्थः । तं च वक्ष्यामः । तत्सदृशाः = परमात्मगुणसदृशाः । सार इत्यनुवादेन स्वरूपमिति व्याख्यानम् । अस्य जीवस्य । कुतः? मुक्तावपि कैवल्येऽप्यवशिष्यते यतः । अभेदवत् अभेदमिव । "तत्र तस्येव" इत्यत्रोपसङ्ख्येयमेतत् । शिष्टप्रयोगात् । यद्वाऽभेद इति तत्प्रतिपादकमुपलक्ष्यते । अत एवेति सम्बन्धः । एताः परोदाहृताः । हीति मुख्ये बाधकं सूचयति ।

अत एवेत्यस्यैव विवरणम् सादृश्येति । सादृश्यमेवाभेदः सादृश्याभेदः । सिंहो देवदत्त इत्यादिवद् गौणोऽयं व्यपदेश इति वाक्यार्थः । अद्वैतवादिभिः खलु तत्त्वम्पदयोर्विरुद्ध-स्वार्थैकदेशत्यागेन एकदेशलक्षणया सामानाधिकरण्यमात्रं मुख्यमङ्गीकृतम् । ततो वरं पदद्वयस्य मुख्यार्थत्वमभ्युपगम्य सामानाधिकरण्यमात्रस्य गौणत्वमभ्युपगन्तुम् । तात्पर्य-लिङ्गानि च तत्र तत्रान्यथानीतानि । (ಸುಧಾ)

**ಪೀಲುರ್ವೃಕ್ಷಃ ಫಲಂ ಪೀಲು ಪೀಲುನೇ ನತು ಪೀಲವೇ**

(ಲಘುರಸರಂಜನೀ) — ನನು ನಲಿನಪದಂ ನಪುಂಸಕಮತಸ್ತದ್ವಿಶೇಷಣಮಪಿ ಸರಸೀಭುನೀತಿ ಸ್ಯಾತ್ ಕಥಂ ಸರಸೀಭುವೀತಿ ಪುಂಲಿಂಗಮಿತಿ ಚೇನ್ನ । ನಪುಂಸಕಲಿಂಗತ್ವೇಽಪಿ ತಸ್ಯ ಭಾಷಿತಪುಂಸ್ಕತ್ವೇನ ಪುಂವದ್ಭಾವಾಂಗೀಕಾರಾತ್ । ಯಥೋಕ್ತಮ್ – 'ತೃತೀಯಾದಿಷು ಭಾಷಿತ -ಪುಂಸ್ಕಂ ಪುಂವದ್ಗಾಲವಸ್ಯ' ಇತಿ । ಅತ್ರ ಯತ್ತದಂ ಪುಂನಪುಂಸಕಯೋರೇಕೇನೈವ ಪ್ರವೃತ್ತಿ-ನಿಮಿತ್ತೇನ ಪ್ರವರ್ತತೇ ನ ತದ್ಭಾಷಿತಪುಂಸ್ಕಮಿತಿ ನ ತತ್ರ ಪುಂವದ್ಭಾವಃ । ಯಥೋಕ್ತಮ್ –

'ಪೀಲುರ್ವೃಕ್ಷಃ ಫಲಂ ಪೀಲು ಪೀಲುನೇ ನತು ಪೀಲವೇ ।
ವೃಕ್ಷೇ ನಿಮಿತ್ತಂ ಪೀಲುತ್ವಂ ತಜ್ಜತ್ವಂ ತತ್ಫಲೇ ಪುನಃ ॥

ಇತಿ । ಪ್ರಕೃತೇ ಚೇದಂ ಭೇಕಾದೌ ಪುಂಸಿ ನಲಿನೇ ನಪುಂಸಕೇ ಚ ಸರಸೀಭೂತತ್ವೇನೈಕೇನೈವ ಪ್ರವೃತ್ತಿನಿಮಿತ್ತೇನ ಪ್ರವೃತ್ತಮಿತಿ ಭಾಷಿತಪುಂಸ್ಕತ್ವಾತ್ ಸರಸೀಭುವೀತಿ ಪುಂವದ್ಭಾವೋ ಯುಕ್ತಃ । ಅಥವಾ ನಲಿನಪದಮಪಿ ಪುಂಲಿಂಗಮೇವ । ಯಥೋಕ್ತಂ ಲಿಂಗಾನುಶಾಸನಸೂತ್ರೇ – 'ಮಾನ-ಯಾನಾಭಿಧಾನನಲಿನಪುಲಿನ' ಇತ್ಯಾದಿ । ತಥಾ ಚ ತದ್ವಿಶೇಷಣಾನಾಮಪಿ ಪುಂಲಿಂಗಮೇವೇತಿ ನಾನುಪಪತ್ತಿಃ ।

ಸರಸೀಭುವಿ ಅನುವ್ಯಾಖ್ಯಾನನಲಿನೇ – ನಲಿನಶಬ್ದವಿಶೇಷಣವಾಗಿ ಸರಸೀಭುನಿ ಎಂದು ನಪುಂಸಕ-ಲಿಂಗದಲ್ಲಿ ಪ್ರಯೋಗವಾಗಬೇಕಲ್ಲವೇ ಎನ್ನುವುದಕ್ಕೆ ಉತ್ತರವಾಗಿ ಭಾಷಿತಪುಂಸ್ಕವಾದ ಶಬ್ದಗಳಿಗೆ ಪುಂವದ್ಭಾವ ಇರುವುದರಿಂದ ಭುವಿ ಎಂದು ಪುಂಲಿಂಗಪ್ರಯೋಗವು ಸರಿಯಾಗಿಯೇ ಇದೆ. ಅದಕ್ಕೆ ಪ್ರತ್ಯುದಾಹರಣೆಯಾಗಿ –

ಪೀಲುರ್ವೃಕ್ಷಃ ಫಲಂ ಪೀಲು ಪೀಲುನೇ ನತು ಪೀಲವೇ ।
ವೃಕ್ಷೇ ನಿಮಿತ್ತಂ ಪೀಲುತ್ವಂ ತಜ್ಜತ್ವಂ ತತ್ಫಲೇ ಪುನಃ ॥

ಪೀಲು ಎಂದರೆ ಗೋನು ಮರ. ಆ ಮರದ ಹಣ್ಣಲ್ಲೂ ಪೀಲು ಎಂಬ ಶಬ್ದವನ್ನೇ ಬಳಸುವರು. ಆದರೆ ಚತುರ್ಥೀವಿಭಕ್ತಿಯಲ್ಲಿ ಮರವನ್ನು ಹೇಳುವ ಪೀಲುಶಬ್ದದ ರೂಪ ಪೀಲುನೇ ಎಂದಾಗು-ವುದು. ಇನ್ನು ಹಣ್ಣನ್ನು ಹೇಳುವ ಪೀಲುಶಬ್ದದ ಚತುರ್ಥೀವಿಭಕ್ತಿಯಲ್ಲಿ ಪೀಲವೇ ಎಂದಾಗುವುದು.

ಈ ರೀತಿಯ ವ್ಯತ್ಯಾಸಕ್ಕೆ ಕಾರಣವೇನು? ಎಂದರೆ ಪ್ರವೃತ್ತಿನಿಮಿತ್ತಭೇದವಿದೆ ಆದ್ದರಿಂದ ಎಂದು ಉತ್ತರ. ಅರ್ಥಾತ್ ಮರದಲ್ಲಿ ಪೀಲು ಎಂಬ ಶಬ್ದವು ಪೀಲುತ್ವ ಎಂಬ ಜಾತಿಯನ್ನು ನಿಮಿತ್ತವಾಗಿಟ್ಟುಕೊಂಡು ಹೊರಡುವುದು. ಇನ್ನು ಹಣ್ಣಿನಲ್ಲಿಯಾದರೋ ಪೀಲುಜನ್ಯತ್ವ ಎಂಬ ಧರ್ಮವನ್ನಿಟ್ಟುಕೊಂಡು ಪೀಲು ಎಂಬ ಶಬ್ದದ ಪ್ರವೃತ್ತಿ. ಹಾಗಾಗಿ ರೂಪದಲ್ಲಿ ವ್ಯತ್ಯಾಸ. ಪುಂವದ್ಭಾವ ಇಲ್ಲ. ಇದಕ್ಕೆ ಉದಾಹರಣೆಯಂತೂ ಭೇಕ ಎಂಬ ಶಬ್ದವು ಕಪ್ಪೆ ಹಾಗೂ ಕಮಲ-ವೆಂಬರ್ಥದಲ್ಲಿ ಸರಸೀಭೂತತ್ವ ಎಂಬ ಒಂದೇ ಪ್ರವೃತ್ತಿನಿಮಿತ್ತವನ್ನಿಟ್ಟುಕೊಂಡು ಹೊರಟಿರುವುದು.

## ಬಾಲಮನೋರಮಾದಲ್ಲಿ ಪೀಲುಶಬ್ದದ ವಿವರಣೆ

** "प्रवृत्तिनिमित्तैक्य" इत्यस्य प्रयोजनं दर्शयितुमाह--पीलुर्वृक्ष इति। यदा वृक्षविशेषः पीलुशब्दवाच्यस्तदा पुंलिङ्गः पीलुशब्दः, यदा पीलुजन्यफलं पीलुशब्दवाच्यं तदा नपुंसकलिङ्गोऽयम्। "फले लुक्" इत्यणो लुक्। अत्र फले वाच्ये पुंवत्त्वं नेत्यर्थः। कुत

इत्यत आह- प्रवृत्तिनिमित्तभेदादिति । वृक्षत्वव्याप्यजातिविशेषात्मकं पीलुत्वं वृक्षविशेषे वाच्ये प्रवृत्तिनिमित्तम् । फलविशेषे तु वाच्ये फलत्वव्याप्यजातिविशेषात्मकं पीलुत्वं प्रवृत्तिनिमित्तमिति प्रवृत्तिनिमित्तभेदादित्यर्थः । तदुक्तम् -"पीलुर्वृक्षः फलं पीलु पीलुने नतु पीलवे । वृक्षे निमित्तं पीलुत्वं, तज्जत्वं तत्फले पुनः ।" इति । (बालमनोरमा) (पा.सू. ७-१-७४)

## ಚಿಕೀರ್ಷಿತಕ್ರಮವು ಜ್ಞಾಪನೀಯ

(ಲಘುರಸರಂಜನೀ) — ನನು —

'ಅಥ ತತ್ಕೃಪಯಾ ಬ್ರಹ್ಮಸೂತ್ರಭಾಷ್ಯಂ ಯಥಾಮತಿ ।
ವ್ಯಾಕುರ್ವೇ ಶ್ರೀಮದಾನಂದತೀರ್ಥಾರ್ಯಮುಖನಿಸ್ಸೃತಮ್'

ಇತಿ ಪೂರ್ವಪ್ರಸ್ಥಾನವತ್ ಚಿಕೀರ್ಷಿತಂ ಸ್ಪಷ್ಟಮೇವ ಕಿಂ ನ ಪ್ರತಿಜ್ಞಾತಮಿತಿ ಚೇನ್ನ । ಚಿಕೀರ್ಷಿತಪ್ರಕಾರಾಣಾಮಪಿ ಜ್ಞಾಪನೀಯತ್ವಸ್ಯೋಕ್ತತ್ವಾದಿತಿ ।

ಶ್ರೀಮದಾನಂದತೀರ್ಥಾರ್ಯ ಎಂಬ ಈ ಶ್ಲೋಕದಲ್ಲಿ ತಾವು ಮಾಡಬೇಕಾದದ್ದನ್ನು ಸ್ಪಷ್ಟವಾಗಿ ಪ್ರತಿಜ್ಞೆ ಮಾಡಬೇಕಾಗಿತ್ತು. ಹೇಗೆಂದರೆ, 'ವ್ಯಾಕುರ್ವೇ ಶ್ರೀಮದಾನಂದತೀರ್ಥಾರ್ಯ....' ಎಂಬಲ್ಲಿ-ನಂತೆ ಇಲ್ಲಿ ಸ್ಪಷ್ಟವಾಗಿ ಪ್ರತಿಜ್ಞೆ ಮಾಡಲಿಲ್ಲವಲ್ಲ ಎಂದರೆ ಅದಕ್ಕೆ ಉತ್ತರ – ಪ್ರತಿಜ್ಞೆ ಮಾಡುವುದರ ಜೊತೆಗೆ ಪ್ರತಿಜ್ಞೆಯ ಪ್ರಕಾರಗಳನ್ನೂ ಜ್ಞಾಪಿಸುವುದು ಒಂದು ರೀತಿಯ ಶೈಲಿ ಎಂದು ತಿಳಿಸಲು.

## ತತ್ವಪ್ರಕಾಶಿಕಾಪದ್ಯದ ವಿವರಣೆ

** अथेति प्रतिज्ञाया अवसरप्राप्तिमाह । अथ तस्माद् गांभीर्यादियुतत्वादिति वा तत्कृपया तेषां प्रागुक्तानां कृपया ॥ (तत्वप्रकाशिका भावदीप)

** अथ तत्कृपया तेषां मुकुन्दादीनां नमस्कृतानां कृपया – (भावबोधः)

** ಇದಾನೀಂ ಶಿಷ್ಯಮನಃ ಸಮಾಧಾನಾಯ ಚಿಕೀರ್ಷಿತಂ ಪ್ರತಿಜಾನೀತೇ — ಅಥೇತಿ ॥ ತತ್ಕೃಪಯಾ ತೇಷಾಂ ನಮಸ್ಕೃತಾನಾಂ ಮುಕುಂದಾದೀನಾಂ ಕೃಪಯಾ — 'ಆನಂದತೀರ್ಥಭಗವದ್ವಚಸಾಂ ವಿಶಿಷ್ಟವ್ಯಾಖ್ಯಾನಕರ್ಮಣಿ ಸುರಾಹ್ಯಧಿಕಾರಿಣೋಽತ್ರ' ಇತಿ ತತ್ವನಿರ್ಣಯಟೀಕಾಂತೇ ಸ್ವೇನೈ-ವೋಕ್ತತ್ವಾತ್ ಕಥಂ ವ್ಯಾಕುರ್ವೇ ಇತಿ ಪ್ರತಿಜ್ಞಾ ಇತ್ಯತ ಉಕ್ತಮ್ — ಯಥಾಮತೀತಿ ॥ ವಿಶಿಷ್ಟ-ವ್ಯಾಖ್ಯಾನಕರಣೇ ದೇವಾನಾಮಧಿಕಾರೇಽಪಿ ಯಥಾಮತಿವ್ಯಾಖ್ಯಾನಕರಣೇ ಅಸ್ಮಾಕಮಪ್ಯಧಿ-ಕಾರೋಸ್ತೀತಿ ಭಾವಃ॥ (ವಾಕ್ಯಾರ್ಥಮಂಜರೀ)

— ಅಥ ತತ್ಕೃಪಯಾ ಬ್ರಹ್ಮಸೂತ್ರಭಾಷ್ಯಂ ಯಥಾಮತಿ ।
ವ್ಯಾಕುರ್ವೇ ಶ್ರೀಮದಾನಂದತೀರ್ಥಾರ್ಯಮುಖನಿಃಸೃತಮ್ ॥ - ಎಂದು.

– ನಮಸ್ಕಾರ ಮಾಡಿದ ಆ ಮುಕುಂದಾದಿ ಎಲ್ಲರ ಕೃಪೆಯಿಂದ. ತತ್ವನಿರ್ಣಯಟೀಕೆಯ ಕೊನೆಗೆ 'ಆನಂದತೀರ್ಥಭಗವತ್ಪಾದರ ಮಾತುಗಳಿಗೆ ವಿಶಿಷ್ಟವಾದ ವ್ಯಾಖ್ಯಾನ ಮಾಡುವುದರಲ್ಲಿ ದೇವತೆಗಳಿಗೇ ಅಧಿಕಾರ' ಎಂದು ತಾವೇ ಹೇಳಿದ್ದರಿಂದ ಇಲ್ಲಿ ವ್ಯಾಖ್ಯಾನವನ್ನು ಮಾಡುತ್ತೇನೆ ಎಂಬ ಪ್ರತಿಜ್ಞೆ ಹೇಗೆ ಎಂಬುವುದಕ್ಕೆ ಉತ್ತರವಾಗಿ "ಯಥಾಮತಿ" ಎಂದಿದ್ದಾರೆ. ವಿಶಿಷ್ಟ-ವ್ಯಾಖ್ಯಾನವನ್ನು ಮಾಡಲು ದೇವತೆಗಳಿಗೆ ಅಧಿಕಾರವಿದ್ದರೂ ಯಥಾಮತಿ ವ್ಯಾಖ್ಯಾನಮಾಡು-ವುದರಲ್ಲಿ ನಮಗೂ ಅಧಿಕಾರವಿದೆ ಎಂದಭಿಪ್ರಾಯ.

## ಸಕಲವಾಙ್ಮನಸದೇವೋತ್ತಮರಾದ ಆಚಾರ್ಯರು

(ಏರೀಬಾಳಾಚಾರ್ಯರು) ಯದ್ವಾ ಚಿಕೀರ್ಷಿತಂ ಸೂಚಯಂತಃ ತತ್ಪಾರಯಿತುಂ ಸಕಲ-ವಾಙ್ಮನಸದೇವೋತ್ತಮಾಚಾರ್ಯಂ ಸಂಬೋಧ್ಯಾಶಾಸತೇ – ಶ್ರೀಮದಿತಿ ॥ ಯತ್ತದೋರಿ-ಹಾಧ್ಯಾಹಾರಃ । ತೀರ್ಥಾರ್ಯಗುರುವರ್ಯಮಧ್ವಾಚಾರ್ಯಃ ಸನ್ಮನಃ ಸರಸೀಭುವಿ । ಸತ್ = ಪ್ರಾಣಃ, ''ಸದಿತಿ ಪ್ರಾಣಃ'' ಇತಿ ಶ್ರುತೇಃ । ತಸ್ಯ ಮನಃ ಸರಸೀಭುವಿ ಪ್ರಾಗ್ವದರ್ಥಃ । ಅನು-ವ್ಯಾಖ್ಯಾನಮೇವ ನಲಿನಂ ತಸ್ಮಿನ್ ಮೇ ಯನ್ಮನಶ್ಚಂಚರೀಕ ಇತಿ ತತ್ ತಸ್ಮಾತ್ ಶ್ರೀಮತ್ ಮೇ ಮನಃ ಆನಂದ ವರ್ಧಯ, 'ಟುನದಿ ಸಮೃದ್ಧೌ' ಇತ್ಯತೋ ಲೋಟ್ ಮಧ್ಯಮಪುರುಷೈಕ-ವಚನಮ್ । ಮನೋರಥಂ ಪಾರಯ ಇತಿ ಪ್ರಾರ್ಥನಮ್ ।

ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ।
ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ॥

ಇಲ್ಲಿ ಪದಚ್ಛೇದ ಹಾಗೂ ಅನ್ವಯಗಳ ಕ್ರಮ ಹೀಗೆ – ಶ್ರೀಮತ್ ಎಂಬುದು ಪ್ರತ್ಯೇಕಪದ. ಅಂದರೆ ಶ್ರೀಮದಾನಂದತೀರ್ಥ ಎಂಬುದರಲ್ಲಿ ಶ್ರೀಮತ್ ಎಂಬುದು ಸಮಸ್ತಪದದಲ್ಲಿ ಸೇರುವ ಪದವಲ್ಲ. ಹಾಗೆ ಆನಂದ ಎಂಬ ಪದವು ಪ್ರತ್ಯೇಕ ಪದ. ಅದು ಆ ಸಮಸ್ತಪದದಲ್ಲಿ ಸೇರುವ ಪದವಲ್ಲ. ಹಾಗಾಗಿ ಮೊದಲನೆಯ ವಾಕ್ಯದಲ್ಲಿ ಒಟ್ಟು ಮೂರು ಪ್ರತ್ಯೇಕ ಪದಗಳಿವೆ. (1) ಶ್ರೀಮತ್ (2) ಆನಂದ, (3) ತೀರ್ಥಾರ್ಯಸನ್ಮನಃಸರಸೀಭುವಿ ಎಂದು.

ಇಲ್ಲಿ ಅನ್ವಯವಾಕ್ಯ ಹೀಗೆ – ಯತ್ ತೀರ್ಥಾರ್ಯಸನ್ಮನಃ- ಸರಸೀಭು ಅನುವ್ಯಾಖ್ಯಾನನಲಿನಂ ತಸ್ಮಿನ್ ಮೇ ಯನ್ಮನಃ ಚಂಚರೀಕತಿ ತತ್ ಶ್ರೀಮತ್ ಮೇ ಮನಃ ಆನಂದ - ಎಂದು. ಇದರ ಅರ್ಥ ಹೀಗೆ – ತೀರ್ಥಾರ್ಯ ಎಂದರೆ ಗುರುವರ್ಯರಾದ ಮಧ್ವಾಚಾರ್ಯರು ಎಂದರ್ಥ. ಅವರೇ ಸತ್ - ಅಂದರೆ ಪ್ರಾಣ ಎಂದರ್ಥ. 'ಸದಿತಿ ಪ್ರಾಣಃ' ಎಂದು ಶ್ರುತಿ ಇರುವುದರಿಂದ. ಹೀಗೆ ಗುರುವರ್ಯರಾದ ಮಧ್ವಾಚಾರ್ಯರೆಂಬ ಮುಖ್ಯಪ್ರಾಣದೇವರ ಮನಸ್ಸೆಂಬ ಸರೋವರದಲ್ಲಿ ಹುಟ್ಟಿರುವ ಅನುವ್ಯಾಖ್ಯಾನವೆಂಬ ಕಮಲದಲ್ಲಿ ಯಾವ ನನ್ನ ಮನಸ್ಸು ಭ್ರಮರದಂತೆ ಸಂಚರಿಸು-

ತ್ರಿದೆಯೋ ಅಂತಹ ಒಳ್ಳೆಯ ಪ್ರವೃತ್ತಿ ಎಂಬ ಸಂಪತ್ತುಳ್ಳ ನನ್ನ ಮನಸ್ಸನ್ನು ಸಮೃದ್ಧಿಯನ್ನು ಹೊಂದುವಂತೆ ಮಾಡಿ. ಅಂದರೆ ನನ್ನ ಮನೋಭಿಲಾಷೆಗಳನ್ನು ಪೂರಣೆ ಮಾಡಿ. ಇಲ್ಲಿ ಯತ್ ತತ್ ಎಂಬ ಎರಡು ಶಬ್ದಗಳನ್ನು ಅಧ್ಯಾಹಾರ ಮಾಡಬೇಕು. ಹಾಗೆಯೇ ಆನಂದ ಎಂಬ ಪದವು 'ಟು ನದಿ ಸಮೃದ್ಧೌ' ಎಂಬ ಧಾತುವಿನ ಲೋಟ್‌ಲಕಾರದ ಮಧ್ಯಮಪುರುಷ ಏಕವಚನ ಎಂದು ತಿಳಿಯಬೇಕು.

### ಆನಂದ ಎಂಬುದು ಕ್ರಿಯಾಪದ

ಧಾತುವಿನ ಸಂಪೂರ್ಣರೂಪ ಹೀಗಿದೆ. ಇಲ್ಲಿ ಮೊದಲಿಗೆ ಆಜ್ ಎನ್ನುವ ಉಪಸರ್ಗವಿದೆ. ನಂತರ ಧಾತುವಿನ ರೂಪಗಳನ್ನು ಕೊಡಲಾಗಿದೆ.

ಆ+ನಂದತು,ಆ+ನಂದತಾತ್ ಆ+ನಂದತಾಂ ಆ+ನಂದಂತು ।
ಆ+ನಂದ, ಆ+ನಂದತಾತ್ ಆ+ನಂದತಂ ಆ+ನಂದತ ।
ಆ+ನಂದಾನಿ, ಆ+ನಂದಾವ ಆ+ನಂದಾಮ ।

### ಸನ್ಮನಸ್ಸರಸೀಭುವಿ

(ಕಾಶೀ) – ಚಿಕೀರ್ಷಿತಂ ವ್ಯನಕ್ತಿ – ಶ್ರೀಮದಿತಿ ॥ ಸತ್ = ನಿರ್ದೋಷಂ, ಸತ್ಸು ಅನುಕ್ರೋಶೇನ ದ್ರವದ್ವಾ ಯನ್ಮನಸ್ತದೇವ ಸರಸೀ = ಸರಃ, ತತ್ರೋತ್ಪನ್ನೇ ಮನಸ್ಯುತ್ಪನ್ನಸ್ಯೈವ ವಾಕ್ಯಸ್ಯ ವಾಚ್ಯಭಿ-ವ್ಯಕ್ತೇಃ ।

ಸನ್ಮನಃಸರಸೀಭುವಿ - ಸತ್ ಎಂಬ ಶಬ್ದಕ್ಕೆ ದೋಷರಹಿತವಾದದ್ದು ಎಂದರ್ಥ. ಅಥವಾ ಸತ್ ಎಂದರೆ ಸಜ್ಜನರು ಎಂದರ್ಥ. ಅವರ ಮೇಲಿರುವ ಕಾರುಣ್ಯದಿಂದ ದ್ರವತ್ - ಹರಿಯುವ ಮನಸ್ಸು ಎಂದರ್ಥ. ಇಲ್ಲಿ ಸರೋವರದ ಸಾಮ್ಯವನ್ನು ಮನಸ್ಸಿಗೆ, ಈ ರೀತಿ ಚಿಂತನೆಯನ್ನು ಮಾಡಿ ಟಿಪ್ಪಣೀಕಾರರು ಹೇಳಿದ್ದಾರೆ.

### ಶ್ರೀನಿವಾಸತೀರ್ಥರ ಟಿಪ್ಪಣೀಮಂಗಲಾಚರಣೆ

### ಗುರುದೇವತೆಗಳಿಗೆ ನಮಸ್ಕಾರ

ವೇದವ್ಯಾಸಂ ಗುಣಾವಾಸಂ ಪೂರ್ಣಬೋಧಾನ್ ಮುನೀನಪಿ ।
ವಂದೇಽಹಂ ಜಯತೀರ್ಥಾರ್ಯಾನ್ ತಥಾ ವೇದೇಶಯೋಗಿನಃ ॥

ಸಕಲ ಸದ್ಗುಣಗಳಿಗೆ ಆಶ್ರಯರಾದ ವೇದವ್ಯಾಸರನ್ನು, ಮುನಿಗಳಾದ ಪೂರ್ಣಪ್ರಜ್ಞರನ್ನೂ ಕೂಡ ಹಾಗೆಯೇ ಜಯತೀರ್ಥಾರ್ಯರನ್ನು ವೇದೇಶಯೋಗಿಗಳನ್ನು ನಾನು ನಮಸ್ಕರಿಸುತ್ತೇನೆ.

## ಯಾದವಾರ್ಯರ ಸ್ಮರಣೆ

ವೇದೇಶಮುನಿಸತ್ಪಾದಸೇವಾಸಂಪ್ರಾಪ್ತವೈಭವಾನ್ ।
ಯಾದವಾರ್ಯಾನ್ ನ್ಯಾಯಸುಧಾಟೀಕಾಕಾರಾನಹಂ ಭಜೇ ॥

ವೇದೇಶಮುನಿಗಳ ಸಮೀಚೀನವಾದ ಪಾದಸೇವೆಯಿಂದ ಚೆನ್ನಾಗಿ ಬಂದ ವೈಭವವುಳ್ಳ ನ್ಯಾಯ-ಸುಧಾಟೀಕಾಕಾರರಾದ ಯಾದವಾರ್ಯರನ್ನು ನಾನು ಭಜಿಸುತ್ತೇನೆ.

## ಶ್ರೀನಿವಾಸನಾದ ನನ್ನಿಂದ ಟಿಪ್ಪಣಿಯ ರಚನೆ

ತತ್ಪಾದಾರಾಧಕಶ್ರೀನಿವಾಸೇನ ತದನುಗ್ರಹಾತ್ ।
ಟೀಕಾಗೃಹೀತವಾಕ್ಯಾರ್ಥವಿವೃತಿಃ ಕ್ರಿಯತೇ ಮಯಾ ॥

ನಮಸ್ಕರಿಸಿದ ಎಲ್ಲರ ಪಾದಾರಾಧಕನಾದ ಅಥವಾ ನ್ಯಾಯಸುಧಾಟೀಕಾಕಾರರಾದ ಯಾದ-ವಾರ್ಯರ ಪಾದಾರಾಧಕನಾದ ಶ್ರೀನಿವಾಸನಾದ ನನ್ನಿಂದ ಅವರ ಅನುಗ್ರಹ ಇರುವುದರಿಂದ ಟೀಕೆಯಲ್ಲಿ ವ್ಯಾಖ್ಯಾನಮಾಡಲು ಗ್ರಹಿಸದೇ ಇರುವ ವಾಕ್ಯಗಳ ಅರ್ಥದ ವಿವರಣೆಯು ಮಾಡಲ್ಪಡುತ್ತದೆ.

## ಅನುವ್ಯಾಖ್ಯಾನದಲ್ಲಿ ಚಂಚರೀಕತಿಗೆ ಉದಾಹರಣೆ

**ಚಂಚರೀಕತೀತಿ ॥** ಯಥಾ ಹಿ ಭ್ರಮರಃ ಸಮಗ್ರಂ ಪುಷ್ಪರಸಂ ಪಾತುಮ್ ಅಸಮರ್ಥಃ ತಂ ವಿಹಾಯ ಅನ್ಯತ್ರ ಗಂತುಮಪಿ ಅಸಮರ್ಥಃ ತತ್ರೈವ ಪರಿಭ್ರಮತಿ ತಥಾ ಭ್ರಮರರೂಪಂ ಮದೀಯಂ ಮನಃ 'ಗ್ರಂಥೋಽಯಮಪಿ ಬಹ್ವರ್ಥಃ' ಇತ್ಯಾಚಾರ್ಯೋಕ್ತೇಃ ಅನುವ್ಯಾಖ್ಯಾನಗತ-ಏಕವಾಕ್ಯಸ್ಯ ಸಮಗ್ರ-ಅರ್ಥಾವಗಾಹನಂ ಕರ್ತುಮಸಮರ್ಥಂ ತದ್ವಿಹಾಯ ಉತ್ತರ-ಅನುವ್ಯಾಖ್ಯಾವ್ಯಾಖ್ಯಾನಾಯ ಗಂತುಮಸಮರ್ಥಂ ಸತ್ ತತ್ರೈವ ಪರಿಭ್ರಮತಿ । 'ವೈಲಕ್ಷಣ್ಯಂ ಸತಶ್ಚಾಪಿ', 'ಸ್ವಭಾವಾಜ್ಞಾನವಾದಸ್ಯ', 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' ಇತ್ಯಾದಿವಾಕ್ಯಾನಾಂ ಬಹು-ಪ್ರಕಾರೇಣ ವ್ಯಾಖ್ಯಾನಕರಣೇ ಏವ ಆಸಕ್ತಂ ಭವತೀತ್ಯರ್ಥಃ ।

ಚಂಚರೀಕತಿ ಇತಿ ॥ ಹೇಗೆ ಒಂದು ದುಂಬಿಯು ಇಡೀ ಪುಷ್ಪದ ರಸವನ್ನು ಕುಡಿಯಲು ಸಾಮರ್ಥ್ಯವನ್ನು ಹೊಂದದೇ ಅದನ್ನು ಬಿಟ್ಟು ಬೇರೆ ಕಡೆ ಹೋಗಲೂ ಆಗದೆ ಅಲ್ಲಿಯೇ ತಿರುಗುತ್ತಿರುತ್ತದೋ ಹಾಗೆ ಭ್ರಮರದಂತೆ ಇರುವ ನನ್ನ ಮನಸ್ಸೂ ಕೂಡ "ಗ್ರಂಥೋಽಯಮಪಿ ಬಹ್ವರ್ಥಃ" ಎಂಬ ಆಚಾರ್ಯರ ಮಾತಿನಂತೆ ಅನುವ್ಯಾಖ್ಯಾನದಲ್ಲಿರುವ ಒಂದು ವಾಕ್ಯಕ್ಕೆ ಸಂಪೂರ್ಣ ಅರ್ಥದಲ್ಲಿ ಅವಗಾಹನೆ ಮಾಡಲು ಆಗದೇ ಅದನ್ನು ಬಿಟ್ಟು ಮುಂದಿನ ಅನು-

ವ್ಯಾಖ್ಯಾನದ ವಾಕ್ಯಗಳ ವ್ಯಾಖ್ಯಾನವನ್ನು ಮಾಡಲು ಆಗದೇ ಅಲ್ಲಿಯೇ ಸುತ್ತಾಡುತ್ತಿರುತ್ತದೆ. ಅಂದರೆ 'ವೈಲಕ್ಷಣ್ಯಂ ಸತಶ್ಚಾಪಿ', (1-1-ಶ್ಲೋಕ 24) 'ಸ್ವಭಾವಾಜ್ಞಾನವಾದಸ್ಯ' (1-1-ಶ್ಲೋ33), 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' (1-1-ಶ್ಲೋ 66) ಮುಂತಾದ ವಾಕ್ಯಗಳಿಗೆ ಅನೇಕ ರೀತಿಯಾಗಿ ವ್ಯಾಖ್ಯಾನಮಾಡುವುದರಲ್ಲೇ ಆಸಕ್ತವಾಗಿ ಆಗುತ್ತದೆ ಎಂದರ್ಥ.

## ಹನ್ನೆರಡು ಬಗೆಯಲ್ಲಿ ವ್ಯಾಖ್ಯಾನ ಮಾಡಿದ ಟೀಕಾಚಾರ್ಯರು

– ** ವೈಲಕ್ಷಣ್ಯಂ ಸತಶ್ಚಾಪಿ ಸ್ವಯಂ ಸದ್ಭೇದವಾದಿನಃ ।
ಅಸತಶ್ಚಾಪಿ ವಿಶ್ವಸ್ಯ ತೇನಾನಿಷ್ಟಂ ಕಥಂ ಭವೇತ್ ॥ 23 ॥ (ಜಿಜ್ಞಾಸಾಧಿಕರಣ ಅನು.)

'ನೇಹ ನಾನಾಸ್ತಿ' ಎಂಬ ಶ್ರುತಿಯು ಆತ್ಮಾತಿರಿಕ್ತಸಮಗ್ರಜಗತ್ತನ್ನು ಅನಿರ್ವಚನೀಯ ಎಂದು ಹೇಳು-ತ್ತಿಲ್ಲ ಎಂದಾಕ್ಷೇಪಿಸಿದಾಗ ಪ್ರತಿವಾದಿಗಳು 'ವಿಶ್ವಂ ಸದಸದ್ವಿಲಕ್ಷಣಂ ಜ್ಞಾನಬಾಧ್ಯತ್ವಾತ್ ಯದೇವಂ ತದೇವಂ ಯಥಾ ಶುಕ್ತಿರಜತಮ್' ಎಂಬ ಅನುಮಾನವನ್ನು ವಿಶ್ವವು ಅನಿರ್ವಚನೀಯ ಎಂಬ ವಿಷಯದಲ್ಲಿ ಪ್ರಮಾಣವನ್ನಾಗಿ ನೀಡಿ ಈ ಅನುಮಾನದ ಬಲದಿಂದ ನೇಹ ನಾನಾಸ್ತಿ ಎಂಬ ಶ್ರುತಿಗೂ ವಿಶ್ವವನ್ನು ಅನಿರ್ವಚನೀಯ ಎಂದು ಹೇಳುವುದರಲ್ಲೇ ತಾತ್ಪರ್ಯ ಇದೆ ಎಂದು ನಿರೂಪಿಸಿದರು. ಇದಕ್ಕೆ ಖಂಡನೆ ಮಾಡುತ್ತ ಅನುಮಾನದ ಪ್ರತಿಜ್ಞಾಂಶವಾದ ವಿಶ್ವಂ ಸದಸದ್ವಿ-ಲಕ್ಷಣಂ ಎಂಬುದನ್ನು ದೂಷಿಸುತ್ತಿದ್ದಾರೆ - ವೈಲಕ್ಷಣ್ಯಂ ಸತಶ್ಚ ಎಂದು. ಇದಕ್ಕೆ ಹನ್ನೆರಡು ಬಗೆಯಲ್ಲಿ ಟೀಕಾರಾಯರು ವ್ಯಾಖ್ಯಾನ ಮಾಡಿದ್ದಾರೆ.

## ನ ಶಬ್ದಾಬ್ಧೌ ಗಾಢಾ - ಪ್ರತಿಪದಾರ್ಥ ಹಾಗೂ ಸಾರ

श्रीमन्न्यायसुधा –
न शब्दाब्धौ गाढा नच निगमचर्चासु चतुरा
नच न्याये प्रौढा नच विदितवेद्या अपि वयम् ।
परं श्रीमत्पूर्णप्रमतिगुरुकारुण्यसरणिं
प्रपन्ना मान्याः स्मः किमपि च वदन्तोऽपि महताम् ॥८ ॥

ಅನ್ವಯಾರ್ಥ – ವಯಂ = ನಾನು; ಶಬ್ದಾಬ್ಧೌ = ವ್ಯಾಕರಣವೆಂಬ ಶಬ್ದಸಮುದ್ರದಲ್ಲಿ, ಗಾಢಾಃ = ಮುಳುಗಿದವರು; ನ = ಅಲ್ಲ ; ನಿಗಮಚರ್ಚಾಸು = ವೇದವಾಕ್ಯಗಳ ವಿಚಾರದಲ್ಲಿ ; ನ ಚತುರಾಃ = ಬುದ್ಧಿವಂತರಲ್ಲ ; ನ್ಯಾಯೇ = ನ್ಯಾಯಶಾಸ್ತ್ರದಲ್ಲಿ ; ಪ್ರೌಢಾಃ = ಪ್ರೌಢಿಮೆಯನ್ನು ಹೊಂದಿದವರು; ನ = ಅಲ್ಲ; ವಿದಿತವೇದ್ಯಾಃ = ತಿಳಿಯಬೇಕಾದಂತಹ ತತ್ವಗಳನ್ನು ತಿಳಿದವರು; ನ = ಅಲ್ಲ; ಪರಂ =

ಇಷ್ಟಾದರೂ; ಶ್ರೀಮತ್ಪೂರ್ಣಪ್ರಮತಿ- ಗುರುಕಾರುಣ್ಯಸರಣಿಂ = ಶ್ರೀಮತ್ - ಪೂಜ್ಯರಾದ, ಪೂರ್ಣಪ್ರಮತಿಗುರು- ಪೂರ್ಣಪ್ರಜ್ಞರೆಂಬ ಗುರುಗಳ, ಕಾರುಣ್ಯಸರಣಿಂ - ಕಾರುಣ್ಯವೆಂಬ ಮಾರ್ಗ -ವನ್ನು; ಪ್ರಪನ್ನಾಃ = ಹೊಂದಿದವರಾಗಿ; ಕಿಮಪಿ ಚ = 'ಕಿಂಚ' 'ಅಪಿ ಚ' ಎಂಬುದಾಗಿ ಹೇಳಿದರೂ ಕೂಡ; ಮಹತಾಂ = ದೊಡ್ಡವರಿಗೆ; ಮಾನ್ಯಾಃ ಸ್ಮ = ಗೌರವಪಾತ್ರರಾಗಿದ್ದೇವೆ.

ಸಾರ – ಈ ಶ್ಲೋಕದಲ್ಲಿ ಟೀಕಾಕೃತ್ಪಾದರ ವಿನಯ ಎದ್ದು ಕಾಣುವುದು. ಇಲ್ಲಿ ಅವರು ತಮಗೆ ಬಂದ ಮಾನ್ಯತೆಯು ಕೇವಲ ಆನಂದತೀರ್ಥರೆಂಬ ಗುರುಗಳ ಕಾರುಣ್ಯದ ಮಾರ್ಗವನ್ನು ಹಿಡಿದಿದ್ದರಿಂದ ಎಂದು ತಿಳಿಸಿದ್ದಾರೆ. ಅಲ್ಲದೆ ನನಗೆ ವ್ಯಾಕರಣದಲ್ಲಿ ಗಾಢತೆಯಿಲ್ಲ; ಮೀಮಾಂಸಾ-ದಲ್ಲಿ ಚಾತುರ್ಯವಿಲ್ಲ; ನ್ಯಾಯಶಾಸ್ತ್ರದಲ್ಲಿ ಪ್ರೌಢತೆ ಇಲ್ಲ; ಹಾಗೆ ಇನ್ನು ತಿಳಿಯಬೇಕಾದ ಅನೇಕ-ವಿಷಯಗಳನ್ನು ತಿಳಿದಿಲ್ಲ – ಎಂದು ಹೇಳಿದ್ದಾರೆ.

### ವಯಂ ಎಂಬ ಬಹುವಚನಾಂತಪ್ರಯೋಗ ಸರಿಯೇ?

**कम्बा —** न शब्दाब्धाविति ॥ **न च वाच्यम् 'अस्मदो द्वयोश्च' इति प्राप्तस्य बहुवचनस्य 'सविशेषणस्य प्रतिषेधो वक्तव्यः' इति निषेधात् 'वयमि'ति बहुवचनमयुक्तमिति । 'त्वं राजा वयमप्युपासितगुरुप्रज्ञाभिमानोन्नता- इत्यत्रोन्नतत्वं विधीयते । न तु विधेयोऽर्थो विशेषणमित्यादेशो भवत्येव' इति पदमञ्जर्यां विधेयस्य विशेषणत्वाभावोक्तेः 'न शब्दाब्दौ गाढाः' इत्यादीनां च विधेयत्वेन अविशेषणतया निषेधाप्रवृत्त्या बहुवचनोपपत्तेः । उत्तरार्धेऽपि** वयं **केवलं** श्रीमत्पूर्णप्रमति-गुरुकारुण्यसरणिं प्रपन्नाः, **अत एव** किमपि च **लोकविलक्षणं** वदन्तः स्मः, **तत एव** महताम**पि** मान्याः **स्म इति सर्वेषां विधेयत्वमेवेति द्रष्टव्यम् ।**

"ನ ಶಬ್ದಾಬ್ಧೌ" ಎಂಬ ಶ್ಲೋಕದ ವಯಂ ಎಂಬಲ್ಲಿ ಅಸ್ಮದೋದ್ವಯೋಶ್ಚ ಏಕತ್ವ ಹಾಗೂ ದ್ವಿತ್ವಗಳಲ್ಲಿ ಯಾವುದೋ ಒಂದರ ವಿವಕ್ಷೆಯಿದ್ದಾಗ ಅಸ್ಮಚ್ಛಬ್ದಕ್ಕೆ ಬಹುವಚನವು ಬರುತ್ತದೆ ಎಂಬರ್ಥವುಳ್ಳ ಈ ಸೂತ್ರದಿಂದ ಪ್ರಕೃತದಲ್ಲಿ ಪ್ರಾಪ್ತವಾದ ಬಹುವಚನದ. 'ಸವಿಶೇಷಣಸ್ಯ ಪ್ರತಿಷೇಧೋ ವಕ್ತವ್ಯಃ' ವಿಶೇಷಣ ಸಹಿತವಾದ ಅಸ್ಮಚ್ಛಬ್ದಕ್ಕೆ ಏಕತ್ವ ಅಥವಾ ದ್ವಿತ್ವವು ವಿವಕ್ಷಿತವಾದಲ್ಲಿ ಬಹುವಚನದ ನಿಷೇಧವನ್ನು ಮಾಡಬೇಕು ಎಂಬರ್ಥದ ಈ ವಾರ್ತಿಕದ ನಿಷೇಧ ಇರುವುದರಿಂದ ವಯಂ ಎಂಬ ಬಹುವಚನಪ್ರಯೋಗವು ಸರಿಯಲ್ಲ ಎಂದು ಶಂಕಿಸಬಾರದು.

'ತ್ವಂ ರಾಜಾ ವಯಮಪಿ ಉಪಾಸಿತಗುರುಪ್ರಜ್ಞಾಭಿಮಾನೋನ್ನತಾಃ' - ನೀನು ರಾಜನಾಗಿರುವಿ-ಯಾದ್ದರಿಂದ ಉತ್ಕೃಷ್ಟನಾಗಿದ್ದಿ. ನಾನಾದರೋ ಉಪಾಸನೆ ಮಾಡಿರುವ ಬಲದಿಂದ ಶ್ರೇಷ್ಠವಾದ ಬುದ್ಧಿಯನ್ನು ಹೊಂದಿ ಔನ್ನತ್ಯವನ್ನು ಪಡೆದವನು' ಎಂಬರ್ಥವುಳ್ಳ ವಾಕ್ಯದಲ್ಲಿ ಉನ್ನತತ್ವವು ವಿಧೇಯವಾಗಿದೆ. ಹೊರತು ವಿಧೇಯವಾದ ಅರ್ಥವು ಇಲ್ಲಿ ಅಸ್ಮತ್ ಶಬ್ದದ ಅರ್ಥಕ್ಕೆ ವಿಶೇಷಣ-ವಲ್ಲವಾದ್ದರಿಂದ ಬಹುವಚನಾದೇಶವು ಬಂದೇ ಬರುತ್ತದೆ ಎಂದು ಪದಮಂಜರೀ ಎಂಬ ಕಾಶಿಕಾ-ಗ್ರಂಥದ ವ್ಯಾಖ್ಯಾನದಲ್ಲಿ ವಿಧೇಯಕ್ಕೆ ವಿಶೇಷಣತ್ವವು ಇಲ್ಲ ಎಂದು ಹೇಳಿದ್ದರಿಂದ ಪ್ರಕೃತ 'ಸ ಶಬ್ದಾಬ್ಧೌ ಗಾಧಾಃ' ಇತ್ಯಾದಿ ವಾಕ್ಯಗಳಲ್ಲಿ ಗಾಧಾಃ ಮುಂತಾದವುಗಳು ವಿಧೇಯವಾದ್ದರಿಂದ ಅಸ್ಮಚ್ಛಬ್ದದ ಅರ್ಥಕ್ಕೆ ವಿಶೇಷಣವಾಗದೇ ಇರುವುದರಿಂದ ಹಿಂದೆ ಹೇಳಿದ ವಾರ್ತಿಕದ ನಿಷೇಧದ ಪ್ರವೃತ್ತಿಯಾಗದೇ ಬಹುವಚನವು ಕೂಡುತ್ತದೆ. ಹೀಗೆಯೇ ಉತ್ತರಾರ್ಧದಲ್ಲಿಯೂ ನಾವು ಕೇವಲ ಪೂಜ್ಯರಾದ ಪೂರ್ಣಪ್ರಜ್ಞರೆಂಬ ಗುರುಗಳ ಕಾರುಣ್ಯದ ಸರಣಿಯನ್ನು ಹೊಂದಿರುವವರು ಹಾಗಾಗಿಯೇ ಏನೋ ಒಂದು ಲೋಕವಿಲಕ್ಷಣವಾದದ್ದನ್ನು ಹೇಳುತ್ತಾ ಇದ್ದೇವೆ. ಆದ್ದರಿಂದಲೇ ಮಹಾತ್ಮರಿಗೂ ಮಾನ್ಯರಾಗಿದ್ದೇವೆ ಎಂಬುದಾಗಿ ಎಲ್ಲವೂ ವಿಧೇಯಗಳೇ ಆಗಿವೆ. ಹೊರತು ವಿಶೇಷಣಗಳಾಗಿಲ್ಲ.

## ಭರ್ತೃಹರಿಯ ವೈರಾಗ್ಯಶತಕದಲ್ಲೂ ಇದೇ ರೀತಿಯ ಪ್ರಯೋಗ

'ತ್ವಂ ರಾಜಾ ವಯಮಪ್ಯುಪಾಸಿತಗುರುಪ್ರಜ್ಞಾಭಿಮಾನೋನ್ನತಾಃ' ಎಂಬುದರ ಉತ್ತರಭಾಗ ಹೀಗಿದೆ –

'ಖ್ಯಾತಸ್ತ್ವಂ ವಿಭವೈಃ ಯಶಾಂಸಿ ಕವಯೋ ದಿಕ್ಷು ಪ್ರತನ್ವಂತಿ ನಃ ।
ಇತ್ಥಂ ಮಾನಧನಾದಿದೂರಮುಭಯೋರಪ್ಯಾವಯೋರಂತರಮ್ ।
ಯದ್ಯಸ್ಮಾಸು ಪರಾಙ್ಮುಖೋऽಸಿ ವಯಮಪ್ಯೇಕಾಂತತೋ ನಿಸ್ಪೃಹಾಃ ॥ (51)

ಎಂದು. ಇದು ಮಹಾವೈಯ್ಯಾಕರಣನಾದ ಭರ್ತೃಹರಿಯ ವೈರಾಗ್ಯಶತಕದಲ್ಲಿ ಬರುವ ಶ್ಲೋಕ. ಇದರ ಅರ್ಥ ಹೀಗೆ – ಒಬ್ಬ ಸನ್ಯಾಸಿಯು ರಾಜನಿಗೆ ಹೇಳುವ ಮಾತು - ನಮ್ಮಿಬ್ಬರಿಗೂ ಏನೂ ವ್ಯತ್ಯಾಸವಿಲ್ಲ. ಆದರೂ ನಮ್ಮಿಬ್ಬರಿಗೂ ಬಹಳ ಅಂತರವಿದೆ ಎಂದು ನೀನು ಚಿಂತಿಸಿ ನಮ್ಮಿಂದ ಬಹಿರ್ಮುಖನಾದರೆ ನಾನೂ ನಿನ್ನಿಂದ ಬಹಿರ್ಮುಖನಾಗುತ್ತೇನೆ. ವ್ಯತ್ಯಾಸವಿಲ್ಲ ಏಕೆಂದರೆ ನೀನು ರಾಜನಾದ್ದರಿಂದ ಉತ್ಕೃಷ್ಟನಾಗಿದ್ದೀಯೇ. ನಾನಾದರೋ ಗುರುಗಳ ಉಪಾಸನೆಯಿಂಧ?? ಉತ್ಕೃಷ್ಟವಾದ ಬುದ್ಧಿಮತ್ತೆಯನ್ನು ಪಡೆದು ಉತ್ಕೃಷ್ಟನಾಗಿದ್ದೇನೆ. ಇನ್ನು ನೀನು ನಿನ್ನ ಕಾರ್ಯ-ವೈಭವದಿಂದ ಯಶಸ್ಸನ್ನು ಪಡೆದಿದ್ದೀಯ. ನಾನಾದರೋ ನಮ್ಮ ಬಗ್ಗೆ ಕವಿಗಳು ದಿಕ್ಕು ದಿಕ್ಕುಗಳಲ್ಲಿ ಹೇಳುವುದರಿಂದ ಯಶಸ್ಸನ್ನು ಪಡೆದಿದ್ದೇನೆ. ಹೀಗೆ ಮಾನವಿಷಯದಲ್ಲಿ ಅಂದರೆ ಗೌರವವಿಷಯದಲ್ಲಿ ಇಬ್ಬರೂ ಸಮಾನ. ಹಾಗೂ ಧನದ ವಿಷಯದಲ್ಲಿಯೂ ಸಮಾನ.

ಈ ಶ್ಲೋಕದಲ್ಲಿ ಅಸ್ಮತ್ ಶಬ್ದದ ಅರ್ಥಕ್ಕೆ ಉಪಾಸಿತಗುರುಪ್ರಜ್ಞಾಭಿಮಾನೋನ್ನತತ್ವ ಎಂಬುದನ್ನು ವಿಶೇಷಣವಾಗಿ ಅರ್ಥಾತ್ ಇತರನಾದ ರಾಜನನ್ನು ವ್ಯಾವೃತ್ತಿಮಾಡಲು ಹೇಳುತ್ತಿಲ್ಲ. ಹೊರತು ಸನ್ಯಾಸಿಯಾದ ನನ್ನಲ್ಲಿ ಇಂತಹ ಧರ್ಮವಿದೆ ಎಂದು ಹೇಳುವುದರಲ್ಲಿ ಮಾತ್ರ ತಾತ್ಪರ್ಯ. ಹಾಗಾಗಿ ವ್ಯಾವೃತ್ತಿಪ್ರತ್ಯಯಜನಕತ್ವರೂಪವಾದ ವಿಶೇಷಣತ್ವವು ಇಲ್ಲ.

## ಅಸ್ಮದೋ ದ್ವಯೋಃಶ್ಚ ಸೂತ್ರಾರ್ಥ

'ಅಸ್ಮದೋ ದ್ವಯೋಶ್ಚ' (ಪಾ.ಸೂ. 1-2-59) ಕಾಶಿಕಾವೃತ್ತಿ - ಅಸ್ಮದಃ ಯಃ ಅರ್ಥಃ ತಸ್ಯ ಏಕತ್ವೇ ದ್ವಿತ್ವೇ ಚ ಬಹುವಚನಮ್ ಅನ್ಯತರಸ್ಯಾಂ ಭವತಿ । ಅಹಂ ಬ್ರವೀಮಿ, ವಯಂ ಬ್ರೂಮಃ .... । ಸವಿಶೇಷಣಸ್ಯ ಪ್ರತಿಷೇಧೋ ವಕ್ತವ್ಯಃ । ಅಹಂ ದೇವದತ್ತೋ ಬ್ರವೀಮಿ .... ।

## ಪ್ರತಿವಾಕ್ಯ, ಪ್ರತಿಪದ ಅನೇಕಾಕೂತಗರ್ಭಿತವಾದ ಸುಧೆ

(ಪರಿಮಳ) – ಶ್ಲೋಕಾನಾಂ ಚ ವಕ್ತವ್ಯಬಹುತ್ವೇಽಪಿ ಗ್ರಂಥಗೌರವಭಯಾತ್ ಸಂಕ್ಷೇಪಃ ।

ಪ್ರತಿವಾಕ್ಯಂ(ಪ್ರತ್ಯಕ್ಷರಂ) ಪ್ರತಿಪದಮ್ ಅನೇಕಾಕೂತಗರ್ಭಿತಾ ।<br>ಪ್ರತಿಭಾತಿ ಸುಧಾಽಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ ॥

ಟೀಕಾಕೃತ್ಪಾದರು ರಚನೆ ಮಾಡಿದ ಶ್ಲೋಕಗಳ ಬಗ್ಗೆ ಹೇಳುವ ವಿಷಯಗಳು ಬಹಳಷ್ಟಿದ್ದರೂ ಗ್ರಂಥವು ದೊಡ್ಡದಾದೀತು ಎಂಬ ಭಯದಿಂದ ಸಂಕ್ಷೇಪವಾಗಿ ನಿರೂಪಣೆ ಮಾಡಲ್ಪಟ್ಟಿದೆ ಎಂದಭಿಪ್ರಾಯ.

ಸುಧಾಗ್ರಂಥದ ಪ್ರತಿಯೊಂದು ವಾಕ್ಯ ಪ್ರತಿಯೊಂದು ಪದ ಪ್ರತಿಯೊಂದು ಅಕ್ಷರ ಅನೇಕ ಗೂಢಾರ್ಥಗಳಿಂದ ಒಳಗೊಂಡಿದ್ದಾಗಿ ತೋರುವುದು(ಪ್ರತಿಭಾತಿ). ಆದರೂ ಗ್ರಂಥವು ಸಂಕ್ಷೇಪ-ವಾಗಿ ಆಗಲಿ ಶ್ರೋತೃಗಳು ಗ್ರಂಥಾಧ್ಯಯನದಲ್ಲಿ ಪ್ರವೃತ್ತರಾಗಲಿ ಎಂದು ಅಲ್ಪವಾಗಿ ನಿರೂಪಣೆ ಮಾಡಲಾಗಿದೆ.

## ಸರ್ವಪುರುಷಾರ್ಥಪ್ರಾಪಕವಾದ ಗುರುಗಳ ಕೃಪೆಯಿಂದಲೇ ಈ ಸುಧಾನಿರ್ಮಾಣ

(ಕುಂಡಲಗಿರಿ) – ಇದಾನೀಂ ಸ್ವಾನಹಂಕಾರದ್ಯೋತನಾಯ ದೇವಾಧಿಕಾರಿಕಾನುವ್ಯಾಖ್ಯಾನ-ವ್ಯಾಖ್ಯಾನೇ ನೇದಾನೀಂತನವ್ಯಾಕರಣಾದಿಶಾಸ್ತ್ರಪರಿಶೀಲನಮಾತ್ರಮೇವ ಪ್ರಯೋಜಕಂ ಕಿಂತು ಮಹಾವ್ಯಾಕರಣಾದಿಶಾಸ್ತ್ರವಿಮರ್ಶನಮೇವ । ತಥಾಪಿ ಸರ್ವಪುರುಷಾರ್ಥಪ್ರಾಪಕಗುರುಕೃಪಾ-ಪಾತ್ರತ್ವಾತ್ ಮಮಾಯಂ ವ್ಯಾಖ್ಯಾನೋದ್ಯಮಃ ಸಂಭಾವಿತ ಏವ, ಇತ್ಯಾಹ – ನ ಶಬ್ದಾಬ್ಧಾ-ವಿತಿ ॥ ಮಹಾವ್ಯಾಕರಣಶಾಸ್ತ್ರಾದಾವಿತ್ಯರ್ಥಃ ।

ನ ಶಬ್ದಾಬ್ಧೌ ಗಾಧಾಃ - ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನಮಾಡಲು ದೇವತೆಗಳೇ ಅಧಿಕಾರಿಗಳು. ಹಾಗಾಗಿ ಈ ಕಾಲದಲ್ಲಿ ಇರುವ ವ್ಯಾಕರಣ ಮೊದಲಾದ ಶಾಸ್ತ್ರಗಳ ಪರಿಶೀಲನೆಯಷ್ಟೇ ಉಪಯೋಗವಿಲ್ಲ. ಹೊರತು ಮಹಾವ್ಯಾಕರಣ ಮೊದಲಾದ ಶಾಸ್ತ್ರಗಳ ವಿಮರ್ಶೆಯ ಅಗತ್ಯತೆ ಇದೆ. ಇಷ್ಟಾದರೂ ಎಲ್ಲ ಪುರುಷಾರ್ಥಗಳನ್ನು ನೀಡುವ ಗುರುಗಳ ಕೃಪೆಗೆ ಪಾತ್ರನಾದ್ದರಿಂದ ನನ್ನ ಈ ವ್ಯಾಖ್ಯಾನಪ್ರಯತ್ನ ಸಂಭಾವಿತವೇ ಎಂದು ತಮ್ಮ ಅಹಂಕಾರಖಂಡನೆಯನ್ನು ಮಾಡುವ ಮೂಲಕ 'ನ ಶಬ್ದಾಬ್ಧೌ' ಎಂದು ತಿಳಿಸಿದ್ದಾರೆ. ಶಬ್ದಾಬ್ಧೌ ಎಂಬ ಪದದಿಂದ ಇಲ್ಲಿ ಮಹಾ-ವ್ಯಾಕರಣವನ್ನು ವಿವಕ್ಷೆ ಮಾಡಿ ಅದರಲ್ಲಿ ನನಗೆ ಗಾಢತೆ ಇಲ್ಲ ಎಂದು ಹೇಳಿದ್ದಾರೆ.

## ಏಕಸ್ಯೈವ ನಞಃ ಕಾಕುಸ್ವರಾರ್ಥಕತ್ವ ಅಥವಾ ನಞ್-ದ್ವಯ

(ವಿಟ್ಠಲಭಟ್ಟೀಯ) – ವಯಂ ಶಬ್ದಾಬ್ಧೌ ಗಾಧಾ ನ, ಪರಂ ತಥಾಪಿ ಶ್ರೀಮದಾಚಾರ್ಯ-ಕೃಪಾಮಾರ್ಗಪ್ರಾಪ್ತಾಃ ಕಿಮಪಿ ಯತ್ಕಿಂಚಿತ್ ವದಂತೋಽಪಿ ಮಹತಾಂ ಮಾನ್ಯಾ ಸ್ಮಃ । ಅತ್ರ 'ಶಬ್ದಾಬ್ಧೌ ಗಾಧಾ ನೇತಿ ನ' ಇತ್ಯೇವಂ ನಞಾವೃತ್ತ್ಯಾ ಏಕಸ್ಯೈವ ನಞಃ ಕಾಕುಸ್ವರಾರ್ಥಕತ್ವೇನ ವಾ ಅನುವ್ಯಾಖ್ಯಾನವ್ಯಾಖ್ಯಾನೋಪಯುಕ್ತಪಾಂಡಿತ್ಯಮಸ್ತೀತಿ ಪ್ರತಿಪಾದಯಿತುಮಯಂ ಶ್ಲೋಕ ಇತ್ಯಪ್ಯಾಹುಃ ।

ನ ಶಬ್ದಾಬ್ಧೌ ಗಾಧಾಃ - ಇಲ್ಲಿ ಟೀಕಾಕೃತ್ಪಾದರು 'ವಯಂ ಶಬ್ದಾಬ್ಧೌ ಗಾಧಾಃ ನೇತಿ ನ' ಎಂದು ವ್ಯಾಕರಣಶಾಸ್ತ್ರಸಮುದ್ರದಲ್ಲಿ ಗಾಢತೆಯನ್ನು ಪಡೆದವರಲ್ಲ ಎಂಬುದಲ್ಲ; ಪಡೆದೇ ಇದ್ದೇವೆ ಎನ್ನುವ ಅರ್ಥವನ್ನು ಸೂಚಿಸಿದ್ದಾರೆ. ಅದಕ್ಕಾಗಿ ಶ್ಲೋಕದಲ್ಲಿರುವ ನ ಎಂಬ ಪದವನ್ನು ಆವೃತ್ತಿ ಮಾಡಿ-ಕೊಳ್ಳಬೇಕು. ಅಥವಾ ಒಂದೇ ನಞ್ ಅಂದರೆ ನ ಎಂಬುವುದನ್ನು ಕಾಕುಸ್ವರಾರ್ಥಕ ಎಂದೊಪ್ಪಿ ನಾವು ವ್ಯಾಕರಣಾದಿಶಾಸ್ತ್ರಗಳಲ್ಲಿ ಗಾಢತೆ ಮೊದಲಾದವುಗಳನ್ನು ಪಡೆದಿಲ್ಲವರಾಗಿಲ್ಲವೇನು।। ಆಗೇ ಇದ್ದೇವೆ ಎಂದು ಅನುವ್ಯಾಖ್ಯಾನವನ್ನು ವ್ಯಾಖ್ಯಾನ ಮಾಡುವುದಕ್ಕೆ ಉಪಯುಕ್ತವಾದ ಪಾಂಡಿತ್ಯವು ಇದೆ ಎಂದು ತಿಳಿಸಲು ಈ ಶ್ಲೋಕ ಎಂದೂ ಕೆಲವರು ಹೇಳುತ್ತಾರೆ.

## ವ್ಯಾಖ್ಯಾನ ಎಂದರೇನು?

(ರಸರಂಜನೀ) – 'ವ್ಯಾಖ್ಯಾನಂ ಹಿ ಪೂರ್ವಪೂರ್ವಪ್ರಯುಕ್ತಪದವಿಜಾತೀಯೈಃ ಸಜಾತೀಯಾ-ರ್ಥಪ್ರತಿಪಾದಕೈರಪಿ ಅನೇಕೈಃ ಪದೈಃ ಗಭೀರಾಣಿ ನಾನಾಜಾತೀಯಾನಿ ವಾಕ್ಯಾನಿ ಕಲ್ಪಯಿತ್ವಾ ಅನ್ಯ-ಅನಿವಾರ್ಯಮಾನೋಪನ್ಯಾಸೇನ ತತ್ತನ್ಮೂಲಾಭಿಹಿತ-ಅಭಿಯುಕ್ತಸಂಪ್ರದಾಯಗತ-ಅರ್ಥ-ಸಮರ್ಥನರೂಪಂ ಪ್ರೇಕ್ಷಾವದೀಕ್ಷಾಸ್ಪದಂ ತೇಭ್ಯೋ ಮಾನ್ಯತ್ವಪ್ರದಂ ಚ ಮೂಲಮಪಿ ಸಾಧಾ-ರಣಾನವಗ್ರಾಹ್ಯಮನೇಕಾರ್ಥಗರ್ಭಂ ಚ ।

'ನ ಶಬ್ದಾಬ್ಧೌ ಗಾಢಾಃ' - ಚಂಚರೀಕತಿ ಮೇ ಮನಃ ಎಂದು ಟೀಕಾಚಾರ್ಯರು ಅನುವ್ಯಾಖ್ಯಾನಕ್ಕೆ ವಿಶಿಷ್ಟವಾದ ವ್ಯಾಖ್ಯಾನವನ್ನು ಮಾಡುತ್ತೇನೆಂದು ಸೂಚನೆ ಮಾಡಿದ್ದಾರೆ. ಇದು ಸರಿಯಲ್ಲ. ಏಕೆಂದರೆ ವ್ಯಾಖ್ಯಾನವೆಂದರೆ ಈ ರೀತಿಯಾದದ್ದು - ಒಂದನ್ನು ವ್ಯಾಖ್ಯಾನ ಎಂದು ಕರೆಯ-ಬೇಕಾದರೆ ಅದರಲ್ಲಿ ಮೂಲಕ್ಕೆ ವ್ಯಾಖ್ಯಾನಮಾಡಿದ ತಮ್ಮ ಮೊದಲು ಮೊದಲು ಬಂದ ಮಾತುಗಳಿಗೆ ತಾವೇ ಅದೇ ಅರ್ಥವನ್ನು ವಿವರಿಸುವ ಬೇರೆ ಬೇರೆ ಪದಗಳನ್ನು ಗಂಭೀರವಾದದ್ದನ್ನು ಸ್ವೀಕರಿಸಿ ಅನೇಕ ಶೈಲಿಯ ವಾಕ್ಯಗಳನ್ನು ಕಲ್ಪನೆ ಮಾಡಿ ಹೇಳುವಂತಹದ್ದು. ಅಲ್ಲದೆ ಪ್ರತಿವಾದಿಗಳು ತಡೆಯದಿರುವ ಪ್ರಮಾಣವನ್ನು ಹೇಳುವ ಮೂಲಕ ಮೂಲಗ್ರಂಥದಿಂದ ಹೇಳಲ್ಪಟ್ಟ ಹಾಗೂ ಸಂಪ್ರದಾಯದಿಂದ ಬಂದ ಅರ್ಥವನ್ನು ಸಮರ್ಥನೆ ಮಾಡುವಂಥದ್ದಾಗಿರಬೇಕು. ಆಗ ಅದು ಬುದ್ಧಿವಂತರಿಗೆ ಪ್ರೀತ್ಯಾಸ್ಪದವಾಗುವುದು. ಹಾಗೆಯೇ ಅವರಿಗೆ ಮಾನ್ಯತ್ವವನ್ನು ತಂದುಕೊಡುವುದು ಆಗಿರಬೇಕು.

ಇನ್ನು ಮೂಲವಾದರೋ 'ಮೂಲಮಪಿ ಸಾಧಾರಣ-ಅನವಗ್ರಾಹ್ಯಂ ಅನೇಕಾರ್ಥಗರ್ಭಂ ಚ' ಎಂದಂತೆ ಸಾಧಾರಣವಾದ ವ್ಯುತ್ಪತ್ತಿ ಇರುವವರಿಂದ ಗ್ರಾಹ್ಯವಲ್ಲದ ವಿಷಯಗಳನ್ನು ತಿಳಿಸುತ್ತ ಅನೇಕಾರ್ಥವನ್ನು ಒಳಗೊಂಡಿರಬೇಕು - ಎಂದು.

## ವ್ಯಾಖ್ಯಾನಪ್ರವೃತ್ತಿಗೆ ಬೇಕಾದ ಸಾಧನಗಳು

(ರಸರಂಜನೀ) – ನ ಚೇದೃಶಮೂಲಸ್ಯೇದೃಶಂ ವ್ಯಾಖ್ಯಾನಂ ಅನಧಿಗತವ್ಯಾಕರಣಮೀಮಾಂಸಾ-ನ್ಯಾಯಶಾಸ್ತ್ರಾಣಾಂ ಚಿರಗುರುಕುಲವಾಸಾನಾಸಾದಿತಗೋಪ್ಯಜ್ಞೇಯವಿಶೇಷಾಣಾಂ ಶಕ್ಯಕರಣಮ್ । ನ ಚೇದಂ ವಿಶೇಷಣದ್ವಯಮೇಷು ಸಂಭಾವಿತಕಲ್ಪನಂ ಕಥಂಚಿತ್ ಅಲ್ಪಕಾಲಗುರುಕುಲವಾಸ-ಸತ್ತ್ವೇಽಪಿ ಉಕ್ತವಿಧಸ್ಯಾಭಾವೇನ ತಸ್ಯೈವ ಗೋಪ್ಯಪ್ರಮೇಯಪ್ರಾಪ್ತ್ಯುಪಾಯತ್ವೇನ ದ್ವಿತೀಯ-ವಿಶೇಷಣಾಭಾವಾತ್ । ಆದ್ಯವಿಶೇಷಣಕಲ್ಪನಸ್ಯ ತು ಮುಮೂರ್ಷುಶಷ್ಕುಲೀಭಕ್ಷಣಶಕ್ತಿಸಂಭಾ-ವನಾತುಲ್ಯತ್ವಾತ್ ಅಶಕ್ಯಕರಣೇ ಪ್ರವೃತ್ತೌ ಚ ಪ್ರೇಕ್ಷಾವತ್ತ್ವಹಾನೇರಿತಿ ।

ಈ ರೀತಿಯ ಮೂಲವಾಕ್ಯಕ್ಕೆ ಈ ರೀತಿಯಾದ ವ್ಯಾಖ್ಯಾನವನ್ನು ಮಾಡಬೇಕಾದರೆ ಎರಡು ಅಂಶಗಳನ್ನು ವ್ಯಾಖ್ಯಾನಕಾರರು ಹೊಂದಿರಬೇಕು. ಇವೆರಡಿಲ್ಲದಿದ್ದರೆ ಅಸಾಧ್ಯ. (1) ವ್ಯಾಕರಣ-ಮೀಮಾಂಸಾನ್ಯಾಯಶಾಸ್ತ್ರಾದಿಗಳ ಅಧ್ಯಯನವಾಗಿರಬೇಕು. (2) ಬಹಳ ಕಾಲದವರೆಗೆ ಗುರುಕುಲ-ವಾಸಮಾಡುವ ಮೂಲಕ ಸಂಪಾದನೆ ಮಾಡಿದ ರಹಸ್ಯವಾದ ತಿಳಿಯಬೇಕಾದ ವಿಷಯಗಳನ್ನು ತಿಳಿದುಕೊಂಡಿರಬೇಕು. ಇವೆರಡರಲ್ಲಿ ಟೀಕಾಕೃತ್ಪಾದರಲ್ಲಿ ಕಥಂಚಿತ್ ಅಲ್ಪಕಾಲ ಗುರುಕುಲವಾಸ-ವಿದ್ದರೂ ಹಿಂದೆ ಹೇಳಿದ ಎರಡನೆಯ ವಿಶೇಷಣವಿಲ್ಲವಾದ್ದರಿಂದ ವ್ಯಾಖ್ಯಾನ ಮಾಡಲು ಅಸಾಧ್ಯ.

ಏಕೆಂದರೆ, ಚಿರಗುರುಕುಲವಾಸವೇ ಗೋಪ್ಯಪ್ರಮೇಯಗಳನ್ನು ಹೊಂದುವುದಕ್ಕೆ ಉಪಾಯ. ಇನ್ನು ಮೊದಲನೆಯ ವಿಶೇಷಣವನ್ನು ಕಲ್ಪಿಸುವುದಾದರೋ 'ಮುಮುರ್ಷುಶಷ್ಕುಲೀಭಕ್ಷಣಶಕ್ತಿಸಂಭಾವನಾತುಲ್ಯತ್ವಾತ್' ಅಂದರೆ ಮೂರ್ಛೆಹೊಂದಿದ ವ್ಯಕ್ತಿಗೆ ಚಕ್ಕುಲಿ ತಿನ್ನುವ ಶಕ್ತಿಯು ಸಂಭಾವಿತ-ವಾದಂತೆ ಮಾಡಲು ಅಸಾಧ್ಯವಾದ ಕೆಲಸದಲ್ಲಿ ಟೀಕಾಚಾರ್ಯರು ಪ್ರವೃತ್ತಿ ಮಾಡಿದರೆ ಪ್ರೇಕ್ಷಾವಂತರೆಂದಾಗುವುದಿಲ್ಲ. ಹಾಗಾಗಿ ಅವರಿಗೆ ಸ್ವಲ್ಪವಾದರೂ ವ್ಯಾಕರಣಮೀಮಾಂಸಾ-ನ್ಯಾಯಶಾಸ್ತ್ರಗಳ ಅಧ್ಯಯನವಾಗಿದೆಯೆಂದೇ ಅರ್ಥ.

## ಸ್ವವಿಹಾರಪ್ರಕಾರಸೂಚನೆ

(ರಸರಂಜನೀ) – ತದಾನೀಂತನಮಂದಮತಿಮನೋವಚನಶಂಕಾಪಿಶಾಚಪೀಡಾಮಾತ್ಸರ್ಯ-ಮಹಾಗ್ರಹಾನುಗ್ರಹೋಪಗೂಢಂ ಪರಿಹರನ್ ಅನುವ್ಯಾಖ್ಯಾನಗಂತ್ರಸಾಧಾರಣಾನವಧಾರಣೇ-ಯಾರ್ಥಾನುಸಂಧಾನೋಷೋದ್ವಲಿತಾಮಲನಿಜಮಾನಸಸಮುದಿತಾಲೌಕಿಕಾರ್ಥಸಾಕ್ಷಾತ್ಕಾರಸಮು-ದ್ಭೂತನಿಜಾನಂದಸುಧಾಂಭೋಧಿನಿಮಗ್ನೋऽಪಿ ಶ್ರೀಗುರುಚರಣಭಕ್ತಿರಸಲಹರೀವಶೇನ ಕ್ವಾಪ್ಯಾ-ತ್ಯಂತಿಕಾವಸ್ಥಾನಮನಾಪನ್ನ ಇವಾಂತಿಕವಿನತವಿದ್ಯಾತನಯಾನಭಿಮುಖೀಕೃತ್ಯ ಸ್ವವಿಹಾರಪ್ರಕಾರಂ ವಾಗ್ವಿಸ್ತರೇಣ ಸೂಚಯತಿ – **ನ ಶಬ್ದಾಬ್ಧಾವಿತಿ ॥** ಅಪಿ ಯದ್ಯಪಿ ವಯಂ ಶಬ್ದಾಬ್ಧೌ ಶಬ್ದ-ವಿಚಾರಪರೇ ವ್ಯಾಕರಣಶಾಸ್ತ್ರೇ ಗಾಧಾ ಅವಗಾಹಮಾನಾಃ ನಿದ್ರಾದಿಪರಿತ್ಯಾಗಪೂರ್ವಕ-ಸಂತತಾವರ್ತನೋರ್ಧ್ವದೇಶನಿರೀಕ್ಷಣಕ್ಲೇಶಾಸಾದಿತಾನುಸಂಧಾನವಂತೋ ನೇತಿ । ಏತತ್ಸೂಚನಾ-ಯೈವ ವ್ಯಾಕರಣಾದಿಪ್ರಸಿದ್ಧಪದಂ ವಿಹಾಯ – ಶಬ್ದಾಬ್ಧಾವಿತಿ ॥ ಅಭಿಜ್ಞಪದಮವಜ್ಞಾಯ "ಗಾಧಾ" ಇತಿ ಚೋಕ್ತಮ್ ।

ಈ ರೀತಿಯಾದ ಮಂದಮತಿಗಳ ಮನಸ್ಸಿನ ಹಾಗೂ ಮಾತಿನ ಶಂಕೆಯೆಂಬ ಪಿಶಾಚಿಯ ಪೀಡೆಯೆಂಬ, ಮಾತ್ಸರ್ಯವೆಂಬ ಮಹಾಗ್ರಹದ ಅನುಗ್ರಹದಿಂದ ಕೂಡಿರುವುದನ್ನು ಪರಿಹರಿಸುತ್ತ ಅನುವ್ಯಾಖ್ಯಾನದ ಅರ್ಥವನ್ನು ಅನುಸಂಧಾನ ಮಾಡಲು ಸರ್ವಸಮರ್ಥವಾದ ಅಲೌಕಿಕಾರ್ಥ-ಸಾಕ್ಷಾತ್ಕಾರವುಳ್ಳ ಅವರು ನಿಜವಾದ ಆನಂದಸುಧಾಸಮುದ್ರದಲ್ಲಿ ಮುಳುಗಿದ್ದರೂ ಮಧ್ವಾ-ಚಾರ್ಯರ ಭಕ್ತಿಯಿಲ್ಲದವನು ಏನನ್ನೂ ಮಾಡಲು ಸಾಧ್ಯವಿಲ್ಲ ಎಂಬುದನ್ನು ತಿಳಿಸುತ್ತ ಅತ್ಯಂತ-ವಿನಯದಿಂದ ಕೂಡಿದ ವಿದ್ಯಾವಂತರನ್ನು ಕುರಿತು ತಮ್ಮ ಶಾಸ್ತ್ರದಲ್ಲಿನ ವಿಹರಣವನ್ನು ತಮ್ಮ ಮಾತಿನ ಮೂಲಕ ಸೂಚನೆ ಮಾಡುತ್ತಿದ್ದಾರೆ – ನ ಶಬ್ದಾಬ್ಧೌ ಎಂಬುದಾಗಿ.

ನ ಶಬ್ದಾಬ್ಧೌ ಗಾಧಾಃ ಎಂಬಲ್ಲಿ ಶಬ್ದಾಬ್ಧೌ ಎನ್ನುವುದಕ್ಕೆ ವ್ಯಾಕರಣಶಾಸ್ತ್ರದಲ್ಲಿ ಎಂದರ್ಥ. ಶಬ್ದವನ್ನು ವಿಚಾರಮಾಡುವುದರಿಂದ ಎಂದರ್ಥ. ಇದರಲ್ಲಿ ಗಾಧಾಃ ಮುಳುಗಿರುವವರು ಎಂದರ್ಥ. ಅಂದರೆ ನಿದ್ರೆ ಮುಂತಾದವುಗಳನ್ನು ಬಿಡುತ್ತ ಸಂತತವಾಗಿ ಆವೃತ್ತಿಮಾಡುತ್ತ ಮೇಲೆ

ಆಕಾಶವನ್ನು ನೋಡುತ್ತ ಕಷ್ಟಪಟ್ಟು ವಿಷಯಗಳ ಅನುಸಂಧಾನ ಮಾಡುವುದು ಎಂದಲ್ಲ. ಇದನ್ನು ಸೂಚಿಸಲೆಂದೇ ವ್ಯಾಕರಣ ಮೊದಲಾದ ಪದಗಳು ಪ್ರಸಿದ್ಧವಿದ್ದರೂ ಶಬ್ದಾಬ್ಧಿ ಎಂಬ ಪದವನ್ನೇ ಹೇಳಿದ್ದಾರೆ. ಹಾಗೆಯೇ ಅಭಿಜ್ಞ ಎಂಬ ಪದವನ್ನು ತಿರಸ್ಕರಿಸಿ ಗಾಥಾಃ ಎಂದು ಹೇಳಿದ್ದಾರೆ. ಅಭಿಜ್ಞ ಎಂದರೆ ವಿಶೇಷವಾಗಿ ತಿಳಿದವರು.

### ನ ಚ ನಿಗಮಚರ್ಚಾಸು ಚತುರಾಃ

(ರಸರಂಜನೀ) – ನಿಗಮಚರ್ಚಾಸು ವೇದವಿಚಾರರೂಪೇ ಮೀಮಾಂಸಾಶಾಸ್ತ್ರೇ ಚತುರಾಃ = ಚಾತುರ್ಯವಂತಃ । ವ್ಯವಹಿತಾನಾಮಪಿ ವಾಕ್ಯಾನಾಂ ಕಿಂಚಿದೇಕವಾಕ್ಯತಾಸಂಪಾದನಂ ಕ್ವಚಿತ್ಚೈಕ-ಸ್ಥಾನಸ್ಥಿತಾನಾಂ ತತ ಏವ ಏಕವಾಕ್ಯತಾಯಾ ಪ್ರತೀಯಮಾನಾನಾಮಪಿ ಭಿನ್ನವಾಕ್ಯತಾಸಮರ್ಥ-ನಮ್ । ಅನ್ಯತ್ರ ಏಕಸ್ಮಿನ್ನೇವ ವಾಕ್ಯೇ ಕಿಂಚಿದನುವಾದಕಂ ಕಿಂಚಿದ್ ವಿಧಾಯಕಮಿತಿ ದ್ವಿಧಾಕಲ್ಪನಮಿತ್ಯಾದ್ಯನೇಕವಿಚಾರಪ್ರಕಾರಪ್ರತೀಕ್ಷಣಪ್ರಕಟಿತವಾಕ್ಯಪ್ರಬಂಧನಿಬಂಧನಾಭಿನಿವೇಶ-ವಂತೋ ನೇತಿ । ಏತದ್-ವ್ಯಂಜನಾಯೈವ 'ಪೂರ್ವತಂತ್ರೇ' ಇತಿ 'ಪ್ರಾಜ್ಞಾ' ಇತಿ ಚಾನುಕ್ತ್ವಾ 'ನಿಗಮಚರ್ಚಾ' ಇತಿ 'ಚತುರಾ' ಇತಿ ಚ ನಿವೇಶಿತಮ್ । ಅತ ಏವ ಪ್ರಾಯಪಾಠಾದೇಕವಚನೇ ಪ್ರಯೋಕ್ತವ್ಯೇಽಪಿ ವಿಚಾರಪ್ರಕಾರಬಹುತ್ವದರ್ಶನಾಯ ಬಹುವಚನಮ್ । ತೇನ ಚ ತಾವದನು-ಸಂಧಾನಾಯ ಸವಿಶೇಷಃ ಸೂಚಿತೋ ಭವತಿ । ನ ಕೇವಲಂ ಶಬ್ದಾಬ್ಧಾವೇವ ಗಾಹಾಭಾವವಂತಃ ಕಿಂತು ನಿಗಮಚರ್ಚಾಸು ಚತುರಾ ನ ಚ ಚಾತುರ್ಯಾಭಾವವಂತಶ್ಚೇತಿ । ವ್ಯಾಖ್ಯಾನೋಪ-ಯೋಗಿಧರ್ಮಾಭಾವಸಮುಚ್ಚಯೇ ಚಶಬ್ದಃ । ಏವಮುತ್ತರತ್ರಾಪಿ ಜ್ಞೇಯಮ್ ।

"ನ ಚ ನಿಗಮಚರ್ಚಾಸು ಚತುರಾಃ" - ಈ ಭಾಗದಿಂದ ಅಭಿಪ್ರೇತವಾದ ಅರ್ಥ ಇದು - ಅಲ್ಲಲ್ಲಿ ಹೇಳಿದ ವಾಕ್ಯಗಳಿಗೆ ಏಕವಾಕ್ಯತಾಸಂಪಾದನೆ ಮಾಡುವುದು. ಅರ್ಥಾತ್ ವ್ಯವಹಿತವಾಕ್ಯಗಳಿಗೆ ಒಂದೇ ಮುಖ್ಯಾರ್ಥವನ್ನು ಹೇಳುವಿಕೆ ಎನ್ನುವುದನ್ನು ಸಾಧನೆ ಮಾಡುವುದು. ಕೆಲವು ಕಡೆ ಒಂದೇ ಸ್ಥಾನದಲ್ಲಿ ಇದ್ದರೂ, ಆದ್ದರಿಂದಲೇ ಏಕವಾಕ್ಯತಾ ಇದೆ ಎಂದು ತೋರಿದರೂ ಅವುಗಳು ಭಿನ್ನವಾದ ಅರ್ಥಗಳನ್ನು ಹೇಳುವುದು, ಭಿನ್ನವಾಕ್ಯತೆಯನ್ನು ಸಮರ್ಥನೆ ಮಾಡುವುದು. ಇನ್ನು ಕೆಲವು ಕಡೆ ಒಂದೇ ವಾಕ್ಯದಲ್ಲಿ ಕೆಲವು ವಾಕ್ಯ ಅನುವಾದಕ ಕೆಲವು ವಾಕ್ಯ ವಿಧಾಯಕ ಎಂಬ ಎರಡುಕಲ್ಪನೆ ಮಾಡುವುದು. ಈ ಮುಂತಾದ ಅನೇಕ ವಿಚಾರಗಳ ಶೈಲಿಯ ತೀಕ್ಷ್ಣತೆಯಿಂದ ಪ್ರಕಟಗೊಂಡ ವಾಕ್ಯಪ್ರಬಂಧವನ್ನು ಅರ್ಥಾತ್ ವಾಕ್ಯಸಮೂಹವಾದ ಗ್ರಂಥವನ್ನು ಬರೆಯುವುದರಲ್ಲಿ ಅಭಿಮಾನ, ನಾನು ಮಾಡುತ್ತೇನೆಂಬ ಅಭಿನಿವೇಶವಿಲ್ಲ ಎಂದರ್ಥ. ಒಟ್ಟಾಗಿ ವೇದವಾಕ್ಯಗಳ ವಿಚಾರಮಾಡುವ ಮೀಮಾಂಸಾಶಾಸ್ತ್ರ ಓದಿದವರಲ್ಲಿ ಇರಬೇಕಾದ ಚಾತುರ್ಯ ನನಗಿಲ್ಲ ಎಂದು ಹೇಳಿದ್ದಾರೆ.

ಇಷ್ಟು ಅಂಶವನ್ನು ತಿಳಿಸಲೆಂದೇ ಅರ್ಥಾತ್ ಈ ವಿಷಯವನ್ನು ಅಭಿವ್ಯಕ್ತಿಮಾಡುವುದಕ್ಕೋಸ್ಕರವೇ 'ಪೂರ್ವತಂತ್ರ' ಎಂದು 'ಪ್ರಾಜ್ಞಾಃ' ಎಂದು ಹೇಳದೇ 'ನಿಗಮಚರ್ಚಾ' ಹಾಗೂ 'ಚತುರಾಃ' ಎಂದು ಹೇಳಿದ್ದು.

## ನ ಚ ನ್ಯಾಯೇ ಪ್ರೌಢಾಃ ಹಾಗೂ ವಿದಿತವೇದ್ಯಾಃ

(ರಸರಂಜನೀ) – ನ್ಯಾಯೇ ಯುಕ್ತಿಶಾಸ್ತ್ರೇ ಪ್ರೌಢಾಃ = ಪ್ರೌಢಿಮೋಪೇತಾಃ ಭಾಷ್ಯಕಾರಾದಿಭಾಷಿತ-ಪ್ರಮೇಯಜಾತೇ ಸ್ವಬುದ್ಧ್ಯಾ ಲಾಘವಯುಕ್ತಿಂ ಸಾಧಿಕಾಂ ಪ್ರಕಲ್ಪ್ಯ ಕಸ್ಯಚಿದಧೀರಣಕಸ್ಯಾಪಿ ಸ್ವೀಕರಣಂ ಕಿಂಚಿದ್ಬಾಧಕಂ ಚ ಹೇತುಂ ಸಂಪಾದ್ಯ ತದನುದಿತತದ್ವಿರೋಧಿಪ್ರಮೇಯಪ್ರಕಲ್ಪನಮಿತ್ಯಾದಿ ಬಹುವಿಧವೈಯಾತ್ಯೋಪೇತಾ ನೇತಿ । ಅತ ಏವ 'ಗೌತಮಶಾಸ್ತ್ರೇ ಶಿಕ್ಷಿತಾ' ಇತ್ಯಾದಿ-ಪದಪರಿತ್ಯಾಗೇನ 'ನ್ಯಾಯೇ ಪ್ರೌಢಾಃ' ಇತಿ ನಿಬದ್ಧಮ್ । ವಿದಿತಂ ವಿವಿಧವಿನೇಯವಂಚನೇನ ವಿಜನವನಾದಾವವಿರತಗುರುಪದಸೇವಾಸು ಜ್ಞಾತಂ ವೇದ್ಯಂ ಮಹತಾ ಪ್ರಯತ್ನೇನಾಪಿ ಜ್ಞೇಯಂ ಗೋಪ್ಯಂ ಪ್ರಮೇಯಂ ಯೈಸ್ತೇ ತಥಾ ನೇತಿ । ಏತದರ್ಥಮೇವ 'ಅಧೀತೋತ್ತರತಂತ್ರಾ' ಇತ್ಯನಭಿಧಾಯ 'ವಿದಿತವೇದ್ಯಾ' ಇತಿ ವಚನಮ್ ।

'ನ ಚ ನ್ಯಾಯೇ ಪ್ರೌಢಾಃ'- ಯುಕ್ತಿಶಾಸ್ತ್ರವಾದ ನ್ಯಾಯಶಾಸ್ತ್ರದಲ್ಲಿ ಪ್ರೌಢಿಮೆಯನ್ನು ಹೊಂದಿದ-ವರಲ್ಲ. ಅಂದರೆ ಭಾಷ್ಯಕಾರ, ವಾರ್ತಿಕಕಾರ ಮುಂತಾದವರು ಹೇಳಿದ ಪ್ರಮೇಯಸಮೂಹದಲ್ಲಿ ತಮ್ಮ ಸ್ವಂತಬುದ್ಧಿಯಿಂದ ಲಾಘವಯುಕ್ತಿಯನ್ನು ಅವರು ಹೇಳಿದ ಪ್ರಮೇಯವಿಷಯದಲ್ಲಿ ಸಾಧಕವನ್ನಾಗಿ ಅನುಮಾನ ಮಾಡಿ, ತಿರಸ್ಕಾರಕ್ಕೆ ಅವಕಾಶವಿರುವ ವಾಕ್ಯವನ್ನು ಸ್ವೀಕಾರ ಮಾಡಿ ಅಥವಾ ಮಂದವಾದ ತಿರಸ್ಕಾರ ಮಾಡಬೇಕಾದ ಪ್ರತಿವಾದಿಮಾತುಗಳನ್ನು ಸ್ವೀಕಾರ ಮಾಡಿ ಅದಕ್ಕೆ ಬಾಧಕವಾದ ಹೇತುವನ್ನು ಸಂಪಾದನೆ ಮಾಡಿ ಅವನು ಹೇಳದೇ ಇರುವ ಅವನಿಗೆ ವಿರುದ್ಧವಾದ ಪ್ರಮೇಯಗಳನ್ನು ಕಲ್ಪಿಸುವುದು ಮುಂತಾದ ಅನೇಕ ಪ್ರಕಾರದ ಧಾರ್ಷ್ಟ್ಯದಿಂದ ಕೂಡಿದವರಲ್ಲ. ಆದ್ದರಿಂದಲೇ 'ಗೌತಮಶಾಸ್ತ್ರೇ ಶಿಕ್ಷಿತಾಃ' ಮುಂತಾದ ಪದಗಳನ್ನು ಹೇಳದೇ 'ನ್ಯಾಯೇ ಪ್ರೌಢಾಃ' ಎಂದು ಹೇಳಿದ್ದಾರೆ.

'ವಿದಿತವೇದ್ಯಾಃ' - ಗೋಪ್ಯವಿಷಯಗಳನ್ನು ತಿಳಿಯಲು ಅಯೋಗ್ಯರಾದ ಅನೇಕತರಹದ ಶಿಷ್ಯರಿಗೆ ವಂಚನೆ ಮಾಡುವ ಮೂಲಕ, ಜನರೇ ಇಲ್ಲದಿರುವ ಕಾಡಿಗೆ ಹೋಗಿ ಅವಿರತಗುರುಗಳ ಪಾದಸೇವನೆಯಿಂದ ತಿಳಿದಿದ್ದ, ದೊಡ್ಡ ಪ್ರಯತ್ನದಿಂದಲೂ ತಿಳಿಯಬೇಕಾದ ಪ್ರಮೇಯವುಳ್ಳವರಲ್ಲ.

## ಕಿಮಪಿ ಚ ವದಂತಃ

(ರಸರಂಜನೀ) – ಕಿಮಪಿ ಚ ವದಂತಃ ಸ್ಮ ತಸ್ಮಾದೇವೇತಿ । ಕಿಮಪಿ ವಿಲಕ್ಷಣಂ ಶಬ್ದಾಬ್ಧ್ಯವ-

ಗಾಹಾದಿಮದ್ಭಿರನ್ಯೈಃ ಸರ್ವಥಾಪಿ ಪ್ರತಿಪಾದಯಿತುಮಶಕ್ಯಮಧ್ಯಾತ್ಮಸಂಜ್ಞಿತಂ ಮೋಕ್ಷಾಂತರಂಗ-ಸಾಧನವಿಷಯೀಭೂತಂ ಗೋಪ್ಯಂ ಪರತತ್ವಂ ತದ್ಧ್ಯಾನಾದ್ಯುಪಯುಕ್ತಂ ಪ್ರತೀಕವಿಶೇಷಾದಿ-ರೂಪಮಪರತತ್ವಂ ಚೇತಿ ಸಮುಚ್ಚಯೇ ದ್ವಿತೀಯಃ । ತಥಾ ಕಿಮಪಿ ಶಬ್ದಾಧ್ಯವಗಾಹಾದಿಮದ್ಭಿರಪಿ ಪರೀಕ್ಷಕೈರ್ನಿಬದ್ಧುಮಶಕ್ಯಮುಕ್ತವಿಧಪದಸಮುದಾಯಂ ವಾ ಪದನಿವಹರೂಪವಾಕ್ಯನಿಚಯಂ ವಾ ಮಾನವ್ರಾತಂ ವಾ ತತ್ತ್ವಬೋಧೋಪಯೋಗಿಪರೀಕ್ಷಕವ್ಯುತ್ಪಾದನೀಯಪ್ರಮೇಯಜಾತಂ ವಾ ವದಂತಃ ಪ್ರತಿಪಾದಯಂತ ಇತಿ ।

ಹೀಗಾಗಿ ವ್ಯಾಖ್ಯಾನಮಾಡಲು ಬೇಕಾದ ಧರ್ಮಗಳಿಲ್ಲದೇ ಇದ್ದರೂ ದೊಡ್ಡವರಿಗೆ ಮಾನ್ಯರಾಗಿ-ದ್ದೇವೆ. ಹೇಗೆಂದರೆ 'ಕಿಮಪಿ ಚ ವದಂತಃ' - 'ಕಿಮಪಿ ಚ' ಎಂದರೆ 'ಏನೋ ಒಂದು ವಿಷಯವನ್ನು ಹೇಳುತ್ತ' ಎನ್ನುವುದಕ್ಕೆ ಈ ರೀತಿಯಾದ ಅರ್ಥ. ವಿಲಕ್ಷಣವಾದ ಶಬ್ದಶಾಸ್ತ್ರವೆಂಬ ಸಮುದ್ರದಲ್ಲಿ ಮುಳುಗಿದ ಬೇರೆಯವರಿಂದಲೂ ಸರ್ವಥಾ ತಿಳಿಸಲು ಅಸಾಧ್ಯವಾದ ಅಧ್ಯಾತ್ಮ ಎಂದು ಕರೆಯುವ ಮೋಕ್ಷಕ್ಕೆ ಅಂತರಂಗಸಾಧನವಾದವುಗಳ ಜ್ಞಾನವನ್ನು ವಿಷಯೀಕರಿಸುವ ರಹಸ್ಯವಾದ ಪರತತ್ವ ಹಾಗೂ ಅದರ ಧ್ಯಾನ ಮುಂತಾದವುಗಳಿಗೆ ಉಪಯುಕ್ತವಾದ ವಿಶೇಷವಾದ ಪ್ರತೀಕ ಮುಂತಾದ ಅಪರತತ್ವದ ಬಗ್ಗೆ ಹೇಳುತ್ತಾ ಎಂದರ್ಥ.

ಅಥವಾ – ಹಾಗೆಯೇ ಕಿಮಪಿ ಎಂದರೆ, ಶಬ್ದಶಾಸ್ತ್ರದ ಸಮುದ್ರದಲ್ಲಿ ಮುಳುಗಿದವರಾದ ಬುದ್ಧಿವಂತರೂ ಕೂಡ ಬರೆಯಲು ಅಸಾಧ್ಯವಾದ, (ಸುಧಾದಲ್ಲಿ ಬಂದ) ಅನೇಕಪದಗಳ ರಾಶಿಯನ್ನು ಅಥವಾ ಪದಸಮುದಾಯವಾದ ವಾಕ್ಯರಾಶಿಯನ್ನು ಅಥವಾ ಪ್ರಮಾಣಗಳ ರಾಶಿಯನ್ನು ಅಥವಾ ಪರಾಪರತತ್ವಗಳ ಜ್ಞಾನಕ್ಕೆ ಬೇಕಾದ ಬುದ್ಧಿವಂತರು ವ್ಯುತ್ಪಾದನೆ ಮಾಡುವ ಅನೇಕ ಪ್ರಮೇಯಗಳನ್ನು ಹೇಳುತ್ತಾ ಎಂದರ್ಥ.

## ಗುರುಕಾರುಣ್ಯಸರಣಿಂ ಪ್ರಪನ್ನಾಃ

(ರಸರಂಜನೀ)– ಮಾ ಭೂನ್ಮಾನ್ಯತ್ವಪ್ರಯೋಜಕೋಕ್ತವಿಧವ್ಯಾಖ್ಯಾನಕರ್ತೃತ್ವಾಸತ್ತ್ವೇನೋಕ್ತಾಪತ್ತಿ-ರುಕ್ತವಿಧವ್ಯಾಖ್ಯಾನಪ್ರಯೋಜಕಧರ್ಮಾಭಾವೇಽಪಿ ತತ್ಕರ್ತೃತ್ವಾಂಗೀಕಾರೇಣ ತು ಸ್ಯಾದೇವ ಇತ್ಯತಃ ತತ್ಪ್ರಯೋಜಕಸ್ಯಾಪಿ ಭಾವಾನ್ನೋಕ್ತಾಪತ್ತಿರಿತಿ ಭಾವೇನಾಹ — **ಗುರುಕಾರುಣ್ಯಸರಣಿಂ ಪ್ರಪನ್ನಾಃ** ಸ್ಮಃ ॥ ತಸ್ಮಾದೇವೇತಿ । ನನ್ವೇವಂ ಸ್ವವಚನವಿರೋಧಪ್ರಸಕ್ತಿಃ । ಗುರುಕಾರುಣ್ಯಸ್ಯಾಪಿ ವ್ಯಾಖ್ಯೋಪಯೋಗಿಧರ್ಮನಿವಿಷ್ಟಸ್ಯ ತನ್ನಿಮಿತ್ತಕವ್ಯಾಖ್ಯಾನಕರ್ತೃತ್ವರೂಪಮಾನ್ಯತ್ವೋಪಯೋಗಿ-ಧರ್ಮಸ್ಯ ಚ ಸ್ವೀಕಾರಾದಿತ್ಯತ ಉಕ್ತಮ್ । ಪರಂ ಕೇವಲಂ **ಗುರುಕಾರುಣ್ಯಸರಣಿ**ಮಿತಿ ।

ಮಹಾತ್ಮರಿಗೆ ಮಾನ್ಯರಾಗಬೇಕಾದರೆ ಶಬ್ದಶಾಸ್ತ್ರಾದಿಅವಗಾಹನೆ ಇರುವ ವ್ಯಕ್ತಿಯು ವ್ಯಾಖ್ಯಾನ-

ಮಾಡಬೇಕು. ಅದು ನಿಮ್ಮಲ್ಲಿ ಇಲ್ಲವಾದ್ದರಿಂದ ನೀವು ಮಾನ್ಯರಾಗಲು ಹೇಗೆ ಸಾಧ್ಯ? ಎಂಬ ಆಪತ್ತಿಯನ್ನು ತೋರಿಸಿದ್ದರು. ಅದಕ್ಕೆ ಉತ್ತರವಾಗಿ ವ್ಯಾಖ್ಯಾನಪ್ರಯೋಜಕವಾದ ಧರ್ಮವಿಲ್ಲದಿದ್ದರೂ ಇಂತಹ ವಿಲಕ್ಷಣವಾದ ವ್ಯಾಖ್ಯಾನಕ್ಕೆ ಕರ್ತೃವಾದ್ದರಿಂದಲೇ ಆ ವ್ಯಾಖ್ಯಾನಕ್ಕೆ ಬೇಕಾದ ಧರ್ಮವೂ ಅವರಲ್ಲಿದೆ ಎಂದು ತಿಳಿಯುತ್ತದೆ. ಅಲ್ಲ ಈ ರೀತಿ ಹೇಳಿದರೆ ಸ್ವವಚನವಿರೋಧ. ಈಗ ತಾನೇ ಶಬ್ದಶಾಸ್ತ್ರಾದ್ಯವಗಾಹನರೂಪವಾದ ವ್ಯಾಖ್ಯಾನಪ್ರಯೋಜಕಧರ್ಮವಿಲ್ಲವೆಂದು ಈ ಹಿಂದೆ ಹೇಳಿ ಈಗ ತಾದೃಶವ್ಯಾಖ್ಯಾನಕರ್ತೃತ್ವೇನ ಅವೆಲ್ಲವೂ ಇದೆ ಎಂದು ಹೇಳಿದಂತಾಯಿತು. ಇದಕ್ಕೆ ಉತ್ತರ - ವ್ಯಾಖ್ಯಾನಪ್ರಯೋಜಕವಾದ ಧರ್ಮ ಗುರುಕಾರುಣ್ಯವೂ ಆಗಿದೆ. ಹಾಗಾಗಿ ತನ್ನಿಮಿತ್ತಕವಾಗಿ ವ್ಯಾಖ್ಯಾನಕರ್ತೃತ್ವವಿರುವುದರಿಂದ ಮಹಾತ್ಮರಿಗೆ ನಾವು ಮಾನ್ಯರಾಗಿದ್ದೇವೆ. ಇದರ ಸಾರ - ವ್ಯಾಖ್ಯಾನಪ್ರಯೋಜಕವಾದ ಧರ್ಮ ಕೇವಲ ಗುರುಪ್ರಸಾದವಷ್ಟೆ. ಅರ್ಥಾತ್ ಗುರುಪ್ರಸಾದವೇ ಪ್ರಮುಖಸಾಧನ. ಅದಿಲ್ಲದಿದ್ದರೆ ವ್ಯಾಖ್ಯಾನರಚನೆಯೇ ಅಶಕ್ಯ. ಇದರ ಮೇಲೆ ಆಕ್ಷೇಪಪರಿಹಾರಗಳನ್ನು ಮುಂದಿನ ರಸರಂಜನೀ ಭಾಗದಲ್ಲಿ ನೋಡಬಹುದು.

## ಗುರುಕಾರುಣ್ಯವೇ ಮುಖ್ಯವಾದ ಸಾಧನ

(ರಸರಂಜನೀ) – ಅಯಮಾಶಯಃ – ವಿಶಿಷ್ಟವ್ಯಾಖ್ಯಾನೇ ಶಬ್ದಾಬ್ಧ್ಯವಗಾಹಾದಿರೇವ ಪ್ರಧಾನಂ ಸಾಧನಮ್ । ಗುರುಪ್ರಸಾದಸ್ತು ಸಹಕಾರಿಮಾತ್ರಮ್ ಉಕ್ತತಾದೃಶಪ್ರಯೋಜಕಂ ಪ್ರಯೋಜ್ಯ ನಿಬಂಧನಿರ್ಮಾತೃತ್ವಮೇವ ನಿಖಿಲನಿಷೇವ್ಯತಾನಿಯಾಮಕಮಿತಿ ಚಾನ್ಯೇ ಮನ್ಯಂತೇ । ತನ್ಮಹತಾಂ ಮತಮತಿವರ್ತತ ಇತಿ ಬೋಧ್ಯಾನ್ ಬೋಧಯಿತುಂ ಪ್ರಾಗ್ಗುರುಕರುಣಾಸಚಿವಾನಾಂ ತೇಷಾ-ಮಸ್ಮದ್ವ್ಯಾಖ್ಯಾನೇ ಮುಖ್ಯಸಾಧನತಯಾಽಭಾವೋಽಭಿಹಿತಃ ತಾದೃಶಸಾಮಗ್ರೀಸಮುದ್ಭೂತ-ವ್ಯಾಖ್ಯಾನಕರ್ತೃತ್ವಸ್ಯ ಮಹನ್ಮಾನತ್ವೇ ಇದಾನೀಂ ತು ಗುರುಕಾರುಣ್ಯಮೇವೇತರನಿರಪೇಕ್ಷ-ತಯೋಕ್ತವಿಧವ್ಯಾಖ್ಯಾನೇ ಮುಖ್ಯಂ ಸಾಧನಂ ತದೇವ ಚ ತದುಪಯೋಗಿ ಸರ್ವಂ ಸಂಪಾದ-ಯತೀತಿ ಕಿಂಶಬ್ದಾಬ್ಧ್ಯವಗಾಹಾದಿನಾ । ತಥಾ ತತ್ಸಂಭವನಿಬಂಧನಿರ್ಮಾತೃತ್ವಮೇವ ಮಹನ್ಮಹ-ನೀಯತಾಪ್ರಾಪಕಮಿತ್ಯಭಿಧೀಯತ ಇತಿ ಕ್ವೋಕ್ತಪ್ರಸಕ್ತಿಪ್ರಸರ ಇತಿ । ನನು ಗುರ್ವನುಗ್ರಹ-ರೂಪಸಹಕಾರಿಸಮವಹಿತಶಬ್ದಾಬ್ಧ್ಯವಗಾಹಾದಿರೂಪಮುಖ್ಯಸಾಧನಜನ್ಯಸ್ಯಾಪಿ ವ್ಯಾಖ್ಯಾನಸ್ಯ ಬಹುತಂತ್ರಪರಿಚಯವದ್ಭಿಃ ವಿನಿರ್ಜಿತಾನೇಕವಿದ್ವತ್ಪರಿಷದ್ಭಿಃ ಮಹದ್ಭಿರತಿಶ್ಲಾಘ್ಯತಾಯಾ ದರ್ಶನೇನ ಕಥಂ ತತ್ಕರ್ತೃತ್ವಸ್ಯ ಮಹನ್ಮಾನನೀಯತ್ವನಿಮಿತ್ತತಾನಿಷೇಧ ಇತ್ಯತೋ 'ಬೃಹತಾಂ' ಇತಿ ವಕ್ತುಂ ಶಕ್ಯೇಽಪಿ 'ಮಹತಾಂ' ಇತ್ಯುಕ್ತಮ್ ।

ಇದು ಅಭಿಪ್ರಾಯ – ವಿಶಿಷ್ಟವಾದ ವ್ಯಾಖ್ಯಾನಮಾಡಬೇಕಾದರೆ ವ್ಯಾಕರಣಾದಿಶಾಸ್ತ್ರಗಳ ಪರಿಜ್ಞಾನವೇ ಪ್ರಧಾನಸಾಧನ ಗುರುಪ್ರಸಾದವಾದರೋ ಕೇವಲ ಸಹಕಾರಿ. ಹಾಗಾಗಿ ಯಾವುದೇ

ಪ್ರಬಂಧವನ್ನು ನಿರ್ಮಾಣಮಾಡಬೇಕಾದರೆ ಕೇವಲ ಅದು ಗುರುಕಾರುಣ್ಯದಿಂದಷ್ಟೇ ನಿರ್ಮಿತ-ವಾದಲ್ಲಿ ಸಕಲರೂ ಅದನ್ನು ಸೇವಿಸಲು ಅಸಾಧ್ಯ ಎಂದು ಕೆಲವರು ಪ್ರತಿಪಾದಿಸುತ್ತಾರೆ. ಆದರೆ ಇದು ದೊಡ್ಡವರ ಸಿದ್ಧಾಂತಕ್ಕೆ ವಿರುದ್ಧವಾದದ್ದು ಎಂದು ಶಿಷ್ಯರಿಗೆ ತಿಳಿಸಲು ಮೊದಲಿಗೆ ಗುರುಕರುಣೆಯಿಂದ ಸಹಕೃತವಾದ ಶಬ್ದಶಾಸ್ತ್ರಾದಿಗಳ ಪರಿಜ್ಞಾನವು ನಾವು ಮಾಡುವ ವ್ಯಾಖ್ಯಾನದಲ್ಲಿ ಮುಖ್ಯಸಾಧನವಾಗಿಲ್ಲ ಎಂದು ಹೇಳಿದರು. ಅಲ್ಲ ಹಾಗಾದರೆ ವಿಶಿಷ್ಟವಾದ ವ್ಯಾಖ್ಯಾನಕ್ಕೆ ಬೇಕಾದ ಸಾಮಗ್ರಿಯಾದ ಗುರುಕಾರುಣ್ಯಸಹಕೃತವಾದ ಅನೇಕಶಾಸ್ತ್ರಪರಿಜ್ಞಾನವು ನಿಮ್ಮ ವ್ಯಾಖ್ಯಾನದಲ್ಲಿ ಇಲ್ಲವಾದ್ದರಿಂದ ಸಜ್ಜನರು ಮಾನ್ಯಮಾಡುವ ವ್ಯಾಖ್ಯಾನ ನಿಮ್ಮದಾಗಲಿಲ್ಲ ಎಂದು ಆಕ್ಷೇಪವಿದೆಯೆಂದರೆ ಇದಕ್ಕೆ ಉತ್ತರವಿದು – ಹೌದು. ಎಲ್ಲ ರೀತಿಯಾದ ವ್ಯಾಖ್ಯಾನವು ಕೇವಲ ಗುರುಗಳ ಕಾರುಣ್ಯದಿಂದಲೇ ಸಾಧ್ಯ. ಅದೇ ಮುಖ್ಯಸಾಧನ. ಅದೇ ಪ್ರಬಂಧನಿರ್ಮಾಣಕ್ಕೆ ಉಪಯೋಗಿಯಾಗಿ ಎಲ್ಲವನ್ನೂ ಸಂಪಾದಿಸಿ ಕೊಡುತ್ತದೆ. ಹಾಗಾಗಿ ಶಬ್ದಾದಿಶಾಸ್ತ್ರಗಳ ಅವ-ಗಾಹನೆಯಿಂದ ಏನು ಪ್ರಯೋಜನ? ಹಾಗಾಗಿಯೇ ಕೇವಲ ಗುರುಕಾರುಣ್ಯದಿಂದ ನಿರ್ಮಿಸಿದ ಪ್ರಬಂಧನಿರ್ಮಾಣದಿಂದ ಮಹಾತ್ಮರಿಗೆ ಮಾನ್ಯರಾಗುತ್ತೇವೆ. ಇದರ ಸಾರ ಗುರುಕಾರುಣ್ಯವೇ ಎಲ್ಲದಕ್ಕೂ ಮುಖ್ಯಸಾಧನ ಎಂದು.

ಅಲ್ಲ. ಗುರ್ವನುಗ್ರಹವೆಂಬ ಸಹಕಾರಿಯಿಂದ ಶಬ್ದಶಾಸ್ತ್ರಾವಗಾಹನೆ ಮೊದಲಾದ ಮುಖ್ಯಸಾಧನಗ-ಳಿಂದ ಮಾಡಿದ ವ್ಯಾಖ್ಯಾನವನ್ನು ಅನೇಕ ಶಾಸ್ತ್ರಗಳ ಪರಿಚಯ ಇರುವವರೂ ಅನೇಕ ವಿದ್ವತ್ಸಭೆಗಳಲ್ಲಿ ಪ್ರತಿವಾದಿಗಳನ್ನು ಗೆದ್ದವರಾದ ಮಹಾತ್ಮರು ಚೆನ್ನಾಗಿ ಹೊಗಳುವುದರಿಂದ ಇದನ್ನು ಮಹಾತ್ಮರಿಗೆ ಮಾನನೀಯವಾಗಿಲ್ಲ ಎಂದು ನಿಷೇಧಮಾಡುವುದು ಹೇಗೆ? ಎಂಬ ಪ್ರಶ್ನೆ ಬಂದರೆ ಅದಕ್ಕೋಸ್ಕರ 'ಬೃಹತಾಂ' ಎಂದು ಹೇಳದೇ 'ಮಹತಾಂ' ಎಂದಿದ್ದಾರೆ.

### ಮಹಾತ್ಮರೆಂದರೆ ಪರತತ್ತ್ವವಿದ್ಯಾಬ್ಧೌ ಪ್ರವೀಣಾಃ ಎಂದರ್ಥ

(ರಸರಂಜನೀ) – ಅಯಮಭಿಸಂಧಿಃ – ನಾತ್ರೋಕ್ತವಿಶೇಷಣವಂತೋ ಮಹಾಂತೋಽಭಿ-ಮತಾಃ । ಕಿಂತು ಪರತತ್ತ್ವವಿದ್ಯಾಬ್ಧೌ ಪ್ರವೀಣಾ ಏವ । ಯಥೋಕ್ತಮ್ –

ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾಃ ವಿಮನ್ಯವಃ ಸುಹೃದಃ ಸಾಧವೋ ಯೇ ।
ಯೇ ವಾ ಮಯೀಶೇ ಕೃತಸೌಹೃದಾರ್ಥಾ ಜನೇಷು ದೇಹಂಭರವಾರ್ತಿಕೇಷು ॥
ಗೃಹೇಷು ಜಾಯಾತ್ಮಜರಾತಿರಾಸು ನ ಪ್ರೀತಿಯುಕ್ತಾ ಯಾವದರ್ಥಾಶ್ಚ ಲೋಕೇ । – ಇತ್ಯಾದಿ ।

ನ ಚ ತೇ ತಥಾವಿಧಾ ಇತಿ ಯುಕ್ತಮುಕ್ತಮಿತಿ ।

ಇದರ ತಾತ್ಪರ್ಯ – ದೊಡ್ಡವರಿಂದ ನಾವು ಮಾನ್ಯರಾಗಬೇಕಾದರೆ ಪ್ರಧಾನವಾಗಿ ಗುರುಪ್ರಸಾದ

ಒಂದೇ ಸಾಕು ಶಬ್ದಶಾಸ್ತ್ರಾವಗಾಹನೆ ಮೊದಲಾದವುಗಳು ಅನುಪಯುಕ್ತ ಎಂದಿದ್ದರು. ಇದರ ಮೇಲೆ ಆಕ್ಷೇಪ ಬರುವುದು. ಪ್ರಧಾನವಾಗಿ ಶಬ್ದಶಾಸ್ತ್ರಾವಗಾಹನೆ ಮೊದಲಾದವುಗಳನ್ನು ಸಂಪಾದನೆ ಮಾಡಿದ ವ್ಯಕ್ತಿಯು ಅದರಲ್ಲೂ ಗುರುಪ್ರಸಾದವನ್ನು ಸಹಕಾರಿಯಾಗಿ ಇಟ್ಟುಕೊಂಡು ಮಾಡಿದ ವ್ಯಾಖ್ಯಾನದ ಬಗ್ಗೆ ಮಹಾತ್ಮರು ಅತಿಶ್ಲಾಘನೆ ಮಾಡುವುದು ಕಂಡಿದೆ. ಹಾಗಾಗಿ ಕೇವಲ ಗುರುಪ್ರಸಾದವೊಂದೇ ಮಹಾತ್ಮರಿಂದ ಮಾನ್ಯತೆ ಪಡೆಯುವುದಕ್ಕೆ ಸಾಕು ಎನ್ನುವುದು ಸರಿಯಲ್ಲ ಎಂದು.

ಅದಕ್ಕೆ ಉತ್ತರ - ಇಲ್ಲಿ ಮಹಾತ್ಮರೆಂದರೆ ಅನೇಕ ಶಾಸ್ತ್ರಪರಿಚಯವಿರುವವರು ಅಥವಾ ಅನೇಕ ವಿದ್ವತ್ಸಭೆಗಳಲ್ಲಿ ಪ್ರತಿವಾದಿಗಳನ್ನು ಗೆದ್ದವರು ವಿವಕ್ಷಿತರಲ್ಲ. ಹೊರತು ಪರತತ್ತ್ವವಿದ್ಯೆಯ ಸಮುದ್ರದಲ್ಲಿ ಮುಳುಗಿದ್ದು ಪ್ರವೀಣರಾದವರೇ ಮಹಾತ್ಮರು. ಇದನ್ನು ಭಾಗವತದಲ್ಲಿ ತಿಳಿಸಿ-ದ್ದಾರೆ -

### ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾಃ – ಭಾಗವತ

ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾಃ ವಿಮನ್ಯವಃ ಸುಹೃದಃ ಸಾಧವೋ ಯೇ ।
ಯೇ ವಾ ಮಯೀಶೇ ಕೃತಸೌಹೃದಾರ್ಥಾ ಜನೇಷು ದೇಹಂಭರವಾರ್ತಿಕೇಷು ॥
ಗೃಹೇಷು ಜಾಯಾತ್ಮಜರಾತಿರಾಸು ನ ಪ್ರೀತಿಯುಕ್ತಾ ಯಾವದರ್ಥಾಶ್ಚ ಲೋಕೇ ।
ಎಂದು. (ಭಾಗ. 5.5.2-3)

ನಿಮ್ಮ ಆಕ್ಷೇಪದಲ್ಲಿ ಸೂಚಿತರಾದ ಮಹಾತ್ಮರಲ್ಲಿ ಇಂತಹ ಲಕ್ಷಣವಿಲ್ಲ.

* ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾಃ ಮಹಾತ್ಮರೆಂದರೆ ಎಲ್ಲೆಡೆ ಸಮನಾಗಿರುವ (ವೈಷಮ್ಯ-ನೈರ್ಘೃಣ್ಯಗಳಿಲ್ಲದ) ಪರಮಾತ್ಮನಲ್ಲಿ ಮನಸ್ಸಿಟ್ಟವರು, ಇಂದ್ರಿಯಜಯವುಳ್ಳವರು. ಶಾಂತರು. ಸಜ್ಜನರಲ್ಲಿ ಕೋಪ ಮತ್ಸರರಹಿತರಾಗಿದ್ದು ವಿಹಿತಾನುಷ್ಠಾನದಿಂದ ಸದ್ಗುಣಗಳನ್ನು ಸಂಪಾದಿಸಿರು-ತ್ತಾರೆ. ಅವರಿಗೆ ಪರಮೇಶ್ವರನಾದ ನನ್ನಲ್ಲಿ ಪ್ರೀತಿಯುಂಟಾದರೆ ಅದನ್ನೇ ಪರಮಪುರುಷಾರ್ಥವೆಂದು ತಿಳಿಯುತ್ತಾರೆ. ಹರಿಯ ವಿಷಯವನ್ನು ತೊರೆದು ಪ್ರಾಪಂಚಿಕವಿಷಯಗಳಲ್ಲಿ ಆಸಕ್ತರಾದ ಜನರಲ್ಲಿ, ಮನೆ ಮಡದಿ ಮಕ್ಕಳು ಸ್ನೇಹಿತರು ಹಣ ಮುಂತಾದವುಗಳಲ್ಲಿ ಅವರು ಪ್ರೀತಿ ಇಡುವುದಿಲ್ಲ. ತಾವು ಬದುಕಲು ಎಷ್ಟುಬೇಕೋ ಅಷ್ಟು ಮಾತ್ರ ಲೌಕಿದಲ್ಲಿ ತೊಡಗುತ್ತಾರೆ.

** ಕೇ ಮಹಾಂತಾಃ ಇತ್ಯಪೇಕ್ಷಾಯಾಂ ತಲ್ಲಕ್ಷಣಮಾಹ – ಮಹಾಂತಾ ಇತಿ ಸಾರ್ಧಶ್ಲೋಕೇನ ॥ ಸಮೇ ಬ್ರಹ್ಮಣಿ ಚಿತ್ತಂ ಯೇಷಾಮ್ ಇತಿ ವಾ ಸಮಂ, ತತ್ತದ್ಯೋಗ್ಯತಾನುಚಿತಂ ಸಕಲಚೇತನಜ್ಞಾನಂ ಯೇಷಾಮ್ ಇತಿ ವಾರ್ಥಃ । ಪರಸ್ಪರಂ ಸುಹೃದೋ ನ ಮತ್ಸರಯುಕ್ತಾ ಇತ್ಯರ್ಥಃ । ಸಾಧವೋ

ರಾಗಾದಿದೋಷರಹಿತಾ ವಿಹಿತಾನುಷ್ಠಾನಾದಿನಾ ಸದ್ಗುಣಯುಕ್ತಾಃ । ವಾಶಬ್ದಃ ಚಶಬ್ದಾರ್ಥಃ । ಯೇ ಚೇಶೇ ಮಯಿ ಕೃತಂ ಸೌಹೃದಮೇವಾರ್ಥಃ ಪ್ರಯೋಜನಂ ಯ್ಯೆಸ್ತೇ ತಥಾ । ದೇಹಂ ಬಿಭ್ರಂತೀತಿ ದೇಹಂಭರಾ = ವಿಷಯಾಃ ತೇಷಾಮೇವ ವಾರ್ತಿಕಂ = ವಾರ್ತಾ ನ ಹರಿವಿಷಯಾ ಯೇಷು ತೇಷು ಜನೇಷು ಗೃಹೇಷು ಜಾಯಾ ಚಾತ್ಮಜಾಶ್ಚ, ರಾತಿರ್ಮಿತ್ರಂ ಚ ರಾ ಅರ್ಥಶ್ಚ ತೇಷು ಚ ಯೇನ ಪ್ರೀತಿಯುಕ್ತಾ ಯೇ ಚ ಲೋಕೇ ಉಕ್ತರೂಪೇ ಜನೇ ಯಾವಾನ್ ಶರೀರಯಾತ್ರೋಪಯುಕ್ತಃ ತಾವಾನೇವಾರ್ಥೋ ಧನಾದಿರೂಪೋ ಯೇಷಾಂ ತೇ ತಥಾ ॥

## ಶಬ್ದಾಬ್ಧಿಪದೇನ ಪ್ರಸಿದ್ಧವ್ಯಾಕರಣವು ಗ್ರಾಹ್ಯವಲ್ಲ

(ರಸರಂಜನೀ)– ಅಥವಾ ಯತ್ತದವಾಕ್ಯೇತ್ಯತ್ರ ವಿಶಿಷ್ಟವ್ಯಾಖ್ಯೋಪಯೋಗಿಧರ್ಮವತ್ತ್ವಂ ಸೂಚಿತಂ ತದ್ವಿನಯೇನ ಭೂಷಯನ್ ಸ್ವಾನುಗ್ರಾಹ್ಯಾನ್ ತತ್ಪ್ರಕಾರಂ ಶಿಕ್ಷಯತಿ – **ನ ಶಬ್ದೇತಿ** ॥ ಅತ್ರ ಶಬ್ದಸ್ಯ ಅಬ್ಧಿತಯಾ ನಿರೂಪಣೇನ ಪದಪದೇನ ಪ್ರಸಿದ್ಧವ್ಯಾಕರಣಪರಿಗ್ರಹಪ್ರತೀತಿಂ ಪರಾಕರೋತಿ । ತಸ್ಯ ಪರಿಮಿತತ್ವಾತ್ ।

ಅಥವಾ ಪದವಾಕ್ಯಪ್ರಮಾಣಜ್ಞಾನ್ ಎಂಬಲ್ಲಿ ಸೂಚನೆ ಮಾಡಿದ **ವಿಶಿಷ್ಟವ್ಯಾಖ್ಯಾನಕ್ಕೆ** ಬೇಕಾದ ಧರ್ಮಗಳು ತಮ್ಮಲ್ಲೂ ಇದೆ ಎಂಬುದನ್ನು ವಿನಯಪೂರ್ವಕವಾಗಿ ತೋರಿಸುತ್ತ ತಮ್ಮ ಶಿಷ್ಯರಿಗೆ ಅದರ ಕ್ರಮವನ್ನು ಶಿಕ್ಷಿಸುತ್ತಿದ್ದಾರೆ – 'ನ ಶಬ್ದಾಬ್ಧೌ ಗಾಢಾಃ' ಎಂದು. ಇಲ್ಲಿ ಶಬ್ದವನ್ನು ಸಮುದ್ರಕ್ಕೆ ಹೋಲಿಸಿ ಹೇಳಿದ್ದರಿಂದ ಶಬ್ದಾಬ್ಧಿಪದದಿಂದ ಪ್ರಸಿದ್ಧವ್ಯಾಕರಣವನ್ನು ಗ್ರಹಿಸಕೂಡದು. ಏಕೆಂದರೆ ಅದು ಪರಿಮಿತವಾದ್ದರಿಂದ. ಮಹಾವ್ಯಾಕರಣಾದಿಗಳನ್ನು ಗ್ರಹಿಸಬೇಕೆಂದು ಭಾವ.

## ಗಾಢಾಃ, ನಿಗಮಚರ್ಚಾಸು ಚತುರಾಃ,<br>ನಿಗಮಚರ್ಚಾಸು ಚತುರಾಃ, ನ್ಯಾಯ ಎಂಬುದರ ವಿವರಣೆ

(ರಸರಂಜನೀ) – ಅಥವಾ ಮಾದೃಶಾನಾಮೇವ ಏವಂ ವಚನಂ ವಿನಯಾದಿಪೂರ್ವಕಂ ನ ತ್ವನ್ಯೇಷಾಂ ತಸ್ಯಾನಂತತಯಾ ತದ್ವಿಷಯಪದನ್ಯಾಸಸ್ಯೈವಾಭಾವಾದಿತಿ ಸೂಚಯತ್ಯನೇನ । ಏತದರ್ಥಮೇವ ಗಾಢಾ ಅವಗಾಹಮಾನಾ ಉನ್ಮಜ್ಜಮಾನಾ ಇತಿ ಪದಂ ಪ್ರಯುಂಕ್ತೇತಿ । ವಾಕ್ಯ-ಪದಾಭಿಮತಮರ್ಥಂ ದರ್ಶಯತಿ – **ನಿಗಮೇತಿ** ॥ ಭವತು ಸೋಽರ್ಥಃ ಕಥಂ ತಾವತಾ ತತೋ ಮೀಮಾಂಸಾಲಾಭ ಇತ್ಯತಸ್ತಯೋರಂಗಾಂಗಿಭಾವಬೋಧನಾಯ ತಥಾಪ್ರಯೋಗ ಇತ್ಯಾಶಯೇನ ತಂ ವ್ಯನಕ್ತಿ – **ಚರ್ಚೇತಿ** ॥ ಅನೇನಾನ್ಯೇಷಾಂ ವಚನಂ ನ ಸ್ವಕಾರ್ಯಕಾರೀತಿ ಸ್ಫೋರಯತಿ । ಮೀಮಾಂಸಾಸ್ವಪ್ರವೇಶಾದೇವ । ಅತ ಏವಾಹ – **ಚತುರಾ ಇತಿ** ॥ ಯತ್ತ್ರಾಕ್ ಪ್ರಮಾಣಶಿಕ್ಷಕತಯಾ ಪ್ರಮಾಣಂ ಬ್ರಹ್ಮತರ್ಕ ಇತ್ಯುಕ್ತಮ್ । ತನ್ನ ತಾವದೇವ ಕಿಂತು ನ್ಯಾಯ-

ಶಿಕ್ಷಕತ್ವಾತ್ ನ್ಯಾಯಶಾಸ್ತ್ರಮಿತ್ಯಪ್ಯುಚ್ಯತೇ, ಇತ್ಯಾಶಯೇನಾಹ – ನ್ಯಾಯ ಇತಿ ॥ ಯದ್ವಕ್ಷ್ಯತಿ 'ಪ್ರಮಾಣನ್ಯಾಯಸಚ್ಛಿಕ್ಷಾ ಕ್ರಿಯತೇ ತರ್ಕಶಾಸ್ತ್ರತಃ' (ಅನುವ್ಯಾಖ್ಯಾನ ಅ.1. ಶ್ಲೋ.75) ಇತಿ ।

ಅಥವಾ ನನ್ನಂತಹವರಿಗೆ ಈ ರೀತಿಯಾದ ವಿನಯಪೂರ್ವಕಮಾತುಗಳು ಸರಿಯಾಗಿವೆ. ಬೇರೆಯ-ವರಿಗಲ್ಲ. ಏಕೆಂದರೆ, ಶಬ್ದಾಬ್ಧಿ ಅನಂತವಾದ್ದರಿಂದ ಅವರಿಗೆ ಪದನ್ಯಾಸವೇ ಅಸಂಭಾವಿತ. ಈ ಅರ್ಥವನ್ನು ಸೂಚಿಸಲು 'ಗಾಥಾಃ' ಎಂದಿದ್ದಾರೆ. ಇನ್ನು 'ನಿಗಮಚರ್ಚಾಸು ಚತುರಾಃ' - ವೇದದ ಇತಿಕರ್ತವ್ಯತಾರೂಪವಾದ ಎಲ್ಲ ಮೀಮಾಂಸಾಗಳನ್ನು ಅರ್ಥಾತ್ ದೈವೀ, ಪೂರ್ವ ಹಾಗೂ ಉತ್ತರ ಮೀಮಾಂಸಾಗಳನ್ನು ಗ್ರಹಿಸಬೇಕು. 'ನ ಚ ನ್ಯಾಯೇ ಪ್ರೌಢಾಃ' - ನ್ಯಾಯಗಳನ್ನು ನಿರೂಪಿಸುವ ನ್ಯಾಯಶಾಸ್ತ್ರವೆಂದರೆ ಬ್ರಹ್ಮತರ್ಕವನ್ನು ಸ್ವೀಕರಿಸಬೇಕು. ಅನುವ್ಯಾಖ್ಯಾನದಲ್ಲಿ ಬ್ರಹ್ಮತರ್ಕವು ನ್ಯಾಯಗಳ ವಿಶೇಷವಾದ ವಿವರಣೆಯನ್ನು ನೀಡುವುದು ಎಂದು ತಿಳಿಸಿದ್ದಾರೆ. 'ಪ್ರಮಾಣನ್ಯಾಯಸಚ್ಛಿಕ್ಷಾ ಕ್ರಿಯತೇ ತರ್ಕಶಾಸ್ತ್ರತಃ' (ಜಿಜ್ಞಾಸಾಧಿಕರಣ ಅನುವ್ಯಾಖ್ಯಾನ).

### ತರ್ಕಶಾಸ್ತ್ರತಃ ಪ್ರಮಾಣನ್ಯಾಯಸಚ್ಛಿಕ್ಷಾ

** प्रमाणन्यायसच्छिक्षा क्रियते तर्कशास्त्रतः ।
मानन्यायैस्तु तत्सिद्धैर्मीमांसा मेयशोधनम् ॥६७ ॥

** ಪ್ರತ್ಯಕ್ಷಾದಿ ಮೂರು ಪ್ರಮಾಣಗಳು, ಅನುಮಾನಕ್ಕೆ ಅಂಗಭೂತವಾದ ವ್ಯಾಪ್ತಿಯು, ಅಥವಾ ವ್ಯಾಪ್ಯ (ವಹ್ನ್ಯಭಾವ)ವನ್ನು ಅಂಗೀಕರಿಸಿದರೆ ಅನಿಷ್ಟವಾದ ವ್ಯಾಪಕವನ್ನು (ಧೂಮಾಭಾವವನ್ನೂ) ಅಂಗೀಕರಿಸಬೇಕಾಗುವುದು ಎಂಬ ವ್ಯಾಪಕಪ್ರಸಂಜನಾತ್ಮಕವಾದ ತರ್ಕವು, ಅಥವಾ ಆಗಮಗಳು, ಅನುಮಾನವು, ಪ್ರತ್ಯಕ್ಷಾದಿಗಳ ಪ್ರಕಾರವಾದ ಸ್ವರೂಪಸಂಖ್ಯಾವಿಷಯವ್ಯವಸ್ಥೆಯ ಉದ್ದೇಶ ಲಕ್ಷಣ ವಿಭಾಗ ಪರೀಕ್ಷೆಗಳಿಂದ ನಿರೂಪಣವು, ಬ್ರಹ್ಮತರ್ಕದಿಂದ ಮಾಡಲ್ಪಡುತ್ತದೆ. ಮೀಮಾಂಸಾಶಾಸ್ತ್ರ - ವಾದರೋ ಬ್ರಹ್ಮತರ್ಕದಲ್ಲಿ ಪ್ರತಿಪಾದಿತಗಳಾದ ಪ್ರಮಾಣನ್ಯಾಯಗಳಿಂದ ಆರೋಪಿತವಾದ ಆಕಾರನಿರಾಕರಣಪೂರ್ವಕಪ್ರಮೇಯಸ್ವರೂಪದ ನಿರೂಪಣವು (ಮೀಮಾಂಸಾಶಾಸ್ತ್ರದಿಂದ ಮಾಡಲ್ಪಡುತ್ತದೆ)

– ತರ್ಕಶಾಸ್ತ್ರದಲ್ಲಿ ಉದ್ದೇಶ ವಿಭಾಗ ಲಕ್ಷಣ ಪರೀಕ್ಷಾರೂಪದಿಂದ ಪ್ರತ್ಯಕ್ಷಾದಿಪ್ರಮಾಣಗಳು ಮತ್ತು ಅನ್ವಯವ್ಯತಿರೇಕರೂಪವಾದ ನ್ಯಾಯವೂ ಚೆನ್ನಾಗಿ ನಿರೂಪಿಸಲ್ಪಡುತ್ತದೆ. ಅದರಿಂದ ಪ್ರತಿಪಾದಿಸಲ್ಪಡತಕ್ಕ, ಆಗಮ ಮೊದಲಾದ ಪ್ರಮಾಣನ್ಯಾಯಗಳಿಂದ, ಬ್ರಹ್ಮ - ಧರ್ಮ ಮೊದ-ಲಾದ ಪ್ರಮೇಯ ವಿಚಾರವೇ ಮೀಮಾಂಸೆಯು.

** ಪ್ರಮಾಣೇತಿ ॥ ಪ್ರತ್ಯಕ್ಷಾದಿಪ್ರಮಾಣಾನಾಮನ್ವಯವ್ಯತಿರೇಕಲಕ್ಷಣನ್ಯಾಯಸ್ಯ ಉದ್ದೇಶವಿಭಾಗ-

ಲಕ್ಷಣಪರೀಕ್ಷಾರೂಪೇಣ ತರ್ಕಶಾಸ್ತ್ರೇ ಸಮ್ಯಕ್ ನಿರೂಪಣಂ ಕ್ರಿಯತೇ । ತದ್ವ್ಯುತ್ಪಾದಿತಾಗಮಾದಿ-ಪ್ರಮಾಣನ್ಯಾಯೈರ್ಬ್ರಹ್ಮಧರ್ಮಾದಿಪ್ರಮೇಯವಿಚಾರ ಏವ ಮೀಮಾಂಸೇತ್ಯರ್ಥಃ ।

– प्रमाणानि = प्रत्यक्षादीनि त्रीणि । न्यायः = अनुमानाङ्गभूता व्याप्तिः । अथवा न्यायः = व्याप्त्याङ्गीकारेऽनिष्टव्यापकप्रसञ्जनात्मकस्तर्कः । तस्यानुमानात्मकत्वेऽपि प्रमाणानु-ग्राहकत्वातिशयवत्त्वज्ञापनाय पृथगुक्तिः । अथवा प्रमाणे = प्रत्यक्षमागमश्च, न्यायः = अनुमानं, तस्य मीमांसायामभ्यर्हितत्वाद् भेदेनोपन्यासः । अथवा प्रमाणानां = प्रत्यक्षादीनां न्यायः = प्रकारः स्वरूपसङ्ख्याविषयव्यवस्था । तस्य सच्छिक्षा = उद्देशलक्षणविभागपरी-क्षाभिर्निरूपणम् । तर्कशास्त्रत इति तृतीयार्थे तसिः । तुशब्दो मीमांसा त्विति सम्बद्ध्यते । तत्सिद्धैः = तर्कशास्त्रव्युत्पादितैः । मेयशोधनं प्रमेयस्याऽरोपिताकारनिराकरणेन स्वरूप-निरूपणं क्रियते । मीमांसाशास्त्रत इति शेषः । (सुधा जिज्ञासाधिकरणम्)

## ಬಹುಜ್ಞತ್ವ ಎಂದರೆ ಅನ್ಯೇಭ್ಯೋ ಅತಿಶಯೇನ ಬಹ್ವರ್ಥಗ್ರಾಹಿತ್ವ

(ರಸರಂಜನೀ) – ನನ್ವೇಕೈಕಸ್ಯ ಮೂಲಸ್ಯ ಕತಿಪಯಾರ್ಥಗ್ರಹಣೇ ಬಹುತ್ವಭಂಗಃ ಯಾವದರ್ಥ-ಗ್ರಹಣೇ ತ್ವೇಕತ್ರೈವ ವಿಶಿಷ್ಟವ್ಯಾಖ್ಯಾನಪರ್ಯಾಪ್ತದ್ವಾದಶವರ್ಷಾದಿರೂಪಕಾಲವಿಶೇಷಪರ್ಯವ-ಸಾನಾಪತ್ತ್ಯೋತ್ತರಮೂಲವ್ಯಾಖ್ಯಾನಾಭಾವಪ್ರಸಂಗ ಇತ್ಯಾಶಂಕಾಯಾಂ ನಾತ್ರ ಬಹುಜ್ಞತ್ವಂ ವಿದ್ಯಮಾನಯಾವದರ್ಥಗ್ರಾಹಿತ್ವಂ ಕಿಂತ್ವನ್ಯೇಭ್ಯೋಽತಿಶಯೇನ ಬಹ್ವರ್ಥಗ್ರಾಹಿತ್ವಮ್ । ತಚ್ಚಾಲ್ಪ-ತರಕಾಲ ಏವ ಯಥಾಶಕ್ತಿಗ್ರಹಣೇಽಪಿ ಸಂಭವತೀತ್ಯುತ್ತರವ್ಯಾಖ್ಯಾನಂ ಯುಕ್ತಂ ತಾವತೈವ ಬಹುಜ್ಞತ್ವವ್ಯವಹಾರಶ್ಚೋಪಪನ್ನ ಇತಿ 'ಚಂಚರೀಕತಿ' ಇತಿ ನಿದರ್ಶನೇನ ಉಪಪಾದಿತಮ್,

'ನ ಶಬ್ದಾಬ್ಧೌ ಗಾಢಾಃ' - ಒಂದೊಂದು ಅನುವ್ಯಾಖ್ಯಾನಮೂಲಕ್ಕೆ ಕೆಲವೇ ಅರ್ಥವನ್ನು ಗ್ರಹಿಸಿದರೆ ಬಹಳ ತಿಳಿದವರು ಎಂದಾಗುವುದಿಲ್ಲ. ಎಲ್ಲಾ ಅರ್ಥವನ್ನು ಗ್ರಹಿಸಿದರೆ ಒಂದೇ ವಾಕ್ಯದಲ್ಲಿ ವಿಶಿಷ್ಟವಾದ ವ್ಯಾಖ್ಯಾನವನ್ನು ಮಾಡುತ್ತ, ಹನ್ನೆರಡು ವರ್ಷಮೊದಲಾದ ಕಾಲದಲ್ಲಿ ಪರ್ಯವಸಾನವಾಗುವ ಮೂಲಕ ಮುಂದಿನ ಮೂಲಕ್ಕೆ ವ್ಯಾಖ್ಯಾನವನ್ನೇ ಮಾಡಬಾರದಿತ್ತು ಎಂಬ ಪ್ರಸಂಗ ಉಂಟಾಗುತ್ತಿತ್ತು. ಆದ್ದರಿಂದ ಇಲ್ಲಿ ಬಹಳ ತಿಳಿದವರು ಎಂದರೆ, ವಿದ್ಯಮಾನ-ಯಾವದರ್ಥಗ್ರಾಹಿತ್ವವಲ್ಲ. ಅರ್ಥಾತ್ ಇರುವ ಎಲ್ಲಾ ಅರ್ಥಗಳನ್ನು ಗ್ರಹಿಸುವಿಕೆ ಅಲ್ಲ. ಹೊರತು ಬೇರೆಯವರಿಗಿಂತ ಹೆಚ್ಚಾಗಿ ಬಹಳ ಅರ್ಥವನ್ನು ಗ್ರಹಿಸುವುದು. ಹೀಗಾಗಿ ಅಲ್ಪಕಾಲದಲ್ಲಿಯೇ ಶಕ್ತಿಗೆ ಅನುಗುಣವಾಗಿ ಗ್ರಹಣ ಮಾಡಿದರೂ ಬಹಳ ತಿಳಿದವರು ಎಂಬ ವ್ಯವಹಾರ ಹಾಗೆಯೇ ಉತ್ತರ ಮೂಲಗಳಿಗೆ ವ್ಯಾಖ್ಯಾನಮಾಡುವುದು ಸಾಧ್ಯವಾಗುವುದು ಎಂದು ಭ್ರಮರದಂತೆ ನನ್ನ ಮನಸ್ಸು ಅನುವ್ಯಾಖ್ಯಾನದಲ್ಲಿ ಪ್ರವೃತ್ತಿಮಾಡುತ್ತಿದೆ ಎಂದು ಹೇಳುವ ಮೂಲಕ ತಿಳಿಸಿದ್ದಾರೆ.

### ವಿದ್ಯಮಾನಯಾವದರ್ಥಗ್ರಾಹಿತ್ವವೇ ಬಹುಜ್ಞತ್ವ ಎಂಬ ಶಂಕೆ

**(ರಸರಂಜನೀ) – ತತ್ರೈಷಾ ಶಂಕೋದೇತಿ । ವಿದ್ಯಮಾನಯಾವದರ್ಥಗ್ರಾಹಿತ್ವೇನ ಬಹುಜ್ಞತ್ವ-ಮಿತ್ಯುಚ್ಯತಾಂ ಕಿಮನೇನ । ನ ಚೋತ್ತರಮೂಲವ್ಯಾಖ್ಯಾನಾನುಪಪತ್ತಿಃ । ಬಹುಜ್ಞಾಂತರಸ್ಯ ತತ್ರ ವ್ಯಾಪಾರಸಂಭವಾತ್ । ಏವಮುತ್ತರತ್ರಾಪಿ । ನ ಚಾನೇಕಕರ್ತೃಕತ್ವೇ ಕಂಥಾಯಿತತ್ವಪ್ರಸಂಗಃ । ತಾದೃಶಸ್ಯಾಪಿ ದೇವಮೀಮಾಂಸಾಶಾಸ್ತ್ರಸ್ಯೋಪಾದೇಯತ್ವದರ್ಶನಾತ್ । ನ ಚ ತತ್ರ ಭಗವದಾಜ್ಞಾ-ಪೂರ್ವಕತ್ವೇನ ಸಮಾಧಾನಮ್ । ಅತ್ರಾಪಿ ಸಾಮ್ಯಾತ್ ಆಚಾರ್ಯಾಜ್ಞಾಪೂರ್ವಕತ್ವಸ್ಯ ವಕ್ತುಂ ಶಕ್ಯತ್ವಾತ್ । ಆನಂದತೀರ್ಥಗುರುಕೃಪಾಮಾತ್ರಸಾಧ್ಯತ್ವೇನ ಶಕ್ಯಸಮಾಧಾನತ್ವಾಚ್ಚೇತಿ । ತಾಮೇತಾಂ ಶಿಷ್ಯಮನೋಗತಾಮಾಶಂಕಾಂ ವಾ ನಿರಸ್ಯತಿ – ನ ಶಬ್ದೇತಿ ॥**

ಇಲ್ಲಿ ಒಂದು ಶಂಕೆಯು ಉಂಟಾಗುತ್ತದೆ. ವಿದ್ಯಮಾನ-ಯಾವದರ್ಥಗ್ರಾಹಿತ್ವವನ್ನೇ ಬಹುಜ್ಞತ್ವ ಎಂದು ಹೇಳೋಣ. 'ಅನ್ಯೇಭ್ಯೋಽತಿಶಯೇನ ಬಹ್ವರ್ಥಗ್ರಾಹಿತ್ವಂ' ಎಂಬುದು ಬೇಡ. ಅಲ್ಲ ಉತ್ತರಮೂಲಕ್ಕೆ ವ್ಯಾಖ್ಯಾನ ಮಾಡದಿರುವ ಪ್ರಸಂಗಬಂದೀತಲ್ಲವೇ? ಎಂದರೆ ಇಲ್ಲ. ಬೇರೆಯವರು ಉತ್ತರಮೂಲಕ್ಕೆ ವ್ಯಾಖ್ಯಾನಮಾಡಲು ಸಾಧ್ಯವಿರುವುದರಿಂದ. ಹೀಗೆ ಮುಂದಿನ ಮೂಲಗಳಿಗೂ ಕೂಡ. ಹಾಗಾದರೆ ಅನೇಕಕರ್ತೃಗಳು ಆಗುವುದಾದಲ್ಲಿ ಕಂಥಾಯಿತ ಎಂದಾಗಬೇಕು. ಅರ್ಥಾತ್ ಅನೇಕಜನರು ಸೇರಿ ಹೇಗೋ ಒಂದು ನಿರ್ಮಾಣವಾದ ಗ್ರಂಥವಾದೀತು। ಹಾಗಾಗಿ ಅದು ಉಪಾದೇಯವಲ್ಲ.

ಈ ಆಕ್ಷೇಪ ಸರಿಯಲ್ಲ. ಏಕೆಂದರೆ, ಅನೇಕ ಕರ್ತೃಗಳಿರುವ ದೇವಮೀಮಾಂಸಾಶಾಸ್ತ್ರವು ಉಪಾ-ದೇಯವಾಗಿ ಕಂಡಿರುವುದರಿಂದ. ಅಲ್ಲಿ ಭಗವಂತನ ಆಜ್ಞೆಗನುಗುಣವಾಗಿ ಶೇಷ, ಪೈಲರು ದೇವಮೀಮಾಂಸಾಶಾಸ್ತ್ರವನ್ನು ನಿರ್ಮಾಣ ಮಾಡಿದರು. ಇಲ್ಲಿಯೂ ಅದೇ ಉತ್ತರ ಎಂದು ತಿಳಿಯಬೇಕು. ಆಚಾರ್ಯರ ಆಜ್ಞೆಗನುಗುಣವಾಗಿಯೇ ಅನೇಕರು ಮಾಡಬಹುದಿತ್ತು. ಅಲ್ಲದೆ ಆನಂದತೀರ್ಥರ ಕೇವಲ ಕೃಪೆಯಿಂದಲೇ ಸಾಧ್ಯವಾಗುವುದರಿಂದ ರಚನೆ ಮಾಡುವುದು ಬೇಡ ಎಂದು ಸಮಾಧಾನಿಸಬಹುದಾಗಿತ್ತೂ ಕೂಡ. ಈ ರೀತಿಯಾದ ಶಿಷ್ಯನ ಮನಸ್ಸಿನಲ್ಲಿರುವ ಅನೇಕಶಂಕೆಗಳನ್ನು ನಿರಾಕರಣೆ ಮಾಡುವುದಕ್ಕಾಗಿ 'ನ ಶಬ್ದಾಬ್ಧೌ' ಎಂಬ ಶ್ಲೋಕ ಹೊರಟಿದೆ.

### ಕಂಥಾಯಿತ ಎಂದರೇನು?

** ಕಂಥಾ = ಕಮು ಧಾತು ಥನ್‌ಪ್ರತ್ಯಯ. ಮೃಣ್ಮಯಭಿತ್ತಿ ಅಥವಾ ಸೂತ್ರಗ್ರಥಿತ ಜೀರ್ಣ-ವಸ್ತ್ರಖಂಡ. ಕಂಥಾ = (1) ಥಿಂದಿಬಟ್ಟೆ, ಹರಕುಬಟ್ಟೆ, ತೇಪೆ ಹಾಕಿದ ಬಟ್ಟೆ, (2) ಮಣ್ಣಿನ ಗೋಡೆ; ಕಂಥಾವತ್ ಆಚರಿತಂ = ಕಂಥಾಯಿತಂ. ಕಂಥಾದಂತೆ ಆಚರಿಸುವುದು ಎಂದರ್ಥ. ಅಂದರೆ ಅದರಂತೆ ಇರುವಂತಹದ್ದು.

## ಬಹ್ವರ್ಥಕವಾದ ಅನುವ್ಯಾಖ್ಯಾನ

(ರಸರಂಜನೀ) – ಇದಮುದಿತಂ ಭವತಿ — ಸ್ಯಾದಯಂ ಭವತಾಂ ಮನೋರಥಃ ಯದ್ಯಯಂ ಗ್ರಂಥಃ ಯಥಾಕಥಂಚಿತ್ ಬಹ್ವರ್ಥಃ ಸ್ಯಾತ್ । ನ ಚೈವಮ್ । ಕಿಂತು ಅನಂತವೇದಾದಿಶಬ್ದ-ಪ್ರಮಾಣೈರನಂತೈರೀಶ್ವರಾದಿಪ್ರತ್ಯಕ್ಷೈರನಂತಾಭಿರ್ಯುಕ್ತಿಭಿರನಂತವಾಕ್ಯಾನಾಮುಪಕ್ರಮಾದ್ಯಾನು-ಗುಣ್ಯಾದಿನಾ ಪೂರ್ವತಮಮನಂತಂ ಪ್ರಮೇಯನಿಚಯಂ ನಿಶ್ಚಾಯಯತೀತ್ಯಯಮರ್ಥಃ —

ಒಟ್ಟಭಿಪ್ರಾಯ ಇದು - ನೀವು ಹೇಳಿದಂತೆ ಒಂದು ವೇಳೆ ಈ ಗ್ರಂಥವು ಹೇಗೋ ಒಂದು ರೀತಿಯಲ್ಲಿ ಬಹಳ ಅರ್ಥವುಳ್ಳದ್ದಾಗಿದ್ದರೆ ನಿಮ್ಮ ಶಂಕೆಗಳು ಸರಿ. ಆದರೆ ಹೀಗಲ್ಲ. ಈ ಗ್ರಂಥವು ಅನಂತ ವೇದ ಮೊದಲಾದ ಶಬ್ದಪ್ರಮಾಣಗಳಿಂದ ಅನಂತವಾದ ಈಶ್ವರ ಮೊದಲಾದವರ ಪ್ರತ್ಯಕ್ಷದಿಂದ ಹಾಗೂ ಅನಂತವಾದ ಯುಕ್ತಿಗಳಿಂದ ಅನಂತವಾಕ್ಯಗಳ ಪ್ರಮೇಯಸಮೂಹವನ್ನು ಉಪಕ್ರಮಾದಿತಾತ್ಪರ್ಯಲಿಂಗಗಳ ಅನುಗುಣವಾಗಿ ನಿಶ್ಚಯ ಮಾಡಿಕೊಡುತ್ತದೆ. ಈ ಅಂಶ-ವಾದರೂ ಅನೇಕ ಪ್ರಮಾಣಗಳಿಂದ ಸಿದ್ಧ. ಇದನ್ನು ಮಧ್ವವಿಜಯದಲ್ಲಿ ತಿಳಿಸಿದ್ದಾರೆ -

## ಬಾಲಕೃಷ್ಣನ ಬಾಯಿಯಂತೆ ಅನುವ್ಯಾಖ್ಯಾನ

ಅನಂತೋऽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ ।
ಯೇಷು ದಭ್ರಮತೀನ್ ದಭ್ರಾನ್ ಹಸತ್ಯುಚ್ಚೈಃ ಸತಾಂ ಸಭಾ ॥ (ಮ.ವಿ.15-82)

ಅರ್ಥ - ತ್ವಯಾ = ನಿಮ್ಮಿಂದ, ಆತ್ಮಪರಿಜ್ಞಪ್ತ್ಯೈ = ತಮ್ಮ ಸ್ವರೂಪದ ತಿಳುವಳಿಕೆಗೋಸ್ಕರ (ಪರಮಾತ್ಮನ ಸ್ವರೂಪವನ್ನು ಸರಿಯಾಗಿ ತಿಳಿಸುವುದಕ್ಕಾಗಿ) ಅಣೌ ಭಾಷ್ಯಸಂಗ್ರಹೇ = ಬ್ರಹ್ಮ-ಸೂತ್ರಗಳ ಸಂಕ್ಷಿಪ್ತಭಾಷ್ಯರೂಪವಾದ ಅಣುವೇದಾಂತ-ಭಾಷ್ಯದಲ್ಲಿ, ಅನಂತಃ = ಮಿತಿಯಿಲ್ಲದ, ಅರ್ಥಃ = ವಿಷಯವು (ಪ್ರಮೇಯವು), ಕೃಷ್ಣೇನ = ಬಾಲ ಶ್ರೀಕೃಷ್ಣನಿಂದ, (ಆತ್ಮಪರಿಜ್ಞಪ್ತ್ಯೈ = ತಾಯಿಗೆ ತನ್ನ ಸ್ವರೂಪವನ್ನು ತಿಳಿಸುವುದಕ್ಕೋಸ್ಕರ, ಅನಂತಃ ಅರ್ಥಃ = ಮಿತಿಯಿಲ್ಲದ ಬ್ರಹ್ಮಾಂಡ-ವೆಂಬ ವಸ್ತುವು, ಅಣೌ = ಚಿಕ್ಕದಾದ,) ಆನನಾಂತರೇ ಇವ = ತನ್ನ ಬಾಯಿಯ ಒಳಗೆ ಎಂಬಂತೆ, ಪ್ರಕಟಿತಃ = ಸ್ಪಷ್ಟಗೊಳಿಸಲ್ಪಟ್ಟಿದೆ। ಅಹೋ = ಆಶ್ಚರ್ಯ.

## ಮಿತವಾದ ಶಬ್ದಗಳಿದ್ದರೂ ಅಮಿತಾರ್ಥಕ — ಅನುವ್ಯಾಖ್ಯಾನ

ಚಿಂತಾಮಣೀನ್ ಚಿಂತಯತೀ ಮಿತಾನಪ್ಯಮಿತಾರ್ಥದಾನ್ ।
(ಇತ್ಯರ್ಥಿತೋ ವ್ಯಧಾನ್ಮಧ್ವಃ ಸೋऽನುವ್ಯಾಖ್ಯಾಂ ಸತಾಂ ಸುಧಾಮ್) ॥ (ಮ.ವಿ.15-85)

ಇತ್ಯನೇಕಮಾನಸಿದ್ಧಮ್ ।

ಮಿತಾನ್ ಅಪಿ = ಪರಿಮಿತಸ್ವರೂಪದವುಗಳಾದರೂ (ಚಿಕ್ಕದಾದರೂ), ಅಮಿತಾರ್ಥದಾನ್ = ಪರಿಮಿತಿ ಇಲ್ಲದ ಪ್ರಯೋಜನಗಳನ್ನು ಕೊಡುವ, (ಪರಿಮಿತ- ಶಬ್ದವುಳ್ಳವುಗಳಾದರೂ ಅಪರಿಮಿತ -ಅರ್ಥಗಳನ್ನು ಕೊಡುವ), ಚಿಂತಾಮಣೀನ್ ಚಿಂತಯಂತೀ = ಚಿಂತಾಮಣಿ ಎಂಬ ದೇವರತ್ನಗಳನ್ನು ಸ್ಮರಿಸುತ್ತಿರುವ (ಚಿಂತಾಮಣಿ ಎಂಬ ದೇವರತ್ನಗಳನ್ನಾಗಿ ಈ ಗ್ರಂಥಗಳನ್ನು ತಿಳಿಯುತ್ತಿರುವ), ಸತಾಂ ಸಭಾ = ಸಜ್ಜನರ ಸಮೂಹವು, ಏಷು = ಈ ಗ್ರಂಥಗಳಲ್ಲಿ, ದಭ್ರಮತೀನ್ = ಅಲ್ಪ (ಸಣ್ಣ) ಗ್ರಂಥಗಳೆಂಬ ಭಾವನೆಯುಳ್ಳ, ದಭ್ರಾನ್ = ಅಲ್ಪಜನರನ್ನು, ಉಚ್ಚೈಃ ಹಸತಿ = ಗಟ್ಟಿಯಾಗಿ ಅಪಹಾಸ್ಯ ಮಾಡಿ ನಗುತ್ತದೆ.

## ಸ್ಪಷ್ಟವಾದ ಯುಕ್ತಿಗಳ ರಾಶಿಯಿರುವ – ಅನುವ್ಯಾಖ್ಯಾನ

ಗ್ರಂಥೇಭ್ಯ ಏಭ್ಯೋಽಗಾಧೇಭ್ಯೋ ಯುಕ್ತಯೋ ನೋ ದುರುದ್ಧರಾಃ ।
ಮನೋಮಾಂದ್ಯಾತ್ ತತೋ ಗ್ರಂಥಂ ವ್ಯಕ್ತತರ್ಕತತಿಂ ಕುರು ॥ (ಮ.ವಿ.15-87)

ಏಭ್ಯಃ ಅಗಾಧೇಭ್ಯಃ ಗ್ರಂಥೇಭ್ಯಃ = ಈ ಗಂಭೀರವಾದ ಗ್ರಂಥಗಳ ದೆಸೆಯಿಂದ, ಯುಕ್ತಯಃ = ಯುಕ್ತಿಗಳು, ಮನೋಮಾಂದ್ಯಾತ್ = ಬುದ್ಧಿಯ ಅಲ್ಪತನದಿಂದಾಗಿ, ನಃ ದುರುದ್ಧರಾಃ = ನಮಗೆ ಪ್ರತ್ಯೇಕಿಸಿ ತೆಗೆಯಲು ಅಶಕ್ಯಗಳು, ತತಃ = ಆದುದರಿಂದ, ನಃ = ನಮಗೆ, ವ್ಯಕ್ತತರ್ಕತತಿಂ = ಸ್ಪಷ್ಟವಾದ ಯುಕ್ತಿಗಳ ಸಮೂಹವುಳ್ಳ, ಗ್ರಂಥಂ ಕುರು = ಗ್ರಂಥವನ್ನು ಮಾಡಿರಿ.

## ನೇಯಂ ಮರ್ತ್ಯಸಭಾ ಕ್ಷಮಾ

(ರಸರಂಜನೀ) – ನ ಚೇದೃಶೇ ಮಿಲಿತಾನಾಮಪ್ಯಸ್ಮಾಕಮವಕಾಶಃ । ಇದಂ ತು ಅತ್ಯಂತಾ-ಸಂಭಾವಿತಂ ಯದನಂತಪ್ರತ್ಯಕ್ಷಪ್ರತ್ಯಕ್ಷೀಕರಣಮ್ । ಯದಾ ಹಿ ಪುಷ್ಕರಾದಿನೀಚದೇವತಾಮಾರಭ್ಯ ಈಶ್ವರಪರ್ಯಂತಮಪರೋಕ್ಷವತಾಮಪಿ ಯಥಾಶಕ್ತ್ಯನೇಕಪ್ರತ್ಯಕ್ಷಪ್ರತ್ಯಕ್ಷಂ ಭವತೀತಿ ಪ್ರವಾದಃ ಕಾ ವಾರ್ತಾ ತದಾವಶ್ಯವೇದ್ಯೋಕ್ತದೇವತಾಸ್ವರೂಪವೇದನಹೀನಾನಾಂ ಸ್ವಾತಿರಿಕ್ತೈಕಪುರುಷಪ್ರತ್ಯಕ್ಷ-ರಹಿತಾನಾಮಿತ್ಯತೋ ಯುಕ್ತಮೇವೋಕ್ತಂ ಬಹುಜ್ಞತ್ವಮಿತಿ । ಯದ್ಯಪಿ —

ಅಮಂದಮತಿಟೀಕಾಕೃತ್ಪ್ರಬಂಧತತಿಸಮ್ಮತಮ್ ।
ಮೇಯಂ ಸಾಕಲ್ಯತೋ ವಕ್ತುಂ ನೇಯಂ ಮರ್ತ್ಯಸಭಾ ಕ್ಷಮಾ ॥
ತಥಾಪಿ ಸ್ವೀಯಕೃತ್ಯತ್ವಾತ್ ಕ್ರಿಯತೇ ಕಿಂಚಿದಾತ್ಮಕೈಃ ।

ಹೀಗೆ ಇಂತಹ ಅನುವ್ಯಾಖ್ಯಾನಗ್ರಂಥದಲ್ಲಿ ನಾವು ಅನೇಕ ಮಂದಿ ಸೇರಿದರೂ ಹೇಗೋ ಒಂದೂ ಅರ್ಥವನ್ನು ನಿರ್ಣಯ ಮಾಡಲು ಅಸಾಧ್ಯ. ಇನ್ನು ಆ ಎಲ್ಲ ಅನುವ್ಯಾಖ್ಯಾನೋಕ್ತ ಅನಂತ-ಪದಾರ್ಥಗಳನ್ನು ಪ್ರತ್ಯಕ್ಷ ಮಾಡಿಕೊಳ್ಳುವುದಂತೂ ಅತ್ಯಂತ ಅಸಂಭಾವಿತ. ಏಕೆಂದರೆ, ಯಾವಾಗ

ಪುಷ್ಕರಾದಿನೀಚದೇವತೆಗಳನ್ನು ಆರಂಭಿಸಿ ಈಶ್ವರನ ಪರ್ಯಂತವಿರುವ ಅಪರೋಕ್ಷಜ್ಞಾನವುಳ್ಳ ದೇವತೆಗಳಿಗೂ ತಮ್ಮ ಶಕ್ತ್ಯನುಗುಣವಾಗಿ ಅನೇಕ ವಸ್ತುಗಳ ಪ್ರತ್ಯಕ್ಷ ಬರುತ್ತದೆ ಎಂಬ ವಿಚಾರವಿದೆಯೋ ಆವಾಗ ಅವಶ್ಯವಾಗಿ ತಿಳಿಯಬೇಕಾದ ದೇವತೆಗಳ ಸ್ವರೂಪಜ್ಞಾನ ಇಲ್ಲದಿರುವ, ಅದರಂತೆ ತಮ್ಮನ್ನು ಬಿಟ್ಟು ಬೇರೆಯ ಪುರುಷಪ್ರತ್ಯಕ್ಷವೇ ಇಲ್ಲದಿರುವ ಮನುಷ್ಯನ ಬಗ್ಗೆ ಏನು ಹೇಳಬೇಕು? ಆದ್ದರಿಂದ ಬಹಳ ಅರ್ಥತುಂಬಿದ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನವನ್ನು ಬರೆಯ-ಬೇಕಾದರೆ ಗುರುಗಳ ಕಾರುಣ್ಯ ಇರಲೇಬೇಕು.

ಯದ್ಯಪಿ, - ಸರ್ವಜ್ಞಕಲ್ಪರಾದ ಟೀಕಾಕೃತ್ಪಾದರ ನ್ಯಾಯಸುಧಾಗ್ರಂಥಕ್ಕೆ ಸಮ್ಮತವಾದ ಪ್ರಮೇಯ-ಗಳನ್ನು ಸಂಪೂರ್ಣವಾಗಿ ಹೇಳಲು ಈ ಮನುಷ್ಯಲೋಕ ಅಸಮರ್ಥವೇ. ಆದರೂ ನಮ್ಮ ಕರ್ತವ್ಯವಾದ್ದರಿಂದ ಕೆಲವನ್ನು ಮಾತ್ರ ಹೇಳುತ್ತೇವೆ.

### ಶಕ್ಯಂತೇ ನೈವ ಯಾವಂತಃ ವಕ್ತುಂ

(ರಸರಂಜನೀ) – ಕಿಂಚ –

ಯಾವಂತೋಽರ್ಥಾಃ ಪ್ರಭಾಸಂತೇ ತಾವಂತೋ ಗದಿತುಂ ಪುನಃ ।
ಶಕ್ಯಂತೇ ನೈವ ಯಾವಂತಃ ವಕ್ತುಂ ಶಕ್ತಾ ಜನೈರಿಹ ॥
ನಿಬಂಧುಂ ನೈವ ತಾವಂತಃ ಇತಿ ಸರ್ವಾನುಭೂತಿಗಮ್ ।

ಕಿಂಚ -

ಎಲ್ಲರ ಅನುಭವಕ್ಕೆ ಇರುವ ವಿಷಯ ಇದು. ಎಷ್ಟು ಅರ್ಥಗಳು ಈ ಗ್ರಂಥದಲ್ಲಿ ತೋರುತ್ತವೋ ಅಷ್ಟನ್ನು ಹೇಳಲೂ ಅಸಾಧ್ಯ. ಬರೆಯಲೂ ಅಸಾಧ್ಯ.

### ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ ಪ್ರಪನ್ನಾಃ ಮಾನ್ಯಾಃ ಸ್ಮಃ

(ಲಘುರಸರಂಜನೀ) — ಶ್ರೀಮದಿತಿ ॥ ಶ್ರೀಮಂತಃ ಸಂಪ್ರದಾಯಪ್ರವರ್ತಕಪದ್ಮನಾಭತೀರ್ಥಾ-ದಿಬಹುಶಿಷ್ಯಸಂಪತ್ತಿಮಂತಶ್ಚ ತೇ ಪೂರ್ಣಾ ಅಧಿಕಾರಿವರ್ಗಾಪೇಕ್ಷಯಾ ಸಂಪೂರ್ಣಾ ಪ್ರಕೃಷ್ಟಾ ತತ್ತದಧಿಕಾರಿಸ್ವರೂಪಾದಿಸಾಕ್ಷಾತ್ಕರಣದಕ್ಷಾ ಮತಿರ್ಯೇಷಾಂ ತೇ ತಥಾ, ತನ್ಮಾನಶ್ಚ ತೇ ಗುರವಶ್ಚ, ತೇಷಾಂ ಕಾರುಣ್ಯಸರಣಿಂ ಕಾರುಣ್ಯಮಾರ್ಗಂ ಪ್ರೇಮಪ್ರವಾಹಮಿತಿ ಯಾವತ್ । ಪ್ರಪನ್ನಾಃ = ಪ್ರಾಪ್ತಾ ಇತ್ಯರ್ಥಃ । ನನು 'ಅಥ ತತ್ಕೃಪಯಾ' ಇತಿ ಪೂರ್ವಪ್ರಸ್ಥಾನ ಇವ ಪೂರ್ವಪ್ರಣತಾನಾಂ ಸರ್ವೇಷಾಂ ಕಾರುಣ್ಯಸ್ಯ ಕಾರ್ಯಸಾಧಕತ್ವೇ ಕಥನೀಯೇ ಕಿಂ ಪೂರ್ಣ-ಪ್ರಮತಿಗುರುಕಾರುಣ್ಯಸ್ಯ ಏಕಸ್ಯೈವ ತತ್ಕಥ್ಯತ ಇತಿ ಚೇನ್ನ । 'ಶ್ರೀಮತ್' ಇತಿ ವಿಶೇಷಣೇನ ಉಪಸರ್ಜನತಯಾ ಪದ್ಮನಾಭತೀರ್ಥಾದಿಕಾರುಣ್ಯಪರಂಪರಾಯಾ ಅಭಿಪ್ರೇತತ್ವಾತ್ । ಅತ ಏವ

'ಕಾರುಣ್ಯಮ್' ಇತ್ಯೇವಾನುಕ್ತ್ವಾ 'ಕಾರುಣ್ಯಸರಣಿಮ್' ಇತ್ಯಾಹ । ಏಕಸ್ಯೈವ ವಿಶಿಷ್ಯೋಕ್ತಿಸ್ತು ಪರಮಮುಖ್ಯತಾಜ್ಞಾಪನಾಯೇತಿ ಹೃದಯಮ್ । ಗುರುಕಾರುಣ್ಯಸ್ಯ ಮುಖ್ಯತ್ವಂ ಬೋಧ-ಯಿತುಮನನ್ಯಸಾಧ್ಯಂ ತತ್ಕಾರ್ಯಮಾಹ – ಮಾನ್ಯಾಃ ಸ್ಮ ಇತ್ಯಾದಿ ॥ ಅತ್ರ 'ಗುರುಕಾರುಣ್ಯಸರಣಿಂ ಪ್ರಪನ್ನಾ ಮಾನ್ಯಾ ಸ್ಮ:' ಇತಿ ಸಮಭಿವ್ಯಾಹಾರಾದೇವ 'ಜ್ಞೇಯಂ ಗಮ್ಯಮ್' ಇತಿವತ್ ತಯೋಃ ಸಾಧ್ಯಸಾಧನಭಾವೋ ವಿಜ್ಞಾಯತೇ । ವಯಂ ಗುರುಕಾರುಣ್ಯಸರಣಿಂ ಪ್ರಪನ್ನಾಃ 'ಕಿಮಪಿ ಚ' ಯತ್ಕಿಂಚಿದಪಿ 'ವದಂತೋಽಪಿ' 'ಕಿಂಚ, ಅಪಿ, ಚ' ಇತಿ ವದಂತಃ ಸ್ಮಃ, ತತ ಏವ ಮಹತಾಂ ಮಾನ್ಯಾಃ ಸ್ಮ ಇತಿ ಯೋಜನಾ ।

'ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ' – ಪೂರ್ಣಪ್ರಮತಿ ಎಂದರೆ ಮಧ್ವಾ-ಚಾರ್ಯರು. ಪೂರ್ಣ ಎಂದರೆ ಅಧಿಕಾರಿವರ್ಗದವರಿಗಿಂತ(ರುದ್ರಾದಿಗಳಿಗಿಂತ) ಸಂಪೂರ್ಣವಾದ, ಪ್ರಮತಿ ಎಂದರೆ ಪ್ರಕೃಷ್ಟವಾದ ಆಯಾಯಾ ಅಧಿಕಾರಿಸ್ವರೂಪವನ್ನು ಸಾಕ್ಷಾತ್ಕಾರ ಮಾಡಿ-ಕೊಳ್ಳುವುದರಲ್ಲಿ ಸಮರ್ಥವಾದ ಮತಿಃ - ಬುದ್ಧಿಯು ಯಾರಿಗೆ ಇದೆಯೋ ಅಂತಹ ಗುರುಗಳು ಎಂದರ್ಥ.

ಇಂತಹ ಪೂರ್ಣಪ್ರಮತಿ ಎಂಬ ಹೆಸರುಳ್ಳ ಆಚಾರ್ಯರಿಗೆ ಒಳ್ಳೆಯ ಸಂಪತ್ತು ಇದೆ. ಅದೇ ಪದ್ಮನಾಭತೀರ್ಥರೇ ಮೊದಲಾದ ಶಿಷ್ಯಸಂಪತ್ತು. ಇದನ್ನು ಶ್ರೀಮತ್ ಎಂಬ ಪದದಿಂದ ಹೇಳಿದ್ದಾರೆ. ಅಲ್ಲ.

ಅಥ ತತ್ಕೃಪಯಾ ಬ್ರಹ್ಮಸೂತ್ರಭಾಷ್ಯಂ ಯಥಾಮತಿ ।
ವ್ಯಾಕುರ್ವೇ ಶ್ರೀಮದಾನಂದತೀರ್ಥಾರ್ಯಮುಖನಿಃಸೃತಮ್ ॥

ಎಂದು ಹೇಳಿದಂತೆ ಪ್ರಕೃತದಲ್ಲಿ ಈ ಹಿಂದೆ ನಮಸ್ಕರಿಸಿದ ಎಲ್ಲ ಗುರುಗಳ ಕಾರುಣ್ಯವು ಈಗ ಮಾಡಲಿರುವ ಗ್ರಂಥರೂಪಕಾರ್ಯಕ್ಕೆ ಸಾಧಕ ಎಂದು ಹೇಳಬೇಕಾಗಿತ್ತು. ಅದನ್ನು ಬಿಟ್ಟು ಕೇವಲ ಪೂರ್ಣಪ್ರಮತಿ ಎಂಬ ಒಬ್ಬ ಗುರುಗಳ ಕಾರುಣ್ಯಮಾತ್ರ ಕಾರ್ಯಸಾಧಕ ಎಂದು ಹೇಳಿದ್ದು ಹೇಗೆ?

ಉತ್ತರ – ಶ್ರೀಮತ್ ಎನ್ನುವ ವಿಶೇಷಣದ ಮೂಲಕ ಅಪ್ರಧಾನವಾಗಿ ಶ್ರೀಪದ್ಮನಾಭತೀರ್ಥರೇ ಮೊದಲಾದವರ ಕಾರುಣ್ಯದ ಪರಂಪರೆಯೂ ಅಭಿಪ್ರೇತ. ಆದ್ದರಿಂದಲೇ 'ಕಾರುಣ್ಯಂ' ಎಂದಿಷ್ಟೇ ಹೇಳದೆ ಕಾರುಣ್ಯಸರಣಿಂ ಎಂದಿದ್ದಾರೆ. ಒಬ್ಬರನ್ನೇ ಅರ್ಥಾತ್ ಆಚಾರ್ಯರನ್ನೇ ವಿಶೇಷವಾಗಿ ಹೇಳಿದ್ದು ಅವರ ಅನುಗ್ರಹ ಪರಮಮುಖ್ಯ ಎಂದು ತಿಳಿಸಲು.

ಜ್ಞೇಯಂ ಗಮ್ಯಂ ಗುರೂಂಶ್ಚಾಪಿ - ಎಂಬ ಶ್ಲೋಕದಲ್ಲಿರುವ ಜ್ಞೇಯಂ ಗಮ್ಯಂ ಎಂಬ ಪದಗಳು ಸಹೋಚ್ಚರಿತವಾಗಿರುವ ಕಾರಣದಿಂದಲೇ ಪರಸ್ಪರ ಸಾಧ್ಯ-ಸಾಧನಭಾವವು ತಿಳಿಯುತ್ತದೆ. ಅದೇ

ರೀತಿ ಇಲ್ಲಿಯೂ ಪ್ರಪನ್ನಾಃ ಮಾನ್ಯಾಃ - ಎಂಬ ಪದಗಳು ಸಹೋಚ್ಚರಿತವಾದ್ದರಿಂದ ಮಾನ್ಯತ್ವಕ್ಕೆ ಪ್ರಪನ್ನತ್ವವು ಸಾಧನ ಎಂದು ತಿಳಿಯುವುದು. ನಾವು ಗುರುಕಾರುಣ್ಯಮಾರ್ಗವನ್ನು ಹೊಂದಿ-ದವರಾಗಿ ಕಿಮಪಿ ಚ ಎಂದರೆ ಏನನ್ನಾದರೂ ಹೇಳಿದರೂ ಕೂಡ, ಅಥವಾ ಕಿಂಚ ಅಪಿಚ ಎಂದು ಹೇಳುತ್ತಿದ್ದರೂ ಮಾನ್ಯರಾಗಿದ್ದೇವೆ.

** ಅಥ ತತ್ಕೃಪಯಾ — ಅಥೇತಿ ಪ್ರತಿಜ್ಞಾಯಾ ಽವಸರಪ್ರಾಪ್ತಿಮಾಹ । ಅಥ ತಸ್ಮಾದ್ ಗಾಂಭೀ-ರ್ಯಾದಿಯುತತ್ವಾತ್ ಇತಿ ವಾ ತತ್ಕೃಪಯಾ ತೇಷಾಂ ಪ್ರಾಗುಕ್ತಾನಾಂ ಕೃಪಯಾ ॥ (ಭಾವದೀಪ)

## ಪರಮಮುಖ್ಯ-ಮುಖ್ಯಭೇದೇನ ಕಾರುಣ್ಯವು ದ್ವಿವಿಧ

(ಲಘುರಸರಂಜನೀ) — ಅಯಂ ಭಾವಃ । ಅಸ್ಮಾಕಂ ಪರಮಮುಖ್ಯಗುರವಃ ತಾವತ್ ಪೂರ್ಣಪ್ರಜ್ಞಾಚಾರ್ಯಾಃ ಪ್ರಸಿದ್ಧಾಃ, ಮುಖ್ಯಗುರವಸ್ತು ಪದ್ಮನಾಭತೀರ್ಥಾದಯಃ । ಅಸ್ಮಾಭಿಃ ತೇಷಾಮೇಷಾಂ ಚ ಕಾರುಣ್ಯಾನಿ ಸಂಪಾದಿತಾನಿ । ಅತ ಏವ ಪೂರ್ವಂ ತೇ ಸರ್ವೇಽಪಿ ವಂದಿತಾಃ ಪ್ರಾರ್ಥಿತಾಶ್ಚ । ತತ್ರಾದ್ಯಗುರೂಣಾಂ ಕಾರುಣ್ಯಂ ಪರಮಮುಖ್ಯಮ್ । ದ್ವಿತೀಯಾನಾಂ ತು ಮುಖ್ಯಮ್ । ತದೇತತ್ ಪರಮಮುಖ್ಯಮುಖ್ಯಭೇದೇನ ದ್ವಿವಿಧಮಪಿ ಕಾರುಣ್ಯಂ ಅನುವ್ಯಾಖ್ಯಾನವ್ಯಾಖ್ಯಾನಸ್ಯ ಶಾಸ್ತ್ರಪರಿಚಯಾದ್ಯಮುಖ್ಯಕಾರಣಾಪೇಕ್ಷಯಾಮುಖ್ಯಮೇವ ಕಾರಣಂ ಭವತಿ । ತದ್ಭಾವಾತ್ ಸಃ ನಿಶ್ಚಯೋಽಪಿ ಅಸ್ಮಾಸು ತತ್ಕಾರ್ಯದರ್ಶನಾದೇವ ಸಿದ್ಧ್ಯತಿ । ತಥಾಹಿ — ಮಹತಾಂ ಸಭಾಯಾಂ ಪ್ರಮಾಣವಿಷಯೇ ಪ್ರಮೇಯವಿಷಯೇ ವಾ ಪ್ರಸಕ್ತೌ ತತ್ರ ವಕ್ತವ್ಯಬಹುತ್ವೇಽಪಿ ಆದಾವಸ್ಮಾಭಿಃ ಅಲ್ಪಮೇವೋಚ್ಯತೇ । ತದೇವ ತೇಷಾಂ ಕಿಂಚಾಪಿಚೇತ್ಯಾದಿ-ರೂಪೇಣ ಬಹುವಿಧಂ ಭವತಿ । ಏವಮಾದಿವಿಧಂ ಕೇವಲಪದಾದಿಶಾಸ್ತ್ರಪರಿಚಯಾದ್ಯಸಾಧ್ಯಂ ಗುರುಕಾರುಣ್ಯೈಕಸಾಧ್ಯಂ ಕಾರ್ಯಂ ಪಶ್ಯಂತಃ, ತೇಽಷ್ಯತಿತರಾಮ್ ಅಸ್ಮಾನ್ಮಾನಯಂತೀತಿ । ತಸ್ಮಾತ್ ಮುಖ್ಯಾಮುಖ್ಯಭೇದೇನ ಅನೇಕವಿಧಸಾಧನಸಾಮಗ್ರೀಸಂಪನ್ನಾನಾಮಸ್ಮಾಕಂ ನಾನು-ವ್ಯಾಖ್ಯಾನವ್ಯಾಖ್ಯಾನಮಸಂಭಾವಿತಮಿತಿ । ಅತ್ರ ಶ್ಲೋಕಾನಾಂ ವಕ್ತವ್ಯಾರ್ಥಬಹುತ್ವೇಽಪಿ ತಾವದ್ವರ್ಣನೇ ಶಕ್ತ್ಯಭಾವಾದೇವೋಪರಮ್ಯತೇ । ಯಥೋಕ್ತಂ ಗುರುಭೀ(ಗುರುಗಳಿಂದ) ರಸ-ರಂಜನ್ಯಾಮ್ –

ಅಮಂದಮತಿಟೀಕಾಕೃತ್ ಪ್ರಬಂಧತತಿಸಮ್ಮತಮ್ ।
ಮೇಯಂ ಸಾ ಕಲ್ಪತೋ ವಕ್ತುಂ ನೇಯಂ ಮರ್ತ್ಯಸಭಾ ಕ್ಷಮಾ ॥

ಇತಿ । ಅಧಿಕಂ ತು ಗುರ್ವ್ಯಾಂ ರಸರಂಜಿನ್ಯಾಂ ದ್ರಷ್ಟವ್ಯಮ್ ।

ಒಟ್ಟಭಿಪ್ರಾಯವಿದು - ನಮಗೆ ಪರಮಮುಖ್ಯಗುರುಗಳು ಮಧ್ವಾಚಾರ್ಯರು. ಮುಖ್ಯಗುರುಗಳು ಪದ್ಮನಾಭತೀರ್ಥರೇ ಮೊದಲಾದವರು. ಅವರೆಲ್ಲರ ಕಾರುಣ್ಯ ಅವಶ್ಯಸಂಪಾದನೀಯ. ಆದ್ದರಿಂದಲೇ ಮೊದಲು ಅವರನ್ನು ನಮಸ್ಕರಿಸಿದ್ದು ಹಾಗೂ ಪ್ರಾರ್ಥಿಸಿದ್ದು. ಅವರಲ್ಲಿ ಆದ್ಯ-ಗುರುಗಳ ಕಾರುಣ್ಯ ಪರಮಮುಖ್ಯ. ನಂತರದವರದು ಮುಖ್ಯ. ಈ ರೀತಿಯ ಎರಡು ಕಾರುಣ್ಯವು ಅನುವ್ಯಾಖ್ಯಾನದ ವ್ಯಾಖ್ಯಾನವನ್ನು ಮಾಡಲು ವ್ಯಾಕರಣಶಾಸ್ತ್ರಮೊದಲಾದವುಗಳ ಪರಿಚಯ ಎಂಬ ಅಮುಖ್ಯಕಾರಣಕ್ಕಿಂತ ಮುಖ್ಯಕಾರಣವೇ ಆಗಿದೆ. ಹೀಗಾಗಿ ಕೇವಲ ವ್ಯಾಕರಣಾದಿ ಶಾಸ್ತ್ರಗಳ ಪರಿಚಯಮಾತ್ರದಿಂದಲೇ ಅಸಾಧ್ಯವಾದ ಕೇವಲ ಗುರುಕಾರುಣ್ಯಮಾತ್ರದಿಂದ ಸಾಧ್ಯವಾದ ಇಂತಹ ಗ್ರಂಥರೂಪಕಾರ್ಯವನ್ನು ನೋಡುತ್ತ ಎಲ್ಲ ಮಹಾತ್ಮರು ಸಮ್ಮಾನಿಸುತ್ತಾರೆ. ಆದ್ದರಿಂದ ಮುಖ್ಯಸಾಮಗ್ರಿಗಳು ಅಮುಖ್ಯಸಾಮಗ್ರಿಗಳು ಹೀಗೆ ಅನೇಕವಿಧ ಸಾಧನಸಾಮಗ್ರಿ-ಗಳನ್ನು ಹೊಂದಿದ ನಮಗೆ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಬರೆಯುವುದು ಅಸಂಭಾವಿತವಲ್ಲ. ಇಲ್ಲಿ ಶ್ಲೋಕಗಳಿಗೆ ಅನೇಕ ಅರ್ಥಗಳನ್ನು ಹೇಳಬೇಕಾಗಿದ್ದರೂ ಅಷ್ಟು ವರ್ಣನೆ ಮಾಡುವುದರಲ್ಲಿ ಶಕ್ತಿಯಿಲ್ಲವಾದ್ದರಿಂದಲೇ ನಿಲ್ಲಿಸುತ್ತೇವೆ. ಇದನ್ನು ಗುರುರಸರಂಜನಿಯಲ್ಲಿ ಹೀಗೆ ಹೇಳಲಾಗಿದೆ.

ಅಮಂದಮತಿಟೀಕಾಕೃತ್ ಪ್ರಬಂಧತತಿಸಮ್ಮತಮ್ ।
ಮೇಯಂ ಸಾ ಕಲ್ಪತೋ ವಕ್ತುಂ ನೇಯಂ ಮರ್ತ್ಯಸಭಾ ಕ್ಷಮಾ ॥ - ಎಂದು.
(ಅರ್ಥ ಹಿಂದೆ ಬಂದಿದೆ; ನೇಯಂ ಮರ್ತ್ಯಸಭಾ ಕ್ಷಮಾ ಎಂಬ ಶೀರ್ಷಿಕೆಯಡಿ. ಪುಟ.454)

## ನಿಗಮಚರ್ಚಾಸು ಚತುರಾಃ ಎಂಬಲ್ಲಿನ ಬಹುವಚನದಿಂದ ಮೀಮಾಂಸಾತ್ರಯವು ವಿವಕ್ಷಿತ

(ಏರೀಬಾಳಾಚಾರ್ಯರು) – 'ನಿಗಮಚರ್ಚಾಸು' ಇತಿ ಬಹುವಚನಂ ಮೀಮಾಂಸಾತ್ರಯಾಭಿ-ಪ್ರಾಯೇಣ । ಅನ್ಯೇ ತು ನ ಪರಟೀಕಾಕಾರಾಣಾಮಿವ ಅಸ್ಮದ್ವಿವರಣಮಶೇಷಶಾಸ್ತ್ರಾರ್ಥ-ಪರಿಜ್ಞಾನಮಾತ್ರಸಾಧ್ಯಮಪಿ ತು ಗುರೂತ್ತಮಶ್ರೀಮಧ್ವಾಚಾರ್ಯಕರುಣಾಸಾಧ್ಯಮತೋ ನಾತ್ರಾ-ನಾದರಲೇಶಃ ಕಾರ್ಯ ಇತ್ಯಭಿಪ್ರೇತ್ಯಾಹ — ನೇತ್ಯಾದಿನಾ ॥ ವಯಮಪಿ ಯದ್ಯಪಿ ಶಬ್ದಾಬ್ಧೌ ವ್ಯಾಕರಣಶಾಸ್ತ್ರೇ ಗಾಢಾ ನೇತಿ ನ । ಕೃತವ್ಯಾಕರಣಶಾಸ್ತ್ರನದೀವಗಾಹಾ ಏವೇತಿ ಭಾವಃ । ನಿಗಮಚರ್ಚಾಸು ಚತುರಾಶ್ಚ ನ್ಯಾಯೇ ಪ್ರೌಢಾಶ್ಚ ನೇತಿ ನ । ತತ್ರ ತತ್ರ ಚತುರಾಃ ಪ್ರೌಢಾಶ್ಚೇತಿ ಭಾವಃ । ವಿದಿತವೇದ್ಯಾಶ್ಚ ವ್ಯಾಖ್ಯಾನೋಪಯೋಗಿಸಾಮಗ್ರೀಸಂಪನ್ನಾ ಇತಿ ಯಾವತ್ ।

'ನಿಗಮಚರ್ಚಾಸು ಚತುರಾಃ' - ಇಲ್ಲಿ ಬಹುವಚನವನ್ನು ಹೇಳಿದ್ದರಿಂದ ಮೂರು ರೀತಿಯಾದ ಮೀಮಾಂಸಾಗಳನ್ನು ಗ್ರಹಿಸಬೇಕು.

* ಗುರುಗಳ ಕಾರುಣ್ಯದಿಂದ ಈ ಗ್ರಂಥವನ್ನು ಬರೆದಿದ್ದು ಎಂದ ಮೇಲೆ ಈ ಗ್ರಂಥಸ್ಥವಿಷಯಗಳಿಗೆ ಮೂಲವಿದೆ ಎಂದು ಸೂಚನೆ ಮಾಡಿದಂತಾಯಿತು. ಹಾಗೂ ಆಚಾರ್ಯರಿಗೆ ಅತ್ಯಂತಸಮ್ಮತವಾದ-ದ್ದೆಂದು ಸೂಚನೆ ಮಾಡಿದಂತಾಯಿತು. 'ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ ಪ್ರಪನ್ನಾಃ' ಎಂದು ಹೇಳಿದ್ದರಿಂದ ಬೇರೆ ಟೀಕಾಕಾರರಂತೆ ನಮ್ಮ ವಿವರಣೆಯು ಕೇವಲ ಸಕಲಶಾಸ್ತ್ರಗಳ ಅರ್ಥಜ್ಞಾನದಿಂದ ಮಾತ್ರ ಸಾಧ್ಯವಲ್ಲ. ಹೊರತು ಗುರುಗಳಲ್ಲೇ ಅತ್ಯುತ್ಕೃಷ್ಟರಾದ ಶ್ರೀಮನ್ಮಧ್ವಾ-ಚಾರ್ಯರ ಕರುಣೆಯಿಂದ ಸಾಧ್ಯವಾಗಿದೆ ಎಂದದ್ದರಿಂದ ಇಲ್ಲಿ ಸ್ವಲ್ಪವೂ ಅನಾದರಕ್ಕೆ ಅವಕಾಶವಿಲ್ಲ ಎಂದು ಹೇಳಿದಂತಾಯಿತು.

## ಪೂರ್ಣಪ್ರಮತಿಗಳೆಂದರೆ ಸನಕಾದಿಮುನಿಗಳು ಎಂದರ್ಥ - ಅವರ ಗುರುಗಳು ಮಧ್ವಾಚಾರ್ಯರು

(ಏರೀಬಾಳಾಚಾರ್ಯರು) – ತಥಾಪಿ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಮ್ । ಶ್ರೀಮಾನ್ ಅನಂತಃ ತೇನ ತದ್ವಚನೇನ ಇತಿ ಯಾವತ್ । ಪೂರ್ಣಪ್ರಮತಿಃ ಶ್ರೀಮನ್ಮಧ್ವಶಾಸ್ತ್ರ-ಶ್ರವಣಸ್ಯ ಮೋಕ್ಷಃ ಫಲಮಿತಿ ಪ್ರಕೃಷ್ಟಂ ಜ್ಞಾನಂ ಯೇಷಾಂ ತೇ ಶ್ರೀಮತ್ಪೂರ್ಣಪ್ರಮತಯಃ ಸನಕಾದಿಮುನಯಃ ತೇಷಾಂ ಗುರುಃ ಶ್ರೀಮಧ್ವಾಚಾರ್ಯಃ । ತಸ್ಯ ಕಾರುಣ್ಯಂ ಕರುಣೈವ ಸರಣಿಃ ಪದ್ಧತಿಃ ತಾಂ ಪ್ರಪನ್ನಾ ಇತಿ ಯತ್ ತತ ಏವ ಮಾನ್ಯಾ ಸ್ಮಃ । ಇತರತ್ ಮಾನ್ಯತಾಯಾ-ಮಪ್ರಯೋಜಕಮಿತಿ ಭಾವಃ । ಕಾರುಣ್ಯಂ = ಕರುಣಾ ಘೃಣಾ 'ಸರಣಿಃ ಪದ್ಧತಿಃ ಪದ್ಯೇ'ತಿ ಚಾಮರಃ ।

ಕದಾಚಿತ್ ಶ್ರೀಮಧ್ವಾಚಾರ್ಯಸ್ಯ ವ್ಯಾಖ್ಯಾಂ ಶ್ರೋತುಂ ಸ ಸನಕಾದಿಮುನಿಃ ಗಗನೇಽಲ್ಪ-ದೃಷ್ಟತನುಃ ಸಹಪ್ರಮಸ್ತಕೋಽನಂತೋಽಭ್ಯುಪೇತ್ಯ ತಾಂ ಶ್ರುತ್ವಾ ನನಂದ, ತದಾ ತೇ ಮುನಯಃ ಕಿಮಸ್ಯ ವ್ಯಾಖ್ಯಾನಶ್ರವಣಸ್ಯ ಫಲಮಿತಿ ತಮುಪಸನ್ನಾಃ ಪಪ್ರಚ್ಛುಃ । ತದಾ ಸಃ ನಿರ್ದುಃಖಾ-ನಂದಾನುಭವಲಕ್ಷಣೋ ಮೋಕ್ಷ ಏವ ತಸ್ಯ ಮುಖ್ಯಂ ಫಲಮ್ ಇತ್ಯುಜ್ಜಗಾರೇತಿ ಸುಮಧ್ವ-ವಿಜಯೇ ಏಕಾದಶಸರ್ಗೇ ಪ್ರಸಿದ್ಧೈಷಾ ಕಥಾ ।

'ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ' – ಶ್ರೀಮಾನ್ ಎಂದರೆ ಸಂಪತ್ತುಗಳಿಂದ ಕೂಡಿರುವ ಅನಂತ = ಶೇಷ ಎಂದರ್ಥ. ಅವನಿಂದ ಅಂದರೆ ಅವನ ಮಾತಿನಿಂದ ಎಂದರ್ಥ. ಪೂರ್ಣಪ್ರಮತಿಃ = ಪೂರ್ಣವಾದ ಪ್ರಕೃಷ್ಟವಾದ ಜ್ಞಾನ ಅಂದರೆ ಶ್ರೀಮಧ್ವಾಚಾರ್ಯರ ಶಾಸ್ತ್ರಶ್ರವಣಕ್ಕೆ ಮೋಕ್ಷವೇ ಫಲ ಎಂಬುದು. ಇದು ಯಾರಿಗೆ ಇದೆಯೋ ಅವರೇ ಶ್ರೀಮತ್ಪೂರ್ಣಪ್ರಮತಿಗಳು. ಅರ್ಥಾತ್ ಸನಕಸನಂದನಮೊದಲಾದ ಋಷಿಗಳು. ಅವರಿಗೆ ಗುರುಗಳು ಎಂದರೆ ಶ್ರೀಮಧ್ವಾಚಾರ್ಯರು.

ಅವರ ಕಾರುಣ್ಯವೇ ಸರಣಿ ಅಂದರೆ ಪದ್ಧತಿ ಎಂದರ್ಥ. ಅದನ್ನು ಹೊಂದಿ ಮಾನ್ಯರಾಗಿದ್ದೇವೆ. ಇದಕ್ಕಿಂತ ಬೇರೆಯಾದ ಶಬ್ದಶಾಸ್ತ್ರಾದಿ ಅವಗಾಹನೆಯು ಮಾನ್ಯತೆಗೆ ಕಾರಣವಲ್ಲ. ಅಪ್ರಯೋಜಕ.

## ಮಧ್ವಾಚಾರ್ಯರ ವ್ಯಾಖ್ಯಾನವನ್ನು ಕೇಳಿದ ಸನಕಾದಿಗಳು

• ಪ್ರಚುರಾಂತರಪ್ರವಚನಂ ಫಣಿರಾಡುಪಶುಶ್ರುವಾನ್ ಸಸನಕಾದಿಮುನಿಃ ।
ಗಗನೇऽಲ್ಪದೃಷ್ಟವಪುರತ್ರಜನ್ಯೆಸ್ತ್ವರಿತಂ ನಿಲೀನರುಚಿರಾಪಪದಮ್ ॥ 11-1 ॥

ಒಮ್ಮೆ ಮಧ್ವಾಚಾರ್ಯರ ವ್ಯಾಖ್ಯಾನವನ್ನು ಕೇಳಲು ಸನಕಾದಿ ಋಷಿಗಳ ಜೊತೆಗೆ ಆಕಾಶದಲ್ಲಿ ಚಿಕ್ಕ ದೇಹವನ್ನು ಧರಿಸಿ ಸಾವಿರಾರು ಹೆಡೆಗಳುಳ್ಳ ಶೇಷದೇವರು ಅದನ್ನು ಕೇಳಿ ಸಂತೋಷಪಟ್ಟರು. ಆಗ ಆ ಮುನಿಗಳು ಈ ಶ್ರೀಮಧ್ವಾಚಾರ್ಯರ ವ್ಯಾಖ್ಯಾನದ ಶ್ರವಣಕ್ಕೆ ಫಲ ಏನೆಂದು ಶೇಷ-ದೇವರನ್ನು ಕುರಿತು ಪ್ರಶ್ನಿಸಿದರು. ಆಗ ಶೇಷದೇವರು ನಿರ್ದುಃಖವಾದ ಆನಂದಾನುಭವರೂಪವಾದ ಮೋಕ್ಷವೇ ಅದಕ್ಕೆ ಮುಖ್ಯಫಲ ಎಂದು ಉದ್ಗರಿಸಿದರು. ಈ ರೀತಿಯಾದ ಕಥೆಯು ಸುಮಧ್ವವಿಜಯ ಹನ್ನೊಂದನೆಯ ಸರ್ಗದಲ್ಲಿ ಪ್ರಸಿದ್ಧವಾದದ್ದು.

## ಶ್ರೀಮತ್ಪೂರ್ಣಪ್ರಮತಿ ಎಂಬುದಕ್ಕೆ ಪ್ರಕಾರಾಂತರೇಣ ಅರ್ಥಕಥನ

(ಏರೀಬಾಳಾಚಾರ್ಯರು) – ಶ್ರೀಮತೋ ಹರೇಃ ಪೂರ್ಣಪ್ರಮತಿರಿಚ್ಛಾ ಮನೋರಥೋ ಯೇನಾಸೌ ತಥೋಕ್ತಃ ।
ವೇದಾಂತಮಾರ್ಗಪರಿಮಾರ್ಗಣದೀನದೂನಾಃ ದೈವೀ ಪ್ರಜಾಃ ವಿಶರಣಾಃ ಕರುಣಾಪದಂ ನಃ ।
ಆನಂದಯೇಃ ಸುಮುಖಭೂಷಿತಭೂಮಿಭಾಗೋ ರೂಪಾಂತರೇಣ ಮಮ ಸದ್ಗುಣನಿರ್ಣಯೇನ ॥
ಇತ್ಯಾದಿಸುಮಧ್ವವಿಜಯೋಕ್ತೇಃ । ಸ ಚಾಸೌ ಗುರುಶ್ಚೇತಿ ವಾ । 'ಮತಿಬುದ್ಧಿಪೂಜಾರ್ಥೇಭ್ಯಶ್ಚ' ಇತಿ ಸೂತ್ರೇ ಮತಿಶಬ್ದಸ್ಯೇಚ್ಛಾರ್ಥತಯಾ ವೈಯಾಕರಣೈರ್ವಿವರಣಾತ್ । 'ತಸ್ಯ' ಇತ್ಯಾದಿ-ಪ್ರಾಗ್ವತ್ ।

ಶ್ರೀಮತ್ ಎಂದರೆ ಹರಿ ಎಂದರ್ಥ. ಶ್ರೀಸಹಿತನಾದ್ದರಿಂದ. ಅವನ ಪೂರ್ಣಪ್ರಮತಿ ಎಂದರೆ ಇಚ್ಛೆ ಎಂದರ್ಥ. ಮನೋರಥ ಎಂದಭಿಪ್ರಾಯ. ಮತಿ ಎನ್ನುವ ಪದಕ್ಕೆ ಇಚ್ಛೆ ಎಂದು ಶಾಸ್ತ್ರದಲ್ಲಿ ವ್ಯವಹಾರವಿದೆ. 'ಮತಿಬುದ್ಧಿಪೂಜಾರ್ಥೇಭ್ಯಶ್ಚ' ಎಂಬ ಪಾಣಿನಿಯ ಸೂತ್ರದಲ್ಲಿ ಮತಿ ಎಂಬ ಪದಕ್ಕೆ ಇಚ್ಛೆ ಎಂದು ವೈಯ್ಯಾಕರಣರು ವಿವರಣೆ ಮಾಡಿದ್ದಿದೆ. ಅದು ಪೂರ್ಣವಾದದ್ದು ಎಂದರೆ ಪೂರ್ಣವಾದ ಇಚ್ಛೆ ಎಂದಭಿಪ್ರಾಯ. ಅರ್ಥಾತ್ ಮನೋಭಿಲಾಷೆಯಲ್ಲಿ ಪರ್ಯವಸಾನವಾಗುತ್ತದೆ. ಅದನ್ನು ಯಾರು ಕಾರ್ಯಗತಗೊಳಿಸಿದರೋ ಅವರೇ ಶ್ರೀಮತ್ಪೂರ್ಣಪ್ರಮತಿಗಳು. ಇದು ಸುಮಧ್ವವಿಜಯದಲ್ಲಿ ಬಂದ ಮಾತು.

**मतिबुद्धिपूजार्थेभ्यश्च** (३-२-१८८) मतिः इच्छा। बुद्धिः ज्ञानम्। पूजा सत्कारः। एतदर्थेभ्यश्च धातुभ्यो वर्तमानार्थे क्तप्रत्ययो भवति। राज्ञां मतः। राज्ञाम् इष्टः। राज्ञां बुद्धः। राज्ञां ज्ञातः। राज्ञां पूजितः। राज्ञामर्चितः। अनुक्तसमुच्चयार्थश्चकारः। शीलितो रक्षितः क्षान्त आक्रुष्टो जुष्ट इत्यपि। (काशिका)

## ಭಗವಂತನ ಆಜ್ಞೆಯಂತೆ ವಾಯುವಿನ ಅವತಾರ

– *ಸುಮುಖ = ಒಳ್ಳೆಯ ಮುಖವುಳ್ಳ ವಾಯುವೇ। ನೀನು, ಮಮ = ನನ್ನ, ಸದ್ಗುಣ-ನಿರ್ಣಯೇನ = ಒಳ್ಳೆಯ ಗುಣಗಳನ್ನು ನಿಶ್ಚಯಿಸುವ, ರೂಪಾಂತರೇಣ = ಬೇರೆಯಾದ ಮಧ್ವಾ-ಚಾರ್ಯರೆಂಬ ರೂಪದಿಂದ, ಭೂಷಿತ = ಅಲಂಕರಿಸಲ್ಪಟ್ಟ, ಭೂಮಿಭಾಗಃ = ಭೂಮಿಯ ಪ್ರದೇಶವುಳ್ಳವನಾಗಿ, ವೇದಾಂತ = ಉಪನಿಷತ್ತು ಮೊದಲಾದುವುಗಳ, ಮಾರ್ಗ = ಬ್ರಹ್ಮಸೂತ್ರ-ವೆಂಬ ದಾರಿಯ, ಪರಿಮಾರ್ಗಣ = ವಿಚಾರದಿಂದ, ದೀನ = ಶೂನ್ಯರಾದ, ದೂನಾಃ = ಆದ್ದ-ರಿಂದಲೇ ದುಃಖಗೊಂಡ, ವಿಶರಣಾಃ = ರಕ್ಷಣೆ ಮಾಡುವವರಿಲ್ಲದ, ನಃ = ನಮ್ಮ, ಕರುಣಾಪದಂ = ದಯೆಗೆ ಪಾತ್ರರಾದ, ದೈವೀಃ = ಕ್ರೀಡಾದಿಗುಣವಿಶಿಷ್ಟನಾದ ನನ್ನ ಸಂಬಂಧಿಗಳಾದ, ಪ್ರಜಾಃ = ಪ್ರಜೆಗಳನ್ನು , ಆನಂದಯೇಃ = ಸಂತೋಷಗೊಳಿಸು. (ಮ.ವಿ. 2-3)

## ಕುರುಪಾಂಡವನ್ಯಾಯೇನ ಈ ಮಾತು

(ವಿರೀಬಾಳಾಚಾರ್ಯರು) – ಪೂರ್ಣಪ್ರಮತಿಃ ಪೂರ್ಣಬೋಧಶ್ಚ ಗುರವಃ ಪ್ರಾಕ್ ಪ್ರಣತಾ ಭಾರತ್ಯಾದಯಶ್ಚ ಶ್ರೀಮತ್ಪೂರ್ಣಪ್ರಮತಿಗುರವಃ । ಕುರುಪಾಂಡವನ್ಯಾಯೇನೇಯಮುಕ್ತಿಃ । ಶ್ರೀಮಂತಶ್ಚ ತೇ ಪೂರ್ಣಪ್ರಮತಿಗುರವಶ್ಚ ತೇಷಾಂ ಕಾರುಣ್ಯಸರಣಿಮಿತಿ ವಾ । ತದುಕ್ತ-ಮನ್ಯತ್ರ –

'(ಆನಂದತೀರ್ಥಭಗವತ್ಪಾದಾಚಾರ್ಯವಿನಿರ್ಮಿತಮ್ ।)
ವ್ಯಾಖ್ಯಾಸ್ಯೇ ಭಗವದ್ಗೀತಾಭಾಷ್ಯಂ ತತ್ಕರುಣಾಬಲಾತ್' ಇತಿ ।

ತೇಷಾಂ ಕರುಣಾಬಲಾತ್ ಇತಿ ತದರ್ಥಃ, ಶ್ರೀಮತಿ ವಿಷ್ಣೌ ಪೂರ್ಣಾ ಪ್ರಮಿತಿರಿಚ್ಛಾ ಯಸ್ಯೇತಿ ವಾ ಶ್ರೀಮತೋ ಹರೇಃ ಪೂರ್ಣಾ ಪ್ರಮಿತಿರಿಚ್ಛಾ ಯಸ್ಮಿನ್ನಿತಿ ವಾ ಪೂರ್ಣಪ್ರಮತಿಃ ಸ ಚಾಸೌ ಗುರುಶ್ಚೇತಿ ವಾ 'ಯಸ್ಯಾಹಮಾಪ್ತ ಆಪ್ತೇಭ್ಯೋ ಯೋ ಮ ಆಪ್ತತಮಃ ಸದಾ' (ಕಾಠಕೋ-ಪನಿಷದ್ಭಾಷ್ಯ ಅಂತ್ಯಶ್ಲೋಕ) ಇತಿ ಆಚಾರ್ಯೋಕ್ತೇಃ । ಶ್ರೀಮತಿ ವಿಷ್ಣೌ ಪೂರ್ಣಪ್ರಮತಿರಿಚ್ಛಾ ಯಸ್ಯಾಃ ಸಾ ತಥೋಕ್ತಾ ಲಕ್ಷ್ಮೀ ಸಾ ಗುರುರ್ಯಸ್ಯೇತಿ ವಾ ।

'ವವ್ರೇ ಪರಂ (ವರಂ) ಸರ್ವಗುಣೈರಪೇಕ್ಷಿತಂ ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್ ॥
(8–8–23)

ಇತಿ ಭಾಗವತೋಕ್ತೇಃ । ತಸ್ಯ ಕಾರುಣ್ಯಸರಣಿಮಿತಿ ಪ್ರಾಗ್ವತ್ । ಏವಮೇವ ವಿವೃತ್ಯಂತರಾಣಿ ಸೂಕ್ಷ್ಮೇಕ್ಷಣೈರೂಹನೀಯಾನಿ ।

ಅಥವಾ - ಪೂರ್ಣಪ್ರಮತಿ ಎಂದರೆ ಮಧ್ವಾಚಾರ್ಯರು. ಗುರು ಎಂಬ ಪದದಿಂದ 'ಭವತಿ ಯದನುಭಾವಾತ್' ಇತ್ಯಾದಿ ರೀತಿಯಿಂದ ನಮಸ್ಕಾರ ಮಾಡಿದ ಭಾರತೀದೇವಿ ಮೊದಲಾದವರು. ಇವರುಗಳು ಶ್ರೀಮಂತರು ಸಂಪದ್ಭರಿತರು ಎಂದರ್ಥ. ಹಾಗಾಗಿ 'ಶ್ರೀಮತ್ಪೂರ್ಣಪ್ರಮತಿಗುರುಗಳು' ಎಂದರೆ ಆಚಾರ್ಯರು ಹಾಗೂ ಹಿಂದೆ ನಮಸ್ಕರಿಸಿದ ಎಲ್ಲ ಗುರುಗಳು.

ಮಧ್ವಾಚಾರ್ಯರು ಗುರುಗಳಾಗಿದ್ದರೂ ಅವರನ್ನು ಪ್ರತ್ಯೇಕವಾಗಿ ಹೇಳಿದ್ದು ಕುರುಪಾಂಡವನ್ಯಾಯ-ದಿಂದ. ಪಾಂಡವರು ಕುರುಗಳೇ ಆದರೂ ಅವರಲ್ಲಿರುವ ವೈಶಿಷ್ಟ್ಯವನ್ನು ತಿಳಿಸಲು ಪ್ರತ್ಯೇಕವಾಗಿ 'ಸಂತಾನಬೀಜಂ ಕುರು ಪಾಂಡವಾನಾಂ' ಎಂದು ಗ್ರಹಿಸಿದಂತೆ ಇಲ್ಲಿಯೂ ತಿಳಿಯಬೇಕು. ಇವರೆಲ್ಲರ ಕಾರುಣ್ಯಸರಣಿಯನ್ನು ಪಡೆದು ಮಾನ್ಯರಾಗಿದ್ದೇವೆ ಎಂಬರ್ಥವನ್ನು ತಿಳಿಯಬೇಕು.

ಈ ಅಂಶವನ್ನು ಅನ್ಯತ್ರ ತಮ್ಮ ಗ್ರಂಥದಲ್ಲಿ ಟೀಕಾಕೃತ್ಪಾದರು ತಿಳಿಸಿದ್ದಾರೆ.

'ವ್ಯಾಖ್ಯಾಸ್ಯೇ ಭಗವದ್ಗೀತಾಭಾಷ್ಯಂ ತತ್ಕರುಣಾಬಲಾತ್' - ಎಂದು. ಇಲ್ಲಿ ತತ್ಕರುಣಾಬಲಾತ್ ಎಂದರೆ ಎಲ್ಲ ಗುರುಗಳ ಕರುಣೆಯ ಬಲದಿಂದ ಎಂದು.

ಪ್ರಕೃತದಲ್ಲಿ ಶ್ರೀಮತ್ಪೂರ್ಣಪ್ರಮತಿಗುರು ಎಂದರೆ ಶ್ರೀಮಾನ್ ಎಂದರೆ ವಿಷ್ಣು. ಅವನಲ್ಲಿ ಪೂರ್ಣ-ಪ್ರಮತಿ ಪೂರ್ಣವಾದ ಇಚ್ಛೆಯು ಯಾರಿಗಿದೆಯೋ ಅವರು ಎಂದರ್ಥ. ಅಥವಾ ಶ್ರೀಮತ್ ಎಂದರೆ ಹರಿಯಿಂದ ಪೂರ್ಣವಾದ ಇಚ್ಛೆಯು ಯಾರಲ್ಲಿ ಇದೆಯೋ ಅವರು ಎಂದರ್ಥ. ಅಂತಹ ಶ್ರೀಮತ್ಪೂರ್ಣಪ್ರಮತಿಗಳಾದ ಗುರುಗಳು ಮಧ್ವಾಚಾರ್ಯರು. ಇದನ್ನು ಆಚಾರ್ಯರು 'ಯಸ್ಯ ಅಹಮಾಪ್ತಃ ಆಪ್ತೇಭ್ಯೋ ಯೋ ಮೇ ಆಪ್ತತಮಃ ಸದಾ' ಎಂದಿದ್ದಾರೆ.

ಅಥವಾ ಶ್ರೀಮತ್ ಎಂದರೆ ವಿಷ್ಣುವಿನಲ್ಲಿ ಪೂರ್ಣಪ್ರಮತಿ ಎಂದರೆ ಪೂರ್ಣವಾದ ಇಚ್ಛೆಯು ಯಾರಿಗೆ ಇದೆಯೋ ಅವಳೇ ಶ್ರೀಮತ್ಪೂರ್ಣಪ್ರಮತಿಯು ಅಂದರೆ ಲಕ್ಷ್ಮೀದೇವಿಯು. ಅವಳನ್ನೇ ಗುರುಗಳನ್ನಾಗಿ ಪಡೆದ ಶ್ರೀಮತ್ಪೂರ್ಣಪ್ರಮತಿಗುರುಗಳು ಎಂದರೆ ಮಧ್ವಾಚಾರ್ಯರು ಎಂದರ್ಥ. ಇವರ ಕಾರುಣ್ಯಸರಣಿಯನ್ನು ಹೊಂದಿ ಮಾನ್ಯರಾಗಿದ್ದೇವೆ ಎಂದರ್ಥ. ಈ ರೀತಿ ಬೇರೆ ರೀತಿಯ ವ್ಯಾಖ್ಯಾನಗಳನ್ನು ಸೂಕ್ಷ್ಮೇಕ್ಷಿಕೆಯಿಂದ ಊಹೆ ಮಾಡಬೇಕು.

* — ನಮೋ ಭಗವತೇ ತಸ್ಮೈ ವಿಷ್ಣವೇ ಪ್ರಭವಿಷ್ಣವೇ ।
ಯಸ್ಯಾಹಮಾಪ್ತ ಆಪ್ತೇಭ್ಯೋ ಯೋ ಮ ಆಪ್ತತಮಃ ಸದಾ ॥

ಯಾವ ಭಗವಂತನಿಗೆ ಆಪ್ತರಾದ ಶೇಷಾದಿಸಮಸ್ತದೇವತೆಗಳಿಗಿಂತ ಹೆಚ್ಚಿನ ಆಪ್ತನು ನಾನಾಗಿರುವೆನೋ ಮತ್ತು ಯಾವ ಭಗವಂತನು ನನಗೆ ಯಾವಾಗಲೂ ಆಪ್ತನಾಗಿದ್ದಾನೆಯೋ ಅಂತಹ ಪ್ರಭವನಶೀಲನಾದ ಷಡ್ಗುಣೈಶ್ವರ್ಯಸಂಪನ್ನನಾದ ಸರ್ವತ್ರ ವ್ಯಾಪ್ತನಾದ ಸರ್ವಶಕ್ತನಾದ ಪರಮಾತ್ಮನಿಗೆ ನಮಸ್ಕಾರ.

ವವ್ರೇ ಪರಂ ಸರ್ವಗುಣೈರಪೇಕ್ಷಿತಂ ... — ಭಾಗವತ.

ಭಾಗವತದಲ್ಲಿ ಹೀಗೆ ತಿಳಿಸಿದ್ದಾರೆ -

ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣೈರ್ವರಂ ನಿಜೈಕಾಶ್ರಯತಾಗುಣಾಶ್ರಯಂ ।
ವವ್ರೇ ಪರಂ(ವರಂ) ಸರ್ವಗುಣೈರಪೇಕ್ಷಿತಂ ರಮಾ ಮುಕುಂದಂ ನಿರಪೇಕ್ಷಮೀಪ್ಸಿತಂ (8-8-22)

* ಏವಂ ವಿಮೃಶ್ಯವಿಚಾರ್ಯ ರಮಾ ನಿರಪೇಕ್ಷಮಪಿ ಮುಕುಂದಮೇವ ವವ್ರೇ । ತತ್ರ ಹೇತುಃ । ಅವ್ಯಭಿಚಾರೀತ್ಯಾದಿ ॥ ಅವ್ಯಭಿಚಾರಿಭಿಃ ಅನ್ಯತ್ರಾವಿದ್ಯಮಾನೈಃ ಪರಿಪೂರ್ಣೈಃ ಇತ್ಯರ್ಥಃ । ಸದ್ಭಿಃ ಕಲ್ಯಾಣೈಃ ಜ್ಞಾನೈಶ್ವರ್ಯಪ್ರಭವಾನಂದತೇಜಃಶಕ್ತ್ಯಾದಿಭಿಃ ವರಂ ಸರ್ವೋತ್ತಮಂ ನಿಜೈಕಾಶ್ರಯತಾ ಕೇವಲಂ ಸ್ವಾಶ್ರಯತಾ ಪರಾನಪೇಕ್ಷಂ ಸ ಏವ ಗುಣಃ ತಸ್ಯಾಶ್ರಯಂ ಸ್ವತಂತ್ರಮಿತ್ಯರ್ಥಃ । ಸುಶೀಲತ್ವಾದಿಸರ್ವೈರ್ಗುಣೈಃ ನಿಮಿತ್ತೈಃ ಅಪೇಕ್ಷಿತಂ ವರಣೀಯಂ ಮಮೇಪ್ಸಿತಮ್ ಅತಿಪ್ರಿಯಮ್ । ಯದ್ಯಪಿ ಭಗವಾನ್ ಸ್ವಯಮಾತ್ಮಾರಾಮತ್ವೇನ ಅನ್ಯನಿರಪೇಕ್ಷಸ್ತಥಾಪಿ ತದ್ಗುಣಲುಬ್ಧಾ ಅಸಮಾ ತದಪೇಕ್ಷಯಾಽಹಂ ತತ್ಸೇವಯಾ ಕೃತಾರ್ಥಾ ಸ್ಯಾಂ ಕಿಮನ್ಯೈಃ ಪ್ರಾಕೃತೈರಪೀತಿ ತಮೇವ ವವ್ರೇ ಇತಿ ಭಾವಃ ॥ (ಲಿಂಗೇರಿ)

** ತನ್ನೊಬ್ಬನನ್ನೇ ಆಶ್ರಯಿಸಿರುವ ಗುಣಗಳಿಗೆ ಆಶ್ರಯನಾಗಿದ್ದಾನೆ ಶ್ರೀಹರಿ. ಸರ್ವಗುಣಗಳೂ ಅವನ ಸ್ವರೂಪಭೂತವಾಗಿದ್ದು ಚೇತನವಾದ್ದರಿಂದ ಆಶ್ರಯಕ್ಕಾಗಿ ಅವನನ್ನೇ ಅಪೇಕ್ಷಿಸುತ್ತವೆ. ಗುಣಗಳು ತನ್ನೊಬ್ಬನನ್ನೇ ಆಶ್ರಯಿಸದೇ ಬೇರೆಯವರಲ್ಲಿಯೂ ಇದ್ದರೆ ಅದೊಂದು ಬಗೆಯ ವ್ಯಭಿಚಾರ. ಒಂದು ಗುಣವಿದ್ದರೂ ಅದರ ಜೊತೆಗೇ ಇರಬೇಕಾಗಿರುವ ಇನ್ನೊಂದು ಗುಣ ಇಲ್ಲದೇ ಹೋದರೆ ಅದೂ ಇನ್ನೊಂದು ಬಗೆಯ ವ್ಯಭಿಚಾರ. ಈ ಎರಡೂ ಬಗೆಯ ವ್ಯಭಿಚಾರವಿಲ್ಲದ ಸದ್ಗುಣವುಳ್ಳವ ಮುಕುಂದನೆಂದು ವಿಚಾರ ಮಾಡಿದ್ದಾಳೆ. ಲಕ್ಷ್ಮಿ. ಅವನು ತನ್ನೊಬ್ಬನನ್ನೇ ಆಶ್ರಯಿಸಿರುವ ಗುಣವುಳ್ಳವನು. ಆದ್ದರಿಂದ ಮೊದಲನೇ ವ್ಯಭಿಚಾರವಿಲ್ಲ. ಎಲ್ಲ ಗುಣಗಳೂ

ತನ್ನಲ್ಲಿ ಇರುವುದರಿಂದ ಎರಡನೇ ವ್ಯಭಿಚಾರವೂ ಇಲ್ಲ. ಶ್ರೀಹರಿಯು ಸ್ವರಮಣನಾದ್ದರಿಂದ ಅವನು ಲಕ್ಷ್ಮಿಯನ್ನು ತನ್ನ ಸುಖಕ್ಕಾಗಿ ಅಪೇಕ್ಷಿಸುವುದಿಲ್ಲ. ನಿರಪೇಕ್ಷ. ಆದರೆ ಲಕ್ಷ್ಮಿಗೆ ಆತ ಅಪೇಕ್ಷಿತ, ಈಪ್ಸಿತ. ಇಂಥ ಪದ, ವೇದವೇದ್ಯ, ಮುಕುಂದ, ಮೋಕ್ಷದಾತನಾದ ಹರಿಯನ್ನೇ ಲಕ್ಷ್ಮಿ ವರಿಸಿದಳು.

## ವ್ಯಾಖ್ಯಾಸ್ಯೇ ಭಗವದ್ಗೀತಾಭಾಷ್ಯಂ — ವಿವರಣೆ

*ವ್ಯಾಖ್ಯಾಸ್ಯೇ ತತ್ಕರುಣಾಬಲಾತ್ – ತಥಾ ಚ ಆನಂದತೀರ್ಥಾಖ್ಯಾ ಯೇ ಪೂಜ್ಯಸ್ವರೂಪವಂತಃ ಆಚಾರ್ಯಾಃ ತೈಃ ವಿನಿರ್ಮಿತಂ = ವಿಶೇಷೇಣ ಇತರವೈಲಕ್ಷಣ್ಯೇನ ನಿರ್ಮಿತಮಿತ್ಯರ್ಥಃ । 'ಭಗವದ್ಗೀತಾಭಾಷ್ಯಮ್' ಇತಿ ಸಾಮಾನ್ಯೋಕ್ತ್ಯಾಽನ್ಯಕೃತಭಾಷ್ಯಪ್ರಸಕ್ತೌ ಸತ್ಯಾಂ ತತ್ಪರಿಹಾರಾಯ ಇದಂ ವಿಶೇಷಣಮಿತಿ ಜ್ಞಾತವ್ಯಮ್ । ತೇಷಾಂ ಪೂರ್ವವಂದಿತಾನಾಂ ಕರುಣಾಬಲಾತ್ ॥ – (ಪ್ರ.ದೀ. ಭಾವದೀಪಿಕಾ)

* ಅತ್ರ ಭಗವತ್-ಪದೇನ ಭಾಷ್ಯಕಾರಸ್ಯ ವಿವಕ್ಷಿತಾರ್ಥತತ್ತ್ವಜ್ಞಾನಾದ್ಯುಕ್ತ್ಯಾ ತತ್ಪ್ರೋಕ್ತತ್ವೇನ ಭಾಷ್ಯಸ್ಯ ಪ್ರಾಮಾಣ್ಯಂ ಸೂಚಿತಮ್ । 'ಗೀತಾಭಾಷ್ಯಮ್' ಇತ್ಯುಕ್ತ್ಯಾ ಚ ಗೀತಾವಿಷಯಾದ್ಯೇವ ಅಸ್ಯಾಪಿ ವಿಷಯಾದಿ ಇತ್ಯಪಿ । 'ವ್ಯಾಖ್ಯಾಸ್ಯೇ' ಇತ್ಯತ್ರ ಚಕ್ಷಿಙಃ ಖ್ಯಾದೇಶೇ ತಸ್ಯ ಙಿತ್ತ್ವಾತ್ ವ್ಯಾಖ್ಯಾನಫಲಸ್ಯ ಪುಣ್ಯಾದೇಃ ಕರ್ತೃಗಾಮಿತ್ವಾಚ್ಚ ಆತ್ಮನೇಪದಮ್ । .... ತತ್ಕರುಣಾಬಲಾತ್ - ಆನಂದತೀರ್ಥಭಗವತ್ಪಾದಾಚಾರ್ಯಕರುಣಾಬಲಾದಿತಿ ವದನ್ ಸರ್ವಜ್ಞಪ್ರಣೀತಭಾಷ್ಯ-ವ್ಯಾಖ್ಯಾನೇ ಸ್ವಸ್ಯ ಸಾಮಗ್ರೀಸಂಪತ್ತಿಮ್ ಅಭಿಸಂಧತ್ತೇ ॥ (ಭಾವರತ್ನಕೋಶಃ)

– ಆನಂದತೀರ್ಥರೆಂಬ ಹೆಸರುಳ್ಳ ಪೂಜ್ಯಸ್ವರೂಪರಾದ ಆಚಾರ್ಯರು ವಿಶೇಷವಾಗಿ ಅಂದರೆ ಇತರ ಗ್ರಂಥಗಳಿಗಿಂತ ವಿಲಕ್ಷಣವಾಗಿ ನಿರ್ಮಾಣಮಾಡಿದ್ದಾರೆ. ಭಗವದ್ಗೀತಾಭಾಷ್ಯಂ ಎಂದು ಸಾಮಾನ್ಯವಾಗಿ ಹೇಳಿದ್ದರಿಂದ ಬೇರೆಯವರು ಮಾಡಿದ ಭಾಷ್ಯಗಳ ಪ್ರಸಕ್ತಿ ಇರುವುದರಿಂದ 'ಆನಂದತೀರ್ಥಭಗವತ್ಪಾದಾಚಾರ್ಯವಿನಿರ್ಮಿತಮ್' ಎಂದಿದ್ದಾರೆ. ತತ್ಕರುಣಾಬಲಾತ್ - ಎಂದರೆ ಮೊದಲು ನಮಸ್ಕರಿಸಿದವರ ಕರುಣೆಯ ಬಲದಿಂದ ಎಂದರ್ಥ. ತಾವು ವ್ಯಾಖ್ಯಾನ ಮಾಡಲು ಬೇಕಾದ ಸಾಮಗ್ರಿಯನ್ನು ಸೂಚಿಸುತ್ತಿದ್ದಾರೆ - ತತ್ಕರುಣೆ ಎಂದು.

## ಅಹೋ ವಯಂ ಧನ್ಯತಮಾ - ಎಂಬಲ್ಲಿನ ವಯಂ ಪ್ರಯೋಗ

(ಬಿರೀಬಾಳಾಚಾರ್ಯರು) – ತಥಾ ಚ ಭಾಗವತೇ 'ಅಹೋ ವಯಂ ಧನ್ಯತಮಾ ಯದತ್ರ ತ್ಯಕ್ತಾಃ ಪಿತೃಭ್ಯಾಂ ನ ವಿಚಿಂತಯಾಮಃ ಇತಿ' ಇತಿ ।

'ವಯಂ ಮಾನ್ಯಾಃ' ಎಂಬಲ್ಲಿ ಏಕವ್ಯಕ್ತಿಯಲ್ಲಿ ಬಹುವಚನಪ್ರಯೋಗವು ಭಾಗವತದಲ್ಲಿ ಕಂಡಿದೆ.

'ಅಹೋ ವಯಂ ಧನ್ಯತಮಾ ಯದತ್ರ ತ್ಯಕ್ತಾಃ ಪಿತೃಭ್ಯಾಂ ನ ವಿಚಿಂತಯಾಮ ಇತಿ ॥' (7-2-38) ಎಂದು.

## ತಂದೆತಾಯಿಗಳಿಂದ ಪರಿತ್ಯಕ್ತನಾದರೂ ನಾನು ಚಿಂತಿಸುವುದಿಲ್ಲ

* ಅಹೋ ವಯಂ ಧನ್ಯತಮಾ ಯದತ್ರ ತ್ಯಕ್ತಾಃ ಪಿತೃಭ್ಯಾಂ ನ ವಿಚಿಂತಯಾಮಃ ।
ಅಭಕ್ಷ್ಯಮಾಣಾ ಅಬಲಾ ವೃಕಾದಿಭಿಃ ಸ ರಕ್ಷಿತಾ ರಕ್ಷತಿ ಯೋ ಹಿ ಗರ್ಭೇ ॥38॥

— ಬದುಕು, ಸಾವು ಎಲ್ಲವೂ ಭಗವಂತನ ಅಧೀನವೆಂದು ತಿಳಿದರೆ ಶೋಕಕ್ಕೆ ಅವಕಾಶವಿಲ್ಲ. ಹೀಗಾಗಿ ನಾನೇ ಇವರೆಲ್ಲರಿಗಿಂತ ಧನ್ಯ. ನನ್ನನ್ನುತಂದೆತಾಯಿಗಳು ಪರಿತ್ಯಾಗ ಮಾಡಿದರೂ ನನ್ನ ರಕ್ಷಣೆಯ ಬಗ್ಗೆ ನಾನೇನೂ ಚಿಂತಿಸುವುದಿಲ್ಲ. ದುರ್ಬಲನೇ ಆಗಿದ್ದರೂ ತೋಳ ಮುಂತಾದ ವನ್ಯಮೃಗಗಳ ಬಾಯಿಗೆ ತುತ್ತಾಗದೇ ಇದ್ದೇನೆ. ಯಾರು ಗರ್ಭದಲ್ಲಿರುವಾಗ ನನಗೆ ರಕ್ಷಣೆ ನೀಡಿದ್ದನೋ ಅವನೇ ಹೊರಗೂ ರಕ್ಷಣೆ ನೀಡುತ್ತಿದ್ದಾನೆ.

— ಬಂಧುವಿಯೋಗೇನ ಅನುಶೋಚನಸ್ಯ ಅಕಾರ್ಯಮುಕ್ತ್ವಾ ತಾದೃಶಚಿಂತಾರಹಿತಸ್ಯ ಸ್ವಸ್ಯ ಧನ್ಯತ್ವಂ ರಕ್ಷಕಾಭಾವೇ ರಕ್ಷಣಂ ಕಥಮ್? ಇತ್ಯತೋ ಭಗವತ ಏವ ರಕ್ಷಕತ್ವಂ ಚಾಹ — ಅಹೋ ವಯಮಿತಿ ॥ ಅತ್ರ ಲೋಕೇ ಪಿತೃಭ್ಯಾಂ ಮಾತಾಪಿತೃಭ್ಯಾಂ ತ್ಯಕ್ತಾಃ । ರಕ್ಷಕರಹಿತಾ ಇತಿ ಯಾವತ್ । ಅಬಲಾ ದುರ್ಬಲಾ ಅಪಿ ವೃಕಾದಿಭಿರಭಕ್ಷ್ಯಮಾಣಾಃ । ಯೋ ಹಿ ಗರ್ಭೇ ರಕ್ಷತಿ ಸ ಏವ ಸರ್ವದಾಪಿ ರಕ್ಷಿತಾ ರಕ್ಷಕ ಇತಿ ನಿಶ್ಚಿತ್ಯ ಮಾತಾಪಿತೃವಿಯೋಗಾದಿಕಂ ನ ವಿಚಿಂತಯಾಮಃ । ಯದ್ಯಸ್ಮಾದಹೋ ತಸ್ಮಾದ್ ವಯಂ ಧನ್ಯತಮಾ ಹಿ - ಇತಿ ಯೋಜನಾ । (ಮಂದನಂದನೀ)

## ನ ಶಬ್ದಾಬ್ಧೌ ಶ್ಲೋಕದಲ್ಲಿನ ಯೋಜನೆ

(ಕಾಶೀ) — ನನು 'ಗ್ರಂಥೋಽಯಮಪಿ ಬಹ್ವರ್ಥಃ' ಇತ್ಯಾಚಾರ್ಯೈಃ ಅನುವ್ಯಾಖ್ಯಾನಸ್ಯಾತಿಗಂಭೀರತ್ವೋಕ್ತೇಃ ಸರ್ವಜ್ಞತ್ವಮಂತರೇಣ ತದ್ವ್ಯಾಖ್ಯಾನಮಯುಕ್ತಮ್ । ಅನ್ಯಥಾವ್ಯಾಖ್ಯಾನೇ ಪ್ರೇಕ್ಷಾವದುಪೇಕ್ಷಣೀಯತಾಪತ್ತೇಃ ಇತ್ಯಾಶಂಕಾಂ ವಿನಯೇನ ವಾರಯತಿ — ನೇತಿ ॥ 'ವಯಂ ನ ಶಬ್ದಾಬ್ಧೌ ಗಾಢಾ' ಇತ್ಯಾದಿನಾ ಪದವಾಕ್ಯಪ್ರಮಾಣಬ್ರಹ್ಮಶಾಸ್ತ್ರಾನಭಿಜ್ಞತ್ವಮುಚ್ಯತೇ । ಕಿಮಪಿ ಪ್ರಸಿದ್ಧನಿಬಂಧನಾನುಸಾರಿ ತದನನುಸಾರಿ ವಾ, ವದಂತಶ್ಚ । ತಥಾಪಿ ಗುರುಕಾರುಣ್ಯಸರಣಿ-ಮತ್ಯಂತಂ ಪ್ರಪನ್ನಾ ಅತೋ ಮಹತಾಮಪಿ ಮಾನ್ಯಾಃ ಸ್ಮ ಇತಿ ಯೋಜನಾ ।

* 'ನ ಶಬ್ದಾಬ್ಧೌ ಗಾಢಾಃ' - 'ಗ್ರಂಥೋಽಯಮಪಿ ಬಹ್ವರ್ಥಃ' ಎಂದು ಮಧ್ವಾಚಾರ್ಯರು ತಮ್ಮ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಅನುವ್ಯಾಖ್ಯಾನಗ್ರಂಥವು ಅತಿಗಂಭೀರವಾದುದು. ಅದನ್ನು ವ್ಯಾಖ್ಯಾನ ಮಾಡಲು ಸರ್ವಜ್ಞರೇ ಆಗಬೇಕು. ಇಲ್ಲದಿದ್ದರೆ ಇಂತಹ ಗ್ರಂಥದ ವ್ಯಾಖ್ಯಾನದಲ್ಲಿ

ಬುದ್ಧಿವಂತರು ಉಪೇಕ್ಷೆ ಮಾಡಬೇಕಾದೀತು। ಎಂಬ ಶಂಕೆಯನ್ನು ಪರಿಹಾರಮಾಡಲು ವಿನಯ-ದಿಂದ 'ನ ಶಬ್ದಾಬ್ಧೌ' ಎಂದಿದ್ದಾರೆ. 'ಕಿಮಪಿ' ಎಂದರೆ ಪ್ರಸಿದ್ಧಗ್ರಂಥಗಳಿಗೆ ಅನುಸಾರಿಯಾದದ್ದು ಅಥವಾ ಅನನುಸಾರಿಯಾದದ್ದು ಎಂದರ್ಥ. ಇಷ್ಟಾದರೂ ಗುರುಗಳ ಕಾರುಣ್ಯವೆಂಬ ಮಾರ್ಗವನ್ನು ಚೆನ್ನಾಗಿ ಹೊಂದಿ ಮಹಾತ್ಮರಿಗೂ ಮಾನ್ಯರಾಗಿದ್ದೇವೆ.

## ವಯಂ ಎಂಬ ಪ್ರಯೋಗದ ಉಪಪತ್ತಿ

(ಕಾಶೀ) — ತೇನ 'ಅಸ್ಮದೋದ್ವಯೋಶ್ಚ' ಇತ್ಯೇಕಸ್ಮಿನ್ ವಿಕಲ್ಪವಿಹಿತಬಹುವಚನಸ್ಯ 'ಪಟುರಹಂ ಬ್ರವೀಮಿ' ಇತ್ಯಾದಾವಿವ ಸವಿಶೇಷಣಸ್ಯ ಪ್ರತಿಷೇಧ ಇತಿ ನ ಪ್ರತಿಷೇಧಃ । ಪ್ರಪನ್ನತ್ವಾದೇ-ರ್ವಿಧೇಯತ್ವೇನ ವಿಶೇಷಣತ್ವಾಭಾವಾತ್ । ಯದ್ವಾ — 'ಅಹಮನ್ಯೇ ಶಿಷ್ಯಾಶ್ಚ ವಯಮ್' ಇತ್ಯೇಕಶೇಷಾಶ್ರಯಣಾನ್ನ ದೋಷಃ । ತಥಾ ಚ — ಅನುವ್ಯಾಖ್ಯಾನವ್ಯಾಖ್ಯಾನೋಪಯುಕ್ತಶಬ್ದಾಬ್ಧಿಗಾಢತ್ವಾದೇಃ ಸ್ವತೋಽಭಾವೇಽಪ್ಯಾಚಾರ್ಯಾನುಗ್ರಹಲಬ್ಧತತ್ವಾವಬೋಧಮೂಲಕತ್ವಾದುಪಾ-ದೇಯಮೇವೇದಂ ವ್ಯಾಖ್ಯಾನಮಿತಿ ದ್ರಷ್ಟವ್ಯಮ್ ।

'ವಿದಿತವೇದ್ಯಾ ಅಪಿ ವಯಮ್' - ವಯಂ ಎಂಬ ಬಹುವಚನ ಸರಿಯಲ್ಲ. ಹೇಳುತ್ತಿರುವವರು ಒಬ್ಬರೇ ಆದ್ದರಿಂದ. ಉತ್ತರ - 'ಅಸ್ಮದೋ ದ್ವಯೋಶ್ಚ' ಎಂಬ ಸೂತ್ರದಿಂದ ಒಬ್ಬವ್ಯಕ್ತಿಯಲ್ಲಿ ಬಹುವಚನವು ವಿಕಲ್ಪೇನ ಬರುವುದು ಎಂದಿರುವುದರಿಂದ ಇಲ್ಲಿ ವಯಂ ಎಂದು ಬಂದಿದೆ. ಆದರೆ 'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾಕ್ಯದ ರೀತ್ಯಾ ವಿಶೇಷಣಸಹಿತವಾದ ಅಸ್ಮದ್ ಶಬ್ದವಿದ್ದರೆ ಆಗ ವಿಕಲ್ಪಿತ ಬಹುವಚನವನ್ನು ಮಾಡುವ ಹಾಗಿಲ್ಲ. ಉದಾ - 'ಪಟುರಹಂ ಬ್ರವೀಮಿ' ಎಂಬುದು. ಪರಿಹಾರ – ಪ್ರಪನ್ನತ್ವ ಮೊದಲಾದವುಗಳು ಕೇವಲ ವಿಧೇಯವಾಗಿವೆ ಹೊರತು ವಿಶೇಷಣವಾಗಿಲ್ಲ. ಆದ್ದರಿಂದ ವಯಮ್ ಎಂಬುದು ಸರಿ. ಅಥವಾ ತಮ್ಮಲ್ಲಿರುವ ಬಹಳ ಧರ್ಮದ ಅಪೇಕ್ಷೆಯಿಟ್ಟು-ಕೊಂಡು ಬಹುವಚನಪ್ರತ್ಯಯವು ಅಸ್ಮದ್‌ಶಬ್ದದ ಮೇಲೆ ಬರುತ್ತದೆ. ಈಗ ಸವಿಶೇಷಣಸ್ಯ ಎಂಬ ಹಿಂದಿನ ನಿಷೇಧವಿಲ್ಲ. ಏಕೆಂದರೆ ಆ ವಾರ್ತಿಕವು 'ಅಸ್ಮದೋ ದ್ವಯೋಶ್ಚ' ಎಂಬ ಸೂತ್ರದಲ್ಲಿ ಹೇಳಿದ ಕಾರ್ಯವನ್ನು ಮಾತ್ರ ನಿಷೇಧಿಸುತ್ತದೆ. ಇಲ್ಲಿಯಾದರೋ 'ಬಹುಷು ಬಹುವಚನಮ್' ಎಂಬ ಸೂತ್ರದಿಂದ ಬಹುವಚನ ಬಂದಿದೆ. ಅಥವಾ 'ಅಹಂ ಅನ್ಯೇ ಶಿಷ್ಯಾಶ್ಚ = ವಯಮ್' ಎಂದು ಏಕಶೇಷವೃತ್ತಿಯನ್ನು ಮಾಡಿದಾಗ 'ನಾನೂ ಹಾಗೂ ಬೇರೆ ಶಿಷ್ಯರು' ಎನ್ನುವ ಅರ್ಥದಲ್ಲಿರುವ ಈ ಶಬ್ದ ವಯಂ ಎಂದು ಬಹುವಚನರೂಪವನ್ನು ಹೊಂದುವುದು. ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ-ಮಾಡಲು ಬೇಕಾದ ಶಬ್ದಶಾಸ್ತ್ರ ಅವಗಾಹನೆ ಮೊದಲಾದವುಗಳು ಸ್ವತಃ ಇಲ್ಲದಿದ್ದರೂ ಆಚಾರ್ಯರ ಅನುಗ್ರಹದಿಂದ ಸಿಕ್ಕ ತತ್ವಜ್ಞಾನದ ಮೂಲಕವಾದ್ದರಿಂದ ಉಪಾದೇಯವೇ ಆಗಿದೆ ಎಂದು ಅಭಿಪ್ರಾಯ.

## ಪ್ರದೀಪಟಿಪ್ಪಣೀಮಂಗಲಾಚರಣೆ –
## ಲಕ್ಷ್ಮೀವಲ್ಲಭನಿಗೆ ನಮಸ್ಕಾರ

ವಿಶ್ವೋತ್ಪತ್ತಿನಿಮಿತ್ತಮಾತ್ಮನಿಹಿತಸ್ವಾಂತಾತ್ಮದತ್ತಾಭಯಂ
ತತ್ತದ್ಭೂತಹಿತಾಹಿತಾಹಿತಮತಿಧ್ವಸ್ತಂ ಹಿತಾನೀಹಿತಮ್ ।
ಸಚ್ಛಾಸ್ತ್ರಪ್ರಮಿತಾಮಿತೋತ್ತಮಗುಣಂ ಧಾತ್ರಾದಿದೇವಸ್ತುತಂ
ಲಕ್ಷ್ಮೀವಲ್ಲಭಮಚ್ಯುತಂ ಧೃತಿಮಯಂ ದೋಷಾತಿದೂರಂ ನುಮಃ ॥

ಸಕಲಲೋಕಗಳನ್ನು ಮುಖ್ಯವಾಗಿ ಧರಿಸಿರುವ ಲಕ್ಷ್ಮೀಪತಿಯಾದ ಅಚ್ಯುತನನ್ನು ನಮಸ್ಕರಿಸುತ್ತೇವೆ. ಈ ಅಚ್ಯುತನು ಸಕಲ ಜಗತ್ತಿನ ಉತ್ಪತ್ತಿಗೆ ಕಾರಣನಾಗಿದ್ದಾನೆ. ಹಾಗೆ ಅವನಲ್ಲಿ ಯಾರು ತಮ್ಮ ಅಂತಃಕರಣವನ್ನು ಇಟ್ಟಿರುತ್ತಾರೋ ಅಂತಹ ಭಕ್ತರಿಗೆ ಅಭಯವನ್ನು ನೀಡುವನು. ಅಲ್ಲದೆ ಆಯಾಯ ಪ್ರಾಣಿಗಳನ್ನು ನಿಯಮನ ಮಾಡುತ್ತ, ಜ್ಞಾನಅಜ್ಞಾನಬಂಧಮೋಕ್ಷಗಳನ್ನು ನೀಡುವವನಾಗಿದ್ದಾನೆ. ಒಳ್ಳೆಯ ಶಾಸ್ತ್ರಗಳಾದ ವೇದಾದಿಪ್ರಮಾಣಗಳಿಂದ ಸಿದ್ಧವಾದ ಅನಂತವಾದ ಗುಣಗಳಿಂದ ಕೂಡಿದವನು. ಬ್ರಹ್ಮಾದಿ ದೇವತೆಗಳಿಂದ ಸ್ತುತಿಸಲ್ಪಡುವವನು.

## ಮನಸ್ಸಿನಲ್ಲಿ ಪೂರ್ಣಬೋಧರ ಪ್ರಕಾಶವಾಗಲಿ

ನಿರಾಕೃತಾಸನ್ಮತಮೋಹಜಾಲೋ ನಿವಾರಿತಾಯೋಗ್ಯಜನಪ್ರಚಾರಃ ।
ಸ್ಥಿರೀಕೃತಾಶೇಷಯಥಾರ್ಥಬೋಧಃ ಚಕಾಸ್ತು ನಶ್ಚೇತಸಿ ಪೂರ್ಣಬೋಧಃ ॥

ಪೂರ್ಣಪ್ರಜ್ಞರು ನನ್ನ ಮನಸ್ಸಿನಲ್ಲಿ ಬೆಳಗಲಿ. ಅವರು ಸಮಸ್ತ ಕೆಟ್ಟ ಮತಗಳ ಮೋಹದ ಜಾಲವನ್ನು ನಿವಾರಿಸಿದ್ದಾರೆ. ಅದೇ ರೀತಿ ಅಯೋಗ್ಯಜನರ ಸಂಚಾರವನ್ನು ನಿವಾರಿಸಿದ್ದಾರೆ. ಯಥಾರ್ಥಜ್ಞಾನ-ವನ್ನು ಎಲ್ಲರಲ್ಲಿಯೂ ದೃಢವಾಗಿ ಇರುವಂತೆ ಮಾಡಿದ್ದಾರೆ.

## ನ್ಯಾಯಸುಧೋಕ್ತಅರ್ಥಗಳ ಜ್ಞಾನಕ್ಕಾಗಿ ಪ್ರದೀಪದ ರಚನೆ

ಗೂಢಭಾವಾನುಭಾಷ್ಯಸ್ಯ ವ್ಯಾಖ್ಯಾ ನ್ಯಾಯಸುಧಾಭಿಧಾ ।
ತದರ್ಥಪ್ರತ್ಯಯಾರ್ಥೋಽಯಂ ಪ್ರದೀಪಸ್ತನ್ಯತೇ ಮಯಾ ॥

ಗೂಢವಾದ ಅಭಿಪ್ರಾಯವುಳ್ಳ ಅನುವ್ಯಾಖ್ಯಾನವನ್ನು ವಿವರಣೆ ಮಾಡುವ ನ್ಯಾಯಸುಧೆ ಎಂಬ ಹೆಸರಿನ ಗ್ರಂಥದ ಸರಿಯಾದ ಜ್ಞಾನಕ್ಕೋಸ್ಕರ ನಾನು ಪ್ರದೀಪ ಎಂಬ ವ್ಯಾಖ್ಯಾನವನ್ನು ಮಾಡು-ತ್ತಿದ್ದೇನೆ.

### ಭಾರತೀಪತಿಪೂರ್ಣಬೋಧರ ಕರುಣೆಯಿದ್ದ ಮೇಲೆ ಶಬ್ದಾದ್ಯಜ್ಞತ್ವ ಅಸಂಭಾವಿತ

ದೇವತಾಗುರುಪ್ರಸಾದಪೂರ್ವತ್ವಾತ್ ನಾತ್ರ ಗ್ರಂಥೇಽನಾದರಃ ಕಾರ್ಯ ಇತ್ಯಾಹ — ನ ಶಬ್ದಾಬ್ಧಾವಿತಿ ॥ ಭಾರತೀಭರ್ತುಃ ಪೂರ್ಣಬೋಧಸ್ಯ ಕರುಣಾಯಾಂ ಶಬ್ದಾದ್ಯಜ್ಞತ್ವಮಸಂಭಾವಿತಮಿತ್ಯಾಶಯಃ ।

(*) ದೇವತಾ ಹಾಗೂ ಗುರುಗಳ ಪ್ರಸಾದ ಮೂಲಕವಾಗಿ ಈ ಗ್ರಂಥ ಬರೆದಿರುವುದರಿಂದ ಇದರಲ್ಲಿ ಅನಾದರವನ್ನು ಮಾಡಬಾರದು ಎಂದು ತಿಳಿಸುತ್ತಾರೆ – 'ನ ಶಬ್ದಾಬ್ಧೌ ಗಾಧಾಃ' ಎಂದು. ಭಾರತೀದೇವಿಯ ಪತಿಯಾದ ಪೂರ್ಣಪ್ರಜ್ಞರ ಕರುಣೆಯಿದ್ದರೆ ಶಬ್ದಾದಿಶಾಸ್ತ್ರಗಳನ್ನು ತಿಳಿಯದೇ ಇರುವುದು ಅಸಂಭಾವಿತ ಎಂದಭಿಪ್ರಾಯ.

### ಭಗವತಾ ಬಾದರಾಯಣೇನ ಪ್ರಾಣಿನಾಂ ನಿಃಶ್ರೇಯಸಾಯ .... ಎಂಬುದರ ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – भगवता बादरायणेन प्राणिनां निःश्रेयसाय प्रणीतमपि ब्रह्ममीमांसाशास्त्रम्, असाधुनिबन्धान्धतमसावकुण्ठितत्वेनाप्रणीतमिव मन्यमानो भगवानानन्दतीर्थमुनिः, यथाचार्याभिप्रायमस्य भाष्यं विधाय, अनुभाष्यमपि करिष्यन् विलीनप्रकृतितया स्वयमन्तरायविधुरोऽपि, अनवरतमीश्वरप्रवणकायकरणवृत्तिरपि नारायणप्रणामादिकं प्रारिप्सितस्यानन्तरायपरिसमाप्तेः प्रचयस्य च हेतुतयाऽविगीतशिष्टाचारपरम्परादिनावगतमवश्यंकरणीयं शिष्यान् ग्राहयितुं ग्रन्थादौ निबध्नाति – **नारायणमिति** ॥

ಭಗವತಾ - ಷಡ್ಗುಣೈಶ್ವರ್ಯೋಪೇತರಾದ, ಬಾದರಾಯಣೇನ - ವೇದವ್ಯಾಸರಿಂದ, ಪ್ರಾಣಿನಾಂ - ಸಾತ್ವಿಕಜೀವಿಗಳ, ನಿಃಶ್ರೇಯಸಾಯ - ಮೋಕ್ಷಕ್ಕೋಸ್ಕರ, ಬ್ರಹ್ಮಮೀಮಾಂಸಾಶಾಸ್ತ್ರಂ - ಬ್ರಹ್ಮಸೂತ್ರವು, ಪ್ರಣೀತಮಪಿ - ರಚಿಸಲ್ಪಟ್ಟಿದ್ದರೂ ಕೂಡ, ಅಸಾಧುನಿಬಂಧಾಂಧತಮಸಾ - ಅಸಾಧು - ಸರಿಯಲ್ಲದ ನಿಬಂಧ - ವ್ಯಾಖ್ಯಾನಗಳೆಂಬ ಅಂಧತಮಸಾ - ಘನರೂಪವಾದ ಕತ್ತಲೆಯಿಂದ, ಅವಕುಂಠಿತತ್ವೇನ - ಆವರಿಸಲ್ಪಟ್ಟದ್ದರಿಂದ, ಅಪ್ರಣೀತಮಿವ - ರಚಿಸಲ್ಪಡದೇ ಇರುವಂತೆ, ಮನ್ಯಮಾನಃ - ತಿಳಿಯುತ್ತಿರುವ, ಭಗವಾನ್ - ಪೂಜ್ಯರಾದ, ಆನಂದತೀರ್ಥಮುನಿಃ - ಶ್ರೀಮಧ್ವಾಚಾರ್ಯರು, ಯಥಾಚಾರ್ಯಾಭಿಪ್ರಾಯಂ - ವೇದವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾಗಿ, ಅಸ್ಯ

- ಈ ಬ್ರಹ್ಮಸೂತ್ರಕ್ಕೆ, ಭಾಷ್ಯಂ - ಸೂತ್ರಾರ್ಥವಿಶೇಷವಿವರಣೆಯನ್ನು ನೀಡುವ ಭಾಷ್ಯಗ್ರಂಥವನ್ನು, ವಿಧಾಯ - ಮಾಡಿ, ಅನುಭಾಷ್ಯಮಪಿ - ಅನುವ್ಯಾಖ್ಯಾನವನ್ನೂ ಕೂಡ, ಕರಿಷ್ಯನ್ - ಮಾಡುತ್ತಾ ವಿಲೀನಪ್ರಕೃತಿತಯಾ - ಪ್ರಕೃತಿಬಂಧವಿಲ್ಲವಾದ್ದರಿಂದ, ಸ್ವಯಂ - ತಾವು, ಅಂತರಾಯವಿಧುರೋಽಪಿ - ಅಂತರಾಯ - ವಿಘ್ನಗಳಿಂದ ವಿಧುರೋಽಪಿ - ರಹಿತರಾದರೂ ಕೂಡ, ಅನವರತಂ - ಯಾವಾಗಲೂ, ಈಶ್ವರಪ್ರವಣಕಾಯಕರಣವೃತ್ತಿರಪಿ ಈಶ್ವರ - ಭಗವಂತನಲ್ಲಿ ಪ್ರವಣ - ಮುಳು-ಗಿರುವ ಅರ್ಥಾತ್ ಅದನ್ನೇ ವಿಷಯೀಕರಿಸುವ ಕಾಯ- ದೇಹ ಕರಣವೃತ್ತಿರಪಿ - ಇಂದ್ರಿಯ ಅಂತಃ-ಕರಣವ್ಯಾಪಾರವುಳ್ಳವರಾದರೂ, ಪ್ರಾರಿಪ್ಸಿತಸ್ಯ - ಪ್ರಾರಂಭಮಾಡಲು ಇಚ್ಛಿಸಿರುವ ಗ್ರಂಥದ, ಅನಂತರಾಯಪರಿಸಮಾಪ್ತೇಃ - ವಿಘ್ನವಿಲ್ಲದೇ ಸಮಾಪ್ತಿಯಾಗುವುದಕ್ಕೆ, ಚ - ಹಾಗೂ, ಪ್ರಚಯಸ್ಯ - ಪ್ರಸಿದ್ಧಿಗೆ, ಹೇತುತಯಾ - ಕಾರಣವಾಗಿ ಇರುವ, ಅವಿಗೀತಶಿಷ್ಟಾಚಾರಪರಂಪರಾದಿನಾ - ಅವಿಗೀತ - ವಿವಾದವಿಲ್ಲದ, ಶಿಷ್ಟ - ಶಿಷ್ಟರೆಂದು ಅಭಿಮತರಾದ ವೇದವ್ಯಾಸರೇ ಮುಂತಾದ ಜ್ಞಾನಿಗಳ, ಆಚಾರಪರಂಪರಾದಿನಾ - ಸದಾಚಾರಪರಂಪರೆ ಮುಂತಾದವುಗಳಿಂದ, ಅವಗತಂ - ತಿಳಿದಿರುವ, ಅವಶ್ಯಂ ಕರಣೀಯಂ - ಅವಶ್ಯವಾಗಿ ಮಾಡಬೇಕಾದ, ನಾರಾಯಣಪ್ರಣಾಮಾದಿಕಂ - ನಾರಾಯಣ - ಲಕ್ಷ್ಮೀಗೆ ಆಶ್ರಯನಾದ ಭಗವಂತನ ಪ್ರಣಾಮಾದಿಕಂ - ನಮಸ್ಕಾರವೇ ಮೊದಲಾ-ದವುಗಳನ್ನು, ಶಿಷ್ಯಾನ್ - ಶಿಷ್ಯರಿಗೂ, ಗ್ರಾಹಯಿತುಂ - ತಿಳಿಸಲೆಂದು, ಗ್ರಂಥಾದೌ - ಅನುವ್ಯಾಖ್ಯಾನ-ಗ್ರಂಥದ ಮೊದಲಿಗೆ, ನಿಬಧ್ನಾತಿ - ಸೇರಿಸುತ್ತಾರೆ - ನಾರಾಯಣಮಿತಿ - ನಾರಾಯಣಂ .... - ಎಂಬುದಾಗಿ.

ಸಾರ - ನಾರಾಯಣಂ ನಿಖಿಲಪೂರ್ಣಗುಣೈಕದೇಹಂ - ಎಂಬ ಆಚಾರ್ಯರ ಅನು-ವ್ಯಾಖ್ಯಾನದ ಮೊದಲನೆಯ ಪದ್ಯಕ್ಕೆ ಅವತರಣಿಕೆಯನ್ನು ನೀಡಿದ್ದಾರೆ. ಅರ್ಥಾತ್ ಈ ಶ್ಲೋಕವನ್ನು ಆಚಾರ್ಯರು ಗ್ರಂಥದಲ್ಲಿ ಬರೆಯಲು ಏನು ಕಾರಣವೆಂದು ಪೀಠಿಕೆಯನ್ನು ನೀಡುತ್ತಿದ್ದಾರೆ. ಪೂಜ್ಯರಾದ ವೇದವ್ಯಾಸರು ಬ್ರಹ್ಮಸೂತ್ರವನ್ನು ರಚನೆ ಮಾಡಿದ್ದರ ಫಲ ಸಾತ್ವಿಕರೆಲ್ಲರಿಗೂ ಮೋಕ್ಷ ಸಿಗಲೆಂದು. ಇದಕ್ಕೆ ಸರಿಯಾಗಿ ಬ್ರಹ್ಮಸೂತ್ರದ ಅರ್ಥಜ್ಞಾನವಾಗಬೇಕು. ಆದರೆ ಕೆಲವು ಕೆಟ್ಟ ಭಾಷ್ಯಗಳಿಂದ ಬ್ರಹ್ಮಸೂತ್ರದ ಅರ್ಥ ವಿಪರೀತವಾಗಿ ತಿಳಿಯುವಂತೆ ಆಗಿದೆ. ಇದರಿಂದ ಬ್ರಹ್ಮಸೂತ್ರದ ರಚನೆ ಮಾಡಿದ್ದರೂ ಮಾಡದಂತೆಯೇ ಸರಿ. ಅದಕ್ಕಾಗಿ ವೇದವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾಗಿ ಭಾಷ್ಯವನ್ನು ರಚನೆಮಾಡಿ ಅನುಭಾಷ್ಯವಾದ ಅನುವ್ಯಾಖ್ಯಾನವನ್ನು ಬರೆಯುವ ಮುಂಚೆ ಪ್ರಕೃತಿಬಂಧವಿದ್ದರೂ ತತ್ತ್ವಯುಕ್ತವಾದ ಅಜ್ಞಾನವಿಪರೀತಜ್ಞಾನವಿಘ್ನಾದಿಗಳಿಲ್ಲದಿರುವ

ಆದ್ದರಿಂದಲೇ ಸ್ವಾಭಾವಿಕವಾಗಿ ತಮಗೆ ವಿಘ್ನಗಳಿಲ್ಲದಿದ್ದರೂ ನಿರಂತರ ಭಗವಂತನಲ್ಲಿ ತಮ್ಮ ದೇಹ ಇಂದ್ರಿಯಗಳ ವ್ಯಾಪಾರವನ್ನು ಹೊಂದಿದ ಆಚಾರ್ಯರು ನಾರಾಯಣನಮಸ್ಕಾರವನ್ನು ಗ್ರಂಥದ ನಿರ್ವಿಘ್ನಪರಿಸಮಾಪ್ತಿಗೆ ಹಾಗೂ ಗ್ರಂಥದ ವಿಸ್ತಾರರೂಪವಾದ ಪ್ರಚಯಕ್ಕೆ ಕಾರಣ ಎಂದು ಭಾವಿಸುತ್ತ ಎಲ್ಲರಿಗೂ ಒಪ್ಪಿಗೆ ಇರುವ ಶಿಷ್ಟರಾದ ವೇದವ್ಯಾಸ ಮುಂತಾದವರ ಆಚರಣೆಯ ಪರಂಪರೆಯಿಂದ ತಿಳಿದಿರುವ ಎಲ್ಲರೂ ಅವಶ್ಯವಾಗಿ ಮಾಡಬೇಕಾದ ಮಂಗಳವನ್ನು ಗ್ರಂಥದಲ್ಲಿ ಶಿಷ್ಯರ ಬೋಧನೆಗಾಗಿ ಸೇರಿಸುತ್ತಾರೆ - ನಾರಾಯಣಂ .... ಎಂದು.

## ಭಗವತಾ ಬಾದರಾಯಣೇನ ಎಂಬುದರ ಪೀಠಿಕೆ

(ಆನಂದ) — ತರ್ಹಿ ವ್ಯಾಖ್ಯಾತೃತ್ವೋಪಯೋಗಿಸಮಗ್ರಗುಣಾಭಾವೇಽಪಿ ಕಿಂಚಿತ್-ಪ್ರವೇಶ-ಸತ್ತ್ವಮಾತ್ರೇಣ ವ್ಯಾಖ್ಯಾನಕರಣಮಯುಕ್ತಮ್ । ಅನುಭಾಷ್ಯಕರಣಸ್ಯ ಪ್ರಯೋಜನಾಭಾವಾತ್ । ನ ಚ ಸೂತ್ರಾರ್ಥಜ್ಞಾನಮೇವ ಪ್ರಯೋಜನಮಿತಿ ವಾಚ್ಯಮ್ । ತೇನಾಪಿ ಪ್ರಯೋಜನಾ-ಭಾವಾತ್ । ನ ಚ ತತ್ತ್ವಜ್ಞಾನದ್ವಾರಾ ಮೋಕ್ಷಃ ಪ್ರಯೋಜನಮಿತಿ ವಾಚ್ಯಮ್ । ತಸ್ಯ ವೇದಾದಿ-ನೈವ ಸಂಭವಾತ್ । ನ ಚ ವೇದಾರ್ಥಜ್ಞಾನಸ್ಯ ಸೂತ್ರೈರ್ವಿನಾಪಿ ಸಂಭವೇನ ತಜ್ಜ್ಞಾನಾರ್ಥಂ ಭಾಷ್ಯಾನುಭಾಷ್ಯಕರಣಸ್ಯಾಯುಕ್ತತ್ವಾತ್ । ನ ಚ ವೇದಾರ್ಥಸ್ಯಾತಿದುರ್ಜ್ಞೇಯತ್ವಾತ್ ಸೂತ್ರೈರ್ವಿನಾ ತಜ್ಜ್ಞಾನಾಸಂಭವೇನ ಸೂತ್ರಾಣಾಂ ಚ ಯಾವದರ್ಥಪರತಯಾ ಜ್ಞಾತಾನಾಮೇವ ಯಥಾವದ್ ವೇದಾರ್ಥಜ್ಞಾನಹೇತುತ್ವಾತ್, ಯಥಾವತ್ ಸೂತ್ರಾರ್ಥಜ್ಞಾನಾಭಾವೇ ಯಥಾವದ್ವೇದಾರ್ಥ-ಜ್ಞಾನಾಭಾವೇನ ತತ್ತ್ವಜ್ಞಾನಾಸಂಭವೇನ ಮೋಕ್ಷಾಭಾವಪ್ರಾಪ್ತೇಃ ಯಥಾವತ್ಸೂತ್ರಾರ್ಥಜ್ಞಾನಾರ್ಥಂ ಭಾಷ್ಯಾನುಭಾಷ್ಯಕರಣಂ ಯುಕ್ತಮ್ ಇತಿ ವಾಚ್ಯಮ್ । ತಥಾಪಿ ಸಂಕರಾದಿಪ್ರಣೀತಭಾಷ್ಯಾದೇರೇವ ಸೂತ್ರಾರ್ಥಜ್ಞಾನಸಂಭವೇನ ತೇನ ವೇದಾರ್ಥಜ್ಞಾನಸ್ಯಾಪಿ ಸಂಭವೇನ ತತ್ತ್ವಜ್ಞಾನದ್ವಾರಾ ಮೋಕ್ಷಸ್ಯಾಪಿ ಸಂಭವಾನ್ನ ಭಾಷ್ಯಾನುಭಾಷ್ಯಕರಣಂ ಯುಕ್ತಮಿತ್ಯಾಶಂಕಾಯಾಮಾಹ — ಭಗವತೇತ್ಯಾದಿ ॥

ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನಬರೆಯಲು ಬೇಕಾದ ಎಲ್ಲಾ ಗುಣಗಳಿಲ್ಲದಿದ್ದರೂ ಮಹಾವ್ಯಾಕರಣ ಮೊದಲಾದ ಶಾಸ್ತ್ರಗಳಲ್ಲಿ ಪ್ರವೇಶ ಇರುವ ಮಾತ್ರಕ್ಕೆ ವ್ಯಾಖ್ಯಾನ ಮಾಡುವುದು ಸರಿಯಲ್ಲ. ಏಕೆಂದರೆ, ಅನುಭಾಷ್ಯವನ್ನು ಮಾಡಲು ಯಾವುದೇ ಪ್ರಯೋಜನವಿಲ್ಲ. ಅಲ್ಲ। ಬ್ರಹ್ಮಸೂತ್ರದ ಅರ್ಥಜ್ಞಾನಕ್ಕಾದರೋ ಅನುಭಾಷ್ಯ ಅರ್ಥಾತ್ ಅನುವ್ಯಾಖ್ಯಾನದ ರಚನೆ ಬೇಕು ಎಂದರೆ ಇಲ್ಲ. ಅನುವ್ಯಾಖ್ಯಾನರಚನೆ ಮಾಡಿದ್ದರಿಂದಲೂ ಯಾವುದೇ ಪ್ರಯೋಜನವಿಲ್ಲ. ಅಲ್ಲ! ಅನುವ್ಯಾಖ್ಯಾನದ ಮುಖಾಂತರ ತತ್ತ್ವಜ್ಞಾನ ಉದಯವಾಗಿ ತನ್ಮೂಲಕ ಮೋಕ್ಷವಾಗುವುದೇ ಪ್ರಯೋಜನವೆನ್ನೋಣ

ಎಂದರೆ ಇದು ಸರಿಯಲ್ಲ. ಇಂತಹ ಮೋಕ್ಷವು ವೇದಮೊದಲಾದವುಗಳಿಂದಲೇ ಸಿಗುವುದರಿಂದ. ಅಲ್ಲ! ವೇದದ ಅರ್ಥದ ಜ್ಞಾನವು ಸೂತ್ರಗಳಿಲ್ಲದೇನೇ ಸಂಭವವಿಲ್ಲವಾದ್ದರಿಂದ ವೇದಾರ್ಥ-ಜ್ಞಾನಕ್ಕೋಸ್ಕರವಾದರೂ ಭಾಷ್ಯ ಹಾಗೂ ಅನುಭಾಷ್ಯ ಮಾಡಿದ್ದು ಸರಿಯಲ್ಲವೇ! ಎಂದರೆ ಸೂತ್ರಗಳಿಲ್ಲದೆಯೂ ವೇದದ ಅರ್ಥಜ್ಞಾನವು ಬರುವುದು ಸಾಧ್ಯವಿರುವುದರಿಂದ. ಅದಕ್ಕೆ ಇಲ್ಲ ವೇದದ ಅರ್ಥವು ತಿಳಿಯಲು ಬಹಳ ಕಷ್ಟವಾದ್ದರಿಂದ ಸೂತ್ರಗಳಿಲ್ಲದೆಯೇ ಅವುಗಳ ಜ್ಞಾನವು ಬರಲು ಅಸಾಧ್ಯವಾದ್ದರಿಂದ. ಸೂತ್ರಗಳಾದರೋ ಸರಿಯಾಗಿ ತಿಳಿದರೆ ಮಾತ್ರ ಯಥಾರ್ಥವಾದ ವೇದಾರ್ಥಜ್ಞಾನಕ್ಕೆ ಕಾರಣವಾಗುವುದರಿಂದ, ಯಥಾರ್ಥವಾದ ಸೂತ್ರದ ಅರ್ಥಜ್ಞಾನವಿಲ್ಲದಿದ್ದರೆ ಯಥಾವತ್ತಾದ ವೇದದ ಅರ್ಥಜ್ಞಾನವು ಬರುವುದಿಲ್ಲವಾದ್ದರಿಂದ ತತ್ವಜ್ಞಾನವಿಲ್ಲ ಹಾಗಾಗಿ ಮೋಕ್ಷವೂ ಇಲ್ಲ ಎಂಬ ಆಪತ್ತಿ ಬರುವುದರಿಂದ ಸೂತ್ರಾರ್ಥಜ್ಞಾನಕ್ಕೋಸ್ಕರ ಭಾಷ್ಯ ಹಾಗೂ ಅನುಭಾಷ್ಯವನ್ನು ಮಾಡಿದ್ದು ಸರಿ ಎಂದರೆ ಇದೂ ಸರಿಯಲ್ಲ. ಸೂತ್ರದ ಅರ್ಥಜ್ಞಾನಕ್ಕಾಗಿ ಸಂಕರ ಮೊದಲಾದ ವ್ಯಕ್ತಿಗಳಿಂದ ರಚನೆ ಮಾಡಲ್ಪಟ್ಟ ಭಾಷ್ಯ ಮೊದಲಾದ ಗ್ರಂಥಗಳಿಂದಲೇ ಸೂತ್ರಾರ್ಥಜ್ಞಾನಬರಲು ಸಾಧ್ಯವಿರುವುದರಿಂದ ಅದರಿಂದಲೇ ವೇದದ ಅರ್ಥಜ್ಞಾನವು, ಆದ್ದರಿಂದಲೇ ತತ್ವಜ್ಞಾನ ತನ್ಮೂಲಕವಾದ ಮೋಕ್ಷ ಎಲ್ಲವೂ ಯುಕ್ತ. ಹಾಗಾಗಿ ಭಾಷ್ಯಾನು-ಭಾಷ್ಯಗಳನ್ನು ಮಾಡಿದ್ದು ಸರಿಯಲ್ಲ ಎಂದಾಕ್ಷೇಪ ಬಂದರೆ ಅದಕ್ಕೆ ಉತ್ತರವಾಗಿ "ಭಗವತಾ ಬಾದರಾಯಣೇನ" ಎಂಬ ಈ ಪ್ರಘಟ್ಟಕವು ಹೊರಟದೆ.

## ಜೈಮಿನ್ಯಾದಿಸೂತ್ರಗಳನ್ನು ಬಿಟ್ಟು ಇದನ್ನೇ ವ್ಯಾಖ್ಯಾನಮಾಡಲು ಏನು ಕಾರಣ?

(ಆನಂದ) — ಅತ್ರ ಆನಂದತೀರ್ಥಮುನಿರಸ್ಯ ಭಾಷ್ಯಂ ವಿಧಾಯಾನುಭಾಷ್ಯಮಪಿ ಕರಿಷ್ಯನ್ ನಾರಾಯಣಪ್ರಣಾಮಾದಿಕಂ ನಿಬಧ್ನಾತೀತಿ ಸಂಬಂಧಃ । ಜೈಮಿನ್ಯಾದಿಸೂತ್ರಾಣಿ ಪರಿತ್ಯಜ್ಯ ಅಸ್ಯೈವ ವ್ಯಾಖ್ಯಾನೇ ಕೋ ಹೇತುಃ? ಇತ್ಯತ ಉಕ್ತಂ — **ಭಗವತೇತಿ** ॥ 'ಅಪಿಃ' ಹೇತ್ವರ್ಥೇ । ಯತೋ ಭಗವತಾ ಬಾದರಾಯೇನ ಪ್ರಣೀತಮ್ ಅತ ಏವೇತ್ಯರ್ಥಃ । ಬ್ರಹ್ಮಸೂತ್ರಾಣಾಮನ್ಯತ್ ತತ್ಪ್ರಣೀತತುಲ್ಯತಾನಿವಾರಣಾಯ "ಭಗವತಾ" ಇತ್ಯುಕ್ತಮ್, ತಥಾಪಿ ವಿಪ್ರಲಂಭೇನೋಕ್ತಮಿತಿ ಕಿಂ ನ ಸ್ಯಾದಿತ್ಯತ ಉಕ್ತಮ್— **ಪ್ರಾಣಿನಾಂ ನಿಶ್ರೇಯಸಾಯೇತಿ** ॥ ತಥಾ ಚ ನ ವಿಪ್ರಲಂಭ-ಮೂಲತ್ವಮಿತಿ ಭಾವಃ ।

ಭಗವತಾ ಬಾದರಾಯಣೇನ - ಜೈಮಿನಿ ಮೊದಲಾದ ಅನೇಕ ಸೂತ್ರಗಳಿದ್ದಾಗ ಅವುಗಳನ್ನು ಬಿಟ್ಟು ಬ್ರಹ್ಮಸೂತ್ರವನ್ನೇ ವ್ಯಾಖ್ಯಾನಮಾಡಲು ಏನು ಕಾರಣ ಎಂಬ ಪ್ರಶ್ನೆಗೆ ಉತ್ತರವಾಗಿ "ಭಗವತಾ" ಎಂದಿದ್ದಾರೆ. ಇದರಿಂದ ಜೈಮಿನಿಗಳಿಂದ ಉತ್ತಮರಾದ ವೇದವ್ಯಾಸರು ರಚನೆ ಮಾಡಿದ್ದರಿಂದ ಎಲ್ಲ ಸೂತ್ರಗಳಿಗಿಂತ ಅವರ ಸೂತ್ರಗಳಿಗೆ ಮಹತ್ವ ಹೆಚ್ಚಿರುವುದರಿಂದ ಅವುಗಳನ್ನೇ

ವ್ಯಾಖ್ಯಾನ ಮಾಡಿದ್ದು **ಸರಿ**. ಅಷ್ಟಲ್ಲದೇ ಭಗವತಾ ಎಂದು ಹೇಳದಿದ್ದರೆ ಬ್ರಹ್ಮಸೂತ್ರವು ಉನ್ಮತ್ತ ರಚನೆ ಮಾಡಿದ ವಾಕ್ಯಸಮಾನ ಎಂದು ಆಕ್ಷೇಪ ಬರುವುದಿತ್ತು. ಅದರ ಪರಿಹಾರವು ಈಗ ಆಗಿದೆ.

**ಪ್ರಾಣಿನಾಂ ನಿಃಶ್ರೇಯಸಾಯ** - ಉನ್ಮತ್ತಪ್ರಣೀತಗ್ರಂಥತುಲ್ಯವಲ್ಲದಿದ್ದರೂ ಮೋಸ ಮಾಡಬೇಕೆಂಬ ದೃಷ್ಟಿಯಿಂದ ಇದನ್ನು ವೇದವ್ಯಾಸರು ಏಕೆ ರಚನೆ ಮಾಡಿರಬಾರದು? ಎಂಬಾಕ್ಷೇಪಕ್ಕೆ ಉತ್ತರವಾಗಿ 'ಪ್ರಾಣಿನಾಂ ನಿಃಶ್ರೇಯಸಾಯ' ಎಂದಿದ್ದಾರೆ. ಸಕಲ ಮೋಕ್ಷಾಧಿಕಾರಿಗಳಿಗೆ ಮೋಕ್ಷದೊರಕಲಿ ಎಂಬ ಉದ್ದೇಶದಿಂದ ಹೊರಟ ಬ್ರಹ್ಮಸೂತ್ರವು ವಿಪ್ರಲಂಭಮೂಲ ಎನ್ನುವುದು ಅಸಾಧ್ಯ.

## ಅಸಾಧುನಿಬಂಧಅಂಧತಮಸಾ
## ಅವಕುಂಠಿತತ್ವೇನ ಅಪ್ರಣೀತತ್ವಮಿವ - ಎಂಬುದರ ಅರ್ಥ

(ಆನಂದ) — "**ಅಸಾಧು**" ಇತ್ಯನೇನ ಸಂಕರಾದಿಪ್ರಣೀತಭಾಷ್ಯಾದೇಸ್ತತ್ತ್ವಜ್ಞಾನಾನುಪಯೋಗಿತ್ವಂ ಸೂಚಯತಿ । ಅತ್ರ **ಅಸಾಧುಪದಸ್ಯಾವೃತ್ತಿಃ** । ಏವಂ ಚಾಸಾಧೂನಾಂ ಯೇಽಸಾಧವೋ ನಿಬಂಧಾಃ ತಲ್ಲಕ್ಷಣಂ ಯದಂಧತಮಸಂ ತೇನ ಅವಕುಂಠಿತಂ ತಸ್ಯ ಭಾವಸ್ತತ್ತ್ವಮಿತಿ ವಿಗ್ರಹಃ । ಪರಕೃತನಿಬಂಧಾನಾಮಸಾಧುತ್ವಂ ಚ ಸಮಯಪಾದೇ ಸ್ಫುಟಮ್ । 'ಅವಸಮಂಧೇಭ್ಯಸ್ತಮಸಃ' ಇತ್ಯನೇನ ಅಚಿ ಸಮಾಗತೇಽಂಧತಮಸಮಿತಿ ಸಿದ್ಧ್ಯತಿ । ಅತ್ರ ಅವಕುಂಠಿತತ್ವಂ ನಾಮ ಪ್ರತಿಬದ್ಧತ್ವಂ, ತತ್ತ್ವಜ್ಞಾನಾನುತ್ಪಾದಕತ್ವಮಿತಿ ಯಾವತ್ । 'ಅಪ್ರಣೀತಮಿವ' ಇತಿ, ಇವಶಬ್ದಸ್ತು ಪ್ರಣೀತತ್ವವ್ಯಾಘಾತಪರಿಹಾರಾರ್ಥಃ । ಪ್ರಣಯನಾಪ್ರಣಯನಯೋರ್ವ್ಯಾಹತತ್ವಾತ್ । ಅಪ್ರಣೀತಸಾಮ್ಯಂ ತು ತತ್ತ್ವಜ್ಞಾನಾನುಪಯುಕ್ತತ್ವಮೇವ ।

ಯದ್ವಾ - ಅಸಾಧುನಿಬಂಧಾಂಧತಮಸಪ್ರತಿಬಂಧೇನ ಸ್ವಸ್ಯ ತತ್ತ್ವಜ್ಞಾನಾನುತ್ಪಾದಕತ್ವಾಭಾವೇಽಪಿ ಅನ್ಯೇಷಾಂ ತದನುತ್ಪಾದಕತ್ವಾತ್ 'ಅಪ್ರಣೀತಮಿವ' ಇತ್ಯುಕ್ತಮ್ । ಅನ್ಯಸೂತ್ರವ್ಯಾಖ್ಯಾತೃವತ್ ನಾಯಂ ವ್ಯಾಖ್ಯಾತೇತಿ ದ್ಯೋತಯಿತುಮ್ — ಭಗವಾನ್ ಇತ್ಯುಕ್ತಮ್ ॥

ಅಸಾಧುನಿಬಂಧಅಂಧತಮಸಾ - ಇತರರಿಂದ ರಚನೆಗೊಂಡ ಭಾಷ್ಯಗಳು ನಿಬಂಧ ಎನಿಸುತ್ತವೆ. ಅವುಗಳು ಅಸಾಧು ಎಂದರೆ ತತ್ತ್ವಜ್ಞಾನಕ್ಕೆ ಉಪಯೋಗಿಯಾಗಿಲ್ಲ ಎಂದರ್ಥ. ಇನ್ನು ಇಲ್ಲಿ ಅಸಾಧುಪದವನ್ನು ಆವೃತ್ತಿಮಾಡಿಕೊಂಡು ಈ ರೀತಿ ಅರ್ಥವನ್ನು ಹೇಳಬಹುದು - ಅಸಾಧುಗಳ ಸಜ್ಜರಲ್ಲದ ದುಷ್ಟರ ಯಾವ ಅಸಾಧುವಾದ ನಿಬಂಧಗಳಿವೆ ಅರ್ಥಾತ್ ಭಾಷ್ಯಗಳಿವೆ ಅವುಗಳೇ ಒಂದು ಅಂಧಂತಮಸ್ಸು. ಆದರಿಂದ ಅವಕುಂಠಿತವಾಗಿದೆ ಬ್ರಹ್ಮಸೂತ್ರ ಎಂದರ್ಥ.

ಅವಕುಂಠಿತಶಬ್ದದ ಅರ್ಥ - ಪ್ರತಿಬದ್ಧತ್ವಂ. ಅರ್ಥಾತ್ ತತ್ತ್ವಜ್ಞಾನ-ಅನುತ್ಪಾದಕತ್ವಂ ಎಂದು.

ಬ್ರಹ್ಮಸೂತ್ರವು ದುಷ್ಟಭಾಷ್ಯಗಳಿಂದ ಪ್ರತಿಬದ್ಧವಾಗಿದೆ ಎಂದರ್ಥ. ಅಂದರೆ ಬ್ರಹ್ಮಸೂತ್ರದ ರಚನೆಯಾಗಿದ್ದರೂ ದುಷ್ಟಭಾಷ್ಯಗಳ ಕಾರಣದಿಂದಾಗಿ ಅದರಿಂದ ತತ್ವಜ್ಞಾನವು ಬರುತ್ತಿಲ್ಲ.

ಅಪ್ರಣೀತತ್ವಮಿವ - ಇವ ಎಂಬ ಶಬ್ದವು ವ್ಯಾಹತಿಯನ್ನು ಪರಿಹಾರಮಾಡುತ್ತಿದೆ. ಅದು ಹೀಗೆ - ದುಷ್ಟಭಾಷ್ಯಗಳ ಕಾರಣದಿಂದ ಪ್ರಣೀತವಾದ(ರಚನೆಗೊಂಡ) ಬ್ರಹ್ಮಸೂತ್ರವು ಅಪ್ರಣೀತವಾಗಿದೆ ಎಂದರೆ ವಿರುದ್ಧವಾಗುವುದು. ಹಾಗಾಗಿ "ಇವ" ಎಂದಿದ್ದಾರೆ. ಅಂದರೆ ರಚನೆ ಮಾಡಿದ್ದರೂ ರಚನೆ ಮಾಡದ ಗ್ರಂಥದಂತೆ ಆಗುವುದು. ಇಲ್ಲಿ ಸಾಮ್ಯವಾದರೋ ತತ್ವಜ್ಞಾನಕ್ಕೆ ಅನುಪಯುಕ್ತವಾಗುವ ಮೂಲಕ ಎಂದು ತಿಳಿಯಬೇಕು. ಅಥವಾ - ಬೇರೆ ದುಷ್ಟಭಾಷ್ಯಗಳಿಂದ ಮಧ್ವಾಚಾರ್ಯರಿಗೆ ತತ್ವಜ್ಞಾನೋತ್ಪತ್ತಿಯಾಗುವುದಕ್ಕೆ ಯಾವುದೇ ಪ್ರತಿಬಂಧಕವಾಗದೇ ಇದ್ದರೂ ಬೇರೆಯವರಿಗೆ ಪ್ರತಿಬಂಧಕವಾಗುವುದರಿಂದ "ಇವ" ಎಂದಿದ್ದಾರೆ.

ಭಗವಾನ್ - ಬ್ರಹ್ಮಸೂತ್ರಗಳನ್ನು ವ್ಯಾಖ್ಯಾನ ಮಾಡುವ ಬೇರೆಯವರಂತೆ ಇವರಲ್ಲ ಎಂದು ಸೂಚಿಸಲು 'ಭಗವಾನ್' ಎಂದಿದ್ದಾರೆ.

* अवसमन्धेभ्यस्तमसः (५-४-७९) ; 'अव', 'सम्', 'अन्ध' एतेभ्यः परः विद्यमानात् तमस्-शब्दात् 'अच्' इति समासान्तप्रत्ययः भवति ।

## ಯಥಾಚಾರ್ಯಾಭಿಪ್ರಾಯಂ ಹಾಗೂ ಅಂತರಾಯವಿಧುರೋಽಪಿ ಎನ್ನುವುದರ ವಿವರ

(ಆನಂದ) — ಅಸ್ಯ ಭಗವತ್ತ್ವೇಽಪಿ ವಿಪ್ರಲಂಭಾದಿನೈವ ಏತತ್ಕೃತಮಿತಿ ಕಿಂ ನ ಸ್ಯಾತ್? ಇತ್ಯತ ಉಕ್ತಮ್– **ಯಥಾಚಾರ್ಯಾಭಿಪ್ರಾಯಮಿತಿ** ॥ ಆಚಾರ್ಯೋ ವೇದವ್ಯಾಸಃ, ತದಭಿಪ್ರಾಯಮನತಿಕ್ರಮ್ಯೇತ್ಯರ್ಥಃ । ನ ಚ ಭಾಷ್ಯೇಣೈವಾಲಂ, ಅನುಭಾಷ್ಯಕರಣೇನ ಪ್ರಯೋಜನಾಭಾವಾದಿತಿ ವಾಚ್ಯಮ್ । 'ಸಂಕ್ಷೇಪವಿಸ್ತರಾಭ್ಯಾಮ್' ಇತಿ ನ್ಯಾಯಾದುಭಯಕರಣಸ್ಯಾವಿರುದ್ಧತ್ವಾತ್ । ಸಂಕ್ಷೇಪವಿಸ್ತರಕರಣಂ ಚ ಶಿಷ್ಯಾಣಾಂ ಸುಬೋಧಾರ್ಥಮೇವ ಇತಿ ಭಾವಃ ।

ನನು ಆನಂದತೀರ್ಥಸ್ಯ ವಿಘ್ನವತ್ತ್ವೇ ದೋಷವತ್ತ್ವಾತ್ ತತ್ಪ್ರಣೀತಗ್ರಂಥಸ್ಯಾಪಿ ದೋಷವತ್ತ್ವೇನ ನ ತವಾಶ್ವಾಸ ಇತ್ಯತ ಉಕ್ತಂ — **ಅಂತರಾಯವಿಧುರೋಽಪೀತಿ** ॥ ನನು ಅಂತರಾಯವಿಧುರತ್ವಮಯುಕ್ತಮ್ । ಬೀಜಾಭಾವಾತ್ ಇತ್ಯತೋ ಹೇತುಮಾಹ — **ವಿಲೀನಪ್ರಕೃತಿತಯೇತಿ** ॥ ಸರ್ವಥಾ ಅಜ್ಞಾನಮಿಥ್ಯಾಜ್ಞಾನಾದಿರೂಪಸ್ವಕಾರ್ಯಾನಾಪಾದಕಪ್ರಕೃತಿಮತ್ತಯೇತ್ಯರ್ಥಃ । ತಥಾ ಚ ಅಂತರಾಯವಿಧುರತ್ವಂ ಸಂಭವತೀತ್ಯರ್ಥಃ ।

ಯಥಾಚಾರ್ಯಾಭಿಪ್ರಾಯಂ - ಬೇರೆ ವ್ಯಾಖ್ಯಾತೃಗಳಂತೆ ಮಧ್ವಾಚಾರ್ಯರಲ್ಲದಿದ್ದರೂ ವಿಪ್ರಲಂಭ ಮೊದಲಾದ ಕಾರಣಗಳಿಂದ ಭಾಷ್ಯಾನುಭಾಷ್ಯಗಳನ್ನು ಮಾಡಿರಬಹುದಲ್ಲವೇ?

ಎಂದರೆ ಇದು ಸರಿಯಲ್ಲ ಎಂದು ಹೇಳಲು 'ಯಥಾಚಾರ್ಯಾಭಿಪ್ರಾಯಂ' ಎಂದಿದ್ದಾರೆ. ಇಲ್ಲಿ ಆಚಾರ್ಯರೆಂದರೆ ವೇದವ್ಯಾಸರು ಎಂದರ್ಥ. ಅವರ ಅಭಿಪ್ರಾಯವನ್ನು ಅತಿಕ್ರಮಣ ಮಾಡದೇ ಎಂದರ್ಥ.

ಅಂತರಾಯವಿಧುರೋಽಪಿ - ಅಲ್ಲ! ಆನಂದತೀರ್ಥರಿಗೆ ವಿಘ್ನಗಳಿದ್ದರೆ ದೋಷವುಳ್ಳವರಾಗುವುದರಿಂದ, ದೋಷವುಳ್ಳ ಅವರು ರಚನೆ ಮಾಡಿದ ಗ್ರಂಥದಲ್ಲಿ ದೋಷವಿರುವುದು ಸಾಧ್ಯವಿರುವುದರಿಂದ ಅಲ್ಲಿ ವಿಶ್ವಾಸಮೂಡುವುದಿಲ್ಲ ಎಂಬ ಆಕ್ಷೇಪಕ್ಕೆ ಪರಿಹಾರವಾಗಿ 'ಅಂತರಾಯವಿಧುರೋಽಪಿ' ಎಂದಿದ್ದಾರೆ. ವಿಘ್ನಗಳೇ ಇಲ್ಲದಿರುವವರಾದ್ದರಿಂದ ಆಕ್ಷೇಪಕ್ಕೆ ಅವಕಾಶವಿಲ್ಲ.

ವಿಲೀನಪ್ರಕೃತಿತಯಾ - ವಿಘ್ನಗಳಿಲ್ಲದಿರಲು ಕಾರಣ ಅವರು ವಿಲೀನಪ್ರಕೃತಿ. ಅರ್ಥಾತ್ ಸರ್ವಥಾ ಅಜ್ಞಾನಮಿಥ್ಯಾಜ್ಞಾನ ಮೊದಲಾದ ತನ್ನ ಕಾರ್ಯವನ್ನು ಮಾಡದೇ ಇರುವ ಪ್ರಕೃತಿಸಂಪರ್ಕವನ್ನು ಹೊಂದಿರುವುದರಿಂದ ಎಂದರ್ಥ. ಹಾಗಾಗಿ ಪ್ರಕೃತಿಯ ಸಂಬಂಧವಿದ್ದರೂ ಅದು ಆಚಾರ್ಯರಿಗೆ ಕಾರ್ಯಕಾರಿಯಾಗುವುದಿಲ್ಲ ಎಂದು ಭಾವ.

## ವಿಘ್ನಗಳಿಲ್ಲದಿದ್ದಾಗ ಮಂಗಲಾಚರಣೆ ಮಾಡಿದ್ದೇಕೆ?

(ಆನಂದ) — ನನ್ವಂತರಾಯವಿಧುರತ್ವೇ ಪ್ರಣಾಮರೂಪಮಂಗಲಕರಣಮಯುಕ್ತಮ್ । ಪ್ರಯೋಜನಾಭಾವಾತ್ ಇತ್ಯತ ಉಕ್ತಮ್— ಅನವರತಮಿತ್ಯಾದಿ ॥ ಈಶ್ವರಪ್ರವಣಾ ತದೇಕನಿಷ್ಠಾ ಕಾಯಕರಣವೃತ್ತಿರಸ್ಯ ಸ ತಥೋಕ್ತಃ । ತಥಾ ಚೇಶ್ವರಪ್ರಣಾಮಕರಣಸ್ವಭಾವತ್ವಾತ್ ನ ವಿರೋಧಃ । ತಥಾಪಿ ಗ್ರಂಥಾರಂಭೇ ಮಂಗಲಕರಣಮಯುಕ್ತಮ್ । ಗ್ರಂಥಾರಂಭೇ ತತ್ಕರಣಸ್ಯ ವಿಘ್ನಧ್ವಂಸಾರ್ಥತ್ವಾತ್ ಇತ್ಯತ ಉಕ್ತಮ್ — ಶಿಷ್ಯಾನಿತಿ ॥ ಏವಮುತ್ತಮಸ್ಯ ವಂದ್ಯಃ ಕ ಇತ್ಯತ ಉಕ್ತಮ್ — ನಾರಾಯಣೇತಿ ॥ ಸಾಫಲ್ಯಸಪ್ರಮಾಣಕತ್ವಪ್ರದರ್ಶನಾರ್ಥಂ — ಪ್ರಾರಿಪ್ಸಿತಸ್ಯೇತ್ಯಾದಿ ॥ ಪ್ರಚಯಸ್ಯ = ಗ್ರಂಥವಿಸ್ತರಸ್ಯ ॥

ವಿಘ್ನಗಳಿಲ್ಲದಿದ್ದಾಗ ಪ್ರಣಾಮರೂಪವಾದ ಮಂಗಳವನ್ನು ಆಚರಿಸುವುದು ಆಯುಕ್ತ. ಪ್ರಯೋಜನವಿಲ್ಲವಾದ್ದರಿಂದ ಎನ್ನುವ ಆಕ್ಷೇಪಕ್ಕೆ ಉತ್ತರವಾಗಿ 'ಅನವರತ-ಈಶ್ವರಪ್ರವಣಕಾಯಕರಣವೃತ್ತಿಃ' ಎಂದಿದ್ದಾರೆ. ಈ ಪದದ ಅರ್ಥ ಹೀಗೆ - ಅನವರತ ಅಂದರೆ ನಿರಂತರವಾದ ಈಶ್ವರಪ್ರವಣ ಅಂದರೆ ಈಶ್ವರೈಕನಿಷ್ಠವಾದ, ಕಾಯಕರಣವೃತ್ತಿಃ - ದೇಹ, ಇಂದ್ರಿಯ ವ್ಯಾಪಾರವುಳ್ಳವರೆಂದರ್ಥ. ಹಾಗಾಗಿ ಈಶ್ವರನನ್ನು ನಮಸ್ಕರಿಸುವುದು ಇವರ ಸ್ವಭಾವವಾದ್ದರಿಂದ ಅನುವ್ಯಾಖ್ಯಾನದ ಗ್ರಂಥದ ಮೊದಲಿಗೆ ನಮಸ್ಕರಿಸಿದ್ದಾರೆ.

ಪ್ರಚಯಸ್ಯ - ಗ್ರಂಥವಿಸ್ತರ ಎಂದರ್ಥ.

## ನಿಬಂಧ, ಆಚಾರ್ಯ ಹಾಗೂ ವೃತ್ತಿಶಬ್ದ

(ಶ್ರೀನಿಧಿ) — ನಿಬಂಧಾಃ= ಪ್ರಬಂಧವಿಶೇಷಾಃ । ಆಚಾರ್ಯಃ = ಭಗವಾನ್ ಬಾದರಾಯಣಃ । ವೃತ್ತಿಶಬ್ದಃ ಕಾಯಕರಣಶಬ್ದಾಭ್ಯಾಂ ಸಂಬಧ್ಯತೇ ।

ನಿಬಂಧ = ಪ್ರಬಂಧವಿಶೇಷಗಳು ಎಂದರ್ಥ. ಕಾಯಕರಣವೃತ್ತಿಃ ಎಂಬಲ್ಲಿರುವ ವೃತ್ತಿಶಬ್ದವು ಕಾಯ ಕರಣ ಎಂಬ ಪದಗಳೊಂದಿಗೆ ಸಂಬಂಧವನ್ನು ಪಡೆಯುವುದು. ಹಾಗಾಗಿ ಕಾಯವೃತ್ತಿ ಕರಣವೃತ್ತಿ ಎಂದು ಸಿಗುವುದು.

## ಅಸಾಧುನಿಬಂಧ-ಅಂಧತಮಸಾ

(ವಿಟ್ಠಲಭಟ್ಟೀಯ)– ಅಸಾಧುಭಿಃ ಸಂಕರಾದಿಭಿಃ ನಿಬಧ್ಯತೇ ಇತ್ಯಸಾಧುನಿಬಂಧನಂ ದುರ್ಭಾಷ್ಯಮ್ । ಅಸಾಧು ಚ ತತ್ ನಿಬಂಧನಂ ಚೇತಿ ವಾ ।

ಅಸಾಧುನಿಬಂಧಅಂಧತಮಸಾ - ಇಲ್ಲಿ ಅಸಾಧುಗಳಿಂದ ಮಾಡಲ್ಪಟ್ಟ ನಿಬಂಧ ಎಂದರ್ಥ. ಅಥವಾ ಅಸಾಧುವಾದ ನಿಬಂಧಗಳು ಎಂದರ್ಥ. ನಿಬಂಧನ ಎನ್ನುವ ಶಬ್ದಕ್ಕೆ ನಿಬಧ್ಯತೇ ಇತಿ ಎಂದು ವ್ಯುತ್ಪತ್ತಿ. ಅರ್ಥಾತ್ ಯಾವುದು ರಚನೆ ಮಾಡಲ್ಪಡುವುದೋ ಅದು. ಅಂದರೆ ಪ್ರಬಂಧವಿಶೇಷಗಳು.

## ನಾರಾಯಣಂ ನಿಖಿಲಪೂರ್ಣಗುಣೈಕದೇಹಂ - ಎಂಬುದು ವ್ಯಾಖ್ಯೇಯವೇ?

(ಲಘುರಸರಂಜನೀ) — ನನು 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿಕಂ ಗ್ರಂಥಂ ವ್ಯಾಖ್ಯಾತುಮಯಂ ದೇವತಾದಿಪ್ರಣಾಮಃ । ನ ಚಾಯಂ ವ್ಯಾಖ್ಯಾತವ್ಯಃ । ಅರ್ಥ-ವಿವಕ್ಷಾಪೂರ್ವಕಸ್ಯೈವ ಪೌರುಷೇಯವಾಕ್ಯಸ್ಯ ವ್ಯಾಖ್ಯಾತವ್ಯತ್ವಾತ್ । ನ ಹಿ ಮಾತೃಕಾಮಾತ್ರ-ವ್ಯಾಖ್ಯಾನೇ ಪ್ರೇಕ್ಷಾವಾನ್ ಪ್ರವರ್ತತೇ । ನ ಚಾಸ್ಯಾರ್ಥವಿವಕ್ಷಾಪೂರ್ವಕತ್ವೇ ಪ್ರಮಾಣಮಸ್ತಿ । ಪ್ರಣಾಯನಮಾತ್ರಸ್ಯ ವ್ಯಭಿಚಾರಿತ್ವಾತ್ । ಪ್ರೇಕ್ಷಾವತ್ಪ್ರಣಯನಸ್ಯ ಚಾನಿಶ್ಚಯಾತ್ । ನಿಶ್ಚಯೇ ವಾ ವಿಷಹರಮಂತ್ರಸ್ಯೇವ ಜಪಾದಿನಾಭ್ಯುದಯಸಿದ್ಧಯೇ ನಿರ್ಮಾಣೋಪಪತ್ತೇಃ । ಗೃಹೀತಸಂಗತೇ-ರರ್ಥಪ್ರತಿಭಾಸೋ ವಿಷಹರಮಂತ್ರೇಽಪಿ ಸಮಾನಃ । ನ ಚಾರ್ಥವಿವಕ್ಷಾಪೂರ್ವಕತ್ವಮಾತ್ರೇಣ ಉಪಾದೇಯತಯಾ ವ್ಯಾಖ್ಯಾನಂ ಯುಕ್ತಮ್ । ವಿಪ್ರಲಂಭಕಾದಿವಾಕ್ಯವ್ಯಾಖ್ಯಾನಪ್ರಸಂಗಾತ್ । ಕಿಂ ನಾಮೇಷ್ಟಸಾಧನತಾವಬೋಧಕತ್ವೇ ಯಾಥಾರ್ಥ್ಯೇ ಚ ಸತಿ । ನ ಚಾಸ್ಯ ಯಾಥಾರ್ಥ್ಯಾದೌ ಮಾನಮಸ್ತಿ । ತದ್ಭಾವೇ ತಥಾವಿಧವಾಕ್ಯಾಂತರಪರಿತ್ಯಾಗೇನಾಸ್ಯೈವ ವ್ಯಾಖ್ಯಾನೇ ಕಾರಣಂ ವಕ್ತವ್ಯಮ್ ।

ಅಲ್ಲ! ನಾರಾಯಣಂ ನಿಖಿಲಪೂರ್ಣಗುಣೈಕದೇಹಂ ಮುಂತಾದ ಅನುವ್ಯಾಖ್ಯಾನಗ್ರಂಥವನ್ನು ವ್ಯಾಖ್ಯಾನಮಾಡಲು ಮೊದಲಿಗೆ ದೇವತಾ ಮುಂತಾದ ನಮಸ್ಕಾರವನ್ನು ಮಾಡಿದ್ದಾರೆ. ಆದರೆ ಅನುವ್ಯಾಖ್ಯಾನಗ್ರಂಥವೇ ವ್ಯಾಖ್ಯಾನಕ್ಕೆ ಯೋಗ್ಯವಲ್ಲ. ಏಕೆಂದರೆ, ಅರ್ಥವಿವಕ್ಷಾಪೂರ್ವಕವಾದ ಪೌರುಷೇಯವಾಕ್ಯವೇ ವ್ಯಾಖ್ಯಾನಕ್ಕೆ ಯೋಗ್ಯ. ಯಾವ ಬುದ್ಧಿವಂತನೂ ಕೂಡ ಅಕ್ಷರಗಳಿಗೆ ವ್ಯಾಖ್ಯಾನ ಮಾಡಲು ಪ್ರವೃತ್ತಿಮಾಡುವುದಿಲ್ಲ. ಇನ್ನು ಅರ್ಥವಿವಕ್ಷಾಪೂರ್ವಕ ಎನ್ನುವುದಕ್ಕೆ ಪ್ರಮಾಣವೂ ಇಲ್ಲ. ರಚನೆ ಮಾಡಿದ್ದೇ ಪ್ರಮಾಣ ಎನ್ನಲು ಬರುವುದಿಲ್ಲ. ಕೆಲವರು ರಚನೆ ಮಾಡಿರುವುದು ಅಪ್ರಮಾಣವಾಗಿರುವುದು ಕಂಡುಬಂದಿದ್ದರಿಂದ. ಪ್ರೇಕ್ಷಾವಂತರಿಂದ ರಚನೆ-ಯಾದದ್ದು ಎಂದು ಹೇಳಿದರೂ ಅದು ಪ್ರೇಕ್ಷಾವಂತರು ಬರೆದಿದ್ದಾರೆ ಎಂಬ ನಿಶ್ಚಯವಿಲ್ಲ. ನಿಶ್ಚಯವಿದ್ದರೂ ವಿಷಪರಿಹಾರಕವಾದ ಮಂತ್ರವನ್ನು ಜಪಿಸುವಂತೆ ಅಭ್ಯುದಯಸಿದ್ಧಿಗೋಸ್ಕರ ನಿರ್ಮಾಣಮಾಡಿದ್ದಾರೆಂದು ಊಹಿಸಬಹುದು. ಯಾರಿಗೆ ಶಕ್ತಿಗ್ರಹವಿದೆಯೋ ಅವರಿಗೆ ವಿಷಹರ-ಮಂತ್ರದಲ್ಲೂ ಅರ್ಥತೋರುವುದು ಸಮಾನವಷ್ಟೇ.

ಅಲ್ಲ! ಯಾವ ಗ್ರಂಥವು ಅರ್ಥವಿವಕ್ಷಾಪೂರ್ವಕವಾಗಿರುವುದೋ ಅದು ಉಪಾದೇಯವಾಗಿ (ಸ್ವೀಕರಿಸಲು ಯೋಗ್ಯವಾಗಿ) ವ್ಯಾಖ್ಯಾನ ಮಾಡಲು ಅರ್ಹವಾಗಿದೆ ಎನ್ನೋಣ ಎಂದರೆ ಇದು ಸರಿಯಲ್ಲ. ವಿಪ್ರಲಂಭಕಾದಿ ವಾಕ್ಯಗಳಿಗೂ ವ್ಯಾಖ್ಯಾನಮಾಡುವ ಪ್ರಸಂಗ ಬಂದೀತು! ಆದ್ದರಿಂದ ಇಷ್ಟಸಾಧನತಾ ಜ್ಞಾನಸಾಧನವಾಗಿದ್ದು ಯಾವುದು ಯಥಾರ್ಥವೋ ಅದಕ್ಕೆ ವ್ಯಾಖ್ಯಾನ-ಮಾಡಬೇಕು. ಪ್ರಕೃತ ಗ್ರಂಥದಲ್ಲಿ ಯಾಥಾರ್ಥ್ಯವಿರುವುದಕ್ಕೆ ಪ್ರಮಾಣವಿಲ್ಲ. ಪ್ರಮಾಣವಿದ್ದರೂ ಈ ತರಹದ ಬೇರೆ ವಾಕ್ಯಗಳನ್ನು ಬಿಟ್ಟು ಇದೇ ವಾಕ್ಯವನ್ನು ವ್ಯಾಖ್ಯಾನಮಾಡಲು ಕಾರಣ ಹೇಳಬೇಕು.

### ವ್ಯಾಖ್ಯೇಯತ್ವವಿದೆಯೋ ಇಲ್ಲವೋ ಚಿಂತೆ ಬೇಡ;<br>ಆರಂಭಣೀಯವೇ ಅಲ್ಲವಾದ್ದರಿಂದ

(ಲಘುರಸರಂಜನೀ) – ಕಿಂಚ ಗ್ರಂಥ ಏವಾಯಂ ನಾರಂಭಣೀಯಃ । ಕುತೋಽಸ್ಯ ವ್ಯಾಖ್ಯೇಯತಾಚಿಂತಾ । ಆರಂಭಣೀಯತಾ ಚ ಪ್ರೇಕ್ಷಾವತ್ಪ್ರವೃತ್ತಿವಿಷಯಸ್ಯೈವ । ತದ್ವಿಷಯತಾಽಪಿ ವಿಷಯಪ್ರಯೋಜನಾಧಿಕಾರಿಸಂಬಂಧವತ್ತ್ವೇವ । ನ ಚಾಸ್ಯ ತತ್ಸಂಬಂಧೋಽಸ್ತಿ । ಕಿಂಚ ದುರ್ಗ-ಮಾರ್ಥಸ್ಯೈವ ವ್ಯಾಖ್ಯೇಯತ್ವಮ್ । ನ ಚಾತ್ರ ತದಸ್ತಿ । ಕಿಂಚ ಅಸ್ಯ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಅನ್ಯೈರೇವ ವ್ಯಾಖ್ಯಾತತ್ವಾತ್ ನ ಪುನರಿದಂ ಭಾಷ್ಯಕೃತಾ ವ್ಯಾಖ್ಯಾತವ್ಯಮ್ । ತಥಾಪಿ ಸ್ವಪ್ರಣೀತಭಾಷ್ಯೇಣೈವ ಕೃತವ್ಯುತ್ಪಾದನಮಿದಂ ಶಾಸ್ತ್ರಮಿತಿ ಕಿಮನೇನ ವ್ಯುತ್ಪಾದನೇನ । ಯದ್ವ್ಯಾ-ಖ್ಯಾನಾಯ ಅಯಂ ದೇವತಾದಿಪ್ರಣಾಮಃ । ತಥಾಪಿ ಭಾಷ್ಯಕೃತೋ ನಾರಾಯಣಪ್ರಣಾಮರೂಪಂ

ಮಂಗಲಾಚರಣಮಯುಕ್ತಮ್ । ಫಲಪ್ರಮಾಣಯೋರಭಾವೇನ ಮಂಗಲಸ್ಯಾವಶ್ಯಕರಣೀಯತ್ವಾ-ಭಾವಾತ್ । ಫಲಂ ಹಿ ಸಮಾಪ್ತ್ಯಾದಿಪ್ರತಿಬಂಧಕನಿವಾರಣಮ್ । ನ ಚಾತ್ರ ತತ್ಸಂಭವತಿ । ಭಾಷ್ಯಕಾರಸ್ಯ ವಿಲೀನಪ್ರಕೃತಿತಯಾ ಅಂತರಾಯವಿಧುರತ್ವಾತ್ । ನಾಪಿ ತತ್ರ ಪ್ರಮಾಣಮ್ । ಶ್ರುತ್ಯಾದೀನಾಮನುಪಲಂಭಾತ್ । ತಥಾಪಿ ಪುರುಷಾಂತರಸ್ಯೇವ ಗ್ರಂಥಾರಂಭಕಾಲ ಏವ ತದಾಚರಣಮಯುಕ್ತಮ್ । ಭಾಷ್ಯಕಾರಸ್ಯ ತತ ಏವಾನವರತಮೀಶ್ವರಪ್ರವಣಕಾಯಕರಣವೃತ್ತಿತಯಾ ನಾರಾಯಣೇ ಮನಆದಿಕರಣಪ್ರಾವಣ್ಯಾಪರಪರ್ಯಾಯಪ್ರಣಾಮರೂಪಮಂಗಲಸ್ಯ ಸರ್ವದಾ ವಿದ್ಯಮಾನತ್ವಾತ್ ।

ಅಷ್ಟೇ ಅಲ್ಲದೆ ಈ ಗ್ರಂಥವೇ ಆರಂಭಣೀಯವಲ್ಲ. ಆದ್ದರಿಂದ ಇದಕ್ಕೆ ವ್ಯಾಖ್ಯಾನಮಾಡುವ ಚಿಂತೆ ದೂರತೋಪಾಸ್ತ. ಆರಂಭಣೀಯತ್ವವಾದರೋ ಪ್ರೇಕ್ಷಾವಂತರ ಪ್ರವೃತ್ತಿಗೆ ವಿಷಯವಾದದ್ದರಲ್ಲೇ ಬರುವುದು. ಪ್ರೇಕ್ಷಾವತ್ಪ್ರವೃತ್ತಿವಿಷಯತ್ವವಾದರೋ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳಿರುವ ಕಡೆ ಇರುವುದು. ಪ್ರಕೃತಗ್ರಂಥಕ್ಕೆ ಈ ವಿಷಯಪ್ರಯೋಜನಾದಿಗಳ ಸಂಬಂಧ ಇರುವುದಿಲ್ಲ.

ಅಲ್ಲದೆ ದುರ್ಗಮವಾದ ಅರ್ಥಾತ್ ಕಷ್ಟಕರವಾದ ಅರ್ಥವುಳ್ಳ ಗ್ರಂಥವೇ ವ್ಯಾಖ್ಯಾನಮಾಡಲು ಯೋಗ್ಯ. ಪ್ರಕೃತಗ್ರಂಥದ ಅರ್ಥವಾದರೋ ದುರ್ಗಮವಲ್ಲ.

ಅಲ್ಲದೆ ಈ ಬ್ರಹ್ಮಸೂತ್ರವನ್ನು ಬೇರೆಯವರೇ ವ್ಯಾಖ್ಯಾನಮಾಡಿದ್ದರಿಂದ ಮತ್ತೆ ಭಾಷ್ಯಕಾರರು ವ್ಯಾಖ್ಯಾನ ಮಾಡುವುದು ಬೇಕಾಗಿಲ್ಲ. ಭಾಷ್ಯಕಾರರು ವ್ಯಾಖ್ಯಾನಮಾಡಿದ್ದರೂ ತಮ್ಮ ಭಾಷ್ಯ-ದಿಂದಲೇ ಬ್ರಹ್ಮಸೂತ್ರವನ್ನು ವ್ಯಾಖ್ಯಾನಮಾಡಿದಂತಾಯಿತು. ಆದ್ದರಿಂದ ಪುನಃ ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನವಾಗಿ ಅನುವ್ಯಾಖ್ಯಾನವನ್ನು ರಚನೆ ಮಾಡಬೇಕಾಗಿಲ್ಲ. ಹಾಗೆ ರಚನೆ ಮಾಡಬೇಕಾಗಿದ್ದರೆ ಅನುವ್ಯಾಖ್ಯಾನದ ಮೊದಲಿಗೆ ಈ ದೇವತಾಪ್ರಣಾಮಮಾಡಿದ್ದು ಸರಿ.

ಇಷ್ಟಾದರೂ ಭಾಷ್ಯಕಾರರು ಅನುವ್ಯಾಖ್ಯಾನದ ಮೊದಲಿಗೆ ನಾರಾಯಣಪ್ರಣಾಮರೂಪವಾದ ಮಂಗಳವನ್ನು ಆಚರಿಸಿದ್ದು ಸರಿಯಲ್ಲ. ಫಲ ಹಾಗೂ ಪ್ರಮಾಣಗಳಿಲ್ಲದಿರುವುದರಿಂದ ಮಂಗಳವು ಅವಶ್ಯ ಮಾಡಲೇಬೇಕೆಂದಿಲ್ಲ. ಮಂಗಳಾಚರಣೆಯ ಫಲವಾದರೋ ಸಮಾಪ್ತಿಪ್ರಚಯ ಇವುಗಳಿಗೆ ಪ್ರತಿಬಂಧಕವಾದ ವಿಘ್ನಪರಿಹಾರವೇ ಆಗಿದೆ. ಪ್ರಕೃತ ಅನುವ್ಯಾಖ್ಯಾನಕ್ಕೆ ಮಾಡಿದ ಮಂಗಳಕ್ಕೆ ಇದು ಫಲವಲ್ಲ. ಏಕೆಂದರೆ ಭಾಷ್ಯಕಾರರಿಗೆ ಪ್ರಕೃತಿಬಂಧವು ಕಾರ್ಯಕಾರಿಯಲ್ಲವಾದ್ದರಿಂದ ವಿಘ್ನಗಳೇ ಇಲ್ಲ. ಇನ್ನು ಮಂಗಳಮಾಡಬೇಕೆಂಬ ವಿಷಯದಲ್ಲಿ ಪ್ರಮಾಣವಿಲ್ಲ. ಈ ಬಗ್ಗೆ ವೇದಾದಿ-ಗಳ ಉಪಲಬ್ಧಿ ಇಲ್ಲವಾದ್ದರಿಂದ. ಇಷ್ಟಾದರೂ ಬೇರೆ ವ್ಯಕ್ತಿಗಳು ಮಂಗಳವನ್ನು ಆಚರಿಸುವಂತೆ

ಗ್ರಂಥ ಆರಂಭದ ಕಾಲದಲ್ಲಿಯೇ ಆಚಾರ್ಯರು ಅದರ ಆಚರಣೆಯನ್ನು ಮಾಡುವುದು ಸರಿಯಲ್ಲ. ಭಾಷ್ಯಕಾರರು ನಿರಂತರ ಈಶ್ವರನಲ್ಲಿಯೇ ಮುಳುಗಿಸಿದ ಮನಸ್ಸಿನ ವ್ಯಾಪಾರ, ಇಂದ್ರಿಯವ್ಯಾಪಾರ, ದೇಹವ್ಯಾಪಾರ ಉಳ್ಳವರು. ಆದ್ದರಿಂದ ಅವರಲ್ಲಿ ಯಾವಾಗಲೂ ನಾರಾಯಣನಲ್ಲಿ ಮನಸ್ಸು ಮೊದಲಾದ ಇಂದ್ರಿಯಗಳ ಸಂಲಗ್ನರೂಪವಾದ ಮಂಗಳ ಇದ್ದೇ ಇರುವುದು.

## ಭಾಷ್ಯಾದಿಗಳಲ್ಲಿ ಸಾಕ್ಷಾತ್ತಾಗಿಯೂ ಯಾಥಾರ್ಥ್ಯವನ್ನು ಉಪಪಾದನೆ ಮಾಡುತ್ತಾ, ಪ್ರಯೋಜನವನ್ನು ಹೇಳುತ್ತಾ ಅವತರಣಿಕೆ ನೀಡಿದ್ದಾರೆ

(ಲಘುರಸರಂಜನೀ) – ತಥಾಪಿ ಈಶ್ವರಸ್ತುತೇರಪಿ ಮಂಗಲತ್ವಾತ್ ತಾಂ ವಿಹಾಯ 'ನಮಾಮಿ' ಇತಿ ಪ್ರಣಾಮಮಾತ್ರಾಚರಣೇ ವಿಶೇಷಕಾರಣಾಭಾವಃ । ತಥಾಪಿ ತದುಪನಿಬಂಧನಂ ನಿರ್ನಿ-ಬಂಧಮ್ ಇತ್ಯಾದ್ಯಧಿಕಾರಿಮನೋಗತಶಂಕಾಯಾಃ ಪರಿಹರ್ತುಂ ಭಗವಾಂಷ್ಟೀಕಾಕಾರಃ ಕಿಂ ವ್ಯಾಖ್ಯಾನಸ್ಯ ಪೃಥಗ್ಯಾಥಾರ್ಥ್ಯಾದಿವ್ಯುತ್ಪಾದನಪ್ರಯಾಸೇನ ಯಾವದುತ್ಸರ್ಗತೋ ವ್ಯಾಖ್ಯೇಯ-ಯಾಥಾರ್ಥ್ಯಾದಿನೈವ ವ್ಯಾಖ್ಯಾನೇಽಪಿ ತತ್ಸಿದ್ಧ್ಯತೀತ್ಯಾಶಯೇನ ವ್ಯಾಖ್ಯೇಯೇ ಬ್ರಹ್ಮಮೀಮಾಂಸಾ-ಶಾಸ್ತ್ರೇ ಯಾಥಾರ್ಥ್ಯಾದಿಕಂ ಸಹೇತುಕಮನುವದನ್ –

' ............ ........ ಕರ್ಮಕರ್ತ್ರೋಃ ಉತ್ಸರ್ಗತೋ ಭಿದಾ ।
ಅಭೇದೋಽಪಿ ವಿಶೇಷೇ ಸ್ಯಾತ್ ಬಲೀ ಸೋಽಪ್ಯನಪೋದಿತಃ ॥'

ಇತಿ ವಕ್ಷ್ಯಮಾಣದಿಶೋತ್ಸರ್ಗಸ್ಯ ಅಪವಾದಾಭಾವೇ ಬಲಿಷ್ಠತ್ವಾದಪವಾದವಿಷಯಂ ತತ್ಕಾರಣ-ವಿಶೇಷಂ ಭಾಷ್ಯಕಾರೀಯವ್ಯಾಖ್ಯಾನೇಽಪವಾದಪ್ರಯೋಜಕೀಭೂತಂ ತತೋ ವೈಲಕ್ಷಣ್ಯಂ ಚ ದರ್ಶಯನ್ ಭಾಷ್ಯಾದೌ ಸಾಕ್ಷಾದಪಿ ಯಾಥಾರ್ಥ್ಯಾದಿಕಮುಪಪಾದಯನ್ ಭಾಷ್ಯಾದಿ-ಪ್ರಯೋಜನಂ ಚ ಪ್ರತಿಪಾದಯನ್ ಮೂಲಮವತಾರಯತಿ – ಭಗವತೇತ್ಯಾದಿನಾ ॥

ಇಷ್ಟಾದರೂ ಈಶ್ವರನ ಸ್ತೋತ್ರವೂ ಒಂದು ಮಂಗಳವಾದ್ದರಿಂದ ಅದನ್ನು ಬಿಟ್ಟು 'ನಮಾಮಿ' ಎಂದು ಪ್ರಣಾಮವನ್ನು ಮಾತ್ರ ಆಚರಿಸಿರುವುದಕ್ಕೆ ವಿಶೇಷಕಾರಣವಿಲ್ಲ. ಆಚರಿಸಿದರೂ ಅದರ ಉಪನಿಬಂಧನಕ್ಕೆ ಅರ್ಥಾತ್ ಗ್ರಂಥದಲ್ಲಿ ಅದನ್ನು ಸೇರಿಸಿರುವುದಕ್ಕೆ ಕಾರಣವಿಲ್ಲ. ಅಧಿಕಾರಿಯ ಮನಸ್ಸಿನಲ್ಲಿರುವ ಈ ರೀತಿಯಾದ ಅನೇಕ ಮನಸ್ಸಿನ ಶಂಕೆಗಳನ್ನು ಪರಿಹರಿಸಲು ಪೂಜ್ಯರಾದ ಟೀಕಾಚಾರ್ಯರು ವ್ಯಾಖ್ಯಾನಕ್ಕೆ ಪ್ರತ್ಯೇಕವಾಗಿ ಯಾಥಾರ್ಥ್ಯವನ್ನು ಉತ್ಪಾದನೆ ಮಾಡುವ ಪ್ರಯಾಸವೇಕೆ? ವ್ಯಾಖ್ಯೇಯಕ್ಕೆ ಯಾಥಾರ್ಥ್ಯವನ್ನು ಉಪಪಾದನೆ ಮಾಡಿದರೆ ವ್ಯಾಖ್ಯಾನಕ್ಕೂ ಅದು ಸಿದ್ಧವಾಗುವುದು ಎಂಬ ಅಭಿಪ್ರಾಯದಿಂದ ವ್ಯಾಖ್ಯೇಯವಾದ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಸಕಾರಣವಾಗಿ ಅನುವಾದ ಮಾಡುತ್ತ –

'ಇತಿ ಜ್ಞಾಪಯಿತುಂ ಕರ್ಮಕರ್ತ್ರೋಃ ಉತ್ಸರ್ಗತೋ ಭಿದಾ ।
ಅಭೇದೋಽಪಿ ವಿಶೇಷೇ ಸ್ಯಾತ್ ಬಲೀ ಸೋಽಪ್ಯನಪೋದಿತಃ ॥ 1-2-ಶ್ಲೋಕ 3॥

ಎಂದು ಮುಂದೆ ಹೇಳುವ ರೀತಿಯಲ್ಲಿ ಸಾಮಾನ್ಯವಿಧಿಯು ಅಪವಾದವಿಲ್ಲದಿದ್ದಾಗ ಬಲಿಷ್ಠವಾಗುವುದರಿಂದ ಅಪವಾದಕ್ಕೆ ವಿಷಯವಾದದ್ದನ್ನು ಹಾಗೂ ಅದಕ್ಕೆ ಕಾರಣವಾದದ್ದನ್ನು ಹಾಗೂ ಭಾಷ್ಯಕಾರರ ವ್ಯಾಖ್ಯಾನಕ್ಕೆ ಅಪವಾದ ಇರುವುದಕ್ಕೆ ಪ್ರಯೋಜಕವಾದದ್ದನ್ನು ಅದಕ್ಕಿಂತ ವ್ಯತ್ಯಾಸವನ್ನೂ ತೋರಿಸುತ್ತ ಭಾಷ್ಯದ ಮೊದಲಿಗೆ ಸಾಕ್ಷಾತ್ತಾಗಿಯೂ ಯಾಥಾರ್ಥ್ಯಾದಿಗಳನ್ನು ಸಮರ್ಥಿಸುತ್ತ ಹಾಗೂ ಭಾಷ್ಯಾದಿಗಳ ಪ್ರಯೋಜನವನ್ನು ಪ್ರತಿಪಾದಿಸುತ್ತ ಅನುವ್ಯಾಖ್ಯಾನಕ್ಕೆ ಅವತಾರಿಕೆಯನ್ನು ಕೊಡುತ್ತಿದ್ದಾರೆ — ಭಗವತಾ ಬಾದರಾಯಣೇನ ಇತ್ಯಾದಿಯಾಗಿ.

## ಕರ್ಮಕರ್ತ್ರೋಃ ಉತ್ಸರ್ಗತೋ ಭಿದಾ - ನ್ಯಾಯಸುಧೆಯ ವಿವರಣೆ

(सुधा) यस्मात्कर्मकर्त्रोरुत्सर्गत एव भिदा, तस्माद्विशिनष्टि स्वविषयमुत्सर्गविषयाद्व्यवच्छिनत्तीति विशेषोऽपवादस्तस्मिन्सत्यभेदोऽपि स्यात् । तथाच मामहं जानामी(त्याद्यु)त्युपपन्नं भवति । यतश्चोत्सर्गोऽप्यपवादाभावे बली स्वसाध्यसाधने समर्थः । न चास्ति प्रकृतेऽपवादः । तस्मादत्र हेतुत्वेनोपदानमपि युज्यते । यथा हि न हिंस्यात्सर्वा भूतानीत्यौत्सर्गिको भूतहिंसानिषेधोऽग्नीषोमीयपशुहिंसाविधिनापोद्यते । भवति चानपोदिते ब्रह्महिंसाद्यकरणीयत्वे प्रमाणम् ।

नन्वेवं तर्हि प्रमेयत्वानित्यत्वयोरप्येवं वक्तुं शक्यत एव । प्रमेयत्वस्यानित्यत्वेनौत्सर्गिकी व्याप्तिः । अपवादेन त्वाकाशादौ नित्यत्वम् । अपवादाभावाच्छब्दादावनित्यत्वसाधकतेति । ततश्चानैकान्तिकतोच्छेदः स्यात् । मैवम् । सामान्यविषयेण हि प्रमाणेनार्थे प्रतीते सति विशेषविषयेणापवादो भवति । ततश्च सर्वतः प्रसक्ता बुद्धिस्तद्विषयं परित्यज्यान्यत्र विश्राम्यति । नच सर्वभूतहिंसानिषेधस्येव प्रमेयत्वानित्यत्वव्याप्तेः केनापि प्रमाणेन प्राप्तिरस्ति । किं नाम प्रमेयत्वं, नित्यत्वानित्यत्वाभ्यां सहव्यवस्थितमेवोपलभ्यत सति न तत्र(अपि) उत्सर्गापवादन्यायस्यावकाशः । एवं तर्हि कर्मकर्तृभावोऽपि भेदाभेदाभ्यां सह व्यवस्थित एवोपलब्ध इति कथमत्राप्युत्सर्गापवादन्यायस्यावकाशः । मैवम् । प्रत्यक्त्वपराक्त्वरूपो हि कर्तृकर्मभावः । स तावदापाततो विरोधाद्भेदेन घटनीयो वा विशेषेण वा । तत्र भेदो मुख्यः, विशेषस्तु प्रतिनिधिरित्युक्तम् । नच मुख्यप्रतिनिध्योः समकक्ष्यतया प्रतिभासो भवति । अतो भेदः सामान्यतः प्राप्नोति विशेषस्त्वपवादेनेति युक्तमुक्तम् । यथा चानुगत-

सामान्याभावेऽप्युत्सर्गापवादन्यायसम्भवस्तथा वक्ष्यामः । सोपाधिकसम्बन्धस्य साधनाङ्गताभाववत्सोपाधिकव्यभिचारस्यापि न दूषणाङ्गत्वमिति किमत्रालौकिकम् । वक्ष्यते चैतदिति ।

— ಅಪವಾದವನ್ನು ಬಿಟ್ಟು ಸಾಮಾನ್ಯವಾಗಿ ಕರ್ಮಕರ್ತೃಗಳಿಗೆ ಭೇದ ಇದ್ದೇ ಇದೆ. ಹಾಗಾಗಿಯೇ 'ಮಾಮಹಂ ಜಾನಾಮಿ' ಎಂಬ ಸ್ಥಳದಲ್ಲಿ ಕರ್ಮಕರ್ತೃಗಳಲ್ಲಿ ಭೇದವಿಲ್ಲದಿದ್ದರೂ ತೊಂದರೆಯಿಲ್ಲ. ಅಪವಾದಸ್ಥಳವಾದ್ದರಿಂದ. ಅಪವಾದವನ್ನು ವಿಶೇಷ ಎನ್ನುವರೂ ಕೂಡ. ವಿಶೇಷ ಎಂದರೆ ವಿಶಿನಷ್ಟಿ = ವ್ಯವಚ್ಛಿನತ್ತಿ ಸ್ವವಿಷಯಂ ಉತ್ಸರ್ಗವಿಷಯಾತ್ ಇತಿ ವಿಶೇಷಃ. ತನ್ನ ವಿಷಯವನ್ನು ಉತ್ಸರ್ಗದಿಂದ ಯಾವುದು ಬೇರ್ಪಡಿಸುವುದೋ ಅದನ್ನು ವಿಶೇಷ ಎನ್ನುತ್ತಾರೆ. ಅರ್ಥಾತ್ ಅಪವಾದ. ಉದಾ - 'ನ ಹಿಂಸ್ಯಾತ್ ಸರ್ವಾ ಭೂತಾನಿ' ಎಂಬುದು ಸಾಮಾನ್ಯವಿಧಿ. ಈ ವಿಧಿಗೆ ಅಪವಾದವಿಧಿ 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬುದು. ಒಟ್ಟಾಗಿ ಸಾಮಾನ್ಯವಿಶೇಷಭಾವವನ್ನು ಹೀಗೆ ತಿಳಿಯಬೇಕು. ಸಾಮಾನ್ಯವಿಷಯಕವಾದ ಪ್ರಮಾಣದಿಂದ ಅರ್ಥವು ತೋರಿದಾಗ ವಿಶೇಷವಿಷಯಕವಾದುದರಿಂದ ಅಪವಾದ ಉಂಟಾಗುವುದು. ಆದ್ದರಿಂದ ಎಲ್ಲ ಕಡೆ ಪ್ರಸಕ್ತವಾದ ವಿಧಿಯು ಆ ಅಪವಾದವಿಷಯವನ್ನು ಬಿಟ್ಟು ಬೇರೆ ಕಡೆ ವಿಶ್ರಮಿಸುತ್ತದೆ. ಉದಾ — ಯಾವುದೇ ಹಿಂಸೆಯನ್ನು ಮಾಡುವಂತಿಲ್ಲ ಎಂಬ ನಿಯಮವು ಸರ್ವತ್ರ ಪ್ರಸಕ್ತ. ಇದು ಸಾಮಾನ್ಯನಿಯಮ. ಈ ನಿಯಮವನ್ನು ಕೇಳಿದವನಿಗೆ ಎಲ್ಲ ಭೂತಗಳಲ್ಲಿ ಹಿಂಸೆ ಮಾಡಬಾರದು ಎಂಬ ಬುದ್ಧಿಯು ಪ್ರಸಕ್ತ. ಅದೇ 'ಅಗ್ನೀಷೋಮೀಯ ಪಶುಹಿಂಸೆಯನ್ನು ಮಾಡಬೇಕು' ಎಂದು ವಿಧಿಯಿದ್ದಾಗ ಅಗ್ನೀಷೋಮೀಯಪಶುವನ್ನು ಬಿಟ್ಟು ಬೇರೆ ಭೂತಗಳಲ್ಲಿ ಹಿಂಸಾನಿಷೇಧ ಎಂದು ಸಾಮಾನ್ಯವಿಧಿಯನ್ನು ಅರ್ಥೈಸಬೇಕು. ಇನ್ನೂ ಹೆಚ್ಚಿನ ವಿಚಾರವನ್ನು ಈ ಸುಧಾಭಾಗದಿಂದ ತಿಳಿಯಬೇಕು.

## ಹಿಂದೆ ಮಾಡಿದ ಆಶಂಕೆಗಳ ಪರಿಹಾರಕ್ರಮ

(ಲಘುರಸರಂಜನೀ) — ಅಯಮತ್ರ ಪರಿಹಾರಕ್ರಮಃ - ಅತ್ರ ತಾವದ್ 'ಭಗವತಾ' ಇತ್ಯಾರಭ್ಯ 'ಬ್ರಹ್ಮಮೀಮಾಂಸಾಶಾಸ್ತ್ರಮ್' ಇತ್ಯನೇನ ವ್ಯಾಖ್ಯೇಯೇ ವಕ್ಷ್ಯಮಾಣಯಾಥಾರ್ಥ್ಯಾದ್ಯನುವಾದಃ । ತತ್ರ ಶಾಸ್ತ್ರಪದೇನ 'ಶಿಷ್ಯತೇ ಯಥಾಸ್ಥಿತಂ ಪ್ರತಿಪಾದ್ಯತೇ ತತ್ವಮನೇನೇತಿ ಶಾಸ್ತ್ರಮ್' ಇತಿ ವ್ಯುತ್ಪತ್ತ್ಯಾ ಯಾಥಾರ್ಥ್ಯರೂಪಸಾಧ್ಯಾನುವಾದಃ । 'ಶಾಸ್ತ್ರಂ ಚಾಪ್ರಮಾಣಂ ಚೇ'ತ್ಯಸ್ಯ ವಿಪ್ರತಿಷಿದ್ಧತ್ವಾತ್ । ಯುಕ್ತಿಮೂಲತ್ವಶ್ರುತಿಮೂಲತ್ವಾಪ್ತವಾಕ್ಯತ್ವರೂಪಾಸ್ತ್ರಯಸ್ತಾವದ್ಧೇತವಃ । ತತ್ರ ಯುಕ್ತಿಮೂಲತ್ವಾಖ್ಯಹೇತ್ವನುವಾದಃ 'ಮೀಮಾಂಸೇತಿ' ॥ ಯುಕ್ತ್ಯನುಸಂಧಾನರೂಪತ್ವಾತ್ ಮೀಮಾಂಸಾಯಾಃ । ಶ್ರುತಿಮೂಲತ್ವರೂಪಹೇತ್ವನುವಾದಃ — ಬ್ರಹ್ಮೇತಿ ॥ ಬ್ರಹ್ಮ ವೇದಃ ತದರ್ಥಃ ಪರಂಬ್ರಹ್ಮ ವಾ । ತಸ್ಯ ಮೀಮಾಂಸಾ ಬ್ರಹ್ಮಮೀಮಾಂಸಾ । ಸಕಲವೇದಾರ್ಥಭೂತಸ್ಯ ಪರಬ್ರಹ್ಮಣೋ ವಿಷ್ಣೋಃ ಸ್ವರೂಪನಿರ್ಣಯಾರ್ಥಾ ಮೀಮಾಂಸೇತಿ ಯಾವತ್ । ಆಪ್ತವಾಕ್ಯತ್ವ-

ರೂಪಹೇತ್ವನುವಾದಃ — **ಬಾದರಾಯಣೇನ ಪ್ರಣೀತಮಪಿ** ॥ ಆಪ್ತವಾಕ್ಯಕತಾಯಾಂ ಹೇತುಃ ಅನುಕೂಲವಕ್ತ್ರಾದಿಮತ್ವಮ್ । ತತ್ರ ವಿವಕ್ಷಿತಾರ್ಥತತ್ತ್ವಜ್ಞಾನಂ ಕರಣಪಾಟವಂ ವಿವಕ್ಷಾ ಚೇತಿ ತ್ರಯಂ ವಕ್ತುರಾನುಕೂಲ್ಯಂ ನಾಮ । ತತ್ತ್ವಜ್ಞಾನಯೋಗ್ಯತಾ, ವಕ್ತುಃ ಪ್ರೀತಿವಿಷಯತಾ ಚೇತಿ ದ್ವಯಂ ಶ್ರೋತುಃ । ಶ್ರೋತೃಪ್ರಯೋಜನಸೋದ್ದೇಶಃ ಪ್ರಸಂಗಸ್ಯ । ತತ್ರ ವಿವಕ್ಷಿತಾರ್ಥತತ್ತ್ವ-ಜ್ಞಾನಾನುವಾದಃ — **ಭಗವತೇತಿ** ॥

ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।
ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥

ಇತಿ ವಚನಾತ್ ಸಮಗ್ರಜ್ಞಾನವಿಜ್ಞಾನಯೋರ್ಭಗಶಬ್ದಾರ್ಥತ್ವಾತ್ । ಕರಣಪಾಟವಸ್ಯಾಪಿ ಅನು-ವಾದಃ – **ಭಗವತೇತಿ** ॥ ಶರೀರೇಂದ್ರಿಯಾದಿಪಾಟವರೂಪಸಮಗ್ರವೀರ್ಯಸ್ಯಾಪಿ ತದರ್ಥ-ತ್ವಾತ್ । ವಿವಕ್ಷಾಯಾ ಅಪ್ಯನುವಾದಃ — **ಬಾದರಾಯಣೇನ ಪ್ರಣೀತಮಿತಿ** ॥

ಇಲ್ಲಿ ಪರಿಹಾರದ ಕ್ರಮ — ಮೊದಲಿಗೆ 'ಭಗವತಾ' ಎಂದು ಪ್ರಾರಂಭಿಸಿ 'ಬ್ರಹ್ಮಮೀಮಾಂಸಾಶಾಸ್ತ್ರಂ' ಎನ್ನುವವರೆಗೆ ವ್ಯಾಖ್ಯೇಯವಾದ ಬ್ರಹ್ಮಸೂತ್ರದಲ್ಲಿ ಮುಂದೆ ಹೇಳುವ ಪ್ರಾಮಾಣ್ಯವನ್ನು ಅನುವಾದ ಮಾಡಿದ್ದಾರೆ. ಅಲ್ಲಿ 'ಶಾಸ್ತ್ರ' ಎಂಬ ಪದದಿಂದ 'ಯಾಥಾರ್ಥ್ಯಂ' ಎಂಬ ಸಾಧ್ಯವನ್ನು ಅನುವಾದ ಮಾಡಿದ್ದಾರೆ. ಅದು ಹೀಗೆ - ಶಿಷ್ಯತೇ ಅಂದರೆ ಹೇಗಿದೆಯೋ ಹಾಗೆ ಪ್ರತಿಪಾದಿಸಲ್ಪಡುತ್ತದೆ ಯಾವುದು ಎಂದರೆ ತತ್ತ್ವ. ಯಾವುದರಿಂದ ಎಂದರೆ ಶಾಸ್ತ್ರದಿಂದ. ಒಟ್ಟಿನಲ್ಲಿ ಯಾವುದರಿಂದ ಯಥಾರ್ಥವಾಗಿ ತತ್ತ್ವವು ಪ್ರತಿಪಾದಿಸಲ್ಪಡುತ್ತದೋ ಅದನ್ನು ಶಾಸ್ತ್ರ ಎನ್ನುತ್ತಾರೆ. ಆದ್ದರಿಂದಲೇ ಶಾಸ್ತ್ರವೂ ಹೌದು, ಅಪ್ರಮಾಣವೂ ಹೌದು ಎನ್ನಲು ಬರುವುದಿಲ್ಲ. ವ್ಯಾಹತವಾದ್ದರಿಂದ.

ಇನ್ನು ಹೇತುಗಳು ಮೂರು (1) ಯುಕ್ತಿಮೂಲತ್ವ, (2) ಶ್ರುತಿಮೂಲತ್ವ (3) ಆಪ್ತವಾಕ್ಯತ್ವ. ಇವು-ಗಳಲ್ಲಿ ಯುಕ್ತಿಮೂಲತ್ವ ಎಂಬ ಹೇತುವಿನ ಅನುವಾದವು ಬ್ರಹ್ಮಮೀಮಾಂಸಾಶಾಸ್ತ್ರಂ ಎಂಬಲ್ಲಿರುವ ಮೀಮಾಂಸಾ ಶಬ್ದದಿಂದ. ಮೀಮಾಂಸಾ ಎಂದರೆ ಯುಕ್ತ್ಯನುಸಂಧಾನವೇ ತಾನೇ!

ಶ್ರುತಿಮೂಲತ್ವ ಎಂಬ ಹೇತುವಿನ ಅನುವಾದವನ್ನು 'ಬ್ರಹ್ಮಮೀಮಾಂಸಾಶಾಸ್ತ್ರಂ' ಎಂಬಲ್ಲಿರುವ ಬ್ರಹ್ಮಪದವು ಮಾಡುತ್ತಿದೆ. ಬ್ರಹ್ಮ ಎಂದರೆ ವೇದ ಅಥವಾ ಅದರ ಅರ್ಥವಾದ ಬ್ರಹ್ಮ. ಅದರ ಬಗೆಗಿನ ಮೀಮಾಂಸಾವೇ ಬ್ರಹ್ಮಮೀಮಾಂಸಾ ಎನಿಸುತ್ತದೆ. ಆದ್ದರಿಂದ ಸಕಲವೇದದ ಅರ್ಥವಾದ ಪರಬ್ರಹ್ಮನೆನಿಸುವ ವಿಷ್ಣುವಿನ ಸ್ವರೂಪನಿರ್ಣಯಕ್ಕೋಸ್ಕರ ಇರುವ ಮೀಮಾಂಸಾ ಎಂದು ತಾತ್ಪರ್ಯ. ಆಪ್ತವಾಕ್ಯತ್ವ ಎಂಬ ಹೇತುವನ್ನು 'ಬಾದರಾಯಣೇನ ಪ್ರಣೀತಮಪಿ' ಎನ್ನುವ ಭಾಗದಿಂದ ಮಾಡಿದ್ದಾರೆ. ಆಪ್ತವಾಕ್ಯತ್ವವನ್ನು ಸಾಧಿಸುವ ಹೇತುವು ಅನುಕೂಲವಕ್ತ್ರಾದಿಮತ್ವ

ಆಗಿದೆ. ಅಲ್ಲಿ ವಕ್ತ್ರಾನುಕೂಲ್ಯವೆಂದರೆ ವಿವಕ್ಷಿತಾರ್ಥತತ್ವಜ್ಞಾನ, ಕರಣಪಾಟವ ಹಾಗೂ ವಿವಕ್ಷಾ. ಶ್ರೋತ್ರಾನುಕೂಲ್ಯವೆಂದರೆ ತತ್ವಜ್ಞಾನಯೋಗ್ಯತೆ, ವಕ್ತೃಪ್ರೀತಿವಿಷಯತ್ವ. ಪ್ರಸಂಗಾನುಕೂಲ್ಯವೆಂದರೆ ಶ್ರೋತೃಪ್ರಯೋಜನೋದ್ದೇಶ.

ಇವುಗಳಲ್ಲಿ ವಿವಕ್ಷಿತಾರ್ಥತತ್ವಜ್ಞಾನವನ್ನು 'ಭಗವತಾ' ಎಂಬ ಪದದಿಂದ ಅನುವಾದ ಮಾಡಿದ್ದಾರೆ. ಏಕೆಂದರೆ ಸಮಗ್ರಜ್ಞಾನ ಸಮಗ್ರವಿಜ್ಞಾನವು ಭಗವತಾ ಎಂಬಲ್ಲಿರುವ ಭಗಶಬ್ದದ ಅರ್ಥವಾಗಿದೆ.

## ಭಗ ಎಂದರೇನು? — ವಿಷ್ಣುಪುರಾಣ

ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।
ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥ (ವಿಷ್ಣುಪುರಾಣ. 6-5-74)

** — ಐಶ್ವರ್ಯ = ವಶಿತ್ವ ಎಂದರೆ "ಅಸಂಗ ಏವ ಚ ವಶಿತ್ವಂ" ಅಥವಾ 'ವಶಿತ್ವಂ ಚಾಪ್ಯಲೋಲತಾ" - ವಿಷಯಾನಾಸಕ್ತಿ ಎಂದರ್ಥ. ಅಥವಾ ಸ್ವಾತಂತ್ರ್ಯ. - ಶ್ರೀ ಎಂದರೆ ಕಾಂತಿ. - ಜ್ಞಾನವಿಜ್ಞಾನ = ಅಪರೋಕ್ಷಜ್ಞಾನ. ದೂರಶ್ರವಣದರ್ಶನ, ತ್ರಿಕಾಲಜ್ಞತ್ವ, ಪರಚಿತ್ತಾದ್ಯಭಿಜ್ಞತ್ವ, ಸರ್ವಜ್ಞತ್ವ ಎಂದು ಭಾವ. - ವೀರ್ಯ ಎಂದರೆ ಆರಬ್ಧಾಂತಗಮನ. - ಯಶಃ = ಕೀರ್ತಿ. ಈ ಶಬ್ದಗಳಿಗೆ ಈ ಅರ್ಥದಲ್ಲಿ ತಾತ್ಪರ್ಯವಿದೆ.

ಕರಣಪಾಟವದ ಅನುವಾದ 'ಭಗವತಾ' ಎನ್ನುವುದರಿಂದ ಮಾಡಿದ್ದಾರೆ. ಏಕೆಂದರೆ ಭಗಶಬ್ದದ ಅರ್ಥ ಸಮಗ್ರವೀರ್ಯ. ಪ್ರಕೃತದಲ್ಲಿ ಶರೀರೇಂದ್ರಿಯಾದಿಪಾಟವರೂಪ ಸಮಗ್ರವೀರ್ಯವು ಅದರ ಅರ್ಥವಾಗಿದೆ. ವಿವಕ್ಷೆಯ ಅನುವಾದವನ್ನು 'ಬಾದರಾಯಣೇನ ಪ್ರಣೀತಂ' ಎಂಬುದರಿಂದ ಮಾಡಿದ್ದಾರೆ.

*** उत्पत्तिं प्रलयं चैव भूतानामागतिं गतिम् ।
वेत्ति विद्यामविद्यां च स वाच्यो भगवानिति (विष्णु पु ६.६.७८)
ज्ञानशक्तिवलैश्वर्यवीर्यतेजांस्यशेषतः ।
भगवच्छब्दवाच्यानि विना हेयैर्गुणादिभिः ७९

## ಶ್ರೋತ್ರಾದ್ಯಾನುಕೂಲ್ಯೋಪೇತವಾದ ಬ್ರಹ್ಮಸೂತ್ರಗಳು

(ಲಘುರಸರಂಜನೀ) – ಏತೇನ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಅರ್ಥವಿವಕ್ಷಾಪೂರ್ವಕತ್ವಮಪ್ಯುಕ್ತಂ ಭವತಿ । ಪ್ರಣಯನಾತ್ । ನ ಚ ಪ್ರಣಯನಮಾತ್ರಸ್ಯ ವ್ಯಭಿಚಾರಿತ್ವಾದಿತ್ಯುಕ್ತಮಿತಿ ವಾಚ್ಯಮ್ । ಪ್ರೇಕ್ಷಾವತ್ಪ್ರಣಯನಸ್ಯ ಅಭಿಪ್ರೇತತ್ವಾತ್ ಇತ್ಯಾಶಯೇನೋಕ್ತಂ – ಭಗವತಾ ಪ್ರೇಕ್ಷಾವತಾ

**ಬಾದರಾಯಣೇನ ಪ್ರಣೀತಮಿತಿ** ॥ ಬ್ರಹ್ಮಮೀಮಾಂಸಾಶಾಸ್ತ್ರೇ ಬಾದರಾಯಣಪ್ರಣೀತತ್ವಸ್ಯ ಬಾದರಾಯಣೇ ಪ್ರೇಕ್ಷಾವತ್ತ್ವಸ್ಯ ಚ ಬಹುಮಾನಸಿದ್ಧತ್ವಾತ್ ಕಿಂ ತನ್ನಿಶ್ಚಾಯಕಮತ್ರ ವಕ್ತವ್ಯಮ್ । ಉತ್ತರತ್ರ ತು ತದಪಿ ಸ್ಫುಟೀಭವಿಷ್ಯತೀತಿ ಭಾವಃ । ಶ್ರೋತ್ರಾನುಕೂಲ್ಯಾನುವಾದಃ — **ಪ್ರಾಣಿನಾಮಿತಿ** ॥ ನಿಃಶ್ರೇಯಸಪದಸಮಭಿವ್ಯಾಹೃತಸ್ಯಾತ್ರ ಪ್ರಾಣಿಪದಸ್ಯಾವಶ್ಯಂ ಮುಕ್ತಿಯೋಗ್ಯಜೀವಪರತಯಾ ಮುಕ್ತಿಯೋಗ್ಯಜೀವಾನಾಂ ಚ ತತ್ತ್ವಜ್ಞಾನಸ್ವರೂಪತಯಾ ಅನಾದಿತೋ ಭಗವತ್ಪ್ರೀತಿಪಾತ್ರತಾಯಾಶ್ಚ ವಕ್ಷ್ಯಮಾಣಬಹುಮಾನಸಿದ್ಧತ್ವಾತ್ । ಪ್ರಸಂಗಾನುಕೂಲ್ಯಾನುವಾದಃ — **ನಿಃಶ್ರೇಯಸಾಯೇತಿ** ॥ ಏತೇನ ಯದುಕ್ತಂ ನಿಶ್ಚಯೇ ವಾ ವಿಷಹರಮಂತ್ರಸ್ಯೇವ ಜಪಾದಿನಾಽಭ್ಯುದಯಸಿದ್ಧಯೇ ನಿರ್ಮಾಣೋಪಪತ್ತೇರಿತಿ ತದಪಿ ನಿರಸ್ತಮ್ । ಅಭ್ಯುದಯಾದ್ಯವಾಂತರಪ್ರಯೋಜನಸ್ಯ ಜಪಾದಿಮಾತ್ರೇಣ ಸಿದ್ಧಾವಪಿ ನಿಃಶ್ರೇಯಸಾಖ್ಯಮುಖ್ಯಪ್ರಯೋಜನಸ್ಯಾರ್ಥವಿವಕ್ಷಾಪೂರ್ವಕತ್ವಂ ವಿನಾ ತಾವನ್ಮಾತ್ರೇಣಾಸಿದ್ಧೇಃ । ಮೋಕ್ಷೋ ಹಿ ಭಗವತ್ಪ್ರಸಾದೈಕಸಾಧ್ಯಃ ।

'ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್ ಅಸ್ಮಾತ್ ಸಂಸಾರಾತ್ ಮುಚ್ಯತೇ ನಾಪರೇಣ'
ಇತಿ ಶ್ರುತೇಃ । ಪ್ರಸಾದಶ್ಚ ಗುಣೋತ್ಕರ್ಷಜ್ಞಾನಸಾಧ್ಯಃ ।

'ನ ತಾದೃಶೀ ಪ್ರೀತಿರೀಢ್ಯಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್'
ಇತಿ ಶ್ರುತೇಃ । ಗುಣೋತ್ಕರ್ಷಜ್ಞಾನಂ ಚ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಗುಣೋತ್ಕರ್ಷವಿವಕ್ಷಾಪೂರ್ವಕತ್ವಂ ವಿಹಾಯ ಕೇವಲಜಪಾದಿನಾ ಕಥಂ ಸಿದ್ಧ್ಯತಿ, ಕಥಂತರಾಂ ಭಗವತ್ಪ್ರಸಾದಃ ಕಥಂತಮಾಂ ಮೋಕ್ಷ ಇತಿ । ಏತೇನ ಹೇತುಭಿರಸ್ಯ ಶಾಸ್ತ್ರಸ್ಯ ಮೋಕ್ಷಾದೀಷ್ಟಸಾಧನಾವಬೋಧಕತ್ವಂ ಚ ಸಿದ್ಧಮ್ ।

ಇದರಿಂದ ಬ್ರಹ್ಮಸೂತ್ರವು ಅರ್ಥವಿವಕ್ಷಾಪೂರ್ವಕ ಎಂದು ಹೇಳಿದಂತಾಯಿತು. ರಚನೆ ಮಾಡಿದ್ದರಿಂದ. ಅಲ್ಲ। ರಚನೆ ಮಾಡಿದ ಮಾತ್ರಕ್ಕೆ ಅರ್ಥವಿವಕ್ಷಾಪೂರ್ವಕವಾಗಬೇಕಿಲ್ಲ. ವ್ಯಭಿಚಾರದೋಷವಿರುವುದರಿಂದ ಎಂದರೆ ಇಲ್ಲ. ಪ್ರೇಕ್ಷಾವಂತರಿಂದ ರಚಿತವಾಗಿರುವುದರಿಂದ. ಈ ಅಭಿಪ್ರಾಯದಿಂದ 'ಭಗವತಾ ಬಾದರಾಯಣೇನ ಪ್ರಣೀತಂ' ಎಂದಿದ್ದಾರೆ. ಇಲ್ಲಿ ಭಗವತಾ ಎಂಬ ಶಬ್ದಕ್ಕೆ ಪ್ರೇಕ್ಷಾವತಾ ಎಂದರ್ಥ.

ಇದರ ಭಾವ – ಬ್ರಹ್ಮಮೀಮಾಂಸಾಶಾಸ್ತ್ರವನ್ನು ಬಾದರಾಯಣರು ರಚನೆಮಾಡಿರುವುದು. ಹಾಗೂ ಬಾದರಾಯಣರಲ್ಲಿ ಪ್ರೇಕ್ಷಾವತ್ವವು ಅನೇಕ ಪ್ರಮಾಣಗಳಿಂದ ಸಿದ್ಧವಾದ್ದರಿಂದ ಇದನ್ನು ಸಾಧಿಸುವ ಪ್ರಮಾಣ ಹೇಳಬೇಕಾಗಿದೆಯೇನು? ಬೇಕಾಗಿಲ್ಲ. ಅಲ್ಲದೆ ಮುಂದೆ ಇದರ ಬಗ್ಗೆ ಸ್ಪಷ್ಟತೆ ಕೂಡ ಸಿಗುವುದು. ಇನ್ನು ಶ್ರೋತ್ರಾನುಕೂಲ್ಯವನ್ನು 'ಪ್ರಾಣಿನಾಂ' ಎಂಬುವುದರಿಂದ ಅನುವಾದ

ಮಾಡಿದ್ದಾರೆ. 'ಪ್ರಾಣಿನಾಂ ನಿಃಶ್ರೇಯಸಾಯ' ಎಂಬಲ್ಲಿ 'ನಿಃಶ್ರೇಯಸ' ಪದದ ಹತ್ತಿರ ಉಚ್ಚಾರಣೆ ಮಾಡಿರುವ 'ಪ್ರಾಣಿ' ಪದವು ಮುಕ್ತಿಯೋಗ್ಯರಾದ ಜೀವರನ್ನೇ ಹೇಳುತ್ತಿದೆ. ಮುಕ್ತಿಯೋಗ್ಯಜೀವರ ಸ್ವರೂಪವಾದರೋ ತತ್ವಜ್ಞಾನಾತ್ಮಕವಾಗಿರುವುದು ಹಾಗೂ ಅನಾದಿಕಾಲದಿಂದ ಭಗವತ್ಪ್ರೀತಿಗೆ ಪಾತ್ರವಾಗಿರುವುದು ಮುಂದೆ ಹೇಳುವ ಅನೇಕಪ್ರಮಾಣಗಳಿಂದ ಸಿದ್ಧವಾಗಿದೆ.

ಪ್ರಸಂಗಾನುಕೂಲ್ಯವನ್ನು 'ನಿಃಶ್ರೇಯಸಾಯ' ಎನ್ನುವುದರಿಂದ ಅನುವಾದ ಮಾಡಿದ್ದಾರೆ. ಇದರಿಂದ ಪ್ರೇಕ್ಷಾವತ್ಪ್ರಣೀತತ್ವನಿಶ್ಚಯವಿದ್ದಾಗಲೂ ವಿಷಹರ ಮಂತ್ರದಂತೆ ಜಪಾದಿಗಳ ಮೂಲಕ ಅಭ್ಯುದಯಸಿದ್ಧಿಗಾಗಿ ಬ್ರಹ್ಮಸೂತ್ರವನ್ನು ನಿರ್ಮಾಣಮಾಡಿದ್ದಾರೆ ಎನ್ನಬಹುದಲ್ಲವೇ? ಎಂಬ ಆಕ್ಷೇಪವನ್ನು ನಿರಾಕರಣೆ ಮಾಡಿದಂತಾಯಿತು. ಅಭ್ಯುದಯಾದಿ ಅಮುಖ್ಯಪ್ರಯೋಜನವು ಕೇವಲ ಜಪಾದಿಗಳಿಂದ ಸಿದ್ಧವಾದರೂ ನಿಃಶ್ರೇಯಸ ಎಂಬ ಮುಖ್ಯಪ್ರಯೋಜನವು ಅರ್ಥವಿವಕ್ಷಾಪೂರ್ವಕತ್ವವಿಲ್ಲದೇ ಕೇವಲ ಜಪದಿಂದ ಕೂಡುವುದಿಲ್ಲ. ಮೋಕ್ಷವಾದರೋ ಭಗವತ್ಪ್ರಸಾದದಿಂದ ಮಾತ್ರ ಸಿಗುವುದು.

## ಭಗವತ್ಪ್ರಸಾದವೇ ಸಂಸಾರಮೋಚಕ

'ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್ ಅಸ್ಮಾತ್ ಸಂಸಾರಾತ್ ಮುಚ್ಯತೇ ನಾಪರೇಣ'
ನಾರಾಯಣೋಽಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ॥

— ನಾರಾಯಣಶ್ರುತಿ (ವಿಷ್ಣುತತ್ವವಿನಿರ್ಣಯ)

ಎಂದು ಶ್ರುತಿಯಿರುವುದರಿಂದ. — "ಯಸ್ಯ = ಯಾವ ಭಗವಂತನ, ಪ್ರಸಾದಾತ್ = ಅನುಗ್ರಹದಿಂದ, ಪರಮಾರ್ತಿರೂಪಾತ್ = ಅತ್ಯಂತ ದುಃಖರೂಪದ, ಅಸ್ಮಾತ್ ಸಂಸಾರಾತ್ = ಈ ಸಂಸಾರದಿಂದ, ಮುಚ್ಯತೇ = ಬಿಡಲ್ಪಡುತ್ತಾನೆಯೋ, ಅಪರೇಣ = ಭಗವಂತನ ಅನುಗ್ರಹಕ್ಕಿಂತ ಬೇರೆ ಯಾವುದರಿಂದಲೂ, ನ ಮುಚ್ಯತೇ = ಈ ಸಂಸಾರದಿಂದ ಮುಕ್ತಿಯಾಗುವುದಿಲ್ಲ. ಹಾಗಾಗಿ ಅಮುಷ್ಮಾತ್ ಕರ್ಮಪಾಶಾತ್ = ಈ ಕರ್ಮರೂಪವಾದ ಕುಣಿಕೆಹಗ್ಗದಿಂದ, ಮುಮುಕ್ಷುಭಿಃ = ಮೋಕ್ಷವನ್ನು ಬಯಸುವವರಿಂದ, ಅಸೌ ಪರಮಃ ನಾರಾಯಣಃ = ಈ ಸರ್ವೋತ್ತಮನಾದ ನಾರಾಯಣನು, ವಿಚಿಂತ್ಯಃ = ವಿಶೇಷವಾಗಿ ಧ್ಯಾನಿಸಲ್ಪಡಬೇಕು.

## ಪ್ರಸಾದವಾದರೋ ಭಗವಂತನ ಗುಣೋತ್ಕರ್ಷಜ್ಞಾನದಿಂದ ಸಾಧ್ಯ.

'ನ ತಾದೃಶೀ ಪ್ರೀತಿರೀಢ್ಯಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ।
ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ ಸರ್ವ ಏವ'

— ಸೌಪರ್ಣಶ್ರುತಿ(ವಿಷ್ಣುತತ್ವವಿನಿರ್ಣಯ)

– ಎಂದು ಶ್ರುತಿ ಇರುವುದರಿಂದ. ಈಡ್ಯಸ್ಯ = ಎಲ್ಲ ಸಜ್ಜನರಿಂದಲೂ ಸ್ತೋತ್ರಮಾಡಲ್ಪಟ್ಟ, ವಿಷ್ಣೋಃ = ವಿಷ್ಣುವಿಗೆ, ಗುಣೋತ್ಕರ್ಷಜ್ಞಾತರಿ = ತನ್ನ ಗುಣಗಳು ಉತ್ಕೃಷ್ಟ ಎಂದು ತಿಳಿದವನಲ್ಲಿ, ಯಾದೃಶೀ ಪ್ರೀತಿಃ ಸ್ಯಾತ್ = ಎಂತಹ ಸಂತೋಷವುಂಟಾಗುವುದೋ, ತಾದೃಶೀ ಪ್ರೀತಿಃ = ಅಂತಹ ಸಂತೋಷವು ಬೇರೆಯವರಲ್ಲಿ, ನ = ಇರುವುದಿಲ್ಲ. ತತ್ಪ್ರೀಣನಾತ್ = ಭಗವಂತನನ್ನು ಸಂತೋಷ-ಪಡಿಸಿದಾಗ, ಸರ್ವಃ = ಎಲ್ಲ ಸಾತ್ವಿಕವರ್ಗವೂ ಮೋಕ್ಷಃ = ಮುಕ್ತಿಯನ್ನು, ಆಪ್ನೋತಿ = ಪಡೆಯುತ್ತದೆ. ತತಃ = ಈ ಎಲ್ಲ ಕಾರಣದಿಂದ, ಸರ್ವೇ ವೇದಾಃ = ಎಲ್ಲಾ ವೇದಗಳೂ ಕೂಡ, ತತ್ಪರಾಃ ಏವ = ಭಗವಂತನನ್ನೇ ಹೇಳುತ್ತಿವೆ.

ಗುಣೋತ್ಕರ್ಷಜ್ಞಾನವಾದರೋ, ಬ್ರಹ್ಮಮೀಮಾಂಸಾಶಾಸ್ತ್ರವು ಗುಣೋತ್ಕರ್ಷವಿವಕ್ಷಾಪೂರ್ವಕ-ವಾಗಿದೆ ಎಂದು ಹೇಳದೆ ಕೇವಲ ಬ್ರಹ್ಮಮೀಮಾಂಸಾಶಾಸ್ತ್ರದ ಜಪಾದಿಗಳಿಂದ ಹೇಗೆ ಸಿದ್ಧ-ವಾಗುತ್ತದೆ? ಹಾಗಾಗಿಯೇ ಭಗವತ್ಪ್ರಸಾದ ಹೇಗೆ ಆಗಲು ಸಾಧ್ಯ? ಹಾಗಾಗಿಯೇ ಹೇಗೆ ಮೋಕ್ಷ-ವಾಗಲು ಸಾಧ್ಯ ಎಂಬ ಪ್ರಶ್ನೆ ಉಳಿಯುತ್ತದೆ. ಇನ್ನು ಆಪ್ತವಾಕ್ಯತ್ವಾದಿ ಹೇತುಗಳಿಂದಲೇ ಈ ಬ್ರಹ್ಮಸೂತ್ರಕ್ಕೆ ಮೋಕ್ಷಾದಿ ಇಷ್ಟಪದಾರ್ಥಗಳಿಗೆ ಸಾಧನವಾದವುಗಳನ್ನು ತಿಳಿಸುತ್ತವೆ ಎಂಬುದು ಸಿದ್ಧವಾಗುತ್ತದೆ.

## ಶಾಸ್ತ್ರಕ್ಕೆ ವಿಷಯಾದಿಸಂಬಂಧದರ್ಶನ, ಆರಂಭಣೀಯತ್ವಸಮರ್ಥನೆ ಇತ್ಯಾದಿ

(ಲಘುರಸರಂಜನೀ) – ಏತೇನೈವಾಸ್ಯ ಶಾಸ್ತ್ರಸ್ಯ ವಿಷಯಾದಿಸಂಬಂಧೋ ದರ್ಶಿತೋ ಭವತಿ । ತತ್ರ 'ಬ್ರಹ್ಮಮೀಮಾಂಸಾ' ಇತಿ ಬ್ರಹ್ಮಪದೇನ ಪರಬ್ರಹ್ಮರೂಪವಿಷಯಸ್ಯ, 'ಪ್ರಾಣಿನಾಂ ನಿಃಶ್ರೇಯಸಾಯ' ಇತಿ ನಿಃಶ್ರೇಯಸಪದೇನ ಮೋಕ್ಷಾಖ್ಯಪ್ರಯೋಜನಸ್ಯ, 'ಪ್ರಾಣಿ'ಪದೇನ ಮೋಕ್ಷಯೋಗ್ಯರೂಪಾಧಿಕಾರಿಣಾಂ ಚ ಸಂಬಂಧಪ್ರದರ್ಶನಾದಿತಿ ಜ್ಞೇಯಮ್ । ತಥಾ ಚಾಸ್ಯ ಪ್ರೇಕ್ಷಾವತ್ಪ್ರವೃತ್ತಿವಿಷಯತ್ವಾದಾರಂಭಣೀಯತಾಽಪಿ ಸಮರ್ಥಿತಾ ಭವತಿ । ಏವಂ ಸೂತ್ರವ್ಯಾಖ್ಯಾನೇ ಭಾಷ್ಯಸಹಿತಾನುವ್ಯಾಖ್ಯಾನೇ ವ್ಯಾಪ್ತ್ಯೈವ ವ್ಯಾಖ್ಯೇಯಪ್ರಯೋಜಕಯಾಥಾರ್ಥ್ಯಾದಿಸಿದ್ಧ್ಯರ್ಥಂ ವ್ಯಾಖ್ಯೇಯಬ್ರಹ್ಮಮೀಮಾಂಸಾಶಾಸ್ತ್ರೇಽನುಪದವಕ್ಷ್ಯಮಾಣಮಪಿ ಯಾಥಾರ್ಥ್ಯಾದಿಕಮಾದಾವೇವಾ-ನೂದ್ಯ ಯಥಾ ವ್ಯಾಪ್ತ್ಯಾ ತತ್ಸಿದ್ಧಿಃ ತಸ್ಯಾಃ ಸಾಪವಾದತ್ವಾದಪವಾದವಿಷಯಂ ತತ್ಕಾರಣವಿಶೇಷಂ ಭಾಷ್ಯಕಾರೀಯವ್ಯಾಖ್ಯಾನೇಽಪವಾದಾಭಾವಪ್ರಯೋಜಕೀಭೂತಂ ತತೋ ವೈಲಕ್ಷಣ್ಯಂ ಚ ದರ್ಶಯತಿ — '**ಅಸಾಧು**' ಇತ್ಯಾರಭ್ಯ '**ಕರಿಷ್ಯನ್**' ಇತ್ಯಂತೇನ ॥

ತತ್ರ 'ಅಸಾಧುನಿಬಂಧೇ'ತ್ಯನೇನ ಅಸಾಧೂನಾಮ್ ಆಸುರಪ್ರಕೃತೀನಾಂ ಭಾರತೀವಿಜಯಾದೀನಾಂ ಸಂಬಂಧಿನೋ ಯೇ ನಿಬಂಧಾಃ ಸೂತ್ರವ್ಯಾಖ್ಯಾನರೂಪಾ ಏಕವಿಂಶತಿಭಾಷ್ಯಗ್ರಂಥಾ ಇತ್ಯಪ-

ವಾದವಿಷಯಾಃ ಅಸಾಧವಃ ಸೂತ್ರಾಚಾರ್ಯಾಭಿಪ್ರೇತಾರ್ಥವಿರುದ್ಧಾರ್ಥಪ್ರತಿಪಾದಕಾ ಯೇ ನಿಬಂಧಾ ಇತಿ ವಿಪರೀತಾರ್ಥಪ್ರತಿಪಾದಕತ್ವರೂಪಸ್ತತ್ಕಾರಣವಿಶೇಷಶ್ಚ ಪ್ರದರ್ಶಿತೋ ಭವತಿ । ನಿಬಂಧಾನಾಮಂಧತಮಸತ್ವೇನ ಬ್ರಹ್ಮಮೀಮಾಂಸಾಶಾಸ್ತ್ರಪ್ರತಿಬಂಧಕತ್ವೇನ ಚ ವರ್ಣನಮಪಿ ತಮೇವ ಕಾರಣವಿಶೇಷಂ ದ್ರಢಯತಿ । ಏತೇನ ಕಿಂಚಾಸ್ಯ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಅನ್ಯೈರೇವ ವ್ಯಾಖ್ಯಾತತ್ವಾತ್ ನ ಪುನರಿದಂ ಭಾಷ್ಯಕೃತಾ ವ್ಯಾಖ್ಯಾತವ್ಯಮಿತ್ಯೇತದಪಿ ನಿರಸ್ತಮ್ । ವ್ಯಾಖ್ಯಾತೃಣಾಮ್ ಅನ್ಯೇಷಾಮಸುರತ್ವೇನ ಮಿಥ್ಯಾಜ್ಞಾನಿತ್ವಾತ್ ತದ್ವ್ಯಾಖ್ಯಾನಸ್ಯ ವಿಪರೀತಾರ್ಥ-ಪ್ರತಿಪಾದಕತ್ವಾಚ್ಚೇತಿ ।

ಈ ಭಾಗದಿಂದಲೇ ಈ ಬ್ರಹ್ಮಸೂತ್ರಕ್ಕೆ ವಿಷಯ, ಪ್ರಯೋಜನ, ಅಧಿಕಾರಿ ಸಂಬಂಧಗಳನ್ನು ತೋರಿಸಿದಂತೆ ಆಗುವುದು; ಅದು ಹೀಗೆ — 'ಬ್ರಹ್ಮಮೀಮಾಂಸಾಶಾಸ್ತ್ರಂ' ಎಂಬಲ್ಲಿರುವ ಬ್ರಹ್ಮ-ಪದದಿಂದ ಪರಬ್ರಹ್ಮ ಎಂಬ ವಿಷಯವನ್ನು 'ಪ್ರಾಣಿನಾಂ ನಿಃಶ್ರೇಯಸಾಯ' ಎಂಬಲ್ಲಿನ ನಿಃಶ್ರೇಯಸ ಪದದಿಂದ ಮೋಕ್ಷವೆಂಬ ಪ್ರಯೋಜನವನ್ನು 'ಪ್ರಾಣಿ' ಎಂಬ ಪದದಿಂದ ಮೋಕ್ಷಯೋಗ್ಯರಾದ ಅಧಿಕಾರಿಗಳನ್ನು ಹಾಗೂ ಈ ಎಲ್ಲ ಪದಗಳಿಂದ ಸಂಬಂಧವನ್ನು ತೋರಿಸಿದ್ದಾರೆ. ಹಾಗಾಗಿ ಈ ಬ್ರಹ್ಮಸೂತ್ರವು ಪ್ರೇಕ್ಷಾವಂತರ ಪ್ರವೃತ್ತಿಗೆ ವಿಷಯವಾಗಿರುವುದರಿಂದ ಆರಂಭಣೀಯವಾಗಿದೆ ಎಂದು ಸಮರ್ಥಿಸಿದಂತಾಯಿತು.

ಈ ರೀತಿ ಬ್ರಹ್ಮಸೂತ್ರವ್ಯಾಖ್ಯಾನವಾದ ಭಾಷ್ಯಸಹಿತ ಅನುವ್ಯಾಖ್ಯಾನದಲ್ಲಿ ವಿಸ್ತಾರವಾಗಿಯೇ ಮೊದಲೇ ಮುಂದೆ ಹೇಳಲ್ಪಡುವ ಪ್ರಾಮಾಣ್ಯವನ್ನು ವ್ಯಾಖ್ಯೇಯವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ತಿಳಿಸುತ್ತಿದ್ದಾರೆ. ಈ ರೀತಿ ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಮಾಣ ಎಂದಾಗಿ ವ್ಯಾಖ್ಯೇಯವಾಯಿತು. ಇನ್ನು ಯಾವ ವ್ಯಾಪ್ತಿಯಿಂದ ಪ್ರಾಮಾಣ್ಯವು ಸಿದ್ಧವಾಗಿದೆಯೋ ಆ ವ್ಯಾಪ್ತಿ ಸಾಪವಾದವಾಗಿದ್ದು ಅಪವಾದಕ್ಕೆ ವಿಷಯವಾದದ್ದನ್ನು ಹಾಗೂ ಅದಕ್ಕೆ ಕಾರಣವನ್ನು ಅದೇ ರೀತಿ ಭಾಷ್ಯಕಾರರ ವ್ಯಾಖ್ಯಾನದಲ್ಲಿ ಇಲ್ಲದಿರುವುದಕ್ಕೆ ಪ್ರಯೋಜಕವನ್ನೂ, ಅಪವಾದವಿರುವ ಸ್ಥಳಕ್ಕಿಂತ ವೈಲಕ್ಷಣ್ಯ-ವನ್ನು ತೋರಿಸುತ್ತಾರೆ - 'ಅಸಾಧು' ಎಂದು ಆರಂಭಿಸಿ 'ಕರಿಷ್ಯನ್' ಎನ್ನುವವರೆಗೆ. ಅಲ್ಲಿ ಅಸಾಧುನಿಬಂಧ ಎನ್ನುವುದರಿಂದ ಅಸಾಧೂನಾಂ ಅಂದರೆ ಅಸುರಸ್ವಭಾವದವರಾದ ಭಾರತೀ-ವಿಜಯ ಮೊದಲಾದವರಿಗೆ ಸಂಬಂಧಪಟ್ಟ ಯಾವ ನಿಬಂಧಗಳು ಅಂದರೆ ಸೂತ್ರವ್ಯಾಖ್ಯಾನ-ರೂಪವಾದ ಇಪ್ಪತ್ತೊಂದು ಭಾಷ್ಯಗ್ರಂಥಗಳು ಇವೆಯೋ ಅವುಗಳೇ ಅಪವಾದ ವಿಷಯಗಳು. ಅಸಾಧುಗಳು. ಅರ್ಥಾತ್ ಸೂತ್ರಾಚಾರ್ಯರಿಗೆ ಅಭಿಪ್ರೇತವಾದ ಅರ್ಥಕ್ಕಿಂತ ವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವ ನಿಬಂಧಗಳಾಗಿವೆ. ಇದರಿಂದ ವಿಪರೀತ ಅರ್ಥವನ್ನು ಪ್ರತಿಪಾದನೆ ಮಾಡುವುದು ಎಂಬ ಅಂಶವನ್ನು ಹಾಗೂ ಅದಕ್ಕೆ ಕಾರಣವಾದದ್ದನ್ನು ತೋರಿಸಿದಂತೆ ಆಯಿತು.

ಹೀಗೆ ಹೇಳಿದ್ದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಬೇರೆಯವರೇ ವ್ಯಾಖ್ಯಾನ ಮಾಡಿದಮೇಲೆ ಮತ್ತೆ ಇದಕ್ಕೆ ಭಾಷ್ಯಕಾರರು ವ್ಯಾಖ್ಯಾನಮಾಡಿದ್ದು ಅನಾವಶ್ಯಕ ಎಂಬುದಕ್ಕೆ ಉತ್ತರ ಕೊಟ್ಟಂತಾಯಿತು. ಬೇರೆ ವ್ಯಾಖ್ಯಾಕರ್ತೃಗಳು ಅಸುರಸ್ವಭಾವದವರಾದ್ದರಿಂದ ಮಿಥ್ಯಾಜ್ಞಾನಿಗಳಾಗಿದ್ದಾರೆ. ಆದ್ದರಿಂದ ಅವರ ವ್ಯಾಖ್ಯಾನವು ವಿಪರೀತಾರ್ಥಪ್ರತಿಪಾದಕವಾಗಿದೆ. ಈ ಎರಡು ಕಾರಣದಿಂದ ಪುನಃ ಭಾಷ್ಯವನ್ನು ಆಚಾರ್ಯರು ಬರೆಯಬೇಕಾಗಿದೆ.

## ಪ್ರಾಮಾಣ್ಯವೆಂದರೆ ಯಥಾವಸ್ಥಿತಾರ್ಥಪ್ರತಿಪಾದಕತ್ವ

(ಲಘುರಸರಂಜನೀ) – 'ಯಥಾಚಾರ್ಯಾಭಿಪ್ರಾಯಮಸ್ಯ ಭಾಷ್ಯಂ ವಿಧಾಯಾನುಭಾಷ್ಯಮಪಿ ಕರಿಷ್ಯನ್' ಇತ್ಯನೇನ ಭಾಷ್ಯಕಾರೀಯವ್ಯಾಖ್ಯಾನೇ ಸೂತ್ರಾಚಾರ್ಯಾಭಿಪ್ರೇತಾರ್ಥಪ್ರತಿಪಾದಕತ್ವ ರೂಪಂ ತತೋ ವೈಲಕ್ಷಣ್ಯಂ ದರ್ಶಿತಮ್ । ತತ್ಸಂಭಾವನಾಯೋಕ್ತಮ್ – **ಭಗವಾನಾನಂದತೀರ್ಥಮುನಿರಿತಿ** ॥ ನನು ಆನಂದತೀರ್ಥಮುನಿರಪಿ ಭಾಷ್ಯಾನುಭಾಷ್ಯೇ ಚಕಾರೇತ್ಯತ ಉಕ್ತಮ್ – ಪ್ರಣೀತಮಪಿ ಬ್ರಹ್ಮಮೀಮಾಂಸಾಶಾಸ್ತ್ರಮ್ ಆಚಾರ್ಯಾಭಿಪ್ರೇತಾರ್ಥಜ್ಞಾನಾಜನಕತ್ವಾದ-ಪ್ರಣೀತಮಿವ ಮನ್ಯಮಾನ ಇತಿ ॥ ಅಭಿಪ್ರೇತಾರ್ಥಜ್ಞಾನಾಜನಕತ್ವೇ ಹೇತುಃ – ಅಸಾಧು-ನಿಬಂಧಾಂಧತಮಸೇನಾವಕುಂಠಿತತ್ವೇನ ಪ್ರತಿಬದ್ಧೇನೇತಿ ॥ ಕಿಂಚ ಯದಾ ಚೈವಮಪವಾದಾಭಾವೇ ವ್ಯಾಖ್ಯೇಯಯಾಥಾರ್ಥ್ಯಾದಿನೈವ ಸಿದ್ಧ್ಯತ್ಪ್ರಮಾಣ್ಯಾದಿಕಂ ಭಾಷ್ಯಾನುಭಾಷ್ಯಯೋರುಪಾದೇಯ-ತಯಾ ವ್ಯಾಖ್ಯೇಯತ್ವರೂಪೇಷ್ಟಸಿದ್ಧ್ಯೈವ ಭವತಿ । ತದಾ ಸುತರಾಂ ಸಾಕ್ಷಾತ್ಸ್ವಸ್ಮಿನ್ನೇವ ಸಿದ್ಧ್ಯತ್ಪ್ರಾಮಾಣ್ಯಾದಿಕಮ್ ಇತ್ಯಾಶಯೇನ ತಯೋಃ ಸಾಕ್ಷಾದಪಿ ಪ್ರಾಮಾಣ್ಯಾದಿ ದರ್ಶಯತಿ – **'ಪ್ರಾಣಿನಾಮ್'** ಇತ್ಯಾದಿನಾ **'ಕರಿಷ್ಯನ್'** ಇತ್ಯಂತೇನ ॥ ತತ್ರ ಭಾಷ್ಯಾನುಭಾಷ್ಯಯೋಸ್ತೇನೈವ ಪದೇನ ಭಾಷ್ಯತೇ ಯಥಾಸ್ಥಿತಂ ವರ್ಣ್ಯತೇ ಸೂತ್ರಾರ್ಥಜಾತಮನೇನೇತಿ ವ್ಯುತ್ಪತ್ತ್ಯಾ ಯಥಾ-ವಸ್ಥಿತಾರ್ಥಪ್ರತಿಪಾದಕತ್ವರೂಪಂ ಪ್ರಾಮಾಣ್ಯಂ ದರ್ಶಿತಂ ಭವತಿ ।

'ವೇದವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾಗಿ ಭಾಷ್ಯವನ್ನು ರಚನೆ ಮಾಡಿ ಅನುಭಾಷ್ಯವನ್ನೂ ರಚನೆ ಮಾಡಿ' ಎನ್ನುವುದರಿಂದ ಭಾಷ್ಯಕಾರರ ವ್ಯಾಖ್ಯಾನದಲ್ಲಿ ವೇದವ್ಯಾಸರಿಗೆ ಅಭಿಪ್ರೇತವಾದ ಅರ್ಥದ ಪ್ರತಿಪಾದನೆ ಮಾಡಿರುವುದನ್ನು ಕಾಣಬಹುದು. ಆದ್ದರಿಂದಲೇ ಬೇರೆ ಭಾಷ್ಯಗಳಿಂದ ಈ ಭಾಷ್ಯಕ್ಕೆ ವೈಲಕ್ಷಣ್ಯವನ್ನು ತೋರಿಸಿದಂತಾಯಿತು. ಈ ಅಂಶವು ಸಂಭಾವಿತ ಎಂದು ತಿಳಿಸಲು 'ಭಗವಾನ್ ಆನಂದತೀರ್ಥಮುನಿಃ' - ಎಂದಿದ್ದಾರೆ.

ಅಲ್ಲ! ಆನಂದತೀರ್ಥಮುನಿಗಳು ಭಾಷ್ಯಾನುಭಾಷ್ಯಗಳನ್ನು ಮಾಡಿದರು ಎಂಬುದಕ್ಕೆ ಪೋಷಕವಾಗಿ ಮುಂದಿನ ಅಂಶವನ್ನು ಹೇಳಿದ್ದಾರೆ. – ಬ್ರಹ್ಮಮೀಮಾಂಸಾಶಾಸ್ತ್ರವನ್ನು ವೇದವ್ಯಾಸರು ರಚನೆ

ಮಾಡಿದರು. ಆದರೂ ಅವರ ಅಭಿಪ್ರಾಯಕ್ಕೆ ಅನುಗುಣವಾದ ಅರ್ಥಜ್ಞಾನವು ಆ ಬ್ರಹ್ಮಸೂತ್ರ-ದಿಂದ ಬರದಂತೆ ಆಗಿದೆ. ಆದ್ದರಿಂದ ಬ್ರಹ್ಮಸೂತ್ರವು ಪ್ರಣೀತವಾದರೂ ಅಪ್ರಣೀತವಾದಂತೆ ತಿಳಿಯುತ್ತಾ - ಎಂದು ಸುಧಾದಲ್ಲಿ ಹೇಳಿದ್ದಾರೆ. ವೇದವ್ಯಾಸರಿಗೆ ಅಭಿಪ್ರೇತವಾದ ಅರ್ಥಜ್ಞಾನಬರಲು ಕಾರಣವೇನು? ಎಂದರೆ ಅಸಾಧುನಿಬಂಧಗಳೆಂಬ ಮಹಾ ಕತ್ತಲೆಯಿಂದ ಅವಕುಂಠಿತವಾಗಿರುವುದೇ ಆಗಿದೆ. ಅವಕುಂಠಿತ ಎಂದರೆ ಪ್ರತಿಬದ್ಧ. ಅಲ್ಲದೆ ಯಾವಾಗ ಹೀಗೆ ಅಪವಾದ ಇಲ್ಲದೇ ಇದ್ದಾಗ ಬ್ರಹ್ಮಸೂತ್ರದಲ್ಲಿ ಯಾಥಾರ್ಥ್ಯದಿಂದಲೇ ಪ್ರಾಮಾಣ್ಯಾದಿಗಳು ಸಿದ್ಧವಾದವೋ ಅಂತಹ ಇವುಗಳು ಭಾಷ್ಯಾನುಭಾಷ್ಯಗಳು ಉಪಾದೇಯತಯಾ ವ್ಯಾಖ್ಯೇಯ ಎಂಬ ಅಂಶದಿಂದಲೇ ಸಿದ್ಧವಾಗುತ್ತದೆ. ಹೀಗಾದಾಗ ಸುತರಾಂ ತನ್ನಲ್ಲಿಯೇ ಪ್ರಾಮಾಣ್ಯಾದಿಗಳು ಸಾಕ್ಷಾತ್ ಸಿದ್ಧವಾಗುತ್ತವೆ ಎಂಬ ಅಭಿಪ್ರಾಯದಿಂದ ಭಾಷ್ಯಾನುಭಾಷ್ಯಗಳಿಗೆ ಸಾಕ್ಷಾತ್ತಾಗಿಯೂ ಪ್ರಾಮಾಣ್ಯ ಮೊದಲಾದವುಗಳು ಸಿದ್ಧವಾಗುತ್ತವೆ. ಇದನ್ನು ತೋರಿಸಲು 'ಪ್ರಾಣಿನಾಂ' ಎಂದು ಪ್ರಾರಂಭಿಸಿ 'ಕರಿಷ್ಯನ್' ಎನ್ನುವವರೆಗೆ ಹೇಳಿದ್ದಾರೆ.

ಆ ಭಾಷ್ಯಾನುಭಾಷ್ಯಗಳಲ್ಲಿ ಭಾಷ್ಯ ಎಂಬ ಪದದಿಂದಲೇ ಪ್ರಾಮಾಣ್ಯವನ್ನು ತೋರಿಸಿದಂತೆ ಆಗುವುದು. ಭಾಷ್ಯತೇ ಅಂದರೆ ವಸ್ತು ಹೇಗಿದೆಯೋ ಹಾಗೆ ವರ್ಣಿಸಲ್ಪಡುತ್ತದೆ. ಯಾವುದನ್ನು ಎಂದರೆ ಸೂತ್ರಾರ್ಥ ಸಮೂಹವನ್ನು ಎಂದರ್ಥ. ಯಾವುದರಿಂದ ಎಂದರೆ ಸಾಧನದಿಂದ. ಸಾಧನವಾದದ್ದು ಬ್ರಹ್ಮಸೂತ್ರಭಾಷ್ಯವೇ ಆಗಿದೆ.

## ಆಪ್ತವಾಕ್ಯತ್ವಕ್ಕೆ ಹೇತುವಾದ ವಕ್ತ್ರಾದ್ಯಾನುಕೂಲ್ಯಗಳು ಯಾವ ಪದಗಳಿಂದ ಜ್ಞಾಪಿತ

(ಲಘುರಸರಂಜನೀ) – 'ಆನಂದತೀರ್ಥಃ ಭಾಷ್ಯಂ ವಿಧಾಯ, ಅನುಭಾಷ್ಯಮಪಿ ಕರಿಷ್ಯನ್' ಇತ್ಯನೇನ ತದ್ಧೇತುರಾಪ್ತವಾಕ್ಯತ್ವಮ್ । ಆಪ್ತವಾಕ್ಯತಾಯಾಂ ಹೇತುಷು ತ್ರಿಷು 'ಭಗವಾನ್'– 'ಮುನಿಃ' ಇತ್ಯಾಭ್ಯಾಂ ಶಾಸ್ತ್ರಕರ್ತೃತ್ವಾರ್ಥಕೇನ ಆನಂದತೀರ್ಥಪದೇನ ಚ ವಕ್ತ್ರಾನುಕೂಲ್ಯಮ್ । 'ಪ್ರಾಣಿನಾಂ' ಇತ್ಯನೇನ ಶ್ರೋತ್ರಾನುಕೂಲ್ಯಮ್ । 'ಅಸಾಧುನಿಬಂಧ-ಅಂಧತಮಸಾವ-ಕುಂಠಿತತ್ವೇನ ಅಪ್ರಣೀತಮಿವ ಮನ್ಯಮಾನಃ ಯಥಾಚಾರ್ಯಾಭಿಪ್ರಾಯಮ್' ಇತ್ಯನೇನ ಪ್ರತಿಬಂಧನಿರಾಸಪೂರ್ವಕಂ ಸಮ್ಯಗ್ ಜ್ಞಾನಜನನಲಕ್ಷಣಪ್ರಯೋಜನೋದ್ದೇಶರೂಪಂ ಪ್ರಸಂಗಾ-ನುಕೂಲ್ಯಮ್ । ಅಸ್ಯ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ವೇದಾರ್ಥನಿರ್ಣಾಯಕನ್ಯಾಯನಿಬಂಧನಾತ್ಮಕ ಶಾಸ್ತ್ರಸ್ಯೇತಿ ಯಾವತ್ । 'ಭಾಷ್ಯಂ ವಿಧಾಯಾನುಭಾಷ್ಯಮಪಿ ಕರಿಷ್ಯನ್' ಇತ್ಯನೇನ ಭಾಷ್ಯಾನು-ಭಾಷ್ಯಯೋರಪಿ ಶ್ರುತಿಮೂಲತ್ವಂ ಯುಕ್ತಿಮೂಲತ್ವಂ ಚ । ಪೂರ್ವವತ್ ಏತೈರೇವ ಹೇತುಭಿ-ರಿಷ್ಟಸಾಧನಾವಬೋಧಕತ್ವಂ ಚ । ಅನೇನ ಚಾಸ್ಯ ಯಾಥಾರ್ಥ್ಯೇ ಮಾನಮಸ್ತೀತ್ಯಾಶಂಕಾಯಾಃ

ಪರಿಹಾರಃ । 'ಭಗವಾನಾನಂದತೀರ್ಥಮುನಿಃ ಭಾಷ್ಯಂ ವಿಧಾಯಾನುಭಾಷ್ಯಮಪಿ ಕರಿಷ್ಯನ್' ಇತ್ಯನೇನ ಪ್ರೇಕ್ಷಾವತ್-ಪ್ರಣೀತತ್ವಂ ತತ ಏವಾರ್ಥವಿವಕ್ಷಾಪೂರ್ವಕತ್ವಂ ಚ ಭಾಷ್ಯಾದೌ ಪ್ರೇಕ್ಷಾವತ್ಪ್ರಣೀತತ್ವಂ ಸುಪ್ರಸಿದ್ಧಮಿತಿ ನಾನಿಶ್ಚಯಶಂಕಾವಕಾಶಃ । 'ನಿಃಶ್ರೇಯಸಾಯ' ಇತ್ಯನೇನ ಅಭ್ಯುದಯಮಾತ್ರಸಿದ್ಧ್ಯರ್ಥಮಪ್ರಣೀತತ್ವಂ ಚೇತ್ಯೇವಂ ವ್ಯಾಖ್ಯೇಯಗತಂ ಸರ್ವಮಪಿ ಯಥಾಯಥಂ ದರ್ಶಿತಂ ಭವತಿ । ಏತೇನ ತದ್ಭಾವೇಽಪಿ ತಥಾವಿಧವಾಕ್ಯಾಂತರಪರಿತ್ಯಾಗೇನಾಸ್ಯೈವ ವ್ಯಾಖ್ಯಾನೇ ಕಾರಣಂ ವಕ್ತವ್ಯಮಿತ್ಯೇತದಪಿ ನಿರಸ್ತಂ ಭವತಿ । ವ್ಯಾಖ್ಯೇಯಬ್ರಹ್ಮಮೀಮಾಂಸಾ-ಶಾಸ್ತ್ರವತ್ ಅನಯೋರಪಿ ಆಪ್ತವಾಕ್ಯತ್ವಾದಿಹೇತುತ್ರಯಾವಸಿತಾನುತ್ತಮಪ್ರಾಮಾಣ್ಯಾಖ್ಯಕಾರಣ-ಸದ್ಭಾವಾತ್ ।

ಇನ್ನು ಆಪ್ತವಾಕ್ಯತ್ವ ಎಂಬ ಹೇತುವು 'ಆನಂದತೀರ್ಥಃ ಭಾಷ್ಯಂ ವಿಧಾಯ ಅನುಭಾಷ್ಯಮಪಿ ಕರಿಷ್ಯನ್' ಎಂಬ ಭಾಗದಿಂದ ಸಿದ್ಧವಾಗುತ್ತದೆ. ಆಪ್ತವಾಕ್ಯತ್ವಕ್ಕೆ ಹೇತುಗಳು ಮೂರು - (1) ವಕ್ತ್ರಾನುಕೂಲ್ಯ (2) ಶ್ರೋತ್ರಾನುಕೂಲ್ಯ (3) ಪ್ರಸಂಗಾನುಕೂಲ್ಯ. ಇವುಗಳಲ್ಲಿ ವಕ್ತ್ರಾನುಕೂಲ್ಯವು 'ಭಗವಾನ್' 'ಮುನಿಃ' ಎಂಬ ಎರಡು ಪದದಿಂದ ಹಾಗೂ ಶಾಸ್ತ್ರಕ್ಕೆ ಕರ್ತೃ ಎಂಬ ಅರ್ಥವನ್ನು ತಿಳಿಸುವ ಆನಂದತೀರ್ಥ ಎಂಬ ಪದದಿಂದ ಸಿದ್ಧವಾಗುವುದು. 'ಪ್ರಾಣಿನಾಂ' ಎಂಬುದರಿಂದ ಶ್ರೋತ್ರಾನುಕೂಲ್ಯ. 'ಅಸಾಧುನಿಬಂಧಅಂಧತಮಸಾವಕುಂಠಿತತ್ವೇನ ಅಪ್ರಣೀತಮಿವ ಮನ್ಯಮಾನಃ ಯಥಾಚಾರ್ಯಾಭಿಪ್ರಾಯಂ' ಎಂಬ ಭಾಗದಿಂದ ಪ್ರತಿಬಂಧಕನಿರಸನದ್ವಾರಾ ಸಮೀಚೀನಜ್ಞಾನ-ಜನನರೂಪವಾದ ಪ್ರಯೋಜನ ಉದ್ದೇಶರೂಪವಾದ ಪ್ರಸಂಗಾನುಕೂಲ್ಯವು ಸಿದ್ಧವಾಗುವುದು.

'ಅಸ್ಯ' - ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅರ್ಥಾತ್ ವೇದಾರ್ಥವನ್ನು ನಿರ್ಣಯಿಸುವ ನ್ಯಾಯ-ನಿಬಂಧನಾತ್ಮಕವಾದ ಶಾಸ್ತ್ರಕ್ಕೆ ಎಂದು.

'ಭಾಷ್ಯಂ ವಿಧಾಯ ಅನುಭಾಷ್ಯಮಪಿ ಕರಿಷ್ಯನ್' ಎಂಬುವುದರಿಂದ ಭಾಷ್ಯಾನುಭಾಷ್ಯಗಳು ಯುಕ್ತಿ-ಮೂಲ ಶ್ರುತಿಮೂಲ ಎಂದು ತಿಳಿಯುತ್ತದೆ. ಹಿಂದೆ ಹೇಳಿದಂತೆಯೇ ಇದೇ ಹೇತುಗಳಿಂದ ಇಷ್ಟಸಾಧನಾವಬೋಧಕತ್ವವು ಶಾಸ್ತ್ರಕ್ಕೆ ಇದೆ ಎಂದು ಸಿದ್ಧವಾಗುತ್ತದೆ. ಇದರಿಂದಾಗಿ ಬ್ರಹ್ಮ-ಸೂತ್ರವು ಯಥಾರ್ಥ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ ಎಂಬ ಶಂಕೆಗೆ ಪರಿಹಾರ ಸಿಕ್ಕಿದಂತಾ-ಯಿತು.

'ಭಗವಾನ್ ಆನಂದತೀರ್ಥಮುನಿಃ ಭಾಷ್ಯಂ ವಿಧಾಯ ಅನುಭಾಷ್ಯಮಪಿ ಕರಿಷ್ಯನ್' ಎಂಬ ಭಾಗದಿಂದ ಪ್ರೇಕ್ಷಾವತ್ಪ್ರಣೀತತ್ವ ಅದರಿಂದಲೇ ಅರ್ಥವಿವಕ್ಷಾಪೂರ್ವಕತ್ವಸಿದ್ಧವಾಗುವುದು. ಭಾಷ್ಯವಾದರೋ ಪ್ರೇಕ್ಷಾವಂತರಾದ ಆನಂದತೀರ್ಥರಿಂದ ಪ್ರಣೀತವಾಗಿದೆ ಎಂಬುದು ಸುಪ್ರಸಿದ್ಧ.

ಆದ್ದರಿಂದ ಪ್ರೇಕ್ಷಾವತ್ಪ್ರಣೀತತ್ವನಿಶ್ಚಯವಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ. 'ನಿಃಶ್ರೇಯಸಾಯ' ಎಂಬುವುದರಿಂದ ಕೇವಲ ಅಭ್ಯುದಯಸಿದ್ಧಿಗೋಸ್ಕರ ಎನ್ನುವುದನ್ನು ಹಾಗೂ ರಚನೆ ಮಾಡಿದರೂ ರಚನೆಮಾಡದಂತೆ ಆಗಿದೆ ಎನ್ನುವ ಅಂಶವನ್ನು ವ್ಯಾಖ್ಯಾನಮಾಡಿದಂತೆ ಆಯಿತು. ಈ ರೀತಿ ವ್ಯಾಖ್ಯೇಯದಲ್ಲಿರುವ ಎಲ್ಲಾ ಅಂಶಗಳನ್ನು ಸಮರ್ಥಿಸಿದಂತಾಯಿತು. ಇದರಿಂದ ಪ್ರಾಮಾಣ್ಯ- ವಿದ್ದರೂ ಬೇರೆ ವಾಕ್ಯವನ್ನು ಬಿಟ್ಟು ಇದೇ ವಾಕ್ಯವನ್ನು ವ್ಯಾಖ್ಯಾನಮಾಡುವುದಕ್ಕೆ ಕಾರಣವನ್ನು ಹೇಳಬೇಕು ಎಂಬ ಪ್ರಶ್ನೆಯನ್ನೂ ನಿರಾಕರಿಸಿದಂತೆ ಆಯಿತು. ವ್ಯಾಖ್ಯೇಯವಾದ ಬ್ರಹ್ಮಸೂತ್ರದಂತೆ ಭಾಷ್ಯಾನುಭಾಷ್ಯಗಳಿಗೂ ಆಪ್ತವಾಕ್ಯತ್ವಾದಿ ಮೂರು ಹೇತುಗಳಿಂದ ಅನುತ್ತಮಪ್ರಾಮಾಣ್ಯವು ಇರುವುದರಿಂದ ಇದನ್ನೇ ವ್ಯಾಖ್ಯಾನಮಾಡುವುದಕ್ಕೆ ಅನುತ್ತಮಪ್ರಾಮಾಣ್ಯ ಎಂಬ ಕಾರಣವನ್ನು ಹೇಳಿದಂತಾಯಿತು.

## ನಾರಾಯಣಪ್ರಣಾಮಾದಿವೈಯರ್ಥ್ಯಪರಿಹಾರ

(ಲಘುರಸರಂಜನೀ) – ಅತ್ರ ಪ್ರಸ್ತುತತ್ವಾದನುಭಾಷ್ಯಮಾತ್ರೇ ಪ್ರಾಮಾಣ್ಯಾದಿವ್ಯುತ್ಪಾದನಸ್ಯ ಸಂಗತತ್ವೇಽಪಿ ಪ್ರಸಂಗಾತ್ ಸಮಾನನ್ಯಾಯೇನ ಭಾಷ್ಯೇಽಪಿ ತದುಪಪಾದಯಿತುಮುಭಯೋ- ರ್ಗ್ರಹಣಮ್ । ತಥಾಪಿ ಸ್ವಪ್ರಣೀತಭಾಷ್ಯೇಣೈವ ಕೃತವ್ಯುತ್ಪಾದನಮಿದಂ ಶಾಸ್ತ್ರಮಿತಿ ಕಿಮನೇನ ವ್ಯುತ್ಪಾದನೇನ ಇತ್ಯಾಶಂಕಾಪರಿಹಾರಾಯೋಕ್ತಂ — 'ಭಗವಾನಾನಂದತೀರ್ಥಮುನಿರ್ಭಾಷ್ಯಂ ವಿಧಾಯ ಅನುಭಾಷ್ಯಮಪಿ ಕರಿಷ್ಯನ್' ಇತಿ ॥ ಪ್ರೇಕ್ಷಾವತ್ಪ್ರಣೀತತ್ವಾತ್ ಸಪ್ರಯೋಜನಮೇ- ವೇದಮ್ । ನ ಹಿ ಪ್ರೇಕ್ಷಾವಾನ್ ನಿಷ್ಪ್ರಯೋಜನೇ ಪ್ರವರ್ತತೇ । ತದ್ವಿಶೇಷಾವಧಾರಣಂ ತು 'ಅನ್ವಪಿ ಚಾಹಮೇವ' ಇತ್ಯತ್ರ ಭವಿಷ್ಯತೀತಿ ಭಾವಃ । ಏತೇನಾಸ್ಯ ದುರ್ಗಮಾರ್ಥತ್ವಂ ಚೋಕ್ತಂ ಭವತಿ । 'ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್' ಇತಿ ವಕ್ಷ್ಯಮಾಣ- ಮೂಲಸ್ಮಾರಕೇಣ **'ಭಾಷ್ಯಂ ವಿಧಾಯ'** ಇತಿ ಭಾಷ್ಯಪದೇನ ಬಹ್ವರ್ಥತ್ವಸ್ಯ ಸೂಚನಾದಿತಿ । ಅಸ್ಯ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಭಾಷ್ಯಂ ವಿಧಾಯ, **'ಅನುಭಾಷ್ಯಮಪಿ ಕರಿಷ್ಯನ್'** ಇತ್ಯನೇನ ಇಷ್ಟಾನಿಷ್ಟಪ್ರಾಪ್ತಿಪರಿಹಾರಸಾಧನವೇದನಹೇತುವೇದನಿರ್ಣಾಯಕಭಾಷ್ಯಾದಿತ್ವೇನಾಪಿ ಇಷ್ಟ- ಸಾಧನಾವಬೋಧಕತ್ವಂ ಸಿದ್ಧ್ಯತಿ । ತದೇವಂ ಪ್ರದರ್ಶಿತದಿಶಾ ಯಥಾಯಥಂ ವ್ಯಾಖ್ಯೇಯತ್ವ- ಪ್ರಯೋಜಕಸರ್ವಧರ್ಮೋಪೇತತ್ವಾತ್ ಸಿದ್ಧೇಽನುವ್ಯಾಖ್ಯಾನಸ್ಯ ವ್ಯಾಖ್ಯೇಯತ್ವೇ ಯದುಕ್ತಂ ತಥಾಪಿ ಭಾಷ್ಯಕೃತಾ ನಾರಾಯಣಪ್ರಣಾಮರೂಪಂ ಮಂಗಲಾಚರಣಮಯುಕ್ತಮಿತ್ಯಾದಿನಾ ನಾರಾಯಣಪ್ರಣಾಮಾದಿವೈಯರ್ಥ್ಯಂ ತತ್ಪರಿಹಾರಾಯೋಕ್ತಂ ವಿಲೀನಪ್ರಕೃತಿತಯಾ ಇತ್ಯಾದಿ ॥

ಯದ್ಯಪಿ ಇಲ್ಲಿ ಅನುಭಾಷ್ಯಮಾತ್ರ ಪ್ರಸಕ್ತ. ಹಾಗಾಗಿ ಕೇವಲ ಅಲ್ಲಿ ಪ್ರಾಮಾಣ್ಯವನ್ನು ವ್ಯುತ್ಪಾದನೆ ಮಾಡುವುದು ಸಂಗತ ಎನಿಸಿದರೂ ಪ್ರಸಂಗಾತ್ ಇದೇ ನ್ಯಾಯದಿಂದ ಭಾಷ್ಯದಲ್ಲೂ ಅದನ್ನು

ಉಪಪಾದನೆ ಮಾಡಲು ಎರಡನ್ನು ಗ್ರಹಿಸಿದ್ದು. ಆದರೂ ತಾವೇ ಭಾಷ್ಯರಚನೆ ಮಾಡಿ ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನ ಮಾಡಿದ ಮೇಲೆ ಪುನಃ ಈ ಅನುವ್ಯಾಖ್ಯಾನದ ರಚನೆ ಏಕೆ? ಎನ್ನುವ ಪ್ರಶ್ನೆಗೆ ಪರಿಹಾರವಾಗಿ – 'ಭಗವಾನ್ ಆನಂದತೀರ್ಥಮುನಿಃ ಭಾಷ್ಯಂ ವಿಧಾಯ ಅನುಭಾಷ್ಯಮಪಿ ಕರಿಷ್ಯನ್' ಎಂದು ಹೇಳಿದ್ದಾರೆ. ಪ್ರೇಕ್ಷಾವಂತರು ರಚನೆ ಮಾಡಿದ್ದರಿಂದ ಇದಕ್ಕೆ ಪ್ರಯೋಜನವಿದ್ದೇ ಇದೆ. ಏಕೆಂದರೆ ಪ್ರೇಕ್ಷಾವಂತರು ಪ್ರಯೋಜನವಿಲ್ಲದಿರುವ ಕಡೆ ಪ್ರವೃತ್ತಿ ಮಾಡುವುದಿಲ್ಲ. ಸರಿ. ಆ ಪ್ರಯೋಜನವಾದರೂ ಏನು? ಎಂಬ ಪ್ರಶ್ನೆಗೆ ಸ್ಪಷ್ಟನೆ 'ಅನ್ವಪಿ ಚಾಹಮೇವ' ಎಂಬಲ್ಲಿ ಸಿಗುತ್ತದೆ ಎಂದಭಿಪ್ರಾಯ. ಇದರಿಂದ ಇದು ದುರ್ಗಮಾರ್ಥ ಎಂದು ಹೇಳಲ್ಪಟ್ಟಂತೆಯೂ ಆಯಿತು.

'ಗ್ರಂಥೋಽಯಮಪಿ ಬಹ್ವರ್ಥಃ ಭಾಷ್ಯಂ ಚಾತ್ಯರ್ಥವಿಸ್ತರಂ' ಎಂದು ಮುಂದೆ ಹೇಳುವ ಮೂಲ-ವನ್ನು ಸ್ಮರಿಸುವ ಮೂಲಕ 'ಭಾಷ್ಯಂ ವಿಧಾಯ' ಎನ್ನುವ ಮಾತಿನಲ್ಲಿ ಭಾಷ್ಯಪದದಿಂದ ಬಹಳ ಅರ್ಥವಿದೆ ಎಂದು ಸೂಚನೆ ಮಾಡಿದ್ದಾರೆ. 'ಅಸ್ಯ' ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ 'ಭಾಷ್ಯಂ ವಿಧಾಯ ಅನುಭಾಷ್ಯಮಪಿ ಕರಿಷ್ಯನ್' ಎಂಬ ಭಾಗದಿಂದ ಇಷ್ಟಾನಿಷ್ಟಪ್ರಾಪ್ತಿಪರಿಹಾರಸಾಧನಗಳ ಜ್ಞಾನಕ್ಕೆ ಕಾರಣವಾದ ವೇದವನ್ನು ನಿರ್ಣಯಿಸುವ ಭಾಷ್ಯಾದಿಗಳು ಎಂಬ ಕಾರಣದಿಂದ ಇಷ್ಟಸಾಧನತಾ-ವಬೋಧಕವೂ (ತಿಳಿಸಿಕೊಡುವುದು) ಆಗಿದೆ. ಈ ರೀತಿ ಅನೇಕ ಕ್ರಮಗಳನ್ನು ತೋರಿಸುವ ಮೂಲಕ ಯಥಾಯೋಗ್ಯವಾಗಿ ವ್ಯಾಖ್ಯೇಯತ್ವಕ್ಕೆ ಬೇಕಾದ ಎಲ್ಲ ಧರ್ಮಗಳೂ ಇರುವುದರಿಂದ ಅನು-ವ್ಯಾಖ್ಯಾನವು ವ್ಯಾಖ್ಯೇಯ ಎಂದು ಸಿದ್ಧವಾಯಿತು. ಆಗರೂ ಭಾಷ್ಯಕಾರರು ನಾರಾಯಣ-ಪ್ರಣಾಮರೂಪವಾದ ಮಂಗಳಾಚರಣೆಯನ್ನು ಮಾಡಿದ್ದು ಸರಿಯಿಲ್ಲ ಎಂಬ ನಾರಾಯಣ-ಪ್ರಣಾಮಾದಿ ವೈಯರ್ಥ್ಯಶಂಕೆಗೆ ಪರಿಹಾರವಾಗಿ 'ವಿಲೀನಪ್ರಕೃತಿತಯಾ' ಎಂದಿದ್ದಾರೆ.

## ಮಂಗಲಾಚರಣೆಯ ಕರಣ ಹಾಗೂ ನಿಬಂಧನ ಶಿಷ್ಯರಿಗಾಗಿ

(ಲಘುರಸರಂಜನೀ) – ತತ್ರ 'ವಿಲೀನಪ್ರಕೃತಿತಯಾ ಅಂತರಾಯವಿಧುರೋಽಪಿ ಅನವರತಮ್ ಈಶ್ವರಪ್ರವಣಕಾಯಕರಣವೃತ್ತಿರಪಿ' ಇತ್ಯನೇನ ಶಂಕಿತುಃ ಶಿಷ್ಯಸ್ಯ ಪ್ರತಿವಾದಿನೋ ವಾ ಮತಂ ಸ್ವಮತತ್ವಾದಂಗೀಕರೋತಿ । ನ ಹಿ ಪ್ರತಿವಾದ್ಯಪಿ ಸರ್ವಥಾಪ್ಯಪ್ರೇಕ್ಷವಾನ್ । ಅತ್ರ ನಾರಾಯಣ-ಪ್ರಣಾಮಾದಿಕಂ ಶಿಷ್ಯಾನ್ ಗ್ರಾಹಯಿತುಂ ಗ್ರಂಥಾದೌ ನಿಬಧ್ನಾತೀತ್ಯನ್ವಯಃ । ಆದಿಪದೇನ ಸ್ತುತಿರ್ಗ್ರಾಹ್ಯಾ । ಅನೇನ ಈಶ್ವರಸ್ತುತೇರಪಿ ಮಂಗಲತ್ವಾತ್ ತಾಂ ವಿಹಾಯ 'ನಮಾಮಿ' ಇತಿ ಪ್ರಣಾಮಮಾತ್ರಾಚರಣೇ ವಿಶೇಷಕಾರಣಾಭಾವ ಇತ್ಯಾಶಂಕಾಯಾಃ ಪರಿಹಾರಃ । ಶಿಷ್ಯಾನ-ಸನ್ನಿಹಿತಾನ್ ಸನ್ನಿಹಿತಾಂಶ್ಚ ಗ್ರಾಹಯಿತುಂ ಜ್ಞಾಪಯಿತುಂ ನಿಬಧ್ನಾತಿ ಪ್ರಣಾಮಾದಿಬೋಧಕಪದಾ ತ್ಮಕವರ್ಣಸಮುದಾಯೋಚ್ಚಾರಣರೂಪನಿಬಂಧನಂ ಕರೋತೀತ್ಯರ್ಥಃ । ಕಿಂ ವಿಶಿಷ್ಟಂ ಗ್ರಾಹ-ಯಿತುಮಿತ್ಯತ ಉಕ್ತಮ್– ಅವಶ್ಯಂ ಕರಣೀಯಮಿತಿ ॥ ಅವಶ್ಯಕರಣೀಯತ್ವವಿಶಿಷ್ಟಮಿತ್ಯರ್ಥಃ ।

ಕೇನ ಮಾನೇನಾವಶ್ಯಕರಣೀಯಮವಗತಮಿತ್ಯತ ಉಕ್ತಮ್ — **ಅವಿಗೀತಶಿಷ್ಟಾಚಾರಪರಂ-ಪರಯಾಽವಗತಮಿತಿ ॥**

ಇಲ್ಲಿ 'ವಿಲೀನಪ್ರಕೃತಿತಯಾ ಅಂತರಾಯವಿಧುರೋಽಪಿ ಅನವರತಮ್ ಈಶ್ವರಪ್ರವಣಕಾಯ-ಕರಣವೃತ್ತಿರಪಿ' ಎನ್ನುವುದರಿಂದ ಶಂಕೆಮಾಡುವವನಾದ ಶಿಷ್ಯನ ಅಥವಾ ಪ್ರತಿವಾದಿಯ ಮತವನ್ನು ತಮ್ಮ ಮತ ಎಂದು ಅಂಗೀಕರಿಸುತ್ತಾರೆ. ಏಕೆಂದರೆ ಪ್ರತಿವಾದಿಯೂ ಕೂಡ ಸರ್ವಥಾ ಪೆದ್ದ ಎಂದೇನಲ್ಲ. ಇಲ್ಲಿ ನಾರಾಯಣಪ್ರಣಾಮಾದಿಗಳನ್ನು ಶಿಷ್ಯರಿಗೆ ಶಿಕ್ಷಣಮಾಡಲು ಗ್ರಂಥದ ಮೊದಲಿಗೆ ನಿಬಂಧನಮಾಡುತ್ತಾರೆಂದು ಅನ್ವಯ. ಆದಿ ಎಂಬ ಪದದಿಂದ ಸ್ತುತಿಯನ್ನು ಗ್ರಹಿಸಬೇಕು. ಇದರಿಂದ ಈಶ್ವರಸ್ತುತಿಯೂ ಒಂದು ಮಂಗಳವೇ ಆದ್ದರಿಂದ ಅದನ್ನು ಬಿಟ್ಟು 'ನಮಾಮಿ' ಎಂದು ಕೇವಲ ನಮಸ್ಕಾರವನ್ನು ಮಾತ್ರ ಆಚರಿಸುವುದಕ್ಕೆ ವಿಶೇಷಕಾರಣವಿಲ್ಲ ಎಂಬ ಶಂಕೆಗೆ ಪರಿಹಾರ-ವನ್ನು ನೀಡಿದಂತಾಯಿತು.

ಹತ್ತಿರದಲ್ಲಿ ಇಲ್ಲದೇ ಇರುವ ಹತ್ತಿರದಲ್ಲಿ ಇರುವ ಶಿಷ್ಯರಿಗೆ ಶಿಕ್ಷಣವನ್ನು ನೀಡಲು 'ನಿಬಧ್ನಾತಿ' ಅಂದರೆ ಪ್ರಣಾಮಾದಿಗಳನ್ನು ತಿಳಿಸುವ ಪದಾತ್ಮಕವಾದ ವರ್ಣಸಮುದಾಯವನ್ನು ಉಚ್ಚಾರಣೆ ಮಾಡುವ ನಿಬಂಧನೆಯನ್ನು ಮಾಡುತ್ತಾರೆ ಎಂದರ್ಥ. ಮಂಗಳಾಚರಣೆಯನ್ನು ಮಾಡಲು ನಿಬಂಧನೆಯನ್ನು ಮಾಡಿದ್ದು ಎಂದರೆ ಅದಕ್ಕೆ ಹೇಳುತ್ತಾರೆ - ಅವಶ್ಯಂ ಕರಣೀಯಂ ಎಂದು. ಅವಶ್ಯಕರಣೀಯತ್ವವಿಶಿಷ್ಟವನ್ನಾಗಿ ತಿಳಿಸಲು ಹೇಳಿದ್ದು. ಅರ್ಥಾತ್ ಮಾಡಬೇಕಾದ ಮಂಗಲಾ-ಚರಣೆಯು ಅತ್ಯವಶ್ಯ ಎಂಬುದನ್ನು ತಿಳಿಸಲು ನಿಬಂಧನೆ ಮಾಡಿದ್ದು. ಯಾವ ಪ್ರಮಾಣದಿಂದ ಅವಶ್ಯ ಮಾಡಬೇಕೆಂಬುದು ತಿಳಿಯಿತು ಎನ್ನುವ ಪ್ರಶ್ನೆಗೆ ಉತ್ತರ — 'ಅವಿಗೀತಶಿಷ್ಟಾಚಾರಪರಂ-ಪರಯಾವಗತಂ' ಎಂದು.

## ಅವಿಗೀತಶಿಷ್ಟಾಚಾರಪರಂಪರಾವಗತಮ್

(ಲಘುರಸರಂಜನೀ) — ಅವಿಗೀತಃ ಸಂಪ್ರತಿಪನ್ನೋ ಯಃ ಶಿಷ್ಟಾನಾಂ ಪ್ರೇಕ್ಷಾವತಾಂ ವ್ಯಾಸಾ-ದೀನಾಮಾಚಾರೋ ನಾರಾಯಣಪ್ರಣಾಮಾದಿವಿಷಯಸ್ತಸ್ಯ ಯಾ ಪರಂಪರಾ ತದಾಚಾರಾತ್ ಮನ್ವಾದಿಶಿಷ್ಟಾಚಾರಸ್ತದಾಚಾರಾತ್ ತದನ್ಯಶಿಷ್ಟಾಚಾರ ಇತ್ಯೇವಂರೂಪಾ ತಥಾಽವಗತಮವಶ್ಯಂ ಕರಣೀಯಂ ಪ್ರಮಿತಮಿತ್ಯರ್ಥಃ ।

ಅವಿಗೀತಶಿಷ್ಟಾಚಾರಪರಂಪರಯಾ ಅವಗತಂ - ಅವಿಗೀತ = ಅಂದರೆ ಎಲ್ಲರಿಗೂ ಸಮ್ಮತವಿರು-ವುದು ಎಂದರ್ಥ. ಶಿಷ್ಟರು ಎಂದರೆ ಪ್ರೇಕ್ಷಾವಂತರಾದ ವೇದವ್ಯಾಸರೇ ಮೊದಲಾದವರು. ಅವರ ಆಚಾರ ಅಂದರೆ ನಾರಾಯಣಪ್ರಣಾಮ ಮೊದಲಾದವುಗಳನ್ನು ವಿಷಯೀಕರಿಸುವಂತಹದ್ದು. ಅದರ ಪರಂಪರೆಯ ಆಚಾರ ಎಂದರೆ ಮನು ಮುಂತಾದವರ ಆಚರಣೆ ಎಂದರ್ಥ.

## ಮಂಗಳವು ಅವಶ್ಯಕರಣೀಯ ಎಂಬ ಅಂಶದಲ್ಲೇ ತಾತ್ಪರ್ಯ

(ಲಘುರಸರಂಜನೀ) — ಕಿಂ ಫಲಸಾಧನತ್ವೇನಾವಗತಮ್ ಇತ್ಯತ ಉಕ್ತಂ — ಪ್ರಾರಿಪ್ಸಿತಸ್ಯಾನಂತ-ರಾಯಪರಿಸಮಾಪ್ತೇಃ ಪ್ರಚಯಸ್ಯ ಚ ಹೇತುತಯಾ ಇತಿ ॥ ಅಯಂ ಭಾವಃ — ನಿಬಂಧನೇನ ತಾವದ್ ಭಾಷ್ಯಕಾರೇಣ ಪ್ರಣಾಮಾದಿಕಂ ಕೃತಮಿತಿ ಅನುಮೀಯತೇ । ಅನ್ಯಥಾ ಪರಮಾಪ್ತಸ್ಯ ಪ್ರತಾರಕತ್ವಪ್ರಸಂಗಾತ್ । ತತೋಽಸ್ಮಾಭಿರಪಿ ತತ್ಕರಣೀಯಮಿತಿ ಶಿಷ್ಯೈಃ ಪ್ರಣಾಮಾದಿಕಂ ಕರಣೀಯಂ ಜ್ಞಾಯತೇ ।

'ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ' (ಭ.ಗೀ. 3-21)

ಇತ್ಯುಕ್ತೇಃ । ನನ್ವಸ್ತು ಉಪನಿಬಂಧನೇನ ಪ್ರಣಾಮಸ್ಯ ಗುರುಕೃತತ್ವಾನುಮಾನದ್ವಾರಾ ಸ್ವಕರಣೀಯ-ತ್ವಜ್ಞಾನಮಸನ್ನಿಹಿತಾನಾಮೇವ ಶಿಷ್ಯಾಣಾಮ್ । ನ ತು ಸನ್ನಿಹಿತಾನಾಮ್ । ತೇಷಾಂ ಪ್ರತ್ಯಕ್ಷತ ಏವ ದರ್ಶನೇನ ಸಾಕ್ಷಾದೇವ ತಜ್ಜ್ಞಾನಸಂಭವಾತ್ । ಅತಃ ಕಥಮುಭಯವಿಧಾನಪಿ ಶಿಷ್ಯಾನ್ ಪ್ರತಿ ನಿಬಂಧನೇನ ಕರಣೀಯತಾಮಾತ್ರಂ ಜ್ಞಾಪಯಿತುಮುದ್ಯತಾಃ । ಯೇನೈವಂ ಪರಿಚೋದನಾ ಸ್ಯಾತ್ । ಕಿಂ ನಾಮಾವಶ್ಯಕರಣೀಯತಾಮ್ ।

ಯಾವ ಫಲಕ್ಕೆ ಸಾಧನವಾಗಿ ಮಂಗಳವು ತಿಳಿಯಲ್ಪಟ್ಟಿದೆ ಎನ್ನುವುದಕ್ಕೆ ಉತ್ತರ — 'ಪ್ರಾರಿಪ್ಸಿತಸ್ಯ ಅನಂತರಾಯಪರಿಸಮಾಪ್ತೇಃ ಪ್ರಚಯಸ್ಯ ಚ ಹೇತುತಯಾ' ಎಂದು. ಅಭಿಪ್ರಾಯವಿದು - ನಿಬಂಧನ- ದಿಂದಲಾದರೂ ಭಾಷ್ಯಕಾರರು ಪ್ರಣಾಮಾದಿಗಳನ್ನು ಮಾಡಿದ್ದಾರೆ ಎಂದು ಅನುಮಾನ ಮಾಡಿಕೊಳ್ಳಬಹುದು. ಇಲ್ಲದಿದ್ದರೆ ಪರಮ ಆಪ್ತರಾದ ಅವರು ಮೋಸಗಾರರು ಎಂಬ ಪ್ರಸಂಗ ಬಂದೀತು। ಆದ್ದರಿಂದ ನಾವೂ ಕೂಡ ಮಂಗಳವನ್ನು ಮಾಡಬೇಕೆಂದು ಶಿಷ್ಯರಿಗೆ ಗೊತ್ತಾಗುತ್ತದೆ. ಹಾಗಾಗಿ ಪ್ರಣಾಮಾದಿಗಳು ಕರಣೀಯ ಎಂಬುದು ಸಿದ್ಧವಾಗುತ್ತದೆ. 'ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ' (ಗೀತಾ. 3-21) ಎಂಬ ಮಾತಿರುವುದರಿಂದ. ಇರಲಿ ಉಪನಿಬಂಧನದಿಂದ ಪ್ರಣಾಮವನ್ನು ಗುರುಗಳು ಮಾಡಿದ್ದಾರೆ ಎಂಬ ಅನುಮಾನದ ಮುಖಾಂತರ ತಾವೂ ಮಾಡಬೇಕು ಎನ್ನುವ ಜ್ಞಾನ. ಅಸನ್ನಿಹಿತಶಿಷ್ಯರಿಗೆ ಸರಿ. ಸನ್ನಿಹಿತ ಶಿಷ್ಯರಿಗಂತೂ ಬೇಕಾಗಿಲ್ಲ. ಏಕೆಂದರೆ, ಪ್ರತ್ಯಕ್ಷವಾಗಿಯೇ ಗುರುಗಳು ಮಂಗಳವನ್ನು ಆಚರಿಸಿರುವುದನ್ನು ನೋಡುವುದರಿಂದ. ಸಾಕ್ಷಾ-ತ್ತಾಗಿಯೇ ಮಂಗಳವನ್ನಾಚರಿಸಬೇಕೆಂಬ ಜ್ಞಾನ ಬರುವುದರಿಂದ. ಆದ್ದರಿಂದ ಹೇಗೆ ನೀವು ಎರಡು ರೀತಿಯಾದ ಶಿಷ್ಯರನ್ನು ಕುರಿತು ನಿಬಂಧನದಿಂದ ಮಾಡಬೇಕೆಂದು ಗೊತ್ತಾಗುತ್ತದೆಂದು ಹೇಳಿದಿರಿ ಎಂದರೆ ಇದು ಉತ್ತರ — ಅವಶ್ಯವಾಗಿ ಮಾಡಬೇಕೆಂದು ತಿಳಿಸುವುದೇ ಇಲ್ಲಿ ಅಭಿಪ್ರೇತವಾಗಿದೆ. ಅದು ಹೀಗೆ - ನಾವು ಗುರುಗಳು ಮಾಡಿದ ನಿಬಂಧನೆಯಿಂದ ಕೇವಲ ಪ್ರಣಾಮಾದಿಗಳನ್ನು

ಮಾಡಬೇಕೆಂದು ತಿಳಿಸಲು ಹೊರಟಿದ್ದರೆ ಈ ರೀತಿಯ ಪ್ರಶ್ನೆಯನ್ನು ಕೇಳಿದ್ದು ಸರಿಯಾಗುತ್ತಿತ್ತು. ಆದರೆ ನಾವು ಹೇಳುತ್ತಿರುವುದು ಗುರುಗಳು ಮಾಡುವ ನಿಬಂಧನೆಯು 'ಮಂಗಳವು ಅವಶ್ಯ-ಕರಣೀಯ' ಎಂಬ ಅಂಶವನ್ನು ತಿಳಿಸುತ್ತಿದೆ ಎಂದು.

## ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ

** ಯದ್ಯದಾಚರತಿ - ಎಂಬ ಗೀತಾವಾಕ್ಯದ ಅರ್ಥ ಹೀಗಿದೆ — ಕಥಂ ಜ್ಞಾನಿನಾ ಕೃತೇನ ಕರ್ಮಣಾ ಲೋಕಃ ಸಂಗೃಹೀತಃ ಸ್ಯಾದ್? ಇತ್ಯತ ಉಚ್ಯತೇ ಯದ್ಯದಿತಿ ॥ ಇತರಃ = ಅಜ್ಞಾನೀ । ಸ ಶ್ರೇಷ್ಠೋ ಯತ್ ಪ್ರಮಾಣಂ ಪ್ರಮಾಣಮೇವ ಸದ್ ಯದ್ವಾಕ್ಯಾದಿಕಂ ಲೋಕೇನ ಪ್ರಮಾಣತಯಾಽನವಗತಂ ತತ್ ಪ್ರಮಾಣೀಕುರುತೇ ಪ್ರಮಾಣತಯಾ ಜ್ಞಾಪಯತೀತಿ ಯಾವತ್ ।

ಯದ್ವಾ ಯದ್ವಾಕ್ಯಾದಿಕಂ ಪ್ರಮಾಣಂ ಯಸ್ಮಿನ್ ತದ್ ಯತ್ಪ್ರಮಾಣಕಂ ಲೌಕಿಕಂ ವೈದಿಕಂ ವಾ ಕರ್ಮ ಕುರುತೇ । ಯತ್ಪ್ರಮಾಣೋಕ್ತಪ್ರಕಾರೇಣ ಜ್ಞಾನೀ ತಿಷ್ಠತೀತಿ ಯಾವತ್ । ಲೋಕಃ ತದನು-ವರ್ತತೇ - ತದೇವ ಪ್ರಮಾಣಮಿತಿ ಜ್ಞಾತ್ವಾ ತದುಕ್ತಪ್ರಕಾರೇಣ ಅನುತಿಷ್ಠತಿ — ಇತಿ ॥ (ಭಾವರತ್ನಕೋಶಃ)

— ಜ್ಞಾನಿಯು ಮಾಡುವ ಕರ್ಮದಿಂದ ಅದನ್ನು ಲೋಕದ ಜನರು ಸಂಗ್ರಹಮಾಡುವುದು ಹೇಗೆ? ಎನ್ನುವ ಪ್ರಶ್ನೆಗೆ "ಯದ್ಯದಾಚರತಿ" ಎಂಬ ಶ್ಲೋಕವು ಉತ್ತರ. ಇತರಃ ಎಂದರೆ ಅಜ್ಞಾನಿ ಎಂದರ್ಥ. ಜ್ಞಾನವಿಲ್ಲದವನು ಎಂದು. ಇವನು ಲೋಕದಲ್ಲಿ ಯಾವ ಶ್ರೇಷ್ಠವ್ಯಕ್ತಿಯು ಒಂದನ್ನು ಪ್ರಮಾಣ ಎಂದು ಒಪ್ಪಿ, ಲೌಕಿಕ ಜನರಿಗೆ ಪ್ರಮಾಣವೆಂದು ಗೊತ್ತಿಲ್ಲದಿರುವ ವಾಕ್ಯವನ್ನು ಪ್ರಮಾಣ ಎಂದು ಜ್ಞಾಪಿಸುತ್ತಾನೆ. ಅಥವಾ ಯಾವ ವಾಕ್ಯಾದಿಗಳನ್ನು ಪ್ರಮಾಣವಾಗಿ ಹೊಂದಿದ ಲೌಕಿಕ ವೈದಿಕ ಕರ್ಮಗಳನ್ನು ಮಾಡುತ್ತಾನೋ ಅಂದರೆ ಪ್ರಮಾಣಗಳು ಹೇಳಿದ ರೀತಿಯಲ್ಲಿ ಯಾವ ಜ್ಞಾನಿಯು ಅನುಷ್ಠಾನ ಮಾಡುವನೋ ಅದನ್ನೇ ಲೋಕದಲ್ಲಿರುವ ಜನರು ಪ್ರಮಾಣ ಎಂದು ಭಾವಿಸಿ ಅನುಷ್ಠಾನ ಮಾಡುತ್ತಾರೆ.

## ಅವಶ್ಯ ಹಾಗೂ ಶಿಷ್ಯಾನ್ ಎಂಬ ಸಾಮಾನ್ಯಪದಪ್ರಯೋಗದ ಔಚಿತ್ಯ

(ಲಘುರಸರಂಜನೀ) – ನ ಹಿ ಪ್ರತ್ಯಕ್ಷದರ್ಶನೇಽಪಿ ಸಾ ಜ್ಞಾತುಂ ಶಕ್ಯತೇ । ತತ್ರ ಯಾದೃಚ್ಛಿಕತ್ವ-ಸ್ಯಾಪಿ ಶಂಕನಾತ್ । ನಿಬಂಧನಕರಣೇ ತು ಸಾ ಜ್ಞಾತುಂ ಶಕ್ಯತ ಏವ । ಅನಾವಶ್ಯಕತ್ವಸ್ಯ ತದ-ಯೋಗಾತ್ ಕೃತಿವತ್ ನಿಬಂಧನಸ್ಯಾಪಿ ಪ್ರಮಾಣಾಂತರತ್ವಾಚ್ಚ । ಪ್ರಮಾಣಸಂಪ್ಲವಶ್ಚಾವಶ್ಯಕತ್ವ-ಜ್ಞಾಪಕ ಇತಿ ಸುಪ್ರಸಿದ್ಧಮೇವೇತಿ । ತಥಾ ಚ ಸನ್ನಿಹಿತಾನಾಮಾವಶ್ಯಕತ್ವಸ್ಯ ಅಸನ್ನಿಹಿತಾನಾಂ ಚಾವಶ್ಯಕತ್ವಕರಣೀಯತ್ವಯೋರುಭಯೋರಪೀತಿ ವಿಶಿಷ್ಟಸ್ಯೋಭಯವಿಧಾನ್ ಪ್ರತ್ಯಪಿ ನಿಬಂಧೇ-

ನೈವ ಜ್ಞಾಪಿತತ್ವಾತ್ ಕಾಽತ್ರ ಕಥಂತೇತಿ । ಅತ ಏವಾವಶ್ಯಮಿತಿ ಶಿಷ್ಯಾನಿತಿ ಸಾಮಾನ್ಯಪದಂ ಚ ಪ್ರಯುಕ್ತಮಿತಿ ಜ್ಞೇಯಮ್ ।

ಈ ಅವಶ್ಯಕರಣೀಯತ್ವವು ಪ್ರತ್ಯಕ್ಷತಃ ಶಿಷ್ಯರು ನೋಡಿದಾಗಲೂ ತಿಳಿಯಲು ಅಸಾಧ್ಯ. ಗುರುಗಳು ಆಕಸ್ಮಿಕವಾಗಿ ಮಾಡಿದ್ದಾರೆಂದು ಶಂಕಿಸಬಹುದಾದ್ದರಿಂದ. ನಿಬಂಧನೆ ಮಾಡಿದರೆ ಅದು ತಿಳಿಯಲು ಸಾಧ್ಯವೇ. ಅನಾವಶ್ಯಕವಾದರೆ ಅದನ್ನು ಗ್ರಂಥದಲ್ಲಿ ಸೇರಿಸುವುದಿಲ್ಲ. ಅಲ್ಲದೆ ಪ್ರಯತ್ನದಂತೆ ಅರ್ಥಾತ್ ಆಚರಣೆ ಮಾಡುವಂತೆ ಅದರ ನಿಬಂಧನೆಯು ಒಂದು ಪ್ರಮಾಣವೇ ಆಗಿದೆ. ಒಂದೇ ವಿಷಯದಲ್ಲಿ ಅನೇಕ ಪ್ರಮಾಣಗಳ ಸಂಪ್ಲವವಿದ್ದರೆ (ಅನೇಕಪ್ರಮಾಣಗಳು ಸೇರಿದ್ದರೆ) ಅವಶ್ಯ ಎಂದು ಅರ್ಥವನ್ನು ಸೂಚಿಸುವುದು ಪ್ರಸಿದ್ಧವೇ ಆಗಿದೆ. ಹಾಗಾಗಿ ಸನ್ನಿಹಿತರಾದ ಹಾಗೂ ಅಸನ್ನಿಹಿತರಾದ ಶಿಷ್ಯರಿಗೆ ಮಂಗಳಾಚರಣೆಯು ಅವಶ್ಯ ಕರ್ತವ್ಯ ಎಂದು ನಿಬಂಧನೆಯಿಂದಲೇ ತಿಳಿಸಲ್ಪಟ್ಟಿದ್ದರಿಂದ ಇಲ್ಲಿ ಯಾವುದೇ ಪ್ರಶ್ನೆಗೆ ಅವಕಾಶವಿಲ್ಲ. ಆದ್ದರಿಂದಲೇ 'ಅವಶ್ಯಂ' ಎಂದು 'ಶಿಷ್ಯಾನ್' ಎಂದು ಸಾಮಾನ್ಯವಾಗಿ ಪದವನ್ನು ಪ್ರಯೋಗಿಸಿದ್ದಾರೆ.

## ಫಲವಿಲ್ಲದಿರುವಿಕೆಯು ಎಲ್ಲರಿಗೋ ಅಥವಾ ಆನಂದತೀರ್ಥಮುನಿಗಳಿಗೆ ಮಾತ್ರವೋ?

(ಲಘುರಸರಂಜನೀ) – ನನು ಫಲಪ್ರಮಾಣಯೋರಭಾವೇನ ಪ್ರಣಾಮಾದಿಕಸ್ಯೈವಾಕರಣೀಯ-ತ್ವಾತ್ ಕುತ್ರಾವಶ್ಯಕತಾ ಜ್ಞಾಪ್ಯತೇ । ನಿಬಂಧೇನಾಪೀತಿ ಚೇತ್, ಮೈವಮ್ । ಉಭಯೋರಪಿ ಭಾವಾತ್ । ತಥಾಹಿ – ಫಲಾಭಾವಸ್ತಾವತ್ ಕಿಂ ಸರ್ವೇಷಾಂ ಕಿಂ ವಾ ಆನಂದತೀರ್ಥ-ಮುನೇರೇವ? ನಾದ್ಯಃ । ಶಿಷ್ಯಾಣಾಮವಿಲೀನಪ್ರಕೃತಿತಯಾ ಸಾಂತರಾಯತ್ವೇನ ಪ್ರಾರಿಪ್ಸಿತಾಂತ-ರಾಯಪರಿಸಮಾಪ್ತ್ಯಾದೇಃ ಫಲಸ್ಯ ಭಾವಾತ್ । ನ ದ್ವಿತೀಯಃ । ತಸ್ಯ ವಿಲೀನಪ್ರಕೃತಿ-ತಯಾಂತರಾಯವಿಧುರತ್ವೇನ ಅನಂತರಾಯಪರಿಸಮಾಪ್ತ್ಯಾದಿಫಲಾಭಾವೇಽಪಿ ಶಿಷ್ಯಜ್ಞಾಪನ-ಫಲಸ್ಯೋಕ್ತತ್ವಾತ್ । ಶಿಷ್ಯಾರ್ಥಮಪಿ ಕರ್ತವ್ಯತ್ವಾಚ್ಚ । ಯತಃ 'ಮಂಗಲಾಚರಣಪುರಃಸರಾಣಿ ಶಾಸ್ತ್ರಾಣಿ ವೀರ್ಯವಂತಿ ಭವಂತಿ, ಆಯುಷ್ಮತ್ಪುರುಷಕಾಣಿ ಚ' ಇತಿ ವಕ್ಷ್ಯಮಾಣತ್ವಾತ್ । ನಾಪಿ ಪ್ರಮಾಣಾಭಾವಃ । ಶಿಷ್ಟಾಚಾರಸ್ಯ ತದನುಷ್ಠಿತಶ್ರುತೇರ್ವಾ ಪ್ರಮಾಣಸ್ಯ ಭಾವಾತ್ । ಶ್ರುತ್ಯನು-ಮಾನಪ್ರಕಾರಮ್ ಅವಿಗೀತಪದಪ್ರಯೋಜನಂ ಚ 'ತತ್ರ ತಾರೇ'ತ್ಯೇತದ್ವ್ಯಾಖ್ಯಾವಸರೇ ಸ್ವಯ-ಮೇವ ಸ್ಪಷ್ಟೀಕರಿಷ್ಯತಿ ।

ಅಲ್ಲ। ಪ್ರಯೋಜನ ಅಥವಾ ಪ್ರಮಾಣಗಳು ಇಲ್ಲದಿರುವುದರಿಂದ ಪ್ರಣಾಮಾದಿಗಳನ್ನು ಮಾಡಲೇ ಬೇಕಾಗಿಲ್ಲವಾದ್ದರಿಂದ ಅದರಲ್ಲಿ ಆವಶ್ಯಕತ್ವವನ್ನು ತಿಳಿಸುವುದಾದರೂ ಹೇಗೆ? ಅದಾದರೂ ನಿಬಂಧನೆಯಿಂದಲೇ ಎನ್ನುವುದಂತೂ ವಿಚಾರಮಾಡುವುದೇ ಬೇಕಾಗಿಲ್ಲ. ಎಂದರೆ ಇಲ್ಲ.

ಪ್ರಯೋಜನ ಹಾಗೂ ಪ್ರಮಾಣ ಎರಡೂ ಕೂಡ ಇದೆ. ಅದು ಹೀಗೆ – ಫಲ ಇಲ್ಲ ಎನ್ನುವುದು ಎಲ್ಲರಿಗೋ ಅಥವಾ ಆನಂದತೀರ್ಥಮುನಿಗಳಿಗೋ? ಎಲ್ಲರಿಗೂ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ, ಶಿಷ್ಯರಿಗೆ ಪ್ರಕೃತಿಬಂಧ ಇರುವುದರಿಂದ ವಿಘ್ನಗಳು ಉಂಟಾಗುತ್ತವೆ. ಹಾಗಾಗಿ ಅವರು ಮಾಡಿದ ಮಂಗಳಾನುಷ್ಠಾನಕ್ಕೆ ವಿಘ್ನಪರಿಹಾರವಾಗುವ ಮೂಲಕ ಸಮಾಪ್ತಿಯೇ ಫಲವಾಗಿದೆ. ಇನ್ನು ಆನಂದತೀರ್ಥಮುನಿಗಳಿಗೆ ಪ್ರಕೃತಿಬಂಧವಿದ್ದರೂ ಕಾರ್ಯಕಾರಿಯಲ್ಲವಾದ್ದರಿಂದ ವಿಘ್ನಗಳಿಲ್ಲ. ಹಾಗಾಗಿಯೇ ಅದರ ನಿವಾರಣೆಗಾಗಿ ಮಂಗಳಾನುಷ್ಠಾನವು ಬೇಕಾಗಿಲ್ಲ. ಆದರೆ ಅವರು ಮಾಡುವ ಮಂಗಳಾಚರಣೆಗೆ ಫಲ ಶಿಷ್ಯಜ್ಞಾಪನ,ಅಲ್ಲದೇ ಶಿಷ್ಯರಿಗೋಸ್ಕರ ನಿಬಂಧನೆ ಮಾಡಲೇಬೇಕು. ಅಲ್ಲದೇ ಮುಂದೆಯೂ 'ಯತಃ ಮಂಗಳಾಚರಣಪುರಸ್ಸರಾಣಿ ಶಾಸ್ತ್ರಾಣಿ ವೀರ್ಯವಂತಿ ಭವಂತಿ । ಆಯುಷ್ಮತ್ಪುರುಷಕಾಣಿ ಚ' ಎಂದು ಹೇಳಿದ್ದಾರೆ. ಇನ್ನು ಪ್ರಮಾಣವಿಲ್ಲ ಎನ್ನುವುದು ಸರಿಯಲ್ಲ. ಶಿಷ್ಟರ ಆಚರಣೆ ಅಥವಾ ಶಿಷ್ಟರ ಆಚಾರದಿಂದ ಅನುಮಾನಮಾಡಲ್ಪಟ್ಟ ಶ್ರುತಿಯೇ ಪ್ರಮಾಣವಾಗಿರುವುದರಿಂದ. ಶ್ರುತಿಯನ್ನು ಅನುಮಾನ ಮಾಡುವ ಕ್ರಮ ಹಾಗೂ ಅವಿಗೀತ ಎಂಬ ಪದದ ಪ್ರಯೋಜನವನ್ನು 'ತತ್ರ ತಾರಾಥಮೂಲತ್ವಂ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವಾಗ ಟೀಕಾಚಾರ್ಯರೇ ಸ್ಪಷ್ಟಪಡಿಸುತ್ತಾರೆ.

मङ्गलाचरणस्याविघ्नपरिसमाप्त्यादिहेतुत्वस्यापि अविगीतशिष्टाचारानुमितश्रुतिसिद्धत्वात् । न तावत्प्रेक्षावत्प्रवृत्तिर्विफला सम्भाविनी । नापि प्रयोजनान्तरार्था । दृष्टपरित्यागाददृष्टकल्पना-प्रसङ्गात् । कार्यमारिप्सुः खलु तत्समाप्त्यादिकं कामयत इत्यनुभवसिद्धम् । नच फलान्तरा-नुसन्धाने प्रमाणमस्ति । नचैतेषामियं साध्यसाधनभावप्रतीतिर्भ्रान्तिः । तथा सत्यविगानानु-पपत्तेः । नच प्रत्यक्षादेरत्रावकाश इति श्रुतिरेव शिष्टाचारमूलं कल्प्यते । (सुधा)

ಮಂಗಳಾಚರಣೆಯು ನಿರ್ವಿಘ್ನಪರಿಸಮಾಪ್ತಿ, ಪ್ರಚಯ ಮೊದಲಾದವುಗಳಿಗೆ ಕಾರಣ ಎಂದು ವಿಪ್ರತಿಪತ್ತಿ ಇಲ್ಲದ ಶಿಷ್ಟರ ಆಚರಣೆಯಿಂದ ಅನುಮಿತವಾದ ಶ್ರುತಿಯಿಂದ ಸಿದ್ಧವಾಗಿದೆ. ಅದು ಹೀಗೆ – ಬುದ್ಧಿವಂತರು ಪ್ರವೃತ್ತಿಮಾಡುವ ವಿಷಯದಲ್ಲಿ ಫಲ ಇಲ್ಲ ಎಂಬುದು ಅಸಂಭಾವಿತ. ಇನ್ನು ದೃಷ್ಟವಾದ ನಿರ್ವಿಘ್ನಸಮಾಪ್ತಿ ಮೊದಲಾದವುಗಳನ್ನು ಫಲ ಎಂದು ಹೇಳುವುದನ್ನು ಬಿಟ್ಟು ಅದೃಷ್ಟವಾದ ಬೇರೆಯ ಫಲವನ್ನು ಹೇಳಲು ಸಾಧ್ಯವಿಲ್ಲ. ಹಾಗಾಗಿ ಬೇರೆ ಪ್ರಯೋಜನಕ್ಕೋಸ್ಕರ ಶಿಷ್ಟರು ಮಂಗಲವನ್ನು ಆಚರಿಸುತ್ತಾರೆ ಎನ್ನುವುದೂ ಸರಿಯಲ್ಲ. ಏಕೆಂದರೆ, ಕಾರ್ಯವನ್ನು ಪ್ರಾರಂಭಮಾಡಲು ಇಚ್ಛೆಯಿರುವ ವ್ಯಕ್ತಿಯು ಅದರ ಸಮಾಪ್ತಿಯನ್ನು ಹಾಗೂ ಅದರ ಅಭಿವೃದ್ಧಿ-ಯನ್ನೇ ಬಯಸುವನು ಎನ್ನುವುದು ಅನುಭವಸಿದ್ಧವಾದದ್ದು. ಅಲ್ಲದೆ ಬೇರೆ ಫಲವನ್ನು ಅನು-ಸಂಧಾನ ಮಾಡುವುದಕ್ಕೆ ಯಾವುದೇ ಪ್ರಮಾಣವಿಲ್ಲ. ಇನ್ನು ಶಿಷ್ಟರಿಗೆ, ಮಂಗಲಾಚರಣೆಗೂ ಅವಿಘ್ನಪರಿಸಮಾಪ್ತಿಗೂ ಇರುವ ಕಾರ್ಯಕಾರಣಭಾವಜ್ಞಾನವು ಭ್ರಮೆಯೆಂದು ಹೇಳಲು

ಸಾಧ್ಯವಿಲ್ಲ. ಹಾಗಿದ್ದಲ್ಲಿ ಬಾಧಜ್ಞಾನ ಬರಬೇಕಾಗಿತ್ತು. ಇನ್ನು ಪ್ರತ್ಯಕ್ಷಾನುಮಾನಾದಿಗಳಿಗೆ ಅವಕಾಶವಿಲ್ಲ. ಆದ್ದರಿಂದ ಶ್ರುತಿಯೇ ಶಿಷ್ಟರು ಮಾಡುವ ಮಂಗಲಾಚರಣೆಗೆ ಮೂಲ ಎಂದು ಅನುಮಾನ ಮಾಡಲ್ಪಡುತ್ತದೆ.

## ಶಿಷ್ಟಾಚಾರಪರಂಪರೆಯು ಪ್ರಮಾಣ

(ಲಘುರಸರಂಜನೀ) – ನ ಚ ಲೀಲಯಾಪಿ ಕಸ್ಯಚಿಚ್ಛಿಷ್ಟಾಚಾರಸಂಭವಾತ್ ಸ ಕಥಂ ತತ್ರ ಪ್ರಮಾಣಮ್ ಇತಿ ವಾಚ್ಯಮ್ । ಶಿಷ್ಟಾಚಾರಪರಂಪರಾಯಾಃ ಪ್ರಮಾಣತ್ವಾತ್ । ನ ಹ್ಯನೇಕೇಷಾಂ ಪ್ರೇಕ್ಷಾವತಾಂ ಲೀಲಯಾ ಏಕವಿಧಾ ಪ್ರವೃತ್ತಿರುಪಲಭ್ಯೇತಿ । ಏತೇನ ಪ್ರಣಾಮಾದೇರ್ವಸ್ತುತೋಽವಶ್ಯಕರಣೀಯತ್ವಸದ್ಭಾವೇಽಸ್ತು ನಿಬಂಧನೇನ ತಜ್ಜ್ಞಾಪನಮ್ । ನ ಚ ತದಸ್ತಿ । ಪ್ರಮಾಣಾಭಾವಾತ್ । ನ ಹ್ಯಪ್ರಾಮಾಣಿಕಂ ಶಿಷ್ಯಾನ್ ಪ್ರತಿ ಜ್ಞಾಪಯಿತುಂ ಭವತೀತ್ಯೇತದಪಿ ಸಮಾಹಿತಂ ಭವತಿ । ಅಕರಣೀಯೇ ಶಿಷ್ಟಾಚಾರಾಯೋಗಾತ್ । ಅನಾವಶ್ಯಕೇ ತತ್ಪರಂಪರಾಯೋಗಾಚ್ಚೇತಿ ।

ನನು ತಥಾಪಿ ನಿಬಂಧನೇನ ಗ್ರಂಥಾದೌ ಭಾಷ್ಯಕೃತಾ ಪ್ರಣಾಮಾದಿಕಂ ಕೃತಮಿತಿ ನಾನುಮಾತುಂ ಶಕ್ಯತೇ । ತಸ್ಯ ಅನವರತಮೀಶ್ವರಪ್ರವಣಕಾಯಕರಣವೃತ್ತಿತ್ವೇನ ತದಾನೀಮೇವ ತತ್ಕೃತ್ಯನುಪಪತ್ತ್ಯಾ ಬಾಧಾದಿತಿ ಚೇನ್ನ । ಸರ್ವದಾ ವಿದ್ಯಮಾನಸ್ಯಾಪ್ಯುಕ್ತದಿಶಾ ಶಿಷ್ಯಜ್ಞಾಪನಾಯ ತದಾನೀಂ ಪ್ರಕಟಿತತ್ವಾತ್ । ಯತ್ಪೂರ್ವಂ ನಾಸ್ತಿ ತಸ್ಯೋತ್ಪಾದನಮೇವ ಕೃತಿರ್ಯದಸ್ತಿ ತಸ್ಯ ಪ್ರಕಟನಮೇವ ಸೇತಿ ನ ಬಾಧಃ । ಅತ ಏವ 'ನಮಾಮಿ' ಇತಿ ಮೂಲಾನುಸಾರಾತ್ 'ನಮನಾದಿಕಮ್' ಇತಿ ವಕ್ತವ್ಯೇ ಪ್ರಾಕಟ್ಯದ್ಯೋತನಾಯ 'ಪ್ರಣಾಮಾದಿಕಮ್' ಇತಿ ಪ್ರಶಬ್ದ ಇತಿ । ಅಧಿಕಂ ತು ಗುರ್ವ್ಯಾಂ ರಸರಂಜನ್ಯಾಂ ದ್ರಷ್ಟವ್ಯಮ್ ।

ಅಲ್ಲ! ಲೀಲೆಯಿಂದ ಯಾರೋ ಒಬ್ಬರ ಶಿಷ್ಟರ ಆಚರಣೆಯ ಸಂಭವವಿರುವುದರಿಂದ ಅವರ ಆಚಾರವು ಈ ವಿಷಯದಲ್ಲಿ ಪ್ರಮಾಣ ಹೇಗೆ? ಶಿಷ್ಟಾಚಾರಪರಂಪರೆಯೇ ಪ್ರಮಾಣ ಎಂದುತ್ತರ. ಅಂದರೆ ಒಬ್ಬ ಪ್ರೇಕ್ಷಾವಂತ ಲೀಲೆಯಿಂದ ಹಾಗೆ ಮಾಡಿದರೂ ಅನೇಕ ಪ್ರೇಕ್ಷಾವಂತರು ಲೀಲೆಯಿಂದ ಒಂದೇ ರೀತಿಯ ಪ್ರವೃತ್ತಿಯನ್ನು ಮಾಡುವರು ಎಂದು ಕಂಡಿಲ್ಲ. ಇದರಿಂದ ಪ್ರಣಾಮಾದಿಗಳು ವಸ್ತುತಃ ಅವಶ್ಯಕರಣೀಯವಾಗಿವೆ. ಅದನ್ನು ನಿಬಂಧನದಿಂದ ತಿಳಿಯಬಹುದು. ಆದರೆ ಅದು ಬೇಕಾಗಿಲ್ಲ. ಪ್ರಮಾಣವಿಲ್ಲವಾದ್ದರಿಂದ ಅಪ್ರಾಮಾಣಿಕವಾದದ್ದು ಶಿಷ್ಯರನ್ನು ಕುರಿತು ತಿಳಿಸಲು ಯೋಗ್ಯವಲ್ಲ ಎಂಬ ಪ್ರಶ್ನೆಗೂ ಸಮಾಧಾನ ಮಾಡಿದಂತೆ ಆಯಿತು. ಮಾಡಬಾರದ ಕಾರ್ಯವಾಗಿದ್ದರೆ ಶಿಷ್ಟರು ಅದನ್ನು ಆಚರಿಸುತ್ತಲೇ ಇರಲಿಲ್ಲ. ಅಲ್ಲದೇ ಅನಾವಶ್ಯಕವಾದ ಆ ಆಚರಣೆಯಲ್ಲಿ ಪರಂಪರೆಯೂ ಇರುತ್ತಿರಲಿಲ್ಲ.

ಇಷ್ಟಾದರೂ ನಿಬಂಧನದಿಂದ ಗ್ರಂಥದ ಮೊದಲಿಗೆ ಭಾಷ್ಯಕಾರರು ಪ್ರಣಾಮಾದಿಗಳನ್ನು ಮಾಡಿದ್ದಾರೆ ಎಂದು ಅನುಮಾನ ಮಾಡಲು ಸಾಧ್ಯವಿಲ್ಲ. ಏಕೆಂದರೆ ನಿರಂತರ ಈಶ್ವರನಲ್ಲಿಯೇ ಲಗ್ನವಾದ ಇಂದ್ರಿಯ ದೇಹವ್ಯಾಪಾರವುಳ್ಳವರು ಗ್ರಂಥದ ಮೊದಲಿಗೆ ಮಾತ್ರ ಮಂಗಳವನ್ನು ಮಾಡಿದ್ದಾರೆಂಬುದು ಬಾಧಿತವಲ್ಲವೇ? ನಿಜ. ಯಾವಾಗಲೂ ಮಂಗಳವನ್ನು ಆಚರಿಸುತ್ತಿದ್ದರೂ ಹಿಂದೆ ಹೇಳಿದ ಪ್ರಕಾರ ಶಿಷ್ಯರಿಗೆ ತಿಳಿಸಲು ಆಗ ಮಾತ್ರ ಪ್ರಕಟಮಾಡಿದ್ದಾರೆ. ಯಾವುದು ಮೊದಲಿಲ್ಲವೋ ಅದರ ಉತ್ಪತ್ತಿಯೇ ಕೃತಿ. ಯಾವುದಿದೆಯೋ ಅದನ್ನು ಪ್ರಕಟಿಸುವುದೇ ಕರ್ತವ್ಯ. ಆದ್ದರಿಂದ ಬಾಧವಿಲ್ಲ. ಆದ್ದರಿಂದಲೇ 'ನಮಾಮಿ' ಎಂಬ ಮೂಲಕ್ಕೆ ಅನುಸಾರವಾಗಿ ನಮನಾದಿಕಂ ಎಂದು ಹೇಳಬೇಕಾಗಿತ್ತು. ಹಾಗೆ ಹೇಳದೇ ಪ್ರಣಾಮಾದಿಕಂ ಎಂದು 'ಪ್ರ'ಎಂಬ ಶಬ್ದಸಹಿತವಾಗಿ ಹೇಳಿದ್ದು ಪ್ರಾಕಟ್ಯವನ್ನು ತಿಳಿಸಲೆಂದೇ ಎಂದು ಭಾವ. ಹೆಚ್ಚಿನ ವಿಷಯವನ್ನು ಗುರುರಸರಂಜನಿಯಲ್ಲಿ ಕಾಣಬೇಕು.

### ಮಂಗಲಾಚರಣೆ — ಅಭಿಮತದೇವತಾಸ್ತುತಿ

(ಪ್ರದೀಪ) – ನಾರಾಯಣಮಿತಿ ॥ ಮಂಗಲಾಚರಣಸ್ಯಾಭಿಮತದೇವತಾಸ್ತುತಿಲಕ್ಷಣಸ್ಯ ಕರ್ತವ್ಯ-ತಾಮಕರ್ತವ್ಯಭಾವಶಂಕಾನಿರಾಕರಣೇನೋಪಪಾದಯತಿ – ಭಗವತೇತ್ಯಾದಿನಾ ನಿಬಧ್ನಾತೀ-ತ್ಯಂತೇನ ಗ್ರಂಥೇನ ॥

ಮಂಗಳಾಚರಣ – ಎಂದರೆ ನಮಗೆ ಅಭಿಮತವಾದ ದೇವತಾಸ್ತುತಿ ಎಂದರ್ಥ. (ಪ್ರದೀಪಟಿಪ್ಪಣೀ)

## श्रीमदानन्दतीर्थभगवत्पादाचार्यविरचितम्
## श्रीमद्ब्रह्मसूत्रानुव्याख्यानम्

### ಅನುವ್ಯಾಖ್ಯಾನ ಮೊದಲನೆ ಪದ್ಯದ ಪ್ರತಿಪದಾರ್ಥ ಹಾಗೂ ಸಾರ

ओ३म् ॥ नारायणं निखिलपूर्णगुणैकदेहं
निर्दोषमाप्यतममप्यखिलैः सुवाक्यैः ।
अस्योद्भवादिदमशेषविशेषतोऽपि
वन्द्यं सदा प्रियतमं मम सन्नमामि ॥१ ॥

ನಿಖಿಲಪೂರ್ಣಗುಣೈಕದೇಹಂ – ನಿಖಿಲ - ಎಲ್ಲ(ಒಂದನ್ನೂ ಬಿಡದೆ) ಪೂರ್ಣ - ಪ್ರತ್ಯೇಕವಾಗಿ ಪ್ರತಿಯೊಂದು ಪೂರ್ಣವಾದ ಗುಣೈಕದೇಹಂ - ಗುಣವೇ ದೇಹವಾಗಿ ಉಳ್ಳ, ಅಪಿ = ಮತ್ತೆ ನಿರ್ದೋಷಂ - ಪರಾಧೀನತೆ ಮೊದಲಾದ ಎಲ್ಲ ದೋಷಗಳಿಂದ ರಹಿತನಾದ; ಅಖಿಲೈಃ ಅಪಿ -

ಎಲ್ಲ ಎಂದರೆ ಒಂದನ್ನೂ ಬಿಡದೆ ಅರ್ಥಾತ್ ಪ್ರತಿಯೊಂದೂ, ಸುವಾಕ್ಯೈಃ - ಅಪೌರುಷೇಯ-ವಾದ್ದರಿಂದ ಶೋಭನವಾದ ವೇದವಾಕ್ಯಗಳು ಹಾಗೂ ಅದನ್ನೇ ಮೂಲವಾಗಿಟ್ಟುಕೊಂಡು ಹೊರಟಿರುವ ಬ್ರಹ್ಮಸೂತ್ರ ಮುಂತಾದವುಗಳಿಂದ, ಆಪ್ಯತಮಂ - ಪರಮಮುಖ್ಯವೃತ್ತಿಯಿಂದ ತಿಳಿಯಲ್ಪಟ್ಟವನಾದ, ಅಸ್ಯ - ಪ್ರತ್ಯಕ್ಷಮುಂತಾದ ಪ್ರಮಾಣಗಳಿಂದ ಸಿದ್ಧವಾದ ಭಗವಂತನಿಗಿಂತ ಬೇರೆಯಾದ ಜಗತ್ತಿಗೆ, ಉದ್ಭವಾದಿ - ಉತ್ಪತ್ತಿ ಸ್ಥಿತಿ ಮೊದಲಾದವುಗಳನ್ನು, ದಂ - ನೀಡುವ, ಅಶೇಷವಿಶೇಷತೋಽಪಿ - ಅಶೇಷ - ಎಲ್ಲ ವಿಧವಾದ ಪ್ರತಿಯೊಂದು ವಿಶೇಷತಃ - ಅಸಾಧಾರಣ-ಧರ್ಮಗಳಿಂದ (ಅಥವಾ ಅಶೇಷ - ನಮಸ್ಕರಿಸಲು ಯೋಗ್ಯರೆಂದು ಎಲ್ಲರಿಗೂ ಸಮ್ಮತರಾದ ಸಕಲ ಲಕ್ಷ್ಮೀಬ್ರಹ್ಮಾದಿ- ದೇವತೆಗಳಿಂದ, ವಿಶೇಷತೋಽಪಿ - ಉತ್ತಮನಾದ್ದರಿಂದಲೂ ಕೂಡ), ವಂದ್ಯಂ - ನಮಸ್ಕರಿಸಲು ಯೋಗ್ಯನಾದ, ಮಮ - ನನಗೆ, ಸದಾ - ಯಾವಾಗಲೂ, ಪ್ರಿಯತಮಂ - ಅತ್ಯಂತ ಪ್ರೀತಿಪಾತ್ರನಾದ, ನಾರಾಯಣಂ - ನಾರಾಯಣನನ್ನು, (ಅಹಂ - ನಾನು ಅಂದರೆ ಮಧ್ವಾಚಾರ್ಯರು) ಸನ್ನಮಾಮಿ - ಭಕ್ತಿಜ್ಞಾನಾದಿಗಳಿಂದ ಸಹಿತನಾಗಿ ನಮಸ್ಕರಿಸುತ್ತೇನೆ.

ಸಾರ – ಆಚಾರ್ಯರು ಅನುವ್ಯಾಖ್ಯಾನದ ಮೊದಲಿಗೆ ಮಂಗಳವನ್ನು ಆಚರಿಸಿದ್ದಾರೆ. ತಮ್ಮ ಇಷ್ಟದೇವತೆಯಾದ ನಾರಾಯಣನಿಗೆ ಭಕ್ತಿಶ್ರದ್ಧಾಪೂರ್ವಕವಾಗಿ ನಮಸ್ಕರಿಸಿದ್ದಾರೆ. ಈ ನಾರಾಯಣನು ಸಕಲಗುಣಗಳನ್ನೇ ದೇಹವುಳ್ಳವನಾಗಿದ್ದಾನೆ. ಯಾವುದೇ ದೋಷಗಳಿಲ್ಲದಿರುವವನು. ಒಂದನ್ನೂ ಬಿಡದೆ ಸಮಗ್ರವೇದ ಹಾಗೂ ತನ್ಮೂಲಕವಾದ ಬ್ರಹ್ಮಸೂತ್ರ ಮೊದಲಾದವುಗಳು ಅವನನ್ನೇ ಮುಖ್ಯವಾಗಿ ಕೊಂಡಾಡುತ್ತವೆ. ಇವನು ಇಡೀ ಚೇತನಾಚೇತನಾತ್ಮಕಪ್ರಪಂಚಕ್ಕೆ ಉತ್ಪತ್ತಿ ಸ್ಥಿತಿ ಲಯ ನಿಯಮನ ಜ್ಞಾನ ಅಜ್ಞಾನ ಬಂಧ ಮೋಕ್ಷಗಳನ್ನು ಯಥಾಯೋಗ್ಯವಾಗಿ ನೀಡುವನು. ನಮಸ್ಕರಿಸಲು ಬೇಕಾದ ಎಲ್ಲ ಅಸಾಧಾರಣಧರ್ಮಗಳೂ ಅವನಲ್ಲಿವೆ. ಹಾಗೆ ನಮಸ್ಕಾರಮಾಡಲು ಯೋಗ್ಯರಾದ ಲಕ್ಷ್ಮೀಬ್ರಹ್ಮ-ಮೊದಲಾದ ದೇವತೆಗಳಿಂದಲೂ ವಂದ್ಯನಾಗಿದ್ದಾನೆ. ಕೊನೆಯದಾಗಿ ಎಲ್ಲ ಕಾಲದಲ್ಲಿಯೂ ನನಗೆ ಅಂದರೆ ಮಧ್ವಾಚಾರ್ಯರಿಗೆ ಅತ್ಯಂತಪ್ರೀತಿಪಾತ್ರನು ಎಂದು.

## ಶ್ರೀಪದ್ಮನಾಭತೀರ್ಥರ ಸನ್ನ್ಯಾಯರತ್ನಾವಲಿಟೀಕಾ – ಮಂಗಲಾಚರಣೆ

### ಪರಮಪ್ರಿಯನಿಗೆ ನಮಸ್ಕಾರ

ನಾರಾಯಣಮಸಂಖ್ಯೇಯಕಲ್ಯಾಣಗುಣವಿಗ್ರಹಮ್ ।
ವಂದೇ ಭಕ್ತ್ಯಾ ಸದಾ ಧ್ವಸ್ತದೂಷಣಂ ಪರಮಪ್ರಿಯಮ್ ॥

ಮೊದಲಿಗೆ ನಾರಾಯಣನಿಗೆ ನಮಸ್ಕರಿಸಿದ್ದಾರೆ. ನಾರಾಯಣಂ ವಂದೇ ಎಂದು. ಈ ನಮಸ್ಕಾರವಾ-

ದರೋ ಭಕ್ತಿಪೂರ್ವಕವಾಗಿ ಮಾಡುತ್ತಿದ್ದೇನೆ ಎಂದು ತಿಳಿಸಿ ನಾರಾಯಣನ ಬಗ್ಗೆ ಹೀಗೆ ಹೇಳಿದ್ದಾರೆ. ಒಟ್ಟು ಮೂರು ವಿಶೇಷಣಗಳನ್ನು ನಾರಾಯಣನಿಗೆ ನೀಡಿದ್ದಾರೆ. (1) ಅಸಂಖ್ಯೇಯಕಲ್ಯಾಣ-ಗುಣವಿಗ್ರಹ (2) ಸದಾ ಧ್ವಸ್ತದೂಷಣ (3) ಪರಮಪ್ರಿಯ ಎಂದು.

ಇದರ ಅರ್ಥ – (1) ಭಗವಂತನ ದೇಹವು ಎಂದರೆ ಜ್ಞಾನಾನಂದಾದಿಗುಣಗಳೇ ಆಗಿವೆ. ಗುಣಗಳಿಗೆ ಸಂಖ್ಯೆಯ ಮಿತಿಯೂ ಇಲ್ಲ. ಹಾಗೆಯೇ ಮಂಗಳಕರವಾದವುಗಳು. (2) ಇನ್ನು ಯಾವುದೇ ದೋಷಗಳು ಯಾವತ್ತೂ ಇವನಲ್ಲಿ ಇಲ್ಲ. (3) ನನಗೆ ಬಹಳಪ್ರಿಯ.

## ಬ್ರಹ್ಮಾದಿಗಳಿಗೂ ಬೇಕಾದ ವೇದವ್ಯಾಸರ ಪ್ರಸಾದ

ನಮೋ ಭಗವತೇ ತಸ್ಮೈ ವ್ಯಾಸರೂಪಾಯ ವಿಷ್ಣವೇ ।
ಯತ್ಪ್ರಸಾದಾತ್ ಪರಂ ಜ್ಞಾನಂ ಪ್ರಾಪ್ಯತೇ ವಿಬುಧಾದಿಭಿಃ ॥

ಇಲ್ಲಿ ವೇದವ್ಯಾಸರಿಗೆ ನಮಸ್ಕರಿಸಿದ್ದಾರೆ. "ವ್ಯಾಸರೂಪಾಯ ನಮಃ" ಎಂದು. ಈ ವೇದವ್ಯಾಸರು ಸಾಕ್ಷಾತ್ ಭಗವಂತನೇ ಆಗಿದ್ದಾರೆ. ಅರ್ಥಾತ್ ವಿಷ್ಣುವಿನ ಅವತಾರರೇ. ಹಾಗಾಗಿಯೇ ವೇದವ್ಯಾಸ-ರೂಪದಲ್ಲಿರುವ ಭಗವಂತನಾದ ವಿಷ್ಣುವಿಗೆ ನಮಸ್ಕಾರ ಎಂದಿದ್ದಾರೆ. ಇಂತಹ ವೇದವ್ಯಾಸರೂಪಿ-ಯಾದ ವಿಷ್ಣುವಿನ ಪ್ರಸಾದದಿಂದಲೇ ಉತ್ತಮವಾದ ಜ್ಞಾನವನ್ನು ಬ್ರಹ್ಮ ಮೊದಲಾದ ಎಲ್ಲ ದೇವತೆಗಳೂ ಹೊಂದುತ್ತಾರೆ.

## ವಿದ್ಯಾದಿವಾಕರರಾದ ಶ್ರೀಮದಾನಂದತೀರ್ಥರು

ಶ್ರೀಮದಾನಂದತೀರ್ಥಾಖ್ಯಾನ್ ಗುರೂನ್ ವಿದ್ಯಾದಿವಾಕರಾನ್ ।
ವಂದೇ ಕುದೃಷ್ಟಿದುರ್ಬೋಧವ್ಯಾಸಸಿದ್ಧಾಂತದೀಪಿಕಾನ್ ॥

ಇಲ್ಲಿ ಮಧ್ವಾಚಾರ್ಯರನ್ನು ನಮಸ್ಕರಿಸಿದ್ದಾರೆ. ಶ್ರೀಮದಾನಂದತೀರ್ಥಾಖ್ಯಾನ್ ಗುರೂನ್ ವಂದೇ ಎಂದು. ಇವರಿಗೆ ಎರಡು ವಿಶೇಷಣಗಳನ್ನು ನೀಡಿದ್ದಾರೆ. (1) ವಿದ್ಯಾದಿವಾಕರಾನ್ – ವಿದ್ಯೆಯ ವಿಷಯದಲ್ಲಿ ಅರ್ಥಾತ್ ಅದನ್ನು ಪ್ರಕಾಶಮಾಡುವುದರಲ್ಲಿ ಸೂರ್ಯನಂತೆ ಇದ್ದಾರೆ. (2) ಕುದೃಷ್ಟಿ-ದುರ್ಬೋಧವ್ಯಾಸಸಿದ್ಧಾಂತದೀಪಿಕಾನ್ – ವೇದವ್ಯಾಸರ ಸಿದ್ಧಾಂತಗಳು ಕೆಟ್ಟ ವ್ಯಾಖ್ಯಾನಗಳಿಂದ ತಿಳಿಯಲು ಅಸಾಧ್ಯವಾಗಿದ್ದು ಅದನ್ನು ಬೆಳಗಿಸಿದ ದೀಪ ನೀವು.

## ಅನುವ್ಯಾಖ್ಯಾ = ಹರಿತತ್ವಪ್ರಕಾಶಿಕಾ

ತತ್ಕೃತಾಂ ಬ್ರಹ್ಮಸೂತ್ರಾಣಾಮನುವ್ಯಾಖ್ಯಾಂ ಯಥಾಮತಿ ।
ವಿವೃಣೋಮ್ಯರ್ಥಗಂಭೀರಾಂ ಹರಿತತ್ವಪ್ರಕಾಶಿಕಾಮ್ ॥

ಇಲ್ಲಿ ಪ್ರತಿಜ್ಞೆ ಮಾಡುತ್ತಿದ್ದಾರೆ. ಅನುವ್ಯಾಖ್ಯಾಂ ವಿವೃಣೋಮಿ - ಅನುವ್ಯಾಖ್ಯಾನಕ್ಕೆ ವಿವರಣೆ ಮಾಡುತ್ತೇನೆ ಎಂದು. ಈ ಅನುವ್ಯಾಖ್ಯಾನವಾದರೋ ಬ್ರಹ್ಮಸೂತ್ರಗಳ ಅರ್ಥಪ್ರಕಾಶಕವಾಗಿದೆ. ಅರ್ಥದಲ್ಲಿ ಬಹಳ ಗಂಭೀರವಾದದ್ದು. ಹಾಗೂ ವಿಷ್ಣುವಿನ ಬಗ್ಗೆ ಚೆನ್ನಾಗಿ ಪ್ರಕಾಶಿಸುವುದು. ಆದರೆ ವಿವರಣೆ ಮಾಡಿದ್ದು ಮಾತ್ರ ನನ್ನ ಬುದ್ಧಿಗೆ ಅನುಗುಣವಾಗಿ ಸಂಪೂರ್ಣವಾಗಿ ವಿವರಣೆ ಮಾಡಲು ಅಸಾಧ್ಯ ಎಂದಭಿಪ್ರಾಯ.

## ನಿರ್ದೋಷ ಎಂದಿದ್ದೇಕೆ?

(ಸನ್ನ್ಯಾಯರತ್ನಾವಲಿ) — ಗುಣವತ್ತ್ವೇಽಪಿ ಚೇತನತ್ವೇನ ಹಿರಣ್ಯಗರ್ಭಾದಿವದ್ ದೋಷವತ್ತ್ವಂ ಮಾ ಭೂದಿತ್ಯುಕ್ತಮ್ - ನಿರ್ದೋಷಮಿತಿ ॥ .... ಅಶೇಷಾದ್ ವಿಶಿಷ್ಟತ್ವಾದಪಿ ವಂದ್ಯಮ್ । ಯೋ ಹಿ ಜನನಾದಿಕರ್ತಾ ಯಶ್ಚ ಗುಣಾಧಿಕಃ ಸ ಹಿ ವಂದ್ಯೋ ಭವತಿ । ಅತ ಏವಂ-ಭೂತತ್ವಾದೇವ ಪ್ರಿಯೇಭ್ಯಃ ಸ್ವಾತ್ಮಾದಿಭ್ಯಃ ಅತಿಶಯೇನ ಪ್ರಿಯಮ್ । ತೇಷಾಂ ಪ್ರಿಯತ್ವಾ-ಪಾದಕತ್ವಾತ್ ।

ನಿರ್ದೋಷಂ ಎಂದು ಅನುವ್ಯಾಖ್ಯಾನದಲ್ಲಿ ಏಕೆ ಹೇಳಿದ್ದಾರೆ? ಎನ್ನುವುದಕ್ಕೆ ವಿವರಣೆಯನ್ನು ನೀಡುತ್ತಿದ್ದಾರೆ — ಗುಣವತ್ತ್ವೇಽಪಿ ಎಂದು. ನಾರಾಯಣನಲ್ಲಿ ನಿಖಿಲಪೂರ್ಣಗುಣೈಕದೇಹಂ ಎಂಬ ವಿಶೇಷಣದಿಂದ ಗುಣಗಳಿವೆ ಎಂದು ತಿಳಿಯಿತು. ಆದರೆ ಗುಣಗಳಿದ್ದರೂ ನಾರಾಯಣನು ಒಬ್ಬ ಚೇತನನೇ ಆಗಿರುವುದರಿಂದ ಹಿರಣ್ಯಗರ್ಭ ಅಂದರೆ ಬ್ರಹ್ಮಮೊದಲಾದವರಲ್ಲಿ ಇರುವಂತೆ ದೋಷ ಇವನಲ್ಲೂ ಇದೆ ಎಂಬ ಸಂಶಯ ಬಂದರೆ ಇಲ್ಲ ಎಂದು ತಿಳಿಸಲು "ನಿರ್ದೋಷಂ" ಎಂದಿದ್ದಾರೆ.

ನಾರಾಯಣನು ಅಶೇಷವಿಶೇಷತೋಽಪಿ ವಂದ್ಯಂ ಎಂದು ಎಲ್ಲರಿಗಿಂತಲೂ ಉತ್ತಮನಾದ್ದರಿಂದ ನಮಸ್ಕರಿಸಲು ಯೋಗ್ಯ ಎಂದಿದ್ದಾರೆ. ಇದು ಸರಿಯೂ ಅಷ್ಟೇ.

ಏಕೆಂದರೆ ಲೋಕದಲ್ಲಿ ವ್ಯಾಪ್ತಿ ಹೀಗಿದೆ - ಯೋ ಹಿ ಜನನಾದಿಕರ್ತಾ ಯಶ್ಚ ಗುಣಾಧಿಕಃ ಸ ಹಿ ವಂದ್ಯೋ ಭವತಿ ಎಂದು. ಅಂದರೆ ಯಾರಿಗೆ ಯಾರು ಜನ್ಮಸ್ಥಿತಿ ಮೊದಲಾದವುಗಳನ್ನು ಹಾಗೂ ಯಾರು ಯಾರಿಗಿಂತ ಗುಣಗಳನ್ನು ಹೆಚ್ಚಾಗಿ ಹೊಂದಿದ್ದಾರೋ ಅವರೆಲ್ಲರೂ ನಮಸ್ಕರಿಸಲು ಯೋಗ್ಯರೇ ಆಗಿರುವರು.

ನಾರಾಯಣನಲ್ಲಿ ಜನನಾದಿ ಕರ್ತೃತ್ವ ಹಾಗೂ ಗುಣಾಧಿಕ್ಯ ಇರುವುದರಿಂದ ಪ್ರೀತಿಪಾತ್ರವಾದ ತಮ್ಮ ಸ್ವರೂಪಕ್ಕಿಂತಲೂ ಅವನೇ ಹೆಚ್ಚು ಪ್ರಿಯ. ಏಕೆಂದರೆ ಎಲ್ಲ ಪ್ರಿಯವಾದ ವಸ್ತುಗಳಲ್ಲಿ ಪ್ರಿಯತ್ವಬುದ್ಧಿಯನ್ನು ತಂದುಕೊಡುವವನು ಅವನೇ ಆದ್ದರಿಂದ.

ದರೋ ಭಕ್ತಿಪೂರ್ವಕವಾಗಿ ಮಾಡುತ್ತಿದ್ದೇನೆ ಎಂದು ತಿಳಿಸಿ ನಾರಾಯಣನ ಬಗ್ಗೆ ಹೀಗೆ ಹೇಳಿದ್ದಾರೆ. ಒಟ್ಟು ಮೂರು ವಿಶೇಷಣಗಳನ್ನು ನಾರಾಯಣನಿಗೆ ನೀಡಿದ್ದಾರೆ. (1) ಅಸಂಖ್ಯೇಯಕಲ್ಯಾಣ-ಗುಣವಿಗ್ರಹ (2) ಸದಾ ಧ್ವಸ್ತದೂಷಣ (3) ಪರಮಪ್ರಿಯ ಎಂದು.

ಇದರ ಅರ್ಥ — (1) ಭಗವಂತನ ದೇಹವು ಎಂದರೆ ಜ್ಞಾನಾನಂದಾದಿಗುಣಗಳೇ ಆಗಿವೆ. ಗುಣಗಳಿಗೆ ಸಂಖ್ಯೆಯ ಮಿತಿಯೂ ಇಲ್ಲ. ಹಾಗೆಯೇ ಮಂಗಳಕರವಾದವುಗಳು. (2) ಇನ್ನು ಯಾವುದೇ ದೋಷಗಳು ಯಾವತ್ತೂ ಇವನಲ್ಲಿ ಇಲ್ಲ. (3) ನನಗೆ ಬಹಳಪ್ರಿಯ.

## ಬ್ರಹ್ಮಾದಿಗಳಿಗೂ ಬೇಕಾದ ವೇದವ್ಯಾಸರ ಪ್ರಸಾದ

ನಮೋ ಭಗವತೇ ತಸ್ಮೈ ವ್ಯಾಸರೂಪಾಯ ವಿಷ್ಣವೇ ।
ಯತ್ಪ್ರಸಾದಾತ್ ಪರಂ ಜ್ಞಾನಂ ಪ್ರಾಪ್ಯತೇ ವಿಬುಧಾದಿಭಿಃ ॥

ಇಲ್ಲಿ ವೇದವ್ಯಾಸರಿಗೆ ನಮಸ್ಕರಿಸಿದ್ದಾರೆ. "ವ್ಯಾಸರೂಪಾಯ ನಮಃ" ಎಂದು. ಈ ವೇದವ್ಯಾಸರು ಸಾಕ್ಷಾತ್ ಭಗವಂತನೇ ಆಗಿದ್ದಾರೆ. ಅರ್ಥಾತ್ ವಿಷ್ಣುವಿನ ಅವತಾರರೇ. ಹಾಗಾಗಿಯೇ ವೇದವ್ಯಾಸ-ರೂಪದಲ್ಲಿರುವ ಭಗವಂತನಾದ ವಿಷ್ಣುವಿಗೆ ನಮಸ್ಕಾರ ಎಂದಿದ್ದಾರೆ. ಇಂತಹ ವೇದವ್ಯಾಸರೂಪಿ-ಯಾದ ವಿಷ್ಣುವಿನ ಪ್ರಸಾದದಿಂದಲೇ ಉತ್ತಮವಾದ ಜ್ಞಾನವನ್ನು ಬ್ರಹ್ಮ ಮೊದಲಾದ ಎಲ್ಲ ದೇವತೆಗಳೂ ಹೊಂದುತ್ತಾರೆ.

## ವಿದ್ಯಾದಿವಾಕರರಾದ ಶ್ರೀಮದಾನಂದತೀರ್ಥರು

ಶ್ರೀಮದಾನಂದತೀರ್ಥಾಖ್ಯಾನ್ ಗುರೂನ್ ವಿದ್ಯಾದಿವಾಕರಾನ್ ।
ವಂದೇ ಕುದೃಷ್ಟಿದುರ್ಬೋಧವ್ಯಾಸಸಿದ್ಧಾಂತದೀಪಿಕಾನ್ ॥

ಇಲ್ಲಿ ಮಧ್ವಾಚಾರ್ಯರನ್ನು ನಮಸ್ಕರಿಸಿದ್ದಾರೆ. ಶ್ರೀಮದಾನಂದತೀರ್ಥಾಖ್ಯಾನ್ ಗುರೂನ್ ವಂದೇ ಎಂದು. ಇವರಿಗೆ ಎರಡು ವಿಶೇಷಣಗಳನ್ನು ನೀಡಿದ್ದಾರೆ. (1) ವಿದ್ಯಾದಿವಾಕರಾನ್ — ವಿದ್ಯೆಯ ವಿಷಯದಲ್ಲಿ ಅರ್ಥಾತ್ ಅದನ್ನು ಪ್ರಕಾಶಮಾಡುವುದರಲ್ಲಿ ಸೂರ್ಯನಂತೆ ಇದ್ದಾರೆ. (2) ಕುದೃಷ್ಟಿ-ದುರ್ಬೋಧವ್ಯಾಸಸಿದ್ಧಾಂತದೀಪಿಕಾನ್ — ವೇದವ್ಯಾಸರ ಸಿದ್ಧಾಂತಗಳು ಕೆಟ್ಟ ವ್ಯಾಖ್ಯಾನಗಳಿಂದ ತಿಳಿಯಲು ಅಸಾಧ್ಯವಾಗಿದ್ದು ಅದನ್ನು ಬೆಳಗಿಸಿದ ದೀಪ ನೀವು.

## ಅನುವ್ಯಾಖ್ಯಾ = ಹರಿತತ್ತ್ವಪ್ರಕಾಶಿಕಾ

ತತ್ಕೃತಾಂ ಬ್ರಹ್ಮಸೂತ್ರಾಣಾಮನುವ್ಯಾಖ್ಯಾಂ ಯಥಾಮತಿ ।
ವಿವೃಣೋಮ್ಯರ್ಥಗಂಭೀರಾಂ ಹರಿತತ್ತ್ವಪ್ರಕಾಶಿಕಾಮ್ ॥

ಇಲ್ಲಿ ಪ್ರತಿಜ್ಞೆ ಮಾಡುತ್ತಿದ್ದಾರೆ. ಅನುವ್ಯಾಖ್ಯಾಂ ವಿವೃಣೋಮಿ - ಅನುವ್ಯಾಖ್ಯಾನಕ್ಕೆ ವಿವರಣೆ ಮಾಡುತ್ತೇನೆ ಎಂದು. ಈ ಅನುವ್ಯಾಖ್ಯಾನವಾದರೋ ಬ್ರಹ್ಮಸೂತ್ರಗಳ ಅರ್ಥಪ್ರಕಾಶಕವಾಗಿದೆ. ಅರ್ಥದಲ್ಲಿ ಬಹಳ ಗಂಭೀರವಾದದ್ದು. ಹಾಗೂ ವಿಷ್ಣುವಿನ ಬಗ್ಗೆ ಚೆನ್ನಾಗಿ ಪ್ರಕಾಶಿಸುವುದು. ಆದರೆ ವಿವರಣೆ ಮಾಡಿದ್ದು ಮಾತ್ರ ನನ್ನ ಬುದ್ಧಿಗೆ ಅನುಗುಣವಾಗಿ ಸಂಪೂರ್ಣವಾಗಿ ವಿವರಣೆ ಮಾಡಲು ಅಸಾಧ್ಯ ಎಂದಭಿಪ್ರಾಯ.

## ನಿರ್ದೋಷ ಎಂದಿದ್ದೇಕೆ?

(ಸನ್ನ್ಯಾಯರತ್ನಾವಲಿ) — ಗುಣವತ್ತ್ವೇಽಪಿ ಚೇತನತ್ವೇನ ಹಿರಣ್ಯಗರ್ಭಾದಿವದ್ ದೋಷವತ್ತ್ವಂ ಮಾ ಭೂದಿತ್ಯುಕ್ತಮ್ - ನಿರ್ದೋಷಮಿತಿ ॥ .... ಅಶೇಷಾದ್ ವಿಶಿಷ್ಟತ್ವಾದಪಿ ವಂದ್ಯಮ್ । ಯೋ ಹಿ ಜನನಾದಿಕರ್ತಾ ಯಶ್ಚ ಗುಣಾಧಿಕಃ ಸ ಹಿ ವಂದ್ಯೋ ಭವತಿ । ಅತ ಏವಂ-ಭೂತತ್ವಾದೇವ ಪ್ರಿಯೇಭ್ಯಃ ಸ್ವಾತ್ಮಾದಿಭ್ಯಃ ಅತಿಶಯೇನ ಪ್ರಿಯಮ್ । ತೇಷಾಂ ಪ್ರಿಯತ್ವಾ-ಪಾದಕತ್ವಾತ್ ।

ನಿರ್ದೋಷಂ ಎಂದು ಅನುವ್ಯಾಖ್ಯಾನದಲ್ಲಿ ಏಕೆ ಹೇಳಿದ್ದಾರೆ? ಎನ್ನುವುದಕ್ಕೆ ವಿವರಣೆಯನ್ನು ನೀಡುತ್ತಿದ್ದಾರೆ — ಗುಣವತ್ತ್ವೇಽಪಿ ಎಂದು. ನಾರಾಯಣನಲ್ಲಿ ನಿಖಿಲಪೂರ್ಣಗುಣೈಕದೇಹಂ ಎಂಬ ವಿಶೇಷಣದಿಂದ ಗುಣಗಳಿವೆ ಎಂದು ತಿಳಿಯಿತು. ಆದರೆ ಗುಣಗಳಿದ್ದರೂ ನಾರಾಯಣನು ಒಬ್ಬ ಚೇತನನೇ ಆಗಿರುವುದರಿಂದ ಹಿರಣ್ಯಗರ್ಭ ಅಂದರೆ ಬ್ರಹ್ಮಮೊದಲಾದವರಲ್ಲಿ ಇರುವಂತೆ ದೋಷ ಇವನಲ್ಲೂ ಇದೆ ಎಂಬ ಸಂಶಯ ಬಂದರೆ ಇಲ್ಲ ಎಂದು ತಿಳಿಸಲು "ನಿರ್ದೋಷಂ" ಎಂದಿದ್ದಾರೆ.

ನಾರಾಯಣನು ಅಶೇಷವಿಶೇಷತೋಽಪಿ ವಂದ್ಯಂ ಎಂದು ಎಲ್ಲರಿಗಿಂತಲೂ ಉತ್ತಮನಾದ್ದರಿಂದ ನಮಸ್ಕರಿಸಲು ಯೋಗ್ಯ ಎಂದಿದ್ದಾರೆ. ಇದು ಸರಿಯೂ ಅಷ್ಟೇ.

ಏಕೆಂದರೆ ಲೋಕದಲ್ಲಿ ವ್ಯಾಪ್ತಿ ಹೀಗಿದೆ - ಯೋ ಹಿ ಜನನಾದಿಕರ್ತಾ ಯಶ್ಚ ಗುಣಾಧಿಕಃ ಸ ಹಿ ವಂದ್ಯೋ ಭವತಿ ಎಂದು. ಅಂದರೆ ಯಾರಿಗೆ ಯಾರು ಜನ್ಮಸ್ಥಿತಿ ಮೊದಲಾದವುಗಳನ್ನು ಹಾಗೂ ಯಾರು ಯಾರಿಗಿಂತ ಗುಣಗಳನ್ನು ಹೆಚ್ಚಾಗಿ ಹೊಂದಿದ್ದಾರೋ ಅವರೆಲ್ಲರೂ ನಮಸ್ಕರಿಸಲು ಯೋಗ್ಯರೇ ಆಗಿರುವರು.

ನಾರಾಯಣನಲ್ಲಿ ಜನನಾದಿ ಕರ್ತೃತ್ವ ಹಾಗೂ ಗುಣಾಧಿಕ್ಯ ಇರುವುದರಿಂದ ಪ್ರೀತಿಪಾತ್ರವಾದ ತಮ್ಮ ಸ್ವರೂಪಕ್ಕಿಂತಲೂ ಅವನೇ ಹೆಚ್ಚು ಪ್ರಿಯ. ಏಕೆಂದರೆ ಎಲ್ಲ ಪ್ರಿಯವಾದ ವಸ್ತುಗಳಲ್ಲಿ ಪ್ರಿಯತ್ವಬುದ್ಧಿಯನ್ನು ತಂದುಕೊಡುವವನು ಅವನೇ ಆದ್ದರಿಂದ.

## ಅಧ್ಯಾಯಚತುಷ್ಟಯಾರ್ಥಸೂಚಕವಾದ ಮಂಗಲಪದ್ಯ

(ಸನ್ನ್ಯಾಯರತ್ನಾವಲಿ)- **ಅನೇನೈವ ಶ್ಲೋಕೇನ ಅಧ್ಯಾಯಚತುಷ್ಟಯಾರ್ಥಂ ಸೂಚಿತವಾನ್ । ನಿಖಿಲಪೂರ್ಣಗುಣೈಕದೇಹಮ್ ಇತಿ ಸಮನ್ವಯಂ ಸೂಚಯತಿ । ನಿರ್ದೋಷಮ್ ಇತ್ಯ-ವಿರೋಧಮ್ । ಅಖಿಲೈಃ ಸುವಾಕ್ಯೈಃ ಆಪ್ತತಮಮ್ ಇತಿ ಸಾಧನಮ್ । 'ಅಸ್ಯೋದ್ಭವಾ-ದಿದಮ್' ಇತಿ ಫಲಮ್ ।**

ನಾರಾಯಣಂ ಎಂಬ ಈ ಮೊದಲಿನ ಪದ್ಯದಿಂದಲೇ ಇಡೀ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಅರ್ಥವನ್ನು ಸೂಚನೆ ಮಾಡಿದ್ದಾರೆ. 'ನಿಖಿಲಪೂರ್ಣಗುಣೈಕದೇಹಂ' ಎಂಬುದರಿಂದ ಸಕಲಗುಣಗಳು ಆ ಪರಮಾತ್ಮನಲ್ಲಿ ಇದೆ ಎಂದು ಹೇಳಿದ್ದರಿಂದ ಸಕಲವೈದಿಕಶಬ್ದಗಳ ಪ್ರವೃತ್ತಿನಿಮಿತ್ತವಾದ ಗುಣಗಳ ಸಮನ್ವಯವನ್ನು ಮಾಡುವ ಸಮನ್ವಯಾಧ್ಯಾಯದ ಅರ್ಥವನ್ನು ಸೂಚಿಸಿದಂತಾಯಿತು. "ನಿರ್ದೋಷಂ" ಎಂಬುವುದರಿಂದ ಗುಣಪೂರ್ಣ ನಾರಾಯಣ ಎಂಬ ವಿಷಯದಲ್ಲಿ ಯಾವುದೇ ದೋಷಗಳಿಲ್ಲ ಎಂದು ಸಮರ್ಥಿಸುವ ಅರ್ಥಾತ್ ಸಕಲರೀತಿಯಾದ ವಿರೋಧಗಳನ್ನು ಪರಿಹರಿಸುವ ಅವಿರೋಧಾಧ್ಯಾಯದ ಅರ್ಥವನ್ನು ಸೂಚಿಸಿದ್ದಾರೆ. ಇನ್ನು ಸಾಧನಾಧ್ಯಾಯದ ಅರ್ಥವನ್ನು "ಅಖಿಲೈಃ ಸುವಾಕ್ಯೈಃ ಆಪ್ತತಮಮ್" ಎಂಬಲ್ಲಿ ಸೂಚಿಸಿದ್ದಾರೆ. ನಾಲ್ಕನೆಯ ಫಲಾಧ್ಯಾಯದ ಅರ್ಥವನ್ನು "ಅಸ್ಯೋದ್ಭವಾದಿದಂ" ಎಂಬ ವಿಶೇಷಣದಲ್ಲಿ ಮೋಕ್ಷವನ್ನು ನೀಡುವವನು ನಾರಾಯಣ ಎಂದು ಹೇಳುವ ಮೂಲಕ ಸೂಚಿಸಿದ್ದಾರೆ.

## ವಿಷಯಪ್ರಯೋಜನಾದಿಗಳ ಸೂಚಕವೂ ಆಗಿದೆ

(ಸನ್ನ್ಯಾಯರತ್ನಾವಲಿ)- **ಅನೇನೈವ ಅಧಿಕಾರಿವಿಷಯಪ್ರಯೋಜನಸಂಬಂಧಾನ್ ಶಾಸ್ತ್ರಾರಂಭೇ ಅಪೇಕ್ಷಿತಾನ್ ಸೂಚಯತಿ । 'ಸನ್ನಮಾಮಿ' ಇತ್ಯಧಿಕಾರಿಣಂ ಸೂಚಯತಿ । 'ನಾರಾಯಣಮ್' ಇತಿ ವಿಷಯಮ್ । 'ಆಪ್ತತಮಮ್' ಇತಿ ಪ್ರಯೋಜನಮ್ । 'ಉದ್ಭವಾದಿದಮ್' ಇತಿ ವಿಷಯಪ್ರಯೋಜನಯೋಃ ದಾತೃದೇಯಲಕ್ಷಣಸಂಬಂಧಮ್ ।**

ಶಾಸ್ತ್ರಾಧ್ಯಯನ ಮುಂತಾದವುಗಳನ್ನು ಮಾಡುವ ವ್ಯಕ್ತಿಗೆ ಆವಶ್ಯಕವಾದ ಅನುಬಂಧ-ಚತುಷ್ಟಯಗಳನ್ನು ಈ ಶ್ಲೋಕದಿಂದಲೇ ಮೊದಲಿಗೆ ಸೂಚಿಸುತ್ತಿದ್ದಾರೆ. ಅನುಬಂಧ ಚತುಷ್ಟಯಗಳು ಎಂದರೆ ಶಾಸ್ತ್ರಕ್ಕೆ ಅಧಿಕಾರಿ, ವಿಷಯ, ಪ್ರಯೋಜನ ಹಾಗೂ ಸಂಬಂಧಗಳು. ಅಧಿಕಾರಿಯನ್ನು ಸನ್ನಮಾಮಿ ಎನ್ನುವ ಶಬ್ದದಿಂದ ಭಕ್ತಿಶ್ರದ್ಧೆ ಇರುವವನೇ ಈ ಅನುವ್ಯಾಖ್ಯಾನಕ್ಕೆ ಅಧಿಕಾರಿ ಎಂದು. 'ನಾರಾಯಣಂ' ಎಂಬುದರಿಂದ ನಾರಾಯಣನೇ ಈ ಅನುವ್ಯಾಖ್ಯಾನಕ್ಕೆ ವಿಷಯನೆಂದೂ, 'ಆಪ್ತತಮಂ' ಎಂಬುದರಿಂದ ಭಗವತ್ಪ್ರಾಪ್ತಿರೂಪವಾದ ಮೋಕ್ಷವೇ ಪ್ರಯೋಜನವೆಂದು,

'ಉದ್ಧವಾದಿದಂ' ಎಂಬುದರಿಂದ ವಿಷಯನಾದ ನಾರಾಯಣ ಹಾಗೂ ಪ್ರಯೋಜನವಾದ ಮೋಕ್ಷಕ್ಕೆ ದಾತೃದೇಯಭಾವಸಂಬಂಧವಿದೆಯೆಂದು ತಿಳಿಸಿದಂತಾಯಿತು.

## ನಾರಾಯಣಪಂಡಿತಾಚಾರ್ಯರ ನಯಚಂದ್ರಿಕಾಟೀಕೆ ಮಂಗಲಾಚರಣೆ

### ಅಂತರ್ಬಹಿರುಪಾಸ್ಮಹೇ

ವಿಷ್ಣುಂ ಸಂಪೂರ್ಣವಿಜ್ಞಾನಪರಮಾನಂದವಿಗ್ರಹಮ್ ।
ಕಮಲಾಕಾಂತಮತ್ಯಂತಮಂತರ್ಬಹಿರುಪಾಸ್ಮಹೇ ॥

ವಿಷ್ಣುವನ್ನು ಉಪಾಸನೆ ಮಾಡುತ್ತೇನೆ ಎಂದು ಗ್ರಂಥದ ಮೊದಲಿಗೆ ಮಂಗಳಾಚರಣೆಯ ಸಂದರ್ಭ-ದಲ್ಲಿ ಹೇಳುತ್ತಿದ್ದಾರೆ. ಉಪಾಸನೆಯಾದರೋ ಅಂತರಂಗದಲ್ಲಿ ಹಾಗೂ ಹೊರಗಡೆ ಈ ರೀತಿ ಎರಡು ರೀತಿ ಚೆನ್ನಾಗಿ ಉಪಾಸನೆ ಮಾಡುತ್ತೇನೆ ಎಂದರ್ಥ. ಆ ವಿಷ್ಣುವು ಹೇಗಿದ್ದಾನೆಂದರೆ 'ಸಂಪೂರ್ಣ-ವಿಜ್ಞಾನಪರಮಾನಂದವಿಗ್ರಹಃ' ಹಾಗೂ 'ಕಮಲಾಕಾಂತ' ಎಂದು ತಿಳಿಯಬೇಕು. ಪರಿಪೂರ್ಣ-ವಾದ ವಿಶೇಷವಾದ ಜ್ಞಾನ, ಅತ್ಯುತ್ಕೃಷ್ಟವಾದ ಆನಂದ ಇವುಗಳನ್ನೇ ದೇಹವನ್ನಾಗಿ ಪಡೆದವನು. ಹಾಗೆ ಲಕ್ಷ್ಮೀದೇವಿಗೆ ಪತಿಯಾದವನು.

### ವೇದಾಂತವೇದಿತವಾದ ಔದಾರ್ಯವುಳ್ಳ ಮುಖ್ಯಬ್ರಹ್ಮ

ಶ್ರೀಮನ್ನಾರಾಯಣಾಖ್ಯಾನಂ ಸಜ್ಜ್ಞಾನಾನಂದಲಕ್ಷಣಮ್ ।
ವೇದಾಂತವೇದಿತೌದಾರ್ಯಂ ಮುಖ್ಯಂ ಬ್ರಹ್ಮ ಪ್ರತನ್ಮಹೇ ॥

ಬ್ರಹ್ಮನೆಂದರೆ ಯಾರು? ಎಂದರೆ ಚತುರ್ಮುಖಬ್ರಹ್ಮನೆಂದು ಮಂದರಿಗೆ ಪ್ರತೀತಿ ಬರುವುದು. ಅದಕ್ಕಾಗಿ 'ಮುಖ್ಯಂ ಬ್ರಹ್ಮ' ಎಂದಿದ್ದಾರೆ. ಮುಖ್ಯನಾದ ಬ್ರಹ್ಮನೆಂದರೆ ಅದು ಶ್ರೀಮನ್ನಾರಾ-ಯಣನೇ. ಆ ನಾರಾಯಣನು ಯಥಾರ್ಥವಾದ ಜ್ಞಾನ, ದುಃಖಮಿಶ್ರಿವಲ್ಲದ ಆನಂದ ಮೊದಲಾದ ಲಕ್ಷಣಗಳುಳ್ಳವನು. ಹಾಗೂ ಸಮಸ್ತ ವೇದಾಂತಗಳಲ್ಲಿ ಅವನ ಉದಾರತೆಯು ಪ್ರತಿಪಾದಿಸಲ್ಪಟ್ಟಿದೆ. ಇಂತಹವನ ಮಹಿಮೆಯನ್ನು ವಿಸ್ತಾರವಾಗಿ ಹೇಳುತ್ತೇನೆ.

### ಅತಸೀಕೃಷ್ಣ - ಕೃಷ್ಣ

ಯೇನ ಗೋವರ್ಧನಛದ್ಮಛತ್ರೇಣಾತ್ರಾಯಿ ಗೋವ್ರಜಃ ।
ಕೃಷ್ಣಂ ತಮತಸೀಕೃಷ್ಣಂ ವಂದೇ ಸೌಂದರ್ಯವಾರಿಧಿಮ್ ॥

ಈ ಶ್ಲೋಕದಲ್ಲಿ ಶ್ರೀಕೃಷ್ಣನನ್ನು ನಮಸ್ಕರಿಸಿದ್ದಾರೆ "ಕೃಷ್ಣಂ ವಂದೇ" ಎಂದು. ಆ ಕೃಷ್ಣನಾದರೋ ಸೌಂದರ್ಯವಾರಿಧಿ. ಅರ್ಥಾತ್ ಸೌಂದರ್ಯದ ಸಮುದ್ರದಂತೆ ಇದ್ದಾನೆ. ಅತಸೀಪುಷ್ಪದಂತೆ (ನೀಲಬಣ್ಣದ ಅಗಸೆ ಪುಷ್ಪದಂತೆ) ನೀಲವರ್ಣದವನಾಗಿದ್ದಾನೆ. ಹಾಗೇ ಗೋವರ್ಧನಪರ್ವತವನ್ನು

ಎತ್ತುವ ವ್ಯಾಜದಿಂದ ಅದನ್ನೇ ಛತ್ರಿಯನ್ನಾಗಿ ಅವಲಂಬಿಸಿ ಇಡೀ ಗೋ, ಗೋಪಾಲಕರನ್ನು ಕಾಪಾಡಿದ್ದಾನೆ.

## ವೇದಾಂತರಾದ್ಧಾಂತಸೂಕ್ತಿರತ್ನಾಕರರಾದ ಶ್ರೀಮಧ್ವಾಚಾರ್ಯರು

ನಮೋ ವೇದಾಂತರಾದ್ಧಾಂತಸೂಕ್ತಿರತ್ನಾಕರಾತ್ಮನೇ ।
ಶ್ರೀಮದಾನಂದತೀರ್ಥಾಖ್ಯಭಗವದ್ದುಗ್ಧಸಿಂಧವೇ ॥

ಶ್ರೀಮಧ್ವಾಚಾರ್ಯರನ್ನು ಈ ಶ್ಲೋಕದಲ್ಲಿ ನಮಸ್ಕರಿಸಿದ್ದಾರೆ. ಆ ಮಧ್ವಾಚಾರ್ಯರು ಭಗವಂತನಿಗೆ ಆವಾಸಸ್ಥಾನವಾದ ಕ್ಷೀರಸಮುದ್ರದಂತೆ ಇದ್ದಾರೆ. ಇನ್ನು ಕ್ಷೀರಸಮುದ್ರರಾದ ಆನಂದತೀರ್ಥರೆಂಬ ಹೆಸರುಳ್ಳ ನಿಮ್ಮಲ್ಲಿ ಅನೇಕ ರತ್ನಗಳೇ ಇವೆ. ಆ ರತ್ನಗಳು ಉಪನಿಷತ್ತುಗಳಲ್ಲಿ ಸಿದ್ಧವಾದ ವಿಷಯ-ಗಳೆಂಬ ಸೂಕ್ತಿಗಳೇ ಆಗಿವೆ.

## ತ್ರಿವಿಕ್ರಮಾರ್ಯವರ್ಯರ ಪಾದಧೂಳಿಗಳು ಬುದ್ಧಿ, ಮನಸ್ಸುಗಳನ್ನು ಶುದ್ಧಿಗೊಳಿಸಲಿ

ತ್ರಿವಿಕ್ರಮಾರ್ಯವರ್ಯಾಣಾಂ ಗುರೂಣಾಂ ಪಾದರೇಣವಃ ।
ದಿಶಂತು ಶಶ್ವದಸ್ಮಾಕಂ ಶುದ್ಧಿಂ ಬುದ್ಧೇರ್ಗಿರಾಮಪಿ ॥

ಇನ್ನು ಇಲ್ಲಿ ಶ್ರೀತ್ರಿವಿಕ್ರಮಪಂಡಿತಾಚಾರ್ಯರನ್ನು ಪ್ರಾರ್ಥನೆ ಮಾಡಿದ್ದಾರೆ - ದಿಶಂತು ಎಂದು. ಕೊಡಲಿ ಎಂದರ್ಥ. ಗುರುಗಳಾದ ತ್ರಿವಿಕ್ರಮರೆಂಬ ಪಂಡಿತಶ್ರೇಷ್ಠರ ಪಾದಧೂಳಿಗಳು ನಿರಂತರ-ವಾಗಿ ನನ್ನ ಬುದ್ಧಿಯು ಹಾಗೂ ನನ್ನ ಮಾತಿಗೂ ಶುದ್ಧತೆಯನ್ನು ತಂದುಕೊಡಲಿ.

## ಪದ್ಮನಾಭಪ್ರಿಯರಾದ ಪದ್ಮನಾಭತೀರ್ಥರು

ತಂ ಪದ್ಮನಾಭತೀರ್ಥಾಬ್ಧಿಂ ಪದ್ಮನಾಭಪ್ರಿಯಂ ಭಜೇ ।
ಸನ್ನ್ಯಾಯರತ್ನಾವಲ್ಯಾಖ್ಯಾದ್ಯತೋ ಮಧ್ವೇಂದುಬೃಂಹಿತಾತ್ ॥

ಶ್ರೀಪದ್ಮನಾಭತೀರ್ಥರನ್ನು ಭಜಿಸುತ್ತೇನೆ ಎಂದಿದ್ದಾರೆ. ಅವರು ಸಮುದ್ರದಂತೆ ಇದ್ದಾರೆ. ಈ ಸಮುದ್ರದಲ್ಲಿ ಉದಯಿಸಿದ ಮಧ್ವಾಚಾರ್ಯರೆಂಬ ಚಂದ್ರನ ಸಂಪರ್ಕದಿಂದ (ಅನುಗ್ರಹದಿಂದ) ಸನ್ನ್ಯಾಯರತ್ನಾವಲಿ ಎಂಬ ಗ್ರಂಥವು ಉಕ್ಕಿಬಂತು. ಅಷ್ಟಲ್ಲದೇ ಪದ್ಮನಾಭತೀರ್ಥರು ಪದ್ಮನಾಭ-ನಿಗೆ ಪ್ರಿಯರಾಗಿದ್ದಾರೆ.

## ಪರಮಹಂಸರ ಪಾದ ನೆರಳಿನ ಉಪಾಸನೆ

ಅನುವ್ಯಾಖ್ಯಾನಸುಧಾಂಬೋಧೌ ಗಂಭೀರೇ ವಿಹರಂತಿ ಯೇ ।
ತೇಷಾಂ ಪರಮಹಂಸಾನಾಂ ಪದ್ಮಚ್ಛಾಯಾಮುಪಾಸ್ಮಹೇ ॥

ಅನುವ್ಯಾಖ್ಯಾನವೆಂಬುದು ಅಮೃತಸಮುದ್ರದಂತೆ. ಗಂಭೀರವಾದ ಇದರಲ್ಲಿ ಯಾವ ಪರಮ-ಹಂಸರು ವಿಹರಿಸುತ್ತಿದ್ದಾರೋ ಆ ಎಲ್ಲ ಪರಮಹಂಸರ ಪಾದಗಳ ನೆರಳನ್ನು ಉಪಾಸನೆ ಮಾಡುತ್ತೇನೆ.

### ನಃ ಶರಣಪ್ರದಾಃ

ಸನ್ನ್ಯಾಯರತ್ನಾವಲಯಃ ಸನ್ನ್ಯಾಯಾಮೃತಬಿಂದವಃ ।
ಶ್ರೀಮತ್ತತ್ವಪ್ರದೀಪಾಶ್ಚ ಸಂತು ನಃ ಶರಣಪ್ರದಾಃ ॥

ಈ ಶ್ಲೋಕದಲ್ಲಿ ಗ್ರಂಥಗಳ ಪ್ರಾರ್ಥನೆ ಮಾಡಿದ್ದಾರೆ. ಸನ್ನ್ಯಾಯರತ್ನಾವಲಿಗಳು ಅರ್ಥಾತ್ ಒಳ್ಳೆಯ ನ್ಯಾಯಗಳೆಂಬ ರತ್ನಗಳ ಸಮೂಹವು ಹಾಗೂ ಒಳ್ಳೆಯ ನ್ಯಾಯಗಳೆಂಬ ಅಮೃತಬಿಂದುಗಳು, ಶ್ರೇಷ್ಠವಾದ ತತ್ವಗಳೆಂಬ ದೀಪಗಳು ನಮಗೆ ರಕ್ಷಣೆಯನ್ನು ನೀಡಲಿ. ಇಲ್ಲಿ ಪದ್ಮನಾಭತೀರ್ಥರ ಹಾಗೂ ತ್ರಿವಿಕ್ರಮಪಂಡಿತಾಚಾರ್ಯರ ಗ್ರಂಥಗಳನ್ನು ಪ್ರಾರ್ಥನೆ ಮಾಡಿದ್ದಾರೆಂದು ತಿಳಿಯಬೇಕು.

### ಅನುಭಾಷ್ಯದ ಅಭಿಪ್ರಾಯದ ಅನುವಾದ ಯಥಾಮತಿಯಾಗಿ

ಶ್ರೀಮದ್ಗುರೂಣಾಂ ಕಾರುಣ್ಯಕಲ್ಪವೃಕ್ಷಸಮಾಶ್ರಯಾತ್ ।
ಅಭಿಪ್ರಾಯೋಽನುಭಾಷ್ಯಸ್ಯ ಯಾವದ್ಬೋಧಮನೂದ್ಯತೇ ॥

ನನ್ನ ಬುದ್ಧಿಗನುಗುಣವಾಗಿ ಅನುಭಾಷ್ಯವೆನಿಸಿದ ಅನುವ್ಯಾಖ್ಯಾನದ ಅಭಿಪ್ರಾಯವನ್ನು ಗುರುಗಳ ಕಾರುಣ್ಯವೆಂಬ ಕಲ್ಪವೃಕ್ಷವನ್ನು ಅವಲಂಬಿಸಿ ಅನುವಾದ ಮಾಡುತ್ತೇನೆ.

### ಅಧಿಕಾರಿವಿಶೇಷಣಸಮರ್ಪಕವಾದ ಸನ್ನಮಾಮಿ ಎಂಬ ಪದ

(ನಯಚಂದ್ರಿಕಾ)– **'ಅಸ್ಯೋದ್ಭವಾದಿದಮ್'** ಇತ್ಯಾದಿಶಬ್ದೇನ ಮೋಕ್ಷಸ್ಯಾಪಿ ವಿವಕ್ಷಿತತ್ವಾತ್ ನಿರ್ದುಃಖಸುಖಾತ್ಮಕೇ ಮೋಕ್ಷೇ ಪ್ರಯೋಜನೇ ಸರ್ವೇಷಾಮಪಿ ಪ್ರವೃತ್ತಿಃ ಪ್ರಸಜ್ಯತೇ । ತದ್-ವ್ಯುದಾಸಾಯ ಅಧಿಕಾರಿಣಂ ವಿಶಿನಷ್ಟಿ – ಸನ್ನಮಾಮೀತಿ ॥

ಅಸ್ಯೋದ್ಭವಾದಿದಮ್ ಎಂಬಲ್ಲಿ ಆದಿಪದದಿಂದ ಮೋಕ್ಷವನ್ನು ಗ್ರಹಿಸಬೇಕು. ಮೋಕ್ಷವಾದರೋ ದುಃಖರಹಿತವಾದದ್ದಾಗಿ ಕೇವಲ ಸುಖರೂಪವಾಗಿದೆ. ಇಂತಹ ಮೋಕ್ಷವನ್ನು ಈ ಅನುವ್ಯಾಖ್ಯಾನಕ್ಕೆ ಪ್ರಯೋಜನವೆಂದಾಗ ಎಲ್ಲರೂ ಪ್ರವೃತ್ತಿಮಾಡುವ ಪ್ರಸಂಗವಿದೆ. ಹಾಗಾಗಿ ಅದನ್ನು ನಿವಾರಿಸಿ ಅಧಿಕಾರಿ ಯಾರು ಎಂದು ತಿಳಿಸಲು "ಸನ್ನಮಾಮಿ" ಎಂದಿದ್ದಾರೆ.

### ಅಷ್ಟಾಂಗವಿಶಿಷ್ಟವಾದ ಪ್ರಣಾಮವೇ ವಿವಕ್ಷಿತ

ನಯಚಂದ್ರಿಕಾ– 'ಸನ್ನಮಾಮಿ' ಇತ್ಯಷ್ಟಾಂಗವಿಶಿಷ್ಟ ಏವ ಪ್ರಣಾಮೋ ವಿವಕ್ಷಿತಃ ।

ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥

ಇತ್ಯಷ್ಟಾಂಗಾನ್ಯುಚ್ಯಂತೇ । ಉರ ಆದಿನಾ ಪ್ರಣಿಪಾತಃ । ಮನಸಾ ಸದ್ಭಕ್ತಿಕಂ ಸ್ಮರಣಮ್ । ವಚಸಾ ವೇದಮಂತ್ರವಚನಮ್ । ಏವಂ ಚ ಹ್ಯಧ್ಯಯನವಾನ್ ಸುಭಕ್ತಿಮಾನ್ ಏವ ಅಧಿಕಾರೀತ್ಯುಕ್ತಂ ಭವತಿ । **'ಅಹಂ ಸನ್ನಮಾಮಿ'** ಇತ್ಯುಕ್ತೇಃ ಸತ್ಯಷ್ಯನಂತಾಧಿಕಾರಿಣ ಇತಿ ಸೂಚಿತಂ ಭವತಿ ।

ಸನ್ನಮಾಮಿ ಎನ್ನುವುದರಿಂದ ಮಾಡುವ ನಮಸ್ಕಾರವು ಅಷ್ಟಾಂಗಯುಕ್ತವಾಗಿರಬೇಕು ಎಂದು ತಿಳಿಯಬೇಕು. ಅಂದರೆ ಎಂಟು ಅಂಗಗಳಿಂದ ಮಾಡುವ ನಮಸ್ಕಾರವೇ ಇಲ್ಲಿ ಗ್ರಾಹ್ಯ. ಅದು ಹೀಗೆ – ಎದೆಯ ಭಾಗದಿಂದ, ತಲೆಯಿಂದ, ಕಣ್ಣಿನಿಂದ, ಮನಸ್ಸಿನಿಂದ, ಮಾತಿನಿಂದ, ಕಾಲಿನಿಂದ, ಕೈಯಿಂದ, ಮೊಣಕಾಲಿನಿಂದ ಈ ರೀತಿ ಎಂಟು ಅಂಗಗಳಿಂದ ಕೂಡಿದ ನಮಸ್ಕಾರವೇ ನಿಜವಾದ ನಮಸ್ಕಾರವಾಗುವುದು. ಕಾಯಿಕ, ವಾಚಿಕ, ಮನಸಾ ಎಂದು ಮೂರು ರೀತಿ ನಮಸ್ಕಾರವಿದೆ. ಉರ ಆದಿನಾ ಪ್ರಣಿಪಾತಃ - ಎಂದು ಕಾಯಿಕವಾದ ನಮಸ್ಕಾರವನ್ನು ಹೇಳಿದ್ದು. ಮನಸ್ಸಿನಿಂದ ಭಕ್ತಿಪೂರ್ವಕವಾಗಿ ಸ್ಮರಣೆ ಮಾಡುವುದು. ಬಾಯಿಂದ ವೇದಮಂತ್ರಗಳ ಪಠನೆ ಮಾಡುವುದು. ಹೀಗೆ ಒಟ್ಟಾಗಿ ಅಧ್ಯಯನವನ್ನು ಮಾಡಿರುವವನು ಒಳ್ಳೆಯ ಭಕ್ತಿಯಿರುವವನೇ ಅಧಿಕಾರಿ ಎಂದು ಹೇಳಿದಂತಾಯಿತು. 'ಅಹಂ ಸನ್ನಮಾಮಿ' ಎಂಬಲ್ಲಿ 'ನಾನೊಬ್ಬನೇ ಅಧಿಕಾರಿ ಅಲ್ಲದೆ ಅನಂತ ಅಧಿಕಾರಿಗಳಿದ್ದಾರೆ' ಎಂಬುದನ್ನು 'ಸನ್ನಮಾಮಿ' ಎಂಬುದರಿಂದ ಸೂಚಿಸಿದ್ದಾರೆ. ಭಕ್ತಿಶ್ರದ್ಧಾಪೂರ್ವಕವಾಗಿ ನಾನು ನಮಸ್ಕರಿಸುತ್ತೇನೆ ಎನ್ನುವ ಮೂಲಕ ಯಾರು ಯಾರು ಭಕ್ತಿಶ್ರದ್ಧೆಯುಳ್ಳವರೋ ಅವರು ಈ ಗ್ರಂಥವನ್ನು ಓದಲು ಅಧಿಕಾರಿಗಳೇ ಎಂದು ಸೂಚಿಸಿದ್ದಾರೆ.

## ಎಲ್ಲ ಆಚಾರವೂ ಧರ್ಮಮೂಲ

(ನಯಚಂದ್ರಿಕಾ) – 'ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।
ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥ (ಮನುಸ್ಮೃತಿ 2/6)

ಇತಿ ವಚನಾತ್ ಆಚಾರಸ್ಯಾಪಿ ಧರ್ಮಮೂಲತ್ವಾತ್ ಶಾಸ್ತ್ರಪ್ರಯೋಜನಂ ಚ ಶಾಸ್ತ್ರಪ್ರತಿಪಾದ್ಯಾದ್ಭವಿತುಮರ್ಹತಿ । ತದರ್ಥಂ ಪ್ರತಿಪಾದ್ಯಂ ವಿಷಯಮಪಿ ಸೂಚಯತಿ – ನಾರಾಯಣಮಿತಿ ॥

ಸಮಸ್ತವೇದಭಾಗವು ಎಲ್ಲ ಧರ್ಮಾಚರಣೆಗಳಿಗೆ ಮೂಲ. ಹಾಗೆಯೇ ವೇದಾನುಸಾರಿಯಾದ ಸ್ಮೃತಿಯನ್ನು, ಹಾಗೆ ವೇದ ಅಧ್ಯಯನ ಮಾಡಿದವರ ಸ್ವಭಾವ, ಸಾತ್ವಿಕಜನರ ಆಚಾರ, ಆತ್ಮನ ಪ್ರಸನ್ನತೆ ಇವಿಷ್ಟೂ ಪ್ರಮಾಣ ಎನಿಸುತ್ತವೆ. ಈ ಮಾತಿನಿಂದಾಗಿ ಧರ್ಮಕ್ಕೆ ಮೂಲವಾದದ್ದು ಸಮಸ್ತವೇದಗಳಂತೆ ಸಾಧುಗಳ ಆಚರಣೆಯೂ ಎಂಬುದು ತಿಳಿಯಲ್ಪಟ್ಟಿದೆ. ಇಂತಹ ಈ ಆಚಾರ-

ಮೂಲವಾದ ಶಾಸ್ತ್ರಗಳ ಪ್ರಯೋಜನವು ಶಾಸ್ತ್ರದಿಂದ ಹೇಳಲ್ಪಡುವ ವಿಷಯಕ್ಕಿಂತ ಬೇರೆಯೇ ಆಗಬೇಕು. ಹಾಗಾಗಿ ಶಾಸ್ತ್ರದ ವಿಷಯವನ್ನು ತಿಳಿಸಲು "ನಾರಾಯಣ" ಎಂಬ ಪದವನ್ನು ಬಳಸಿ-ದ್ದಾರೆ.

## ಪ್ರಥಮಸೂತ್ರದ ಅಥ ಶಬ್ದ ಹಾಗೂ ಅತಃ ಶಬ್ದಗಳಿಂದ ತಿಳಿಯುವುದೇನು?

(ನಯಚಂದ್ರಿಕಾ) – ಏತೇ ಅರ್ಥಾಃ ಭಗವತ್ಯೈವ ಪ್ರಥಮಸೂತ್ರೇ ಹ್ಯಾಕ್ಷಿಪ್ತಾಃ । 'ಅಥ'ಶಬ್ದೇನಾಧಿ-ಕಾರೀ 'ಅತಃ'ಶಬ್ದೇನ ಪ್ರಯೋಜನಂ, ಬ್ರಹ್ಮಶಬ್ದೇನ ವಿಷಯಃ, ಪ್ರತಿಪಾದ್ಯಪ್ರತಿಪಾದಕತ್ವಲಕ್ಷಣ-ಸಂಬಂಧಶ್ಚ ।

ಶಾಸ್ತ್ರದ ಅನುಬಂಧಚತುಷ್ಟಯಗಳನ್ನು ಸೂತ್ರಕಾರರು ತಮ್ಮ ಮೊದಲನೆಯ ಸೂತ್ರದಲ್ಲಿ ಇರುವ ಪ್ರತಿಯೊಂದು ಪದಗಳಿಂದಲೂ ತಿಳಿಸಿಕೊಟ್ಟಿದ್ದಾರೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಮೊದಲನೆಯ ಸೂತ್ರದಲ್ಲಿ ಅಥ ಶಬ್ದದಿಂದ ಅಧಿಕಾರಿಯನ್ನೂ, ಅತಃ ಎಂಬ ಶಬ್ದದಿಂದ ಪ್ರಯೋ-ಜನವನ್ನೂ, ಬ್ರಹ್ಮಶಬ್ದದಿಂದ ವಿಷಯವನ್ನೂ, ಹಾಗೂ ವಿಷಯಕ್ಕೂ ಶಾಸ್ತ್ರಕ್ಕೂ ಪ್ರತಿಪಾದ್ಯ-ಪ್ರತಿಪಾದಕತ್ವ ಎಂಬ ಸಂಬಂಧವನ್ನು ತಿಳಿಸಲಾಗಿದೆ.

## ಸುವಾಕ್ಯರು ಎಂದರೆ ಪುರುಷರು

(ನಯಚಂದ್ರಿಕಾ) – ಸುವಾಕ್ಯೈಃ = ಸುಷ್ಠುವಾಕ್ಯೈಃ । ಆಪ್ಯತಮಂ = ಜ್ಞೇಯತಮಮ್ । ಪರ-ಬ್ರಹ್ಮಣಿ ಅಧಿಕೃತತಾತ್ಪರ್ಯತ್ವೇನ ಸುನಿಶ್ಚಿತವೇದವಾಕ್ಯಾಃ ಸುವಾಕ್ಯಾಃ ಪುರುಷಾಃ ಸುವಾಕ್ಯಾಃ । ಜ್ಞಾನವಚನೇನೈವ ತತ್ಸಾಧನವೈರಾಗ್ಯಭಕ್ತ್ಯುಪಾಯೋಽಪಿ ಸೂಚಿತೋ ಭವತಿ । ಅಯಮೇವ ಹಿ ತೃತೀಯಾಧ್ಯಾಯಾರ್ಥಃ ।

ಸುವಾಕ್ಯೈಃ ಎಂದರೆ ಸುಷ್ಠುವಾಕ್ಯೈಃ । ಆಪ್ಯತಮಂ ಎನ್ನುವದಕ್ಕೆ ಜ್ಞೇಯತಮಮ್ ಎಂದರ್ಥ. ಇಲ್ಲಿ ಸುವಾಕ್ಯ ಎಂಬ ಪದದಿಂದ ಒಳ್ಳೆಯ ವಾಕ್ಯಗಳೆನಿಸಿದ ವೇದವಾಕ್ಯಗಳನ್ನು ತೆಗೆದುಕೊಳ್ಳುವುದಲ್ಲ. ಹೊರತಾಗಿ ಇಡೀ ವೇದವಾಕ್ಯಗಳಿಗೆ ಪರಬ್ರಹ್ಮನಲ್ಲಿಯೇ ತಾತ್ಪರ್ಯವಿದೆ.

ಅವನನ್ನೇ ಇಡೀ ವೇದವು ಕೊಂಡಾಡಲು ಹೊರಟಿದೆ ಎಂಬ ನಿಶ್ಚಯವುಳ್ಳ ಪುರುಷನನ್ನು ಇಲ್ಲಿ ಸುವಾಕ್ಯ ಎಂಬ ಪದದಿಂದ ತೆಗೆದುಕೊಳ್ಳಬೇಕು. ಇಂತಹ ಸುವಾಕ್ಯರಿಂದ ಅರ್ಥಾತ್ ಪುರುಷರಿಂದ ಚೆನ್ನಾಗಿ ತಿಳಿಯಲ್ಪಡುವವನು ನಾರಾಯಣ ಎಂದರ್ಥ.

ಇಲ್ಲಿ ತಿಳಿಯಲ್ಪಡಬೇಕಾದರೆ ವೈರಾಗ್ಯಭಕ್ತಿಗಳು ಜ್ಞಾನಕ್ಕೆ ಸಾಧನವಾಗಿ ಸ್ವೀಕರಿಸಬೇಕು. ಹೀಗೆ ಮೂರನೆಯ ಅಧ್ಯಾಯವಾದ ಸಾಧನಾಧ್ಯಾಯದ ಅರ್ಥವನ್ನು ಸೂಚನೆ ಮಾಡಿದ್ದಾರೆ.

## ಅಶೇಷವಿಶೇಷತೋऽಪಿ ಅಸ್ಮೋದ್ಭವಾದಿದಂ

(ನಯಚಂದ್ರಿಕಾ) – ಸಂತಿ ಹಿ ಉದ್ಭವಾದಿವಿಶೇಷಾ ಬ್ರಹ್ಮಾದಿಷು ತಾರತಮ್ಯನಿಬಂಧನಾಃ ಪ್ರತಿ-ಕ್ಷಣವಿಶೇಷಾಶ್ಚ ಮೋಕ್ಷಾದಿಷು ದೇವತ್ವಾದಿಯೋಗ್ಯತಾವಿಶೇಷಾಶ್ಚ ।

ಬ್ರಹ್ಮಾದಿದೇವತೆಗಳಿಗೆ ಉತ್ಪತ್ತಿ ಸ್ಥಿತಿ ಲಯ ನಿಯಮನ ಜ್ಞಾನ ಅಜ್ಞಾನ ಬಂಧ ಮೋಕ್ಷ ಇವುಗಳೆಲ್ಲವೂ ತಾರತಮ್ಯಪ್ರಕಾರವಾಗಿ ಬೇರೆ ಬೇರೆಯೇ ಆಗಿವೆ. ಪ್ರತಿಕ್ಷಣದಲ್ಲಿಯೂ ವ್ಯತ್ಯಾಸ-ವಿದೆ. ಮೋಕ್ಷಕಾಲದಲ್ಲಿ ಆಯಾಯ ದೇವತೆಗಳ ಯೋಗ್ಯತೆಯನ್ನವಲಂಬಿಸಿ ವಿಶೇಷಣಗಳಿವೆ. ಇವೆಲ್ಲವನ್ನೂ 'ಅಶೇಷವಿಶೇಷತೋऽಪಿ, ಅಸ್ಮೋದ್ಭವಾದಿದಂ' ಎಂಬುದರಿಂದ ತಿಳಿಯಬೇಕು.

## ವಂದ್ಯಂ ಎಂದದ್ದು ಏಕೆ?

(ನಯಚಂದ್ರಿಕಾ)– ಸ್ನೇಹವಿಷಯತ್ವಸ್ಯ ಸಖ್ಯಾದಿಷ್ವಪಿ ಸಂಭವಾತ್ ತದ್‌ವ್ಯವಚ್ಛೇದಾಯ ವಂದ್ಯಮ್ ಇತಿ ।

'ವಂದ್ಯಂ ಸದಾ ಮಮ ಪ್ರಿಯತಮಂ' ಎಂಬಲ್ಲಿ ವಂದ್ಯಮ್ ಎಂದು ಹೇಳಿದ್ದು ಪ್ರೀತಿಪಾತ್ರರಾದ ಸ್ನೇಹಿತ ಮೊದಲಾದವರನ್ನು ಗ್ರಹಿಸದಿರಲು. ಏಕೆಂದರೆ ಅವರು ಪ್ರೀತಿಪಾತ್ರರಾದರೂ ವಂದ್ಯರಲ್ಲ.

## ಶ್ರೀಶಂಕರಪಂಡಿತಾಚಾರ್ಯವಿರಚಿತವಾದ
## ಅನುವ್ಯಾಖ್ಯಾನಸಂಬಂಧದೀಪಿಕಾಮಂಗಲಾಚರಣೆ

## ವಿಷ್ಣ್ವಾದಿಗಳ ವಂದನೆಯೊಂದಿಗೆ ಅನುವ್ಯಾಖ್ಯಾನಸಂಬಂಧದೀಪಿಕಾಪ್ರಾರಂಭ

ನತ್ವಾ ಶ್ರೀವಿಷ್ಣುಮಾನಂದತೀರ್ಥಂ ಸರ್ವಗುರೂನಪಿ ।
ಅನುವ್ಯಾಖ್ಯಾನಸಂಬಂಧದೀಪಿಕಾಂ ಪ್ರಾರಭಾಮಹೇ ॥

ಲಕ್ಷ್ಮೀಸಹಿತನಾದ ವಿಷ್ಣುವನ್ನು ನಮಸ್ಕರಿಸಿ, ಹಾಗೆಯೇ ಆನಂದತೀರ್ಥರನ್ನು ಸಕಲಗುರುಗಳನ್ನೂ ನಮಸ್ಕರಿಸಿ, ಅನುವ್ಯಾಖ್ಯಾನಸಂಬಂಧದೀಪಿಕಾ ಎಂಬ ಗ್ರಂಥವನ್ನು ಪ್ರಾರಂಭಿಸುತ್ತೇವೆ.

## ಅಧಿಕಾರಿಗಳ ಪುರುಷಾರ್ಥಸಾಧನ – ಶಾಸ್ತ್ರಾಭ್ಯಾಸ

ಅಧಿಕಾರಿಣಾಂ ಪುರುಷಾರ್ಥಸಾಧನತಯಾ ಶಾಸ್ತ್ರಾಭ್ಯಾಸಃ ಕರ್ತವ್ಯಃ । ತಸ್ಯ ಅವಿಘ್ನಂ ಸಮಗ್ರಂ ತಾವತ್ ನಾರಾಯಣನಮಸ್ಕಾರೇಣೈವ ಸ್ಯಾತ್ ಇತ್ಯಾದಿಕಂ ದರ್ಶಯತಿ – ನಾರಾಯಣಮಿತಿ ॥

ಅಧಿಕಾರಿಗಳು ಶಾಸ್ತ್ರಾಭ್ಯಾಸವನ್ನು ಮಾಡಬೇಕು. ಏಕೆಂದರೆ ಅದು ಪುರುಷಾರ್ಥಸಾಧನ. ಅರ್ಥಾತ್ ಪರಂಪರಯಾ ಮೋಕ್ಷಕ್ಕೆ ಸಾಧನ. ಆ ಶಾಸ್ತ್ರಾಭ್ಯಾಸವು ನಿರಂತರವಾಗಿ ನಿರ್ವಿಘ್ನವಾಗಿ ಸಮಗ್ರವಾಗಿ

ಆಗಬೇಕು. ಅದು ನಾರಾಯಣನನಮಸ್ಕಾರದಿಂದಲೇ ಸಾಧ್ಯ. ಹಾಗಾಗಿ ನಾರಾಯಣನಿಗೆ ನಮಸ್ಕಾರ ಮಾಡಬೇಕೆಂದು ತೋರಿಸುತ್ತಿದ್ದಾರೆ – ನಾರಾಯಣಂ ನಿಖಿಲಪೂರ್ಣಗುಣೈಕದೇಹಂ ಎಂದು.

ಇದರಿಂದ ಆಚಾರ್ಯರು ಗ್ರಂಥದಲ್ಲಿ ನಾರಾಯಣಂ ಎಂದು ನಿಬಂಧನೆ ಮಾಡಿದ್ದು ಶಿಷ್ಯ-ಶಿಕ್ಷಣಕ್ಕೋಸ್ಕರ ಎಂದು ತಿಳಿಸಿದಂತೆ ಆಯಿತು.

## ಅತ್ರ ನಾರಾಯಣಂ ಸನ್ನಮಾಮಿ - ಸುಧಾಭಾಗದ ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – अत्र **नारायणं सन्नमामी**त्यन्वयः । उत्तमपुरुषप्रयोगादेव **'अहम्'** इति लभ्यते । **'सम्'** इति भक्त्याद्यतिशयसाहित्यलक्षणां प्रणामस्य सम्यक्तामाह । तथाविध एव हि नारायणप्रणामो भवत्यभिमतसिद्धेरङ्गम् । **'निखिल'** इत्यादीनां तु प्रणामकर्मणा नारायणेन विशेषणतया सम्बन्धः ।

ಅತ್ರ - ಈ ಮಂಗಳ ಪದ್ಯದಲ್ಲಿ, ನಾರಾಯಣಂ - ಮೊದಲಿಗಿರುವ ನಾರಾಯಣಂ ಎಂಬ ಶಬ್ದವನ್ನು, ಸನ್ನಮಾಮಿ ಇತಿ - ಈ ಪದ್ಯದ ಕೊನೆಗೆ ಬರುವ ಸನ್ನಮಾಮಿ ಎಂಬ ಪದದೊಂದಿಗೆ ಅನ್ವಯಃ - ಅನ್ವಯಿಸಬೇಕು. ಉತ್ತಮಪುರುಷಪ್ರಯೋಗಾತ್ - ಸನ್ನಮಾಮಿ ಎಂದು ಉತ್ತಮ-ಪುರುಷದಲ್ಲಿ ಹೇಳಿದ್ದರಿಂದ, ಅಹಂ ಇತಿ - ಅಹಂ ಎಂಬ ಪದವು, ಲಭ್ಯತೇ - ಸಿಗುತ್ತದೆ. ಸಮ್ ಇತಿ - ಸನ್ನಮಾಮಿ ಎಂಬಲ್ಲಿರುವ ಸಂ ಎಂಬ ಉಪಸರ್ಗವು, ಭಕ್ತ್ಯಾದ್ಯತಿಶಯಸಾಹಿತ್ಯಲಕ್ಷಣಾಂ - ಭಕ್ತಿ ಜ್ಞಾನ ಮುಂತಾದ ಅತಿಶಯದಿಂದ ಕೂಡಿರುವಿಕೆ ಎಂಬ ರೀತಿಯಾದ, ಪ್ರಣಾಮಸ್ಯ - ನಮಸ್ಕಾರದ, ಸಮ್ಯಕ್ತಾಂ - ಸಮೀಚೀನತೆಯನ್ನು, ಆಹ - ಹೇಳುತ್ತದೆ. ತಥಾವಿಧ ಏವ - ಹಿಂದೆ ತಿಳಿಸಿದ ಭಕ್ತ್ಯಾದಿಗಳಿಂದ ಕೂಡಿದ, ನಾರಾಯಣಪ್ರಣಾಮಃ - ನಾರಾಯಣನನಮಸ್ಕಾರವು, ಅಭಿಮತಸಿದ್ಧೇಃ - ಗ್ರಂಥಪ್ರಾರಂಭಿಸಿದವನಿಗೆ ಸಮ್ಮತವಾದ ಗ್ರಂಥದ ನಿರ್ವಿಘ್ನಸಮಾಪ್ತಿಗೆ, ಅಂಗಂ - ಕಾರಣಂ, ಭವತಿ ಹಿ - ಆಗುವುದು ಪ್ರಸಿದ್ಧವಷ್ಟೇ. 'ನಿಖಿಲ' ಇತ್ಯಾದೀನಾಂ ತು - 'ನಿಖಿಲ-ಪೂರ್ಣಗುಣೈಕದೇಹಂ' ಮುಂತಾದ ಪದಗಳಿಗಾದರೋ, ಪ್ರಣಾಮಕರ್ಮಣಾ - ಭಕ್ತ್ಯಾದ್ಯತಿ-ಶಯದಿಂದ ಮಾಡುವ ನಮಸ್ಕಾರಕ್ಕೆ ವಿಷಯನಾದ, ನಾರಾಯಣೇನ - ನಾರಾಯಣನೊಂದಿಗೆ, ವಿಶೇಷಣತಯಾ - ವಿಶೇಷಣವಾಗಿ, ಸಂಬಂಧಃ - ಸಂಬಂಧವು (ಇರುವುದು).

ಸಾರ – ಶ್ಲೋಕದಲ್ಲಿ ಬರುವ ಮೊದಲನೆಯ ಪದವಾದ "ನಾರಾಯಣ" ಎಂಬುದನ್ನು ಕೊನೆಯ ಪದವಾದ ಸನ್ನಮಾಮಿ ಎಂಬ ಪದದೊಂದಿಗೆ ಅನ್ವಯಿಸಿಬೇಕು. ಇದರ ಅರ್ಥ – ನಾರಾಯಣನಿಗೆ

ಭಕ್ತಿಶ್ರದ್ಧಾಪೂರ್ವಕವಾಗಿ ನಮಿಸುತ್ತೇನೆ ಎಂದು. ಯಾರು ನಮಸ್ಕಾರ ಮಾಡುವುದು ಎಂದರೆ "ನಾನೇ" ಎಂದುತ್ತರ. ಇದಾದರೂ ನಮಾಮಿ ಎಂದು ಉತ್ತಮಪುರುಷಪ್ರಯೋಗಿಸಿದ್ದರಿಂದಲೇ ಸಿಗುವುದು. ಭಕ್ತಿಶ್ರದ್ಧಾಪೂರ್ವಕವಾದ ನಮಸ್ಕಾರ ಎಂಬಂಶವು 'ಸಮ್' ಎಂಬ ಉಪಸರ್ಗದಿಂದ ಸಿಗುವುದು. ಸಮ್ ಎಂದರೆ ಸಮೀಚೀನ ಎಂದರ್ಥ. ನಮಸ್ಕಾರದಲ್ಲಿರುವ ಸಮೀಚೀನತೆ ಎಂದರೆ ಭಕ್ತ್ಯಾತಿಶಯಸಹಿತತ್ವ ಎಂಬುದು. ಅಲ್ಲದೇ ಅಂತಹ ನಮಸ್ಕಾರವೇ ನಾವು ಅಂದುಕೊಂಡಿರುವ ಗ್ರಂಥನಿರ್ವಿಘ್ನಸಮಾಪ್ತಿಗೆ ಕಾರಣವು. ಇನ್ನು ನಿಖಿಲಗುಣಪೂರ್ಣ ಮುಂತಾದ ಪದಗಳಿಗೆ ನೇರವಾಗಿ ಸನ್ನಮಾಮಿ ಎಂಬ ಕ್ರಿಯೆಯಲ್ಲಿ ಅನ್ವಯ ಮಾಡದೇ ನಾರಾಯಣನೆಂಬಲ್ಲಿ ಅನ್ವಯ ಮಾಡಬೇಕು.

### ಅಹಂ ಎನ್ನುವುದರ ಲಾಭ ಹೇಗೆ?

**कम्बा** – उत्तमपुरुषप्रयोगादिति ॥ **'अस्मद्युत्तम' इत्यनुशासनादिति भावः ।**

"ಉತ್ತಮಪುರುಷಪ್ರಯೋಗಾತ್ ಏವ ಅಹಮಿತಿ ಲಭ್ಯತೇ" ಎಂಬಲ್ಲಿ ಅಸ್ಮದ್ಯುತ್ತಮಃ - 'ಉತ್ತಮ-ಪುರುಷಪ್ರಯೋಗ ಮಾಡಿದಾಗ ಅಹಂ ಎಂಬುದರ ಲಾಭವಾಗುವುದು' ಎಂಬ ಅನುಶಾಸನ-ವಿರುವುದರಿಂದ ಅಹಂ ಎಂದು ಸಿಗುವುದು ಎಂದು ಅಭಿಪ್ರಾಯ.

(ಪರಿಮಳ)– 'ದ್ವಿತೀಯಾಂತವಿಶೇಷಣಾನಾಂ ವಿಶೇಷ್ಯದ್ವಾರಾ ಕ್ರಿಯಾನ್ವಯೋ ನ ಸಾಕ್ಷಾತ್' ಇತಿ ವಕ್ತುಂ ವಾಕ್ಯವ್ಯವಹಿತತಯಾ ಅನ್ವಯಾಪ್ರತೀತೇರ್ವಾ 'ನಾರಾಯಣಮ್ ಇತ್ಯಪಿ ವಿಶೇಷಣಮ್' ಇತಿ ಭ್ರಮನಿರಾಸಾಯ ವಿಶೇಷ್ಯಮಿತಿ ಸೂಚನಾಯ ವಾಽಽಹ – ಇತ್ಯನ್ವಯ ಇತಿ ॥ ಕರ್ತ್ರನುಕ್ತೇಃ ನ್ಯೂನತಾಮಾಶಂಕ್ಯ 'ಮಮ' ಇತ್ಯಸ್ಯೈವ ವಿಪರಿಣಾಮೇನ ಕರ್ತೃತ್ವಭ್ರಮನಿರಾಸಾಯ ಆಹ – **ಉತ್ತಮೇತಿ** ॥ 'ಅಸ್ಮದ್ಯುತ್ತಮಃ' ಇತಿ ಸೂತ್ರೇ ಅಸ್ಮಚ್ಛಬ್ದೇ ಉಪಪದತ್ವೇನ ಶ್ರೂಯಮಾಣೇಽ–ಶ್ರೂಯಮಾಣೇ ವಾ ತದರ್ಥವಿವಕ್ಷಾಯಾಮ್ ಉತ್ತಮಪುರುಷೋ ಭವತೀತ್ಯುಕ್ತ್ಯಾ ತದವಿನಾ-ಭಾವಾತ್ 'ಅಹಮ್' ಇತ್ಯಸ್ಯೇತಿ ಭಾವಃ ।

'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂಬ ಪದ್ಯದಲ್ಲಿ ದ್ವಿತೀಯಾಂತಪದಗಳೆಂದರೆ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಇತ್ಯಾದಿಗಳು. ಇವುಗಳಿಗೆ ವಿಶೇಷ್ಯನಾದ ನಾರಾಯಣನ ಮುಖಾಂತರ 'ಸನ್ನಮಾಮಿ' ಎಂಬ ಕ್ರಿಯೆಯಲ್ಲಿ ಅನ್ವಯ. ಹೊರತು ಸಾಕ್ಷಾತ್ತಾಗಿ ಅಲ್ಲ. ಈ ವಿಷಯವನ್ನು ತಿಳಿಸಲೆಂದು 'ಅತ್ರ ನಾರಾಯಣಂ ಸನ್ನಮಾಮಿ ಇತ್ಯನ್ವಯಃ' ಎಂದು ಸುಧಾದಲ್ಲಿ ಹೇಳಿದ್ದಾರೆ. ಇಲ್ಲದಿದ್ದರೆ ನಾರಾಯಣಂ ಎಂಬುವುದರ ನಂತರ ವ್ಯವಧಾನವಿ-

ರುವುದರಿಂದ ಅನ್ವಯಪ್ರತೀತಿಯು ಸ್ಪಷ್ಟವಾಗಿರದ ಕಾರಣ ಸಂಶಯ ಬರುತ್ತಿತ್ತು. ಅಥವಾ ನಾರಾಯಣಂ ಎಂಬುದು ವಿಶೇಷಣ ಎಂದು ಭ್ರಮೆ ಬರುತ್ತಿತ್ತು.

ಶ್ಲೋಕದಲ್ಲಿ ನಮನಕ್ರಿಯೆಯ ಕರ್ತೃವನ್ನು ಹೇಳದೇ ಇದ್ದಾಗ ಕರ್ತೃವಿನ ಲಾಭ ಹೇಗೆ? ಎನ್ನುವುದಕ್ಕೆ ಉತ್ತರವಾಗಿ ಹೀಗೆ ಚಿಂತಿಸಬಹುದು. ಶ್ಲೋಕದಲ್ಲಿರುವ ಮಮ ಎಂಬ ಪದವನ್ನು ಅಹಂ ಎಂದು ಪ್ರಥಮಾಂತವಾಗಿ ವಿಪರಿಣಾಮಮಾಡಿಕೊಂಡು 'ಅಹಂ ಸನ್ನಮಾಮಿ' ಎಂಬುದಾಗಿ ನಮನಕ್ರಿಯೆಗೆ ಕರ್ತೃವಿನ ಲಾಭ ಆಗುವುದು. ಆದರೆ ಹೀಗಲ್ಲ ಎಂದು ತಿಳಿಸಲು 'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂಬ ಪಂಕ್ತಿ ಹೊರಟಿದೆ. ಇದರಿಂದ ಅವಶ್ಯ ಹೇಳಬೇಕಾದ ಕರ್ತೃವನ್ನು ಹೇಳದೇ ಇರುವ ಕಾರಣ ನ್ಯೂನತಾ ಎಂಬ ದೋಷ ಬರುವುದು ಎಂಬ ಶಂಕೆಗೆ ಅವಕಾಶವಿಲ್ಲ. 'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂಬ ಭಾಗದಿಂದ 'ಅಸ್ಮದ್ಯುತ್ತಮಃ' ಎಂಬ ಪಾಣಿನಿಯ ಸೂತ್ರದ ಸ್ಮರಣೆಯನ್ನು ತಂದುಕೊಡುತ್ತಿದ್ದಾರೆ. ಇದರ ಅರ್ಥ — ಅಸ್ಮದ್ ಶಬ್ದವು ಉಪಪದವಾಗಿ ಅರ್ಥಾತ್ ಸಮೀಪೋಚ್ಚರಿತವಾಗಿ ಕೇಳಿದರೂ ಕೇಳದೇ ಇದ್ದರೂ ಅದರ ಅರ್ಥವನ್ನು ಹೇಳುವ ಇಚ್ಛೆ ಇದ್ದಾಗ ಉತ್ತಮಪುರುಷ ಬರುವುದು ಎಂದು ಹೇಳಿದ್ದರಿಂದ, ಅಹಂ ಎನ್ನುವುದಕ್ಕೂ ಉತ್ತಮಪುರುಷಕ್ಕೂ ಅವಿನಾಭಾವಸಂಬಂಧ ಇರುವುದರಿಂದ 'ಏಕಸಂಬಂಧಿ-ಸ್ಮರಣಂ ಅಪರಸಂಬಂಧಿಸ್ಮಾರಕಮ್' ಎನ್ನುವ ನಿಯಮದಂತೆ ಅಹಂ ಎಂಬುವುದರ ಲಾಭವಾಗುವುದು.

## ಅತ್ರ ನಾರಾಯಣಂ ಸನ್ನಮಾಮಿ .... ಎನ್ನುವುದಕ್ಕೆ ಅವತಾರಿಕೆ

(ವಾಕ್ಯಾರ್ಥಚಂದ್ರಿಕಾ) – ನನ್ವತ್ರ ನಮನಕ್ರಿಯಾಯಾಃ ಸಕರ್ಮಕತ್ವಾತ್ 'ನಿಖಿಲ' ಇತ್ಯಾದೀನಾಮ್ ಅನೇಕೇಷಾಂ ಕರ್ಮಕಾರಕಾಣಾಂ ಮಿಲಿತಾನಾಮ್ ಏಕಕ್ರಿಯಾನ್ವಯಾನುಪಪತ್ತ್ಯಾ, ಪ್ರತ್ಯೇಕಂ ಕ್ರಿಯಾನ್ವಯೇ ಚ ವಾಕ್ಯಭೇದಾಪತ್ತ್ಯಾ, ವಿಶೇಷನಿಯಾಮಕಾಭಾವೇನ ಏಕಸ್ಯೈವ ಕ್ರಿಯಾನ್ವಯಾ-ಸಂಭವಾತ್ ಸನ್ನಿಧಾನಾದ್ ಅಂತ್ಯಸ್ಯೈವ ಕ್ರಿಯಾನ್ವಯೇ ವಿಶಿಷ್ಯ, ನಮ್ಯಸ್ವರೂಪನಿರ್ಧಾರಣಾ-ನಾಪತ್ತೇರ್ನ ಕರ್ಮಕ್ರಿಯಾನ್ವಯಃ ಅತ್ರ ಯುಕ್ತ ಇತ್ಯತ ಆಹ – ಅತ್ರೇತಿ ॥

ನಮನಕ್ರಿಯೆಗೆ ಒಂದು ಕರ್ಮವಿರಲೇ ಬೇಕು. ಆ ಕರ್ಮವು 'ನಿಖಿಲಪೂರ್ಣಗುಣೈಕದೇಹ' 'ನಿರ್ದೋಷ' ಮೊದಲಾದವುಗಳು. ಇವುಗಳನ್ನು ಸೇರಿಸಿ ಒಟ್ಟಿಗೆ ನಮನಕ್ರಿಯೆಯಲ್ಲಿ ಅನ್ವಯವನ್ನು ಮಾಡುವುದು ಅಸಾಧ್ಯ. ಏಕೆಂದರೆ ಏಕಕ್ರಿಯೆಯಲ್ಲಿ ಮಿಲಿತ ಅನೇಕಕಾರಕಗಳಿಗೆ ಅನ್ವಯವು ಅನುಪಪನ್ನ ಎಂಬ ನಿಯಮವಿದೆ. ಅದಕ್ಕಾಗಿ ಪ್ರತ್ಯೇಕವಾಗಿ 'ನಿಖಿಲಪೂರ್ಣಗುಣೈಕದೇಹವುಳ್ಳ-ವನಿಗೆ ನಮಸ್ಕಾರ' ದೋಷವಿಲ್ಲದಿರುವವನಿಗೆ ನಮಸ್ಕಾರ' ಎಂದು ಅನ್ವಯ ಮಾಡಿದರೆ ವಾಕ್ಯಭೇದದೋಷ ಬರುವುದು. ಇನ್ನು ಈ ಅನೇಕ ಕರ್ಮಕಾರಕಗಳಲ್ಲಿ ಒಂದಕ್ಕೆ ಕ್ರಿಯೆಯಲ್ಲಿ

ಅನ್ವಯ ಎನ್ನೋಣ ಅಂದರೆ ಇದರ ತೀರ್ಮಾನ ಅಶಕ್ಯ ಎಂದು ಉತ್ತರ. ಯಾವ ಒಂದಕ್ಕೆ ಅನ್ವಯವನ್ನು ಹೇಳುತ್ತೀರೋ ಅದನ್ನೇ ಹೇಳಲು ಏನಾದರೂ ಒಂದು ವಿಶೇಷನಿಯಾಮಕವನ್ನು ಹೇಳಬೇಕು. ಪ್ರಕೃತದಲ್ಲಿ ಅದಿಲ್ಲ. ಅಲ್ಲದೆ ವಿಶೇಷನಿಯಾಮಕ ಏನು? ಎಂದು ಚಿಂತಿಸಿದಾಗ ಕ್ರಿಯಾಪದ ಸನ್ನಿಹಿತವಾದ ಪದದ ಅರ್ಥಕ್ಕೆ ಕ್ರಿಯೆಯಲ್ಲಿ ಅನ್ವಯವು ಉಚಿತ ಎಂದು ತೋರುವುದು. ಈ ಪಕ್ಷದಲ್ಲಿ ಕೇವಲ 'ಸದಾ ಪ್ರಿಯತಮಂ ಮಮ' ಎನ್ನುವುದಕ್ಕೆ ಮಾತ್ರ ಸನ್ನಮಾಮಿ ಎಂಬ ಪದೋಕ್ತವಾದ ನಮನಕ್ರಿಯೆಯಲ್ಲಿ ಅನ್ವಯ. ಹೀಗೆ ಇದೊಂದಕ್ಕೆ ಕ್ರಿಯೆಯಲ್ಲಿ ಅನ್ವಯ ಮಾಡಿ ಇನ್ನಿತರ ಕರ್ಮಕಾರಕಗಳಿಗೆ ಇದರ ಮುಖಾಂತರ ನಮನಕ್ರಿಯೆಯಲ್ಲಿ ಅನ್ವಯ ಮಾಡೋಣ-ವೆಂದರೂ ಸರಿಯಲ್ಲ. ಏಕೆಂದರೆ, ನಮ್ಯವ್ಯಕ್ತಿಯ ಸ್ವರೂಪನಿರ್ಧಾರವಾಗದೇ ಅವನನ್ನು ನಮಸ್ಕರಿಸು-ವುದೇ ಅಸಾಧ್ಯ. ಹಾಗಾಗಿ ನಮ್ಯಸ್ವರೂಪದ ನಿರ್ಧಾರವೂ ಇಲ್ಲ ಎಂಬ ದೋಷವಿದೆ. ಹೀಗೆ ಕರ್ಮಕಾರಕಗಳಿಗೆ ಈ ಮಂಗಳಪದ್ಯದಲ್ಲಿ ಕ್ರಿಯೆಯಲ್ಲಿ ಅನ್ವಯವು ಅನುಪಪನ್ನ ಎಂದಾಯಿತು. ಇದಕ್ಕೆಲ್ಲ ಉತ್ತರವಾಗಿ – ಅತ್ರ ನಾರಾಯಣಂ ಸನ್ನಮಾಮಿ ಎಂಬ ಪ್ರಘಟ್ಟಕ ಹೊರಟಿದೆ.

## ಹಿಂದೆ ಮಾಡಿದ ಶಂಕೆಗಳ ಪರಿಹಾರ

(ವಾಕ್ಯಾರ್ಥಚಂದ್ರಿಕಾ)- ಅತ್ರ ಚ ಏಕಸ್ಯೈವ ನಮನಕರ್ಮತಯಾ ಉಪಪಾದನೇನ ಪ್ರತ್ಯೇಕ-ಮಿಲಿತಪಕ್ಷೋಕ್ತದೋಷದ್ವಯಸ್ಯ, ರೂಢಪದೋಪಾದಾನೇನ ವಿಶೇಷನಿಯಾಮಕಾಭಾವರೂಪ-ದೋಷಸ್ಯ ವಿಷ್ಣೌ ನಿರೂಢಪದೋಪಾದಾನೇನ ಅಂತಿಮದೋಷಸ್ಯ ಚ ನಿವೃತ್ತಿರಿತಿ ದ್ರಷ್ಟವ್ಯಮ್ ।

ಒಂದಕ್ಕೆ ನಮನಕ್ರಿಯೆಯಲ್ಲಿ ಅನ್ವಯವನ್ನು ಮಾಡುತ್ತೇವೆ. ಹಾಗಾಗಿ ಮಿಲಿತವಾದ ಕರ್ಮಕಾರಕಗಳಿಗೆ ಏಕಕ್ರಿಯಾನ್ವಯ ಹೇಗೆ ಎನ್ನುವ ಪ್ರಶ್ನೆ ಇಲ್ಲ. ಇನ್ನು ಪ್ರತ್ಯೇಕವಾಗಿ ಎಲ್ಲದಕ್ಕೂ ಅನ್ವಯ ಎಂಬ ಮಾತೂ ಇಲ್ಲ. ಒಂದನ್ನೇ ನಮನಕ್ರಿಯೆಯಲ್ಲಿ ಅನ್ವಯಿಸುವುದರಿಂದ. ಅಲ್ಲದೆ ಯಾವ ಒಂದಕ್ಕೆ ನಮನಕ್ರಿಯೆಯಲ್ಲಿ ಅನ್ವಯ ಎಂಬ ಪ್ರಶ್ನೆ ಉಳಿಯುವುದು. ಇದಕ್ಕೆ ವಿಶೇಷನಿಯಾಮಕವನ್ನೂ ಹೇಳಬೇಕು. ಪ್ರಕೃತ ನಾರಾಯಣನೊಬ್ಬನಿಗೇ ನೇರವಾಗಿ ನಮನಕ್ರಿಯೆಯಲ್ಲಿ ಅನ್ವಯ. ವಿಶೇಷನಿಯಾಮಕವಾದರೋ 'ನಾರಾಯಣ ಎಂಬುದು ರೂಢವಾದ ಪದವಾಗಿದೆ' ಎಂಬುದು. ಇನ್ನು ನಾರಾಯಣಪದದಿಂದ ನಮ್ಯಸ್ವರೂಪದ ನಿರ್ಧಾರವೂ ಆಗುವುದು. ಇಲ್ಲಿ ನಮ್ಯನು ವಿಷ್ಣುವೇ. ಏಕೆಂದರೆ ನಾರಾಯಣಪದವು ವಿಷ್ಣುವಿನಲ್ಲಿ ರೂಢ.

## ಸ್ವಮಾತ್ರಕರ್ತೃತ್ವಸಮರ್ಪಕ-ಅಹಂಪದ ಹೇಳದ ಪ್ರಯುಕ್ತ ನ್ಯೂನತಾ

(ವಾಕ್ಯಾರ್ಥಚಂದ್ರಿಕಾ) – ನನು 'ನಮಾಮಿ' ಇತಿ ಕರ್ತೃತಿಙಾ ಕರ್ತೃಮಾತ್ರಲಾಭೇಽಪಿ ತಸ್ಯ ಪರಕರ್ತೃತ್ವೇಽಪಿ ಉಪಪತ್ತ್ಯಾ ಸ್ವಮಾತ್ರಕರ್ತೃತ್ವಸಮರ್ಪಕ 'ಅಹಮ್' ಇತ್ಯನುಕ್ತೇಃ ನ್ಯೂನತಾ ಇತ್ಯತ ಆಹ – ಉತ್ತಮೇತಿ ॥

'ನಮಾಮಿ' ಎಂಬ ಪದದಲ್ಲಿ ತಿಙ್ ಪ್ರತ್ಯಯವಾದ ಮಿಪ್ ಇದೆ. ಇದರ ಅರ್ಥ ಕರ್ತೃ ಎಂದು. 'ಲಃ ಕರ್ಮಣಿ ಚ ಭಾವೇ ಚ ಅಕರ್ಮಕೇಭ್ಯಃ' ಎಂಬ ಸೂತ್ರದ ಪ್ರಕಾರ ಲಕಾರಗಳಿಗೆ ಕರ್ತೃಕರ್ಮಭಾವ ಎಂಬರ್ಥ ಇರುವುದರಿಂದ ಅದರ ಆದೇಶಗಳಿಗೂ ಆ ಅರ್ಥಗಳಿವೆ. ಪ್ರಕೃತ ನಮನಕ್ರಿಯೆಗೆ ಒಬ್ಬ ಕರ್ತೃವಿನ ಲಾಭವಾಗಿದೆ. ಆದರೂ ನಮಸ್ಕಾರಮಾಡುವವನು ಪರನೋ ಅಥವಾ ನಾನೋ ಎಂಬ ಸಂಶಯವುಳಿದಿದೆ. ಹಾಗಾಗಿ ನಾನೇ ಎಂಬ ನಿಶ್ಚಯವನ್ನು ಉಂಟುಮಾಡಲು 'ಅಹಂ' ಎಂದು ಹೇಳಲೇ ಬೇಕು. ಇಲ್ಲದಿದ್ದರೆ ನ್ಯೂನತಾ. ಅದಕ್ಕೋಸ್ಕರ 'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂದಿದ್ದಾರೆ.

## ಅಹಂ ಎಂಬುದರ ಆರ್ಥಿಕಲಾಭ

(ವಾಕ್ಯಾರ್ಥಚಂದ್ರಿಕಾ) – ಅತ್ರ ಯದೋಪಪದನಿಯಮೋ ಯುಷ್ಮದ್ಯುಪಪದೇ ಮಧ್ಯಮ ಏವ, ನ ಪ್ರಥಮೋತ್ತಮೌ ಅಸ್ಮದ್ಯುಪಪದೇ ಉತ್ತಮ ಏವ ನ ಪ್ರಥಮಮಧ್ಯಮೌ, ಶೇಷೇ ಪ್ರಥಮ ಏವ ನ ಮಧ್ಯಮೋತ್ತಮೌ ಇತ್ಯೇವಮಾಕಾರಕನಿಯಮಸ್ಯ ತುಲ್ಯಜಾತೀಯಾಪೇಕ್ಷತ್ವಾತ್ – ತದಾ ಯುಷ್ಮದೋ ಮಧ್ಯಮೇನ ಶೇಷಸ್ಯ ಚ ಪ್ರಥಮೇನ ನಿಯಮಿತತ್ವೇನ ತಯೋರುತ್ತಮಂ ಪ್ರತ್ಯಪ್ರಾಪ್ತೇರುತ್ತಮಂ ಪ್ರತಿ ಸ್ವನಿಯಮಿತಾಸ್ಮದ ಏವ ಉಪಪದತ್ವಮ್ ಆರ್ಥಿಕಮ್ ಇತ್ಯುತ್ತಮ-ಪ್ರಯೋಗಾದಹಮ್ ಇತ್ಯಸ್ಯಾರ್ಥಿಕೋ ಲಾಭಃ । 'ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ' ತಿಙ್-ವಾಚ್ಯಕಾರಕವಾಚಿನಿ ಯುಷ್ಮದಿ ಪ್ರಯುಜ್ಯಮಾನೇಽಪ್ರಯುಜ್ಯಮಾನೇ ಚ ಮಧ್ಯಮಃ ಸ್ಯಾತ್ । ಸ್ಥಾನಿನಿ ಇತ್ಯಸ್ಯ ವ್ಯಾಖ್ಯಾನಮ್ ಅಪ್ರಯುಜ್ಯಮಾನ ಇತಿ । 'ಅಸ್ಮದ್ಯು-ತ್ತಮಃ' । ತಥಾಭೂತೇಽಸ್ಮದ್ಯುತ್ತಮಃ ಸ್ಯಾತ್ । 'ಶೇಷೇ ಪ್ರಥಮಃ' । ಮಧ್ಯಮೋತ್ತಮಯೋ-ರವಿಷಯೇ ಪ್ರಥಮಃ ಸ್ಯಾತ್ ।

'ನಮಾಮಿ' ಎಂಬ ಉತ್ತಮಪುರುಷಪ್ರಯೋಗದಿಂದ ಅಹಂ ಎಂಬುವುದರ ಲಾಭವು ಅರ್ಥಾತ್ ಆಗುವುದೋ ಅಥವಾ ಸಾಕ್ಷಾತ್ತಾಗಿಯೋ? ಎನ್ನುವುದಕ್ಕೆ ಎರಡೂ ರೀತಿಯಾಗಿ ಎಂದು ಉತ್ತರವನ್ನು ನೀಡುತ್ತಿದ್ದಾರೆ. ವ್ಯಾಕರಣಶಾಸ್ತ್ರದ ಪ್ರಕಾರ 'ಅಹಂ' ಎನ್ನುವುದರ ಆರ್ಥಿಕಲಾಭವು ಇದೆ; ಸಾಕ್ಷಾಲ್ಲಾಭವೂ ಇದೆ. ವ್ಯಾಕರಣದಲ್ಲಿ ಎರಡು ನಿಯಮಗಳನ್ನು ವಿವರಿಸಿದ್ದಾರೆ. (1) ಉಪಪದ-ನಿಯಮ (2) ಪುರುಷ- ನಿಯಮ. ಉಪಪದನಿಯಮಪಕ್ಷದಲ್ಲಿ ಈ ಪ್ರಘಟ್ಟಕವು ಹೊರಟಿದೆ. ಉಪಪದನಿಯಮವೆಂದರೆ ಉಪಪದಬಲದಿಂದ ಸಿಗುವ ನಿಯಮ. ಉದಾ – 'ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ' 'ಅಸ್ಮದ್ಯುತ್ತಮಃ' 'ಶೇಷೇ ಪ್ರಥಮಃ' ಎಂದು ಮೂರು ಸೂತ್ರಗಳಿವೆ. ಇವುಗಳಲ್ಲಿ ಉಪಪದ ನಿಯಮದ ಆಕಾರ ಹೀಗೆ — (1) 'ಯುಷ್ಮದ್ಯುಪಪದೇ ಮಧ್ಯಮ ಏವ ನ ಪ್ರಥಮೋತ್ತಮೌ' (2) 'ಅಸ್ಮದ್ಯುಪಪದೇ ಉತ್ತಮ ಏವ ನ ಪ್ರಥಮಮಧ್ಯಮೌ'

(3) 'ಶೇಷೇ ಪ್ರಥಮ ಏವ ನ ಮಧ್ಯಮೋತ್ತಮೌ' ಎಂದು. ಇದರ ಅರ್ಥ - (1) ಯುಷ್ಮದ್‌ಶಬ್ದವು ಉಪಪದವಾಗಿದ್ದಾಗ ಮಧ್ಯಮಪುರುಷವೇ ಬರುವುದು. ಪ್ರಥಮ ಉತ್ತಮಪುರುಷಗಳಲ್ಲ. (2) ಅಸ್ಮದ್ ಶಬ್ದ ಉಪಪದವಾಗಿದ್ದಾಗ ಉತ್ತಮಪುರುಷವೇ ಹೊರತು ಪ್ರಥಮಮಧ್ಯಮಪುರುಷಗಳಲ್ಲ. (3) ಯುಷ್ಮದ್ ಅಸ್ಮದ್ ಶಬ್ದ ಬಿಟ್ಟು ಬೇರೆ ಸ್ಥಳಗಳಲ್ಲಿ ಪ್ರಥಮಪುರುಷವೇ ಮಧ್ಯಮಉತ್ತಮ-ಪುರುಷವಲ್ಲ ಎಂದು. ಪುರುಷತ್ವೇನ ಸಜಾತೀಯವಾದದ್ದರಲ್ಲೇ ನಿಯಮವನ್ನು ತೋರಿಸಲಾಗಿದೆ. ಇದರಿಂದಾಗಿ ತಿಳಿಯುವ ಅಂಶವಿದು. ಯುಷ್ಮದ್-ಶಬ್ದವು ಮಧ್ಯಮಪುರುಷದಿಂದ ನಿಯಮಿತ-ವಾಗಿದೆ. ಹಾಗೇ ಶೇಷವು ಪ್ರಥಮಪುರುಷದಿಂದ ನಿಯಮಿತವಾಗಿದೆ. ಹಾಗಾಗಿ ಉತ್ತಮ-ಪುರುಷವನ್ನು ಕುರಿತು ಯುಷ್ಮದ್ ಶಬ್ದವಾಗಲೀ ಬೇರೆ ಶಬ್ದವಾಗಲೀ ಉಪಪದವಾಗಲು ಅಸಾಧ್ಯ. ಆದ್ದರಿಂದ ಉತ್ತಮಪುರುಷವನ್ನು ಕುರಿತು ತನ್ನಿಂದ ನಿಯಮಿಸಲ್ಪಟ್ಟ ಅಸ್ಮದ್-ಶಬ್ದವೇ ಉಪಪದ-ವಾಗಿರಬೇಕು ಎಂದು ಅರ್ಥಾತ್ ಲಭ್ಯ. ಆದ್ದರಿಂದ ಉತ್ತಮಪ್ರಯೋಗದಿಂದ ಅಹಂ ಎಂಬುದು ಅರ್ಥಾತ್ ಸಿಗುವುದು ಎಂದು ತಿಳಿಯಬೇಕು.

'ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ' ಸೂತ್ರದ ಅರ್ಥ — ತಿಙ್‌ಪ್ರತ್ಯಯ-ದಿಂದ ಹೇಳಲ್ಪಡುವ ಕಾರಕವನ್ನು ಹೇಳುವ ಯುಷ್ಮದ್‌ಶಬ್ದವನ್ನು ಉಪಪದವಾಗಿ ಪ್ರಯೋಗಿಸಲಿ ಪ್ರಯೋಗಿಸದೇ ಇರಲಿ ಮಧ್ಯಮಪುರುಷವು ಬರುವುದು.

'ಅಸ್ಮದ್ಯುತ್ತಮಃ' ಎಂಬ ಸೂತ್ರದ ಅರ್ಥ — ಸಮಾನಾಧಿಕರಣೇ ಎಂಬ ಪದವನ್ನು ಪೂರ್ವಸೂತ್ರ-ದಿಂದ ಸ್ವೀಕರಿಸಲಾಗಿದೆ. ಸಮಾನಾಧಿಕರಣೇ ಎನ್ನುವುದರ ತಾತ್ಪರ್ಯ - ತಿಙ್‌ವಾಚ್ಯಕಾರಕವಾಚಿನಿ ಎಂದು. ತದ್ವಾಚ್ಯವಾಚಿತ್ವಂ ಎಂದು ಭಾವ. ತತ್ ಎಂದರೆ ಸನ್ನಮಾಮಿ ಎಂಬಲ್ಲಿರುವ ತಿಙ್-ಪ್ರತ್ಯಯ. ಅದರಿಂದ ಹೇಳಲ್ಪಡುವ ಕಾರಕವೆಂದರೆ ಕರ್ತೃಕಾರಕ. ಅದನ್ನು ಹೇಳುವ ಅಸ್ಮಚ್ಛಬ್ದವನ್ನು ಉಪಪದವಾಗಿ ಪ್ರಯೋಗ ಮಾಡಲಿ ಮಾಡದೇ ಇರಲಿ ಉತ್ತಮಪುರುಷವು ಬರುವುದು. ಈ ಸೂತ್ರದಲ್ಲಿ ಸ್ಥಾನಿನಿ ಎಂಬ ಅನುವೃತ್ತವಾದ ಪದಕ್ಕೆ ಅಪ್ರಯುಜ್ಯಮಾನೇ ಎಂದರ್ಥ. 'ಶೇಷೇ ಪ್ರಥಮಃ' — ಮಧ್ಯಮ ಉತ್ತಮಪುರುಷಗಳ ಭಿನ್ನಸ್ಥಳದಲ್ಲಿ ಅರ್ಥಾತ್ ಯುಷ್ಮದ್ ಅಸ್ಮದ್ ಶಬ್ದ ವ್ಯತಿರಿಕ್ತಸ್ಥಳದಲ್ಲಿ ಪ್ರಥಮಪುರುಷ ಪ್ರಾಪ್ತಿ. ಹಿಂದಿನಂತೆಯೇ ಈ ಸೂತ್ರದ ಅರ್ಥವರ್ಣನೆ.

## ಆರ್ಥಿಕತ್ವ, ಸಾಕ್ಷಾತ್ವರೂಪ-ಅವಾಂತರವಿಶೇಷ

(ವಾಕ್ಯಾರ್ಥರತ್ನಮಾಲಾ)– ಉತ್ತಮಪುರುಷಪ್ರಯೋಗಾತ್ ಅಹಮಿತಿಪದಸ್ಯ ಲಾಭೇಽಪಿ ಆರ್ಥಿಕತ್ವಸಾಕ್ಷಾತ್ವರೂಪಾವಾಂತರವಿಶೇಷಂ ವಕ್ತುಂ ತದ್ವಿಶೇಷಸ್ಯ 'ಅಸ್ಮದುತ್ತಮಃ' ಇತ್ಯಾದಿ ಸೂತ್ರೀಯೋಪಪದನಿಯಮಾರ್ಥತ್ವರೂಪಪಕ್ಷಭೇದಾಧೀನತ್ವಾತ್ ಉಕ್ತಪಕ್ಷಭೇದೋಪಪಾದನ–

ಪೂರ್ವಕಂ ತತ್ತತ್ಪಕ್ಷೇಽಹಮಿತ್ಯಸ್ಯ ಪ್ರಾಪ್ತಿಂ ಚ ವಿವೇಕೇನಾಹ — **ಅತ್ರ ಯದೇತ್ಯಾದಿನಾ ಆಶಯ ಇತ್ಯಂತೇನ ॥** ..........

'ನಮಾಮಿ' ಎಂದು ಉತ್ತಮಪುರುಷಪ್ರಯೋಗ ಮಾಡಿದಾಗ 'ಅಹಂ' ಎಂಬ ಪದದ ಲಾಭ-ವಾಗುವುದು. ಆದರೆ ಅಲ್ಲಿ ಒಂದು ವಿಶೇಷವಿದೆ. ಅರ್ಥಿಕಅಹಂ ಪದದ ಲಾಭ ಹಾಗೂ ಸಾಕ್ಷಾತ್ ಅಹಂ ಪದದ ಲಾಭ ಎಂದು. ಈ ರೀತಿಯ ವಿಶೇಷವನ್ನು ಹೇಳಲು ಮೊದಲಿಗೆ 'ಅಸ್ಮದ್ಯುತ್ತಮಃ' ಮುಂತಾದ ಸೂತ್ರಗಳಿಗೆ ಸಂಬಂಧಪಟ್ಟ ಉಪಪದನಿಯಮ ಪುರುಷನಿಯಮ ಎಂಬ ಪಕ್ಷಭೇದ-ವನ್ನು ತಿಳಿಯಬೇಕು. ಅದಕ್ಕೋಸ್ಕರ ಒಂದೊಂದು ನಿಯಮಗಳಲ್ಲಿ ನಿರೂಪಣೆ ಮಾಡಿದ ವಿಷಯವನ್ನು ತಿಳಿಸುತ್ತಾರೆ - 'ಅತ್ರ ಯದಾ' ಎಂದು ಪ್ರಾರಂಭಿಸಿ 'ಆಶಯಃ' ಎನ್ನುವವರೆಗೆ.

## ಮಹಾಭಾಷ್ಯಕಾರರ ಉಪಪದನಿಯಮ

(ವಾಕ್ಯಾರ್ಥರತ್ನಮಾಲಾ)- ಯದ್ಯಪಿ ಮಹಾಭಾಷ್ಯಕೃತಾ ಕಿಮಯಮ್ ಉಪಪದನಿಯಮಃ । ಯುಷ್ಮದಿ ಮಧ್ಯಮ ಏವ, ಅಸ್ಮದ್ಯುತ್ತಮ ಏವೇತಿ, ಯುಷ್ಮದಸ್ಮದೋರೇವ ಉಪಪದನಿಯಮೋ ದರ್ಶಿತಃ, ತಥಾಪಿ ಸಮಾನನ್ಯಾಯತಯಾ ಶೇಷೇ ಪಕ್ಷೇಽಪಿ ಉಪಪದನಿಯಮಸ್ಯ ಪ್ರಾಪ್ತಸ್ಯ ಪರಿತ್ಯಾಗಾಯೋಗ ಇತಿ ಭಾವೇನ 'ಶೇಷೇ ಪ್ರಥಮ ಏವ' ಇತ್ಯಾದಿಕಮ್ ಉಕ್ತಮ್ । ಅತ ಏವ ಮಂಜರ್ಯಾಮ್ "ಉಪಪದನಿಯಮೋ ವಾ ಸ್ಯಾತ್ ಯುಷ್ಮದ್ಯುಪಪದೇ ಮಧ್ಯಮ ಏವ । ಅಸ್ಮದ್ಯುಪಪದೇ ಉತ್ತಮ ಏವ । ಶೇಷೇ ಪ್ರಥಮ ಏವೇತಿ ತ್ರಿತಯಮಪ್ಯುಕ್ತಂ ಭಾಷ್ಯ-ಕಾರೇಣಾಪಿ । ಅಥೋಪಪದನಿಯಮಃ ಇತ್ಯಾದಿಗ್ರಂಥೇ ಶೇಷನಿಯಮಾರ್ಥಂ ಶೇಷೇ ಪ್ರಥಮ ಏವ ಭವತಿ ನಾನ್ಯ ಇತಿ" ಇತ್ಯುಕ್ತಮಿತಿ ನ ಕಶ್ಚಿತ್ ದೋಷಃ ಇತಿ ಜ್ಞಾತವ್ಯಮ್ ।

ಯುಷ್ಮದಿ ಉಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ ಅಸ್ಮದ್ಯುತ್ತಮಃ ಶೇಷೇ ಪ್ರಥಮಃ ಎಂಬ ಪಾಣಿನಿಯ ಸೂತ್ರಗಳ ವಿಷಯದಲ್ಲಿ ಭಾಷ್ಯಕಾರರು ಎರಡು ವಿಷಯದಲ್ಲಿ ಉಪಪದನಿಯಮವನ್ನು ತೋರಿಸಿದ್ದಾರೆ. 'ಯುಷ್ಮದಿ ಮಧ್ಯಮ ಏವ' 'ಅಸ್ಮದಿ ಉತ್ತಮ ಏವ' ಎಂದು. ಇದರಂತೆ ಸಮಾನವಾಗಿರುವ ಕಾರಣದಿಂದ ಪ್ರಥಮಪುರುಷದಲ್ಲಿ 'ಶೇಷೇ ಪ್ರಥಮ ಏವ' ಎಂದು ನಿಯಮವನ್ನು ಸ್ವೀಕರಿಸಬೇಕು. 'ಪ್ರಾಪ್ತಸ್ಯ ಪರಿತ್ಯಾಗಾಯೋಗಾತ್' ಎಂದಂತೆ ಪ್ರಾಪ್ತವಾದ ನಿಯಮವನ್ನು ಬಿಡುವುದು ಅನುಚಿತ. ಆದ್ದರಿಂದಲೇ ಪದಮಂಜರಿಯಲ್ಲಿ 'ಉಪಪದನಿಯಮೋ ವಾ ಸ್ಯಾತ್ ಯುಷ್ಮದುಪಪದೇ ಮಧ್ಯಮ ಏವ, ಅಸ್ಮದ್ಯುಪಪದೇ ಉತ್ತಮ ಏವ, ಶೇಷೇ ಪ್ರಥಮ ಏವ' ಎಂದು ಹಾಗೂ ಭಾಷ್ಯಕಾರರಿಂದಲೂ 'ಅಥೋಪಪದನಿಯಮಃ ಇತ್ಯಾದಿ ಗ್ರಂಥೇ ಶೇಷನಿಯಮಾರ್ಥಂ ಶೇಷೇ ಪ್ರಥಮ ಏವ ಭವತಿ ನಾನ್ಯ ಇತಿ' ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

## ತುಲ್ಯಜಾತೀಯವ್ಯಾವೃತ್ತೇಃ ನಿಯಮಫಲತ್ವಾತ್

(ವಾಕ್ಯಾರ್ಥರತ್ನಮಾಲಾ)– ನನು 'ಯತೋ ಏವಕಾರಃ ತತೋಽನ್ಯತ್ರ ತತ್ಫಲಮಿ'ತಿ ನ್ಯಾಯೇನ ಮಧ್ಯಮ ಏವ ಇತ್ಯಾದ್ಯೇವಕಾರೇಣ ಯುಷ್ಮದ್ಯುಪಪದೇ ಪ್ರಥಮೋತ್ತಮನಿವಾರಣಾರ್ಥಮ್ । ಅಸ್ಮದ್ಯುಪಪದೇ ಪ್ರಥಮಮಧ್ಯಮನಿವಾರಣಮ್ ಇತ್ಯಾದಿಕಂ ವಾಚ್ಯಮ್ । ನ ಚ ತತ್ ಯುಕ್ತಮ್ । ಯುಷ್ಮದಾದೌ ಉಪಪದೇ ಮಧ್ಯಮಾದ್ಯತಿರಿಕ್ತಪ್ರತ್ಯಯಾಂತರಸ್ಯಾಪಿ ನಿವಾರಣಸ್ಯ ಮಧ್ಯಮ ಏವೇತ್ಯಾದ್ಯೇವಕಾರೇಣ ಕೃತತ್ವಪ್ರಾಪ್ತ್ಯಾ ಶತೃಶಾನಚ್-ತೃಜಾದೇರಪಿ ವ್ಯಾವೃತ್ತಿಪ್ರಾಪ್ತ್ಯಾ ಕುರ್ವಂಸ್ತ್ವಂ, ಕುರ್ವಾಣಸ್ತ್ವಂ, ಕರ್ತಾ ತ್ವಂ, ಕಾರಕಸ್ತ್ವಂ, ಕುರ್ವನ್ನಹಮ್ ಇತ್ಯಾದಿ-ಪ್ರಯೋಗಾನುಪಪತ್ತಿಪ್ರಸಂಗಾತ್ ಇತ್ಯತಃ 'ತುಲ್ಯಜಾತೀಯವ್ಯಾವೃತ್ತೇಃ ನಿಯಮಫಲತ್ವಾತ್' ಇತಿ ಕೈಯ್ಯಟಾದ್ಯನುಸೃತ್ಯ ಮಧ್ಯ ಏವೇತ್ಯಾದಿನಿಯಮೇನಾನ್ಯವ್ಯಾವೃತ್ತೌ ಪ್ರತೀಯಮಾನಾಯಾಂ ತುಲ್ಯಜಾತೀಯಪ್ರಥಮೋತ್ತಮಾದಿನಿಯಮ್ಯವಿಶೇಷಸ್ಯೈವೋಪಸ್ಥಿತ್ಯಾ ತಸ್ಯಾಃ ತದ್ವಿಶೇಷಮಾತ್ರ-ವಿಷಯಕತ್ವೇನ ವಿಜಾತೀಯಶತ್ರಾದಿಪ್ರತ್ಯಯಾಂತರಸ್ಯ ತತ್ರಾನುಪಸ್ಥಿತತ್ವೇನ ತದ್ವಿಷಯಕತ್ವಾ-ಭಾವಾದಿತ್ಯಾಶಯೇನಾಹ — ನಿಯಮಸ್ಯ ತುಲ್ಯಜಾತೀಯೇತಿ ॥ ನಿಯಮ್ಯೇನ ತುಲ್ಯಜಾತೀಯಂ ಯತ್ ತದಪೇಕ್ಷಿತತ್ವಾತ್ ನಿಯಮ್ಯತುಲ್ಯಜಾತೀಯವ್ಯಾವೃತ್ತಿಫಲಕತ್ವಾದಿತಿ ಫಲಿತೋಽರ್ಥೋ ಜ್ಞೇಯಃ । ಯುಷ್ಮದೋ ಮಧ್ಯಮೇನೇತಿ ॥ ಯತಃ ಏವಕಾರಃ ತತೋಽನ್ಯತ್ರ ಫಲಮಿತಿ ತತ್ ಪ್ರಾಗುಕ್ತನ್ಯಾಯೇನ ಯುಷ್ಮದ್ಯುಪಪದೇ ಮಧ್ಯಮ ಏವೇತ್ಯನೇನ ಪ್ರಥಮೋತ್ತಮಸಂಬಂಧವ್ಯಾವೃತ್ತೌ ಕೃತಾಯಾಂ ಮಧ್ಯಮೇನ ಯುಷ್ಮದೋ ನಿಯಮಿತತ್ವಮ್ ।

ಅಲ್ಲ! 'ಯತಃ ಏವಕಾರಃ ಅನ್ಯತ್ರ ತತ್ಫಲಮ್' ಎಂಬ ನಿಯಮದಂತೆ ಯಾವುದರ ಮುಂದೆ ಏವಶಬ್ದ ಇದೆಯೋ ಅದಕ್ಕಿಂತ ಬೇರೆ ಕಡೆ ಏವಕಾರದ ಫಲವಿರುತ್ತದೆ. ಏವಕಾರದ ಅರ್ಥ ಅನ್ಯಯೋಗ-ವ್ಯವಚ್ಛೇದ. ವ್ಯವಚ್ಛೇದ ಎಂದರೆ ವ್ಯಾವೃತ್ತಿ. ಪ್ರಕೃತ ಮಧ್ಯಮ ಏವ ಎಂದಾಗ ಮಧ್ಯಮ ಎಂಬ ಶಬ್ದದ ಮುಂದೆ ಏವಕಾರವಿದೆ. ಅದು ಮಧ್ಯಮಕ್ಕಿಂತ ಅನ್ಯವಾದ ಉತ್ತಮ ಪ್ರಥಮಪುರುಷಗಳ ಸಂಬಂಧವನ್ನು ಯುಷ್ಮದ್‌ಶಬ್ದಕ್ಕೆ ವ್ಯಾವೃತ್ತಿ ಮಾಡುತ್ತಿದೆ. ಹಾಗೆ ಅಸ್ಮದ್‌ಶಬ್ದವು ಉಪಪದ-ವಾಗಿದ್ದಾಗ ಪ್ರಥಮ ಮಧ್ಯಮಪುರುಷವನ್ನು ವಾರಣೆ ಮಾಡಲು ಏವಶಬ್ದವಿದೆ. ಆದರೆ ಒಂದು ದೋಷವು ಬರುವುದು. — ಏನೆಂದರೆ ಏವಕಾರದಿಂದ ಹೇಗೆ ಪುರುಷಾಂತರವ್ಯಾವೃತ್ತಿಯು ಆಗುವುದೋ ಹಾಗೆ ಯುಷ್ಮದಾದಿಗಳು ಉಪಪದವಾಗಿರುವಾಗ ಮಧ್ಯಮಾದಿಗಳನ್ನು ಬಿಟ್ಟು ಬೇರೆ ಪ್ರತ್ಯಯಗಳ ವ್ಯಾವೃತ್ತಿಯು ಆಗುತ್ತಿತ್ತು. ಆಗ ಶತೃ-ಶಾನಚ್ ತೃಚ್ ಮೊದಲಾದ ಪ್ರತ್ಯಯಗಳು ಯುಷ್ಮದ್ ಪದ ಉಪಪದವಾದಾಗ ಬರಲು ಸಾಧ್ಯವಾಗುತ್ತಿರಲಿಲ್ಲ. ಹಾಗಾಗಿ ಕುರ್ವಂಸ್ತ್ವಂ, ಕುರ್ವಾಣಸ್ತ್ವಂ, ಕರ್ತಾ ತ್ವಂ, ಕಾರಕಸ್ತ್ವಂ, ಕುರ್ವನ್ನಹಮ್ ಇತ್ಯಾದಿ ಪ್ರಯೋಗಗಳು ಕೂಡುತ್ತಿರಲಿಲ್ಲ

- ಎಂದು. ಇದಕ್ಕೆ ಉತ್ತರ – 'ತುಲ್ಯಜಾತೀಯವ್ಯಾವೃತ್ತೇಃ ನಿಯಮಪರತ್ವಾತ್' ಎಂಬ ಕೈಯಟನ ಮಾತಿನಂತೆ ಒಂದು ನಿಯಮದಿಂದ ವ್ಯಾವೃತ್ತಿಮಾಡಬೇಕಾದರೆ ನಿಯಮ್ಯತುಲ್ಯಜಾತೀಯ-ವಾದದ್ದನ್ನೇ ವ್ಯಾವೃತ್ತಿಮಾಡುವುದು ಅಭಿಮತ. ಪ್ರಕೃತದಲ್ಲಿ 'ಮಧ್ಯಮ ಏವ' ಎಂಬ ನಿಯಮದಿಂದ ಮಧ್ಯಮಸಜಾತೀಯವಾದ ಉತ್ತಮಪುರುಷಪ್ರಥಮಪುರುಷಗಳನ್ನೇ ವ್ಯಾವೃತ್ತಿ ಮಾಡುವುದು ಉಚಿತ. ಶತೃ-ಶಾನಚ್ ಮೊದಲಾದ ಪ್ರತ್ಯಯಾಂತರಗಳಲ್ಲ. ಹಾಗಾಗಿ ದೋಷವಿಲ್ಲ. ಅಲ್ಲದೆ ವ್ಯಾವೃತ್ತಿಮಾಡುವ ಕಾಲದಲ್ಲಿ ಪ್ರತೀತಿಯಲ್ಲಿ ಉತ್ತಮಪ್ರಥಮಪುರುಷಗಳೇ ಉಪಸ್ಥಿತ ಹೊರತು ಶತೃ-ಶಾನಚ್ ಪ್ರತ್ಯಯಗಳಲ್ಲ.

## ಉಪಪದನಿಯಮಪಕ್ಷ ಹಾಗೂ ಪುರುಷನಿಯಮಪಕ್ಷ

(ವಾಕ್ಯಾರ್ಥರತ್ನಮಾಲಾ) – ಏವಂ ಪ್ರಥಮ ಏವೇತ್ಯನೇನಾಪಿ ಶೇಷಸ್ಯ ಮಧ್ಯಮೋತ್ತಮ-ಸಂಬಂಧವ್ಯಾವೃತ್ತಿಮುಖೇನ ಪ್ರಥಮೇನ ನಿಯಮಿತತ್ವಮಿತ್ಯರ್ಥಃ । **ತಯೋರಿತಿ** ॥ ಯುಷ್ಮ-ಚ್ಛೇಷಯೋರಿತ್ಯರ್ಥಃ । ಅಪ್ರಾಪ್ತೇಃ ॥ ಉಪಪದತ್ವೇನಾಪ್ರಾಪ್ತೇರಿತ್ಯರ್ಥಃ । ಉಪಪದತ್ವಮಾರ್ಥಿಕ-ಮಿತಿ ॥ ಅಸ್ಮದ್ಯುಪಪದೇ ಉತ್ತಮ ಏವೇತಿ । ನಿಯಮೇನ ಅಸ್ಮದ್ಯುಪಪದಸ್ಯ ಪುರುಷಾಂತರ-ಸಂಬಂಧವ್ಯಾವೃತ್ತೌ ಕೃತಾಯಾಮಪಿ ಉತ್ತಮಪುರುಷಸ್ಯ ನೋಪಪದಾಂತರಸಂಬಂಧವ್ಯಾವೃತ್ತಿಃ ಕ್ರಿಯತೇ । ಉಪಪದನಿಯಮಪಕ್ಷೇ ತದ್ವ್ಯಾವೃತ್ತಿಪ್ರಾಪಕಾಭಾವಾತ್ । ತತಶ್ಚ ಉಚ್ಛೃಂಖಲೇನ ಉತ್ತಮೇನಾಸ್ಮದೋ ನಿಯಮಿತತ್ವೇಽಪಿ ನೋತ್ತಮಬಲಾತ್ ಅಸ್ಮದ ಏವ ಉಪಪದತ್ವಂ ಸಿದ್ಧ್ಯತಿ । ಅತ ಏವ ಪುರುಷನಿಯಮಪಕ್ಷೇ ಉತ್ತಮಸ್ಯಾಸ್ಮದರ್ಥಂ ವಿನಾ ಅಸಂಭವಾತ್ ಉತ್ತಮಂ ಪ್ರತಿ ಅಸ್ಮದ ಏವ ಉಪಪದತ್ವಮಿತಿ ಸಾಕ್ಷಾದೇವ ಉತ್ತಮೇನ ಅಸ್ಮದೋ ಲಾಭಃ ಇತಿ ವಕ್ಷ್ಯತೇ । ಉತ್ತಮಂ ಪ್ರತಿ ಅಸ್ಮದ ಏವ ಯದುಪಪತ್ವಂ ತಸ್ಯ ಯದಾರ್ಥಿಕತ್ವಂ ತಮುಪ-ಪಾದನಾಯೈವ 'ಯುಷ್ಮದೋ ಮಧ್ಯಮೇನ' ಇತ್ಯಾದಿ ಪೂರ್ವಗ್ರಂಥ ಇತಿ ದ್ರಷ್ಟವ್ಯಮ್ । ಆರ್ಥಿಕೋ ಲಾಭ ಇತಿ ॥ ಅನೇನ 'ಉತ್ತಮಪುರುಷಪ್ರಯೋಗಾತ್ ಅಹಮಿತಿ ಲಭ್ಯತೇ' ಇತ್ಯೇತತ್ಪ್ರಯೋಗಾತ್ ಅಹಮ್ ಇತ್ಯೇತದರ್ಥತೋ ಲಭ್ಯತ ಇತ್ಯೇವಮೇಕೇನ ಪ್ರಕಾರೇಣ ವ್ಯಾಖ್ಯಾತಂ ಭವತಿ ।

'ಯತೋ ಏವಕಾರಃ ತತೋಽನ್ಯತ್ರ ಫಲಮ್' ಎಂಬ ನಿಯಮದಂತೆ ಯುಷ್ಮದ್‌ಶಬ್ದವು ಉಪ-ಪದವಾಗಿದ್ದಾಗ ಮಧ್ಯಮಪುರುಷವೇ ಬರುವುದು. ಬೇರೆಯದ್ದಲ್ಲ. ಎಂದು ಹೇಳಿದ್ದರಿಂದ ಪ್ರಥಮ-ಪುರುಷ-ಉತ್ತಮಪುರುಷವನ್ನು ವ್ಯಾವೃತ್ತಿಮಾಡಿದಂತಾಯಿತು. ಹಾಗಾಗಿ ಮಧ್ಯಮಪುರುಷದಿಂದ ಯುಷ್ಮದ್ ಶಬ್ದವು ನಿಯಮಿತವಾಗಿದೆ. ಅರ್ಥಾತ್ ಯುಷ್ಮದ್ ಶಬ್ದವಿದ್ದಾಗ ಮಧ್ಯಮಪುರುಷವೇ.

ಹೀಗೆ ಪ್ರಥಮ ಏವ ಎಂಬುದರಿಂದಲೂ ಶೇಷಕ್ಕೆ ಮಧ್ಯಮಉತ್ತಮಪುರುಷಗಳನ್ನು ವ್ಯಾವೃತ್ತಿ-ಮಾಡುವ ಮುಖಾಂತರ ಪ್ರಥಮಪುರುಷದಿಂದ ನಿಯಮಿತವಾಗಿದೆ ಶೇಷಪದಾರ್ಥ ಎಂದು ತಿಳಿಯಬೇಕು. ಇನ್ನು ಅಸ್ಮದ್ ಶಬ್ದವು ಉಪಪದವಾಗಿದ್ದಾಗ ಉತ್ತಮಪುರುಷವೇ ಪ್ರಾಪ್ತವಾಗುತ್ತದೆ ಬೇರೆ ಪುರುಷಗಳಲ್ಲ. ಅಸ್ಮದ್‌ಶಬ್ದವು ಉಪಪದವಾಗಿದ್ದಾಗ ಉತ್ತಮಪುರುಷವನ್ನು ಬಿಟ್ಟು ಬೇರೆ ಪುರುಷಗಳು ಬರುವುದಿಲ್ಲ ಎಂದು ವ್ಯಾವೃತ್ತಿಮಾಡಲು ಬಂದರೂ ಉತ್ತಮಪುರುಷವಿದ್ದಾಗ ಅಸ್ಮದ್ ಶಬ್ದವನ್ನು ಬಿಟ್ಟು ಬೇರೆ ಶಬ್ದವನ್ನು ಉಪಪದವನ್ನಾಗಿ ಸ್ವೀಕಾರ ಮಾಡಬಾರದು ಎಂಬ ನಿಯಮ ಸಿದ್ಧಿಸುವುದಿಲ್ಲ. ಏಕೆಂದರೆ ಉಪಪದ- ನಿಯಮಪಕ್ಷದಲ್ಲಿ ಉಪಪದಾಂತರವ್ಯಾವೃತ್ತಿಯನ್ನು ಮಾಡುವ ಸಾಧನವೇನಿಲ್ಲ. ಹಾಗಾಗಿ ಸ್ವಚ್ಛಂದವಾಗಿ ಉತ್ತಮಪುರುಷದಿಂದ ಅಸ್ಮದ್ ಶಬ್ದವು ನಿಯಮಿತ ಎಂದಾಗಲೀ ಉತ್ತಮಪುರುಷದ ಬಲದಿಂದ ಅಸ್ಮದ್ ಶಬ್ದವೇ ಉಪಪದವಾಗಬೇಕೆಂದು ಸಿದ್ಧಿಸುವುದಿಲ್ಲ. ಆದ್ದರಿಂದಲೇ ಪುರುಷನಿಯಮಪಕ್ಷದಲ್ಲಿ ಉತ್ತಮಪುರುಷವು ಅಸ್ಮದ್‌ಶಬ್ದದ ಅರ್ಥವನ್ನು ಬಿಟ್ಟಿರಲು ಸಾಧ್ಯವಿಲ್ಲದಿರುವುದರಿಂದ ಉತ್ತಮಪುರುಷವನ್ನು ಕುರಿತು ಅಸ್ಮದ್ ಶಬ್ದವೇ ಉಪಪದವಾಗಬೇಕೆಂಬ ಅಂಶವು ಸಾಕ್ಷಾತ್ತಾಗಿಯೇ ಸಿಗುವುದು ಎಂದು ಮುಂದೆ ಹೇಳಲಾಗುತ್ತದೆ. ಉತ್ತಮಪುರುಷವನ್ನು ಕುರಿತು ಅಸ್ಮದ್ ಶಬ್ದವೇ ಉಪಪದ ಹಾಗೂ ಅದು ಆರ್ಥಿಕ ಎಂದು ಉಪಪಾದನೆ ಮಾಡುವುದಕ್ಕಾಗಿ 'ಯುಷ್ಮದೋ ಮಧ್ಯಮೇನ' ಮುಂತಾದ ಹಿಂದಿನ ಗ್ರಂಥವಿದೆ.

ಇದರಿಂದ 'ಉತ್ತಮಪುರುಷಪ್ರಯೋಗಾತ್ ಅಹಮಿತಿ ಲಭ್ಯತೇ' ಎಂಬ ಸುಧಾಪಂಕ್ತಿಗೆ ಹೀಗೆ ವಿವರಿಸಿದಂತಾಯಿತು. 'ಸನ್ನಮಾಮಿ' ಎಂದು ಉತ್ತಮಪುರುಷಪ್ರಯೋಗ ಮಾಡಿದ್ದರಿಂದ ಅಹಂ ಎಂಬ ಪದವು ಅರ್ಥತಃ ಸಿಗುತ್ತದೆ ಎಂದು. ಇದು ಒಂದು ವಿಧವಾದ ವ್ಯಾಖ್ಯಾನ.

## ಉಪಪದನಿಯಮದ ವಿವರಣೆ

(ವಾಕ್ಯಾರ್ಥಚಂದ್ರಿಕಾ) – ಉಪಪದನಿಯಮೇ ಯುಷ್ಮದಸ್ಮದೀ ನಿಯತೇ, ಪುರುಷಾಃ ಶೇಷಶ್ಚಾನಿಯತಾಃ ಇತಿ ಪ್ರಥಮ ಇತ್ಯೇತಾವತ್ಯೇವ ಉಚ್ಯಮಾನೇನ ನಿಯಮೋ ವಿಜ್ಞಾಯತೇ । ಅತ್ರ ನಿಯಮ್ಯಾಂತರಾಭಾವಾತ್ ಪ್ರಥಮ ಏವ ನಿಯಮ್ಯಃ । ಯತ್ರ ಚ ಪ್ರಥಮಾಪ್ರಥಮಪ್ರಸಂಗಃ ತತ್ರೈವ ಚೈವಂವಿಧೋ ನಿಯಮಃ ಕರ್ತವ್ಯಃ । ಶೇಷ ಏವ ಚ ತತ್ಪ್ರಸಂಗ ಇತಿ ತತ್ರೈವ ನಿಯಮೋ ವಿಜ್ಞಾಯತ ಇತಿ ಶೇಷಗ್ರಹಣಂ ವ್ಯರ್ಥಮ್ । ಪುರುಷನಿಯಮೇ ತು ಮಧ್ಯಮೋತ್ತಮೌ ನಿಯತೌ ಯುಷ್ಮದಸ್ಮದೀ ಅನಿಯತೇ ಶೇಷಶ್ಚ । ತತ್ರ ಯುಷ್ಮದಸ್ಮದೋರಪಿ ಪ್ರಥಮಪ್ರಸಂಗೇ ಶೇಷ ಏವ ಪ್ರಥಮ ಇತಿ ನಿಯಮಃ ಕರ್ತವ್ಯಃ । ನ ಚಾಂತರೇಣ ಶೇಷಗ್ರಹಣಮೇವಂ ಶಕ್ಯತೇ ಕರ್ತುಮ್ ಇತಿ ಕರ್ತವ್ಯಂ ಶೇಷಗ್ರಹಣಮ್ – ಇತಿ ಶೇಷಗ್ರಹಣಂ ಕುರ್ವತಃ ಸೂತ್ರಕಾರ-

ಸ್ವಾಭಿಮತೋ ಯುಷ್ಮದ್ಯೇವ ಮಧ್ಯಮಃ, ಅಸ್ಮದ್ಯೇವೋತ್ತಮಃ, ಶೇಷ ಏವ ಪ್ರಥಮ ಇತ್ಯೇವ-ಮಾಕಾರಪುರುಷನಿಯಮೋ ಯದಾ ತದಾ ಉತ್ತಮಪುರುಷಸ್ಯಾಸ್ಮದರ್ಥಂ ವಿನಾಽಸಂಭವಾತ್ ಸಾಕ್ಷಾದೇವೋತ್ತಮಪುರುಷಪ್ರಯೋಗಾದಹಂ ಇತ್ಯಸ್ಯ ಲಾಭೋ ನ ತು ಪೂರ್ವವದಾರ್ಥಿಕ ಇತ್ಯುಭಯಥಾಽಪಿ 'ಅಹಮ್' ಇತ್ಯಸ್ಯ ಲಾಭಾತ್ ನ ನ್ಯೂನತಾ ಇತ್ಯಾಶಯಃ । ಏವಕಾರಃ ಉಭಯಥಾಽರ್ಥಲಾಭಸಂಭವೇಽಪಿ ಲಾಘವಮ್ ಏತತ್ಪಕ್ಷೋದ್ಬಲಕಮ್ ಇತಿ ಸೂಚಯತಿ ।

ಉಪಪದನಿಯಮದಲ್ಲಿ ವಿವರಿಸಲಾದ ಅಂಶ ಹಾಗೂ ಅದನ್ನು ತ್ಯಾಗಮಾಡಿ ಪುರುಷನಿಯಮವನ್ನು ಸ್ವೀಕರಿಸಲಾಗಿದೆ. ಇದಕ್ಕೇನು ಕಾರಣ? ಇತ್ಯಾದಿವಿಚಾರವು ಈ ಪ್ರಘಟ್ಟಕದಲ್ಲಿ ವರ್ಣಿತವಾಗಿದೆ. ಉಪಪದನಿಯಮದಲ್ಲಿ ಯುಷ್ಮದಸ್ಮದ್‌ಶಬ್ದಗಳು ನಿಯತ. ಪುರುಷಗಳು ಶೇಷಪದಾರ್ಥವು ಅನಿಯತವಾಗಿವೆ. ಹಾಗಾಗಿ ಪ್ರಥಮಃ ಎಂದು ಹೇಳಿದ್ದರಿಂದಲೇ ನಿಯಮದ ಜ್ಞಾನ ಉಂಟಾಗು-ವುದು. ಅಂದರೆ ಯುಷ್ಮದ್‌ಅಸ್ಮದ್‌ಶಬ್ದಗಳಿದ್ದಾಗ ಮಧ್ಯಮ ಹಾಗೂ ಉತ್ತಮಪುರುಷಗಳ ಪ್ರಾಪ್ತಿ ಇದೆ. ಅಂದರೆ ಅರ್ಥಾತ್ ಶೇಷದಲ್ಲಿ ಪ್ರಥಮಪುರುಷವೇ ಪ್ರಾಪ್ತ ಎಂಬುದು ಸಿದ್ಧ. ಹಾಗಾಗಿ ಎಲ್ಲಿ ಪ್ರಥಮಾ ಅಪ್ರಥಮ ಪುರುಷಗಳ ಪ್ರಸಕ್ತಿ ಇದೆಯೋ ಅಲ್ಲಿಯೇ ನಿಯಮವನ್ನು ಪ್ರಥಮ ಏವ ಎಂದು ಮಾಡಬೇಕು. ಆ ಪ್ರಥಮವಾದರೋ ಯುಷ್ಮದ್ ಅಸ್ಮದ್ ಶಬ್ದಗಳನ್ನು ಬಿಟ್ಟು ಅರ್ಥಾತ್ ಶೇಷಪದಾರ್ಥದಲ್ಲಿಯೇ ಎಂದು ಸಿದ್ಧ. ಆದ್ದರಿಂದ ಉಪಪದನಿಯಮಪಕ್ಷದಲ್ಲಿ 'ಶೇಷೇ ಪ್ರಥಮಃ' ಎಂಬ ಶೇಷಪದವು ವ್ಯರ್ಥ.

ಪುರುಷನಿಯಮದಲ್ಲಿಯಾದರೋ ಮಧ್ಯಮ ಉತ್ತಮಪುರುಷಗಳು ನಿಯತ. ಯುಷ್ಮದ್ ಅಸ್ಮದ್ ಶಬ್ದಗಳು ಹಾಗೂ ಶೇಷವು ಅನಿಯತ. ಈ ಪಕ್ಷದಲ್ಲಿ ಯುಷ್ಮದಸ್ಮದ್ ಶಬ್ದಗಳಿಗೆ ಪ್ರಥಮಪುರುಷ ಬರುವ ಪ್ರಸಂಗವಿದ್ದಾಗ 'ಶೇಷೇ ಏವ ಪ್ರಥಮಃ' ಎಂದು ನಿಯಮವನ್ನು ಮಾಡಬೇಕು. ಇದಕ್ಕೋಸ್ಕರ ಶೇಷೇ ಎಂದು ಸೂತ್ರದಲ್ಲಿ ಗ್ರಹಣ ಮಾಡಬೇಕು. ಹೇಗೆ ಶೇಷ ಎಂದು ಗ್ರಹಣ-ಮಾಡುತ್ತಿರುವ ಸೂತ್ರಕಾರರಿಗೆ ಅಭಿಪ್ರೇತವಾದ ಪಕ್ಷ ಪುರುಷನಿಯಮಪಕ್ಷವೇ ಆಗಿದೆ.

ಅದರ ಆಕಾರ ಹೀಗೆ – ಪುರುಷನಿಯಮವೆಂದರೆ ಯುಷ್ಮದಿ ಏವ ಮಧ್ಯಮಃ, ಅಸ್ಮದಿ ಏವ ಉತ್ತಮಃ, ಶೇಷೇ ಏವ ಪ್ರಥಮಃ ಎಂದು. ಇದರಿಂದ ಸಾಕ್ಷಾತ್ತಾಗಿ ಅಸ್ಮದ್ ಶಬ್ದ ಮಾತ್ರ ಸಿಗುವುದು. ಈ ರೀತಿ ಎರಡೂ ಪ್ರಕಾರ ಅಹಂ ಎಂಬುದರ ಲಾಭವಾಗುವುದರಿಂದ ನ್ಯೂನತಾದೋಷಕ್ಕೆ ಅವಕಾಶವಿಲ್ಲ. ಒಂದಂಶ ಇಲ್ಲಿ ಗಮನಾರ್ಹ. "ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ" ಎಂಬ ಸುಧಾಪಂಕ್ತಿಯಲ್ಲಿ ಏವಶಬ್ದವು ಪುರುಷನಿಯಮಪಕ್ಷವನ್ನು ಗ್ರಹಿಸಿದಲ್ಲಿ ಲಾಘವವಿದೆ ಎಂಬುದನ್ನು ಸೂಚಿಸುತ್ತಿದೆ.

## ಉಪಪದನಿಯಮಪಕ್ಷದಲ್ಲಿ ಅನುಪಪತ್ತಿಯನ್ನು ತೋರಿಸುತ್ತ ಪುರುಷನಿಯಮಪಕ್ಷವು ಉಪಪನ್ನ ಎಂದು ತೋರಿಸಿದ್ದಾರೆ

(ವಾಕ್ಯಾರ್ಥರತ್ನಮಾಲಾ) – ಏವಂ ಸೂತ್ರಕಾರಾನಭಿಪ್ರೇತೋಪಪದನಿಯಮಪಕ್ಷಾನುಸಾರೇಣ 'ಅಹಮ್' ಇತ್ಯಸ್ಯ ಲಾಭಮುಪವರ್ಣ್ಯ ತದಭಿಪ್ರೇತಪುರುಷನಿಯಮಪಕ್ಷಾನುಸಾರೇಣ ತಲ್ಲಾಭ-ಮುಪವರ್ಣಯಿಷ್ಯನ್ ಸೂತ್ರಕಾರಾನಭಿಮತಿಮೂಲತಯಾ ಉಪಪದನಿಯಮಪಕ್ಷೇ ಭಾಷ್ಯ-ಕಾರಾದ್ಯುಕ್ತಾಮ್ ಅನುಪಪತ್ತಿಂ ವದನ್ನೇವ ಪುರುಷನಿಯಮಪಕ್ಷಸ್ಯ ಉಪಪನ್ನತಾಂ ಚಾಹ – ಉಪಪದನಿಯಮ ಇತ್ಯಾದಿನಾ ॥ ಉಪಪದನಿಯಮೇ ಶೇಷಗ್ರಹಣಂ ವ್ಯರ್ಥಮಿತಿ ಸಂಬಂಧಃ । ನನು ಉಪಪದನಿಯಮೇಽಪಿ ಶೇಷಗ್ರಹಣಂ ಕರ್ತವ್ಯಮೇವ । ಯುಷ್ಮದಸ್ಮದೀ ನಿಯತೌ ಮಧ್ಯಮೋತ್ತಮೌ । ತಯೋಃ ಶೇಷೇಽಪಿ ಪ್ರಾಪ್ತೌ 'ಶೇಷೇ ಪ್ರಥಮ ಏವ ಭವತಿ ನಾನ್ಯಃ' ಇತಿ ಶೇಷಸ್ಯ ನಿಯಮಾರ್ಥಂ ತಸ್ಯಾವಶ್ಯಕತ್ವಾತ್ ಇತ್ಯತಃ ತದ್ವೈಯರ್ಥ್ಯಮುಪಪಾದಯಿತುಂ ಶೇಷಗ್ರಹಣಂ ವಿನಾಪಿ ಶೇಷನಿಯಾಮಕತ್ವಲಾಭಾತ್ ನ ತಸ್ಯಾವಶ್ಯಕತಾ ಇತ್ಯಾಹ – ಯುಷ್ಮ-ದಸ್ಮದೀತಿ ॥ ನಿಯತೇತಿ ॥ ಉಪಪದನಿಯಮೇ ಶೇಷಗ್ರಹಣಂ ಕರ್ತುಮಶಕ್ಯಮ್ । ತದ್ಧಿ ಕ್ರಿಯಮಾಣಂ ಯುಷ್ಮದಸ್ಮದೋಃ ನಿಯತತ್ವೇಽಪಿ ಮಧ್ಯಮೋತ್ತಮಯೋಃ ಅನಿಯತತಯಾ ಶೇಷೇಽಪಿ ಪ್ರಸಕ್ತೌ ತನ್ನಿವಾರಣಾರ್ಥಮಿತಿ ವಾಚ್ಯಮ್ । ತಚ್ಚಾಯುಕ್ತಮ್ । ಪ್ರಥಮೋ ಭವತೀತ್ಯೇತನ್ಮಾತ್ರಸ್ಯ ನಿಯಮಾರ್ಥತ್ವೇ ತೇನ ಯತ್ರ ಪ್ರಥಮಃ ಅನ್ಯಚ್ಚ ಪ್ರಾಪ್ನುತಃ ತತ್ರ ಪ್ರಥಮ ಏವ ಭವತೀತ್ಯೇವಮನ್ಯವ್ಯಾವೃತ್ತೇಃ ಸಿದ್ಧ್ಯಾ ಶೇಷೇ ಮಧ್ಯಮೋತ್ತಮವ್ಯಾವೃತ್ತೇಃ ಅನ್ಯಥಾಸಿದ್ಧತ್ವಾ-ದಿತ್ಯರ್ಥಃ ।

ಇಲ್ಲಿಯವರೆಗೆ ಸೂತ್ರಕಾರರಿಗೆ ಅಭಿಪ್ರೇತವಾದ ಉಪಪದನಿಯಮಪಕ್ಷವನ್ನು ಅನುಸರಿಸಿ ಅಹಂ ಎಂಬುದರ ಲಾಭವನ್ನು ವರ್ಣಿಸಿದರು. ಈಗ ಸೂತ್ರಕಾರರಿಗೆ ಅಭಿಪ್ರೇತವಾದ ಪುರುಷನಿಯಮ-ಪಕ್ಷವನ್ನು ಅನುಸರಿಸಿ ಅಹಂ ಎಂಬುದರ ಲಾಭವನ್ನು ವರ್ಣಿಸುವವರಿದ್ದಾರೆ. ಪುರುಷನಿಯಮ-ಪಕ್ಷವು ಸೂತ್ರಕಾರರಿಗೆ ಅಭಿಪ್ರೇತವಾಗಿದೆ ಹೊರತು ಉಪಪದನಿಯಮಪಕ್ಷವಲ್ಲ ಎಂಬ ವಿಷಯದಲ್ಲಿ ಭಾಷ್ಯಕಾರ ಮೊದಲಾದವರು ಉಪಪದನಿಯಮಪಕ್ಷದಲ್ಲಿ ತೋರಿಸಿದ ಅನುಪಪತ್ತಿ-ಯನ್ನು ಹೇಳುತ್ತ ಪುರುಷನಿಯಮಪಕ್ಷವು ಉಚಿತವಾದುದು ಎಂಬುದನ್ನು ತಿಳಿಸಲು 'ಉಪಪದ-ನಿಯಮಃ' ಮುಂತಾದ ಗ್ರಂಥ ಹೊರಟಿದೆ. ಉಪಪದನಿಯಮದಲ್ಲಿ 'ಶೇಷೇ ಪ್ರಥಮಃ' ಎಂಬ ಸೂತ್ರದಲ್ಲಿನ ಶೇಷೇ ಎಂಬ ಪದವು ವ್ಯರ್ಥ.

ಅಲ್ಲ! ಉಪಪದನಿಯಮದಲ್ಲೂ ಶೇಷಗ್ರಹಣವನ್ನು ಮಾಡಲೇಬೇಕು. ಅದು ಹೀಗೆ –

ಯುಷ್ಮದಸ್ಮದ್ ಶಬ್ದಗಳು ನಿಯತವಾಗಿದ್ದು ಮಧ್ಯಮಉತ್ತಮಪುರುಷಗಳು ಅನಿಯತವಾಗಿವೆ. ಹಾಗಾಗಿ ಶೇಷದಲ್ಲೂ ಕೂಡ ಮಧ್ಯಮ ಉತ್ತಮಪುರುಷಗಳ ಪ್ರಾಪ್ತಿಯಿದೆ. ಅದರ ವಾರಣೆಗಾಗಿ 'ಪ್ರಥಮ ಏವ' ಎಂದು ಶೇಷದಲ್ಲಿ ಹೇಳಬೇಕು. ಹೀಗೆ 'ಶೇಷೇ ಪ್ರಥಮ ಏವ ನಾನ್ಯಃ' ಎಂಬ ನಿಯಮಸಂಪಾದನೆಗೋಸ್ಕರ ಶೇಷಗ್ರಹಣವು ಸೂತ್ರದಲ್ಲಿ ಬೇಕಲ್ಲವೇ? ಎಂದರೆ ಇಲ್ಲ. ಶೇಷ-ಗ್ರಹಣವನ್ನು ಸೂತ್ರದಲ್ಲಿ ಮಾಡದೇ ಇದ್ದರೂ 'ಶೇಷೇ ಪ್ರಥಮ ಏವ ನಾನ್ಯಃ' ಎಂಬ ನಿಯಮದ ಲಾಭವಿರುವುದರಿಂದ ಶೇಷೇ ಪ್ರಥಮಃ ಎಂದು ಸೂತ್ರದಲ್ಲಿನ ಶೇಷೇ ಎಂಬ ಗ್ರಹಣವು ವ್ಯರ್ಥವೇ ಎಂಬುದನ್ನು ತೋರಿಸಲು ಯುಷ್ಮದಸ್ಮದಿ ಎಂಬ ಗ್ರಂಥ ಹೊರಟಿದೆ. ಉಪಪದನಿಯಮದಲ್ಲಿ ಶೇಷ ಎಂಬ ಗ್ರಹಣವು ಮಾಡಬೇಕಾಗಿಲ್ಲ. ಅಲ್ಲ! ಶೇಷ ಎಂಬ ಗ್ರಹಣವು ಮಾಡಿದರೆ ಯುಷ್ಮದಸ್ಮದ್ ಶಬ್ದಗಳು ನಿಯತವಾಗಿದ್ದರೂ ಮಧ್ಯಮ ಉತ್ತಮ ಪುರುಷಗಳು ನಿಯತವಲ್ಲದೇ ಇರುವ ಕಾರಣ ಶೇಷದಲ್ಲೂ ಪ್ರಸಕ್ತವಾಗುವ ಉತ್ತಮಮಧ್ಯಮಪುರುಷವನ್ನು ನಿವಾರಣೆ ಮಾಡಬಹುದಲ್ಲವೇ ಎಂದರೆ ಇಲ್ಲ. ಇದಕ್ಕೋಸ್ಕರ ಶೇಷೇ ಎಂದು ಶೇಷಗ್ರಹಣ ಬೇಕಾಗಿಲ್ಲ. ಪ್ರಥಮಃ ಭವತಿ ಎಂದಿಷ್ಟೇ ಹೇಳಿದ್ದರಿಂದಲೇ ನಿಯಮ ಎಂಬುದು ಸಿದ್ಧವಾಗುವುದು. ಅದು ಹೀಗೆ - ಎಲ್ಲಿ ಪ್ರಥಮಪುರುಷದ ಹಾಗೂ ಉತ್ತಮ ಮಧ್ಯಮಪುರುಷಗಳ ಪ್ರಾಪ್ತಿಯಿದೆಯೋ ಅಲ್ಲಿ ಪ್ರಥಮಪುರುಷವೇ ಬರುತ್ತದೆ ಎಂಬೀರೀತಿಯಾದ ಬೇರೆ ಪುರುಷಗಳ ವ್ಯಾವೃತ್ತಿಯು ಸಿದ್ಧವಾಗಿರುವುದರಿಂದ ಮಧ್ಯಮೋ-ತ್ತಮವ್ಯಾವೃತ್ತಿಯು ಶೇಷಗ್ರಹಣಂ ವಿನಾಪಿ ಸಿದ್ಧವಾಗಿದೆ. ಅರ್ಥಾತ್ ಅನ್ಯಥಾ ಸಿದ್ಧವಾಗಿದೆ.

## ಶೇಷಗ್ರಹಣ ಉಪಪದನಿಯಮಕ್ಕೂ ಬೇಕಲ್ಲವೇ?

(ವಾಕ್ಯಾರ್ಥರತ್ನಮಾಲಾ) – ನನು ಉಪಪದನಿಯಮಾರ್ಥಮೇವ । ಶೇಷಗ್ರಹಣಮ್ ಆವಶ್ಯಕಮ್ । ಅಸತಿ ಹಿ ಶೇಷಗ್ರಹಣೇ ನಿಮಿತ್ತಾಂತರಾಭಾವೇನ ಶೇಷರೂಪಸ್ಯ ಉಪಪದಸ್ಯ ನಿಯಮೋ ನ ಸಿದ್ಧ್ಯೇತ್ ಇತ್ಯತ ಆಹ — ತತ್ರೇತಿ ॥ ಪ್ರಥಮ ಇತ್ಯೇವೋಕ್ತೌ ಪ್ರಥಮಾತಿರಿಕ್ತನಿಯಮ್ಯಾಂತರಪ್ರಾಪಕಪದಾಂತರಸ್ಯಾಭಾವೇನ ತತ್ಪ್ರಾಪಿತಪದಾರ್ಥಾಂತರನಿಯಮಸ್ಯಾಸಂಭವೇನ ನಿಯಮ್ಯಾಂತರಾಭಾವಾದಿತ್ಯರ್ಥಃ । ತಥಾಪಿ ಶೇಷಗ್ರಹಣಾಭಾವೇ ಶೇಷೇ ಪ್ರಥಮ ಏವ ಭವತೀತಿ ನಿಯಮಃ ಕಥಂ ಸಿದ್ಧ್ಯೇದಿತ್ಯತ ಉಕ್ತಂ ಸ್ಪಷ್ಟಯತಿ — ಯತ್ರ ಚ ಪ್ರಥಮೇತಿ ॥ ಯುಷ್ಮದಿ ಮಧ್ಯಮ ಏವ ಅಸ್ಮದಿ ಉತ್ತಮ ಏವೇತಿ ಯುಷ್ಮದಸ್ಮದೋರ್ನಿಯತತ್ವಾತ್ ತಯೋಃ ಪುರುಷಾಂತರಂ ನ ಭವತೀತಿ । ಮಧ್ಯಮೋತ್ತಮಯೋಸ್ತು ಅನಿಯತತ್ವಾತ್ ಉಚ್ಛೃಂಖಲಯೋಃ ತಯೋಃ ಶೇಷೇಽಪಿ ಪ್ರಸಂಗೇ ಪ್ರಥಮ ಇತ್ಯೇತಾವದೇವ ಸೂತ್ರಮಾರಭ್ಯಮಾಣಂ ಸಿದ್ಧೇ ಪ್ರಥಮೇ ಪಾಕ್ಷಿಕಪ್ರಾಪ್ತಮಧ್ಯಮೋತ್ತಮನಿವಾರಣಾಯ ಪ್ರಥಮ ಏವ ಭವತಿ ನ ಮಧ್ಯಮೋ-ತ್ತಮಾವಿತಿ ನಿಯಮಾರ್ಥಃ ಸಂಪದ್ಯತೇ । ಯಥಾ 'ಸಮೇ ದೇಶೇ ಯಜೇತ' 'ವ್ರೀಹೀನವಹಂತಿ'

ಇತ್ಯಾದೌ ಪಾಕ್ಷಿಕ್ಯಾಂ ಪ್ರಾಪ್ತೌ ನಿಯಮ ಇತಿ ಭಾವಃ । ಯಥಾ ಉಪಪದನಿಯಮಪಕ್ಷೇ ಶೇಷಗ್ರಹಣಂ ವ್ಯರ್ಥಂ ತಥಾ ನ ಪುರುಷನಿಯಮಪಕ್ಷ ಇತಿ ತಸ್ಯ ಸೂತ್ರಕಾರಾಭಿಮತತ್ವಂ ಯುಕ್ತಮ್ ಇತ್ಯೇವಂ ಪುರುಷನಿಯಮಸ್ಯ ಉಪಪನ್ನತಾಮಾಹ — ಪುರುಷನಿಯಮೇ ತ್ವಿತಿ ॥ ಯುಷ್ಮದ್ಯೇವ ಮಧ್ಯಮಃ ಅಸ್ಮದ್ಯೇವ ಉತ್ತಮಃ ಇತಿ ವಕ್ಷ್ಯಮಾಣನಿಯಮಾರ್ಥಃ । ಮಧ್ಯಮೋ-ತ್ತಮಾವಿತಿ ॥ ಯುಷ್ಮದ್ಯೇವೇತ್ಯಾದಿನಿಯಮೇ ಯತಃ ಏವಕಾರಃ ತತೋಽನ್ಯತ್ರಾವಧಾರಣಮಿತಿ ನ್ಯಾಯೇನ ಮಧ್ಯಮಾದೇಃ ಯುಷ್ಮದಸ್ಮಭ್ಯಾಂ ನಿಯತತ್ವಪ್ರಾಪ್ತ್ಯಾ ಮಧ್ಯಮೋತ್ತಮೌ ಯುಷ್ಮದ-ಸ್ಮದ್ಭ್ಯಾಂ ನಿಯತೌ ಯುಷ್ಮದಸ್ಮದೋಸ್ತು ಉಚ್ಛೃಂಖಲತಯಾ ನಿಯತತ್ವಾಭಾವಃ । ಏವಂ ಪ್ರಥಮ ಏವೇತಿ ಸೂತ್ರೇ ಪ್ರಾರಬ್ಧೇ ಪ್ರಥಮೋಽಪಿ ಅನಿಯತ ಏವ । ಉಪಪದನಿಯಮಪಕ್ಷ ಇವ ಪ್ರಥಮಪಕ್ಷ ಏವೇತಿ । ನಿಯಮಸ್ಯ ಅತ್ರಾನುಪಯೋಗಾತ್ । ತನ್ನಿಯಮೇಽಪಿ ಪ್ರಥಮಸ್ಯ ಉಚ್ಛೃಂಖಲತಾಯಾಃ ಅನಿವಾರಣಾತ್ । ತಥಾ ಚ ಪ್ರಥಮಸ್ಯ ಉಚ್ಛೃಂಖಲತಯಾ ಯುಷ್ಮದಸ್ಮದೋರಪಿ ಪ್ರಥಮಃ ಪ್ರಸಕ್ತೌ ಭವತಿ । ತತಃ ತಯೋಃ ತನ್ನಿವಾರಣಾರ್ಥಂ ಶೇಷ ಏವ ಪ್ರಥಮಃ ಇತ್ಯೇವಮಾಕಾರಕಃ ಪುರುಷಸ್ಯ ಪ್ರಥಮಸ್ಯ ಶೇಷೇಣ ನಿಯಮಃ ಕರ್ತವ್ಯೋ ಭವತೀತ್ಯರ್ಥಃ ।

ಅಲ್ಲ! ಉಪಪದನಿಯಮಕ್ಕೋಸ್ಕರವೇ ಶೇಷಗ್ರಹಣ ಬೇಕಾಗಿದೆ. ಅದಿಲ್ಲದಿದ್ದರೆ ಬೇರೆ ಕಾರಣವಿಲ್ಲ-ವಾದ್ದರಿಂದ ಶೇಷ ಎಂಬ ಉಪಪದದ ನಿಯಮವು ಸಿದ್ಧಿಸುತ್ತಿರಲಿಲ್ಲ. ಎಂದರೆ ಅದಕ್ಕೆ ಉತ್ತರವನ್ನು ಹೇಳುತ್ತಾರೆ 'ತತ್ರ' ಎಂಬ ಗ್ರಂಥದಿಂದ. ಪ್ರಥಮಃ ಎಂದಿಷ್ಟೇ ಹೇಳಿದಾಗ ಪ್ರಥಮಪುರುಷವನ್ನು ಬಿಟ್ಟು ಬೇರೆ ನಿಯಮ್ಯವಾದ ಪದಗಳು ಇಲ್ಲವಾದ್ದರಿಂದ ಆ ಪದಗಳಿಂದ ಲಭ್ಯವಾದ ಪದಾರ್ಥಗಳ ನಿಯಮವು ಅಸಂಭವವಾದ್ದರಿಂದ ನಿಯಮ್ಯಾಂತರವೇ ಇಲ್ಲ ಎಂದರ್ಥ. ಆದರೂ ಶೇಷ ಎಂದು ಶೇಷಗ್ರಹಣವಿಲ್ಲದಿದ್ದರೆ 'ಶೇಷೇ ಪ್ರಥಮ ಏವ ಭವತಿ' ಎಂಬ ನಿಯಮ ಹೇಗೆ ಸಿದ್ಧಿಸುತ್ತದೆ ಎಂಬ ಪ್ರಶ್ನೆ ಬಂದರೆ ಹೇಳಿದ ವಿಷಯವನ್ನು ಸ್ಪಷ್ಟಪಡಿಸುತ್ತಾರೆ - 'ಯತ್ರ ಚ ಪ್ರಥಮಾ' ಎಂಬ ಗ್ರಂಥದಿಂದ. ಯುಷ್ಮದಿ ಮಧ್ಯಮ ಏವ, ಅಸ್ಮದಿ ಉತ್ತಮ ಏವ - ಎಂದು ಯುಷ್ಮದಸ್ಮದ್ ಶಬ್ದಗಳು ನಿಯತ; ಹಾಗಾಗಿ ಬೇರೆ ಪುರುಷಗಳ ಪ್ರಾಪ್ತಿ ಇರುವುದಿಲ್ಲ. ಆದರೆ ಮಧ್ಯಮಪುರುಷ ಉತ್ತಮಪುರುಷಗಳು ಅನಿಯತವಾದ್ದರಿಂದ ಶೇಷದಲ್ಲೂ ಆ ಪುರುಷಗಳ ಪ್ರಸಕ್ತಿ ಇದೆ. ಈ ಸಂದರ್ಭದಲ್ಲಿ ಪ್ರಥಮಃ ಎಂದು ಪ್ರಾರಂಭಿಸಿದ ಸೂತ್ರದಿಂದಲೇ ಪ್ರಥಮಪುರುಷವು ಸಿದ್ಧ-ವಾಗುತ್ತಿರಲು ಒಂದು ಪಕ್ಷದಲ್ಲಿ ಪ್ರಾಪ್ತವಾದ ಮಧ್ಯಮೋತ್ತಮಪುರುಷವನ್ನು ನಿರಾಕರಣೆ ಮಾಡಲು ಪ್ರಥಮ ಏವ ಭವತಿ ನ ಮಧ್ಯಮೋತ್ತಮೌ ಎಂಬ ನಿಯಮಕ್ಕೋಸ್ಕರ ಪ್ರಥಮಃ ಎಂಬ ಸೂತ್ರವು ಇದೆ ಎಂದು ಸಿದ್ಧವಾಗುತ್ತದೆ. ಹೇಗೆ 'ಸಮೇ ದೇಶೇ ಯಜೇತ' 'ವ್ರೀಹೀನವಹಂತಿ' ಇತ್ಯಾದಿ

ಕಡೆಗಳಲ್ಲಿ ಪಾಕ್ಷಿಕಪ್ರಾಪ್ತಿ ಇದ್ದಾಗ ನಿಯಮವೋ ಅದೇ ರೀತಿ ಇಲ್ಲಿಯೂ ಎಂದು ತಿಳಿಯಬೇಕು. ಹೇಗೆ ಉಪಪದನಿಯಮಪಕ್ಷದಲ್ಲಿ ಶೇಷಗ್ರಹಣವನ್ನು ವ್ಯರ್ಥ ಎನ್ನುತ್ತೇವೆಯೋ ಹೀಗೆ ಪುರುಷ-ನಿಯಮಪಕ್ಷದಲ್ಲಿ ಹೇಳಲು ಬರುವುದಿಲ್ಲ. ಆದ್ದರಿಂದಲೇ ಇದು ಸೂತ್ರಕಾರರಿಗೆ ಅಭಿಮತ ಎಂಬುದು ಗೊತ್ತಾಗುತ್ತದೆ ಎನ್ನವುದನ್ನು ತಿಳಿಸಲು ಪುರುಷನಿಯಮಪಕ್ಷವು ಉಚಿತ ಎಂಬುದನ್ನು ತೋರಿಸುತ್ತಿದ್ದಾರೆ 'ಪುರುಷನಿಯಮೇ ತು' ಎಂಬ ಭಾಗದಿಂದ. 'ಯುಷ್ಮದಿ ಏವ ಮಧ್ಯಮಃ' 'ಅಸ್ಮದಿ ಏವ ಉತ್ತಮಃ' ಎಂದು ಮುಂದೆ ಹೇಳುವ ನಿಯಮದಿಂದ ಎಂದರ್ಥ. 'ಯುಷ್ಮದಿ ಏವ' ಮುಂತಾದ ನಿಯಮಗಳಲ್ಲಿ 'ಯತ ಏವ ಕಾರಣ ತತೋಽನ್ಯತ್ರಾವಧಾರಣಮ್' ಎಂಬ ನಿಯಮದ ಪ್ರಕಾರ ಮಧ್ಯಮಪುರುಷ ಉತ್ತಮಪುರುಷವು ಯುಷ್ಮದ್ ಅಸ್ಮದ್ ಶಬ್ದಗಳಿಂದ ನಿಯತವಾಗಿವೆ. ಆದರೆ ಯುಷ್ಮದ್ ಅಸ್ಮದ್ ಶಬ್ದಗಳು ನಿಯತವಲ್ಲ. ಈ ರೀತಿ 'ಪ್ರಥಮ ಏವ' ಎಂದು ಸೂತ್ರವನ್ನು ಪ್ರಾರಂಭಿಸಿದರೂ ಪ್ರಥಮಪುರುಷವೂ ಅನಿಯತವೇ. ಏಕೆಂದರೆ, ಉಪಪದ- ನಿಯಮಪಕ್ಷದಲ್ಲಿ ಇದ್ದ ಹಾಗೆ ಪ್ರಥಮಪುರುಷ ಏವ ಎಂಬ ನಿಯಮವು ಇಲ್ಲಿ ಅನುಪಯುಕ್ತ. ಅದರ ನಿಯಮವಿದ್ದರೂ ಪ್ರಥಮಪುರುಷವು ಶೃಂಖಲಾರಹಿತವಾದ್ದರಿಂದ (ನಿರಂಕುಶವಾದ್ದರಿಂದ) ಸರ್ವತ್ರ ಪ್ರಸಕ್ತವಾಗಿದೆ. ಆದ್ದರಿಂದ ಪ್ರಥಮಪುರುಷಕ್ಕೆ ಯುಷ್ಮದ್ ಅಸ್ಮದ್ ಶಬ್ದಗಳು ಉಪಪದವಾಗಿರಬಹುದು. ಅದನ್ನು ನಿವಾರಿಸಲು 'ಶೇಷೇ ಏವ ಪ್ರಥಮಃ' ಎಂಬ ನಿಯಮ ಬೇಕು. ಅರ್ಥಾತ್ ಪ್ರಥಮಪುರುಷಕ್ಕೆ ಶೇಷದಿಂದ ನಿಯಮವನ್ನು ಮಾಡಬೇಕು.

** समे देशे यजेत - पक्षे प्राप्तस्याप्राप्तपक्षान्तरप्रापणं नियमः । यथा 'समे देशे यजेत' 'दर्शपूर्णमासाभ्यां यजेत' इति यागः कर्तव्यतया विहितः । सच देशमन्तरेण कर्तुमशक्य इत्यर्थाद् देशः प्राप्तः । सच द्विविधः समो विषमश्चेति । यदा यजमानः समे यियक्षते तदा समे यजेतेति वचनमुदाम्रे, स्वार्थस्य प्राप्तसत्वात् । यदा तु विषमे देशे यियक्षते तदा समे यजेतेति स्वार्थं विधत्ते, स्वार्थस्य तदानीमप्राप्तत्वात् । विषमदेशनिवृत्तिस्वार्थकी । चोदित-देशेनैव यागनिष्पत्तेरचोदितदेशोपादानेन यथाशास्त्रं यागो नानुष्ठितः स्यादिति । तथा 'प्राङ्मुखोऽन्नानि भुञ्जीत' इति । इदमपि स्मार्तमुदाहरणं पूर्वेण व्याख्यातम् ॥ (याज्ञवल्क्यस्मृतिः आचाराध्यायः)

यदाहुः- 'विधिरत्यन्तमप्राप्ते नियमः पाक्षिके सति । तत्र चान्यत्र च प्राप्ते परिसंख्यति गीयते ॥ विधिः- 'स्वर्गकामो यजेत' इत्यादिः । यागादेः प्रकारान्तरेणाप्राप्तेः । नियमः व्रीहीनवहन्ति, समे देशे यजेत' इत्यादिः । पुरोडाशनिर्माणफलोपधायकतावच्छेदककोटि-प्रविष्टाया वितुषतायाः संपादकत्वेनावहननस्य प्राप्तेर्नखविदलनसमवधानकालावृत्तित्वेन, यागा-

धिकरणतया समदेशप्राप्तेविषमदेशासमवधानकालावृत्तित्वेन च पाक्षिकत्वात् । (रसगङ्गाधरे नागेशभट्टटिप्पणी)

ಪಾಕ್ಷಿಕಪ್ರಾಪ್ತಿಯಿದ್ದಾಗ ನಿಯಮ ಎನ್ನುವುದಕ್ಕೆ ಉದಾಹರಣೆಗಳೆರಡು. ವ್ರೀಹಿಯ ಹೊಟ್ಟನ್ನು ಕುಟ್ಟುವುದರಿಂದ ಅಥವಾ ಉಗುರಿನಿಂದ ತೆಗೆಯಬಹುದು. ಆದರೆ ಇವೆರಡನ್ನೂ ಒಂದೇ ಕಾಲದಲ್ಲಿ ಮಾಡಲು ಸಾಧ್ಯವಿಲ್ಲ. ಹಾಗೆಯೇ ಯಾಗ ಮಾಡುವುದಕ್ಕೋಸ್ಕರ ಸಮವಾದ ಪ್ರದೇಶನಿರ್ಮಾಣ ಹಾಗೂ ವಿಷಮಪ್ರದೇಶನಿರ್ಮಾಣವನ್ನು ಒಂದೇ ಕಾಲದಲ್ಲಿ ಮಾಡಲು ಬರುವುದಿಲ್ಲ. ಹಾಗಾಗಿ ವಿಕಲ್ಪಪ್ರಾಪ್ತಿಯಿದ್ದಾಗ ಅರ್ಥಾತ್ ಒಮ್ಮೆ ಇದು ಒಮ್ಮೆ ಅದು ಎಂಬ ಎರಡೂ ಪಕ್ಷಗಳಿದ್ದಾಗ ನಿಯಮ ಮಾಡಲಾಗುತ್ತದೆ.

## ಪುರುಷನಿಯಮಪ್ರದರ್ಶನ

(ವಾಕ್ಯಾರ್ಥರತ್ನಮಾಲಾ) – ಅತ್ರಾನಿಯತೇ ಇತ್ಯನಂತರಂ ಪ್ರಥಮಶ್ಚೇತಿ ಮಂಜರ್ಯುಕ್ತಃ ಪಾಠಃ ಶೇಷಶ್ಚೇತಿ ಪಾಠೇಽಪಿ ಶೇಷಪ್ರಥಮಶ್ಚೇತ್ಯೇವಾರ್ಥಃ । ಪ್ರಥಮಸ್ಯೇವ ಶೇಷಸ್ಯಾಪಿ ಅನಿಯತ-ತ್ವಾತ್ । ತದನಿತ್ಯತ್ವೋಕ್ತಿಸ್ತು ಮಧ್ಯಮೋತ್ತಮಯೋಃ ನಿಯತತ್ವೇಽಪಿ ಯುಷ್ಮದಸ್ಮದೋರನಿಯ-ತತ್ವವತ್ ಇಹ ಶೇಷಸ್ಯಾಪಿ ಅನಿಯತತ್ವಮಿತಿ ವಸ್ತುಸ್ಥಿತಿಪ್ರದರ್ಶನಾಯ, ತೇನ ಪ್ರಥಮಸ್ಯ ಯುಷ್ಮದಸ್ಮಚ್ಛಬ್ದೇಷು ಪ್ರಸಕ್ತಿರಿತಿ ಸೂಚಿತಮಿತ್ಯಪಿ ವದಂತಿ । 'ಪ್ರಥಮಶ್ಚ' ಇತ್ಯನಂತರಂ ಲಿಂಗವಚನವಿಪರಿಣಾಮೇನಾನಿಯತ ಇತಿ ವರ್ತತೇ । 'ತತ್ರ' ಇತ್ಯಸ್ಯ ತಥಾ ಸತೀತ್ಯರ್ಥಃ । ತಸ್ಯ ಚ ಪ್ರಥಮಸ್ಯ ಮಧ್ಯಮೋತ್ತಮವತ್ ಕೇನಚಿನ್ನಿಯತತ್ವಂ ಭವತೀತ್ಯರ್ಥಃ । ನ ಚಾಂತರೇಣೇತಿ ॥ ಶೇಷೇ ಪ್ರಥಮಃ ಇತ್ಯೇತಾವತ್ ಸೂತ್ರಂ ವಿನೇತ್ಯರ್ಥಃ । ಏವಂ ಶಂಕ್ಯತೇ ॥ ಏವಂವಿಧೋ ನಿಯಮಃ ಶಂಕ್ಯತೇ ಇತ್ಯರ್ಥಃ । ಪ್ರಥಮಃ ಇತ್ಯೇತಾವನ್ಮಾತ್ರೇಣ ಉಕ್ತ-ನಿಯಮಲಾಭಾತ್ ತಲ್ಲಾಭಾಯ ವಿಶಿಷ್ಟಂ ಸೂತ್ರಂ ಕರ್ತವ್ಯಮಿತಿ ಭಾವಃ । ಏತೇನ ಉಪಪದನಿಯಮಪಕ್ಷೇ ಶೇಷಗ್ರಹಣವೈಯರ್ಥ್ಯವತ್ ಪುರುಷನಿಯಮಪಕ್ಷೇ ಪ್ರಥಮಗ್ರಹಣಾ-ನರ್ಥಶೇಷೇ ಇತ್ಯೇವ ಪೂರ್ಣತ್ವಾತ್ ಇತ್ಯಪಿ ನಿರಸ್ತಮ್ । ಪ್ರಧಾನಭೂತವಿಧೇಯಸಮರ್ಪಕೇ ಸತಿ ತಚ್ಛೇಷಭೂತಾಂಶಸ್ಯೈವ ಸಾರ್ಥಕ್ಯವ್ಯರ್ಥತ್ವವಿಚಾರಾವಕಾಶೇಽಪಿ ಶೇಷಾಂಶಮ್ ಉಪಾದಾಯ ಪ್ರಧಾನಸಮರ್ಪಕಭಾವವ್ಯರ್ಥತಾವಿಚಾರಾನವಕಾಶಾತ್ । ಅಧಿಕಾರಾನುವೃತ್ತಿಸತ್ತ್ವ ಏವ ತದ್ಭಾಗವ್ಯರ್ಥತ್ವಪ್ರಸಕ್ತೇರಿತಿ ಜ್ಞೇಯಮ್ ।

ಇಲ್ಲಿ ಅನಿಯತೇ ಎಂಬ ಪದದ ನಂತರ 'ಪ್ರಥಮಶ್ಚ' ಎಂದು ಪದಮಂಜರಿಯಲ್ಲಿ ಸ್ವೀಕರಿಸಿದ ಪಾಠ. 'ಶೇಷಶ್ಚ' ಎಂದು ಪಾಠವಿದ್ದರೂ 'ಶೇಷಪ್ರಥಮಶ್ಚ' ಎಂದೇ ಅರ್ಥ. ಪ್ರಥಮಪುರುಷದಂತೆ

ಶೇಷವು ಅನಿಯತವಾದ್ದರಿಂದ. 'ಶೇಷೇ ಪ್ರಥಮಃ' ಎಂಬುದು ಅನಿತ್ಯ ಎಂದು ಹೇಳಿದ್ದು ಇದೆ. ಈ ಪಕ್ಷದಲ್ಲಿ ಮಧ್ಯಮೋತ್ತಮಪುರುಷಗಳು ನಿಯತವಾಗಿದ್ದರೂ ಯುಷ್ಮದಸ್ಮದ್ ಶಬ್ದಗಳು ಅನಿಯತವಾಗಿರುವಂತೆ ಈ ಸೂತ್ರದಲ್ಲಿ ಶೇಷವು ಅನಿಯತ ಎಂದು ವಸ್ತುಸ್ಥಿತಿಯನ್ನು ತೋರಿಸಲು ಹಾಗಾಗಿ ಪ್ರಥಮಪುರುಷಕ್ಕೆ ಯುಷ್ಮದಸ್ಮದ್ ಶಬ್ದಗಳಲ್ಲಿ ಪ್ರಸಕ್ತಿಯಿದೆ ಎಂದೂ ಹೇಳುತ್ತಾರೆ. ಪ್ರಥಮಶ್ಚ ಎಂಬ ಪದದ ನಂತರ ಅನಿಯತೇ ಎಂಬ ಪದದ ಲಿಂಗವಚನಗಳನ್ನು ವಿಪರಿಣಾಮಮಾಡಿಕೊಂಡು ಅನಿಯತಃ ಎಂದಿಟ್ಟುಕೊಳ್ಳಬೇಕು. ತತ್ರ ಎಂಬುದಕ್ಕೆ ತಥಾಸತಿ ಎಂದರ್ಥ. ಹಾಗಾಗಿ ಪ್ರಥಮಪುರುಷಕ್ಕೆ ಮಧ್ಯಮೋತ್ತಮಪುರುಷಗಳಂತೆ ಯಾವುದೋ ಒಂದು ಪದದಿಂದ ನಿಯಮನವಿದೆ ಎಂದು ಸಿದ್ಧವಾಗುತ್ತದೆ. ಶಂಕೆ - ಶೇಷೇ ಪ್ರಥಮಃ ಎಂದು ಸಂಪೂರ್ಣ-ಸೂತ್ರವನ್ನು ಸ್ವೀಕರಿಸಬೇಕು. ಇಲ್ಲದಿದ್ದರೆ ಪ್ರಥಮಃ ಎಂದಿಷ್ಟೇ ಹೇಳಿದರೆ ಆ ರೀತಿಯಾದ ನಿಯಮವು ಸಿಗುತ್ತಿರಲಿಲ್ಲ ಎಂದಭಿಪ್ರಾಯ.

ಹೀಗೆ ಹೇಳಿದ್ದರಿಂದ ಉಪಪದನಿಯಮಪಕ್ಷದಲ್ಲಿ ಶೇಷಗ್ರಹಣವು ವ್ಯರ್ಥವಾದಂತೆ ಪುರುಷ-ನಿಯಮಪಕ್ಷದಲ್ಲಿ ಪ್ರಥಮಗ್ರಹಣವು ಅನರ್ಥ. ಶೇಷೇ ಎಂಬುದರಿಂದಲೇ ಪೂರ್ಣವಾದ್ದರಿಂದ ಎಂಬ ಆಕ್ಷೇಪವನ್ನೂ ಖಂಡಿಸಿದಂತೆ ಆಯಿತು. ಪ್ರಧಾನವಾದ ವಿಧೇಯವನ್ನು ಸಮರ್ಪಣೆ ಮಾಡಿದಾಗ ಅದರ ಉಳಿದ ಭಾಗ ಸಾರ್ಥಕವೋ ವ್ಯರ್ಥವೋ ಎಂಬ ವಿಚಾರ ಒದಗಬಹುದು. ಆದರೆ ಶೇಷ ಎಂಬ ಅಂಶವನ್ನು ಸ್ವೀಕಾರ ಮಾಡಿ ಪ್ರಧಾನವಾದ ಅಂಶವನ್ನು ಸಮರ್ಪಣೆಮಾಡುವ ಪ್ರಥಮ ಎಂಬ ಪದದ ವೈಯರ್ಥ್ಯವಿಚಾರಕ್ಕೆ ಅವಕಾಶವಿಲ್ಲ. ಅಧಿಕಾರಾನುವೃತ್ತಿಗಳಿದ್ದಾಗಲೇ ಆ ಭಾಗವು ವ್ಯರ್ಥ ಎಂದು ಪ್ರಸಕ್ತಿ ಬರುವುದು ಎಂದು ತಿಳಿಯಬೇಕು.

### ಪುರುಷನಿಯಮದ ಫಲ

(ವಾಕ್ಯಾರ್ಥರತ್ನಮಾಲಾ) - ಏವಂ ದೋಷಗ್ರಹಣಾನ್ಯಥಾನುಪಪತ್ತ್ಯಾ ಸೂತ್ರಾಕಾರಾಭಿಮತತ್ವೇನ ಪುರುಷನಿಯಮಮ್ ಉಪಪಾದ್ಯ ತತ್ಫಲಮಾಹ — ತಚ್ಚೋತ್ತಮೇತಿ ॥ ಅಸ್ಮದರ್ಥಂ ವಿನೇತಿ ॥ ಅಸ್ಮದ್ಯೇವ ಉತ್ತಮಃ ಇತಿ ತಸ್ಯಾಸ್ಮದಾದಿನಿಯಮಿತತ್ವಾತ್ ಅಸ್ಮದರ್ಥಂ ವಿನಾ ಅಸಂಭವಾದಿ-ತ್ಯರ್ಥಃ । ಸಾಕ್ಷಾದೇವೇತಿ ॥ ಅಸ್ಮದ ಏವ ಉಪಪದತ್ವಮ್ ಆರ್ಥಿಕಮ್ ಉಪಪದನಿಯಮ-ಪಕ್ಷೇ । ನ ಚ ಏವಂ ಪುರುಷನಿಯಮಪಕ್ಷೇ । ಅಸ್ಮದ ಏವ ಉಪಪದತಾಯಾಃ ಅಸ್ಮದ್ಯೇವ ಉತ್ತಮ ಇತಿ ನಿಯಮಾದೇವ ಪ್ರಾಪ್ತೇರಿತಿ ಭಾವಃ । 'ಉತ್ತಮಪುರುಷಪ್ರಯೋಗಾದೇವ' ಇತ್ಯೇವಕಾರಾಭಿಪ್ರಾಯಮಾಹ — ಏವಕಾರ ಇತಿ ॥ ಉಭಯಥಾ = ಅರ್ಥತಃ, ಸಾಕ್ಷಾತ್ ಉಭಯಥೇತ್ಯರ್ಥಃ । ಲಾಘವಮಿತಿ ॥ ಪುರುಷನಿಯಮೇ, ಯುಷ್ಮದಸ್ಮದೋಃ ಮಧ್ಯಮೇ ನ ಇತ್ಯಾದಿಪ್ರಾಗುಕ್ತರೀತ್ಯಾ ಗೌರವಾನಾಶ್ರಯಣಾತ್ ಇತಿ ಭಾವಃ ।

ಅನೇನ ಏವಕಾರಂ ಬುದ್ಧ್ವಾ ವಿವಿಚ್ಯ ಪಕ್ಷದ್ವಯೋಪಪಾದನಾನಂತರಂ ತತ್ರಾವಾಂತರವಿಶೇಷ-ಸೂಚಕತಯಾ ಸ ವ್ಯಾಖ್ಯೇಯ ಇತಿ ಸೂಚಿತಂ ಭವತಿ । ತತ್ತ್ವನಿರ್ಣಯಟೀಕಾವ್ಯಾಖ್ಯಾನೇ ತು ಗುರುಚರಣೈರಧ್ಯಾಹಾರೇ **ಗೌರವಮ್** ಅನಧ್ಯಾಹಾರೇ ಲಾಘವಮ್ ಇತಿ ವರ್ಣಕಾಂತರಮ್ ಉಕ್ತಮಿತ್ಯದೋಷಃ । **'ಅಹಮ್'** ಇತ್ಯುಕ್ತ್ವಾ ತಲ್ಲಾಭಸಂಭವೇಽಪಿ ಅನುಕ್ತಾವಪಿ ತಲ್ಲಾಭೇ ಲಾಘವಮ್ ಉಪೋದ್ಬಲಕಮ್ ಇತಿ ಸೂಚಯಿತುಂ ಏವಶಬ್ದ ಇತಿ, ಅಪಿ ತಥೈವೇತಿ ಜ್ಞೇಯಮ್ ।

ಹೀಗೆ ಶೇಷಗ್ರಹಣವನ್ನು ಸೂತ್ರಕಾರರು ಮಾಡಿದ್ದರಿಂದಲೇ ಪುರುಷನಿಯಮವು ಉಪಪನ್ನವಾಗಿದೆ ಎಂದು ತೋರಿಸಿ, ಫಲವನ್ನು ಹೇಳುತ್ತಾರೆ - ತಚ್ಚ ಉತ್ತಮ ಎಂದು. 'ಅಸ್ಮದಿ ಏವ ಉತ್ತಮಃ' ಎಂದು ಉತ್ತಮಪುರುಷವು ಅಸ್ಮದ್ ಶಬ್ದದಿಂದ ನಿಯಮಿತವಾಗಿರುವುದರಿಂದ ಅಸ್ಮದ್ ಅರ್ಥವಿಲ್ಲದೇ ಉತ್ತಮಪುರುಷ ಅಸಂಭವ ಎಂದು ಸಿದ್ಧವಾಗಿದೆ. ಆದ್ದರಿಂದ ಉಪಪದನಿಯಮ-ಪಕ್ಷದಲ್ಲಿ ಅಸ್ಮದ್ ಶಬ್ದದ ಉಪಪದತ್ವವು ಆರ್ಥಿಕ ಸಾಕ್ಷಾತ್ ಅಲ್ಲ ಎಂದು ಸಿದ್ಧವಾಗಿದೆ. ಆದರೆ ಪುರುಷನಿಯಮಪಕ್ಷದಲ್ಲಿ ಅಸ್ಮದ್ ಶಬ್ದಕ್ಕೇ ಉಪಪದತ್ವವು ಇದೆ ಎಂದು ಸಾಕ್ಷಾತ್ತಾಗಿ ಸಿದ್ಧ-ವಾಗಿದೆ. ಏಕೆಂದರೆ 'ಅಸ್ಮದ್ಯೇವ ಉತ್ತಮಃ' ಎಂದು ಪುರುಷನಿಯಮವಾದ್ದರಿಂದ.

'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂಬ ಸುಧಾಪಂಕ್ತಿಯಲ್ಲಿರುವ ಏವಕಾರದ ಅಭಿಪ್ರಾಯವನ್ನು ಹೇಳುತ್ತಾರೆ 'ಏವಕಾರಃ' ಎಂಬುದಾಗಿ. ಅರ್ಥತಃ ಸಾಕ್ಷಾತ್ ಎಂಬ ಎರಡು ರೀತಿಯಲ್ಲಿ ಅಹಂ ಪದದ ಲಾಭವಾಗುತ್ತದೆ. ಪುರುಷನಿಯಮಪಕ್ಷ ಹಾಗೂ ಉಪಪದನಿಯಮ-ಪಕ್ಷಗಳಲ್ಲಿ ಲಾಘವ ಪುರುಷನಿಯಮಪಕ್ಷದಲ್ಲಿರುವುದರಿಂದ ಅದನ್ನೇ ಏವಕಾರವು ಸೂಕ್ತ ಎಂದು ಸೂಚಿಸುತ್ತಿದೆ. ಪುರುಷನಿಯಮದಿಂದಲೇ ಸಾಕ್ಷಾತ್ ಲಾಭವಾಗುವುದರಿಂದ. ಉಪಪದನಿಯಮ-ಪಕ್ಷದಲ್ಲಾದರೋ ಅರ್ಥಾತ್ ಸಿದ್ಧವಾಗುವುದು. ನಿಯಮದಿಂದ ಸಾಕ್ಷಾತ್ ಆಗುವುದಿಲ್ಲ.

ತತ್ವನಿರ್ಣಯಟೀಕಾವ್ಯಾಖ್ಯಾನದಲ್ಲಿಯಾದರೋ ಪೂಜ್ಯಗುರುಗಳು ಅಧ್ಯಾಹಾರ ಮಾಡಿದರೆ ಗೌರವ; ಅಧ್ಯಾಹಾರ ಮಾಡಿದರೆ ಲಾಘವ ಎಂದು ಬೇರೆ ಕ್ರಮದ ವ್ಯಾಖ್ಯಾನವನ್ನು ಮಾಡಿದ್ದಾರೆ ಎಂದು ಅದರ ವಿರೋಧವನ್ನು ಇಲ್ಲಿ ಶಂಕಿಸುವಂತಿಲ್ಲ. ಸುಧಾದಲ್ಲಿಯಾದರೋ ಅಹಂ ಎಂದು ಬಾಯಿಬಿಟ್ಟು ಹೇಳಿದ್ದರಿಂದ ಅದರ ಲಾಭವಾಗುತ್ತಿದ್ದರೂ ಹೇಳದೇ ಇದ್ದಾಗಲೂ ಅದರ ಲಾಭವಾಗುವುದರಲ್ಲಿ ಲಾಘವವೆ. ಯಾಮಕವಾಗಿದೆ ಎಂದು ಸೂಚಿಸಲು ಏವಶಬ್ದವಿದೆ ಎಂದು ತಿಳಿಯಬೇಕು.

ನ ವ್ಯ ಾಸ ನಾಪಿ ದ್ವಿತೀಯಾನುಪಪತ್ತಿಃ

(ವಾಕ್ಯಾರ್ಥಚಂದ್ರಿಕಾ)- ನನು ತಥಾಽಪಿ 'ಸಿಖಿಲ' ಇತ್ಯಾದಿಭಿಃ ವಿಜಾತೀಯೈರ್ವ್ಯವಧಾನಾತ್

ನಾರಾಯಣಮ್ ಇತ್ಯಸ್ಯ 'ನಮಾಮಿ' ಇತ್ಯನೇನಾನ್ವಯಾನುಪಪತ್ತಿಃ । ನಾರಾಯಣಸ್ಯೈವ ಪ್ರಣಾಮಕರ್ಮತ್ವೇ 'ನಿಖಿಲ' ಇತ್ಯಾದೀನಾಂ ತದಭಾವಾತ್ ತತ್ರ ದ್ವಿತೀಯಾನುಪಪತ್ತಿಶ್ಚ । ನ ಚ 'ನಿಖಿಲ' ಇತ್ಯಾದೀನಾಂ ಪ್ರಣಾಮಕರ್ಮಣಾ ನಾರಾಯಣೇನ ಸಂಬಂಧಾನ್ನ ವಿಜಾತೀಯ-ವ್ಯವಧಾನಂ ನಾಪಿ ದ್ವಿತೀಯಾನುಪಪತ್ತಿರಿತಿ ವಾಚ್ಯಮ್, 'ಗುಣಾನಾಂ ಚ ಪರಾರ್ಥತ್ವಾತ್' ಇತಿ ನ್ಯಾಯೇನ ಕಾರಕಾಣಾಂ ಕ್ರಿಯಾನ್ವಿತಸ್ವಾರ್ಥಬೋಧಕತ್ವವ್ಯುತ್ಪತ್ತ್ಯಾ ಪರಸ್ಪರಸಂಬಂಧಸ್ಯ ಅಸಂಭ-ವಾತ್ ತಾದೃಶಸಂಬಂಧಸ್ಯಾಭಾವಾತ್ । ಯಾದೃಶತಾದೃಶಸಂಬಂಧಸ್ಯ ದ್ವಿತೀಯಾನುಪ-ಪಾದಕತ್ವಾಚ್ಚ ಇತ್ಯತೋ ವಿಶೇಷಣಾನಾಂ ಪೃಥಕ್ಕಾರಕತ್ವಾಭಾವಾದ್ ವಿಶೇಷ್ಯನಿಘ್ನತ್ವಾಚ್ಚ ವಿಶೇಷ್ಯವಿಶೇಷಣಭಾವಾಭ್ಯುಪಗಮೇ ನ ವ್ಯವಧಾನಂ ನಾಪಿ ದ್ವಿತೀಯಾನುಪಪತ್ತಿರಿತ್ಯಾಹ – ನಿಖಿಲೇತ್ಯಾದೀನಾಂ ತ್ವಿತಿ ॥

'ಅತ್ರ ನಾರಾಯಣಂ ಸನ್ನಮಾಮಿ ಇತ್ಯನ್ವಯಃ' ಎಂದು ಟೀಕಾದಲ್ಲಿ ನಾರಾಯಣನಿಗೆ ನಮನ-ಕ್ರಿಯೆಯಲ್ಲಿ ಅನ್ವಯವನ್ನು ಹೇಳಿದ್ದಾರೆ. ಇದು ಅನುಪಪನ್ನ. ಏಕೆಂದರೆ ನಾರಾಯಣಂ ಹಾಗೂ ಸನ್ನಮಾಮಿ ಎಂಬ ಪದಗಳ ಮಧ್ಯದಲ್ಲಿ ಅನೇಕ ವಿಜಾತೀಯಪದಗಳ ವ್ಯವಧಾನವಿದೆ. ಅಲ್ಲದೆ ನಾರಾಯಣನಿಗೆ ಮಾತ್ರ ನಮನಕ್ರಿಯೆಯಲ್ಲಿ ಕರ್ಮವಾಗಿ ಅನ್ವಯವಿದ್ದರೆ 'ನಿಖಿಲ' ಮುಂತಾದವು-ಗಳಿಗೆ ನಮನಕ್ರಿಯಾಕರ್ಮತ್ವವಿಲ್ಲವಾದ್ದರಿಂದ 'ಕರ್ಮಣಿ ದ್ವಿತೀಯಾ' ಸೂತ್ರದಿಂದ ದ್ವಿತೀಯಾ-ವಿಭಕ್ತಿಯು ಬರಲು ಅಸಾಧ್ಯ.

ಅಲ್ಲ। ನಿಖಿಲ ಮುಂತಾದವುಗಳಿಗೆ ಪ್ರಣಾಮಕ್ಕೆ ಕರ್ಮನಾದ ನಾರಾಯಣನೊಂದಿಗೆ ಸಂಬಂಧವಿರುವುದರಿಂದ ವಿಜಾತೀಯವ್ಯವಧಾನವೂ ಇಲ್ಲ; ದ್ವಿತೀಯಾ ಅನುಪಪತ್ತಿಯೂ ಇಲ್ಲ ಎಂದರೆ ಇದು ಸರಿಯಿಲ್ಲ. 'ಗುಣಾನಾಂ ಚ ಪರಾರ್ಥತ್ವಾತ್ ಅಸಂಬಂಧಃ ಸಮತ್ವಾತ್ ಸ್ಯಾತ್' (ಜೈಮಿನಿಸೂತ್ರ. 1-22) ಎಂಬ ನಿಯಮದ ಪ್ರಕಾರ ಕಾರಕಗಳಿಗೆ ಪರಸ್ಪರ- ಸಂಬಂಧ ಕೂಡುವುದಿಲ್ಲ. ಗೌಣವಾದ್ದರಿಂದ ಹಾಗಾಗಿ ಕಾರಕಗಳು ಕ್ರಿಯಾನ್ವಿತಸ್ವಾರ್ಥ- ಬೋಧಕವಾದ್ದರಿಂದ ನೇರವಾಗಿ ನಿಖಿಲ ಮುಂತಾದವುಗಳಿಗೆ ಹಾಗೂ ನಾರಾಯಣನಿಗೆ ಪರಸ್ಪರಸಂಬಂಧ ಹೇಳದೇ ನಮನಕ್ರಿಯೆಯಲ್ಲಿ ಅನ್ವಯ ಹೇಳಬೇಕು. ಆದರೆ ಕೇವಲ ನಾರಾಯಣನಿಗೆ ಮಾತ್ರ ನಮನಕ್ರಿಯೆಯಲ್ಲಿ ಅನ್ವಯ ಎಂದು ಹೇಳಿದ್ದೀರಿ. ಅಲ್ಲದೆ ದ್ವಿತೀಯಾವಿಭಕ್ತಿ ಬರಲು ಯಾವುದೋ ಒಂದುರೀತಿಯ ಕ್ರಿಯೆಯ ಸಂಬಂಧವು ಕಾರಕಕ್ಕೆ ಇರುವುದು ಕಾರಣವಲ್ಲ.

ಈ ಎಲ್ಲ ಪ್ರಶ್ನೆಗಳಿಗೆ ಇದು ಉತ್ತರ – ವಿಶೇಷಣಗಳು ಪ್ರತ್ಯೇಕವಾಗಿ ಕಾರಕ ಎಂದು ಪರಿ-ಗಣಿತವಾಗುವುದಿಲ್ಲ. ಅವುಗಳು ವಿಶೇಷ್ಯನಿಘ್ನ ಎನಿಸಿಕೊಳ್ಳುತ್ತವೆ. ಆದ್ದರಿಂದ ವಿಶೇಷಣವಿಶೇಷ್ಯ-ಭಾವವನ್ನು ನಾರಾಯಣಂ ಹಾಗೂ ನಿಖಿಲ ಇತ್ಯಾದಿಗಳಿಗೆ ಒಪ್ಪುವುದರಿಂದ ವ್ಯವಧಾನವೂ ಇಲ್ಲ;

ದ್ವಿತೀಯಾವಿಭಕ್ತ್ಯನುಪಪತ್ತಿಯೂ ಇಲ್ಲ ಎಂಬ ಅಭಿಪ್ರಾಯದಿಂದ 'ನಿಖಿಲ ಇತ್ಯಾದೀನಾಂ ತು' ಎಂಬ ಸುಧಾಪಂಕ್ತಿಯು ಹೊರಟಿದೆ.

## 'ಅಹಂ' ಇಲ್ಲದ ವಾಕ್ಯ ಅಪರ್ಯವಸಿತ

(ಕುಂಡಲ) — ನನು ಪದಾನಾಂ ಯೋಗ್ಯೇತರಾನ್ವಿತಾರ್ಥಬೋಧಕತ್ವಸ್ವಾಭಾವ್ಯೇನ, ಪ್ರಕೃತೇ ಚ ಕ್ರಿಯಾಪೇಕ್ಷಿತಕರ್ತೃಸಮರ್ಪಕಪದಾಭಾವೇನ ತದಪ್ರತೀತೇಃ, ಸಕರ್ತೃಕಕ್ರಿಯಾಸಮರ್ಪಕತ್ವಾ-ಭಾವೇನ ವಾಕ್ಯಮಪರ್ಯವಸಿತಮೇವ ಸ್ಯಾದಿತ್ಯತ ಆಹ — ಉತ್ತಮಪುರುಷೇತಿ ॥ 'ಅಸ್ಮದ್ಯು-ತ್ತಮ' ಇತಿ ಪಾಣಿನಿಸೂತ್ರೇಣಾಸ್ಮಚ್ಛಬ್ದೇ ಪ್ರಯುಜ್ಯಮಾನೇ ವಾ ಅಪ್ರಯುಜ್ಯಮಾನೇ ವಾ ತದರ್ಥಮಾತ್ರಾವಗಮೇ ಉತ್ತಮಪುರುಷಃ ಸ್ಯಾದಿತಿ ಪ್ರತಿಪಾದನಾತ್, 'ನಮಾಮಿ' ಇತ್ಯುತ್ತಮ-ಪುರುಷಪ್ರಯೋಗಾದೇವ ಪ್ರಕೃತೇ 'ಅಹಮ್' ಇತಿ ಕರ್ತುರ್ವಾ ತತ್ಸಮರ್ಪಕಪದಸ್ಯ ವಾ ಲಾಭೇನ ವಾಕ್ಯಂ ಪರ್ಯವಸನ್ನಮೇವೇತಿ ಭಾವಃ ।

ಉತ್ತಮಪುರುಷಪ್ರಯೋಗಾದೇವ - 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ ಶಬ್ದಾನಾಮನುಭೂಯತೇ ಅತೋಽನ್ವಿತಾಭಿಧಾಯಿತ್ವಂ' (ಜಿಜ್ಞಾಸಾಧಿಕರಣ) ಎಂದು ಅನುವ್ಯಾಖ್ಯಾನದ ಪ್ರಕಾರ ದ್ವೈತ-ಮತದಲ್ಲಿ ಪದಗಳು ಯೋಗ್ಯೇತರಾನ್ವಿತಸ್ವಾರ್ಥಬೋಧಕ. ಅಂದರೆ ಯಾವುದೇ ಒಂದು ಪದವು ಕೇವಲ ತನ್ನ ಅರ್ಥವನ್ನು ಮಾತ್ರ ಹೇಳದೇ ಇನ್ನೊಂದು ಪದಾರ್ಥದ ಸಂಬಂಧವನ್ನು ಪಡೆದ ಅರ್ಥವನ್ನೇ ಹೇಳುವುದು. ಉದಾ - 'ಘಟಮಾನಯ' ಎಂದು ವಾಕ್ಯವನ್ನು ಪ್ರಯೋಗಿಸಿದಾಗ ಘಟ ಎಂಬ ಪದವು ಕೇವಲ ಮಡಿಕೆ ಎನ್ನುವ ಅರ್ಥವನ್ನು ಹೇಳದೇ, 'ಆನಯ' ಮುಂತಾದ ಬೇರೆ ಪದಗಳ ಅರ್ಥವಾದ ತರುವುದು ಮುಂತಾದ ಅರ್ಥಗಳ ಸಂಬಂಧವನ್ನು ಪಡೆದ ಘಟವನ್ನು ಹೇಳುವುದು.

ಪ್ರಕೃತದಲ್ಲಿ "ಸನ್ನಮಾಮಿ ಎಂದಿಷ್ಟೇ ಹೇಳಿದರೆ ಈ ಪದವು ಕೇವಲ ಕ್ರಿಯೆಯನ್ನು ಹೇಳಿದಲ್ಲಿ ಸ್ವಾರ್ಥಬೋಧಕವಾಗಿದ್ದರೂ ಯೋಗ್ಯೇತರಾನ್ವಿತಸ್ವಾರ್ಥಬೋಧಕವೆಂದಾಗಲಿಲ್ಲ. ಅದಕ್ಕಾಗಿ ಕರ್ತೃಸಂಬದ್ಧವಾದ ಕ್ರಿಯೆಯನ್ನು ಈ ಶಬ್ದವು ಹೇಳಬೇಕು. ಆದರೆ ಕರ್ತೃವಿನ ಸಂಬಂಧವನ್ನು ಹೇಳಲು ಕರ್ತೃವನ್ನು ಹೇಳುವ ಪದ ಇರಬೇಕು. ಅದಿಲ್ಲ; ಹಾಗಾಗಿ ನಾರಾಯಣಂ ಸನ್ನಮಾಮಿ ಎಂಬ ವಾಕ್ಯವು ಅಪರಿಪೂರ್ಣ ಎಂದಾಯಿತು" ಎಂಬ ಆಕ್ಷೇಪ ಬರುವುದು. ಇದಕ್ಕೆ ಉತ್ತರವಾಗಿ 'ಉತ್ತಮ- ಪುರುಷಪ್ರಯೋಗಾದೇವ' ಎಂಬ ಸುಧಾಮಾತು ಹೊರಟಿದೆ. ಉತ್ತಮಪುರುಷಪ್ರಯೋಗ ಮಾಡಿದಾಗ ಅಹಂ ಎಂಬ ಕರ್ತೃವಾಚಕವಾದ ಪದವು ಅಥವಾ ಅಹಂ ಎಂಬ ಅರ್ಥವು ಸಿಗುವುದರಿಂದ ವಾಕ್ಯವು ಪೂರ್ಣವಾಗಿದೆಯೆಂದೇ ಭಾವಿಸಬೇಕು.

## ಯೋಗ್ಯೇತರಾನ್ವಿತಸ್ವಾರ್ಥೇ ಶಬ್ದವ್ಯುತ್ಪತ್ತಿ

शक्तिश्चैवान्विते स्वार्थे शब्दानामनुभूयते। (अनुव्या.)

चशब्दोऽतःशब्दव्याख्यानान्तरसमुच्चयार्थः, यत इत्यर्थे वा। एवशब्दस्यान्वित एवेति सम्बन्धः। अयमर्थः – वृद्धव्यवहारादिना हि शब्दशक्त्यवधारणम्। नच पदार्थस्वरूपमात्रे व्यवहारादिकं युज्यते, किन्तु पदार्थान्तरान्विते। अतो व्यवहारादिना शब्दशक्तिमवधारयताऽर्थान्तरान्वित एव स्वार्थोऽनुभूयत इत्यङ्गीकरणीयम्। यद्यप्येकस्मिन् प्रयोगे गौरानयनान्वितः प्रतीयते, अपरस्मिन् बन्धनान्वितः, अन्यस्मिंश्च दर्शनान्वित इति पदार्थान्तरतदन्वयव्यभिचारः, तथाऽप्यव्यभिचारिणि योग्येतरान्विते स्वार्थे शक्तिग्रहणमुपपद्यत एव। नहि विशेषाणां व्यभिचारेण त्यागे सामान्यस्याव्यभिचारिणो निर्निबन्धनस्त्यागो युज्यते। यत एवं व्युत्पत्तिसमयेऽन्वित एव स्वार्थे शब्दानां शक्तिरनुभूयते, अतोऽन्वितस्वार्थाभिधायित्वं शब्दानामभ्युपेयम्। शक्तिग्रहणानुरोधित्वादभिधानस्य। यदा च पदैरेव अन्वितस्वार्थप्रतिपादनम्, तदा वाक्यार्थ एवाववुद्ध इति कथं तद्बोधस्य निर्निबन्धनता? गुणप्रधानभावेनान्योन्यान्विताः पदार्था वा तदन्वयो वा वाक्यार्थ इति प्रामाणिकैरङ्गीकृतत्वादिति। (ಸುಧಾ)

ಶಬ್ದಕ್ಕೆ ಶಕ್ತಿಯು ವೃದ್ಧವ್ಯವಹಾರ ಮೊದಲಾದವುಗಳಿಂದ ನಿಶ್ಚಯವಾಗುವುದು. ವ್ಯವಹಾರವಾದರೋ ಕೇವಲ ಪದಾರ್ಥದಲ್ಲಿ ಆಗುವುದಿಲ್ಲ ಹೊರತು. ಬೇರೊಂದು ಪದಾರ್ಥದಿಂದ ಸಂಬಂಧ ಹೊಂದಿದ ಪದಾರ್ಥದಲ್ಲಿಯೇ ಆಗುವುದು. ಉದಾ – 'ಚೈತ್ರ ಘಟಮಾನಯ', 'ಚೈತ್ರ ಜಲಮಾಹರ' ಮುಂತಾದ ಕಡೆ.

ಹೀಗೆ ವ್ಯವಹಾರದಿಂದ ಘಟ ಮೊದಲಾದ ಶಬ್ದಗಳಿಗೆ ಶಕ್ತಿಯನ್ನು ನಿಶ್ಚಯಿಸಬೇಕಾದರೆ ಇತರಪದಾರ್ಥಾನ್ವಿತವಾದ ಸ್ವಾರ್ಥವೇ ಅನುಭವಕ್ಕೆ ವಿಷಯವಾಗುತ್ತದೆ. ಅಂದರೆ ಘಟಶಬ್ದಕ್ಕೆ ಇತರಪದಾರ್ಥಾನ್ವಿತವಾದ ಘಟ ಎಂದರ್ಥ.

ಅಲ್ಲ! ಗಾಮಾನಯ, ಗಾಂ ಬಧಾನ, ಗಾಂ ಪಶ್ಯ, ಘಟಮಾನಯ ಮುಂತಾದ ಕಡೆ ಆನಯನಾನ್ವಿತವಾದ ಗೋಶಬ್ದದ ಅರ್ಥವಾಗಲಿ, ಬಂಧನಾನ್ವಿತವಾದ ಗೋವು ಗೋಶಬ್ದಾರ್ಥವಾಗಲಿ ಎಂದು ಹೇಳೋಣವೆಂದರೆ ಇಲ್ಲ. ಆನಯನಕ್ರಿಯಾಸಂಬಂಧ ಗೋವಿಗೆ ಕೇವಲ ಗಾಮಾನಯ ಎಂಬ ಪ್ರಯೋಗದಲ್ಲಿ ಮಾತ್ರ. ಬೇರೆ ಪ್ರಯೋಗಗಳಲ್ಲಿ ಅದಕ್ಕೆ ವ್ಯಭಿಚಾರವಿದೆ. ಆದ್ದರಿಂದ ಶಬ್ದಕ್ಕೆ ಎಲ್ಲಿ ಶಕ್ತಿ ಎಂದರೆ ವ್ಯಭಿಚಾರರಹಿತವಾದ ಯೋಗ್ಯೇತರಾನ್ವಿತಸ್ವಾರ್ಥದಲ್ಲಿ ಶಕ್ತಿ. ಹೀಗೆ ವೃದ್ಧವ್ಯವಹಾರದಿಂದ ವ್ಯುತ್ಪತ್ತಿಗ್ರಹಣವಾಗುವ ಸಂದರ್ಭದಲ್ಲಿ ಅನುಭವಬಲಾತ್ ಅವ್ಯಭಿಚರಿತಯೋಗ್ಯೇತರಾನ್ವಿತಸ್ವಾರ್ಥಾಭಿಧಾಯಿತ್ವವನ್ನು ಶಬ್ದಗಳಿಗೆ ಒಪ್ಪಬೇಕು.

## ವ್ಯಾಖ್ಯಾನದ ವೈವಿಧ್ಯ

(ಲಘುರಸರಂಜನೀ)— ಅಥ ವ್ಯಾಖ್ಯಾನಮವಸರಪ್ರಾಪ್ತಮ್ । ತದನೇಕವಿಧಮ್- ಕ್ವಚಿದನ್ವಯ-ಪ್ರದರ್ಶನಮ್ । ಕ್ವಚಿದಪೇಕ್ಷಿತಪದಾದಿಪೂರಣಮ್ । ಕ್ವಾಪಿ ಪದಾರ್ಥವರ್ಣನಮ್ । ಕುತ್ರಚಿದ್ ವಾಕ್ಯಾರ್ಥಕಥನಮ್ । ಕ್ವಚಿದ್ ಭಾವವರ್ಣನಮ್ । ಕ್ವಚಿತ್ ಪ್ರಯೋಜನಪ್ರದರ್ಶನಮ್ । ಕ್ವಚಿತ್ ಉಪರಿ ಪ್ರಾಪ್ತಾನುಪಪತ್ತಿನಿವಾರಣಮ್ । ಕ್ವಚಿದವಾಂತರಮಹಾತಾತ್ಪರ್ಯವರ್ಣನಮ್ । ಕ್ವಚಿತ್ ಅಸ್ಪಷ್ಟೀಕೃತಾರ್ಥಸ್ಯ ಸ್ಪಷ್ಟೀಕರಣಮ್ – ಇತ್ಯಾದಿ । ತತ್ರ ಪದಾನಾಂ ಪರಸ್ಪರ-ಮನ್ವಿತಾನಾಮೇವ ಅರ್ಥಧೀಜನಕತ್ವಾತ್ ಅವಶ್ಯಮ್ ಆದಾವನ್ವಯೇ ವಕ್ತವ್ಯೇ ತತ್ರ ಕಾರಕಾಣಾಂ ಸಾಕ್ಷಾದೇವ ಕ್ರಿಯಾನ್ವಯಃ ಪದಾಂತರಾಣಾಂ ತು ಪರಂಪರಯೇತಿ ಸಾಂವ್ಯಾವಹಾರಿಕೀಂ ರೀತಿಮನುರುಂಧಾನಃ ತಾವತ್ ಕಾರಕಸ್ಯ ಸಾಕ್ಷಾತ್ ತದನ್ವಯಂ ದರ್ಶಯತಿ — ಅತ್ರೇತಿ ॥ 'ಆದ್ಯಪದ್ಯೇ' ಇತ್ಯರ್ಥಃ ।

ಮಂಗಳಪದ್ಯಕ್ಕೆ 'ಅತ್ರ ನಾರಾಯಣಂ ಸನ್ನಮಾಮಿ' ಮುಂತಾದ ರೀತಿಯಲ್ಲಿ ಸುಧಾದಲ್ಲಿ ವ್ಯಾಖ್ಯಾನ ಪ್ರಾರಂಭವಾಗಿದೆ; ಅವಸರಸಂಗತಿಯಿರುವುದರಿಂದ. ಅವಸರವೆಂದರೆ 'ಪ್ರತಿಬಂಧಕೀಭೂತಶಿಷ್ಯ-ಜಿಜ್ಞಾಸಾನಿವೃತ್ತೌ ಅವಶ್ಯವಕ್ತವ್ಯತ್ವಮ್ ಎಂದು. ವ್ಯಾಖ್ಯಾನವು ಅನೇಕ ರೀತಿಯಾಗಿದೆ.

(ಅ) ಕೆಲವು ಸಲ ಅನ್ವಯವನ್ನು ತೋರಿಸುವುದು. (ಆ) ಕೆಲವು ಶ್ಲೋಕದಲ್ಲಿಲ್ಲದಿರುವ ಅಪೇಕ್ಷಿತವಾದ ಪದ ವಾಕ್ಯ ಮೊದಲಾದವುಗಳನ್ನು ತುಂಬಿಸುವುದು. (ಇ) ಕೆಲವು ಕಡೆ ಕಠಿಣವಾದ, ಅಪ್ರಸಿದ್ಧವಾದ ಪದಗಳ ಅರ್ಥವನ್ನು ವಿವರಿಸುವುದು. (ಈ) ಕೆಲವು ಸಲ ಸಂಪೂರ್ಣವಾಕ್ಯದ ಅರ್ಥ ಏನಾಯಿತು? ಎಂದು ಹೇಳುವುದು. (ಉ) ಕೆಲವು ಕಡೆ ಒಟ್ಟಭಿಪ್ರಾಯವನ್ನು ಹೇಳುವುದು. (ಊ) ಕೆಲವು ಕಡೆ ಶ್ಲೋಕದಲ್ಲಿರುವ ಪದಗಳ ಪ್ರಯೋಜನವನ್ನು ತೋರಿಸುವುದು. (ಋ) ಕೆಲವು ಕಡೆ ಮೂಲದ ಮೇಲೆ ಬರುವ ಆಕ್ಷೇಪವನ್ನು ಅಥವಾ ವಿವರಿಸಿದ ವಾಕ್ಯಾರ್ಥದ ಮೇಲೆ ಬರುವ ಆಕ್ಷೇಪವನ್ನು ಪರಿಹರಿಸುವುದು. (ೠ) ಕೆಲವು ಕಡೆ ಅವಾಂತರವಾದ ಅರ್ಥವನ್ನು ಹೇಳಿ ನಂತರ ಮಹಾತಾತ್ಪರ್ಯವನ್ನು ಹೇಳುವುದು. (ಎ) ಕೆಲವು ಕಡೆ ಸ್ಪಷ್ಟವಾಗದೇ ಇರುವ ಅರ್ಥವನ್ನು ಸ್ಪಷ್ಟಪಡಿಸುವುದು - ಎಂದು.

ಇಲ್ಲಿ ಪದಗಳು ಪರಸ್ಪರವಾಗಿ ಸಂಬಂಧವನ್ನು ಪಡೆದಾಗ ಮಾತ್ರ ಯಾವುದಾದರೂ ಅರ್ಥ-ಜ್ಞಾನವನ್ನು ತಂದುಕೊಡಲು ಸಾಧ್ಯವಿರುವುದರಿಂದ ಮೊದಲಿಗೆ ಅವಶ್ಯವಾಗಿ ಅನ್ವಯವನ್ನು ಹೇಳಬೇಕಾದ್ದರಿಂದ ಅದರಲ್ಲೂ ಕಾರಕಗಳಿಗೆ ಸಾಕ್ಷಾತ್ತಾಗಿ ಕ್ರಿಯೆಯಲ್ಲಿ ಅನ್ವಯ. ಕಾರಕಬಿಟ್ಟು ಬೇರೆ ಪದಗಳಿಗಾದರೋ ಪರಂಪರೆಯಿಂದ ಕ್ರಿಯೆಯಲ್ಲಿ ಅನ್ವಯ ಎಂದು ವ್ಯವಹಾರದಲ್ಲಿ ಅನುಸರಿಸುವ

ರೀತಿಯನ್ನು ಮೊದಲಿಗೆ ಇಲ್ಲಿ 'ಅತ್ರ ನಾರಾಯಣಂ ಸನ್ನಮಾಮಿ ಇತ್ಯನ್ವಯಃ' ಎಂದು ನಾರಾಯಣ ಎಂಬ ಕರ್ಮಕಾರಕಕ್ಕೆ ಸಾಕ್ಷಾತ್ತಾಗಿ ಸನ್ನಮಾಮಿ ಎಂಬಲ್ಲಿರುವ ಭಕ್ತಿಶ್ರದ್ಧಾಪೂರ್ವಕವಾದ ನಮನಕ್ರಿಯೆಯಲ್ಲಿ ಸಂಬಂಧವನ್ನು ತೋರಿಸಿದ್ದಾರೆ.

## ಅಹಮರ್ಥವು ಆಕ್ಷೇಪ್ಯವೂ ಹೌದು ಲಾಕ್ಷಣಿಕವೂ ಹೌದು

(ಲಘುರಸರಂಜನೀ)— ನನು ನಮನಕ್ರಿಯಾಯಾಃ ಸಕರ್ಮಕತ್ವಾತ್ 'ನಾರಾಯಣಮ್' ಇತಿ ಕರ್ಮೋಕ್ತಿವತ್ ಸಕರ್ತೃಕತ್ವಾತ್ 'ಅಹಮ್' ಇತಿ ಕರ್ತ್ರ್ಯುಕ್ತ್ಯಾಪಿ ಭಾವ್ಯಮಿತ್ಯತ ಆಹ — **ಉತ್ತಮೇತಿ ॥** ಅಸ್ಮದ್ಯುತ್ತಮಃ । ಅಸ್ಮಚ್ಛಬ್ದೇ ಉಪಪದತ್ವೇನ ಶ್ರೂಯಮಾಣೇಽಶ್ರೂಯಮಾಣೇ ತದರ್ಥವಿಕ್ಷಾಯಾಮುತ್ತಮಪುರುಷೋ ಭವತೀತಿ ಸೂತ್ರವಾರ್ತಿಕಾಭ್ಯಾಮುತ್ತಮಪುರುಷಸ್ಯಾ-ಸ್ಮದರ್ಥಕರ್ತ್ರವಿನಾಭಾವೋಕ್ತೇ ಉತ್ತಮಪುರುಷೇಣೈವ ತದಾಕ್ಷೇಪಸಂಭವಾತ್ ಅತ್ರೋತ್ತಮ-ಪುರುಷಪ್ರಯೋಗಾತ್ ಅಹಮಿತಿ ಕರ್ತಾ ಲಭ್ಯತೇ । ಅತ್ರ ಕ್ರಿಯಾಯಾಃ ಸಕರ್ತೃಕತ್ವೇಽಪಿ ನ ತಲ್ಲಾಭಾರ್ಥಂ ಪೃಥಗಹಮಿತಿ ಕರ್ತ್ರುಕ್ತ್ಯಾ ಭಾವ್ಯಮಿತಿ ಭಾವಃ ।

ನನು ಪದಾರ್ಥ ಏವ ಹಿ ವಾಕ್ಯಾರ್ಥೇ ಸಮನ್ವೀಯತೇ । ಸ ಚ ವಾಚ್ಯೋ ವಾ ಲಕ್ಷ್ಯೋ ವಾ । ನ ಚಾತ್ರಾಹಮರ್ಥಃ ಕರ್ತಾ ಉತ್ತಮಪುರುಷಸ್ಯ ವಾಚ್ಯೋ ಲಕ್ಷ್ಯೋ ವಾ । ಕಿಂತ್ವಾಕ್ಷೇಪ್ಯಃ । ನ ಚಾಕ್ಷೇಪ್ಯಸ್ಯ ಕಾರ್ಯಜ್ಞಾಪ್ಯಯೋರಿವಾರ್ಥಿಕಾರ್ಥಸ್ಯ ವಾಕ್ಯಾರ್ಥೇ ಸಮನ್ವಯಃ ಶಾಬ್ದವ್ಯವಹಾರೇ ದೃಷ್ಟಃ । ಅತಃ ಕಥಮುತ್ತಮಪುರುಷಾಕ್ಷೇಪ್ಯಸ್ಯ ಅಹಮರ್ಥಸ್ಯ ಪ್ರಕೃತವಾಕ್ಯಾರ್ಥೇ ಸಮನ್ವಯ ಅದರ್ಶನಾತ್ ಇತಿ ಚೇನ್ನ । ಕಾರ್ಯಜ್ಞಾಪ್ಯಯೋರಾರ್ಥಿಕಾರ್ಥಯೋರ್ವಾಕ್ಯಾರ್ಥೇ ಸಮ-ನ್ವಯಾಭಾವೇಽಪಿ ಗವಾದಿಪದಾನಾಂ ಜಾತಾವೇವ ಶಕ್ತಿರ್ವ್ಯಕ್ತಿಲಾಭಸ್ತು ಆಕ್ಷೇಪಾದಿತಿ ವದತಾಂ ಮೀಮಾಂಸಕಾನಾಂ ಮತೇ ಶಾಬ್ದವ್ಯವಹಾರೇ ಏವಾಕ್ಷೇಪಲಭ್ಯಾಯಾಃ ವ್ಯಕ್ತೇಃ 'ಗಾಮಾನಯ' ಇತಿ ವಾಕ್ಯಾರ್ಥೇ ಕರ್ಮಕಾರಕತಯಾಽನ್ವಯದರ್ಶನಾತ್ । ಆಕ್ಷೇಪ್ಯಸ್ಯ ತತ್ಸಂಭವಾತ್ । ಸೂತ್ರ-ವಾರ್ತಿಕಾಭ್ಯಾಮೇವ ಅವಿನಾಭಾವಾಖ್ಯಶಕ್ಯಸಂಬಂಧಸ್ಯ ಪ್ರದರ್ಶಿತತ್ವಾತ್ ಉತ್ತಮಪುರುಷೇಣಾಹ ಮರ್ಥಕರ್ತೃಲಕ್ಷಣಾಸಂಭವಾತ್ ಲಾಕ್ಷಣಿಕಾರ್ಥಸ್ಯಾಹಮರ್ಥಸ್ಯ ಪದಾರ್ಥತ್ವಾದೇವ ಪ್ರಕೃತ-ವಾಕ್ಯಾರ್ಥೇ ಸಮನ್ವಯೇ ಬಾಧಕಾಭಾವಾಚ್ಚ ।

ಉತ್ತಮಪುರುಷಪ್ರಯೋಗಾದೇವ - ಕ್ರಿಯೆಗೆ ಕರ್ಮವಿರುವಂತೆ ಕರ್ತೃವೂ ಇರುವುದರಿಂದ ಪ್ರಕೃತದಲ್ಲಿ ನಮನಕ್ರಿಯೆಗೆ ನಾರಾಯಣನು ಕರ್ಮ ಎಂದು ಹೇಳಿದರೂ ಆ ಕ್ರಿಯೆಗೆ ಕರ್ತೃವನ್ನು ನಿರ್ದೇಶಿಸುವ ಅಹಂ ಎಂಬ ಪದ ಬೇಕು. ಅದನ್ನು ಹೇಳಿಲ್ಲವಲ್ಲ ಎಂದಾಕ್ಷೇಪಿಸಿದರೆ ಅದಕ್ಕೆ ಉತ್ತರವಾಗಿ ಈ ವಾಕ್ಯ ಹೊರಟಿದೆ. 'ಅಸ್ಮದ್ಯುತ್ತಮಃ' ಎಂಬ ಪಾಣಿನಿಯ ಸೂತ್ರದಿಂದ

ಉತ್ತಮಪುರುಷಕ್ಕೆ ಅಸ್ಮದ್ ಶಬ್ದದ ಅರ್ಥವಾದ ಕರ್ತೃವಿನೊಂದಿಗೆ ಅವಿನಾಭಾವಸಂಬಂಧವನ್ನು ಹೇಳಿದ್ದರಿಂದ ಯಾವಾಗ ಯಾವಾಗ ಉತ್ತಮಪುರುಷಪ್ರಯೋಗ ಮಾಡುತ್ತೇವೆಯೋ ಆವಾಗ ಆವಾಗ ಉತ್ತಮಪುರುಷದ ಸಂಬಂಧಿಯಾದ ಕರ್ತೃ ಎಂಬ ಅರ್ಥದ ಉಪಸ್ಥಿತಿ ಬರುವುದರಿಂದ ಉತ್ತಮಪುರುಷದಿಂದಲೇ ಕರ್ತೃವಿನ ಆಕ್ಷೇಪ ಮಾಡಲು ಸಾಧ್ಯವಿರುವುದರಿಂದ ಪ್ರತ್ಯೇಕವಾಗಿ ಕರ್ತೃವಿನ ಲಾಭಕ್ಕಾಗಿ 'ಅಹಂ' ಎಂಬ ಉಕ್ತಿಯು ಬೇಕಾಗಿಲ್ಲ ಎಂದಭಿಪ್ರಾಯ.

ಅಲ್ಲ? ವಾಕ್ಯದ ಅರ್ಥದಲ್ಲಿ ಪದಗಳ ಅರ್ಥಗಳಿಗೆ ಅನ್ವಯ ಮಾಡಬೇಕು. ಆ ಪದದ ಅರ್ಥವಾದರೋ ವಾಚ್ಯವಾಗಿರಬೇಕು ಅಥವಾ ಲಕ್ಷ್ಯವಾಗಿರಬೇಕು. ಅರ್ಥಾತ್ ಯಾವ ವಾಕ್ಯಾರ್ಥದಲ್ಲಿ ಪದಾರ್ಥವನ್ನು ಅನ್ವಯಿಸುತ್ತೇವೆಯೋ ಅಂತಹ ಆ ಪದದ ಅರ್ಥವು ಆ ಪದದ ಶಕ್ತಿವೃತ್ತಿಯಿಂದ ಅಥವಾ ಲಕ್ಷಣಾವೃತ್ತಿಯಿಂದ ಸಿಕ್ಕಿರಬೇಕು. ಪ್ರಕೃತದಲ್ಲಿ ಅಹಂ ಎಂಬ ಪದದ ಅರ್ಥವಾದ ಕರ್ತೃವು ಉತ್ತಮಪುರುಷಕ್ಕೆ ವಾಚ್ಯವೂ ಅಲ್ಲ ಲಕ್ಷ್ಯವೂ ಅಲ್ಲ. ಹೊರತಾಗಿ ಆಕ್ಷೇಪ್ಯವಾಗಿದೆ. ಆಕ್ಷೇಪ್ಯವಾದ ವಸ್ತುವಿಗೆ ವಾಕ್ಯಾರ್ಥದಲ್ಲಿ ಅನ್ವಯವಂತೂ ಶಾಬ್ದಪ್ರಮಾಣವಿಷಯದಲ್ಲಿ ಕಂಡಿಲ್ಲ. ಈ ರೀತಿಯಾಗಿ ಉತ್ತಮಪುರುಷದಿಂದ ಸಿಗುವ ಅಹಂ ಪದದ ಅರ್ಥವಾದ ಕರ್ತೃವಿಗೆ 'ಅಹಂ ನಾರಾಯಣಂ ಸನ್ನಮಾಮಿ' ಎಂಬುದಾಗಿ ವಾಕ್ಯಘಟಕವಾದ ಇತರ ಪದಾರ್ಥದಲ್ಲಿ ಅನ್ವಯಿಸುವುದು ಹೇಗೆ ಎಂದಾಕ್ಷೇಪ.

ಉತ್ತರ- ಅರ್ಥಾತ್ ಸಿಗುವ ಅರ್ಥಗಳಿಗೆ ವಾಕ್ಯಾರ್ಥದಲ್ಲಿ ಅನ್ವಯವು ಶಾಬ್ದವ್ಯವಹಾರದಲ್ಲಿ ಕಂಡಿಲ್ಲ- ಎಂಬುವುದಕ್ಕೆ ಎರಡು ರೀತಿಯ ಉತ್ತರ. ಮೀಮಾಂಸಕಮತದಲ್ಲಿ ಶಾಬ್ದವ್ಯವಹಾರದಲ್ಲಿ ಆಕ್ಷೇಪಲಭ್ಯವಾದ ಅರ್ಥಕ್ಕೆ ವಾಕ್ಯಾರ್ಥದಲ್ಲಿ ಅನ್ವಯವು ಕಂಡಿದೆ. ಉದಾಹರಣೆಗೆ - ಗೋ ಮುಂತಾದ ಪದಗಳಿಗೆ ಜಾತಿಯಲ್ಲೇ ಶಕ್ತಿ ಎನ್ನುವರು. ಇನ್ನು ಗೋ ಎಂಬ ವ್ಯಕ್ತಿಯ ಲಾಭವಾದರೋ ಆಕ್ಷೇಪಪ್ರಮಾಣದಿಂದ ಎನ್ನುವರು. ಈ ನಿಟ್ಟಿನಲ್ಲಿ ಗಾಮಾನಯ ಎಂದು ವಾಕ್ಯಪ್ರಯೋಗಿಸಿದಾಗ ಗೋತ್ವವನ್ನು ತರಲು ಅಸಾಧ್ಯವಾದ್ದರಿಂದ ಗೋತ್ವವಿರುವ ಗೋವನ್ನು ತೆಗೆದುಕೊಂಡು ಬಾ ಎಂಬುದಾಗಿ ಗೋಪದದಿಂದ ಶಕ್ತಿವೃತ್ತಿಯಿಂದಾಗಲೀ ಲಕ್ಷಣಾವೃತ್ತಿಯಿಂದಾಗಲೀ ಸಿಗದಿರುವ ಪರಂತು ಅರ್ಥಾತ್ ಸಿಗುವ ಆಕ್ಷೇಪ್ಯವಾದ ಗೋರೂಪ ಅರ್ಥಕ್ಕೆ ಆನಯನಕ್ರಿಯೆಯಲ್ಲಿ ಅನ್ವಯವು ಕಂಡಿದೆ. ಅದರಂತೆ ಇಲ್ಲಿಯೂ ಅನ್ವಯಿಸಿದಲ್ಲಿ ಯಾವುದೇ ದೋಷವಿಲ್ಲ.

ಅಥವಾ - ಮೀಮಾಂಸಕಮತವನ್ನು ಅವಲಂಬಿಸದೇ ಇದ್ದರೂ ಎಲ್ಲ ಮತಸಾಧಾರಣವಾಗಿ ಲಕ್ಷಣಾವೃತ್ತಿಯಿಂದಲೇ ಅಹಂಪದದ ಅರ್ಥವಾದ ಕರ್ತೃವು ಸಿಗುವುದು. ಆದ್ದರಿಂದ ಅದು ಪದಾರ್ಥವೇ. ಹಾಗಾಗಿಯೇ ಅಸ್ಮದ್ಯುತ್ತಮಃ ಎಂಬುದಾಗಿ ಸೂತ್ರಕಾರರು ಹಾಗೂ ವೃತ್ತಿಕಾರರು ಅವಿನಾಭಾವ ಎಂಬ ಶಕ್ಯಸಂಬಂಧವನ್ನು ಉತ್ತಮಪುರುಷಕ್ಕೂ ಹಾಗೂ ಕರ್ತೃ ಎಂಬ ಅರ್ಥಕ್ಕೂ

ತೋರಿಸಿದ್ದಾರೆ. ಏಕೆಂದರೆ ಶಕ್ಯಸಂಬಂಧವನ್ನೇ ಲಕ್ಷಣಾ ಎನ್ನುವರು. ಹಾಗಾಗಿ ವಾಕ್ಯಾರ್ಥದಲ್ಲಿ ಅನ್ವಯವನ್ನು ಪಡೆಯುತ್ತದೆ. ಏವಂ ಚ 'ಅಹಂ ನಾರಾಯಣಂ ಸನ್ನಮಾಮಿ' ಎಂದು ಅನ್ವಯಿಸುವುದು ಸರಿಯಾಗಿದೆ.

## ವಿಶೇಷಣಗಳೆಲ್ಲವೂ ಕೇವಲ ವ್ಯಾವೃತ್ತಿಬುದ್ಧಿಜನಕವಲ್ಲ

(ಲಘುರಸರಂಜನೀ)— ವಿಶೇಷಣವಿಶೇಷ್ಯಭಾವೇನ ಇತ್ಯರ್ಥಃ । ಉಪಲಕ್ಷಣಮೇತತ್ । 'ವಿಶೇಷಣಸಂಬಂಧಿತಯಾ' ಇತ್ಯಪಿ ದ್ರಷ್ಟವ್ಯಮ್ । ತೇನ 'ಸುವಾಕ್ಯೈಃ' ಇತ್ಯಾದೀನಾಂ ನಾನ್ವಯಾನುಪಪತ್ತಿಃ । ಅತ್ರ 'ವಿಶೇಷಣತಯಾ ಸಂಬಂಧ' ಇತ್ಯನೇನ 'ನಿಖಿಲ' ಇತ್ಯಾದೀನಾಂ ನಾರಾಯಣವಿಶೇಷಣತ್ವಮುಕ್ತಮ್ । ವಿಶೇಷಣತ್ವಂ ಚ ವ್ಯಾವರ್ತಕತ್ವಮ್ । ತಚ್ಚಾಸಾಧಾರಣ-ಧರ್ಮಪ್ರತಿಪಾದನೇನ । ತೇ ಚಾಸಾಧಾರಣಧರ್ಮಾಃ ವಿದಿತಪದಪದಾರ್ಥಸಂಗತೀನಾಂ (ಪುರುಷಾಣಾಂ) 'ನಿಖಿಲ' ಇತ್ಯಾದಿಪದ್ಯೈಃ ಪ್ರತೀಯಮಾನಾ ಗುಣಪೂರ್ಣತ್ವದೋಷ-ದೂರತ್ವಾದಯಃ ಸರ್ವೋತ್ತಮತ್ವೋಪಪಾದಕಾಶ್ಚ ಭವಂತಿ । ನ ಕೇವಲಂ ದೇವದತ್ತೇ ದಂಡ ಇವ ವ್ಯಾವೃತ್ತಿಬುದ್ಧಿಮಾತ್ರಜನಕಾಃ । ತಾದೃಶಧರ್ಮಪ್ರತಿಪಾದನಂ ತು ಸ್ತುತಿರೇವೇತಿ ಸಿದ್ಧಮ್ ।

ವಿಶೇಷಣತಯಾ ಇತಿ – 'ನಿಖಿಲಪೂರ್ಣಗುಣೈಕದೇಹಂ' ಮುಂತಾದ ಪದಗಳಿಗೆ ನಾರಾಯಣನಲ್ಲಿ ವಿಶೇಷಣವಿಶೇಷ್ಯಭಾವದಿಂದ ಅನ್ವಯಿಸಬೇಕು. ಹಾಗಾಗಿ ವಿಶೇಷಣತಯಾ ಎಂಬ ಸುಧಾದಲ್ಲಿರುವ ಪದಕ್ಕೆ ವಿಶೇಷಣವಿಶೇಷ್ಯಭಾವೇನ ಎಂದರ್ಥ. ಇದು ಉಪಲಕ್ಷಣ. ಅಂದರೆ ವಿಶೇಷಣ-ಸಂಬಂಧಿತಯಾ ಎಂಬಂಶವನ್ನು ಇಲ್ಲಿ ಸೇರಿಸಿಕೊಳ್ಳಬೇಕು. ಹಾಗಾಗಿ 'ಅಖಿಲೈಃ ಸುವಾಕ್ಯೈಃ ಆಪ್ಯತಮಂ ನಾರಾಯಣಂ' ಎಂಬಲ್ಲಿ ಸುವಾಕ್ಯೈಃ ಎಂಬ ಪದಕ್ಕೂ ನಾರಾಯಣನಲ್ಲಿ ಅನ್ವಯವಿದೆ. ಅನ್ವಯವಾದರೋ ಪರಂಪರಯಾ ಎಂದು ತಿಳಿಯಬೇಕು.

ಇನ್ನು 'ವಿಶೇಷಣತಯಾ ಸಂಬಂಧಃ' ಎಂದರೆ ನಿಖಿಲಮುಂತಾದ ಪದಗಳು ನಾರಾಯಣನಿಗೆ ವಿಶೇಷಣವಾಗಿವೆ ಎಂದಾಯಿತು. ವಿಶೇಷಣ ಎಂದರೆ ವ್ಯಾವರ್ತಕ ಎಂದರ್ಥ. ಅರ್ಥಾತ್ ವಿಶೇಷ್ಯದಲ್ಲಿ ಇತರಭೇದಬುದ್ಧಿಯನ್ನು ತಂದುಕೊಡುವಂತಹದ್ದು. ಅಸಾಧಾರಣಧರ್ಮವನ್ನು ಪ್ರತಿಪಾದನೆ ಮಾಡುವ ಮುಖಾಂತರ. ಅಂತಹ ಅಸಾಧಾರಣಧರ್ಮಗಳಾದರೋ ನಿಖಿಲ ಮುಂತಾದ ಪದಗಳಿಂದ ತೋರುವ ಗುಣಪೂರ್ಣತ್ವ ದೋಷದೂರತ್ವ ಮುಂತಾದವು. ಇವುಗಳು ಕೇವಲ ವ್ಯಾವೃತ್ತಿಬುದ್ಧಿಯನ್ನು ತಂದುಕೊಡುವುದಿಲ್ಲ ಹೊರತು ಸರ್ವೋತ್ತಮತ್ವವನ್ನು ಭಗವಂತನಲ್ಲಿ ಉಪಪಾದಿಸುತ್ತವೆ. ಹಾಗೆ ಈ ಧರ್ಮಗಳು ಸ್ತುತಿಪರವಾಗಿವೆ ಎಂದು ತಿಳಿಯಬೇಕು. ಯಜ್ಞದತ್ತನಿಂದ ದೇವದತ್ತನನ್ನು ದಂಡರೂಪವಿಶೇಷಣವು ವ್ಯಾವೃತ್ತಿಯನ್ನು ಮಾಡುತ್ತದೆ. ಅದರಂತೆ ಕೇವಲ ವ್ಯಾವೃತ್ತಿಬುದ್ಧಿಯನ್ನಷ್ಟೇ ಉಂಟುಮಾಡುವುದಲ್ಲ ಎಂದು ತಿಳಿಯಬೇಕು.

## ಇಲ್ಲಿ ಭಕ್ತಿಯೆಂದರೆ ಕೇವಲ ಸ್ನೇಹ ಹೊರತು ಮಾಹಾತ್ಮ್ಯಜ್ಞಾನವಲ್ಲ

**(ಕಾಶೀ) — ಅತ್ರ ಭಕ್ತಿಶಬ್ದೇನ ಸ್ನೇಹೋ ವಿವಕ್ಷಿತಃ, ನ ತು ಮಾಹಾತ್ಮ್ಯಜ್ಞಾನಮಪಿ । ನಮನಸ್ಯೈವ ತದ್ರೂಪತ್ವಾತ್ ।**

'ಸಮ್' ಇತಿ ಭಕ್ತ್ಯಾದ್ಯತಿಶಯಸಾಹಿತ್ಯಲಕ್ಷಣಾಮ್ - ಇಲ್ಲಿ ಭಕ್ತಿ ಎಂದರೆ 'ಮಾಹಾತ್ಮ್ಯಜ್ಞಾನ-ಪೂರ್ವಸ್ತು ಸುದೃಢಃ ಸರ್ವತೋಽಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಃ ..' ಎಂದು ಹೇಳಿದಂತೆ ಮಾಹಾತ್ಮ್ಯಜ್ಞಾನ ಹಾಗೂ ಸುದೃಢಸ್ನೇಹ ಎಂಬ ಎರಡಂಶವುಳ್ಳ ಭಕ್ತಿಯು ವಿವಕ್ಷಿತವಲ್ಲ. ಹೊರತು ಕೇವಲ ಸ್ನೇಹವನ್ನು ಮಾತ್ರ ಇಲ್ಲಿರುವ ಭಕ್ತಿ ಎಂಬ ಪದದಿಂದ ಗ್ರಹಿಸಬೇಕು. ಏಕೆಂದರೆ, ಮಾಹಾತ್ಮ್ಯಜ್ಞಾನ ಎಂಬುವುದು ನಮಾಮಿ ಎಂಬ ಪದದಿಂದಲೇ ಇಲ್ಲಿ ಲಭ್ಯವಾಗಿದೆ. ಅದು ಹೀಗೆ — ನಮಾಮಿ ಎಂಬ ಪದದ ಅರ್ಥವಾದ ನಮಸ್ಕಾರವೆಂದರೆ ಸ್ವಾವಧಿಕಉತ್ಕೃಷ್ಟತ್ವ-ಪ್ರಕಾರಜ್ಞಾನಾನುಕೂಲವ್ಯಾಪಾರ. ತನಗಿಂತ ನಮಸ್ಕರಿಸಲ್ಪಡುವವನು ಉತ್ಕೃಷ್ಟ ಎಂಬ ಜ್ಞಾನಕ್ಕೆ ಅನುಕೂಲವಾದ ಕ್ರಿಯೆ ಎಂದರ್ಥ. ಹಾಗಾಗಿ 'ಅನನ್ಯಲಭ್ಯಃ ಶಬ್ದಾರ್ಥಃ' ಎಂಬ ನಿಯಮದಂತೆ ಭಕ್ತಿಶಬ್ದದ ಅರ್ಥವು ಇಲ್ಲಿ ಕೇವಲ ಸ್ನೇಹವೆಂದೇ ವಿವಕ್ಷಿತ.

## ಪ್ರಿಯತಮಶಬ್ದದಿಂದ ಸಂಶಬ್ದಕ್ಕೆ ವೈಯರ್ಥ್ಯವಿಲ್ಲ

**(ಕಾಶೀ) — ಯದ್ಯಪಿ 'ಪ್ರಿಯತಮಮ್' ಇತ್ಯನೇನ ಭಕ್ತ್ಯತಿಶಯೋ ದರ್ಶಿತಃ । ತಥಾಽಪಿ ತತ್ಪೂರ್ವಕಪ್ರಣಾಮಸ್ಯಾಭಿಮತಸಿದ್ಧ್ಯಂಗತ್ವಸೂಚನಾಯ 'ಸಂ'ಶಬ್ದ ಇತಿ ಭಾವಃ ।**

'ಸಮಿತಿ' 'ಪ್ರಿಯತಮಮಿತಿ' - ನಮಸ್ಕಾರವು ಭಕ್ತ್ಯಾದಿಅತಿಶಯಗಳಿಂದ ಕೂಡಿದ್ದರೆ ಮಾತ್ರ ಗ್ರಂಥ-ಕರ್ತೃವಿಗೆ ಅಭಿಮತವಾದ ಗ್ರಂಥದ ನಿರ್ವಿಘ್ನಪರಿಸಮಾಪ್ತಿಯಾಗುವುದು. ಇಲ್ಲಿ ಭಕ್ತ್ಯಾದ್ಯತಿಶಯ ಎಂಬರ್ಥವು ಸಮ್ ಎಂಬ ಉಪಸರ್ಗದಿಂದ ತೋರಿದೆ ಎಂದಿದ್ದಾರೆ. ಯದ್ಯಪಿ ಈ ಅರ್ಥ-ಲಾಭಕ್ಕೋಸ್ಕರ ಸಮ್ ಎಂಬ ಪದವು ಬೇಡವೇ ಬೇಡ. ಏಕೆಂದರೆ 'ಸದಾ ಮಮ ಪ್ರಿಯತಮಂ' ಎಂಬಲ್ಲಿರುವ ಪ್ರಿಯತಮ ಎಂಬ ಪದದಿಂದ ಭಕ್ತ್ಯತಿಶಯ ಎಂಬುವುದು ತೋರುತ್ತಿದೆ. ಹಾಗಾಗಿ - ಭಕ್ತ್ಯತಿಶಯಪೂರ್ವಕವಾದ ಪ್ರಣಾಮವು ಅಭಿಮತಸಿದ್ಧಿಗೆ ಅಂಗ ಎಂಬುದನ್ನು ಸೂಚಿಸುವುದಕ್ಕಾಗಿ ಸಂಶಬ್ದವಿದೆ ಎಂದು ತಿಳಿಯಬೇಕು.

## ವಾಕ್ಯಭೇದಪರಿಹಾರ ಹಾಗೂ ಮೊದಲಿಗೆ ನಾರಾಯಣಪದಪ್ರಯೋಗದ ಔಚಿತ್ಯ

**(ಕಾಶೀ) — ನನು 'ನಿಖಿಲ' ಇತ್ಯಾದೀನಾಂ 'ನಮಾಮಿ' ಇತ್ಯನೇನ ಸಾಕ್ಷಾದನ್ವಯೇ ವಾಕ್ಯ-ಭೇದಃ । 'ನಾರಾಯಣಮ್' ಇತ್ಯನೇನಾನ್ವಯೇ ಚ ತತ್ಪೂರ್ವಂ ಪ್ರಯೋಗಾಪತ್ತಿಃ । ವಿಶೇಷಣಸ್ಯ ಪೂರ್ವತ್ವನಿಯಮಾತ್ ಇತ್ಯತ ಆಹ — ನಿಖಿಲೇತ್ಯಾದೀನಾಮಿತಿ ॥ ನಾರಾಯಣಪದಸ್ಯ**

ಪರಮಮಾಂಗಲಿಕತ್ವೇನ, ಶಾಸ್ತ್ರಾರ್ಥವಾಚಿತಯಾ ಮುಖ್ಯತ್ವೇನ ಚ ಪ್ರಥಮಂ ಪ್ರಯೋಗೇಽಪಿ ತಾತ್ಪರ್ಯಬಲೇನೋತ್ತರತ್ರ ಯೋಜನಯಾ ವಿಶೇಷ್ಯತ್ವೋಪಪತ್ತೇರಿತಿ ಭಾವಃ ।

ನಿಖಿಲ ಇತ್ಯಾದೀನಾಂ ತು – 'ಅತ್ರ ನಾರಾಯಣಂ ಸನ್ನಮಾಮಿ ಇತ್ಯನೇನಾನ್ವಯಃ' ಎಂದು ಸುಧಾದಲ್ಲಿ ನಾರಾಯಣಂ ಎನ್ನುವುದಕ್ಕೆ ಸಾಕ್ಷಾತ್ತಾಗಿ ಕ್ರಿಯೆಯಲ್ಲಿ ಅನ್ವಯ ಮಾಡಿದ್ದಾರೆ. ಇದರಂತೆ ನಿಖಿಲ ಇತ್ಯಾದಿ ಪದಗಳಿಗೂ ಅನ್ವಯಿಸಿದರೆ ವಾಕ್ಯಭೇದದೋಷವು. ಆಗ 'ನಿಖಿಲಪೂರ್ಣ-ಗುಣೈಕದೇಹಂ ನಮಾಮಿ; ನಿರ್ದೋಷಂ ನಮಾಮಿ' ಈ ರೀತಿ ಅನೇಕವಾಕ್ಯಗಳಾದೀತು. 'ಸಂಭವತಿ ಏಕವಾಕ್ಯತ್ವೇ ವಾಕ್ಯಭೇದೋ ದೋಷಃ' - ಏಕವಾಕ್ಯತ್ವವನ್ನು ಕೂಡಿಸಲು ಬರುವಾಗ ವಾಕ್ಯ-ಭೇದವನ್ನು ಆಶ್ರಯಿಸುವುದು ಸರಿಯಲ್ಲ. ಪ್ರಕೃತದಲ್ಲಿ ನಾರಾಯಣನಲ್ಲಿ ಎಲ್ಲ ನಿಖಿಲ ಇತ್ಯಾದಿ ಪದಗಳಿಗೆ ವಿಶೇಷಣರೂಪೇಣ ಅನ್ವಯ ಮಾಡಿ ನಾರಾಯಣನಿಗೆ ಸಾಕ್ಷಾತ್ ನಮನಕ್ರಿಯೆಯಲ್ಲಿ ಅನ್ವಯ ಮಾಡಿದಾಗ ವಾಕ್ಯಭೇದದೋಷವಿಲ್ಲ ಎಂದು ಸಿದ್ಧವಾಗುವುದು. ಆದರೆ ವಿಶೇಷಣವನ್ನು ಮೊದಲು ಪ್ರಯೋಗಿಸಬೇಕು ಎಂಬ ನಿಯಮವಿರುವುದರಿಂದ ಈ ಶ್ಲೋಕದಲ್ಲಿ ಮೊದಲೇ 'ನಾರಾಯಣಂ ನಿಖಿಲಪೂರ್ಣ..' ಎಂದು ನಾರಾಯಣಪದವನ್ನು ಹೇಳಿದ್ದು ತಪ್ಪು ಎಂದಾದೀತು।

ಈ ಆಕ್ಷೇಪಕ್ಕೆ ಇದು ಉತ್ತರ – 'ನಾರಾಯಣ' ಎಂಬ ಪದವು ಮೊದಲು ಪ್ರಯೋಗ ಮಾಡಿರುವುದಕ್ಕೆ ಕಾರಣ ಅದು ಪರಮಮಂಗಳಮಯವಾದದ್ದು ಎಂಬುದು. ಹಾಗೂ ಇಡೀ ಶಾಸ್ತ್ರದ ಅರ್ಥ ನಾರಾಯಣನೇ ಆದ್ದರಿಂದ ಅದನ್ನು ಹೇಳುವ ನಾರಾಯಣಪದವು ಪ್ರಧಾನ ಎಂಬ ಭಾವದಿಂದ ಮೊದಲು ಹೇಳಿದ್ದಾರೆ. ಇನ್ನು ಅದು ವಿಶೇಷ್ಯವೆಂದು ಹೇಗೆ ತಿಳಿಯುವುದು? ಮೊದಲೇ ಪ್ರಯೋಗಿಸಿದ್ದರಿಂದ ಎಂದು ಆಕ್ಷೇಪದ ಅಭಿಪ್ರಾಯ. ಉತ್ತರ – ಗ್ರಂಥಕರ್ತೃವಿನ ತಾತ್ಪರ್ಯದಿಂದ ಮುಂದೆ ಯೋಜನೆ ಮಾಡಿ ಅರ್ಥಾತ್ ನಿಖಿಲಪೂರ್ಣಗುಣೈಕದೇಹಂ ಇತ್ಯಾದಿಗಳನ್ನು ಮೊದಲು ಹೇಳಿ ಕೊನೆಗೆ ನಾರಾಯಣಂ ಸನ್ನಮಾಮಿ ಎನ್ನಬೇಕು. ಆಗ ಅದೇ ವಿಶೇಷ್ಯ ಎಂಬ ಜ್ಞಾನ-ವುಂಟಾಗುವುದು.

### ಪ್ರಯೋಜನಂ ಚ ಸ್ತುತಿಪದಾನಾಂ - ಸುಧಾಮೂಲದ ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – प्रयोजनं च स्तुतिपदानां विशेष्यप्रशंसैव। तत्रार्थिकपुनरुक्तेः स्तुतित्वमेव समाधानमवधातव्यम्।

ಪ್ರಯೋಜನಂ ಚ - ಪ್ರಯೋಜನವಾದರೋ, ಸ್ತುತಿಪದಾನಾಂ - ನಾರಾಯಣನನ್ನು ಸ್ತುತಿಸುವ ನಿಖಿಲಪೂರ್ಣ ಇತ್ಯಾದಿ ಪದಗಳಿಗೆ, ವಿಶೇಷ್ಯಪ್ರಶಂಸೈವ - ವಿಶೇಷ್ಯನಾದ ನಾರಾಯಣನ ಹೊಗಳುವಿಕೆಯೇ ಆಗಿದೆ. ತತ್ರ - ಆ ವಿಶೇಷಣಗಳ ವಿಷಯದಲ್ಲಿ, ಆರ್ಥಿಕಪುನರುಕ್ತೇಃ - ಒಂದೇ

ಶಬ್ದವನ್ನು ಅನೇಕಬಾರಿ ಉಚ್ಚರಿಸದೇ ಇದ್ದರೂ ಅರ್ಥತಃ ಉಂಟಾಗುವ ಪುನರುಕ್ತಿ ಎಂಬ ದೋಷಕ್ಕೆ, ಸ್ತುತಿತ್ವಮೇವ - ಇದು ಒಂದು ಸ್ತೋತ್ರವೇ ಎಂಬ ರೀತಿಯಾದ, ಸಮಾಧಾನಂ - ಸಮಾಧಾನವು ಎಂದು, ಅವಧಾತವ್ಯಮ್ - ತಿಳಿಯಲ್ಪಡಬೇಕು.

**ಸಾರ** - 'ನಿಖಿಲಪೂರ್ಣಗುಣೈಕದೇಹಂ' ಮುಂತಾದ ಪದಗಳು ಹೇಳಿರುವುದಕ್ಕೆ ಇದು ಪ್ರಯೋಜನ – ವಿಶೇಷ್ಯನಾದ ನಾರಾಯಣನ ಬಗ್ಗೆ ಪ್ರಶಂಸೆ ಮಾಡುವುದೇ ಆಗಿದೆ. ಯದ್ಯಪಿ ಇಲ್ಲಿ ವಿಶೇಷಣಗಳಿಂದ ಆರ್ಥಿಕಪುನರುಕ್ತಿ ಎಂಬ ದೋಷವು ಬರುತ್ತಿದೆ. ಆದರೂ ಸ್ತೋತ್ರದ ವಿಷಯದಲ್ಲಿ ಆರ್ಥಿಕಪುನರುಕ್ತಿಯು ದೋಷವಲ್ಲ ಎಂದು ತಿಳಿಯಬೇಕು.

**कम्बा – ननु 'निखिलपूर्णगुण'-इत्यादिविशेषणानां किं प्रयोजनम्? इत्यत आह –** प्रयोजनं चेति ॥ **स्तवनं च तत्प्रीत्यर्थमिति भावः । ननु 'अस्योद्भवादिदम्' इति नारायणस्य जगज्जन्मादिकारणत्वोक्त्या, अपूर्णस्य पारतन्त्र्यादिदोषयुक्तस्य च जगज्जन्मादिकारणत्वायोगेन पूर्णगुणत्वनिर्दोषत्वादिलाभात्, 'निखिलपूर्णगुणैकदेहं निर्दोषम्' इत्यादिविशेषणपदानामार्थिकी पुनरुक्तिरित्यत आह –** तत्रेति ॥ **तत्र = तेषु स्तुतिपदेषु । 'स्तुतौ आर्थिकपुनरुक्तिर्न दोषः' इति भावः ।**

"ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ" ಮುಂತಾದ ವಿಶೇಷಣಗಳಿಗೆ ಪ್ರಯೋಜನವಾದರೂ ಏನು? ಎಂಬ ಶಂಕೆಗೆ ಉತ್ತರ - ಪ್ರಯೋಜನಂ ಚ - ಎಂದು. ಪ್ರಯೋಜನವಾದರೂ ಸ್ತೋತ್ರಮಾಡುವುದು. ಸ್ತೋತ್ರವು ಭಗವಂತನ ಪ್ರೀತಿಗೋಸ್ಕರ ಎಂದಭಿಪ್ರಾಯ. "ಅಸ್ಯೋದ್ಭವಾದಿದಮ್" ಎಂಬ ವಿಶೇಷಣವು ನಾರಾಯಣನಿಗೆ ಜಗಜ್ಜನ್ಮಾದಿಕಾರಣತ್ವವನ್ನು ಹೇಳಿದ್ದರಿಂದ, ಅಪೂರ್ಣನಾದ ಹಾಗೂ ಪಾರತಂತ್ರ್ಯ ಮೊದಲಾದ ದೋಷಗಳಿಂದ ಕೂಡಿದ ವ್ಯಕ್ತಿಗೆ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲವಾದ್ದರಿಂದ ಪೂರ್ಣಗುಣತ್ವ, ನಿರ್ದೋಷತ್ವ ಮೊದಲಾದವುಗಳ ಲಾಭ ಅರ್ಥಾತ್ ಆಗುವುದರಿಂದ "ನಿಖಿಲಪೂರ್ಣಗುಣೈಕದೇಹಂ ನಿರ್ದೋಷಂ" ಮುಂತಾದ ವಿಶೇಷಣಪದಗಳಿಗೆ ಆರ್ಥಿಕಪುನರುಕ್ತಿ ಎಂಬ ದೋಷವು ಬರುತ್ತದೆ ಎಂಬ ಶಂಕೆಗೆ ಉತ್ತರ "ತತ್ರ" ಎಂದು. ತತ್ರ ಎಂದರೆ ಆ ಸ್ತುತಿಯನ್ನು ಮಾಡುವ ಪದಗಳಲ್ಲಿ ಎಂದರ್ಥ. ಸ್ತುತಿಯಲ್ಲಿ ಆರ್ಥಿಕಪುನರುಕ್ತಿಯು ದೋಷವಲ್ಲ ಎಂದಭಿಪ್ರಾಯ.

### ಸ್ತುತಿಯಲ್ಲಿ ಅರ್ಥವೊಂದೇ ಆದರೂ ಶಬ್ದಭೇದವಿದ್ದಾಗ ಪುನರುಕ್ತಿ ಇಲ್ಲ

(ಗುರ್ವರ್ಥದೀಪಿಕಾ) – ನಿರ್ದೋಷತ್ವಾದಿಶಬ್ದಭೇದೇಽಪಿ ತೇಷಾಂ ಸರ್ವೇಷಾಂ ಗುಣತ್ವೇನ

'ನಿಖಿಲಪೂರ್ಣಗುಣೈಕದೇಹಂ' ಇತ್ಯನೇನೈವ ಗತಾರ್ಥತ್ವಾತ್ 'ಆರ್ಥಿಕಪುನರುಕ್ತೇಃ' ಇತ್ಯುಕ್ತಮ್ । ಸ್ತೋತಾರೋ ಹಿ 'ಮಹಾರಾಜ, ರಾಜಕುಲೋತ್ತಂಸ, ನೃಪಶಿಖಾಮಣೇ' ಇತ್ಯರ್ಥೈಕ್ಯೇಽಪಿ ಶಬ್ದಭೇದಮಾತ್ರಾತ್ ಸ್ತುವಂತಿ ತಥೇಹಾಪಿ ಇತಿ ಭಾವಃ ।

ಆರ್ಥಿಕಪುನರುಕ್ತೇಃ - ಪುನರುಕ್ತಿ ಎಂದರೆ ಹೇಳಿದ ಶಬ್ದವನ್ನೇ ಮತ್ತೆ ಹೇಳುವುದು. ಅಥವಾ ಒಂದು ಪದದಿಂದ ಹೇಳಲ್ಪಟ್ಟ ಅರ್ಥವೇ ಮತ್ತೊಂದು ಪದದಿಂದ ಸಿಗುತ್ತಿರುವುದು. ಹೀಗೆ ಶಬ್ದತಃ ಪುನರುಕ್ತಿ, ಅರ್ಥತಃ ಪುನರುಕ್ತಿ ಎಂದು ಎರಡು ವಿಧವಿದೆ. ಯದ್ಯಪಿ ಇಲ್ಲಿ ಶಬ್ದತಃ ಪುನರುಕ್ತಿಯು ಇಲ್ಲ. ನಿರ್ದೋಷಂ ನಿಖಿಲಪೂರ್ಣಗುಣೈಕದೇಹಂ ಎಂದು ಪ್ರತಿಯೊಂದು ಶಬ್ದಗಳು ಬೇರೆ ಬೇರೆಯೇ ಆಗಿವೆ. ಆದರೂ ಎಲ್ಲವೂ ನಾರಾಯಣನಿಗೆ ಗುಣಗಳೇ ಅಂದರೆ ದೋಷವಿಲ್ಲದಿರುವುದು, ಎಲ್ಲ ಸುವಾಕ್ಯಗಳಿಂದ ಪ್ರತಿ-ಪಾದನೆಗೊಳ್ಳುವಿಕೆ ಇತ್ಯಾದಿಯಾಗಿ ಆರು ವಿಶೇಷಣಗಳಿಂದ ಪ್ರತಿಪಾದ್ಯವಾದದ್ದು ಗುಣಗಳೇ ಆಗಿವೆ. ಈ ಎಲ್ಲ ಗುಣಗಳೂ ನಿಖಿಲಪೂರ್ಣಗುಣೈಕದೇಹಂ ಎಂಬ ಪದದಿಂದಲೇ ಸಿಗುತ್ತವೆ. ಹೀಗೆ ಆರ್ಥಿಕ- ಪುನರುಕ್ತಿಯು.

ಪರಿಹಾರ - ರಾಜನನ್ನು ಸ್ತೋತ್ರಮಾಡುವವರು ಮಹಾರಾಜ। ರಾಜಕುಲೋತ್ತಂಸ। ನೃಪ-ಶಿಖಾಮಣೇ। ಎಂದು ಅರ್ಥದಲ್ಲಿ ಯಾವುದೇ ವ್ಯತ್ಯಾಸವಿಲ್ಲದಿದ್ದರೂ, ಅರ್ಥಾತ್ ರಾಜನನ್ನೇ ಎಲ್ಲ ವಿಶೇಷಣಗಳು ಹೇಳುತ್ತಿದ್ದರೂ ಕೇವಲ ಶಬ್ದಗಳಲ್ಲಿ ಭೇದವನ್ನು ಆಶ್ರಯಿಸಿ ಹೇಗೆ ಸ್ತೋತ್ರ ಮಾಡುವರೋ ಹಾಗೆಯೇ ಇಲ್ಲಿಯೂ ಎಂದು ತಿಳಿಯಬೇಕು. ಹಾಗಾಗಿ ಸ್ತೋತ್ರದಲ್ಲಿ ಆರ್ಥಿಕ-ಪುನರುಕ್ತಿಯು ದೋಷವಲ್ಲ ಎಂದಭಿಪ್ರಾಯ.

## ಪ್ರಕಾರಾಂತರದಿಂದ ವಿಶೇಷಣಗಳ ವೈಯರ್ಥ್ಯಶಂಕಾ ಹಾಗೂ ಪರಿಹಾರ

(ಆನಂದ) — ನನ್ವೇತೈರ್ವಿಶೇಷಣೈಃ ಕೃತಾಯಾಃ ಸ್ತುತೇರ್ವೈಯರ್ಥ್ಯಾತ್ ತದರ್ಥಕಏತದ್ವಿ-ಶೇಷಣಾನಾಮಪಿ ವೈಯರ್ಥ್ಯಮೇವೇತ್ಯತ ಆಹ - ಪ್ರಯೋಜನಂ ಚೇತಿ ॥ ಪ್ರಶಂಸಯಾ ಚ ಪ್ರಶಂಸ್ಯಪ್ರೀತ್ಯಾ ಪರಮಪುರುಷಾರ್ಥೋ ಭವತೀತಿ ಭಾವಃ । ನನು ಮಾಯಿಮತೇ ಸತ್ಯಾದಿಪದೈಃ ಬ್ರಹ್ಮಸ್ವರೂಪಮಾತ್ರಕಥನವದತ್ರಾಪಿ 'ನಿಖಿಲೇ'ತ್ಯಾದಿಪದಾನಾಂ ವಿಶೇಷ್ಯಪ್ರಶಂಸಮಾತ್ರಪರತ್ವೇ ಫಲೈಕ್ಯಾತ್ ಪೌನರುಕ್ತ್ಯಮಿತ್ಯತ ಆಹ - ತತ್ರಾರ್ಥಿಕಪುನರುಕ್ತೇರಿತಿ ॥ ತತ್ರ = ವಿಶೇಷ್ಯಪ್ರಶಂಸಾ-ಪರತ್ವೇ ।

'ಪ್ರಯೋಜನಂ ಚ ಸ್ತುತಿಪದಾನಾಂ ವಿಶೇಷ್ಯಪ್ರಶಂಸ್ಯೈವ' - ನಿಖಿಲಪೂರ್ಣಗುಣೈಕದೇಹಂ ಮುಂತಾದ ವಿಶೇಷಣಗಳಿಂದ ಮಾಡಿದ ಸ್ತುತಿಯು ವ್ಯರ್ಥವಾದ್ದರಿಂದ, ಸ್ತುತಿಗೋಸ್ಕರವೇ ಇರುವ ಈ ವಿಶೇಷಣಗಳೂ ವ್ಯರ್ಥವೇ ಎಂಬಾಕ್ಷೇಪಕ್ಕೆ ಉತ್ತರವಾಗಿ ಈ ವಾಕ್ಯಹೊರಟಿದೆ. ಇದರ

ಅಭಿಪ್ರಾಯ ಹೀಗೆ - ವಿಶೇಷ್ಯನಾದ ನಾರಾಯಣನ ಪ್ರಶಂಸೆ ಮಾಡಿದಾಗ ಅವನು ಪ್ರಸನ್ನನಾಗುವನು. ತನ್ಮೂಲಕ ಪರಮಪುರುಷಾರ್ಥದ ಲಾಭವಾಗುತ್ತದೆ. ಹಾಗಾಗಿ ಈ ಪದಗಳು ವ್ಯರ್ಥವಲ್ಲ.

ತತ್ರ ಆರ್ಥಿಕಮನರುಕ್ತೇಃ ಸ್ತುತಿತ್ವಮೇವ ... - ಮಾಯಾವಾದಿಗಳ ಮತದಲ್ಲಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬಲ್ಲಿ ಸತ್ಯಮೊದಲಾದ ಪದಗಳಿಂದ ಕೇವಲ ಶುದ್ಧಬ್ರಹ್ಮವು ಹೇಗೆ ಹೇಳಲ್ಪಡುತ್ತದೋ ಹಾಗೆಯೇ ಇಲ್ಲಿಯೂ ನಿಖಿಲ ಮುಂತಾದ ಪದಗಳಿಗೆ ಕೇವಲ ವಿಶೇಷ್ಯಪ್ರಶಂಸಾಪರ ಎಂದರೆ ಫಲೈಕ್ಯಾತ್ ಅರ್ಥಾತ್ ಎಲ್ಲ ಪದಗಳ ಪ್ರಯೋಜನವೂ ಒಂದೇ ಎಂದಾಗುವುದರಿಂದ ಪೌನರುಕ್ತ್ಯ ಎಂಬ ದೋಷವು ಬರುತ್ತದೆ ಎನ್ನುವುದಕ್ಕೆ ಈ ವಾಕ್ಯವು ಹೊರಟದೆ. ಸ್ತುತಿಯಲ್ಲಿ ಅರ್ಥಿಕ-ಪುನರುಕ್ತಿಯು ದೋಷವಲ್ಲ ಎಂದು ಪರಿಹಾರ.

## ಅರ್ಥಿಕಪುನರುಕ್ತಿಪದದ ವಿಗ್ರಹ ಹಾಗೂ ಅರ್ಥ

(ಆನಂದ) — ನನು 'ಆರ್ಥಿಕೀ ಪುನರುಕ್ತಿಃ' ಇತ್ಯಸ್ಯ ಕೋಽರ್ಥಃ? ಕಿಮೇಕಾರ್ಥತ್ವಾತ್ ಪುನ-ರುಕ್ತಿರಿತಿ ವಾ, ಅರ್ಥಾದನುಪಪತ್ತ್ಯಾ ಏಕಾರ್ಥತ್ವಾತ್ ಪುನರುಕ್ತಿರಿತಿ ವಾ । ನಾದ್ಯಃ । ಅರ್ಥ-ಭೇದಸ್ಯಾಗ್ರೇ ವಕ್ಷ್ಯಮಾಣತ್ವೇನ ಏಕಾರ್ಥತ್ವಾಭಾವಾತ್ । ನ ದ್ವಿತೀಯಃ । ಅನುಪಪತ್ತ್ಯಾ ಏಕಾರ್ಥತ್ವಸ್ಯ ಸಂಪೂರ್ಣಶಾಸ್ತ್ರೇಽಪಿ ಸತ್ತ್ವೇನ ತಸ್ಯಾಪಿ ಪುನರುಕ್ತತ್ವಾಪತ್ತೇಃ ಇತಿ ಚೇತ್ ಮೈವಮ್ । 'ಅರ್ಥಸಂಬಂಧಿನೀ ಆರ್ಥಿಕೀ ಸಾ ಚಾಸೌ ಪುನರುಕ್ತಿಶ್ಚ' ಇತಿ ವಿಗ್ರಹಃ । ಏವಂ ಚ ಅರ್ಥಶಬ್ದಸ್ಯ ಪ್ರಯೋಜನಪರತ್ವಾತ್ ತತ್ಸಂಬಂಧಿನೀ ಪುನರುಕ್ತಿಃ ಪ್ರಶಂಸಾರೂಪಫಲೈಕ್ಯ-ಸಂಬಂಧಿನೀ ಪುನರುಕ್ತಿರಿತ್ಯರ್ಥಃ । ಏವಂ ಚ ನ ಕಶ್ಚಿದ್ದೋಷಃ । ತಸ್ಯಾಃ ಸಮಾಧಾನಂ ಸ್ತುತಿತ್ವ-ಮೇವ । ಸ್ತುತೌ ಪುನರುಕ್ತಸ್ಯ ದೋಷತ್ವಾಭಾವಾತ್ । ಪ್ರಶಂಸಾಯಾಃ ವಿಚಿತ್ರತ್ವಾದಿತಿ ಭಾವಃ ।

ಇಲ್ಲಿ ಆರ್ಥಿಕೀ ಪುನರುಕ್ತಿಃ ಎಂಬುವುದಕ್ಕೆ ಏನು ಅರ್ಥ? ಎಲ್ಲಾ ಶಬ್ದಗಳಿಗೆ ಒಂದೇ ಅರ್ಥ-ವಿರುವುದರಿಂದ ಪುನರುಕ್ತಿ ಎಂದೋ ಅಥವಾ ಅರ್ಥಾತ್ ಅಂದರೆ ಅನುಪಪತ್ತಿಯಿಂದ ಒಂದೇ ಅರ್ಥವುಳ್ಳ ಅನೇಕ ಪದಗಳಿರುವುದರಿಂದ ಪುನರುಕ್ತಿ ಎಂದೋ. ಉದಾ — ನಿರ್ದೋಷ ಎಂಬ ಪದದಿಂದ ಯಾವುದೇ ರೀತಿಯ ದೋಷಗಳಿಲ್ಲ ಎಂಬ ಅರ್ಥವು ತಿಳಿಯಲ್ಪಡುತ್ತದೆ. ಇದಾದರೋ ನಾರಾಯಣನು ನಿಖಿಲಪೂರ್ಣಗುಣನಾದರೆ ಮಾತ್ರ ಸಿದ್ಧವಾಗುವುದು. ಹಾಗೆಯೇ ನಿಖಿಲಗುಣ-ಪೂರ್ಣನಾದರೆ ಮಾತ್ರ ನಿರ್ದೋಷಿಯಾಗುವನು. ಈ ರೀತಿ ಎರಡೂ ಪದಗಳು ಪುನರುಕ್ತ-ವೆನಿಸುವವು.

ಮೊದಲನೆಯ ಕಲ್ಪವು ಸರಿಯಿಲ್ಲ. ಏಕೆಂದರೆ ಪ್ರತಿಯೊಂದು ವಿಶೇಷಣಗಳಿಗೂ ಬೇರೆ ಬೇರೆ ಅರ್ಥವನ್ನು ಮುಂದೆ ತಿಳಿಸುವವರಾದ್ದರಿಂದ.

ಎರಡನೆಯ ಕಲ್ಪವೂ ಸರಿಯಿಲ್ಲ. ಏಕೆಂದರೆ ಇಡೀ ಶಾಸ್ತ್ರವು ಒಬ್ಬನೇ ನಾರಾಯಣನೆಂಬ ಅರ್ಥವನ್ನು ತಿಳಿಸುವುದರಿಂದ. ಅಲ್ಲಿಯೂ ಪುನರುಕ್ತಿದೋಷಕ್ಕೆ ಅವಕಾಶವಿದೆ. ಉತ್ತರ — ಆರ್ಥಿಕಪುನರುಕ್ತಿ ಎಂಬ ಶಬ್ದಕ್ಕೆ ಹೀಗೆ ವಿಗ್ರಹವಾಕ್ಯ - 'ಅರ್ಥಸಂಬಂಧಿನೀ ಆರ್ಥಿಕೀ, ಸಾ ಚಾಸೌ ಪುನರುಕ್ತಿಶ್ಚ' ಎಂದು. ಇದರ ಅರ್ಥ ಹೀಗೆ ಅರ್ಥಸಂಬಂಧಿಯಾದದ್ದನ್ನು ಆರ್ಥಿಕೀ ಎನ್ನುತ್ತಾರೆ ಅಂದರೆ ಪ್ರಯೋಜನಸಂಬಂಧಿ ಎಂದರ್ಥ. 'ಅರ್ಥೋಭಿಧೇಯರೈವಸ್ತುಪ್ರಯೋಜನನಿವೃತ್ತಿಷು' ಎಂದು ಕೋಶದಲ್ಲಿ ಪ್ರಯೋಜನ ಎಂಬರ್ಥವನ್ನು ಅರ್ಥಶಬ್ದಕ್ಕೆ ತಿಳಿಸಿದ್ದಾರೆ. ಹೀಗೆ ಪ್ರಯೋಜನ-ಪ್ರಯುಕ್ತ ಬರುವ ಪುನರುಕ್ತಿಯನ್ನು ಆರ್ಥಿಕಪುನರುಕ್ತಿ ಎಂಬ ಶಬ್ದದಿಂದ ಇಲ್ಲಿ ಗ್ರಹಿಸಿದ್ದಾರೆ. ಪ್ರಕೃತದಲ್ಲಿ ಪ್ರಶಂಸಾರೂಪವಾದ ಪ್ರಯೋಜನವು ಎಲ್ಲ ಪದಗಳಿಗೂ ಒಂದೇ ಆದ್ದರಿಂದ ಪುನರುಕ್ತಿ ಇದೆ. ಇದನ್ನು ಆರ್ಥಿಕಪುನರುಕ್ತಿ ಎಂದು ತಿಳಿಯಬೇಕು. ಇದರ ಪರಿಹಾರವು ಸುಲಭ. ಸ್ತುತಿಯಲ್ಲಿ ಪುನರುಕ್ತಿಯು ದೋಷವಲ್ಲ. ಏಕೆಂದರೆ ಪ್ರಶಂಸೆಯನ್ನು ಮಾಡುವುದು ಅನೇಕಪ್ರಕಾರ-ವಾಗಿರುತ್ತದೆ. ಹಾಗಾಗಿ ವಿಚಿತ್ರ ಎಂದಿದ್ದಾರೆ.

## ಕೇಚಿನ್ಮತದ ಪ್ರಕಾರ ಆರ್ಥಿಕಪುನರುಕ್ತಿ

(ಆನಂದ) — ಕೇಚಿತ್ತು ವಕ್ಷ್ಯಮಾಣನ್ಯಾಯೇನ ನಾರಾಯಣಶಬ್ದಸ್ಯಾಪಿ ನಿರವದ್ಯಾಖಿಲಪೂರ್ಣ-ಗುಣಾರ್ಥತ್ವಾತ್ ಪುನರುಕ್ತಿಮಾಶಂಕ್ಯಾಹ — 'ತತ್ರ' ಇತ್ಯಾಹುಃ ।

ಇನ್ನು ಕೆಲವರು ಸುಧಾಮೂಲದ ಮಂಗಳಪದ್ಯದ ಆರನೆಯ ವ್ಯಾಖ್ಯಾನದ ಸಂದರ್ಭದಲ್ಲಿ ನಾರಾಯಣ ಎಂಬ ಶಬ್ದದ ಅರ್ಥವು 'ನಿಖಿಲಗುಣಪೂರ್ಣಗುಣೈಕದೇಹ' ಎಂದು ವ್ಯುತ್ಪತ್ತಿ-ವೈಚಿತ್ರ್ಯದಿಂದ ತೋರಿಸಿದ್ದಾರೆ. ಆ ಅರ್ಥವನ್ನೇ 'ನಿಖಿಲಪೂರ್ಣಗುಣೈಕದೇಹಂ' ಎಂಬುದು ಹೇಳುತ್ತಿರುವುದರಿಂದ ಪುನರುಕ್ತಿಯು ಬರುವುದು ಎಂದು ಆಶಂಕೆ ಮಾಡಿ ಅದಕ್ಕೆ ಸಮಾಧಾನವಾಗಿ 'ತತ್ರ ಆರ್ಥಿಕಪುನರುಕ್ತೇಃ' ಎಂಬ ಸುಧಾಪಂಕ್ತಿಯು ಹೊರಟಿದೆ ಎಂದು ಹೇಳಿದ್ದಾರೆ.

ಆರ್ಥಿಕಪುನರುಕ್ತೇಸ್ತು - (ತತ್ರ ಆರ್ಥಿಕಪುನರುಕ್ತೇಃ ಸ್ತುತಿತ್ವಮೇವ ಸಮಾಧಾನಂ ಅವಧಾತವ್ಯಮ್ । ಎಂಬ ಸುಧಾಮೂಲದಲ್ಲಿ ಆರ್ಥಿಕಪುನರುಕ್ತೇಃ ಎಂಬ ಶಬ್ದದ ನಂತರ 'ತು' ಎಂಬ ಶಬ್ದವು ಈ ಟಿಪ್ಪಣಿಯಲ್ಲಿ ಉಲ್ಲಿಖಿತವಾಗಿದೆ. ಹಾಗಾಗಿ ಇದರ ಪ್ರಕಾರ ತತ್ರ ಆರ್ಥಿಕಪುನರುಕ್ತೇಸ್ತು -... ಎಂದು ಸುಧಾಮೂಲ). (ಕುಂಡಲಗಿರಿಯಲ್ಲೂ ಹೀಗೇ ಪಾಠವಿದೆ)

## ಇನ್ನೊಂದು ರೀತಿಯಿಂದ ಆರ್ಥಿಕಪುನರುಕ್ತಿಯ ಶಂಕೆ ಹಾಗೂ ಪರಿಹಾರ

(ಕುಂಡಲ) — ವಿಶೇಷಣಾನಾಂ ಪ್ರಯೋಜನಂ ಬಹುಧಾ ಪ್ರತಿಪಾದಯತಿ — ಪ್ರಶಂಸೈವೇತ್ಯಾ-ದಿನಾ ॥ ಆರ್ಥಿಕಪುನರುಕ್ತೇಸ್ತ್ವಿತಿ ॥ ನಾರಾಯಣಸ್ಯ ಮಹಾಯೋಗವಿದ್ವದ್ರೂಢಿಭ್ಯಾಮ್

**ಅಪರ್ಯಾಯಾನಂತವೈದಿಕಶಬ್ದಪ್ರತಿಪಾದ್ಯತ್ವರೂಪಾಧಿಕೃತತತ್ತ್ವಪ್ರತಿಪಾದನಪರೇಣ "ಆಪ್ಯತಮಮಪ್ಯ-ಖಿಲೈಃ ಸುವಾಕ್ಯೈಃ" ಇತಿ ವಿಶೇಷಣೇನೈವ ತತ್ತಚ್ಛಬ್ದಪ್ರವೃತ್ತಿಲಕ್ಷಣಾನಂತಕಲ್ಯಾಣಗುಣಾನಾಮ್ ಅರ್ಥಾತ್ ಲಾಭಾತ್ 'ನಿಖಿಲಪೂರ್ಣಗುಣ' ಇತ್ಯಸ್ಯ ಆರ್ಥಿಕೀ ಪುನರುಕ್ತಿರಿತ್ಯರ್ಥಃ ।**

**ಯದ್ವಾ – 'ಅಸ್ಯೋದ್ಭವಾದಿದಮ್' ಇತ್ಯನೇನ ನಾರಾಯಣಸ್ಯ ಜಗಜ್ಜನ್ಮಕಾರಣತ್ವೋಕ್ತ್ಯಾ ಪೂರ್ಣಗುಣಸ್ಯ, ಅಜ್ಞಾನಪಾರತಂತ್ರ್ಯಾದಿದೋಷಪ್ರಯುಕ್ತಸ್ಯ ಚ ಜಗಜ್ಜನ್ಮಾದಿಕಾರಣತ್ವಾಯೋಗಾತ್ ಪೂರ್ಣಗುಣತ್ವನಿರ್ದೋಷತ್ವಾದೇರ್ಲಾಭಾತ್ 'ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ' ಇತ್ಯಾದಿ ವಿಶೇಷಣಾನಾಮಾರ್ಥಿಕೀ ಪುನರುಕ್ತಿರಿತ್ಯರ್ಥಃ ।**

ಆರ್ಥಿಕಪುನರುಕ್ತಿಯು ಹೀಗೆ – ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ ಎಂಬ ವಿಶೇಷಣದಿಂದ ನಿಖಿಲಪೂರ್ಣಗುಣೈಕದೇಹಂ ಎಂಬುದಕ್ಕೆ ಆರ್ಥಿಕಪುನರುಕ್ತಿ. 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬ ವಿಶೇಷಣದಿಂದ ನಾರಾಯಣನು ಮಹಾಯೋಗ ಹಾಗೂ ವಿದ್ವದ್ರೂಢಿ ಇವುಗಳಿಂದ ಪರ್ಯಾಯಶಬ್ದಗಳಲ್ಲದೆ ಅನಂತವಾದ ವೇದದಲ್ಲಿ ಬರುವ ಶಬ್ದಗಳಿಂದ ಪ್ರತಿಪಾದನೆಗೊಂಡವನು ಎಂಬ ರೀತಿಯಾದ ಅಧಿಕೃತತತ್ತ್ವ ತಿಳಿಯುವುದು.

ಈ ರೀತಿ ಹೇಳಿದ್ದರಿಂದ ಅರ್ಥಾತ್ ಎಲ್ಲ ಶಬ್ದಗಳ ಪ್ರವೃತ್ತಿನಿಮಿತ್ತವಾದ ಅನಂತಕಲ್ಯಾಣಗುಣಗಳು ಅವನಲ್ಲಿವೆ ಎಂದು ಸಿದ್ಧವಾಗಿದೆ. ಇದನ್ನೇ ನಿಖಿಲಪೂರ್ಣಗುಣ ಎಂಬ ವಿಶೇಷಣವು ಹೇಳುತ್ತದೆ. ಹೀಗೆ ಆರ್ಥಿಕಪುನರುಕ್ತಿ.

ಅಥವಾ 'ಅಸ್ಯೋದ್ಭವಾದಿದಂ' ಎಂಬ ವಿಶೇಷಣವು ನಾರಾಯಣನಿಗೆ ಸಕಲಜಗಜ್ಜನ್ಮಕಾರಣತ್ವ ಹೇಳಿದ್ದರಿಂದ ಇದಾದರೋ ನಿಖಿಲಪೂರ್ಣಗುಣೈಕದೇಹವುಳ್ಳವನು ಹಾಗೂ ನಿರ್ದೋಷನು ಆಗದಿದ್ದರೆ ಅಸಂಭವ. ಏಕೆಂದರೆ, ನಾರಾಯಣನಲ್ಲಿ ಪೂರ್ಣಗುಣಗಳಿಲ್ಲದಿದ್ದರೆ ಆಗ ಅವನಲ್ಲಿ ಅಜ್ಞಾನದ ಪ್ರಸಕ್ತಿ. ಪಾರತಂತ್ರ್ಯದ ಪ್ರಸಕ್ತಿ. ಇವೆಲ್ಲ ಇದ್ದಾಗ ತತ್ಪ್ರಯುಕ್ತವಾದ ದೋಷಗಳು ನಾರಾಯಣನಲ್ಲಿ ಬಂದು ಇಡೀ ಜಗತ್ತಿನ ಉತ್ಪತ್ತಿ ಸ್ಥಿತಿ ಮುಂತಾದವುಗಳಿಗೆ ಕಾರಣನಾಗುತ್ತಾನೆ ಎಂದು ಹೇಳುವುದು ಅಸಾಧ್ಯ. ಹಾಗಾಗಿ ಅಸ್ಯೋದ್ಭವಾದಿದಂ ಎಂದು ನಾರಾಯಣನು ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾಗಬೇಕಾದರೆ ಪೂರ್ಣಗುಣವಂತನಾಗಿರಬೇಕು ಹಾಗೂ ದೋಷ-ವಿಲ್ಲದವನಾಗಬೇಕು ಎಂಬುದು ಸಿದ್ಧವೇ.

ಇಂತಹ ಸಿದ್ಧವಾದದ್ದನ್ನೇ ಹೇಳುವ ನಿಖಿಲಪೂರ್ಣಗುಣೈಕದೇಹಂ ಹಾಗೂ ನಿರ್ದೋಷಂ ಎಂಬ ವಿಶೇಷಣಗಳ ವಿಷಯದಲ್ಲಿ ಆರ್ಥಿಕಪುನರುಕ್ತಿಯು ಇದೆ.

## ಸಕಲಗುಣಗಳು ಗುಣೈಕದೇಹಂ ಎಂಬ ವಿಶೇಷಣಬಲದಿಂದ ಲಭ್ಯವಾದ್ದರಿಂದ ಆರ್ಥಿಕಪುನರುಕ್ತಿಯಿದೆಯಲ್ಲವೇ?

(ವಿಟ್ಠಲಭಟ್ಟೀಯ) — 'ದೋಷಾಭಾವೋ ಗುಣ ಇತಿ ಪ್ರಸಿದ್ಧೋ ಲೌಕಿಕೇಷ್ವಪಿ' ಇತಿ ದೋಷಾಭಾವಸ್ಯ ಗುಣತ್ವೋಕ್ತೇಃ ವೇದಪ್ರತಿಪಾದ್ಯತ್ವಜಗಜ್ಜನ್ಮಾದಿಕರ್ತೃತ್ವಾದೇಶ್ಚ ಶುಭಧರ್ಮತ್ವೇನ ಗುಣತ್ವಾತ್ **'ಗುಣೈಕದೇಹಮ್'** ಇತಿ ಗುಣಾತ್ಮದೇಹೋಕ್ತ್ಯಾ ವಿಶೇಷಬಲೇನಾರ್ಥತೋ ನಿರ್ದೋಷತ್ವಾದಿಗುಣವತ್ತ್ವಲಾಭಾತ್ ಪುನರುಕ್ತಿರಿತ್ಯತ ಆಹ — **ಆರ್ಥಿಕಪುನರುಕ್ತೇರಿತಿ** ॥ ಸ್ತುತೌ ಉಕ್ತವಿವರಣಸ್ಯಾದೋಷತ್ವಾದಿತಿ ಭಾವಃ ।

ಆರ್ಥಿಕಪುನರುಕ್ತೇಃ - "ದೋಷಾಭಾವೋ ಗುಣ ಇತಿ ಪ್ರಸಿದ್ಧೋ ಲೌಕಿಕೇಷ್ವಪಿ" (ಅನು. 1-2-ಶ್ಲೋ.19) ಎಂಬ ವಚನದ ಪ್ರಕಾರ ದೋಷಾಭಾವವನ್ನು ಗುಣ ಎಂದು ಸ್ವೀಕರಿಸಬೇಕು. ಇನ್ನು ವೇದಪ್ರತಿಪಾದ್ಯತ್ವ, ಜಗಜ್ಜನ್ಮಾದಿಕರ್ತೃತ್ವ ಮೊದಲಾದವುಗಳು ಒಳ್ಳೆಯ ಧರ್ಮವಾದ್ದರಿಂದ ಗುಣಗಳಾಗಿವೆ. ಈ ಗುಣಗಳು ಗುಣೈಕದೇಹಂ ಎಂಬುದರಿಂದ ಭಗವಂತನ ದೇಹಸ್ವರೂಪ ಎಂದು ಸಿದ್ಧವಾಗುವುದು. ಅಲ್ಲಿಯೂ ವಿಶೇಷ ಎಂಬ ಪದಾರ್ಥದ ಸಾಮರ್ಥ್ಯದಿಂದ ಅರ್ಥಾತ್ ದೋಷಗಳಿಲ್ಲದಿರುವಿಕೆ ಗುಣವಿರುವಿಕೆ ಎಂಬ ಧರ್ಮದ ಲಾಭವಾಗುವುದರಿಂದ ಪುನರುಕ್ತಿಯು ಇದೆ. ಇದರ ಪರಿಹಾರಕ್ಕಾಗಿ 'ಸ್ತುತಿತ್ವಮೇವ ಸಮಾಧಾನಮ್' ಎಂದಿದ್ದಾರೆ.

## ಅರ್ಥಾದರ್ಥವು ಚೋದನಾರ್ಥವಲ್ಲ; ಹಾಗಾಗಿ ಆರ್ಥಿಕಪುನರುಕ್ತಿ ದೋಷವಲ್ಲ

(ವಾಕ್ಯಾರ್ಥಚಂದ್ರಿಕಾ) - ಯಶ್ಚ 'ಅರ್ಥಾದರ್ಥೋ ನ ಸ ಚೋದನಾರ್ಥಃ' ಇತಿ ನ್ಯಾಯೇನಾ-ರ್ಥಾತ್ ತಲ್ಲಾಭೇಽಪಿ ಶಬ್ದಾತ್ ತದಲಾಭಾದಾರ್ಥಿಕಪೌನರುಕ್ತ್ಯಸ್ಯ ನ ದೂಷಣತ್ವಮ್ । ದೂಷಣತ್ವೇ ವಾ ಪ್ರಕೃತೇ ಸಪ್ರಯೋಜನತ್ವಾನ್ನ ತಸ್ಯ ದೂಷಣತ್ವಮ್ ಇತ್ಯಭಿಪ್ರಾಯೇಣ ಏತತ್ಸಮಾಧಾನಮ್; ಅತೋ ನ ವಕ್ಷ್ಯಮಾಣವಿರೋಧ ಇತಿ ಹೃದಯಮ್ ॥

ಆರ್ಥಿಕಪುನರುಕ್ತಿಯು ದೋಷವಲ್ಲ ಎಂದು ಇನ್ನೊಂದು ಕ್ರಮದಿಂದ ನಿರೂಪಣೆ ಮಾಡಬಹುದು. 'ಯಾವ ಅರ್ಥವು ಅನುಪಪತ್ತಿ ಬಲದಿಂದಾಗಿ ಸಿಗುವುದೋ ಅದು ಶಬ್ದಾರ್ಥವಾಗುವುದಿಲ್ಲ' ಎಂಬ ನಿಯಮದ ಪ್ರಕಾರ ನಿಖಿಲಪೂರ್ಣಗುಣೈಕದೇಹಂ ನಿರ್ದೋಷಂ ಮುಂತಾದ ಕಡೆಗಳಲ್ಲಿ ಅರ್ಥಾತ್ ಪರಸ್ಪರ-ಅರ್ಥಲಾಭವಾದರೋ ಅದು ಪರಸ್ಪರಶಬ್ದಾರ್ಥವಾಗಿಲ್ಲ ಆದ್ದರಿಂದ ಆರ್ಥಿಕಪುನರುಕ್ತಿಯು ದೋಷವೇ ಅಲ್ಲ. ಒಂದು ವೇಳೆ ದೋಷವೆಂದಿಟ್ಟುಕೊಂಡರೂ ಪ್ರಕೃತದಲ್ಲಿ ಪ್ರಯೋಜನವು ಇದೆಯಾದ್ದರಿಂದ ಅದು ದೋಷವಲ್ಲ ಎಂದು ಸಮಾಧಾನಮಾಡಿಕೊಳ್ಳಬೇಕು. ಆದ್ದರಿಂದ ವಕ್ಷ್ಯಮಾಣವಿರೋಧವಿಲ್ಲ.

"ಅಥವಾ ಕುತೋ ನಾರಾಯಣಸ್ಯ ನಮ್ಯತ್ವಂ ...." ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – **अथवा** कुतो नारायणस्य नम्यत्वम्? तथात्वेऽपि कुतोऽन्यासु देवतासु सतीषु **तस्यैव नमनमित्यत्रोक्तम्** – **अशेषविशेषतोऽपि वन्द्यम्** इति। विशिष्यते वस्तु एभिरिति **विशेषाः**= असाधारणधर्माः, अशेषाश्च ते विशेषाश्च। **अपिः**=अभिव्याप्तौ। **यावन्तो** वन्द्यत्वनिमित्तभूता धर्माः, तेभ्यो विशेषेभ्योऽपि हेतुभ्यो वन्द्यम्। **तथाऽशेषाद्**= वन्द्यत्वेन समाशङ्कितात् पद्मापद्मभवादेर्जगतो **विशेषः**= अतिशयोऽशेषविशेषः= सर्वोत्तमत्वम्, ततो हेतोः सतीष्वन्यासु देवतासु वन्द्यमिति।

एतदुभयं कथं नारायण**स्येत्यतोऽ**भिहितम् – **निखिलेत्यादि**॥

त्रिविधा हि देवता **वन्द्या** भवति विशिष्टा, अधिकृता, इष्टा चेति। नहि देवतावन्दनं व्यसनितया क्रियते, **किन्तु** विघ्नविघातादिप्रयोजनापेक्षिततया। विशिष्टैव देवता तस्येष्टे। अधिकृता च स्वविषयग्रन्थप्रबोधादिकं सम्पादयति। वन्दनं खलु भक्त्याद्युपेतमेव सफलम्। तच्च इष्टायामेव देवतायामुपपद्यत इति।

ಅಥವಾ - ಮತ್ತೊಂದು ರೀತಿಯಾಗಿ, ಕುತಃ - ಯಾವ ಕಾರಣದಿಂದ, ನಾರಾಯಣಸ್ಯ - ನಾರಾಯಣನಿಗೆ, ನಮ್ಯತ್ವಂ - ನಮಸ್ಕಾರಮಾಡಿಸಿಕೊಳ್ಳುವ ಯೋಗ್ಯತೆಯು ಇದೆ, ತಥಾತ್ವೇಪಿ - ನಮಸ್ಕಾರಮಾಡಿಸಿಕೊಳ್ಳುವ ಯೋಗ್ಯತೆಯು ಇದ್ದರೂ ಕೂಡ, ಕುತಃ - ಯಾವ ಕಾರಣದಿಂದ, ಅನ್ಯಾಸು ದೇವತಾಸು ಸತೀಷು - ಬೇರೆ ದೇವತೆಗಳಿದ್ದರೂ, ತಸ್ಯೈವ - ಆ ನಾರಾಯಣನಿಗೇ, ನಮನಂ - ನಮಸ್ಕಾರವು, ಇತಿ - ಎಂಬ, ಅತ್ರ - ಈ ವಿಷಯದಲ್ಲಿ, ಉಕ್ತಂ - ಉತ್ತರವು ಹೇಳಲ್ಪಟ್ಟಿದೆ. "ಅಶೇಷವಿಶೇಷತೋಽಪಿ ವಂದ್ಯಂ" ಇತಿ - ಅಶೇಷವಿಶೇಷತೋಪಿ ವಂದ್ಯಂ ಎಂಬುದಾಗಿ.

ವಿಶಿಷ್ಯತೇ - ಬೇರೆ ವಸ್ತುಗಳಿಗಿಂತ ಭಿನ್ನವಾಗಿ ತಿಳಿಯಲ್ಪಡುತ್ತದೆ, ವಸ್ತು - ವಸ್ತುವು, ಏಭಿಃ - ಇವುಗಳಿಂದ, ಇತಿ - ಎಂಬ ರೀತಿಯಾದ ವ್ಯುತ್ಪತ್ತಿಯಿಂದ, ವಿಶೇಷಾಃ - ವಿಶೇಷ ಎಂದರೆ, ಅಸಾಧಾರಣಧರ್ಮಾಃ - ಅಸಾಧಾರಣಧರ್ಮಗಳು ಎಂದರ್ಥ. ಅಶೇಷಾಶ್ಚ ತೇ ವಿಶೇಷಾಶ್ಚ - ಸಕಲವಿಧವಾದ ಆ ಅಸಾಧಾರಣಧರ್ಮಗಳು ಎಂದರ್ಥ. ಅಪಿಃ - ಅಶೇಷವಿಶೇಷತೋಽಪಿ ಎಂಬಲ್ಲಿರುವ ಅಪಿಶಬ್ದವು 'ಅಭಿವ್ಯಾಪ್ತೌ' - ಅಸಂಕೋಚ ಎಂಬ ಅರ್ಥದಲ್ಲಿದೆ. ಯಾವಂತಃ -

ಎಷ್ಟು, ವಂದ್ಯತ್ವ- ನಿಮಿತ್ತಭೂತಾಃ ಧರ್ಮಾಃ - ನಮಸ್ಕಾರಮಾಡುವುದಕ್ಕೆ ಕಾರಣವಾದ ಧರ್ಮಗಳಿವೆಯೋ, ತೇಭ್ಯಃ - ಆ, ವಿಶೇಷೇಭ್ಯೋऽಪಿ ಹೇತುಭ್ಯಃ - ಎಲ್ಲ ಅಸಾಧಾರಣಧರ್ಮಗಳೆಂಬ ಕಾರಣದಿಂದ, ವಂದ್ಯಂ - ನಮಸ್ಕರಿಸಲು ಯೋಗ್ಯನು. ತಥಾ - ಹಾಗೆಯೇ, ಅಶೇಷಾತ್ - ಅಶೇಷ ಎಂದರೆ, ವಂದ್ಯತ್ವೇನ ಸಮಾಶಂಕಿತಾತ್ - ವಂದನೆಗೆ ಅರ್ಹರು ಎಂದು ಸಮ್ಮತವಿರುವ, ಪದ್ಮಾಪದ್ಮಭವಾದೇಃ - ಲಕ್ಷ್ಮೀ ಬ್ರಹ್ಮದೇವರು ಮೊದಲಾದ, ಜಗತಃ - ಪ್ರಪಂಚಕ್ಕಿಂತ, ವಿಶೇಷಃ - ವಿಶೇಷ ಎಂದರೆ, ಅತಿಶಯಃ - ಉತ್ತಮತ್ವವು, ಅಶೇಷವಿಶೇಷಃ - ಅಶೇಷವಿಶೇಷ ಎನ್ನಿಸಿಕೊಳ್ಳುತ್ತದೆ. ಅರ್ಥಾತ್ ಸರ್ವೋತ್ತಮತ್ವ ಎಂದು. ತತಃ ಹೇತೋಃ - ಈ ಕಾರಣದಿಂದ, ಅನ್ಯಾಸು ಸತೀಷು ದೇವತಾಸು - ಬೇರೆ ದೇವತೆಗಳಿ- ದ್ದರೂ, ವಂದ್ಯಂ ಇತಿ - ಇವನು ನಮಸ್ಕರಿಸಲು ಯೋಗ್ಯನೆಂದು.

ಏತದುಭಯಂ - ಈ ಎರಡು ಅಂದರೆ ಅಸಾಧಾರಣಧರ್ಮಗಳೊಂದಿಗೆ ಹಾಗೂ ಸರ್ವೋತ್ತಮತ್ವವೆಂಬ ಧರ್ಮದೊಂದಿಗೆ ಕೂಡಿರುವಿಕೆಯು, ಕಥಂ - ಹೇಗೆ, ನಾರಾಯಣಸ್ಯ - ನಾರಾಯಣನಿಗೆ ಇದೆ, ಇತ್ಯತಃ - ಎಂಬುವುದಕ್ಕೆ, ಅಭಿಹಿತಮ್ - ಹೇಳಲ್ಪಟ್ಟಿದೆ, ನಿಖಿಲ ಇತ್ಯಾದಿ - ನಿಖಿಲ ಮುಂತಾದ ರೀತಿಯಾಗಿ. ತ್ರಿವಿಧಾ - ಮೂರುರೀತಿಯಾದ, ದೇವತಾ - ದೇವತೆಯು, ವಂದ್ಯಾ - ನಮಸ್ಕರಿಸಲು ಯೋಗ್ಯವಾದದ್ದು, ಭವತಿ ಹಿ - ಆಗುವುದು ಪ್ರಸಿದ್ಧವಷ್ಟೆ. ವಿಶಿಷ್ಟಾ - ವಿಶಿಷ್ಟದೇವತೆಯು, ಅಧಿಕೃತಾ - ಅಧಿಕೃತದೇವತೆಯು, ಚ - ಮತ್ತು, ಇಷ್ಟಾ - ಇಷ್ಟದೇವತೆಯು ಎಂಬುದಾಗಿ. ದೇವತಾವಂದನಂ - ದೇವತೆಯ ನಮಸ್ಕಾರವು, ವ್ಯಸನಿತಯಾ - ವ್ಯಸನದಿಂದ (ಚಟದಿಂದ), ನ ಹಿ ಕ್ರಿಯತೇ - ಮಾಡಲ್ಪಡುವುದಿಲ್ಲವಷ್ಟೆ. ಕಿಂತು - ಹೊರತಾಗಿ, ವಿಘ್ನವಿಘಾತಾದಿಪ್ರಯೋಜನಾಪೇಕ್ಷಯಾ - ಪ್ರಾರಂಭಿಸಿದ ಗ್ರಂಥಕ್ಕೆ ಬರಬಹುದಾದ ವಿಘ್ನಗಳ ನಾಶ ಮುಂತಾದ ಪ್ರಯೋಜನಗಳ ಅಪೇಕ್ಷೆಯಿಂದ (ಕ್ರಿಯತೇ - ಮಾಡಲ್ಪಡುತ್ತದೆ), ವಿಶಿಷ್ಟೈವ ದೇವತಾ - ಉತ್ತಮವಾದ ದೇವತೆಯೇ, ತಸ್ಯ - ಹಿಂದೆ ಹೇಳಿದ ಪ್ರಯೋಜನವನ್ನು ಉಂಟು- ಮಾಡುವುದಕ್ಕೆ, ಈಷ್ಟೇ - ಸಮರ್ಥವಾಗುವುದು. ಅಧಿಕೃತಾ ಚ - ಗ್ರಂಥದಿಂದ ಹೇಳಲ್ಪಡುವ ದೇವತೆಯಾದರೋ, ಸ್ವವಿಷಯಗ್ರಂಥಪ್ರಬೋಧಾದಿಕಂ - ತನ್ನನ್ನು ವಿಷಯೀಕರಿಸುವ ಗ್ರಂಥದ ಸರಿಯಾದ ಜ್ಞಾನಮೊದಲಾದವುಗಳನ್ನು, ಸಂಪಾದಯತಿ - ಸಂಪಾದಿಸಿ ಕೊಡುತ್ತದೆ.

ವಂದನಂ - ನಮಸ್ಕಾರವು, ಭಕ್ತ್ಯಾದ್ಯುಪೇತಮೇವ - ಭಕ್ತಿ ಮುಂತಾದವುಗಳಿಂದ ಕೂಡಿದ್ದಾಗಲೇ, ಸಫಲಂ ಖಲು - ಫಲಕ್ಕೆ ಕಾರಣವಾಗುವುದಷ್ಟೆ. ತಚ್ಚ - ಆ ಭಕ್ತ್ಯಾದಿಗಳಿಂದ

ಕೂಡಿದ ನಮಸ್ಕಾರವಾದರೋ, ಇಷ್ಟಾಯಾಮೇವ ದೇವತಾಯಾಂ - ನಮಗೆ ಇಷ್ಟವಾದ ದೇವತೆಯಲ್ಲಿಯೇ, ಉಪಪದ್ಯತೇ - ಕೂಡುತ್ತದೆ. ಇತಿ - ಎಂಬುದಾಗಿ ತಿಳಿಯಬೇಕು.

ಸಾರ - ಮಂಗಳಪದ್ಯಕ್ಕೆ ಎರಡನೆಯ ವ್ಯಾಖ್ಯಾನ - 'ಅಶೇಷವಿಶೇಷತೋಽಪಿ ವಂದ್ಯಂ' ಎಂಬ ವಿಶೇಷಣವು ನಾರಾಯಣನಿಗೆ ನಮ್ಯತ್ವವನ್ನು ಹಾಗೂ ಇತರದೇವತೆಗಳಿಗಿಂತ ಉತ್ತಮತ್ವವನ್ನು ತಿಳಿಸುತ್ತಿದೆ. ಅಶೇಷವಿಶೇಷ ಎಂಬ ಪದಕ್ಕೆ ವಂದ್ಯತ್ವಕ್ಕೆ ಬೇಕಾದ ಎಲ್ಲ ಅಸಾಧಾರಣ ಧರ್ಮಗಳು ಇವೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಅರ್ಥಾತ್ ಆ ದೇವತೆಯಲ್ಲಿರಬೇಕಾದ ಸಾಮರ್ಥ್ಯ ಅಂದರೆ ವಿಶಿಷ್ಟತ್ವ ಹಾಗೇ ಅಧಿಕೃತತ್ವ ಅಂದರೆ ಗ್ರಂಥಪ್ರತಿಪಾದ್ಯತ್ವ ಹಾಗೂ ಇಷ್ಟತ್ವ ಇವೆಲ್ಲವೂ ಇದೆ ಎಂದು. ಹಾಗೆಯೇ ಅಶೇಷವಿಶೇಷತೋಽಪಿ ವಂದ್ಯಂ ಎಂಬುದಕ್ಕೆ ಎಲ್ಲರಿಂದಲೂ ನಮಸ್ಕರಿಸಲ್ಪ-ಡುತ್ತಿರುವ ಲಕ್ಷ್ಮ್ಯಾದಿಗಳಿಂದ ವಿಶೇಷ ಅಂದರೆ ಅತಿಶಯವಿದೆ ಎಂದು ಹೇಳಿದ್ದಾರೆ.

### ವಿಶಿಷ್ಟತ್ವ, ಅಧಿಕೃತತ್ವ, "ತಸ್ಯೇಷ್ಟೇ" ಎಂಬಲ್ಲಿನ ಷಷ್ಠೀ

**ಕಂಬಾ —** विशिष्टेति ॥ **विशिष्टत्वम् = उत्तमत्वम् । अधिकृतत्वं = प्रकृतग्रन्थप्रति-पाद्यत्वम्** । तस्येष्ट इति ॥ **'अधीगर्थदयेषां कर्मणि' इति षष्ठी ।**

**ವಿಶಿಷ್ಟೇತಿ** ॥ ವಿಶಿಷ್ಟದೇವತೆಯಲ್ಲಿ ಇರುವ ವಿಶಿಷ್ಟತ್ವ ಎಂದರೆ ಉತ್ತಮತ್ವ ಎಂದರ್ಥ. ಅಧಿಕೃತ ದೇವತೆಯಲ್ಲಿರುವ ಅಧಿಕೃತತ್ವ ಎಂದರೆ ಬುದ್ಧಿಯಲ್ಲಿ ಪ್ರಕೃತವಾದ ಯಾವ ಗ್ರಂಥವಿದೆಯೋ ಅದರಿಂದ ಪ್ರತಿಪಾದ್ಯತ್ವ ಎಂದು ಅರ್ಥ. "ತಸ್ಯ ಈಷ್ಟೇ" ಎಂಬಲ್ಲಿ ಷಷ್ಠೀವಿಭಕ್ತಿಯು "ಅಧೀಗರ್ಥದಯೇಷಾಂ ಕರ್ಮಣಿ" (ಪಾ.ಸೂ.2-3-52) ಎಂಬ ಸೂತ್ರದಿಂದ ಬಂದಿದೆ.

ವ್ಯಾ.ವಿ. - "ಅಧೀಗರ್ಥದಯೇಷಾಂ ಕರ್ಮಣಿ" - ಅಧಿ ಉಪಸರ್ಗವಿರುವ ಇಕ್ ಧಾತುವಿನ ಅರ್ಥವಿರುವ ಧಾತುಗಳ ಅರ್ಥಾತ್ ಸ್ಮರಣಾರ್ಥಕಧಾತುಗಳ, ದಾನಗತಿರಕ್ಷಣಾರ್ಥಕವಾದ ದಯಧಾತುವಿನ, ಐಶ್ವರ್ಯಾರ್ಥಕವಾದ ಈಶಧಾತುವಿನ ಪ್ರಯೋಗ ಮಾಡಿದಾಗ ಕರ್ಮ-ಕಾರಕವಾದದ್ದನ್ನು ಸಾಮಾನ್ಯವಾಗಿ ಅಂದರೆ ಕರ್ಮತ್ವವನ್ನು ವಿವಕ್ಷೆಮಾಡದೆ ಕೇವಲ ಸಂಬಂಧಿ-ಯನ್ನಾಗಿ ವಿವಕ್ಷೆಮಾಡಿದಾಗ ಷಷ್ಠೀವಿಭಕ್ತಿಯು ಬರುವುದು.

### ಅಪಿಶಬ್ದವು ಅಭಿವ್ಯಾಪ್ತ್ಯರ್ಥಕ ಹಾಗಾಗಿ ಅಶೇಷಶಬ್ದದಿಂದ ಗತಾರ್ಥತ್ವವಿಲ್ಲ

(ವಿಟ್ಠಲಭಟ್ಟೀಯ) — **ಅಪಿರಭಿವ್ಯಾಪ್ತಾವಿತಿ** ॥ 'ಯಾವಂತೋ ಬ್ರಾಹ್ಮಣಾಃ ತೇ ಸರ್ವೇ ವ್ಯಾಕರಣೀಯಾಃ' ಇತ್ಯಾದಾವಿವ ಸರ್ವಶಬ್ದಸ್ಯಾಸಂಕುಚಿತಾರ್ಥತ್ವವ್ಯಂಜಕತ್ವರೂಪಾಭಿವ್ಯಾಪ್ತೌ ವರ್ತತ ಇತ್ಯರ್ಥಃ । ಅತೋ ನಾಶೇಷಶಬ್ದೇನ ಗತಾರ್ಥತಾ ।

ಅಪಿಃ ಅಭಿವ್ಯಾಪ್ತೌ - 'ಯಾವಂತೋ ಬ್ರಾಹ್ಮಣಾಃ ತೇ ಸರ್ವೇ ವ್ಯಾಕರಣೀಯಾಃ' - ಹೀಗೊಂದು ವಾಕ್ಯವಿದೆ. ಇದರ ಅರ್ಥ 'ಎಷ್ಟೆಷ್ಟು ಬ್ರಾಹ್ಮಣರಿದ್ದಾರೋ ಅವರೆಲ್ಲರನ್ನೂ ಅರ್ಥಾತ್ ಒಬ್ಬರನ್ನೂ ಬಿಡದೆ ಕರೆದುಕೊಂಡು ಬನ್ನಿ' ಎಂದು. ಈ ವಾಕ್ಯದಲ್ಲಿರುವ ಸರ್ವ ಎಂಬ ಶಬ್ದವು ಅಸಂಕುಚಿತಾರ್ಥ. ಅರ್ಥಾತ್ ಒಬ್ಬರನ್ನೂ ಬಿಡದೇ ಎಲ್ಲರನ್ನೂ ಎಂಬ ಅರ್ಥವನ್ನು ಸರ್ವಶಬ್ದವು ತಿಳಿಸುತ್ತಿದೆ. ಇದರಂತೆ ಇಲ್ಲಿ ಅಶೇಷ ಎಂಬ ಶಬ್ದವು ಎಲ್ಲ ಎಂಬ ಅರ್ಥವನ್ನು ಕೊಡುತ್ತಿದ್ದರೂ ಅದು ಅಸಂಕುಚಿತವಾದದ್ದು ಎಂದು ತಿಳಿಸಲು ಅಪಿ ಎಂಬ ಶಬ್ದವನ್ನು ಬಳಸಿದ್ದಾರೆ. ಹಾಗಾಗಿ ಅಶೇಷ ಎಂಬ ಶಬ್ದದಿಂದಲೇ ಅಪಿಶಬ್ದದ ಅರ್ಥವು ದೊರಕಿತು ಎಂದು ಅದರ ವೈಯರ್ಥ್ಯವನ್ನು ಶಂಕೆ ಮಾಡಬಾರದು.

### ಎಲ್ಲ ಪದಗಳೂ ಸಾಕ್ಷಾತ್ ಅಥವಾ ಪರಂಪರಯಾ ನಮ್ಯತ್ವಪ್ರತಿಪಾದನಪರವಾಗಿದ್ದು ಸ್ತುತಿಪರವೂ ಆಗಿವೆ.

(ಲಘುರಸರಂಜನೀ) — ಏವಂ ಪದ್ಯಪದಾನಿ ಅತ್ರ 'ನಾರಾಯಣಂ ಸನ್ನಮಾಮಿ' ಇತ್ಯನ್ವಯಃ, ಇತ್ಯನ್ವಯಪ್ರದರ್ಶನವ್ಯಾಜೇನ ಕಾನಿಚಿನ್ನಮ್ಯತ್ವಪ್ರತಿಪಾದನಪರಾಣಿ । 'ನಿಖಿಲ' ಇತ್ಯಾದೀನಾಂ ತು ಪ್ರಣಾಮಕರ್ಮಣಾ ನಾರಾಯಣೇನ ವಿಶೇಷಣತಯಾ ಸಂಬಂಧ ಇತಿ ಸಂಬಂಧಪ್ರದರ್ಶನವ್ಯಾಜೇನ ಕಾನಿಚಿತ್ ನಮ್ಯೇ ನಾರಾಯಣೇ ನಿಖಿಲಗುಣತ್ವಾದಿವಿಶೇಷಣಸಮರ್ಪಣೇನ ಸ್ತುತಿಪರಾಣೀತಿ ವಿಭಾಗೇನ ವ್ಯಾಖ್ಯಾಯಾಧುನಾ 'ಗ್ರಂಥೋಽಯಮಪಿ ಬಹ್ವರ್ಥಃ' ಇತ್ಯಾಚಾರ್ಯೋಕ್ತಂ ಯೋಗ್ಯಾನುಭವಮಾಪಯನ್ ಸರ್ವಾಣ್ಯಪಿ ಪದಾನಿ ಸಾಕ್ಷಾತ್ ಪರಂಪರಯಾ ವಾ ನಮ್ಯತ್ವಪ್ರತಿಪಾದನಪರಾಣಿ ಸಂತಿ, ಪ್ರಕಾರಾಂತರೇಣ ಸ್ತುತಿಪರಾಣ್ಯಪಿ ಭವಂತೀತ್ಯಾಶಯೇನ ತಾನಿ ಪ್ರಕಾರಾಂತರೇಣ ವ್ಯಾಖ್ಯಾತುಮವತಾರಯತಿ — ಅಥವೇತಿ ॥

ಅಥವಾ ಕುತೋ ನಾರಾಯಣಸ್ಯ - ಈ ಹಿಂದೆ ನಾರಾಯಣಂ ನಿಖಿಲಪೂರ್ಣ ... ಎಂಬ ಮಂಗಳಪದ್ಯಕ್ಕೆ ಅತ್ರ ನಾರಾಯಣಂ ಸನ್ನಮಾಮಿ - ಎಂದು ಅನ್ವಯವನ್ನು ತೋರಿಸುವ ಮೂಲಕ ಅಲ್ಲಿರುವ ಕೆಲವು ಪದಗಳು ನಾರಾಯಣನು ನಮಿಸಲು ಯೋಗ್ಯ ಎಂಬುದನ್ನು ತಿಳಿಸುತ್ತವೆ ಎಂದು ತೋರಿಸಿದ್ದಾರೆ. ಇನ್ನು 'ನಿಖಿಲ ಇತ್ಯಾದೀನಾಂ ತು ಪ್ರಣಾಮಕರ್ಮಣಾ ನಾರಾಯಣೇನ ವಿಶೇಷಣತಯಾ ಸಂಬಂಧಃ' ಎಂದು ನಿಖಿಲ ಮೊದಲಾದ ಪದಗಳಿಗೆ ನಾರಾಯಣನೊಂದಿಗೆ ವಿಶೇಷಣವಿಶೇಷ್ಯಭಾವಸಂಬಂಧವನ್ನು ತೋರಿಸುವ ನೆಪದಿಂದ ಕೆಲವು ಪದಗಳು ನಮ್ಯನಾದ ಅರ್ಥಾತ್ ನಮಿಸಲು ಯೋಗ್ಯನಾದ ನಾರಾಯಣನಲ್ಲಿ ನಿಖಿಲಗುಣತ್ವ ಮೊದಲಾದ ಅಂಶಗಳನ್ನು ಸಮರ್ಪಣೆ ಮಾಡುವ ಮೂಲಕ ಸ್ತೋತ್ರಪರವಾಗಿದೆ ಎಂದು ಎರಡು ರೀತಿಯಲ್ಲಿ ನಮ್ಯತ್ವಪ್ರತಿಪಾದನಪರವಾಗಿ ಕೆಲವು ಹಾಗೂ ಸ್ತುತಿಪರವಾಗಿ ಕೆಲವು ಎಂದು ವ್ಯಾಖ್ಯಾನಮಾಡಿದ್ದಾರೆ.

ಇದೀಗ 'ಗ್ರಂಥೋಽಯಮಪಿ ಬಹ್ವರ್ಥಃ' ಎಂಬ ಆಚಾರ್ಯರ ಮಾತನ್ನು ಅನುಭವಕ್ಕೆ ತಂದುಕೊಡಲು ಎಲ್ಲ ಪದಗಳೂ ಸಾಕ್ಷಾತ್ತಾಗಿಯೋ ಅಥವಾ ಪರಂಪರೆಯಿಂದಲೋ ನಾರಾಯಣನು ನಮ್ಯ ಎಂದು ಪ್ರತಿಪಾದಿಸುತ್ತವೆ. ಹಾಗೆಯೇ ಬೇರೆ ರೀತಿಯಿಂದ ಎಲ್ಲವೂ ಸ್ತುತಿಪರವಾಗಿಯೂ ಆಗುತ್ತವೆ ಎಂಬ ಅಭಿಪ್ರಾಯದಿಂದ ಹಿಂದಿನ ವ್ಯಾಖ್ಯಾನಕ್ಕಿಂತ ಬೇರೆ ರೀತಿಯಲ್ಲಿ ವ್ಯಾಖ್ಯಾನ-ಮಾಡಲು ಅವತಾರಿಕೆಯನ್ನು "ಅಥವಾ" ಎಂಬ ಈ ಪಂಕ್ತಿಯಿಂದ ಕೊಟ್ಟಿದ್ದಾರೆ.

## ಈ ವಿಶೇಷಣಗಳನ್ನೇ ಸ್ವೀಕರಿಸಿದ್ದು ಏಕೆ?

(ಕಾಶೀ) – ನನು ವಿಶೇಷ್ಯಪ್ರಶಂಸಾಯಾ ವಿಶೇಷಣಾಂತರೈರಪಿ ಸಂಭವಾತ್ ಏತದ್ವಿಶೇಷಣಾ-ನಾಮೇವ ಉಪಾದಾನೇ ಕಿಂಚಿದಸಾಧಾರಣಂ ಪ್ರಯೋಜನಂ ವಾಚ್ಯಮ್ । ಏವಂ ವಾಚ್ಯಾರ್ಥಸ್ಯ ಪ್ರಕೃತೋಪಯುಕ್ತತ್ವಸಂಭವೇ ತಾತ್ಪರ್ಯಮಯುಕ್ತಮ್ । ಏವಂ ವಿಶೇಷ್ಯಪ್ರಶಂಸಯಾ ತನ್ನಮ್ಯತ್ವಮಾತ್ರಸಿದ್ಧಾವಪಿ ತಸ್ಯೈವ ಗ್ರಂಥಾದೌ ನಮ್ಯತ್ವಂ ನ ಸಿದ್ಧ್ಯೇತ್, ಅತಃ ತದುಪಪಾದಕತ್ವಂ ತಾವದ್ವಿಶೇಷಣಾನಾಮಾಹ — **ಅಥವೇತಿ** ॥

**ಅಥವಾ ಕುತೋ ನಾರಾಯಣಸ್ಯ** ... - ವಿಶೇಷ್ಯನಾದ ನಾರಾಯಣನ ಪ್ರಶಂಸೆಯು ಬೇರೆಯ ವಿಶೇಷಣಗಳಿಂದಲೂ ಮಾಡಲು ಸಾಧ್ಯವಿರುವುದರಿಂದ ನಿಖಿಲಪೂರ್ಣಗುಣ ಮುಂತಾದ ಪದ್ಯದಲ್ಲಿ ಹೇಳಿದ ವಿಶೇಷಣಗಳಿಂದಲೇ ಪ್ರಶಂಸೆಯನ್ನು ಮಾಡಲು ಏನಾದರೂ ಅಸಾಧಾರಣವಾದ ಪ್ರಯೋಜನವನ್ನು ಹೇಳಬೇಕು. ಹಾಗೆಯೇ ಆ ಪದಗಳ ಅರ್ಥವು ಪ್ರಕೃತಶಾಸ್ತ್ರಕ್ಕೆ ಉಪಯೋಗಿ-ಯಾಗಿದೆ ಎಂದು ಹೇಳಲು ಬರುವಾಗ ಕೇವಲ ಪ್ರಶಂಸೆಯನ್ನು ಮಾಡಲು ಆ ಪದಗಳಿವೆ ಎಂದು ಹೇಳುವುದು ತಪ್ಪು.

ಇನ್ನು ವಿಶೇಷ್ಯಪ್ರಶಂಸೆಯಿಂದ ನಾರಾಯಣನು ನಮ್ಯ ಎಂದಿಷ್ಟೇ ಸಿದ್ಧವಾದರೂ ಅವನನ್ನೇ ಗ್ರಂಥದ ಮೊದಲಿಗೆ ನಮಿಸಬೇಕು ಎಂಬುದು ಸಿದ್ಧವಾಗಲಿಲ್ಲ - ಎಂಬ ಆಕ್ಷೇಪ ಬರುವುದು. ಇದನ್ನು ಪರಿಹರಿಸಲು "ಅಥವಾ" ಎಂಬ ಈ ಭಾಗ ಹೊರಟಿದೆ.

## ಪ್ರಣಾಮಪ್ರಯೋಜನಕತ್ವವೇ ಸ್ವರಸ

(ವಾಕ್ಯಾರ್ಥಚಂದ್ರಿಕಾ) - ಪ್ರಣಾಮಕರ್ಮನಾರಾಯಣವಿಶೇಷಣಾನಾಂ ಪ್ರಣಾಮೋಪಯುಕ್ತಾರ್ಥ-ಪ್ರತಿಪಾದನೇನ ಪ್ರಣಾಮಪ್ರಯೋಜನಕತ್ವಮೇವ ಸ್ವರಸಂ ನ ತು ಪ್ರಯೋಜನಾಂತರಾರ್ಥಕ-ಸ್ತುತಿಪರತ್ವಮ್ ಇತ್ಯಭಿಪ್ರೇತ್ಯ ಆಹ - ಅಥವೇತಿ ॥ ಅತ್ರ 'ನಿಖಿಲ' ಇತ್ಯಾದಿವಿಶೇಷಣತ್ರಯಸ್ಯ ವಂದ್ಯತ್ವಪ್ರಯೋಜಕವೈಶಿಷ್ಟ್ಯೋಪಪಾದಕತ್ವಸ್ಯ ವಂದ್ಯಾಂತರಾತ್ ಅತಿಶಯಪ್ರತಿಪಾದಕತ್ವಸ್ಯ ಚ ವಕ್ಷ್ಯಮಾಣರೀತ್ಯಾ ಸ್ಪಷ್ಟತ್ವಾತ್ ತದುಪಪಾದ್ಯಸಮರ್ಪಕಸ್ಯ 'ಅಶೇಷವಿಶೇಷತೋಽಪಿ' ಇತ್ಯಸ್ಯ

ದ್ವೇಧಾ ವ್ಯಾಖ್ಯಾನಮುಚಿತಮ್ ಇತ್ಯಭಿಪ್ರೇತ್ಯ ದ್ವೇಧಾ ತನ್ನಿವರ್ತ್ಯಾಂ ಶಂಕಾಂ ದರ್ಶಯತಿ – ಕುತ ಇತ್ಯಾದಿನಾ ॥

ನಮಸ್ಕಾರಕ್ಕೆ ಕರ್ಮನಾಗಿರುವವನು ನಾರಾಯಣ. ಇವನಿಗೆ ಕೊಡುವ ವಿಶೇಷಣಗಳು ನಾರಾಯಣನು ನಮ್ಯನಾಗುವುದಕ್ಕೆ ಬೇಕಾದ ಅರ್ಥವನ್ನು ಪ್ರತಿಪಾದನೆ ಮಾಡಿದರೆ ಸಾರ್ಥಕವಾಗುವವು. ಅದೇ ಸ್ವರಸ. ಹೊರತು ಸ್ತುತಿರೂಪವಾದ ಬೇರೆ ಪ್ರಯೋಜನ ಈ ಪದಗಳಿಗೆ ಎನ್ನುವುದು ಅಷ್ಟು ಸ್ವರಸವಲ್ಲ ಎಂಬ ಅಭಿಪ್ರಾಯದಿಂದ 'ಅಥವಾ' ಎಂಬ ಭಾಗ ಹೊರಟಿದೆ. ಇಲ್ಲಿ ನಿಖಿಲ ಮುಂತಾದ ಮೂರು ವಿಶೇಷಣಗಳು ನಾರಾಯಣನು ವಂದ್ಯನಾಗುವುದಕ್ಕೆ ಬೇಕಾದ ವೈಶಿಷ್ಟ್ಯವನ್ನು ಉಪಪಾದಿಸುತ್ತಿವೆ. ಹಾಗೆಯೇ ವಂದ್ಯರಾದ ಬೇರೆ ಲಕ್ಷ್ಮ್ಯಾದಿಗಳಿಗಿಂತ ಇವನು ಅತಿಶಯ ಎಂದು ಪ್ರತಿಪಾದಿಸುತ್ತಿವೆ. ಇದಕ್ಕಾಗಿ ಆ ವೈಶಿಷ್ಟ್ಯವನ್ನು ಹಾಗೂ ಸರ್ವೋತ್ತಮತ್ವವನ್ನು ಸಮರ್ಥಿಸಲು 'ಅಶೇಷವಿಶೇಷತೋಽಪಿ' ಎಂಬುದಕ್ಕೆ ಎರಡು ರೀತಿ ವ್ಯಾಖ್ಯಾನಮಾಡುವುದು ಉಚಿತ ಎಂಬ ಅಭಿಪ್ರಾಯದಿಂದ ಎರಡು ಪ್ರಕಾರವಾದ ಶಂಕೆಯನ್ನು ತೋರಿಸುತ್ತಾರೆ – ಕುತಃ ಇತ್ಯಾದಿನಾ.

## ಏಕಮಪಿ ಕರ್ಮ ತದನಾದರೇಣ ನ ಕಾರ್ಯಮ್

(ವಾಕ್ಯಾರ್ಥಚಂದ್ರಿಕಾ)– 'ವಿಶೇಷತೋಽಪಿ' ಇತ್ಯಪಿಶಬ್ದಸ್ಯ ಸಮುಚ್ಚಾಯಕತ್ವಾಸಂಭವಾತ್ 'ಸರ್ವಕರ್ಮಣ್ಯಪಿ ಸದಾ ಕುರ್ವಾಣಃ' ಇತಿ ಗೀತಾತಾತ್ಪರ್ಯನಿರ್ಣಯೇ 'ಏಕಮಪಿ ಕರ್ಮ ತದನಾದರೇಣ ನ ಕಾರ್ಯಮ್' ಇತ್ಯಾದಿನಾ ಆಚಾರ್ಯೈರಭಿವ್ಯಾಪ್ತ್ಯರ್ಥತಯಾ ತಸ್ಯ ವ್ಯಾಖ್ಯಾತತ್ವಾತ್ 'ಸರ್ವೇಽಪ್ಯಾನೇಯಾಃ' ಇತ್ಯಾದಿಲೋಕವ್ಯವಹಾರಸಿದ್ಧತ್ವಾಚ್ಚ 'ಅಶೇಷ'ಪದ–ಸಂಕೋಚಪ್ರತೀತಿಂ ವಾರಯಿತುಮ್ ಅಭಿವ್ಯಾಪ್ತ್ಯರ್ಥತಯಾ ತಂ ವ್ಯಾಖ್ಯಾತಿ – ಅಪಿರಿತಿ ॥

'ಅಶೇಷವಿಶೇಷತೋಽಪಿ' ಎಂಬಲ್ಲಿರುವ ಅಪಿ ಎಂಬ ಶಬ್ದಕ್ಕೆ ಸಮುಚ್ಚಯ ಎಂಬರ್ಥವು ಇಲ್ಲದೆ ಅಭಿವ್ಯಾಪ್ತಿ ಎಂಬ ಅರ್ಥವಿದೆ ಎಂದು ವ್ಯಾಖ್ಯಾನಮಾಡಲಾಗಿದೆ. ಅಪಿಶಬ್ದವು ಅಸಂಕುಚಿತವಾದ ಅಭಿವ್ಯಾಪ್ತಿಎಂಬ ಅರ್ಥವನ್ನು ತಿಳಿಸುತ್ತಿದೆ. ಉದಾಹರಣೆಗೆ ಗೀತಾತಾತ್ಪರ್ಯನಿರ್ಣಯದಲ್ಲಿ 'ಸರ್ವಕರ್ಮಣ್ಯಪಿ ಸದಾ ಕುರ್ವಾಣಃ' ಎಂಬ ವಾಕ್ಯಕ್ಕೆ ವ್ಯಾಖ್ಯಾನಮಾಡುತ್ತ 'ಏಕಮಪಿ ಕರ್ಮ ತದನಾದರೇಣ ನ ಕಾರ್ಯಮ್' ಎಂದು ಒಂದೂ ಕರ್ಮವನ್ನು ಆದರ ಇಲ್ಲದೆ ಮಾಡಬಾರದು ಎಂದು ಸರ್ವಕರ್ಮಣ್ಯಪಿ ಎಂಬಲ್ಲಿರುವ ಅಪಿಶಬ್ದವನ್ನು ಅಭಿವ್ಯಾಪ್ತ್ಯರ್ಥವಾಗಿ ವ್ಯಾಖ್ಯಾನ ಮಾಡಿದ್ದಾರೆ. 'ಒಂದೂ ಕರ್ಮವನ್ನು ಬಿಡದೇ' ಎಂದು ಸಂಕೋಚವನ್ನು ವಾರಣೆ ಮಾಡಿದ್ದಾರೆ. ಅದೇ ರೀತಿ 'ಸರ್ವೇಪಿ ಆನೇಯಾಃ' ಎಂಬ ಲೌಕಿಕ ವ್ಯವಹಾರದಲ್ಲಿರುವ ಅಪಿಶಬ್ದವು ಅಭಿವ್ಯಾಪ್ತಿ ಎಂಬರ್ಥದಲ್ಲಿದೆ. ಇಲ್ಲಿಯೂ ಅಸಂಕುಚಿತವಾಗಿ ಒಬ್ಬರನ್ನೂ ಬಿಡದೇ ಎಲ್ಲರನ್ನೂ ಕರೆದುಕೊಂಡು

ಬಾ ಎಂದರ್ಥ. ಅದರಂತೆ ಇಲ್ಲಿ ಅಶೇಷವಿಶೇಷತೋಽಪಿ ವಂದ್ಯಂ ಎನ್ನುವಲ್ಲಿ ಅಶೇಷಪದದಿಂದ ಎಲ್ಲಾ ಎಂದರೆ ಒಬ್ಬರನ್ನೂ ಅಥವಾ ಒಂದನ್ನೂ ಬಿಡದೆ ಎಂದರ್ಥ. ಈ ರೀತಿಯಾದ ಅಸಂಕುಚಿತತ್ವವನ್ನು, **ಅಶೇಷ**ಪದದಿಂದ ಸಂಕುಚಿತಪ್ರತೀತಿಯನ್ನು ವಾರಣೆ ಮಾಡುವ ಮೂಲಕ, ಅಪಿಶಬ್ದವು ತಿಳಿಸುತ್ತಿದೆ. ಇದಕ್ಕಾಗಿ "ಅಪಿಃ ಅಭಿವ್ಯಾಪ್ತೌ" ಎಂದು ಸುಧಾದಲ್ಲಿ ಹೇಳಿದ್ದಾರೆ.

### ಅಪಿಶಬ್ದವು ಯಾವುದಕ್ಕೆ ವ್ಯಂಜಕ?

(ಕಾಶೀ) — **ಅಪಿರಭಿವ್ಯಾಪ್ತಾವಿತಿ** ॥ ಅಭಿವ್ಯಾಪ್ತಿಃ ಕಾರ್ತ್ಸ್ನ್ಯೇನ ಸಂಬಂಧಃ । ಅಸಾಧಾರಣ-ಧರ್ಮಾಣಾಂ ಕಾರ್ತ್ಸ್ನ್ಯೇನ **ವಂದನಹೇತುತ್ವಾನ್ವಯವ್ಯಂಜಕೋಽಪಿಶಬ್ದ** ಇತ್ಯರ್ಥಃ ।

ಅಪಿಃ ಅಭಿವ್ಯಾಪ್ತೌ - **ಅಭಿವ್ಯಾಪ್ತಿ** ಎಂದರೆ ಕಾರ್ತ್ಸ್ನ್ಯೇನ ಸಂಬಂಧಃ ಎಂದರ್ಥ. ಅಂದರೆ ಕಾರ್ತ್ಸ್ನ್ಯ ಎಂದರೆ ಪರಿಪೂರ್ಣವಾಗಿ ಅರ್ಥಾತ್ ಒಂದಂಶವನ್ನೂ ಬಿಡದೇ ಆಗುವ ಸಂಬಂಧ ಎಂದರ್ಥ. ಅಸಾಧಾರಣಧರ್ಮಗಳು ಕಾರ್ತ್ಸ್ನ್ಯೇನ ನಾರಾಯಣನ ನಮಸ್ಕಾರಕ್ಕೆ ಕಾರಣವಾಗಿವೆ ಎಂಬ ಸಂಬಂಧವನ್ನು ಅಭಿವ್ಯಕ್ತಿಗೊಳಿಸಲು ಅಪಿಶಬ್ದವಿದೆ ಎಂದರ್ಥ.

### ಅಶೇಷವಿಶೇಷತೋಽಪಿ ವಂದ್ಯಂ ಎಂಬಲ್ಲಿ ತತ್ಪುರುಷಸಮಾಸಾಶ್ರಯಣ ಏಕೆ?

(ಕಾಶೀ) — ಸತೀಷ್ವಪಿ **ಅನ್ಯಾಸು** ದೇವತಾಸು ವಂದ್ಯಮಿತಿ ॥ ದೇವತಾಂತರತ್ಯಾಗೇನ ವಂದ್ಯ-ಮಿತ್ಯರ್ಥಃ । ಯದ್ಯಪಿ ಕುತೋಽಸ್ಯ ನಮ್ಯತ್ವಮ್, ಕುತಶ್ಚಾಸ್ಯೈವ ನಮ್ಯತ್ವಮ್? ಇತಿ ಶಂಕಾ-ದ್ವಯಪರಿಹಾರಾಯ ಸರ್ವೋತ್ತಮತ್ವಮೇವಾಲಮ್ । ವಿಶಿಷ್ಟಪ್ರಯೋಜಕಸ್ಯ ವಿಶೇಷ್ಯ-ಪ್ರಯೋಜಕತ್ವಾವಶ್ಯಂಭಾವಾತ್ । ನ ಚ ಸರ್ವೋತ್ತಮತ್ವಂ ದೇವತಾಂತರತ್ಯಾಗಮಾತ್ರೇ ಪ್ರಯೋಜಕಂ, ನ ತು ವಂದ್ಯತ್ವೇಽಪೀತಿ ವಾಚ್ಯಮ್ । ತಥಾ ಸತಿ ವೈಶಿಷ್ಟ್ಯಸ್ಯ ವಂದ್ಯತ್ವ-ಪ್ರಯೋಜಕತ್ವಾನುಪಪತ್ತೇಃ । ನ ಹಿ ವೈಶಿಷ್ಟ್ಯಮಾತ್ರಂ ತತ್ಪ್ರಯೋಜಕಂ, ನ ತು ನಿರತಿಶಯ-ವೈಶಿಷ್ಟ್ಯರೂಪಂ ಸರ್ವೋತ್ತಮತ್ವಮಿತಿ ಯುಜ್ಯತೇ । ತಥಾಽಪಿ ಅಧಿಕೃತತ್ವಾದೇರ್ದೇವತಾಂತರ-ನಿಷ್ಠತ್ವೇ ತಸ್ಯಾಪಿ ವಂದ್ಯತ್ವಾಪತ್ತಿಃ । ಉಕ್ತನ್ಯಾಯೇನ ದೇವತಾಂತರಸ್ಯ ವೈಶಿಷ್ಟ್ಯಪ್ರಯುಕ್ತವಂದ್ಯತ್ವಾ ಯೋಗೇಽಪಿ ಅಧಿಕೃತತ್ವಾದಿಪ್ರಯುಕ್ತವಂದ್ಯತ್ವಸಂಭವಾತ್ ಇತ್ಯಾಶಂಕಾವಾರಣಾಯ ಕರ್ಮ-ಧಾರಯೋಽಪ್ಯನುಸೃತಃ । ಏತೇನ ಅಧಿಕೃತತ್ವಾದೇರಪಿ ವಕ್ಷ್ಯಮಾಣಕ್ರಮೇಣ ನಾರಾಯಣೈಕ-ನಿಷ್ಠತಯಾ ತತ ಏವ ತಸ್ಯೈವ ವಂದ್ಯತ್ವಸಿದ್ಧೇರಶೇಷಾದ್ ವಿಶೇಷ ಇತಿ ತತ್ಪುರುಷಾನುಸರಣಂ ವ್ಯರ್ಥಮಿತ್ಯಪಾಸ್ತಮ್ । ಅಧಿಕೃತತ್ವಪ್ರಯುಕ್ತವಂದ್ಯತ್ವಾಯೋಗೇಽಪಿ ದೇವತಾಂತರಸ್ಯ ವೈಶಿಷ್ಟ್ಯಪ್ರ ಯುಕ್ತವಂದ್ಯತ್ವಶಂಕಾವಾರಕತಯಾ ತತ್ಪುರುಷಾನುಸರಣಸಾರ್ಥಕ್ಯಾತ್ ।

ಸತೀಷ್ವಪಿ ಅನ್ಯಾಸು ದೇವತಾಸು ವಂದ್ಯಮ್ - ಈ ವಾಕ್ಯಕ್ಕೆ ಈ ರೀತಿ ಅರ್ಥ - ಲಕ್ಷ್ಮ್ಯಾದಿ ಬೇರೆ

ದೇವತೆಗಳಿದ್ದರೂ ಅವರನ್ನು ಪರಿತ್ಯಾಗಮಾಡಿ ನಾರಾಯಣನು ವಂದ್ಯನು ಎನಿಸಿದ್ದಾನೆ ಎಂದು. ಇಲ್ಲಿ ಒಂದು ಪ್ರಶ್ನೆ - ನಾರಾಯಣನು ಹೇಗೆ ನಮಸ್ಕರಿಸಲು ಯೋಗ್ಯ? ಹಾಗೂ ನಮಸ್ಕರಿಸುವುದಾದರೂ ಇವನನ್ನೇ ಏಕೆ ನಮಸ್ಕರಿಸಬೇಕು? ಎಂಬ ಎರಡು ಪ್ರಶ್ನೆಗಳಿಗೆ ಉತ್ತರವಾಗಿ ಸರ್ವೋತ್ತಮತ್ವ ಎಂಬ ಒಂದೇ ಕಾರಣ ಸಾಕು. ಅಂದರೆ ಸರ್ವೋತ್ತಮನಾದ್ದರಿಂದಲೇ ನಮ್ಯನಾಗಿದ್ದಾನೆ ಹಾಗೂ ಅವನನ್ನೇ ನಮಸ್ಕರಿಸಬೇಕು ಎಂಬುದು ಸಿದ್ಧವಾಗುತ್ತದೆ. ಏಕೆಂದರೆ ಒಂದು ನಿಯಮವಿದೆ. 'ವಿಶಿಷ್ಟಪ್ರಯೋಜಕಸ್ಯ ವಿಶೇಷ್ಯಪ್ರಯೋಜಕತ್ವ-ಅವಶ್ಯಂಭಾವಾತ್' ಇಲ್ಲಿ ವಿಶಿಷ್ಟ ಎಂದರೆ ದೇವತಾಂತರತ್ಯಾಗವಿಶಿಷ್ಟವಂದ್ಯತ್ವ. ಇದಕ್ಕೆ ಸರ್ವೋತ್ತಮತ್ವವು ಪ್ರಯೋಜಕವೆಂದರೆ ಇಲ್ಲಿ ವಿಶೇಷ್ಯವಾಗಿ ಇರುವ ವಂದ್ಯತ್ವಕ್ಕೂ ಪ್ರಯೋಜಕ ಎಂದರ್ಥ. ಅಲ್ಲ। ಸರ್ವೋತ್ತಮತ್ವವು ಕೇವಲ ಬೇರೆ ದೇವತೆಗಳನ್ನು ಪರಿತ್ಯಾಗ ಮಾಡುವುದಕ್ಕಷ್ಟೇ ಕಾರಣವಾಗಿದೆ ಹೊರತು ವಂದ್ಯತ್ವದ ವಿಷಯದಲ್ಲಿ ಅಲ್ಲ ಎಂದು ಹೇಳಿದರೆ ಇದು ಸರಿಯಲ್ಲ. ಹೀಗಾದರೆ ವಿಶಿಷ್ಟತ್ವ ಎಂಬ ಧರ್ಮವು ವಂದ್ಯತ್ವಕ್ಕೆ ಪ್ರಯೋಜಕ ಎಂದಾಗಬಾರದಿತ್ತು. ಏಕೆಂದರೆ ವಿಶಿಷ್ಟತ್ವ ಎಂಬ ಧರ್ಮವು ಮಾತ್ರ ವಂದ್ಯತ್ವಕ್ಕೆ ಪ್ರಯೋಜಕ ಹೊರತು ನಿರತಿಶಯವಿಶಿಷ್ಟತ್ವರೂಪವಾದ ಅರ್ಥಾತ್ ಸರ್ವೋತ್ತಮತ್ವವು ವಂದ್ಯತ್ವಕ್ಕೆ ಪ್ರಯೋಜಕವಲ್ಲ ಎನ್ನಲು ಬರುವುದಿಲ್ಲ.

ಇಷ್ಟಾದರೂ ಅಧಿಕೃತತ್ವ ಮೊದಲಾದ ಧರ್ಮಗಳು ಬೇರೆ ದೇವತೆಗಳಲ್ಲಿ ಇದ್ದರೆ ಅವರೂ ವಂದ್ಯರಾಗಲಿ ಎಂಬ ಆಶಂಕೆ ಉಳಿಯುತ್ತದೆ. ಏಕೆಂದರೆ ಲಕ್ಷ್ಮ್ಯಾದಿ ಬೇರೆ ದೇವತೆಗಳನ್ನು ವಿಶಿಷ್ಟದೇವತೆ ಎನ್ನುವ ಕಾರಣದಿಂದ ವಂದ್ಯತ್ವವು ಹಿಂದೆ ಹೇಳಿದ ರೀತಿಯಿಂದ ಇಲ್ಲದಿದ್ದರೂ ಅಧಿಕೃತತ್ವ ಇಷ್ಟತ್ವ ಮೊದಲಾದ ಕಾರಣದಿಂದ ವಂದ್ಯತ್ವವು ಬರಲಿ ಎನ್ನುವುದಕ್ಕೆ ಉತ್ತರವಾಗಿ ಕರ್ಮಧಾರಯಸಮಾಸವನ್ನು ಆಶ್ರಯಿಸಿದ್ದಾರೆ. 'ಅಶೇಷಾಶ್ಚ ತೇ ವಿಶೇಷಾಶ್ಚ' ಎಂಬುದಾಗಿ. ಹೀಗೆ ಹೇಳಿದ್ದರಿಂದಲೇ 'ಅಶೇಷಾತ್ ವಿಶೇಷಃ' ಎಂಬ ಪಂಚಮೀ ತತ್ಪುರುಷಸಮಾಸವು ಸಾರ್ಥಕ ಎನ್ನುವುದು ಸಿದ್ಧವಾಯಿತು. ಬೇರೆ ದೇವತೆಯು ವಿಶಿಷ್ಟನಾದ್ದರಿಂದ ವಂದ್ಯನಾಗಲಿ ಎಂಬ ಶಂಕೆಯ ಪರಿಹಾರವಾಗಿ ಪಂಚಮೀ ತತ್ಪುರುಷಸಮಾಸವು ಅವಶ್ಯ ಆಶ್ರಯಣೀಯವಾದ್ದರಿಂದ.

### ವಿಶೇಷಣಪಂಚಕವೂ ಸರ್ವೋತ್ತಮತ್ವ ಉಪಪಾದಕ

(ಕಾಶೀ) — ಏತದುಭಯಂ ಕಥಂ ನಾರಾಯಣಸ್ಯ? ಇತಿ ವಿಶೇಷಣಪಂಚಕಸ್ಯೈವ ಅವತಾರಿತತ್ವಾತ್ ಪಂಚಾನಾಮಪಿ ಸರ್ವೋತ್ತಮತ್ವೋಪಪಾದಕತ್ವಮವಗಮ್ಯತೇ । ವೈಶಿಷ್ಟ್ಯೋಪಪಾದನಾಯ ವಿಶೇಷಣತ್ರಯಮ್ ಇತ್ಯಾದಿವತ್ ಅತ್ರಾಪವಾದಾಭಾವಾತ್ । ನ ಚ ನಿಖಿಲಗುಣತ್ವ-ನಿರ್ದೋಷತ್ವ-ಜಗಜ್ಜನ್ಮಾದಿಕಾರಣತ್ವಾನಾಂ ನಿರುಕ್ತಸರ್ವೋತ್ತಮತ್ವಂ ವಿನಾಽನುಪಪತ್ತ್ಯಾ ತದುಪಪಾದಕತ್ವೇಽಪಿ, ಕಥಮಖಿಲವೇದವೇದ್ಯತ್ವಾದೇಸ್ತದುಪಪಾದಕತ್ವಮಿತಿ ವಾಚ್ಯಮ್ ।

ಸರ್ವಗುಣತ್ವಂ ವಿನಾ ಸರ್ವವೇದವೇದ್ಯತ್ವಸ್ಯ ಸರ್ವಾಧಿಕ್ಯಂ ವಿನಾ ಸರ್ವತೋಮುಖ್ಯವೇದ್ಯತ್ವಸ್ಯ ಚಾನುಪಪತ್ತ್ಯಾ ತಯೋರಪಿ ಸರ್ವೋತ್ತಮತ್ವೋಪಪಾದಕತ್ವಾವಶ್ಯಂಭಾವಾತ್ । ಏವಮಾ-ಚಾರ್ಯಾಣಾಮೃಜುತಯಾ ತತ್ಪ್ರಿಯತ್ವಾದೇರ್ವಿನಾ ಸರ್ವೋತ್ತಮತ್ವಾನುಪಪತ್ತೇಸ್ತಸ್ಯಾಪಿ ತದುಪ-ಪಾದಕತ್ವಮಿತಿ ॥

ಏತದುಭಯಂ ಕಥಂ ನಾರಾಯಣಸ್ಯ? – 'ಅಶೇಷವಿಶೇಷತೋಽಪಿ' ಎಂಬ ಪದದಿಂದ ಸಿದ್ಧವಾದ ಎರಡರ್ಥ. (1) ವಂದ್ಯತ್ವನಿಮಿತ್ತವಾದ ಯಾವದ್ಧರ್ಮಗಳು. (2) ಸರ್ವೋತ್ತಮತ್ವವು. ಇವೆರಡು ನಿಖಿಲಪೂರ್ಣ ಮುಂತಾದ ವಿಶೇಷಣಗಳಿಂದ ಸಿದ್ಧವಾಗಿವೆ. ಇಲ್ಲಿ ಸರ್ವೋತ್ತಮತ್ವವನ್ನು ಸಮರ್ಥಿಸುವ ವಿಶೇಷಣಗಳು ಐದು ಎಂದು ತಿಳಿಯಬೇಕು. ಏಕೆಂದರೆ ಏತದುಭಯಂ ಕಥಂ ನಾರಾಯಣಸ್ಯ, ಇತ್ಯತಃ ಅಭಿಹಿತಮ್ "ನಿಖಿಲೇತ್ಯಾದಿ" - ಎಂದು ಅವತಾರಿಕೆಯನ್ನು ನೀಡುತ್ತ ಐದಕ್ಕೂ ಸರ್ವೋತ್ತಮತ್ವ-ಉಪಪಾದಕತ್ವವನ್ನು ಹೇಳಿದಂತೆ ಆಯಿತು. ಅದು ಹೀಗೆ - ದೇವತೆಗಳಿಂದ ಸರ್ವೋತ್ತಮತ್ವವು ಭಗವಂತನಿಗೆ ಇದೆ ಎಂದು ಒಪ್ಪದಿದ್ದರೆ ಅವನಲ್ಲಿ ನಿಖಿಲಗುಣತ್ವ, ನಿರ್ದೋಷತ್ವ ಹಾಗೂ ಜಗಜ್ಜನ್ಮಾದಿಕಾರಣತ್ವ ಎಲ್ಲವೂ ಅಸಂಭಾವಿತ. ಹಾಗಾಗಿ ಸರ್ವೋತ್ತಮತ್ವವು ಮೂರಕ್ಕೂ ಉಪಪಾದಕವಾಗಿದೆ.

ಇನ್ನು 'ಅಖಿಲವೇದವೇದ್ಯತ್ವ' ಎಂಬುದಕ್ಕೆ ಸರ್ವೋತ್ತಮತ್ವವು ಉಪಪಾದಕ ಹೇಗೆ? ಎನ್ನುವ ಪ್ರಶ್ನೆ ಉಳಿಯುತ್ತದೆ. ಇದಕ್ಕೆ ಉತ್ತರ – ಎಲ್ಲ ಗುಣಗಳೂ ಭಗವಂತನಲ್ಲಿ ಇಲ್ಲದಿದ್ದರೆ ಅವನು ಸಕಲ-ವೇದಗಳಿಂದ ವೇದ್ಯ ಎನಿಸುವುದಿಲ್ಲ. ಹಾಗೆಯೇ ಎಲ್ಲ ವಸ್ತುಗಳಿಗಿಂತ ಅಧಿಕನಲ್ಲದಿದ್ದರೆ ಎಲ್ಲರಿಗಿಂತಲೂ ಮುಖ್ಯವಂದ್ಯನು ಎನ್ನುವುದು ಕೂಡುವುದಿಲ್ಲ. ಹಾಗಾಗಿ ಸರ್ವೋತ್ತಮತ್ವವು ಅಖಿಲವೇದವೇದ್ಯತ್ವಕ್ಕೆ ಉಪಪಾದಕವಾಗಿದೆ.

ಇನ್ನು 'ಸದಾ ಮಮ ಪ್ರಿಯತಮಂ' ಎನ್ನುವುದಕ್ಕೂ ಸರ್ವೋತ್ತಮತ್ವ ಉಪಪಾದಕ. ಆಚಾರ್ಯರು ಋಜುಗಳಾದ್ದರಿಂದ ಅವರಿಗೆ ಅತ್ಯಂತ ಪ್ರೀತಿಪಾತ್ರನಾದ ನಾರಾಯಣನು ಸರ್ವೋತ್ತಮನಾಗಿರಲೇ-ಬೇಕಾದ್ದರಿಂದ.

## ವಿಘ್ನವಿಘಾತಾದಿ ಎಂಬಲ್ಲಿನ ಆದಿಶಬ್ದದಿಂದ ಯಾವುದರ ಗ್ರಹಣ

(ಆನಂದ) – **ವಿಘ್ನವಿಘಾತಾದಿ ಇತ್ಯಾದಿಶಬ್ದೇನ ಪ್ರಚಯಗಮನಪರಿಗ್ರಹಃ ।**

ಕಿಂತು ವಿಘ್ನವಿಘಾತಾದಿಪ್ರಯೋಜನಾಪೇಕ್ಷಿತತಯಾ – ಇಲ್ಲಿ ಆದಿ ಎಂಬ ಶಬ್ದದಿಂದ ಪ್ರಚಯ-ಗಮನವನ್ನು ಗ್ರಹಿಸಬೇಕು. ಪ್ರಚಯವನ್ನು ಹೊಂದಬೇಕೆಂದು ಅಧಿಕಾರಿಯು ಅಂತಹ ವಿಶಿಷ್ಟ-ದೇವತೆಯನ್ನು ನಮಸ್ಕರಿಸುವನು ಎಂದು ಭಾವ.

### ವಿಶಿಷ್ಟ, ಅಧಿಕೃತ, ಇಷ್ಟ

**(ಕುಂಡಲ) – ವಿಶಿಷ್ಟೇತಿ । ವಿಶಿಷ್ಟಾ = ಸರ್ವೋತ್ತಮಾ । ಅಧಿಕೃತಾ = ಪ್ರಕೃತಗ್ರಂಥಪ್ರತಿ-ಪಾದ್ಯಾ । ಇಷ್ಟಾ = ಪರಮಪ್ರೇಮಾಸ್ಪದರೂಪಾ ದೇವತಾ ವಂದ್ಯಾ ಭವತೀತ್ಯರ್ಥಃ ।**

ವಿಶಿಷ್ಟಾ -ಅಂದರೆ ಸರ್ವೋತ್ತಮ ಎಂದರ್ಥ. ಅಧಿಕೃತಾ ಎಂದರೆ ಪ್ರಕೃತಗ್ರಂಥದಿಂದ ಪ್ರತಿಪಾದ್ಯ-ವಾದದ್ದು. ಇಷ್ಟಾ ಎಂದರೆ ಪರಮಪ್ರೇಮಾಸ್ಪದವಾಗದ್ದು.

### ನ ಹಿ ದೇವತಾವಂದನಂ ವ್ಯಸನಿತಯಾ ಕ್ರಿಯತೇ

**(ಲಘುರಸರಂಜನೀ) — ವ್ಯಸನಿತಯಾ ಇತಿ ॥ ಕುಲಧರ್ಮಾದೌ ಕ್ರಿಯಮಾಣಕ್ರಿಯಾಂತರವತ್ ಫಲಾಭಾವೇಽಪಿ ಆದಾವೇವಮವಶ್ಯಮನುಷ್ಠೇಯಮಿತ್ಯಾಗ್ರಹೇಣ ಇತ್ಯರ್ಥಃ ।**

ನ ಹಿ ದೇವತಾವಂದನಂ ವ್ಯಸನಿತಯಾ ಕ್ರಿಯತೇ - ಕುಲಧರ್ಮಮೊದಲಾದವುಗಳಲ್ಲಿ ಅರ್ಥಾತ್ ಆಯಾಯ ಸಂಪ್ರದಾಯಗಳಲ್ಲಿ ಮಾಡುವ ಕರ್ಮದಂತೆ ಬೇರೆ ಯಾವುದೇ ವಿಶೇಷಫಲವಿಲ್ಲದಿದ್ದರೂ ಮೊದಲೇ ವಿಶಿಷ್ಟದೇವತೆಯನ್ನು ನಮಸ್ಕರಿಸುವುದು ಎಂಬ ರೀತಿಯ ಆಗ್ರಹದಿಂದ ಎಂದರ್ಥ. ಇದು ವ್ಯಸನಿತಯಾ ಎನ್ನುವುದಕ್ಕೆ ವಿವರಣೆ.

### ವಿಶಿಷ್ಟತ್ವವು ವಂದ್ಯತ್ವಕ್ಕೆ ಸಾಕ್ಷಾತ್ ನಿಮಿತ್ತವಲ್ಲ

**(ಲಘುರಸರಂಜನೀ) — ಅನೇನ ವಿಶಿಷ್ಟತ್ವಸ್ಯ ದೇವತಾಯಾಂ ವಂದನಕರ್ತ್ರಪೇಕ್ಷಿತವಿಘ್ನವಿಘಾತಾ-ದಿಫಲಪ್ರದಾನಸಾಮರ್ಥ್ಯನಿಶ್ಚಯಜನನದ್ವಾರೈವ ವಂದ್ಯತ್ವನಿಮಿತ್ತತ್ವಂ ನ ಸಾಕ್ಷಾದಿತ್ಯುಕ್ತಂ ಭವತಿ ।**

ವಿಶಿಷ್ಟೈವ ದೇವತಾ ತಸ್ಯ ಈಪ್ಸ್ಟೇ - ಈ ಪಂಕ್ತಿಯಿಂದ ವಿಶಿಷ್ಟತ್ವ ಎಂಬ ಧರ್ಮವು ವಂದ್ಯತ್ವಕ್ಕೆ ಸಾಕ್ಷಾತ್ಕಾರಣವಲ್ಲ ಎಂದು ಹೇಳಿದಂತಾಯಿತು. ಅದು ಹೀಗೆ - ವಿಶಿಷ್ಟತ್ವ ನಾರಾಯಣನಲ್ಲಿ ಇದ್ದಾಗ ನಾರಾಯಣನಲ್ಲಿ ನಮಸ್ಕರಿಸುವ ವ್ಯಕ್ತಿಗೆ ಅಪೇಕ್ಷಿತವಾದ ವಿಘ್ನನಾಶ ಮೊದಲಾದ ಫಲವನ್ನು ನೀಡುವ ಸಾಮರ್ಥ್ಯ ಇದೆ ಎಂಬ ನಿಶ್ಚಯ ಬರುವುದು. ಏತನ್ಮೂಲಕವಾಗಿ ವಂದ್ಯನು ನಾರಾಯಣ ಎಂದು ಸಿದ್ಧಿಸುವುದು.

### ಅಧಿಕೃತತ್ವವು ಕಿಂಚಿದ್-ದ್ವಾರೈವ ವಂದ್ಯತ್ವನಿಮಿತ್ತ

**(ಲಘುರಸರಂಜನೀ) — ತಥಾ ಚ ಅಧಿಕೃತತ್ವಸ್ಯ ದೇವತಾಯಾಂ ವಂದನಕರ್ತ್ರಪೇಕ್ಷಿತಪ್ರಕೃತಗ್ರಂಥ-ಪ್ರಬೋಧಾದಿಸಂಪಾದಕತ್ವನಿಶ್ಚಯಜನನದ್ವಾರೈವ ವಂದ್ಯತ್ವನಿಮಿತ್ತತ್ವಮಿತಿ ಭಾವಃ ।**

ಅಧಿಕೃತಾ ಚ ಸ್ವವಿಷಯಗ್ರಂಥಪ್ರಬೋಧಾದಿಕಂ ಸಂಪಾದಯತಿ - ಅಧಿಕೃತತ್ವವು ವಂದ್ಯತ್ವಕ್ಕೆ ಸಾಕ್ಷಾತ್ ಕಾರಣವಲ್ಲ. ಹೊರತಾಗಿ ನಮಸ್ಕರಿಸುವ ವ್ಯಕ್ತಿಗೆ ಅಪೇಕ್ಷಿತವಾದ ಪ್ರಕೃತಗ್ರಂಥದ

ಜ್ಞಾನವನ್ನು ಸಂಪಾದಿಸಿ ಕೊಡುವವನು ಹಾಗೂ ಆದಿಪದದಿಂದ ಗ್ರಹಿಸಬೇಕಾದ ಮನನ, ಅವಧಾರಣೆಗಳನ್ನು ಕೊಡುವವನು ಎಂಬ ನಿಶ್ಚಯ ಉಂಟಾಗುವುದು. ನಂತರ ಈ ಕಾರಣದಿಂದ ಅವನು ವಂದ್ಯ ಎಂದು ಸಿದ್ಧವಾಗುವುದು.

## ಇಷ್ಟತ್ವವು ಭಕ್ತ್ಯಾದಿಇತಿಕರ್ತವ್ಯತಾಸಂಪಾದನದ್ವಾರೈವ ವಂದ್ಯತ್ವನಿಮಿತ್ತ

(ಲಘುರಸರಂಜನೀ) — ಅಯಂ ಭಾವಃ – ವಂದನಂ ತಾವನ್ನ ಹಿ ದೇವತಾವಂದನಂ ವ್ಯಸನಿ-ತಯಾ ಕ್ರಿಯತ ಇತ್ಯಾದಿನಾ ಸಫಲಮ್ ಇತ್ಯುಕ್ತಮ್ । ಸಫಲತ್ವಂ ಚ ತಸ್ಯ ಇತಿಕರ್ತವ್ಯತಾ-ಸಹಿತಸ್ಯೈವ । ನ ಕೇವಲಸ್ಯ । ಅದರ್ಶನಾತ್ । ಇತಿಕರ್ತವ್ಯತಾ ಚಾತ್ರ ಭಕ್ತ್ಯಾದ್ಯತಿಶಯೋಪೇತ-ತ್ವಮ್ । ಭಕ್ತ್ಯಾದ್ಯತಿಶಯಶ್ಚೇಷ್ಟಾಯಾಮೇವ ದೇವತಾಯಾಂ ಭವತಿ । ನಾನ್ಯಸ್ಯಾಮ್ । ತತ್ರ ವಸ್ತುತೋ ವೈಶಿಷ್ಟ್ಯಾದಿಕೇ ಸತ್ಯಪಿ ತತ್ಪ್ರಯುಕ್ತಭಕ್ತ್ಯಾದಿಮಾತ್ರೇ ಸತ್ಯಪಿ ಚ ಸ್ವಾಪೇಕ್ಷಿತಫಲಾಲಾಭೇ ಭಕ್ತ್ಯಾದ್ಯತಿಶಯಾನುದಯಸ್ಯ ಸರ್ವಾನುಭವಸಿದ್ಧತ್ವಾತ್ । ತಥಾ ಚೇಷ್ಟತ್ವಸ್ಯ ವಂದನಕರ್ತ್ರ-ಪೇಕ್ಷಿತಫಲಾಯ ವಂದನೇ ಭಕ್ತ್ಯಾದೀತಿಕರ್ತವ್ಯತಾಸಂಪಾದನದ್ವಾರೈವ ವಂದ್ಯತ್ವನಿಮಿತ್ತತ್ವಮಿತಿ ।

ವಂದನಂ ಖಲು ಭಕ್ತ್ಯಾದ್ಯುಪೇತಮೇವ ಸಫಲಮ್ । ತಚ್ಚ ಇಷ್ಟಾಯಾಮೇವ ದೇವತಾಯಾಂ ಉಪಪದ್ಯತೇ - ಇದರ ಅಭಿಪ್ರಾಯ ಹೀಗೆ - ನಮಸ್ಕಾರವು ಏನೋ ಒಂದು ಪ್ರಯೋಜನ-ವುಳ್ಳದ್ದಾಗಿರುವುದು. ಪ್ರಯೋಜನವಾದರೋ ಇತಿಕರ್ತವ್ಯತಾಸಹಿತವಾದ ನಮಸ್ಕಾರದಿಂದಲೇ ಸಿಗುವುದು. ಪ್ರಕೃತ ಇತಿಕರ್ತವ್ಯತಾರೂಪವಾದದ್ದು ನಮಸ್ಕಾರದಲ್ಲಿರುವ ಭಕ್ತ್ಯಾದ್ಯತಿಶಯಗಳೇ. ಇಂತಹ ಭಕ್ತ್ಯಾದ್ಯತಿಶಯವು ಇಷ್ಟವಾದ ದೇವತೆಯಲ್ಲೇ ಉಂಟಾಗುವುದು. ಹಾಗಾಗಿ ವಸ್ತುತಃ ದೇವತೆಯು ವಿಶಿಷ್ಟನಾಗಿದ್ದರೂ ಆದ್ದರಿಂದಲೇ ಅವನಲ್ಲಿ ಭಕ್ತಿ ಶ್ರದ್ಧೆಗಳಿದ್ದರೂ ತನಗೆ ಅಪೇಕ್ಷಿತ-ವಾದ ಫಲ ಸಿಗದಿದ್ದರೆ ಅವನಲ್ಲಿ ಭಕ್ತಿಶ್ರದ್ಧಾತಿಶಯವು ಉಂಟಾಗುವುದಿಲ್ಲ ಎನ್ನುವುದು ಅನುಭವಸಿದ್ಧವಾದ ವಿಷಯ. ಹಾಗಾಗಿ ಇಷ್ಟತ್ವ ಎಂಬ ಧರ್ಮವು ನಮಸ್ಕರಿಸುವ ವ್ಯಕ್ತಿಗೆ ಅಪೇಕ್ಷಿತವಾದ ಫಲಕ್ಕೋಸ್ಕರ ಬೇಕಾದ ಭಕ್ತ್ಯಾದಿಇತಿಕರ್ತವ್ಯತಾವನ್ನು ಸಂಪಾದನೆ ಮಾಡುವ ಮುಖಾಂತರ ನಾರಾಯಣನ ವಂದ್ಯತ್ವಕ್ಕೆ ನಿಮಿತ್ತವಾಗಿದೆ.

ಹೀಗೆ ಮೂರೂ ಧರ್ಮಗಳು (ವಿಶಿಷ್ಟತ್ವ ಅಧಿಕೃತತ್ವ ಇಷ್ಟತ್ವಗಳು) ವಂದ್ಯತ್ವಕ್ಕೆ ಪರಂಪರಯಾ ನಿಮಿತ್ತಗಳಾಗಿವೆ ಸಾಕ್ಷಾತ್ತಾಗಿ ಅಲ್ಲ.

## ಉಭಯ ಯಾವುದು?

(ಪರಿಮಳ)– ಏತದುಭಯಮಿತಿ ॥ ವಂದ್ಯತ್ವಪ್ರಯೋಜಕಾಸಾಧಾರಣಧರ್ಮವತ್ತ್ವಂ ಸರ್ವೋ-ತ್ತಮತ್ವಂ ಚ ಇತ್ಯುಭಯಮಿತ್ಯರ್ಥಃ । ನಿಖಿಲೇತ್ಯಾದಿ ॥ ವಿಶೇಷಣಪಂಚಕಮ್ ಇತ್ಯರ್ಥಃ ।

ಏತದುಭಯಮಿತಿ ॥ ವಂದ್ಯತ್ವಕ್ಕೆ ಪ್ರಯೋಜಕವಾದ ಅಸಾಧಾರಣಧರ್ಮ ಹಾಗೂ ಸರ್ವೋತ್ತಮತ್ವ ಎಂಬ ಎರಡು ಎಂದರ್ಥ. ನಿಖಿಲೇತ್ಯಾದಿ ॥ ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ, ಅಸ್ಯೋದ್ಭವಾದಿದಂ, ಅಶೇಷವಿಶೇಷತೋಪಿ ವಂದ್ಯಂ ಎಂಬ ಐದನ್ನು ಗ್ರಹಿಸಬೇಕು.

## ವ್ಯಸನ ಎಂದರೇನು

**(ಕಾಶೀ) — ಯದಕರಣೇ ಚಿತ್ತವಿಕ್ಷೋಭಃ ತಚ್ಚಿಕೀರ್ಷಾ = ವ್ಯಸನಮ್ । ಯಥಾ ಪಟ್ವಭ್ಯಾಸ–ಆಹಿತಕರಪರಿಸ್ಪಂದಾದಿಚಿಕೀರ್ಷಾ ।**

ವ್ಯಸನಿತಯಾ ಇತಿ – ವ್ಯಸನ ಎಂದರೆ ಯಾವ ಕೆಲಸವನ್ನು ಮಾಡದಿದ್ದರೆ ಮನಸ್ಸಿಗೆ ಕ್ಷೋಭವುಂಟಾಗುವುದೋ ಅಂತಹ ಕೆಲಸವನ್ನು ಮಾಡುವ ಇಚ್ಛೆಯು. ಉದಾ - ಚೆನ್ನಾಗಿ ಆದ ಒಂದು ಅಭ್ಯಾಸದಿಂದ ಬಂದ ಕೈ-ಕಾಲು ಮುಂತಾದವುಗಳ ಚೇಷ್ಟೆಯನ್ನು ಮಾಡುವ ಇಚ್ಛೆ. ಉದಾಹರಣೆಗೆ ಪ್ರವಚನಕ್ಕಾಗಿ ಅಥವಾ ಧ್ಯಾನಕ್ಕಾಗಿ ಕೂತಾಗ ಕಾಲಿನ ತೊಡೆಯನ್ನು ಅಲ್ಲಾಡಿಸುವುದು.

## "ತತ್ರ ವೈಶಿಷ್ಟ್ಯೋಪಪಾದನಾಯ ನಿಖಿಲಪೂರ್ಣ.." ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – तत्र वैशिष्ट्योपपादनाय **'निखिलपूर्णगुणैकदेहम्, निर्दोषम्, अस्योद्भवादिदम्'** इति विशेषणत्रयम् । **निखिला**= निःशेषाः, **पूर्णाः**= प्रत्येकमप्यनवधिकाः, **गुणा** = आनन्दादयः, **एकशब्दः** = केवलार्थः, त एव देहो यस्य, न पुनः प्राकृतादिरिति तथोक्तः । निष्क्रान्तो दोषेभ्यः पारतन्त्र्यादिभ्य इति निर्दोषः । **अस्य**= प्रत्यक्षादिप्रमाणसिद्धतया बुद्धिसन्निहितस्य स्वव्यतिरिक्तप्रपञ्चस्य, **उद्भवः**= उत्पत्तिरादिरस्येति **उद्भवादि**= जन्माद्यष्टकम्, तद् यथासम्भवं ददातीत्युद्भवादिदः, तम् । **'अस्य'** इति सम्बन्धमात्रे षष्ठी । **अशेषविशेषतोऽपि** इत्येतद् **'अस्योद्भवादिदम्'** इत्यनेनापि सम्बद्ध्यते, वियदधिकरणादिव्युत्पाद्यसमस्तावान्तरभेदसहितोद्भवादिदमिति ।

ತತ್ರ - ಆ ಮೂರು ಧರ್ಮಗಳಲ್ಲಿ, ವೈಶಿಷ್ಟ್ಯೋಪಪಾದನಾಯ - ವಿಶಿಷ್ಟತ್ವ ಅಂದರೆ ಸರ್ವೋತ್ತಮತ್ವವನ್ನು ಸಮರ್ಥನೆ ಮಾಡುವುದಕ್ಕೋಸ್ಕರ, ನಿಖಿಲಪೂರ್ಣಗುಣೈಕದೇಹಂ ನಿರ್ದೋಷಂ ಅಸ್ಯೋದ್ಭವಾದಿದಮಿತಿ - ನಿಖಿಲಪೂರ್ಣಗುಣೈಕದೇಹತ್ವ ನಿರ್ದೋಷತ್ವ ಅಸ್ಯೋದ್ಭವಾದಿದತ್ವ ಎಂಬ, ವಿಶೇಷಣತ್ರಯಮ್ - ಮೂರು ವಿಶೇಷಣಗಳಿವೆ. ನಿಖಿಲಾಃ - ನಿಖಿಲ ಅಂದರೆ ನಿಃಶೇಷಾಃ

ಅರ್ಥಾತ್ ಎಲ್ಲ ಎಂದರ್ಥ. ಪೂರ್ಣಾಃ - ಪೂರ್ಣ ಎಂದರೆ ಪ್ರತ್ಯೇಕಮಪಿ ಅನವಧಿಕಾಃ - ಒಂದೊಂದು ಕೂಡ ಪರಿಮಿತಿ ಇಲ್ಲದ್ದಾಗಿದೆ. ಗುಣಾಃ - ಗುಣಗಳೆಂದರೆ, ಆನಂದಾದಯಃ - ಆನಂದವೇ ಮೊದಲಾದವುಗಳು. ಏಕಶಬ್ದಃ - ಏಕ ಎಂಬ ಶಬ್ದವು, ಕೇವಲಾರ್ಥಃ - ಕೇವಲ ಎಂಬ ಅರ್ಥವುಳ್ಳದ್ದು. ತೇ ಏವ - ಆ ಆನಂದಾದಿಗುಣಗಳೇ, ದೇಹಃ - ಶರೀರವು, ಯಸ್ಯ - ಯಾರಿಗೋ, ನ ಪುನಃ - ಅದರ ಹೊರತಾಗಿ, ಪ್ರಾಕೃತಾದಿಃ - ಪ್ರಕೃತಿನಿರ್ಮಿತವಾದ ಶರೀರ ಮುಂತಾದುದಲ್ಲ. ಇತಿ - ಎಂಬುದಾಗಿ, ತಥಾ - ಆ ವಿಶೇಷಣದಿಂದ, ಉಕ್ತಃ - ಹೇಳಲ್ಪಟ್ಟಿದೆ. ದೋಷೇಭ್ಯಃ - ದೋಷಗಳೆಂದರೆ, ಪಾರತಂತ್ರ್ಯಾದಿಭ್ಯಃ - ಪರಾಧೀನತೆ ಮುಂತಾದವುಗಳಿಂದ, ನಿಷ್ಕ್ರಾಂತಃ - ಸ್ವಲ್ಪವೂ ಸ್ಪರ್ಶವಿಲ್ಲದವನು ಇತಿ - ಎಂಬುದಾಗಿ, ನಿರ್ದೋಷಃ - ನಿರ್ದೋಷಪದದ ಅರ್ಥವೆನ್ನುತ್ತಾರೆ.

ಅಸ್ಯ - ಇದಕ್ಕೆ ಎಂದರೆ, ಪ್ರತ್ಯಕ್ಷಾದಿಪ್ರಮಾಣಸಿದ್ಧತಯಾ - ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ಇದೆ ಎಂದು ಸಿದ್ಧವಾದ, ಬುದ್ಧಿಸನ್ನಿಹಿತಸ್ಯ - ಭಗವಂತನ ಬುದ್ಧಿಯಲ್ಲಿ ವಿಷಯವಾಗಿರುವ, ಸ್ವವ್ಯತಿರಿಕ್ತಪ್ರಪಂಚಸ್ಯ - ತನಗಿಂತ ಬೇರೆಯಾದ ಘಟಪಟಮುಂತಾದ ಜಗತ್ತಿಗೆ, ಉದ್ಭವಃ - ಉದ್ಭವ ಎಂದರೆ, ಉತ್ಪತ್ತಿಃ - ಹುಟ್ಟುವಿಕೆ ಆದಿಃ - ಮೊದಲಾದದ್ದು, ಅಸ್ಯ - ಇಂತಹ ಜಗತ್ತಿಗೆ, ಇತಿ - ಎಂಬುದಾಗಿ, ಉದ್ಭವಾದಿ - ಉದ್ಭವಾದಿ ಎಂದರೆ, ಜನ್ಮಾದ್ಯಷ್ಟಕಮ್ - ಹುಟ್ಟುವಿಕೆ ಮೊದಲಾದ ಎಂಟು ಪದಾರ್ಥಗಳು ಎಂದರ್ಥ. ತತ್ - ಆ ಎಂಟನ್ನು, ಯಥಾಸಂಭವಂ - ಜೀವ ಮುಂತಾದ ವಸ್ತುಗಳಿಗನುಗುಣವಾಗಿ, ದದಾತಿ - ಕೊಡುತ್ತಾನೆ ಇತಿ - ಎಂಬ ಕಾರಣದಿಂದ, ಉದ್ಭವಾದಿದಃ - ಉತ್ಪತ್ತಿ ಮೊದಲಾದವುಗಳನ್ನು ಕೊಡುವವನು. ತಂ - ಅಂತಹವನಾದ ನಾರಾಯಣನನ್ನು. (ನಮಸ್ಕರಿಸುತ್ತೇನೆ)

ಅಸ್ಯ ಇತಿ ॥ ಅಸ್ಯ ಎಂಬ ಶಬ್ದದಲ್ಲಿರುವ ಷಷ್ಠೀವಿಭಕ್ತಿಯು, ಸಂಬಂಧಮಾತ್ರೇ - ಕೇವಲ ಸಂಬಂಧ ಎಂಬ ಅರ್ಥದಲ್ಲಿದೆ. ಅಶೇಷವಿಶೇಷತೋಽಪಿ ಇತ್ಯೇತತ್ - ಅಶೇಷವಿಶೇಷತೋಽಪಿ ಎಂಬೀ ಪದವು, ಅಸ್ಯೋದ್ಭವಾದಿದಮ್ ಇತ್ಯನೇನಾಪಿ - 'ಅಸ್ಯೋದ್ಭವಾದಿದಂ' ಎಂಬ ಪದದೊಂದಿಗೂ, ಸಂಬಧ್ಯತೇ - ಅನ್ವಯವನ್ನು ಹೊಂದುತ್ತದೆ. ವಿಯದಧಿಕರಣಾದಿವ್ಯುತ್ಪಾದ್ಯ-ಸಮಸ್ತ-ಅವಾಂತರ-ಭೇದಸಹಿತೋದ್ಭವಾದಿದಂ ಇತಿ - ವಿಯದಧಿಕರಣ ಮೊದಲಾದ ಅಧಿಕರಣಗಳಿಂದ ಪ್ರತಿಪಾದಿಸಲ್ಪಟ್ಟಂತೆ ಇರುವ ಸಕಲವಿಧವಾದ ಅವಾಂತರಪ್ರಭೇದಗಳಿಂದ ಕೂಡಿದ, ಸೃಷ್ಟಿ ಮುಂತಾದವುಗಳನ್ನು ನೀಡುವವನು ಎಂದರ್ಥ.

ಸಾರ - ಇಲ್ಲಿಯವರೆಗೂ ಮೂರು ದೇವತೆಗಳು ವಂದ್ಯರು ಎಂದು ಹೇಳಿದ್ದರು. ಅಲ್ಲಿಯೂ ವಿಶಿಷ್ಟ ದೇವತೆಯ ಬಗ್ಗೆ ಉಲ್ಲೇಖ ಮಾಡುತ್ತ ನಾರಾಯಣನು ವಿಶಿಷ್ಟದೇವತೆ ಎಂಬುದನ್ನು ಈಗ ಸಮರ್ಥನೆ ಮಾಡಬೇಕಾಗಿದೆ. ಅದಕ್ಕಾಗಿ ಮೂರು ವಿಶೇಷಣಗಳು ಇವೆ. 'ನಿಖಿಲಪೂರ್ಣ-ಗುಣೈಕದೇಹಂ, ನಿರ್ದೋಷಂ, ಅಸ್ಯೋದ್ಭವಾದಿದಂ' ಎಂದು. ಇನ್ನು ಈ ಮೂರೂ ಪದಗಳಿಗೆ ಅರ್ಥವನ್ನು ವಿವರಿಸಿದ್ದಾರೆ. ಇನ್ನು ಅಶೇಷವಿಶೇಷತೋಽಪಿ ಎನ್ನುವ ಪದಕ್ಕೆ ವಂದ್ಯಂ ಎನ್ನುವದರ ಜೊತೆಗೆ ಹೇಗೆ ಅನ್ವಯವಿದೆಯೋ ಹಾಗೆಯೇ 'ಅಸ್ಯೋದ್ಭವಾದಿದಂ' ಎಂಬ ಮೂಲದಲ್ಲಿರುವ ಪದದೊಂದಿಗೂ ಸಂಬಂಧವಿರುತ್ತದೆ.

**ಅಸ್ಯ ಪ್ರತ್ಯಕ್ಷಾದಿ, ಸಂಬಂಧಮಾತ್ರೇ, ವಿಯದಧಿಕರಣಾದಿ**

**कम्बा –** 'अस्य' इति ॥ **इदंशब्देन प्रत्यक्षसन्निधापितप्रपञ्चमात्रपरामर्शे नारायणस्य सकलजगत्कारणत्वं नोक्तं स्यात् - इत्यतः तं शब्दं प्रमाणसिद्धतया बुद्धिसन्निहितसकलप्रपञ्चपरत्वेन व्याचष्टे –** प्रत्यक्षादीति ॥ **नन्वस्येतीदंशब्द-निर्दिष्टप्रपञ्चस्योद्भवादिदाने 'कर्मणा यमभिप्रैति स सम्प्रदानम्' इति सम्प्रदान-तया 'अस्मै' इति चतुर्थ्या भाव्यमित्यत आह –** सम्बन्धमात्र इति ॥ **नात्र प्रपञ्चस्य सम्प्रदानत्वविवक्षा। किन्तु शेषत्वविवक्षैव। अतः 'षष्ठी शेषे' इति षष्ठ्युपपत्तिरिति भावः।** वियदधिकरणादीति ॥ **तत्र 'अभूत्वाभवनलक्षणः, पराधीनविशेषावाप्तिलक्षणः' इत्यादिरूप-उद्भवस्यावान्तरभेदो वक्ष्यत इति भावः।**

"ಅಸ್ಯ ಉದ್ಭವಾದಿದಂ" ಎಂಬಲ್ಲಿನ ಅಸ್ಯ ಎಂಬ ಪದದಲ್ಲಿ ಸೇರಿರುವ ಇದಂ ಎಂಬ ಶಬ್ದದಿಂದ ಪ್ರತ್ಯಕ್ಷದಿಂದ ಸಿದ್ಧವಾದ ಘಟ ಮೊದಲಾದ ಪ್ರಪಂಚವಸ್ತು ಮಾತ್ರ ಗ್ರಹಿಸಿದಲ್ಲಿ, ನಾರಾಯಣನಿಗೆ ಸಕಲ ವಸ್ತುಗಳನ್ನು ಕುರಿತು ಕಾರಣತ್ವವು ಹೇಳಿದಂತೆ ಆಗುವುದಿಲ್ಲವೆಂದು ಈ ಶಬ್ದವನ್ನು ಪ್ರಮಾಣಗಳಿಂದ ಸಿದ್ಧವಾದ ಬುದ್ಧಿಯಲ್ಲಿ ಸನ್ನಿಹಿತವಾದ ಸಕಲಪ್ರಪಂಚವನ್ನು ಗ್ರಹಿಸಬೇಕು ಎಂಬರ್ಥದಲ್ಲಿ ವ್ಯಾಖ್ಯಾನ ಮಾಡುತ್ತಾರೆ "ಪ್ರತ್ಯಕ್ಷಾದಿ" ಎಂದು. ಅಸ್ಯ ಎಂಬಲ್ಲಿರುವ ಇದಂ ಶಬ್ದದಿಂದ ನಿರ್ದೇಶಿಸಲ್ಪಟ್ಟ ಪ್ರಪಂಚಕ್ಕೆ ಉದ್ಭವಾದಿಗಳನ್ನು ಕೊಡುತ್ತಾನೆ ಎಂಬ ಪಕ್ಷದಲ್ಲಿ "ಕರ್ಮಣಾ ಯಮ್ ಅಭಿಪ್ರೈತಿ ಸಃ ಸಂಪ್ರದಾನಮ್" ದಾನಕ್ಕೆ ಕರ್ಮವಾದ ವಸ್ತುವಿನಿಂದ ಕರ್ತೃವು ಯಾವುದನ್ನು ಹೊಂದಬೇಕು ಎಂಬ ಇಚ್ಛೆಯಿದೆಯೋ ಆ ವಸ್ತುವಿಗೆ ಸಂಪ್ರದಾನಸಂಜ್ಞೆಯು ಬರುತ್ತದೆ - ಎಂಬ ಅರ್ಥವಿರುವ ಈ ಸೂತ್ರದಿಂದ ಇದಂ ಶಬ್ದದ ಅರ್ಥಕ್ಕೆ ಸಂಪ್ರದಾನಸಂಜ್ಞೆಯು ಬಂದು 'ಚತುರ್ಥೀ ಸಂಪ್ರದಾನೇ'

ಎಂಬುದರಿಂದ ಅಸ್ಮೈ ಎಂದು ಚತುರ್ಥೀ ವಿಭಕ್ತ್ಯಂತವಾಗಿ ತಿಳಿಯಬೇಕಲ್ಲವೇ? ಎನ್ನುವುದಕ್ಕೆ ಉತ್ತರ - "ಸಂಬಂಧಮಾತ್ರೇ" ಎಂಬುದಾಗಿ. ಇಲ್ಲಿ ಪ್ರಪಂಚಕ್ಕೆ ಸಂಪ್ರದಾನತ್ವ ಹೇಳುವ ಇಚ್ಛೆಯಿಲ್ಲ. ಹೊರತು ಶೇಷತ್ವ ಹೇಳುವ ಇಚ್ಛೆ ಮಾತ್ರ ಇದೆ. ಆದ್ದರಿಂದ "ಷಷ್ಠೀ ಶೇಷೇ" ಎಂಬ ಸೂತ್ರದಿಂದ ಷಷ್ಠೀ ವಿಭಕ್ತಿಯು ಬಂದಿದೆ ಎಂದು ಅಭಿಪ್ರಾಯ.

ವಿಯದಧಿಕರಣಾದಿ ಎಂಬಲ್ಲಿ ವಿಯದಧಿಕರಣದಲ್ಲಿ "ಅಭೂತ್ವಾಭವನವು, ಪರಾಧೀನವಿಶೇಷಾವಾಪ್ತಿ"ಯು ಹೀಗೆ ಅನೇಕರೀತಿಯಾದ ಉತ್ಪತ್ತಿಯ ಅವಾಂತರ ಪ್ರಭೇದಗಳನ್ನು ಹೇಳುತ್ತಾರೆ ಎಂದು ತಿಳಿಯಬೇಕು.

## ವಿಯದಧಿಕರಣವ್ಯುತ್ಪಾದಿತವಾದ ಅವಾಂತರಧರ್ಮವಿಶೇಷಗಳು

**(ಪರಿಮಳ) — 'ನ ವಿಯದಶ್ರುತೇಃ' 'ಏತೇನ ಮಾತರಿಶ್ವಾ ವ್ಯಾಖ್ಯಾತಃ' 'ಜ್ಞೋಽತ ಏವ' ಇತ್ಯೇತೇಷ್ವಧಿಕರಣೇಷು ನಿತ್ಯಸ್ಯಾಪಿ ಪರಾಧೀನವಿಶೇಷಾವಾಪ್ತಿರೂಪಜನಿರುಚ್ಯತೇ । ಪ್ರಕೃತೇಃ ಜಡಸ್ಯ ಪರಿಣಾಮಃ, ತದಭಿಮಾನಿಶ್ರಿಯಃ ಸಿಸೃಕ್ಷುತ್ವಮ್, ಗಗನಸ್ಯ ಮೂರ್ತಸಂಯೋಗಿತ್ವಮ್, ಮಾತರಿಶ್ವಾದಿಜೀವಸ್ಯ ದೇಹಯೋಗಃ, ಇಂದ್ರಿಯಾಣಾಮುಪಚಯಃ ಇತ್ಯಾದಿರೂಪೇಣ ವ್ಯುತ್ಪಾದ್ಯಾಶೇಷವಿಶೇಷಸಹಿತೋ ಯ ಉದ್ಭವಃ, ತಥಾ ಜೀವಾನಾಂ 'ಪ್ರಕೃತ್ಯೈತಾವತ್ತ್ವಂ ಹಿ' ಇತ್ಯತ್ರೋಕ್ತದಿಶಾ ಅನ್ನಾದಿದಾನೇನ, ಅನ್ಯೇಷಾಂ ನಿತ್ಯಾನಾಮುತ್ತರಕಾಲಸಂಬಂಧಾದಿನಾ ಸ್ಥಿತಿರಿತ್ಯಾದಿ, ತದಾ ಸಂಹೃತಿರಪಿ ಕಾರ್ಯಸ್ಯ ಜಡಸ್ಯ ಧ್ವಂಸಃ, ಜೀವಾನಾಂ ದೇಹಲಯಃ, ಶ್ರಿಯಃ ಅತ್ಯಂತಸಾಮೀಪ್ಯಮ್ ಇತ್ಯಾದಿ, ತದಾದಿದಮಿತ್ಯರ್ಥಃ ।**

ವಿಯಧಿಕರಣಾದಿ-ವ್ಯುತ್ಪಾದ್ಯ-ಸಮಸ್ತ-ಅವಾಂತರಭೇದಸಹಿತ-ಉದ್ಭವಾದಿದಮ್ - ಭಗವಂತ ತನಗಿಂತ ಬೇರೆಯಾದ ಆಯಾಯ ಪ್ರಮಾಣಗಳಿಂದ ಸಿದ್ಧವಾದ ಇಡೀ ಜಗತ್ತಿಗೆ ಉತ್ಪತ್ತ್ಯಾದಿಗಳನ್ನು ಕೊಡುವವನು ಎಂದಿದ್ದಾರೆ. ಆದರೆ ಇದು ತಪ್ಪು. ಏಕೆಂದರೆ, ನಿತ್ಯವಾದ ವಸ್ತುಗಳು ಪ್ರಕೃತಿ, ಜೀವ, ಕಾಲ, ವೇದ ಹೀಗೆ ಅನೇಕಗಳಿವೆ.

ಇದಕ್ಕೆ ಉತ್ತರ -

ವಿಯದಧಿಕರಣ, ಮಾತರಿಶ್ವಾಧಿಕರಣ, ಜ್ಞಾಧಿಕರಣ ಮೊದಲಾದವುಗಳಲ್ಲಿ ನಿತ್ಯವಾದ ಪದಾರ್ಥಗಳಿಗೂ ಒಂದು ರೀತಿಯಾದ ವ್ಯುತ್ಪತ್ತಿ ಇದೆ ಎಂಬುದನ್ನು ತಿಳಿಸಿದ್ದಾರೆ. ನಿತ್ಯವಾದ ಪದಾರ್ಥಕ್ಕೂ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿ ಇದೆ. ಪರ ಅಂದರೆ ಇನ್ನೊಂದರ ಅಧೀನವಾಗಿ ವಿಶೇಷ = ಧರ್ಮವಿಶೇಷವನ್ನು ಅವಾಪ್ತಿ = ಹೊಂದುವುದು. ಪ್ರಕೃತಿಗೆ ಉತ್ಪತ್ತಿ ಎಂದರೆ ಅದರ ಪರಿಣಾಮವೇ. ಇನ್ನು ಪ್ರಕೃತಿ ಅಭಿಮಾನಿಯಾದ ಶ್ರೀ = ಲಕ್ಷ್ಮೀದೇವಿಗೆ ಇಚ್ಛೆಯೇ

ಒಂದು ರೀತಿಯ ಉತ್ಪತ್ತಿ. ಇದು ಪರಾಧೀನವಿಶೇಷಾವಾಪ್ತಿರೂಪವಾದದ್ದು. ಆಕಾಶಕ್ಕೆ ಮೂರ್ತಪದಾರ್ಥಗಳ ಸಂಬಂಧವೆಂಬ ವಿಶೇಷವನ್ನು ಹೊಂದುವುದೇ ಉತ್ಪತ್ತಿ. ಮಾತರಿಶ್ವ ಮೊದಲಾದ ಜೀವರಿಗೆ ದೇಹವಿಶೇಷವನ್ನು ಹೊಂದುವುದೇ ಉತ್ಪತ್ತಿ. ಇಂದ್ರಿಯಗಳಿಗೆ ಉಪಚಯ ಅರ್ಥಾತ್ ವೃದ್ಧಿ. ಈ ರೀತಿ ಅನೇಕ ರೀತಿಯಿಂದ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ನಿತ್ಯವಾದ ಪದಾರ್ಥಗಳಿಗೂ ಸಮರ್ಥಿಸಿದ್ದಾರೆ. ಇನ್ನು ಸ್ಥಿತಿಯಾದರೋ ಜೀವರಿಗೆ ಅನ್ನಮೊದಲಾದವುಗಳನ್ನು ದಾನ ಮಾಡುವುದರ ಮೂಲಕ ಬೇರೆ ವಿದ್ಯಮಾನವಸ್ತುಗಳಿಗೆ ಸ್ಥಿತಿ ಎಂದರೆ ಅವುಗಳಿಗೆ ಉತ್ತರಕಾಲಸಂಬಂಧವನ್ನು ಹೊಂದುವಂತೆ ಮಾಡುವುದು.

ಇನ್ನು ಸಂಹಾರವಾದರೋ ಜಡಕ್ಕೆ ಧ್ವಂಸವೇ ಆಗಿದೆ. ಜೀವರಿಗೆ ದೇಹನಾಶವೇ ಸಂಹಾರ ಎನಿಸುವುದು. ಲಕ್ಷ್ಮೀದೇವಿಗೆ ಭಗವಂತನ ಅತ್ಯಂತ ಸಮೀಪಕ್ಕೆ ಹೋಗುವುದೇ ನಾಶ. ಈ ರೀತಿ ಅನೇಕಪ್ರಭೇದಗಳನ್ನು ತಿಳಿಯಬೇಕು.

## ಅಸ್ಯೋದ್ಭವಾದಿದಂ ಎಂಬಲ್ಲಿ ಷಷ್ಠೀ ಹೇಗೆ?

(ಶ್ರೀನಿಧಿ) — ಏಕಶಬ್ದಃ ಏಕತ್ವವದ್ವಚನಃ । ತಥಾ ಚ ನಿಖಿಲಪೂರ್ಣಗುಣೈರೈಕ್ಯಮಾಪನ್ನೋ ಯಸ್ಯ ದೇಹಃ ಸ ತಥೋಕ್ತಃ । ಏವಂ ಚ ದೇಹಸ್ಯ ಗುಣಾತ್ಮಕತ್ವಮುಕ್ತಂ ಭವತೀತಿ ಚಂದ್ರಿಕೋಕ್ತಾರ್ಥಃ । ನನು 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಇತ್ಯನೇನ ದಾನಕರ್ಮತ್ವಾಭಿಮತೇ ಸಂಪ್ರದಾನಸಂಜ್ಞಾವಿಧಾನಾತ್ ಇದಂಶಬ್ದಸ್ಯ, ಸಂಪ್ರದಾನಸಂಜ್ಞಾಯಾಂ 'ಚತುರ್ಥೀ ಸಂಪ್ರದಾನೇ' ಇತಿ ಚತುರ್ಥ್ಯಾ ಭಾವ್ಯಮ್ । ತಥಾ ಚಾಸ್ಮೈ ಇತಿ ಸ್ಯಾತ್ । 'ಅಸ್ಯ' ಇತಿ ಷಷ್ಠೀ ಕಥಮಿತ್ಯತ ಆಹ – ಅಸ್ಯೇತಿ ॥ 'ಸಂಬಂಧಮಾತ್ರೇ ಷಷ್ಠೀ' ಇತಿ ಸಂಪ್ರದಾನಸಂಪ್ರಯೋಜಕತ್ವಾಕಾರೇಣ ಸಂಬಂಧೋ ನ ವಿವಕ್ಷಿತ ಇತಿ ಭಾವಃ । ಅಥವಾ ಅಸ್ಯೇತಿ ಷಷ್ಠೀ ಕಿಂ ಜನ್ಯಜನಕಭಾವೇ ಉತ ರಕ್ಷ್ಯರಕ್ಷಕಭಾವಾದೌ । ನಾದ್ಯಃ, ಆದಿಪದಗೃಹೀತಸ್ಥಿತ್ಯಾದಿದಮ್ ಇತ್ಯನೇನಾನ್ವಯಾಪತ್ತೇಃ । ನ ದ್ವಿತೀಯಃ । ಉದ್ಭವಪದೇನಾನ್ವಯಪ್ರಸಂಗಾತ್ । ಅಥೋಚ್ಯೇತ — 'ಅಸ್ಯೋದ್ಭವಾದಿದಂ' 'ಅಸ್ಯ ಸ್ಥಿತ್ಯಾದಿದಂ' ಇತಿ ಪ್ರತ್ಯೇಕಂ ಬುದ್ಧ್ಯಾ ವಿವೇಕೇನ ಅನ್ವಯ ಇತಿ । ತನ್ನ । ಸ್ಥಿತ್ಯಾದಿಸಪ್ತಾನಾಂ ಏಕೇನೈವಾದಿಶಬ್ದೇನ ಗೃಹೀತತ್ವೇನ ಪ್ರತ್ಯೇಕಂ ಸಂಬಂಧಾನುಪಪತ್ತೇರಿತ್ಯತ ಆಹ — ಅಸ್ಯೇತಿ ॥ ಸಂಬಂಧಮಾತ್ರ ಇತಿ ॥ ಸಂಬಂಧ ಇತಿ ಸಂಬಂಧಃ ಸಾಮಾನ್ಯಾಕಾರೇಣೈವ ವಿವಕ್ಷಿತಃ । ನ ತು ವಿಶೇಷಾಕಾರೇಣೇತಿ ಭಾವಃ ।

ನಿಖಿಲಪೂರ್ಣಗುಣೈಕದೇಹಂ - ಏಕಶಬ್ದಕ್ಕೆ ಏಕತ್ವವತ್ ಎಂದರ್ಥ. ಏಕ ಶಬ್ದಕ್ಕೆ ಎಂಟು ಅರ್ಥಗಳಿವೆ.

(ಏಕೋಽನ್ಯಾರ್ಥೇ ಪ್ರಧಾನೇ ಚ ಪ್ರಥಮೇ ಕೇವಲೇ ತಥಾ ।
ಸಾಧಾರಣೇ ಸಮಾನೇಽಲ್ಪೇ ಸಂಖ್ಯಾಯಾಂ ಚ ಪ್ರಯುಜ್ಯತೇ ॥ – ವಾಕ್ಯಾರ್ಥಚಂದ್ರಿಕಾ)

ಅದರಲ್ಲಿ ಒಂದು ಎಂಬರ್ಥವು ಅಭೇದದಲ್ಲಿ ಪರ್ಯವಸಾನವಾಗುವುದು ಎಂದರ್ಥ. ಹಾಗಾಗಿ ಸಕಲಪೂರ್ಣಗುಣಗಳಿಂದ ಏಕ ಎಂದರೆ ಐಕ್ಯವನ್ನು ಹೊಂದಿದ ದೇಹ ಯಾರಿಗೆ ಇದೆಯೋ ಅವನು. ಈ ರೀತಿಯಾಗಿ ದೇಹವು ಗುಣಾತ್ಮಕವಾಗಿದೆ ಎಂದು ಚಂದ್ರಿಕಾದಲ್ಲಿ ಹೇಳಿದ ಅರ್ಥ.

ಅಸ್ಯೋದ್ಭವಾದಿದಮ್ – ಅಸ್ಯ ಎಂಬ ಪ್ರಯೋಗ ಮಾಡದೆ ಅಸ್ಮೈ ಎಂದು ಪ್ರಯೋಗ ಮಾಡಬೇಕು ಎಂದು ಆಕ್ಷೇಪ. ಏಕೆಂದರೆ 'ಕರ್ಮಣಾ ಯಂ ಅಭಿಪ್ರೈತಿ ಸ ಸಂಪ್ರದಾನಮ್' ಎಂಬ ಪಾಣಿನಿಸೂತ್ರದಿಂದ ದಾನಕ್ಕೆ ಯಾವುದು ಕರ್ಮವಾಗಿದೆಯೋ ಅಂತಹ ಆ ಕರ್ಮಕ್ಕೆ ಯಾವುದು ಉದ್ದೇಶ್ಯವು ಅದನ್ನು ಸಂಪ್ರದಾನವೆನ್ನುತ್ತಾರೆ. ಈ ಅರ್ಥದಲ್ಲಿ ಪ್ರಕೃತ ದಾನಕ್ಕೆ ಕರ್ಮವಾದ ಉದ್ಭವಾದಿಗಳಿಗೆ ಉದ್ದೇಶ್ಯವಾದದ್ದು ಜಗತ್ತು. ಅದನ್ನು ಹೇಳುವ ಶಬ್ದ ಇದಂ ಶಬ್ದವು. ಹಾಗಾಗಿ 'ಚತುರ್ಥೀ ಸಂಪ್ರದಾನೇ' ಎಂಬ ಸೂತ್ರದಿಂದ ಅಸ್ಮೈ ಎಂದು ಚತುರ್ಥೀ ಬರಲಿ. ಇದಕ್ಕೆ ಉತ್ತರವಾಗಿ 'ಅಸ್ಯ ಇತಿ ಸಂಬಂಧಮಾತ್ರೇ ಷಷ್ಠೀ' ಎಂದು ಹೇಳಿದ್ದಾರೆ. ಇದರ ತಾತ್ಪರ್ಯ - ಸಂಬಂಧ ಎನ್ನುವುದು ಇಲ್ಲಿ ಸಂಪ್ರದಾನಕ್ಕೆ ಪ್ರಯೋಜಕವಾದ ಆಕಾರದಿಂದ ವಿವಕ್ಷಿತವಲ್ಲ. ಅರ್ಥಾತ್ ಸಂಪ್ರದಾನತ್ವೇನ ರೂಪೇಣ ಸಂಬಂಧವು ಇಲ್ಲಿ ತೋರುತ್ತಿಲ್ಲ. ಹೊರತು ಸಂಬಂಧತ್ವೇನ ರೂಪೇಣ ತೋರುತ್ತಿದೆ.

ಅಥವಾ - ಅಸ್ಯ ಎಂಬ ಪದದಲ್ಲಿರುವ ಷಷ್ಠೀ ವಿಭಕ್ತಿಗೆ ಏನು ಅರ್ಥ? ಜನ್ಯಜನಕಭಾವವೋ ರಕ್ಷ್ಯ-ರಕ್ಷಕಭಾವವೋ? ಮೊದಲನೆಯ ಕಲ್ಪ ಸರಿಯಿಲ್ಲ. ಏಕೆಂದರೆ ಸ್ಥಿತ್ಯಾದಿಗಳಿಗೆ ಜನಕನಾಗಿದ್ದಾನೆ ಎಂಬ ಅರ್ಥವು ಅನನ್ವಿತವಾಗುತ್ತದೆ. ಕೇವಲ ವಸ್ತುವಿನ ಉತ್ಪತ್ತಿಗೆ ಜನಕ ಎಂಬುವುದು ಉಚಿತವಾದ್ದರಿಂದ. ಇನ್ನು ಎರಡನೆಯ ಕಲ್ಪವು ಸರಿಯಲ್ಲ. ಉದ್ಭವ ಎಂಬ ಪದದೊಂದಿಗೆ ಅನ್ವಯವಾಗದೇ ಇರುವ ಪ್ರಸಂಗ ಬಂದೀತು। ಏಕೆಂದರೆ ಉತ್ಪತ್ತಿಗೆ ರಕ್ಷಕ ಎಂಬುದು ಇಲ್ಲಿ ಬೇಡವಾದ ಅರ್ಥವಾದ್ದರಿಂದ.

ಅದಕ್ಕಾಗಿ ಅಸ್ಯೋದ್ಭವಾದಿದಂ ಎಂಬ ಪದದಲ್ಲಿ ಪ್ರತ್ಯೇಕವಾಗಿ ಹೀಗೆ ಬುದ್ಧಿಯಿಂದ ವಿವೇಕ ಮಾಡಿಕೊಳ್ಳೋಣ. 'ಅಸ್ಯ ಉದ್ಭವಾದಿದಂ' ಹಾಗೂ 'ಅಸ್ಯ ಸ್ಥಿತ್ಯಾದಿದಂ' ಎಂದು. ಒಂದು ಕಡೆ ಷಷ್ಠೀ ವಿಭಕ್ತಿಗೆ ಜನ್ಯಜನಕಭಾವ ಎಂದರ್ಥ. ಇನ್ನೊಂದು ಕಡೆ ರಕ್ಷ್ಯ-ರಕ್ಷಕಭಾವ ಎಂದರ್ಥ. ಆದರೆ ಇದೂ ಸರಿಯಲ್ಲ. ಸ್ಥಿತಿ ಮೊದಲಾದ ಏಳನ್ನು ಒಂದೇ ಆದಿಶಬ್ದದಿಂದ ಗ್ರಹಿಸಿರುವ ಕಾರಣ ಪ್ರತ್ಯೇಕವಾಗಿ ಸ್ಥಿತಿ, ನಿಯಮ ಮುಂತಾದವುಗಳೊಂದಿಗೆ ಅನ್ವಯಿಸಲು ಅಸಾಧ್ಯ. ಇದಕ್ಕೆ ಉತ್ತರ – ಇಲ್ಲಿ ಜನ್ಯ-ಜನಕ ಭಾವವಾಗಲೀ ರಕ್ಷ್ಯ-ರಕ್ಷಕಭಾವವಾಗಲೀ ವಿಶೇಷಾಕಾರದಿಂದ ಅರ್ಥಾತ್

ಜನ್ಯತ್ವೇನ ಜನಕತ್ವೇನ ಅಥವಾ ರಕ್ಷ್ಯತ್ವೇನ ರಕ್ಷಕತ್ವೇನ ವಿವಕ್ಷಿತವಲ್ಲ. ಹೊರತು ಕೇವಲ ಸಂಬಂಧತ್ವೇನ ವಿವಕ್ಷಿತ.

## ಅಸ್ಯೋದ್ಭವಾದಿದತ್ವ ಭಗವಂತನಿಗೆ ವಿಶೇಷಣವಾಗಲು ಸಾಧ್ಯವಿಲ್ಲ

(ಆನಂದ) — ನನು 'ಅಸ್ಯೋದ್ಭವಾದಿದಮ್' ಇತ್ಯಯುಕ್ತಮ್ । ಅಸ್ಯೇತಿ ಇದಂಶಬ್ದಸ್ಯ ಪ್ರತ್ಯಕ್ಷ-ವಾಚಿತ್ವೇನ ಜಗತಶ್ಚ ಅಪ್ರತ್ಯಕ್ಷತ್ವೇನ ತತ್ರ ಇದಂಶಬ್ದಪ್ರಯೋಗಾಸಂಭವಾತ್ । ಯದಿ ಬುದ್ಧಿಸನ್ನಿಹತತ್ವೇನ ತತ್ರ 'ಅಸ್ಯ' ಇತಿ ಪ್ರಯೋಗಸ್ತದಾ ಸ್ವಸ್ಯಾಪಿ ಜಗನ್ಮಧ್ಯೇ ಪ್ರವೇಶೇನ ಸ್ವಸ್ಯಾಪಿ ಸ್ವಯಮುದ್ಭವಾದಿದ ಇತಿ ಪ್ರತೀಯತೇ । ತಚ್ಚ ಪ್ರಮಾಣವಿರುದ್ಧಮ್ । 'ಉದ್ಭವಾದಿದಮ್' ಇತ್ಯತ್ರ ಅತದ್ಗುಣಸಂವಿಜ್ಞಾನಬಹುವ್ರೀಹಿಣಾ ಸ್ಥಿತಿಮಾತ್ರಕರ್ತೃತ್ವಂ ಪ್ರತೀಯೇತ । ತಚ್ಚ 'ಉತ್ಪತ್ತಿ-ಸ್ಥಿತಿ' ಇತ್ಯಾದಿಪ್ರಮಾಣವಿರುದ್ಧಮಿತ್ಯತೋ ವ್ಯಾಚಷ್ಟೇ – ಅಸ್ಯೇತಿ ॥

ಜನ್ಮಾದ್ಯಷ್ಟಕಂ ಸರ್ವಸ್ಯ ದದಾತೀತ್ಯುಕ್ತೇ ಶ್ರೀಮುಕ್ತಾದೇರಪಿ ಅಜ್ಞಾನಾದಿ ದದಾತೀತಿ ಸ್ಯಾತ್ । ತಚ್ಚಾಯುಕ್ತಮ್, ಪ್ರಮಾಣವಿರೋಧಾದಿತ್ಯತ ಉಕ್ತಮ್ — ಯಥಾಸಂಭವಮಿತಿ ॥ ಯಸ್ಯ ಯಾವತ್ಪ್ರಮಾಣಸಿದ್ಧಂ ತಸ್ಯ ತಾವದ್ದದಾತೀತಿ ನ ಪ್ರಮಾಣವಿರೋಧಃ ।

ಅಸ್ಯೋದ್ಭವಾದಿದಮ್ - ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಅಸ್ಯ ಎಂಬಲ್ಲಿರುವ ಇದಮ್ ಎಂಬ ಶಬ್ದದಿಂದ ಸಕಲ ಜಗತ್ತನ್ನು ಗ್ರಹಿಸಲು ಬರುವುದಿಲ್ಲ. ಇದಂ ಎಂಬ ಶಬ್ದವು ಪ್ರತ್ಯಕ್ಷವಾದ ವಸ್ತುವನ್ನು ಹೇಳುವುದರಿಂದ.

ಇನ್ನು ಅಸ್ಯ ಎಂಬುವುದಕ್ಕೆ ಬುದ್ಧಿಯಲ್ಲಿ ಸನ್ನಿಹತವಾದ ವಸ್ತುವನ್ನು ಹೇಳುವುದು ಎಂದರೆ ಆಗ ಅಪ್ರತ್ಯಕ್ಷವಾದ ಜಗತ್ತನ್ನು ಗ್ರಹಿಸಲು ಬರುವುದರಿಂದ ಹಿಂದೆ ಹೇಳಿದ ದೋಷ ಯದ್ಯಪಿ ಇಲ್ಲ.

ಆದರೆ ಬುದ್ಧಿಸನ್ನಿಹಿತನಾದವನು ಜಗತ್ತಿನ ಮಧ್ಯ ಪ್ರವೇಶಿಸಿದ ಬ್ರಹ್ಮನೂ ಆಗಲು ಸಾಧ್ಯವಿರುವುದರಿಂದ 'ಸ್ವಸ್ಯಾಪಿ ಸ್ವಯಮುದ್ಭವಾದಿದಃ' ಎಂದು ತೋರುವುದು. ಅರ್ಥಾತ್ ತನಗೆ ತಾನೇ ಉತ್ಪತ್ತಿ ಸ್ಥಿತಿ ಮೊದಲಾದವುಗಳನ್ನು ಕೊಡುವವನು ಎಂದರ್ಥ ತೋರೀತು. ಇದು ಪ್ರಮಾಣವಿರುದ್ಧ. ಯಾವ ವಸ್ತುವೂ ತನಗೆ ತಾನೇ ಕಾರಣವೆಂದಾಗದು.

ಅಷ್ಟಲ್ಲದೇ ಉದ್ಭವಾದಿದಂ ಎಂಬಲ್ಲಿ ಅತದ್ಗುಣಸಂವಿಜ್ಞಾನಬಹುವ್ರೀಹಿಯನ್ನು ಅಂದರೆ ಬಹುವ್ರೀಹಿಸಮಾಸದಲ್ಲಿ ಸೇರಿರುವ ಪದಾರ್ಥಗಳನ್ನು ಗ್ರಹಿಸದೇ ಅನ್ಯಪದಾರ್ಥವನ್ನು ಮಾತ್ರ ಗ್ರಹಿಸಿದಲ್ಲಿ ಕೇವಲ ಸ್ಥಿತಿಗೆ ಕರ್ತೃ ಎಂದಿಷ್ಟೇ ತೋರುವುದು. ತೋರಲಿ ಎನ್ನಲು ಬರುವುದಿಲ್ಲ. ಏಕೆಂದರೆ,

## ಹರಿರೇಕರಾಟ್

ಉತ್ಪತ್ತಿಸ್ಥಿತಿಸಂಹಾರಾಃ ನಿಯತಿರ್ಜ್ಞಾನಮಾವೃತಿಃ ।
ಬಂಧಮೋಕ್ಷೌ ಚ ಪುರುಷಾತ್ ಯಸ್ಮಾತ್ ಸ ಹರಿರೇಕರಾಟ್ ॥

(ಸ್ಕಾಂದೇ) ವಿಷ್ಣುತತ್ತ್ವವಿನಿರ್ಣಯ.

– (ಯಾವ ಗುಣಪರಿಪೂರ್ಣನಾದ ಭಗವಂತನಿಂದ ಸೃಷ್ಟಿಸ್ಥಿತಿಸಂಹಾರಗಳು ನಿಯಮನವು ಜ್ಞಾನವು, ಅಜ್ಞಾನವು, ಬಂಧಮೋಕ್ಷಗಳು ಉಂಟಾಗುತ್ತವೆಯೋ ಅಂತಹ ಹರಿಯೊಬ್ಬನೇ ಸ್ವತಂತ್ರನು).

ಮುಂತಾದ ಪ್ರಮಾಣಗಳ ವಿರೋಧ ಬರುವುದಾದ್ದರಿಂದ. ಇವೆಲ್ಲ ಆಕ್ಷೇಪಗಳಿಗೆ ಉತ್ತರವಾಗಿ 'ಅಸ್ಯ ಪ್ರತ್ಯಕ್ಷಾದಿಪ್ರಮಾಣಸಿದ್ಧತಯಾ ಬುದ್ಧಿಸನ್ನಿಹತಸ್ಯ ಸ್ವವ್ಯತಿರಿಕ್ತಪ್ರಪಂಚಸ್ಯ' ... ಎಂಬ ಸುಧಾಪಂಕ್ತಿಯು ಹೊರಟಿದೆ.

"ಜನ್ಮಾದಿ ಎಂಟನ್ನು ಎಲ್ಲರಿಗೂ ಕೊಡುತ್ತಾನೆ" ಎಂದರೆ ಶ್ರೀದೇವಿ, ಮುಕ್ತರು ಮುಂತಾದವರಿಗೆ ಅಜ್ಞಾನಾದಿಗಳನ್ನು ಕೊಡುತ್ತಾನೆಂಬ ಅರ್ಥ ತೋರುವುದು. ಇದು ಸರಿಯಲ್ಲ. ಪ್ರಮಾಣವಿರೋಧ-ಬರುವುದರಿಂದ - ಎಂದರೆ ಅದಕ್ಕೆ ಹೇಳುತ್ತಾರೆ - "ಯಥಾಸಂಭವಮ್" ಎಂಬುದಾಗಿ. ಇದರ ಅಭಿಪ್ರಾಯ ಹೀಗೆ - ಯಾರಿಗೆ ಎಷ್ಟು ಪ್ರಮಾಣಸಿದ್ಧವೋ ಅಷ್ಟನ್ನೇ ಅವರಿಗೆ ಕೊಡುತ್ತಾನೆ ಎಂಬುದು ಜನ್ಮಾದಿ ಎಂಟನ್ನು ಎಲ್ಲರಿಗೂ ಕೊಡುತ್ತಾನೆ ಎಂಬುದರ ಅರ್ಥ.

* – आवृतिरज्ञानम् । एकराट् स्वतन्त्रः । विरिञ्चादिषु अतिव्याप्तिपरिहारार्थमेतत् । (टीका)

* – विरिञ्चादिष्विति ॥ उत्पत्तिकर्तृत्वादेः प्रत्येकं लक्षणत्वात् उत्पत्तिकर्तृत्वस्य विरिञ्चे संहारकर्तृत्वस्य रुद्रे मोक्षदातृत्वादेर्वाय्वादौ चातिव्याप्तिपरिहारार्थं "एकराट्' इत्युक्तमित्यर्थः । (विजयीन्द्रतीर्थाः)

– ಉತ್ಪತ್ತಿಸ್ಥಿತಿ ಎಂಬ ವಾಕ್ಯದಲ್ಲಿ ಏಕರಾಟ್ ಎಂಬ ಪದಕ್ಕೆ ಕೃತ್ಯವನ್ನು ಹೇಳುತ್ತಿದ್ದಾರೆ. ಏಕರಾಟ್ ಎಂದರೆ ಸ್ವತಂತ್ರ ಎಂದರ್ಥ. ಈ ಪದವಿಲ್ಲದೇ ಇದ್ದರೆ ಆಗ ಬ್ರಹ್ಮಮೊದಲಾದವರಲ್ಲಿ ಅತಿವ್ಯಾಪ್ತಿ ಬರುತ್ತಿತ್ತು. ಅದು ಹೀಗೆ – ಬ್ರಹ್ಮನು ಜಗತ್ತಿನ ಉತ್ಪತ್ತಿಯನ್ನು ಮಾಡುವನು. ಹಾಗಾಗಿ ಅವನಲ್ಲಿ ಉತ್ಪತ್ತಿಕರ್ತೃತ್ವ ಎನ್ನುವ ಭಗವಂತನ ಲಕ್ಷಣಕ್ಕೆ ಅತಿವ್ಯಾಪ್ತಿ. ಹೀಗೆಯೇ ಸಂಹಾರಕರ್ತೃತ್ವ ರುದ್ರನಲ್ಲಿ, ಮೋಕ್ಷದಾತೃತ್ವ ವಾಯುವಿನಲ್ಲಿ ಇದೆ ಎಂದು ಅತಿವ್ಯಾಪ್ತಿ. ಇದರ ಪರಿಹಾರಕ್ಕೆ ಏಕರಾಟ್ ಎಂಬ ಪದ. ಇವರೆಲ್ಲರೂ ಅಸ್ವತಂತ್ರರಾದ್ದರಿಂದ ಅತಿವ್ಯಾಪ್ತಿ ಇಲ್ಲ ಎಂದಭಿಪ್ರಾಯ. ಸೃಷ್ಟ್ಯಾದಿ ಎಲ್ಲವನ್ನೂ ಭಗವಂತನ ಅಧೀನರಾಗಿಯೇ ಮಾಡುತ್ತಾರೆ.

## ಅಸ್ಯೇತಿ ಸಂಬಂಧಮಾತ್ರೇ ಷಷ್ಠೀ

(ಆನಂದ) — ನನು 'ಅಸ್ಯೋದ್ಭವಾದಿದಮ್' ಇತ್ಯತ್ರ ಸಮಾಸಾಭಾವೋ ನ ಯುಕ್ತಃ । 'ಅಸ್ಯೇ'ತಿ ಷಷ್ಠ್ಯಾಃ ಕೃದ್ಯೋಗಲಕ್ಷಣವತ್ತ್ವಾತ್ ಕೃದ್ಯೋಗಲಕ್ಷಣಾ ಷಷ್ಠೀ ನ ಸಮಸ್ಯತ ಇತಿ ವಚನಾದೇತದ್ ಉದ್ಭವಾದಿದಮಿತಿ ಸ್ಯಾದಿತ್ಯತ ಆಹ — **ಅಸ್ಯೇತಿ ॥ ಸಂಬಂಧಮಾತ್ರೇ ಷಷ್ಠೀತಿ ॥** ನೇಯಂ ಕೃದ್ಯೋಗಲಕ್ಷಣಾಷಷ್ಠೀ । ಕಿಂತು ಸಂಬಂಧಸಾಮಾನ್ಯೇ ಷಷ್ಠೀ । ತಥಾ ಚ ನಾನೇನ ಸಮಾಸ-ಪ್ರಾಪ್ತಿಃ । ನ ಚೈವಮಪಿ ಷಷ್ಠೀತಿ ಸೂತ್ರೇಣ ಸಮಾಸಪ್ರಾಪ್ತಿರಿತಿ ವಾಚ್ಯಮ್ । ಮಹಾವಿಭಾಷಯಾ ವಾಕ್ಯತ್ವಸ್ಯ ಸಂಭವಾತ್ ।

ಯದ್ವಾ 'ರುದ್ರಾಯ ಗಾಂ ದದಾತಿ' ಇತ್ಯತ್ರ ದಾನಕರ್ಮಣಾ ಅಭಿಪ್ರೇಯಮಾಣತ್ವೇನ 'ರುದ್ರಾಯ' ಇತ್ಯತ್ರ ಚತುರ್ಥೀವತ್ ಪ್ರಕೃತೇಽಪಿ ದಾನಕರ್ಮಣಾ ಉದ್ಭವಾದಿನಾ ಜಗತೋ ಅಭಿಪ್ರೇಯ-ಮಾಣತ್ವಾದ್ 'ಅಸ್ಯ' ಇತ್ಯತ್ರ ಚತುರ್ಥ್ಯಾ ಭವಿತವ್ಯಮ್ ಇತ್ಯತ್ರಾಹ — **ಅಸ್ಯೇತಿ ॥** ತಥಾಚ 'ವಿವಕ್ಷಾತಃ ಕಾರಕಾಣಿ ಭವಂತಿ' ಇತಿ ನ್ಯಾಯಾತ್ ಸಂಪ್ರದಾನತ್ವಸ್ಯಾವಿವಕ್ಷಿತತ್ವಾತ್ ಸಂಬಂಧ-ಸಾಮಾನ್ಯೇ ಷಷ್ಠೀತ್ವಸ್ಯಾಭಿಪ್ರೇತತ್ವಾತ್ ಚತುರ್ಥೀಪ್ರಸಂಗ ಇತಿ ಭಾವಃ । ನನು 'ಕರ್ತೃ-ಕರ್ಮಣೋಃ ಕೃತಿ' ಇತಿ ಕೃತ್ಪ್ರಯೋಗೇ ಕರ್ತರಿ ಕರ್ಮಣಿ ಷಷ್ಠೀ ಸ್ಯಾದಿತಿ ಷಷ್ಠೀವಿಧಾನಾತ್ ಅಸ್ಯೇತಿ ಷಷ್ಠೀ ಕರ್ತರಿ ವಾ ಕರ್ಮಣಿ ವಾ । ನಾದ್ಯಃ । ತಥಾ ಸತಿ ಉದ್ಭವಂ ಪ್ರತಿ ಜಗತಃ ಕರ್ತೃತ್ವಾಪತ್ತಿತಃ ಪರಮಾತ್ಮನಸ್ತದಭಾವಾಪತ್ತೇಃ । ನ ದ್ವಿತೀಯಃ । 'ಉದ್ಭವಾದಿದಮ್' ಇತಿ ಕೃತ್ಪ್ರತ್ಯಯಂ ಪ್ರತಿ ಉದ್ಭವಾದೇರೇವ ಕರ್ಮತ್ವೇನ ಜಗತಃ ಕರ್ಮತ್ವಾಸಂಭವಾದಿತ್ಯತ ಆಹ — **ಅಸ್ಯೇತಿ ॥ ಸಂಬಂಧಮಾತ್ರೇ ಷಷ್ಠೀತಿ ॥**

ಅಸ್ಯೋದ್ಭವಾದಿದಂ - ಅಸ್ಯ ಎಂಬಲ್ಲಿ ಷಷ್ಠೀವಿಭಕ್ತಿ ಇದೆ. ಇದು 'ಕರ್ತೃಕರ್ಮಣೋಃ ಕೃತಿ' ಎಂಬ ಸೂತ್ರದಿಂದ ಕರ್ತ್ರರ್ಥದಲ್ಲಿ ಅಥವಾ ಕರ್ಮಾರ್ಥದಲ್ಲಿ ಕೃತ್‌ಪ್ರತ್ಯಯದ ಸಂಬಂಧವಿದ್ದಾಗ ಬರುತ್ತದೆ ಎಂದು ಹೇಳಿದ್ದರಿಂದ ಇಲ್ಲಿಯೂ "ಉದ್ಭವಾದಿದಂ" ಎಂಬಲ್ಲಿರುವ ಕ ಎಂಬ ಕೃತ್‌ಪ್ರತ್ಯಯದ ಯೋಗವಿರುವುದರಿಂದ ಅಸ್ಯ ಎಂಬಲ್ಲಿನ ಷಷ್ಠೀವಿಭಕ್ತಿಗೆ ಕರ್ತೃ ಅಥವಾ ಕರ್ಮ ಎಂಬರ್ಥ ಹೇಳಬೇಕು. ಆದರೆ ಕರ್ತೃ ಎಂಬರ್ಥ ಹೇಳಲು ಅಸಾಧ್ಯ. ಆಗ ಉದ್ಭವಾದಿಗಳನ್ನು ಕುರಿತು ಜಗತ್ತು ಕರ್ತೃ ಎಂದಾದೀತು ಹೊರತು ಪರಮಾತ್ಮನಲ್ಲ. ಏಕೆಂದರೆ, ಇದಂ ಶಬ್ದದ ಅರ್ಥ ಜಗತ್ತು. ಅದನ್ನು ಹೇಳುವ ಇದಂಶಬ್ದದ ಮುಂದಿರುವ ಷಷ್ಠೀ ವಿಭಕ್ತಿಗೆ ಕರ್ತೃ ಎಂದರ್ಥ. ಹಾಗಾಗಿ ಜಗತ್ತು ಉದ್ಭವಾದಿಗಳನ್ನು ಕೊಡುತ್ತದೆ ಎಂಬರ್ಥ ಬಂದೀತು. ಇನ್ನು ಕರ್ಮ ಎಂದು ಷಷ್ಠೀ ವಿಭಕ್ತಿಗೆ ಅರ್ಥ ಹೇಳಿದರೆ ಆಗ ಕೃತ್‌ಪ್ರತ್ಯಯವನ್ನು ಕುರಿತು ಉದ್ಭವಾದಿಗಳೇ ಕರ್ಮವಾದ್ದರಿಂದ

ಜಗತ್ತು ಕರ್ಮವೇ ಆಗಬಾರದಿತ್ತು ಎಂದಾದೀತು. ಹೀಗೆ ಎರಡೂ ಕಲ್ಪಗಳು ಸರಿಯಲ್ಲ. ಹಾಗಾಗಿ 'ಅಸ್ಯ' ಎಂಬ ಷಷ್ಠೀಪ್ರಯೋಗವು ಹೇಗೆ ಉಚಿತ? ಎಂಬ ಪ್ರಶ್ನೆಯು ಬರುವುದು.

ಇದಕ್ಕೆ ಉತ್ತರವಾಗಿ 'ಅಸ್ಯ ಇತಿ - ಸಂಬಂಧಮಾತ್ರೇ ಷಷ್ಠೀ' ಎಂಬ ಸುಧಾಪಂಕ್ತಿಯು ಹೊರಟಿದೆ. ಇದರ ಭಾವ - ಇಲ್ಲಿ ಕರ್ತೃತ್ವವಾಗಲೀ ಕರ್ಮತ್ವವಾಗಲೀ ತೋರುತ್ತಿಲ್ಲ. ಹೊರತು ಕೇವಲ ಸಂಬಂಧತ್ವೇನ ಸಂಬಂಧವು ತೋರುತ್ತಿದೆ.

## ಸಂಬಂಧಮಾತ್ರೇ ಷಷ್ಠೀ ಎಂಬಲ್ಲಿನ ಮಾತ್ರಪದ ವೈಯರ್ಥ್ಯಶಂಕೆ ಹಾಗೂ ಪರಿಹಾರ

(ಆನಂದ) — ನ ಚ ಮಾತ್ರಶಬ್ದೋಽನರ್ಥಕಃ, 'ಸಂಬಂಧೇ ಷಷ್ಠೀ' ಇತ್ಯೇತಾವದೇವಾಸ್ತು ಇತಿ ವಾಚ್ಯಮ್ । ತಥಾ ಸತಿ ಸಂಬಂಧವಿಶೇಷಮಾದಾಯ ಜಗತ್ಕರ್ಮಕೋದ್ಭವದಾತೃತ್ವಮೇವ ಸ್ಯಾನ್ನ ತು ಜಗತ್ಕರ್ತೃಕೋದ್ಭವಾದಿದಾತೃತ್ವಮ್ । ಸಂಬಂಧಮಾತ್ರ ಇತ್ಯುಕ್ತೇಃ ಜಗತ್ಕರ್ಮಕೋ ವಾ ಜಗತ್ಕರ್ತೃಕೋ ವಾ ಯಾವಜ್ಜಗತ್ಸಂಬಂಧಿಉದ್ಭವಃ ತಾವತಃ ಸರ್ವಸ್ಯಾಪಿ ದಾತೃತ್ವಂ ಸಿದ್ಧ್ಯತೀತಿ ಯುಕ್ತಂ ತದ್ಗ್ರಹಣಮಿತಿ ಭಾವಃ ।

ಅಸ್ಯ ಇತಿ ಸಂಬಂಧಮಾತ್ರೇ ಷಷ್ಠೀ - ಇಲ್ಲಿ ಮಾತ್ರ ಎಂಬ ಶಬ್ದವು ಬೇಕಾಗಿಲ್ಲ. ಪ್ರಯೋಜನವಿಲ್ಲ-ವಾದ್ದರಿಂದ. ಕೇವಲ 'ಅಸ್ಯ ಇತಿ ಸಂಬಂಧೇ ಷಷ್ಠೀ' ಎನ್ನುವುದೇ ಹಿಂದಿನ ಆಕ್ಷೇಪಗಳಿಗೆ ಉತ್ತರ-ವಾಗಬಹುದಾದ್ದರಿಂದ. ಹೀಗೆ ಹೇಳಿದರೆ ಸಂಬಂಧವಿಶೇಷವನ್ನು ಅಂದರೆ ಕ್ರಿಯಾಕರ್ಮಭಾವ, ಅಥವಾ ಕ್ರಿಯಾಕರ್ತೃಭಾವವನ್ನು ಸ್ವೀಕರಿಸಿ ದೋಷಬರುತ್ತಿತ್ತು. ಅದು ಹೀಗೆ - ಸಂಬಂಧಪದೇನ ಕ್ರಿಯಾಕರ್ಮಭಾವವನ್ನು ಸ್ವೀಕರಿಸಿದಲ್ಲಿ ಜಗತ್ಕರ್ಮಕಉತ್ಪತ್ತಿ ಮೊದಲಾದವುಗಳನ್ನು ನೀಡುವವನು ಎಂದರ್ಥ ಬಂದೀತು. ಹೊರತು ಜಗತ್ಕರ್ತೃಕಉದ್ಭವಾದಿಗಳನ್ನು ನೀಡುವವನು ಎಂಬರ್ಥ ಬರುವುದಿಲ್ಲ. ಅದಕ್ಕಾಗಿ 'ಸಂಬಂಧಮಾತ್ರೇ' ಎಂದರೆ ಮಾತ್ರಶಬ್ದಕ್ಕೆ ಸಕಲ ಎಂಬ ಅರ್ಥ-ವಿರುವುದರಿಂದ ಎಲ್ಲ ರೀತಿಯಾದ ಅರ್ಥಾತ್ ಜಗತ್ಕರ್ಮಕವಾದ ಅಥವಾ ಜಗತ್ಕರ್ತೃಕವಾದ ಏನೇನು ಜಗತ್ತಿಗೆ ಸಂಬಂಧಪಟ್ಟ ಉದ್ಭವ ಮುಂತಾದವುಗಳಿವೆಯೋ ಅದೆಲ್ಲವುಗಳನ್ನೂ ಕೊಡುವವನು ಎಂಬರ್ಥ ಸಿದ್ಧಿಸುವುದು ಎಂದಭಿಪ್ರಾಯ.

## ಸಾಕ್ಷಾತ್ಪರಂಪರಾಸಾಧಾರಣಸಂಬಂಧೇನ ಜಗತ್ಕರ್ಮಕಉದ್ಭವಾದಿದಂ ಎಂಬರ್ಥ

(ಆನಂದ) — ಯದ್ವಾ - ಕರ್ಮಷಷ್ಠೀಪಕ್ಷೇ ಜಗತ್ಕರ್ಮಕೋದ್ಭವಾದಿದಮ್ ಇತ್ಯರ್ಥಃ ಸ್ಯಾತ್ । ಏವಂ ಚ ಜಗನ್ಮಧ್ಯಪತಿತಸ್ಯ ಜೀವಜಾತಸ್ಯ ದೇಹಯೋಗದ್ವಾರಾ ಉತ್ಪತ್ತಿಮತ್ತ್ವೇನ ಸಾಕ್ಷಾದು-ದ್ಭವಕರ್ಮತ್ವಾಭಾವಾತ್ ಶ್ರಿಯಶ್ಚ ಪಾರತಂತ್ರ್ಯರೂಪೋತ್ಪತ್ತಿಮತ್ತ್ವೇನ ಸಾಕ್ಷಾದುದ್ಭವ-ಕರ್ಮತ್ವಾಭಾವಾತ್ ಉದ್ಭವಾದಿದಾತೃತ್ವಂ ನ ಸಿದ್ಧ್ಯೇದಿತ್ಯತಃ — ಸಂಬಂಧಮಾತ್ರ ಇತ್ಯುಕ್ತಮ್ ।

ತಥಾಚ ಸಾಕ್ಷಾತ್ಪರಂಪರಾಸಾಧಾರಣಸಂಬಂಧೇನ ಜಗತ್ಕರ್ಮಕೋದ್ಭವಾದಿದಮಿತ್ಯರ್ಥಃ । ಏವಂ ಚ ಯಸ್ಯ ಸಾಕ್ಷಾತ್ ಸ್ವರೂಪೇಣ ಉದ್ಭವಾದಿ, ಯಸ್ಯ ಚ ದೇಹಯೋಗದ್ವಾರಾ, ಯಸ್ಯಾಪ್ಯ-ಭಿಮಾನದ್ವಾರಾ, ಯಸ್ಯಾಪಿ ಪಾರತಂತ್ರ್ಯರೂಪೇಣ ಸಾಕ್ಷಾದ್ವಾ ಪರಂಪರಯಾ ಉದ್ಭವಾದಿ ತಸ್ಯ ಸರ್ವಸ್ಯಾಪಿ ದಾತೃತ್ವಂ ಸಿಧ್ಯತೀತಿ ಭಾವಃ । ಅಶೇಷಪದಸಂಬಂಧಲಭ್ಯಮರ್ಥಮಾಹ — **ವಿಯದಿತಿ ॥**

ಯದ್ವಾ - ಅಥವಾ ಕರ್ಮಾರ್ಥದಲ್ಲಿ ಷಷ್ಠೀ ವಿಭಕ್ತಿಯು ಬಂದಿದೆ ಎಂಬ ಪಕ್ಷದಲ್ಲಿ ಜಗತ್ಕರ್ಮಕ ಉದ್ಭವಾದಿದಂ ಎಂಬುದಾಗಿ ಅಸ್ಯೋದ್ಭವಾದಿದಂ ಎಂಬ ಪದದ ಅರ್ಥವಾಗುವುದು. ಹೀಗೆ ಹೇಳಿದರೆ ಜಗತ್ತಿನ ಮಧ್ಯದಲ್ಲಿ ಸೇರಿರುವ ಒಂದಾದ ಜೀವಜಂತುಗಳಿಗೆ ದೇಹದ ಮುಖಾಂತರವಾಗಿ ಉತ್ಪತ್ತಿ ಇರುವುದರಿಂದ ಸಾಕ್ಷಾತ್ ಉತ್ಪತ್ತಿಗೆ ಕರ್ಮವಾಗುವುದಿಲ್ಲ. ಹಾಗೆಯೇ ಶ್ರೀದೇವಿಯು ಪಾರತಂತ್ರ್ಯ ಎಂಬ ಉತ್ಪತ್ತಿ ಉಳ್ಳವಳಾದ್ದರಿಂದ ಸಾಕ್ಷಾತ್ತಾಗಿ ಉದ್ಭವಾದಿಗಳನ್ನು ಹೊಂದಿಲ್ಲ-ವಾದ್ದರಿಂದ ಸಾಕ್ಷಾತ್ತಾದ ಉದ್ಭವಾದಿದಾತೃತ್ವ ಭಗವಂತನಿಗೆ ಸಿದ್ಧಿಸುವುದಿಲ್ಲ ಎಂದಾಕ್ಷೇಪ ಬರುವುದು. ಇದರ ಪರಿಹಾರ - ಸಂಬಂಧಮಾತ್ರೇ ಎಂದು. ಸಾಕ್ಷಾತ್ ಅಥವಾ ಪರಂಪರಾ-ಸಂಬಂಧದ ಮೂಲಕವೂ ಜಗತ್ಕರ್ಮಕ ಉದ್ಭವಾದಿಗಳನ್ನು ಕೊಡುವವನು ಎಂಬರ್ಥವು ಸಿಗುವುದು. ಹಾಗಾಗಿ ಏನೂ ದೋಷವಿಲ್ಲ. ಏವಂ ಚ - ಯಾವ ವಸ್ತುವಿಗೆ ಸಾಕ್ಷಾತ್ತಾಗಿ ಸ್ವರೂಪತಃ ಉತ್ಪತ್ತಿ ಮೊದಲಾದವುಗಳಿವೆಯೋ ಹಾಗೆಯೇ ಯಾವ ವ್ಯಕ್ತಿಗೆ ದೇಹಸಂಬಂಧದ್ವಾರಾ ಉತ್ಪತ್ತಿಯೋ ಯಾರಿಗೆ ಅಭಿಮಾನಿಯಾಗುವ ದ್ವಾರಾ ಉತ್ಪತ್ತಿಯೋ ಯಾರಿಗೆ ಪರತಂತ್ರನಾಗುವ ಮೂಲಕ ಉತ್ಪತ್ತಿಯೋ ಈ ಎಲ್ಲ ರೀತಿಯಾದ ಸಾಕ್ಷಾತ್ ಅಥವಾ ಪರಂಪರಯಾ ಉದ್ಭವಾದಿಗಳು ಏನಿವೆಯೋ ಅವೆಲ್ಲವನ್ನೂ ಕೊಡುವವನು ಎಂಬರ್ಥ "ಅಸ್ಯೋದ್ಭವಾದಿದಂ" ಎಂಬ ಪದದಿಂದ ವಿವಕ್ಷಿತವಾಗುವುದು.

## ಕೇವಲಾರ್ಥಕವಾದ ಏಕಶಬ್ದ

(ವಿಟ್ಠಲಭಟ್ಟೀಯ)— ಏಕಶಬ್ದಃ ಕೇವಲಾರ್ಥಃ ಇತಿ । ಸಂಖ್ಯಾರ್ಥಕತ್ವೇ ಪೂರ್ವಕಾಲೈಕೇತಿ ಸೂತ್ರೇಣ ಏಕಶಬ್ದಸ್ಯ ಪೂರ್ವನಿಪಾತಃ ಸ್ಯಾದಿತಿ ಭಾವಃ । ಭಗವದ್ದೇಹಾನಾಮನಂತತ್ವೇ ನೈಕ-ತ್ವಾನುಪಪತ್ತೇರಿತಿ ವಾ ।

"ಏಕಶಬ್ದಃ ಕೇವಲಾರ್ಥಃ" - ಏಕಶಬ್ದಕ್ಕೆ ಏಕತ್ವ ಎಂಬ ಸಂಖ್ಯೆಯು ಅರ್ಥವಲ್ಲ. ಹಾಗಾದಪಕ್ಷದಲ್ಲಿ 'ಪೂರ್ವಕಾಲೈಕಸರ್ವಜರತ್ಪುರಾಣನವಕೇವಲಾಃ ಸಮಾನಾಧಿಕರಣೇನ' ಎಂಬ ಸೂತ್ರದಲ್ಲಿ ಏಕ-ಶಬ್ದವನ್ನು ಪ್ರಥಮಾವಿಭಕ್ತ್ಯಂತಪಠಿತಶಬ್ದಗಳಲ್ಲಿ ಸೇರಿಸಿದ್ದರಿಂದ ಉಪಸರ್ಜನಸಂಜ್ಞೆ ಬಂದು

ಪೂರ್ವನಿಪಾತಬರಬೇಕಿತ್ತು. ಆಗ 'ನಿಖಿಲಪೂರ್ಣಗುಣೈಕದೇಹಂ' ಎಂಬುದು ತಪ್ಪು ಎಂದಾಯಿತು.

ಅಥವಾ - ಭಗವಂತನ ದೇಹಗಳು ಅನಂತವಾಗಿರುವ ಕಾರಣ ಇಲ್ಲಿ ಏಕದೇಹಂ ಎಂದರೆ ಅದು ಸರಿಹೊಂದುವುದಿಲ್ಲ. ಇದಕ್ಕೆ ಉತ್ತರವಾಗಿ ಸಂಖ್ಯೆ ಎಂಬ ಅರ್ಥವನ್ನು ಸ್ವೀಕರಿಸದೇ ಕೇವಲ ಎಂಬ ಅರ್ಥವನ್ನು ಏಕಶಬ್ದಕ್ಕೆ ಸ್ವೀಕರಿಸಿದ್ದಾರೆ.

## ನಿಖಿಲ, ಪೂರ್ಣ, ಗುಣ, ಆದಿಶಬ್ದಗಳ ಅರ್ಥ

(ಲಘುರಸರಂಜನೀ)— ನಿಃಶೇಷಾಃ = ಅನಂತಾಃ ಇತಿ ಯಾವತ್ । ಅನವಧಿಕಾಃ = ಅಪರಿಚ್ಛಿನ್ನಾಃ । ಶಾಸ್ತ್ರೇಷ್ವನ್ಯತ್ರಾಪಿ ಗುಣಪದಪ್ರಯೋಗಾದತ್ರ ತತ್ಪ್ರತೀತಿವಾರಣಾಯ ಗುಣಪದಾರ್ಥಮಾಹ — **ಗುಣಾ = ಆನಂದಾದಯ** ಇತಿ ॥ ದೋಷೇಷು ಪಾರತಂತ್ರ್ಯಸ್ಯೇವ ಗುಣೇಷ್ವಾನಂದಸ್ಯ ಶ್ರೈಷ್ಠ್ಯಾತ್ ಕಂಠತ ಉಕ್ತಿಃ । ಅತ ಏವ ತದಪಿ ಕಂಠತ ಏವ ವಕ್ಷ್ಯತಿ । ಇಯಾಂಸ್ತು ವಿಶೇಷಃ — ಆನಂದಾರ್ಥಮೇವ ಬಹುಗುಣಾನಾಮಪೇಕ್ಷಣೀಯತ್ವೇನ ಉದ್ದೇಶ್ಯತ್ವಾದಾನಂದಸ್ಯ ಗುಣೇಷು, ಸತಿ ಪಾರತಂತ್ರ್ಯೇ ತದುಪಜೀವ್ಯಃ ಬಹವೋಽಪಿ ದೋಷಾಃ ತತ್ರಾಶ್ರೀಯಂತ ಇತ್ಯುಪಜೀವ್ಯತ್ವಾತ್ ಪಾರತಂತ್ರ್ಯಸ್ಯ ದೋಷೇಷು ಶ್ರೈಷ್ಠ್ಯಮಿತಿ । ಜ್ಞಾನಶಕ್ತ್ಯಾದಯ ಆದಿಪದಾರ್ಥಾಃ ।

"ನಿಖಿಲಾಃ ನಿಃಶೇಷಾಃ ಪೂರ್ಣಾಃ ಅನವಧಿಕಾಃ" - ನಿಖಿಲ ಹಾಗೂ ಪೂರ್ಣ ಎಂಬ ಎರಡು ಪದಗಳು ವ್ಯರ್ಥ. ಎರಡೂ ಒಂದೇ ರೀತಿಯ ಅರ್ಥವನ್ನು ಕೊಡುವುದರಿಂದ ಎಂದರೆ, ಇಲ್ಲ ಬೇರೆ ಬೇರೆಯಾದ ಅರ್ಥಗಳು ಈ ಶಬ್ದಗಳಿಗೆ ಇವೆ ಎಂದು ತಿಳಿಸುತ್ತಿದ್ದಾರೆ. ನಿಖಿಲಾಃ ಎಂದರೆ ನಿಃಶೇಷಾಃ ಎಂದು. ಅರ್ಥಾತ್ ಅನಂತ. ಅನವಧಿಕಾಃ ಎಂದರೆ ಪರಿಮಿತಿ ಇಲ್ಲದಿರುವುದು ಎಂದರ್ಥ.

"ಗುಣಾಃ ಆನಂದಾದಯಃ" - ಬೇರೆ ಶಾಸ್ತ್ರಗಳಲ್ಲಿ ದುಃಖಮೊದಲಾದವುಗಳಲ್ಲಿಯೂ ಗುಣ ಎಂಬ ಪದವನ್ನು ಪ್ರಯೋಗಿಸುವುದರಿಂದ ಅದನ್ನು ನಿವಾರಣೆ ಮಾಡಲು ಇಲ್ಲಿ ಗುಣ ಎಂಬ ಪದದ ಅರ್ಥವನ್ನು ತಿಳಿಸಿದ್ದಾರೆ. ಗುಣ ಎಂದರೆ ಆನಂದ ಮೊದಲಾದವುಗಳು ಎಂದು. ಇನ್ನು ಆನಂದವನ್ನು ಮೊದಲನೆಯದಾಗಿ ಗ್ರಹಣಮಾಡಿದ್ದಕ್ಕೆ ಕಾರಣವಿದು. ಹೇಗೆ ದೋಷಗಳಲ್ಲಿ ಪಾರತಂತ್ರ್ಯ ಅರ್ಥಾತ್ ಪರಾಧೀನತೆಯು ಶ್ರೇಷ್ಠವೋ ಅದೇ ರೀತಿ ಗುಣಗಳಲ್ಲಿ ಆನಂದ ಎಂಬ ಗುಣವು ಶ್ರೇಷ್ಠ ಎಂಬ ಕಾರಣದಿಂದ ಕಂಠತಃ ಹೇಳಿದ್ದಾರೆ. ಆದ್ದರಿಂದಲೇ ಪಾರತಂತ್ರ್ಯ ಎಂಬ ದೋಷವನ್ನು ನಿರ್ದೋಷಂ ಎಂಬುದರ ವಿವರಣೆ ಮಾಡುವಾಗ ಕಂಠತಃ ಸುಧಾದಲ್ಲಿ ಹೇಳಿದ್ದಾರೆ.

ಇಷ್ಟು ವ್ಯತ್ಯಾಸವನ್ನು ಇಲ್ಲಿ ತಿಳಿಯಬೇಕು. ಆನಂದಕ್ಕೋಸ್ಕರವೇ ಸರ್ವಸ್ವಾತಂತ್ರ್ಯ, ಸರ್ವಶಕ್ತಿ ಮೊದಲಾದ ಅನೇಕ ಗುಣಗಳ ಅಪೇಕ್ಷೆ ಇರುವುದರಿಂದ ಮುಖ್ಯಉದ್ದೇಶ್ಯವಾದ ಆನಂದವೇ

ಗುಣಗಳಲ್ಲಿ ಶ್ರೇಷ್ಠ. ಇನ್ನು ಪರಾಧೀನತೆ ಎಂಬ ದೋಷವಿದ್ದಾಗಲೇ ಆದನ್ನು ಉಪಜೀವಿಸಿಕೊಂಡು ಅನೇಕ ದೋಷಗಳು ಬರುತ್ತವೆ. ಈ ಕಾರಣದಿಂದ ಪಾರತಂತ್ರ್ಯವು ದೋಷಗಳಲ್ಲಿ ಶ್ರೇಷ್ಠ ಎಂದು ಪರಿಗಣಿಸಲ್ಪಟ್ಟಿದೆ. "ಆನಂದಾದಿ" ಎಂಬಲ್ಲಿ ಆದಿಪದದಿಂದ ಜ್ಞಾನ, ಶಕ್ತಿ ಮೊದಲಾದವುಗಳು ಗ್ರಹಿಸಲ್ಪಡುತ್ತವೆ.

## ಪೂರ್ವಕಾಲೈಕ ಎಂಬ ಸೂತ್ರದಲ್ಲಿ ಸಂಖ್ಯಾವಾಚಿಯಾದ ಏಕಶಬ್ದದ ನಿರ್ದೇಶ

(ಪರಿಮಳ)– 'ಏಕೇ ಮುಖ್ಯಾನ್ಯಕೇವಲಾಃ' ಇತ್ಯುಕ್ತೇಃ । 'ದೋಷೈಕದೃಕ್ ಪುರೋಭಾಗೀ ದೀರ್ಘಸೂತ್ರಶ್ಚಿರಕ್ರಿಯಃ' ಇತ್ಯಮರೇ 'ನಿಯತಿಕೃತನಿಯಮರಹಿತಾಂ ಹ್ಲಾದೈಕಮಯೀಮ್' ಇತಿ ಕಾವ್ಯಪ್ರಕಾಶೇ ಚ ಪ್ರಯೋಗಾತ್ ಸಂಖ್ಯಾರ್ಥಸ್ಯೈವ ಏಕಶಬ್ದಸ್ಯ ಪೂರ್ವಕಾಲೈಕೇತಿ ಸೂತ್ರೇ ನಿರ್ದೇಶೋ ನ ಕೇವಲಾರ್ಥಸ್ಯೇತಿ ನ ದೋಷ ಇತಿ ಭಾವಃ । ಕೇವಲಾರ್ಥೈಕಶಬ್ದಸ್ಯ ಗುಣ-ವಿಶೇಷಣತ್ವೇ ಲಬ್ಧಾರ್ಥಮಾಹ – ತ ಏವೇತಿ ॥

'ನಿಖಿಲಪೂರ್ಣಗುಣೈಕದೇಹಂ' ಎಂಬಲ್ಲಿ ಏಕಶಬ್ದವು ಸಂಖ್ಯಾವಾಚಿಯಾಗಿದ್ದರೆ ಪೂರ್ವಕಾಲೈಕ-ಸರ್ವಜರತ್ಪುರಾಣನವಕೇವಲಾಃ ಸಮಾನಾಧಿಕರಣೇನ' ಎಂಬ ಸೂತ್ರದಿಂದ ನಿಖಿಲಪೂರ್ಣಗುಣ ಶಬ್ದದೊಂದಿಗೆ ಸಮಾಸಮಾಡಿದಾಗ ಆ ಸಮಾಸವಿಧಾಯಕಸೂತ್ರದಲ್ಲಿ ಏಕಶಬ್ದವನ್ನು ಪ್ರಥಮಾಂತವಾಗಿ ನಿರ್ದೇಶಮಾಡಿದ್ದರಿಂದ 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಎಂಬ ಸೂತ್ರದಿಂದ ಉಪಸರ್ಜನ ಸಂಜ್ಞೆ ಬಂದು 'ಉಪಸರ್ಜನಂ ಪೂರ್ವಂ' ಎಂಬ ಸೂತ್ರದಿಂದ ಏಕಶಬ್ದಕ್ಕೆ ಪೂರ್ವನಿಪಾತವು ಬಂದು ಏಕನಿಖಿಲಗುಣದೇಹಂ ಎಂದಾಗಬೇಕಿತ್ತು. ಅಲ್ಲದೆ ನಿಖಿಲ-ಶಬ್ದದೊಂದಿಗೆ ಏಕಶಬ್ದದೊಂದಿಗೆ ವಿರೋಧವು.

ಇದರ ಪರಿಹಾರ – ಏಕಶಬ್ದಕ್ಕೆ ಸಂಖ್ಯೆ ಎಂಬರ್ಥವನ್ನು ಸ್ವೀಕರಿಸದೇ ಕೇವಲ ಎಂಬರ್ಥವನ್ನು ಸ್ವೀಕರಿಸಬೇಕು. ಈಗ ಪೂರ್ವನಿಪಾತಾದಿಗಳ ಶಂಕೆ ಇರುವುದಿಲ್ಲ. ಅಲ್ಲದೇ "ದೋಷೈಕದೃಕ್ ಪುರೋಭಾಗೀ ದೀರ್ಘಸೂತ್ರಶ್ಚಿರಕ್ರಿಯಃ' ಎಂದು ಅಮರಕೋಶದಲ್ಲಿ ಏಕಶಬ್ದವನ್ನು ಕೇವಲಾರ್ಥ-ವಾಗಿ ಸ್ವೀಕರಿಸಿದ್ದರಿಂದ ಏಕಶಬ್ದಕ್ಕೆ ಪೂರ್ವನಿಪಾತಬರದೇ ಏಕದೋಷದೃಕ್ ಎಂದಾಗಿಲ್ಲ. ಅದರಂತೆ ಕಾವ್ಯಪ್ರಕಾಶದಲ್ಲಿಯೂ 'ನಿಯತಿಕೃತನಿಯಮರಹಿತಾಂ ಹ್ಲಾದೈಕಮಯೀಮ್' ಎಂಬಲ್ಲಿ ಏಕಶಬ್ದವನ್ನು ಸಂಖ್ಯಾರ್ಥವಾಗಿ ಸ್ವೀಕರಿಸದೇ ಕೇವಲಾರ್ಥವಾಗಿ ಸ್ವೀಕರಿಸಿ ಪೂರ್ವನಿಪಾತವನ್ನು ವಾರಣೆ ಮಾಡಿದ್ದಾರೆ. ಅದರಂತೆ ಇಲ್ಲಿಯೂ ತಿಳಿಯಬೇಕು.

ಕೇವಲಾರ್ಥವಾದ ಏಕಶಬ್ದವು ಗುಣವಿಶೇಷಣವಾದಾಗ ಸಿಗುವ ಅರ್ಥ ಇದು – ನಿಖಿಲಪೂರ್ಣ-ಗುಣಗಳೇ ದೇಹವಾಗಿ ಯಾರಿಗೆ ಇದೆಯೋ ಅವನು ಎಂದು. (ತೇ ಏವ ದೇಹೋ ಯಸ್ಯ)

## ಅಮರಕೋಶಪಾಠ

ಈಗಿನ ಅಮರಕೋಶಪಾಠದಲ್ಲಿ 'ದೋಷೈಕದೃಕ್ ಪುರೋಭಾಗೀ ನಿಕೃತಸ್ತ್ವನೃಜುಃ ಶಠಃ' (ತೃತೀಯಕಾಂಡ ವಿಶೇಷ್ಯನಿಘ್ನವರ್ಗ ಶ್ಲೋ. 47) ಎಂದು ಪಾಠ ಸಿಗುವುದು. ದೀರ್ಘಸೂತ್ರಶ್ಚಿರಕ್ರಿಯಃ ಎಂಬ ಭಾಗವು 'ಖಲಪೂಃ ಸ್ಯಾದ್ಬಹುಕರೋ ದೀರ್ಘಸೂತ್ರಶ್ಚಿರಕ್ರಿಯಃ' (ತೃತೀಯಕಾಂಡ ವಿಶೇಷ್ಯನಿಘ್ನವರ್ಗ ಶ್ಲೋ. 17) ಎಂಬಲ್ಲಿ ಸಿಗುವುದು.

## ಕಾವ್ಯಪ್ರಕಾಶಪ್ರಥಮೋಲ್ಲಾಸದ ಪ್ರಥಮಶ್ಲೋಕ - ಹ್ಲಾದೈಕಮಯೀಂ

नियतिकृतनियमरहितां **ह्लादैकमयीमनन्यपरतन्त्राम्** ।
नवरसरुचिरां निर्मितिमादधती भारती कवेर्जयति ॥1 ॥ प्रथमोल्लासः

- ಈಶ್ವರನು ಜಗತ್ತಿನ ಸೃಷ್ಟಿಯನ್ನು ನಿಯತವಾದ ಪ್ರಕೃತಿ ಮೊದಲಾದ ಕಾರಣಗಳಿಂದ ಮಾಡುವನು. ಆದರೆ ಕವಿಯ ಮಾತು ಒಂದು ಕಾವ್ಯಾತ್ಮಕಜಗತ್ತನ್ನು ಸೃಷ್ಟಿಸುತ್ತದೆ. ಈ ಜಗತ್ತು ಯಾವುದೇ ನಿಯತವಾದ ಕಾರಣಗಳಿಂದ ಹುಟ್ಟುವುದಿಲ್ಲ. ಕೇವಲ ಆನಂದಮಾತ್ರ ಸ್ವಭಾವವಾಗಿರುತ್ತದೆ. ಯಾವುದೇ ಬೇರೆಯವರ ಅಧೀನವಾಗಿರುವುದಿಲ್ಲ. ನವರಸಭರಿತವಾಗಿರುವುದು. ಆದ್ದರಿಂದ ಕವಿಯ ಮಾತು ಉತ್ಕೃಷ್ಟ ಎನಿಸುತ್ತದೆ.

–(प्रदीप) **ह्लादैकमयीमिति** ॥ ह्लादेन एकमयीम् एकमात्रस्वभावाम् । ह्लादमात्रस्वभावामिति यावत् ।

–(उद्योत) **पूर्वकालैकेति** समासे एकह्लादेति स्यात् अत आह – ह्लादेनेति ॥ अभेदे तृतीया । धान्येन धनमयः इति । प्राचुर्ये मयट् । तत्फलितमाह – ह्लादमात्रस्वभावामिति ॥ प्राचुर्यमत्रापरिच्छिन्नत्वरूपमिति भावः । मात्रपदेन दुःखमोहयोर्व्यवच्छेदः । सुप्सुपेति समासः ।

## ಗುಣೈಕದೇಹಂ ಎಂಬಲ್ಲಿ ಗುಣಶಬ್ದಾತ್ ಪ್ರಾಕ್ ಏಕಶಬ್ದಪ್ರಯೋಗಪ್ರಸಂಗ

(ವಾಕ್ಯಾರ್ಥಚಂದ್ರಿಕಾ) – **ಏಕಶಬ್ದಃ** ಕೇವಲಾರ್ಥ ಇತಿ ॥ ಸಂಖ್ಯಾರ್ಥತ್ವೇ ಹ್ಯೇಕಶಬ್ದಸ್ಯ ನ ತಾವದತ್ರ ಪೂರ್ವೇಣ ವಿಶೇಷಣಸಮಾಸೋಽಂಗೀಕರ್ತುಂ ಯುಕ್ತಃ, ತಸ್ಯ 'ದಿಕ್ ಸಂಖ್ಯೇ ಸಂಜ್ಞಾಯಾಮ್' ಇತಿ ಸಂಜ್ಞಾಯಾಮೇವ ನಿಯಮಿತತ್ವೇನ ಪ್ರಕೃತೇ ತು 'ಏಕಶಾಟೀ' ಇತ್ಯಾದಾವಿವ ವಿಶಿಷ್ಟಶಬ್ದಸ್ಯ ಸಂಜ್ಞಾತ್ವಾಭಾವೇನ ತದಸಂಭವಾತ್, ಅತಃ ಸಂಖ್ಯಾರ್ಥಕೈಕಶಬ್ದಸ್ಯ ಸಮಾನಾಧಿಕರಣೇನ ಸಮಾಸವಿಧಾನಾರ್ಥಂ ಪ್ರವೃತ್ತೇನ 'ಪೂರ್ವಕಾಲೈಕೇ'ತಿ ಸೂತ್ರೇಣೈವ ಸ ವಾಚ್ಯಃ । ಸರ್ವಜರತ್ ಪುರಾಣನವಕೇವಲಾಃ ಸಮಾನಾಧಿಕರಣೇನ' ಇತಿ ಸೂತ್ರಶೇಷೋ ದ್ರಷ್ಟವ್ಯಃ । ನ ಚಾಸೌ ವಕ್ತುಂ ಶಕ್ಯಃ, ತಥಾ ಸತಿ ತಸ್ಯ ಪೂರ್ವಕಾಲಿಕೇತಿ ಸಮಾಸಶಾಸ್ತ್ರೇ ಪ್ರಥಮಾನಿರ್ದಿಷ್ಟತಯಾ 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಇತ್ಯುಪಸರ್ಜನತ್ವೇನ 'ಉಪಸರ್ಜನಂ ಪೂರ್ವಮ್' ಇತಿ ಪೂರ್ವನಿಪಾತಪ್ರಸಂಗಾತ್ ।

'ನಿಖಿಲಪೂರ್ಣಗುಣೈಕದೇಹಂ' ಎಂಬಲ್ಲಿ ನಿಖಿಲಪೂರ್ಣಗುಣಶಬ್ದಕ್ಕೂ ಏಕಶಬ್ದಕ್ಕೂ ಯಾವ ಸಮಾಸ ಎಂಬ ವಿಚಾರ ಮಾಡಿದ್ದಾರೆ. ಇಲ್ಲೂ ಕೂಡ ಏಕಶಬ್ದಕ್ಕೆ ಯಾವ ಅರ್ಥವನ್ನು ಹೇಳಬೇಕು ಎಂಬುದು ಜಿಜ್ಞಾಸೆ. ಸಂಖ್ಯೆ ಎಂಬ ಅರ್ಥವೋ ಕೇವಲ ಎಂಬ ಅರ್ಥವೋ? ಎಂದು. ಏಕಶಬ್ದಕ್ಕೆ ಸಂಖ್ಯೆ ಎಂಬ ಅರ್ಥವನ್ನು ಸ್ವೀಕರಿಸಿದಲ್ಲಿ ವಿಶೇಷಣಸಮಾಸ ಎನ್ನೋಣ. ವಿಶೇಷಣಸಮಾಸ ಎಂದರೆ ಕರ್ಮಧಾರಯ ಸಮಾಸ. ಅರ್ಥಾತ್ 'ವಿಶೇಷಣಂ ವಿಶೇಷ್ಯೇಣ ಬಹುಲಮ್' (ಪಾ.ಸೂ. 2-1-57) ಎಂಬ ಸೂತ್ರದಿಂದ ವಿಹಿತವಾದ ಸಮಾಸ. ಆದರೆ ವಿಶೇಷಣಸಮಾಸ ಮಾಡುವಲ್ಲಿ ಸಂಜ್ಞಾಶಬ್ದವಾಗಿದ್ದರೆ ಮಾತ್ರ ಎಂದು ನಿಯಮವನ್ನು ಮಾಡಿದ್ದಾರೆ. 'ದಿಕ್ಸಂಖ್ಯೇ ಸಂಜ್ಞಾಯಾಮ್' (ಪಾ.ಸೂ.2-1-50) ಎಂಬ ಸೂತ್ರದಲ್ಲಿ ಸಂಖ್ಯಾವಾಚಕವಾದ ಶಬ್ದದೊಂದಿಗೆ ವಿಶೇಷಣಸಮಾಸ ಮಾಡಬೇಕೆಂದರೆ ಆ ಸಂಪೂರ್ಣವಾದ ಶಬ್ದವು ಸಂಜ್ಞಾವಾಚಕವಾಗಿರಬೇಕು. ಉದಾಹರಣೆ - ಏಕಶಾಟೀ ಎಂಬುದು ಸಂಜ್ಞಾವಾಚಕವಾಗಿದೆ. ಅರ್ಥಾತ್ ಒಬ್ಬ ವ್ಯಕ್ತಿಯನ್ನು ಹೇಳುವಂತಹ ಶಬ್ದ. ಇಲ್ಲಿಯೂ ಹಾಗೇ ನಿಖಿಲಪೂರ್ಣಗುಣೈಕದೇಹ ಎಂಬುದು ಸಂಜ್ಞಾವಾಚಕವಾಗಿದ್ದರೆ ಆಗ ಇಲ್ಲಿ ವಿಶೇಷಣಸಮಾಸವನ್ನು ಮಾಡಬಹುದಿತ್ತು. ಹಾಗಾಗಿ 'ಪೂರ್ವಕಾಲೈಕಸರ್ವಜರತ್ಪುರಾಣನವಕೇವಲಾಃ ಸಮಾನಾಧಿಕರಣೇನ' (ಪಾ.ಸೂ. 2-1-49) ಎಂಬ ಸೂತ್ರದಿಂದ ಸಂಖ್ಯಾವಾಚಕವಾದ ಏಕಶಬ್ದಕ್ಕೆ ಸಮಾನಾಧಿಕರಣವಾದ ನಿಖಿಲಪೂರ್ಣಗುಣ ಎಂಬ ಶಬ್ದದೊಂದಿಗೆ ಸಮಾಸವನ್ನು ಮಾಡಬೇಕು. ಇಲ್ಲಿ ಹಿಂದಿನ ಸೂತ್ರದಂತೆ ಸಂಜ್ಞಾವಾಚಕವಾಗಿರಬೇಕು ಎಂಬ ನಿಯಮವೇನಿಲ್ಲ. ಆದರೆ ಈ ಸೂತ್ರದಿಂದ ಸಮಾಸಮಾಡಿದಲ್ಲಿ ಏಕಶಬ್ದವು ಈ ಸೂತ್ರದಲ್ಲಿ ಪ್ರಥಮಾನಿರ್ದಿಷ್ಟವಾದ್ದರಿಂದ 'ಪ್ರಥಮಾನಿರ್ದಿಷ್ಟಂ ಸಮಾಸೇ ಉಪಸರ್ಜನಂ' (ಪಾ.ಸೂ. 1-2-43) ಎಂಬ ಸೂತ್ರದಿಂದ ಉಪಸರ್ಜನಸಂಜ್ಞೆ ಇರುವುದರಿಂದ 'ಉಪಸರ್ಜನಂ ಪೂರ್ವಮ್' (ಪಾ.ಸೂ. 2-2-30) ಎಂಬುದಾಗಿ ಪೂರ್ವನಿಪಾತ ಬಂದು ನಿಖಿಲಪೂರ್ಣಗುಣೈಕದೇಹಂ ಎಂದಾಗದೇ ಏಕನಿಖಿಲಪೂರ್ಣಗುಣ ಎಂದಾಗಬೇಕಿತ್ತು. ಅದಕ್ಕಾಗಿ ಈ ಸೂತ್ರವು ಇಲ್ಲಿ ಸಮಾಸವಿಧಾಯಕ ಎಂದು ಹೇಳಲು ಬರುವುದಿಲ್ಲ.

## ದಿಕ್ಸಂಖ್ಯೇ ಸಂಜ್ಞಾಯಾಂ ಸೂತ್ರಾರ್ಥ

समानाधिकरणेन इत्यापादसमाप्तेरनुवर्तते। दिग्वाचिनः शब्दाः सङ्ख्या च समानाधिकरणेन सुवन्तेन सह समस्यन्ते, तत्पुरुषश्च समासो भवति संज्ञायां विषये। पूर्वेषुकामशमी। अपरेषुकामशमी। पञ्चाम्राः। सप्तर्षयः। संज्ञायाम् इति किम्? उत्तरा वृक्षाः। पञ्च ब्राह्मणाः।

## ಸಮಾಸದ್ವಯಗಳೂ ಉಪಪನ್ನ

(ವಾಕ್ಯಾರ್ಥಚಂದ್ರಿಕಾ)– 'ನಿಖಿಲಪೂರ್ಣಗುಣಾ ಏಕೋ ದೇಹೋ ಯಸ್ಯ' ಇತಿ ಬಹುವ್ರೀಹ್ಯಾ-

ಶ್ರಯಣೇಽಪಿ 'ಬಹುವ್ರೀಹೌ ಸರ್ವನಾಮಸಂಖ್ಯಯೋಃ ಪ್ರಾಙ್ ನಿಪಾತೋ ವಕ್ತವ್ಯಃ' ಇತಿ ಸಂಖ್ಯಾಯಾಃ ಪ್ರಾಙ್ ನಿಪಾತನಿಯಮನಾತ್ ಏಕಶಬ್ದಸ್ಯ ಪೂರ್ವನಿಪಾತಪ್ರಸಂಗ ಏವ । ಅತ ಏವ ಅನಿತ್ಯೈಕರೂಪಾ ಇತ್ಯಾದೌ ಅನಿತ್ಯಮೇಕಂ ರೂಪಂ ಯೇಷಾಮ್ ಇತಿ ತ್ರಿಪದಬಹುವ್ರೀಹ್ಯನಾಶ್ರಯಣಮಭಿಯುಕ್ತಾನಾಮ್ । ಚತುರ್ಥೇ ಚ 'ಅನುಮಾನಮೇಕಂ ಶರಣಂ ಯಸ್ಯ' ಇತಿ ತ್ರಿಪದಬಹುವ್ರೀಹ್ಯನಾಶ್ರಯಣಂ ಟೀಕಾಕಾರಾಣಾಮಪಿ । ಕೇವಲಾರ್ಥತ್ವೇ ತು ನ ತತ್ಪ್ರಸಂಗ ಇತ್ಯುಕ್ತರೀತ್ಯಾ ಸಮಾಸದ್ವಯಮಪಿ ಉಪಪನ್ನಮಿತಿ ಭಾವಃ ।

ಅದಕ್ಕೆ ಬಹುವ್ರೀಹಿಸಮಾಸವನ್ನು ಆಶ್ರಯಿಸಲಾಗುವುದು. 'ಅನೇಕಮನ್ಯಪದಾರ್ಥೇ' (ಪಾ.ಸೂ. 2-2-24) ಎಂಬ ಸೂತ್ರದಿಂದ. 'ನಿಖಿಲಪೂರ್ಣಗುಣಾ ಏಕೋ ದೇಹೋ ಯಸ್ಯ' ಎಂದು ವಿಗ್ರಹವಾಕ್ಯ. ಈ ಪಕ್ಷದಲ್ಲಿ ಏಕಶಬ್ದಕ್ಕೆ ಪ್ರಥಮಾನಿರ್ದಿಷ್ಟತ್ವವಿಲ್ಲವಾದ್ದರಿಂದ ಉಪಸರ್ಜನಸಂಜ್ಞೆ ತತ್ಪ್ರಯುಕ್ತ ಪೂರ್ವನಿಪಾತಗಳಿರುವುದಿಲ್ಲ. ಆದರೆ 'ಬಹುವ್ರೀಹೌ ಸರ್ವನಾಮಸಂಖ್ಯಯೋಃ ಪ್ರಾಙ್-ನಿಪಾತೋ ವಕ್ತವ್ಯಃ' ಎಂಬುದರ ಪ್ರಕಾರ ಬಹುವ್ರೀಹಿಸಮಾಸದಲ್ಲಿ ಸಂಖ್ಯಾವಾಚಕವಾದ ಶಬ್ದಕ್ಕೆ ಪೂರ್ವನಿಪಾತ ಹೇಳಬೇಕು. ಹಾಗಾಗಿ ಪುನಃ ಪೂರ್ವನಿಪಾತಪ್ರಸಕ್ತಿ ಇದ್ದೇ ಇದೆ. ಆದ್ದರಿಂದಲೇ 'ಅನಿತ್ಯೈಕರೂಪಾ' ಮುಂತಾದ ಸ್ಥಳಗಳಲ್ಲಿ ಅಭಿಯುಕ್ತರು ತ್ರಿಪದಬಹುವ್ರೀಹಿಯನ್ನು ಆಶ್ರಯಿಸಿಲ್ಲ. ಇಲ್ಲದಿದ್ದರೆ ಅಲ್ಲಿಯೂ 'ಅನಿತ್ಯಮ್ ಏಕಂ ರೂಪಂ ಯೇಷಾಂ' ಎಂದು ತ್ರಿಪದಬಹುವ್ರೀಹಿಯನ್ನು ಆಶ್ರಯಿಸಬೇಕಾಗಿತ್ತು. ಹಾಗಾಗಿಯೇ 'ಅನುಮಾನಂ ಏಕಂ ಶರಣಂ ಯಸ್ಯ' ಎಂದು ಟೀಕಾಚಾರ್ಯರು ಮುಂದೆ ಚತುರ್ಥಾಧ್ಯಾಯದಲ್ಲಿ ತೋರಿಸಲಿಲ್ಲ. ಅಥವಾ ಏಕಶಬ್ದಕ್ಕೆ ಕೇವಲ ಎಂಬರ್ಥವನ್ನು ಸ್ವೀಕರಿಸಿದ ಪಕ್ಷದಲ್ಲಿ ಯಾವುದೇ ದೋಷವಿಲ್ಲ. ಹಾಗಾಗಿ ವಿಶೇಷಣಸಮಾಸವು ಬಹುವ್ರೀಹಿಸಮಾಸವು ಎರಡೂ ಈ ಪಕ್ಷದಲ್ಲಿ ಯುಕ್ತ.

### ಅನುಮಾನೈಕಶರಣಮ್

गतिरूर्ध्वा च दुःखेता गतित्वाल्लौकिकी यथा ।
इत्युक्ते चानुमानैकशरणस्य किमुत्तरम् ॥ अनुव्या. ४-२-२४

इति च प्रत्यनुमाने केनचिदुक्ते, एकं च तच्छरणं च एकशरणम् । अनुमानम् एकशरणं यस्यासौ तथोक्तः । अन्यथा पूर्वकालैकेत्येकशब्दस्य पूर्वनिपातः स्यात् ।

### ಬಹುವ್ರೀಹಿಸಮಾಸದಲ್ಲಿ ಯಾವುದಕ್ಕೆ ಪೂರ್ವನಿಪಾತ

सप्तमीविशेषणे बहुव्रीहौ २।२।३५

सर्वोपसर्जनत्वाद् बहुव्रीहेरनियमे प्राप्ते नियमार्थं वचनम् । सप्तम्यन्तं विशेषणं च बहुव्रीहिसमासे पूर्वं

प्रयोक्तव्यम् । कण्ठेकालः । उरसिलोमा । विशेषणम् चित्रगुः । शबलगुः । सर्वनाम-सङ्ख्ययोरुपसङ्ख्यानम् । सर्वश्वेतः । सर्वकृष्णः । द्विशुक्लः । द्विकृष्णः । अनयोरेव मिथः संप्रधारणायां परत्वात् सङ्ख्यायाः पूर्वनिपातः । द्व्यन्यः । त्र्यन्यः ।

## ಕೇವಲಾರ್ಥತ್ವಾಶ್ರಯಣ ವ್ಯರ್ಥ ಎಂಬ ಶಂಕೆ ಹಾಗೂ ಪರಿಹಾರ

(ವಾಕ್ಯಾರ್ಥಚಂದ್ರಿಕಾ)- ಯದ್ಯಪ್ಯತ್ರ ಟೀಕಾಕೃದಭಿಮತೇ ಬಹುವ್ರೀಹೌ ಸಂಖ್ಯಾರ್ಥತ್ವಪ್ರಯುಕ್ತ ಪೂರ್ವನಿಪಾತವಾರಣೇಽಪಿ ಏಕಶಬ್ದಸ್ಯ ನ ಸರ್ವನಾಮತ್ವಪ್ರಯುಕ್ತಪೂರ್ವನಿಪಾತವಾರಣಂ ಸಂಭವತೀತ್ಯನರ್ಥಕಮೇವ ಕೇವಲಾರ್ಥತ್ವಾಶ್ರಯಣಮ್ । ನ ಚ ಕೇವಲಾರ್ಥಸ್ಯ ಅಸರ್ವ-ನಾಮತ್ವಾತ್ ನೋಕ್ತದೋಷ ಇತಿ ವಾಚ್ಯಮ್ ।

"ಏಕೋಽನ್ಯಾರ್ಥೇ ಪ್ರಧಾನೇ ಚ ಪ್ರಥಮೇ ಕೇವಲೇ ತಥಾ ।
ಸಾಧಾರಣೇ ಸಮಾನೇಽಲ್ಪೇ ಸಂಖ್ಯಾಯಾಂ ಚ ಪ್ರಯುಜ್ಯತೇ ॥

ಇತ್ಯಭಿಧಾನಾತ್ ಸಂತ್ಯೇಕಶಬ್ದಸ್ಯ ಅಷ್ಟಾವರ್ಥಾಃ । ತತ್ರ ಏಕಶಬ್ದಃ ಸಂಖ್ಯಾಯಾಂ ನಿತ್ಯೈಕವಚ-ನಾಂತಃ । ಅನ್ಯೇಷು ತು ಸಪ್ತಸು ವಚನಾಂತರಮಪಿ ಸ್ಯಾದೇವ । ಏಕೇ ಏಕೇಷಾಮಿತಿ ಯಥಾ" ಇತ್ಯಭಿಯುಕ್ತವ್ಯಾಖ್ಯಾನೇನ ಕೇವಲಾರ್ಥಸ್ಯಾಪಿ ತಸ್ಯ ಸರ್ವನಾಮತ್ವಸ್ಯ ಸ್ಥಿತೇಃ । ತಥಾಽಪಿ ಏಕೋ ದೇಹಃ ಏಕದೇಹಃ, ನಿಖಿಲಪೂರ್ಣಗುಣಾ ಏಕದೇಹೋ ಯಸ್ಯ ಇತಿ ದ್ವಿಪದಬಹು-ವ್ರೀಹ್ಯಾಶ್ರಯಣೇ ನ ದೋಷಃ, ಏಕದೇಹಶಬ್ದಸ್ಯಾಸರ್ವನಾಮತಯಾ ಪೂರ್ವನಿಪಾತಾ-ಭಾವಸಂಭವಾತ್ ।

ನ ಚೈವಮೇಕಂ ರೂಪಮೇಕರೂಪಮ್, ಅನಿತ್ಯಮೇಕರೂಪಂ ಯೇಷಾಮ್ ಇತ್ಯನ್ಯತ್ರ ದ್ವಿಪದಬಹುವ್ರೀಹ್ಯಾಶ್ರಯಣವತ್, ಏಕಂ ಶರಣಮ್ ಏಕಶರಣಮ್, ಅನುಮಾನಮೇಕಶರಣಂ ಯಸ್ಯೇತಿ ತಥೋಕ್ತಃ, ಇತ್ಯುತ್ತರಗ್ರಂಥೀಯಟೀಕಾಕಾರೀಯದ್ವಿಪದಬಹುವ್ರೀಹ್ಯಾಶ್ರಯಣವಚ್ಚ, ಸಂಖ್ಯಾರ್ಥತ್ವೇಽಪಿ ಏಕಶಬ್ದಸ್ಯ ದ್ವಿಪದಬಹುವ್ರೀಹ್ಯಾಶ್ರಯಣೇ ಅಸಂಖ್ಯಾರ್ಥತ್ವಾದೇವ ಏಕ-ದೇಹಶಬ್ದಸ್ಯ ಪೂರ್ವನಿಪಾತಾಭಾವಸಂಭವಾತ್, ತಸ್ಯ ಕೇವಲಾರ್ಥತ್ವಾಶ್ರಯಣಂ ವ್ಯರ್ಥಮಿತಿ ವಾಚ್ಯಮ್ । ಅರ್ಥಾಧಿಕ್ಯಲಾಭಾಯೈವ ತದಾಶ್ರಯಣಾತ್ । ಅತ ಏವ ಕೇವಲಾರ್ಥತ್ವ-ವಿವಕ್ಷಾವ್ಯಾವರ್ತ್ಯಪ್ರದರ್ಶನಂ ನ ಪುನಃ ಪ್ರಾಕೃತಾದಿರಿತಿ ಜ್ಞೇಯಮ್ ।

ಇಲ್ಲಿ ಒಂದು ಶಂಕೆ – ಟೀಕಾಚಾರ್ಯರಿಗೆ ಅಭಿಮತವಾದ ಬಹುವ್ರೀಹಿಸಮಾಸದಲ್ಲಿ ಸಂಖ್ಯಾವಾಚಿ-ಯಾದ ಪ್ರಯುಕ್ತ ಏಕಶಬ್ದಕ್ಕೆ ಪೂರ್ವನಿಪಾತ ಬರಲಿ ಎಂಬ ಪ್ರಸಂಗವನ್ನು ವಾರಣೆ ಮಾಡಿದರೂ

ಏಕಶಬ್ದಕ್ಕೆ ಪ್ರಕಾರಾಂತರದಿಂದ ಪೂರ್ವನಿಪಾತಪ್ರಸಕ್ತಿ ಇದ್ದೇ ಇದೆ. ಸರ್ವನಾಮತ್ವಪ್ರಯುಕ್ತ ಪೂರ್ವ ನಿಪಾತ ಬರಲಿ ಎಂದು ಭಾವ. ಅಲ್ಲ! ಕೇವಲ ಎಂಬ ಅರ್ಥವು ಏಕಶಬ್ದಕ್ಕಿದೆ. ಈ ಅರ್ಥದಲ್ಲಿ ಸರ್ವನಾಮತ್ವ ಏಕಶಬ್ದಕ್ಕೆ ಇಲ್ಲ. ಇದು ಸರಿಯಲ್ಲ.

ಏಕಶಬ್ದಕ್ಕೆ ಎಲ್ಲಿ ಸರ್ವನಾಮತ್ವ ಎಲ್ಲಿ ಸರ್ವನಾಮತ್ವ ಇಲ್ಲ ಎಂಬ ವಿಷಯವನ್ನು ಹೀಗೆ ತಿಳಿದು-ಕೊಳ್ಳಬೇಕು.

'ಏಕೋಽನ್ಯಾರ್ಥೇ ಪ್ರಧಾನೇ ಚ ಪ್ರಥಮೇ ಕೇವಲೇ ತಥಾ ।
ಸಾಧಾರಣೇ ಸಮಾನೇಽಲ್ಪೇ ಸಂಖ್ಯಾಯಾಂ ಚ ಪ್ರಯುಜ್ಯತೇ ॥'

ಎಂಬ ಕೋಶದ ಪ್ರಕಾರ ಏಕಶಬ್ದಕ್ಕೆ ಎಂಟು ಅರ್ಥಗಳು. ಅವುಗಳಲ್ಲಿ ಏಕಶಬ್ದವು ಸಂಖ್ಯಾವಾಚಕ-ವಾದ ಪಕ್ಷದಲ್ಲಿ ನಿತ್ಯ ಏಕವಚನಾಂತ. ಬೇರೆ ಏಳು ಅರ್ಥಗಳಲ್ಲಿ ಬೇರೆ ವಚನಗಳು ಕೂಡ ಬರುತ್ತವೆ. ಏಕೇ ಏಕೇಷಾಂ ಎಂದು. ಈ ರೀತಿ ಅಭಿಯುಕ್ತರು ವ್ಯಾಖ್ಯಾನಮಾಡಿದ್ದರಿಂದ ಕೇವಲ ಎನ್ನುವ ಅರ್ಥವಿರುವ ಏಕಶಬ್ದಕ್ಕೂ ಸರ್ವನಾಮತ್ವವಿರುವುದರಿಂದ ಪೂರ್ವನಿಪಾತಪ್ರಸಕ್ತಿ ಇದ್ದೇ ಇದೆ.

ಅದಕ್ಕಾಗಿ ದ್ವಿಪದಬಹುವ್ರೀಹಿಯನ್ನು ಆಶ್ರಯಿಸುತ್ತೇವೆ. ಅದು ಹೀಗೆ 'ಏಕಾಶ್ಚಾಸೌ ದೇಹಶ್ಚ ಏಕದೇಹಃ । ನಿಖಿಲಪೂರ್ಣಗುಣಾಃ ಏಕದೇಹಃ ಯಸ್ಯ ಸಃ' ಎಂದು. ಇವಾಗ ಏಕದೇಹ ಎಂಬ ಶಬ್ದವು ಸರ್ವನಾಮಸಂಜ್ಞೆಯನ್ನು ಪಡೆದಿಲ್ಲವಾದ್ದರಿಂದ ಪೂರ್ವನಿಪಾತವಿಲ್ಲ. ಇದೇ ರೀತಿ ಅನಿತ್ಯೈಕರೂಪಾ ಎಂಬಲ್ಲಿ ಹಾಗೇ ಅನುಮಾನೈಕಶರಣಂ ಎಂಬಲ್ಲೂ ಆಶ್ರಯಿಸಲಾಗಿದೆ.

ಹಾಗಾದರೆ ಸಂಖ್ಯೆಯೆಂಬ ಅರ್ಥವನ್ನು ಬಿಟ್ಟು ಬೇರೆ ಯಾವುದಾದರೊಂದು ಅರ್ಥವನ್ನಿಟ್ಟುಕೊಂಡು ಏಕಶಬ್ದಕ್ಕೆ ಪೂರ್ವನಿಪಾತವಾರಣೆ ಮಾಡಬಹುದು. ಕೇವಲ ಎಂಬ ಶಬ್ದವನ್ನು ಆಶ್ರಯಿಸಿದ್ದೇಕೆ? ಉತ್ತರ - ಅರ್ಥಾಧಿಕ್ಯಲಾಭಕ್ಕೋಸ್ಕರ. ಕೇವಲಾರ್ಥಕವಾದ ಏಕಶಬ್ದವನ್ನು ಪ್ರಯೋಗಿಸಿದಾಗ ಕೇವಲ ಗುಣಾತ್ಮಕವಾದ ದೇಹ ಭಗವಂತನಿದೆ ಎಂದು ಸಿದ್ಧವಾಗಿ ಪ್ರಾಕೃತದೇಹ ಇಲ್ಲ ಎಂದು ಸಿದ್ಧವಾಗುವುದು.

### ಏಕಶಬ್ದಕ್ಕೆ ಅನೇಕಾರ್ಥವಿದೆ

पूर्वादिभ्यो नवभ्यो वा । (७-१-१६)

वृत्तिः – एकशब्दः सङ्ख्यायां नित्यैकवचनान्तः ।

अर्थान्तरे तु द्विवचनबहुवचने अपि स्तः । 'एकोऽन्यार्थे प्रधाने च ....' इति कोशः । (बाल-मनोरमा)

तत्र 'एको गोत्रे' इति नियमविधिः । गोत्रे एक एव प्रत्ययः स्यादिति । तत्रापि प्रथमातिक्रमे कारणाभावान्मूलप्रकृतेर्यः प्रत्ययः प्राप्तुं योग्यः स एवेति फलति । सूत्रे एकशब्दः प्रथमपर्यायः "एके मुख्यान्यकेवलाः इत्यमरः । मुखे भवो मुख्यः प्रथमः ।" एकोऽन्यार्थे प्रधाने च प्रथमे केवले तथा" इति कोशान्तरम् । तथाच प्रथमः मूलप्रकृतेरिव गोत्रे विवक्षिते स्वयोग्यप्रत्ययलम्भ इति व्याख्यान्तरम् । तदेतत्सर्वं श्लोकद्वयेन सङ्गृह्णाति । (बालमनोरमा)

ಏಕಶಬ್ದಕ್ಕೆ ಅನೇಕಾರ್ಥವಿದೆಯೆಂದು ಸಿದ್ಧಾಂತಕೌಮುದೀವ್ಯಾಖ್ಯಾನವಾದ ಬಾಲಮನೋರಮಾದಲ್ಲಿ ಕೋಶವಾಕ್ಯವನ್ನು ಉಲ್ಲೇಖಿಸಿ ತಿಳಿಸಿದ್ದಾರೆ. ಸರ್ವಾದೀನಿ ಸರ್ವನಾಮಾನಿ ಎಂಬ ಪಾಣಿನಿಸೂತ್ರದ ಸಂದರ್ಭದಲ್ಲಿ 'ಪೂರ್ವಾದಿಭ್ಯೋ ನವಭ್ಯೋ ವಾ' ಎಂಬ ಸೂತ್ರದ ಕೊನೆಗೆ ಏಕಶಬ್ದದ ವಿವರಣೆಯನ್ನು ಕೊಡುವಾಗ ಈ ಭಾಗ ಬಂದಿದೆ. ಇನ್ನು ಏಕೋ **ಗೋತ್ರೇ** ಎಂಬ ತದ್ಧಿತಪ್ರಕರಣದ ಸೂತ್ರದ ಸಂದರ್ಭದಲ್ಲಿ ಏಕಃ ಎಂದು ಸಾಕ್ಷಾತ್ ಸೂತ್ರದಲ್ಲಿ ಪಠಿತವಾದ ಶಬ್ದಕ್ಕೆ ವಿವರಣೆಯನ್ನು ಕೊಡುವಾಗ ಅಲ್ಲಿಯೂ 'ಏಕೋನ್ಯಾರ್ಥೇ ಪ್ರಧಾನೇ ಚ' ಎಂಬ ಕೋಶದ ಉಲ್ಲೇಖವನ್ನು ಬಾಲಮನೋರಮಾಕಾರನು ಮಾಡಿದ್ದಾನೆ.

## ಏಕಶಬ್ದವು ಸಂಖ್ಯಾರ್ಥಕವೋ, ಮುಖ್ಯಾರ್ಥಕವೋ, ಅನ್ಯಾರ್ಥಕವೋ, ಕೇವಲಾರ್ಥಕವೋ?

(ಲಘುಸರಂಜನೀ) — ನನ್ವೇಕಶಬ್ದಃ ಕಿಂ ಸಂಖ್ಯಾರ್ಥಃ? ಉತ 'ಏಕೇ ಮುಖ್ಯಾನ್ಯಕೇವಲಾ' ಇತ್ಯಭಿಧಾನಾತ್ ಮುಖ್ಯಾರ್ಥೋ ಚಾನ್ಯಾರ್ಥಃ ಕೇವಲಾರ್ಥೋ ವಾ । ಸರ್ವತ್ರಾಪಿ ಸ ಕಿಂ ಗುಣವಿಶೇಷಣಂ ದೇಹವಿಶೇಷಣಂ ವಾ । ಆದ್ಯೇ ನ ತಾವತ್ಸಂಖ್ಯಾರ್ಥಃ । ಭಗವದ್ದೇಹಸ್ಯೈಕಗುಣಾತ್ಮಕತ್ವಪ್ರಾಪ್ತ್ಯಾ 'ಆನಂದಜ್ಞಾನಶಕ್ತ್ಯಾದಿದೇಹಂ ವಿಷ್ಣುಂ ತು ಯೇ ಜನಾಃ' ಇತಿ ಬೃಹದ್ಭಾಷ್ಯಾದಿವಿರೋಧಾತ್ । ಭಗವದ್ಗುಣಸ್ಯೈಕತ್ವೇ 'ನಿಖಿಲ' ಇತ್ಯನೇನ ವಿರೋಧಾಚ್ಚ ।

ಸಂಖ್ಯಾರ್ಥಸ್ಯೈಕಶಬ್ದಸ್ಯ ಪೂರ್ವಾದಿಶಬ್ದಾನಾಂ ಸಮಾನಾಧಿಕರಣೇನ ಸಮಾಸವಿಧಾಯಕೇ 'ಪೂರ್ವಕಾಲೈಕಸರ್ವಜರತ್ಪುರಾಣನವಕೇವಲಾಃ ಸಮಾನಾಧಿಕರಣೇನ' ಇತಿ ಸೂತ್ರೇ ಏಕಶಬ್ದಸ್ಯ ಪ್ರಥಮಾವಿಭಕ್ತ್ಯಾ ನಿರ್ದೇಶಾತ್ ತಸ್ಯ 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಇತಿ ಉಪಸರ್ಜನಸಂಜ್ಞಾಯಾಮುಪಸರ್ಜನಂ ಪೂರ್ವಮ್ ಇತ್ಯನೇನ ಪೂರ್ವನಿಪಾತಪ್ರಸಂಗಾಚ್ಚ ।

"ಏಕಶಬ್ದಃ ಕೇವಲಾರ್ಥಃ" - ಅಲ್ಲ! ಏಕಶಬ್ದಕ್ಕೆ ಇಲ್ಲಿ ಸಂಖ್ಯೆ ಎಂದರ್ಥವೋ ಅಥವಾ 'ಏಕೇ ಮುಖ್ಯಾನ್ಯಕೇವಲಾಃ' ಎಂಬ ಕೋಶದ ಬಲದಿಂದ ಮುಖ್ಯ ಎಂಬ ಅರ್ಥವೋ ಅಥವಾ ಬೇರೆ

ಎಂಬ ಅರ್ಥವೋ ಅಥವಾ ಕೇವಲ ಎಂಬರ್ಥವೋ? ಇನ್ನು ಎಲ್ಲ ವಿಕಲ್ಪಗಳಲ್ಲಿಯೂ ಏಕಶಬ್ದದ ಅರ್ಥವು ನಿಖಿಲಪೂರ್ಣಗುಣೈಕದೇಹಂ ಎಂಬಲ್ಲಿ ಗುಣಕ್ಕೆ ವಿಶೇಷಣವಾಗಿದೆಯೋ ಅಥವಾ ದೇಹಕ್ಕೆ ವಿಶೇಷಣವಾಗಿದೆಯೋ? ಮೊದಲನೆಯ ಕಲ್ಪ ಅರ್ಥಾತ್ ಸಂಖ್ಯೆ ಎಂಬರ್ಥವು ಏಕ-ಶಬ್ದಕ್ಕಿದೆ ಎನ್ನುವುದು ಸರಿಯಿಲ್ಲ. ಆಗ ಏಕಶಬ್ದಕ್ಕೆ 'ಪ್ರಥಮಾನಿರ್ದಿಷ್ಟಂ ಸಮಾಸೇ ಉಪಸರ್ಜನಮ್' ಎಂಬ ಸೂತ್ರದಿಂದ ಸಮಾಸವಿಧಾಯಕವಾದ ಶಾಸ್ತ್ರದಲ್ಲಿ ಏಕಶಬ್ದವನ್ನು ಪ್ರಥಮಾವಿಭಕ್ತ್ಯಂತವಾಗಿ ಹೇಳಿದ್ದರಿಂದ ಅದಕ್ಕೆ ಉಪಸರ್ಜನಸಂಜ್ಞೆ ಇರುವ ಪ್ರಯುಕ್ತ 'ಉಪಸರ್ಜನಂ ಪೂರ್ವಂ' ಎಂಬ ಸೂತ್ರದಿಂದ ಪೂರ್ವನಿಪಾತ ಬರಬೇಕಿತ್ತು. ಹಾಗೆಯೇ ಭಗವಂತನ ದೇಹವು ಒಂದೇ ಗುಣಸ್ವರೂಪವಾದೀತು। ಹಾಗಾಗಿ –

'ತೇ ಚ ಸರ್ವೇ ಗುಣಾಃ ಪೂರ್ಣಾಸ್ತಚ್ಛರೀರಃ ಪರಃಸ್ಮೃತಃ ।
ಆನಂದಜ್ಞಾನಶಕ್ತ್ಯಾದಿದೇಹಂ ವಿಷ್ಣುಂ ತು ಯೇ ಜನಾಃ ॥
ಅದೇಹಂ ಭೂತದೇಹಂ ವಾ ವಿದುಸ್ತೇ ಚಾಧರಂ ತಮಃ ।
ತಥಾ ಪ್ರಕೃತಿದೇಹಜ್ಞಾಃ ಕರ್ಮದೇಹವಿದೋಽಪಿ ವಾ ॥' (ಬೃಹದ್ಭಾಷ್ಯ 3-5-4)

– ವಿಷ್ಣುವಿನ ಎಲ್ಲಾ ಗುಣಗಳು ಪ್ರತಿಯೊಂದೂ ಪೂರ್ಣವಾಗಿವೆ. ವಿಷ್ಣುವಿಗೆ ಗುಣಸ್ವರೂಪಭೂತ-ವಾದ ಶರೀರವಿದೆ. ಗುಣಗಳೆಂದರೆ ಆನಂದ, ಜ್ಞಾನ, ಶಕ್ತಿ ಮೊದಲಾದವು. ಇಂತಹ ಶ್ರೀಹರಿಗೆ ಶರೀರವಿಲ್ಲವೆಂದು ಅಥವಾ ಪ್ರಾಕೃತಶರೀರವಿದೆಯೆಂದು ತಿಳಿಯಬಾರದು. ಅದೇ ರೀತಿ ಕರ್ಮನಿರ್ಮಿತವಾದದ್ದು ಅವನ ಶರೀರ ಎಂದು ತಿಳಿಯಬಾರದು. ಒಂದು ವೇಳೆ ಹೀಗೆ ತಿಳಿದಲ್ಲಿ ಅಂಧಂತಮಸ್ಸಿಗೆ ಹೋಗುವರು.

– ಎಂಬ ಬೃಹದಾರಣ್ಯಕಭಾಷ್ಯ ಮೊದಲಾದ ವಿರೋಧ ಬರುವುದು. ಹಾಗೆಯೇ ಭಗವಂತನ ಗುಣ ಒಂದೇ ಆದರೆ ನಿಖಿಲ ಎಂಬ ಪದದಿಂದ ವಿರೋಧ ಬರುವುದು. ಹಾಗಾಗಿ ಏಕಶಬ್ದಕ್ಕೆ ಸಂಖ್ಯೆ ಎಂಬ ಅರ್ಥವು ಸ್ವೀಕಾರಾರ್ಹವಲ್ಲ.

## ಕೇವಲಾರ್ಥಕವಾದುದು ಏಕಶಬ್ದ

(ಲಘುರಸರಂಜನೀ) – ನಾಪಿ ಮುಖ್ಯಾರ್ಥೋಽನ್ಯಾರ್ಥಶ್ಚ । ತಾವತಾ ಭಗವತೋ ಮುಖ್ಯಾದಿ-ಗುಣಾತ್ಮಕದೇಹಸಿದ್ಧಾವಪೀತರನಿಷೇಧಕಾಭಾವೇನಾನ್ಯದೇಹರಹಿತತ್ವಾಲಾಭಾತ್ । ನಾಪಿ ಕೇವ-ಲಾರ್ಥಃ । ವ್ಯಾವರ್ತ್ಯಾಭಾವಾತ್ । ದ್ವಿತೀಯೇಽಪಿ ನ ತಾವತ್ ಸಂಖ್ಯಾರ್ಥಃ । ಭಗವ-ದ್ದೇಹಸ್ಯೈಕತ್ವೇ 'ತಸ್ಯ ಹ ವಾ ಏತಸ್ಯ ಪರಮಸ್ಯ ತ್ರೀಣಿ ರೂಪಾಣಿ ಕೃಷ್ಣ ರಾಮಃ ಕಪಿಲ' ಇತಿ । 'ತಸ್ಯ ಹ ವಾ ಏತಸ್ಯ ಪರಮಸ್ಯ ಪಂಚರೂಪಾಣಿ ದಶರೂಪಾಣಿ ಶತರೂಪಾಣಿ ಸಹಸ್ರರೂಪಾಣಿ

ಅಮಿತರೂಪಾಣಿ' ಇತ್ಯಾದಿಶ್ರುತೌ ಬಹುರೂಪೋಕ್ತ್ಯೈವ ಬಹುದೇಹಾನಾಮಪ್ಯುಕ್ತತ್ವೇನ ತದ್ವಿರೋಧಾತ್ । ನಾಪಿ ಮುಖ್ಯಾರ್ಥೋಽನ್ಯಾರ್ಥಶ್ಚ । ಇತರನಿಷೇಧಕಾಭಾವೇ ನಾನ್ಯದೇಹರಹಿತತ್ವಾಲಾಭಾತ್ । ನಾಪಿ ಕೇವಲಾರ್ಥಃ । ಭಗವತೋ ದೇಹಮಾತ್ರಾಂಗೀಕಾರೇ ಇಂದ್ರಿಯಗುಣಕ್ರಿಯಾಭಾವಪ್ರಸಂಗಾತ್ । ದೇಹಸ್ಯ ನಿಖಿಲಪೂರ್ಣಗುಣಾತ್ಮಕತ್ವಾಸಿದ್ಧೇಶ್ಚ ಇತ್ಯಾಶಂಕ್ಯ ಪಕ್ಷಾಂತರಾಣ್ಯನಂಗೀಕೃತ್ಯ ಕೇವಲಾರ್ಥತ್ವಮಾಹ — ಏಕಶಬ್ದಃ ಕೇವಲಾರ್ಥ ಇತಿ ॥ ತದೇವ ವ್ಯನಕ್ತಿ — ತ ಏವೇತಿ ॥ ಗುಣಾ ಏವೇತ್ಯರ್ಥಃ । ಅನೇಕಶಬ್ದೋ ಗುಣವಿಶೇಷಣಮೇವ ಇತ್ಯುಕ್ತಂ ಭವತಿ । ಏತತ್ಪಕ್ಷೋಕ್ತದೋಷಂ ಪರಿಹರ್ತುಂ ತದ್ವ್ಯಾವೃತ್ತ್ಯಂ ದರ್ಶಯತಿ — ನ ಪುನರಿತಿ ॥ ಭೂತದೇಹಾದಿರಾದಿಪದಾರ್ಥಃ ।

ಮುಖ್ಯ ಎಂಬ ಅರ್ಥವನ್ನು ಹಾಗೂ ಅನ್ಯ ಎಂಬ ಅರ್ಥವನ್ನು ಏಕಶಬ್ದಕ್ಕೆ ಒಪ್ಪಲು ಬರುವುದಿಲ್ಲ. ಏಕೆಂದರೆ ಈ ರೀತಿ ಮುಖ್ಯ ಹಾಗೂ ಬೇರೆ ಎಂಬರ್ಥವನ್ನು ಸ್ವೀಕರಿಸಿದ ಮಾತ್ರದಿಂದ ಭಗವಂತನಿಗೆ ಮುಖ್ಯವಾದ ಆನಂದ ಮೊದಲಾದ ಗುಣಾತ್ಮಕವಾದ ದೇಹ ಸಿದ್ಧವಾದರೂ ಈ ಗುಣಾತ್ಮಕವಾದ ದೇಹಕ್ಕಿಂತ ಬೇರೆಯಾದ ದೇಹವು ಇಲ್ಲ ಎಂಬ ಅರ್ಥದ ಲಾಭವಾಗುವುದಿಲ್ಲ. ಇನ್ನು ಬೇರೆ ಎಂಬ ಅರ್ಥವನ್ನು ಸ್ವೀಕರಿಸಿದರೆ ಬೇರೆ ಬೇರೆ ಗುಣಗಳೇ ದೇಹವಾಗಿ ಉಳ್ಳವನು ಎಂದರ್ಥವಷ್ಟೇ ಬಂದೀತು।

ಕೇವಲ ಎಂಬ ಅರ್ಥವು ಅಯುಕ್ತ. ಏಕೆಂದರೆ ಇದರಿಂದ ವ್ಯಾವೃತ್ತಿಹೊಂದುವಂತಹ ವಸ್ತುವು ಯಾವುದೂ ಇಲ್ಲ. ಇನ್ನು ಎರಡನೆಯ ಕಲ್ಪದಲ್ಲಿ ಸಂಖ್ಯೆ ಎಂಬ ಅರ್ಥವು ಏಕಶಬ್ದಕ್ಕೆ ಹೇಳಲು ಬರುವುದಿಲ್ಲ. ಅರ್ಥಾತ್ ದೇಹಕ್ಕೆ ವಿಶೇಷಣವಾಗಿ ಏಕಶಬ್ದಕ್ಕೆ ಸಂಖ್ಯೆ ಎಂಬ ಅರ್ಥವನ್ನು ಸ್ವೀಕರಿಸಿದ ಪಕ್ಷದಲ್ಲಿಯೂ ಅನೇಕ ವಾಕ್ಯಗಳ ವಿರೋಧ ಬರುವುದು. 'ತಸ್ಯ ಹ ವಾ ಏತಸ್ಯ ಪರಮಸ್ಯ ತ್ರೀಣಿ ರೂಪಾಣಿ ಕೃಷ್ಣೋ ರಾಮಃ ಕಪಿಲಃ' ಎಂದು. 'ತಸ್ಯ ಹ ವಾ ಏತಸ್ಯ ಪರಮಸ್ಯ ಪಂಚರೂಪಾಣಿ ದಶರೂಪಾಣಿ ಶತರೂಪಾಣಿ ಸಹಸ್ರರೂಪಾಣಿ ಅಮಿತರೂಪಾಣಿ' ಮುಂತಾದ ಕಡೆ ಬಹುರೂಪಗಳನ್ನು ಹೇಳಿದ್ದರಿಂದಲೇ ಬಹುದೇಹಗಳನ್ನು ಹೇಳಿದಂತಾಯಿತು ಎಂದಾದ್ದರಿಂದ ಅದರ ವಿರೋಧ. ಇನ್ನು ಮುಖ್ಯಾರ್ಥ ಹಾಗೂ ಅನ್ಯಾರ್ಥ ಸ್ವೀಕರಿಸಿದರೆ ಗುಣಾತ್ಮಕದೇಹಕ್ಕಿಂತ ಇತರವಾದ ದೇಹವಿಲ್ಲ ಎಂದು ಹೇಳಲು ಅಸಾಧ್ಯ. ಇನ್ನು ಕೇವಲ ಎಂಬರ್ಥವನ್ನು ಸ್ವೀಕರಿಸಿದರೆ ಅದೂ ದೇಹಕ್ಕೆ ವಿಶೇಷಣವಾದರೆ ಕೇವಲ ಭಗವಂತನಿಗೆ ದೇಹವನ್ನು ಒಪ್ಪಿ ಇಂದ್ರಿಯ, ಗುಣ, ಕ್ರಿಯೆ ಇವುಗಳನ್ನು ಒಪ್ಪದೇ ಇರುವ ಪ್ರಸಂಗ ಬಂದೀತು। ಹಾಗೆಯೇ ದೇಹವು ನಿಖಿಲಪೂರ್ಣಗುಣಾತ್ಮಕ ಎಂಬುದು ಅಸಿದ್ಧವಾದದ್ದೂ ಆಗಿದೆ. ಇಷ್ಟೆಲ್ಲ ಆಕ್ಷೇಪಗಳನ್ನು ಪರಿಹರಿಸಲು 'ಏಕಶಬ್ದಃ ಕೇವಲಾರ್ಥಃ' ಎಂದು ಕೇವಲ ಎಂಬ ಅರ್ಥವನ್ನು ಸ್ವೀಕರಿಸಿದ್ದಾರೆ. ನಂತರ ಈ ಕೇವಲ

ಎಂಬ ಅರ್ಥವು ಗುಣಗಳಿಗೆ ವಿಶೇಷಣವಾಗಿದೆ ಎಂಬುದನ್ನು ಹೇಳಿದಂತಾಯಿತು. ಇನ್ನು ಗುಣಗಳಿಗೂ ದೇಹಕ್ಕೂ ಅತ್ಯಂತಾಭೇದವೇ. ಇನ್ನು ಏಕಶಬ್ದಕ್ಕೆ ಕೇವಲ ಎಂಬರ್ಥವನ್ನು ಹೇಳಿದ್ದರಿಂದ ಭೂತನಿರ್ಮಿತವಾದ ದೇಹ ಇಲ್ಲ ಎಂದು "ನ ಪುನಃ ಪ್ರಾಕೃತಾದಿಃ" ಎಂದು ಸುಧಾದಲ್ಲಿ ಏಕಶಬ್ದವ್ಯಾವರ್ತ್ಯವನ್ನು ತಿಳಿಸಿದ್ದಾರೆ.

* – ತಥಾ ಚ ಚತುರ್ವೇದಶಿಖಾಯಾಮ್- 'ತಸ್ಯ ಹ ವಾ ಏತಸ್ಯ ಪರಮಸ್ಯ ತ್ರೀಣಿ ರೂಪಾಣಿ ಕೃಷ್ಣೋ ರಾಮಃ ಕಪಿಲ ಇತಿ। ತಸ್ಯ ಹ ವಾ ಏತಸ್ಯ ಪರಮಸ್ಯ ಪಂಚರೂಪಾಣಿ ದಶರೂಪಾಣಿ ಶತರೂಪಾಣಿ ಸಹಸ್ರರೂಪಾಣ್ಯಮಿತರೂಪಾಣಿ । ತಾನಿ ಹ ವಾ ಏತಾನಿ ಸರ್ವಾಣಿ ಪೂರ್ಣಾನಿ ಸರ್ವಾಣ್ಯನಂತಾನಿ ಸರ್ವಾಣ್ಯಸಮ್ಮಿತಾನಿ । ಅಥಾವರಾಃ ಸರ್ವ ಏವಾಪೂರ್ಣಾಃ ಸರ್ವ ಏವ ಬಧ್ಯಂತೇಽಥ ಮುಚ್ಯಂತೇ ಚ ಕೇಚನ' ಇತಿ ॥ (ಬ್ರ.ಸೂ. 2-3-49)

– ಅರ್ಥ– ಪರಮಾತ್ಮನಿಗೆ ಮೂರು ರೂಪಗಳಿವೆ. ಕೃಷ್ಣ ರಾಮ ಕಪಿಲ ಎಂದು. ಇದೊಂದು ವ್ಯೂಹ. ಇನ್ನು ಐಮರೂಪಗಳ ವ್ಯೂಹ ಪರಮಾತ್ಮನಿಗಿದೆ – ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಎಂದು. ಹತ್ತುರೂಪಗಳ ವ್ಯೂಹ ಮತ್ಸ್ಯಾದಿಗಳು. ನಾರಾಯಣಾದಿ-ಅಷ್ಟೋತ್ತರಶತನಾಮಗಳಿಂದ ಹೇಳಲ್ಪಡುವ ಒಂದು ವ್ಯೂಹ. ವಿಶ್ವಾದಿಸಹಸ್ರರೂಪಗಳ ವ್ಯೂಹ. ಅಜಿತಾದಿ ಅನಂತರೂಪಗಳ ವ್ಯೂಹ. ಈ ಎಲ್ಲ ರೂಪಗಳೂ ಗುಣಪೂರ್ಣಗಳಾಗಿವೆ. ಹಾಗೇ ಸಕಲದೇಶಗಳಲ್ಲಿ ಇದ್ದು ನಾಶರಹಿತವಾಗಿವೆ. ಈ ರೂಪಗಳಿಗೆ ಸದೃಶವಾದ ವಸ್ತುಗಳು ಇಲ್ಲವೇ ಇಲ್ಲ. ಮಿತಿರಹಿತವಾಗಿವೆ. ಇದಿಷ್ಟು ಪರಚೇತನನಾದ ಪರಮಾತ್ಮನನ ಬಗ್ಗೆ ಹೇಳಿದ್ದು.

ಅವರ ಚೇತನರ ಬಗ್ಗೆ ಈಗ ಹೇಳುತ್ತಿದ್ದಾರೆ. ಎಲ್ಲ ಜೀವರು ಅಪರಿಪೂರ್ಣರೇ. ಎಲ್ಲರಿಗೂ ಬಂಧವಿದೆ. ಆದರೆ ಮೋಕ್ಷಯೋಗ್ಯರಿಗೆ ಮಾತ್ರ ಮೋಕ್ಷವಿದೆ. – ಇದಿಷ್ಟೂ ಚತುರ್ವೇದಶಿಖಾದಲ್ಲಿ ನಿರೂಪಣೆ ಮಾಡಿದ್ದಾರೆ.

– (ಭಾಷ್ಯದೀಪಿಕಾ) ಪರಾವರಭೇದೇನ ಚೇತನದ್ವೈವಿಧ್ಯಮಭಿಧಾಯ ತತ್ರ ಪರೋ ನಾರಾಯಣ ಇತ್ಯಪ್ಯಭಿಧಾಯ, ತಸ್ಯ ವ್ಯೂಹರೂಪಾಣ್ಯುಚ್ಯಂತೇ – ತಸ್ಯೇತ್ಯಾದಿನಾ ॥ 'ತಸ್ಯ' ಪ್ರಸಿದ್ಧಸ್ಯ 'ಏತಸ್ಯ' ಪ್ರಕೃತಸ್ಯ 'ಪರಮಸ್ಯ' ನಾರಾಯಣಸ್ಯ ಕೃಷ್ಣೋ ರಾಮಃ ಕಪಿಲ ಇತಿ ತ್ರೀಣಿ ರೂಪಾಣೀತ್ಯನ್ವಯಃ । 'ತಸ್ಯ' ಇತ್ಯಾದೇಃ ಸರ್ವತ್ರಾನ್ವಯಗ್ರಹಣಾಯ ದ್ವಿರ್ಗ್ರಹಣಮ್ । ಕೃಷ್ಣಾದಿತ್ರಯಂ ಕಶ್ಚನ ವ್ಯೂಹಃ। ನ ತು 'ಪಂಚಾತ್ಮಕಃ' ಇತ್ಯುಕ್ತಸಪ್ತವ್ಯೂಹಾಂತರ್ಗತಮ್। ಕೇಚಿತ್ತು – ಕೃಷ್ಣಾದಿಕಸ್ತು ನ ವ್ಯೂಹಃ ನಾತಿರಿಕ್ತವ್ಯೂಹಃ ಇತಿ ಟೀಕಾರ್ಥಮಾಶ್ರಿತ್ಯ ಸಪ್ತವ್ಯೂಹಾಂತರ್ಗತಮೇವೈತತ್ - ಇತ್ಯಾಹುಃ । 'ಪಂಚ' ನಾರಾಯಣಾದ್ಯನಿರುದ್ಧಾಂತಾನಿ 'ದಶ' ಮತ್ಸ್ಯಾದೀನಿ 'ಶತಂ' ನಾರಾಯಣಾದ್ಯಷ್ಟೋತ್ತರಶತನಾಮವಾಚ್ಯಾನಿ । ವಿಶ್ವಾದೀನಿ ಸಹಸ್ರಾಣಿ । ಅಜಿತಾದೀನ್ಯನಂತಾನಿ ರೂಪಾಣಿ ಪೂರ್ಣಾನಿ

ದೇಶಕಾಲಾಭ್ಯಾಮನಂತಾನಿ ಗುಣತಃ 'ಅಸಮ್ಮಿತಾನಿ' ನಿರುಪಮಾನಿ। 'ಅಥ' ಇತಿ ಪ್ರತಿಜ್ಞಾಂತರಮ್ । 'ಅವರಾಃ' ಚೇತನಾಃ । 'ಉಚ್ಯಂತೇ' ಇತಿ ಶೇಷಃ । ತೇಷಾಂ ಗುಣಾನಾಹ – ಸರ್ವ ಇತಿ ॥ 'ಅಪೂರ್ಣಾಃ' ದೇಶಕಾಲಗುಣೈಃ 'ಬಧ್ಯಂತೇ' ಪಂಚಭಿರ್ಭೂತೈಃ । ಅಥ ಮುಚ್ಯಂತೇ ತೇಭ್ಯ ಏವ । ಅಪೂರ್ಣತ್ವಬಂಧಯೋಃ ಸರ್ವಜೀವಸಾಧಾರಣ್ಯಾದ್ವಿಃ ಸರ್ವಶಬ್ದಪ್ರಯೋಗಃ । ಬದ್ಧೇಷು ಸರ್ವಮುಕ್ತೌ ಸಂಸಾರಾಭಾವಾಪತ್ತ್ಯಾ 'ಕೇಚನ' ಇತ್ಯುಕ್ತಮ್ । ನ ಚ ಕ್ರಮೇಣ ಸರ್ವಮುಕ್ತೌ ಸಂಸಾರಾಭಾವಪ್ರಸಂಗ ಇತ್ಯಾಶಂಕಾಪರಿಹಾರಾಯ ಸರ್ವೇ ಜೀವಾಃ ಅನಂತಾ ಇತಿ ವಿಪರಿಣಾಮೇನಾತ್ರಾಪಿ ಸಂಯೋಜ್ಯಮ್ । ಸಂಖ್ಯಾತೋಽನಂತಾ ಇತ್ಯರ್ಥಃ । 'ಅಪೂರ್ಣಾಃ ಬಧ್ಯಂತೇ ಅಥ ಮುಚ್ಯಂತೇ' ಇತ್ಯನೇನ ಜೀವಾನಾಮಪೂರ್ಣತ್ವಬದ್ಧತ್ವಾನಿತ್ಯತ್ವಮುಕ್ತತ್ವಾನಿ ಈಶ್ವರಾನಿಷ್ಠಾನಿ ಸಾಮಾನ್ಯಾನ್ಯುಕ್ತಾನಿ ಭವಂತಿ । 'ಇತಿ ಚತುರ್ವೇದಶಿಖಾಯಾಮ್' ಇತ್ಯ- ನ್ವಯಃ। 'ಯತ ಉಕ್ತಮತೋ ನ ಹೇತ್ವಸಿದ್ಧಿಃ' ಇತಿ ಶೇಷಃ।

## ಸ್ವವ್ಯತಿರಿಕ್ತ ಎಂದದ್ದೇಕೆ?

(ಪರಿಮಳ)– 'ಪಾರತಂತ್ರ್ಯಾದಿಭ್ಯಃ' ಇತ್ಯುಕ್ತ್ವಾ ಕಥಂ ಸರ್ವೋತ್ತಮತ್ವಂ ನಾರಾಯಣಸ್ಯ? ಇತ್ಯೇತದಂಶೋಽಪಿ ಉಪಪಾದಿತೋ ಧ್ಯೇಯಃ । ಈಶ್ವರಸ್ಯ ಜನ್ಮಲಯಾದ್ಯಭಾವೋಕ್ತಿಪರೈಃ ಅಸಂಭವಸ್ತು ಇತ್ಯಾದ್ಯಧಿಕರಣೈರವಿರೋಧಾಯ ವಾ ವ್ಯಾಘಾತಪರಿಹಾರಾಯ ವಾಽಽಹ – ಸ್ವವ್ಯತಿರಿಕ್ತೇತಿ ॥ ಏತೇನಾಪಿ ಸರ್ವೋತ್ತಮತ್ವಮ್ ಅಸ್ಯೋಪಪಾದಿತಂ ಧ್ಯೇಯಮ್ ।

'ನಿಷ್ಕ್ರಾಂತಃ ದೋಷೇಭ್ಯಃ = ಪಾರತಂತ್ರ್ಯಾದಿಭ್ಯಃ ಇತಿ ನಿರ್ದೋಷಃ' ಎಂದು ನಿರ್ದೋಷಪದಕ್ಕೆ ವ್ಯಾಖ್ಯಾನ ಮಾಡುವಾಗ ಪಾರತಂತ್ರ್ಯಾದಿ ದೋಷಗಳಿಂದ ರಹಿತನಾದವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಭಗವಂತನಲ್ಲಿ ಪಾರತಂತ್ರ್ಯವಿಲ್ಲವೆಂದರೆ ಸ್ವಾತಂತ್ರ್ಯವಿದೆ ಎಂದರ್ಥ. ಸ್ವತಂತ್ರನಾದ ವ್ಯಕ್ತಿಯಾದರೋ ಜಗತ್ತಿನಲ್ಲಿ ಯಾರೂ ಇಲ್ಲ. ಇರುವುದು ಒಬ್ಬನೇ ಆ ಪರಮಾತ್ಮ ಮಾತ್ರ. ಹಾಗಾಗಿ ನಿರ್ದೋಷ ಎಂಬ ಪದದ ಈ ರೀತಿಯ ವ್ಯಾಖ್ಯಾನದಿಂದ ನಾರಾಯಣನು ಸರ್ವೋತ್ತಮ ಎಂದು ಸಿದ್ಧನಾಗುವನು.

ಅಸ್ಯ ಉದ್ಭವಾದಿದಂ ಎಂಬ ಪದದ ವ್ಯಾಖ್ಯಾನಮಾಡುತ್ತ ಅಸ್ಯ ಎಂಬ ಪದದಿಂದ ಭಗವದ್ವ್ಯತಿರಿಕ್ತವಾದ ಜಗತ್ತನ್ನು ಗ್ರಹಿಸಬೇಕು ಎಂದಿದ್ದಾರೆ. ಇಲ್ಲಿ 'ಸ್ವವ್ಯತಿರಿಕ್ತ' ಎಂದು ಹೇಳಿದ್ದಕ್ಕೆ ಏನು ಪ್ರಯೋಜನ ಎಂದರೆ ಅಧಿಕರಣವಿರೋಧಪರಿಹಾರ ಅಥವಾ ವ್ಯಾಘಾತಪರಿಹಾರವೇ ಆಗಿದೆ. ಅದು ಹೀಗೆ – ಈಶ್ವರನಿಗೆ ಜನ್ಮ ಲಯ ಮೊದಲಾದವುಗಳಿಲ್ಲ ಎಂದು ಹೇಳುವ ಅಸಂಭವಸ್ತು (2-3-9) ಮುಂತಾದ ಅಧಿಕರಣಗಳಿವೆ. ಹಾಗಾಗಿ ಅಸ್ಯ ಉದ್ಭವಾದಿದಂ ಎಂಬಲ್ಲಿ 'ಅಸ್ಯ' ಪದದಿಂದ ಭಗವಂತನನ್ನು ಗ್ರಹಿಸಿದರೆ ಭಗವಂತನಿಗೂ ಜನ್ಮ ಲಯಾದಿಗಳನ್ನು ಹೇಳಿದಂತಾಗುವುದು.

ಅದಕ್ಕಾಗಿ ಸ್ವವ್ಯತಿರಿಕ್ತ ಎಂದು ಹೇಳಿದ್ದು. ಅಲ್ಲದೆ ಸ್ವವ್ಯಾಘಾತವು ಉಂಟಾಗುವುದು — ತಾವೇ ಆ ಅಧಿಕರಣಗಳಿಗೆ ವ್ಯಾಖ್ಯಾನಮಾಡುವಾಗ ಈಶ್ವರನಿಗೆ ಜನ್ಮಲಯಗಳಿಲ್ಲ ಎಂದು ಹೇಳಿ ಇಲ್ಲಿ ಅಸ್ಮೋಧ್ಯವಾದಿದಂ ಎಂಬಲ್ಲಿ ಈಶ್ವರನಿಗೆ ಜನ್ಮಲಯಾದಿಗಳಿವೆ ಎಂದು. ಹೀಗೆ ಜನ್ಮಲಯಾದಿಗಳು ಇಲ್ಲದ ವ್ಯಕ್ತಿ ಆ ಪರಮಾತ್ಮನೊಬ್ಬನೇ. ಹಾಗಾಗಿ ಅವನು ಸರ್ವೋತ್ತಮನೇ ಆಗುವನು.

## ನಿರ್ದೋಷಪದಾರ್ಥನಿರೂಪಣೆ

(ಲಘುರಸರಂಜನೀ) — ನಿರಾದಯಃ ಕ್ರಾಂತಾದ್ಯರ್ಥೇ ಪಂಚಮ್ಯಾ ಇತ್ಯುಕ್ತ್ಯನುಸಾರೇಣ ವಿಗ್ರಹ-ಪ್ರದರ್ಶನಪೂರ್ವಕಂ ವ್ಯಾಚಷ್ಟೇ — ನಿಷ್ಕ್ರಾಂತ ಇತಿ ॥ ದೋಷೇಭ್ಯ ಇತ್ಯನೇನ ಮೂಲೇ ನಿರುಪಪದಂ ದೋಷಪದಮಶೇಷದೋಷಪರಮಿತಿ ಸೂಚಯತಿ । ದುಃಖಾಜ್ಞಾನಾದಯಃ ಆದಿ-ಪದಾರ್ಥಃ ।

"ನಿಷ್ಕ್ರಾಂತಃ ದೋಷೇಭ್ಯಃ ಪಾರತಂತ್ರ್ಯಾದಿಭ್ಯಃ" - ಇಲ್ಲಿ ದೋಷ ಎಂಬುದನ್ನು ಉಪಪದ-ರಹಿತವಾಗಿ ಹೇಳಿದ್ದರಿಂದ ಎಲ್ಲ ವಿಧವಾದ ದೋಷಗಳನ್ನೂ ಗ್ರಹಿಸಬೇಕು ಎಂಬುದನ್ನು ಸೂಚಿಸು-ತ್ತಿದ್ದಾರೆ. 'ಪಾರತಂತ್ರ್ಯಾದಿಭ್ಯಃ' ಎಂಬಲ್ಲಿ ಇರುವ ಆದಿ ಎಂಬ ಪದದಿಂದ ದುಃಖ ಅಜ್ಞಾನ ಮೊದಲಾದವುಗಳನ್ನು ಗ್ರಹಿಸಬೇಕು.

## ಲಬ್ಧಜನ್ಮನ ಏವ ಸ್ಥಿತ್ಯಾದಿ ಇತಿ ಜನ್ಮನಃ ಆದಿತ್ವಂ

(ಪರಿಮಳ)- ಜನ್ಮಾದ್ಯಷ್ಟಕಮಿತಿ ॥

ಗುಣವ್ಯತ್ಯಯ ಏತಸ್ಮಿನ್ ಮಾಯಾವತ್ತ್ವಾದಧೀಶಿತುಃ ।
ನ ಪೌರ್ವಾಪರ್ಯಮಿಚ್ಛಂತಿ ನದ್ಯಾಂ ಭ್ರಾಮ್ಯದ್‌ಭ್ರಮೇರಿವ ॥

(ಈ ಶ್ಲೋಕವು 3-11-30 ವೈಷ್ಣವಪಾಠದಲ್ಲಿದೆ; 3-10-30 ಪ್ರಸಿದ್ಧಪುಸ್ತಕಗಳಲ್ಲಿ ಅಧಿಕಪಾಠತ್ವೇನ ಕಂಸದಲ್ಲಿ ನೀಡಲಾಗಿದೆ.)

ಇತಿ ತೃತೀಯಸ್ಕಂಧೋಕ್ತ್ಯಾ ಪೌರ್ಣಮಾಸ್ಯಾಮಾವಾಸ್ಯಾತಿಥ್ಯೋರಿವ ಜನ್ಮಸ್ಥಿತ್ಯಾದೇರಿದಂ ಪ್ರಾಥಮ್ಯಾಭಾವೇಽಪಿ ಲಬ್ಧಜನ್ಮನ ಏವ ಸ್ಥಿತಿಲಯಾದೀತಿ ಜನ್ಮನ ಆದಿತ್ವಮುಪೇತ್ಯ 'ಜನ್ಮಾದಿ' ಇತ್ಯುಕ್ತಮ್ ।

ಜನ್ಮಾದಿಗಳಲ್ಲಿ ಜನ್ಮವನ್ನು ಮೊದಲಿಗೆ ಗ್ರಹಣಮಾಡಲು ಕಾರಣವೇನು? ಎನ್ನುವ ವಿಚಾರ ಇಲ್ಲಿ ಬಂದಿದೆ. ಏಕೆಂದರೆ, ಜನ್ಮ ಸ್ಥಿತಿ ಲಯ ಇವುಗಳಲ್ಲಿ ಮೊದಲನೆಯದ್ದನ್ನು ತೀರ್ಮಾನ ಮಾಡಲು ಸಾಧ್ಯವಿಲ್ಲ. ಏಕೆಂದರೆ, ಭಾಗವತದ ಮೂರನೆಯ ಸ್ಕಂಧದಲ್ಲಿ ಹೀಗೆ ತಿಳಿಸಿದ್ದಾರೆ - ಸತ್ವ ಮೊದಲಾದ ಗುಣಗಳ ವ್ಯತ್ಯಯರೂಪವಾದ ಈ ಸಂಸಾರದಲ್ಲಿ ಸೃಷ್ಟಿ ಮೊದಲಾದವುಗಳು

ಭಗವಂತನ ಇಚ್ಛೆಯ ಅಧೀನವಾಗಿ ಅನಾದಿಕಾಲದಿಂದ ನಡೆಯುತ್ತ ಬಂದಿದೆ. ಇದರಲ್ಲಿ ಪೌರ್ವಾಪರ್ಯವನ್ನು ಜ್ಞಾನಿಗಳು ವಿವೇಚಿಸಲು ಅಸಾಧ್ಯ. ಹೇಗೆಂದರೆ ನದಿಯ ಸುಳಿಗಳಲ್ಲಿ ಮೊದಲನೆಯ ಸುಳಿ ಯಾವುದೆಂದು ವಿವೇಚಿಸುವುದು ಅಶಕ್ಯವೋ ಅದರಂತೆ ನಿರಂತರ ಆಗುತ್ತಿರುವ ಸೃಷ್ಟಿಸ್ಥಿತಿಲಯಗಳಲ್ಲಿಯೂ ಮೊದಲನೆಯದು ಯಾವುದೆಂದು ನಿರ್ಧರಿಸಲು ಅಸಾಧ್ಯ ಎಂದಭಿಪ್ರಾಯ. ಹಾಗೆಯೇ ಪೌರ್ಣಮಾಸ್ಯ ಅಮಾವಾಸ್ಯಾ ತಿಥಿಗಳು ನಿರಂತರ ಒಂದರ ಮೇಲೆ ಮತ್ತೊಂದು ಎಂಬಂತೆ ಬರುತ್ತಿವೆ. ಅದರಲ್ಲಿ ಮೊದಲನೆಯದ್ದು ಇದು ಅನಂತರದ್ದು ಇದು ಎಂದು ಹೇಳಲು ಅಸಾಧ್ಯ. ಅದರಂತೆ ಇಲ್ಲಿಯೂ ತಿಳಿಯಬೇಕು.

ಇದಕ್ಕೆ ಉತ್ತರ — ಹೌದು. ಹಿಂದೆ ಹೇಳಿದ ವಿಷಯ ಸರಿಯಿದೆ. ಪ್ರಕೃತದಲ್ಲಿ ಜನ್ಮವನ್ನು ಮೊದಲು ಪರಿಗ್ರಹಿಸಿದ್ದರ ಅಭಿಪ್ರಾಯ - ಸ್ಥಿತಿಲಯಗಳೆಲ್ಲವೂ ವಸ್ತುಗಳು ಮೊದಲು ಹುಟ್ಟಿದ್ದರೆ ಮಾತ್ರ ಸಾಧ್ಯ. ಅರ್ಥಾತ್ ಜನ್ಮವನ್ನು ಪಡೆದ ವಸ್ತುಗಳಿಗೆ ಮುಂದೆ ಸ್ಥಿತಿಲಯಗಳು ಪ್ರಾಪ್ತಿ. ಹಾಗಾಗಿ ಜನ್ಮವನ್ನು ಮೊದಲು ಗ್ರಹಿಸಿದ್ದಾರೆ. ಅತ ಏವ 'ಅಸ್ಯ ಉದ್ಭವಾದಿದಂ' ಎಂದು ಅನುವ್ಯಾಖ್ಯಾನದಲ್ಲಿ ಹಾಗೂ ಅದರ ವಿವರಣೆಯನ್ನು ಮಾಡುವಾಗ ಸುಧಾದಲ್ಲಿ 'ಜನ್ಮಾದ್ಯಷ್ಟಕಂ' ಎಂದಿದ್ದಾರೆ.

(ವಿಜಯಧ್ವಜೀಯ) - ತರ್ಹಿ ಕಥಂ ಸೃಷ್ಟಿಃ ಪ್ರಥಮಾ ಇತ್ಯಾಶಂಕ್ಯ ತನ್ನಿಯಮೋ ನಾಸ್ತಿ ಇತಿ ಸದೃಷ್ಟಾಂತಮಾಹ - ಗುಣೇತಿ ॥ ಏತಸ್ಮಿನ್ ಗುಣವ್ಯತ್ಯಯೇ ಗುಣವ್ಯತಿಕರೇ ಪೂರ್ವಾಪರ್ಯಂ ಪೂರ್ವಾಪರೀಭಾವಂ ನೇಚ್ಛಂತಿ, 'ವಿಪಶ್ಚಿತಃ' ಇತಿ ಶೇಷಃ । ಕುತಃ? ಅಧೀಶಿತುಃ ಅಖಂಡೈಶ್ವರ್ಯಸ್ಯ ಹರೇಃ ಮಾಯಾವತ್ತ್ವಾತ್ ಇಚ್ಛಾನಿಯತತ್ವಾತ್ ನದ್ಯಾಃ ಭ್ರಮಂತ್ಯಾಃ ಪುನಃ ಪುನಃ ಆವರ್ತಮಾನಾಯಾಃ ಭ್ರಮೇಃ ಆವರ್ತಸ್ಯ ಇವ ॥

**ಅಸ್ಯ ಪ್ರತ್ಯಕ್ಷಾದಿಪ್ರಮಾಣಸಿದ್ಧತಯಾ ಬುದ್ಧಿಸನ್ನಿಹಿತಸ್ಯ ಸ್ವವ್ಯತಿರಿಕ್ತಸ್ಯ ಪ್ರಪಂಚಸ್ಯ**

(ಲಘುರಸರಂಜನೀ) — 'ಅಸ್ಯ' ಇತ್ಯನೇನ ಸನ್ನಿಹಿತಕತಿಪಯಾರ್ಥಗ್ರಹಣೇ ತದುದ್ಭವಾದಿದಾತೃತ್ವಸ್ಯ ವೈಶಿಷ್ಟ್ಯಾನುಪಪಾದಕತಯಾ ತದನೂದ್ಯ ವ್ಯಾಖ್ಯಾತಿ — **ಅಸ್ಯ ಪ್ರಪಂಚಸ್ಯೇತಿ** ॥ ವಿಶ್ವವಿಸ್ತಾರಸ್ಯ ಇತ್ಯರ್ಥಃ । ನನು ಕಾಲಾದಿವ್ಯವಹಿತಸ್ಯ ಪ್ರಪಂಚಸ್ಯ ಸನ್ನಿಧಾನಾಭಾವಾತ್ ಕಥಮ್ 'ಅಸ್ಯ' ಇತೀದಂಶಬ್ದೇನ ಪರಾಮರ್ಶ ಇತ್ಯತ ಉಕ್ತಮ್ — **ಬುದ್ಧಿಸನ್ನಿಹಿತಸ್ಯೇತಿ** ॥ ಬುದ್ಧಿವಿಷಯಸ್ಯ ಇತ್ಯರ್ಥಃ । ಸತ್ಯಂ, ಸನ್ನಿಹಿತಸ್ಯೈವ ಇದಂಶಬ್ದೇನ ಪರಾಮರ್ಶ ಇತಿ । ತಥಾಪಿ ಸನ್ನಿಧಾನಂ ಬೌದ್ಧಮೇವ ಮುಖ್ಯಮ್ । ಕಾಲಿಕಾದಿಕಂ ತತ್ರೈವೋಪಯುಜ್ಯತೇ । ಅತೀತಾದಿಪ್ರಪಂಚಸ್ಯ ಚ ಬೌದ್ಧಂ ತದಸ್ತೀತಿ ನಾನುಪಪತ್ತಿಃ । ನನು ಪ್ರಮಾಣಾಭಾವಾತ್ ಕಥಂ ಬೌದ್ಧಮಪಿ ಸನ್ನಿಧಾನಮ್? ಇತ್ಯತ ಉಕ್ತಮ್ — **ಪ್ರತ್ಯಕ್ಷಾದಿಪ್ರಮಾಣಸಿದ್ಧತಯೇತಿ** ॥ ಅನುಮಾನಾಗಮೌ ಆದಿಪದಾರ್ಥೌ । ನನ್ವೀದೃಶಪ್ರಪಂಚಸ್ಯ ಇದಂಶಬ್ದೇನ ಪರಾಮರ್ಶೇ ಭಗವತೋಽಪಿ ತಥಾತ್ವಾತ್

**ಇದಂಶಬ್ದೇನ ಪರಾಮರ್ಶಪ್ರಾಪ್ತ್ಯಾ ಕಥಂ ಸ್ವಸ್ಕಂಧಾರೋಹಣವದ್ ವಿರುದ್ಧಂ ಸ್ವೋತ್ಪತ್ತ್ಯಾದಿ- ದಾನಮ್ ಇತ್ಯತ ಉಕ್ತಂ — ಸ್ವವ್ಯತಿರಿಕ್ತೇತಿ ॥**

'ಅಸ್ಯ ಪ್ರಪಂಚಸ್ಯ' – ಅಸ್ಯ ಎಂಬುವುದರಿಂದ ಸನ್ನಿಹಿತವಾದ ಕೆಲವೇ ಅರ್ಥಗಳನ್ನು ಗ್ರಹಿಸಿದರೆ ಅಷ್ಟಕ್ಕೇ ಜನ್ಮಾದಿಕಾರಣನಾಗುವ ಮೂಲಕ ವೈಶಿಷ್ಟ್ಯ ಬರುವುದು ಅಸಾಧ್ಯ. ಅದಕ್ಕಾಗಿ ಅಸ್ಯ ಎಂಬುದಕ್ಕೆ 'ಪ್ರಪಂಚಸ್ಯ' ಎಂದಿದ್ದಾರೆ. ಪ್ರಪಂಚ ಎಂದರೆ ವಿಶ್ವದ ವಿಸ್ತಾರ. ಇನ್ನು ಸನ್ನಿಹಿತ-ವಾದದ್ದು ಎಂದರೆ ಈ ಕಾಲದಲ್ಲಿ ಇದ್ದದ್ದು. ಹಾಗಾಗಿ ಕಾಲ ಮೊದಲಾದವುಗಳ ವ್ಯವಧಾನವಿದ್ದಾಗ ಅತೀತ ಕಾಲಾದಿಗಳಲ್ಲಿರುವ ಪ್ರಪಂಚಕ್ಕೆ ಜನ್ಮಾದಿಕಾರಣವು ಎಂಬ ಅರ್ಥವು ಸಿಗುವುದಿಲ್ಲ. ಏಕೆಂದರೆ ಅಸ್ಯ ಎಂಬಲ್ಲಿರುವ ಇದಂ ಶಬ್ದವು ಸನ್ನಿಹಿತವಾದ ವಸ್ತುವನ್ನೇ ತಿಳಿಸಿಕೊಡುತ್ತದೆ-ಯಾದ್ದರಿಂದ. ಅದಕ್ಕೆ ಉತ್ತರವಾಗಿ ಹೇಳುತ್ತಾರೆ 'ಬುದ್ಧಿಸನ್ನಿಹಿತಸ್ಯ' ಎಂದು. ಅಂದರೆ ಬುದ್ಧಿಗೆ ವಿಷಯವಾದದ್ದೇ ಬುದ್ಧಿಸನ್ನಿಹಿತ ಎಂದು. ಹೀಗಾದಲ್ಲಿ ಅತೀತಾದಿಪ್ರಪಂಚವು ಈ ಕಾಲದಲ್ಲಿ ಇಲ್ಲದಿದ್ದರೂ ಬುದ್ಧಿಯಲ್ಲಿ ಸನ್ನಿಹಿತವೇ ಆಗಿದ್ದ ಕಾರಣ ಅದನ್ನೂ ಇದಂ ಶಬ್ದದಿಂದ ಪರಾಮರ್ಶಿಸಬಹುದು. ಅಲ್ಲ! ಬೌದ್ಧವಾದ ಸನ್ನಿಧಾನವು ಅತೀತಾದಿ ಪ್ರಪಂಚಕ್ಕೆ ಇದೆ ಎಂಬುದು ಯಾವ ಪ್ರಮಾಣದಿಂದ ಸಿದ್ಧವಾಗಿದೆ ಎಂದರೆ ಅದಕ್ಕಾಗಿ "ಪ್ರತ್ಯಕ್ಷಾದಿಪ್ರಮಾಣಸಿದ್ಧತಯಾ" ಎಂದಿದ್ದಾರೆ. ಇಲ್ಲಿ ಆದಿ ಎಂಬ ಪದದಿಂದ ಅನುಮಾನ ಹಾಗೂ ಆಗಮಪ್ರಮಾಣಗಳನ್ನು ಗ್ರಹಿಸಬೇಕು. ಹೀಗೆ ಅತೀತಾದಿಪ್ರಪಂಚವೂ ಸಹ ಆಗಮ ಮೊದಲಾದವುಗಳಿಂದ ಸಿದ್ಧ. 'ಇದಂ' ಎಂಬ ಶಬ್ದದಿಂದ ಬುದ್ಧಿಸನ್ನಿಹಿತವಾದದ್ದು ಸ್ವೀಕರಿಸಲ್ಪಟ್ಟರೆ ಭಗವಂತನು ಬುದ್ಧಿಸನ್ನಿಹಿತ-ನಾದ್ದರಿಂದ ಅವನನ್ನೂ ಸ್ವೀಕರಿಸಿದರೆ ತನಗೆ ತಾನೇ ಉತ್ಪತ್ತ್ಯಾದಿಗಳನ್ನು ಕೊಡುವುದು ಎಂಬುದು ಸ್ವಸ್ಕಂಧಾರೋಹಣವತ್ ವಿರುದ್ಧವಾಗಿದೆ. ಅರ್ಥಾತ್ ತನ್ನ ಭುಜದ ಮೇಲೆ ತಾನೇ ಏರುವಂತೆ ಇದು ಅಸಂಭಾವಿತವಾಗುವುದು. ಇದಕ್ಕೆ ಉತ್ತರವಾಗಿ 'ಸ್ವವ್ಯತಿರಿಕ್ತಪ್ರಪಂಚಸ್ಯ' ಎಂದು ವ್ಯಾಖ್ಯಾನ ಮಾಡಿದ್ದಾರೆ.

## ಸಮಾಸಾರ್ಥ ಜನ್ಮಾದ್ಯಷ್ಟಕವೋ, ಜನ್ಮಾದಿಚತುಷ್ಟಯವೋ ?

**(ಲಘುರಸರಂಜನೀ) — ನನು ಉದ್ಧವಾದಿದಮಿತಿ ಸಮಾಸಾರ್ಥಃ ಕಿಂ ಜನ್ಮಾದ್ಯಷ್ಟಕಂ ಕಿಂ ವಾ ಜನ್ಮಾದಿಚತುಷ್ಟಯಮೇವ । ನಾದ್ಯಃ । ಪ್ರಾಕ್ 'ಜನ್ಮಸ್ಥೇಮಪ್ರಲಯೇ'ತಿ ಚತುಷ್ಟಯಪರತಯಾ ತದ್ವ್ಯಾಖ್ಯಾನಾನುಪಪತ್ತೇಃ । ನ ದ್ವಿತೀಯಃ । ಲಕ್ಷಣಸೂತ್ರಾದಿವಿರೋಧಾತ್ । ತತ್ರ ಹಿ ಜಿಜ್ಞಾಸಾ-ಸೂತ್ರೇ ಜಿಜ್ಞಾಸಾವಿಧಾಯಕಸರ್ವಶ್ರುತಿವಿಚಾರಸ್ಯ ಪ್ರಸ್ತುತತ್ವಾತ್ ತದ್ಗತಸರ್ವಲಕ್ಷಣಪರತ್ವಮೇವ ಯುಕ್ತಮ್ । ಅತ ಏವ ತದ್ಭಾಷ್ಯಾನುಭಾಷ್ಯಯೋರ್ಲಕ್ಷಣಾಷ್ಟಕಸ್ಯೋಪನ್ಯಾಸಃ ಕೃತ ಇತೀತಿ ಚೇನ್ನ । ಪ್ರಥಮಪಕ್ಷಸ್ಯೈವ ಅಭಿಪ್ರೇತತ್ವಾತ್ । ನ ಚ 'ಜಗಜ್ಜನ್ಮಸ್ಥೇಮ' ಇತಿ ತದ್ವ್ಯಾಖ್ಯಾನಾನು-**

**ಪಪತ್ತಿಃ । ತಸ್ಯ ವಿವಕ್ಷಾವಿಶೇಷೇಣ ಪ್ರವೃತ್ತತ್ವಾತ್ ಇತ್ಯಾಶಯೇನ 'ಉದ್ಭವಾದಿದಮ್' ಇತಿ ಸಮಾಸಂ ವ್ಯಾಚಷ್ಟೇ — ಉದ್ಭವ ಇತಿ ॥ ಆದಿಃ ಪ್ರಥಮಘಟಕಃ । ಯಥಾ ವಿಶ್ವಾದ್ಯಷ್ಟಕೇ ವಿಶ್ವ ಇತಿ ಭಾವಃ । 'ಅಸ್ಯ' ಇತ್ಯನ್ಯಪದಾರ್ಥಮಾಹ — ಜನ್ಮಾದ್ಯಷ್ಟಕಮಿತಿ ॥**

"ಉದ್ಭವಾದಿದಂ" - ಈ ಪದದ ಅರ್ಥ ಏನು? ಎಂದು ವಿಚಾರ ಮಾಡಿದಾಗ ಎರಡು ಪಕ್ಷಗಳು ಪ್ರಸಕ್ತ. ಉದ್ಭವಾದಿ ಎಂಬ ಪದದಿಂದ ಜನ್ಮ, ಸ್ಥಿತಿ ಮುಂತಾದ ಎಂಟನ್ನು ಗ್ರಹಿಸಬೇಕೋ? ಅಥವಾ ಜನ್ಮಾದಿ ನಾಲ್ಕನ್ನು ಗ್ರಹಿಸಬೇಕೋ ಎಂದು. ಮೊದಲನೆಯ ಕಲ್ಪವು ಸರಿಯಲ್ಲ. ಏಕೆಂದರೆ, ನ್ಯಾಯಸುಧಾದ ಮಂಗಳಪದ್ಯದಲ್ಲಿ ಜಗಜ್ಜನ್ಮಸ್ಥೇಮಪ್ರಲಯರಚನಾ- ಎಂದು ನಾಲ್ಕನ್ನು ಮಾತ್ರ ಗ್ರಹಿಸಿ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡಿರುವುದರಿಂದ. ಎರಡನೆಯ ಕಲ್ಪವು ಸರಿಯಲ್ಲ. ಬ್ರಹ್ಮಲಕ್ಷಣವನ್ನು ಹೇಳುವ 'ಜನ್ಮಾದ್ಯಸ್ಯ ಯತಃ' ಎನ್ನುವ ಸೂತ್ರದ ವಿರೋಧ ಬರುವುದರಿಂದ. ಏಕೆಂದರೆ ಅಲ್ಲಿಯಾದರೋ ಬ್ರಹ್ಮನ ಜಿಜ್ಞಾಸೆಯನ್ನು ವಿಧಾನ ಮಾಡುವ ಎಲ್ಲ ಶ್ರುತಿಗಳ ವಿಚಾರ ಪ್ರಸ್ತುತವಾದ್ದರಿಂದ ಆ ಶ್ರುತಿಗಳಲ್ಲಿ ಹೇಳಿದ ಎಲ್ಲ ಲಕ್ಷಣಗಳನ್ನು ಇದು ವಿವರಿಸುತ್ತಿದೆ ಎನ್ನಬೇಕು. ಆದ್ದರಿಂದಲೇ ಲಕ್ಷಣಸೂತ್ರದ ಭಾಷ್ಯ ಹಾಗೂ ಅನುಭಾಷ್ಯಗಳಲ್ಲಿ ಎಂಟು ಲಕ್ಷಣಗಳ ಉಪನ್ಯಾಸ-ವನ್ನು ಮಾಡಿದ್ದಾರೆ ಎಂದರೆ - ಹೌದು. ಮೊದಲನೆಯಪಕ್ಷವನ್ನೇ ಒಪ್ಪುವುದರಿಂದ. ಅಲ್ಲ ಜಗಜ್ಜನ್ಮಸ್ಥೇಮಪ್ರಲಯರಚನಾ ಎಂದು ವ್ಯಾಖ್ಯಾನಿಸಿದ್ದು ಸರಿಯಾಗಲಿಲ್ಲವಲ್ಲ ಎಂದರೆ ಅದು ಒಂದು ವಿಶೇಷ ಅಭಿಪ್ರಾಯವನ್ನು ಇಟ್ಟುಕೊಂಡು ಹೊರಟಿದ್ದಾದ್ದರಿಂದ ಯಾವುದೇ ದೋಷವಿಲ್ಲ ಎಂಬ ಭಾವದಿಂದ ಉದ್ಭವಾದಿದಂ ಎಂಬ ಪದದಲ್ಲಿ ಸಮಾಸವನ್ನು ವ್ಯಾಖ್ಯಾನಮಾಡುತ್ತಾರೆ - ಉದ್ಭವಃ ಉತ್ಪತ್ತಿಃ ಆದಿಃ ಅಸ್ಯ ಇತಿ = ಉದ್ಭವಾದಿ ಜನ್ಮಾದ್ಯಷ್ಟಕಂ ತತ್ ಯಥಾಸಂಭವಂ ದದಾತಿ ಇತಿ ಉದ್ಭವಾದಿದಃ ತಮ್ - ಎಂದು. ಅರ್ಥಾತ್ ಉತ್ಪತ್ತಿ-ಸ್ಥಿತಿ-ಲಯ-ನಿಯಮನ ಇವುಗಳು ಚೇತನಾಚೇತನಸರ್ವಸಾಧಾರಣ ಎಂದು.

**ಸರ್ವಸ್ಯ ಕಿಮ್? ಬ್ರಹ್ಮಾದಿಚೇತನಸ್ಯ ಕಿಮ್? ತತ್ರಾಪಿ ಕಿಮ್?**

(ಪರಿಮಳ)– **ಯಥಾಸಂಭವಮಿತಿ ॥** ಜನ್ಮಸ್ಥಿತಿಲಯನಿಯಮನಾನಿ ಸರ್ವಸ್ಯ । ಜ್ಞಾನಾಜ್ಞಾನ-ಬಂಧಮೋಕ್ಷಾನ್ ಬ್ರಹ್ಮಾದಿಚೇತನಸ್ಯ । ತತ್ರಾಪಿ ಮೋಕ್ಷಂ ಸತಾಮೇವ ಇತ್ಯೇವಂರೂಪೇಣ ಇತ್ಯರ್ಥಃ ।

ಜನ್ಮಾದಿ ಎಂಟನ್ನೂ ಯಥಾಯೋಗ್ಯವಾಗಿ ನೀಡುವನು. ಎಲ್ಲ ರೀತಿಯ ವಸ್ತುಗಳಿಗೆ ಸಂಬಂಧ-ಪಟ್ಟಿದ್ದು ಜನ್ಮಸ್ಥಿತಿಲಯನಿಯಮನಗಳು ನಾಲ್ಕು ಮಾತ್ರ. ಜ್ಞಾನಅಜ್ಞಾನಬಂಧಮೋಕ್ಷಗಳು ಬ್ರಹ್ಮಾದಿಚೇತನರಿಗೆ ಮಾತ್ರ. ಅಲ್ಲಿಯೂ ಮೋಕ್ಷವು ಸಜ್ಜನರಿಗೆ ಮಾತ್ರ. ಇಲ್ಲಿ ಮೋಕ್ಷವು ಆತ್ಯಂತಿಕ-ದುಃಖನಿವೃತ್ತಿವಿಶಿಷ್ಟ-ಆತ್ಯಂತಿಕಸುಖರೂಪವಾದದ್ದನ್ನು ಗ್ರಹಿಸಿ ಹೇಳಲಾಗಿದೆ.

## ಸಂಪ್ರದಾನಸಂಜ್ಞೆಯು ಅನ್ವರ್ಥ ಹಾಗೂ ಅನ್ವರ್ಥವಲ್ಲ ಎಂಬ ಪಕ್ಷ

(ವಾಕ್ಯಾರ್ಥಚಂದ್ರಿಕಾ)- ನನು 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಇತಿ ಸೂತ್ರೇ -

(ದಾನಸ್ಯ ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಸಂಜ್ಞಃ ಸ್ಯಾತ್) ।
ಅನಿರಾಕರಣಾತ್ ಕರ್ತುಸ್ತ್ಯಾಗಾಂಗಂ ಕರ್ಮಣೇಪ್ಸಿತಮ್ ।
ಪ್ರೇರಣಾನುಮತಿಭ್ಯಾಂ ಚ ಲಭತೇ ಸಂಪ್ರದಾನತಾಮ್ ॥'

– (ವಾಕ್ಯಪದೀಯ ಪದಕಾಂಡ ಶ್ಲೋ.129)

ಇತ್ಯತ್ರ ಚ ಕರ್ತುರ್ದಾನಶೇಷಭೂತಂ ದಾನಕರ್ಮಣಾಪ್ತುಮಿಷ್ಟತಮಮ್ ಅನಿರಾಕರಣಾತ್ ಪ್ರೇರಣಾದನುಮತ್ಯಾ ವಾ ಸಂಪ್ರದಾನತಾಂ ಲಭತೇ ಇತ್ಯುಕ್ತತ್ವಾದೀಶ್ವರಸ್ಯ ದಾನಕರ್ಮಣೋ-ದ್ಭವಾದಿನಾ ಆಪ್ತುಮಿಷ್ಟತಮಸ್ಯ ಅನಿರಾಕುರ್ವತಃ ಅಸ್ಯೇತಿ ನಿರ್ದಿಷ್ಟಸ್ಯ ಜಗತಃ ಸಂಪ್ರದಾನತ್ವಾ-ಚ್ಚತುರ್ಥ್ಯಾ ಭಾವ್ಯಮ್ । ಅನ್ವರ್ಥಸಂಜ್ಞಾಬಲೇನಾಹ – ದಾನಸ್ಯೇತಿ ॥ ತೇನ ಅಜಾಂ ನಯತಿ, ಹಸ್ತಂ ನಿದಧಾತಿ ವೃಕ್ಷೇ ಇತ್ಯಾದೌ ನಾತಿಪ್ರಸಂಗ ಇತಿ ಭಾವಃ । ದಾನಂ ಚ ಅಪುನರ್ಗ್ರಹಣಾಯ ಸ್ವತ್ವನಿವೃತ್ತಿಪೂರ್ವಕಂ ಪರಸ್ವತ್ವಾಪಾದನಮ್ । ಅತ ಏವ 'ರಜಕಸ್ಯ ವಸ್ತ್ರಂ ದದಾತಿ' ಇತ್ಯಾದೌ ನ ಭವತಿ । ತತ್ರ ಹಿ ದದಾತಿರ್ಭಾಕ್ತಃ । ಏತಚ್ಚ ವೃತ್ತಿಮತಮ್ । ಭಾಷ್ಯಮತೇ ತು ನಾನ್ವರ್ಥತಾ-ಯಾಮ್ ಆಗ್ರಹಃ । 'ಖಂಡಿಕೋಪಾಧ್ಯಾಯಸ್ತಸ್ಮೈ ಚಪೇಟಾಂ ದದಾತಿ' ಇತಿ ಪ್ರಯೋಗಾತ್ । 'ರಜಕಸ್ಯ ದದಾತಿ' ಇತಿ ಶೇಷತ್ವವಿವಕ್ಷಾಯಾಂ ಬೋಧ್ಯಮ್ । ನ ಚೈವಮ್ 'ಅಜಾಂ ನಯತಿ ಗ್ರಾಮಮ್' ಇತ್ಯತ್ರ ಅತಿಪ್ರಸಂಗಃ । 'ಯಮಭಿಪ್ರೈತಿ' ಇತ್ಯುಕ್ತ್ಯಾ ಹಿ ಯಮ್ ಇತಿ ನಿರ್ದಿಷ್ಟಸ್ಯ ಶೇಷತ್ವಂ, ಕರ್ಮಣಶ್ಚ ಶೇಷತ್ವಂ ಲಭ್ಯತೇ, ಗ್ರಾಮಸ್ಯ ಚ ಅಜಾಂ ಪ್ರತಿ ಶೇಷತ್ವಂ ನಾಸ್ತಿ । ನ ಚ ಸ್ವಸ್ವತ್ವಪರಿತ್ಯಾಗೇನ ಪರಸ್ವತ್ವಾಪಾದನಸ್ಯ ದಾನಪದಾರ್ಥಸ್ಯ ಜಗತ ಉದ್ಭವಾದಿವಿಷಯೇ ಈಶ್ವರೇಣಾಕರಣಾತ್ ನ ಚತುರ್ಥೀತಿ ವಾಚ್ಯಮ್; 'ವೃಕ್ಷಾಯ ಜಲಂ ದದಾತಿ, ಖಂಡಿಕೋ-ಪಾಧ್ಯಾಯಃ ಶಿಷ್ಯಾಯ ಚಪೇಟಿಕಾಂ ದದಾತಿ, ನ ಶೂದ್ರಾಯ ಮತಿಂ ದದ್ಯಾತ್' ಇತ್ಯಾದೌ ಚತುರ್ಥ್ಯುಪಪತ್ತ್ಯರ್ಥಂ ಕಿಂಚಿದ್ ಉದ್ದಿಶ್ಯ ಅಪುನರ್ಗ್ರಹಣಾಯ ಸ್ವದ್ರವ್ಯತ್ಯಾಗಮಾತ್ರಸ್ಯ ದಾನ-ಶಬ್ದಾರ್ಥತಯಾ ವಿವಕ್ಷಣೀಯತ್ವೇನ ಪದಮಂಜರ್ಯಾಮುಕ್ತತ್ವಾತ್ ಪ್ರಕೃತೇ ಮತಿದಾನಾದಿವತ್ ಯಥಾಕಥಂಚಿತ್ ತ್ಯಾಗಸ್ಯ ಪ್ರತಿಪಾದಯಿತುಂ ಶಕ್ಯತ್ವಾತ್, ಭಾಷ್ಯಕಾರೇಣ ಕ್ರಿಯಾಮಾತ್ರಾ-ಶ್ರಯಣೇನ ದದಾತಿಕರ್ಮಣಾ ಇತ್ಯಸ್ಯಾನಾಶ್ರಿತತ್ವಾಚ್ಚ ಸಂಪ್ರದಾನಚತುರ್ಥ್ಯಾ ಭವಿತವ್ಯಮ್ ಇತ್ಯತೋ 'ವಿವಕ್ಷಾತಃ ಕಾರಕಾಣಿ ಭವಂತಿ' ಇತ್ಯುಕ್ತೇಃ ಸಂಪ್ರದಾನಸ್ಯ ಶೇಷತ್ವವಿವಕ್ಷಾಯಾಂ ಯುಕ್ತಾ 'ಅಸ್ಯ' ಇತಿ ಷಷ್ಠೀ ಇತ್ಯಾಹ – ಅಸ್ಯೇತಿ ಇತಿ ॥

'ಅಸ್ಯೋದ್ಭವಾದಿದಂ' ಎಂಬಲ್ಲಿ ಅಸ್ಯ ಎಂದು ಪ್ರಯೋಗವಾಗದೇ ಅಸ್ಮೈ ಎಂದಾಗಬೇಕಲ್ಲವೇ? ಎಂದು ಆಕ್ಷೇಪ - 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' (ಪಾ.ಸೂ.) ದಾನಕ್ಕೆ ಯಾವುದು ಕರ್ಮವಾಗಿದೆಯೋ ಅದರಿಂದ ಹೊಂದಲು ಅತ್ಯಂತ ಇಷ್ಟವಾದ ದಾನ ಉದ್ದೇಶ್ಯವಾದ ವಸ್ತುವಿಗೆ ಸಂಪ್ರದಾನ ಸಂಜ್ಞೆಯು ಬರುತ್ತದೆ. ದಾನಕ್ಕೆ ಉದ್ದೇಶ್ಯನಾಗಿರುವವ ನಿರಾಕರಣೆ ಮಾಡದಿರುವು-ದರಿಂದ, ಪ್ರೇರಣೆ ಮಾಡುವುದರಿಂದ. ಅಥವಾ ಅನುಮತಿಸುವುದರಿಂದ ಸಂಪ್ರದಾನತ್ವವನ್ನು ಪಡೆಯುತ್ತಾನೆ. ಸಂಪ್ರದಾನವು ಮೂರು ವಿಧ. ಸೂರ್ಯಾಯ ಅರ್ಘ್ಯಂ ದದಾತಿ – ಸೂರ್ಯನಿಗೆ ಅರ್ಘ್ಯವನ್ನು ಕೊಡುತ್ತಾನೆ ಇತ್ಯಾದಿಗಳಲ್ಲಿ ಸೂರ್ಯನು "ನನಗೆ ಅರ್ಘ್ಯ ಬೇಡ' ಎಂದು ಹೇಳಿ ನಿರಾಕರಿಸುವುದಿಲ್ಲ. ಅಷ್ಟರಿಂದಲೇ ಅವನಿಗೆ ಸಂಪ್ರದಾನತ್ವ ಸಿದ್ಧವಾಗುತ್ತದೆ. "ಗೋದಾನಂ ಪುಣ್ಯದಂ, ಮಹ್ಯಂ ಗಾಂ ದೇಹಿ" - ಗೋದಾನ ಪುಣ್ಯಕರ, ನನಗೆ ಗೋವನ್ನು ಕೊಡು ಎಂದು ರಾಜನಿಗೆ ಹೇಳಿ ಬ್ರಾಹ್ಮಣನು ದಾನವನ್ನು ಪಡೆದರೆ ಅದು ಪ್ರೇರಣಾಪೂರ್ವಕ ಸಂಪ್ರದಾನತ್ವ. ರಾಜನು ತಾನಾಗಿ ಯಾವುದಾದರೂ ದಾನವನ್ನು ಕೊಡಲು ಬಂದಾಗ "ಆಗಬಹುದು' ಎಂದು ಸ್ವೀಕರಿಸಿದರೆ ಅದು ಅನುಮತಿಸಂಪ್ರದಾನತ್ವ.

ಪ್ರಕೃತದಲ್ಲಿ ಅನಿರಾಕರಣಾತ್ ಸಂಪ್ರದಾನತ್ವ ಜಗತ್ತಿಗೆ ಇದೆ. ಹಾಗಾಗಿ ಅದನ್ನು ಹೇಳುವ ಶಬ್ದ ಅಂದರೆ 'ಇದಂ' ಶಬ್ದ. ಅದಕ್ಕೆ ಇಲ್ಲಿ ಚತುರ್ಥೀ ಬಂದು ಅಸ್ಮೈ ಎಂದಾಗಬೇಕು.

ಇಲ್ಲಿ ದಾನ ಪದಾರ್ಥ ಎಂದರೇನು? ಎನ್ನುವ ವಿಚಾರ ಮಾಡುತ್ತಾರೆ. ದಾನ ಎಂದರೆ 'ಅಪುನರ್ಗ್ರಹಣಾಯ ಸ್ವತ್ವನಿವೃತ್ತಿಪೂರ್ವಕಂ ಪರಸ್ವತ್ವಾಪಾದನಮ್' - ಉದಾ – ರಾಜನು ಬ್ರಾಹ್ಮಣನಿಗೆ ಗೋದಾನ ನೀಡುತ್ತಾನೆ. ಆಗ ರಾಜನಲ್ಲಿರುವ ಗೋಸ್ವಾಮಿತ್ವವು ನಿವೃತ್ತಿಯಾಗಿ ಬ್ರಾಹ್ಮಣನಲ್ಲಿ ಗೋಸ್ವಾಮಿತ್ವ ಉಂಟಾಗುವುದು. ಮತ್ತೆ ಆ ಗೋವನ್ನು ಸ್ವೀಕಾರ ಮಾಡದೇ ಇದ್ದರೆ ಅದು ದಾನವಾಗುತ್ತದೆ.

ಆದ್ದರಿಂದಲೇ ರಜಕಸ್ಯ ವಸ್ತ್ರಂ ದದಾತಿ - ಅಗಸನಿಗೆ ಬಟ್ಟೆಯನ್ನು ಕೊಡುತ್ತಾನೆ - ಎಂಬಲ್ಲಿ ಸಂಪ್ರದಾನತ್ವವು ರಜಕನಿಗೆ ಇಲ್ಲ. ಏಕೆಂದರೆ ಕೊಟ್ಟ ವಸ್ತ್ರವನ್ನು ಮತ್ತೆ ಗ್ರಹಣ ಮಾಡುವುದರಿಂದ. ಹೀಗಾಗಿ ಅಜಾಂ ನಯತಿ, ಹಸ್ತಂ ನಿದಧಾತಿ ವೃಕ್ಷೇ ಮುಂತಾದ ಕಡೆಗಳಲ್ಲಿ ಅತಿಪ್ರಸಂಗವಿಲ್ಲ. ಈ ರೀತಿಯ ದಾನ- ಪದಾರ್ಥವನ್ನು ವಿವಕ್ಷೆ ಮಾಡಿದ್ದರಿಂದ. ಹಾಗಾದರೆ ದದಾತಿ ಎಂಬ ಪ್ರಯೋಗ ರಜಕಸ್ಯ ವಸ್ತ್ರಂ ದದಾತಿ ಎಂಬಲ್ಲಿ ಗೌಣ ಎಂದು ತಿಳಿಯಬೇಕು. ಸಂಪ್ರದಾನಸಂಜ್ಞೆಯು ಅನ್ವರ್ಥ ಎಂಬ ಪಕ್ಷದಲ್ಲಿ ಇದಿಷ್ಟು ವೃತ್ತಿಕಾರರ ಮತ.

ಭಾಷ್ಯಕಾರರಿಗೆ ಸಂಪ್ರದಾನಸಂಜ್ಞೆಯು ಅನ್ವರ್ಥ ಎಂಬ ವಿಷಯದಲ್ಲಿ ಆಗ್ರಹವಿಲ್ಲ. 'ಖಂಡಿಕೋ-ಪಾಧ್ಯಾಯಃ ತಸ್ಮೈ ಚಪೇಟಾಂ ದದಾತಿ' ಅಥರ್ವಣವೇದವನ್ನು ಪಾಠ ಹೇಳುವವರಿಗೆ

## ಸಂಪ್ರದಾನಸಂಜ್ಞೆಯು ಅನ್ವರ್ಥ ಹಾಗೂ ಅನ್ವರ್ಥವಲ್ಲ ಎಂಬ ಪಕ್ಷ

(ವಾಕ್ಯಾರ್ಥಚಂದ್ರಿಕಾ)- ನನು 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಇತಿ ಸೂತ್ರೇ -

(ದಾನಸ್ಯ ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಸಂಜ್ಞಃ ಸ್ಯಾತ್) ।
ಅನಿರಾಕರಣಾತ್ ಕರ್ತುಸ್ತ್ಯಾಗಾಂಗಂ ಕರ್ಮಣೇಪ್ಸಿತಮ್ ।
ಪ್ರೇರಣಾನುಮತಿಭ್ಯಾಂ ಚ ಲಭತೇ ಸಂಪ್ರದಾನತಾಮ್ ॥'

– (ವಾಕ್ಯಪದೀಯ ಪದಕಾಂಡ ಶ್ಲೋ.129)

ಇತ್ಯತ್ರ ಚ ಕರ್ತುರ್ದಾನಶೇಷಭೂತಂ ದಾನಕರ್ಮಣಾಪ್ತುಮಿಷ್ಟತಮಮ್ ಅನಿರಾಕರಣಾತ್ ಪ್ರೇರಣಾದನುಮತ್ಯಾ ವಾ ಸಂಪ್ರದಾನತಾಂ ಲಭತೇ ಇತ್ಯುಕ್ತತ್ವಾದೀಶ್ವರಸ್ಯ ದಾನಕರ್ಮಣೋ-ದ್ಭವಾದಿನಾ ಆಪ್ತುಮಿಷ್ಟತಮಸ್ಯ ಅನಿರಾಕುರ್ವತಃ ಅಸ್ಯೇತಿ ನಿರ್ದಿಷ್ಟಸ್ಯ ಜಗತಃ ಸಂಪ್ರದಾನತ್ವಾ-ಚ್ಚತುರ್ಥ್ಯಾ ಭಾವ್ಯಮ್ । ಅನ್ವರ್ಥಸಂಜ್ಞಾಬಲೇನಾಹ – ದಾನಸ್ಯೇತಿ ॥ ತೇನ ಅಜಾಂ ನಯತಿ, ಹಸ್ತಂ ನಿದಧಾತಿ ವೃಕ್ಷೇ ಇತ್ಯಾದೌ ನಾತಿಪ್ರಸಂಗ ಇತಿ ಭಾವಃ । ದಾನಂ ಚ ಅಪುನರ್ಗ್ರಹಣಾಯ ಸ್ವತ್ವನಿವೃತ್ತಿಪೂರ್ವಕಂ ಪರಸ್ವತ್ವಾಪಾದನಮ್ । ಅತ ಏವ 'ರಜಕಸ್ಯ ವಸ್ತ್ರಂ ದದಾತಿ' ಇತ್ಯಾದೌ ನ ಭವತಿ । ತತ್ರ ಹಿ ದದಾತಿರ್ಭಾಕ್ತಃ । ಏತಚ್ಚ ವೃತ್ತಿಮತಮ್ । ಭಾಷ್ಯಮತೇ ತು ನಾನ್ವರ್ಥತಾ-ಯಾಮ್ ಆಗ್ರಹಃ । 'ಖಂಡಿಕೋಪಾಧ್ಯಾಯಸ್ತಸ್ಮೈ ಚಪೇಟಾಂ ದದಾತಿ' ಇತಿ ಪ್ರಯೋಗಾತ್ । 'ರಜಕಸ್ಯ ದದಾತಿ' ಇತಿ ಶೇಷತ್ವವಿವಕ್ಷಾಯಾಂ ಬೋಧ್ಯಮ್ । ನ ಚೈವಮ್ 'ಅಜಾಂ ನಯತಿ ಗ್ರಾಮಮ್' ಇತ್ಯತ್ರ ಅತಿಪ್ರಸಂಗಃ । 'ಯಮಭಿಪ್ರೈತಿ' ಇತ್ಯುಕ್ತ್ಯಾ ಹಿ ಯಮ್ ಇತಿ ನಿರ್ದಿಷ್ಟಸ್ಯ ಶೇಷತ್ವಂ, ಕರ್ಮಣಶ್ಚ ಶೇಷತ್ವಂ ಲಭ್ಯತೇ, ಗ್ರಾಮಸ್ಯ ಚ ಅಜಾಂ ಪ್ರತಿ ಶೇಷತ್ವಂ ನಾಸ್ತಿ । ನ ಚ ಸ್ವಸ್ವತ್ವಪರಿತ್ಯಾಗೇನ ಪರಸ್ವತ್ವಾಪಾದನಸ್ಯ ದಾನಪದಾರ್ಥಸ್ಯ ಜಗತ ಉದ್ಭವಾದಿವಿಷಯೇ ಈಶ್ವರೇಣಾಕರಣಾತ್ ನ ಚತುರ್ಥೀತಿ ವಾಚ್ಯಮ್; 'ವೃಕ್ಷಾಯ ಜಲಂ ದದಾತಿ, ಖಂಡಿಕೋ-ಪಾಧ್ಯಾಯಃ ಶಿಷ್ಯಾಯ ಚಪೇಟಿಕಾಂ ದದಾತಿ, ನ ಶೂದ್ರಾಯ ಮತಿಂ ದದ್ಯಾತ್' ಇತ್ಯಾದೌ ಚತುರ್ಥ್ಯುಪಪತ್ತ್ಯರ್ಥಂ ಕಿಂಚಿದ್ ಉದ್ದಿಶ್ಯ ಅಪುನರ್ಗ್ರಹಣಾಯ ಸ್ವದ್ರವ್ಯತ್ಯಾಗಮಾತ್ರಸ್ಯ ದಾನ-ಶಬ್ದಾರ್ಥತಯಾ ವಿವಕ್ಷಣೀಯತ್ವೇನ ಪದಮಂಜರ್ಯಾಮುಕ್ತತ್ವಾತ್ ಪ್ರಕೃತೇ ಮತಿದಾನಾದಿವತ್ ಯಥಾಕಥಂಚಿತ್ ತ್ಯಾಗಸ್ಯ ಪ್ರತಿಪಾದಯಿತುಂ ಶಕ್ಯತ್ವಾತ್, ಭಾಷ್ಯಕಾರೇಣ ಕ್ರಿಯಾಮಾತ್ರಾ-ಶ್ರಯಣೇನ ದದಾತಿಕರ್ಮಣಾ ಇತ್ಯಸ್ಯಾನಾಶ್ರಿತತ್ವಾಚ್ಚ ಸಂಪ್ರದಾನಚತುರ್ಥ್ಯಾ ಭವಿತವ್ಯಮ್ ಇತ್ಯತೋ 'ವಿವಕ್ಷಾತಃ ಕಾರಕಾಣಿ ಭವಂತಿ' ಇತ್ಯುಕ್ತೇಃ ಸಂಪ್ರದಾನಸ್ಯ ಶೇಷತ್ವವಿವಕ್ಷಾಯಾಂ ಯುಕ್ತಾ 'ಅಸ್ಯ' ಇತಿ ಷಷ್ಠೀ ಇತ್ಯಾಹ – ಅಸ್ಯೇತಿ ಇತಿ ॥

'ಅಸ್ಯೋದ್ಭವಾದಿದಂ' ಎಂಬಲ್ಲಿ ಅಸ್ಯ ಎಂದು ಪ್ರಯೋಗವಾಗದೇ ಅಸ್ಮೈ ಎಂದಾಗಬೇಕಲ್ಲವೇ? ಎಂದು ಆಕ್ಷೇಪ - 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' (ಪಾ.ಸೂ.) ದಾನಕ್ಕೆ ಯಾವುದು ಕರ್ಮವಾಗಿದೆಯೋ ಅದರಿಂದ ಹೊಂದಲು ಅತ್ಯಂತ ಇಷ್ಟವಾದ ದಾನ ಉದ್ದೇಶ್ಯವಾದ ವಸ್ತುವಿಗೆ ಸಂಪ್ರದಾನ ಸಂಜ್ಞೆಯು ಬರುತ್ತದೆ. ದಾನಕ್ಕೆ ಉದ್ದೇಶ್ಯನಾಗಿರುವವ ನಿರಾಕರಣೆ ಮಾಡದಿರುವುದರಿಂದ, ಪ್ರೇರಣೆ ಮಾಡುವುದರಿಂದ. ಅಥವಾ ಅನುಮತಿಸುವುದರಿಂದ ಸಂಪ್ರದಾನತ್ವವನ್ನು ಪಡೆಯುತ್ತಾನೆ. ಸಂಪ್ರದಾನವು ಮೂರು ವಿಧ. ಸೂರ್ಯಾಯ ಅರ್ಘ್ಯಂ ದದಾತಿ – ಸೂರ್ಯನಿಗೆ ಅರ್ಘ್ಯವನ್ನು ಕೊಡುತ್ತಾನೆ ಇತ್ಯಾದಿಗಳಲ್ಲಿ ಸೂರ್ಯನು "ನನಗೆ ಅರ್ಘ್ಯ ಬೇಡ' ಎಂದು ಹೇಳಿ ನಿರಾಕರಿಸುವುದಿಲ್ಲ. ಅಷ್ಟರಿಂದಲೇ ಅವನಿಗೆ ಸಂಪ್ರದಾನತ್ವ ಸಿದ್ಧವಾಗುತ್ತದೆ. "ಗೋದಾನಂ ಪುಣ್ಯದಂ, ಮಹ್ಯಂ ಗಾಂ ದೇಹಿ" – ಗೋದಾನ ಪುಣ್ಯಕರ, ನನಗೆ ಗೋವನ್ನು ಕೊಡು ಎಂದು ರಾಜನಿಗೆ ಹೇಳಿ ಬ್ರಾಹ್ಮಣನು ದಾನವನ್ನು ಪಡೆದರೆ ಅದು ಪ್ರೇರಣಾಪೂರ್ವಕ ಸಂಪ್ರದಾನತ್ವ. ರಾಜನು ತಾನಾಗಿ ಯಾವುದಾದರೂ ದಾನವನ್ನು ಕೊಡಲು ಬಂದಾಗ "ಆಗಬಹುದು' ಎಂದು ಸ್ವೀಕರಿಸಿದರೆ ಅದು ಅನುಮತಿಸಂಪ್ರದಾನತ್ವ.

ಪ್ರಕೃತದಲ್ಲಿ ಅನಿರಾಕರಣಾತ್ ಸಂಪ್ರದಾನತ್ವ ಜಗತ್ತಿಗೆ ಇದೆ. ಹಾಗಾಗಿ ಅದನ್ನು ಹೇಳುವ ಶಬ್ದ ಅಂದರೆ 'ಇದಂ' ಶಬ್ದ. ಅದಕ್ಕೆ ಇಲ್ಲಿ ಚತುರ್ಥೀ ಬಂದು ಅಸ್ಮೈ ಎಂದಾಗಬೇಕು.

ಇಲ್ಲಿ ದಾನ ಪದಾರ್ಥ ಎಂದರೇನು? ಎನ್ನುವ ವಿಚಾರ ಮಾಡುತ್ತಾರೆ. ದಾನ ಎಂದರೆ 'ಅಪುನರ್ಗ್ರಹಣಾಯ ಸ್ವತ್ವನಿವೃತ್ತಿಪೂರ್ವಕಂ ಪರಸ್ವತ್ವಾಪಾದನಮ್' - ಉದಾ – ರಾಜನು ಬ್ರಾಹ್ಮಣನಿಗೆ ಗೋದಾನ ನೀಡುತ್ತಾನೆ. ಆಗ ರಾಜನಲ್ಲಿರುವ ಗೋಸ್ವಾಮಿತ್ವವು ನಿವೃತ್ತಿಯಾಗಿ ಬ್ರಾಹ್ಮಣನಲ್ಲಿ ಗೋಸ್ವಾಮಿತ್ವ ಉಂಟಾಗುವುದು. ಮತ್ತೆ ಆ ಗೋವನ್ನು ಸ್ವೀಕಾರ ಮಾಡದೇ ಇದ್ದರೆ ಅದು ದಾನವಾಗುತ್ತದೆ.

ಆದ್ದರಿಂದಲೇ ರಜಕಸ್ಯ ವಸ್ತ್ರಂ ದದಾತಿ - ಅಗಸನಿಗೆ ಬಟ್ಟೆಯನ್ನು ಕೊಡುತ್ತಾನೆ - ಎಂಬಲ್ಲಿ ಸಂಪ್ರದಾನತ್ವವು ರಜಕನಿಗೆ ಇಲ್ಲ. ಏಕೆಂದರೆ ಕೊಟ್ಟ ವಸ್ತ್ರವನ್ನು ಮತ್ತೆ ಗ್ರಹಣ ಮಾಡುವುದರಿಂದ. ಹೀಗಾಗಿ ಅಜಾಂ ನಯತಿ, ಹಸ್ತಂ ನಿದಧಾತಿ ವೃಕ್ಷೇ ಮುಂತಾದ ಕಡೆಗಳಲ್ಲಿ ಅತಿಪ್ರಸಂಗವಿಲ್ಲ. ಈ ರೀತಿಯ ದಾನ- ಪದಾರ್ಥವನ್ನು ವಿವಕ್ಷೆ ಮಾಡಿದ್ದರಿಂದ. ಹಾಗಾದರೆ ದದಾತಿ ಎಂಬ ಪ್ರಯೋಗ ರಜಕಸ್ಯ ವಸ್ತ್ರಂ ದದಾತಿ ಎಂಬಲ್ಲಿ ಗೌಣ ಎಂದು ತಿಳಿಯಬೇಕು. ಸಂಪ್ರದಾನಸಂಜ್ಞೆಯು ಅನ್ವರ್ಥ ಎಂಬ ಪಕ್ಷದಲ್ಲಿ ಇದಿಷ್ಟು ವೃತ್ತಿಕಾರರ ಮತ.

ಭಾಷ್ಯಕಾರರಿಗೆ ಸಂಪ್ರದಾನಸಂಜ್ಞೆಯು ಅನ್ವರ್ಥ ಎಂಬ ವಿಷಯದಲ್ಲಿ ಆಗ್ರಹವಿಲ್ಲ. 'ಖಂಡಿಕೋ-ಪಾಧ್ಯಾಯಃ ತಸ್ಮೈ ಚಪೇಟಾಂ ದದಾತಿ' ಅಥರ್ವಣವೇದವನ್ನು ಪಾಠ ಹೇಳುವವರಿಗೆ

ಖಂಡಿಕೋಪಾಧ್ಯಾಯ ಎಂದು ಹೇಳುವರು. ಇವರು ಶಿಷ್ಯನಿಗೆ ಕಪಾಳಕ್ಕೆ ಏಟು ಕೊಡುತ್ತಾರೆ. ಇಲ್ಲಿ ದಾನಪದಾರ್ಥ ಅನ್ವಯವಾಗುವುದಿಲ್ಲ. ಅಪುನರ್ಗ್ರಹಣಾಯ ಸ್ವಸ್ವತ್ವನಿವೃತ್ತಿಪೂರ್ವಕ ಪರಸ್ವತ್ವಾಪಾದನ ಇಲ್ಲ ಎಂದರ್ಥ. ರಜಕಸ್ಯ ದದಾತಿ ಎನ್ನುವಲ್ಲಿ ಸಂಬಂಧಾರ್ಥದಲ್ಲಿ ಷಷ್ಠೀ ಬಂದಿದೆ. ಇನ್ನು ಅಜಾಂ ನಯತಿ ಗ್ರಾಮಮ್ - ಎಂಬಲ್ಲಿ ಗ್ರಾಮವು ಅಜಾವನ್ನು ಕುರಿತು ಅಂಗವಲ್ಲ-ವಾದ್ದರಿಂದ ಅತಿಪ್ರಸಂಗವಿಲ್ಲ.

ಇಲ್ಲಿಯವರೆಗೆ ದಾನಪದಾರ್ಥವು ಸ್ವಸ್ವತ್ವಪರಿತ್ಯಾಗೇನ ಪರಸ್ವತ್ವಾಪಾದನ ಎಂದು ವರ್ಣಿಸ-ಲಾಗಿದೆ. ಇದು ಪ್ರಕೃತ ಅಸ್ಮೋದ್ಭವಾದಿದಂ ಎಂಬ ಸ್ಥಳದಲ್ಲಿ ಇಲ್ಲ. ಆದ್ದರಿಂದ ಚತುರ್ಥೀ ಇಲ್ಲ ಎಂದು ಹೇಳಬಹುದು. ಅದು ಹೀಗೆ — ಈಶ್ವರನು ಜಗತ್ತಿಗೆ ಉದ್ಭವಾದಿಗಳನ್ನು ನೀಡುವನು. ಇಲ್ಲಿ ತನ್ನ ಅಧೀನವಾದ ಉದ್ಭವಾದಿಗಳನ್ನು ತ್ಯಜಿಸಿ ಪರಾಧೀನವಾಗಿ ಮಾಡುವುದಿಲ್ಲ - ಎಂದು. ಉತ್ತರ — ವೃಕ್ಷಾಯ ಜಲಂ ದದಾತಿ - ಮರಕ್ಕೆ ನೀರನ್ನು ಹಾಕುತ್ತಾನೆ - ಖಂಡಿಕೋಪಾಧ್ಯಾಯಃ ಶಿಷ್ಯಾಯ ಚಪೇಟಿಕಾಂ ದದಾತಿ - ನ ಶೂದ್ರಾಯ ಮತಿಂ ದದ್ಯಾತ್ - ಮುಂತಾದ ಕಡೆಯಲ್ಲಿ ಚತುರ್ಥೀ ವಿಭಕ್ತಿಯನ್ನು ಕೂಡಿಸಲು ಪದಮಂಜರಿಯಲ್ಲಿ ದಾನ ಎಂದರೆ ಹೀಗೆ ಹೇಳಿದ್ದಾರೆ. 'ಕಂಚಿದುದ್ದಿಶ್ಯ ಅಪುನರ್ಗ್ರಹಣಾಯ ಸ್ವದ್ರವ್ಯತ್ಯಾಗಃ' - 'ಯಾರನ್ನಾದರೂ ಉದ್ದೇಶಿಸಿ ಮತ್ತೆ ಅವರಿಂದ ಅದನ್ನು ಗ್ರಹಣ ಮಾಡದೇ ಇರಲು ತನ್ನ ಅಧೀನವಾದ ದ್ರವ್ಯವನ್ನು ತ್ಯಾಗಮಾಡು-ವುದು'. ಅಲ್ಲಿ ಮತಿದಾನಾದಿಸ್ಥಳಗಳಲ್ಲಿ ಹೇಗೋ ಒಂದು ರೀತಿಯ ತ್ಯಾಗವನ್ನು ಪ್ರತಿಪಾದನೆ ಮಾಡುತ್ತೀವೋ ಹಾಗೆ ಇಲ್ಲಿಯೂ ಮಾಡಬಹುದು. ಹಾಗಾಗಿ ಚತುರ್ಥೀಪ್ರಸಕ್ತಿ ಇದ್ದೇ ಇದೆ. ಅಲ್ಲದೆ ಭಾಷ್ಯಕಾರರು 'ಕರ್ಮಣಾ ಯಮಭಿಪ್ರೈತಿ' ಎಂಬ ಸೂತ್ರದಲ್ಲಿ ದಾನಕರ್ಮಣಾ ಎಂದು ಅಭಿಪ್ರಾಯ ಪಟ್ಟಿಲ್ಲ. ಹೊರತಾಗಿ ಕ್ರಿಯಾಕರ್ಮಣಾ ಎಂದಭಿಪ್ರಾಯಪಟ್ಟಿದ್ದಾರೆ. ಅಂದರೆ ದದಾತಿ ಎಂದು ದಾನವನ್ನು ವಿವಕ್ಷೆ ಮಾಡಿದಾಗ ಮಾತ್ರ ಸಂಪ್ರದಾನಸಂಜ್ಞೆ ಎಂದಲ್ಲ; ತತ್ಪ್ರಯುಕ್ತ ಚತುರ್ಥೀ ಎಂದಲ್ಲ ಹೊರತು ಯಾವುದೇ ಕ್ರಿಯೆಯಾದರೂ ಗ್ರಹಣ ಮಾಡಬಹುದು. ಆದ್ದರಿಂದ ಚತುರ್ಥೀ-ಪ್ರಸಕ್ತಿ ಇದ್ದೇ ಇದೆ. ಹಾಗಾಗಿ 'ಅಸ್ಮೈ ಉದ್ಭವಾದಿದಂ' ಎಂದಾಗಬೇಕು.

ಉತ್ತರ — 'ವಿವಕ್ಷಾತಃ ಕಾರಕಾಣಿ ಭವಂತಿ' ಎಂದು ಹೇಳಿದಂತೆ ವಕ್ತೃ ಇಚ್ಛೆಗನುಗುಣವಾಗಿ ಕಾರಕಗಳು. ಆದ್ದರಿಂದ ಸಂಪ್ರದಾನವನ್ನು ಸಂಪ್ರದಾನತ್ವೇನ ವಿವಕ್ಷೆ ಮಾಡದೆ ಸಂಬಂಧತ್ವೇನ ವಿವಕ್ಷೆ ಮಾಡಿದಾಗ 'ಷಷ್ಠೀ ಶೇಷೇ' (ಪಾ.ಸೂ. 2-3-50) ಎಂಬ ಸೂತ್ರದಿಂದ ಷಷ್ಠೀವಿಭಕ್ತಿಯು ಬಂದು ಅಸ್ಯ ಎಂದಾಗಿದೆ.

## ಲಘುಮಂಜೂಷಾದಲ್ಲಿ ಬಂದ ಸಂಪ್ರದಾನವಿಚಾರ

(*) ಅನಿರಾಕರಣಾತ್ ಕರ್ತುಸ್ತ್ಯಾಗಾಂಗಂ ಕರ್ಮಣೇಪ್ಸಿತಮ್ ।
ಪ್ರೇರಣಾನುಮತಿಭ್ಯಾಂ ಚ ಲಭತೇ ಸಂಪ್ರದಾನತಾಮ್ ॥ (ಲಘುಮಂಜೂಷಾಯಾಂ)

ಆದ್ಯಂ ದೇವತಾ । ಪ್ರೇರಣಯಾ ಯಾಚಕಃ । ಅನುಮತ್ಯೋಪಾಧ್ಯಾಯಃ ।

"ಖಂಡಿಕೋಪಾಧ್ಯಾಯಸ್ತಸ್ಮೈ ಚಪೇಟಾಂ ದದಾತಿ' ಇತ್ಯತ್ರ ಸಂಯೋಗವಿಶೇಷಾನುಕೂಲೋ ವ್ಯಾಪಾರೋ ದದಾತ್ಯರ್ಥಃ । ಚಪೇಟಾ - ಪ್ರಸೃತಕರತಲಮ್ । 'ನ ಶೂದ್ರಾಯ ಮತಿಂ ದದ್ಯಾತ್' ಇತ್ಯಾದೌ ಬೋಧನಾರ್ಥಃ ಸಃ, ಮತಿಶಬ್ದೇನ ತಜ್ಜನಕವೇದಾದಿರೂಪಶಾಸ್ತ್ರಮುಚ್ಯತೇ । 'ರಜಕಾಯ ವಸ್ತ್ರಂ ದದಾತಿ' ಇತ್ಯಾದಾವಾಧೀನೀಕರಣಂ ತದರ್ಥಃ । ಶೇಷತ್ವವಿವಕ್ಷಾಯಾಂ ರಜಕಸ್ಯ ವಸ್ತ್ರಮಿತ್ಯಪಿ ಭವತಿ । 'ಅಜಾಂ ಗ್ರಾಮಂ ನಯತಿ' ಇತ್ಯಾದೌ ಪರಯಾ ಕರ್ಮಸಂಜ್ಞಯಾ ಬಾಧಾನ್ನ ದೋಷಃ ।

ಏವಂ ಸಂಪ್ರದಾನತ್ವಂ ನಿರುಚ್ಯ ತದ್ವಿಭಜ್ಯತೇ — ಸಂಪ್ರದಾನಮಿತಿ ॥ ಹರಿಕಾರಿಕಾಯಾಂ ತ್ಯಾಗಾಂಗಮಿತಿ ಭರ್ತೃಹರಿಮತೇ ಸಂಪ್ರದಾನಶಬ್ದೋಽನ್ವರ್ಥಃ । ಅತಸ್ತ್ಯಾಗಾಂಗಮಿತಿ ಲಬ್ಧಮ್ । ದೀಯಮಾನಸ್ಯ ಸ್ವತ್ವನಿವೃತ್ತ್ಯಾ ಪರಸ್ವತ್ವಾಪಾದನಂ ತ್ಯಾಗಃ । ತಸ್ಯಾಂಗಂ = ನಿಮಿತ್ತಮಿತಿ ತದರ್ಥಃ । ಯದ್ಯೇವಂ ಪಾಣ್ಯಾದೇರಪಿ ತತ್ತ್ವಂ ಸ್ಯಾದತ ಆಹ - ಕರ್ಮಣೇಪ್ಸಿತಮಿತಿ ॥ ಯತ್ ತ್ಯಾಜ್ಯಮಾನಂ ಗವಾದಿ ಕರ್ಮ, ತೇನ ಕರಣಭೂತೇನ ಪ್ರಾರಂಭ ಏವ ಕರ್ತಾಽಽಪ್ತುಮಿಷ್ಟಮಿತ್ಯರ್ಥಃ । ಏವಂವಿಧಸ್ಯ ತ್ಯಾಗಾಂಗಸ್ಯ ಬ್ರಾಹ್ಮಣಾದೇರಕ್ರಿಯಾತ್ವಾತ್ ಕಥಂ ಕಾರಕವಿಶೇಷರೂಪಸಂಪ್ರದಾನತ್ವಮಿತ್ಯಾಕಾಂಕ್ಷಾಯಾಂ ಕಾರಕತ್ವನಿಬಂಧನಂ ವ್ಯಾಪಾರಕ್ರಿಯಾಸಿದ್ಧೌ ನಿರ್ದಿಶತಿ — ಅನಿರಾಕರಣಾದಿತ್ಯಾದಿನಾ ॥

ಅಯಮರ್ಥಃ — ಉಪಾಧ್ಯಾಯಾಯ ಗಾಂ ದದಾತೀತ್ಯಾದೌ ತ್ಯಜ್ಯಮಾನ ಗವಾದಿಕರ್ಮೋಪಾಧ್ಯಾಯಾದಿನಾ ಸಂಬಧ್ಯತೇ । ತದಭಿಪ್ರಾಯೇಣೈವ ತ್ಯಾಗಾತ್ । ಸ ಚೋಪಾಧ್ಯಾಯೋಽಭಿಸಂಬಧ್ಯಮಾನಂ ಗವಾದಿ ನ ನಿರಾಕರೋತಿ, ನಾಪಿ ತತ್ಕರ್ತೃಃ 'ಮಾತ್ಯಾಕ್ಷೀ'ರಿತಿ ನಿರಾಕರಣಂ ವಿಧತ್ತೇ । ಯದಿ ಹಿ ನಿರಾಕುರ್ಯಾತ್ ತ್ಯಾಗ ಏವ ನ ಸಂಪದ್ಯೇತ । ಪರಸ್ವತ್ವಾಪತ್ತಿಪರ್ಯಂತತ್ವಾತ್ ತಸ್ಯ । ಅನುಮನ್ಯತೇ ಚ ದೀಯಮಾನಮುಪಾಧ್ಯಾಯಃ । ಅತೋಽನುಮತಿರೇವೋಪಾಧ್ಯಾಯನಿಷ್ಠಃ ಕಾರಕತ್ವಸಂಪಾದಕೋ ವ್ಯಾಪಾರಃ । ತೇನೋಪಾಧ್ಯಾಯಸ್ಯ ಕಾರಕತ್ವಾತ್ ಸಂಪ್ರದಾನತ್ವಮ್ । ತಥಾ ದೀಯಮಾನಂ ಬಲ್ಯಾದಿದೇವತಾಪಿ ನ ನಿರಾಕರೋತಿ । ಅತಸ್ತದಪಿ ಕ್ರಿಯಾಂಗಮ್ । ಏವಂ ಚ ದೇವತಾಯಾಮನಿರಾಕರಣಮೇವ ವ್ಯಾಪಾರಃ । ತಥಾ ಕಶ್ಚಿತ್ ಧನಿಕೋ ಗೋದಾನಂ ಕರೋತೀತಿ ಶ್ರುತ್ವಾ ತದಪೇಕ್ಷಮಾಣೋ ಧನಿಕಂ ಪ್ರಾಪ್ಯ ಮಹ್ಯಂ ಗಾಂ ದೇಹೀತಿ ಯಾಚತೇ । ತಥಾ ಚಾತ್ರ ಪ್ರೇರಣಾ ವ್ಯಾಪಾರಃ । ಏವಂ ಚಾನುಮತ್ಯನಿರಾಕರಣಪ್ರೇರಣಾರೂಪವ್ಯಾಪಾರವತ್ತ್ವೇನ ಕಾರಕತ್ವೇ ಸಿದ್ಧೇ, ತದ್ವ್ಯಾಪ್ಯಸಂಪ್ರದಾನತ್ವಮಪ್ಯುಪಾಧ್ಯಾಯಾದೇಃ ಸಿಧ್ಯತೀತಿ ಹರಿಗ್ರಂಥತಾತ್ಪರ್ಯಮ್ । ಆದ್ಯಮ್ = ಅನಿರಾಕರ್ತೃಸಂಪ್ರದಾನಮ್ । ಯಾಚಕಃ ಪ್ರೇರ-

ಯಿತ್ರಸಂಪ್ರದಾನಮ್ । ಉಪಾಧ್ಯಾಯೋಽನುಮಂತೃಸಂಪ್ರದಾನಮ್ । ಕರ್ತುಸ್ತ್ಯಾಗಸ್ಯ ನಿಮಿತ್ತಂ ಕರ್ಮಣೇಪ್ಸಿತಂ ಚ ಯದ್ವಸ್ತು ನಿರಾಕರಣಾತ್ ಪ್ರೇರಣಯಾನುಮತ್ಯಾ ಚ ಕಾರಕಂ ಸತ್ ತದ್ವಿಶೇಷಂ ಸಂಪ್ರದಾನತ್ವಂ ಲಭತ ಇತಿ ಕಾರಿಕಾರ್ಥಃ ।

ಭಾಷ್ಯರೀತ್ಯಾ ಸಂಪ್ರದಾನಶಬ್ದಸ್ಯಾನ್ವರ್ಥತ್ವಾಭಾವಾತ್ । ಅತ ಏವ ಪತ್ಯೇ ಶೇತೇ ಇತ್ಯಾದೌ ಪತ್ಯಾದೇಃ ಸೂತ್ರೇಣೈವ ಸಂಪ್ರದಾನತ್ವಮುಕ್ತಂ ಭಗವತಾ । ತದೇತದ್ ಧ್ವನಯನ್ನಾಹ – ಖಂಡಿಕೋಪಾಧ್ಯಾಯ ಇತಿ ಸಂಪ್ರದಾನಸಂಜ್ಞಾ ನ ದದಾತ್ಯಪೇಕ್ಷಯೈವ । ದದಾತೇಃ ಪ್ರಯೋಗೇಽಪಿ ನ ಮುಖ್ಯಾರ್ಥಾಪೇಕ್ಷಯೇತ್ಯಾಶಯಃ । ಖಂಡಿಕೋಪಾಧ್ಯಾಯಃ = ಬಾಲೋಪಾಧ್ಯಾಯಃ ।

ಯದ್ವಾ ಖಂಡಿಕಾನಾಮಾಥರ್ವವೇದೀಯಗ್ರಂಥಭಾಗಃ । ತದಧ್ಯಾಪಕ ಇತ್ಯರ್ಥಃ । ಸಂಯೋಗೇತಿ ॥ ಹನುಸಂಯೋಗೇತ್ಯರ್ಥಃ । ಚಪೇಟಾಪದಾರ್ಥಮಾಹ – ಪ್ರಸೃತೇತಿ ॥ ಏವಂ ಚಾತ್ರ ದದಾತಿರ್ನ ಮುಖ್ಯಾರ್ಥಕಸ್ತಥಾಪಿ ಸಂಪ್ರದಾನತ್ವಂ ಸಿದ್ಧ್ಯತ್ಯೇವ ।

ಕೇಚಿತ್ತು – 'ನ ಶೂದ್ರಾಯ ಮತಿಂ ದದ್ಯಾತ್' ಮತಿಸಂತಾನಸ್ಯಾಪಕ್ರಾಮತೋಽಸ್ತ್ಯೇವ ಪರೋಪಯೋಗಃ । ತಥಾ ಚೋಪಾಧ್ಯಾಯಾದಾಗಮಯತೀತ್ಯಧ್ಯಯನಸಂತಾನಸ್ಯ ಅಪಕ್ರಾಮತ ಉಪಾಧ್ಯಾಯೋಽಪಾದಾನಂ ಭವತಿ । ಮತಿಸಂತಾನಸ್ಯೈಕದೇಶಸ್ತ್ಯಜ್ಯತ ಇತಿ ಸ್ವತ್ವನಿವೃತ್ತ್ಯಂಗಪರಸ್ವತ್ವಾಪಾದನಲಕ್ಷಣೋ ಮುಖ್ಯ ಏವಾತ್ರ ದದಾತ್ಯರ್ಥಃ' ಇತಿ ವದಂತಿ । ತದ್ದೂಷಯತಿ – ನ ಶೂದ್ರಾಯೇತಿ ಬೋಧನಾರ್ಥ ಇತಿ ॥ ಅನೇನ ನಿರುಕ್ತಾರ್ಥೋ ವ್ಯವಚ್ಛಿದ್ಯತೇ ।

ನನ್ವೇವಮಪ್ಯಯಂ ಪ್ರಯೋಗೋ ನ ಯುಜ್ಯತೇ । ಮತಿಶಬ್ದಾರ್ಥಸ್ಯ ಬೋಧನಸಂಭವೇನ ನಿಷೇಧಾಯೋಗಾತ್ ಶೂದ್ರೇಽಪಿ ತತ್ಸಂಭವಾದತ ಆಹ – ಮತಿಶಬ್ದೇನೇತಿ ॥ ಅತ್ರ ಶೂದ್ರಶಬ್ದಃ ಸ್ತ್ರಿಯಾ ಅಪ್ಯುಪಲಕ್ಷಣಮ್ । ಶಾಸ್ತ್ರಮಿತಿ ॥ 'ಸ್ತ್ರೀಶೂದ್ರೌ ನಾಧೀಯೇತಾಮ್' ಇತಿ ವಚನೇನ ಸ್ತ್ರೀಶೂದ್ರಯೋಃ ವೇದಾಧ್ಯಯನಂ ನಿಷಿದ್ಧ್ಯತೇ । ಅತಃ ನಿಷೇಧಃ ಯುಜ್ಯತೇ ಏವ । ಸಂಪ್ರದಾನಸಂಜ್ಞಾಯಾಃ ಅನ್ವರ್ಥತ್ವಮಿತಿ ಭರ್ತೃಹರಿಕಾಶಿಕಾಕಾರಾದೀನಾಂ ಮತಂ ನ ಯುಜ್ಯತೇ ಇತ್ಯಾಹ – ರಜಕಾಯ ಇತಿ ॥ ಅಧೀನೀಕರಣಮ್ । ವಸ್ತ್ರಾಣಾಂ ನಿರ್ಣೇಜನಾಯ ಕಂಚಿತ್ ಕಾಲಂ ರಜಕಾಧೀನೀಕರಣಮ್ । ತದರ್ಥಃ = ದದಾತ್ಯರ್ಥಃ । ಕಾಶಿಕಾಕಾರಾದೀನಾಂ ಮತೇಽಯಂ ಪ್ರಯೋಗೋ ನೋಪಪದ್ಯತ ಏವ । ತದುಕ್ತಸ್ಯ ಶೇಷಷಷ್ಠ್ಯಂತಪ್ರಯೋಗಸ್ಯೋಪಪತ್ತಿಮಾಹ – ಶೇಷತ್ವೇತಿ ॥

ನನ್ವಜಾಂ ಗ್ರಾಮಂ ನಯತೀತ್ಯತ್ರ ಗ್ರಾಮೋಽಜಾಸಂಬದ್ಧೋ ಭವತ್ವಿತಿ ನೇಚ್ಛಾ ನೇತುಃ । ಕಿಂ ತರ್ಹಿ? ಅಜಾ ಗ್ರಾಮಸಂಬದ್ಧಾ ಭವತ್ವಿತಿ । ಯದಾ ಗ್ರಾಮೋಽಜಾಸಂಬದ್ಧೋ ಭವತು ಇತ್ಯುದ್ದೇಶೇನಾಜಾನಯನಂ, ತದಾ ಗ್ರಾಮಸ್ಯ ಸಂಪ್ರದಾನತ್ವಂ ಪ್ರಸಜ್ಯೇತ । ಅಜಾಂ ಗ್ರಾಮಾಯ

ನಯತೀತಿ । ಅಜಾಪುರೀಷಸಂಯೋಗೇನ ಅಧಿಕಸಸ್ಯಸಂಪತ್ತ್ಯಾ ವಿಲಕ್ಷಣಶೋಭಾಜನನಾಯ ಗ್ರಾಮಮಜಾ ಸಂಯುಕ್ತಂ ಕರೋತೀತ್ಯಾಶಂಕಾಂ ಭೂಷಣಕಾರಾದಯ ಇಷ್ಟಾಪತ್ತ್ಯಾ ಸಮಾದಧುಃ । ತನ್ನ ಯುಕ್ತಮಿತ್ಯಾಹ — ಅಜಾಮಿತಿ ಪರಯಾ ಕರ್ಮಸಂಜ್ಞಯೇತಿ ॥ ಅನ್ಯಥಾ ಗ್ರಾಮಸಂಬದ್ಧಾ ಭವತ್ವಿತ್ಯಭಿಪ್ರಾಯೇಣ ಅಜಾನಯನೇಽಜಾಯಾಃ ಸಂಪ್ರದಾನತ್ವಾಪತ್ತಿಃ । ಅತೋ ಮದುಕ್ತರೀತ್ಯಾ ಗ್ರಾಮಸ್ಯ ಸಂಪ್ರದಾನತ್ವವಾರಣಮೇವ ನ್ಯಾಯ್ಯಮಿತಿ ಭಾವಃ । ಏತದಾಶಯೇನೈವ 'ಕರ್ಮ-ಸಂಜ್ಞಯಾ ಬಾಧಾನ್ನ ದೋಷಃ' ಇತಿ ಶಬ್ದರತ್ನೇ ಉಕ್ತಮ್ ।

## ಎಲ್ಲ ಪದಾರ್ಥಗಳಿಗೂ ಸೇರಿ ಜನ್ಮಾದ್ಯಷ್ಟಕ, ಪ್ರತ್ಯೇಕವಾಗಿ ಅಲ್ಲ

(ಲಘುರಸರಂಜನೀ) — ನನು 'ಅಸ್ಯ ಉದ್ಭವಾದಿದಮ್' ಇತ್ಯನೇನ ಸರ್ವಸ್ಯಾಪಿ ಪ್ರಪಂಚಸ್ಯ ಜನ್ಮಾದ್ಯಷ್ಟಕಸ್ಯೈವ ದಾನಂ ಪ್ರತೀಯತೇ । ತದನುಪಪನ್ನಮ್ । ನಿತ್ಯಾದೌ ಅಭಾವಾದಿತ್ಯತಃ 'ವಿಷ್ಣುನಾಸ್ಯ ಸಮಸ್ತಸ್ಯ ಸಮಾಸವ್ಯಾಸಯೋಗತಃ' ಇತಿ ತತ್ತ್ವಸಂಖ್ಯಾನಮೂಲಂ ಮನಸಿ ನಿಧಾ-ಯಾಹ — ತದ್ಯಥಾಸಂಭವಮಿತಿ ॥ ತದುಕ್ತಂ ತತ್ತ್ವಸಂಖ್ಯಾನಟೀಕಾಯಾಂ — "ಇದಮುಕ್ತಂ ಭವತಿ — ಉಕ್ತಧರ್ಮೇಷು ಯತ್ರ ತತ್ತ್ವೇ ಅಲ್ಪೀಯಾಂಸಃ ಸಂಭವಂತಿ ತತ್ರ ತಾವಂತೋ ವಿಷ್ಣ್ವಧೀನಾಃ ಜ್ಞಾತವ್ಯಾಃ । ಯತ್ರ ಬಹವಃ ತತ್ರ ತಾವಂತಃ, ಸರ್ವಥಾ ಸ್ವರೂಪಸ್ವಭಾವಾವಶ್ಯಂ ತದಧೀನೌ" ಇತಿ । ತತ್ರ ಸ್ಥಿತಿನಿಯಮೌ ಸರ್ವಸ್ಯ । ಸೃಷ್ಟಿಸಂಹೃತೀ ನಿತ್ಯಾನಿತ್ಯಸ್ಯಾನಿತ್ಯಸ್ಯ ಚ । ಅಜ್ಞಾನಂ ಭಾವರೂಪಂ ದುಃಖಸ್ಪೃಷ್ಟಸ್ಯ । ಜ್ಞಾನಾಭಾವಸ್ತು ಸರ್ವಸ್ಯ । ಬೋಧನಂ ಚೇತನಸ್ಯ । ಸುಖಂ ಪ್ರಾಪ್ತತಮಸೋ ವಿನಾ । ದುಃಖಂ ದುಃಖಾಸ್ಪೃಷ್ಟಂ ವಿನಾ ಇತ್ಯಾದಿ ದ್ರಷ್ಟವ್ಯಮಿತಿ ।

ತಥಾ ಚ — ಪ್ರಪಂಚಸಾಮಾನ್ಯೇ ಜನ್ಮಾದ್ಯಷ್ಟಕಂ ದದಾತಿ । ನ ತು ಪ್ರತಿವ್ಯಕ್ತಿ ತದ್ದಾನನಿಯಮ ಇತಿ ಭಾವಃ । ವ್ಯಾಖ್ಯೇಯಸ್ಯ ದ್ವಿತೀಯಾಂತತ್ವಾದಾಹ — ತಮಿತಿ ॥ ಏವಂ ಪೂರ್ವತ್ರಾಪಿ ಪಠಿತವ್ಯಮಿತಿ ಭಾವಃ ।

ತದ್ಯಥಾಸಂಭವಮ್ - ಅಸ್ಯೋದ್ಭವಾದಿದಂ ಎಂಬುವುದರಿಂದ ಸಕಲಜಗತ್ತಿಗೂ ಜನ್ಮಾದಿ ಎಂಟನ್ನು ಪ್ರದಾನ ಮಾಡುತ್ತಾನೆ ಎಂದು ತೋರುತ್ತದೆ. ಇದು ಸರಿಯಲ್ಲ. ನಿತ್ಯಪದಾರ್ಥಗಳಲ್ಲಿ ಜನ್ಮವೇ ಇಲ್ಲವಾದ್ದರಿಂದ ಎಂಬುವುದಕ್ಕೆ 'ವಿಷ್ಣುನಾಸ್ಯ ಸಮಸ್ತಸ್ಯ ಸಮಾಸವ್ಯಾಸಯೋಗತಃ' ಎಂಬ ತತ್ತ್ವಸಂಖ್ಯಾನದ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳುತ್ತಾರೆ - 'ತದ್ಯಥಾಸಂಭವಮ್' - ಎಂದು. ಇದನ್ನು ತತ್ತ್ವಸಂಖ್ಯಾನಟೀಕೆಯಲ್ಲಿ ಹೇಳಿದ್ದಾರೆ. ಇಷ್ಟನ್ನು ಹೇಳಿದಂತಾಗುವುದು. ಹೇಳಿದ ಜನ್ಮಾದಿ ಎಂಟರಲ್ಲಿ ಯಾವ ತತ್ತ್ವದಲ್ಲಿ ಅಲ್ಪವಾದ ಧರ್ಮಗಳಿವೆಯೋ ಅಲ್ಲಿ ಅಷ್ಟೂ ವಿಷ್ಣುವಿನ ಅಧೀನವೇ ಎಂದು ತಿಳಿಯಬೇಕು.

ಇನ್ನು ಎಲ್ಲಿ ಬಹಳಷ್ಟು ಧರ್ಮಗಳಿವೆ ಅಲ್ಲಿಯೂ ಅವುಗಳು ವಿಷ್ಣುವಿನ ಅಧೀನವೇ ಎಂದು ತಿಳಿಯಬೇಕು. ಆದರೆ ಸರ್ವಥಾ ಎಲ್ಲ ವಸ್ತುಗಳ ಸ್ವಭಾವ ಮತ್ತು ಸ್ವರೂಪ ಇವುಗಳು ಮಾತ್ರ ಅವಶ್ಯವಾಗಿ ಅವನ ಅಧೀನವೇ ಎಂದು. ಅಲ್ಲಿಯೂ ಸ್ಥಿತಿ ಹಾಗೂ ನಿಯಮನ ಇವುಗಳು ಎಲ್ಲ ವಸ್ತುಗಳಿವೆ. ಸೃಷ್ಟಿಸಂಹಾರಗಳು ಅನಿತ್ಯವಸ್ತುಗಳಿಗೆ, ಅಜ್ಞಾನ ಎಂದರೆ ಭಾವರೂಪ ಅಜ್ಞಾನವು ದುಃಖಸ್ಪೃಷ್ಟರಿಗೆ, ಅಜ್ಞಾನವಾದರೋ ಎಲ್ಲ ಚೇತನರಿಗೂ, ಜ್ಞಾನವು ಚೇತನರಿಗೆ – ಹೀಗೆ ಎಲ್ಲ ಕಡೆ ಯಥಾಯೋಗ್ಯವಾಗಿ ತಿಳಿಯಬೇಕು.

"ಪುರಾಣಾದ್ಯಾಃ ಕಾಲಃ ಪ್ರಕೃತಿರೇವ ಚ ನಿತ್ಯಾನಿತ್ಯಂ ತ್ರಿಧಾಪ್ರೋಕ್ತಮ್" ಎಂಬ ಮಾತಿನಂತೆ ನಿತ್ಯಾನಿತ್ಯತ್ವವು ಮೂರು ರೀತಿಯಾಗಿದೆ. ಉತ್ಪತ್ತಿಯಿದ್ದು ನಾಶವಿಲ್ಲದಿರುವುದು, ಏಕದೇಶದಲ್ಲಿ ಉತ್ಪತ್ತಿನಾಶಗಳು ಏಕದೇಶದಲ್ಲಿ ಅದರ ಅಭಾವ, ಸ್ವರೂಪತಃ ಉತ್ಪತ್ತಿಯಿಲ್ಲದಿದ್ದರೂ ಕಿಂಚಿದ-ವಸ್ಥಾಗಮನ ಅಪಗಮನ. ಈ ಮೂರುವಿಧವೂ ಈಗ ಹೇಳಿದ ಪುರಾಣ, ಕಾಲ, ಪ್ರಕೃತಿಗಳಲ್ಲಿದೆ. ಒಟ್ಟು ನಿತ್ಯಾನಿತ್ಯ ಎಂದರೆ ಟೀಕಾರಾಯರು ಹೀಗೆ ತಿಳಿಸಿದ್ದಾರೆ. ''ಯನ್ನ ಸರ್ವಥಾ ಕೂಟಸ್ಥಂ ನಾಪ್ಯನಿತ್ಯಮೇವ ತದುಚ್ಯತೇ ನಿತ್ಯಾನಿತ್ಯಮ್'' ಎಂದು. ಕೂಟಸ್ಥ - ಕೂಟ ಎಂದರೆ ಆಕಾಶ. ಅದರಂತೆ ನಿರ್ವಿಕಾರವಾಗಿರುವುದನ್ನು ಕೂಟಸ್ಥ ಎನ್ನುತ್ತಾರೆ. ಹೀಗೆ ಧರ್ಮಿರೂಪದಿಂದ ಸರ್ವಥಾ ಕೂಟಸ್ಥವಾಗದೇ ಘಟಾದಿಗಳಂತೆ ಕೇವಲ ಅನಿತ್ಯವೂ ಆಗದೆ ಇರುವ ವಸ್ತು ನಿತ್ಯಾನಿತ್ಯವಸ್ತು. ಉದಾ - ಪುರಾಣಾದಿಪೌರುಷೇಯಗ್ರಂಥವು ಪುರುಷರಿಂದ ಹುಟ್ಟಿದ ಕ್ರಮವುಳ್ಳದ್ದಾದರೂ ಆ ಕ್ರಮವು ಈಶ್ವರಬುದ್ಧಿಯಲ್ಲಿ ವೇದಕ್ರಮದಂತೆ ಉತ್ತರಾವಧಿ ಇಲ್ಲದೆ ತೋರುತ್ತಿದೆ. ಹಾಗಾಗಿ ನಾಶವಿಲ್ಲ. ಹೀಗೆ ಒಂದು ವಿಧದಲ್ಲಿ ಉತ್ಪತ್ತಿ ಇದ್ದರೂ ನಾಶವಿಲ್ಲದಿರುವ ವಸ್ತು ಪುರಾಣಾದಿಗಳು. ಆದ್ದರಿಂದ ಅವುಗಳು ನಿತ್ಯಾನಿತ್ಯ ಎನಿಸುತ್ತವೆ. ಇಂತಹ ವಸ್ತುಗಳಿಗೆ ಸೃಷ್ಟಿಸಂಹಾರಗಳು ಇವೆ.

ಇನ್ನು ದುಃಖಸ್ಪೃಷ್ಟನಾದ ಚೇತನನಿಗೆ ಭಾವರೂಪವಾದ ಅಜ್ಞಾನ. ಇನ್ನು ಜ್ಞಾನಾಭಾವವು ಎಲ್ಲ ಪದಾರ್ಥಗಳಿಗೂ ಸಮ. ಜ್ಞಾನವು ಚೇತನರಿಗೆ.

ತೇಚ ಪ್ರಾಪ್ತಾಂಧತಮಸಃ ಸೃತಿಸಂಸ್ಥಾ ಇತಿ ದ್ವಿಧಾ ।(ತ.ಸಂ.) - ಹಿಂದೆ ಹೇಳಿದ ನಾಲ್ಕುರೀತಿ-ಯಾದವರು ಮತ್ತೆ ಪ್ರತ್ಯೇಕವಾಗಿ ಇನ್ನೆರಡು ವಿಧವಾಗಿ ಇದ್ದಾರೆ. ಹಿಂದೆ ಪ್ರಸ್ತುತರಾದವರು ಇವರು - 'ದೈತ್ಯರಕ್ಷಃಪಿಶಾಚಕಾಃ । ಮರ್ತ್ಯಾಧಮಾಃ ಚತುರ್ಥ್ಯೇವ ತಮೋಯೋಗ್ಯಾಃ ಪ್ರಕೀರ್ತಿತಾಃ'' ಸಂಸಾರದಲ್ಲಿ ಇನ್ನೂ ತಮಸ್ಸನ್ನು ಹೊಂದದವರು ಯಾರಿದ್ದಾರೆ ಅವರನ್ನು ಸೃತಿಸಂಸ್ಥರು ಎಂದು ಕರೆಯುತ್ತಾರೆ. ಇನ್ನು ಯಾರು ಅಂಧಂತಮಸ್ಸನ್ನು ಹೊಂದಿದ್ದಾರೆ ಅವರು ಪ್ರಾಪ್ತಾಂಧತಮಸರು ಆಗುತ್ತಾರೆ. ಇವರಿಬ್ಬರಲ್ಲಿ ಪ್ರಾಪ್ತಾಂಧತಮಸರನ್ನು ಬಿಟ್ಟು ಬೇರೆಯವರಿಗೆ ಸುಖವನ್ನು ಇಲ್ಲಿ ಹೇಳುತ್ತಿರುವುದು. ಚೇತನರಲ್ಲಿ ದುಃಖ ಅಸ್ಪೃಷ್ಟರಾದವರನ್ನು ಬಿಟ್ಟು ಬೇರೆಯವರಿಗೆ ದುಃಖ.

ಒಟ್ಟಾರೆ ಸಕಲಪ್ರಪಂಚಕ್ಕೆ ಜನ್ಮಾದಿ ಎಂಟನ್ನೂ ಕೊಡುತ್ತಾನೆ. ಆದರೆ ಪ್ರತಿವ್ಯಕ್ತಿಗಳಿಗೂ ಜನ್ಮಾದಿ ಎಂಟನ್ನು ಕೊಡಬೇಕೆಂಬ ನಿಯಮವಿಲ್ಲ ಎಂದಭಿಪ್ರಾಯ.

## ಪ್ರಾತಿಪದಿಕಾರ್ಥವರ್ಣನೆಯ ನಂತರ ಷಷ್ಠ್ಯರ್ಥಕಥನ ಯುಕ್ತವಲ್ಲವೇ?

(ಲಘುರಸರಂಜನೀ) — 'ವಿವಕ್ಷಾತಃ ಕಾರಕಾಣಿ ಭವಂತಿ' ಇತ್ಯುಕ್ತೇಃ ಸಂಪ್ರದಾನಸ್ಯ ಅವಿವಕ್ಷಿತತ್ವಾತ್ ರಜಕಸ್ಯ ವಸ್ತ್ರಂ ದದಾತಿ ಇತ್ಯಾದಿವತ್ ಶೇಷವಿವಕ್ಷಯಾ ಇಯಂ ಷಷ್ಠೀತ್ಯಾಹ — **ಅಸ್ಯೇತಿ ಸಂಬಂಧಮಾತ್ರೇ ಷಷ್ಠೀತಿ** ॥ ತಥಾಚ 'ಷಷ್ಠೀ ಶೇಷೇ' ಇತಿ ಸೂತ್ರೇಣ ಸಂಬಂಧಸಾಮಾನ್ಯೇ ಷಷ್ಠೀತಿ ಭಾವಃ ।

ನನು 'ಅಸ್ಯ ಪ್ರಪಂಚಸ್ಯ' ಇತಿ ಪ್ರಾತಿಪದಿಕಾರ್ಥಕಥನಾನಂತರಮೇವ ತದುತ್ತರಷಷ್ಠ್ಯರ್ಥೋ ವರ್ಣನೀಯಃ । ಸತ್ಯಮ್ । ತಥಾಪಿ 'ಉದ್ಭವಾದಿದಮ್' ಇತಿ ಸಮಾಸಾರ್ಥವರ್ಣನಾನಂತರಮೇವ ಪ್ರಪಂಚಸ್ಯ ದಾನಕರ್ಮತ್ವಪ್ರತೀತ್ಯಾ 'ಕರ್ಮಣಾ ಯಮಭಿಪ್ರೈತಿ (ಸ) ಸಂಪ್ರದಾನಮ್' ಇತಿ ಸಂಪ್ರದಾನಸಂಜ್ಞಾಯಾಂ 'ಸಂಪ್ರದಾನೇ ಚತುರ್ಥೀ' ಇತಿ ಚತುರ್ಥೀಪ್ರಸಕ್ತೌ 'ವಿವಕ್ಷಾತಃ ಕಾರಕಾಣಿ ಭವಂತಿ' ಇತ್ಯುಕ್ತ್ಯಾ ಸಂಪ್ರದಾನತ್ವಾವಿವಕ್ಷಯಾ ಪ್ರಾಪ್ತಷಷ್ಠ್ಯರ್ಥವರ್ಣನಸ್ಯ ಇದಾನೀಮವಸರಪ್ರಾಪ್ತಿರಿತಿ ।

ನನು ಯುಕ್ತಂ ಟೀಕಾಕಾರೀಯಂ ವ್ಯಾಖ್ಯಾನಂ ಯುಕ್ತಂ ಚ ವಿವಕ್ಷಾತಃ ಕಾರಕಾಣಿ ಭವಂತೀತಿ । ತಥಾಪಿ ಮೂಲಕಾರಸ್ಯ ಕುತಃ ಪ್ರಪಂಚೇ ಸಂಪ್ರದಾನತ್ವವಿವಕ್ಷಾಸಂಬಂಧಿತ್ವವಿವಕ್ಷಾ ಚೇತಿ ಚೇನ್ನ । ಸ್ವಸ್ವತ್ವಪರಿತ್ಯಾಗಪೂರ್ವಕಪರಸ್ವತ್ವಾಪಾದನಂ ಹಿ ಮುಖ್ಯಂ ದಾನಮ್ । 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಇತಿ ಸೂತ್ರೇ ಚ ಮುಖ್ಯದಾನೋದ್ದೇಶಸ್ಯೈವ ಸಂಪ್ರದಾನಸಂಜ್ಞಾಯಾ ಅಭಿಪ್ರೇತತ್ವಾತ್ ಪ್ರಪಂಚಸ್ಯ ತಾದೃಶಜ್ಞಾನೋದ್ದೇಶ್ಯತ್ವಾಭಾವಾತ್ ತತ್ರ ಸಂಪ್ರದಾನತ್ವವಿವಕ್ಷಾಯಾಃ ಪರಿಶೇಷಾದ್ ರಜಕಸ್ಯ ವಸ್ತ್ರಂ ದದಾತಿ ಇತ್ಯಾದಿವತ್ ಸಂಬಂಧಿತ್ವವಿವಕ್ಷಾಯಾಶ್ಚ ಸಂಭವಾತ್ ।

ಇಲ್ಲಿ 'ವಿವಕ್ಷಾತಃ ಕಾರಕಾಣಿ ಭವಂತಿ' ಎಂದು ಕಾರಕಗಳು ವಕ್ತೃವಿನ ಇಚ್ಛಾಧೀನ ಎಂದು ಹೇಳಿದ್ದರಿಂದ ಸಂಪ್ರದಾನತ್ವವನ್ನು ವಿವಕ್ಷೆ ಮಾಡಿಲ್ಲವಾದ್ದರಿಂದ, 'ರಜಕಸ್ಯ ವಸ್ತ್ರಂ ದದಾತಿ' ಎಂಬಲ್ಲಿ ಷಷ್ಠಿಯು 'ಸಂಬಂಧಸಾಮಾನ್ಯೇ ಷಷ್ಠೀ' ಎಂದು ಹೇಳುವಂತೆ ಇಲ್ಲಿಯೂ ಹೇಳಬೇಕು. ಅಲ್ಲ ಅಸ್ಯ ಎಂದು ಇದಂಶಬ್ದದ ಅರ್ಥವನ್ನು ಮೊದಲು ಹೇಳಿಯೇ ಅನಂತರ 'ಸ್ಯ' ಎಂಬ ಷಷ್ಠೀವಿಭಕ್ತಿಯ ಅರ್ಥ ಏನು ಎಂದು ವರ್ಣಿಸಬೇಕು ಎನ್ನುವ ಪ್ರಶ್ನೆಗೆ ಇದು ಉತ್ತರ.

ಹೌದು; ಆದರೂ ಉದ್ಭವಾದಿದಂ ಎಂಬಲ್ಲಿ ಸಮಾಸದ ಅರ್ಥವನ್ನು ವರ್ಣಿಸಿದ ಮೇಲೆಯೇ ಪ್ರಪಂಚವು ದಾನಕ್ಕೆ ಕರ್ಮ ಎಂದು ತೋರುವುದರಿಂದ ಪ್ರಪಂಚಕ್ಕೆ ಸಂಪ್ರದಾನಸಂಜ್ಞೆಯು

ಬಂದು, ತದ್ವಾಚಕವಾದ ಶಬ್ದಕ್ಕೆ ಚತುರ್ಥೀವಿಭಕ್ತಿಯ ಪ್ರಸಕ್ತಿ ಬಂದಾಗ, 'ವಿವಕ್ಷಾತಃ ಕಾರಕಾಣಿ ಭವಂತಿ' ಎಂದು ಹೇಳಿ ಸಂಪ್ರದಾನತ್ವವಿವಕ್ಷೆಯಿಲ್ಲದಿರುವುದರಿಂದ ಇಲ್ಲಿ ಷಷ್ಠೀ ಪ್ರಾಪ್ತವಾಗುತ್ತದೆ. ಹೀಗೆ ಅವಸರಸಂಗತಿ ಇರುವ ಪ್ರಯುಕ್ತ ಮೊದಲೇ ಷಷ್ಠ್ಯರ್ಥವರ್ಣನೆ ಮಾಡಿದ್ದು.

ಟೀಕಾಕಾರರ ಈ ರೀತಿ ವ್ಯಾಖ್ಯಾನವು ಸರಿ. 'ವಿವಕ್ಷಾತಃ ಕಾರಕಾಣಿ ಭವಂತಿ' ಎಂದದ್ದೂ ಸರಿ. ಆದರೆ ಮೂಲಕಾರರಿಗೆ ಪ್ರಪಂಚದಲ್ಲಿ ಸಂಪ್ರದಾನತ್ವದ ಅವಿವಕ್ಷೆ, ಸಂಬಂಧಿತ್ವವಿವಕ್ಷೆ ಇದೆ ಎಂದು ಹೇಗೆ ತಿಳಿಯಿತು? ಎಂದರೆ ಉತ್ತರ — ಮುಖ್ಯವಾಗಿ ದಾನ ಎಂದರೆ ಸ್ವಸ್ವತ್ವಪರಿತ್ಯಾಗಪೂರ್ವಕ-ಪರಸ್ವತ್ವಾಪಾದನ. ಹೀಗೆ ಮುಖ್ಯದಾನೋದ್ದೇಶಕ್ಕೆ ಸಂಪ್ರದಾನಸಂಜ್ಞೆ ಬರುವುದರಿಂದ ಪ್ರಪಂಚವು ಮುಖ್ಯದಾನೋದ್ದೇಶ್ಯವಾಗಿಲ್ಲವಾದ್ದರಿಂದ ಅರ್ಥಾತ್ ಸಂಪ್ರದಾನತ್ವವಿವಕ್ಷೆ ಇಲ್ಲದಿರುವುದರಿಂದ 'ರಜಕಸ್ಯ ವಸ್ತ್ರಂ ದದಾತಿ' ಎಂಬಲ್ಲಿನಂತೆ ಸಂಬಂಧಿತ್ವವಿವಕ್ಷೆ ಇರುವ ಪ್ರಯುಕ್ತ ಷಷ್ಠೀವಿಭಕ್ತಿಯು ಬಂದಿದೆ.

## ವಕ್ಷ್ಯಮಾಣವಿಯದಧಿಕರಣಾದಿವಿರೋಧಾಪತ್ತಿ

**(ಲಘುರಸರಂಜನೀ) — ನನು ನಿತ್ಯಾದಿಷು ಜನ್ಮಾದ್ಯಷ್ಟಕಸ್ಯ ಬಾಧವಾರಣಾಯ 'ಸಮಾಸವ್ಯಾಸ-ಯೋಗತಃ' ಇತಿ ಮೂಲಂ ಮನಸಿ ನಿಧಾಯ 'ಯಥಾಸಂಭವಮ್' ಇತ್ಯುಕ್ತಮ್ । ತದನುಪ-ಪನ್ನಮ್ । ವಕ್ಷ್ಯಮಾಣವಿಯದಧಿಕರಣಾದಿವಿರೋಧಾಪತ್ತೇಃ । ತತ್ರ ನಿತ್ಯಾನಾಮಪಿ ಉತ್ಪತ್ತ್ಯಾದಿ-ಸಮರ್ಥನಾತ್ ಇತ್ಯತಸ್ತಯೋರವಿರೋಧಾಯ ಮೂಲಮೇವ ಯೋಜಯತಿ — ಅಶೇಷ-ವಿಶೇಷತ ಇತಿ ॥**

**ಅಶೇಷವಿಶೇಷತಃ** - ಅಲ್ಲ ನಿತ್ಯವಾದ ಪದಾರ್ಥಗಳಲ್ಲಿ ಜನ್ಮಾದಿ ಎಂಟನ್ನು ಹೇಳಿದರೆ ಬಾಧ ಬರುವುದು ಎಂಬ ಕಾರಣಕ್ಕೆ ಅದನ್ನು ಪರಿಹಾರ ಮಾಡುವುದಕ್ಕಾಗಿ ಸಮಾಸವ್ಯಾಸಯೋಗತಃ ಎಂಬ ಮೂಲವನ್ನು ಮನಸ್ಸಿನಲ್ಲಿಟ್ಟುಕೊಂಡು ಯಥಾಸಂಭವಮ್ ಎಂದು ಹೇಳಿದ್ದರು. ಆದರೆ ಇದು ಸರಿಯಲ್ಲ. ಮುಂದಿನ ವಿಯದಧಿಕರಣ ಮೊದಲಾದವುಗಳ ವಿರೋಧ ಬರುವುದರಿಂದ. ಏಕೆಂದರೆ ಅಲ್ಲಿ ನಿತ್ಯಪದಾರ್ಥಗಳಿಗೂ ಉತ್ಪತ್ತಿ ಸ್ಥಿತಿ ಮೊದಲಾದವುಗಳನ್ನು ಸಮರ್ಥನೆ ಮಾಡಿದ್ದರಿಂದ. ಈ ವಿರೋಧಪರಿಹಾರಕ್ಕಾಗಿ 'ಅಶೇಷವಿಶೇಷತಃ' ಎಂಬುವುದನ್ನು ಅಸ್ಯೋದ್ಭವಾ-ದಿದಂ ಎಂಬಲ್ಲಿಯೂ ಅನ್ವಯಿಸಿದ್ದಾರೆ.

## ವಿಶೇಷತಃ ಎಂಬಲ್ಲಿ ತಸಿಪ್ರತ್ಯಯ

**(ಪರಿಮಳ)– 'ವಿಶೇಷತ ಇತಿ ತೃತೀಯಾರ್ಥೇ ತಸಿಃ' ಇತ್ಯುಪೇತ್ಯ ಅರ್ಥಮಾಹ– ಅವಾಂತರ-ಭೇದಸಹಿತೇತಿ ॥**

ಅಶೇಷವಿಶೇಷತೋऽಪಿ ವಂದ್ಯಂ ಎಂಬಲ್ಲಿ ವಿಶೇಷತಃ ಎಂಬ ಪದದ ನಿಷ್ಪತ್ತಿಯನ್ನು ತೋರಿಸಿದ್ದಾರೆ. ವಿಶೇಷತಃ ಎಂಬಲ್ಲಿ ತಸಿ ಎಂಬ ಪ್ರತ್ಯಯವಿದೆ. ಅದು ತೃತೀಯಾವಿಭಕ್ತಿಯ ಅರ್ಥದಲ್ಲಿ ಬಂದಿದೆ. ಹಾಗಾಗಿ ವಿಶೇಷೇಣ ಸಹ ಎಂದು ಅರ್ಥ ಸಿಗುವುದು. ಇದರ ಅಭಿಪ್ರಾಯವನ್ನೇ ಅವಾಂತರಭೇದ-ಸಹಿತ ಎಂದು ಸುಧೆಯಲ್ಲಿ ವರ್ಣಿಸಲಾಗಿದೆ.

## ಒಟ್ಟಭಿಪ್ರಾಯವಿದು

(ಲಘುರಸರಂಜನೀ) — ಇದಮುಕ್ತಂ ಭವತಿ — ತತ್ತ್ವಸಂಖ್ಯಾನಮೂಲಂ ಪ್ರಸಿದ್ಧೋತ್ಪತ್ತ್ಯಾದಿ-ವಿವಕ್ಷಯಾ ಯಥಾಸಂಭವಾಭಿಪ್ರಾಯಮ್ । ವಿಯದಧಿಕರಣಾದೌ ವ್ಯುತ್ಪಾದ್ಯಾಸ್ತು ನ ಪ್ರಸಿದ್ಧೋ-ದ್ಭವಾದಯಃ । ಕಿಂತು ತದವಾಂತರಭೇದಾಃ । ತೇ ತು ನಿತ್ಯಾದಿಪ್ರಪಂಚೇऽಪಿ ಸಂಭವಂತೀತಿ ವಿಷಯಭೇದಾನ್ನ ತಯೋರ್ವಿರೋಧ ಇತಿ । ತದೇತದಭಿಸಂಧಾಯಾವಾಂತರಭೇದಸಹಿತೋ-ದ್ಭವಾದಿದಮ್ ಇತ್ಯುಭಯಮಪ್ಯುಕ್ತಂ ಧ್ಯೇಯಮ್ । ಜನ್ಮಾದ್ಯಷ್ಟಕೇ ವಿಯದಧಿಕರಣಾದೌ ವ್ಯುತ್ಪಾದ್ಯಾವಾಂತರವಿಶೇಷೇಷು, ಜನ್ಮನಿ ತಾವತ್ - ಪರಾಧೀನವಿಶೇಷಿತಾರೂಪೋದ್ಭವೋ ನಿತ್ಯಾದಿಸರ್ವಸಾಧಾರಣಃ । ತದ್ವಿಶೇಷಸ್ತು - ಮೂರ್ತಸಂಬಂಧೋ ಗಗನಸ್ಯ । ಸಿಸೃ-ಕ್ಷುತ್ವಂ ರಮಾಯಾಃ । ನಿಯತವಿಶಿಷ್ಟಾನುಪೂರ್ವೀಕತ್ವೇನಾರ್ಥಬೋಧಕಶಕ್ತ್ಯಾವಿರ್ಭಾವೋ ವೇದಸ್ಯ । ವಿಕಾರೋ ಜಡಪ್ರಕೃತೇಃ । ದೇಹಸಂಬಂಧೋ ಜೀವಸ್ಯ । ಪ್ರವಾಹಿಜನ್ಮ ಕಾಲ-ಪ್ರವಾಹಸ್ಯ । ಉಪಚಯೋ ಮಹದಾದೀನಾಮ್ ಇತ್ಯಾದಿರೂಪೋ ಜ್ಞೇಯಃ ।

ಒಟ್ಟಭಿಪ್ರಾಯವಿದು - ತತ್ವಸಂಖ್ಯಾನದ ಮೂಲವು ಪ್ರಸಿದ್ಧವಾದ ಉತ್ಪತ್ತಿ ಮೊದಲಾದವುಗಳನ್ನು ವಿವಕ್ಷೆ ಮಾಡುತ್ತ ಯಥಾಸಂಭವಮ್ ಎಂಬ ಅಭಿಪ್ರಾಯದಲ್ಲಿ ಹೊರಟಿದೆ. ವಿಯದಧಿಕರಣ ಮೊದಲಾದ ಕಡೆ ಹೇಳಲ್ಪಡುವ ಉತ್ಪತ್ತಿಗಳಾದರೋ ಪ್ರಸಿದ್ಧವಾದವುಗಳಲ್ಲ. ಹೊರತು ಅದರ ಅವಾಂತರಪ್ರಭೇದಗಳು. ಹಾಗಾಗಿ ನಿತ್ಯಪ್ರಪಂಚದಲ್ಲಿಯೂ ಉತ್ಪತ್ತ್ಯಾದಿಗಳಿವೆ ಎಂದು ಕೂಡುವುದರಿಂದ ವಿಷಯಭೇದವಿರುವ ಪ್ರಯುಕ್ತ ತತ್ವಸಂಖ್ಯಾನಮೂಲಕ್ಕೂ ಹಾಗೂ ವಿಯದ-ಧಿಕರಣ ಮೊದಲಾದವುಗಳಿಗೂ ವಿರೋಧವಿಲ್ಲ. ಈ ಅಭಿಪ್ರಾಯದಿಂದಲೇ ಸುಧಾದಲ್ಲಿ "ಅವಾಂತರಭೇದಸಹಿತಉದ್ಭವಾದಿದಂ' ಎಂದು ಎರಡನ್ನೂ ಹೇಳಿದ್ದಾರೆ. ನಿತ್ಯಾದಿ ಸರ್ವ-ಸಾಧಾರಣವಾದ ಉತ್ಪತ್ತಿಯನ್ನು 'ಪರಾಧೀನವಿಶೇಷಿತಾ' ಎಂಬ ಪದದಿಂದ ಗ್ರಹಿಸಿದ್ದಾರೆ. ಅರ್ಥಾತ್ ಇನ್ನೊಂದರ ಅಧೀನವಾಗಿ ಧರ್ಮವಿಶೇಷದ ಪ್ರಾಪ್ತಿಯೇ ಉತ್ಪತ್ತಿ.

ಅದರಲ್ಲೂ ಧರ್ಮಗಳ ಅವಾಪ್ತಿಯಲ್ಲಿ ಆಯಾಯ ನಿತ್ಯಪದಾರ್ಥಗಳಿಗನುಗುಣವಾಗಿ ವಿಶೇಷವಿದೆ. ಅದು ಹೀಗೆ - ಗಗನಕ್ಕೆ ಮೂರ್ತಪದಾರ್ಥಗಳ ಸಂಬಂಧ. ಅರ್ಥಾತ್ ಕ್ರಿಯೆಯುಳ್ಳ ಪದಾರ್ಥಗಳ

ಬಂದು, ತದ್ವಾಚಕವಾದ ಶಬ್ದಕ್ಕೆ ಚತುರ್ಥೀವಿಭಕ್ತಿಯ ಪ್ರಸಕ್ತಿ ಬಂದಾಗ, 'ವಿವಕ್ಷಾತಃ ಕಾರಕಾಣಿ ಭವಂತಿ' ಎಂದು ಹೇಳಿ ಸಂಪ್ರದಾನತ್ವವಿವಕ್ಷೆಯಿಲ್ಲದಿರುವುದರಿಂದ ಇಲ್ಲಿ ಷಷ್ಠೀ ಪ್ರಾಪ್ತವಾಗುತ್ತದೆ. ಹೀಗೆ ಅವಸರಸಂಗತಿ ಇರುವ ಪ್ರಯುಕ್ತ ಮೊದಲೇ ಷಷ್ಠ್ಯರ್ಥವರ್ಣನೆ ಮಾಡಿದ್ದು.

ಟೀಕಾಕಾರರ ಈ ರೀತಿ ವ್ಯಾಖ್ಯಾನವು ಸರಿ. 'ವಿವಕ್ಷಾತಃ ಕಾರಕಾಣಿ ಭವಂತಿ' ಎಂದದ್ದೂ ಸರಿ. ಆದರೆ ಮೂಲಕಾರರಿಗೆ ಪ್ರಪಂಚದಲ್ಲಿ ಸಂಪ್ರದಾನತ್ವದ ಅವಿವಕ್ಷೆ, ಸಂಬಂಧಿತ್ವವಿವಕ್ಷೆ ಇದೆ ಎಂದು ಹೇಗೆ ತಿಳಿಯಿತು? ಎಂದರೆ ಉತ್ತರ — ಮುಖ್ಯವಾಗಿ ದಾನ ಎಂದರೆ ಸ್ವಸ್ವತ್ವಪರಿತ್ಯಾಗಪೂರ್ವಕ-ಪರಸ್ವತ್ವಾಪಾದನ. ಹೀಗೆ ಮುಖ್ಯದಾನೋದ್ದೇಶಕ್ಕೆ ಸಂಪ್ರದಾನಸಂಜ್ಞೆ ಬರುವುದರಿಂದ ಪ್ರಪಂಚವು ಮುಖ್ಯದಾನೋದ್ದೇಶ್ಯವಾಗಿಲ್ಲವಾದ್ದರಿಂದ ಅರ್ಥಾತ್ ಸಂಪ್ರದಾನತ್ವವಿವಕ್ಷೆ ಇಲ್ಲದಿರುವುದರಿಂದ 'ರಜಕಸ್ಯ ವಸ್ತ್ರಂ ದದಾತಿ' ಎಂಬಲ್ಲಿನಂತೆ ಸಂಬಂಧಿತ್ವವಿವಕ್ಷೆ ಇರುವ ಪ್ರಯುಕ್ತ ಷಷ್ಠೀವಿಭಕ್ತಿಯು ಬಂದಿದೆ.

## ವಕ್ಷ್ಯಮಾಣವಿಯದಧಿಕರಣಾದಿವಿರೋಧಾಪತ್ತಿ

(ಲಘುರಸರಂಜನೀ) — ನನು ನಿತ್ಯಾದಿಷು ಜನ್ಮಾದ್ಯಷ್ಟಕಸ್ಯ ಬಾಧವಾರಣಾಯ 'ಸಮಾಸವ್ಯಾಸ-ಯೋಗತಃ' ಇತಿ ಮೂಲಂ ಮನಸಿ ನಿಧಾಯ 'ಯಥಾಸಂಭವಮ್' ಇತ್ಯುಕ್ತಮ್ । ತದನುಪ-ಪನ್ನಮ್ । ವಕ್ಷ್ಯಮಾಣವಿಯದಧಿಕರಣಾದಿವಿರೋಧಾಪತ್ತೇಃ । ತತ್ರ ನಿತ್ಯಾನಾಮಪಿ ಉತ್ಪತ್ತ್ಯಾದಿ-ಸಮರ್ಥನಾತ್ ಇತ್ಯತಸ್ತಯೋರವಿರೋಧಾಯ ಮೂಲಮೇವ ಯೋಜಯತಿ — **ಅಶೇಷ-ವಿಶೇಷತ ಇತಿ** ॥

**ಅಶೇಷವಿಶೇಷತಃ** - ಅಲ್ಲ ನಿತ್ಯವಾದ ಪದಾರ್ಥಗಳಲ್ಲಿ ಜನ್ಮಾದಿ ಎಂಟನ್ನು ಹೇಳಿದರೆ ಬಾಧ ಬರುವುದು ಎಂಬ ಕಾರಣಕ್ಕೆ ಅದನ್ನು ಪರಿಹಾರ ಮಾಡುವುದಕ್ಕಾಗಿ ಸಮಾಸವ್ಯಾಸಯೋಗತಃ ಎಂಬ ಮೂಲವನ್ನು ಮನಸ್ಸಿನಲ್ಲಿಟ್ಟುಕೊಂಡು ಯಥಾಸಂಭವಮ್ ಎಂದು ಹೇಳಿದ್ದರು. ಆದರೆ ಇದು ಸರಿಯಲ್ಲ. ಮುಂದಿನ ವಿಯದಧಿಕರಣ ಮೊದಲಾದವುಗಳ ವಿರೋಧ ಬರುವುದರಿಂದ. ಏಕೆಂದರೆ ಅಲ್ಲಿ ನಿತ್ಯಪದಾರ್ಥಗಳಿಗೂ ಉತ್ಪತ್ತಿ ಸ್ಥಿತಿ ಮೊದಲಾದವುಗಳನ್ನು ಸಮರ್ಥನೆ ಮಾಡಿದ್ದರಿಂದ. ಈ ವಿರೋಧಪರಿಹಾರಕ್ಕಾಗಿ 'ಅಶೇಷವಿಶೇಷತಃ' ಎಂಬುವುದನ್ನು ಅಸ್ಯೋದ್ಭವಾ-ದಿದಂ ಎಂಬಲ್ಲಿಯೂ ಅನ್ವಯಿಸಿದ್ದಾರೆ.

## ವಿಶೇಷತಃ ಎಂಬಲ್ಲಿ ತಸಿಪ್ರತ್ಯಯ

(ಪರಿಮಳ)– 'ವಿಶೇಷತ ಇತಿ ತೃತೀಯಾರ್ಥೇ ತಸಿಃ' ಇತ್ಯುಪೇತ್ಯ ಅರ್ಥಮಾಹ– **ಅವಾಂತರ-ಭೇದಸಹಿತೇತಿ** ॥

ಅಶೇಷವಿಶೇಷತೋಽಪಿ ವಂದ್ಯಂ ಎಂಬಲ್ಲಿ ವಿಶೇಷತಃ ಎಂಬ ಪದದ ನಿಷ್ಪತ್ತಿಯನ್ನು ತೋರಿಸಿದ್ದಾರೆ. ವಿಶೇಷತಃ ಎಂಬಲ್ಲಿ ತಸಿ ಎಂಬ ಪ್ರತ್ಯಯವಿದೆ. ಅದು ತೃತೀಯಾವಿಭಕ್ತಿಯ ಅರ್ಥದಲ್ಲಿ ಬಂದಿದೆ. ಹಾಗಾಗಿ ವಿಶೇಷೇಣ ಸಹ ಎಂದು ಅರ್ಥ ಸಿಗುವುದು. ಇದರ ಅಭಿಪ್ರಾಯವನ್ನೇ ಅವಾಂತರಭೇದ–ಸಹಿತ ಎಂದು ಸುಧೆಯಲ್ಲಿ ವರ್ಣಿಸಲಾಗಿದೆ.

## ಒಟ್ಟಭಿಪ್ರಾಯವಿದು

(ಲಘುರಸರಂಜನೀ) — ಇದಮುಕ್ತಂ ಭವತಿ — ತತ್ತ್ವಸಂಖ್ಯಾನಮೂಲಂ ಪ್ರಸಿದ್ಧೋತ್ಪತ್ತ್ಯಾದಿ–ವಿವಕ್ಷಯಾ ಯಥಾಸಂಭವಾಭಿಪ್ರಾಯಮ್ । ವಿಯದಧಿಕರಣಾದೌ ವ್ಯುತ್ಪತ್ತ್ಯಾದ್ಯಾಸ್ತು ನ ಪ್ರಸಿದ್ಧೋ–ದ್ಭವಾದಯಃ । ಕಿಂತು ತದವಾಂತರಭೇದಾಃ । ತೇ ತು ನಿತ್ಯಾದಿಪ್ರಪಂಚೇಽಪಿ ಸಂಭವಂತೀತಿ ವಿಷಯಭೇದಾನ್ನ ತಯೋರ್ವಿರೋಧ ಇತಿ । ತದೇತದಭಿಸಂಧಾಯಾವಾಂತರಭೇದಸಹಿತೋ–ದ್ಭವಾದಿದಮ್ ಇತ್ಯುಭಯಮಪ್ಯುಕ್ತಂ ಧ್ಯೇಯಮ್ । ಜನ್ಮಾದ್ಯಷ್ಟಕೇ ವಿಯದಧಿಕರಣಾದೌ ವ್ಯುತ್ಪತ್ತ್ಯಾದ್ಯಾವಾಂತರವಿಶೇಷೇಷು, ಜನ್ಮನಿ ತಾವತ್ – ಪರಾಧೀನವಿಶೇಷಿತಾರೂಪೋದ್ಭವೋ ನಿತ್ಯಾದಿಸರ್ವಸಾಧಾರಣಃ । ತದ್ವಿಶೇಷಸ್ತು – ಮೂರ್ತಸಂಬಂಧೋ ಗಗನಸ್ಯ । ಸಿಸೃ–ಕ್ಷುತ್ವಂ ರಮಾಯಾಃ । ನಿಯತವಿಶಿಷ್ಟಾನುಪೂರ್ವೀಕತ್ವೇನಾರ್ಥಬೋಧಕಶಕ್ತ್ಯಾವಿರ್ಭಾವೋ ವೇದಸ್ಯ । ವಿಕಾರೋ ಜಡಪ್ರಕೃತೇಃ । ದೇಹಸಂಬಂಧೋ ಜೀವಸ್ಯ । ಪ್ರವಾಹಿಜನ್ಮ ಕಾಲ–ಪ್ರವಾಹಸ್ಯ । ಉಪಚಯೋ ಮಹದಾದೀನಾಮ್ ಇತ್ಯಾದಿರೂಪೋ ಜ್ಞೇಯಃ ।

ಒಟ್ಟಭಿಪ್ರಾಯವಿದು – ತತ್ವಸಂಖ್ಯಾನದ ಮೂಲವು ಪ್ರಸಿದ್ಧವಾದ ಉತ್ಪತ್ತಿ ಮೊದಲಾದವುಗಳನ್ನು ವಿವಕ್ಷೆ ಮಾಡುತ್ತ ಯಥಾಸಂಭವಮ್ ಎಂಬ ಅಭಿಪ್ರಾಯದಲ್ಲಿ ಹೊರಟಿದೆ. ವಿಯದಧಿಕರಣ ಮೊದಲಾದ ಕಡೆ ಹೇಳಲ್ಪಡುವ ಉತ್ಪತ್ತಿಗಳಾದರೋ ಪ್ರಸಿದ್ಧವಾದವುಗಳಲ್ಲ. ಹೊರತು ಅದರ ಅವಾಂತರಪ್ರಭೇದಗಳು. ಹಾಗಾಗಿ ನಿತ್ಯಪ್ರಪಂಚದಲ್ಲಿಯೂ ಉತ್ಪತ್ತ್ಯಾದಿಗಳಿವೆ ಎಂದು ಕೂಡುವುದರಿಂದ ವಿಷಯಭೇದವಿರುವ ಪ್ರಯುಕ್ತ ತತ್ವಸಂಖ್ಯಾನಮೂಲಕ್ಕೂ ಹಾಗೂ ವಿಯದ-ಧಿಕರಣ ಮೊದಲಾದವುಗಳಿಗೂ ವಿರೋಧವಿಲ್ಲ. ಈ ಅಭಿಪ್ರಾಯದಿಂದಲೇ ಸುಧಾದಲ್ಲಿ "ಅವಾಂತರಭೇದಸಹಿತಉದ್ಭವಾದಿದಂ' ಎಂದು ಎರಡನ್ನೂ ಹೇಳಿದ್ದಾರೆ. ನಿತ್ಯಾದಿ ಸರ್ವ-ಸಾಧಾರಣವಾದ ಉತ್ಪತ್ತಿಯನ್ನು 'ಪರಾಧೀನವಿಶೇಷಿತಾ' ಎಂಬ ಪದದಿಂದ ಗ್ರಹಿಸಿದ್ದಾರೆ. ಅರ್ಥಾತ್ ಇನ್ನೊಂದರ ಅಧೀನವಾಗಿ ಧರ್ಮವಿಶೇಷದ ಪ್ರಾಪ್ತಿಯೇ ಉತ್ಪತ್ತಿ.

ಅದರಲ್ಲೂ ಧರ್ಮಗಳ ಅವಾಪ್ತಿಯಲ್ಲಿ ಆಯಾಯ ನಿತ್ಯಪದಾರ್ಥಗಳಿಗನುಗುಣವಾಗಿ ವಿಶೇಷವಿದೆ. ಅದು ಹೀಗೆ – ಗಗನಕ್ಕೆ ಮೂರ್ತಪದಾರ್ಥಗಳ ಸಂಬಂಧ. ಅರ್ಥಾತ್ ಕ್ರಿಯೆಯುಳ್ಳ ಪದಾರ್ಥಗಳ

ಸಂಬಂಧ- ಇದೇ ಉತ್ಪತ್ತಿ. ರಮಾದೇವಿಗೆ ಸೃಷ್ಟಿಮಾಡುವ ಇಚ್ಛೆ ಅರ್ಥಾತ್ ಸಿಸೃಕ್ಷತ್ವ. ವೇದಕ್ಕೆ ನಿಯತವಿಶಿಷ್ಟ-ಆನುಪೂರ್ವೀಕತ್ವೇನ ಅರ್ಥಬೋಧಕಶಕ್ತ್ಯಾವಿರ್ಭಾವವೇ ಉತ್ಪತ್ತಿ. ಅಂದರೆ ಯಾವಾಗಲೂ ವ್ಯಭಿಚಾರವಿಲ್ಲದೆ ಒಂದೇ ಆನುಪೂರ್ವಿಯಲ್ಲಿ ಪಠಿತವಾದರೆ ಅರ್ಥವನ್ನು ಬೋಧಿಸುವ ಶಕ್ತಿಯ ಆವಿರ್ಭಾವವಾಗುವುದು. ಜಡಪ್ರಕೃತಿಗೆ ವಿಕಾರವೇ ಉತ್ಪತ್ತಿ. ಜೀವನಿಗೆ ದೇಹದ ಸಂಬಂಧ. ಕಾಲಪ್ರವಾಹಕ್ಕೆ ಪ್ರವಾಹಿಯೇ ಉತ್ಪತ್ತಿ. ಮಹತ್ತತ್ವಮೊದಲಾದವುಗಳಿಗೆ ಉಪಚಯವೇ ಉತ್ಪತ್ತಿ. ಅರ್ಥಾತ್ ವಿಕಾಸ.

## ವಿಭಿನ್ನವಾದ ಸ್ಥಿತಿಗಳು

(ಲಘುರಸರಂಜನೀ) — **ಸ್ಥಿತೌ** ತು ಪರಾಧೀನವಿಶೇಷಿತ್ವೇನೈವ ಅವಸ್ಥಾನಂ ಸರ್ವಸಾಧಾರಣ-ಸ್ಥಿತಿಃ । ತದ್ವಿಶೇಷಸ್ತು — **ರಮಾಯಾಂ** ಕದಾಪಿ ಮರಣಾಭಾವರೂಪಾ ಸ್ಥಿತಿಃ । ಅನ್ಯತ್ರ ಚೇತನೇ ದೇಹಾಧಿಷ್ಠಾನೇನ ಅವಸ್ಥಾನಮ್ । ಅಚೇತನಸ್ಯ ಸ್ವರೂಪೇಣಾವಸ್ಥಾನಮ್ - ಇತ್ಯಾದಿರೂಪೋ ಜ್ಞೇಯಃ ।

ಇನ್ನು ಸ್ಥಿತಿಯಾದರೋ ಸರ್ವಸಾಧಾರಣಸ್ಥಿತಿಯೆಂದರೆ ಪರಾಧೀನವಿಶೇಷಿತ್ವೇನ ಇರುವುದೇ ಆಗಿದೆ. ಅದರಲ್ಲೂ ವಿಶೇಷವಾದದ್ದು ಹೀಗೆ ತಿಳಿಯಬೇಕು - ರಮಾದೇವಿಗೆ ಯಾವತ್ತೂ ಮರಣವಿಲ್ಲ ಎಂಬ ಸ್ಥಿತಿ. ಬೇರೆಯ ಚೇತನರಿಗೆ ದೇಹದಲ್ಲಿರುವುದೇ ಸ್ಥಿತಿ. ಅಚೇತನಪದಾರ್ಥಕ್ಕೆ ಸ್ವರೂಪೇಣ ಇರುವುದೇ ಸ್ಥಿತಿ.

## ವಿಭಿನ್ನವಾದ ಸಂಹಾರ

(ಲಘುರಸರಂಜನೀ)— **ಸಂಹಾರೇ** ತು ಪರಾಧೀನವಿಶೇಷಿತಾವಿರಹರೂಪಃ ಸಂಹಾರಃ ಸರ್ವ-ಸಾಧಾರಣಃ । ತದ್ವಿಶೇಷಸ್ತು – **ಹರೇಃ** ಅತ್ಯಂತಸಾಮೀಪ್ಯಂ **ಲಯೋ ಲಕ್ಷ್ಮ್ಯಾಃ** । ತದಿತರ-ಚೇತನಾನಾಂ **ದೇಹವಿಯೋಗಃ** । ಅಚೇತನೇ ಜನ್ಯಸ್ಯ ಸ್ವರೂಪೇಣ ವಿನಾಶಃ । ನಿತ್ಯೇಷು ಪ್ರವಾಹಿನಾಶಃ ಕಾಲಪ್ರವಾಹಸ್ಯ । ಮೂರ್ತಸಂಬಂಧವಿಯೋಗೋ ಗಗನಸ್ಯ । ನಿಯತ-ವಿಶಿಷ್ಟಾನುಪೂರ್ವೀಕತ್ವೇನ ಅರ್ಥಬೋಧಕಶಕ್ತಿತಿರೋಭಾವೋ ವೇದಸ್ಯ । ಅಪಚಯೋ ಮಹದಾದೀನಾಮ್ - ಇತ್ಯಾದಿರೂಪಃ ।

ಇನ್ನು ಸಂಹಾರವಾದರೋ - ಸರ್ವಸಾಧಾರಣವಾದದ್ದು ಪರಾಧೀನವಿಶೇಷಿತಾವಿರಹವೇ ಆಗಿದೆ. ಅದರಲ್ಲಿ ವಿಶೇಷತೆ ಎಂದರೆ ಹರಿಯ ಅತ್ಯಂತ ಸಾಮೀಪ್ಯವೇ ಲಕ್ಷ್ಮಿಗೆ ಲಯ. ಅವಳನ್ನು ಬಿಟ್ಟು ಬೇರೆ ಚೇತನರಿಗೆ ದೇಹವಿಯೋಗ. ಅಚೇತನವಾದ ಹುಟ್ಟುವ ವಸ್ತುವಿಗೆ ಸ್ವರೂಪೇಣ ನಾಶ. ನಿತ್ಯಪದಾರ್ಥಗಳಲ್ಲಿ ಕಾಲಪ್ರವಾಹಕ್ಕೆ ಪ್ರವಾಹಿಪದಾರ್ಥಗಳ ನಾಶ. ಆಕಾಶಕ್ಕೆ ಮೂರ್ತ-

ಪದಾರ್ಥಗಳ ಸಂಬಂಧವಿಯೋಗ. ವೇದಕ್ಕೆ ನಿಯತವಿಶಿಷ್ಟ-ಆನುಪೂರ್ವೀಕತ್ವೇನ ಅರ್ಥ-ಬೋಧಕಶಕ್ತಿಯ ತಿರೋಭಾವ. ಮಹತ್ತತ್ವಾದಿಗಳಿಗೆ ಅಪಚಯವೇ ಸಂಹಾರ.

## ನಿಯಮನ ಹಾಗೂ ಬಂಧ

(ಲಘುರಸರಂಜನೀ) — ನಿಯಮನೇ ತು — **ವ್ಯಾಪಾರೇಷು ಪ್ರೇರಣಂ** ಚೇತನಾಚೇತನ-ಸಾಧಾರಣಂ ನಿಯಮನಮ್ । ತದ್ವಿಶೇಷಸ್ತು — ಚೇತನೇ ರಮಾಯಾಮಾಜ್ಞಾಂತರ್ಗತಿರ್ನಿಯ-ಮನಮ್ । ಅನ್ಯತ್ರ ವಿಧಿನಿಷೇಧಾಭ್ಯಾಂ ಬಂಧಃ । ಅಚೇತನೇ ನಿತ್ಯೇ ಗಗನಾದೌ ನಿತ್ಯಾತ್ಮನಾ ಅವಕಾಶದಾನಾದಿರೂಪತತ್ತದ್ವ್ಯಾಪಾರಾನುಕೂಲತಯಾ ಚ ಪ್ರೇರಣಮ್ । ಅನಿತ್ಯೇ ಚ ಘಟಾದಾವನಿತ್ಯಾತ್ಮನಾ ಜಲಾಹರಣಾದಿತತ್ತದ್ವ್ಯಾಪಾರಾನುಕೂಲತಯಾ ಚ ಪ್ರೇರಣಮ್ — ಇತ್ಯಾದಿರೂಪಃ ।

ಇನ್ನು ನಿಯಮನವಾದರೋ ಚೇತನಾಚೇತನಸಾಧಾರಣವಾದದ್ದು ಸ್ವಸ್ವವ್ಯಾಪಾರಗಳಲ್ಲಿ ಪ್ರೇರಣೆ ಎಂಬುದೇ ಆಗಿದೆ. ಅವುಗಳಲ್ಲಿ ವಿಶೇಷತೆ ಹೀಗಿದೆ - ಚೇತನರುಗಳಲ್ಲಿ ರಮಾದೇವಿಗೆ ಭಗವಂತನ ಆಜ್ಞೆಗೆ ಒಳಪಡುವುದು. ಬೇರೆಯವರಿಗೆ ವಿಧಿನಿಷೇಧಗಳಿಂದ ಬಂಧನ. ಅಚೇತನವಾದ ಪದಾರ್ಥಗಳಲ್ಲಿ ಆಕಾಶ ಮೊದಲಾದ ಪದಾರ್ಥಗಳಿಗೆ ನಿತ್ಯರೂಪದಿಂದ ಅವಕಾಶದಾನರೂಪವಾದ ತತ್ತದ್ ವ್ಯಾಪಾರಾನುಕೂಲವಾಗಿ ಪ್ರೇರಿಸುವಿಕೆ. ಅನಿತ್ಯವಾದ ಪದಾರ್ಥಗಳಾದ ಘಟಾದಿಗಳಲ್ಲಿ ಅನಿತ್ಯವಾಗಿ ಇರುವಂತೆ ಮಾಡಿ ಜಲಾಹರಣಾದಿಗಳನ್ನು ಮಾಡಲು ಬೇಕಾದ ವ್ಯಾಪಾರಕ್ಕೆ ಅನುಕೂಲವಾಗಿ ಪ್ರೇರಣೆ ಮಾಡುವುದು.

## ಜ್ಞಾನ

(ಲಘುರಸರಂಜನೀ) — ಜ್ಞಾನೇ ತು **ಜ್ಞಾನಸಾಮಾನ್ಯಂ** ರಮಾದಿಚೇತನಮಾತ್ರಸಾಧಾರಣಮ್ । ತದ್ವಿಶೇಷಸ್ತು — ರಮಾಯಾಂ ನಿತ್ಯಾವಿರ್ಭೂತೋ ಭಗವದಿತರಸರ್ವಸಾಕ್ಷಾತ್ಕಾರಃ । ಅನ್ಯತ್ರ ತು **ಯಥಾಯೋಗಂ ಜ್ಞಾನೋತ್ಪಾದನಮ್** - ಇತ್ಯಾದಿರೂಪಃ ।

ಇನ್ನು ಜ್ಞಾನವಿಷಯದಲ್ಲಿ ರಮಾದಿ ಎಲ್ಲ ಚೇತನರಿಗೆ ಜ್ಞಾನಪ್ರದಾನವೇ. ಆದರೆ ವಿಶೇಷತೆ ಹೀಗಿದೆ - ರಮಾದೇವಿಗೆ ನಿತ್ಯವಾಗಿ ಆವಿರ್ಭಾವಗೊಂಡ ಭಗವಂತನನ್ನು ಬಿಟ್ಟು ಬೇರೆ ಎಲ್ಲ ಪದಾರ್ಥಗಳ ಸಾಕ್ಷಾತ್ಕಾರರೂಪವಾಗಿದೆ. ಬೇರೆಯವರಿಗಾದರೋ ಅವರ ಯೋಗ್ಯತಾನುಗುಣವಾಗಿ ಜ್ಞಾನೋ-ತ್ಪತ್ತಿಯನ್ನು ಮಾಡುವುದೇ ಜ್ಞಾನದಾನವೆನಿಸುತ್ತದೆ.

## ಅಜ್ಞಾನ

(ಲಘುರಸರಂಜನೀ) — ಅಜ್ಞಾನೇ ಚ — **ಅಜ್ಞಾನಪದವಾಚ್ಯಂ** ರಮಾದಿಸರ್ವಚೇತನ-

ಸಾಧಾರಣಮ್ ಅಜ್ಞಾನಮ್ । ತದ್ವಿಶೇಷಸ್ತು – **ರಮಾಯಾಮ್ ಈಶಸಾಕಲ್ಯವಿಷಯೇ ಜ್ಞಾನಾಭಾವೋಽಜ್ಞಾನಮ್** । ತದಿತರೇಷು ಚ ಯಥಾಯೋಗಂ ಭಾವರೂಪಮಪ್ಯಜ್ಞಾನಂ - ಇತ್ಯಾದಿರೂಪಃ ।

ಅಜ್ಞಾನದಲ್ಲಿಯಾದರೋ - ಅಜ್ಞಾನಪದದಿಂದ ಹೇಳಲ್ಪಡುವುದು ರಮಾದಿ ಎಲ್ಲ ಚೇತನರಿಗೂ ಇರುವಂತಹದ್ದು. ಅಜ್ಞಾನದ ವಿಶೇಷತೆಯಾದರೋ ಬೇರೆ ಬೇರೆ. ರಮಾದೇವಿಗೆ ದೇವರ ವಿಷಯದಲ್ಲಿ ಸಂಪೂರ್ಣವಾದ ಜ್ಞಾನವಿಲ್ಲದಿರುವಿಕೆ. ಬೇರೆಯವರಲ್ಲಿ ತಮ್ಮ ಯೋಗ್ಯತಾನು-ಗುಣವಾಗಿ ಭಾವರೂಪವಾದ ಅಜ್ಞಾನವೂ ಇದೆ.

## ಬಂಧ

(ಲಘುರಸರಂಜನೀ) – **ಬಂಧೇ** ತು ಸಂಸಾರಬಂಧೋ ವಿರಿಂಚಾದಿಸರ್ವಚೇತನಸಾಧಾರಣಃ । ತದ್ವಿಶೇಷಸ್ತು – ವಿರಿಂಚಾದೀನಾಂ **ಲಿಂಗದೇಹಾದಿಸಂಬಂಧೋ** ಬಂಧಃ । ತದನ್ಯೇಷಾಂ ತು **ಕಾಮಾದಿಸಂಬಂಧೋಽಪಿ** – ಇತ್ಯಾದಿರೂಪಃ ।

ಬಂಧ - ಸಂಸಾರಬಂಧ ಬ್ರಹ್ಮದೇವರಿಂದ ಹಿಡಿದು ಎಲ್ಲ ಚೇತನರಲ್ಲಿ ಸಾಧಾರಣವಾದದ್ದು. ಬಂಧದಲ್ಲಿ ವಿಶೇಷತೆ ಎಂದರೆ ಬ್ರಹ್ಮದೇವರೇ ಮೊದಲಾದವರಿಗೆ ಲಿಂಗದೇಹ ಮೊದಲಾದವುಗಳ ಸಂಬಂಧವೇ ಬಂಧ. ಬೇರೆಯವರಿಗೆ ಲಿಂಗದೇಹಸಂಬಂಧದ ಜೊತೆಗೆ ಕಾಮಮೊದಲಾದವುಗಳ ಸಂಬಂಧವೂ ಕೂಡ ಬಂಧವಾಗಿದೆ.

## ಮೋಕ್ಷ

(ಲಘುರಸರಂಜನೀ) – **ಮೋಕ್ಷೇ** ತು – **ಅನ್ಯಥಾರೂಪಂ ಹಿತ್ವಾ ಸ್ವರೂಪೇಣ ವ್ಯವಸ್ಥಿತಿ-ರೂಪೋ ಯೋಗ್ಯಾಯೋಗ್ಯಚೇತನಸಾಧಾರಣೋ** ಬೋಧಃ । ತದ್ವಿಶೇಷಸ್ತು – ಸಾತ್ತ್ವಿಕ-ಜೀವಾನಾಮ್ **ಆತ್ಯಂತಿಕದುಃಖನಿವೃತ್ತಿಸಹಿತಪರಮಾನಂದಾವಿರ್ಭಾವಃ** । ತಾಮಸಾನಾಂ ತು **ಆತ್ಯಂತಿಕಸುಖನಿವೃತ್ತಿಸಹಿತಕೇವಲದುಃಖಾವಿರ್ಭಾವ** ಇತ್ಯಾದಿರೂಪಃ, ಇತ್ಯಾದಿಃ ತತ್ರ ತತ್ರೋಕ್ತೋ ವಿಷಯೋ ಜ್ಞಾತವ್ಯಃ ।

ಮೋಕ್ಷ - ಮೋಕ್ಷವಾದರೋ ನೈಜವಲ್ಲದ ಸ್ವರೂಪವನ್ನು ತೊರೆದು ತಮ್ಮ ನಿಜಸ್ವರೂಪವನ್ನು ಪಡೆಯುವುದೇ ಮುಕ್ತಿ. ಇದು ಯೋಗ್ಯಾಯೋಗ್ಯರಾದ ಎಲ್ಲ ಚೇತನರಿಗೆ ಸಾಧಾರಣವಾದುದು. ಮೋಕ್ಷದಲ್ಲಿರುವ ವ್ಯತ್ಯಾಸವಿದು. ಸಾತ್ವಿಕಜೀವರಿಗೆ ಮೋಕ್ಷ ಎಂದರೆ ಆತ್ಯಂತಿಕದುಃಖನಿವೃತ್ತಿಯ ಜೊತೆಗೆ ಆಗುವ ಪರಮ ಆನಂದದ ಆವಿರ್ಭಾವ. ಇನ್ನು ತಾಮಸಜೀವರಿಗೆ ಆತ್ಯಂತಿಕ ಸುಖದ ನಿವೃತ್ತಿಯ ಜೊತೆಗೆ ಕೇವಲ ದುಃಖದ ಆವಿರ್ಭಾವ. ಹೀಗೆ ಅನೇಕವಿಶೇಷಗಳನ್ನು ಗಮನಿಸಬೇಕು.

## ಯಾವ ಯಾವ ವಿಶೇಷಣದಿಂದ ಯಾವುದು ಲಭ್ಯವಾಗಿದೆ

(ಲಘುರಸರಂಜನೀ) — ಅಯಂ ಭಾವಃ — ವಂದ್ಯತ್ವಸಾಮಾನ್ಯಪ್ರಯೋಜಕಂ ವೈಶಿಷ್ಟ್ಯಾಪರ-ಪರ್ಯಾಯತ್ವಮುತ್ತಮತ್ವಮ್ । ಇತರಪ್ರಹಾಣೇನ ವಂದ್ಯತ್ವಪ್ರಯೋಜಕಂ ತು ಸರ್ವವೈಶಿಷ್ಟ್ಯಾ-ಪರಪರ್ಯಾಯಂ ಸರ್ವೋತ್ತಮತ್ವಮ್ । ತದುಭಯೋಪಪಾದಕವಿಶೇಷಣತ್ರಯಮಧ್ಯೇ 'ನಿಖಿಲಪೂರ್ಣಗುಣೈಕದೇಹಮ್' ಇತಿ ಆದ್ಯೇನ ವಿಶೇಷಣೇನ ಬಹುಗುಣತ್ವಂ ಪೂರ್ಣ-ಗುಣತ್ವಂ ಚೇತಿ ದ್ವಯಂ ಪ್ರತೀಯತೇ । 'ನಿರ್ದೋಷಮ್' ಇತಿ ದ್ವಿತೀಯೇನಾಪಿ ಬಹು-ದೋಷದೂರತ್ವಂ ಸರ್ವಥಾ ದೋಷದೂರತ್ವಂ ಚೇತಿ ದ್ವಯಮ್ । 'ಅಸ್ಮೋದ್ಭವಾದಿದಮ್' ಇತಿ ತೃತೀಯೇನಾಪಿ ಬಹೂತ್ಪಾದಕತ್ವಂ ಜಗದುತ್ಪಾದಕತ್ವಂ ಚೇತಿ ದ್ವಯಮ್ ।
ತತ್ರ ವಿಶೇಷಣತ್ರಯೇಣಾಪಿ ಯದಾದ್ಯಂ ಪ್ರತೀಯತೇ ತದೇವ ವಂದ್ಯತ್ವಸಾಮಾನ್ಯಪ್ರಯೋಜಕ-ವೈಶಿಷ್ಟ್ಯೋಪಪಾದಕಮ್ । ಯದ್ವಿತೀಯಂ ಪ್ರತೀಯತೇ ತದೇವೇತರಪ್ರಹಾಣೇನ ವಂದ್ಯತ್ವ-ಪ್ರಯೋಜಕಸರ್ವೋತ್ತಮತ್ವೋಪಪಾದಕಮಿತಿ ವಿವೇಕೋ ದ್ರಷ್ಟವ್ಯಃ ।

ಈ ಪ್ರಘಟ್ಟಕದಲ್ಲಿ ತಿಳಿಯಬೇಕಾದ ವಿಷಯ - ಒಬ್ಬನನ್ನು ನಮಸ್ಕರಿಸಲು ಪ್ರಯೋಜಕವಾದದ್ದು ವೈಶಿಷ್ಟ್ಯ. ಅಂದರೆ ಉತ್ತಮತ್ವ. ಇನ್ನು ಇತರರನ್ನು ಬಿಟ್ಟು ನಮಸ್ಕರಿಸಲು ಯೋಗ್ಯ ಎಂದಾಗ-ಬೇಕಾದರೆ ಕೇವಲ ವೈಶಿಷ್ಟ್ಯ ಸಾಲದೇ ಸರ್ವವೈಶಿಷ್ಟ್ಯವಿರಬೇಕು. ಅಂದರೆ ಸರ್ವೋತ್ತಮತ್ವ ಬೇಕು. ಪ್ರಕೃತ ನಾರಾಯಣನಲ್ಲಿ ವಂದ್ಯತ್ವಕ್ಕೆ ಬೇಕಾದ ವೈಶಿಷ್ಟ್ಯವೂ ಇದೆ. ಜೊತೆಗೆ ಲಕ್ಷ್ಮ್ಯಾದಿ-ಗಳನ್ನು ಬಿಟ್ಟು ಇವನನ್ನೇ ವಂದಿಸಬೇಕು ಎನ್ನುವುದಕ್ಕೆ ಪ್ರಯೋಜಕವಾದ ಸರ್ವೋತ್ತಮತ್ವವೂ ಇದೆ. ಈ ರೀತಿ ಎರಡು ಧರ್ಮಗಳಾದ ಉತ್ತಮತ್ವ ಹಾಗೂ ಸರ್ವೋತ್ತಮತ್ವಕ್ಕೆ ಸಮರ್ಥಕವಾದ ಮೂರು ವಿಶೇಷಣಗಳು 'ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಮೋದ್ಭವಾದಿದಂ' ಎಂಬವು. ಇಲ್ಲಿ ಮೊದಲನೆಯ ನಿಖಿಲಪೂರ್ಣಗುಣೈಕದೇಹಂ ಎಂಬ ವಿಶೇಷಣದಿಂದ ಬಹು-ಗುಣತ್ವ ಹಾಗೂ ಪೂರ್ಣಗುಣತ್ವ ಎರಡೂ ತೋರುವುದು. ನಿರ್ದೋಷಂ ಎಂಬುದರಿಂದ ಬಹುದೋಷದೂರತ್ವ ಹಾಗೂ ಸರ್ವಥಾ ದೋಷದೂರತ್ವ ತೋರುವುದು. ಅಸ್ಮೋದ್ಭವಾದಿದಂ ಎಂಬುದರಿಂದಲೂ ಬಹೂತ್ಪಾದಕತ್ವ, ಜಗದುತ್ಪಾದಕತ್ವ ಎಂಬ ಎರಡು ತೋರುವುದು. ಈ ಮೂರೂ ವಿಶೇಷಣಗಳಲ್ಲಿಯೂ ತೋರಿದ ಮೊದಲನೆಯ ಅಂಶವು ವಂದ್ಯತ್ವಕ್ಕೆ ಪ್ರಯೋಜಕವಾಗಿ ಕಂಡಿದೆ. ಅರ್ಥಾತ್ ಬಹುಗುಣಗಳಿದ್ದರೆ ಅವನು ವಂದ್ಯ, ಬಹುದೋಷಗಳಿಂದ ದೂರನಾಗಿದ್ದರೆ ಆ ಕಾರಣದಿಂದಲೂ ವಂದ್ಯ. ಹಾಗೂ ಬಹುವಸ್ತುಗಳಿಗೆ ಉತ್ಪಾದಕನಾದರೆ ಆಗಲೂ ವಂದ್ಯನೆನಿ-ಸುತ್ತಾನೆ. ಪ್ರಕೃತ ನಾರಾಯಣನಲ್ಲಿ ಈ ಮೂರು ಧರ್ಮಗಳೂ ಇವೆ.

ಇನ್ನು ಈ ಮೂರು ವಿಶೇಷಣಗಳಿಂದಲೂ ತೋರಿದ ಎರಡನೆಯ ಅಂಶವೇನಿದೆ ಅರ್ಥಾತ್

ಪೂರ್ಣಗುಣಗಳಿರುವಿಕೆ, ಹಾಗೂ ಸರ್ವಥಾ ದೋಷಗಳಿಂದ ದೂರನಾಗಿರುವಿಕೆ, ಹಾಗೂ ಇಡೀ ಜಗತ್ತಿಗೆ ಕಾರಣನಾಗಿರುವಿಕೆ ಇವುಗಳು ನಾರಾಯಣನಲ್ಲಿ ಇವೆ. ಆದ್ದರಿಂದ ನಾರಾಯಣನಲ್ಲಿ ಲಕ್ಷ್ಮ್ಯಾದಿ ದೇವತೆಗಳನ್ನು ಬಿಟ್ಟು ಇವನಲ್ಲೇ ವಂದ್ಯತ್ವವಿದೆ ಎಂದು ಸಿದ್ಧವಾಗುವುದು.

### ಲಕ್ಷಣತ್ರಯಪ್ರತಿಪಾದಕವಾದ ವಿಶೇಷಣತ್ರಯವೂ ವೈಶಿಷ್ಟ್ಯೋಪಪಾದಕ

(ಲಘುರಸರಂಜನೀ) — **ನನು** ವಂದ್ಯತ್ವಪ್ರಯೋಜಕೇಷು ವಿಶಿಷ್ಟತ್ವಸ್ಯ ವಿಶೇಷಣತ್ರಯಮಪ್ಯು-ಪಪಾದಕಮಿತಿ ಕುತೋ ಯೋಜ್ಯತೇ । ಏಕೈಕೇನಾಪಿ ತತ್ಸಂಭವಾತ್ । ಸತ್ಯಮ್ ।

''ವಿರೋಧಃ ಸರ್ವವೈಶಿಷ್ಟ್ಯೇ ಯೋ ದ್ವಿತೀಯೇ ನಿರಸ್ಯತೇ ।
ನಾರಾಯಣಸ್ಯ ತ್ವಧ್ಯಾಯೇ ...'

ಇತಿ ಯುಕ್ತಿಪಾದೀಯಾನುವ್ಯಾಖ್ಯಾನೇ ಉತ್ತಮತ್ವಾಪರಪರ್ಯಾಯವೈಶಿಷ್ಟ್ಯೋಪಪಾದಕಂ ಜನ್ಮಾದಿಸೂತ್ರೋಕ್ತಂ ಲಕ್ಷಣಮಿತ್ಯುಕ್ತಮ್ । ''ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ । ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ...'' ಇತ್ಯಾನಂದಮಯಾನುವ್ಯಾಖ್ಯಾನೇ ಚ ಸಾಧನತಯಾ ಜಗಜ್ಜನ್ಮಾದಿಕಾರಣತ್ವಂ ತತ್ಸಾಧನತಯಾ ನಿಖಿಲಪೂರ್ಣಗುಣತ್ವಂ 'ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ' ಇತ್ಯುಕ್ತೇಸ್ತತ್ಸಾಧ್ಯತಯಾ ನಿರ್ದೋಷತ್ವಂ ಚ ಜನ್ಮಾದಿಸೂತ್ರೋಕ್ತಮಿತ್ಯುಕ್ತಮ್ । ಅತಃ ಉತ್ತರಮೂಲಾನುಸಾರೇಣ ಜನ್ಮಾದಿಸೂತ್ರೋಕ್ತಲಕ್ಷಣತ್ರಯಪ್ರತಿಪಾದಕಂ 'ನಿಖಿಲ' ಇತ್ಯಾದಿ -ವಿಶೇಷಣತ್ರಯಮಪಿ ವೈಶಿಷ್ಟ್ಯೋಪಪಾದಕಮಿತಿ ಯೋಜಿತಮಿತಿ ।

ವಂದ್ಯತ್ವಕ್ಕೆ ಪ್ರಯೋಜಕವಾಗಿ ಮೂರು ಧರ್ಮಗಳನ್ನು ಹೇಳಿದ್ದರು. (1) ವಿಶಿಷ್ಟತ್ವ (2) ಅಧಿಕೃತತ್ವ ಹಾಗೂ (3) ಇಷ್ಟತ್ವ. ಇವುಗಳಲ್ಲಿ ವಿಶಿಷ್ಟತ್ವ ನಾರಾಯಣನಲ್ಲಿದೆ ಎಂದು ಸಮರ್ಥಿಸಲು ಮೂರು ವಿಶೇಷಣಗಳನ್ನು ನೀಡಿದ್ದಾರೆ. "ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಯೋದ್ಭ-ವಾದಿದಂ" ಎಂಬುದಾಗಿ. ಇಲ್ಲಿ ಬರುವ ಪ್ರಶ್ನೆ ಹೀಗೆ - ಮೂರು ವಿಶೇಷಣಗಳ ಆವಶ್ಯಕತೆ ಏನಿದೆ? ಅವುಗಳಲ್ಲಿ ಒಂದೊಂದರಿಂದಲೇ ವಿಶಿಷ್ಟತ್ವವು ನಾರಾಯಣನಲ್ಲಿ ಸಮರ್ಥಿಸಲು ಬರುವುದಲ್ಲ? ಎಂದು. ಇದಕ್ಕೆ ಉತ್ತರವಿದು - ಯುಕ್ತಿಪಾದದ ಅನುವ್ಯಾಖ್ಯಾನದಲ್ಲಿ ಬರುವ ಒಂದು ಮಾತು ಹೀಗೆ.

### ವಿರೋಧಃ ಸರ್ವವೈಶಿಷ್ಟ್ಯೇ

'ವಿರೋಧಃ ಸರ್ವವೈಶಿಷ್ಟ್ಯೇ ಯೋ ದ್ವಿತೀಯೇ ನಿರಸ್ಯತೇ ।
ನಾರಾಯಣಸ್ಯ ತ್ವಧ್ಯಾಯೇ (ತದನ್ಯೇ ತತ್ರ ತತ್ರಗಾಃ) ॥'

– ಪರಬ್ರಹ್ಮನಾದ ನಾರಾಯಣನು ಎಲ್ಲ ಚೇತನಾಚೇತನಪ್ರಪಂಚಕ್ಕಿಂತ ಪರಮೋತ್ಕೃಷ್ಟ, ಹಾಗೂ ಅತ್ಯಂತ ಭಿನ್ನ ಎಂಬ ವಿಷಯದಲ್ಲಿ ಯಾವ ಯುಕ್ತಿ ಮೊದಲಾದವುಗಳ ವಿರೋಧವಿದೆಯೋ ಅದನ್ನೇ ಈ ಎರಡನೇ ಅಧ್ಯಾಯದಲ್ಲಿ ನಿವಾರಿಸುತ್ತಾರೆ.

विरोधः सर्ववैशिष्ट्ये यो द्वितीये निरस्यते। नारायणस्य त्वध्याये.................. ॥९१॥

– तुशब्दोऽवधारणे। परब्रह्मणो नारायणस्य सर्वस्माच्चेतनादचेतनाच्च वैशिष्ट्ये वैलक्षण्ये परमोत्कृष्टत्वेऽत्यन्तव्यावृत्तत्वे च यो युक्त्यादिविरोधः स एवात्र द्वितीयेऽध्याये निरस्यते। (सुधा)

ಇಲ್ಲಿ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಿದ ಲಕ್ಷಣವು ವೈಶಿಷ್ಟ್ಯಕ್ಕೆ ಅರ್ಥಾತ್ ಉತ್ತಮತ್ವಕ್ಕೆ ಸಮರ್ಥಕವಾಗಿದೆ ಎಂದು ಹೇಳಿದ್ದಾರೆ. ಇನ್ನು –

### ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ

ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ ।
ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ....

ಎಂಬ ಆನಂದಮಯಾಧಿಕರಣದ ಅನುವ್ಯಾಖ್ಯಾನದಲ್ಲಿ ವೈಶಿಷ್ಟ್ಯಕ್ಕೆ ಸಾಧನವಾದ ಜಗಜ್ಜನ್ಮಾದಿ-ಕಾರಣತ್ವವು ನಿಖಿಲಪೂರ್ಣಗುಣತ್ವಕ್ಕೂ ಸಾಧಕ ಎಂದು ತಿಳಿಸಿದ್ದಾರೆ. ಇನ್ನು ನಿಖಿಲ-ಗುಣಪೂರ್ಣತ್ವವು ನಿರ್ದೋಷತ್ವಕ್ಕೆ ಸಾಧಕ ಎಂದು 'ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ' ಎಂಬ ಮಾತಿನಿಂದ ಸಿದ್ಧವಾಗಿದೆ. ಹೀಗಾಗಿ ನಿರ್ದೋಷತ್ವವೂ ಜನ್ಮಾದಿಸೂತ್ರದಿಂದ ಹೇಳಲ್ಪಟ್ಟಿದೆ. ಹೀಗೆ ನಿಖಿಲಪೂರ್ಣಗುಣತ್ವವೂ ಕೂಡ. ಹಾಗಾಗಿ ಮುಂದಿನ ಮೂಲಗಳಿಗೆ ಅನುಸಾರವಾಗಿ ಜನ್ಮಾದ್ಯಸ್ಯ ಯತಃ ಎನ್ನುವ ಸೂತ್ರದಲ್ಲಿ ಹೇಳಿದ ಮೂರು ರೀತಿಯ ಲಕ್ಷಣಗಳನ್ನು ಪ್ರತಿಪಾದನೆ ಮಾಡುವ 'ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಮೋದ್ಭವಾದಿದಂ' ಎಂಬ ಮೂರು ವಿಶೇಷಣಗಳೂ ಕೂಡ ವೈಶಿಷ್ಟ್ಯಕ್ಕೆ ಅರ್ಥಾತ್ ಉತ್ತಮತ್ವಕ್ಕೆ ಉಪಪಾದಕ ಎಂದು ಯೋಜನೆ ಮಾಡಲ್ಪಟ್ಟಿದೆ.

** ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ ।

"अथातो ब्रह्मजिज्ञासा" इति प्रथमसूत्रे ब्रह्मशब्देन जिज्ञास्यस्य सकलगुणपूर्णत्वं जीवादि-व्यावृत्त्यर्थमुपात्तम्। "जन्माद्यस्य यतः" इति द्वितीयसूत्रेण तत्सिद्ध्यै जगज्जन्मादिकारणत्वं ब्रह्मणो लक्षणं प्रोक्तम्। अतः सूत्रद्वयेन साध्यतया साधकतया चाऽनन्दादिसकलगुणपूर्णत्वं जगज्जन्मादिकारणत्वं च प्रकृतमिति। विवृतं चैतत् पूर्वमस्माभिः। (सुधा)

## ಸಮ್ಮುಗ್ಧತಯಾ "ವೈಶಿಷ್ಟ್ಯೋಪಪಾದನಾಯ" - ಎಂಬ ಉಕ್ತಿ

(ವಾಕ್ಯಾರ್ಥಚಂದ್ರಿಕಾ) – ವೈಶಿಷ್ಟ್ಯಾದಿಸರ್ವಪ್ರತಿಪಾದಕತ್ವಪ್ರತೀತಿಮ್ ಅಪಾಕರೋತಿ – ತತ್ರೇತ್ಯಾದಿನಾ ॥ ನಿಖಿಲಪೂರ್ಣಗುಣತ್ವಪಾರತಂತ್ರ್ಯಾದಿರಾಹಿತ್ಯಸಕಲಜಗಜ್ಜನಕತ್ವಾದಿನಾ ಸರ್ವವೈಶಿಷ್ಟ್ಯೇ ಪ್ರತಿಪಾದಿತೇ ಗುಣವತ್ವರಾಗಾದಿರಾಹಿತ್ಯಬಹುಜನಕತ್ವಾದಿಪ್ರಯುಕ್ತವೈಶಿಷ್ಟ್ಯಮುಪಪಾದಿತಂ ಭವತಿ ಕಿಮುತ ಇತ್ಯಾಶಯೇನ ಸಮ್ಮುಗ್ಧತಯಾ 'ವೈಶಿಷ್ಟ್ಯೋಪಪಾದನಾಯ' ಇತ್ಯುಕ್ತಮಿತಿ ಧ್ಯೇಯಮ್ ।

"ತತ್ರ ವೈಶಿಷ್ಟ್ಯೋಪಪಾದನಾಯ ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಯೋದ್ಭವಾದಿದಂ ಇತಿ ವಿಶೇಷಣತ್ರಯಮ್" ಎಂದು ಸುಧಾಪಂಕ್ತಿಯಿದೆ. ಇಲ್ಲಿ ಸರ್ವವೈಶಿಷ್ಟ್ಯೋಪಪಾದನಾಯ ಎಂದಾಗಲೀ, ಸಾಧಾರಣವೈಶಿಷ್ಟ್ಯೋಪಪಾದನಾಯ ಎಂದಾಗಲೀ ವಿಶೇಷವಾಗಿ ಹೇಳದೇ ಸಮ್ಮುಗ್ಧಾಕಾರೇಣ ಸಾಮಾನ್ಯತಃ 'ವೈಶಿಷ್ಟ್ಯೋಪಪಾದನಾಯ' ಎಂದು ಹೇಳಿದ್ದರ ಭಾವವನ್ನು ವಿವರಿಸುತ್ತಿದ್ದಾರೆ. ಭಗವಂತನಲ್ಲಿರುವ ನಿಖಿಲಗುಣಪೂರ್ಣತ್ವ, ನಿರ್ದೋಷತ್ವ ಅರ್ಥಾತ್ ಪಾರತಂತ್ರ್ಯಾದಿದೋಷರಾಹಿತ್ಯ, ಸಕಲಜಗಜ್ಜನ್ಮಾದಿಕಾರಣತ್ವ ಇವುಗಳು ಸರ್ವವಸ್ತುಗಳಿಗಿಂತ ನಾರಾಯಣನು ವಿಶಿಷ್ಟ ಎಂದು ಪ್ರತಿಪಾದನೆ ಮಾಡುತ್ತಿದೆ. ಇದನ್ನು ಹೇಳಿದ್ದರಿಂದ ಕೈಮುತ್ಯನ್ಯಾಯದಿಂದ ಬೇರೆಯವರಲ್ಲಿ ಸಾಧಾರಣವಾಗಿ ವೈಶಿಷ್ಟ್ಯವನ್ನು ಉಪಪಾದನೆ ಮಾಡುವ ಗುಣವತ್ವ, ರಾಗಾದಿರಾಹಿತ್ಯ, ಬಹುಜನಕತ್ವ ಮೊದಲಾದ ಧರ್ಮಗಳು ನಾರಾಯಣನಲ್ಲಿ ಸುತರಾಂ ಸಿದ್ಧವೇ ಆಗಿವೆ. ಆದ್ದರಿಂದ ಈ ಸಾಧಾರಣಧರ್ಮಗಳಿಂದ ನಾರಾಯಣನಲ್ಲಿ ವೈಶಿಷ್ಟ್ಯವನ್ನು ಉಪಪಾದನೆ ಮಾಡಬೇಕೆಂಬ ಪ್ರಸಂಗವಿರುವುದಿಲ್ಲ.

## ಕೈಮುತಿಕನ್ಯಾಯ ಎಂದರೇನು?

* ಕೈಮುತಿಕನ್ಯಾಯ ಎಂದು ಮುಖ್ಯವಾದ ವ್ಯವಹಾರ. ಇದನ್ನು ಹೀಗೆ ವಿವರಿಸುತ್ತಾರೆ. ಕಿಮುತ ಎಂಬೀ ಅವ್ಯಯಕ್ಕೆ ಕಿಂ ವಕ್ತವ್ಯಮ್? ಅಧಿಕಮಭವತ್ ಇವೇ ಮುಂತಾದ ಅರ್ಥಗಳಲ್ಲಿ ಪ್ರಯೋಗವು ಕಂಡಿದೆ. ಉದಾಹರಣೆಗೆ – ದೊಡ್ಡ ಮಹಾತ್ಮರ ಪ್ರಭಾವವೇ ಈ ಪ್ರದೇಶದಲ್ಲಿ ಇಲ್ಲದ ಮೇಲೆ ಅಲ್ಪಸಾಮರ್ಥ್ಯವುಳ್ಳ ಪ್ರಭಾವ ಇಲ್ಲವೆಂದೇನು ಹೇಳಬೇಕು? ಅಥವಾ ನೂರು ರೂಪಾಯಿ ಇದ್ದವ್ಯಕ್ತಿಯಲ್ಲಿ ಐವತ್ತು ರೂಪಾಯಿ ಇದೆಯೆಂದು ಸುತರಾಂ ಸಿದ್ಧವೇ.

ಅಲಂಕಾರಶಾಸ್ತ್ರದಲ್ಲಿ ಬಂದ ಮಾತು.

ಕೈಮುತ್ಯೇನಾರ್ಥಸಂಸಿದ್ಧಿಃ ಕಾವ್ಯಾರ್ಥಾಪತ್ತಿರಿಷ್ಯತೇ ।
ಸ ಜಿತಃ ತ್ವನ್ಮುಖೇನೇಂದುಃ ಕಾ ವಾರ್ತಾ ಸರಸೀರುಹಾಮ್ ॥

ಹೀಗೆ ರಘುವಂಶದಲ್ಲಿಯೂ (2ಸರ್ಗ ಶ್ಲೋ.40) ಕಾಣಬಹುದು. "ಋಷಿಪ್ರಭಾವಾನ್ಮಯಿ

ನಾಂತಕೋಽಪಿ ಪ್ರಭುಃ ಪ್ರಹರ್ತುಂ ಕಿಮುತಾನ್ಯಹಿಂಸ್ರಾಃ" ಎಂಬುದಾಗಿ ಕಿಮುತ ಎಂಬ ಪದವನ್ನು ಹಾಕಿ ಸೂಚಿಸಿದ್ದಾನೆ ಕಾಳಿದಾಸ. ಇದರ ಅರ್ಥ - ಸಿಂಹವು ದಿಲೀಪರಾಜನಿಗೆ ಹೇಳುವ ಮಾತು. ನನ್ನನ್ನು ಆ ಯಮನೂ ಕೂಡ ಹಿಂಸಿಸಲು ಅಸಾಧ್ಯ. ಅಂದ ಮೇಲೆ ಬೇರೆಯವರು ನನಗೇನು ಮಾಡಿಯಾರು? ಎಂದು. ಇದನ್ನು ಅಲಂಕಾರಶಾಸ್ತ್ರದಲ್ಲಿ ಕಾವ್ಯಾರ್ಥಾಪತ್ತಿ ಎಂದು ವ್ಯವಹರಿಸುತ್ತಾರೆ.

ಹರಿವಂಶದಲ್ಲಿ ಬರುವ ಮಾತು -

ತಚ್ಛ್ರುತ್ವಾ ದೇವದೇವೋಽಪಿ ಪಾಂಚಜನ್ಯಮನುತ್ತಮಮ್ ।
ಯಸ್ಯ ನಾದೇನ ವಿತ್ರಸ್ತಾ ದಿವಿಸ್ಥಾಃ ಸರ್ವದೇವತಾಃ ।
ಕಿಮು ಸೈನ್ಯಾನಿ ಸರ್ವಾಣಿ ವಿತ್ರಸ್ತಾನೀತಿ ಕಾ ಕಥಾ ॥

ಅವನ ಶಂಖನಾದವನ್ನು ಕೇಳಿಸಿಕೊಂಡ ದೇವದೇವೋತ್ತಮನಾದ ಶ್ರೀಕೃಷ್ಣನು ಅನುತ್ತಮವಾದ ತನ್ನ ಪಾಂಚಜನ್ಯದ ನಾದವನ್ನು ಮಾಡಿದನು. ಅವನ ಪಾಂಚಜನ್ಯನಾದದಿಂದ ದೇವಲೋಕದಲ್ಲಿರುವ ದೇವತೆಗಳು ಕೂಡ ಹೆದರಿಹೋದರು. ಹೀಗಿರಲು ಜರಾಸಂಧನ ಸೇನೆಯವರು ಹೆದರಿ ಹೋದರೆಂಬ ಮಾತು ಪ್ರತ್ಯೇಕವಾಗಿ ಬೇಕೇ?

## ದಂಡಾಪೂಪಿಕಾನ್ಯಾಯ

— दण्डापूपिकया यत्रार्थान्तरापतनं भवेत् । काव्यार्थापत्तिरेषा स्यादलङ्कारविदां मता ॥

दण्डापूपं विद्येते यस्यां नीतौ सा दण्डापूपिका नीतिः अहं शक्तोऽशक्तोऽस्यां क्रियायामित्याह-महमिकेतिवन्मत्वर्थीयष्ठन् । दण्डापूपाविव दण्डापूपिका 'इवे प्रतिकृतौ' इति कन्वा । अत्र हि मूषककर्तृकेण दण्डभक्षणेन तत्सहभाव्यपूपभक्षणमप्यर्थसिद्धम् । एवंविधो न्यायो दण्डापूपिकाशब्देनोच्यते । यथा दण्डभक्षणादपूपभक्षणमर्थायातं तद्वत्कस्यचिदर्थस्य निष्पत्तौ सामर्थ्यात्समानन्याय-लक्षणादर्थान्तरमापतति साऽर्थापतिः । तान्त्रिकाभिमतार्थापत्तिव्यावर्तनाय काव्यपदम् । अयमेव कैमुतिकन्याय इत्यप्युच्यते । अत एव 'कैमुत्येनार्थसंसिद्धिः काव्यार्थापत्तिरिष्यते' इति लक्षणं प्रणीतं कुवलयानन्दे ।

ದಂಡಾಪೂಪಿಕಾನ್ಯಾಯ — ಇಲಿಯು ಕಠೋರವಾದ ದಂಡವನ್ನೇ ಭಕ್ಷಣೆ ಮಾಡುತ್ತದೆ ಎಂದಾಗ ದಂಡದ ಜೊತೆಗಿರುವ ಕೋಮಲವಾದ ಅಪೂಪವನ್ನು ಭಕ್ಷಣೆ ಮಾಡುವುದು ಅಸಾಧ್ಯವೇ? ಸಾಧ್ಯವೇ ಎಂದು ಭಾವ.

तथाहि– तव तेजसि भाति विभो न रविर्न विधुर्न भानि न च तटितः ।
भान्ति कुतोऽग्नेर्वार्ता भान्तं त्वामनुविभाति सर्वमिदम् ॥

## ಸಮ್ಮುಗ್ಧತಯಾ "ವೈಶಿಷ್ಟ್ಯೋಪಪಾದನಾಯ" - ಎಂಬ ಉಕ್ತಿ

(ವಾಕ್ಯಾರ್ಥಚಂದ್ರಿಕಾ) – ವೈಶಿಷ್ಟ್ಯಾದಿಸರ್ವಪ್ರತಿಪಾದಕತ್ವಪ್ರತೀತಿಮ್ ಅಪಾಕರೋತಿ – ತತ್ರೇತ್ಯಾದಿನಾ ॥ ನಿಖಿಲಪೂರ್ಣಗುಣತ್ವಪಾರತಂತ್ರ್ಯಾದಿರಾಹಿತ್ಯಸಕಲಜಗಜ್ಜನಕತ್ವಾದಿನಾ ಸರ್ವವೈಶಿಷ್ಟ್ಯೇ ಪ್ರತಿಪಾದಿತೇ ಗುಣವತ್ವರಾಗಾದಿರಾಹಿತ್ಯಬಹುಜನಕತ್ವಾದಿಪ್ರಯುಕ್ತವೈಶಿಷ್ಟ್ಯಮುಪಪಾದಿತಂ ಭವತಿ ಕಿಮುತ ಇತ್ಯಾಶಯೇನ ಸಮ್ಮುಗ್ಧತಯಾ 'ವೈಶಿಷ್ಟ್ಯೋಪಪಾದನಾಯ' ಇತ್ಯುಕ್ತಮಿತಿ ಧ್ಯೇಯಮ್ ।

"ತತ್ರ ವೈಶಿಷ್ಟ್ಯೋಪಪಾದನಾಯ ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಯೋದ್ಭವಾದಿದಂ ಇತಿ ವಿಶೇಷಣತ್ರಯಮ್" ಎಂದು ಸುಧಾಪಂಕ್ತಿಯಿದೆ. ಇಲ್ಲಿ ಸರ್ವವೈಶಿಷ್ಟ್ಯೋಪಪಾದನಾಯ ಎಂದಾಗಲೀ, ಸಾಧಾರಣವೈಶಿಷ್ಟ್ಯೋಪಪಾದನಾಯ ಎಂದಾಗಲೀ ವಿಶೇಷವಾಗಿ ಹೇಳದೇ ಸಮ್ಮುಗ್ಧಾಕಾರೇಣ ಸಾಮಾನ್ಯತಃ 'ವೈಶಿಷ್ಟ್ಯೋಪಪಾದನಾಯ' ಎಂದು ಹೇಳಿದ್ದರ ಭಾವವನ್ನು ವಿವರಿಸುತ್ತಿದ್ದಾರೆ. ಭಗವಂತನಲ್ಲಿರುವ ನಿಖಿಲಗುಣಪೂರ್ಣತ್ವ, ನಿರ್ದೋಷತ್ವ ಅರ್ಥಾತ್ ಪಾರತಂತ್ರ್ಯಾದಿದೋಷರಾಹಿತ್ಯ, ಸಕಲಜಗಜ್ಜನ್ಮಾದಿಕಾರಣತ್ವ ಇವುಗಳು ಸರ್ವವಸ್ತುಗಳಿಗಿಂತ ನಾರಾಯಣನು ವಿಶಿಷ್ಟ ಎಂದು ಪ್ರತಿಪಾದನೆ ಮಾಡುತ್ತಿದೆ. ಇದನ್ನು ಹೇಳಿದ್ದರಿಂದ ಕೈಮುತ್ಯನ್ಯಾಯದಿಂದ ಬೇರೆಯವರಲ್ಲಿ ಸಾಧಾರಣವಾಗಿ ವೈಶಿಷ್ಟ್ಯವನ್ನು ಉಪಪಾದನೆ ಮಾಡುವ ಗುಣವತ್ವ, ರಾಗಾದಿರಾಹಿತ್ಯ, ಬಹುಜನಕತ್ವ ಮೊದಲಾದ ಧರ್ಮಗಳು ನಾರಾಯಣನಲ್ಲಿ ಸುತರಾಂ ಸಿದ್ಧವೇ ಆಗಿವೆ. ಆದ್ದರಿಂದ ಈ ಸಾಧಾರಣಧರ್ಮಗಳಿಂದ ನಾರಾಯಣನಲ್ಲಿ ವೈಶಿಷ್ಟ್ಯವನ್ನು ಉಪಪಾದನೆ ಮಾಡಬೇಕೆಂಬ ಪ್ರಸಂಗವಿರುವುದಿಲ್ಲ.

## ಕೈಮುತಿಕನ್ಯಾಯ ಎಂದರೇನು?

* ಕೈಮುತಿಕನ್ಯಾಯ ಎಂದು ಮುಖ್ಯವಾದ ವ್ಯವಹಾರ. ಇದನ್ನು ಹೀಗೆ ವಿವರಿಸುತ್ತಾರೆ. ಕಿಮುತ ಎಂಬೀ ಅವ್ಯಯಕ್ಕೆ ಕಿಂ ವಕ್ತವ್ಯಮ್? ಅಧಿಕಮಭವತ್ ಇವೇ ಮುಂತಾದ ಅರ್ಥಗಳಲ್ಲಿ ಪ್ರಯೋಗವು ಕಂಡಿದೆ. ಉದಾಹರಣೆಗೆ – ದೊಡ್ಡ ಮಹಾತ್ಮರ ಪ್ರಭಾವವೇ ಈ ಪ್ರದೇಶದಲ್ಲಿ ಇಲ್ಲದ ಮೇಲೆ ಅಲ್ಪಸಾಮರ್ಥ್ಯವುಳ್ಳ ಪ್ರಭಾವ ಇಲ್ಲವೆಂದೇನು ಹೇಳಬೇಕು? ಅಥವಾ ನೂರು ರೂಪಾಯಿ ಇದ್ದವ್ಯಕ್ತಿಯಲ್ಲಿ ಐವತ್ತು ರೂಪಾಯಿ ಇದೆಯೆಂದು ಸುತರಾಂ ಸಿದ್ಧವೇ.

ಅಲಂಕಾರಶಾಸ್ತ್ರದಲ್ಲಿ ಬಂದ ಮಾತು.

ಕೈಮುತ್ಯೇನಾರ್ಥಸಂಸಿದ್ಧಿಃ ಕಾವ್ಯಾರ್ಥಾಪತ್ತಿರಿಷ್ಯತೇ ।
ಸ ಜಿತಃ ತ್ವನ್ಮುಖೇನೇಂದುಃ ಕಾ ವಾರ್ತಾ ಸರಸೀರುಹಾಮ್ ॥

ಹೀಗೆ ರಘುವಂಶದಲ್ಲಿಯೂ (2ಸರ್ಗ ಶ್ಲೋ.40) ಕಾಣಬಹುದು. "ಋಷಿಪ್ರಭಾವಾನ್ಮಯಿ

ನಾಂತಕೋऽಪಿ ಪ್ರಭುಃ ಪ್ರಹರ್ತುಂ ಕಿಮುತಾನ್ಯಹಿಂಸ್ರಾಃ" ಎಂಬುದಾಗಿ ಕಿಮುತ ಎಂಬ ಪದವನ್ನು ಹಾಕಿ ಸೂಚಿಸಿದ್ದಾನೆ ಕಾಳಿದಾಸ. ಇದರ ಅರ್ಥ - ಸಿಂಹವು ದಿಲೀಪರಾಜನಿಗೆ ಹೇಳುವ ಮಾತು. ನನ್ನನ್ನು ಆ ಯಮನೂ ಕೂಡ ಹಿಂಸಿಸಲು ಅಸಾಧ್ಯ. ಅಂದ ಮೇಲೆ ಬೇರೆಯವರು ನನಗೇನು ಮಾಡಿಯಾರು? ಎಂದು. ಇದನ್ನು ಅಲಂಕಾರಶಾಸ್ತ್ರದಲ್ಲಿ ಕಾವ್ಯಾರ್ಥಾಪತ್ತಿ ಎಂದು ವ್ಯವಹರಿಸುತ್ತಾರೆ.

ಹರಿವಂಶದಲ್ಲಿ ಬರುವ ಮಾತು -

ತಚ್ಛ್ರುತ್ವಾ ದೇವದೇವೋऽಪಿ ಪಾಂಚಜನ್ಯಮನುತ್ತಮಮ್ ।
ಯಸ್ಯ ನಾದೇನ ವಿತ್ರಸ್ತಾ ದಿವಿಸ್ಥಾಃ ಸರ್ವದೇವತಾಃ ।
ಕಿಮು ಸೈನ್ಯಾನಿ ಸರ್ವಾಣಿ ವಿತ್ರಸ್ತಾನೀತಿ ಕಾ ಕಥಾ ॥

ಅವನ ಶಂಖನಾದವನ್ನು ಕೇಳಿಸಿಕೊಂಡ ದೇವದೇವೋತ್ತಮನಾದ ಶ್ರೀಕೃಷ್ಣನು ಅನುತ್ತಮವಾದ ತನ್ನ ಪಾಂಚಜನ್ಯದ ನಾದವನ್ನು ಮಾಡಿದನು. ಅವನ ಪಾಂಚಜನ್ಯನಾದದಿಂದ ದೇವಲೋಕ-ದಲ್ಲಿರುವ ದೇವತೆಗಳು ಕೂಡ ಹೆದರಿಹೋದರು. ಹೀಗಿರಲು ಜರಾಸಂಧನ ಸೇನೆಯವರು ಹೆದರಿ ಹೋದರೆಂಬ ಮಾತು ಪ್ರತ್ಯೇಕವಾಗಿ ಬೇಕೇ?

## ದಂಡಾಪೂಪಿಕಾನ್ಯಾಯ

— दण्डापूपिकया यत्रार्थान्तरापतनं भवेत् । काव्यार्थापत्तिरेषा स्यादलङ्कारविदां मता ॥

दण्डापूपं विद्येते यस्यां नीतौ सा दण्डापूपिका नीतिः अहं शक्तोऽशक्तोऽस्यां क्रियायामित्याह-महमिकेतिवन्मत्वर्थीयष्ठन् । दण्डापूपाविव दण्डापूपिका 'इवे प्रतिकृतौ' इति कन्वा । अत्र हि मूषककर्तृकेण दण्डभक्षणेन तत्सहभाव्यपूपभक्षणमप्यर्थसिद्धम् । एवंविधो न्यायो दण्डापूपिकाशब्देनो-च्यते । यथा दण्डभक्षणादपूपभक्षणमर्थायातं तद्वत्कस्यचिदर्थस्य निष्पत्तौ सामर्थ्यात्समानन्याय-लक्षणादर्थान्तरमापतति साऽर्थापत्तिः । तान्त्रिकाभिमतार्थापत्तिव्यावर्तनाय काव्यपदम् । अयमेव कैमुतिकन्याय इत्यप्युच्यते । अत एव 'कैमुत्येनार्थसंसिद्धिः काव्यार्थापत्तिरिष्यते' इति लक्षणं प्रणीतं कुवलयानन्दे ।

ದಂಡಾಪೂಪಿಕಾನ್ಯಾಯ – ಇಲಿಯು ಕಠೋರವಾದ ದಂಡವನ್ನೇ ಭಕ್ಷಣೆ ಮಾಡುತ್ತದೆ ಎಂದಾಗ ದಂಡದ ಜೊತೆಗಿರುವ ಕೋಮಲವಾದ ಅಪೂಪವನ್ನು ಭಕ್ಷಣೆ ಮಾಡುವುದು ಅಸಾಧ್ಯವೇ? ಸಾಧ್ಯವೇ ಎಂದು ಭಾವ.

तथाहि– तव तेजसि भाति विभो न रविर्न विधुर्न भानि न च तटितः ।
भान्ति कुतोऽग्रेर्वार्ता भान्तं त्वामनुविभाति सर्वमिदम् ॥

अत्र 'न तत्र सूर्यो भाति न चन्द्रतारकं नेमा विद्युतो भान्ति कुतोऽयमग्निः । तमेव भान्तमनुभाति सर्वम्' इति श्रुतिप्रतिपादितप्रभावे भगवत्तेजसि सहस्रभानुप्रभृतीनामेव भानदौर्लभ्ये ततोऽप्यति-मात्रन्यूनस्य सलिलासेचनमात्रेणापि शाम्यतोऽग्नेर्भानदौर्लभ्ये कैमुतिकन्यायेन प्रतिपाद्यते ॥

– ಕೈಮುತಿಕನ್ಯಾಯವು ಶ್ರುತಿಯಲ್ಲಿಯೂ ಕಂಡಿದೆ. ಭಗವಂತನ ತೇಜಸ್ಸಿನ ಮುಂದೆ ಸೂರ್ಯಚಂದ್ರ ಮೊದಲಾದವರ ಕಾಂತಿಯೇ ಕಡಿಮೆ ಎಂದಾಗ ಒಂದು ಬೆಂಕಿಯ ಕಾಂತಿಯು ಕಡಿಮೆ ಎಂದೇನು ಹೇಳುವುದಿದೆ? ಸುತರಾಂ ಕಡಿಮೆಯೇ. ಏಕೆಂದರೆ ನೀರನ್ನು ಸಿಂಪಡಿಸಿದ ಮಾತ್ರದಿಂದಲೇ ಅಗ್ನಿಯು ಶಾಂತವಾಗುವುದು.

## ಉಭಯೋಪಪಾದಕತ್ವಾಭಿಪ್ರಾಯೇಣ ವೈಶಿಷ್ಟ್ಯೋಪಪಾದನಾಯ ಎಂಬ ಉಕ್ತಿ

(ವಾಕ್ಯಾರ್ಥಚಂದ್ರಿಕಾ) — ಯದ್ವಾ, ಪ್ರಕೃತೇ 'ನಿಖಿಲ' ಇತ್ಯಾದಿವಿಶೇಷಣಾನಾಂ ವೈಶಿಷ್ಟ್ಯಂ ವಂದ್ಯಾಂತರಾದತಿಶಯಶ್ಚ ಇತ್ಯುಭಯೋಪಪಾದಕತ್ವಾಭಿಪ್ರಾಯೇಣ 'ವೈಶಿಷ್ಟ್ಯೋಪಪಾದನಾಯ' ಇತ್ಯುಕ್ತಮಿತಿ ದ್ರಷ್ಟವ್ಯಮ್ ।

'ವೈಶಿಷ್ಟ್ಯೋಪಪಾದನಾಯ' ಎಂಬ ಪ್ರಯೋಗದ ಭಾವವನ್ನು ತಿಳಿಸಿ ಈಗ ಮತ್ತೊಂದು ರೀತಿಯಾದ ಪ್ರಕಾರವನ್ನು ತಿಳಿಸುತ್ತಾರೆ. ಇಲ್ಲಿ ವೈಶಿಷ್ಟ್ಯೋಪಪಾದನಾಯ ಎಂದು ಹೇಳಿದ್ದು 'ಅಶೇಷವಿಶೇಷತೋಽಪಿ ವಂದ್ಯಂ' ಎಂಬುದರಿಂದ ತಿಳಿಯಲ್ಪಟ್ಟ ಸರ್ವೋತ್ತಮತ್ವರೂಪವಾದ ಅಂಶವನ್ನು ಉಪಪಾದಿಸಲು 'ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಯೋದ್ಭವಾದಿದಂ' ಎಂಬ ವಿಶೇಷಣಗಳಿವೆ. ಹಾಗಾಗಿ ವೈಶಿಷ್ಟ್ಯರೂಪವಾದ ಸರ್ವೋತ್ತಮತ್ವ ಎಂಬ ಅಂಶವನ್ನು ಉಪಪಾದನೆ ಮಾಡಲೂ ಈ ವಿಶೇಷಣಗಳಿವೆ ಎಂದು ಸಿದ್ಧವಾಯಿತು.

## ಅವಶಿಷ್ಟವಿಶೇಷಣದ್ವಯವು ಏಕೆ ಉಪಪಾದಕವಲ್ಲ

(ಲಘುರಸರಂಜನೀ) — ನನ್ವಸ್ತು ಮೂಲಾನುಸಾರಾದ್ ವಿಶೇಷಣತ್ರಯಮಪಿ ವೈಶಿಷ್ಟ್ಯೋಪ-ಪಾದಕಂ ತಥಾಽಪಿ ಅವಶಿಷ್ಟಂ ವಿಶೇಷಣದ್ವಯಮಪಿ ಕುತೋ ನ ತದುಪಪಾದಕಮ್? ಸರ್ವ ವೈಶಿಷ್ಟ್ಯಾಪರಪರ್ಯಾಯಸರ್ವೋತ್ತಮತ್ವೇ ವಿಶೇಷಣಪಂಚಕಸ್ಯಾಪ್ಯುಪಪಾದಕತ್ವದರ್ಶನಾತ್ । ಮೈವಮ್ । ಅವಶಿಷ್ಟವಿಶೇಷಣದ್ವಯಾರ್ಥಸ್ಯೈವ ಅಧಿಕೃತತ್ವೇಷ್ಟತ್ವರೂಪತಯಾಽಧುನಾ ವಿಪ್ರತಿ-ಪನ್ನತ್ವೇನ ತಾಭ್ಯಾಂ ತದುಪಪಾದನಾಯೋಗಾತ್ । ನ ಹಿ ವಂದ್ಯತ್ವನಿಮಿತ್ತಕಧರ್ಮತ್ರಯೇಽಪಿ ವಿಪ್ರತಿಪನ್ನಂ ಪ್ರತಿ ತತ್ರೈಕೇನಾನ್ಯಸಾಧನಂ ಯುಕ್ತಮ್ । ಅತ ಏವ ಇಮಾಮೇವೋಪಪತ್ತಿಂ ವಿಭಾವಯಿತುಂ ಅಧಿಕೃತೇಷ್ಟತ್ವರೂಪವಿಪ್ರತಿಪನ್ನಾರ್ಥಕತ್ವಮ್ ಅವಶಿಷ್ಟವಿಶೇಷಣದ್ವಯೋರಸ್ತೀತಿ ಪ್ರದರ್ಶನಾಯ ಉತ್ತರತ್ರಾಧಿಕೃತತ್ವಪ್ರದರ್ಶನಾಯ 'ಆಪ್ತತಮಮಪ್ಯಖಿಲೈಃ ಸುವಾಕ್ಯೈಃ'

ಇತೀಷ್ಟತ್ವಪ್ರದರ್ಶನಂ, 'ಸದಾ ಪ್ರಿಯತಮಂ ಮಮೇತಿ' ಇತಿ ಚೋಭಯತ್ರಾಪಿ ಪ್ರದರ್ಶನಪದಂ ಪ್ರಯೋಕ್ಷ್ಯತೇ । ಪೂರ್ವತ್ರ ತು ಬಹುಗುಣತ್ವಾದಿಧರ್ಮತ್ರಯಸ್ಯ ವಿಪ್ರತಿಪನ್ನವೈಶಿಷ್ಟ್ಯಾದನ್ಯತಯಾ ತದುಪಪಾದಕತ್ವಂ ನಾನುಪಪನ್ನಮ್ ಇತ್ಯಾಶಯಂ ವಿಭಾವಯಿತುಂ 'ತತ್ರ ವೈಶಿಷ್ಟ್ಯೋಪ-ಪಾದನಾಯ' ಇತ್ಯುಪಪಾದನಪದಂ ಪ್ರಯುಕ್ತಮ್ ।

ಮುಂದಿನ ಮೂಲಗಳನ್ನು ಅನುಸರಿಸಿ ಹೀಗೆ ವ್ಯಾಖ್ಯಾನಮಾಡುವುದು ಸರಿ. ಆದರೆ ಉಳಿದ ಎರಡು ವಿಶೇಷಣಗಳು ಉತ್ತಮತ್ವಕ್ಕೆ ಅರ್ಥಾತ್ ವೈಶಿಷ್ಟ್ಯಕ್ಕೆ ಉಪಪಾದಕ ಯಾಕಾಗಬಾರದು? ಏಕೆಂದರೆ ಸರ್ವವೈಶಿಷ್ಟ್ಯವನ್ನು ಅರ್ಥಾತ್ ಸರ್ವೋತ್ತಮತ್ವವನ್ನು ಐದು ವಿಶೇಷಣಗಳು ಸಾಧಿಸುತ್ತಿವೆ ಎಂದು ಕಂಡಿರುವುದರಿಂದ ಎಂದರೆ, ಇದು ಸರಿಯಲ್ಲ. ಏಕೆಂದರೆ ಅವಶಿಷ್ಟವಾದ ಎರಡು ವಿಶೇಷಣಗಳ ಅರ್ಥವು ಅಧಿಕೃತತ್ವ ಇಷ್ಟತ್ವರೂಪವೇ ಆಗಿದೆ. ಅರ್ಥಾತ್ 'ಅಖಿಲೈಃ ಸುವಾಕ್ಯೈಃ ಆಪ್ಯತಮಂ' 'ಸದಾ ಮಮ ಪ್ರಿಯತಮಂ' ಎಂಬ ಎರಡು ವಿಶೇಷಣಗಳ ಅರ್ಥಗಳು ಅಧಿಕೃತತ್ವರೂಪ ಹಾಗೂ ಇಷ್ಟತ್ವ ರೂಪವಾಗಿವೆ. ಅಧಿಕೃತತ್ವವೆಂದರೆ ಗ್ರಂಥಪ್ರತಿಪಾದ್ಯತ್ವ ಎಂಬುದು ತಿಳಿದ ವಿಷಯವೇ. ಹಾಗಾಗಿ ಇನ್ನು ಈ ಸಂದರ್ಭದಲ್ಲಿ ಅಧಿಕೃತತ್ವವು ಹಾಗೂ ಇಷ್ಟತ್ವವು ನಾರಾಯಣನಲ್ಲಿದೆ ಎಂಬ ವಿಷಯದಲ್ಲಿ ವಿಪ್ರತಿಪತ್ತಿ ಇರುವುದರಿಂದ ಅವುಗಳನ್ನು ಸ್ವೀಕರಿಸಿ ವೈಶಿಷ್ಟ್ಯಕ್ಕೆ ಅವುಗಳು ಉಪಪಾದಕವಾಗಿವೆ ಎಂದು ಹೇಳಲು ಅಸಾಧ್ಯ. ಏಕೆಂದರೆ ವಂಧ್ಯತ್ವಕ್ಕೆ ಕಾರಣವಾದ ಮೂಕು ಧರ್ಮಗಳಲ್ಲಿಯೂ ವಿಪ್ರತಿಪತ್ತಿ ಇರುವ ವ್ಯಕ್ತಿಗೆ ಅವುಗಳಲ್ಲಿಯೇ ಒಂದರಿಂದ ಇನ್ನೊಂದರ ಸಾಧನೆ ಮಾಡುವುದು ಸರಿಯಲ್ಲವಷ್ಟೇ. ಆದ್ದರಿಂದಲೇ ಈ ಯುಕ್ತಿಯನ್ನು ತೋರಿಸಲು ಅರ್ಥಾತ್ ಅಧಿಕೃತತ್ವ ಇಷ್ಟತ್ವವೆಂಬುದೇ ಉಳಿದ ಎರಡು ವಿಶೇಷಣಗಳ ಅರ್ಥ ಎಂದು ತೋರಿಸಲು "ಅಧಿಕೃತತ್ವಪ್ರದರ್ಶನಾಯ ಆಪ್ಯತಮಪ್ಯಖಿಲೈಃ ಸುವಾಕ್ಯೈಃ" ಎಂದು, "ಇಷ್ಟತ್ವಪ್ರದರ್ಶನಂ ಸದಾ ಪ್ರಿಯತಮಂ ಮಮ" ಎಂದು ಎರಡು ಕಡೆ ಪ್ರದರ್ಶನ ಎಂಬ ಪದವನ್ನು ಟೀಕಾಚಾರ್ಯರು ಬಳಸಿದ್ದಾರೆ. ಹಿಂದೆ ವೈಶಿಷ್ಟ್ಯವಿಷಯದಲ್ಲಿಯಾದರೋ ಹೀಗೆ ಹೇಳದೇ 'ತತ್ರ ವೈಶಿಷ್ಟ್ಯೋಪ-ಪಾದನಾಯ ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ, ಅಸ್ಯೋದ್ಭವಾದಿದಂ ಇತಿ ವಿಶೇಷಣತ್ರಯಂ' ಎಂಬಲ್ಲಿ ಪ್ರದರ್ಶನ ಎಂಬ ಪದವನ್ನು ಬಳಸದೆ ಉಪಪಾದನ ಎಂಬ ಪದವನ್ನು ಬಳಸಿದ್ದಾರೆ.

### ತತ್ರ ನಿಖಿಲಾಃ ನಿಃಶೇಷಾಃ ಪೂರ್ಣಗುಣಾಃ ಪ್ರತ್ಯೇಕಮಪ್ಯನವಧಿಕಾಃ .. ಎಂದು ಪದಾರ್ಥಗಳ ವಿವರಣೆ ಏಕೆ?

(ವಾಕ್ಯಾರ್ಥಚಂದ್ರಿಕಾ)– 'ನಿಖಿಲಾನಾಂ ಪೂರ್ಣಗುಣಾಃ' ಇತಿ ಸಮಾಸಭ್ರಾಂತಿಂ, ನಿಖಿಲ-ಪೂರ್ಣಶಬ್ದಯೋರೇಕಾರ್ಥತ್ವೇನ ದ್ವಂದ್ವಾನುಪಪತ್ತಿಶಂಕಾಮ್ ಏಕಪದಸ್ಯ ಸಂಖ್ಯಾರ್ಥತ್ವೇನ

ಪೂರ್ವನಿಪಾತಶಂಕಾಂ, ಸತ್ತ್ವಾದಿಗುಣೈಕದೇಹವತ್ತ್ವಸ್ಯ ಜೀವಾದಿಸಾಧಾರಣ್ಯಾಪಾದಕತ್ವಾದ್ ದೋಷ -ಶಬ್ದಸ್ಯ ರಾಗದ್ವೇಷಮೋಹಾರ್ಥತ್ವೇನ ಪ್ರಸಿದ್ಧೇಃ ತದ್ರಾಹಿತ್ಯಸ್ಯ ಪದ್ಮಾಪದ್ಮಭವಾದ್ಯತಿಶಯಾ- ಹೇತುತ್ವಾತ್ ಸ್ವಪುತ್ರಾದ್ಯುದ್ಭವಾದಿದತ್ತ್ವಸ್ಯ ಸರ್ವಸಾಧಾರಣ್ಯಾನ್ನೈಷಾಂ ಸರ್ವವೈಶಿಷ್ಟ್ಯೋಪ- ಪಾದಕತ್ವಮಿತಿ ಶಂಕಾಂ ಚ ಪರಿಹರತಿ – ನಿಖಿಲಾ ಇತ್ಯಾದಿನಾ ॥

'ತತ್ರ ನಿಖಿಲಾಃ ನಿಃಶೇಷಾಃ ಪೂರ್ಣಗುಣಾಃ ಪ್ರತ್ಯೇಕಮಪ್ಯನವಧಿಕಾಃ ಗುಣಾಃ ಆನಂದಾದಯಃ' ಇತ್ಯಾದಿ ಸುಧಾಪಂಕ್ತಿಯಿದೆ.

ಈ ಪಂಕ್ತಿಯಿಂದ ಹಲವು ಸಂಶಯಗಳಿಗೆ ಉತ್ತರ ಕೊಟ್ಟಂತಾಗಿದೆ. ಅವು ಹೀಗಿವೆ –(1) ನಿಖಿಲಾನಾಂ ಪೂರ್ಣಗುಣಾಃ ಎಂದು ಸಮಾಸಭ್ರಾಂತಿಬರುವುದು. (2) ನಿಖಿಲಪೂರ್ಣಶಬ್ದಗಳು ಒಂದೇ ಅರ್ಥವನ್ನು ಹೇಳುತ್ತಿರುವುದರಿಂದ ದ್ವಂದ್ವಸಮಾಸ ಹೇಗೆ? (3) ಏಕಪದವು ಸಂಖ್ಯಾ- ರ್ಥಕವಾದ್ದರಿಂದ ಪೂರ್ವನಿಪಾತವು ಬರಲಿ. (4) ಗುಣೈಕದೇಹ ಎಂಬುದು ಜೀವಾದಿಸಾಧಾರಣ. (5) ನಿರ್ದೋಷ ಎಂಬುದು ಸಜ್ಜೀವರಲ್ಲೂ ಇದೆ ರಾಗಾದಿದೋಷಗಳಿಲ್ಲದಿರುವದರಿಂದ (6) ಅಸ್ಯೋದ್ಭವಾದಿದಂ ಎಂಬುದು ಜೀವರಲ್ಲೂ ಸಾಧಾರಣ ತಮ್ಮ ಪುತ್ರಾದಿಗಳ ಉದ್ಭವಕ್ಕೆ ಕಾರಣರಾದ್ದರಿಂದ. ಹೀಗಾಗಿ – ಸರ್ವಸಾಧಾರಣವಾದ ಗುಣಗಳಿರುವ ಪರಮಾತ್ಮನು ಲಕ್ಷ್ಮ್ಯಾದಿ ದೇವತೆಗಳಿಗಿಂತ ಹಾಗೂ ಸಾಮಾನ್ಯಜೀವರಿಗಿಂತ ವಿಶಿಷ್ಟನಾಗಲು ಹೇಗೆ ಸಾಧ್ಯ?

## ಉಭಯೋರಪಿ ವಿಪ್ರತಿಪನ್ನತ್ವಾದಿತಿ ದಿಕ್

(ಲಘುರಸರಂಜನೀ) — ನನು ತರ್ಹಿ ಅಧಿಕೃತತ್ವೇಷ್ಟತ್ವಯೋರಪಿ 'ನಿಖಿಲ' ಇತ್ಯಾದಿವಿಶೇಷಣ- ತ್ರಯಮುಪಪಾದಕಂ ಸ್ಯಾತ್ । ನ ಸ್ಯಾತ್ । ಅಪ್ರಯೋಜಕತ್ವಾತ್ । ಬಹುಗುಣಾದಿಮತೋಽಪಿ ಅಧಿಕೃತತ್ವೇಷ್ಟತ್ವನಿಯಮಾಭಾವಾತ್ । ಅಧಿಕೃತತ್ವೇಷ್ಟತ್ವಯೋಃ ಪರಸ್ಪರೋಪಪಾದ್ಯೋಪಪಾದಕ- ಭಾವಸ್ತು ನ ಶಂಕಾರ್ಹಃ । ಉಭಯೋರಪಿ ವಿಪ್ರತಿಪನ್ನತ್ವಾದಿತಿ ದಿಕ್ ।

ಅಲ್ಲ ಹಾಗಾದರೆ ಅಧಿಕೃತತ್ವ ಹಾಗೂ ಇಷ್ಟತ್ವ ಎಂಬ ಎರಡು ಧರ್ಮಗಳು ನಿಖಿಲಪೂರ್ಣಗುಣೈಕ- ದೇಹಂ, ನಿರ್ದೋಷಂ, ಅಸ್ಯೋದ್ಭವಾದಿದಂ ಎಂಬ ಮೂರು ವಿಶೇಷಣಗಳಿಗೆ ಉಪಪಾದಕವಾಗಲಿ ಎಂದರೆ ಇದು ಸರಿಯಲ್ಲ. ಬಹುಗುಣಾದಿಗಳಿರುವ ವ್ಯಕ್ತಿಯಾಗಿದ್ದರೂ ಅಧಿಕೃತದೇವತೆ ಅಥವಾ ಇಷ್ಟದೇವತೆ ಆಗಲೇಬೇಕೆಂಬ ನಿಯಮವಿಲ್ಲವಾದ್ದರಿಂದ.

ಇನ್ನು ಅಧಿಕೃತತ್ವದಿಂದಲೇ ಇಷ್ಟತ್ವ ಅಥವಾ ಇಷ್ಟತ್ವದಿಂದಲೇ ಅಧಿಕೃತತ್ವವನ್ನು ಸಾಧಿಸುತ್ತೇವೆ ಎಂಬ ಶಂಕೆಗೂ ಅವಕಾಶವಿಲ್ಲ. ಎರಡರ ವಿಷಯದಲ್ಲಿಯೂ ವಿಪ್ರತಿಪತ್ತಿ ಇರುವುದರಿಂದ. ಹೀಗೆ ದಿಕ್ಪ್ರದರ್ಶನ ಮಾಡಲಾಗಿದೆ.

## ಮೊದಲು ಕರ್ಮಧಾರಯ, ನಂತರ ದ್ವಿಪದಬಹುವ್ರೀಹಿ

(ಕಾಶೀ) — ಯದ್ಯಪಿ 'ಗುಣಾ ಏಕೇ ದೇಹಾ ಯಸ್ಯ' ಇತಿ ತ್ರಿಪದಬಹುವ್ರೀಹಿರನುಪಪನ್ನಃ । ಬಹುವ್ರೀಹೌ ಸರ್ವನಾಮಸಂಖ್ಯಯೋರುಪಸಂಖ್ಯಾನಮ್ ಇತಿ ವಾರ್ತಿಕೇನ ಸರ್ವನಾಮ್ನಃ ಪೂರ್ವನಿಪಾತನಿಯಮನಾತ್ । ಕೇವಲಾರ್ಥತ್ವೇಽಪಿ ಏಕಶಬ್ದಸ್ಯ ಸರ್ವನಾಮಕಾರ್ಯದರ್ಶನೇನ ಸರ್ವನಾಮತ್ವಸ್ಯ ಸರ್ವಸಮ್ಮತತ್ವಾತ್ । ತಥಾಽಪಿ ನಾತ್ರ ತ್ರಿಪದಬಹುವ್ರೀಹಿರಭಿಮತಃ ಕಿಂತು ನಿಖಿಲಪೂರ್ಣಗುಣಶಬ್ದಸ್ಯ ಏಕಶಬ್ದೇನ 'ವಿಶೇಷಣಂ ವಿಶೇಷ್ಯೇಣ' ಇತಿ ಕರ್ಮಧಾರಯಸ್ತತೋ ದ್ವಿಪದಬಹುವ್ರೀಹಿಃ । ಏಕಶಬ್ದಸ್ಯ ಚ ವಿಶೇಷ್ಯತ್ವಾನ್ನ ಪೂರ್ವನಿಪಾತಃ ।

ಏಕಶಬ್ದಃ ಕೇವಲಾರ್ಥಃ - ನಿಖಿಲಪೂರ್ಣಗುಣೈಕದೇಹಂ ಎಂಬಲ್ಲಿನ ಏಕಶಬ್ದಕ್ಕೆ ಕೇವಲ ಎಂದರ್ಥ. ಗುಣಭಿನ್ನವಾದ ದೇಹಸಹಿತನಲ್ಲ. ಇಲ್ಲಿ ಸಮಾಸವಿಚಾರ - ತ್ರಿಪದಬಹುವ್ರೀಹಿಯನ್ನು ಇಲ್ಲಿ ಮಾಡಲು ಬರುವುದಿಲ್ಲ. ಮಾಡಿದರೆ ಗುಣಾಃ ಏಕೇ ದೇಹಾಃ ಯಸ್ಯ - ಎಂದು ಹೇಳಬೇಕು. ಆದರೆ ಸಮಾಸ ಮಾಡಿದ ನಂತರ ಸರ್ವನಾಮಶಬ್ದವಾದ ಏಕಶಬ್ದಕ್ಕೆ ಪೂರ್ವನಿಪಾತಬಂದು ಏಕಗುಣದೇಹ ಎಂದಾಗಬೇಕು. 'ಬಹುವ್ರೀಹೌ ಸರ್ವನಾಮಸಂಖ್ಯಯೋಃ ಉಪಸಂಖ್ಯಾನಮ್' ಎಂಬ ವಾರ್ತಿಕದಿಂದ ಸಂಖ್ಯಾವಾಚಿಯಾದ ಶಬ್ದಕ್ಕೆ ಪೂರ್ವನಿಪಾತವನ್ನು ಮಾಡಬೇಕು ಎಂದು ಹೇಳಿದ್ದರಿಂದ. ಇನ್ನು ಏಕಶಬ್ದಕ್ಕೆ ಇಲ್ಲಿ ಸಂಖ್ಯಾ ಎಂಬ ಅರ್ಥವು ವಿವಕ್ಷಿತವಲ್ಲ. ಹೊರತು ಕೇವಲ ಎಂಬ ಅರ್ಥವೇ ವಿವಕ್ಷಿತ. ಹಾಗಾಗಿ ಹಿಂದೆ ಹೇಳಿದ ವಾರ್ತಿಕದಿಂದ ಪೂರ್ವನಿಪಾತಪ್ರಸಕ್ತಿಯು ಇಲ್ಲ ಎಂದು ಹೇಳಬೇಕು. ಆದರೆ ಇದು ಸರಿಯಲ್ಲ. ಏಕೆಂದರೆ ಏಕಶಬ್ದಕ್ಕೆ ಸರ್ವನಾಮಸಂಜ್ಞಾ-ಪ್ರಯುಕ್ತಕಾರ್ಯಗಳು ಕೇವಲಾರ್ಥತ್ವ ಪಕ್ಷದಲ್ಲಿಯೂ ಕಂಡಿರುವುದರಿಂದ ಸರ್ವನಾಮಸಂಜ್ಞಾ-ಪ್ರಯುಕ್ತ ಪೂರ್ವನಿಪಾತವು ಬರುವ ಪ್ರಸಂಗ ಇದ್ದೇ ಇದೆ. ಹಾಗಾಗಿ ಇಲ್ಲಿ ತ್ರಿಪದಬಹುವ್ರೀಹಿ-ಯನ್ನು ಮಾಡದೆ ಕೇವಲ ದ್ವಿಪದಬಹುವ್ರೀಹಿಯನ್ನು ಆಶ್ರಯಿಸಬೇಕು. ಆದರೆ ಅದಕ್ಕಿಂತ ಮುಂಚೆ ಕರ್ಮಧಾರಯಸಮಾಸವನ್ನು ನಿಖಿಲಪೂರ್ಣಗುಣ ಎಂಬ ಶಬ್ದಕ್ಕೆ ಏಕಶಬ್ದದೊಂದಿಗೆ ಮಾಡಬೇಕು. ಕರ್ಮಧಾರಯವನ್ನು ವಿಧಾನಮಾಡುವ ಸೂತ್ರ "ವಿಶೇಷಣಂ ವಿಶೇಷ್ಯೇಣ ಬಹುಲಮ್" ಎಂದು. ಏಕಶಬ್ದವನ್ನು ವಿಶೇಷ್ಯ ಎಂದು ವಿವಕ್ಷೆ ಮಾಡಿದ್ದರಿಂದ ಪೂರ್ವನಿಪಾತ ಇಲ್ಲ.

## ಶಾಸ್ತ್ರೈಕಸಮಧಿಗಮ್ಯತ್ವಾತ್ ಎಂಬಲ್ಲಿನ ನ್ಯಾಯವಿವರಣಟೀಕೆ

(ಕಾಶೀ) — ಉಕ್ತಂ ಚ — "ಶಾಸ್ತ್ರೈಕಸಮಧಿಗಮ್ಯತ್ವಾತ್" ಇತಿ ನ್ಯಾಯವಿವರಣಟೀಕಾಯಾಂ – ಶಾಸ್ತ್ರಂ ಚ ತದೇಕಮಸಹಾಯಂ ಚೇತಿ ಶಾಸ್ತ್ರೈಕಮ್ । ವಿಶೇಷಣವಿಶೇಷ್ಯಭಾವಸ್ಯ ಕಾಮಚಾರಿ-ತ್ವಾತ್ । ಸಂಖ್ಯಾವಚನಸ್ಯೈವ ಏಕಶಬ್ದಸ್ಯ 'ಪೂರ್ವಕಾಲಿಕೇ'ತಿ ಸಮಾಸವಿಧಾನಾತ್' – ಇತಿ । (ನ್ಯಾ.ವಿ. 1-1-3)

ಇದನ್ನು ಒಂದು ಕಡೆ ಹೇಳಿದ್ದಾರೆಯೂ ಕೂಡ. "ಶಾಸ್ತ್ರೈಕಸಮಧಿಗಮ್ಯತ್ವಾತ್" ಎಂಬ ಪದದ ವಿವರಣೆಮಾಡುವಾಗ ನ್ಯಾಯವಿವರಣದ ಟೀಕೆಯಲ್ಲಿ ಹೀಗೆಂದಿದ್ದಾರೆ. ಶಾಸ್ತ್ರಂ ಚ ತತ್ ಏಕಂ = ಅಸಹಾಯಂ ಚ ಇತಿ ಶಾಸ್ತ್ರೈಕಂ, ವಿಶೇಷಣವಿಶೇಷ್ಯಭಾವಸ್ಯ ಕಾಮಚಾರಿತ್ವಾತ್. ಸಂಖ್ಯಾವಚನಸ್ಯೈವ ಏಕಶಬ್ದಸ್ಯ ಪೂರ್ವಕಾಲೈಕ ಇತಿ ಸಮಾಸವಿಧಾನಾತ್ ಇತಿ. ಇದರ ಭಾವ ಹೀಗೆ ಶಾಸ್ತ್ರೈಕಸಮಧಿಗಮ್ಯತ್ವಾತ್ ಎಂಬ ಪದದಲ್ಲಿ ಸಮಾಸವನ್ನು ನಿರೂಪಿಸುತ್ತಾ ಶಾಸ್ತ್ರ ಎಂಬ ಶಬ್ದಕ್ಕೆ ಅಸಹಾಯ ಎಂಬ ಅರ್ಥದಲ್ಲಿರುವ ಏಕಶಬ್ದದೊಂದಿಗೆ ಕರ್ಮಧಾರಯಸಮಾಸವನ್ನು ವಿಧಾನ ಮಾಡಿ ಅಲ್ಲಿಯೂ ಪೂರ್ವನಿಪಾತ ಯಾವುದಕ್ಕೆ ಎಂಬ ಪ್ರಶ್ನೆ ಬಂದಾಗ, ವಿಶೇಷಣವಿಶೇಷ್ಯಭಾವವು ವಕ್ತೃ ಇಚ್ಛೆಗೆ ಅನುಗುಣವಾಗಿ ಇರುವುದರಿಂದ ಏಕಶಬ್ದವನ್ನು ವಿಶೇಷ್ಯವನ್ನಾಗಿ ವಿವಕ್ಷಿಸಿ ಅದಕ್ಕೆ ಪೂರ್ವನಿಪಾತವಿಲ್ಲ ಎಂದು ಹೇಳಿ ಶಾಸ್ತ್ರೈಕಂ ಎಂಬುದನ್ನು ಸಮರ್ಥಿಸಿದ್ದಾರೆ. ಹಾಗೆ ಅಲ್ಲಿಯೇ ಏಕಶಬ್ದಕ್ಕೆ ಸಂಖ್ಯಾ ಎಂಬ ಅರ್ಥವಿಲ್ಲವಾದ್ದರಿಂದಲೇ ಸಂಖ್ಯಾರ್ಥಕವಾದ ಏಕಶಬ್ದಕ್ಕೆ ಪೂರ್ವನಿಪಾತ ಬರಲು ಪರಂಪರಯಾ ಕಾರಣವಾಗಿರುವ ಪೂರ್ವಕಾಲೈಕ ಎಂಬ ಸೂತ್ರದ ಪ್ರವೃತ್ತಿಯು ಇರುವುದಿಲ್ಲ ಎಂದಿದ್ದಾರೆ.

## ಭಕ್ತಿಪಾದೀಯಸುಧಾವಿರೋಧಶಂಕೆ ಹಾಗೂ ಪರಿಹಾರ

(ಕಾಶೀ) — ನ ಚೈವಂ ಭಕ್ತಿಪಾದೇ 'ಪದ್ಯೈಕೇನಾಪ್ಯುತ್ತರೇಣ' (3-2-ಶ್ಲೋ.193) ಇತ್ಯತ್ರ 'ಏಕಶಬ್ದಃ ಮುಖ್ಯಾರ್ಥಃ, ಪದೇಷು ಏಕಂ ಪದ್ಯೈಕಂ, ಆದ್ಯಪದೇನ ಇತ್ಯರ್ಥಃ । ಕರ್ಮಧಾರಯತ್ವೇ ತು ಪೂರ್ವಕಾಲೈಕ ಇತಿ ಏಕಪದಸ್ಯ ಪೂರ್ವನಿಪಾತಃ ಸ್ಯಾತ್' ಇತಿ ಸುಧಾವಿರೋಧ ಇತಿ ವಾಚ್ಯಮ್ । 'ಪೂರ್ವಕಾಲೈಕ' ಇತ್ಯನೇನ ಕರ್ಮಧಾರಯತ್ವ ಇತಿ ವ್ಯಾಖ್ಯಾನೇನ ತದ್ಗ್ರಂಥಸ್ಯ ಸಂಖ್ಯಾರ್ಥತ್ವ ಏವ ಪೂರ್ವನಿಪಾತಾಪತ್ತಿಪರತ್ವಾತ್ । ನ ಚೈವಂ ಮುಖ್ಯಾರ್ಥಕೈಕತಬ್ದಸ್ಯ ವಿಶೇಷ್ಯತ್ವೇ ಕರ್ಮಧಾರಯಸಂಭವಾತ್ ಸಪ್ತಮೀಸಮಾಸಾನುಸರಣವೈಯರ್ಥ್ಯಮಿತಿ ವಾಚ್ಯಮ್ । ಏಕತ್ರಾಮುಖ್ಯಸ್ಯಾಪ್ಯನ್ಯತ್ರ ಮುಖ್ಯತ್ವಸಂಭವೇನ ಪ್ರಕೃತಪದೇಷು ಮುಖ್ಯತ್ವಲಾಭಾಯ ತದನುಸರಣಾತ್ । ಅಧಿಕಂ ತು ವಕ್ಷ್ಯಾಮಃ ।

ಈ ಪಕ್ಷದಲ್ಲಿ ಭಕ್ತಿಪಾದದಲ್ಲಿ ಬರುವ ಸುಧಾಗ್ರಂಥದ ವಿರೋಧವಿದೆ. ಅಲ್ಲಿ ಬರುವ ಸುಧಾಗ್ರಂಥ ಹೀಗಿದೆ - 'ಪದ್ಯೈಕೇನಾಪಿ ಉತ್ತರೇಣ ಇತ್ಯತ್ರ ಏಕಶಬ್ದಃ ಮುಖ್ಯಾರ್ಥಃ, ಪದೇಷು ಏಕಂ ಪದ್ಯೈಕಂ, ಆದ್ಯಪದೇನ ಇತ್ಯರ್ಥಃ । ಕರ್ಮಧಾರಯತ್ವೇ ತು ಪೂರ್ವಕಾಲೈಕ ಇತಿ ಏಕಪದಸ್ಯ ಪೂರ್ವನಿಪಾತಃ ಸ್ಯಾತ್' - ಎಂದು. ಇದರ ಭಾವ ಪದ್ಯೈಕೇನಾಪ್ಯುತ್ತರೇಣ ಎಂದು ಅನುವ್ಯಾಖ್ಯಾನದಲ್ಲಿ ಬರುವ ಒಂದು ಭಾಗ. ಇಲ್ಲಿ ಪದ್ಯೈಕ ಎಂಬ ಶಬ್ದದಲ್ಲಿ ಏಕಶಬ್ದಕ್ಕೆ ಮುಖ್ಯ ಎಂದು ಅರ್ಥ. ಸಮಾಸವಾದರೋ ಸಪ್ತಮೀತತ್ಪುರುಷಸಮಾಸ ಎಂದಿಟ್ಟುಕೊಂಡು ಪದೇಷು ಏಕಂ ಪದ್ಯೈಕಂ

ಎಂದು ವ್ಯಾಖ್ಯಾನ ಮಾಡಿದ್ದಾರೆ. ಅಂದರೆ ಮುಖ್ಯವಾದ ಪದ ಅರ್ಥಾತ್ ಮೊದಲನೆಯ ಪದ ಎಂದು ತಾತ್ಪರ್ಯ. ಹೀಗೆ ಹೇಳುತ್ತ ಕರ್ಮಧಾರಯಸಮಾಸವನ್ನು ಒಂದು ವೇಳೆ ಆಶ್ರಯಿಸಿದ್ದರೆ ಆಗ ಪೂರ್ವಕಾಲೈಕ ಎಂಬ ಸೂತ್ರದಿಂದ ಪೂರ್ವನಿಪಾತ ಬಂದೀತು ಎಂದು ಆಪಾದಿಸಿದ್ದಾರೆ. ಈ ಗ್ರಂಥದಿಂದ ವಿರೋಧವು ಪ್ರಕೃತದ ಭಾಗಕ್ಕೆ ಬರುತ್ತದೆ. ಏಕೆಂದರೆ ಒಂದು ವೇಳೆ ಕರ್ಮಧಾರಯ ಸಮಾಸವನ್ನು ಆಶ್ರಯಿಸಿದರೆ ಏಕಪದಕ್ಕೆ ಪೂರ್ವನಿಪಾತ ಬಂದೀತು। ಎಂದು ಭಕ್ತಿಪಾದೀಯಸುಧಾದಲ್ಲಿ ಕಾಣುತ್ತಿದೆ.

ಇದಕ್ಕೆ ಪರಿಹಾರ - ಆ ಗ್ರಂಥವನ್ನು ಹೀಗೆ ಯೋಜನೆ ಮಾಡಬೇಕು. ಕರ್ಮಧಾರಯತ್ವೇ ತು ಪೂರ್ವಕಾಲೈಕ ಇತಿ ಎಂದಲ್ಲ ಹೊರತು ಪೂರ್ವಕಾಲೈಕ ಇತಿ ಕರ್ಮಧಾರಯತ್ವೇ ಎಂದು. ಹೀಗೆ ಹೇಳಿದಾಗ ಪೂರ್ವಕಾಲೈಕ ಎಂಬುದರಿಂದ ಎಲ್ಲಿ ಕರ್ಮಧಾರಯಸಮಾಸವನ್ನು ಮಾಡಿದ್ದೇವೆಯೋ ಅಲ್ಲಿ ಪೂರ್ವನಿಪಾತಬಂದೀತು। ಎಂದು ಆ ಗ್ರಂಥದ ತಾತ್ಪರ್ಯ. ಅದೂ ಕೂಡ ಏಕಶಬ್ದವು ಸಂಖ್ಯಾವಾಚೀ ಎಂದಾದಾಗ ಮಾತ್ರ. ಪ್ರಕೃತದಲ್ಲಿ 'ವಿಶೇಷಣಂ ವಿಶೇಷ್ಯೇಣ ಬಹುಲಂ' ಎಂಬ ಸೂತ್ರದಿಂದ ಕರ್ಮಧಾರಯಸಮಾಸ ಮಾಡಿದ್ದು ಹಾಗಾಗಿ ಉತ್ತರಸುಧಾಗ್ರಂಥವಿರೋಧವಿಲ್ಲ.

ಇಲ್ಲಿ ಒಂದು ಪ್ರಶ್ನೆ - ಹಾಗಾದರೆ ಪದೇಷು ಏಕಂ ಪದೈಕಂ ಎಂದು ಭಕ್ತಿಪಾದೀಯಸುಧಾ-ಗ್ರಂಥದಲ್ಲಿಯಾದರೋ ಸಪ್ತಮೀ ತತ್ಪುರುಷಸಮಾಸವನ್ನು ಏಕೆ ಆಶ್ರಯಿಸಿದ್ದು? ಏಕಶಬ್ದಕ್ಕೆ ಮುಖ್ಯ ಎಂಬ ಅರ್ಥವನ್ನು ಸ್ವೀಕರಿಸಿ ಅದನ್ನು ವಿಶೇಷ್ಯ ಎಂದು ವಿವಕ್ಷೆ ಮಾಡಿ ಕರ್ಮ-ಧಾರಯಸಮಾಸವನ್ನೇ ಮಾಡಬಹುದಲ್ಲವೇ? ಎಂದರೆ ಇಲ್ಲ. ಸಪ್ತಮೀತತ್ಪುರುಷಸಮಾಸವನ್ನು ಆಶ್ರಯಣ ಮಾಡಿದ್ದಕ್ಕೆ ಒಂದು ಉದ್ದೇಶ್ಯವಿದೆ. ಅರ್ಥವಿಶೇಷಲಾಭಕ್ಕೋಸ್ಕರ ಹೀಗೆ ಆಶ್ರಯಿಸಿದ್ದು. ಅದೇನೆಂದರೆ - ಒಂದು ಪದವು ಒಂದು ಕಡೆ ಅಮುಖ್ಯವಾದರೂ ಇನ್ನೊಂದು ಕಡೆ ಮುಖ್ಯವಾಗಬಹುದಾದ್ದರಿಂದ ಪ್ರಕೃತಪದಗಳಲ್ಲಿ ಯಾವುದು ಮುಖ್ಯವೋ ಅಂತಹ-ದ್ದನ್ನುಗ್ರಹಿಸಬೇಕು ಎಂದು ತಿಳಿಸಲು 'ಪದೇಷು ಏಕಂ' ಎಂದು ಸಪ್ತಮೀತತ್ಪುರುಷಸಮಾಸವನ್ನೇ ಆಶ್ರಯಿಸಿದ್ದಾರೆ. ಈ ಅರ್ಥವು ಕರ್ಮಧಾರಯಸಮಾಸವನ್ನು ಆಶ್ರಯಿಸಿದರೆ ಇಲ್ಲಿ ಆ ಅರ್ಥವಿಶೇಷವು ಅಸಾಧ್ಯವಾದ್ದರಿಂದ. ಇದರ ಬಗ್ಗೆ ಹೆಚ್ಚಿನ ವಿಷಯವನ್ನು ಮುಂದೆ ಹೇಳುತ್ತೇವೆ.

## ದಾನಮಾಡುವುದೆಂದರೇನು?

(ಕಾಶೀ) — ನನು ದದಾತೀತಿ ಕಥಮ್? ಪರಸ್ವತ್ವಾಪಾದಕಸ್ವಸ್ವತ್ವತ್ಯಾಗರೂಪದಾನಸ್ಯಾ-ಯೋಗಾತ್ । ಈಶ್ವರಸ್ವತ್ವಸ್ಯ ಸರ್ವತ್ರ ಸರ್ವದೈವ ಸತ್ವಾದಿತಿ ಚೇದತ್ರಾಹುಃ - ಪರಸ್ವತ್ವಾಪಾದನ-

ಮಾತ್ರಸ್ಯ ಕನ್ಯಾದಾನಾದೌ ದಾನಪದಾರ್ಥತ್ವದರ್ಶನಾದಿಹ ತಾವನ್ಮಾತ್ರಸ್ಯ ವಿವಕ್ಷಿತತ್ವಾನ್ನ ದೋಷ ಇತಿ । ವಸ್ತುತೋ ಜಡಂ ಪ್ರತಿ ಪರಸ್ವತ್ವಾಪಾದನರೂಪದಾನಸ್ಯಾಪ್ಯನುಪಪತ್ತ್ಯಾ ಪ್ರಕೃತೇ ಕೃತಿರೇವ ದದಾತ್ಯರ್ಥಃ । ಜನ್ಮಾದಿಕರ್ತೃತ್ವಸ್ಯೈವ ಪ್ರತಿಪಿಪಾದಯಿಷಿತತ್ವಾತ್ । ಈಶ್ವರವ್ಯತಿರಿಕ್ತಸ್ಯೈವ ಕರಣ-ಫಲಭಾಗಿತಾಜ್ಞಾಪನಾಯ ಗೌಣಪ್ರಯೋಗಸಂಭವಾತ್ । ತಥಾ ಚೋಕ್ತಮ್ —

"ಸೃಕ್ಕ್ಯೇ ಹಿ ಚೇತನಗಣಾನ್ ಸುಖದುಃಖಮಧ್ಯ-
ಸಂಪ್ರಾಪ್ತಯೇ ತನುಭೃತಾಂ ವಿಹೃತಿಂ ಮಮೇಚ್ಛನ್ ।
ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವ-
ಸಂಭೂತಯೇ ಭವತಿ ಭೂತಿಕೃದೇವ ಭೂತ್ಯಾಃ' – (ಮ.ಭಾ.ತಾ.ನಿ. 1–5)

ದದಾತಿ ಇತಿ ಉದ್ಧವಾದಿದಃ ತಮ್ – ಜಗತ್ತಿಗೆ ಪರಮಾತ್ಮನು ಉತ್ಪತ್ತಿ ಮೊದಲಾದವುಗಳನ್ನು ದಾನ ಮಾಡುತ್ತಾನೆ ಎಂದರೆ ಏನರ್ಥ? ದಾನ ಎಂದರೆ ಪರಸ್ವತ್ವಆಪಾದಕಸ್ವಸ್ವತ್ವತ್ಯಾಗ ಎಂದು. ಇಂತಹ ದಾನವನ್ನು ಭಗವಂತನು ಮಾಡಲು ಸಾಧ್ಯವೇ? ಇಲ್ಲ. ಏಕೆಂದರೆ ಈಶ್ವರನಲ್ಲಿರುವ ಸ್ವತ್ವವು ಎಲ್ಲ ವಿಷಯದಲ್ಲಿಯೂ ಯಾವಾಗಲೂ ಇದ್ದೇ ಇರುತ್ತದೆ ಆದ್ದರಿಂದ. ಇನ್ನು ದಾನಶಬ್ದದ ಅರ್ಥ ಕೇವಲ ಪರಸ್ವತ್ವಆಪಾದನ ಅಷ್ಟೇ, ಹೊರತು ಸ್ವಸ್ವತ್ಯಾಗ ಇಲ್ಲ ಎನ್ನುತ್ತೇವೆ. ಹಾಗಾಗಿ ಈಶ್ವರನಲ್ಲಿ ಇಂತಹ ದಾನವು ಕೂಡಬಹುದು ಎಂದು. ಇನ್ನು ಕೇವಲ ಪರಸ್ವತ್ವಆಪಾದನವನ್ನೇ ದಾನ ಎನ್ನಬೇಕು ಎನ್ನುವುದಕ್ಕೆ ಏನು ಕಾರಣ? ಎಂಬ ಪ್ರಶ್ನೆ ಬರಬಹುದು. ಅದಕ್ಕೆ ಇದು ಉತ್ತರ – ವರಾಯ ಕನ್ಯಾಂ ದದಾತಿ ಎಂಬ ಸ್ಥಳದಲ್ಲಿ ಕನ್ಯಾ-ದಾನವೆಂದರೆ ಸ್ವಸ್ವತ್ವತ್ಯಾಗವಾಗುವ ಮೂಲಕ ಪರಸ್ವತ್ವಾಪಾದನ ಎಂದರ್ಥವಲ್ಲ ಹೊರತು ಕೇವಲ ಪರಸ್ವತ್ವಾಪಾದನ.

ವಸ್ತುತಃ ಜಡವನ್ನು ಕುರಿತು ಪರಸ್ವತ್ವಆಪಾದನವೆಂಬ ದಾನವೂ ಕೂಡುವುದಿಲ್ಲ. ಆದ್ದರಿಂದ ಇದನ್ನೂ ದಾನಶಬ್ದದ ಅರ್ಥವನ್ನಾಗಿ ಹೇಳದೇ ಕೇವಲಕೃತಿರೇವ ದಾನಶಬ್ದಾರ್ಥಃ ಎನ್ನಬೇಕು. ಏಕೆಂದರೆ ಜನ್ಮಾದಿಕರ್ತೃತ್ವವೇ ಇಲ್ಲಿ ಪ್ರತಿಪಾದನೆ ಮಾಡಲು ಇಷ್ಟವಾದ್ದರಿಂದ. ಕರ್ತೃತ್ವ ಎಂದರೆ ಕೃತಿಯೇ ಆಗಿದೆ. ಹಾಗಾದರೆ 'ಕರೋತಿ' ಎಂಬ ಪದವನ್ನು ಪ್ರಯೋಗಿಸಲು 'ದದಾತಿ' ಎಂಬ ಪ್ರಯೋಗವೇಕೆ? ಎಂಬ ಪ್ರಶ್ನೆಯು ಬರುವುದು. ಇದಕ್ಕೆ ಉತ್ತರ – ಇದು ಗೌಣಪ್ರಯೋಗ. ಈ ರೀತಿ ಮಾಡಿದ್ದಕ್ಕೆ ಪ್ರಯೋಜನ ಈಶ್ವರನಿಗಿಂತ ಬಿಟ್ಟು ಬೇರೆಯಾದ ವಸ್ತುಗಳಿಗೆ ಸೃಷ್ಟಿಯ ಫಲಲಾಭ ಎಂಬ ಸೂಚನೆ.

ಇದನ್ನು ಹೇಳಿದ್ದಾರೆ ಕೂಡ. "ಸೃಕ್ಕ್ಯೇ ಹಿ ಚೇತನಗಣಾನ್ ಸುಖದುಃಖಮಧ್ಯಸಂಪ್ರಾಪ್ತಯೇ ...... ಭೂತಿಕೃದೇವ ಭೂತ್ಯಾಃ' (ಮ.ಭಾ.ತಾ.ನಿ. 1-5)

## ದಾನ - ಪ್ರಪಂಚಗಳಿಗಿರುವ ಸಂಬಂಧ

(ಕಾಶೀ) — ನನು 'ಅಸ್ಯ' ಇತಿ ಷಷ್ಠೀ ಕಥಮ್? ಪ್ರಪಂಚಸ್ಯ ದಾನಕ್ರಿಯಾಯಾಂ ಕರ್ಮ-ಭೂತೋದ್ಭವಾದಿಸಂಬಂಧಿತ್ವೇನ ಕರ್ತ್ರಭಿಪ್ರೇತತ್ವರೂಪಸಂಪ್ರದಾನತಯಾ ಚತುರ್ಥೀಪ್ರಾಪ್ತೇಃ । ನ ಚ 'ವಿಪ್ರಾಯ ಗಾಂ ದದಾತಿ' ಇತ್ಯಾದೌ ತ್ಯಾಗರೂಪದಾನಜನ್ಯಗವಾದಿವೃತ್ತಿಸ್ವತ್ವಭಾಗಿತಯಾ ವಿಪ್ರಾದೇರಿವ ಪ್ರಪಂಚಸ್ಯ ತಾದೃಶದಾನಜನ್ಯೋದ್ಭವಾದಿವೃತ್ತಿಸ್ವತ್ವಭಾಗಿತಯಾ ಕರ್ತ್ರಭಿಪ್ರೇತತ್ವಾ-ಭಾವಾನ್ನ ಸಂಪ್ರದಾನತ್ವಮಿತಿ ವಾಚ್ಯಮ್ । 'ಶತ್ರವೇ ಭಯಂ ದದಾತಿ' ಇತ್ಯಾದಾವುತ್ಪಾದನರೂಪ ದಾನಕರ್ಮಭಯಸಂಬಂಧಿತ್ವೇನ ಶತ್ರ್ವಾದೇರಿವ ಪ್ರಕೃತೇಽಪಿ ಸಂಪ್ರದಾನತ್ವೋಪಪತ್ತೇಃ । ನ ಚ ಪ್ರಪಂಚಸ್ಯ ಉದ್ಭವಾದೌ ಕರ್ತೃತ್ವೇನಾನ್ವಯಾತ್ ಕರ್ತರಿ ಕೃದ್ಯೋಗಾನುಶಿಷ್ಟಾ ಷಷ್ಠೀತಿ ಯುಕ್ತಮ್ । ಉದ್ಭವಾದಿಪದಸ್ಯ ಕೃದಂತತ್ವಾಭಾವೇನ ತದರ್ಥೇ ಜನ್ಮಾದ್ಯಷ್ಟಕೇ ಕರ್ತೃತ್ವೇನ ತದ-ನ್ವಯಾಯೋಗಾದಿತ್ಯತ ಆಹ — ಅಸ್ಯೇತಿ ॥ 'ಷಷ್ಠೀ ಶೇಷೇ' ಇತ್ಯನೇನಾತ್ರ ಸಂಬಂಧ-ಸಾಮಾನ್ಯಾರ್ಥಾ ಷಷ್ಠೀತ್ಯರ್ಥಃ ।

ಸಂಬಂಧಶ್ಚ ದಾನಪ್ರಪಂಚಯೋರ್ವಿಷಯಿವಿಷಯಭಾವಾದಿರೇವೇತಿ ಸಂಪ್ರದಾನತ್ವವಿವಕ್ಷಯಾ ನ ಚತುರ್ಥೀತಿ ಭಾವಃ । ವಸ್ತುತ ಉದ್ಭವಾದ್ಯನ್ವಯಿನೀ ಶೇಷಷಷ್ಠ್ಯೇವಾತ್ರ ವಿವಕ್ಷಿತಾ । ತತ ಏವ ಪ್ರಪಂಚಸಂಬಂಧ್ಯುದ್ಭವಾದಿಕರ್ತೃತ್ವಲಾಭಾತ್ । ಸಂಬಂಧಶ್ಚ ಆಶ್ರಯಾಶ್ರಯಿಭಾವ ಏವ । ನ ಚೈವಂ ಸಮಾಸಘಟಕಷಷ್ಠ್ಯಂತಪದಸಾಪೇಕ್ಷತ್ವೇನಾಸಾಮರ್ಥ್ಯಾತ್ 'ಉದ್ಭವಾದಿ'ಪದಸ್ಯ ಸಮಾಸಾ-ನುಪಪತ್ತಿರಿತಿ ವಾಚ್ಯಮ್ । ನಿತ್ಯಸಾಪೇಕ್ಷತ್ವೇನ ಸಮಾಸೋಪಪತ್ತೇಃ ।

ಅಸ್ಯ ಇತಿ ಸಂಬಂಧಮಾತ್ರೇ ಷಷ್ಠೀ - ಅಸ್ಯ ಎಂಬಲ್ಲಿ ಷಷ್ಠೀವಿಭಕ್ತಿಯು ಬರದೇ ಸಂಪ್ರದಾನಸಂಜ್ಞೆ ಇರುವುದರಿಂದ ಚತುರ್ಥೀ ಬರಲಿ ಎಂದು ಪ್ರಶ್ನೆ. ಏಕೆಂದರೆ ಇದಂ ಪದಾರ್ಥವಾದ ಪ್ರಪಂಚವು ದಾನಕ್ರಿಯೆಗೆ ಕರ್ಮವಾದ ಉದ್ಭವಾದಿಗಳಿಗೆ ಸಂಬಂಧಪಡಲಿ ಎಂಬ ಕರ್ತೃವಿನ ಇಚ್ಛೆಗೆ ಉದ್ದೇಶ್ಯವಾಗಿರುವುದರಿಂದ ಸಂಪ್ರದಾನವಾಗಿದೆ. ಅಲ್ಲ! 'ವಿಪ್ರಾಯ ಗಾಂ ದದಾತಿ' ಮುಂತಾದ ಕಡೆಗಳಲ್ಲಿ ತ್ಯಾಗರೂಪವಾದ ದಾನದಿಂದ ಹುಟ್ಟಿದ ಗೋ ಮುಂತಾದವುಗಳಲ್ಲಿ ಇರುವ ಸ್ವತ್ವವನ್ನು ಹೊಂದುವ ವಿಪ್ರನಂತೆ ಇಲ್ಲಿ ಪ್ರಪಂಚಕ್ಕೆ ತ್ಯಾಗರೂಪವಾದ ದಾನದಿಂದ ಜನ್ಯವಾದ ಉದ್ಭವಾದಿಗಳಲ್ಲಿರುವ ಸ್ವತ್ವವನ್ನು ಪ್ರಪಂಚವು ಹೊಂದಲಿ ಎಂಬ ರೀತಿಯಾದ ಕರ್ತೃವಿನ ಇಚ್ಛೆಯು ಇಲ್ಲವಾದ್ದರಿಂದ ಸಂಪ್ರದಾನತ್ವವೇ ಇಲ್ಲ ಎಂದು ಶಂಕಿಸಕೂಡದು. 'ಶತ್ರವೇ ಭಯಂ ದದಾತಿ' ಎಂಬಲ್ಲಿ ಹೇಳುವಂತೆ ಅರ್ಥಾತ್ ಕರ್ತ್ರಭಿಪ್ರೇತತ್ವವಿಲ್ಲದಿದ್ದರೂ ಕೇವಲ ಉತ್ಪಾದನ-ರೂಪವಾದ ದಾನಕ್ಕೆ ಕರ್ಮವಾದ ಭಯಸಂಬಂಧ ಶತ್ರುಗಳಿಗೆ ಇದೆ ಎನ್ನುವ ಕಾರಣಕ್ಕೆ ಸಂಪ್ರದಾನಸಂಜ್ಞೆಯನ್ನು ಹೇಳಿ ಚತುರ್ಥಿಯನ್ನು ಮಾಡುವಂತೆ ಪ್ರಕೃತದಲ್ಲಿಯೂ ಪ್ರಪಂಚಕ್ಕೆ

ಸಂಪ್ರದಾನತ್ವ ಕೊಡಬಹುದು. ಅಲ್ಲ ಪ್ರಪಂಚಕ್ಕೆ ಉದ್ಭವಾದಿಗಳಲ್ಲಿ ಕರ್ತೃತ್ವೇನ ಅನ್ವಯ. ಹಾಗಾಗಿ 'ಕರ್ತೃಕರ್ಮಣೋಃ ಕೃತಿ' ಎಂಬ ಸೂತ್ರದಿಂದ ಷಷ್ಠೀ ಬರುವುದೇ ಉಚಿತ. ಎಂದರೆ ಇದು ಸರಿಯಲ್ಲ. 'ಉದ್ಭವಾದಿ' ಎಂಬ ಪದವು ಕೃದಂತವಲ್ಲವಾದ್ದರಿಂದ ಅದರ ಅರ್ಥದಲ್ಲಿ ಅರ್ಥಾತ್ ಜನ್ಮಾದ್ಯಷ್ಟಕದಲ್ಲಿ ಕರ್ತೃತ್ವೇನ ಪ್ರಪಂಚಕ್ಕೆ ಅನ್ವಯವನ್ನು ಮಾಡಲು ಬರಲು ಆಗದಿರುವುದರಿಂದ ಎಂಬ ಪ್ರಶ್ನೆಗೆ ಉತ್ತರವಾಗಿ "ಅಸ್ಯ" ಎಂಬ ಸುಧಾಮೂಲವು ಹೊರಟಿದೆ. 'ಷಷ್ಠೀ ಶೇಷೇ' ಎಂಬ ಸೂತ್ರದಿಂದ ಇಲ್ಲಿ ಸಂಬಂಧಸಾಮಾನ್ಯದಲ್ಲಿ ಷಷ್ಠೀ ಬಂದಿದೆ.

ಅರ್ಥಾತ್ ಇಲ್ಲಿ ತೋರುತ್ತಿರುವ ಸಂಬಂಧ ದಾನಪ್ರಪಂಚಗಳಿಗೆ ವಿಷಯವಿಷಯೀಭಾವವೇ ಆಗಿದೆ ಹೊರತು ಸಂಪ್ರದಾನತ್ವವಲ್ಲ. ಆದ್ದರಿಂದ ಚತುರ್ಥೀ ಇಲ್ಲ. ವಸ್ತುತಃ ಉದ್ಭವಾದಿಪದಾರ್ಥದಲ್ಲಿ ಅನ್ವಯ ಹೊಂದುವ ಷಷ್ಠೀ ಎಂದರೆ ಶೇಷೇ ಷಷ್ಠೀ ಎಂದೇ ಹೇಳಬೇಕು. ಆದ್ದರಿಂದಲೇ ಪ್ರಪಂಚ-ಸಂಬಂಧಿಯಾದ ಉದ್ಭವಾದಿಗಳಿಗೆ ಕರ್ತೃ ಎಂಬ ಅರ್ಥ ಸಿಗುವುದು. ಅಲ್ಲಿ ಸಂಬಂಧವಾದರೋ ಆಶ್ರಯ-ಆಶ್ರಯಿಭಾವ ಎಂದು ತಿಳಿಯಬೇಕು. ಅರ್ಥಾತ್ ಉದ್ಭವಾದಿಗಳಿಗೆ ಆಶ್ರಯ ಪ್ರಪಂಚ ಎಂದು. ಅಲ್ಲ ಹೀಗಾದರೆ ಉದ್ಭವಾದಿ ಎಂಬ ಪದವು ಸಮಾಸದಲ್ಲಿ ಸೇರದಿರುವ ಅಸ್ಯ ಎಂಬ ಷಷ್ಠ್ಯಂತಪದವನ್ನು ಅಪೇಕ್ಷೆ ಪಡುವುದರಿಂದ 'ಸಾಪೇಕ್ಷಂ ಅಸಮರ್ಥಂ ಭವತಿ' ಎಂಬ ನಿಯಮದಂತೆ ಸಮಾಸ ಮಾಡಲು ಪ್ರಕೃತದಲ್ಲಿ ಸಾಮರ್ಥ್ಯವಿಲ್ಲವಾದ್ದರಿಂದ ಉದ್ಭವಾದಿದಂ ಎಂದು ಸಮಾಸ ಮಾಡಿದ್ದು ಹೇಗೆ? ಎಂದರೆ, ಉತ್ತರ - ನಿತ್ಯಸಾಪೇಕ್ಷಸ್ಥಳದಲ್ಲಿ ಸಮಾಸವನ್ನು ಮಾಡುವುದು ಕಂಡಿದೆಯಾದ್ದರಿಂದ ಇಲ್ಲಿಯೂ ಸಮಾಸವನ್ನು ಮಾಡಬಹುದು.

## ಉತ್ಪತ್ತ್ಯಾದಿಗಳ ಅವಾಂತರಭೇದನಿರೂಪಣೆ

(ಕಾಶೀ) — 'ನ ವಿಯದಶ್ರುತೇಃ' ಇತ್ಯಾದ್ಯಧಿಕರಣೇಷು ನಿತ್ಯಸ್ಯಾಕಾಶಾದೇಃ ಮೂರ್ತಸಂಯೋಗಃ, ಪ್ರಕೃತೇಃ ಪರಿಣಾಮಃ, ಜೀವಾನಾಂ ದೇಹಲಾಭಃ, ಶ್ರಿಯಃ ಸಿಸೃಕ್ಷುತ್ವಮ್, ಇತರೇಷಾಂ ಸ್ವರೂಪ-ಲಾಭಃ ಇತ್ಯೇವಂ ವ್ಯುತ್ಪಾದಿತಅನೇಕವಿಧೋದ್ಭವಾದೇರತ್ರ ಯಥಾಸಂಭವಂ ವಿವಕ್ಷಿತತ್ವಾ-ನ್ನೋಕ್ತದೋಷಃ । ನ ಚೈವಮನೇಕಾರ್ಥತ್ವಂ ದೋಷಃ । ಸಾಮಾನ್ಯತಃ ಪರಾಧೀನವಿಶೇಷಾವಾಪ್ತೇಃ ಉದ್ಭವಪದಾರ್ಥತ್ವಾತ್ । ಲಯೋಽಪ್ಯೇವಮ್ ಅನೇಕವಿಧೋ ಬೋಧ್ಯಃ ।

ವಿಯದಧಿಕರಣಾದಿವ್ಯುತ್ಪಾದ್ಯಸಮಸ್ತಅವಾಂತರಭೇದಸಹಿತ-ಉದ್ಭವಾದಿದಂ - ಉದ್ಭವಪದಕ್ಕೆ ಅನೇಕ ರೀತಿಯಾದ ಅವಾಂತರಭೇದವನ್ನು ಅರ್ಥ ಎಂದು ಹೇಳಿದರೆ ಒಂದೇ ಪದಕ್ಕೆ ಅನೇಕಾ-ರ್ಥಗಳನ್ನು ಹೇಳಿದಂತಾಯಿತು. ಇದು 'ಸಕೃದುಚ್ಚರಿತಃ ಶಬ್ದಃ ಸಕೃದೇವಾರ್ಥಂ ಗಮಯತಿ' ಎನ್ನುವ ನಿಯಮಕ್ಕೆ ವಿರುದ್ಧ. ಅದಕ್ಕೆ ಸಾಮಾನ್ಯತಃ ಉದ್ಭವಪದಕ್ಕೆ 'ಪರಾಧೀನವಿಶೇಷಾವಾಪ್ತಿ' ಎಂಬ ಒಂದೇ ಅರ್ಥವಿರುವುದರಿಂದ ದೋಷವಿಲ್ಲ ಎಂದು ವ್ಯಾಖ್ಯಾನಿಸಬೇಕು.

**ಅಧಿಕೃತತತ್ವಪ್ರದರ್ಶನಾಯ - ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ - ಪ್ರತಿಪದಾರ್ಥ ಹಾಗೂ ಸಾರ.**

**श्रीमन्न्यायसुधा** – अधिकृतत्वप्रदर्शनाय – **आप्यतममप्यखिलैः सुवाक्यैरिति**। अपिशब्दो वन्द्यत्वे हेतुसमुच्चयार्थः, अभिव्याप्तौ वा। अपौरुषेयत्वेन तन्मूलत्वेन वाऽनाशङ्कितदोषत्वादिना शोभनानि वाक्यानि= वेदादीनि ब्रह्मसूत्रादीनि च सुवाक्यानि, तैरखिलैराप्यतमम्= अतिशयेन प्रतिपाद्यम्।

यदि व्याचिख्यासितेन ब्रह्ममीमांसाशास्त्रेण तन्निर्णेतव्यार्थेन वेदादिना च प्रतिपाद्य इति नारायणो वन्दनीयः, हन्त तर्हि तत एव धर्मादिकं प्राणादिकं वा वन्दनीयं स्यात्। न स्यात्। तस्य नारायणप्रतिपत्त्यङ्गतया वेदाद्येकदेशप्रतिपाद्यत्वात्। अस्य पुनरनन्यार्थतयाऽखिलवेदादिवेद्यत्वात्। तथाविधमेव चाधिकृतमुच्यत इत्याशयवता 'आप्यतमम्' इति 'अखिलैः' इति चोक्तम्।

इष्टत्वप्रदर्शनम् – **सदा प्रियतमं ममेति**॥ अत्रापि पूर्ववत् सदापदस्य तमपश्च प्रयोजनमवधेयम्।

ಅಧಿಕೃತತತ್ವಪ್ರದರ್ಶನಾಯ - ನಾರಾಯಣನಿಗೆ ಅಧಿಕೃತತತ್ವವೆಂಬ ಧರ್ಮವಿದೆ ಎಂದು ತೋರಿಸಲು, ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ ಇತಿ ॥ - ಆಪ್ಯತಮಂ ಅಪಿ ಅಖಿಲೈಃ ಸುವಾಕ್ಯೈಃ ಎಂಬ ಮೂಲವಿದೆ. ಅಪಿಶಬ್ದಃ - ಇಲ್ಲಿರುವ ಅಪಿ ಎಂಬ ಶಬ್ದವು, ವಂದ್ಯತ್ವೇ ಹೇತುಸಮುಚ್ಚಯಾರ್ಥಃ - ನಮಸ್ಕಾರಕ್ಕೆ ಕಾರಣವಾದವುಗಳನ್ನು ಸಮುಚ್ಚಯ ಮಾಡುವುದಕ್ಕೋಸ್ಕರ ಇದೆ. ವಾ - ಅಥವಾ, ಅಭಿವ್ಯಾಪ್ತೌ - ಸಂಪೂರ್ಣವಾದ ವ್ಯಾಪ್ತಿ ಎಂಬರ್ಥದಲ್ಲಿದೆ. ಅಪೌರುಷೇಯತ್ವೇನ - ಯಾವುದೇ ಪುರುಷನು ರಚಿಸದೇ ಇರುವ ಕಾರಣದಿಂದ, ವಾ - ಅಥವಾ, ತನ್ಮೂಲತ್ವೇನ - ಆ ಅಪೌರುಷೇಯವಾಕ್ಯವನ್ನೇ ಮೂಲವನ್ನಾಗಿ ಇಟ್ಟುಕೊಂಡಿರುವ ಕಾರಣದಿಂದ, ಅನಾಶಂಕಿತದೋಷತ್ವಾದಿನಾ - ದೋಷದ ಶಂಕೆಯು ಇಲ್ಲದಿರುವಿಕೆ ಮುಂತಾದವುಗಳಿಂದ, ಶೋಭನಾನಿ - ಒಳ್ಳೆಯ, ವಾಕ್ಯಾನಿ - ವಾಕ್ಯಗಳಾದವುಗಳು, ವೇದಾದೀನಿ - ವೇದ ಮುಂತಾದವುಗಳು, ಚ - ಹಾಗೂ, ಬ್ರಹ್ಮಸೂತ್ರಾದೀನಿ - ಬ್ರಹ್ಮಸೂತ್ರ ಮುಂತಾದವುಗಳು, ಸುವಾಕ್ಯಾನಿ - ಸುವಾಕ್ಯಗಳು ಎಂದೆನಿಸುತ್ತವೆ. ತೈಃ ಅಖಿಲೈಃ - ಇಂತಹ ಎಲ್ಲ ವಾಕ್ಯಗಳಿಂದ, ಆಪ್ಯತಮಂ - ಆಪ್ಯತಮಂ ಎಂದರೆ ಅತಿಶಯೇನ ಪ್ರತಿಪಾದ್ಯಂ - ಮುಖ್ಯವಾಗಿ ಪ್ರತಿಪಾದಿಸಲ್ಪಡುವವನು ಎಂದರ್ಥ.

ಯದಿ - ಒಂದು ವೇಳೆ, ವ್ಯಾಚಿಖ್ಯಾಸಿತೇನ - ವ್ಯಾಖ್ಯಾನಮಾಡಲು ಇಚ್ಛಿಸಿರುವ, ಬ್ರಹ್ಮ-ಮೀಮಾಂಸಾಶಾಸ್ತ್ರೇಣ - ಬ್ರಹ್ಮಸೂತ್ರದಿಂದ, ಚ - ಮತ್ತು, ತನ್ನಿರ್ಣೇತವ್ಯಾರ್ಥೇನ - ತತ್ - ಆ ಬ್ರಹ್ಮಸೂತ್ರದಿಂದ ನಿರ್ಣೇತವ್ಯ - ನಿರ್ಣಯಿಸಲ್ಪಡಬೇಕಾದ ಅರ್ಥೇನ - ಅರ್ಥವುಳ್ಳ, ವೇದಾದಿನಾ - ವೇದಮುಂತಾದವುಗಳಿಂದ ಪ್ರತಿಪಾದ್ಯಃ - ಹೇಳಲ್ಪಡುತ್ತಾನೆ ಇತಿ - ಎಂಬ ಕಾರಣದಿಂದ, ನಾರಾಯಣಃ - ನಾರಾಯಣನು, ವಂದನೀಯಃ - ನಮಸ್ಕರಿಸಲು ಯೋಗ್ಯನು. ಹಂತ - ಆಹಾ। ತರ್ಹಿ - ಹಾಗಾದರೆ, ತತ ಏವ - ಅದೇ ಕಾರಣದಿಂದಲೇ, ಧರ್ಮಾದಿಕಂ - ಧರ್ಮಮುಂತಾದ ವಸ್ತುಗಳು, ವಾ - ಅಥವಾ, ಪ್ರಾಣಾದಿಕಂ - ಪ್ರಾಣಮುಂತಾದವರು, ವಂದನೀಯಂ ಸ್ಯಾತ್ - ನಮಸ್ಕರಿಸಲು ಯೋಗ್ಯರೆಂದಾದೀತು। ನ ಸ್ಯಾತ್ - ಆದರೆ ಹಾಗಾಗುವುದಿಲ್ಲ, ಏಕೆಂದರೆ, ತಸ್ಯ - ಆ ಧರ್ಮಪ್ರಾಣಾದಿಗಳಾದರೋ, ನಾರಾಯಣಪ್ರತಿಪತ್ತ್ಯಂಗತಯಾ - ನಾರಾಯಣನ ಜ್ಞಾನಕ್ಕೆ ಅಂಗವಾಗಿ, ವೇದಾದಿ ಏಕದೇಶಪ್ರತಿಪಾದ್ಯತ್ವಾತ್ - ವೇದ ಮುಂತಾದವುಗಳ ಒಂದು ಭಾಗದಲ್ಲಿ ಹೇಳಲ್ಪಟ್ಟಿರುವುದರಿಂದ, ಅಸ್ಯ ಪುನಃ - ಈ ನಾರಾಯಣನಿಗಾದರೋ, ಅನನ್ಯಾರ್ಥತಯಾ - ಬೇರೆಯ ವಸ್ತುವಿನ ಜ್ಞಾನಕ್ಕೋಸ್ಕರವಾಗದೆ, (ಮುಖ್ಯವಾಗಿ) ಅಖಿಲವೇದಾದಿವೇದ್ಯತ್ವಾತ್ - ಸಕಲವೇದ ಮುಂತಾದವುಗಳಿಂದ ತಿಳಿಯಲ್ಪಡುವವನಾದ್ದರಿಂದ. ತಥಾವಿಧಮೇವ ಚ - ಇಂತಹ ವಸ್ತುವೇ, ಅಧಿಕೃತಮುಚ್ಯತೇ - ಅಧಿಕೃತ ಎನಿಸುತ್ತದೆ. ಇತಿ - ಎಂಬ, ಆಶಯವತಾ - ಅಭಿಪ್ರಾಯದಿಂದ, ಆಪ್ಯತಮಮ್ ಇತಿ - ಆಪ್ಯತಮಂ ಎಂಬುದಾಗಿ, ಅಖಿಲೈಃ ಇತಿ ಚ - ಅಖಿಲೈಃ ಎಂಬುದಾಗಿಯೂ, ಉಕ್ತಂ - ಹೇಳಲ್ಪಟ್ಟಿದೆ. ಇಷ್ಟತ್ವಪ್ರದರ್ಶನಂ - ನಾರಾಯಣನಲ್ಲಿ ಇಷ್ಟತ್ವವಿದೆ ಎಂಬುದನ್ನು ತಿಳಿಸಲು, ಸದಾ ಪ್ರಿಯತಮಂ ಮಮ ಇತಿ - 'ಸದಾ ಪ್ರಿಯತಮಂ ಮಮ' ಎಂಬ ವಿಶೇಷಣವಿದೆ. ಅತ್ರಾಪಿ - ಈ ವಿಶೇಷಣದಲ್ಲಿಯೂ, ಪೂರ್ವವತ್ - ಹಿಂದಿನಂತೆ, (ಆಪ್ಯತಮ-ಮಪ್ಯಖಿಲೈಃ ಸುವಾಕ್ಯೈಃ ಎಂಬಲ್ಲಿರುವಂತೆ). ಸದಾ ಪದಸ್ಯ - ಸದಾ ಎಂಬ ಪದಕ್ಕೆ, ಚ - ಮತ್ತು ತಮಪಃ - ತಮಪ್ ಎಂಬ ಪ್ರತ್ಯಯಕ್ಕೆ, ಪ್ರಯೋಜನಂ - ಪ್ರಯೋಜನವು, ಅವಧೇಯಂ - ತಿಳಿಯಲ್ಪಡಬೇಕು.

ಸಾರ – ನಾರಾಯಣನು ಅಧಿಕೃತದೇವತೆಯೆಂದು ತಿಳಿಸಲು ಇರುವ ವಿಶೇಷಣ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬುದು. ಇಲ್ಲಿರುವ ಅಖಿಲಪದ ಹಾಗೂ ಆಪ್ಯತಮಂ ಎಂಬ ಪದದ ಕೃತ್ಯವನ್ನು ತೋರಿಸಿದ್ದಾರೆ. ನಾರಾಯಣನು ಇಷ್ಟದೇವತೆಯೆಂದು ತಿಳಿಸಲು ಇರುವ ವಿಶೇಷಣ 'ಸದಾ ಪ್ರಿಯತಮಂ ಮಮ' ಎಂಬುದು. ಇಲ್ಲಿರುವ ಸದಾಪದ ಹಾಗೂ ತಮಪ್ ಪ್ರತ್ಯಯದ ಪ್ರಯೋಜವನ್ನು ತಿಳಿಸಿದ್ದಾರೆ.

### ಸದಾಶಬ್ದ ಹಾಗೂ ತಮಪ್ ಪ್ರತ್ಯಯದ ಪ್ರಯೋಜನ

**कम्बा** – पूर्ववदिति ॥ **धर्मप्राणादिकस्य कदाचित् प्रियत्वेऽपि सदातिशयेन प्रियत्वाभावात्, सदाशब्देन तमपा च धर्मादिव्यावृत्तिलक्षणं प्रयोजनं लभ्यत इति ज्ञातव्यमित्यर्थः ।**

**ಪೂರ್ವವತ್** - ಎಂದರೆ ಧರ್ಮಪ್ರಾಣ ಮೊದಲಾದ ವಸ್ತುಗಳು ಯಾವಾಗಲಾದರೊಮ್ಮೆ ಪ್ರಿಯ-ವಾಗಿದ್ದರೂ ಕೂಡ ಯಾವಾಗಲೂ ಅತಿಶಯೇನ ಪ್ರಿಯವಾಗಿಲ್ಲವಾದ್ದರಿಂದ ಸದಾ ಎಂಬ ಶಬ್ದದಿಂದ ಹಾಗೂ ತಮಪ್ ಎಂಬ ಪ್ರತ್ಯಯದಿಂದ ಧರ್ಮಪ್ರಾಣ ಮೊದಲಾದ ವಸ್ತುಗಳ ವ್ಯಾವೃತ್ತಿಯೆಂಬ ಪ್ರಯೋಜನವು ಸಿಗುವುದು ಎಂದು ತಿಳಿಯಬೇಕು.

### ಅಭಿವ್ಯಾಪ್ತೌ ವಾ ಎಂದದ್ದೇಕೆ?

(ಪರಿಮಳ)- ಪದವರ್ಣಸ್ವರಾದಿರೂಪೇಣಾಪಿ ಪ್ರತಿಪಾದ್ಯಮ್ ಇತ್ಯಭಿಪ್ರೇತ್ಯ ಅಭಿವ್ಯಾಪ್ತೌ ವಾ ಇತ್ಯುಕ್ತಮ್ ಇತ್ಯಪ್ಯಾಹುಃ ।

'ಅಪಿಶಬ್ದಃ ವಂದ್ಯತ್ವೇ ಹೇತುಸಮುಚ್ಚಯಾರ್ಥಃ ಅಭಿವ್ಯಾಪ್ತೌ ವಾ' ಎಂದು ಸುಧಾದಲ್ಲಿ ಅಪಿ ಶಬ್ದವು ಅಭಿವ್ಯಾಪ್ತಿ ಎಂಬರ್ಥದಲ್ಲಿದೆ ಎಂದು ಹೇಳಿದ್ದಾರೆ. ಇದರ ಭಾವವನ್ನು ಹೀಗೆ ಕೆಲವರು ವರ್ಣಿಸುತ್ತಾರೆ – ಅಖಿಲ ಎಂಬ ಪದದಿಂದಲೇ ಎಲ್ಲ ಎಂಬರ್ಥ ಸಿಗುತ್ತಿದ್ದರೂ ಅಪಿ ಎಂಬ ಪದ ಒಂದೊಂದು ಪದ ಅಕ್ಷರ ಸ್ವರ ಮೊದಲಾದ ರೀತಿಯಿಂದ ನಾರಾಯಣನೇ ವೇದಗಳಿಂದ ಪ್ರತಿಪಾದ್ಯ ಎಂದು ತಿಳಿಸುತ್ತಿದೆ.

### ತಮಪ್ ಪ್ರತ್ಯಯ, ಅಖಿಲಶಬ್ದ, ಅಪಿಪದಗಳ ಕೃತ್ಯ

(ಪರಿಮಳ)- ತಮಪ್ ಪ್ರತ್ಯಯಾಖಿಲಶಬ್ದಾಪಿಪದಾನಾಂ ಕೃತ್ಯಂ ವ್ಯನಕ್ತಿ – **ಯದೀತ್ಯಾದಿನಾ** ॥ **ತಸ್ಯೇತಿ** ॥ ಧರ್ಮಾದೇಃ ಪ್ರಾಣಾದೇಶ್ಚ ಇತ್ಯರ್ಥಃ । 'ಅನ್ಯಾರ್ಥಂ ತು ಜೈಮಿನಿಃ' ಇತ್ಯಾದಿನಾ ವಕ್ಷ್ಯಮಾಣನ್ಯಾಯೇನ ನಾರಾಯಣಪ್ರತೀತ್ಯಂಗತ್ವಂ ಜ್ಞೇಯಮ್ । ಏತಾವತಾ ಧರ್ಮಾದೇ-ರಧಿಕೃತತ್ವಂ ನ ನಿರಸ್ತಮಿತಿ ವಂದ್ಯತ್ವಂ ಪ್ರಾಪ್ತಮತ ಆಹ – **ತಥಾವಿಧಮೇವೇತಿ** ॥ ಅನನ್ಯಾರ್ಥ-ತಯಾ ಅಖಿಲವೇದಾದಿವೇದ್ಯಮೇವ ಇತ್ಯರ್ಥಃ ।

'ಅಖಿಲೈರಪಿ ಸುವಾಕ್ಯೈಃ ಆಪ್ಯತಮಮ್' ಎಂಬ ಭಾಗದಲ್ಲಿರುವ ತಮಪ್ ಪ್ರತ್ಯಯ ಅಖಿಲಶಬ್ದ ಹಾಗೂ ಅಪಿಪದ ಇವುಗಳ ಕೃತ್ಯವನ್ನು ತಿಳಿಸುತ್ತಿದ್ದಾರೆ – ಯದಿ ವ್ಯಾಚಿಖ್ಯಾಸಿತೇನ ಮುಂತಾದ ಭಾಗದಿಂದ. ನಾರಾಯಣನು ಕೇವಲ ಆಪ್ಯ. ಅರ್ಥಾತ್ ಪ್ರತಿಪಾದ್ಯನಾದ್ದರಿಂದ ವಂದ್ಯನಾದರೆ

ಇದೇ ಆಪ್ಯತ್ವ ಎಂಬ ಹೇತುವಿನಿಂದ ಧರ್ಮಾದಿಗಳು ಪ್ರಾಣಾದಿಗಳೂ ವಂದನೀಯರು ಎಂದಾಗಬೇಕಾದೀತು। ಅದರ ಪರಿಹಾರಕ್ಕಾಗಿ ತಮಪ್‌ಪ್ರತ್ಯಯವಿದೆ. ಅದರ ಅರ್ಥ ಮುಖ್ಯ-ವಂದ್ಯ ಎಂದು. ಮುಖ್ಯವಂದ್ಯತ್ವವೆಂದರೆ ಅನನ್ಯಾರ್ಥತಯಾ ವೇದಾದಿವಂದ್ಯತ್ವ. ಅಂದರೆ ಬೇರೆ ಒಂದು ಪದಾರ್ಥಕ್ಕಾಗಿ ಇರದ ವಸ್ತುವು ವೇದಾದಿವಂದ್ಯವು ಎಂದರ್ಥ. ಧರ್ಮಪ್ರಾಣಾದಿ-ಗಳಾದರೋ ನಾರಾಯಣನ ಪ್ರತೀತ್ಯಂಗವಾಗಿವೆ. ಹಾಗಾಗಿ ಇವುಗಳು ಅನ್ಯಾರ್ಥ. ಇವುಗಳು ನಾರಾಯಣಪ್ರತೀತಿಗೆ ಅಂಗವಾಗಿದೆ ಎಂಬುದು 'ಅನ್ಯಾರ್ಥಂ ತು ಜೈಮಿನಿಃ' (1-4-19) ಮುಂತಾದ ಸೂತ್ರಗಳಿಂದ ಸಿದ್ಧವಾಗಿದೆ.

### ಅನ್ಯಾರ್ಥಂ ತು ಜೈಮಿನಿಃ — ಸೂತ್ರಾರ್ಥ

॥ ಓಂ ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ ಓಂ ॥ 1-4-19 ॥

ಅನ್ಯಾರ್ಥಂ । ತು । ಜೈಮಿನಿಃ । ಪ್ರಶ್ನವ್ಯಾಖ್ಯಾನಾಭ್ಯಾಂ । ಅಪಿ । ಚ । ಏವಂ । ಏಕೇ - ಇತಿ ವಿಭಾಗಃ ।

"ಪರಮಾತ್ಮಜ್ಞಾನಾರ್ಥಂ ಕರ್ಮಾದಿಕಮಪಿ ವದತೀತಿ ಜೈಮಿನಿಃ" —

ವೇದಃ ಸಮಾಕರ್ಷೇಣ (ಕರ್ಮ) ಆದಿಪದೇನ ದೇವತಾದಿಕಮಪಿ ವದತಿ, ಕರ್ಮಾದಿಕಮಪಿ ವದತಿ ಇತ್ಯನ್ವಯಃ । ಕಿಮರ್ಥಮ್? ಇತಿ ಚೇತ್ । ಅನ್ಯಾರ್ಥಮ್ — ಅನ್ಯಃ = ಭಗವಜ್ಜ್ಞಾನರೂಪಃ ಅರ್ಥಃ ಪ್ರಯೋಜನಂ ಯಸ್ಯ ತದಿತಿ । ತದಾಹ — ಪರಮಾತ್ಮಜ್ಞಾನಾರ್ಥಮಿತಿ ॥ ಜೈಮಿನಿಃ ಆಚಾರ್ಯೋ ಮನ್ಯತ ಇತ್ಯರ್ಥಃ ॥

### ಸರ್ವಮಿದಂ ವಿಜ್ಞಾತಂ ಭವತಿ

ಅನ್ಯಜ್ಞಾನಸ್ಯ ಪರಮಾತ್ಮಜ್ಞಾನಾರ್ಥತ್ವಂ ಕುತಃ? ಇತ್ಯತಃ ಪ್ರಶ್ನವ್ಯಾಖ್ಯಾನಾಭ್ಯಾಮ್ ಇತಿ ಹೇತ್ವಂಶಂ ವ್ಯಾಚಷ್ಟೇ — ಕಸ್ಮಿನ್ನಿತಿ ॥

" ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ । ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ' (ಮುಂಡಕ 1-1-3) 'ಕಥಂ ನು ಭಗವಃ ಸ ಆದೇಶೋ ಭವತೀತಿ । ಯಥಾ ಸೌಮ್ಯೈಕೇನ ಮೃತ್ಪಿಂಡೇನ' (ಛಾಂದೋಗ್ಯ 6-3) ಇತ್ಯಾದಿಪ್ರಶ್ನವ್ಯಾಖ್ಯಾನಾಭ್ಯಾಮ್"

ಹೇ ಭಗವಃ ಭಗವನ್ ಆಂಗಿರಃ । ಸರ್ವಮಿದಂ ಕರ್ಮದೇವತಾದಿಕಂ ಕಸ್ಮಿನ್ ವಸ್ತುನಿ ವಿಜ್ಞಾತೇ ಸತಿ ವಿಜ್ಞಾತಂ ಭವತಿ । ವಿಜ್ಞಾತಮಪಿ ಸಫಲಂ ಭವತಿ, ಕರ್ಮಾದಿಜ್ಞಾನಮಾತ್ರಸ್ಯ ಅಫಲತ್ವಾದಿತಿ ಶೌನಕೇನ ಪ್ರಶ್ನೇ ಕೃತೇ ಸತಿ, ಸರ್ವವಿಜ್ಞಾನಂ ಪರವಿದ್ಯಾವಿಷಯಪರಮಾತ್ಮಜ್ಞಾನೇನ ಸಫಲಂ

ಭವತಿ । ದ್ವೇ ವಿದ್ಯೇ ವೇದಿತವ್ಯೇ - ಇತ್ಯಾಂಗಿರಸೋ ವ್ಯಾಖ್ಯಾನಾದಿತಿ ಪ್ರಶ್ನವ್ಯಾಖ್ಯಾನಾಭ್ಯಾಂ ಜ್ಞಾಯತ ಇತ್ಯೇಕಾ ಶಾಖಾ ।

ತಥಾ ಶಾಖಾಂತರಂ ಚಾನುವದತಿ — ಕಥಂ ನು ಭಗವ ಇತಿ ॥ ಹೇ ಭಗವಃ ಭಗವನ್ ಉದ್ದಾಲಕ। ಸ ಆದೇಶಃ ಏಕವಿಜ್ಞಾನೇನ ಸರ್ವವಿಜ್ಞಾನರೂಪಃ? ಕಥಂ ಕೇನ ಪ್ರಕಾರೇಣ ಭವತಿ ಸ್ಯಾತ್ । ತಂ ಪ್ರಕಾರಮಹಂ ಕಥಂ ಜಾನೀಯಾಮಿತಿ ಶ್ವೇತಕೇತುನಾ ಪ್ರಶ್ನೇ ಕೃತೇ ಸತಿ, ಯಥೈಕೇನ ಮೃತ್ಪಿಂಡೇನ ಜ್ಞಾತೇನ ಸರ್ವಂ ಮೃಣ್ಮಯಃ = ಘಟಾದಿಕಂ ಜ್ಞಾತಫಲಂ ಭವತಿ । ತಥಾ ಪರಮಾತ್ಮನಿ ವಿಜ್ಞಾತೇ ಸರ್ವಂ ಕರ್ಮಾದಿಕಂ ಜ್ಞಾತಂ ಸಫಲಂ ಭವತೀತ್ಯುದ್ದಾಲಕವ್ಯಾಖ್ಯಾನಾತ್, ಅನ್ಯಜ್ಞಾನಂ ಪರಮಾತ್ಮಜ್ಞಾನಾರ್ಥಕಮಿತಿ ಜ್ಞಾಯತ ಇತಿ ಜೈಮಿನಿರಾಚಾರ್ಯೋ ಮನ್ಯತ ಇತ್ಯರ್ಥ ।

ಅಪಿ ಚ, ನ ಕೇವಲಮರ್ಥಾದೇವಮನ್ಯಜ್ಞಾನಸ್ಯ ಪರಮಾತ್ಮಜ್ಞಾನಾರ್ಥತ್ವಸಿದ್ಧಿಃ ಕಿಂತು ಸ್ಪಷ್ಟಂ ಚೈಕೇ ಶಾಖಿನಃ ಪಠಂತೀತ್ಯಾಹ — ಏವಮ್ ಇತಿ ॥ ತದ್ ವ್ಯಾಚಷ್ಟೇ - ಏವಮಿತಿ ॥

**ಋಚೋಽಕ್ಷರೇ ಪರಮೇ ವ್ಯೋಮನ್ ಎಂಬ ಮಂತ್ರದ ಅರ್ಥ ಹೇಳಿದಂತಾಯಿತು**

ಏವಮಪಿ ಚೈಕೇ ಪಠಂತಿ 'ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ' ಇತಿ ॥

'ಏಕೇಽಪಿ ಶಾಖಿನೋ ಬಹ್ವೃಚಾಃ ಏವಂ ಪಠಂತಿ । ಪಾಠಮೇವ ದರ್ಶಯತಿ — ಯ ಇತಿ ॥ ಯಃ ಅಧಿಕಾರೀ ತತ್ ಅಕ್ಷರಂ ನ ವೇದ, ಸೋಽಧಿಕಾರೀ ಋಚಾ ಕರ್ಮಾದಿಪ್ರತಿಪಾದಿಕಯಾ ಕೇವಲಯಾ ಕಿಂ ಕರಿಷ್ಯತಿ? 'ಯತಃ ಋಚಃ ಸರ್ವಾ ಅಪಿ ಕರ್ಮಾದಿಪ್ರತಿಪಾದಿಕಾಃ, ಪರಮೇ = ಅತ್ಯುತ್ತಮೇ । ವ್ಯೋಮನ್ ಸಪ್ತಮ್ಯಾಃ ಲುಕ್ । ವ್ಯೋಮ್ನಿ = ಆಕಾಶವದ್ ವ್ಯಾಪ್ತೇ । ಅಕ್ಷರೇ = ಅಕ್ಷರಶಬ್ದವಾಚ್ಯೇ । ಭಗವದ್-ಜ್ಞಾನಾರ್ಥಮೇವ ಕರ್ಮಾದಿಕಂ ವದಂತೀತಿ । ಯಸ್ಮಿನ್ = ಅಕ್ಷರೇ, ಅಧಿ = ಅಧಿಕಾಃ, ವಿಶ್ವೇ ದೇವಾಃ, ನಿಷೇದುಃ = ಸ್ಥಿತಾಃ । ತಸ್ಯೈವ ಸರ್ವದೇವಾಧಾರತ್ವಾತ್ । ಯ ಇತ್ = ಯೇ ಪುನಃ ತತ್ = ಅಕ್ಷರಂ ವಿದುಃ ತ ಇಮೇ = ಜ್ಞಾನಿನಃ ಸಮ್ಯಕ್ ಆಸತೇ = ತಿಷ್ಠಂತೀತ್ಯರ್ಥಃ ।

ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ ।
ಯಸ್ ತನ್ ನ ವೇದ ಕಿಂ ಋಚಾ ಕರಿಷ್ಯತಿ ಯ ಇತ್ ತದ್ ವಿದುಸ್ ತ ಇಮೇ ಸಂ ಆಸತೇ ॥
ಅಥರ್ವ ಪೈಪ್ಪಲಾದ ಸಂಹಿತಾ 16.69।8

ಇತಿ ಮಂತ್ರಾರ್ಥೋ ಉಕ್ತೋ ಭವತಿ ।

ಅರ್ಥ — ಘಟಾದಿವೈದಿಕಪದಗಳಿಗೆ ಹೇಗೆ ಭಗವದ್ವಾಚಕತ್ವವಿದೆಯೋ ಹಾಗೆ ಸ್ವಾಭಾವಿಕವಾಗಿ ಗಡಿಗೆ ಮುಂತಾದ ಜಗತ್ತಿನಲ್ಲಿರುವ ವಸ್ತುಗಳ ವಾಚಕತ್ವವೂ ಇದೆ. ಈ ಸಮಾಕರ್ಷಕಾರ್ಯದ

ಅನಾದಿಸಂಕೇತವು ರೂಢಿ ಎನಿಸುವುದರಿಂದ ವಾಸ್ತವವಾಚಿತ್ವವೇ ಪದಗಳಿಗೆ ಬಂತು. ಇಂಥ ಅನಾದಿಸಂಕೇತಕ್ಕೆ ಪ್ರಯೋಜನವಿದೆ. ಕರ್ಮ, ದೇವತಾ, ಮುಂತಾದುವುಗಳ ಜ್ಞಾನವು ಪರಮಾತ್ಮನ ಜ್ಞಾನಕ್ಕಾಗಿಯೇ ಇರತಕ್ಕದ್ದು. (ಕರ್ಮಾದಿಗಳನ್ನು), ದೇವತೆಗಳನ್ನು, ಜಗತ್ತಿನ ವಸ್ತು-ಗಳನ್ನು ತಿಳಿದರೆ, ಅವುಗಳ ಫಲದಾತೃ, ಅವುಗಳ ಸತ್ತಾನಿಯಾಮಕ, ಅವುಗಳ ಯೋಜಕ, ಅವುಗಳ ಅಸ್ವಾತಂತ್ರ್ಯ ಇದೆಲ್ಲವನ್ನೂ ತಿಳಿದು ಅಂತರ್ಗತನಾದ ಪರಮಾತ್ಮನನ್ನು ತಿಳಿದಮೇಲೆಯೇ ಅವುಗಳ ಸಂಪೂರ್ಣ ಯಥಾರ್ಥಜ್ಞಾನವಾಗುವುದರಿಂದ, ಅವುಗಳನ್ನು ತಿಳಿಯುವಾಗ, ಅವುಗಳ ಅಪೂರ್ಣತೆ, ಅಲ್ಪತ್ವ, ಅಸ್ವರಸಸತ್ತಾಕತ್ವ, ಅನಿತ್ಯತ್ವಾದಿಗಳೂ ತಿಳಿಯಲ್ಪಟ್ಟು ವೈರಾಗ್ಯ ಹುಟ್ಟಿ ಅವುಗಳ ಕಾರಣಭೂತ, ನಿಯಾಮಕನಾದ, ಬ್ರಹ್ಮಜ್ಞಾನವು ಬಂದು ಹೋಗುತ್ತೆ. (ವಿವೇಕದಿಂದ ಹುಡುಕುವ ಮುಮುಕ್ಷುವಿಗೆ) ಕರ್ಮಾದ್ಯನುಷ್ಠಾನದ ಪುಣ್ಯದಿಂದ ಕಾಮ್ಯಕರ್ಮದಲ್ಲಿ ಉಪೇಕ್ಷೆ ಬಂದು, ನಿಷ್ಕಾಮಕರ್ಮದಿಂದ ಅಂತಃಕರಣ ಶುದ್ಧವಾಗಿ, ದೇವತಾ ಪ್ರಸಾದದಿಂದ ಸೂಕ್ಷ್ಮವಿಚಾರ ಮಾಡಿ, ಸರ್ವವಸ್ತುನಿಯಾಮಕ, ಸರ್ವತಾರತಮ್ಯಾಂತಗ ಪರಮಾತ್ಮ ಜ್ಞಾನವು ಸ್ವಾಭಾವಿಕವಾಗಿ ಆಗುತ್ತೆ. ಆದ್ದರಿಂದ ಸರ್ವಪದಗಳೂ ಜಗತ್ತಿನ ವಸ್ತುಗಳನ್ನು ಕೃಪ್ತವಾಗಿ ಸ್ವಾಭಾವಿಕವಾಗಿ ಬೋಧಿಸುವುವು. ಪರಮಾತ್ಮನನ್ನು ಪರಮಮುಖ್ಯವೃತ್ತಿಯಿಂದ ಬೋಧಿಸುವುವು. ಮುಖ್ಯ-ಜ್ಞೇಯತ್ವವು ಪರಮಾತ್ಮನಿಗೇ ಇದೆ. ಹಾಗೆ ಪರಮಾತ್ಮನನ್ನು ತಿಳಿಯಲು ಅಮುಖ್ಯಜ್ಞೇಯತ್ವವು ಜಗತ್ತಿಗೂ ಇದೆ. ಜಡಕ್ಕೆ ನಿಯಾಮಕನು ಎಂದು ಹರಿಯನ್ನು ತಿಳಿಯಲು, ಜಡ ತಿಳಿಯಬೇಕಷ್ಟೆ। ಜೀವನಿಯಾಮಕನು, ತಾರತಮ್ಯಾಂತಗನು, ಅವನ ಅಪೇಕ್ಷಯಾ ಕರ್ಮಾದಿಗಳು ಕುತ್ಸಿತವು ಎಂದು ಯಥಾರ್ಥ ವಿಷ್ಣುತತ್ವಜ್ಞಾನವಾಗಬೇಕಾದರೆ, ಜಗತ್ತಿನ ಜ್ಞಾನವೂ ಬೇಕು. ಆದ್ದರಿಂದ ಸಮಾಕರ್ಷಕ್ಕೆ ಪ್ರಯೋಜನವುಂಟು. ಅನಾದಿಸತ್ಯ-ನಿತ್ಯಸಂಕೇತವು ಸ್ವಾಭಾವಿಕಶಕ್ತಿಯನ್ನು ಶಬ್ದಗಳಲ್ಲಿ ತುಂಬುವುದು. ಇದು ಜೈಮಿನಿ ಆಚಾರ್ಯರ ಉಪಪಾದನೆ.

ವೇದವು ಪರಮಾತ್ಮಜ್ಞಾನಾರ್ಥವಾಗಿಯೇ ಜಡಜೀವಾದಿ ಜಗತ್ ಜ್ಞಾನವನ್ನು ಹುಟ್ಟಿಸುತ್ತೆ ಎಂಬಲ್ಲಿ ಪ್ರಮಾಣವೇನು? ಎಂದರೆ ಅಥರ್ವಣ ಪ್ರಶ್ನೋತ್ತರಗಳೇ ಪ್ರಮಾಣ 'ಕಸ್ಮಿನ್ ಉ ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ' ಎಂಬ ಶೌನಕರ ಪ್ರಶ್ನೆಗೆ ಅಂಗಿರಸರು 'ದ್ವೇ ವಿದ್ಯೇ ವೇದಿತವ್ಯೇ' ಎಂದು ಹೇಳಿ ಪರವಿದ್ಯೆ, ಅಪರವಿದ್ಯೆ ಎಂಬ ಎರಡು ವಿದ್ಯಾ ಸ್ವರೂಪವನ್ನು ವಿವರಿಸಿದ್ದಾರೆ. ಅಪರವಿದ್ಯೆಯು ಜಗತ್ತಿನ ಸ್ವರೂಪವನ್ನು ಬೋಧಿಸಿ ಪರಮಾತ್ಮಜ್ಞಾನವಾದ ಪರವಿದ್ಯೆಗೆ ಕಾರಣವಾಗುತ್ತದೆ. ಅಂತಃಕರಣಶುದ್ಧಿ, ಜಗತ್ಸ್ವರೂಪಜ್ಞಾನ, ಜಗದಧೀನತ್ವ ಜ್ಞಾನ-ದ್ವಾರಾ ಪರಮಾತ್ಮನ ಜಗನ್ನಿಯಾಮಕತ್ವಾದಿರೂಪೇಣ ವಿಚಾರ ಇವೆಲ್ಲಾ ನಡೆದು ಬ್ರಹ್ಮ-ಜ್ಞಾನಬರುತ್ತೆ ಎಂದೂ ಸರ್ವವಿಲಕ್ಷಣತಯಾ ಬ್ರಹ್ಮನನ್ನು ತಿಳಿಯಬೇಕಾದರೆ ಪ್ರತಿಯೋಗಿಯಾದ 'ಸರ್ವವನ್ನೂ ತಿಳಿಯಬೇಕಷ್ಟೆ। ಎಂದೂ ಸರ್ವಾಧಾರಕ ಸರ್ಜಕ ಎಂದು ಮುಂತಾಗಿ

ತಿಳಿಯಬೇಕಾದರೆ ಸರ್ವವನ್ನೂ ಯಥಾವಸ್ಥಿತವಾಗಿ ಅವೇನು? ಎಷ್ಟು? ಮುಂತಾಗಿ ತಿಳಿಯಬೇಕಷ್ಟೆ ಎಂದೂ ಸರ್ವವನ್ನು ಪರಿತ್ಯಾಗಮಾಡಿ, ಬ್ರಹ್ಮನನ್ನು ಪ್ರೀತಿಸಬೇಕಾದರೆ ಸರ್ವದರ ಹೇಯತಾ ಜ್ಞಾನವಾಗಬೇಕಷ್ಟೆ। ಎಂದೂ, ತದಕ್ಷರ, ಅದ್ರೇಶ್ಯಂ, ಭೂತಯೋನಿಂ, ಯಥೋರ್ಣನಾಭಿಃ ಮುಂತಾದ ರೀತಿಯಲ್ಲಿ ಉಪಪಾದಿಸಿ ಸರಿಯಾಗಿ ಕರ್ಮಮಾಡಿ ಎಂದೂ ವಿಧಿಸಿದ್ದಾರೆ. ಹೋಮಕೆಟ್ಟರೆ ನರಕ ಆಗುತ್ತೆ ಎಂದು ಹೇಳಿದ್ದಾರೆ. ಒಳ್ಳೆ ಕರ್ಮಮಾಡಿ, ಶುದ್ಧಾಂತರಂಗ ಹೊಂದಿ, ನಿರ್ವೇದ ಹೊಂದಿ, ಶ್ರೋತ್ರೀಯರಲ್ಲಿ ವಿಚಾರ ಮಾಡಿ, ಜಗಜ್ಜನ್ಮಾದಿಕರ್ತೃತ್ವವನ್ನೂ, ಷೋಡಶಕಲಾವರ್ಜಿತ, ಕಲಾದೇವತೆಗಳ ದೆಸೆಯಿಂದ ಉತ್ತಮನಾದವನನ್ನು, ಸರ್ವ ಪದವಾಚ್ಯವನ್ನು ತಿಳಿಯರಿ ಎಂದೂ ಹೇಳಿದ್ದಾರೆ.ಇದರಿಂದ ವೈದಿಕ ಪದಗಳು ಪರಮಾತ್ಮಭಿನ್ನ ಜಗದ್ವಾಚಕವೂ ಹೌದು ಎಂದು ಸಿದ್ಧವಾಗುತ್ತೆ. ಆದರೆ ವೇದವು ತನ್ನ ಮಹಾತಾತ್ಪರ್ಯಕ್ಕೆ ಅವಿರುದ್ಧವಾಗಿ ಜಗದ್ವಾಚಕವಾಗಿದೆ ಎಂದರೆ ಬ್ರಹ್ಮಜ್ಞಾನಾರ್ಥವಾಗಿ ಸಾಧಕರಿಗೆ ಜಗತ್ತಿನ ಪದಾರ್ಥಗಳನ್ನು ಕರ್ಮಾದಿಗಳನ್ನು ದೇವತೆಗಳನ್ನು ಎಲ್ಲವನ್ನೂ ತತ್ತದ್ವಾಚಕಪದಗಳಿಂದ ಬೋಧಿಸುವುದು. ಅಪರವಿದ್ಯೆಯು ಪರವಿದ್ಯೆಗೆ ಸೋಪಾನ.

## ಪ್ರತಿಜ್ಞಾಸಿದ್ಧೇರ್ಲಿಂಗಮ್ .... - ಸೂತ್ರಾರ್ಥ

** ಓಂ ॥ ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ॥ ಓಂ (1/3/21)

ಪ್ರತಿಜ್ಞಾಸಿದ್ಧೇಃ । ಲಿಂಗಮ್ । ಆಶ್ಮರಥ್ಯಃ । - ಇತಿ ವಿಭಾಗಃ ।

'ನಾನ್ಯಃ ಪಂಥಾ ಅಯನಾಯ ವಿದ್ಯತ' ಇತಿ ಪ್ರತಿಜ್ಞಾಸಿದ್ಧೇರ್ಲಿಂಗತ್ವೇನ ಕರ್ಮಾದಿಕಮುಚ್ಯತ ಇತ್ಯಾಶ್ಮರಥ್ಯಃ । ಯಸ್ಮಾದೇವಮನಿತ್ಯಫಲಮನ್ಯತ್ ತಸ್ಮಾನ್ನಾನ್ಯಃ ಪಂಥಾ ಇತಿ ॥

ನಾನ್ಯಃ ಪಂಥಾ ಅಯನಾಯ ವಿದ್ಯತೇ – ಇತಿ ಬ್ರಹ್ಮಜ್ಞಾನಮೇವ ಮೋಕ್ಷಸಾಧನಂ ನಾನ್ಯದಿತಿ ಪ್ರತಿಜ್ಞಾತೇ ಸತಿ, ಕುತೋಽಯಮರ್ಥಃ? ಇತಿ ಹೇತ್ವಾಕಾಂಕ್ಷಾಯಾಂ ಪ್ರತಿಜ್ಞಾಸಿದ್ಧ್ಯರ್ಥಂ ಲಿಂಗಂ ಲಿಂಗತ್ವೇನ ಅಭಿಮತಂ ಕರ್ಮಾದಿಕಂ ಸವಿಸ್ತರಮ್ ಉಚ್ಯತೇ । ಅತೋಽನ್ಯತ್ರ ಕರ್ಮಾದೌ ಸಮಾಕರ್ಷೋ ಯುಕ್ತ ಇತ್ಯರ್ಥಃ ।

ನನು ಕಥಂ ಕರ್ಮಾದಿಕಮುಕ್ತಪ್ರತಿಜ್ಞಾಯಾಂ ಹೇತುಃ? ಇತ್ಯತಃ ಸೂತ್ರಂ ಪ್ರಕಾರಾಂತರೇಣಾಧ್ಯಾಹೃತ್ಯಾಕಾಂಕ್ಷಾಪೂರ್ವಂ ಯೋಜಯತಿ — ಯಸ್ಮಾದಿತಿ ॥ ಯಸ್ಮಾತ್ ಕಾರಣಾತ್ ಅನ್ಯತ್ ಜ್ಞಾನಾದತಿರಿಕ್ತಂ ಕರ್ಮಾದಿ ಏವಂ ಸಪರಿಕರಂ ಕರ್ಮಾದ್ಯುಕ್ತ್ವಾ 'ಅಮೃತೋ ವಾವ ಸೋಮಪೋ ಭವತಿ । ಯಾವದಿಂದ್ರೋ ಯಾವನ್ಮನುರ್ಯಾವದಾದಿತ್ಯಃ' ಇತ್ಯಾದಿಕ್ರಮೇಣ ಅನಿತ್ಯಫಲಮ್, ತಸ್ಮಾತ್ 'ನಾನ್ಯಃ ಪಂಥಾ' ಇತಿ ಪ್ರತಿಜ್ಞಾತಾರ್ಥಸಿದ್ಧಿಃ ಅತಃ ಸಮಾಕರ್ಷ ಇತಿ ಭಾವಃ ।

ತಥಾಚ ಅಯಂ ಸೂತ್ರಾರ್ಥಃ — ಲಿಂಗಮ್ ಅನ್ಯತ್ ಕರ್ಮಾದಿಕಮ್ ಅನಿತ್ಯಫಲಮ್, ಮೋಕ್ಷಶ್ಚ ದುಃಖಾಸಂಭಿನ್ನನಿತ್ಯಸುಖರೂಪಃ, ಅತೋ 'ನಾನ್ಯಃ ಪಂಥಾ' ಇತಿ ಪ್ರತಿಜ್ಞಾಸಿದ್ಧೇಃ ಪ್ರತಿಜ್ಞಾತಾರ್ಥ-ಸಾಧನಸ್ಯ ಲಿಂಗಮಿತಿ । ನನು ಕುತಃ ಪ್ರಮಾಣಾದಯಮರ್ಥೋಽವಗಮ್ಯತೇ? ಇತ್ಯತಃ ಪ್ರತಿಜ್ಞಾಸಿದ್ಧೇಃ ಇತಿ ಸೂತ್ರಖಂಡಂ ಪ್ರಕಾರಾಂತರೇಣ ಯೋಜನೀಯಮ್ । ಪ್ರತಿಜ್ಞಾಯಾಃ ಪ್ರತಿಜ್ಞಾತಾರ್ಥಸ್ಯ ಸಿದ್ಧಿರ್ಯಥಾ ಸಾ ತಥಾ, ತಸ್ಯಾಃ ಶ್ರುತೇರಿತ್ಯರ್ಥಂ ಮತ್ವಾ ಟೀಕಾಯಾಂ ಶ್ರುತಿರುದಾಹೃತಾ — ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್' ಇತ್ಯಾದಿಶ್ರುತೇರಿತಿ ॥

ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ ತಮಸಃ ಪರಸ್ತಾತ್ ।
ತಮೇವ ವಿದಿತ್ವಾ ಅತಿಮೃತ್ಯುಮೇತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ ॥

— ಶ್ವೇತಾಶ್ವತರಉಪನಿಷತ್ತು 3.8 ॥

ಸೂತ್ರಾರ್ಥ — ಕರ್ಮಾದಿಬೋಧಕವಾಕ್ಯಗಳು ಹೇಗೆ ಬ್ರಹ್ಮಜ್ಞಾನಕ್ಕೆ ಉಪಯುಕ್ತವಾಗುವವು ಎಂದರೆ ಹೇಳುತ್ತಾರೆ: ಓಂ ॥ ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ॥ ಓಂ ಅರ್ಥ : 'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಎಂಬ ಪ್ರತಿಜ್ಞಾಸಿದ್ಧಿಗೆ ವೈದಿಕಪದಗಳಿಗೆ ಸ್ವಾಭಾವಿಕವಾಗಿಯೇ ಜಗದ್ವಾಚಕತ್ವವು ಲಿಂಗಂ-ಯುಕ್ತಿ ಅಥವಾ ಹೇತುವಾಗಿದೆ ಎಂದು ಆಶ್ಮರಥ್ಯರು ಹೇಳುತ್ತಾರೆ. ಜ್ಞಾನವೇ ಮೋಕ್ಷಕಾರಣವೆಂದು ಶ್ರುತಿ ಪ್ರತಿಜ್ಞೆಮಾಡಿದೆ. ಅದಕ್ಕೆ ಉಪಪಾದಕವಾಗಿ ಸ್ವರ್ಗಪ್ರಾಪಕ-ಕರ್ಮಗಳೆಲ್ಲಾ ಅನಿತ್ಯಫಲಕ, ತುಚ್ಛಫಲಕವೆಂದು ತೋರಿಸಲು ಹರಿಯು ಸರ್ವದೇವತೆಗಳಿಗೂ ಸಾಧ್ಯವಾಗದ ಮೋಕ್ಷಫಲವನ್ನು ಕೊಡಲು ಸಮರ್ಥನೆಂದೂ ತೋರಿಸಲು ಅವುಗಳ ಸ್ವರೂಪವನ್ನು ತತ್ತದ್ವಾಚಕಪದಗಳಿಂದ ವೇದವು ಹೇಳುತ್ತದೆ ಎಂದರ್ಥ.

## ಉತ್ಕ್ರಮಿಷ್ಯತ ಏವಂಭಾವಾತ್ - ಸೂತ್ರಾರ್ಥ

** ಓಂ ॥ ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ॥ ಓಂ (1/3/22)

ಉತ್ಕ್ರಮಿಷ್ಯತಃ । ಏವಂಭಾವಾತ್ । ಇತಿ ॥ ಔಡುಲೋಮಿಃ – ಇತಿ ವಿಭಾಗಃ ।

(ಭಾ) ಉತ್ಕ್ರಮಿಷ್ಯತೋ ಮುಮುಕ್ಷೋಃ ಕರ್ಮಾದಿನಾ ಭಾವ್ಯಂ ಸಾಧನಸಾಧನತ್ವೇನ ।
ಅತಸ್ತದ್ವಕ್ತಿ ಇತ್ಯೌಡುಲೋಮಿರ್ಮನ್ಯತೇ ॥ 22 ॥

"ಉತ್ಕ್ರಮಿಷ್ಯತಃ" ಬಂಧಾದ್ಯುತ್ಕ್ರಾಮಮಿಚ್ಛಂತಃ ಮುಮುಕ್ಷೋಃ ಇತಿ ಯಾವತ್, ಭಗವ-ಜ್ಜ್ಞಾನಮೇವ ಮೋಕ್ಷಸಾಧನಮಿತ್ಯುಕ್ತಮ್ । ತಚ್ಚ ಜ್ಞಾನಂ ಕೇನ ಸಾಧನೇನ ಸಿದ್ಧ್ಯತಿ? ಇತ್ಯಪೇಕ್ಷಾಯಾಂ ಕರ್ಮಾದಿಕಂ ತತ್ಸಾಧನತ್ವೇನೋಚ್ಯತೇ । ತಥಾ ಚಾಯಂ ಸೂತ್ರಾರ್ಥಃ —

ಉತ್ಕ್ರಮಿಷ್ಯತಃ ಜ್ಞಾನೇನ ಭಾವಾತ್ = ಸದ್ಭಾವಾತ್ । ಕುತ ಏವಮ್? ಇತ್ಯತಃ ಪುನಃ ಏವಂಭಾವಾತ್ ಇತಿ ಸೂತ್ರಖಂಡಮ್ । ತದರ್ಥಸ್ತು - ಏವಂ = ರೋಚನಾರ್ಥತ್ವೇನ ಫಲಶ್ರುತಿಪ್ರತಿಪಾದಕವಚನಸ್ಯ ಭಾವಾತ್ = ಸದ್ಭಾವಾದಿತಿ ॥ ತದ್ವಚನಮುದಾಹೃತಂ ಟೀಕಾಯಾಂ - ರೋಚನಾರ್ಥಂ ಫಲಶ್ರುತಿಃ - ಇತಿ ।

ವೇದೋಕ್ತಮೇವ ಕುರ್ವಾಣೋ ನಿಃಸಂಗೋಽರ್ಪಿತಮೀಶ್ವರೇ ।
ನೈಷ್ಕರ್ಮ್ಯಂ ಲಭತೇ ಸಿದ್ಧಿಂ ರೋಚನಾರ್ಥಾ(ರ್ಥಂ) ಫಲಶ್ರುತಿಃ ॥ ಭಾಗ. 11.3.46..

** ಇನ್ನೊಂದು ವಿವಕ್ಷೆಯಿಂದಲೂ ಕರ್ಮಾದಿವಾಚಕತ್ವವು ಬೋಧಕತ್ವವು ವೇದಕ್ಕಿದೆ ಎಂದು ಗೊತ್ತಾಗುತ್ತೆ. ಓಂ ॥ ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ ॥ ಓಂ ಅರ್ಥಃ ಉತ್ಕ್ರಾಂತಿ ಹೊಂದಿ ಮೋಕ್ಷಸ್ಥಾನಕ್ಕೆ ಹೋಗಬೇಕೆಂದಿರುವ ಮುಮುಕ್ಷುವಿಗೆ ಜ್ಞಾನವು ಹೇಗೆ ಅಂತರಂಗ-ಸಾಧನೆಯಾಗಿ ಆವಶ್ಯಕವೋ ಹಾಗೇ ಅಂತಃಕರಣಶುದ್ಧಿಸಂಪಾದಕವಾದ ಕರ್ಮಾದಿಗಳಿಗೂ ಪರಂಪರಯಾ ಸಾಧನತ್ವವು ಅಥವಾ ಅಪರೋಕ್ಷಜ್ಞಾನಸಾಧನತ್ವವೂ ಕರ್ಮಾದಿಗಳಿಗೂ ಇರುವುದರಿಂದ (ಅವುಗಳಿಗೂ ಸಂಪಾದ್ಯತ್ವವು ಇರುವುದರಿಂದ) ಅವುಗಳಿಗೂ ಆವಶ್ಯಕವು. ಆದ್ದರಿಂದ ವೈದಿಕ ಪದಗಳು ಕರ್ಮಾದಿಗಳಿಗೂ ವಾಚಕಗಳು ಎಂದು ಔಡುಲೋಮಿ ಆಚಾರ್ಯರು ತಿಳಿಸುತ್ತಾರೆ. (ಇದರಿಂದ ಕರ್ಮಾದಿಗಳಿಗೂ, ನಿಖಿಲಜಗತ್ಸೃಷ್ಟಿಗೂ, ನಿಖಿಲಜೀವರ ಕಾರ್ಯಕ್ಕೂ, ಬ್ರಹ್ಮಜ್ಞಾನವೇ ಫಲವಾಗಿರಬೇಕು ಉದ್ದೇಶ್ಯವಾಗಿರಬೇಕು ಎಂದಾಯಿತು. ಸ್ವರ್ಗಾದಿಗಳು ಫಲ-ವೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಜೀವನಲ್ಲಿ ಪ್ರವೃತ್ತಿಹುಟ್ಟಿಸುವುದಕ್ಕಾಗಿ ರೋಚನಾರ್ಥಂ ಫಲಶ್ರುತಿಃ ಎಂದಿದೆ. ಮಹಾತಾತ್ಪರ್ಯವಿಲ್ಲ.

## ಅವಸ್ಥಿತೇರಿತಿ ಕಾಶಕೃತ್ಸ್ನಃ — ಸೂತ್ರಾರ್ಥ

ಓಂ ॥ ಅವಸ್ಥಿತೇರಿತಿ ಕಾಶಕೃತ್ಸ್ನಃ ॥ ಓಂ (1/3/23)

ಅವಸ್ಥಿತೇಃ । ಇತಿ । ಕಾಶಕೃತ್ಸ್ನಃ - ಇತಿ ವಿಭಾಗಃ

ರೀತ್ಯಂತರೇಣ ಕರ್ಮಾದಿವಚನಸ್ಯ ಭಗವಜ್ಞಾನೋಪಯೋಗಂ ದರ್ಶಯತ್ಸೂತ್ರಮುಪನ್ಯಸ್ಯ ವ್ಯಾಚಷ್ಟೇ — ಅವಸ್ಥಿತೇರಿತಿ ॥

(ಭಾ.) ಸರ್ವಂ ಪರಮಾತ್ಮನ್ಯವಸ್ಥಿತಮಿತಿ ವಕ್ತುಂ ತದ್ವಚನಮಿತಿ ಕಾಶಕೃತ್ಸ್ನಃ ।

ಮುಮುಕ್ಷೋಃ ಕರ್ಮಣಾ ಶುದ್ಧಾಂತಃಕರಣಸ್ಯ ಕರ್ಮಾದ್ಯಖಿಲಪದಾರ್ಥಾಧಾರತ್ವೇನ 'ಏಷ ಸೇತುರ್ವಿಧಾ(ಧ)ರಣಃ' ಇತ್ಯಾದೌ ವಕ್ತುಮಾಧೇಯಭೂತಂ ಕರ್ಮಾದಿಕಂ ಭಗವಜ್ಞಾನಸಾಕ್ಷಾತ್ ಸಾಧನಭೂತಂ ವೇದೇನೋಚ್ಯತ ಇತಿ ಕಾಶಕೃತ್ಸ್ನಾಚಾರ್ಯಾ ಮನ್ಯಂತ ಇತಿ ಭಾವಃ ।

ಏತಮೇವಾರ್ಥಮಾಹ — ಸರ್ವಮಿತಿ ॥ ಸರ್ವಂ ಕರ್ಮಾದಿಕಂ ಪರಮಾತ್ಮನ್ಯವಸ್ಥಿತಮಿತಿ ವಕ್ತುಮ್ । ತಸ್ಯ ಕರ್ಮಾದೇರ್ವಚನಂ 'ವೇದೇನ' ಇತಿ ಶೇಷಃ ।

"ಏಷ ತ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಚಿಕಿತ್ಸೋಽವಿಪಾಶಃ ಸತ್ಯಸಂಕಲ್ಪಃ ಸತ್ಯಕಾಮಃ । ಏಷ ಪರಮೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣಃ । ಏಷ ಹಿ ಖಲು ಆತ್ಮಾ ಈಶಾನಃ ಶಂಭುರ್ಭವೋ ರುದ್ರಃ ಪ್ರಜಾಪತಿರ್ವಿಶ್ವ-ಸೃಕ್ ಹಿರಣ್ಯಗರ್ಭಃ ಸತ್ಯಂ ಪ್ರಾಣೋ ಹಂಸಃ ಶಸ್ತಾಚ್ಯುತೋ ವಿಷ್ಣುರ್ನಾರಾಯಣಃ ।" - ಮೈತ್ರಾ-ಯಣ್ಯುಪನಿಷತ್ ಆರ. 7।7

— ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ ( (ಬೃಹದಾರಣ್ಯಕ ಶಾರೀರಬ್ರಾಹ್ಮಣ - 22)

"ವಿಧರಣಃ ವಿಧಾರಣಸಮರ್ಥಃ ಸೇತುರಾಶ್ರಯಃ ಇತಿ । ತದಾಹ ಸೂತ್ರೇ 'ಧೃತೇಶ್ಚ ಮಹಿಮ್ನೋಽ-ಸ್ಯಾಸ್ಮಿನ್ನುಪಲಬ್ಧೇಃ' (ಬ್ರಸೂ. 1-3-16) - (ಖಂಡಾರ್ಥಃ)

** ಇನ್ನೊಂದು ರೀತಿಯಲ್ಲೂ ವೇದದ ಪದಗಳು ಬ್ರಹ್ಮಭಿನ್ನಕರ್ಮಾದಿವಾಚಕವೆಂದು ಸಿದ್ಧಿಸುತ್ತೆ. ಓಂ ॥ ಅವಸ್ಥಿತೇರಿತಿ ಕಾಶಕೃತ್ಸ್ನಃ ॥ ಓಂ ಅರ್ಥಃ 'ಏಷಸೇತುರ್ವಿಧರಣಂ, ಸರ್ವಕಾರ್ಮಾ, ಸರ್ವಕಾಮಃ ಎಂದು ಬ್ರಹ್ಮನು ಸರ್ವಜಗದಾಧಾರನು, ಸರ್ವಚೇಷ್ಟಕನು, ಸರ್ವಕಾಮಪ್ರವರ್ತಕನು, ಸರ್ವ- ಜಗಜ್ಜನಕನು ಮುಂತಾದ ರೀತಿಯಲ್ಲಿ ಬ್ರಹ್ಮನನ್ನು ತಿಳಿಯಬೇಕಾದರೆ ಆಧೇಯವೂ, ಪ್ರೇರ್ಯವೂ, ಪಾಲ್ಯವೂ, ಅನುಗ್ರಾಹ್ಯವೂ, ಸಂಹಾರ್ಯವೂ, ಆದ ನಿಖಿಲಜಗತ್ತನ್ನು ಆತನಲ್ಲಿ ಸಮರ್ಪಣೀಯವಾದ ನಿಖಿಲಕರ್ಮವನ್ನೂ ತತ್ತದ್ವಾಚಕ ಪದಗಳಿಂದ ಹೇಳುತ್ತದೆ. ಎಂದು ಕಾಶಕೃತ್ಸ್ನಾಚಾರ್ಯರು ಹೇಳುತ್ತಾರೆ. ಇವೆಲ್ಲಾ ಬಾದರಾಯಣರ ಮಾತುಗಳೇ ಆದರೂ ಅಧಿಕಾರಭೇದದಿಂದ ಆ ಶಿಷ್ಯರು ತಮ್ಮ ಶಿಷ್ಯರುಗಳಿಗೆ ಒಂದೊಂದು ವಿವಕ್ಷೆಯನ್ನು ಹೆಚ್ಚಾಗಿ ಉಪದೇಶ ಮಾಡಿದ್ದಾರೆ. ಇದರಿಂದ ಅಧಿಕಾರಿಗಳ ತಾರತಮ್ಯ ಗೊತ್ತಾಗುತ್ತೆ.

(1)ಜೈಮಿನಿಯ ಮತವು ಪದಸಮನ್ವಯಕ್ಕೆ ಶಕ್ತಿ ಇಲ್ಲದ ಅಧಿಕಾರಿಕ ವಿಷಯವು. (2) ಅದರಲ್ಲೂ ಅಪರೋಕ್ಷಜ್ಞಾನ ಹುಟ್ಟುವುದಕ್ಕಿಂತ ಮೊದಲು ವೈರಾಗ್ಯಸಿದ್ಧಿಗಾಗಿ ಕರ್ಮಾನುಷ್ಠಾತೃವಿಷಯಕವಾಗಿ ಆಶ್ಮರಥ್ಯರ ಉಪದೇಶವಾಗಿದೆ. (3) ವಿರಕ್ತರಾಗಿ ಜ್ಞಾನಸಾಧಕರಾಗಿರುವ ವಿಷಯಕವಾಗಿ ಔಡುಲೋಮಿಗಳು ಬೋಧಿಸಿದ್ದಾರೆ. (3) ದೇವರನ್ನು ನೋಡುವ ಅರ್ಜುನಾದಿ ಬ್ರಹ್ಮಜ್ಞಾನಿಗಳೂ ಪರಬ್ರಹ್ಮನನ್ನು ಜಗದ್ವಿಶಿಷ್ಟವಾಗಿ ತಿಳಿಯುವರಾದ್ದರಿಂದ ಅಂಥ ಅಪರೋಕ್ಷವಿಷಯಕವಾಗಿ ಕಾಶಕೃತ್ಸ್ನರು ಉಪದೇಶಮಾಡಿದ್ದಾರೆ. ಹೀಗೆ ಅಧಿಕಾರಿ ತಾರತಮ್ಯವು ಉಪದೇಶಬಾಹುಳ್ಯದಿಂದ ವ್ಯಕ್ತವಾಗುತ್ತೆ. (ಪರಬ್ರಹ್ಮನನ್ನು ಜಗದ್ವಿಶಿಷ್ಟವಾಗಿ ತಿಳಿಯುವರಾದ್ದರಿಂದ ಅಂಥ ಅಪರೋಕ್ಷಜ್ಞಾನಿ-

ವಿಷಯಕವಾಗಿ ಕಾಶಕೃತ್ಸ್ನರು ಉಪದೇಶಮಾಡಿದ್ದಾರೆ) ಏವಂ ಚ ವಾಕ್ಯಾನ್ವಯಪಕ್ಷವೂ ಪದಸಮನ್ವಯ ಪಕ್ಷದಂತೆ ಪ್ರಾಮಾಣಿಕವಾಗಿದೆ. ವೇದದ ಮಹಾತಾತ್ಪರ್ಯಕ್ಕೆ ಅನುಗುಣವಾಗಿದೆ ಎಂದು ಸಿದ್ಧಾಂತ ತಿಳಿಯಬೇಕು.

## ಅಖಿಲೈರಿತಿ ಚೋಕ್ತಮ್ ಎಂಬಲ್ಲಿ ಅಖಿಲೈರಪಿ ಚೋಕ್ತಂ ಎಂದು ಅರ್ಥೈಸಬೇಕು

(ಪರಿಮಳ)- **ಅಖಿಲೈರಿತಿ ಚೋಕ್ತಮಿತಿ ॥** ಅಖಿಲೈರಪೀತಿ ಚೋಕ್ತಮ್ ಇತ್ಯಭಿವ್ಯಾಪ್ತ್ಯರ್ಥಕ-ಮಪಿಪದಂ ಚ ಧ್ಯೇಯಮ್ । ಅನ್ಯಥಾ ಧರ್ಮಾದೇರಖಿಲವೇದಾಪ್ರತಿಪಾದ್ಯತ್ವೇಽಪಿ 'ತಾ ವಾ ಏತಾಃ ಸರ್ವಾ ಋಚಃ' ಇತ್ಯೈತರೇಯಭಾಷ್ಯೇ ಸರ್ವವೇದಾಭಿಧೇಯತ್ವಂ ವಾಯೋರಷ್ಯ-ಸ್ತೀತ್ಯುಕ್ತ್ಯಾ ಪ್ರಾಣಸ್ಯಾಪಿ ಅಖಿಲವೇದಪ್ರತಿಪಾದ್ಯತ್ವಾತ್ ಅಖಿಲಪದಂ ತದ್ವ್ಯಾವರ್ತಕಂ ನ ಸ್ಯಾದ್ ವ್ಯರ್ಥಂ ಚಾಭಿವ್ಯಾಪ್ತ್ಯರ್ಥಕಮಪಿಪದಂ ಸ್ಯಾತ್ । ತಸ್ಮಿನ್ ಸತಿ ತು 'ಪೂರ್ವ-ಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ' ಇತಿ ಋಗ್ಭಾಷ್ಯೋಕ್ತದಿಶಾ 'ಮಂತ್ರಾದಿವದ್ ವಾ' ಇತ್ಯತ್ರೋಕ್ತನ್ಯಾಯೇನ ಚ ವಿಷ್ಣುಸೂಕ್ತಪುರುಷಸೂಕ್ತಲಕ್ಷ್ಮೀಸೂಕ್ತಾದ್ಯನ್ಯತ್ರೈವ ಪ್ರತಿಪಾದ್ಯತ್ವಾದ್ ಭವತಿ ವ್ಯಾವರ್ತಕಮ್ ಅಖಿಲಪದಮ್ ॥

'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬಲ್ಲಿ ಅಪಿ ಪದಸಹಿತವಾದ ಅಖಿಲಪದಕ್ಕೆ ಸಾರ್ಥಕ್ಯ-ವನ್ನು ತೋರಿಸುತ್ತಿದ್ದಾರೆ. ಸುಧಾದಲ್ಲಿ 'ಆಪ್ಯತಮಮ್ ಇತಿ ಅಖಿಲೈಃ ಇತಿ ಚೋಕ್ತಂ' ಎಂದಿದೆ. ಇಲ್ಲಿ ಹೀಗೆ ಯೋಜನೆ ಮಾಡಿಕೊಳ್ಳಬೇಕೆಂದು ಪರಿಮಳಾಚಾರ್ಯರು ತಿಳಿಸಿದ್ದಾರೆ — ಅಖಿಲೈರಪಿ ಇತಿ ಚ ಉಕ್ತಂ - ಎಂದು ಅಪಿಪದವನ್ನು ಸೇರಿಸಿ ಹೇಳಬೇಕು. ಆ ಅಪಿಪದಕ್ಕೆ ಅಭಿವ್ಯಾಪ್ತಿ ಎಂಬ ಅರ್ಥವಿದೆ. ಹೀಗೆ ವ್ಯಾಖ್ಯಾನ ಮಾಡದಿದ್ದರೆ ಧರ್ಮಾದಿಗಳು ಯದ್ಯಪಿ ಅಖಿಲವೇದಗಳಿಂದ ಹೇಳಲ್ಪಡದೇ ಇದ್ದರೂ "ತಾ ವಾ ಏತಾ ಸರ್ವಾ ಋಚಃ" ಎಂದು ಐತರೇಯಭಾಷ್ಯದಲ್ಲಿ ಸರ್ವವೇದಪ್ರತಿಪಾದ್ಯತ್ವ ವಾಯುದೇವರಿಗೂ ಇದೆ ಎಂದು ಹೇಳಿರುವುದರಿಂದ ಪ್ರಾಣನಿಗೂ ಅಖಿಲವೇದಪ್ರತಿಪಾದ್ಯತ್ವವಿದೆ. ಹಾಗಾಗಿ ಅಖಿಲಪದವು ಪ್ರಾಣವ್ಯಾವರ್ತಕವಾಗಲಿಲ್ಲ. ಹಾಗೆ ಅಭಿವ್ಯಾಪ್ತಿ ಎಂಬರ್ಥದಲ್ಲಿರುವ ಅಪಿಪದವು ವ್ಯರ್ಥವಾದೀತು। ಅದೇ ಅಪಿಪದಸಹಿತವಾಗಿ ಅಖಿಲಪದವಿದ್ದಾಗ ಋಗ್ಭಾಷ್ಯದಲ್ಲಿ ತಿಳಿಸಿದ ಕ್ರಮದಲ್ಲಿ 'ಪೂರ್ವ-ಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ' ಎಂದು ಹೇಳಿದಂತೆ ವಿಷ್ಣುಸೂಕ್ತ ಪುರುಷಸೂಕ್ತ ಹಾಗೂ ಲಕ್ಷ್ಮೀಸೂಕ್ತ ಇದೇ ರೀತಿಯಾದ ಅನೇಕಸೂಕ್ತಗಳನ್ನು ಬಿಟ್ಟು ಬೇರೆ ಎಲ್ಲ ವೇದವಾಕ್ಯಗಳಿಂದ ಪ್ರತಿಪಾದ್ಯ ಎಂದಷ್ಟೇ ಅರ್ಥ ಹೊರತು ಪ್ರತಿಯೊಂದೂ ವೇದವಾಕ್ಯಗಳು ಆ ವಾಯುದೇವರನ್ನು ಹೇಳಲಿಲ್ಲ. ಅರ್ಥಾತ್ ವೇದವಾಕ್ಯಗಳ ಅಭಿವ್ಯಾಪ್ತಿ ವಾಯುವಿನಲ್ಲಿ ಇಲ್ಲ. ಹಾಗಾಗಿ ಅಪಿಪದ ಸಹಿತ ಅಖಿಲಪದವು ಸಾರ್ಥಕ. ಅಥವಾ 'ಮಂತ್ರಾದಿವದ್ವಾ ಅವಿರೋಧಃ' (ಬ್ರ.ಸೂ. 3-3-58) ಎಂಬಲ್ಲಿ ಹೇಳಿದ

ನ್ಯಾಯದಿಂದ ಎಲ್ಲ ಮಂತ್ರಗಳೂ ಮುಖ್ಯವಾಗಿ ಆಯಾ ದೇವತಾಂತರ್ಗತನಾದ ಭಗವಂತನನ್ನೇ ಮುಖ್ಯವಾಗಿ ಹೇಳುತ್ತವೆ.

## ಏಕೈವ ವ್ಯಾಹೃತಿಃ ಪ್ರಾಣ ಏವ - ಶ್ರುತ್ಯರ್ಥ

** 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್'

• (ಸೂತ್ರಭಾಷ್ಯಾರ್ಥಮಂಜರೀ ವೇದಗರ್ಭನಾರಾಯಣಾಚಾರ್ಯರಚಿತಾ) – ಕಿಂಚ ವಿದ್ವದ್ರೂಢಿಸಹಿತತ್ವೇನ ಪ್ರಾಬಲ್ಯಮಿತಿ ಭಾವೇನ ರೂಢಿರೇವಾಹ – ತಾ ವಾ ಇತ್ಯಾದಿನಾ ॥ ತಾಃ ಋಚಃ 'ತಾಸಾಮ್' ಇತಿ ಶೇಷಃ । ಏಕಾ ವ್ಯಾಹೃತಿಃ ಕರ್ಮಣಿ ಕ್ತಿನ್ । ವ್ಯಾಹರ್ತವ್ಯಮೇಕ-ಮೇವ । ತತ್ ಕಿಮ್? ಇತ್ಯತ ಆಹ – ಪ್ರಾಣ ಏವೇತಿ ॥ ಪ್ರಕೃಷ್ಟನಯನಾದಿನಿಮಿತ್ತಾತ್ ಪ್ರಾಣಶಬ್ದವಾಚ್ಯೋ ವಿಷ್ಣುರೇವ । ಸರ್ವೇ ಅಪಿ ಋಗ್ವೇದಾ ವಿಷ್ಣುವಾಚಕಾ ಇತ್ಯರ್ಥಃ । ಕಿಂಚ ಸರ್ವೇಷಾಂ ಋಗ್ವೇದಾದೀನಾಂ ವಿಷ್ಣ್ವೇಕಪರತ್ವಂ ಕೈಮುತ್ಯೇನಾಪಿ ಸಾಧಯತಿ – ಸರ್ವೇ ವೇದಾ ಇತಿ ॥ ಸರ್ವೇ ವೇದಾಃ ಅಸಂಖ್ಯಾಕಾಃ । ತೇಷಾಮಪಿ ಏಕೈವ ವ್ಯಾಹೃತಿಃ ಈಶ್ವರ ಏವ ಪ್ರತಿ-ಪಾದ್ಯಃ । ಕಿಮು ಋಗ್ವೇದಪ್ರತಿಪಾದ್ಯ ಇತ್ಯತ್ರ ವಕ್ತವ್ಯಮ್? ದೇಶಕಾಲಕರ್ಮತದಂಗಾದ್ಯನ್ಯ-ಪರಾಣಾಮಪಿ ಭಗವತ್ಪರತ್ವೇ ಕಿಮು ಗುಣಪ್ರತಿಪಾದಕಾನಾಂ ಋಗ್ವೇದಾನಾಮ್? ಇತಿ ಭಾವಃ । ಅಪಿ ಚ ಸರ್ವೇಷಾಂ ವೇದಾನಾಂ ವಿಷ್ಣ್ವೇಕಪರತ್ವಂ ಕೈಮುತ್ಯೇನ ಸಾಧಯತಿ – ಸರ್ವೇ ಘೋಷಾ ಇತಿ ॥ ಸಮುದ್ರಾದಿಘೋಷಾಶ್ಚ ಯೇ, ತೇಷಾಮಪಿ ಏಕೈವ ವ್ಯಾಹೃತಿಃ, ಕಿಮು ವೇದಾನಾಮ್? ಇತಿ । ತತ್ರ ಋಚಸ್ತು ವಿಶೇಷತೋ ವಿಷ್ಣುತುಷ್ಟಿಕರಾ ಇತ್ಯಾಹ – ಪ್ರಾಣ ಋಚ ಇತಿ ॥ ಏವಕಾರಸ್ತು ಪ್ರಾಣೇ ನಾರಾಯಣ ಏವ ಇತಿ ಸಂಬಂಧಃ । ತಾತ್ಪರ್ಯವೃತ್ತ್ಯಾ ಋಚ ಇತ್ಯರ್ಥಃ । ತಥಾಚ, ಮಹಾಯೋಗವಿದ್ವದ್ರೂಢಿಭ್ಯಾಂ ಕರ್ಮಾದ್ಯಭಿಧಾಯಕಜ್ಯೋತಿರಾದಿಶಬ್ದಜಾತಮುಖ್ಯವಾಚ್ಯೋ ಹರಿರಿತಿ ಯುಕ್ತಂ ಸಮನ್ವಯಸೂತ್ರಮಿತಿ ಸ್ಥಿತಮ್ । (1.4.2 ಜ್ಯೋತಿರಧಿಕರಣಮ್. 1.4.10 ಸೂತ್ರ)

ಪ್ರಾಣಶಬ್ದವು ಮುಖ್ಯವಾಗಿ ಭಗವಂತನನ್ನೇ ಹೇಳುತ್ತಿದೆ. ಇಷ್ಟೇ ಏಕೆ ಎಲ್ಲಾ ಮಾತುಗಳೂ ಮುಖ್ಯವಾಗಿ ಆ ಭಗವಂತನನ್ನೇ ಹೇಳುತ್ತಿವೆ. ಅದೂ ಕೂಡ ವಿದ್ವದ್ರೂಢಿಯಿದೆ. ಆದ್ದರಿಂದ ಇನ್ನೂ ಪ್ರಬಲವಾಗಿದೆ. ತಾಃ ಋಚಃ ಅಂದರೆ ಆ ಎಲ್ಲ ಋಙ್ಮಂತ್ರಗಳಿಂದ ಹೇಳಲ್ಪಡುವವನು ಒಬ್ಬನೇ ಆಗಿದ್ದಾನೆ. ಅವನು ಯಾರೆಂದರೆ ಪ್ರಾಣನೇ ಆಗಿದ್ದಾನೆ ಎಂದು ತಿಳಿಯಬೇಕು. ಪ್ರಕೃಷ್ಟವಾದ ಸ್ಥಾನಕ್ಕೆ ಕರೆದುಕೊಂಡು ಹೋಗುವವನಾದ್ದರಿಂದ ಪ್ರಾಣ ಎಂಬ ಶಬ್ದದಿಂದ ಹೇಳಲ್ಪಡುವವನು ವಿಷ್ಣುವೇ. ಎಲ್ಲ ಋಗ್ವೇದವೂ ವಿಷ್ಣುವನ್ನೇ ಹೇಳುತ್ತಿದೆ ಎಂದರ್ಥ. ಅಲ್ಲದೆ ಋಗ್ವೇದಾದಿಗಳು ವಿಷ್ಣುವನ್ನೇ ಹೇಳುತ್ತಿರುವುದು ಕೈಮುತ್ಯನ್ಯಾಯದಿಂದಲೂ ಸಿದ್ಧ ಎಂದು ತೋರಿಸುತ್ತಿದ್ದಾರೆ 'ಸರ್ವೇ

ವೇದಾಃ' ಎಂದು. ಎಲ್ಲ ವೇದಗಳೂ ಅನಂತವಾಗಿವೆ. ಆದರೂ ಅವುಗಳೆಲ್ಲವೂ ಕೂಡ ಒಬ್ಬನಾದ ಈಶ್ವರನನ್ನೇ ಪ್ರತಿಪಾದಿಸುತ್ತಿವೆ. ಇನ್ನು ಋಗ್ವೇದದಿಂದ ಪ್ರತಿಪಾದ್ಯನೆಂದು ಕಂಠತಃ ಹೇಳಬೇಕೇನು? ದೇಶ, ಕಾಲ, ಕರ್ಮ, ಆ ಕರ್ಮಗಳ ಅಂಗಗಳು ಬೇರೆಯ ಅರ್ಥವನ್ನು ಹೇಳುವ ವಾಕ್ಯಗಳೂ ಭಗವತ್ಪರ ಎಂದಾಗ ಗುಣಗಳನ್ನು ಪ್ರತಿಪಾದನೆ ಮಾಡುವ ಋಗ್ವೇದಾದಿಗಳು ಭಗವತ್ಪರ ಎಂದು ಕಂಠತಃ ಹೇಳಬೇಕೇನು?

ಇದೇ ರೀತಿ ಸಕಲವೇದವೂ ವಿಷ್ಣ್ವೈಕಪರ ಎಂಬುದನ್ನು ಕೈಮುತ್ಯದಿಂದ ಸಾಧಿಸುತ್ತಾರೆ — ಸರ್ವೇ ಘೋಷಾಃ ಎಂದು. ಸಮುದ್ರಾದಿಗಳ ಘೋಷಗಳು ಏನಿವೆಯೋ ಅವುಗಳಿಂದ ಹೇಳಲ್ಪಡುವವನು ದೇವನೊಬ್ಬನೇ. ಅಂದ ಮೇಲೆ ವೇದಗಳು ಹೇಳದೇ ಇದ್ದೀತೇ? ಇವೆಲ್ಲವುಗಳಲ್ಲಿ ಋಙ್ಮಂತ್ರವು ವಿಶೇಷವಾಗಿ ವಿಷ್ಣುಪ್ರೀತಿಯನ್ನುಂಟುಮಾಡುವುದು ಎಂದು ಹೇಳುತ್ತಾರೆ — ಪ್ರಾಣೇ ಋಚಃ ಎಂದು. ಏವಕಾರವನ್ನು ಪ್ರಾಣೇ ಎನ್ನುವುದರಲ್ಲಿ ಅನ್ವಯ ಮಾಡಿ ಪ್ರಾಣೇ ಏವ = ನಾರಾಯಣನಲ್ಲಿಯೇ ಋಙ್ಮಂತ್ರಗಳಿಗೆ ತಾತ್ಪರ್ಯತಃ ವೃತ್ತಿ ಇದೆ. ಹಾಗಾಗಿ ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಕರ್ಮಾದಿಗಳನ್ನು ಹೇಳುವ ಜ್ಯೋತಿಃ ಮೊದಲಾದ ಶಬ್ದಗಳ ಸಮೂಹದಿಂದ ಮುಖ್ಯವಾಗಿ ಹೇಳಲ್ಪಡುವವನು ಹರಿ ಎಂದಾಗುವುದರಿಂದ ತತ್ತು ಸಮನ್ವಯಾತ್ ಎಂಬ ಸೂತ್ರ ಸರಿಯಾಗಿದೆ.

## ಮಾರುತನಲ್ಲಿ ಸರ್ವನಾಮಗಳ ಪ್ರವೃತ್ತಿ - ಯಾವ ವೃತ್ತಿಯಿಂದ?

** ತಥೈವ ಸರ್ವನಾಮಾನಿ ಪ್ರವರ್ತಂತೇ ಚ ಮಾರುತೇ ।
ನ ತಾವನ್ಮುಖ್ಯವೃತ್ತ್ಯೈವ ಮುಖ್ಯತೋಽನ್ಯವ್ಯಪೇಕ್ಷಯಾ ।
ಮುಖ್ಯತಃ ಸರ್ವನಾಮಾ ತು ವಿಷ್ಣುರೇಕೋ ನ ಚಾಪರಃ ।
ತಸ್ಮಾತ್ ಪ್ರಾಣಾದಿಶಬ್ದಾಶ್ಚ ವಿಷ್ಣಾವೇವ ಹಿ ಮುಖ್ಯತಃ ।
ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ ।

-- ಹಾಗೆಯೇ ಎಲ್ಲ ಶಬ್ದಗಳೂ ಮುಖ್ಯಪ್ರಾಣನಲ್ಲಿಯೂ ವ್ಯವಹರಿಸಲ್ಪಡುತ್ತವೆ. ಹರಿಯಂತೆ ಪರಮಮುಖ್ಯವೃತ್ತಿಯಿಂದಲ್ಲ. ಬೇರೆ ವಸ್ತುಗಳಿಗೆ ಹೋಲಿಸಿದಾಗ ಹೆಚ್ಚು ಮುಖ್ಯವೆನಿಸಿದ ವೃತ್ತಿಯಿಂದ. ಪರಮಮುಖ್ಯವೃತ್ತಿಯಿಂದ ಸರ್ವಶಬ್ದವಾಚ್ಯ ವಿಷ್ಣು ಒಬ್ಬನೇ. ಬೇರಾರೂ ಅಲ್ಲ. ಆದ್ದರಿಂದ ಯದ್ಯಪಿ ಪ್ರಾಣಾದಿ ಶಬ್ದಗಳು ವಿಷ್ಣುವಿನಲ್ಲಿಯೇ ಮುಖ್ಯವೆಂದು ಪ್ರಸಿದ್ಧಿ. ಆದರೂ ವಾಯುವಿನಲ್ಲಿ ಬೇರೆ ವಸ್ತುಗಳಿಗೆ ಹೋಲಿಸಿ ಮುಖ್ಯವೃತ್ತಿ ಇದೆ ಎನ್ನಲಾಗುತ್ತದೆ.

## ಸರ್ವವಿದ್ಯೆಗಳ ದೇವತೆಗಳು ಯಾರು? - ಋಗ್ಭಾಷ್ಯ

** "ದೇವತಾ ಸರ್ವವಿದ್ಯಾನಾಂ ಸ್ವಯಂ ನಾರಾಯಣಃ ಪ್ರಭುಃ ।
ಋತೇ ತತ್ರ ಪ್ರಸಿದ್ಧಾಶ್ಚ ದೇವತಾ ಶ್ರೀಸ್ತಥಾಽತ್ರ ಚ ॥36॥

ಋತೇ ಪ್ರಸಿದ್ಧಾ ಬ್ರಹ್ಮೈವ ತತಸ್ತೇನ ಕ್ರಮೇಣ ಚ ।
ಪೂರ್ವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ – (ಋಗ್ಭಾಷ್ಯ)

– ಏವಮ್ ಋಷಿಛಂದಸೀ ಉಕ್ತ್ವಾ ದೇವತಾಮಾಹ – ದೇವತೇತಿ ॥ ಸ್ವಯಂ ಸಾಕ್ಷಾತ್ । ಪ್ರಭುರಿತಿ ದೇವತಾತ್ವೋಪಪಾದನಾರ್ಥಮ್ । ತತ್ರ = ಭಗವತಿ । ಪ್ರಸಿದ್ಧಾಃ ಪುರುಷಸೂಕ್ತಾದಿ-ವಿದ್ಯಾಃ । ಋತೇ ವರ್ಜಯಿತ್ವಾಽನ್ಯಾಸಾಂ ವಿದ್ಯಾನಾಂ ಶ್ರೀಶ್ಚ ದೇವತಾ । ತಥಾತ್ರ ಚ ಶ್ರೀ-ದೇವ್ಯಾಮ್ । ಪ್ರಸಿದ್ಧಾಃ ವಿದ್ಯಾಃ ಅಂಭೃಣೀಸೂಕ್ತಾದ್ಯಾ ಋತೇಽನ್ಯಾಸಾಂ ಬ್ರಹ್ಮೈವ ದೇವತಾ । ತತಃ ಪರಂ ಚ ತೇನ ವಕ್ಷ್ಯಮಾಣೇನ ತಾರತಮ್ಯಕ್ರಮೇಣೈವ । ಪೂರ್ವಪ್ರಸಿದ್ಧವರ್ಜಂ ಪೂರ್ವಸ್ಯಾಂ ದೇವತಾಯಾಂ ಪ್ರಸಿದ್ಧಾವಿದ್ಯಾ ವರ್ಜಯಿತ್ವಾ ಅನ್ಯಾಸಾಂ ವಿದ್ಯಾನಾಂ ತು ಶಕ್ರಾಂತಾ ದೇವತಾಮತಾಃ । (ಟೀಕಾ)

– ಋಷಿ ಛಂದಸ್ಸುಗಳನ್ನು ಹೇಳಿ ಈಗ ದೇವತೆಯನ್ನು ಹೇಳುತ್ತಿದ್ದಾರೆ. ಎಲ್ಲ ವಿದ್ಯೆಗಳಿಗೆ ಸಾಕ್ಷಾತ್ತಾಗಿ ನಾರಾಯಣನೇ ದೇವತೆ. ಇನ್ನು ಭಗವಂತನಲ್ಲಿ ಪ್ರಸಿದ್ಧವಾದ ಪುರುಷಸೂಕ್ತಾದಿ ವಿದ್ಯೆಗಳನ್ನು ಬಿಟ್ಟು ಬೇರೆ ವಿದ್ಯೆಗಳಿಗೆ ಲಕ್ಷ್ಮಿಯೇ ದೇವತೆ. ಇನ್ನು ಶ್ರೀದೇವಿಯಲ್ಲಿ ಪ್ರಸಿದ್ಧವಾದ ಅಂಭೃಣೀಸೂಕ್ತಾದಿ-ವಿದ್ಯೆಗಳನ್ನು ಬಿಟ್ಟು ಬೇರೆ ವಿದ್ಯೆಗಳಿಗೆ ಬ್ರಹ್ಮನೇ(ವಾಯುವೇ) ದೇವತೆ. ಅದರ ನಂತರ ಉತ್ತಮದೇವತಾಪ್ರತಿಪಾದಕವಾದ ವಿದ್ಯೆಯನ್ನು ಬಿಟ್ಟು ಮುಂದಿನ ದೇವತೆಯಲ್ಲಿ ಮಿಕ್ಕ ವಿದ್ಯೆಗಳಿಗೆ ದೇವತೆ ಎಂದು ತಿಳಿಯಬೇಕು. ಇದು ಇಂದ್ರನವರೆಗೆ.

### ಪರಮಸಾಧ್ಯಸಮುಚ್ಚಯಾಭಿಪ್ರಾಯೇಣ ಅಪೀಃ = ಅಭಿವ್ಯಾಪ್ತೌ ಎಂದಿದ್ದಾರೆ

(ವಾಕ್ಯಾರ್ಥಚಂದ್ರಿಕಾ) - ಅತ್ರ ಅಪಿಪದಸ್ಯ ಯಥಾಸ್ಥಿತಸ್ಯ ಸಮುಚ್ಚಯಾರ್ಥತಾಯಾಃ ಏವ ವಕ್ತವ್ಯತ್ವಾತ್ ಸಾಕ್ಷಾದ್ವಂದ್ಯತ್ವಹೇತೋರಸ್ಯ ವಂದ್ಯತ್ವಹೇತುವೈಶಿಷ್ಟ್ಯಹೇತುಭಿಃ 'ನಿಖಿಲ' ಇತ್ಯಾದಿಭಿಃ ಸಾಕ್ಷಾತ್ಸಾಧ್ಯೇನ ಸಮುಚ್ಚಯಾಸಂಭವಾತ್ ಪರಮಸಾಧ್ಯಸಮುಚ್ಚಯಮಭಿಪ್ರೇತ್ಯ ಆಹ – ಅಪೀತಿ ॥ ಅತ ಏವ ಅಸ್ವರಸಾದ್ಭಿನ್ನಕ್ರಮತ್ವಮಭ್ಯುಪೇತ್ಯ ಅರ್ಥಾಂತರಂ ತಸ್ಯಾಹ ಅಭೀತಿ ॥

'ಅಪಿಶಬ್ದಃ ವಂದ್ಯತ್ವೇ ಹೇತುಸಮುಚ್ಚಯಾರ್ಥಃ ಅಭಿವ್ಯಾಪ್ತೌ ವಾ' ಎಂದು ಅಪಿಶಬ್ದಕ್ಕೆ ಸಮುಚ್ಚಯ ಅಥವಾ ಅಭಿವ್ಯಾಪ್ತಿ ಎಂಬ ಅರ್ಥ ಇದೆಯೆಂದು ತಿಳಿಸಿದ್ದಾರೆ. ಇಲ್ಲಿ ಯಥಾಶ್ರುತವಾಗಿ ಅಪಿಪದಕ್ಕೆ ಅನ್ವಯ ಮಾಡಿದಾಗ ಅಂದರೆ 'ಆಪ್ತತಮಮ್ ಅಪಿ ಅಖಿಲೈಃ ಸುವಾಕ್ಯೈಃ' - ಎಂದು ಅನ್ವಯ ಮಾಡಿದಾಗ ಸಮುಚ್ಚಯ ಎಂಬರ್ಥವನ್ನೇ ಹೇಳಬೇಕು. ಆದರೆ ಸಾಕ್ಷಾತ್-ವಂದ್ಯತ್ವಕ್ಕೆ "ಅಖಿಲೈರಪಿ ಸುವಾಕ್ಯೈಃ ಆಪ್ತತಮಮ್" ಎಂಬುದೇ ಹೇತುವಾಗಿದೆ. ಆದ್ದರಿಂದ ವಂದ್ಯತ್ವಕ್ಕೆ ಹೇತುವಾದ ವೈಶಿಷ್ಟ್ಯ ಮೊದಲಾದವುಗಳಿಗೆ ಕಾರಣವಾದ ನಿಖಿಲಪೂರ್ಣಗುಣೈಕದೇಹಂ

ಮುಂತಾದವುಗಳಿಂದ ಸಾಕ್ಷಾತ್ ಸಾಧ್ಯದೊಂದಿಗೆ ಸಮುಚ್ಚಯ ಮಾಡಲು ಬರದಿರುವುದರಿಂದ ಪರಮಸಾಧ್ಯಸಮುಚ್ಚಯವನ್ನು ಇಲ್ಲಿ ಅಭಿಪ್ರಾಯ ಪಟ್ಟು ಹೇಳುತ್ತಿದ್ದಾರೆ – ಅಪಿ ಎಂದು. ಆದ್ದರಿಂದಲೇ ಅಸ್ವಾರಸ್ಯ ಇರುವುದರಿಂದ ಭಿನ್ನಕ್ರಮತ್ವವನ್ನು ಅಪಿಶಬ್ದಕ್ಕೆ ಒಪ್ಪಿ ಬೇರೆ ಅರ್ಥವನ್ನು ಅದಕ್ಕೆ ಹೇಳುತ್ತಿದ್ದಾರೆ – ಅಭಿವ್ಯಾಪ್ತಿ ಎಂದು.

## ವಾಕ್ಯಾರ್ಥಚಂದ್ರಿಕಾಅಭಿಪ್ರಾಯವರ್ಣನೆ

(ವಾಕ್ಯಾರ್ಥರತ್ನಮಾಲಾ) – ಅತ್ರೇತಿ ॥ ವಾಚ್ಯೇಯತ್ವೇನ ಪ್ರಕೃತಂ ಬುದ್ಧಾವತ್ರೇತಿ ನಿರ್ದಿಷ್ಟಮ್ । ಯಥಾಸ್ಥಿತಸ್ಯೇತಿ ॥ ವಕ್ಷ್ಯಮಾಣಭಿನ್ನಕ್ರಮತ್ವವ್ಯಾವೃತ್ತಯೇ ಯಥಾಸ್ಥಿತಸ್ಯೇತ್ಯುಕ್ತಮ್ । ಸಮುಚ್ಚ-ಯಾರ್ಥತಾಯಾ ಏವೇತಿ ॥ ಅರ್ಥಾಂತರಸ್ಯಾತ್ರಾನುಪಯೋಗಾತ್ ಇತಿ ಭಾವಃ । ಹೇತೋ-ರಸ್ಯೇತಿ ॥ 'ಅಖಿಲೈಃ ಸುವಾಕ್ಯೈಃ ಆಪ್ಯತಮತ್ವಸ್ಯ' ಇತ್ಯರ್ಥಃ । ಸಾಕ್ಷಾತ್ಸಾಧ್ಯೇನೇತಿ ॥ ವೈಶಿಷ್ಟ್ಯ-ಹೇತೂನಾಮಿತಿ ಪೂರಣೀಯಮ್ । ವಿಪರಿಣಾಮೇನ ತೃತೀಯಾಂತಸ್ಯೈವಾನುವೃತ್ತಿರ್ವಾ । ತಥಾ ಚ ತೇಷಾಂ ಯತ್ ಸಾಕ್ಷಾತ್ ಸಾಧ್ಯಂ ವೈಶಿಷ್ಟ್ಯಂ ರೂಪಂ ತೇನ ತದಾದಾಯೇತ್ಯರ್ಥಃ । ಸಮುಚ್ಚಯಾಸಂಭವೋಪಪಾದನಾಯೈವ ಸಾಕ್ಷಾತ್-ವಂದ್ಯತ್ವೇತಿ ಹೇತುಗರ್ಭಂ ವಿಶೇಷಣಂ ಪ್ರಾಗುಕ್ತಮ್ । ಸಾಕ್ಷಾತ್-ವಂದ್ಯತ್ವಹೇತೋಃ ಸಾಕ್ಷಾತ್ ತದ್ಧೇತುನಾ ವಂದ್ಯತ್ವರೂಪಸಾಧ್ಯ ಏವ ಸಮುಚ್ಚಯೋ ಯುಜ್ಯತೇ । ನ ತು ಸಾಧ್ಯಾಂತರೇ ತತ್ಸಾಧ್ಯಾಂತರಸಾಧನಸಾಧನೈಃ ಸಹ ಸಮುಚ್ಚಯೋ ಯುಜ್ಯತೇ ಇತ್ಯರ್ಥಃ । ಯದ್ವಾ ಆಪ್ಯತಮತ್ವಸ್ಯ ಯತ್ ಸಾಕ್ಷಾತ್ ಸಾಧ್ಯಂ ತೇನ ತದುಪಾಯೇನ ತದಾದಾಯೇತಿ ಯೋಜ್ಯಮ್ । 'ನಿಖಿಲ' ಇತ್ಯಾದೀನಾಂ ಸಾಕ್ಷಾತ್ ವಂದ್ಯತ್ವ-ಸಾಧ್ಯಕತ್ವಾಭಾವಾತ್ ಇತ್ಯಾಶಯಃ । ವಂದ್ಯತ್ವ ಇತಿ ಮೂಲಗತಸಪ್ತಮೀಪಾಠಾನುಸಾರೇಣ ಸಾಕ್ಷಾತ್ ಸಾಧ್ಯ ಇತಿ ಸಪ್ತಮೀಪಾಠಸ್ತು ಸ್ವರಸ ಏವ । ಪರಮಸಾಧ್ಯಸಮುಚ್ಚಯೇತಿ ॥ ನಿಖಿಲೇ-ತ್ಯಾದ್ಯುಕ್ತಹೇತೂನಾಂ ವೈಶಿಷ್ಟ್ಯದ್ವಾರಾ ಪರಮಸಾಧ್ಯಹೇತುತಾಯಾ ಅಪಿ ಸತ್ತ್ವಾತ್ ಸಾಕ್ಷಾತ್ ಪರಂಪರಾಸಾಧಾರಣವಂದ್ಯತ್ವಹೇತೂನಾಂ ವಂದ್ಯತ್ವರೂಪಸಾಧ್ಯಸಮುಚ್ಚಯಮಿತ್ಯರ್ಥಃ । ಅಸ್ವರಸಾದಿತಿ ॥ ಶ್ರುತಹೇತೌ ಸಾಕ್ಷಾತ್ ಪಾರಂಪರ್ಯಸ್ಯಾವಿವಕ್ಷಾರೂಪಾದಿತ್ಯರ್ಥಃ । ಭಿನ್ನ-ಕ್ರಮತ್ವಮಿತಿ । 'ಅಖಿಲೈರಪಿ ಸುವಾಕ್ಯೈಃ' ಇತಿ ಸ್ಥಾನಾಂತರಸಂಬಂಧಮಿತ್ಯರ್ಥಃ । ತಸ್ಯ ಭಿನ್ನ-ಕ್ರಮತ್ವಮಿತ್ಯಪಿ ಯೋಜ್ಯಮ್ । ಅಭಿವ್ಯಾಪ್ತಿಶ್ಚಾಖಿಲವಾಕ್ಯೇಷು ನೈಕಮಪಿ ಅನ್ಯಪ್ರಾಪಕಂ ಇತ್ಯೇವಂ-ರೂಪಾ । ಏತಚ್ಚ ಪ್ರಾಗೇವ ವಿವೃತಮಿತಿ ಭಾವಃ ।

ಅತ್ರ ಎಂದು ಈಗ ವ್ಯಾಖ್ಯಾನಮಾಡಬೇಕಾದದ್ದು ಯಾವುದಿದೆಯೋ ಅದು ಬುದ್ಧಿಯಲ್ಲಿದೆ ಎಂದು ಹೇಳಿದ್ದಾರೆ. 'ಯಥಾಸ್ಥಿತಸ್ಯ' ಎಂದು ಹೇಳಿದ್ದು ಮುಂದೆ ಹೇಳುವ ಭಿನ್ನಕ್ರಮತ್ವವನ್ನು ಬೇರ್ಪಡಿ-

ಸಲು. ಬೇರೆ ಅರ್ಥವು ಇಲ್ಲಿ ಅನುಪಯುಕ್ತವಾದ್ದರಿಂದ ಸಮುಚ್ಚಯ ಎಂಬರ್ಥವನ್ನೇ ಸ್ವೀಕರಿಸ-ಬೇಕು. ಈ ಹೇತು ಎಂದರೆ ಸಾಕ್ಷಾತ್-ವಂದ್ಯತ್ವಕ್ಕೆ ಕಾರಣವಾದ ಅಖಿಲೈಃ ಸುವಾಕ್ಯೈಃ ಆಪ್ಯ-ತಮತ್ವ - ಎಂದರ್ಥ.

'ಸಾಕ್ಷಾತ್-ಸಾಧ್ಯೇನ' ಎನ್ನುವುದರ ಜೊತೆಗೆ 'ವೈಶಿಷ್ಟ್ಯಹೇತೂನಾಂ' ಎಂದು ಸೇರಿಸಿಕೊಳ್ಳಬೇಕು. ಅಥವಾ ಹಿಂದಿನ ವಾಕ್ಯದಲ್ಲಿರುವ 'ವೈಶಿಷ್ಟ್ಯಹೇತುಭಿಃ' ಎಂಬ ತೃತೀಯಾಂತಪದವನ್ನು ವಿಪರಿಣಾಮಮಾಡಿಕೊಂಡು ಅಂದರೆ ಷಷ್ಠ್ಯಂತವಾಗಿ ವೈಶಿಷ್ಟ್ಯಹೇತೂನಾಂ ಎಂದು ಅನುವೃತ್ತಿ-ಮಾಡಬೇಕು.

ಹಾಗಾಗಿ ಆ ವೈಶಿಷ್ಟ್ಯಕ್ಕೆ ಹೇತುಗಳಾದ 'ನಿಖಿಲಪೂರ್ಣಗುಣೈಕದೇಹಂ' ಮುಂತಾದವುಗಳ ಸಾಧ್ಯವೇನಿದೆಯೋ ಅರ್ಥಾತ್ ವೈಶಿಷ್ಟ್ಯವೇನಿದೆಯೋ ಅದರಿಂದ ಎಂದರ್ಥ. ಅದರಿಂದ ಎಂದರೆ ಅದನ್ನು ಸ್ವೀಕರಿಸಿ ಎಂದರ್ಥ. ಸಮುಚ್ಚಯ ಕೂಡುವುದಿಲ್ಲ ಎಂಬುದನ್ನು ಉಪಪಾದನೆ ಮಾಡಲು 'ಸಾಕ್ಷಾತ್-ವಂದ್ಯತ್ವ' ಎಂಬುದಾಗಿ ಹೇತುಗರ್ಭವಿಶೇಷಣವನ್ನು ಮೊದಲು ಹೇಳಿದ್ದರು. ಸಾಕ್ಷಾತ್-ವಂದ್ಯತ್ವಕ್ಕೆ ಕಾರಣವಾದ 'ಅಖಿಲೈಃ ಸುವಾಕ್ಯೈಃ ಆಪ್ಯತಮತ್ವ' ಎಂಬುದಕ್ಕೆ ಸಾಕ್ಷಾತ್ ಆ ವಂದ್ಯತ್ವಕ್ಕೆ ಹೇತುವಾದ ಮತ್ತೊಂದರಿಂದ ವಂದ್ಯತ್ವ ಎಂಬ ಸಾಧ್ಯದ ವಿಷಯದಲ್ಲಿಯೇ ಸಮುಚ್ಚಯಕೂಡುತ್ತದೆ ಹೊರತು ಬೇರೆ ಸಾಧ್ಯದ ವಿಷಯದಲ್ಲಿ ಆ ಸಾಧ್ಯದ ಸಾಧನದ ಸಾಧನದೊಂದಿಗೆ ಸಮುಚ್ಚಯ ಕೂಡುವುದಿಲ್ಲ ಎಂದರ್ಥ.

ಅಥವಾ, ಆಪ್ಯತಮತ್ವಕ್ಕೆ ಯಾವುದು ಸಾಕ್ಷಾತ್-ಸಾಧ್ಯವಾಗಿದೆಯೋ ಅದರ ಉಪಾಯದಿಂದ ಎಂದರ್ಥ. ಅದನ್ನು ಸ್ವೀಕರಿಸಿ ಎಂದರ್ಥ. ಇದರ ಅಭಿಪ್ರಾಯ 'ನಿಖಿಲಪೂರ್ಣಗುಣೈಕದೇಹಂ' ಮುಂತಾದವುಗಳಿಗೆ ಸಾಕ್ಷಾತ್ ವಂದ್ಯತ್ವಕ್ಕೆ ಸಾಧಕತ್ವ ಇಲ್ಲ ಎಂದು. 'ವಂದ್ಯತ್ವೇ ಇತಿ' ಎಂಬ ಮೂಲದಲ್ಲಿರುವ ಸಪ್ತಮೀಪಾಠವನ್ನನುಸರಿಸಿ ಸಾಕ್ಷಾತ್ ಸಾಧ್ಯ ಎಂಬುದಾಗಿ ಹೇಳಿದ್ದು. ಸಪ್ತಮೀ ಪಾಠವಂತೂ ಸ್ವರಸವಾಗಿಯೇ ಇದೆ.

ಪರಮಸಾಧ್ಯಸಮುಚ್ಚಯ ಎಂದರೆ, ನಿಖಿಲಪೂರ್ಣಗುಣೈಕದೇಹಂ ಮುಂತಾದ ಹೇತುಗಳಿಗೆ ವೈಶಿಷ್ಟ್ಯದ ಮುಖಾಂತರ ಪರಮಸಾಧ್ಯವಾದುದಕ್ಕೆ ಕಾರಣತ್ವವು ಇರುವುದರಿಂದ ಸಾಕ್ಷಾತ್-ಪರಂಪರಾಸಾಧನವಾದ ವಂದ್ಯತ್ವಕ್ಕೆ ಕಾರಣವಾದವುಗಳಿಗೆ ವಂದ್ಯತ್ವರೂಪಸಾಧ್ಯಸಮುಚ್ಚಯ-ಕ್ಕೋಸ್ಕರ ಎಂದರ್ಥ. ಅಸ್ವರಸ ಏಕೆಂದರೆ ಶ್ರುತವಾದ ಹೇತುವಿನಲ್ಲಿ ಸಾಕ್ಷಾತ್ ಹಾಗೂ ಪಾರಂಪರ್ಯವು ಅವಿವಕ್ಷಿತವಾಗಿರುವುದರಿಂದ. ಭಿನ್ನಕ್ರಮೇಣ ಅನ್ವಯ ಎಂದರೆ ಯಥಾಶ್ರುತ-ಸ್ಥಾನಸಂಬಂಧಂ ವಿಹಾಯ ಅನ್ಯತ್ರ ಸ್ವಸಂಬಂಧಃ. 'ಅಖಿಲೈರಪಿ ಸುವಾಕ್ಯೈಃ' ಎಂಬಲ್ಲಿ

ಅಖಿಲಪದದೊಂದಿಗೆ ಅಪಿಶಬ್ದಕ್ಕೆ ಇರುವ ಸಂಬಂಧ ಎಂದು. ಅಭಿವ್ಯಾಪ್ತಿ ಎಂದರೆ ಎಲ್ಲ ವಾಕ್ಯ-ಗಳಲ್ಲಿ ಒಂದೂ ವಾಕ್ಯವು ಬೇರೆಯವರನ್ನು ಹೇಳುತ್ತಿಲ್ಲ. ಇದನ್ನು ಹಿಂದೆಯೇ ಬಿಡಿಸಲಾಗಿದೆ.

**ವಿಷ್ಣೂದ್ರೇಕಾಯ ಕಥ್ಯತೇ**

(ಶ್ರೀನಿಧಿತೀರ್ಥೀಯ)– **ನಾರಾಯಣಪ್ರತಿಪತ್ತ್ಯಂಗತಯಾ ಇತಿ** ॥ **ತದುಕ್ತಮ್** – 'ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ' (ಮ.ಭಾ.ತಾ.ನಿ.2–129) ಇತಿ । ರಾಜಸಂಬಂಧಿ-ರಾಜಾದ್ಯುತ್ಕರ್ಷವರ್ಣನಸ್ಯ ತದುತ್ಕರ್ಷಜ್ಞಾನಾರ್ಥತ್ವದರ್ಶನಾತ್ ।

ಧರ್ಮಾದಿಗಳು ಪ್ರಾಣಾದಿಗಳು ವೇದಪ್ರತಿಪಾದ್ಯವಾಗಿರುವುದು ನಾರಾಯಣನ ಜ್ಞಾನಕ್ಕೆ ಅಂಗ-ವಾಗಿ. ಹೊರತು ಸ್ವತಂತ್ರವಾಗಲ್ಲ. ತಾತ್ಪರ್ಯನಿರ್ಣಯದ ಈ ಮಾತು ಇಲ್ಲಿ ಸ್ಮರಣಾರ್ಹ – 'ವಿಷ್ಣುವಿನಲ್ಲಿ ಭಕ್ತ್ಯುದ್ರೇಕಕ್ಕಾಗಿ ವೈಷ್ಣವರ ಚರಿತ್ರೆಯನ್ನು ಹೇಳುವುದು' ಹಾಗಾಗಿ ವೈಷ್ಣವರು ಗ್ರಂಥಪ್ರತಿಪಾದ್ಯರಾಗುವುದು ವಿಷ್ಣುವಿನ ಪ್ರತಿಪತ್ತ್ಯಂಗವಾಗಿ. ಹಾಗೆಯೇ ರಾಜನಿಗೆ ಸಂಬಂಧಪಟ್ಟ ಬೇರೆ ಸಾಮಂತರಾಜರುಗಳ ಉತ್ಕರ್ಷವರ್ಣನೆಯು ರಾಜನ ಉತ್ಕರ್ಷಜ್ಞಾನಕ್ಕೆ ಅಂಗವಾಗಿ-ರುವಂತೆ.

**ಅತ್ರಾಪಿ ಪೂರ್ವವತ್ ಸದಾಪದಸ್ಯ ತಮಪಶ್ಚ ಪ್ರಯೋಜನಮವಧೇಯಮ್**

(ಪರಿಮಳ) – **ಪೂರ್ವವದಿತಿ** ॥ ಪೂರ್ವತ್ರ ಅನಯೋರ್ಯತ್ಪ್ರಯೋಜನಮುಕ್ತಂ ತದತ್ರ ಜ್ಞೇಯಮಿತಿ ನಾರ್ಥಃ । ಕಿಂತು ಯಥಾ ಅನ್ಯಾರ್ಥತಯಾ ವೇದೈಕದೇಶಪ್ರತಿಪಾದ್ಯಸ್ಯ ಧರ್ಮಾದೇಃ ಪ್ರಾಣಾದೇಶ್ಚ ಅಧಿಕೃತತ್ವವಾರಣಾಯ 'ಆಪ್ಯತಮಮ್' ಇತಿ ತಮಪ್‌ಪ್ರತ್ಯಯೋಽಖಿಲಾದಿಪದಂ ಚ ಪ್ರತ್ಯುಕ್ತಮ್ । ತತ್ರಾಪಿ ಧರ್ಮಾದೇಃ ಪ್ರಾಣಾದೇಶ್ಚ ಪ್ರಿಯತ್ವಮೇವ, ನ ತು ಪ್ರಿಯತಮತ್ವಮ್ । ತದಪಿ ಧರ್ಮಾದೇರ್ಭಗವತ್-ಪ್ರತಿಪತ್ತ್ಯಂಗತ್ವದಶಾಯಾಮ್ । ಕಾಮ್ಯತಾದಶಾಯಾಂ ತು ಪ್ರಿಯತ್ವಮಪಿ ನಾಸ್ತಿ । ಪ್ರಾಣಾದೇರ್ಭಗವದಂಗತ್ವೇನೈವ ಪ್ರಿಯತ್ವಂ ನ ತು ಸ್ವತಃ । ತಥಾ ಚ ತಯೋಃ ಕದಾಚಿತ್ ಪ್ರಿಯತ್ವಮಾತ್ರೇಽಪಿ ನ ತಯೋರ್ನಮ್ಯತ್ವಪ್ರಯೋಜಕೇಷ್ಟತ್ವಮ್ । ಅನಾದ್ಯ-ನಂತಕಾಲಮತಿಶಯೇನ ಅನನ್ಯಾರ್ಥತಯಾ ಪ್ರಿಯತ್ವರೂಪನಮ್ಯತ್ವಪ್ರಯೋಜಕಮಿಷ್ಟತ್ವಂ ನಾರಾ-ಯಣಸ್ಯೈವ । ಅತಃ ತಸ್ಯೈವ ನತಿರಿತಿ ದ್ಯೋತನಾಯ 'ಸದಾ' ಇತಿ 'ಪ್ರಿಯತಮಮ್' ಇತಿ ಚೋಕ್ತಮಿತಿ ವ್ಯಾಖ್ಯೇಯಮಿತ್ಯರ್ಥಃ ॥

'ಇಷ್ಟತ್ವಪ್ರದರ್ಶನಂ ಸದಾ ಪ್ರಿಯತಮಂ ಮಮ ಇತಿ' ಅತ್ರಾಪಿ ಪೂರ್ವವತ್ ಸದಾಪದಸ್ಯ ತಮಪಸ್ಯ ಪ್ರಯೋಜನಮವಧೇಯಮ್' - ಎಂಬ ಸುಧಾಪಂಕ್ತಿಯಲ್ಲಿ ಪೂರ್ವವತ್ ಎಂದರೆ ಹಿಂದೆ ಹೇಳಿದ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬಲ್ಲಿರುವ ಅಖಿಲ ಹಾಗೂ ಅಪಿ ಪದಗಳಿಗೆ

ಯಾವ ಪ್ರಯೋಜನವಿದೆಯೋ ಅದೇ ಇಲ್ಲಿ ತಿಳಿಯಬೇಕು ಎಂಬರ್ಥಬರುವ ಸಂಭವವಿದೆ. ಆದರೆ ಇದನ್ನು ಸ್ವೀಕರಿಸುವಂತಿಲ್ಲ. ಹೊರತು ಹಿಂದೆ ಹೇಗೆ ತಮಪ್‌ಪ್ರತ್ಯಯ ಹಾಗೂ ಅಪಿಪದಸಹಿತ ಅಖಿಲಪದವು ಭಗವತ್ಪ್ರತಿಪತ್ತ್ಯಂಗತಯಾ ವೇದೈಕದೇಶಪ್ರತಿಪಾದ್ಯರಾದ ಧರ್ಮಾದಿಗಳು ಹಾಗೂ ಪ್ರಾಣಾದಿಗಳನ್ನು ಅಧಿಕೃತರು ಎಂದು ವಾರಣೆ ಮಾಡಲು ಹೇಳಿದ್ದೇವೆಯೋ, ಅಂತಹವರಿಗೆ ಇಲ್ಲಿ ಇಷ್ಟತ್ವವಿಲ್ಲ ಹೊರತು ಭಗವಂತನಲ್ಲಿ ಮಾತ್ರ ಇಷ್ಟತ್ವವಿದೆ. ಆದ್ದರಿಂದ ಅವನಿಗೆ ನಮಸ್ಕಾರ ಎಂದು ತಿಳಿಸಲು ಸದಾ ಹಾಗೂ ಪ್ರಿಯತಮಮ್ ಎಂದು ಹೇಳಿದ್ದಾರೆ ಎಂದು ತಿಳಿಯಬೇಕು.

ಇಲ್ಲಿ ಧರ್ಮಾದಿಗಳು ಪ್ರಾಣಾದಿಗಳು ಪ್ರಿಯವಾಗಿದೆಯಷ್ಟೇ ಹೊರತು ಪ್ರಿಯತಮವಾಗಿಲ್ಲ. ಅದೂ ಕೂಡ ಧರ್ಮಾದಿಗಳು ಭಗವತ್ಪ್ರತಿಪತ್ತಿಗೆ ಅಂಗ ಎಂಬ ಸಂದರ್ಭದಲ್ಲಿ ಮಾತ್ರ ಪ್ರಿಯ. ಸ್ವತಂತ್ರ-ವಾಗಿ ಅವುಗಳೇ ಕಾಮ್ಯವಾಗಿದ್ದರೆ ಅವುಗಳಿಗೆ ಪ್ರಿಯತ್ವವು ಇಲ್ಲ. ಇನ್ನು ಪ್ರಾಣಾದಿಗಳು ಭಗವದಂಗವಾಗಿಯೇ ಪ್ರಿಯ ಹೊರತು ಸ್ವತಃ ಅಲ್ಲ. ಆದ್ದರಿಂದ ಯಾವಾಗಲಾದರೊಮ್ಮೆ ಧರ್ಮಪ್ರಾಣಾದಿಗಳು ಪ್ರಿಯವಾಗಿದ್ದರೂ ನಮ್ಯತ್ವಪ್ರಯೋಜಕವಾದ ಇಷ್ಟತ್ವ ಅವರಲ್ಲಿಲ್ಲ. ಏಕೆಂದರೆ 'ಇಷ್ಟತ್ವಂ ನಾಮ ಅನಾದ್ಯನಂತಕಾಲಂ ಅತಿಶಯೇನ ಅನನ್ಯಾರ್ಥತಯಾ ಪ್ರಿಯತ್ವಮ್'. ಪ್ರಿಯತ್ವ ಹಾಗೂ ಇಷ್ಟತ್ವ ಎಂಬ ಪದಗಳು ಒಂದೇ ಅರ್ಥವನ್ನು ಹೊಂದಿವೆ. ಆದರೆ ಇಲ್ಲಿ ನಮ್ಯತ್ವಕ್ಕೆ ಅರ್ಥಾತ್ ವಂದ್ಯತ್ವಕ್ಕೆ ಬೇಕಾದ ಪ್ರಿಯತ್ವ ಪ್ರಸಿದ್ಧವಾದ ಪ್ರಿಯತ್ವವಲ್ಲ. ಅನಾದ್ಯ-ನಂತಕಾಲದವರೆಗೆ ಅತಿಶಯವಾಗಿ ಬೇರೆಯದಕ್ಕೋಸ್ಕರವಾಗದೇ ಸ್ವತಂತ್ರವಾಗಿ ಯಾವುದು ಪ್ರಿಯವೋ ಅದೇ ಇಷ್ಟವಾದ ವಸ್ತು. ಅದು ಆಚಾರ್ಯರಿಗೆ ನಾರಾಯಣನೇ. ಬೇರೆಯವರಲ್ಲ.

## ಸದಾ ಮಮ ಪ್ರಿಯತಮಂ - ದಲಕೃತ್ಯವಿಚಾರ

(ಯಾದುಪತ್ಯ) – ಅತ್ರಾಪಿ **ಪೂರ್ವವತ್** ಇತಿ ॥ ಇಷ್ಟತ್ವಮಾತ್ರಂ ಸ್ರಕ್–ಚಂದನಾದೌ ವ್ಯಭಿಚಾರಿ, ಅನನ್ಯಾರ್ಥತಯಾ ಇಷ್ಟತ್ವಂ ಚ ತಮಬರ್ಥಭೂತೇ ಸುಖೇ ವ್ಯಭಿಚಾರಿ; ಅತಃ – **ಸದೇತಿ** ॥ ವೈಷಯಿಕಸುಖಂ ಚ ನ ಸದಾ ಇಷ್ಟಮ್ ಇತಿ ಭಾವಃ । ನನ್ವೇವಮಪಿ ಖುಷ್ಯಾದಿಸ್ವರೂಪಸುಖೇ ವ್ಯಭಿಚಾರಃ, **ಅತೋ ಮಮೇತಿ** ॥ ನ ಚೈವಂ ಸದಾ ಮಮ ಪ್ರಿಯತ್ವಾತ್ ಇತ್ಯೇವಾಸ್ತ್ವಿತಿ ವಾಚ್ಯಮ್; ತಥಾ ಚ ಮಮೈಕಾಂತಿನಃ ಸದಾ ಪ್ರಿಯತ್ವಾತ್, ಮಮ ಪ್ರಿಯತಮತ್ವಾತ್ ಇತಿ ಹೇತುದ್ವಯೇ ತಾತ್ಪರ್ಯಮ್, ಅತೋ ನ ವೈಯರ್ಥ್ಯಶಂಕಾ ಇತಿ; ಭಾರತ್ಯಾದಾವಪಿ ಗತತ್ವಾತ್, ಪ್ರಿಯತಮತ್ವಾತ್ ಇತ್ಯುಕ್ತೇ ಚ ನ ತತ್ರ ವ್ಯಭಿಚಾರಃ, ತಸ್ಯಾ ಅನ್ಯಾರ್ಥತಯೈವ ಪ್ರಿಯತ್ವಾದಿತಿ ಧ್ಯೇಯಮ್ ।

'ಪ್ರಿಯಂ' ಎಂದಿಷ್ಟೇ ಹೇಳಿದರೆ ಸ್ರಕ್‌ಚಂದನಾದಿಗಳಲ್ಲಿ (ಹಾರ-ಗಂಧ) ವ್ಯಭಿಚಾರ ಅವು ಪ್ರಿಯ-

ವಾಗಿರುವುದರಿಂದ. 'ಅನನ್ಯಾರ್ಥತಯಾ ಇಷ್ಟತ್ವಂ' ಎನ್ನಬೇಕು. ಹೀಗೆ ಹೇಳಿದಾಗ ಸ್ರಕ್-ಚಂದನಾದಿಗಳು ಅನ್ಯಾರ್ಥ ಅರ್ಥಾತ್ ಸುಖಕ್ಕೋಸ್ಕರ ಬೇಕಾಗಿವೆ. ಹಾಗಾಗಿ ಅನ್ಯಾರ್ಥತಯಾ ಇಷ್ಟತ್ವಬಂದರೂ ಅನನ್ಯಾರ್ಥತಯಾ ಇಷ್ಟತ್ವ ಬರಲಿಲ್ಲ. ವ್ಯಭಿಚಾರವಿಲ್ಲ. ಹಾಗಾದರೆ ಸುಖದಲ್ಲಿ ವ್ಯಭಿಚಾರ. ಸುಖವು ಬೇರೆಯದಕ್ಕೋಸ್ಕರ ಬಯಸುವುದಲ್ಲ. ಸ್ವತಂತ್ರವಾಗಿ ತಾನೇ ಇಷ್ಟವಾದ ವಸ್ತು. ಆದ್ದರಿಂದ ಸುಖದಲ್ಲಿ ಅನನ್ಯಾರ್ಥತಯಾ ಇಷ್ಟತ್ವವಿದೆ. ವ್ಯಭಿಚಾರದೋಷ ಬಂತು. ಇದರ ಪರಿಹಾರಕ್ಕಾಗಿ 'ಸದಾ' ಪದ. 'ಸದಾ'ಪದ ಪ್ರಯೋಗಿಸಿದರೆ ಸ್ರಕ್‌ಚಂದನಾದಿವಿಷಯಜನ್ಯಸುಖವು ಯಾವಾಗಲೂ ಇಷ್ಟವಲ್ಲವಾದ್ದರಿಂದ ವ್ಯಭಿಚಾರವಿಲ್ಲ. ಇಷ್ಟಾದರೂ ಋಷಿಮುನಿಗಳ ಸ್ವರೂಪ-ಸುಖದಲ್ಲಿ ವ್ಯಭಿಚಾರ ಅದು ಸದಾ ಅವರಿಗೆ ಇಷ್ಟವಾಗಿರುವುದರಿಂದ. ಅದರ ಪರಿಹಾರಕ್ಕಾಗಿ 'ಮಮ' ಎನ್ನಬೇಕು. ಹೀಗೆ ಹೇಳಿದಾಗ ಆಚಾರ್ಯರಿಗೆ ತಮ್ಮ ಸ್ವರೂಪಸುಖದಲ್ಲಿ ಇಷ್ಟತ್ವವು ಸದಾ ಇರುವುದಿಲ್ಲ. ಹಾಗಾದರೆ 'ಸದಾ ಮಮ ಪ್ರಿಯತ್ವಾತ್' ಎಂದಿಷ್ಟೇ ಹೇಳಲಿ ತಮಪ್‌ಪ್ರತ್ಯಯ ಬೇಡ. ಯಾವುದೇ ಹಿಂದಿನ ಸ್ಥಳಗಳಲ್ಲಿ ವ್ಯಭಿಚಾರದ ಪ್ರಸಕ್ತಿ ಇಲ್ಲವಾದ್ದರಿಂದ. ಅದಕ್ಕೆ ಇಲ್ಲಿನ ಅಭಿಪ್ರಾಯ ಹೀಗೆ ತಿಳಿಯಬೇಕು – ವಿವಕ್ಷಿತವಾದ ಹೇತುಗಳು ಎರಡು. ಮಮ ಏಕಾಂತಿನಃ ಸದಾ ಪ್ರಿಯತ್ವಾತ್, ಮಮ ಪ್ರಿಯತಮತ್ವಾತ್ ಎಂದು. ಆದ್ದರಿಂದ ಯಾವುದೇ ವೈಯರ್ಥ್ಯಕ್ಕೂ ಅವಕಾಶವಿಲ್ಲ. ಹೀಗೆ ಹೇಳಿದಾಗ ಏಕಾಂತಭಕ್ತನಾದ ನನಗೆ ನಾರಾಯಣ ಯಾವಾಗಲೂ ಪ್ರಿಯನಾಗಿದ್ದಾನೆ ಅಥವಾ ಪ್ರಿಯತಮನಾಗಿದ್ದಾನೆ ಎಂಬುದು ಸಿದ್ಧ. ಭಾರತೀದೇವಿಯಲ್ಲೂ 'ಮಮ ಸದಾ ಪ್ರಿಯತ್ವ' ಎಂಬ ಲಕ್ಷಣವಿದೆ. ಅದಕ್ಕಾಗಿ ಪ್ರಿಯತಮತ್ವ ಎಂದು ಹೇಳಬೇಕು. ಆಗ ಅಲ್ಲಿ ವ್ಯಭಿಚಾರವಿಲ್ಲ. ಏಕೆಂದರೆ ಭಾರತೀದೇವಿಯು ಅನ್ಯಾರ್ಥವಾಗಿ ಪ್ರಿಯಳು. ಅನನ್ಯಾರ್ಥವಾಗಿ ಅಲ್ಲ.

### ಯದ್ವಾ ನಾನಿರ್ಧಾರಿತಸ್ವರೂಪಸ್ಯ ಪ್ರಣಾಮೋ ಯುಕ್ತಃ - ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – यद्वा, नानिर्धारितस्वरूपस्य प्रणामो युक्तः। न चान्तरेण लक्षणं वस्तुनिर्धारणमित्यतो विभवादनेकानि नारायणस्य लक्षणान्यनेनोच्यन्ते। तत्र **निखिले**त्यनेन निखिलगुणत्वम्, पूर्णगुणत्वम्, स्वतो गुणैकदेहत्वं चेति विवक्षाभेदेन त्रीणि लक्षणान्युदितानि। **निर्दोष**मित्यनेनैकम्। **आप्यतम**मित्यनेन वेदादिमुख्यार्थत्वम्, अखिलवेदाद्यर्थत्वं चेति द्वयम्। **अस्ये**त्यनेनाष्टौ। **अशेषे**त्यनेन मुख्यवन्द्यत्वमुक्तम्, अशेषाद् विशेषेण वन्द्यमिति। **सदे**त्यनेन परमप्रेमयोग्यत्वम्। तस्यानानुभाविकत्वादसम्भवमाशङ्क्य सदा ममेत्युक्तम्। अन्येषामपि ज्ञानोत्तर-कालमिदमानुभाविकं मम तु सदेति। अपिशब्दो लक्षणसमुच्चये।

ಯದ್ವಾ - ಅಥವಾ, ಅನಿರ್ಧಾರಿತಸ್ವರೂಪಸ್ಯ - ನಿಶ್ಚಯವಿಲ್ಲದ ಸ್ವರೂಪಕ್ಕೆ, ಪ್ರಣಾಮಃ - ನಮಸ್ಕಾರವು, ನ ಯುಕ್ತಃ - ಯುಕ್ತವಲ್ಲ. ಲಕ್ಷಣಮಂತರೇಣ - ಲಕ್ಷಣವಿಲ್ಲದೆ, ವಸ್ತುನಿರ್ಧಾರಣಂ - ವಸ್ತುವಿನ ನಿಶ್ಚಯವು, ನ ಚ - ಆಗುವುದಿಲ್ಲ. ಇತ್ಯತಃ - ಎಂಬುವುದಕ್ಕೋಸ್ಕರ, ವಿಭವಾತ್ - ವೈಭವ ಇದ್ದುದರಿಂದ, ನಾರಾಯಣಸ್ಯ - ನಾರಾಯಣನಿಗೆ, ಅನೇಕಾನಿ ಲಕ್ಷಣಾನಿ - ಅನೇಕ-ಲಕ್ಷಣಗಳು, ಅನೇನ - ಈ ಮೊದಲನೆಯ ಪದ್ಯದಿಂದ, ಉಚ್ಯಂತೇ - ಹೇಳಲ್ಪಡುತ್ತವೆ.

ತತ್ರ - ಪ್ರಥಮಪದ್ಯದಲ್ಲಿರುವ ವಿಶೇಷಣಗಳಲ್ಲಿ, ನಿಖಿಲ ಇತ್ಯನೇನ - ನಿಖಿಲಪೂರ್ಣ-ಗುಣೈಕದೇಹಂ ಎಂಬ ವಿಶೇಷಣದಿಂದ, ನಿಖಿಲಗುಣತ್ವಂ, ಪೂರ್ಣಗುಣತ್ವಂ, ಸ್ವತೋ-ಗುಣೈಕದೇಹತ್ವಂ ಚ ಇತಿ - ನಿಖಿಲಗುಣತ್ವ ಪೂರ್ಣಗುಣತ್ವ ಹಾಗೂ ಸ್ವತೋಗುಣೈಕದೇಹತ್ವ ಎಂಬುದಾಗಿ ವಿವಕ್ಷಾಭೇದೇನ ವಕ್ತೃವಿನ ಇಚ್ಛೆಯು ಅನೇಕ ರೀತಿಯಾಗಿರುವುದರಿಂದ ತ್ರೀಣಿ ಲಕ್ಷಣಾನಿ - ಮೂರು ಲಕ್ಷಣಗಳು, ಉದಿತಾನಿ - ಹೇಳಲ್ಪಟ್ಟಿದೆ - "ನಿರ್ದೋಷಮ್" ಇತ್ಯನೇನ - ನಿರ್ದೋಷಂ ಎಂಬ ವಿಶೇಷಣದಿಂದ. ಏಕಮ್ - ಒಂದು ಲಕ್ಷಣವು (ಹೇಳಲ್ಪಟ್ಟಿದೆ). "ಆಪ್ಯತಮಂ" ಇತ್ಯನೇನ - ಆಪ್ಯತಮಂ ಎಂಬ ವಿಶೇಷಣದಿಂದ, ವೇದಾದಿಮುಖ್ಯಾರ್ಥತ್ವಂ - ಅಖಿಲವೇದಾದ್ಯ-ರ್ಥತ್ವಂ ಚೇತಿ - ವೇದಾದಿಮುಖ್ಯಾರ್ಥತ್ವ ಹಾಗೂ ಅಖಿಲವೇದಾದ್ಯರ್ಥತ್ವ - ಎಂಬುದಾಗಿ ದ್ವಯಂ - ಎರಡುಲಕ್ಷಣಗಳು.

"ಅಸ್ಯ" ಇತ್ಯನೇನ - ಅಸ್ಯೋದ್ಭವಾದಿದಂ ಎಂಬ ವಿಶೇಷಣದಿಂದ, ಅಷ್ಟೌ - ಎಂಟು ಲಕ್ಷಣಗಳು. "ಅಶೇಷ" ಇತ್ಯನೇನ - ಅಶೇಷವಿಶೇಷತೋಽಪಿ ವಂದ್ಯಂ - ಎಂಬ ವಿಶೇಷಣದಿಂದ, ಮುಖ್ಯವಂದ್ಯತ್ವಂ - ಮುಖ್ಯವಂದ್ಯತ್ವ ಎಂಬ ಲಕ್ಷಣವು, ಉಕ್ತಂ - ಹೇಳಲ್ಪಟ್ಟಿದೆ. ಅಶೇಷಾತ್ - ಎಲ್ಲರಿಗಿಂತಲೂ, ವಿಶೇಷೇಣ - ಮುಖ್ಯವಾಗಿ, ವಂದ್ಯಂ - ನಮಸ್ಕರಿಸಲ್ಪಡುವವನು, ಇತಿ - ಎಂಬುದಾಗಿ ಅರ್ಥ.

"ಸದಾ" ಇತ್ಯನೇನ - ಸದಾ ಮಮ ಪ್ರಿಯತಮಂ ಎಂಬ ವಿಶೇಷಣದಿಂದ, ಪರಮಪ್ರೇಮ-ಯೋಗ್ಯತ್ವಂ - ಪರಮಪ್ರೇಮಯೋಗ್ಯತ್ವ ಎಂಬ ಲಕ್ಷಣವು. ತಸ್ಯ - ಪರಮಪ್ರೇಮಯೋಗ್ಯತ್ವದ, ಅನಾನುಭವಿಕತ್ವಾತ್ - ಅನುಭವವಿಲ್ಲದಿರುವುದರಿಂದ, ಅಸಂಭವಮಾಶಂಕ್ಯ - ಲಕ್ಷಣವು ಕೂಡದಿರುವುದನ್ನು ಶಂಕಿಸಿ, "ಸದಾ ಮಮ" ಇತ್ಯುಕ್ತಮ್ - ಸದಾ ಮಮ ಎಂದು ಹೇಳಲ್ಪಟ್ಟಿದೆ. ಅನ್ಯೇಷಾಮಪಿ - ಆಚಾರ್ಯರರಿಗಿಂತ ಬೇರೆಯವರಿಗಾದರೂ ಕೂಡ, ಜ್ಞಾನೋತ್ತರಕಾಲಂ - ಅಪರೋಕ್ಷಜ್ಞಾನಬಂದ ನಂತರದ ಕಾಲದಲ್ಲಿ, ಇದಂ - ಇದು, ಆನುಭಾವಿಕಂ - ಅನುಭವ-

ಸಿದ್ಧವಾದುದು (ಎಂಬ ಅಭಿಪ್ರಾಯದಿಂದ), ಮಮ ತು ಸದಾ ಇತಿ - ನನಗಾದರೋ ಯಾವಾಗಲೂ ಎಂದಿದ್ದಾರೆ. "ಅಪಿ"ಶಬ್ದಃ - ಅಶೇಷವಿಶೇಷತೋಽಪಿ ಎಂಬಲ್ಲಿರುವ ಅಪಿ ಎಂಬ ಶಬ್ದವು, ಲಕ್ಷಣಸಮುಚ್ಚಯೇ - ಲಕ್ಷಣಗಳ ಸಮುಚ್ಚಯವೆಂಬ ಅರ್ಥದಲ್ಲಿದೆ.

ಸಾರ – ಮಂಗಳಪದ್ಯಕ್ಕೆ ಮೂರನೆಯ ವ್ಯಾಖ್ಯಾನ – ಇಲ್ಲಿ ನಾರಾಯಣನಿಗೆ ಅನೇಕ ವಿಶೇಷಣಗಳನ್ನು ಹೇಳಿದ್ದು ನಾರಾಯಣನ ಲಕ್ಷಣಗಳನ್ನು ತಿಳಿಸಲು. ಲಕ್ಷಣವನ್ನು ತಿಳಿಸಿದಾಗ ವಸ್ತುವಿನ ಸ್ವರೂಪದ ನಿರ್ಧಾರವಾಗುವುದು. ಅದಾದರೆ ಮಾತ್ರ ನಮಸ್ಕರಿಸುವುದು ಸರಿಯೆನಿಸುತ್ತದೆ. ಇಲ್ಲಿ ನಾರಾಯಣನಿಗೆ ಒಂದೊಂದು ವಿಶೇಷಣಗಳಿಂದ ಸಿಗುವ ಲಕ್ಷಣಗಳನ್ನು ನಿರೂಪಿಸಿದ್ದಾರೆ.

### ಲಕ್ಷಣಜ್ಞಾನವಿಲ್ಲದೇ ವಸ್ತುವಿನ ನಿರ್ಧಾರ ಅಶಕ್ಯ

**कम्बा –** नानिर्धारितस्वरूपस्येति ॥ **'त्वत्तोऽहमपकृष्टो मत्तस्त्वमुत्कृष्टः' इत्यनुसन्धानपूर्वकत्वात् प्रणामस्य, वस्तुस्वरूपनिर्धारणाभावे प्रणामो न युक्त इति भावः।** न चान्तरेणेति ॥ **लक्षणज्ञानं विनेतरव्यावृत्ततया वस्तुनिर्धारणं नेत्यर्थः।** कारणानीति ॥ **वस्तुनिर्धारणद्वारा अभिवादने प्रणामे कारणानीत्यर्थः।** 'विभवादनेकानि' **इति पाठे विभवादैश्वर्यालक्षणदारिद्र्याभावादनेकानीत्यर्थः।** त्रीणीति ॥ **समुदितस्यैकलक्षणत्वे व्यर्थविशेषणत्वप्रसङ्गादिति भावः। एवमुत्तरत्रापि द्रष्टव्यम्।** निर्दोषमित्यनेनेति ॥ निर्दोषमित्यनेनैकं **लक्षणमुदितमित्यन्वयः। न च वाच्यं निर्दोषपदेन दोष्यन्यत्वं दोषसंसर्गाभाववत्त्वं चेति लक्षणद्वयमुदितमिति वक्तुं शक्यत्वात् कथमेवमुच्यत इति। 'निर्गता दोषा यस्मात् स निर्दोषः' इति दोषसंसर्गाभावस्यैव प्रतीतेः। न चैवमपि दोषसंसर्गाभावस्य प्रागभावध्वंसरूपत्वे ब्रह्मण्यसम्भवः, अत्यन्ताभावरूपत्वे तु प्रामाणिकस्य तदसम्भव इति वाच्यम्। स्वानुयोगिकदोषप्रतियोगिकसंसर्गविशेषात्यन्ताभाववत्त्वस्य** निर्दोषपदेन **विवक्षितत्वादिति ॥**

"ನಾನಿರ್ಧಾರಿತಸ್ವರೂಪಸ್ಯ ಪ್ರಣಾಮೋ ಯುಕ್ತಃ" ಎಂಬಲ್ಲಿ ನಮಸ್ಕಾರವು ನಿನಗಿಂತ ನಾನು ಅಪಕೃಷ್ಟ, ನನಗಿಂತ ನೀನು ಉತ್ಕೃಷ್ಟ ಎಂಬ ಅನುಸಂಧಾನಪೂರ್ವಕವಾದ್ದರಿಂದ ವಸ್ತುಸ್ವರೂಪದ ನಿರ್ಧಾರವಿಲ್ಲದೇ ಇರುವಲ್ಲಿ ಪ್ರಣಾಮವು ಯುಕ್ತವಲ್ಲ ಎಂದು ಭಾವ. "ನ ಚಾಂತರೇಣ ಲಕ್ಷಣಂ

ವಸ್ತುನಿರ್ಧಾರಣಮ್" - ಎಂಬಲ್ಲಿ ಲಕ್ಷಣಜ್ಞಾನವಿಲ್ಲದೇ, 'ಬೇರೆ ವಸ್ತುಗಳಿಗಿಂತ ಭಿನ್ನವಾಗಿದೆ' ಎಂಬ ರೀತಿಯಾದ ವಸ್ತುನಿರ್ಧಾರವಾಗುವುದಿಲ್ಲ ಎಂದರ್ಥ.

**ಕಾರಣಾನೀತಿ ॥** ವಸ್ತುನಿರ್ಧಾರವಾಗುವ ಮುಖಾಂತರ ಮಾಡುವ ಅಭಿವಾದನಕ್ಕೆ ಅಂದರೆ ನಮಸ್ಕಾರಕ್ಕೆ ಕಾರಣಗಳು ಎಂದರ್ಥ. "ವಿಭವಾದನೇಕಾನಿ" ಎಂಬ ಪಾಠದಲ್ಲಿ ವಿಭವಾತ್ ಅಂದರೆ ಐಶ್ವರ್ಯದಿಂದ ಲಕ್ಷಣಗಳ ಕೊರತೆ ಇಲ್ಲವಾದ್ದರಿಂದ ಅನೇಕವಾಗಿವೆ ಎಂದರ್ಥ. **ತ್ರೀಣಿ ಇತಿ ॥** ನಿಖಿಲಪೂರ್ಣಗುಣೈಕದೇಹ ಎಂಬ ಸಮುದಾಯವು ಒಂದೇ ಲಕ್ಷಣವಾದಲ್ಲಿ ಏಕ ಮುಂತಾದ ವಿಶೇಷಣಗಳು ವ್ಯರ್ಥವಾಗುವ ಪ್ರಸಂಗವಿದೆ ಎಂದು ಭಾವ. ಹೀಗೆ ಮುಂದಿನ ಲಕ್ಷಣಗಳಲ್ಲಿಯೂ ತಿಳಿಯಬೇಕು. **ನಿರ್ದೋಷಮಿತ್ಯನೇನ ಇತಿ ॥** ನಿರ್ದೋಷಂ ಎಂಬುವುದರಿಂದ ಒಂದು ಲಕ್ಷಣವು ಹೇಳಲ್ಪಟ್ಟಿದೆ ಎಂದು ಅನ್ವಯ. ನಿರ್ದೋಷಂ ಎಂಬುವುದರಿಂದ ದೋಷ್ಯನ್ಯತ್ವ ಹಾಗೂ ದೋಷ-ಸಂಸರ್ಗಾಭಾವವತ್ತ್ವ ಎಂಬ ಎರಡು ಲಕ್ಷಣಗಳು ಹೇಳಲ್ಪಟ್ಟಿವೆ ಎಂದು ಹೇಳಲು ಸಾಧ್ಯವಿರುವುದರಿಂದ ಒಂದೇ ಲಕ್ಷಣವೆಂದು ಹೇಗೆ ಹೇಳುತ್ತೀರಿ? ಎಂದು ಶಂಕಿಸಕೂಡದು. ಏಕೆಂದರೆ 'ನಿರ್ಗತಾಃ ದೋಷಾಃ ಯಸ್ಮಾತ್ ಸಃ' ಯಾರಿಂದ ದೋಷಗಳು ಹೋಗಿವೆಯೋ ಅವನು ಎಂದು ಆಶ್ರಯಿಸಿದರೆ ದೋಷಸಂಸರ್ಗಾಭಾವವೇ ತೋರುವುದು. ಹೀಗೆ ಒಪ್ಪಿದರೂ ದೋಷಸಂಸರ್ಗಾಭಾವವು ದೋಷದ ಪ್ರಾಗಭಾವರೂಪ ಅಥವಾ ಧ್ವಂಸರೂಪವಾದರೆ ಬ್ರಹ್ಮನಲ್ಲಿ ಲಕ್ಷಣಕ್ಕೆ ಅಸಂಭವದೋಷ. ಅತ್ಯಂತಾಭಾವಸ್ವರೂಪವಾದರೆ ಪ್ರಾಮಾಣಿಕವಾದ ವಸ್ತುವಿಗೆ ಅತ್ಯಂತಾಭಾವದ ಅಸಂಭವ ಎಂದು ಶಂಕಿಸಬಾರದು. ಏಕೆಂದರೆ, ಸ್ವಾನುಯೋಗಿಕ-ದೋಷಪ್ರತಿಯೋಗಿಕ-ಸಂಸರ್ಗ-ವಿಶೇಷಾತ್ಯಂತಾಭಾವ-ವತ್ತ್ವವನ್ನು ನಿರ್ದೋಷ ಎಂಬ ಪದದಿಂದ ವಿವಕ್ಷೆ ಮಾಡಿದ್ದೀವಿ.

### ಕಾರಣಾನಿ ಎಂಬ ಪಾಠ

ವ್ಯಾ.ವಿ. – ಇಲ್ಲಿ ಕಾರಣಾನಿ ಇತಿ ಎಂಬುದಾಗಿ ಕಂಬಾಲೂರು ರಾಮಚಂದ್ರತೀರ್ಥರ ಟಿಪ್ಪಣಿಯಲ್ಲಿ ಪ್ರತೀಕವನ್ನು ಹಿಡಿದು 'ವಸ್ತುನಿರ್ಧಾರಣದ್ವಾರಾ ಅಭಿವಾದನೇ ಪ್ರಣಾಮೇ ಕಾರಣಾನೀತ್ಯರ್ಥಃ' ಎಂದು ವಿವರಿಸಿರುವುದರಿಂದ ಸುಧಾಮೂಲದಲ್ಲಿ 'ಕಾರಣಾನಿ' ಎಂಬ ಪದವಿದ್ದು ಈಗ ನಮಗೆ ಅನೇಕ ಪಾಠಗಳಲ್ಲಿ ಕಾಣುವುದಿಲ್ಲ. ಹಾಗಾಗಿ ಸುಧಾಮೂಲದ ಪಾಠ ಹೀಗಿರಬೇಕು – "ನಚಾಂತರೇಣ ಲಕ್ಷಣಂ ವಸ್ತುನಿರ್ಧಾರಣಮಿತ್ಯತಃ ಕಾರಣಾನ್ಯನೇಕಾನಿ ನಾರಾಯಣಸ್ಯ ಲಕ್ಷಣಾನಿ ಅನೇನ ಉಚ್ಯಂತೇ". ಈ ಅಭಿಪ್ರಾಯದಿಂದಲೇ ಮುಂದಕ್ಕೆ 'ವಿಭವಾದನೇಕಾನಿ' ಎಂಬ ಪಾಠದಲ್ಲಿಯಾದರೋ ಹೀಗೆ ಅರ್ಥ ಎಂದು ವಿವರಿಸಿದ್ದಾರೆ.

### ನಿರ್ದೋಷತ್ವಂ ಎಂಬುದರಿಂದ ವಿವಕ್ಷಿತವಾದ ಅರ್ಥ

"ನಿರ್ದೋಷತ್ವಂ" ಎಂಬ ಭಗವಂತನ ಲಕ್ಷಣದಿಂದ ವಿವಕ್ಷಿತವಾದ ಅರ್ಥ ಇದು – ನಿರ್ದೋಷ-

ಪದದಿಂದ ದೋಷಸಂಸರ್ಗಾಭಾವವು ಅಭಿಪ್ರೇತ. ಸಂಸರ್ಗಾಭಾವವು ಮೂರು ರೀತಿಯಾಗಿ ಇರುವುದರಿಂದ ಅವುಗಳಲ್ಲಿ ದೋಷಸಂಸರ್ಗಾಭಾವವು ಪ್ರಾಗಭಾವದಿಂದಾದರೆ ಅನಾದಿಃ ಸಾಂತಃ ಪ್ರಾಗಭಾವಃ - ಎಂದಿರುವಂತೆ ಒಮ್ಮೆ ಭಗವಂತನಲ್ಲಿ ದೋಷಸಂಸರ್ಗಪ್ರಾಗಭಾವದ ನಾಶವಾಗಿ ದೋಷಸಂಸರ್ಗದ ಪ್ರಸಕ್ತಿ ಉಂಟಾಗುವುದು. ಹಾಗಾಗಿ ಇದನ್ನು ಹೇಳಲು ಬರುವುದಿಲ್ಲ. ಇನ್ನು ದೋಷಸಂಸರ್ಗಾಭಾವವೆಂದರೆ ದೋಷಗಳ ಪ್ರಧ್ವಂಸ ಎಂಬ ವಿವಕ್ಷೆ ಮಾಡಿದರೆ ಸತ ಏವ ಧ್ವಂಸಃ - ಎಂಬ ನಿಯಮದಂತೆ ಮೊದಲು ಇದ್ದ ವಸ್ತುವಿಗೆ ನಾಶ ಎಂದಿರುವುದರಿಂದ ಭಗವಂತನಲ್ಲಿ ದೋಷದ ಅಸ್ತಿತ್ವವನ್ನು ಯಾವುದೋ ಒಂದು ಕಾಲದಲ್ಲಿ ಒಪ್ಪಬೇಕಾದೀತು. ಇನ್ನು ಅತ್ಯಂತಾಭಾವವೆಂದು ದೋಷಸಂಸರ್ಗಾಭಾವ ಎಂಬ ಪದದಿಂದ ಅಭಿಪ್ರೇತವಾಗಿದ್ದರೆ ಆಗ ಅತ್ಯಂತಾಭಾವವು ಅಪ್ರಾಮಾಣಿಕಪ್ರತಿಯೋಗಿಕ - ಎಂಬ ನಿಯಮವಿರುವುದರಿಂದ ಇದನ್ನು ಭಗವಂತನಲ್ಲಿ ಹೇಳಲು ಅಸಾಧ್ಯ ಎಂದಾಗುವುದು. ಏಕೆಂದರೆ, ದೋಷಸಂಸರ್ಗವು ಭಗವಂತನನ್ನು ಬಿಟ್ಟು ಜೀವಾದಿಗಳಲ್ಲಿ ಪ್ರಾಮಾಣಿಕವಾಗಿದೆ. ಹಾಗಾಗಿ ಇಲ್ಲಿ ಅತ್ಯಂತಾಭಾವವನ್ನೇ ವಿವಕ್ಷೆ ಮಾಡಿ ಪರಿಹರಿಸುತ್ತಾರೆ. ಅದು ಹೀಗೆ –

ಇಲ್ಲಿ ವಿವಕ್ಷಿತವಾದ ಅಭಾವವು ಸಂಸರ್ಗಸಾಮಾನ್ಯಾತ್ಯಂತಾಭಾವವಲ್ಲ ಹೊರತು ಸಂಸರ್ಗ-ವಿಶೇಷಾತ್ಯಂತಾಭಾವ. ಅರ್ಥಾತ್ ಸ್ವಾನುಯೋಗಿಕದೋಷಪ್ರತಿಯೋಗಿಕಸಂಸರ್ಗವಿಶೇಷಾತ್ಯಂತಾಭಾವವೆಂಬುದು ದೋಷಸಂಸರ್ಗಾಭಾವಪದವಿವಕ್ಷಿತವಾಗಿದೆ. ಸ್ವಪದದಿಂದ ಭಗವಂತನನ್ನು ಗ್ರಹಿಸಬೇಕು. ಇವನು ಅನುಯೋಗಿ. ದೋಷಗಳು ಪ್ರತಿಯೋಗಿಯಾಗಿವೆ. ಇಂತಹ ಪ್ರತಿಯೋಗಿ - ಅನುಯೋಗಿಗಳುಳ್ಳ ಸಂಸರ್ಗವು ಅಪ್ರಾಮಾಣಿಕವೇ. ಏಕೆಂದರೆ ಭಗವಂತನಲ್ಲಿ ದೋಷಗಳು ಪ್ರಮಾಣಸಿದ್ಧವಲ್ಲ. ಹಾಗಾಗಿ ಇದರ ಅತ್ಯಂತಾಭಾವವನ್ನು ವಿವಕ್ಷೆ ಮಾಡಿದರೆ ಯಾವ ಅನು-ಪಪತ್ತಿಯೂ ಇರುವುದಿಲ್ಲ.

ಇಲ್ಲಿ ಕುಂಡಲಗಿರಿ ಆಚಾರ್ಯರು - 'ನಿರ್ದೋಷತ್ವಂ' ಎಂಬುವುದರಿಂದ ಹೀಗೆ ವಿವಕ್ಷೆ ಮಾಡಿದ್ದಾರೆ. "ನಿರಾದಯಃ ಕ್ರಾಂತಾದ್ಯರ್ಥೇ ಪಂಚಮ್ಯಾ" ಎಂಬ ಮಾತಿನಂತೆ ನಿಷ್ಕ್ರಾಂತಃ ದೋಷೇಭ್ಯಃ ಎಂಬುದಾಗಿ ಅಥವಾ ನಿರ್ಗತಾಃ ದೋಷಾಃ ಯಸ್ಮಾತ್ - ಎಂಬುದಾಗಿಯಾದರೂ ಸಮಾಸ-ಮಾಡಿದಾಗ ದೋಷಪ್ರಾಗಭಾವ ಅಥವಾ ದೋಷಧ್ವಂಸವು ಭಗವಂತನ ಲಕ್ಷಣವಾಗಲು ಸಾಧ್ಯವಿಲ್ಲವಾದ್ದರಿಂದ ದೋಷಾತ್ಯಂತಾಭಾವವನ್ನೇ ಭಗವಂತನ ಲಕ್ಷಣವೆಂದು ಅನ್ನಬೇಕು. ಆದರೆ ಅಜ್ಞಾನ, ಪಾರತಂತ್ರ್ಯ ಮೊದಲಾದ ದೋಷಗಳ ಸಂಸರ್ಗವು ಭಗವಂತನನ್ನು ಬಿಟ್ಟು ಬೇರೆ ಕಡೆ ಪ್ರಮಾಣಸಿದ್ಧವಾಗಿರುವುದರಿಂದ ಅದನ್ನು ನಿಷೇಧಮಾಡಲು ಸಾಧ್ಯವಿಲ್ಲ. ಏಕೆಂದರೆ ಪ್ರಾಮಾಣಿಕವಾದದ್ದನ್ನು ನಿಷೇಧ ಮಾಡಲು ಬರುವುದಿಲ್ಲ ಎಂದರೆ ಅದಕ್ಕೆ ಇದು ಉತ್ತರ. -

"ಭಗವದನುಯೋಗಿಕದೋಷಪ್ರತಿಯೋಗಿಕಸಂಸರ್ಗವು ಅಪ್ರಾಮಾಣಿಕವಾದ್ದರಿಂದ ಅದರ ಅತ್ಯಂತಾಭಾವವು ಭಗವಂತನಲ್ಲಿ ಸುಲಭಸಾಧ್ಯ" - ಎಂದಿದ್ದಾರೆ.

## ವಿಶೇಷಣತ್ರಯೋಕ್ತಿಯು ನಿರ್ನಿಮಿತ್ತಕ

(ಪರಿಮಳ)- ನನು ನಮ್ಯತ್ವಪ್ರಯೋಜಕವೈಶಿಷ್ಟ್ಯಸ್ಯ ಅಧಿಕೃತತ್ವಾದೇರಿವ ಏಕೇನ ವಿಶೇಷಣೇನಾಪಿ ಉಕ್ತಿಸಂಭವಾತ್ ವಿಶೇಷಣತ್ರಯೋಕ್ತಿಃ ನಿರ್ಬೀಜಾ ಇತ್ಯತ ಆಹ – ಯದ್ವಾ ಇತಿ ॥ ವೈಯರ್ಥ್ಯ-ನಿರಾಸಾಯ ಉಕ್ತಮ್ – ವಿಭವಾದಿತಿ ॥ ಐಶ್ವರ್ಯಾಧಿಕ್ಯಾತ್ ಇತ್ಯರ್ಥಃ । ಅನೇನ = ಆದ್ಯ-ಪದ್ಯೇನ । ಸ್ವತಃ ಇತಿ ಶ್ರೀಮುಕ್ತಯೋರ್ವ್ಯಾದಾಸಾಯ ।

ಯದ್ವಾ - ಈ ಸುಧಾಭಾಗಕ್ಕೆ ಅವತಾರಿಕೆಯನ್ನು ರಾಯರು ನೀಡುತ್ತಿದ್ದಾರೆ — ಅಲ್ಲ। ನಮ್ಯತ್ವಕ್ಕೆ ಪ್ರಯೋಜಕವಾದದ್ದು ಮೂರು. ಇಷ್ಟತ್ವ, ಅಧಿಕೃತತ್ವ, ವಿಶಿಷ್ಟತ್ವ. ಅವುಗಳಲ್ಲಿ ಅಧಿಕೃತತ್ವವನ್ನು ಇಷ್ಟತ್ವವನ್ನು ಒಂದೊಂದೇ ವಿಶೇಷಣಗಳಿಂದ ತಿಳಿಸಿಕೊಟ್ಟಿದ್ದರು. 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎನ್ನುವುದರಿಂದ ಅಧಿಕೃತತ್ವವನ್ನು, 'ಸದಾ ಪ್ರಿಯತಮಂ ಮಮ' ಎನ್ನುವುದರಿಂದ ಇಷ್ಟತ್ವವನ್ನು. ಅದೇ ರೀತಿ ವಿಶಿಷ್ಟತ್ವವನ್ನು ಒಂದೇ ವಿಶೇಷಣದಿಂದಲೇ ಅರ್ಥಾತ್ 'ನಿಖಿಲ-ಪೂರ್ಣಗುಣೈಕದೇಹಂ' ಅಥವಾ 'ನಿರ್ದೋಷಂ' ಅಥವಾ 'ಅಸ್ಯೋದ್ಭವಾದಿದಂ' ಇವುಗಳಲ್ಲಿ ಒಂದರಿಂದಲೇ ಹೇಳಬಹುದಿತ್ತು. ಹಾಗೆ ಮಾಡದೆ ಮೂರನ್ನೂ ಹೇಳಿದ್ದಕ್ಕೆ ಯಾವುದೇ ವಿಶೇಷ-ಕಾರಣವಿಲ್ಲ. ಈ ಪ್ರಶ್ನೆಗೆ ಉತ್ತರವಾಗಿ "ಯದ್ವಾ ನ ಅನಿರ್ಧಾರಿತಸ್ವರೂಪಸ್ಯ" ಎಂಬೀ ಸುಧಾ ಮೂಲವು ಹೊರಟಿದೆ.

ಈ ಭಾಗದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬುದರಿಂದ ಮೂರು ಲಕ್ಷಣಗಳನ್ನು ಸೂಚನೆ ಮಾಡಿದ್ದಾರೆ. ಈ ರೀತಿ ಹಲವು ವಿಶೇಷಣಗಳಿಂದ ಅನೇಕಲಕ್ಷಣಗಳನ್ನು ತಿಳಿಸಿದ್ದಾರೆ. ಇದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ವಿಭವಾತ್' ಎಂದು ಉತ್ತರ. ವಿಭವ ಎಂದರೆ ಅಧಿಕ ಐಶ್ವರ್ಯ ಎಂದರ್ಥ. ಭಗವಂತನ ಐಶ್ವರ್ಯದಲ್ಲಿ ಆಧಿಕ್ಯ ಇರುವುದರಿಂದ ಅದಕ್ಕನುಗುಣವಾಗಿ ಅನೇಕ ಲಕ್ಷಣಗಳು. 'ನಿಖಿಲ ಇತ್ಯನೇನ' ಎನ್ನುವಲ್ಲಿ ಅನೇನ ಎಂಬ ಪದಕ್ಕೆ ನಿಖಿಲ ಎಂಬ ವಿಶೇಷಣದಿಂದ ಎಂದರ್ಥವಲ್ಲ. ಕಿಂತು 'ನಿಖಿಲಪೂರ್ಣಗುಣ' ಎಂಬ ಮೊದಲನೆಯ ಪದ್ಯದಿಂದ ಎಂದು. 'ಸ್ವತೋ ಗುಣೈಕದೇಹತ್ವಂ' ಎಂಬ ಲಕ್ಷಣದಲ್ಲಿ ಸ್ವತಃ ಎಂಬ ಪದವು ಶ್ರೀದೇವಿ ಹಾಗೂ ಮುಕ್ತರುಗಳನ್ನು ವ್ಯಾವೃತ್ತಿಮಾಡಲು ಇದೆ.

## ಪ್ರಕೃತ್ಯರ್ಥಭೂತನಾರಾಯಣಸ್ವರೂಪನಿರ್ಧಾರಕವಾದ ಲಕ್ಷಣಗಳು

(ವಾಕ್ಯಾರ್ಥಚಂದ್ರಿಕಾ) - ಏವಂ 'ನಮಾಮಿ' ಇತಿ ಕ್ರಿಯಾಸಮಭಿವ್ಯಾಹೃತದ್ವಿತೀಯಾವಿಭಕ್ತ್ಯರ್ಥ-

ನಮ್ಯತ್ವೋಪಪಾದಕತಯಾ 'ನಿಖಿಲ' ಇತ್ಯಾದೀನಿ ನಾರಾಯಣವಿಶೇಷಣಾನೀತಿ ವ್ಯಾಖ್ಯಾಯ, ಪ್ರಕೃತ್ಯರ್ಥಭೂತನಾರಾಯಣಸ್ವರೂಪನಿರ್ಧಾರಣಹೇತುಲಕ್ಷಣಪರತಯಾಽಪಿ ತಾನಿ ವ್ಯಾಖ್ಯಾತಿ - ಯದ್ವೇತಿ ॥

ಅತ್ರ ವಿಶಿಷ್ಟಸ್ಯ ಲಕ್ಷಣತ್ವೇ ನಿಖಿಲಪೂರ್ಣಪದಯೋಃ ಅನ್ಯತರವೈಯರ್ಥ್ಯಾಪಾತಾತ್, ತದ್ಗರ್ಭ-ಲಕ್ಷಣದ್ವಯಪರತ್ವೇ ಗುಣಾನಾಂ ದೇಹವಿಶೇಷಣತ್ವೇನ ನಾರಾಯಣವಿಶೇಷಣತ್ವಾಭಾವೇನ ದೇಹಪದವೈಯರ್ಥ್ಯಶಂಕಾಽನುದಯೇಽಪಿ ಏಕಪದವೈಯರ್ಥ್ಯಾಪಾತಾದ್; ಗುಣಾನಾಂ ನಾರಾ-ಯಣವಿಶೇಷಣತ್ವಂ, ಗುಣಪದಾವೃತ್ತಿಂ, ತೃತೀಯಲಕ್ಷಣೇ ಸ್ವಾತಂತ್ರ್ಯಂ ಚ ವಿವಕ್ಷಿತ್ವಾ ತ್ರೀಣಿ ಲಕ್ಷಣಾನಿ ಜ್ಞಾತವ್ಯಾನೀತ್ಯಾಹ - ತತ್ರೇತಿ ॥

'ನಮಾಮಿ' ಎನ್ನುವ ಕ್ರಿಯಾಪದದಿಂದ ಸಮಭಿವ್ಯಾಹೃತವಾದ ಅರ್ಥಾತ್ ಸಹೋಚ್ಚರಿತವಾದ ದ್ವಿತೀಯಾವಿಭಕ್ತಿಗೆ ನಮ್ಯತ್ವ ಎಂದರ್ಥ. ಅರ್ಥಾತ್ ಕರ್ಮತ್ವ. ಇದನ್ನು ಉಪಪಾದನೆಮಾಡಲು 'ನಿಖಿಲ' ಮುಂತಾದವು ನಾರಾಯಣನಿಗೆ ವಿಶೇಷಣಗಳಾಗಿವೆ ಎಂದು ವ್ಯಾಖ್ಯಾನ ಇದುವರೆಗೆ ಮಾಡಿದರು. ಇದೀಗ ದ್ವಿತೀಯಾವಿಭಕ್ತ್ಯಂತಪದದ ಪ್ರಕೃತ್ಯರ್ಥವಾದ ನಾರಾಯಣನ ಸ್ವರೂಪವನ್ನು ನಿರ್ಧರಿಸುವ ಲಕ್ಷಣಗಳು 'ನಿಖಿಲ' ಮುಂತಾದವುಗಳು ಎಂದು ವ್ಯಾಖ್ಯಾನಿಸುತ್ತಿದ್ದಾರೆ — ಯದ್ವಾ ನ ಎಂಬುದಾಗಿ. ಇಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬುದು ಒಂದೇ ಲಕ್ಷಣವಾದರೆ ನಿಖಿಲ, ಪೂರ್ಣ ಪದಗಳಲ್ಲಿ ಒಂದಕ್ಕೆ ವ್ಯೆಯರ್ಥ್ಯ ಬಂದೇ ಬರುವುದು. ಇನ್ನು ಪ್ರತ್ಯೇಕವಾಗಿ ನಿಖಿಲಪದ-ಘಟಿತವಾದ ಲಕ್ಷಣ, ಹಾಗೆ ಪೂರ್ಣಪದಘಟಿತಲಕ್ಷಣವನ್ನು ಹೇಳಿದರೂ ಆ ಲಕ್ಷಣಗಳಲ್ಲಿ ಗುಣಗಳು ದೇಹಕ್ಕೆ ವಿಶೇಷಣವಾದರೆ ಆಗ ಯದ್ಯಪಿ ದೇಹಪದವು ವ್ಯರ್ಥವಾಗದೇ ಇರಬಹುದು. ಆದರೆ ಏಕಪದವು ವ್ಯರ್ಥವಾದೀತು। ಈ ಪಕ್ಷದಲ್ಲಿ ದೇಹವು ನಾರಾಯಣನಿಗೆ ವಿಶೇಷಣವಾಗಿ ಇಲ್ಲ. ಇದಕ್ಕೆ ಉತ್ತರವಾಗಿ ಗುಣಗಳನ್ನು ನಾರಾಯಣನಲ್ಲಿ ವಿಶೇಷಣವಾಗಿ ಹೇಳಬೇಕು. ಗುಣಪದದ ಆವೃತ್ತಿಯನ್ನು ಮಾಡಬೇಕು. ಹಾಗೂ ಮೂರನೆಯ ಲಕ್ಷಣದಲ್ಲಿ ಸ್ವಾತಂತ್ರ್ಯವನ್ನು ವಿವಕ್ಷೆ ಮಾಡಬೇಕು. ಈ ರೀತಿ ನಿಖಿಲಪೂರ್ಣಗುಣೈಕದೇಹಂ ಎಂಬುದರಿಂದ ಮೂರು ಲಕ್ಷಣಗಳನ್ನು ತಿಳಿಯಬೇಕು ಎಂಬ ಅಭಿಪ್ರಾಯದಿಂದ "ತತ್ರ ನಿಖಿಲಪೂರ್ಣಗುಣೈಕದೇಹಂ ಇತ್ಯನೇನ" ಎಂಬ ಸುಧಾಭಾಗವು ಹೊರಟಿದೆ.

## ಲಕ್ಷಣಪರತ್ವೇನಾಪಿ ವ್ಯಾಖ್ಯಾನ

(ಆನಂದ) — ವಂದ್ಯತ್ವಪ್ರಯೋಜಕ-ವಿಶಿಷ್ಟತ್ವ-ಅಧಿಕೃತತ್ವ-ಇಷ್ಟತ್ವೋಪಪಾದಕತ್ವೇನ ಏತಾನಿ ವಿಶೇಷಣಾನಿ ವ್ಯಾಖ್ಯಾಯ ಅಧುನಾ ಲಕ್ಷಣಪರತ್ವೇನಾಪಿ ವ್ಯಾಚಷ್ಟೇ — ಯದ್ವೇತಿ ॥

ಯದ್ವಾ - ಇಲ್ಲಿಯವರೆಗೂ 'ನಿಖಿಲಪೂರ್ಣಗುಣೈಕದೇಹಂ' ಮುಂತಾದ ವಿಶೇಷಣಗಳು ಭಗವಂತನು ವಂದ್ಯನಾಗುವುದಕ್ಕೆ ಬೇಕಾದ ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವಗಳನ್ನು ಸಮರ್ಥಿಸುತ್ತವೆ ಎಂದು ವ್ಯಾಖ್ಯಾನಿಸಲಾಯಿತು. ಇದೀಗ ಭಗವಂತನ ಲಕ್ಷಣಗಳನ್ನು ಹೇಳಲು 'ನಿಖಿಲಪೂರ್ಣಗುಣೈಕದೇಹಂ' ಮುಂತಾದ ವಿಶೇಷಣಗಳು ಇವೆ ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ - ಯದ್ವಾ ಎಂಬುದಾಗಿ.

## ವಿಭವಾತ್ ಎಂದರೇನು?

(ಆನಂದ) — ನನು ಏಕೇನೈವ ಲಕ್ಷಣವಚನೇನೈವ ಸ್ವರೂಪನಿರ್ಧಾರಣಸಂಭವಾತ್ ಅನೇಕೇಷಾಂ ಲಕ್ಷಣಾನಾಂ ವೈಯರ್ಥ್ಯಮಿತ್ಯತ ಆಹ — ವಿಭವಾದಿತಿ ॥ ಜ್ಞಾನಾಧಿಕ್ಯಾದಿರೂಪಸಾಮರ್ಥ್ಯವಿಶೇಷಾತ್ ಇತ್ಯರ್ಥಃ । ಅಲ್ಪಜ್ಞೇನ ಖಲು ಏಕಂ ಲಕ್ಷಣಮುಚ್ಯತೇ, ಆಚಾರ್ಯಸ್ಯ ತು ಸರ್ವಜ್ಞತ್ವಾದನೇಕಲಕ್ಷಣವಚನಂ ಯುಕ್ತಮಿತಿ ಭಾವಃ । ಅಥವಾ ನಾರಾಯಣಸ್ಯ ಏಕತ್ವಾತ್ ತಸ್ಯ ಕಥಮನೇಕಾನಿ ಲಕ್ಷಣಾನಿ? ಇತ್ಯತ ಉಕ್ತಂ — ವಿಭವಾದಿತಿ ॥ ಸರ್ವೋತ್ತಮತ್ವಾದಿರೂಪೈಶ್ವರ್ಯವತ್ತ್ವಾದಿತ್ಯರ್ಥಃ । ತಥಾ ಚ ಮಹದೈಶ್ವರ್ಯವತ್ತ್ವಾತ್ ತಸ್ಯ ಅನೇಕಲಕ್ಷಣಾನಿ ಯುಜ್ಯಂತ ಇತಿ ॥

ವಿಭವಾತ್ - ಒಂದೇ ಲಕ್ಷಣವನ್ನು ಹೇಳುವುದರಿಂದಲೇ ಭಗವಂತನ ಸ್ವರೂಪದ ನಿರ್ಧಾರವಾಗುವುದರಿಂದ ಅನೇಕ ಲಕ್ಷಣಗಳನ್ನು ಹೇಳಿದ್ದು ವ್ಯರ್ಥ ಎಂಬ ಪ್ರಶ್ನೆಗೆ ಉತ್ತರವಾಗಿ - ವಿಭವಾತ್ ಎಂದಿದ್ದಾರೆ. ಇದರ ಅರ್ಥ - ಜ್ಞಾನಾಧಿಕ್ಯ ಮೊದಲಾದ ಸಾಮರ್ಥ್ಯವಿಶೇಷ ಇರುವುದರಿಂದ ಎಂದರ್ಥ. ವಿಭವ ಎಂಬ ಪದಕ್ಕೆ ಸಾಮರ್ಥ್ಯವಿಶೇಷ. ಇದರ ಅಭಿಪ್ರಾಯವಿದು - ಅಲ್ಪಜ್ಞಾನಿಯಾದ ವ್ಯಕ್ತಿಯು ಒಂದೇ ಲಕ್ಷಣವನ್ನು ಹೇಳುವವನಾಗಿರುತ್ತಾನೆ. ಅದೇ ಆಚಾರ್ಯರಾಗಬೇಕಾದರೆ ಸರ್ವಜ್ಞರಾದ್ದರಿಂದ ಅನೇಕಲಕ್ಷಣಗಳನ್ನು ಹೇಳಿದ್ದು ಸರಿಯಾಗಿದೆ ಎಂದು ತಿಳಿಯಬೇಕು.

ಅಥವಾ ನಾರಾಯಣನು ಒಬ್ಬನೇ ಆದ್ದರಿಂದ ಅನೇಕ ಲಕ್ಷಣಗಳು ಏಕೆ ಹೇಳಿದ್ದು ಎಂಬ ಪ್ರಶ್ನೆಗೆ ಉತ್ತರವಾಗಿ ವಿಭವಾತ್ ಎಂದಿದ್ದಾರೆ. ಇಲ್ಲಿ ವಿಭವಾತ್ ಎಂಬ ಪದದ ಅರ್ಥ - ಸರ್ವೋತ್ತಮತ್ವ ಮೊದಲಾದ ಐಶ್ವರ್ಯವುಳ್ಳವನಾದ್ದರಿಂದ ಎಂದು. ತಥಾ ಚ - ವಿಭವ ಎಂಬ ಪದಕ್ಕೆ ಐಶ್ವರ್ಯ ಎಂದರ್ಥ. ಹಾಗಾಗಿ ಒಟ್ಟು ತಾತ್ಪರ್ಯ - ಮಹತ್ತಾದ ಐಶ್ವರ್ಯ ಇರುವುದರಿಂದ ನಾರಾಯಣನಿಗೆ ಅನೇಕ ಲಕ್ಷಣಗಳನ್ನು ಹೇಳಿದ್ದು ಸರಿಯಾಗಿದೆ.

## ಯಥಾ ನ ವೈಯರ್ಥ್ಯಂ ತಥಾ ಲಕ್ಷಣಕಥನಮ್

(ಆನಂದ) — ನನು ಪ್ರಥಮವಿಶೇಷಣೇನ ನಿಖಿಲಪೂರ್ಣಗುಣೈಕದೇಹತ್ವಂ ಲಕ್ಷಣಮುಕ್ತಮ್ ।

ತತ್ರ ಪೂರ್ಣನಿಖಿಲಪದಯೋರ್ವೈಯರ್ಥ್ಯಮ್ । ಪೂರ್ಣಗುಣತ್ವಸ್ಯ ನಿಖಿಲಗುಣತ್ವಸ್ಯೈವ ವಾ ಲಕ್ಷಣತ್ವಸಂಭವಾತ್ ಇತ್ಯತೋ ಯಥಾ ನ ವೈಯರ್ಥ್ಯಂ ತಥಾ ಲಕ್ಷಣಾನ್ಯಾಹ — ತತ್ರೇತಿ ॥ ಗುಣೈಕದೇಹತ್ವಸ್ಯ ಲಕ್ಷ್ಮ್ಯಾ ಅಪಿ ಸತ್ತ್ವಾತ್ ತದರ್ಥಂ 'ಸ್ವತ' ಇತ್ಯುಕ್ತಮ್ । ತಸ್ಯಾಶ್ಚ ಸ್ವಾತಂತ್ರ್ಯೇಣ ಗುಣೈಕದೇಹತ್ವಾಭಾವಾತ್ ನಾತಿಪ್ರಸಂಗಃ ।

ತತ್ರ ನಿಖಿಲಗುಣ ಇತ್ಯನೇನ - 'ನಿಖಿಲಪೂರ್ಣಗುಣೈಕದೇಹಂ' ಎಂಬ ಮೊದಲನೆಯ ವಿಶೇಷಣದಿಂದ ನಿಖಿಲಪೂರ್ಣಗುಣೈಕದೇಹತ್ವ ಎಂದು ಲಕ್ಷಣವನ್ನು ಹೇಳಿದಂತಾಯಿತು. ಇಲ್ಲಿ ಪೂರ್ಣ ಹಾಗೂ ನಿಖಿಲ ಎಂಬ ಎರಡು ಪದಗಳು ವ್ಯರ್ಥ. ಏಕೆಂದರೆ, ಪೂರ್ಣಗುಣತ್ವ ಅಥವಾ ನಿಖಿಲಗುಣತ್ವ ಎಂದಿಷ್ಟೇ ಲಕ್ಷಣವನ್ನು ಹೇಳಿದರೂ ಯಾವುದೇ ದೋಷವಿಲ್ಲವಾದ್ದರಿಂದ ಎಂದರೆ, ಇದನ್ನು ಯಾವ ರೀತಿ ವೈಯರ್ಥ್ಯಬರುವುದಿಲ್ಲವೋ ಹಾಗೆ ಲಕ್ಷಣಗಳನ್ನು ಹೇಳಿದ್ದಾರೆ - ತತ್ರ ಎಂಬುದಾಗಿ. ಸ್ವತೋ ಗುಣೈಕದೇಹತ್ವಂ ಎಂಬುದು ಈ ವಿಶೇಷಣದಿಂದ ಸಿಗುವ ಮೂರನೆಯ ಲಕ್ಷಣ. ಇಲ್ಲಿ ಕೇವಲ ಗುಣೈಕದೇಹತ್ವ ಎಂದಿಷ್ಟೇ ಹೇಳಿದರೆ ಲಕ್ಷ್ಮೀದೇವಿಯಲ್ಲೂ ಈ ಲಕ್ಷಣಬರುವುದರಿಂದ ಅತಿವ್ಯಾಪ್ತಿ. ಇದರ ಪರಿಹಾರಕ್ಕಾಗಿ ಸ್ವತಃ ಎಂದಿದ್ದಾರೆ. ಈಗ ಅವಳಲ್ಲಿ ಸ್ವತಂತ್ರವಾಗಿ ಗುಣೈಕದೇಹತ್ವವಿಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ.

### ವಿವಕ್ಷಾಭೇದೇನ ಎಂದರೆ ವಕ್ತುರಿಚ್ಛಾಭೇದೇನ ಎಂದರ್ಥ

(ಆನಂದ) — ನನ್ವತ್ರ ಏವಂ ವಿಶೇಷಣವಿಶೇಷ್ಯಭಾವೋ ನ ಪ್ರತೀಯತೇ ಇತ್ಯತ ಉಕ್ತಂ — ವಿವಕ್ಷಾಭೇದೇನೇತಿ ॥ ವಕ್ತುರಿಚ್ಛಾಭೇದೇನೇತ್ಯರ್ಥಃ ।

ವಿವಕ್ಷಾಭೇದೇನ - ನಿಖಿಲಪೂರ್ಣಗುಣೈಕದೇಹಂ ಎಂಬ ವಿಶೇಷಣದಲ್ಲಿ ನೀವು ಹೇಳಿದಂತೆ ಮೂರು ರೀತಿಯಾಗಿ ವಿಶೇಷಣಗಳ ಲಾಭವು ಹೇಗೆ ಆಗಲು ಸಾಧ್ಯ? ಏಕೆಂದರೆ ಹಾಗೆ ನಮಗೆ ತೋರುತ್ತಿಲ್ಲವಲ್ಲ ಎಂದರೆ ಅದಕ್ಕೆ ಉತ್ತರವಾಗಿ ವಿವಕ್ಷಾಭೇದೇನ ಎಂದಿದ್ದಾರೆ. ವಿವಕ್ಷಾಭೇದ ಎಂದರೆ ವಕ್ತೃವಿನ ಇಚ್ಛಾಭೇದ ಎಂದರ್ಥ. ಅರ್ಥಾತ್ ಹೇಳುವವನ ಇಚ್ಛೆ ಬೇರೆ ಬೇರೆ ರೀತಿ ಇದ್ದಾಗ ಅದಕ್ಕೆ ತಕ್ಕಂತೆ ಲಕ್ಷಣಗಳು ಅನೇಕವಾಗುತ್ತವೆ.

### ವೇದಮುಖ್ಯಾರ್ಥತ್ವ ಹಾಗೂ ಪುರಾಣಮುಖ್ಯಾರ್ಥತ್ವ ಎಂಬ ಎರಡು ಲಕ್ಷಣಗಳು

(ಆನಂದ) — ವೇದಾದೀತಿ ॥ ಅತ್ರ ಆದಿಪದೇನ ಪುರಾಣಪರಿಗ್ರಹಃ । ಏವಂ ಚ ವೇದ-ಮುಖ್ಯಾರ್ಥತ್ವಂ ಪುರಾಣಮುಖ್ಯಾರ್ಥತ್ವಮಿತಿ ಲಕ್ಷಣದ್ವಯಮ್ । ನ ಚ ವಾಚ್ಯತ್ವೇನ ವೇದ-ಮುಖ್ಯಾರ್ಥತ್ವಸ್ಯ ಧರ್ಮಾದಾವಪಿ ಸತ್ತ್ವಾತ್ ಅತಿವ್ಯಾಪ್ತಿರಿತಿ ವಾಚ್ಯಮ್ । ಅನನ್ಯಾರ್ಥತಯಾ ವೇದಪ್ರತಿಪಾದ್ಯತ್ವಸ್ಯ ವಿವಕ್ಷಿತತ್ವೇನ ದೋಷಾಭಾವಾತ್ ।

ಆಪ್ಯತಮಂ ಇತ್ಯನೇನ ವೇದಾದಿಮುಖ್ಯಾರ್ಥತ್ವಂ - ವೇದಾದಿ ಎಂಬಲ್ಲಿರುವ ಆದಿಪದದಿಂದ ಪುರಾಣವನ್ನು ಗ್ರಹಿಸಬೇಕು. ಹಾಗಾಗಿ ಎರಡುಲಕ್ಷಣಗಳಾಯಿತು. (1) ವೇದಮುಖ್ಯಾರ್ಥತ್ವಂ (2) ಪುರಾಣಮುಖ್ಯಾರ್ಥತ್ವಂ. ಅಲ್ಲ। ವೇದದ ಮುಖ್ಯವಾದ ಅರ್ಥ ಎಂದರೆ ವೇದದಿಂದ ವಚನವೃತ್ತ್ಯಾ ಹೇಳಲ್ಪಡುವುದು. ಇದಾದರೋ ಧರ್ಮ-ಪ್ರಾಣ ಮುಂತಾದವರಲ್ಲಿಯೂ ಇದೆ. ಹಾಗಾಗಿ ಅತಿವ್ಯಾಪ್ತಿ ಇದೆ ಎಂದರೆ ಇಲ್ಲ. ಇಲ್ಲಿ ವೇದದಿಂದ ಪ್ರತಿಪಾದ್ಯವಾದ ವಸ್ತು ಎಂದರೆ ಹೀಗೆ ವಿವಕ್ಷಿತ. ಅನನ್ಯಾರ್ಥತಯಾ ವೇದಪ್ರತಿಪಾದ್ಯವಾದದ್ದೇ ವೇದದ ಮುಖ್ಯಾರ್ಥ. ಅನನ್ಯಾರ್ಥ ಎಂದರೆ ಬೇರೆಯ ವಸ್ತುವಿಗೋಸ್ಕರ ಪ್ರತಿಪಾದನೆ ಮಾಡದಿರುವ ವಸ್ತು. ಅರ್ಥಾತ್ ಸ್ವತಂತ್ರವಾಗಿ ಅದನ್ನೇ ಪ್ರತಿಪಾದಿಸಲು ಹೊರಟಿರಬೇಕು ವೇದವಾಕ್ಯಗಳು. ಹೀಗಾದಲ್ಲಿ ಆ ಸ್ವತಂತ್ರವಾದ ಅನ್ಯ-ಅನಧೀನವಾದ ವಸ್ತು ವೇದದ ಮುಖ್ಯಾರ್ಥವೆನಿಸುತ್ತದೆ. ಇಂತಹದ್ದು ನಾರಾಯಣನೇ. ಅವನು ಬೇರೆಯ ವಸ್ತುವಿಗೋಸ್ಕರ ವೇದದಲ್ಲಿ ಪ್ರತಿಪಾದಿಸಲ್ಪಟ್ಟವನಲ್ಲ. ಅನ್ಯ ಅಧೀನನಾಗದೇ ಸ್ವತಂತ್ರ-ವಾಗಿ ವೇದಪ್ರತಿಪಾದ್ಯನಾಗಿದ್ದಾನೆ.

## ಅಖಿಲವೇದಾರ್ಥತ್ವ ಶ್ರೀದೇವಿಯಲ್ಲಿಯೂ ಇದೆ ಎಂಬ ಅತಿವ್ಯಾಪ್ತಿಶಂಕಾ ಹಾಗೂ ಪರಿಹಾರ

(ಆನಂದ) — **ಅಖಿಲವೇದಾರ್ಥತ್ವಂ ಚೇತಿ ॥** ಯದ್ಯಪಿ ಉಕ್ತರೀತ್ಯಾ ಅಖಿಲವೇದಾರ್ಥತ್ವಸ್ಯ ಶ್ರೀದೇವ್ಯಾಮಪಿ ಸತ್ತ್ವೇನ ಅತಿವ್ಯಾಪ್ತಿಃ ತಥಾಪಿ ಸಮನ್ವಯಾಧ್ಯಾಯೋಕ್ತನ್ಯಾಯೇನ ಪರಮ-ಮುಖ್ಯವೃತ್ತ್ಯಾ ಸ್ವರವರ್ಣಪದಾದಿರೂಪಾಖಿಲವೇದಪ್ರತಿಪಾದ್ಯತ್ವಸ್ಯ ತತ್ರಾಭಾವೇನ ನಾತಿವ್ಯಾಪ್ತಿಃ । ಪೂರ್ವಂ ತು ರಮಾಪತಿಃ ಪರಮಾತ್ಮೇತ್ಯರ್ಥಪ್ರತಿಪಾದನೇ ರಮಾಯಾ ಅಪಿ ಪ್ರತಿಪಾದ್ಯತ್ವಮಸ್ತೀತಿ ಅರ್ಥವಿವಕ್ಷಯಾ ತಥೋಕ್ತಮಿತಿ ನ ತೇನ ವಿರೋಧಃ ।

ಅಖಿಲವೇದಾರ್ಥತ್ವಂ ಚ - ಅಖಿಲವೇದದ ಅರ್ಥ ಲಕ್ಷ್ಮೀದೇವಿಯೂ ಆಗಿದ್ದಾಳೆ. ಆದ್ದರಿಂದ ಭಗವಲ್ಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದಲ್ಲವೇ ಎಂದರೆ ಇಲ್ಲ. ಬ್ರಹ್ಮಸೂತ್ರದ ಪ್ರಥಮಾಧ್ಯಾಯವಾದ ಸಮನ್ವಯಾಧ್ಯಾಯದಲ್ಲಿ ಹೇಳಿದ ರೀತಿಯಿಂದ ಪರಮಮುಖ್ಯವೃತ್ತಿಯಿಂದ ಸ್ವರ,ವರ್ಣ,ಪದ, ವಾಕ್ಯ ಮೊದಲಾದ ಇಡೀ ವೇದದಿಂದ ಪ್ರತಿಪಾದ್ಯವಾದದ್ದೇ ಅಖಿಲವೇದಾರ್ಥ ಎನಿಸುವುದು. ಆದ್ದರಿಂದ ಇಂತಹ ಅಖಿಲವೇದಾರ್ಥತ್ವವು ಲಕ್ಷ್ಮಿದೇವಿಯಲ್ಲಿ ಇಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ. ಹಾಗಾದರೆ ಈ ಹಿಂದೆ ಆಕ್ಷೇಪಮಾಡುವಾಗ ಅಖಿಲವೇದದ ಅರ್ಥವು ಲಕ್ಷ್ಮೀ ಎಂಬ ಆಶಂಕೆ ಹೇಗೆ? ಎಂದರೆ ಎಲ್ಲ ಕಡೆಯೂ ಪರಮಾತ್ಮನ ಜೊತೆಗೆ ರಮೆಯನ್ನು ಪ್ರತಿಪಾದಿಸುವುದಿದೆ. ರಮಾಪತಿಃ ಪರಮಾತ್ಮಾ ಎಂದಾಗ ಮುಖ್ಯವಾಗಿ ಪರಮಾತ್ಮನನ್ನು ಹೇಳಲು ಹೊರಟರೂ

ರಮೆಯನ್ನೂ ಹೇಳುವುದರಿಂದ. ಹಾಗಾಗಿ ಅಖಿಲವೇದದ ಅರ್ಥವು ಲಕ್ಷ್ಮೀ ಎಂದು ಹಿಂದೆ ಆಶಂಕಿಸಲಾಗಿತ್ತು.

## ಮುಖ್ಯವಂದ್ಯತ್ವ ಹೇಗೆ? ಹಾಗೂ ಪರಮಪ್ರೇಮಯೋಗ್ಯತ್ವ ವಿಚಾರ

(ಆನಂದ) — ಕಥಮನೇನ ಮುಖ್ಯವಂದ್ಯತ್ವಮಿತ್ಯತ ಆಹ — **ಅಶೇಷಾದಿತಿ** ॥ **ವಿಶೇಷೇಣ** = ಸರ್ವೋತ್ತಮತ್ವಾದಿರೂಪವಿಶೇಷೇಣ । ಪರಮಪ್ರೇಮಯೋಗ್ಯತ್ವಸ್ಯ ಲೋಕೇ ಪುತ್ರಾದೌ ದೃಷ್ಟತ್ವೇನ ಪರಮಾತ್ಮನಿ ಚಾದೃಷ್ಟತ್ವೇನ ಅಸಂಭವೀದಂ ಲಕ್ಷಣಮ್ ಇತ್ಯಾಶಂಕಾಪರಿಹಾರತ್ವೇನ 'ಮಮ' ಇತಿ ಪದಮವತಾರಯತಿ — **ತಸ್ಯೇತಿ** ॥ ತಥಾಪಿ ಅನ್ಯೇಷಾಮ್ ಅನನುಭಾವಿಕತ್ವಾತ್ ತದಸತ್ಕಲ್ಪನಮೇವ । ಏಕಂ ಪ್ರತ್ಯೇವ ಸಿದ್ಧಸ್ಯಾರ್ಥಸ್ಯ ಸಿದ್ಧತ್ವವ್ಯವಹಾರಾಭಾವಾತ್ ಇತ್ಯತಃ ತತ್ಪರಿಹಾರತ್ವೇನ ಸದಾಪದಾರ್ಥಮಾಹ — **ಅನ್ಯೇಷಾಮಪೀತಿ** ॥ **ಅಪಿಶಬ್ದ ಇತಿ** ॥ ಅನ್ಯಸ್ಯ ಭಿ-ವ್ಯಾಪ್ತ್ಯರ್ಥ ಇತಿ ಭಾವಃ ।

ಅಶೇಷಾದ್ ವಿಶೇಷೇಣ ವಂದ್ಯಮ್ - ವಿಶೇಷ ಎಂದರೆ ಸರ್ವೋತ್ತಮತ್ವ ಎಂದರ್ಥ.

ತಸ್ಯ ಅನಾನುಭಾ(ಭ)ವಿಕತ್ವಾತ್ - ಪರಮಪ್ರೀತಿಗೆ ಯೋಗ್ಯನಾದವನು ಲೋಕದಲ್ಲಿ ಪುತ್ರ ಪುತ್ರೀ ಹೆಂಡತಿ ಮುಂತಾದವರು. ಹಾಗಾಗಿ ಪರಮಾತ್ಮನು ಪರಮಪ್ರೀತಿಗೆ ಯೋಗ್ಯ ಹೇಗೆ? ಇದೆಲ್ಲೂ ಕಂಡಿಲ್ಲವಾದ್ದರಿಂದ. ಹಾಗಾಗಿ ಈ ಪರಮಪ್ರೀತಿಯೋಗ್ಯತ್ವ ಎಂಬ ಲಕ್ಷಣವು ನಾರಾಯಣನಲ್ಲಿ ಅಸಂಭಾವಿತವಾಗಿದೆ ಎಂಬ ಆಕ್ಷೇಪಕ್ಕೆ ಉತ್ತರವಾಗಿ 'ಮಮ ಪ್ರಿಯತಮಂ' ಎಂದಿದ್ದಾರೆ.

ಅನ್ಯೇಷಾಮಪಿ - ಹೌದು. ಆಚಾರ್ಯರಿಗೆ ನಾರಾಯಣನು ಪರಮಪ್ರೀತಿಯೋಗ್ಯನಾಗಿದ್ದರೂ ಬೇರೆಯ ಜನರಿಗೆ ಆ ರೀತಿಯಾದ ಅನುಭವವು ಇಲ್ಲದಿರುವುದರಿಂದ ಆ ಲಕ್ಷಣವು ನಾರಾಯಣನಲ್ಲಿ ಇಲ್ಲದಂತೆಯೇ ಸರಿ. ಏಕೆಂದರೆ ಒಬ್ಬನನ್ನು ಮಾತ್ರ ಕುರಿತು ಸಿದ್ಧವಾದ ವಸ್ತುವು ಸಿದ್ಧವಾಗಿದೆ ಎನಿಸುವುದಿಲ್ಲ - ಎಂಬ ಶಂಕೆಗೆ ಪರಿಹಾರವಾಗಿ ಸದಾ ಎಂಬ ಪದದ ಅರ್ಥವನ್ನು ಹೇಳುತ್ತಾರೆ - ಅನ್ಯೇಷಾಮಪಿ ಎಂಬ ಪಂಕ್ತಿಯಿಂದ. ಇದರ ತಾತ್ಪರ್ಯ ಬೇರೆಯವರಿಗೂ ಅಪರೋಕ್ಷಜ್ಞಾನಾನಂತರ ಕಾಲದಲ್ಲಿ ನಾರಾಯಣನು ಪರಮಪ್ರೀತಿಯೋಗ್ಯನು ಎಂಬ ಅನುಭವ ಬರುತ್ತದೆ. ಆದರೆ ಆಚಾರ್ಯರಂತೆ ಯಾವಾಗಲೂ ಆ ರೀತಿಯ ಅನುಭವವು ಇರಲಿಲ್ಲ ಎಂಬುದಷ್ಟೇ ವ್ಯತ್ಯಾಸ.

## ಅನೇಕ ಲಕ್ಷಣಕಥನದ ಪ್ರಯೋಜನವೇನು?

(ಕುಂಡಲ) — **ವಿಭವಾತ್** - ಬಹುಲಕ್ಷಣಸಂಪತ್ತಿದ್ಯೋತನಮೇವ ಅನೇಕಲಕ್ಷಣಾಭಿಧಾನಸ್ಯ ಪ್ರಯೋಜನಮಿತಿ ಭಾವಃ । ಅತ್ರ ಸಮುದಾಯಸ್ಯ ಲಕ್ಷಣತ್ವೇ ಲಕ್ಷಣಶರೀರಗತವಿಶೇಷಣಾನಾಂ

ವ್ಯಾವೃತ್ತಪ್ರಸಿದ್ಧೇಃ ಪ್ರತ್ಯೇಕಮೇವ ಲಕ್ಷಣತ್ವಂ ವಾಚ್ಯಮಿತಿ ಅವ್ಯಾಪ್ತ್ಯಾದಿದೋಷಾಭಾವಾದಿತಿ ಭಾವೇನಾಹ – **ನಿಖಿಲೇತ್ಯನೇನ ಇತ್ಯಾದಿನಾ** ॥

ನಿಖಿಲ ಇತ್ಯನೇನ - ನಿಖಿಲಪೂರ್ಣಗುಣೈಕದೇಹಂ ಎಂಬ ಸಮುದಾಯವು ಒಂದೇ ಲಕ್ಷಣ ಎನಿಸಿದರೆ ಆಗ ಲಕ್ಷಣದಲ್ಲಿ ಸೇರಿರುವ ವಿಶೇಷಣಗಳಿಗೆ ಇತರ ವಸ್ತುಗಳಲ್ಲಿ ಅತಿವ್ಯಾಪ್ತಿಪರಿ-ಹಾರರೂಪವಾದ ಪ್ರಯೋಜನವು ಸಿಗುವುದಿಲ್ಲವಾದ್ದರಿಂದ ಪ್ರತ್ಯೇಕವಾಗಿಯೇ ಲಕ್ಷಣವನ್ನು ಹೇಳಬೇಕು ಎಂಬ ಅಭಿಪ್ರಾಯದಿಂದ 'ನಿಖಿಲ ಇತ್ಯನೇನ' ಎಂಬುದಾಗಿ ಹೇಳಿದ್ದಾರೆ.

ವಿಭವಾತ್ - ಬಹುಲಕ್ಷಣಸಂಪತ್ತು ನಾರಾಯಣನಿಗೆ ಇದೆ ಎಂದು ತೋರಿಸುವುದೇ ಅನೇಕ ಲಕ್ಷಣಗಳನ್ನು ಹೇಳಿದ್ದಕ್ಕೆ ಪ್ರಯೋಜನ ಎಂದು ಅಭಿಪ್ರಾಯ. ಇಲ್ಲದಿದ್ದರೆ ಒಂದೇ ಲಕ್ಷಣದಿಂದ ನಾರಾಯಣನು ಇತರ ಎಲ್ಲ ವಸ್ತುಗಳಿಂದ ಭಿನ್ನ ಎಂದು ನಿಶ್ಚಯಿಸಲು ಬರುವುದರಿಂದ ಅನೇಕ ಲಕ್ಷಣವನ್ನು ಹೇಳಿದ್ದಕ್ಕೆ ಪ್ರಯೋಜನವಿಲ್ಲ ಎಂಬ ಆಕ್ಷೇಪ ಬಂದೀತು।

## ಅಷ್ಟಲಕ್ಷಣಗಳು

**(ಕುಂಡಲ)** — ಜಗಜ್ಜನ್ಮಾದೇರಷ್ಟಸಂಖ್ಯಾಕತ್ವೇನ ಪ್ರಾತಿಸ್ವಿಕತತ್ಕಾರಣತ್ವಾನಾಮಪ್ಯಷ್ಟಸಂಖ್ಯಾ-ಕತ್ವಾದಿತ್ಯರ್ಥಃ ।

ಅಷ್ಟೌ - ಜಗತ್ತಿನ ಜನ್ಮ, ಸ್ಥಿತಿ, ಲಯ ಮುಂತಾದವುಗಳು ಎಂಟಿರುವುದರಿಂದ ಅದಕ್ಕೆ ತಕ್ಕಹಾಗೆ ಪ್ರತಿವ್ಯಕ್ತಿಯಂತೆ ಜನ್ಮಕಾರಣತ್ವ, ಸ್ಥಿತಿಕಾರಣತ್ವ ಮುಂತಾದ ಲಕ್ಷಣಗಳೂ ಎಂಟಾಗುವುವವು.

## ವಿಭವಶಬ್ದದ ವಿಶೇಷಾರ್ಥ

**(ಲಘುರಸರಂಜನೀ)**— ನನ್ವೇಕೇನಾಪಿ ಲಕ್ಷಣೇನ ವಸ್ತುಸ್ವರೂಪಾವಧಾರಣಸಂಭವಾತ್ ಕಿಮ-ನೇಕಲಕ್ಷಣೋಕ್ತ್ಯಾ? ಇತ್ಯತ ಉಕ್ತಮ್ — **ವಿಭವಾದಿತಿ** ॥ ಲಕ್ಷಣದಾರಿದ್ರ್ಯಾಭಾವಾದಿತ್ಯರ್ಥಃ । ಅಥವಾ ವಿಭವಾತ್ ಲ್ಯಬ್ಲೋಪನಿಮಿತ್ತಾತ್ ಪಂಚಮೀ । ವಿಭವಜ್ಞಾಪನಮಪೇಕ್ಷ್ಯ ಇತಿ ಯಾವತ್ । ವಿಭವೋ ಹಿ ಶುಭತಮಾನೇಕಧರ್ಮವತ್ತ್ವರೂಪಮೈಶ್ವರ್ಯಮ್ । ತಜ್ಞಾಪನಂ ಚಾನೇಕಲಕ್ಷಣೋಕ್ತಿಂ ವಿನಾ ನ ಸಂಭವತೀತಿ ಅನೇಕಾನಿ ನಾರಾಯಣಸ್ಯ ಲಕ್ಷಣಾನಿ ವಕ್ತವ್ಯಾ-ನೀತಿ । ಅಥವಾ ವಿಶಿಷ್ಟೋ ಮೋಕ್ಷೇ ಭವಃ = ವಿಭವಃ = ಮೋಕ್ಷಃ, ತಸ್ಮಾತ್ ಹೇತೌ ಪಂಚಮೀ । ಮೋಕ್ಷನಿಮಿತ್ತಮ್ । ಮೋಕ್ಷೋ ಹಿ ಗುಣಪೂರ್ಣತ್ವದೋಷದೂರತ್ವಜಗ-ಜ್ಜನ್ಮಾದಿಕರ್ತೃತ್ವಾದ್ಯನೇಕಧರ್ಮಜ್ಞಾನಸಾಧ್ಯ ಇತಿ, ತದರ್ಥಮನೇಕಾನಿ ನಾರಾಯಣಸ್ಯ ಲಕ್ಷಣಾನಿ ವಕ್ತವ್ಯಾನೀತಿ ।

ವಿಭವಾತ್ - ಲಕ್ಷಣದಾರಿದ್ರ್ಯವಿಲ್ಲವಾದ್ದರಿಂದ ಎಂದರ್ಥ.

ಅಥವಾ ವಿಭವಾತ್ ಎಂಬ ಪದಕ್ಕೆ ವಿಭವವನ್ನು ತಿಳಿಸುವುದಕ್ಕಾಗಿ ಎಂದರ್ಥ. ಇದನ್ನು ವಿಭವ-ಜ್ಞಾಪನಂ ಅಪೇಕ್ಷ್ಯ ಎಂದು ವಿವರಿಸಿದ್ದಾರೆ. ವಿಭವ ಎಂದರೆ ಮಂಗಳಕರವಾದ ಅನೇಕ ಧರ್ಮರೂಪವಾದ ಐಶ್ವರ್ಯ. ಇದನ್ನು ತಿಳಿಸುವುದೇ ಅನೇಕಲಕ್ಷಣಗಳ ಉಕ್ತಿಯ ಪ್ರಯೋಜನ. ಅನೇಕಲಕ್ಷಣಗಳನ್ನು ನಾರಾಯಣನಿಗೆ ಹೇಳಿದಾಗ ಅವನ ವಿಭವವು ಅರ್ಥಾತ್ ಶುಭತಮವಾದ ಅನೇಕ ಧರ್ಮರೂಪವಾದ ಐಶ್ವರ್ಯವು ತೋರುತ್ತದೆ.

ಅಥವಾ ವಿಭವ ಎಂದರೆ ವಿಶಿಷ್ಟಃ ಭವಃ ಎಂದರ್ಥ. ಅರ್ಥಾತ್ ವಿಶೇಷವಾದ ಸ್ಥಾನ. ಅಂದರೆ ಮೋಕ್ಷ ಎಂದು. ಹಾಗಾಗಿ ವಿಭವಾತ್ ಎಂದರೆ ಮೋಕ್ಷಕ್ಕೋಸ್ಕರ ಎಂದರ್ಥ. ಒಟ್ಟು ತಾತ್ಪರ್ಯ. ಮೋಕ್ಷವಾದರೋ ಗುಣಪೂರ್ಣತ್ವ, ದೋಷದೂರತ್ವ, ಜಗಜ್ಜನ್ಮಾದಿಕರ್ತೃತ್ವ ಮೊದಲಾದ ಅನೇಕ ಧರ್ಮಗಳ ಜ್ಞಾನದಿಂದ ಸಾಧಿಸಲು ಸಾಧ್ಯವಾದ್ದರಿಂದ ನಾರಾಯಣನಿಗೆ ಅನೇಕ ಲಕ್ಷಣಗಳನ್ನು ಇಲ್ಲಿ ಹೇಳಿದ್ದಾರೆ.

## ವಿವಕ್ಷಾಭೇದೇನ ತ್ರೀಣಿ ಲಕ್ಷಣಾನ್ಯುದಿತಾನಿ - ಎಂಬುದರ ವಿಚಾರ

(ಲಘುರಸರಂಜನೀ)— ವಿವಕ್ಷಾಭೇದೇನ ತ್ರೀಣಿ ಲಕ್ಷಣಾನ್ಯುದಿತಾನೀತಿ ॥ ಪೂರ್ವಯೋಜ-ನಾಯಾಮಸ್ಯ ಹೇತೂಪಪಾದಕವಿಶಿಷ್ಟ-ಏಕಧರ್ಮಪ್ರತಿಪಾದಕತ್ವಸ್ಯ ಅಭಿಪ್ರೇತತ್ವಾತ್ 'ಗುಣ'-ಪದಸ್ಯ ತತ್ರ ದೇಹಮಾತ್ರವಿಶೇಷಣತ್ವವಿವಕ್ಷಾ । ಅತ್ರ ತು ಧರ್ಮತ್ರಯಪ್ರತಿಪಾದಕತ್ವಸ್ಯ ಅಭಿ-ಪ್ರೇತತ್ವಾತ್ ನಾರಾಯಣದೇಹೋಭಯವಿಶೇಷಣತ್ವವಿವಕ್ಷಾ । ಏವಂ ವಿಶೇಷಣ-ವಿಶೇಷ್ಯ-ಭಾವವಿವಕ್ಷಾಭೇದೇನ ಅನೇನ ವಿಶೇಷಣೇನ ತ್ರೀಣಿ ಲಕ್ಷಣಾನ್ಯುದಿತಾನೀತಿ ಜ್ಞೇಯಮ್ । ಇದಮಪ್ಯುಕ್ತಮ್ । ವಿವಕ್ಷಾಭೇದೇನ ತ್ರೀಣಿ ಲಕ್ಷಣಾನ್ಯುದಿತಾನೀತಿ ॥

ನನು ತಥಾಪಿ 'ನಿಖಿಲೇ'ತ್ಯನೇನ ತ್ರೀಣಿ ಲಕ್ಷಣಾನ್ಯುದಿತಾನಿ ಇತ್ಯನುಪಪನ್ನಮ್ । ಆದ್ಯಯೋ-ರ್ದ್ವಯೋರ್ನಿರ್ದುಷ್ಟತ್ವೇನ ಲಕ್ಷಣತ್ವೇಽಪಿ ಚರಮಸ್ಯ ರಮಾದಾವತಿವ್ಯಾಪ್ತೇಃ ತದಸಂಭವಾತ್ । ಯದಿ ಅತಿವ್ಯಾಪ್ತಿಪರಿಹಾರಾಯ 'ಸ್ವತಃ' ಇತಿ ವಿಶೇಷಣಮುಪಾದೀಯತೇ ತದಾ ಸ್ವತೋ ಗುಣವತ್ತ್ವಸ್ಯ ಸ್ವತೋ ಗುಣದೇಹವತ್ತ್ವಸ್ಯ ವಾ ಲಕ್ಷಣಸಂಭವೇನ ಶೇಷವೈಯರ್ಥ್ಯಮಿತಿ ಚೇನ್ನ । ವಿವಕ್ಷಾವಿಶೇಷಸದ್ಭಾವಾತ್ । ತಥಾಹಿ — ನಾತ್ರ ಮೂಲಕೃತಾ ಗುಣೈಕದೇಹಪದೇನ ಸ್ವತೋ ಗುಣೈಕದೇಹಪದತೋ ಗುಣೈಕದೇಹಸಾಧಾರಣಂ ಗುಣೈಕದೇಹತ್ವಮಾತ್ರಂ ಲಕ್ಷಣತಯಾ ವಿವಕ್ಷಿತಮ್ । ಯೇನ ಅತಿವ್ಯಾಪ್ತೇಸ್ತದಲಕ್ಷಣಂ ಸ್ಯಾತ್ । ಕಿಂತು ಗುಣೈಕದೇಹಪದಸ್ಯ ನಿರುಪಪದತ್ವೇನ ಮುಖ್ಯಾರ್ಥಾಭಿಧಾಯಕತ್ವಾನ್ಮುಖ್ಯಾಮುಖ್ಯಯೋರ್ಮುಖ್ಯೇ ಸಂಪ್ರತ್ಯಯ ಇತಿ

ನ್ಯಾಯಾಚ್ಚ ಸ್ವತೋ ಗುಣೈಕದೇಹತ್ವಮೇವ ತಥಾ ವಿವಕ್ಷಿತಮ್ । ತಥಾ ಚ ನಾತಿವ್ಯಾಪ್ತಿರ್ನ ವಾ ಶೇಷವೈಯರ್ಥ್ಯಮ್ ।

ವಿವಕ್ಷಾಭೇದೇನ ತ್ರೀಣಿ ಲಕ್ಷಣಾನಿ ಉದಿತಾನಿ – ಈ ಯೋಜನೆಯಲ್ಲಿ ನಿಖಿಲಪೂರ್ಣಗುಣೈಕದೇಹಂ ಎಂಬ ವಿಶೇಷಣದಿಂದ ಮೂರು ಲಕ್ಷಣಗಳನ್ನು ವಿವಕ್ಷೆ ಮಾಡಿದ್ದಾರೆ. ಅಲ್ಲಿಯೂ ಗುಣಪದವು ಹಿಂದಿನ ಯೋಜನೆಯಲ್ಲಿ ಹೇಳಿದಂತೆ ದೇಹಕ್ಕೆ ಮಾತ್ರ ವಿಶೇಷಣವಲ್ಲದೆ ನಾರಾಯಣನಿಗೂ ವಿಶೇಷಣವಾಗಿದೆ. ಹೀಗಾಗಿ ಮೂರು ವಿಶೇಷಣಗಳು ಈ ಯೋಜನೆಯಲ್ಲಿ ಸಿಗುತ್ತವೆ. ಈ ಅಭಿಪ್ರಾಯದಿಂದಲೇ 'ವಿವಕ್ಷಾಭೇದೇನ ತ್ರೀಣಿ ಲಕ್ಷಣಾನಿ ಉದಿತಾನಿ' ಎಂದಿದ್ದಾರೆ.

ಅಲ್ಲ! ನಿಖಿಲಗುಣತ್ವಂ, ಪೂರ್ಣಗುಣತ್ವಂ, ಸ್ವತೋ ಗುಣೈಕದೇಹತ್ವಂ - ಎಂಬ ಮೂರು ಲಕ್ಷಣಗಳಲ್ಲಿ ಮೊದಲೆರಡು ಲಕ್ಷಣಗಳು ನಿರ್ದುಷ್ಟವಾಗಿದ್ದರೂ ಕೊನೆಯ ಲಕ್ಷಣವು ದೋಷ-ರಹಿತವಾಗಿದೆ ಎನ್ನಲು ಬರುವುದಿಲ್ಲ. ಏಕೆಂದರೆ ಗುಣೈಕದೇಹತ್ವಂ ಎಂಬುದು ಲಕ್ಷ್ಮಿಯಲ್ಲಿಯೂ ಇದೆಯಾದ್ದರಿಂದ. ಹಾಗಾಗಿ ಅತಿವ್ಯಾಪ್ತಿದೋಷವಿದ್ದಾಗ ಸ್ವತೋ ಗುಣೈಕದೇಹತ್ವಂ ಎಂಬ ಲಕ್ಷಣವು ಸರಿಯಾದದ್ದಲ್ಲ. ಇದಕ್ಕೆ ಉತ್ತರ – ಆದ್ದರಿಂದಲೇ ಅತಿವ್ಯಾಪ್ತಿ ಪರಿಹಾರಕ್ಕೋಸ್ಕರವೇ ಕೇವಲ ಗುಣೈಕದೇಹತ್ವಂ ಎಂದು ಹೇಳದೇ ಸ್ವತಃ ಎಂಬುದನ್ನೂ ಸೇರಿಸಿದ್ದೇವೆಯಲ್ಲ. ಹಾಗಾಗಿ ಅತಿವ್ಯಾಪ್ತಿಗೆ ಅವಕಾಶವೇ ಇಲ್ಲ. ಅರ್ಥಾತ್ ಸ್ವತಂತ್ರವಾದ ಗುಣಾತ್ಮಕದೇಹವು ಲಕ್ಷ್ಮಿಗೆ ಇಲ್ಲ. ಲಕ್ಷ್ಮಿಯು ಸ್ವತಂತ್ರಳು ಅಲ್ಲವಾದ್ದರಿಂದ. ಅಲ್ಲದೆ ಸ್ವತಃ ಎಂಬ ಪದವನ್ನು ಸೇರಿಸಿದರೆ ಸ್ವತೋ ಗುಣವತ್ವಂ ಅಥವಾ ಸ್ವತೋ ಗುಣದೇಹವತ್ವಂ ಎಂದಿಷ್ಟೇ ಲಕ್ಷಣವನ್ನು ಹೇಳಲು ಬರುವುದರಿಂದ ಮಿಕ್ಕ ಅಂಶಗಳು ವ್ಯರ್ಥ ಎಂದಾದೀತು! ಹಾಗಾಗಿ ಸ್ವತಃ ಎಂಬ ಪದವು ಬೇಡ. ಹೀಗೆ ಹೇಳಿದರೆ ಅತಿವ್ಯಾಪ್ತಿ. ಹಾಗಾಗಿ ಸ್ವತಃ ಎಂಬ ಪದವು ಇದ್ದರೂ ಇಲ್ಲದಿದ್ದರೂ ದೋಷವು ತಪ್ಪಿದ್ದಲ್ಲ. ಆದ್ದರಿಂದ ಈ ಮೂರನೆಯ ಲಕ್ಷಣವು ಬೇಡವೇ ಬೇಡ.

ಉತ್ತರ – ಇಲ್ಲ. ಸ್ವತೋ ಗುಣೈಕದೇಹತ್ವಂ ಎಂಬುವುದರಿಂದ ವಿಶೇಷವಾದ ಅಭಿಪ್ರಾಯವಿದೆ. ಅದು ಹೀಗೆ – ಇಲ್ಲಿ ಮೂಲಕಾರರಿಂದ ಕೇವಲ ಗುಣೈಕದೇಹತ್ವಂ ಎಂದೇ ಲಕ್ಷಣವು ವಿವಕ್ಷಿತವಲ್ಲ. ಹೊರತು ಗುಣೈಕದೇಹ ಎಂಬ ಪದವು ನಿರುಪಪದವಾದ್ದರಿಂದ ಅರ್ಥಾತ್ ಯಾವುದೇ ವಿಶೇಷಣಗಳನ್ನು ಹೇಳದೆ ಕೇವಲ ಗುಣೈಕದೇಹಂ ಎಂದು ಹೇಳಿದ್ದರಿಂದ ನಿರುಪಪದವಾದದ್ದು ಮುಖ್ಯವಾದ ಅರ್ಥವನ್ನೇ ಹೇಳುವುದರಿಂದ ಉದಾಹರಣೆಗೆ ಸೂತ್ರ ಎಂಬ ಪದವನ್ನು ವಿಶೇಷಣವಿಲ್ಲದೆ ಹೇಳಿದಾಗ ಮುಖ್ಯವಾದ ಬ್ರಹ್ಮಸೂತ್ರವನ್ನೇ ಗ್ರಹಿಸಿದಂತೆ. ಅದೇ ರೀತಿ ವ್ಯಾಸ ಎಂದು ನಿರುಪಪದವಾಗಿ ಹೇಳಿದಾಗ ಮುಖ್ಯವಾಗಿ ವೇದವ್ಯಾಸರನ್ನೇ ಹೇಳಿದಂತೆ, ಗೀತೆ ಎಂದು ನಿರುಪಪದವಾಗಿ ಹೇಳಿದಾಗ ಮುಖ್ಯವಾದ ಭಗವದ್ಗೀತೆಯನ್ನೇ ಗ್ರಹಿಸುವಂತೆ, ಇಲ್ಲಿಯೂ ಸ್ವತೋ

ಗುಣೈಕದೇಹ ಎಂಬರ್ಥವು ಸ್ವತಃ ಎಂಬ ಪದವಿಲ್ಲದೆಯೂ ಗುಣೈಕದೇಹಂ ಎಂಬುವುದರಿಂದಲೇ ಲಾಭವಾಗುವುದು. ಅಲ್ಲದೆ "ಮುಖ್ಯಾಮುಖ್ಯಯೋಃ ಮುಖ್ಯೇ ಸಂಪ್ರತ್ಯಯಃ" ಎಂಬ ನಿಯಮದಂತೆ ಒಂದು ಪದ ಕೇಳಿದಾಗ ಅದರಿಂದ ಎರಡು ಅರ್ಥಗಳು ಉಪಸ್ಥಿತವಾದಾಗ ಮುಖ್ಯವಾದ ಅರ್ಥವನ್ನೇ ಗ್ರಹಿಸುತ್ತೇವೆ. ಅಮುಖ್ಯವಾದದ್ದನ್ನಲ್ಲ. ಇಲ್ಲಿಯೂ "ಗುಣೈಕದೇಹಂ" ಎಂಬ ಪದದಿಂದ ಸ್ವತಃ ಅಥವಾ ಪರತಃ ಎಂಬ ಎರಡು ರೀತಿಯಾದ ಅರ್ಥಗಳು ಸಿಗುತ್ತಿರಲು ಸ್ವತಃ ಎಂಬ ಮುಖ್ಯಾರ್ಥವನ್ನೇ ಇಲ್ಲಿ ಗ್ರಹಿಸಬೇಕು. ಹಾಗಾಗಿ ಅತಿವ್ಯಾಪ್ತಿಯಾಗಲೀ ಶೇಷವೈಯರ್ಥ್ಯ ಎಂಬ ದೋಷವಿಲ್ಲ.

## 'ಸ್ವತೋ ಗುಣೈಕದೇಹತ್ವಂ' ಎಂಬ ಲಕ್ಷಣದ ವಿಚಾರ

(ಲಘುರಸರಂಜನೀ)— ಮುಖ್ಯಾರ್ಥಸ್ಯೈವ ಲಕ್ಷಣತ್ವಾತ್ 'ಗುಣೈಕದೇಹಮ್' ಇತ್ಯೇತಾವನ್ಮಾತ್ರಸ್ಯ ಲಕ್ಷಣಪದತ್ವಾಚ್ಚ । 'ಸ್ವತೋ ಗುಣೈಕದೇಹಮ್' ಇತಿ ಸ್ವತಃಪದಂ ತು 'ಗುಣೈಕದೇಹಮ್' ಇತಿ ಲಕ್ಷಣಪದವಿವಕ್ಷಿತಾರ್ಥವಿವಕ್ಷಯೈವೋಕ್ತಮ್ — ನ ತು ಲಕ್ಷಣಘಟಕತಯೇತಿ ॥ ಇದಮಪ್ಯುಕ್ತಂ 'ಸ್ವತೋ ಗುಣೈಕದೇಹಮ್' ಇತಿ ವಿವಕ್ಷಾಭೇದೇನ ಮುಖ್ಯಾರ್ಥವಿವಕ್ಷಾವಿಶೇಷೇಣ ತ್ರೀಣಿ ಲಕ್ಷಣಾನ್ಯುದಿತಾನೀತಿ । ಅಸ್ತು ವಾ ಸ್ವತಃಪದಮಪಿ ಲಕ್ಷಣಘಟಕಮ್ । ಗುಣೈಕದೇಹತ್ವಸ್ಯ ರಮಾದಾವತಿವ್ಯಾಪ್ತಿಪರಿಹಾರಾಯ ಸ್ವತಃಪದಸಾರ್ಥಕ್ಯಸಂಭವಾತ್ । ಅನೇನೈವ ಸರ್ವಲ್ಷಕ್ಷಣ-ದೋಷಪರಿಹಾರೋ ಭವಿಷ್ಯತೀತಿ ಶಿಷ್ಟಂ ವ್ಯರ್ಥಮಿತಿ ಚೇತ್ । ತರ್ಹಿ ಸ್ವರೂಪಕಥನಾರ್ಥಂ ತದುಕ್ತಮಸ್ತು । ಯಥೋಕ್ತಂ ಸ್ವಯಮೇವ ವಿಷ್ಣುತತ್ತ್ವನಿರ್ಣಯಟೀಕಾಯಾಂ 'ನ ಚೈಕಮೇವ ಯುಗಪದ್ ಬಹುಧಾ ಭ್ರಾಂತೌ ದೃಶ್ಯತೇ' ಇತ್ಯೇತನ್ಮೂಲವ್ಯಾಖ್ಯಾವಸರೇ ಹೇತುವಾಕ್ಯ-ಪದಕೃತ್ಯಮ್ । ಕಿಂ ಚ ಏಕಸ್ಮಿನ್ನಾತ್ಮನಿ ಸರ್ವಂ ಜಗತ್ಕಲ್ಪಿತಂ ನ ಭವತಿ । ಯುಗಪದ್-ಬಹುಧಾ ದೃಶ್ಯಮಾನತ್ವಾತ್ । ಆತ್ಮಾ ವಾ ಯುಗಪದ್ಬಹುಧಾ ದೃಶ್ಯಮಾನಸ್ಯಾಧಿಷ್ಠಾನಂ ನ ಭವತಿ । ಏಕತ್ವಾದಿತ್ಯನುಮಾನದ್ವಯಸ್ಯ ವ್ಯಾಪ್ತಿಮುಪಪಾದಯತಿ – ನ ಚೇತಿ ॥ ಯೇನ ಏತಯೋರನು-ಮಾನಯೋರ್ವ್ಯಾಪ್ತಿರ್ಭಜ್ಯೇತೇತಿ ಶೇಷಃ । ಆದೌ ರಜತತ್ವೇನ ದೃಷ್ಟಂ ಪಶ್ಚಾಚ್ಛುಕ್ತಿಕಾತ್ವೇನ ದೃಶ್ಯತ ಇತ್ಯತೋ - ಭ್ರಾಂತಾವಿತ್ಯುಕ್ತಮ್ । ಭ್ರಾಂತಾವೇವ ರಜ್ಜುಖಂಡ-ಸರ್ಪ-ಮಾಲಾ-ಬಲೀವರ್ದ-ಮೂತ್ರತ್ವೇನ ಕ್ರಮೇಣ ದೃಶ್ಯತೇ, ತತ್ಪರಿಹಾರಾರ್ಥಂ – 'ಯುಗಪದ್' ಇತ್ಯುಕ್ತಮ್ । ಅನೇನೈವ ಸರ್ವವ್ಯಭಿಚಾರಪರಿಹಾರೋ ಭವಿಷ್ಯತೀತಿ ಚೇತ್ । ತರ್ಹಿ ಸ್ವರೂಪಕಥನಾರ್ಥಂ 'ಭ್ರಾಂತೌ' ಇತ್ಯುಕ್ತಮಿತಿ । ಲಕ್ಷಣವಾಕ್ಯಸ್ಯಾಪಿ ಹೇತುವಾಕ್ಯಸಮಾನಯೋಗಕ್ಷೇಮತ್ವಾತ್ ।

ಇಯಾಂಸ್ತು ವಿಶೇಷಃ — ಯದ್ಧೇತುವಾಕ್ಯೇ ವ್ಯಭಿಚಾರನಿರೂಪಕಮಧಿಕರಣಂ ತದೇವ ಲಕ್ಷಣ-

ವಾಕ್ಯೇಽತಿವ್ಯಾಪ್ತಿನಿರೂಪಕಮಧಿಕರಣಮಿತಿ । ಸ್ವೇತರಸಮಸ್ತವ್ಯಾವೃತ್ತೇರ್ಲಕ್ಷಣಪ್ರಯೋಜನತ್ವೇನ ತತ್ಸಾಧನದಶಾಯಾಂ ತಸ್ಯೈವ ಹೇತುತ್ವಾಚ್ಚ । ಅಧಿಕಂ ತು ಗುರ್ವ್ಯಾಂ ರಸರಂಜನ್ಯಾಂ ದ್ರಷ್ಟವ್ಯಮ್ ।

ಅಲ್ಲದೇ ಮುಖ್ಯಾರ್ಥವೇ ಲಕ್ಷಣವಾಗುವುದರಿಂದ ಹಾಗೆಯೇ ಇಲ್ಲಿ ಲಕ್ಷಣಪದವೆಂದರೆ ಗುಣೈಕ-ದೇಹಂ ಎಂಬುದು ಮಾತ್ರ. ಹಾಗಾದರೆ ಸ್ವತೋ ಗುಣೈಕದೇಹಂ ಎಂದು ಸುಧಾದಲ್ಲಿ ಸ್ವತಃ ಎಂಬ ಪದವನ್ನು ಹೇಳಿದ್ದೇಕೆ? ಎಂಬ ಆಕ್ಷೇಪ ಬಂದೀತು. ಉತ್ತರ - ಸ್ವತಃ ಎಂಬ ಪದವಾದರೋ ಲಕ್ಷಣಘಟಕವಾಗಿ ಅರ್ಥಾತ್ ಲಕ್ಷಣದಲ್ಲಿ ಸೇರುವ ಪದವಾಗಿ ವಿವಕ್ಷೆಮಾಡದೆ ಕೇವಲ ಲಕ್ಷಣಪದದಿಂದ ಹೇಳಲು ಇಚ್ಛೆಪಟ್ಟ ಅರ್ಥವನ್ನು ವಿವರಿಸುವ ದೃಷ್ಟಿಯಿಂದಲೇ ಹೇಳಿದ್ದು ಎಂದು ತಿಳಿಯಬೇಕು.

ಅಥವಾ - ಸ್ವತಃ ಎಂಬ ಪದವು ಲಕ್ಷಣದಲ್ಲಿ ಸೇರಿದೆ. ಇದರ ಪ್ರಯೋಜನ ರಮಾದಿಗಳಲ್ಲಿ ಅತಿವ್ಯಾಪ್ತಿಪರಿಹಾರ. ಹಾಗಾದರೆ ಸ್ವತಃ ಪದದಿಂದಲೇ ಅತಿವ್ಯಾಪ್ತ್ಯಾದಿದೋಷಗಳ ನಿವಾರಣೆ-ಯಾಗುವುದರಿಂದ ಶೇಷಾಂಶವು ವ್ಯರ್ಥವಾಗುವುದು ಎಂದರೆ ಅದಕ್ಕೆ ಉತ್ತರ - ಸ್ವರೂಪ-ಕಥನಕ್ಕೋಸ್ಕರ ಸ್ವತಃ ಎಂಬ ಪದವಿದೆ ಎಂದು ತಿಳಿಯಬೇಕು. ಹೊರತು ದೋಷವಾರಣೆಗಾಗಿ ಅಲ್ಲ. ಇದನ್ನು ತಾವೇ ವಿಷ್ಣುತತ್ವನಿರ್ಣಯಟೀಕೆಯಲ್ಲಿ 'ನ ಚ ಏಕಮೇವ ಯುಗಪತ್ ಬಹುಧಾ ಭ್ರಾಂತೌ ದೃಶ್ಯತೇ' ಎಂಬ ಮೂಲಕ್ಕೆ ವ್ಯಾಖ್ಯಾನಮಾಡುವಾಗ ಹೇತುವಾಕ್ಯದ ಪದಕೃತ್ಯವನ್ನು ತೋರಿಸುವಾಗ ಸ್ವರೂಪಕಥನಕ್ಕಾಗಿ ವಿಶೇಷಣ ಎಂದು ತಿಳಿಸಿದ್ದಾರೆ. ಅದು ಹೀಗೆ - ಇಲ್ಲಿ ಎರಡು ಅನುಮಾನಗಳಿವೆ. 'ಏಕಸ್ಮಿನ್ನಾತ್ಮನಿ ಸರ್ವಂ ಜಗತ್, ಕಲ್ಪಿತಂ ನ ಭವತಿ, ಯುಗಪತ್ ಬಹುಧಾ ದೃಶ್ಯಮಾನತ್ವಾತ್' 'ಆತ್ಮಾ ಯುಗಪತ್ ಬಹುಧಾ ದೃಶ್ಯಮಾನಸ್ಯ ಅಧಿಷ್ಠಾನಂ ನ ಭವತಿ ಏಕತ್ವಾತ್' ಎಂದು. ಈ ಅನುಮಾನಗಳಿಗೆ ವ್ಯಾಪ್ತಿಯನ್ನು ನಿರೂಪಣೆ ಮಾಡಲು 'ನ ಚ ಏಕಮೇವ ಯುಗಪತ್ ಬಹುಧಾ ಭ್ರಾಂತೌ ದೃಶ್ಯತೇ' ಎಂಬ ಮೂಲವು ಹೊರಟಿದೆ.

**ನ ಚ ಏಕಮೇವ ಯುಗಪದ್ ಬಹುಧಾ ಭ್ರಾಂತೌ ದೃಶ್ಯತೇ**

* – किञ्च 'एकस्मिन्नात्मनि सर्वं जगत, कल्पितं न भवति, युगपद् बहुधा दृश्यमानत्वात्' 'आत्मा वा युगपत् बहुधा दृश्यमानस्य अधिष्ठानं, न भवति एकत्वात्' इत्यनुमानद्वयस्य व्याप्तिमुपपादयति – **नचेति** ॥

नचैकमेव युगपद् बहुधा दृश्यते भ्रान्तौ ॥ (ವಿ.ನಿರ್ಣಯ)

येनैतयोरनुमानयोः व्याप्तिः भज्येतेति शेषः । आदौ रजतत्वेन दृष्टं पश्चात् शुक्तिकात्वेन

दृश्यत इत्यतो भ्रान्तौ इत्युक्तम् । भ्रान्तावेव रज्जुखण्डसर्पमालावलीवर्दमूत्रत्वेन क्रमेण दृश्यते तत्परिहारार्थं युगपत् इत्युक्तम् । अनेनैव सर्वव्यभिचारपरिहारो भविष्यतीति चेत् तर्हि स्वरूपकथनार्थं भ्रान्तावित्युक्तम् । प्रागधिष्ठानाधिष्ठेययोः विरोधभेदावाश्रित्यानुमितम् । इदानीं तु आरोप्यतयाभिमते जगति वहुविधत्वमाश्रित्येति भेदः ॥ – **(टीका)**

ಇದರ ತಾತ್ಪರ್ಯ ಹೀಗೆ - ಇಡೀ ಜಗತ್ತು ಒಬ್ಬನೇ ಆತ್ಮನಲ್ಲಿ ಕಲ್ಪಿತ ಎನ್ನಲು ಬರುವುದಿಲ್ಲ. ಏಕೆಂದರೆ, ಒಬ್ಬನೇ ಆತ್ಮನಲ್ಲಿ ಅನೇಕರೀತಿಯಾಗಿ ಜಗತ್ತು ಕಾಣಲು ಸಾಧ್ಯವಿಲ್ಲವಾದ್ದರಿಂದ ಅಥವಾ ಆತ್ಮ ಒಮ್ಮೆಲೇ ಅನೇಕ ರೀತಿ ಕಾಣುವ ಜಗತ್ತಿಗೆ ಅಧಿಷ್ಠಾನನಾಗುವುದಿಲ್ಲ, ಒಬ್ಬನೇ ಆದ್ದರಿಂದ. ಈ ಅನುಮಾನಗಳಿಗೆ ವ್ಯಾಪ್ತಿಯನ್ನು ತೋರಿಸಲು ಹೀಗಂದಿದ್ದಾರೆ. ಭ್ರಾಂತಿಯಲ್ಲಿ ಒಂದೇ ವಸ್ತುವು ಒಮ್ಮೆಯೇ ಅನೇಕರೀತಿಯಾಗಿ ಕಾಣುವುದಿಲ್ಲ. ಅಥವಾ ಅನೇಕ ರೀತಿ ಕಾಣುವ ವಸ್ತುಗಳಿಗೆ ಒಂದೇ ವಸ್ತು ಅಧಿಷ್ಠಾನವಾಗುವುದಿಲ್ಲ. ವ್ಯಾಪ್ತಿಯ ಸ್ವರೂಪ ಹೀಗಿದೆ - 'ಯದ್ಯತ್ ಏಕಸ್ಮಿನ್ ಯುಗಪದ್ ಬಹುಧಾ ದೃಶ್ಯತೇ ತತ್ ಕಲ್ಪಿತಂ ನ ಭವತಿ, ಭ್ರಾಂತಿವತ್' 'ಯತ್ರ ಯತ್ರ ಏಕತ್ವಂ ತತ್ರ ತತ್ರ ಯುಗಪದ್ ಬಹುಧಾ ದೃಶ್ಯಮಾನಸ್ಯ ಅಧಿಷ್ಠಾನತ್ವಾಭಾವಃ' ಎಂದು.

ಇಲ್ಲಿ ಹೇತುವಾಕ್ಯದಲ್ಲಿ ಭ್ರಾಂತೌ ಎಂಬ ಪದವಿಲ್ಲ. ಅದನ್ನು ವ್ಯಾಪ್ತಿಯಲ್ಲಿ ವಿಶೇಷಣವಾಗಿ ನೀಡಿದ್ದಾರೆ. ಅದರ ಪ್ರಯೋಜನ ಹೀಗಿದೆ - ಮೊದಲು ಶುಕ್ತಿಯು ರಜತವಾಗಿ ಕಂಡದ್ದು ನಂತರ ಶುಕ್ತಿಯಾಗಿ ಕಂಡಿದೆ. ಹಾಗಾಗಿ ಒಂದೇ ವಸ್ತುವಿನಲ್ಲಿ ಅನೇಕ ಆಕಾರಗಳು ಕಾಣಬಹುದು. ಎಂದರೆ ಅದಕ್ಕೋಸ್ಕರವೇ ಭ್ರಾಂತೌ ಎಂದದ್ದು. ಇನ್ನು ಭ್ರಾಂತಿಯಲ್ಲೇ ಆದು ಹಗ್ಗವೆಂದು, ಸರ್ಪವೆಂದು, ಮಾಲೆಯೆಂದು, ಬಲೀವರ್ದದ (ಎತ್ತಿನ) ಮೂತ್ರ ಎಂದು ಕ್ರಮವಾಗಿ ತೋರುತ್ತದೆ. ಹಾಗಾಗಿ ಅನೇಕ ಆಕಾರಗಳು ಒಂದರಲ್ಲೇ ತೋರಿದೆ. ಇದಕ್ಕೋಸ್ಕರ ಯುಗಪತ್ ಎಂದರು. ಒಮ್ಮೆಲೇ ತೋರಿದ್ದಕ್ಕೆ ದೃಷ್ಟಾಂತ ಕೊಡಬೇಕು. ಆದರೆ ಅದಿಲ್ಲ ಎಂದಭಿಪ್ರಾಯ. ಹೀಗೆ ಹೇಳಿದ್ದರಿಂದಲೇ ಅರ್ಥಾತ್ ಯುಗಪತ್ ಎಂದಿದ್ದರಿಂದಲೇ ಸರ್ವವ್ಯಭಿಚಾರ ಪರಿಹಾರವು ಆಗುತ್ತಿದೆ. ಹಾಗಾಗಿ ಭ್ರಾಂತೌ ಎಂಬ ಪದ ಬೇಕೇ? ಎಂದರೆ ಬೇಕು. ಅದು ಸ್ವರೂಪಕಥನಕ್ಕೋಸ್ಕರ ಎಂದಿದ್ದಾರೆ ಹೊರತು ದೋಷಪರಿಹಾರಕ್ಕಲ್ಲ.

ಈ ರೀತಿ ಹೇಳಿದ್ದರಿಂದ ಹೇತುವಾಕ್ಯದಂತೆ ಸಮಾನವಾದ ಯೋಗ ಹಾಗೂ ಕ್ಷೇಮವನ್ನು ಹೊಂದಿರುವ ಲಕ್ಷಣವಾಕ್ಯವನ್ನೂ ತಿಳಿಯಬೇಕು. ವ್ಯತ್ಯಾಸವಿಷ್ಟೇ. ಯಾವುದು ಹೇತುವಾಕ್ಯದಲ್ಲಿ ವ್ಯಭಿಚಾರಸಮರ್ಪಕವಾದ ಅಧಿಕರಣವಿದೆಯೋ ಅದೇ ಲಕ್ಷಣವಾಕ್ಯದಲ್ಲಿ ಅತಿವ್ಯಾಪ್ತಿಸಮರ್ಪಕ-ವಾದ ಅಧಿಕರಣವಾಗಿರುತ್ತದೆ. ಅಲ್ಲದೆ ಲಕ್ಷಣಪ್ರಯೋಜನವು ಲಕ್ಷ್ಯಕ್ಕೆ ಇತರ ಸಮಸ್ತವಸ್ತುವಿನ ವ್ಯಾವೃತ್ತಿಯಾದ್ದರಿಂದ, ಸಮಸ್ತವಸ್ತುವಿನ ಭೇದವನ್ನು ಸಾಧಿಸುವ ಸಂದರ್ಭದಲ್ಲಿ ಲಕ್ಷಣವೇ ಹೇತುವಾಗುವುದರಿಂದ. ಅಧಿಕವಿಷಯವನ್ನು ಗುರುರಸರಂಜನಿಯಲ್ಲಿ ತಿಳಿಯಬೇಕು.

## ನಿರ್ದೋಷಮಿತ್ಯನೇನ ವಿವಕ್ಷಾಭೇದೇನ ಏಕಮ್

(ಲಘುರಸರಂಜಿನೀ)— 'ಏಕಂ ಲಕ್ಷಣಮುದಿತಮ್' ಇತಿ ವ್ಯತ್ಯಯೇನಾನುವರ್ತತೇ । ಏವಮುತ್ತರತ್ರಾಪಿ । ನನು ನಿರ್ದೋಷತ್ವಂ ಪಾರತಂತ್ರ್ಯಾದಿಸಮಸ್ತದೋಷಾಭಾವಃ । ತತ್ರ ಪಾರತಂತ್ರ್ಯಾಭಾವೋ ಲಕ್ಷಣಮ್ ಇತ್ಯವಿವಾದಮ್ । ನಿರ್ದುಷ್ಟತ್ವಾತ್ । ತದಿತರದೋಷಾಭಾವೋಽಪಿ ಲಕ್ಷಣಂ ಭವತ್ಯೇವ । ಪೂರ್ವವತ್ ಸ್ವತಸ್ತ್ವವಿವಕ್ಷಯಾ ರಮಾಯಾಮತಿವ್ಯಾಪ್ತಿಪರಿಹಾರಸಂಭವಾತ್ । ಅತಃ ಕಥಂ 'ನಿರ್ದೋಷಮ್' ಇತ್ಯನೇನ ವಿಶೇಷಣೇನೈಕಂ ಲಕ್ಷಣಮುದಿತಮ್ ಇತ್ಯುಚ್ಯತೇ? ಇತ್ಯತೋಽತ್ರಾಪಿ 'ವಿವಕ್ಷಾಭೇದೇನ' ಇತ್ಯನುವರ್ತನೀಯಮ್ । ತಥಾ ಚ – ಪೂರ್ವಂ 'ಗುಣೈಕದೇಹ'ಪದೇನ ಲಕ್ಷಣಾಂತರಪ್ರತೀತೌ ತಸ್ಮಾತ್ ಪರಾಧೀನತಾಪರಿಹಾರಾಯ ಸ್ವತಸ್ತ್ವವಿವಕ್ಷಾ ಕಾರ್ಯೈವ । ಅತ್ರ 'ನಿರ್ದೋಷಮ್' ಇತಿ ಪದೇನ ತು ನ ವಿಶಿಷ್ಯ ಪಾರತಂತ್ರ್ಯಾದಿದೋಷಾಭಾವಃ ಪ್ರತೀಯತೇ । ಯೇನ ಲಕ್ಷಣದ್ವಯಕಲ್ಪನಾವಕಾಶಃ । 'ನಿಷ್ಕ್ರಾಂತೋ ದೋಷೇಭ್ಯಃ ಪಾರತಂತ್ರ್ಯಾದಿಭ್ಯಃ' ಇತಿ ವ್ಯಾಖ್ಯಾನಂ ತು 'ಗುಣಾ ಆನಂದಾದಯಃ' ಇತಿವತ್ ವಸ್ತುಸ್ಥಿತಿಜ್ಞಾಪನಾಯ । ನ ತು ಪದಾತ್ ತಥಾ ಪ್ರತಿಭಾಸಮಪೇಕ್ಷ್ಯ । ಕಿಂತು 'ನಿರ್ಮಕ್ಷಿಕಃ' ಇತ್ಯಾದಾವಿವ ಸಾಮಾನ್ಯತೋ ದೋಷತ್ವಾವಚ್ಛಿನ್ನದೋಷಾಭಾವ ಏಕ ಏವೇತ್ಯನೇನ ವಿವಕ್ಷಾವಿಶೇಷೇಣ 'ನಿರ್ದೋಷಮ್' ಇತ್ಯನೇನ ಏಕಂ ಲಕ್ಷಣಮುದಿತಮಿತ್ಯುಕ್ತಂ ಜ್ಞೇಯಮ್ । 'ಆಪ್ಯತಮಮ್' ಇತ್ಯನೇನ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಇತ್ಯಂತಪರಿಗ್ರಹಃ । ಅನೇನಾಪ್ಯನೇಕಲಕ್ಷಣೋಕ್ತಿಃ, ಇತ್ಯನೇಕಲಕ್ಷಣೋಕ್ತಿಸಮುಚ್ಚಾಯಕೋಽಪಿಶಬ್ದಃ । ಇತಿ ದ್ವಯಮಿತಿ ॥

ಇತಿ ದ್ವಯಂ - ನಿರ್ದೋಷಂ ಎಂಬ ಪದದಿಂದ ಒಂದೇ ಲಕ್ಷಣವು ಸಿಗುವುದು. ನಿರ್ದೋಷತ್ವ ಎಂದರೆ ಪಾರತಂತ್ರ್ಯಾದಿಸಮಸ್ತದೋಷಾಭಾವ. ಅರ್ಥಾತ್ ಪರಾಧೀನತೆ, ಅಜ್ಞಾನ ಮೊದಲಾದ ದೋಷಗಳು ಇಲ್ಲದಿರುವಿಕೆ. ಇಲ್ಲಿ ಪಾರತಂತ್ರ್ಯ-ಅಭಾವ ಎನ್ನುವುದು ಭಗವಂತನ ಲಕ್ಷಣ ಎನ್ನುವುದರಲ್ಲಿ ವಿವಾದವಿಲ್ಲ. ಏಕೆಂದರೆ ಯಾವುದೇ ಅತಿವ್ಯಾಪ್ತ್ಯಾದಿ ದೋಷಗಳಿರುವುದಿಲ್ಲವಾದ್ದರಿಂದ. ಇನ್ನು ಪಾರತಂತ್ರ್ಯ-ಅಭಾವವನ್ನು ಹೇಗೆ ಭಗವಂತನ ಲಕ್ಷಣವನ್ನಾಗಿ ಹೇಳುತ್ತೇವೆಯೋ, ಹಾಗೆ ಇತರ ದೋಷಗಳ ಅಭಾವ ಅರ್ಥಾತ್ ಅಜ್ಞಾನಾಭಾವ, ವಿಪರೀತಜ್ಞಾನಾಭಾವ ಹೀಗೆ ಇವುಗಳೂ ಲಕ್ಷಣಗಳಾಗಬಹುದು. ಹಿಂದಿನಂತೆಯೇ ಇಲ್ಲಿ ಈ ಎಲ್ಲ ದೋಷಗಳ ಅಭಾವವು ಸ್ವಾತಂತ್ರ್ಯೇಣ ಎಂದು ವಿವಕ್ಷೆಮಾಡಿ ರಮಾದೇವಿಯಲ್ಲಿ ಅತಿವ್ಯಾಪ್ತಿಪರಿಹಾರವನ್ನೂ ಮಾಡಬಹುದು. ಹಾಗಾಗಿ - 'ನಿರ್ದೋಷಮಿತ್ಯನೇನ ಏಕಮ್' – ನಿರ್ದೋಷಂ ಎಂಬುವುದರಿಂದ ಒಂದೇ ಲಕ್ಷಣವು ಹೇಳಲ್ಪಟ್ಟಿದೆ ಎಂದು ಸುಧಾದಲ್ಲಿ ಹೇಳಿದ್ದಾರೆ. ಇದಕ್ಕೆ ಉತ್ತರ – ಹಿಂದಿನ ವಾಕ್ಯದಲ್ಲಿರುವ ವಿವಕ್ಷಾಭೇದೇನ ಎಂಬ ಶಬ್ದವನ್ನು ಇಲ್ಲಿಯೂ ಅನುವೃತ್ತಿಯನ್ನು ಮಾಡಿ

'ನಿರ್ದೋಷಮಿತ್ಯನೇನ ವಿವಕ್ಷಾಭೇದೇನ ಏಕಂ' ಎಂದು ವ್ಯಾಖ್ಯಾನ ಮಾಡಬೇಕು. ಹಾಗಾಗಿ ಈ ಹಿಂದಿನ 'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣದಲ್ಲಿ ಬೇರೆ ಬೇರೆ ಲಕ್ಷಣಗಳು ತೋರುತ್ತಿರಲು ಅದಕ್ಕಾಗಿ ರಮೆಯಲ್ಲಿ ಅತಿವ್ಯಾಪ್ತಿಪರಿಹಾರಕ್ಕೋಸ್ಕರ ಸ್ವತಃ ಎಂಬ ಪದದ ವಿವಕ್ಷೆಯನ್ನು ಮಾಡಲೇ ಬೇಕು. 'ನಿರ್ದೋಷಂ' ಎಂಬಲ್ಲಿಯಾದರೋ ವಿಶೇಷವಾಗಿ ಪಾರತಂತ್ರ್ಯಾದಿ ದೋಷಗಳ ಅಭಾವ ಎಂಬ ಅಂಶವು ತೋರುವುದಿಲ್ಲ. ಆ ರೀತಿ ಇದ್ದರೆ ನೀವು ಹೇಳಿದಂತೆ ಇನ್ನೂ ಅನೇಕ ಲಕ್ಷಣಗಳ ಕಲ್ಪನೆಗೆ ಅವಕಾಶಗಳಿರುತ್ತಿತ್ತು. ಅಲ್ಲ ಹಾಗಾದರೆ ಸುಧಾ ಮೂಲದಲ್ಲಿಯೇ 'ನಿಷ್ಕ್ರಾಂತಃ ದೋಷೇಭ್ಯಃ ಪಾರತಂತ್ರ್ಯಾದಿಭ್ಯಃ' ಎಂದು ದೋಷ ಎಂಬ ಪದಕ್ಕೆ ಪಾರತಂತ್ರ್ಯ ಮೊದಲಾದವುಗಳು ಎಂದು ವ್ಯಾಖ್ಯಾನಮಾಡಿದ್ದು ಹೇಗೆ ಸರಿ ಎಂದರೆ, ಇದನ್ನು 'ನಿಖಿಲ-ಪೂರ್ಣಗುಣೈಕದೇಹಂ' ಎಂಬಲ್ಲಿ ಗುಣಾಃ = ಆನಂದಾದಯಃ ಎಂದು ಗುಣಪದಕ್ಕೆ ಆನಂದ ಮೊದಲಾದವುಗಳು ಎಂದು ವ್ಯಾಖ್ಯಾನಿಸಿದ್ದು ಹೇಗೋ ಅದೇ ರೀತಿ ಎಂದು ತಿಳಿಯಬೇಕು. ಅರ್ಥಾತ್ ವಸ್ತುತಃ ಭಗವಂತನಲ್ಲಿರುವ ಗುಣಗಳು ಯಾವುವು ಎಂದು ತಿಳಿಸಲು ಆನಂದಾದಯಃ ಎಂದು ವ್ಯಾಖ್ಯಾನಿಸಿದ್ದು. ಹಾಗೆಯೇ ಇಲ್ಲಿ ಯಾವ ಯಾವ ದೋಷಗಳು ಭಗವಂತನಲ್ಲಿ ಇಲ್ಲ ಎಂದು ತಿಳಿಸಲು ಪಾರತಂತ್ರ್ಯಾದಿದೋಷಾಭಾವಃ ಎಂದು ವ್ಯಾಖ್ಯಾನಿಸಿದ್ದಾರೆ. ಹೊರತು ನಿರ್ದೋಷಂ ಎಂಬ ಪದ ಕೇಳಿದಾಗ ಪಾರತಂತ್ರ್ಯಾದಿ ದೋಷಾಭಾವಃ ಎಂಬರ್ಥವು ತೋರುತ್ತದೆ ಎನ್ನುವ ಕಾರಣಕ್ಕಲ್ಲ. ಹಾಗಾಗಿಯೇ ನಿಖಿಲಪೂರ್ಣಗುಣೈಕದೇಹಂ ಎಂಬಲ್ಲಿಯೂ ಆನಂದಾದಿಗಳ ವಿಷಯದಲ್ಲೂ ಈ ಅಂಶ ಸಮಾನವಾದ್ದರಿಂದ ಆನಂದಾದಿಪದಗಳು ಸೇರಿರುವ ಲಕ್ಷಣಗಳನ್ನು ಅಲ್ಲಿ ತಿಳಿಸಲಿಲ್ಲ. ಹಾಗಾದರೆ 'ನಿರ್ದೋಷಂ' ಎಂಬ ಪದದಿಂದ ಏನು ತೋರುವುದು ಎಂದರೆ ಅದು ಹೀಗೆ - ನಿರ್ಮಕ್ಷಿಕಂ ಎಂದಾಗ ಹೇಗೆ ಮಕ್ಷಿಕಗಳ ಅತ್ಯಂತಾಭಾವವು ತೋರುವುದೋ ಹಾಗೆಯೇ ಇಲ್ಲಿ ಸಾಮಾನ್ಯತಃ ದೋಷತ್ವಾವಚ್ಛಿನ್ನ-ಅಭಾವವು ಒಂದೇ ಎಂಬ ಅಭಿಪ್ರಾಯದಿಂದ 'ನಿರ್ದೋಷಮಿತ್ಯನೇನ ಏಕಮ್' ಎಂದು ಸುಧಾದಲ್ಲಿ ಹೇಳಿದ್ದಾರೆ.

## ತಮಪ್ ಪ್ರತ್ಯಯ ಅಖಿಲಪದಗಳ ಮಧ್ಯೆ ಅನ್ಯತರವೈಯರ್ಥ್ಯ-ಶಂಕಾಪರಿಹಾರಕ್ಕಾಗಿ ಲಕ್ಷಣದ್ವಯಗಳು ವಿವಕ್ಷಿತ

(ಲಘುರಸರಂಜನೀ)— ನನು 'ಆಪ್ತತಮಮಪ್ತಖಿಲೈಃ ಸುವಾಕ್ಯೈಃ' ಇತ್ಯೇತತ್ ಪೂರ್ವಯೋಜ-ನಾಯಾಮೇಕಧರ್ಮಪ್ರತಿಪಾದನಪರತಯಾ ವ್ಯಾಖ್ಯಾತತ್ವಾತ್ ಕಥಮತ್ರ ಲಕ್ಷಣದ್ವಯ-ಪ್ರತಿಪಾದಕತಯಾ ವ್ಯಾಖ್ಯಾಯತ ಇತ್ಯತೋಽತ್ರಾಪಿ 'ವಿವಕ್ಷಾಭೇದೇನ' ಇತಿ ಅನುವರ್ತನೀ-ಯಮ್ । ತಥಾ ಚ — ಪೂರ್ವಯೋಜನಾಯಾಮ್ 'ಆಪ್ತತಮಮಪ್ತಖಿಲೈಃ ಸುವಾಕ್ಯೈಃ' ಇತಿ ವಿಶೇಷಣಸ್ಯ ಅಧಿಕೃತತ್ವಪ್ರತಿಪಾದಕತ್ವಂ ವಿವಕ್ಷಿತಮ್ । ಅಧಿಕೃತತ್ವಂ ಚ ಪ್ರಕೃತಗ್ರಂಥೇ

ಅನನ್ಯಾರ್ಥತಯಾ ಸರ್ವತ್ರ ಪ್ರತಿಪಾದ್ಯತ್ವಮಿತ್ಯುಕ್ತಮ್ । ತಚ್ಚ ತಮಪ್ಪ್ರತ್ಯಯಾಖಿಲಪದೇ ವಿನಾ ನ ಕೇವಲೇನ ಸುವಾಕ್ಯೈರಾಪ್ಯಮ್ ಇತಿ ವಿಶೇಷಣೇನ ಪ್ರತಿಪಾದಯಿತುಂ ಶಕ್ಯಮಿತಿ ತತ್ರ ವಿಶಿಷ್ಟಸ್ಯಾಪಿ ವಿಶೇಷಣಸ್ಯೈಕಧರ್ಮಪ್ರತಿಪಾದಕತ್ವಮಾವಶ್ಯಕಮ್ । ಅತ್ರ ತು ಅಸ್ಯ ಲಕ್ಷಣಪ್ರತಿ-ಪಾದಕತ್ವಂ ವಿವಕ್ಷಿತಮ್ । ಲಕ್ಷಣವಾಕ್ಯೇ ಚ ಲಕ್ಷಣದೋಷಪರಿಹಾರಪ್ರಯೋಜನಕಪದಸ್ಯೈವ ನಿವೇಶನೀಯತಯಾ ತಮಪ್ಪ್ರತ್ಯಯಾಖಿಲಪದಯೋರನ್ಯತರವೈಯರ್ಥ್ಯಪರಿಹಾರಾಯ ಲಕ್ಷಣ-ದ್ವಯಪ್ರತಿಪಾದಕತ್ವಂ ವಿವಕ್ಷಿತಮಿತಿ ಭಾವಃ ।

"ಅಶೇಷ" ಇತ್ಯನೇನ - 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬ ವಿಶೇಷಣಕ್ಕೆ ಹಿಂದಿನ ಯೋಜನೆಯಲ್ಲಿ ಒಂದೇ ಧರ್ಮವನ್ನು ಪ್ರತಿಪಾದನೆಮಾಡುತ್ತದೆ ಎಂದು ವ್ಯಾಖ್ಯಾನ ಮಾಡಿದ್ದರಿಂದ ಪ್ರಕೃತದಲ್ಲಿ ಎರಡು ವಿಶೇಷಣಗಳನ್ನು ಹೇಳುತ್ತದೆ ಎಂದು ವ್ಯಾಖ್ಯಾನಿಸಿದ್ದು ಹೇಗೆ ಎಂಬ ಪ್ರಶ್ನೆಗೂ ಉತ್ತರವಾಗಿ ವಿವಕ್ಷಾಭೇದೇನ ಎಂಬ ಹಿಂದಿನ ಪದವನ್ನೇ ಅನುವೃತ್ತಿಮಾಡಬೇಕು. ಹಾಗಾಗಿ ಹಿಂದಿನ ಯೋಜನೆಯಲ್ಲಿ ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ ಎಂಬ ವಿಶೇಷಣವು ನಾರಾಯಣನಿಗೆ ಅಧಿಕೃತತ್ವವಿದೆ ಎಂಬುದನ್ನು ಪ್ರತಿಪಾದಿಸಲು ಹೊರಟಿದೆ. ಅಧಿಕೃತತ್ವವಾದರೋ 'ಪ್ರಕೃತಗ್ರಂಥೇ ಅನನ್ಯಾರ್ಥತಯಾ ಸರ್ವತ್ರ ಪ್ರತಿಪಾದ್ಯತ್ವಂ' ಎಂದು ಹೇಳಿದ್ದಾರೆ. ಇದಾದರೋ ತಮಪ್ ಪ್ರತ್ಯಯ ಹಾಗೂ ಅಖಿಲ ಎಂಬ ಎರಡು ಪದಗಳನ್ನು ಬಿಟ್ಟು ಕೇವಲ 'ಸುವಾಕ್ಯೈಃ ಆಪ್ಯಮ್' ಎಂಬ ವಿಶೇಷಣದಿಂದ ಪ್ರತಿಪಾದನೆ ಮಾಡುವುದು ಸಾಧ್ಯವಿಲ್ಲ ಎಂದು ಅಲ್ಲಿ ವಿಶೇಷಣವು ಏಕ-ಧರ್ಮಪ್ರತಿಪಾದಕ ಎಂದು ಒಪ್ಪಬೇಕು. ಇಲ್ಲಿಯಾದರೋ ಈ ವಿಶೇಷಣವು ಭಗವಂತನ ಲಕ್ಷಣವನ್ನು ಪ್ರತಿಪಾದಿಸಲು ಹೊರಟಿದೆ ಎಂಬ ವಿವಕ್ಷೆ ಇದೆ. ಇನ್ನು ಲಕ್ಷಣವಾಕ್ಯದಲ್ಲಿ ಲಕ್ಷಣದೋಷಗಳಾದ ಅತಿವ್ಯಾಪ್ತ್ಯಾದಿಗಳನ್ನು ಪರಿಹಾರಮಾಡುವುದೇ ಪ್ರಯೋಜನವಾಗಿ ಉಳ್ಳ ಪದವನ್ನೇ ಸೇರಿಸಬೇಕಾದ್ದರಿಂದ ಅದಾದರೋ ತಮಪ್‌ಪ್ರತ್ಯಯ ಹಾಗೂ ಅಖಿಲಪದ ಇವುಗಳೆರಡರಲ್ಲಿ ಒಂದೂ ವ್ಯರ್ಥವಾಗದೇ ಇರಬೇಕಾದರೆ ಲಕ್ಷಣದ್ವಯಪ್ರತಿಪಾದಕತ್ವವನ್ನು ಇಲ್ಲಿ ವಿವಕ್ಷೆ ಮಾಡಬೇಕು.

## ಪೃಥಗಪ್ಪಲಕ್ಷಣಗಳೂ ಸಾರ್ಥಕ ಹಾಗೂ ಅಶೇಷಾದ್ವಿಶೇಷೇಣ ವಂದ್ಯಂ

(ಲಘುರಸರಂಜಿನೀ)— ನನು ಅಖಿಲವೇದಾದ್ಯರ್ಥತ್ವಂ ವಾಯೋರಪ್ಯಸ್ತಿ । ಮೈವಮ್ । ಅಭಿ-ವ್ಯಾಪ್ತ್ಯರ್ಥಕಅಪಿಶಬ್ದಸ್ಯಾಪ್ಯತ್ರ ಅಭಿಪ್ರೇತತ್ವಾತ್ ಅಸಂಕುಚಿತಾಖಿಲವೇದಾರ್ಥತ್ವಸ್ಯ ತತ್ರಾ-ಭಾವಾತ್ । ಅತ ಏವಾತ್ರ 'ಅಪಿ'ಶಬ್ದಸ್ಯ ಲಕ್ಷಣಸಮುಚ್ಚಾಯಕತ್ವಾನುಕ್ತಿಃ । 'ಅಸ್ಯ' ಇತ್ಯನೇನ 'ಅಪ್ಟೌ' ಇತಿ । ಅತ್ರಾಪಿ 'ವಿವಕ್ಷಾಭೇದೇನ' ಇತ್ಯನುವರ್ತತೇ । ತಥಾ ಚ - ಅಸ್ಯ ವಿಶೇಷಣಸ್ಯ

ಪೂರ್ವಯೋಜನಾಯಾಂ ಸಂಭಾವಕಸಮರ್ಪಕತ್ವೇ ನ ಸಾರ್ಥಕ್ಯಮ್ । ಅತ ಏವ ತತ್ರ ನ ವೈಯರ್ಥ್ಯಶಂಕಾಪಿ । ಅಸ್ಯಾಂ ತು ಲಕ್ಷಣಪ್ರತಿಪಾದಕತ್ವವಿವಕ್ಷಾ । ತತ್ರ ಚ ಏಕೈಕಸ್ಯಾನತಿಪ್ರಸಕ್ತತಯಾ ಶೇಷವೈಯರ್ಥ್ಯಾತ್ ಪೃಥಗಸ್ತ್ವಾವಪಿ ಲಕ್ಷಣಾನ್ಯನೇನ ಸಾರ್ಥಕಾನೀತ್ಯುಕ್ತಂ ಭವತಿ ।

ಅಶೇಷೇತ್ಯನೇನ ॥ 'ಅಶೇಷವಿಶೇಷತೋಽಪಿ ವಂದ್ಯಮ್' ಇತ್ಯನೇನ । ಮುಖ್ಯವಂದ್ಯತ್ವಮ್ । ಅತಿಶಯಿತವಂದ್ಯತ್ವಮ್ । ವಂದನಕರ್ತೃತ್ವಾಸಾಮಾನಾಧಿಕರಣಂ ತತ್ಕರ್ಮತ್ವಮಿತ್ಯುಕ್ತಂ ಭವತಿ । ರಮಾದಾವತಿವ್ಯಾಪ್ತಿವಾರಣಾಯ 'ಮುಖ್ಯ' ಇತ್ಯುಕ್ತಮ್ । ನಿವೃತ್ತಾ ವಿವಕ್ಷಾಭೇದೇನ ಇತಿ ಪದಾನುವೃತ್ತಿಃ । ಉಕ್ತದಿಶೈವ ಸಾಮಂಜಸ್ಯಾತ್ । ಅತ ಏವ ತಾವನ್ಮಾತ್ರೇ ತಸ್ಯಾನುವೃತ್ತಿಸೂಚನಾರ್ಥಮ್ 'ಅಷ್ಟೌ' ಇತಿ ತತ್ರೈವೋಕ್ತಮಿತಿ ಭಾವಃ । ನನು ಪ್ರಾಗತ್ರ ಸಮಾಸದ್ವಯಮಾಶ್ರಿತಮ್ । ತತ್ರ ಏತಲ್ಲಕ್ಷಣಪ್ರತೀತಿಃ ಕಿಂ ಸಮಾಸಾಶ್ರಯಣೇ ನ ಭವತೀತ್ಯತೋಽತ್ರ ವಿವಕ್ಷಿತಂ ಸಮಾಸಮನುವದತಿ ಅಶೇಷಾತ್ ವಂದ್ಯತ್ವೇನ ಸಮಾಶಂಕಿತಾತ್ ಪದ್ಮಾಪದ್ಮಭವಾದೇರ್ಜಗತೋ ವಿಶೇಷೇಣಾತಿಶಯೇನ ಸರ್ವೋತ್ತಮತ್ವೇನ ವಂದ್ಯಮಿತೀತಿ ।

ಅಲ್ಲ। ಅಖಿಲವೇದಾದ್ಯರ್ಥತ್ವ ಎಂಬ ಲಕ್ಷಣವು ವಾಯುದೇವರಲ್ಲಿಯೂ ಇದೆ. ಆದ್ದರಿಂದ ಅತಿವ್ಯಾಪ್ತಿ ಇದೆಯಲ್ಲ. ಇದು ಸರಿಯಲ್ಲ. ಇಲ್ಲಿರುವ ಅಪಿಶಬ್ದವು ಅಭಿವ್ಯಾಪ್ತಿ ಎಂಬ ಅರ್ಥದಲ್ಲೂ ಸ್ವೀಕರಿಸಿದ್ದರಿಂದ ಅಸಂಕುಚಿತ ಅಖಿಲವೇದಾದ್ಯರ್ಥತ್ವ ಎಂಬ ಅಂಶವು ಸಿಗುತ್ತದೆ. ಇದಾದರೋ ವಾಯುದೇವರಲ್ಲಿ ಇಲ್ಲ. ಆದ್ದರಿಂದಲೇ ಇಲ್ಲಿ ಅಪಿಶಬ್ದಕ್ಕೆ ಅಭಿವ್ಯಾಪ್ತಿ ಎಂಬರ್ಥವನ್ನು ಹೇಳಿದ್ದು, ಲಕ್ಷಣಸಮುಚ್ಚಾಯಕ ಎಂದು ಹೇಳಲಿಲ್ಲ. ಇದೇ ರೀತಿ ಮುಂದಿನ ಲಕ್ಷಣಗಳಲ್ಲಿಯೂ ವಿವಕ್ಷಾಭೇದೇನ ಹಿಂದಿನ ಯೋಜನೆಗಿಂತ ವ್ಯತ್ಯಾಸವನ್ನು ತಿಳಿಯಬೇಕು.

ಇನ್ನು "ಅಶೇಷವಿಶೇಷತೋಽಪಿ ವಂದ್ಯಂ" ಎಂಬ ಹಿಂದಿನ ಯೋಜನೆಯಲ್ಲಿ ಎರಡು ಸಮಾಸಗಳನ್ನು ಆಶ್ರಯಿಸಿದ್ದಾರೆ. ಈ ಯೋಜನೆಯಲ್ಲಿ ಅಂತಹ ಸಮಾಸಗಳನ್ನು ಆಶ್ರಯಿಸಿದರೆ ಈ ಲಕ್ಷಣದ ಪ್ರತೀತಿಯು ಆಗುವುದಿಲ್ಲವೇನು? ಎಂದರೆ ಇಲ್ಲ. ಆಗುತ್ತದೆ. ಅದಕ್ಕಾಗಿಯೇ ಇಲ್ಲಿ ವಿವಕ್ಷಿತವಾದ ಸಮಾಸವನ್ನು ಅನುವಾದ ಮಾಡುತ್ತಾರೆ – 'ಅಶೇಷಾತ್ ವಿಶೇಷೇಣ ವಂದ್ಯಂ' ಎಂದು.

## ಸದಾ ಮಮ ಪ್ರಿಯತಮಂ ಹಾಗೂ ಸರ್ವವಂದ್ಯತ್ವಂ

(ಲಘುರಸರಂಜನೀ)– ನನು ಅನಿರ್ಧಾರಿತಸ್ವರೂಪಸ್ಯ ವಂದ್ಯತ್ವಾಯೋಗಾತ್ ಸ್ವರೂಪಾವಧಾರಣಾಯ ಲಕ್ಷಣಮುಚ್ಯತೇ । ತತ್ರ ವಂದ್ಯತ್ವಸ್ಯ ಲಕ್ಷಣತ್ವೇಽನ್ಯೋನ್ಯಾಶ್ರಯಃ । ವಂದ್ಯತ್ವರೂಪಲಕ್ಷಣಸಿದ್ಧೌ ಲಕ್ಷ್ಯಸ್ವರೂಪಾವಧಾರಣಮ್ । ಸತಿ ತಸ್ಮಿಂಸ್ತತ್ಸಿದ್ಧಿರಿತಿ ಚೇನ್ನೈವಮ್ । ವಂದ್ಯತ್ವೇಽಪಿ ಭೇದಾತ್ । 'ನಾರಾಯಣಂ ಸನ್ನಮಾಮಿ' ಇತಿ ಹಿ ಭಾಷ್ಯಕಾರೈಃ ಶಿಷ್ಯಾಃ

ಶಿಕ್ಷ್ಯಂತೇ । ಯುಷ್ಮಾಭಿರಪಿ ನಾರಾಯಣೋ ವಂದನೀಯ ಇತಿ । ತತಃ ಕೋಽಸೌ ನಾರಾಯಣ ಇತಿ ತೈಃ ಪೃಷ್ಟಃ ಭಾಷ್ಯಕಾರೋ ಲಕ್ಷಣಾನ್ಯಾಹ । ತತಃ ಪರಮಾಪ್ತೋಕ್ತತ್ವಾತ್ ಲಕ್ಷಣಾಂತರಾಣೀವ ಸರ್ವವಂದ್ಯತ್ವಮಪಿ ಲಕ್ಷಣಂ ಜಾನಂತ್ಯೇವೇತಿ, ನ ಚ ಲಕ್ಷ್ಯನಾರಾಯಣಸ್ವರೂಪಮವಧಾರ್ಯಂ ತತ್ರ ಸ್ವವಂದ್ಯತ್ವಂ ನ ಜಾನಂತೀತಿ । ಅತೋಽಪಿ ಲಕ್ಷಣೇ ಮುಖ್ಯತ್ವವಿಶೇಷಣಮ್ । 'ಸದಾ' ಇತ್ಯನೇನ ಸದಾಪ್ರಿಯತಮಂ ಮಮ ಇತ್ಯನೇನ ಪರಮಪ್ರೇಮಯೋಗ್ಯತ್ವಮಿತಿ । ಪರಮಪ್ರೇಮ-ವಿಷಯತ್ವಯೋಗ್ಯತ್ವಮಿತ್ಯರ್ಥಃ । ತತ್ರ 'ಪ್ರಿಯತಮಮ್' ಇತ್ಯಸ್ಯಾರ್ಥಃ ಪರಮಪ್ರೇಮ-ವಿಷಯತ್ವೇತಿ । ಸದಾ ಮಮ ಇತ್ಯೇತಲ್ಲಬ್ಧಾರ್ಥೋ ಯೋಗ್ಯತ್ವಮಿತಿ । ತಲ್ಲಾಭಪ್ರಕಾರಮೇವ ವ್ಯನಕ್ತಿ – ತಸ್ಯೇತ್ಯಾದಿ ॥ ತಸ್ಯ = ಪರಮಪ್ರೇಮಯೋಗ್ಯತ್ವಸ್ಯ । ಅನಾನುಭಾವಿಕತ್ವಾದಿತಿ ॥ ಅನುಭವವಿಷಯತ್ವಾಭಾವಾದಿತ್ಯರ್ಥಃ । ಅಸಂಭವಮಾಶಂಕ್ಯೇತಿ ॥ ಪರಮಪ್ರೇಮವಿಷಯತ್ವಸ್ಯ ಪ್ರೇಮಾಖ್ಯಾಂತರಪದಾರ್ಥಾ ... ............ (ಇಲ್ಲಿಂದ ಮುಂದಕ್ಕೆ ಲಘುರಸರಂಜನೀ ಮುದ್ರಿತವಾಗಿಲ್ಲ)

ಯಾವ ವ್ಯಕ್ತಿಯ ಸ್ವರೂಪನಿರ್ಧಾರವಾಗಿಲ್ಲವೋ ಅವನನ್ನು ನಮಸ್ಕರಿಸಲು ಅಸಾಧ್ಯವಾದ್ದರಿಂದ ಸ್ವರೂಪಾವಧಾರಣೆಗಾಗಿ ಲಕ್ಷಣ ಎಂದು ಹೇಳಿದ್ದಾರೆ. ಇಲ್ಲಿ ವಂದ್ಯತ್ವವನ್ನೇ ಲಕ್ಷಣ ಎಂದರೆ ಅನ್ಯೋನ್ಯಾಶ್ರಯದೋಷ. ಅದು ಹೀಗೆ – ವಂದ್ಯತ್ವವೆಂಬ ಲಕ್ಷಣಸಿದ್ಧವಾದರೆ ಲಕ್ಷ್ಯಸ್ವರೂಪದ ನಿಶ್ಚಯ. ಲಕ್ಷ್ಯಸ್ವರೂಪದ ನಿಶ್ಚಯವಾದರೆ ವಂದ್ಯತ್ವರೂಪಲಕ್ಷಣಸಿದ್ಧಿ ಎಂದು. ಉತ್ತರ - ವಂದ್ಯತ್ವದ ವಿಷಯದಲ್ಲೂ ಭೇದ ಇದೆ. ಅದು ಹೀಗೆ - ನಾರಾಯಣಂ ಸನ್ನಮಾಮಿ ಎಂದು ಭಾಷ್ಯಕಾರರು ಶಿಷ್ಯರಿಗೆ ಶಿಕ್ಷಣವನ್ನು ನೀಡುತ್ತಿದ್ದಾರೆ 'ನೀವೂ ಕೂಡ ನಾರಾಯಣನಿಗೆ ನಮಸ್ಕರಿಸಬೇಕು' ಎಂದು. ಆಗ ಈ ನಾರಾಯಣ ಯಾರು? ಎಂದು ಅವರು ಕೇಳಲು ಭಾಷ್ಯಕಾರರು ಲಕ್ಷಣಗಳನ್ನು ಹೇಳಿದ್ದಾರೆ. ಅದರ ನಂತರ ಪರಮಆಪ್ತರಾದ ಆಚಾರ್ಯರು ಹೇಳಿದ್ದರಿಂದ ಬೇರೆ ಲಕ್ಷಣಗಳಂತೆ ಸರ್ವವಂದ್ಯತ್ವ ಎಂಬ ಲಕ್ಷಣವನ್ನು ತಿಳಿದೇ ತಿಳಿಯುತ್ತಾರೆ. ಆದ್ದರಿಂದ ಅನ್ಯೋನ್ಯಾಶ್ರಯವಿಲ್ಲ.

## ಲಕ್ಷಣಪರತಯಾಪಿ ವ್ಯಾಖ್ಯಾನ

(ಕಾಶೀ) ನನು ನಾರಾಯಣಸ್ಯ ಲಕ್ಷಣಮನಭಿಧಾಯ ನಮ್ಯತ್ವೋಪಪಾದನಮಯುಕ್ತಮ್ । ಲಕ್ಷಣೇನ ಸ್ವರೂಪನಿರ್ಧಾರಣಾನಂತರಮೇವ ನಮ್ಯತ್ವೋಪಪಾದಕಾಕಾಂಕ್ಷೋದಯಾತ್ ಇತ್ಯತೋ ಲಕ್ಷಣಪರತಯಾಽಪಿ ವ್ಯಾಚಷ್ಟೇ — ಯದ್ವೇತಿ ॥ ಅನಿರ್ಧಾರಿತಸ್ವ(ತ್ವ)ರೂಪಸ್ಯ = ಅನಮ್ಯವ್ಯಾವೃತ್ತತ್ವೇನಾನಿಶ್ಚಿತಸ್ವರೂಪಸ್ಯ । ಲಕ್ಷಣಂ = ಲಕ್ಷಣಜ್ಞಾನಮ್ । 'ಶಿಷ್ಯಾಣಾಮ್' ಇತಿ ಶೇಷಃ । ಅನೇನ = ಅಖಿಲೇತ್ಯಾದಿವಿಶೇಷಣಜಾತೇನ । ಅನೇಕಲಕ್ಷಣೋಕ್ತಿವೈಯರ್ಥ್ಯವಾರಣಾ

ಯೋಕ್ತಮ್ ವಿಭವಾದಿತಿ ॥ ವಿಭವಮಪೇಕ್ಷ್ಯ । ಐಶ್ವರ್ಯಾತಿಶಯಜ್ಞಾಪನಾಯೇತಿ ಯಾವತ್ । ತಚ್ಚ ಶಿಷ್ಯಾಣಾಮಾದರಾತಿಶಯಾರ್ಥಮಿತಿ ಭಾವಃ । 'ನಿಖಿಲಪೂರ್ಣಗುಣೈಕದೇಹವತ್ತ್ವಸ್ಯ ಏಕಲಕ್ಷಣತ್ವೇ ನಿಖಿಲಾದಿಪದವೈಯರ್ಥ್ಯಮಾಲೋಚ್ಯಾಹ – ತತ್ರೇತ್ಯಾದಿನಾ ॥ ನಿಖಿಲಗುಣವತ್ತ್ವಮಿತಿ ॥ ಯದ್ಯಪಿ ನಾರಾಯಣೇ ನಿಖಿಲಗುಣವತ್ತ್ವಮಸಂಭವಿ । ಜಡಜೀವಗುಣಾಭಾವಾತ್ । ನ ಚ ನಿಖಿಲಗುಣವತ್ತ್ವಂ ನಾಮ ಗುಣತ್ವವ್ಯಾಪಕಸಮುದಾಯತ್ವಾವಚ್ಛಿನ್ನವತ್ತ್ವಮ್ । ಗುಣತ್ವವ್ಯಾಪಕತ್ವಂ ಚ ಗುಣವೃತ್ತಿಯಾವಜ್ಜಾತಿಸಮಾನಾಧಿಕರಣತ್ವರೂಪಂ ವಿವಕ್ಷಿತಮ್ । ಈಶ್ವರಗುಣಸಮುದಾಯತ್ವಸ್ಯ ಚ ಸುಖತ್ವಜ್ಞಾನತ್ವಾದಿರೂಪತಾದೃಶಯಾವಜ್ಜಾತಿಸಮಾನಾಧಿಕರಣತ್ವಾನ್ನ ದೋಷ ಇತಿ ವಾಚ್ಯಮ್ । ವ್ಯಕ್ತಿಭೇದಭಿನ್ನತಾದೃಶಯಾವಜ್ಜಾತಿಸಮಾನಾಧಿಕರಣತ್ವಸ್ಯೈವ ತತ್ರಾನುಪಪತ್ತೇಃ । ಪ್ರಾತಿಸ್ವಿಕರೂಪೇಣ ತಾವಜ್ಜಾತಿಜ್ಞಾನಾಭಾವಾತ್ ಲಕ್ಷಣಸ್ಯಾಸರ್ವಜ್ಞದುರ್ಜ್ಞೇಯತ್ವಾಪತ್ತೇಶ್ಚ । ತಥಾಽಪಿ ಸ್ವರೂಪತೋ ಗುಣವೃತ್ತಿಜಾತ್ಯವಚ್ಛಿನ್ನವೃತ್ತಿತ್ವಾಭಾವಾನಧಿಕರಣತ್ವರೂಪಗುಣತ್ವವ್ಯಾಪಕತ್ವಸ್ಯ ವಿವಕ್ಷಿತತ್ವಾನ್ನ ದೋಷಃ । ಈಶ್ವರೀಯಗುಣಸಮುದಾಯತ್ವೇ ಜೀವಾದಿಗತತತ್ತತ್ಸುಖಾದಿವೃತ್ತಿತ್ವಾಭಾವಸತ್ತ್ವೇಽಪಿ ಸುಖವೃತ್ತಿತ್ವಂ ನಾಸ್ತೀತ್ಯಪ್ರತ್ಯಯೇನ ಸ್ವರೂಪತಃ ಸುಖತ್ವಾದ್ಯವಚ್ಛಿನ್ನವೃತ್ತಿತ್ವಾಭಾವಾನಧಿಕರಣತ್ವಸ್ಯಾಕ್ಷತತ್ವಾತ್ । 'ಸ್ವರೂಪತಃ' ಇತ್ಯಾದೇರ್ಗುಣವೃತ್ತಿಜಾತಿನಿಷ್ಠನಿರವಚ್ಛಿನ್ನತ್ವಾವಚ್ಛೇದಕತಾಕವೃತ್ತಿತ್ವನಿಷ್ಠಪ್ರತಿಯೋಗಿತಾಕಾಭಾವಾರ್ಥಕತ್ವೇನ ತತ್ತತ್ಸುಖತ್ವಾದ್ಯವಚ್ಛಿನ್ನವೃತ್ತಿತ್ವಾಭಾವಸ್ಯ ಸುಖತ್ವನಿಷ್ಠತತ್ತಾವಚ್ಛಿನ್ನಾವಚ್ಛೇದಕತಾಕತ್ವೇಽಪಿ ತನ್ನಿಷ್ಠನಿರವಚ್ಛಿನ್ನಾವಚ್ಛೇದಕತಾಕತ್ವಾಭಾವೇನ ವ್ಯಾವೃತ್ತೇಃ ।

ನಿಖಿಲಗುಣವತ್ತ್ವಂ, ಪೂರ್ಣಗುಣತ್ವಂ, ಸ್ವತೋ ಗುಣೈಕದೇಹತ್ವಂ ಚೇತಿ ತ್ರೀಣಿ ಲಕ್ಷಣಾನಿ ಉದಿತಾನಿ – ನಿಖಿಲಗುಣವತ್ತ್ವ ಎಂಬುದು ನಾರಾಯಣನ ಲಕ್ಷಣವಾಗಲು ಸಾಧ್ಯವಿಲ್ಲ. ಏಕೆಂದರೆ, ನಿಖಿಲಗುಣಗಳು ಎಂದರೆ ಎಲ್ಲರಲ್ಲಿರುವ ಗುಣಗಳು. ಹೀಗೆ ವಿವಕ್ಷೆ ಮಾಡಿದಾಗ ಜಡದಲ್ಲಿರುವ ಗುಣಗಳು ಹಾಗೂ ಜೀವನಲ್ಲಿರುವ ಗುಣಗಳು ಭಗವಂತನಲ್ಲಿ ಬರಲು ಸಾಧ್ಯವಿಲ್ಲ. ಆದ್ದರಿಂದ ನಿಖಿಲಗುಣವತ್ತ್ವ ಎಂಬ ನಾರಾಯಣನ ಲಕ್ಷಣಕ್ಕೆ ಅಸಂಭವ ದೋಷವಿದೆ.

## ನಿಖಿಲಗುಣವತ್ತ್ವ ಎಂದರೇನು?

ಅಲ್ಲ! ನಿಖಿಲಗುಣವತ್ತ್ವಂ ಎಂದರೆ ಗುಣತ್ವವ್ಯಾಪಕ- ಸಮುದಾಯತ್ವ-ಅವಚ್ಛಿನ್ನವತ್ತ್ವಂ - ಅರ್ಥಾತ್ ಗುಣತ್ವವ್ಯಾಪಕವಾದ ಸಮುದಾಯ ಎಂದರ್ಥ. ಅಂದರೆ ಗುಣತ್ವಕ್ಕೆ ಗುಣಸಮುದಾಯವು ವ್ಯಾಪಕವಾಗಿರಬೇಕು. ಯತ್ರ ಯತ್ರ ಗುಣತ್ವಂ ತತ್ರ ತತ್ರ ಗುಣಸಮುದಾಯಃ ಎಂದು ಹೇಳಲು ಬರಬೇಕು. ಇದನ್ನು ಗುಣತ್ವವ್ಯಾಪಕತ್ವಂ ಎಂದು ಪರಿಷ್ಕರಿಸಿದ್ದಾರೆ. ಗುಣತ್ವವ್ಯಾಪಕತ್ವ ಎಂದರೆ

ಗುಣವೃತ್ತಿಯಾವಜ್ಜಾತಿಸಮಾನಾಧಿಕರಣತ್ವ ಎಂದು. ಪ್ರಕೃತ ಅಸಂಭವ ದೋಷಕ್ಕೆ ಅವಕಾಶವಿಲ್ಲ. ಹೇಗೆಂದರೆ ನಾರಾಯಣನಲ್ಲಿ ಜೀವಜಡಗತಗುಣಗಳು ಬರದಿದ್ದರೂ ಜೀವಜಡಗತಗುಣಗಳಾದ ಆನಂದಾದಿಗಳಲ್ಲಿ ಇರುವ ಆನಂದತ್ವ ಮೊದಲಾದ ಜಾತಿಗಳು ಈಶ್ವರನ ಗುಣಗಳಾದ ಆನಂದಾದಿಗಳಲ್ಲಿ ಬರಲು ಸಾಧ್ಯವಿರುವುದರಿಂದ ಅಂತಹ ಗುಣಗಳುಳ್ಳವನು ಈಶ್ವರ ಎಂದು ಹೇಳಲು ಬರುತ್ತದೆ. ಹಾಗಾಗಿ ನಿಖಿಲಗುಣವತ್ವ ನಾರಾಯಣನಲ್ಲಿದೆ. ಇದನ್ನೇ ಲಕ್ಷಣ ಮುಖಾಂತರ ಪರಿಷ್ಕರಿಸಿದ್ದಾರೆ. ಅದು ಹೀಗೆ ಗುಣ ಎಂದರೆ ಆನಂದಾದಿ ಗುಣಗಳು. ತದ್ವೃತ್ತಿಯಾದ ಯಾವಜ್ಜಾತಿಗಳು ಎಂದರೆ ಆನಂದತ್ವ, ಜ್ಞಾನತ್ವ ಮುಂತಾದ ಜಾತಿಗಳು. ಅಂತಹ ಜಾತಿಗಳಿಗೆ ಅಧಿಕರಣ ಆನಂದಾದಿಗಳು. ಅಲ್ಲಿ ವೃತ್ತಿಯಾದ ಸಮುದಾಯತ್ವ ಎಂದರೆ ಈಶ್ವರಗುಣಸಮುದಾಯತ್ವ ಎಂದರ್ಥ.

ಆದರೆ ಈ ಉತ್ತರವು ಸರಿಯಿಲ್ಲ. ಏಕೆಂದರೆ, ಆನಂದ ಜ್ಞಾನ ಮುಂತಾದ ಸಕಲಗುಣಗಳು ಕೂಡ ವ್ಯಕ್ತಿಭೇದೇನ ಭಿನ್ನವಾಗಿವೆ. ಅರ್ಥಾತ್ ವ್ಯಕ್ತಿಗಳಾದ ಚೈತ್ರ, ಮೈತ್ರ, ದೇವದತ್ತ ಮೊದಲಾದವರಿಗೆ ಇರುವ ಆನಂದಗಳು ಚೈತ್ರ ಮೈತ್ರ ದೇವದತ್ತರಲ್ಲಿ ಭೇದವಿರುವ ಪ್ರಯುಕ್ತ ಅವರುಗಳ ಆನಂದಲ್ಲಿಯೂ ಭೇದವಿದೆ. ಆದ್ದರಿಂದ ಅಂತಹ ಆನಂದ ಮೊದಲಾದವುಗಳಲ್ಲಿರುವ ಜಾತಿಯನ್ನವಲಂಬಿಸಿ ತತ್ಸಾಮಾನಾಧಿಕರಣ್ಯವನ್ನು ಈಶ್ವರಗುಣಸಮುದಾಯತ್ವಕ್ಕೆ ಹೇಳಲು ಬರುವುದಿಲ್ಲ. ಅಲ್ಲದೆ ವ್ಯಕ್ತಿಶಃ ಪ್ರತಿವ್ಯಕ್ತಿ ಆ ಎಲ್ಲ ಜಾತಿಗಳ ಜ್ಞಾನ ಇಲ್ಲದಿರುವುದರಿಂದ ಗುಣವೃತ್ತಿಯಾವಜ್ಜಾತಿಸಾಮಾನಾಧಿಕರಣ್ಯವನ್ನು ಈಶ್ವರಗುಣಸಮುದಾಯತ್ವದಲ್ಲಿ ಹೇಳಲು ಅಸಾಧ್ಯ. ಹಾಗಾಗಿ ಇಂತಹ ಲಕ್ಷಣಗಳು ಅಸರ್ವಜ್ಞರಿಂದ ತಿಳಿಯಲೂ ಅಸಾಧ್ಯ ಎಂಬ ದೋಷವೂ ಇದೆ.

## ವಿವಕ್ಷಿತವಾದ ಗುಣತ್ವವ್ಯಾಪಕತ್ವ

ಇದಕ್ಕೆ ಉತ್ತರ - ಇಲ್ಲಿ ವಿವಕ್ಷಿತವಾದ ವ್ಯಾಪಕತ್ವ ಇದು. ಸ್ವರೂಪತಃ ಗುಣವೃತ್ತಿ-ಜಾತ್ಯವಚ್ಛಿನ್ನ-ವೃತ್ತಿತ್ವಾಭಾವ-ಅನಧಿಕರಣತ್ವರೂಪವಾದ ಗುಣತ್ವವ್ಯಾಪಕತ್ವ. ಹೀಗೆ ಹೇಳಿದಾಗ ಈಶ್ವರೀಯ-ಗುಣಸಮುದಾಯತ್ವದಲ್ಲಿ ಗುಣತ್ವವ್ಯಾಪಕತ್ವ ಬರಲು ತೊಂದರೆ ಇಲ್ಲ.

ಅದು ಹೀಗೆ - ಜೀವಾದಿಗಳಲ್ಲಿರುವ ಆಯಾಯ ಸುಖಮುಂತಾದ ಗುಣವೃತ್ತಿತ್ವ ಇಲ್ಲ ಎಂದು ಈಶ್ವರಗುಣಸಮುದಾಯತ್ವದಲ್ಲಿ ಹೇಳಲು ಬಂದರೂ ಅರ್ಥಾತ್ ಜೀವಾದಿಗತತತ್ತತ್ಸುಖಾದಿ-ವೃತ್ತಿತ್ವಂ ಈಶ್ವರಗುಣಸಮುದಾಯತ್ವೇ ನಾಸ್ತಿ - ಎಂದು ಹೇಳಲು ಬಂದರೂ ಜೀವಾದಿಗಳ ವಿವಕ್ಷೆಯಿಲ್ಲದೆ ಸ್ವರೂಪತಃ ಸುಖವೃತ್ತಿತ್ವಂ ನಾಸ್ತಿ ಎಂದು ಈಶ್ವರಗುಣಸಮುದಾಯತ್ವದಲ್ಲಿ ಹೇಳಲು ಬರುವುದಿಲ್ಲವಾದ್ದರಿಂದ ಸ್ವರೂಪತಃ ಸುಖತ್ವಾದ್ಯವಚ್ಛಿನ್ನವೃತ್ತಿತ್ವಾಭಾವಾನಧಿ-ಕರಣತ್ವವು ಸರಿಹೊಂದುತ್ತದೆ.

## ಸ್ವರೂಪತಃ ಎನ್ನುವದಕ್ಕೇನರ್ಥ?

ಇಲ್ಲಿ ಸ್ವರೂಪತಃ ಎನ್ನುವುದಕ್ಕೆ ಏನರ್ಥ? ಎಂದು ಆಶಂಕಿಸಿ ಹೀಗೆ ಹೇಳಿದ್ದಾರೆ - ಗುಣವೃತ್ತಿ-ಜಾತಿನಿಷ್ಠನಿರವಚ್ಛಿನ್ನಅವಚ್ಛೇದಕತಾಕವೃತ್ತಿತ್ವನಿಷ್ಠಪ್ರತಿಯೋಗಿತಾಕಾಭಾವ ಎಂದರ್ಥ. ಪ್ರಕೃತ ಜೀವಸಂಬಂಧಿ ಅಥವಾ ಜಡಸಂಬಂಧಿ ತತ್ತತ್ ಸುಖತ್ವರೂಪತ್ವಾವಚ್ಛಿನ್ನವೃತ್ತಿತ್ವ-ಅಭಾವವು ಸುಖತ್ವನಿಷ್ಠತತ್ತಾವಚ್ಛಿನ್ನಾವಚ್ಛೇದಕತಾಕವಾಗಿದ್ದರೂ ಸುಖತ್ವನಿಷ್ಠ-ನಿರವಚ್ಛಿನ್ನ-ಅವಚ್ಛೇದ-ಕತಾಕವಾಗಿಲ್ಲವಾದ್ದರಿಂದ ಯಾವುದೇ ದೋಷವಿಲ್ಲ. ಅರ್ಥಾತ್ ಜೀವಸಂಬಂಧಿಸುಖವೃತ್ತಿತ್ವಂ ನಾಸ್ತಿ ಎಂದು ಪ್ರತೀತಿಯನ್ನು ಸ್ವೀಕರಿಸಿದಾಗ ಇಲ್ಲಿ ನಾಸ್ತಿ ಎಂದು ತೋರುತ್ತಿರುವ ಅಭಾವಕ್ಕೆ ಪ್ರತಿಯೋಗಿ ಜೀವಸಂಬಂಧಿಸುಖವೃತ್ತಿತ್ವ. ಪ್ರತಿಯೋಗಿತಾ ಜೀವಸಂಬಂಧಿಸುಖವೃತ್ತಿತ್ವದಲ್ಲಿದೆ. ಪ್ರತಿಯೋಗಿತಾವಚ್ಛೇದಕವಾದದ್ದು ಸುಖತ್ವ. ಆ ಸುಖತ್ವದಲ್ಲಿ ಜೀವಸಂಬಂಧ ತೋರುತ್ತಿದೆ. ಹಾಗಾಗಿ ಸುಖತ್ವನಿಷ್ಠ-ಅವಚ್ಛೇದಕತಾವು ತತ್ತಾವಚ್ಛಿನ್ನವಾಯಿತು. ಅರ್ಥಾತ್ ಜೀವಸಂಬಂಧ-ಅವಚ್ಛಿನ್ನವಾಯಿತು. ಹೀಗಾಗದೇ ಸ್ವರೂಪತಃ ಅರ್ಥಾತ್ ನಿರವಚ್ಛಿನ್ನಾವಚ್ಛೇದಕತಾವು ಸುಖತ್ವದಲ್ಲಿದೆ ಎಂದಾಗ ಕೇವಲ ಸುಖವೃತ್ತಿತ್ವಂ ನಾಸ್ತಿ ಎಂಬ ಪ್ರತೀತಿಯನ್ನು ತೆಗೆದುಕೊಂಡು ದೋಷವನ್ನು ವಾರಣೆ ಮಾಡಬೇಕು.

## ಲಾಘವಾನುರೋಧೇನ ಈ ರೀತಿಯಾಗಿ ಲಕ್ಷಣಾರ್ಥವು ವಿವಕ್ಷಿತ

(ಕಾಶೀ) — ವಸ್ತುತಸ್ತು ಸ್ವರೂಪತೋ ಗುಣವೃತ್ತಿಜಾತ್ಯವಚ್ಛಿನ್ನಾಭಾವಾಸಧಿಕರಣತ್ವಮೇವ ಲಾಘವಾತ್ ಲಕ್ಷಣಾರ್ಥಃ । 'ಈಶ್ವರೇ ಸುಖಂ ನಾಸ್ತಿ' ಇತ್ಯಾದಿಪ್ರತ್ಯಯಾಭಾವೇನ ಸ್ವರೂಪತಃ ಸುಖತ್ವಾದ್ಯವಚ್ಛಿನ್ನಾಭಾವಾನಂಗೀಕಾರಾಲ್ಲಕ್ಷಣಸಮನ್ವಯಃ । ಗುಣಪದೇನ ನಿತ್ಯಗುಣಸ್ಯ ವಿವಕ್ಷಿತ-ತ್ವಾತ್ । ನಾನಿತ್ಯಗುಣಮಾತ್ರವೃತ್ತ್ಯನುಮಿತಿತ್ವಾದ್ಯವಚ್ಛಿನ್ನಾಭಾವಸತ್ತ್ವೇಽಪ್ಯಸಂಭವಃ । ಗುಣತ್ವಂ ಚ = ಪ್ರಾಮಾಣಿಕವ್ಯವಹಾರಸಿದ್ಧೋ ದೋಷವ್ಯಾವೃತ್ತೋ ಜಾತಿವಿಶೇಷಃ । ಏವಂ ಭಗವದ್ದೇಹಸ್ಯ ನಿಖಿಲಗುಣಾತ್ಮಕತ್ವಂ ನಿರುಕ್ತಸಮದಾಯತ್ವಾಶ್ರಯತ್ವರೂಪಮ್ । ಸ್ವರೂಪತೋ ಗುಣವೃತ್ತಿ-ಜಾತ್ಯವಚ್ಛಿನ್ನಪ್ರತಿಯೋಗಿತಾಕಭೇದಾನಧಿಕರಣತ್ವರೂಪಂ ವಾ ವಿವಕ್ಷಿತಮ್ । ಅತಃ ತಸ್ಯ ಜಡ-ಜೀವಗುಣಾನಾತ್ಮಕತ್ವೇಽಪಿ ನ ಕ್ಷತಿರ್ನಾಪ್ಯಸರ್ವಜ್ಞದುರ್ಜ್ಞೇಯತ್ವಮಿತಿ ಧ್ಯೇಯಮ್ । ಪೂರ್ಣತ್ವಂ ಚ ನ ದೇಶಕಾಲಾಪರಿಚ್ಛಿನ್ನತ್ವಮ್ । ಅಪಕರ್ಷಾನಾಶ್ರಯಪರಿಮಾಣವತ್ತ್ವಾದಿರೂಪಂ ಬೋಧ್ಯಮ್ । ದೇಹವತ್ತ್ವಸ್ಯ ಸರ್ವಜೀವಸಾಧಾರಣತ್ವಾದ್ – ಗುಣೇತಿ ॥ ಗುಣದೇಹವತ್ತ್ವಸ್ಯ ಚ ಸಜ್ಜೀವಸಾಧಾರಣತ್ವಾದ್ – ಏಕೇತಿ ॥ ಗುಣೈಕದೇಹವತ್ತ್ವಸ್ಯಾಪಿ ರಮಾಯಾಮತಿವ್ಯಾಪ್ತೇಃ – ಸ್ವತ ಇತಿ ॥

ವಸ್ತುತಃ ಲಾಘವಾನುರೋಧೇನ ಚಿಕ್ಕದಾಗಿ ಈ ರೀತಿ ಲಕ್ಷಣದ ಅರ್ಥವು ವಿವಕ್ಷಿತವಾಗಿದೆ. - ಸ್ವರೂಪತೋ ಗುಣವೃತ್ತಿಜಾತ್ಯವಚ್ಛಿನ್ನ-ಅಭಾವ-ಅನಧಿಕರಣತ್ವಂ ಎಂದು. ಇದೀಗ ಧರ್ಮಿಯಾದ ಈಶ್ವರನಲ್ಲಿ - ಈಶ್ವರೇ ಜೀವಸಂಬಂಧಿಸುಖಂ ನಾಸ್ತಿ ಎಂದು ಪ್ರತೀತಿ ಇದ್ದರೂ ಸ್ವರೂಪತಃ ಎಂಬ ಪದದಿಂದ ವಿವಕ್ಷಿತವಾದ ಈಶ್ವರೇ ಸುಖಂ ನಾಸ್ತಿ ಎಂಬ ಪ್ರತೀತಿ ಇಲ್ಲವಾದ್ದರಿಂದ ಸ್ವರೂಪತಃ ಸುಖತ್ವಾದ್ಯವಚ್ಛಿನ್ನಾಭಾವವು ಈಶ್ವರನಲ್ಲಿ ಬರುವುದರಿಂದ ಅಸಂಭವದೋಷಕ್ಕೆ ಅವಕಾಶವಿಲ್ಲ.

ಇನ್ನು ಲಕ್ಷಣದಲ್ಲಿ ಗುಣಪದದಿಂದ ಅನಿತ್ಯಗುಣವನ್ನು ಸ್ವೀಕರಿಸಿ ಅನಿತ್ಯಗುಣದಲ್ಲಿ ಮಾತ್ರ ಇರುವ ಅನುಮಿತಿತ್ವ ಮೊದಲಾದವುಗಳನ್ನಾಶ್ರಯಿಸಿ ತತ್‌ಅನುಮಿತಿತ್ವಾವಚ್ಛಿನ್ನಾಭಾವವು ಈಶ್ವರನಲ್ಲಿ ಇದೆ ಎಂದು ಅಸಂಭವವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಇಲ್ಲಿ ಗುಣಪದೇನ ನಿತ್ಯಗುಣವನ್ನು ಮಾತ್ರ ಸ್ವೀಕರಿಸಬೇಕು ಎಂದು ವಿವಕ್ಷೆ ಮಾಡಿದ್ದರಿಂದ. ಗುಣತ್ವ ಎಂದರೆ "ಪ್ರಾಮಾಣಿಕ-ವ್ಯವಹಾರಸಿದ್ಧಃ ದೋಷವ್ಯಾವೃತ್ತಃ ಜಾತಿವಿಶೇಷಃ" ಎಂದು. ಹೀಗೆ ಭಗವಂತನ ದೇಹವು ನಿಖಿಲಗುಣಾತ್ಮಕ ಎಂದರೆ ಹಿಂದೆ ಹೇಳಿದ ಪ್ರಕಾರೋಪೇತವಾದ ಸಮುದಾಯತ್ವ-ಆಶ್ರಯತ್ವವೇ ಆಗಿದೆ.

ಅಥವಾ 'ಗುಣವೃತ್ತಿಜಾತ್ಯವಚ್ಛಿನ್ನಪ್ರತಿಯೋಗಿತಾಕಭೇದಾನಧಿಕರಣತ್ವಂ' ಎಂದು. ಆದ್ದರಿಂದ ಭಗವಂತನ ಗುಣಗಳು ಜಡಜೀವಗುಣಗಳ ಸ್ವರೂಪವಾಗದೇ ಇದ್ದರೂ ಯಾವುದೇ ತೊಂದರೆ ಇಲ್ಲ. ಹಾಗೂ ಅಸರ್ವಜ್ಞರಿಂದ ತಿಳಿಯಲು ಅಸಾಧ್ಯ ಎಂಬ ಆಪತ್ತಿಯೂ ಇದೆ.

ಇನ್ನು "ಪೂರ್ಣಗುಣತ್ವ" ಎಂಬ ಲಕ್ಷಣದಲ್ಲಿ ಪೂರ್ಣತ್ವ ಎಂದರೆ ದೇಶಕಾಲಾಪರಿಚ್ಛಿನ್ನತ್ವವೆಂದಲ್ಲ. ಹೊರತು ಅಪಕರ್ಷ-ಅನಾಶ್ರಯಪರಿಮಾಣವತ್ವ ಎಂದು ಅರ್ಥ.

"ಸ್ವತೋ ಗುಣೈಕದೇಹಂ" ಎಂಬ ಲಕ್ಷಣದಲ್ಲಿ ಗುಣ ಎಂಬ ಪದವನ್ನು ಕೊಟ್ಟಿದ್ದು ದೇಹ ಇರುವ ಸರ್ವಜೀವರನ್ನೂ ವಾರಣೆ ಮಾಡುವುದಕ್ಕಾಗಿ. ಅನ್ಯಥಾ ದೇಹವತ್ವಂ ಎಂದಿಷ್ಟೇ ಲಕ್ಷಣ ಹೇಳಿದಲ್ಲಿ ಸಾಮಾನ್ಯಜನರಲ್ಲಿ ದೇಹ ಇರುವುದರಿಂದ ಅತಿವ್ಯಾಪ್ತಿ. ಅದಕ್ಕಾಗಿ ಗುಣಾತ್ಮಕದೇಹ ಇರಬೇಕು ಎಂದು ವಿವಕ್ಷೆ ಮಾಡಿದ್ದು.

ಹಾಗೆಯೇ ಏಕ ಎಂಬ ಪದವನ್ನು ಹೇಳಿದ್ದು ಮುಕ್ತಜೀವರನ್ನು ವ್ಯಾವೃತ್ತಿಮಾಡುವುದಕ್ಕಾಗಿ. ಇಲ್ಲದಿದ್ದರೆ ಗುಣಾತ್ಮಕದೇಹವು ಮುಕ್ತರಿಗೂ ಇರುವುದರಿಂದ ಅತಿವ್ಯಾಪ್ತಿ. ಅದಕ್ಕಾಗಿ ಕೇವಲ-ಗುಣಾತ್ಮಕವಾದ ದೇಹ ಇರಬೇಕು ಎಂದಾಗ ಅವರಿಗೆ ಮುಕ್ತಿಕಾಲದಲ್ಲಿ ಗುಣಾತ್ಮಕದೇಹವಿದ್ದರೂ ತತ್ಪೂರ್ವಕಾಲದಲ್ಲಿ ಅರ್ಥಾತ್ ಸಂಸಾರದಲ್ಲಿದ್ದಾಗ ಅಂತಹ ದೇಹವು ಇರಲಿಲ್ಲ. ಇಷ್ಟು ಹೇಳಿದರೂ ರಮಾದೇವಿಯಲ್ಲಿ ಗುಣೈಕದೇಹತ್ವ ಇದೆ. ಆದ್ದರಿಂದ ಅತಿವ್ಯಾಪ್ತಿ. ಅದಕ್ಕಾಗಿ ಸ್ವತಂತ್ರ ಎಂಬರ್ಥವುಳ್ಳ ಸ್ವತಃ ಎಂಬ ಪದವನ್ನು ಹಾಕಬೇಕು. ಹೀಗೆ ಹೇಳಿದಾಗ ಸ್ವತಂತ್ರವಾಗಿ ಗುಣೈಕದೇಹವು ಲಕ್ಷ್ಮಿಗೆ ಇಲ್ಲ. ಆದ್ದರಿಂದ ಅತಿವ್ಯಾಪ್ತಿ ಇಲ್ಲ.

## ಸ್ವತಃಶಬ್ದಾರ್ಥವಾದ ಸ್ವಾತಂತ್ರ್ಯವು ಎಲ್ಲಿ ವಿಶೇಷಣ

(ಕಾಶೀ) — ನನು ಸ್ವತಃಶಬ್ದೋಕ್ತಸ್ವಾತಂತ್ರ್ಯಸ್ಯ ಧರ್ಮಿವಿಶೇಷಣತ್ವೇ ತಸ್ಯೈವ ಲಕ್ಷಣತ್ವಸಂಭವಾಚ್ಛೇಷವೈಯರ್ಥ್ಯಮ್ । ದೇಹವಿಶೇಷಣತ್ವೇ ಗುಣೈಕಪದಸ್ಯ ಗುಣವಿಶೇಷಣತ್ವೇಽಪ್ಯೇಕಪದಸ್ಯ ವೈಯರ್ಥ್ಯಮಿತಿ ಚೇನ್ನ । ಗುಣೈಕದೇಹವತ್ತ್ವಂ ಹಿ ಗುಣೇತರದೇಹಶೂನ್ಯತ್ವೇ ಸತಿ ದೇಹವತ್ತ್ವಮ್ । ತತ್ರ ಸ್ವಾತಂತ್ರ್ಯಸ್ಯ ಗುಣವಿಶೇಷಣತ್ವೇಽಪಿ ಯಥಾ ಸನ್ನಿವೇಶೇನೋಕ್ತವೈಯರ್ಥ್ಯಾನವಕಾಶಾತ್ । ನನು ಚ ಗುಣೈಕದೇಹವತ್ತ್ವಸ್ಯ ಧರ್ಮಿವಿಶೇಷಣತ್ವೇನ ತಲ್ಲಕ್ಷಣತ್ವಲಾಭೇಽಪಿ ಗುಣಾನಾಮತಥಾತ್ವಾತ್ ಕಥಂ ನಿಖಿಲಗುಣವತ್ತ್ವಪೂರ್ಣಗುಣವತ್ತ್ವಯೋಸ್ತಲ್ಲಕ್ಷಣತ್ವಲಾಭ ಇತಿ ಚೇದತ್ರಾಹುಃ — ನಿಖಿಲಾಃ ಪೂರ್ಣಾಶ್ಚ ಗುಣಾಃ ಯಸ್ಯೇತಿ ಬಹುವ್ರೀಹಿಃ । ಗುಣಪದಾವೃತ್ತ್ಯಾ ಗುಣೈಕದೇಹಪದಸ್ಯ ನಿಖಿಲಪೂರ್ಣಗುಣಪದೇನ ಕರ್ಮಧಾರಯೇ ಗುಣೇ ಸ್ವಾತಂತ್ರ್ಯಂ ವಿವಕ್ಷಿತಮ್ ಇತ್ಯುಕ್ತಲಕ್ಷಣತ್ರಯಲಾಭಃ - ಇತಿ ।

ಅತ್ರ ಯದ್ಯಪಿ ಪೂರ್ವೋಕ್ತಯೋಜನಾಯಾಂ ನಿಖಿಲಗುಣೈಕದೇಹವತ್ತ್ವಪೂರ್ಣಗುಣೈಕದೇಹವತ್ತ್ವರೂಪಲಕ್ಷಣದ್ವಯಲಾಭಸಂಭವಾತ್, ಯಥಾಸನ್ನಿವೇಶೇ ವೈಯರ್ಥ್ಯಾಭಾವಾಚ್ಚ, ಗುಣಪದಾವೃತ್ತ್ಯಾದಿಕಮ್ ಅಯುಕ್ತಮ್ । ನ ಚಾಧಿಕಲಕ್ಷಣಲಾಭಾಯ ತದಿತಿ ಯುಕ್ತಮ್ । ಸ್ವತಃಪದಪೂರಣಮಂತರೇಣ ತದಲಾಭಾತ್ । ಪದಪೂರಣಾದಿನಾ ಲಕ್ಷಣಸಂಪಾದನೇ ಚ ಸ್ವತೋ ಗುಣವತ್ತ್ವ, ಸ್ವತೋ ದೇಹವತ್ತ್ವ, ಸ್ವತೋ ಗುಣದೇಹವತ್ತ್ವ, ಪೂರ್ಣದೇಹವತ್ತ್ವಾದೇರಪಿ ಸಂಪಾದನಸಂಭವೇನ ಲಕ್ಷಣತ್ರಯಮಾತ್ರೋಕ್ತೇರಯುಕ್ತೇಃ । ತಥಾಽಪಿ ಸೂತ್ರಸ್ಥಬ್ರಹ್ಮಪದೇನ ನಿಖಿಲಗುಣವತ್ತ್ವಪೂರ್ಣಗುಣವತ್ತ್ವರೂಪಲಕ್ಷಣಯೋರೇವ ಲಾಭಾತ್ ತದನುಸಾರೇಣ ತಯೋರ್ಗ್ರಹಣಮ್ । ದೇಹಾಭಾವಾದಿನಾ ತದಭಾವಶಂಕಾವಾರಣಾಯ ತೃತೀಯಲಕ್ಷಣೋಕ್ತಿಃ ।

ಅಲ್ಲ ಸ್ವತಃ ಶಬ್ದದ ಅರ್ಥವಾದ ಸ್ವಾತಂತ್ರ್ಯವು ಧರ್ಮಿಗೆ ವಿಶೇಷಣವೋ? ಗುಣಕ್ಕೆ ವಿಶೇಷಣವೋ? ದೇಹಕ್ಕೆ ವಿಶೇಷಣವೋ? ಧರ್ಮಿಗೆ ಎಂದಾದಲ್ಲಿ ಸ್ವತಃ ಎಂದಿಷ್ಟೇ ಲಕ್ಷಣಸಾಕು. ಯಾವುದೇ ದೋಷಗಳಿಲ್ಲವಾದ್ದರಿಂದ. ಅರ್ಥಾತ್ ಸ್ವತಂತ್ರನಾದವನು ಪರಮಾತ್ಮ ಎಂದಾಗ ಲಕ್ಷ್ಮಿಯಲ್ಲಿ ಅತಿವ್ಯಾಪ್ತಿ ಇರುವುದಿಲ್ಲ. ಗುಣಕ್ಕೆ ವಿಶೇಷಣವಾದರೆ ಏಕಪದವು ವ್ಯರ್ಥ. ಏಕೆಂದರೆ, ಈಗ ಸ್ವತಂತ್ರವಾದ ಗುಣಗಳನ್ನು ದೇಹವಾಗಿ ಉಳ್ಳವನು ಎಂದರ್ಥ. ಈ ಪಕ್ಷದಲ್ಲಿ ಅತಿವ್ಯಾಪ್ತ್ಯಾದಿ ದೋಷಗಳು ಬರಲು ಸಾಧ್ಯವಿಲ್ಲವಾದ್ದರಿಂದ. ಇನ್ನು ಸ್ವತಃ ಎಂಬುದು ದೇಹಕ್ಕೆ ವಿಶೇಷಣವಾದರೆ ಸ್ವತೋ ದೇಹವತ್ತ್ವಂ ಎಂಬುದಾಗಿ ಲಕ್ಷಣ ಸಿಗುವುದು. ಈಗ ಯಾವುದೇ ಅತಿವ್ಯಾಪ್ತಿದೋಷವಿಲ್ಲ.

ಹಾಗಾಗಿ ಗುಣೈಕ ಎಂಬ ಪದ ವ್ಯರ್ಥವೆನಿಸುವುದು. ಹೀಗೆ ಸ್ವಾತಂತ್ರ್ಯವು ಎಲ್ಲಿ ವಿಶೇಷಣವಾದರೂ ಏನಾದರೂ ಒಂದು ದೋಷವು ಇದ್ದೇ ಇದೆ — ಎಂದು ಆಕ್ಷೇಪ.

ಉತ್ತರ — ಗುಣೈಕದೇಹವತ್ತ್ವಂ ಎಂದರೆ ಗುಣೇತರದೇಹಶೂನ್ಯತ್ವೇ ಸತಿ ದೇಹವತ್ತ್ವಂ ಎಂದು. ಅರ್ಥಾತ್ ಗುಣಾತ್ಮಕವಾದ ದೇಹ ಬಿಟ್ಟು ಬೇರೆ ದೇಹಗಳು ಇರಬಾರದು. ಆದರೆ ದೇಹವಿರಬೇಕು ಎಂದು. ಇಲ್ಲಿ ಸ್ವಾತಂತ್ರ್ಯವನ್ನು ಗುಣಕ್ಕೆ ವಿಶೇಷಣವನ್ನಾಗಿ ಹೇಳಿದಾಗ ಯಾವುದೇ ವೈಯರ್ಥ್ಯಕ್ಕೆ ಅವಕಾಶವಿಲ್ಲ. ಈ ಪಕ್ಷದಲ್ಲಿ ಗುಣೇತರದೇಹಶೂನ್ಯತ್ವ ಹಾಗೂ ದೇಹವತ್ತ್ವ ಎಂಬ ಎರಡು ಅಂಶಗಳು ಲಕ್ಷ್ಮಿಯಲ್ಲಿ ಬಂದರೂ ಸ್ವತಃ ಶಬ್ದಾರ್ಥವಾದ ಸ್ವಾತಂತ್ರ್ಯವನ್ನು ಗುಣದಲ್ಲಿ ವಿಶೇಷಣ ಕೊಟ್ಟಾಗ ಸ್ವತಂತ್ರಾತ್ಮಕವಾದ ಗುಣಗಳಿಗಿಂತ ಬೇರೆಯಾದ ದೇಹವೇ ಲಕ್ಷ್ಮಿಗೆ ಇರುವುದರಿಂದ ಅತಿವ್ಯಾಪ್ತಿ ಇಲ್ಲ ಎಂದಭಿಪ್ರಾಯ.

ಗುಣೈಕದೇಹವತ್ತ್ವ ಎಂಬುದು ಧರ್ಮಿಗೆ ವಿಶೇಷಣವನ್ನಾಗಿ ಹೇಳಿದಾಗ ಅದು ಭಗವಂತನ ಲಕ್ಷಣ ಎಂಬ ಅರ್ಥದ ಲಾಭವಾದರೂ ನಿಖಿಲಗುಣವತ್ತ್ವ ಹಾಗೂ ಪೂರ್ಣಗುಣವತ್ತ್ವ ಎಂಬೆರಡು ಅವನ ಲಕ್ಷಣ ಎನಿಸುವುದು ಹೇಗೆ? ಉತ್ತರ — ನಿಖಿಲಾಃ ಗುಣಾಃ ಯಸ್ಯ ಸಃ, ಹಾಗೂ ಪೂರ್ಣಾಃ ಗುಣಾಃ ಯಸ್ಯ ಸಃ ಎಂದು ಬಹುವ್ರೀಹಿಯನ್ನು ಆಶ್ರಯಿಸಿದಾಗ ನಾರಾಯಣನ ಲಕ್ಷಣ ಎಂದು ಸಿದ್ಧಿಸುವುದು. ಇನ್ನು ನಿಖಿಲಪೂರ್ಣಗುಣೈಕದೇಹಂ ಎಂಬ ವಿಶೇಷಣದಲ್ಲಿ ಗುಣಪದವು ಸಕೃತ್ ಶ್ರುತವಾದ್ದರಿಂದ ಪೂರ್ಣಗುಣತ್ವ, ಸ್ವತೋ ಗುಣೈಕದೇಹತ್ವ ಎಂಬ ಇನ್ನಿತರ ಲಕ್ಷಣಗಳ ಲಾಭ ಹೇಗೆ? ಅಂದರೆ ಗುಣಪದ ಆವೃತ್ತಿಯನ್ನು ಮಾಡಿ ಎಂದು ಉತ್ತರ. ಹೀಗೆ ಗುಣಪದವನ್ನು ಆವೃತ್ತಿ ಮಾಡಿ ಗುಣೈಕದೇಹ ಎಂಬ ಪದಕ್ಕೆ ನಿಖಿಲಪೂರ್ಣಗುಣ ಎಂಬ ಪದದೊಂದಿಗೆ ಕರ್ಮಧಾರಯವನ್ನು ಮಾಡಿ ಗುಣದಲ್ಲಿ ಸ್ವಾತಂತ್ರ್ಯವನ್ನು ವಿವಕ್ಷೆ ಮಾಡಿದಾಗ ಹಿಂದೆ ಹೇಳಿದ ಮೂರು ಲಕ್ಷಣಗಳ ಲಾಭವಾಗುವುದು.

ಯದ್ಯಪಿ ಇಲ್ಲಿ ಗುಣಪದದ ಆವೃತ್ತಿ ಬೇಕಾಗಿಲ್ಲ. ಹಿಂದಿನ ಯೋಜನೆಯಂತೆ ನಿಖಿಲಪೂರ್ಣ-ಗುಣೈಕದೇಹ ಎಂಬ ಪದದಿಂದಲೇ ಎರಡು ಲಕ್ಷಣಗಳ ಲಾಭವಾಗುವುದರಿಂದ. (1) ನಿಖಿಲಗುಣೈಕದೇಹವತ್ತ್ವ, (2) ಪೂರ್ಣಗುಣೈಕದೇಹವತ್ತ್ವ. ಇವೆರಡರಲ್ಲೂ 'ಏಕಶಬ್ದಮಹಿಮ್ನಾ ತದಿತರದೇಹಶೂನ್ಯತ್ವೇ ಸತಿ ದೇಹವತ್ತ್ವಂ' ಎಂದರ್ಥೈಸಬೇಕು. ಹೀಗಾದಾಗ ಯಾವುದೇ ವೈಯರ್ಥ್ಯಾದಿಶಂಕೆಗೆ ಅವಕಾಶವಿಲ್ಲ. ಅಲ್ಲ। ಗುಣಪದದ ಆವೃತ್ತಿಯು ಅಧಿಕಲಕ್ಷಣಲಾಭಕ್ಕೋಸ್ಕರ ಮಾಡಿದ್ದು ಎಂದರೆ ಅದೂ ಕೂಡ ಸರಿಯಲ್ಲ. ಏಕೆಂದರೆ, ಅಧಿಕಲಕ್ಷಣದ ಲಾಭವಾದರೂ ಸ್ವತಃಪದವನ್ನು ಪೂರೈಸದೇ ಸ್ವತೋ ಗುಣೈಕದೇಹಂ ಎಂದು ಸಿಗಲು ಸಾಧ್ಯವಿಲ್ಲವಾದ್ದರಿಂದ. ಸಿಗಲಿ. ಸ್ವತಃ ಎಂಬ ಪದವನ್ನು ಪೂರಣೆ ಮಾಡಿ ಅಧಿಕಲಕ್ಷಣವನ್ನು ಸಂಪಾದನೆ ಮಾಡುತ್ತೇವೆ

ಎಂದರೆ ಆಗ ಮೂರೇ ಲಕ್ಷಣ ಎಂದು ಹೇಳಿದ್ದು ಸರಿಯಲ್ಲ. ಸ್ವತೋ ಗುಣವತ್ತ್ವ, ಸ್ವತೋ ದೇಹವತ್ತ್ವ, ಸ್ವತೋ ಗುಣದೇಹವತ್ತ್ವ, ಸ್ವತೋ ಪೂರ್ಣದೇಹವತ್ತ್ವ ಮುಂತಾದ ಅನೇಕಲಕ್ಷಣಗಳನ್ನು ಸಂಪಾದನೆ ಮಾಡಲು ಬರುವುದರಿಂದ. ಇಷ್ಟಾದರೂ ಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ನಿಖಿಲಗುಣವತ್ತ್ವ, ಪೂರ್ಣಗುಣವತ್ತ್ವ ಎಂಬ ಎರಡು ಲಕ್ಷಣಗಳೇ ಸಿಗುವುದರಿಂದ ಅಷ್ಟನ್ನೇ ಹೇಳಿದ್ದು. ಇನ್ನು ಮೂರನೆಯ ಲಕ್ಷಣವು ದೇಹವಿಲ್ಲವಾದ್ದರಿಂದ ಅವನು ಪೂರ್ಣನಲ್ಲ ಎಂಬ ಶಂಕೆಯ ನಿವಾರಣೆಗೋಸ್ಕರ ಸ್ವೀಕರಿಸಿದ್ದು.

## ವಸ್ತುತಸ್ತು ವಸ್ತುನಿರ್ಧಾರಣಫಲತಯಾ ಮುಖ್ಯವಂದ್ಯತ್ವವನ್ನು ಹೇಳಿದ್ದು

(ಕಾಶೀ) — ದ್ವಿತೀಯಸೂತ್ರಾನುಸಾರೇಣೋಕ್ತಲಕ್ಷಣಾಷ್ಟಕೋಪಪಾದಕತ್ವೇನ 'ನಿರ್ದೋಷತ್ವ'ಮಭಿಹಿತಮ್ । ನಿಖಿಲಗುಣವತ್ತ್ವಪೂರ್ಣಗುಣವತ್ತ್ವಸಾಧಕತಯಾ ಸಕಲವೇದಾರ್ಥತ್ವ-ಮುಖ್ಯವೇದಾರ್ಥತ್ವಯೋರಭಿಧಾನಮ್ । ವಸ್ತುತಸ್ತು ವಸ್ತುನಿರ್ಧಾರಣಫಲತಯಾ ಮುಖ್ಯ-ವಂದ್ಯತ್ವಮುಕ್ತಮ್ । ತಚ್ಚ ಅನನ್ಯಸಾಧ್ಯಫಲಸಾಧನವಂದನವಿಷಯತ್ವಪರ್ಯವಸಿತಫಲರೂಪ-ತ್ವೇನ ಪರಮಪ್ರೇಮಯೋಗ್ಯತ್ವಪ್ರಾಯನಮ್ । ಪರಮಪ್ರೇಮಪ್ರಯೋಜಕೇಷ್ಟಸಾಧನತ್ವಾದಿ-ವಿಶಿಷ್ಟತ್ವಂ ತದರ್ಥಃ । ಏವಮೇಷಾಂ ಲಕ್ಷಣಾನಾಂ ವಿದ್ಧಸಂಗತಿಕತ್ವೇನಾವಶ್ಯವಕ್ತವ್ಯತ್ವಾತ್ ತನ್ಮಾತ್ರಪರತ್ವವರ್ಣನಂ ಯುಕ್ತಮ್ । ಅತ ಏವ 'ಸದಾ ಪ್ರಿಯತಮಂ ಮಮ' ಇತಿ ಶಬ್ದ-ಲಭ್ಯಮಪಿ ಸದಾಽಽಚಾರ್ಯಪ್ರಿಯತ್ವಾಚಾರ್ಯಪ್ರಿಯತಮತ್ವರೂಪಲಕ್ಷಣದ್ವಯಮುಪೇಕ್ಷ್ಯಾರ್ಥ-ಲಭ್ಯಂ ಪರಮಪ್ರೇಮಯೋಗ್ಯತ್ವಮೇವ ವಿವಕ್ಷಿತಮ್ । ಅಸ್ಯೈವ ಪ್ರಕೃತಸಂಗತತ್ವಾತ್ ।

ನಿರ್ದೋಷತ್ವಂ — ಎಂಬ ಲಕ್ಷಣವಾದರೋ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಿದ ಜನ್ಮಾದ್ಯಷ್ಟಕರ್ತೃತ್ವ ಎಂಬಲ್ಲಿ ವಿವಕ್ಷಿತವಾದ ಎಂಟು ಲಕ್ಷಣಗಳನ್ನು ಸಮರ್ಥಿಸಲು.

ನಿಖಿಲಗುಣವತ್ತ್ವ, ಪೂರ್ಣಗುಣವತ್ತ್ವ ಎಂಬೆರೆಡಂಶವನ್ನು ಸಾಧಿಸಲು ಸಕಲವೇದಾರ್ಥತ್ವ, ಮುಖ್ಯವೇದಾರ್ಥತ್ವಗಳನ್ನು ಹೇಳಿದ್ದು. ವಸ್ತುತಃ ಭಗವಂತನು ಮುಖ್ಯವಂದ್ಯ ಎಂದದ್ದು ಅವನ ಸ್ವರೂಪನಿರ್ಧಾರಣೆಗಾಗಿ. ಆ ಮುಖ್ಯವಂದ್ಯತ್ವವಾದರೋ ಅನನ್ಯಸಾಧ್ಯಫಲಸಾಧನವಂದನ-ವಿಷಯತ್ವರೂಪ ಎಂದು ತಿಳಿಯಬೇಕು. ಅರ್ಥಾತ್ ಬೇರೆಯ ಸಾಧನಗಳಿಂದ ಪಡೆಯಲು ಸಾಧ್ಯ-ವಿಲ್ಲದ ಮೋಕ್ಷರೂಪದ ಫಲಕ್ಕೆ ಸಾಧನವಾದ ನಮಸ್ಕಾರವಿಷಯತ್ವ ಎಂದು. ಸದಾ ಮಮ ಪ್ರಿಯತಮಂ ಎನ್ನುವುದರಿಂದ ಪರಮಪ್ರೇಮಯೋಗ್ಯತ್ವ ಎಂಬ ಲಕ್ಷಣವು ಅರ್ಥಾತ್ ಲಭ್ಯ ಎಂದು ತಿಳಿಯಬೇಕು. ಹೊರತು ಶಬ್ದಲಭ್ಯವಲ್ಲ. ಇನ್ನು ಶಬ್ದಲಭ್ಯವಾದ ಎರಡು ಲಕ್ಷಣಗಳಿಗೆ ಸದಾ ಆಚಾರ್ಯಪ್ರಿಯತ್ವ, ಆಚಾರ್ಯಪ್ರಿಯತಮತ್ವ ಎಂದು. ಆದರೆ ಈ ಎರಡೂ ಲಕ್ಷಣಗಳನ್ನು

ಸ್ವೀಕರಿಸಿದಲ್ಲಿ ಸದಾ ಮಮ ಪ್ರಿಯತಮಂ ಎಂಬಲ್ಲಿ ಸದಾ ಪದ ಅಥವಾ ತಮಪ್ ಪ್ರತ್ಯಯವು ವ್ಯರ್ಥವಾದೀತು. ಪರಮಪ್ರೇಮಯೋಗ್ಯತ್ವ ಎಂಬುದನ್ನು ಪರಮಪ್ರೇಮಪ್ರಯೋಜಕಇಷ್ಟತ್ವ, ಇಷ್ಟಸಾಧನತ್ವಾದಿವಿಶಿಷ್ಟತ್ವ ಎಂದು ಅರ್ಥವನ್ನು ವಿವರಿಸುತ್ತಾರೆ. ಪರಮಪ್ರೇಮ ಒಂದು ವಸ್ತುವಿನಲ್ಲುಂಟಾಗಬೇಕಾದರೆ ಅದು ಇಷ್ಟ, ಇಷ್ಟಸಾಧನ ಇತ್ಯಾದಿಯಾಗಿ ಇರಬೇಕು.

## ಗುಣಪದ ಆವೃತ್ತಿಯು ಅನಾವಶ್ಯಕ

(ಕಾಶೀ) — ಅಥವಾ ಯಥೋಕ್ತಯೋಜನಾಯಾಂ ಗುಣಾನಾಂ ಸಾಕ್ಷಾದ್ ಧರ್ಮ್ಯವಿಶೇಷಣತ್ವೇಽಪಿ ಗುಣಾಭಿನ್ನದೇಹವತ್ತ್ವಸ್ಯ ಧರ್ಮಿವಿಶೇಷಣತ್ವೇನೈವ ಗುಣವತ್ತ್ವಸ್ಯಾಪಿ ಅರ್ಥತಃ ತದ್ವಿಶೇಷಣತ್ವ-ಲಾಭೇನ ಲಕ್ಷಣತ್ರಯಲಾಭಸಂಭವಾನ್ನ ಗುಣಪದಾವೃತ್ತೇರಾವಶ್ಯಕತಾ । ನ ಚ ಗುಣಾಭಿನ್ನ-ದೇಹವತ್ತ್ವಸ್ಯ ತಾದೃಶದೇಹಸ್ವರೂಪತಯಾ ನ ತತೋ ಗುಣಾಶ್ರಯತ್ವಲಾಭ ಇತಿ ವಾಚ್ಯಮ್ । ಸಂಬಂಧಮಾತ್ರಸ್ಯ ಬಹುವ್ರೀಹ್ಯರ್ಥತಯಾ ವಿವಕ್ಷಾಭೇದೇನೋಭಯಲಾಭಸಂಭವಾತ್ । ಏವಂ ಸ್ವತಃ ಪದಮಪಿ ನ ಪೂರಣೀಯಮ್ । ಮುಖ್ಯಾಮುಖ್ಯನ್ಯಾಯೇನ ಪೂರ್ಣವಿಶೇಷಣಬಲಾದ್ವಾ ಸ್ವತಂತ್ರಗುಣಲಾಭಾದಿತಿ । ಪಾರತಂತ್ರ್ಯಾದಿದೋಷವಿಶೇಷಾಭಾವಸ್ಯ ಲಕ್ಷಣತ್ವಸಂಭವೇಽಪಿ ಅವಿವಕ್ಷಿತತ್ವಮಭಿಪ್ರೇತ್ಯಾಹ – ಏಕಮಿತಿ ॥

ಅಥವಾ ಗುಣಪದದ ಆವೃತ್ತಿಯು ಇನ್ನೊಂದು ಪ್ರಕಾರದಿಂದಲೂ ಅನಾವಶ್ಯಕ. ಅದು ಹೀಗೆ – ಗುಣಗಳು ಸಾಕ್ಷಾತ್ ಧರ್ಮಿಗೆ ವಿಶೇಷಣವಾಗದೇ ಇದ್ದರೂ ಗುಣಾಭಿನ್ನವಾದ ದೇಹವು ಧರ್ಮಿಗೆ ವಿಶೇಷಣವಾದ್ದರಿಂದ ಅರ್ಥಾತ್ ತತ್ಕೋಟಿಪ್ರವಿಷ್ಟವಾದ ಗುಣವೂ ಧರ್ಮಿಗೆ ವಿಶೇಷಣವಾಗಲು ಬರುವುದರಿಂದ ಮೂರು ಲಕ್ಷಣ ಲಾಭವಾಗುವುದರಿಂದ ಗುಣಪದದ ಆವೃತ್ತಿಯು ಬೇಡ. ಅಲ್ಲ ಗುಣಾಭಿನ್ನವಾದ ದೇಹವತ್ವವು ದೇಹದ ಸ್ವರೂಪವಾದ್ದರಿಂದ ಆ ಪದದಿಂದ ಗುಣಾಶ್ರಯತ್ವ ಎಂಬ ಅರ್ಥವು ಸಿಗುವುದಿಲ್ಲವಲ್ಲ ಎಂದರೆ ಇದು ಸರಿಯಲ್ಲ. ಕೇವಲ ಸಂಬಂಧವನ್ನೇ ಬಹುವ್ರೀಹಿಯ ಅರ್ಥವನ್ನಾಗಿ ವಿವಕ್ಷೆ ಮಾಡಿದ್ದರಿಂದ ವಿವಕ್ಷಾಭೇದೇನ ಎರಡೂ ಲಕ್ಷಣಗಳ ಲಾಭವಾಗುತ್ತದೆ. ಹೀಗೆಯೇ ಸ್ವತಃಪದವನ್ನೂ ಕೂಡ ಸೇರಿಸಬೇಕಾಗಿಲ್ಲ. ಅದನ್ನು ಸೇರಿಸದೆಯೂ ಕೂಡ ಅದರ ಅರ್ಥದ ಲಾಭವಾಗುವುದರಿಂದ. ಅದು ಹೀಗೆ – 'ಮುಖ್ಯಾಮುಖ್ಯಯೋಃ ಮುಖ್ಯೇ ಸಂಪ್ರತ್ಯಯಃ' ಎಂಬ ನಿಯಮದ ಪ್ರಕಾರ ಸ್ವಾತಂತ್ರ್ಯ ಅಸ್ವಾತಂತ್ರ್ಯ ಎಂಬ ಎರಡರ್ಥಗಳಲ್ಲಿ ಸ್ವಾತಂತ್ರ್ಯಎಂಬ ಅರ್ಥವನ್ನೇ ಸ್ವೀಕರಿಸಿದಾಗ ಸ್ವತಂತ್ರಾತ್ಮಕವಾದ ಗುಣಗಳು ಎಂಬ ಅರ್ಥದ ಲಾಭವಾಗುವುದರಿಂದ ಅಥವಾ — ಪೂರ್ಣಗುಣಗಳು ಎಂದರೆ ಆ ಪೂರ್ಣತ್ವವಿಶೇಷಣ-ಬಲದಿಂದಾಗಿ ಸ್ವತಂತ್ರಗುಣಗಳು ಎಂಬರ್ಥವೇ ಸಿಗುತ್ತದೆ.

'ಅಖಿಲವೇದಾರ್ಥತ್ವಂ' ಎಂದರೆ 'ಯೋಗೇನ ಅಖಿಲವೈದಿಕಪದೇನ ವಾಚ್ಯತ್ವಂ' ಎಂದು. "ಮುಖ್ಯಾರ್ಥತ್ವಂ" ಎಂದರೆ 'ನಿರವಧಿಕಪ್ರವೃತ್ತಿನಿಮಿತ್ತತ್ವಂ' ಎಂದು.

ಸುಧಾಮೂಲದಲ್ಲಿ "ಅಶೇಷ ಇತ್ಯನೇನ ಮುಖ್ಯವಂದ್ಯತ್ವಂ ಉಕ್ತಂ ಅಶೇಷಾತ್ ವಿಶೇಷೇಣ ವಂದ್ಯಮಿತಿ" ಎಂದು ಅಶೇಷವಿಶೇಷತೋಽಪಿ ವಂದ್ಯಂ - ಎಂಬ ವಿಶೇಷಣದಿಂದ ಎಷ್ಟು ಲಕ್ಷಣಗಳು ಸಿಗುತ್ತವೆ ಎಂದು ಸಂಖ್ಯಾನಿರ್ದೇಶವನ್ನು ಮಾಡಿಲ್ಲ. ಇದಕ್ಕೆ ಕಾರಣ ಮುಖ್ಯತ್ವವು ಅನೇಕಪ್ರಕಾರವಾಗಿ ಇರುವುದರಿಂದ ಅದಕ್ಕೆ ಅನುಗುಣವಾಗಿ ಅನೇಕ ಲಕ್ಷಣಗಳನ್ನು ನಿರೂಪ-ಣೆಮಾಡಲು ಬರುವುದರಿಂದ. ಅದು ಹೀಗೆ – ಮುಖ್ಯತ್ವ ಎಂದರೆ (1) ಅನನ್ಯಸಾಧ್ಯಮೋಕ್ಷ-ಸಾಧನತ್ವ; (2) ಅನನ್ಯಪ್ರಸಾದಾರ್ಥತ್ವ (3) ಸರ್ವೋತ್ತಮತ್ವಪ್ರಮಿತಿಪೂರ್ವಕತ್ವ.

ಪರಮಪ್ರೇಮಯೋಗ್ಯತ್ವ – ಎಂಬಲ್ಲಿ ಪರಮತ್ವ ಎಂದರೆ ವಕ್ಷ್ಯಮಾಣಪರಾವಸ್ಥಾವಿಶೇಷಃ ಎಂದು. ಅಥವಾ ಉತ್ತಮಪ್ರಸಾದಹೇತುತ್ವ ಎಂದು ವಿವಕ್ಷಿತ.

## ವೇದಮುಖ್ಯಾರ್ಥತ್ವ , ಅಖಿಲವೇದಾರ್ಥತ್ವ ಹಾಗೂ ಸದಾ ಮಮ ಪ್ರಿಯತಮತ್ವ

(ಕಾಶೀ)– ದೋಷಸಾಮಾನ್ಯಾಭಾವವತ್ತ್ವರೂಪಮ್ ಇತ್ಯಾದಿಃ । 'ಲಕ್ಷಣಮುದಿತಮ್' ಇತಿ ವಿಪರಿಣತಮನುಷಜ್ಯತೇ । ಶ್ರಿಯೋಽಪಿ ಈಶಗತವಿಶೇಷಾಜ್ಞಾನರೂಪದೋಷವತ್ತ್ವಾತ್ ನಾತಿ-ವ್ಯಾಪ್ತಿಃ । ಅಖಿಲವೇದಾದಿತಾತ್ಪರ್ಯವಿಷಯತ್ವಮನನ್ಯಾರ್ಥತಯಾ ವೇದಾದಿವೇದ್ಯತ್ವಂ ಚ ನಿಖಿಲಗುಣತ್ವಾದ್ಯಸಾಧಕತ್ವಾತ್ ಅವಿವಕ್ಷಿತಮಿತ್ಯಾಶಯೇನಾಹ– ದ್ವಯಮಿತಿ ॥ ಮುಖ್ಯಾರ್ಥತ್ವಂ ನಿರವಧಿಕಪ್ರವೃತ್ತಿನಿಮಿತ್ತತ್ವಮ್ । ಅಖಿಲವೇದಾರ್ಥತ್ವಂ ಚ ಯೋಗೇನಾಖಿಲವೈದಿಕಪದವಾಚ್ಯ-ತ್ವಮ್ । ಜನ್ಮಾದ್ಯಷ್ಟಕಹೇತುತ್ವಸ್ಯೈಕಲಕ್ಷಣತ್ವಭ್ರಮಭಂಗಾಯ – ಅಷ್ಟಾವಿತಿ ॥ 'ಮುಖ್ಯೇ'ತಿ ಫಲತೋ ವಂದನವಿಶೇಷಣಮ್ । ಮುಖ್ಯತ್ವಂ ಚ ಅನನ್ಯಸಾಧ್ಯಮೋಕ್ಷಸಾಧನತ್ವಮನನ್ಯ-ಪ್ರಸಾದಾರ್ಥತ್ವಂ ವಾ ಸರ್ವೋತ್ತಮತ್ವಪ್ರಮಿತಿಪೂರ್ವಕಂ ವೇತಿ ವಿಶೇಷಣಭೇದಭಿನ್ನಾನೇಕ-ಲಕ್ಷಣಾನಾಮಪ್ಯುಕ್ತಸಂಗತಿಮತ್ತ್ವೇನಾತ್ರ ವಿವಕ್ಷಿತತ್ವಾದೇಕಮಿತ್ಯಾದಿಸಂಖ್ಯಾನಿರ್ದೇಶೋ ನ ಕೃತಃ । ಮುಖ್ಯವಂದ್ಯತ್ವಸ್ಯ ನೋತ್ತರಲಕ್ಷಣವದಾರ್ಥಿಕತ್ವಮಿತಿ ಭಾವೇನೋಕ್ತಮಿತ್ಯುಕ್ತಮ್ । ತದುಪಪಾದಯತಿ – ಅಶೇಷೇತಿ ॥ ವಂದ್ಯಾಂತರಾದಿತ್ಯರ್ಥಃ । ನ ಚ ವಂದ್ಯಾಂತರಾದ್ ವಿಶೇಷಸ್ಯ ವಂದ್ಯವಿಶೇಷಣತಯಾ ವಂದನೇ ಮುಖ್ಯತ್ವಲಾಭಸ್ಯಾರ್ಥಿಕತ್ವಮೇವೇತಿ ವಾಚ್ಯಮ್ । 'ಅಯಮಸ್ಮದಾಧಿಕವಂದ್ಯಃ' 'ಆಧಿಕ್ಯೇನ ವಂದ್ಯಃ' ಇತ್ಯನಯೋರೇಕಾರ್ಥತ್ವಾನುರೋಧೇನ ಪಂಚಮ್ಯಾ ವಂದ್ಯಾಂತರಕರ್ಮಕವಂದನಾವಧಿಕತ್ವಸ್ಯೈವ ಬೋಧನಾತ್ । ತದನ್ವಿತಾಧಿಕ್ಯರೂಪ-ವಿಶೇಷಸ್ಯ ವಂದ್ಯಪದಾರ್ಥಘಟಕವಂದನ ಏವಾನ್ವಯಾತ್ । ಮುಖ್ಯವಂದನವಿಷಯತ್ವಮಾತ್ರಸ್ಯ

ಲಕ್ಷಣತ್ವೇಽಪಿ ಮುಖ್ಯತ್ವವ್ಯಾವರ್ತ್ಯಪ್ರದರ್ಶನಾರ್ಥಮ್ 'ಅಶೇಷಾತ್' ಇತ್ಯುಕ್ತಮಿತ್ಯಭಿಪ್ರಾಯಃ । ಪರಮಪ್ರೇಮಯೋಗ್ಯತ್ವಂ ವಿವಕ್ಷಿತಮ್ ಇತಿ ಶೇಷಃ । 'ಉಕ್ತಮ್' ಇತ್ಯಸ್ಯಾನುಷಂಗೋ ವಾ । ಅರ್ಥಾದುಕ್ತಮಿತ್ಯರ್ಥಃ । ಪ್ರಿಯತಮತ್ವೋಕ್ತ್ಯಾ ತತ್ಪ್ರಯೋಜಕತದ್ಯೋಗ್ಯತಾಲಾಭಾದಿತಿ ಭಾವಃ । ತರ್ಹಿ 'ಸದಾ ಮಮ' ಇತಿ ವ್ಯರ್ಥಮತ ಆಹ — ತಸ್ಯೇತಿ ॥

ಸಕಲದೋಷಗಳು ಇಲ್ಲದಿರುವುದೇ ನಾರಾಯಣನ ಲಕ್ಷಣವಾಗಿದೆ. ಇದನ್ನೇ ದೋಷಸಾಮಾನ್ಯಾ-ಭಾವವತ್ವಂ ಎಂದಿದ್ದಾರೆ. ಈ ಲಕ್ಷಣಕ್ಕೆ ಲಕ್ಷ್ಮೀದೇವಿಯಲ್ಲಿ ಅತಿವ್ಯಾಪ್ತಿ ಇಲ್ಲ. ಏಕೆಂದರೆ ಅವಳಿಗೂ ಭಗವಂತನಲ್ಲಿರುವ ವಿಶೇಷಗಳ ಅಜ್ಞಾನವೆಂಬ ದೋಷವಿರುವುದರಿಂದ. ಇನ್ನು ಸಕಲವೇದ-ತಾತ್ಪರ್ಯವಿಷಯತ್ವ, ಅನನ್ಯಾರ್ಥತಯಾ ವೇದಾದಿವೇದ್ಯತ್ವ ಇವುಗಳು ನಿಖಿಲಪೂರ್ಣಗುಣತ್ವ ಮೊದಲಾದವುಗಳಿಗೆ ಸಾಧಕವಲ್ಲವಾದ್ದರಿಂದ ಅದನ್ನು ವಿವಕ್ಷೆ ಮಾಡಬಾರದು ಎಂಬ ಅಭಿ-ಪ್ರಾಯದಿಂದ 'ದ್ವಯಂ' ಎಂದು ಹೇಳಿದ್ದಾರೆ. ಮುಖ್ಯಾರ್ಥ ಎಂದರೆ, ನಿರವಧಿಕವಾದ ಪ್ರವೃತ್ತಿ-ನಿಮಿತ್ತವುಳ್ಳದ್ದು. ಅಖಿಲವೇದದ ಅರ್ಥ ಎಂದರೆ ಯೋಗವೃತ್ತಿಯಿಂದ ಎಲ್ಲ ವೈದಿಕಪದಗಳಿಂದ ಹೇಳಲ್ಪಡುವುದು. ಜನ್ಮಾದ್ಯಷ್ಟಕಹೇತುತ್ವ ಎಂಬುದು ಒಂದೇ ಲಕ್ಷಣ ಎಂಬ ಭ್ರಮೆಯ ನಿರಸನಕ್ಕೋಸ್ಕರ ಅಷ್ಟೌ ಎಂದಿದ್ದಾರೆ. ಮುಖ್ಯ ಎಂಬುದು ವಂದ್ಯತ್ವಕ್ಕೆ ವಿಶೇಷಣ. ಇದು ಫಲಿತಾರ್ಥವಾಗಿ. ಮುಖ್ಯತ್ವವಾದರೋ ಬೇರೆಯವರಿಂದ ಸಾಧ್ಯವಲ್ಲದ ಮೋಕ್ಷಕ್ಕೆ ಸಾಧನ-ವಾಗಿರುವಿಕೆ ಅಥವಾ ಬೇರೆಯವರಿಂದ ಸಿಗದ ಪ್ರಸಾದಕ್ಕೋಸ್ಕರವಾಗಿರುವುದು. ಸರ್ವೋ-ತ್ತಮತ್ವಜ್ಞಾನಪೂರ್ವಕವಾಗಿರುವುದು ಎಂಬ ರೀತಿಯಲ್ಲಿ ವಿಶೇಷಣವಾದ ಮುಖ್ಯತ್ವದ ಭೇದದಿಂದ ಅನೇಕ ಲಕ್ಷಣಗಳು ಸಿಗುತ್ತವೆ. ಹಾಗಾಗಿ ಏಕಂ ಎಂಬುದಾಗಿ ವಿಶೇಷವಾಗಿ ಸಂಖ್ಯೆಯ ನಿರ್ದೇಶವನ್ನು ಮಾಡಲಿಲ್ಲ. ಇನ್ನು ಮುಖ್ಯವಂದ್ಯತ್ವ ಎಂಬ ಲಕ್ಷಣವು ಅದರ ಮುಂದಿನ ಲಕ್ಷಣಗಳಂತೆ ಆರ್ಥಿಕವಲ್ಲ ಎಂಬ ಅಭಿಪ್ರಾಯದಿಂದ "ಉಕ್ತಮ್" ಎಂದಿದ್ದಾರೆ. ಅಂದರೆ ಸಾಕ್ಷಾತ್ತಾಗಿಯೇ ಸಿಕ್ಕಿದ್ದು. ಅದು ಹೇಗೆ ಎಂದು ತೋರಿಸಿಕೊಡುತ್ತಾರೆ. ಬೇರೆ ನಮಸ್ಕಾರಗೊಳ್ಳಲ್ಪಡುವ ವ್ಯಕ್ತಿಗಿಂತ ವಿಶೇಷತೆಯು ಪ್ರಕೃತ ವಂದ್ಯನಿಗೆ ವಿಶೇಷಣವಾಗಿರುವುದರಿಂದ ನಮಸ್ಕಾರದಲ್ಲಿ ಮುಖ್ಯತ್ವವು ಅರ್ಥಾತ್ ಸಿಗುವುದು. ಆದ್ದರಿಂದ ಇದು ಆರ್ಥಿಕವಾಗಿದೆ ಎಂದು ಶಂಕಿಸಬಹುದು. 'ಇವನು ಇವನಿಗಿಂತ ಹೆಚ್ಚಾಗಿ ವಂದ್ಯ' 'ಉತ್ತಮನಾಗಿ ವಂದ್ಯ' ಎಂಬ ಎರಡು ಮಾತುಗಳಿಗೆ ಒಂದೇ ಅರ್ಥ ಇರುವುದರಿಂದ ಅಸ್ಮಾತ್ ಎಂಬಲ್ಲಿನ ಪಂಚಮೀವಿಭಕ್ತಿಯಿಂದ ಬೇರೆ ವಂದ್ಯನಾದ ವ್ಯಕ್ತಿಗಿಂತ ವಂದನೆಯ ಅವಧಿಯು ಇವನು ಎಂದು ತಿಳಿಯುವುದು. ಏಕೆಂದರೆ ತದನ್ವಿತ-ಆಧಿಕ್ಯರೂಪವಿಶೇಷಸ್ಯ ವಂದ್ಯಪದಾರ್ಥಘಟಕವಂದನೇ ಏವಾನ್ವಯಾತ್ = ವಂದ್ಯನಲ್ಲಿ ಸಂಬಂಧವನ್ನು ಹೊಂದಿದ ಆಧಿಕ್ಯವು ವಂದ್ಯಪದದ ಅರ್ಥದಲ್ಲಿ ಸೇರಿರುವ ವಂದನೆಯಲ್ಲಿ

ಅನ್ವಯವನ್ನು ಹೊಂದುವುದು. ಹೀಗೆ ಮುಖ್ಯವಂದನವಿಷಯತ್ವ ಎಂದಿಷ್ಟೇ ಲಕ್ಷಣವಿದ್ದರೂ ಮುಖ್ಯಪದದಿಂದ ವ್ಯಾವೃತ್ತಿಯಾಗುವುದನ್ನು ತಿಳಿಸಲು 'ಅಶೇಷಾತ್' ಎಂದು ಹೇಳಿದ್ದಾರೆ ಎಂದಭಿಪ್ರಾಯ.

ಪ್ರಿಯತಮ ಎಂದು ಹೇಳಿದ್ದರಿಂದ ಪ್ರಿಯತಮ ಆಗುವುದಕ್ಕೆ ಬೇಕಾದ ಯೋಗ್ಯತೆಯು ಸಿಗುವುದು. ಇದು ಅರ್ಥಾತ್ ಎಂದು ತಿಳಿಯಬೇಕು. ಹಾಗಾದರೆ 'ಸದಾ ಮಮ' ಎಂಬುದು ವ್ಯರ್ಥವಲ್ಲವೇ? ಎಂದರೆ ಇಲ್ಲ. ಇದಕ್ಕೆ "ತಸ್ಯ ಅನಾನುಭವಿಕತ್ವಾತ್.." ಎಂದು ಉತ್ತರ ಕೊಟ್ಟಿದ್ದಾರೆ.

## ಮಮ ಎಂದಿಷ್ಟೇ ಸಾಕಲ್ಲವೇ?

**(ಪರಿಮಳ)- ತರ್ಹಿ 'ಮಮ' ಇತ್ಯೇಕಮೇವಾಲಮ್ ಇತ್ಯತ ಆಹ - ಅನ್ಯೇಷಾಮಪಿ ಇತಿ ॥ ಅನ್ಯೇಷಾಂ ಜೀವಾನಾಂ ಜ್ಞಾನಿನಾಂ ಭಗವದಪರೋಕ್ಷಾನಂತರಂ ಭಗವತಃ ಪರಮಪ್ರೇಮ-ಯೋಗ್ಯತ್ವಮ್ ಅನುಭವಸಿದ್ಧಮ್ । ಮಮ ತು ಅನಾದ್ಯನಂತಕಾಲಮ್ । ಅತೋ ಯಾವದ್-ದ್ರವ್ಯಭಾವೀದಂ ಹರೇರ್ಲಕ್ಷಣಂ ನ ಕದಾಚಿದಾಗತಮ್ ಇತಿ ದ್ಯೋತನಾಯ 'ಸದಾ' ಇತ್ಯುಕ್ತಮಿತ್ಯರ್ಥಃ । ಪ್ರೇಮಯೋಗ್ಯತ್ವಂ ಚ ನಿರುಪಾಧಿಕೇಷ್ಟತ್ವಮ್ ॥**

'ಸದಾ ಪ್ರಿಯತಮಂ ಮಮ' ಎಂಬ ವಿಶೇಷಣದಿಂದ ಪರಮಪ್ರೇಮಯೋಗ್ಯತ್ವಂ' ಎಂಬ ಲಕ್ಷಣದ ಲಾಭವಾಗುವುದು. ಅಲ್ಲ! ನಾರಾಯಣನು ಪರಮಪ್ರೇಮಯೋಗ್ಯ ಎಂಬ ಅನುಭವ ಯಾರಿಗೂ ಇಲ್ಲವಲ್ಲ. ಆದ್ದರಿಂದ ಈ ಲಕ್ಷಣಕ್ಕೆ ಅಸಂಭವದೋಷವಿದೆ ಎಂದರೆ, 'ಸದಾ ನನಗಿದೆ' ಎಂದು ಉತ್ತರವನ್ನು ಹೇಳಿದರು. ಇಲ್ಲಿ ಉತ್ತರವಾಗಿ 'ಮಮ' ಎಂದಿಷ್ಟೇ ಸಾಕಾಗಿತ್ತು. 'ಬೇರೆಯವರ ಅನುಭವಕ್ಕೆ ಇಲ್ಲ' ಎಂದು ಶಂಕೆ ಮಾಡಿದಾಗ 'ನನಗೆ ಇದೆ' ಎಂಬಿಷ್ಟೇ ಉತ್ತರ ಸಾಕು. 'ಸದಾ' ಪದ ಬೇಕಾಗಿಲ್ಲ ಎಂದು ಭಾವ.

ಬೇರೆ ಜೀವರಿಗೂ ಅಂದರೆ ಜ್ಞಾನಿಗಳಿಗೂ ಭಗವಂತನ ಅಪರೋಕ್ಷಜ್ಞಾನಾನಂತರ ಭಗವಂತನು ಪರಮಪ್ರೇಮಯೋಗ್ಯ ಎಂಬ ಅನುಭವ ಇದೆ. ನನಗಾದರೂ ಅನಾದ್ಯನಂತಕಾಲದಿಂದ ಇದೆ. ಆದ್ದರಿಂದ ಈ ಹರಿಯ ಲಕ್ಷಣವು ಯಾವದ್ದ್ರವ್ಯಭಾವಿಯಾಗಿದೆ. ಅಂದರೆ ದ್ರವ್ಯಇರುವವರೆಗೂ ಇರುವಂತಹ ಲಕ್ಷಣ. ಅಂದರೆ ಹರಿ ಇರುವವರೆಗೂ 'ಸದಾ ಮಮ ಪ್ರಿಯತಮತ್ವ' ಎಂಬುದು ಇದ್ದೇ ಇರುತ್ತೆ. ಅರ್ಥಾತ್ 'ನಿರಂತರ ಮಮ ಪ್ರಿಯತಮತ್ವ' ಹರಿಯಲ್ಲಿದೆ. ಇದನ್ನು ತಿಳಿಸಲು 'ಸದಾ' ಎಂಬ ಪದವನ್ನು ಹೇಳಿದ್ದಾರೆ.

ಇಲ್ಲಿ ಪರಮಪ್ರೇಮಯೋಗ್ಯತ್ವ ಎಂದರೆ ನಿರುಪಾಧಿಕಇಷ್ಟತ್ವ ಎಂದರ್ಥ. ಅರ್ಥಾತ್ ಯಾವುದೇ ಅಪೇಕ್ಷೆಯಿಲ್ಲದೇ ಇಷ್ಟವಾಗಿರುವುದು. ಸ್ವಾಭಾವಿಕ ಇಷ್ಟ ಎಂದು ತಾತ್ಪರ್ಯ.

## ಏಕಸ್ಯ ಪ್ರತಿಭಾತಂ ತು ಕೃತಕಾನ್ನ ವಿಶಿಷ್ಯತೇ

(ವಾಕ್ಯಾರ್ಥಚಂದ್ರಿಕಾ)- 'ಮಮ' ಇತ್ಯನೇನ ಸ್ವಂ ಪ್ರತಿ ಅನುಭವಸಿದ್ಧತ್ವೋಕ್ತಾವಪಿ 'ಏಕಸ್ಯ ಪ್ರತಿಭಾತಂ ತು ಕೃತಕಾನ್ನ ವಿಶಿಷ್ಯತೇ' ಇತ್ಯುಕ್ತರೀತ್ಯಾ ಪ್ರಾಪ್ತಾಸಂಭವಶಂಕಾನಿವೃತ್ತ್ಯರ್ಥಂ 'ಸದಾ' -ಪದಾಭಿಪ್ರಾಯಮಾಹ - ಅನ್ಯೇಷಾಮಿತಿ ॥ ಪ್ರಥಮಾಪಿಶಬ್ದಸ್ಯ ಅಭಿವ್ಯಾಪ್ತ್ಯರ್ಥತ್ವಮೇವ ಅಂಗೀಕೃತ್ಯ ದ್ವಿತೀಯೋಽಪಿಶಬ್ದ ಉಕ್ತವಕ್ಷ್ಯಮಾಣಸಮುಚ್ಚಯಾರ್ಥ ಇತ್ಯಾಹ - ಅಪೀತಿ ॥ 'ಅಪಿಶಬ್ದೌ ಲಕ್ಷಣಸಮುಚ್ಚಯೇ' ಇತಿ ಪಾಠೇ ತು ಉಭಯೋರಪಿ ಲಕ್ಷಣಸಮುಚ್ಚಯಾರ್ಥತ್ವ-ಮೇವ ಇತ್ಯರ್ಥಃ ।

'ಸದಾ ಮಮ ಪ್ರಿಯತಮಮ್' ಎಂಬಲ್ಲಿ ಮಮ ಎಂದು ಹೇಳಿದ್ದರಿಂದ ತಮಗೆ ನಾರಾಯಣನು ಅತ್ಯಂತ ಪ್ರೀತಿಪಾತ್ರ ಎಂಬ ವಿಷಯದಲ್ಲಿ ಅನುಭವವಿದೆ ಎಂದು ಹೇಳಿದರೂ ಇದು ಅಸಂಭಾವಿತ-ವೆನಿಸುವುದು. 'ಏಕಸ್ಯ ಪ್ರತಿಭಾತಂ ತು ಕೃತಕಾನ್ನ ವಿಶಿಷ್ಯತೇ' - ಒಬ್ಬನಿಗೆ ಮಾತ್ರ ಹೊಳೆದದ್ದು ಕಂಡದ್ದು ಆಗಿದ್ದರೆ ಅದು ಕಲ್ಪಿತಕ್ಕಿಂತ ಬೇರೆಯಲ್ಲ. ಅರ್ಥಾತ್ ಮಿಥ್ಯಾ ಎಂದಾಗುವುದು. ಇಲ್ಲಿ ಕೃತಕ ಎಂಬ ಶಬ್ದಕ್ಕೆ ಕೃತ್ರಿಮ ಎಂದರ್ಥ. ಕೃತ್ರಿಮ ಎಂದರೆ ಸಹಜವಲ್ಲದ ಅರ್ಥಾತ್ ಆರೋಪಿತವಾದದ್ದು. ಈ ಶಂಕೆಯನ್ನು ಪರಿಹರಿಸಲು ಸದಾ ಎಂದಿದ್ದಾರೆ. ಸದಾ ಪದದ ಅಭಿಪ್ರಾಯವನ್ನು 'ಅನ್ಯೇಷಾಂ' ಎಂಬ ಪಂಕ್ತಿಯಿಂದ ವಿವರಿಸಿದ್ದಾರೆ. ಒಬ್ಬನಿಗೆ ಮಾತ್ರವಲ್ಲದೇ ಬೇರೆಯವರಿಗೂ ಅಪರೋಕ್ಷಜ್ಞಾನಾನಂತರದ ಕಾಲದಲ್ಲಿ ನಾರಾಯಣನು ಅತ್ಯಂತ ಪ್ರಿಯನೆಂಬುದು ಅನುಭವಸಿದ್ಧವಾಗಿದೆ ಎಂದು. 'ಆಪ್ತತಮಮಪ್ಯಖಿಲೈಃ ಸುವಾಕ್ಯೈಃ' ಎಂಬಲ್ಲಿನ ಅಪಿ ಶಬ್ದಕ್ಕೆ ಅಭಿವ್ಯಾಪ್ತಿ ಎಂದರ್ಥ. 'ಅಶೇಷವಿಶೇಷತೋಽಪಿ' ಎಂಬಲ್ಲಿನ ಎರಡನೆಯ ಅಪಿಶಬ್ದವು ಹಿಂದೆ ಹೇಳಿದ ಮುಂದೆ ಹೇಳಲ್ಪಡುವ ಎಲ್ಲಾ ಪ್ರಮಾಣಗಳ ಸಮುಚ್ಚಯಕ್ಕೋಸ್ಕರ ಇದೆ ಎಂದು ಹೇಳುತ್ತಿದ್ದಾರೆ - 'ಅಪಿ' ಎಂದು. ಇನ್ನು ಕೆಲವು ಕಡೆ 'ಅಪಿಶಬ್ದೌ ಲಕ್ಷಣಸಮುಚ್ಚಯೇ' ಎಂಬ ಪಾಠವು ಸಿಗುತ್ತದೆ. ಈ ಪಕ್ಷದಲ್ಲಿ ಎರಡೂ ಅಪಿಶಬ್ದಗಳೂ ಲಕ್ಷಣಸಮುಚ್ಚಯಕ್ಕೋಸ್ಕರವೇ ಎಂದು ತಿಳಿಯಬೇಕು.

## ಸದಾ ಪದ ಅನರ್ಥಕ ಎಂದು ಶಂಕಿಸಿ ಅದರ ಅಭಿಪ್ರಾಯವನ್ನು ಅನ್ಯೇಷಾಂ ಎಂದು ವಿವರಿಸಿದ್ದಾರೆ

ಕಾಶೀ — ನನು 'ಮಮ ಪ್ರಿಯತಮಮ್' ಇತ್ಯನೇನೈವ ಪರಮಪ್ರೇಮಯೋಗ್ಯತ್ವಮಾ-ಚಾರ್ಯಸ್ಯಾನುಭಾವಿಕಮಿತಿ ಸಿದ್ಧ್ಯತಿ । ಯೋಗ್ಯತಾನಿಶ್ಚಯಮಂತರೇಣ ಪರಮಪ್ರೇಮಾ-ನುಪಪತ್ತೇರತಃ ಸದಾಪದಾನರ್ಥಕ್ಯಮಿತ್ಯಾಶಂಕ್ಯ ತದಭಿಪ್ರಾಯಮಾಹ — ಅನ್ಯೇಷಾಮಪೀತಿ ॥

ಇತೀತಿ ॥ 'ಸೂಚಯಿತುಮಿ'ತಿ ಶೇಷಃ । ಪೂರ್ವೇಣೈವ ಸಂಬಂಧಃ । ಏತತ್ಸೂಚನಂ ಚ ಶಿಷ್ಯಾಣಾಂ ಕಾರಣಬಾಧೇನ ಪರಮಪ್ರೇಮಾನುಪಪತ್ತಿಶಂಕಾನಿರಾಸಾರ್ಥಮ್ । ನ ಚ ಕಾಲಾಂ-ತರೀಣಾನುಭವಸ್ಯ ಕಥಂ ಕಾರಣತ್ವಮಿತಿ ವಾಚ್ಯಮ್ । ಪರಮಪ್ರೇಮರೂಪಕಾರ್ಯಸ್ಯಾಪಿ ಜ್ಞಾನೋತ್ತರಕಾಲೀನತ್ವಾತ್ । ಪರಮತ್ವಂ ಚ ವಕ್ಷ್ಯಮಾಣಪರಾವಸ್ಥಾರೂಪಮುತ್ತಮಪ್ರಸಾದ-ಹೇತುತ್ವಾದಿರೂಪಂ ವಾ ವಿವಕ್ಷಿತಮ್ । ಅತ ಏವ ವಿಶೇಷಣಭೇದೇನ ಲಕ್ಷಣಭೇದಾದತ್ರಾಪಿ ಲಕ್ಷಣಸಂಖ್ಯಾನುಕ್ತಿಃ । ಪ್ರಥಮಾಪಿಶಬ್ದಸ್ಯಾಭಿವ್ಯಾಪ್ತ್ಯರ್ಥತ್ವಮುಪೇತ್ಯಾಹ — ಅಪಿಶಬ್ದ ಇತಿ ॥ ಅಪಿಶಬ್ದಾವಿತ್ಯಪಿ ಪಾಠಃ ।

'ಮಮ ಪ್ರಿಯತಮಮ್' ಎಂದಿಷ್ಟೇ ಹೇಳುವುದರಿಂದ ಭಗವಂತನು ಪರಮಪ್ರೇಮಯೋಗ್ಯ ಎಂದು ಆಚಾರ್ಯರ ಅನುಭವಕ್ಕಿದೆ. ಏಕೆಂದರೆ ಯೋಗ್ಯತಾನಿಶ್ಚಯವಿಲ್ಲದೇ ಪರಮಪ್ರೇಮವೇ ಉಂಟಾಗುವುದಿಲ್ಲವಾದ್ದರಿಂದ. ಆದ್ದರಿಂದ ಸದಾಪದವು ಅನರ್ಥಕ ಎಂದು ಪ್ರಶ್ನಿಸಿ, ಅದರ ಅಭಿಪ್ರಾಯವನ್ನು ವಿವರಿಸುತ್ತಿದ್ದಾರೆ — "ಅನ್ಯೇಷಾಮಪಿ" ಎನ್ನುವ ಭಾಗದಿಂದ. ಭಗವಂತನು ಪರಮಪ್ರೀತಿಯೋಗ್ಯನೆಂಬುದು ಬೇರೆಯವರಿಗೂ ಅಪರೋಕ್ಷಜ್ಞಾನಾನಂತರಕಾಲದಲ್ಲಿ ಅನುಭವಕ್ಕೆ ಬರುವುದು, ನನಗೆ ಮಾತ್ರ ಯಾವಾಗಲೂ ಪರಮಪ್ರೀತಿಯೋಗ್ಯ ಎಂಬ ಅನುಭವವಿದೆ ಎಂದು ಸೂಚಿಸಲು "ಸದಾ ಮಮ" ಎಂದಿದ್ದಾರೆ. ಈ ರೀತಿ ಸೂಚನೆಯಾದರೋ ಶಿಷ್ಯರುಗಳಲ್ಲಿ ಪರಮಪ್ರೇಮವು ಭಗವಂತನ ವಿಷಯಕವಾಗಿ ಬರುವುದೇ ಇಲ್ಲ ಎಂಬ ಶಂಕೆಯ ನಿವಾರಣೆಗೋಸ್ಕರ ಎಂದು ತಿಳಿಯತಕ್ಕದ್ದು. ಅಲ್ಲ! ಅಪರೋಕ್ಷಜ್ಞಾನಾನಂತರಕಾಲದಲ್ಲಿ ಬರುವ ಅನುಭವ ಪರಮಪ್ರೇಮಕ್ಕೆ ಕಾರಣವಾಗುವುದಾದರೂ ಹೇಗೆ? ಆ ಪರಮಪ್ರೇಮವೂ ಕೂಡ ಆ ಅನುಭವದ ಅನಂತರವೇ ಉಂಟಾಗುವುದರಿಂದ ಪ್ರಶ್ನೆಗೆ ಅವಕಾಶವಿಲ್ಲ. ಇನ್ನು ಪ್ರೇಮದಲ್ಲಿರುವ ಪರಮತ್ವ ಎಂದರೆ ಮುಂದೆ ಹೇಳುವ ಶ್ರೇಷ್ಠವಾದ ಒಂದು ತರಹದ ಅವಸ್ಥೆ ಅಥವಾ ಉತ್ತಮಪ್ರಸಾದಕ್ಕೆ ಕಾರಣವಾದಂತಹದ್ದು ಎಂದು ವಿವಕ್ಷಿತ. ಆದ್ದರಿಂದಲೇ ಪರಮತ್ವರೂಪವಿಶೇಷಣವು ಬೇರೆ ಬೇರೆಯಾದಂತೆ ಲಕ್ಷಣಗಳೂ ಬೇರೆ ಬೇರೆಯಾಗುವ ಕಾರಣ "ಸದಾ ಮಮ ಪ್ರಿಯತಮಂ" ಎಂಬ ಭಾಗದಿಂದ ಇಷ್ಟು ಲಕ್ಷಣಗಳು ಎಂದು ಸಂಖ್ಯೆಯನ್ನು ನಿರ್ದೇಶಮಾಡಿಲ್ಲ.

### 'ಅಥವಾ ನಿಖಿಲೇತ್ಯಾದ್ಯುಕ್ತಲಕ್ಷಣೋಪಪನ್ನತಯಾ' - ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – अथवा, निखिलेत्याद्युक्तलक्षणोपपन्नतया नारायणः केन प्रमाणेन प्रतिपत्तव्य इत्यतः सुवाक्यैराप्यमित्युक्तम् । ननु वेदाद्येकदेशेऽन्यथा-ऽप्युच्यते । न । तत्प्रतीतेरपरामर्शपूर्वकत्वादित्याशयेनाखिलैः इत्युदितम् । तर्हि

धर्माद्यसिद्धिः स्यात्, तस्य प्रमाणान्तरागोचरत्वात्। मैवम्। अमुख्यया वृत्त्या धर्मादेरपि वेदादिवेद्यत्वादित्याशयवताऽऽप्यतममित्यभिहितम्। अपिशब्दो वक्ष्यमाणप्रमाणसमुच्चयार्थः। सकलजगन्निमित्तकारणत्वादिहेतुभिरप्युक्तलक्षणो नारायणः प्रत्येतव्य इत्यभिप्रेत्योक्तम् — अस्येति ॥

ಅಥವಾ - ಅಥವಾ, ನಿಖಿಲ ಇತ್ಯಾದಿ ಉಕ್ತಲಕ್ಷಣೋಪಪನ್ನತಯಾ - ನಿಖಿಲಪೂರ್ಣಗುಣೈಕದೇಹಂ ನಿರ್ದೋಷಂ ಮುಂತಾದವುಗಳಿಂದ ಹೇಳಲ್ಪಟ್ಟ ನಿಖಿಲಗುಣತ್ವ ಮುಂತಾದ ಲಕ್ಷಣಗಳನ್ನು ಹೊಂದಿದವನನ್ನಾಗಿ, ನಾರಾಯಣಃ - ನಾರಾಯಣನು, ಕೇನ - ಯಾವ, ಪ್ರಮಾಣೇನ - ಪ್ರಮಾಣದಿಂದ, ಪ್ರತಿಪತ್ತವ್ಯಃ - ತಿಳಿಯಲ್ಪಡಬೇಕು, ಇತ್ಯತಃ - ಎಂಬ ಪ್ರಶ್ನೆಬರುವ ಕಾರಣದಿಂದ, ಸುವಾಕ್ಯೈಃ ಆಪ್ಯಮ್ ಇತ್ಯುಕ್ತಮ್ - ಸುವಾಕ್ಯೈಃ ಆಪ್ಯಂ ಎಂದು ಹೇಳಲ್ಪಟ್ಟಿದೆ.

ನನು - ಅಲ್ಲ?, ವೇದಾದ್ಯೈಕದೇಶೇ - ವೇದ ಮುಂತಾದವುಗಳ ಒಂದು ಭಾಗದಲ್ಲಿ, ಅನ್ಯಥಾಪಿ - ವಿಪರೀತವಾಗಿಯೂ, ಉಚ್ಯತೇ - ಹೇಳಲ್ಪಡುತ್ತದೆ, ನ - ಇಲ್ಲ. ತತ್ಪ್ರತೀತೇಃ - ಆ ರೀತಿಯಾದ ಜ್ಞಾನಕ್ಕೆ, ಅಪರಾಮರ್ಶಪೂರ್ವಕತ್ವಾತ್ - ವಿಚಾರಮಾಡದೇ ಇರುವಿಕೆ ಎಂಬ ಧರ್ಮವಿರುವುದು, ಇತಿ - ಎಂಬ, ಆಶಯೇನ - ಅಭಿಪ್ರಾಯದಿಂದ, "ಅಖಿಲೈಃ" ಇತ್ಯುದಿತಮ್ - ಅಖಿಲೈಃ ಎಂದು ಹೇಳಲ್ಪಟ್ಟಿದೆ. ತರ್ಹಿ - ಹಾಗಾದರೆ, ಧರ್ಮಾದ್ಯಸಿದ್ಧಿಃ ಸ್ಯಾತ್ - ಧರ್ಮ, ಪ್ರಾಣ ಮೊದಲಾದ ಪದಾರ್ಥಗಳ ಅಸ್ತಿತ್ವವು ಇಲ್ಲದೇ ಹೋಗಲಿ ಎಂದಾದೀತು. ತಸ್ಯ - ಆ ಧರ್ಮಾದಿಗಳು, ಪ್ರಮಾಣಾಂತರಾಗೋಚರತ್ವಾತ್ - ಪ್ರಮಾಣ - ಬೇರೆ ಪ್ರಮಾಣಗಳಿಗೆ ವಿಷಯವಲ್ಲವಾದ್ದರಿಂದ. ಮೈವಮ್ - ಹೀಗಲ್ಲ. ಅಮುಖ್ಯಯಾ-ಮುಖ್ಯವಲ್ಲದ, ವೃತ್ತ್ಯಾ - ಶಬ್ದವೃತ್ತಿಯಿಂದ, ಧರ್ಮಾದೇರಪಿ - ಧರ್ಮಪ್ರಾಣಮೊದಲಾದವುಗಳೂ ಕೂಡ, ವೇದಾದಿ- ವೇದ್ಯತ್ವಾತ್ ಇತ್ಯಾಶಯವತಾ - ವೇದ ಮುಂತಾದವುಗಳಿಂದ ತಿಳಿಯಲ್ಪಡುವುದು ಎಂಬ ಅಭಿಪ್ರಾಯದಿಂದ, "ಆಪ್ಯತಮಂ' ಇತ್ಯಭಿಹಿತಮ್ - ಆಪ್ಯತಮಂ ಎಂದು ಹೇಳಲ್ಪಟ್ಟಿದೆ. "ಅಪಿ"ಶಬ್ದಃ - ಎರಡನೆಯ ಪಾದದಲ್ಲಿರುವ ಅಪಿಶಬ್ದವು, ವಕ್ಷ್ಯಮಾಣಪ್ರಮಾಣಸಮುಚ್ಚಯಾರ್ಥಃ - ಮುಂದೆ ಹೇಳಲ್ಪಡುವ ಪ್ರಮಾಣಗಳ ಸಮುಚ್ಚಯವೆಂಬ ಅರ್ಥವುಳ್ಳದ್ದು.

ಸಕಲಜಗನ್ನಿಮಿತ್ತಕಾರಣತ್ವಾದಿ ಹೇತುಭಿರಪಿ - ಸಕಲಜಗನ್ನಿಮಿತ್ತಕಾರಣತ್ವ ಮುಂತಾದ ಯುಕ್ತಿಗಳಿಂದಲೂ ಕೂಡ, ನಾರಾಯಣಃ - ನಾರಾಯಣನು, ಪ್ರತ್ಯೇತವ್ಯಃ - ತಿಳಿಯಲ್ಪಡಬೇಕು, ಇತಿ

ಅಭಿಪ್ರೇತ್ಯ - ಎಂದು ಅಭಿಪ್ರಾಯಪಟ್ಟು, ಉಕ್ತಂ - ಹೇಳಲ್ಪಟ್ಟಿದೆ, 'ಅಸ್ಯ' ಇತಿ - ಅಸ್ಯೋದ್ಭವಾದಿದಂ ಎಂಬುದಾಗಿ.

ಸಾರ — 'ನಿಖಿಲಪೂರ್ಣಗುಣೈಕದೇಹತ್ವ ನಿರ್ದೋಷತ್ವಗಳು ನಾರಾಯಣನ ಲಕ್ಷಣಗಳಾಗಿವೆ ಇಂತಹ ಲಕ್ಷಣವಿಶಿಷ್ಟನಾದ ನಾರಾಯಣನ ವಿಷಯದಲ್ಲಿ ಪ್ರಮಾಣವೇನು? ಎನ್ನುವ ಪ್ರಶ್ನೆಗೆ ಉತ್ತರವಾಗಿ 'ಸುವಾಕ್ಯೈಃ ಆಪ್ಯಮ್' ಎಂದಿದ್ದಾರೆ. ವೇದಾದಿಗಳೇ ಪ್ರಮಾಣ ಎಂದು ಭಾವ. ಇನ್ನು ಅಖಿಲೈಃ ಎಂದದ್ದು ಏಕೆ? ಹಾಗೆ ಹೇಳದಿದ್ದಲ್ಲಿ ಸುವಾಕ್ಯೈಃ ಆಪ್ಯತ್ವ ಅರ್ಥಾತ್ ಪ್ರತಿಪಾದ್ಯತ್ವ ವೇದೈಕದೇಶಪ್ರತಿಪಾದ್ಯವಾದ ಧರ್ಮಾದಿಗಳಲ್ಲಿಯೂ ಇದೆ. ಆದರೆ ಈ ರೀತಿಯ ಪ್ರತೀತಿಯು ವಿಚಾರಮೂಲಕವಲ್ಲ. ಅದಕ್ಕಾಗಿ ಅಖಿಲೈಃ ಎಂದಿದ್ದಾರೆ. ಈಗ ಧರ್ಮಾದಿಗಳಲ್ಲಿ ಅಖಿಲೈಃ ಸುವಾಕ್ಯೈಃ ಆಪ್ಯತ್ವ ಬರುವುದಿಲ್ಲ. ಹಾಗಾದರೆ ಇಡೀ ವೇದವು ಭಗವಂತನನ್ನು ಹೇಳಿದರೆ ಧರ್ಮಾದಿಗಳ ಸಿದ್ಧಿ ಹೇಗೆ? ಏಕೆಂದರೆ, ವೇದ ಬಿಟ್ಟು ಬೇರೆ ಯಾವುದೇ ಪ್ರಮಾಣಕ್ಕೆ ಧರ್ಮಾದಿಗಳು ಗೋಚರವಾಗದಿರುವುದರಿಂದ. ಇಡೀ ವೇದವು ಭಗವಂತನನ್ನು ಹೇಳುವುದು ಮುಖ್ಯವೃತ್ತಿಯಿಂದ. ಅಮುಖ್ಯವೃತ್ತಿಯಿಂದ ಧರ್ಮಾದಿಗಳನ್ನು ಕೆಲವು ವೇದಭಾಗಗಳು ಹೇಳುತ್ತವೆ. ಈ ಅಂಶವನ್ನು ತಿಳಿಸಲು 'ಆಪ್ಯಮ್' ಎಂದಿಷ್ಟೇ ಹೇಳದೇ 'ಆಪ್ಯತಮಮ್' ಎಂದಿದ್ದಾರೆ. ಶ್ಲೋಕದಲ್ಲಿರುವ ಅಪಿಶಬ್ದವು ಮುಂದೆ ಹೇಳುವ ಪ್ರಮಾಣಸಮುಚ್ಚಾಯಕ್ಕಾಗಿ ಇದೆ. ಅಂದರೆ ಸುವಾಕ್ಯಗಳು ಪೂರ್ವೋಕ್ತಲಕ್ಷಣವಿಶಿಷ್ಟನಾದ ನಾರಾಯಣನಲ್ಲಿ ಪ್ರಮಾಣವಾದಂತೆ ಜಗತ್ಕಾರಣತ್ವಾದಿಹೇತುಗಳೂ ಪ್ರಮಾಣಗಳಾಗಿವೆ. ಈ ಅಭಿಪ್ರಾಯದಿಂದ ಅಸ್ಯೋದ್ಭವಾದಿದಂ ಎಂದಿದ್ದಾರೆ.

**ಅಪರಾಮರ್ಶಪೂರ್ವಕತ್ವಾತ್ ಇತ್ಯಾಶಯೇನ ಅಖಿಲೈಃ ಇತ್ಯುದಿತಮ್**

**कम्वा — अथवेति ॥** अस्मिन् पक्षे निखलेत्यादिकं लक्षणप्रदर्शनपरम् । 'सुवाक्यैः, आप्यतमम्' इत्यादिकं तु नारायणे प्रमाणप्रदर्शनपरमिति भावः । **अन्यथाऽप्युच्यत इति ॥** 'निखिलपूर्णगुणे'त्याद्युक्तलक्षणवैपरीत्येन वेदाद्येकदेशे नारायणः प्रतिपाद्यत इति कथं वेदेनोक्तलक्षणविशिष्टो नारायणः प्रतिपत्तव्य इति भावः । **अपरामर्शेति ॥** वेदैकदेशे आपाततोऽन्यथाप्रतीतावप्यखिलवेदविचारे क्रियमाणे उक्तलक्षणविशिष्टनारायणः प्रतीयत इति वेदेन तल्लक्षणविशिष्टनारायणसिद्धिर्युक्तेति भावः । **तर्हीति ॥** नारायणस्य यद्यखिलसुवाक्यप्रतिपाद्यत्वं

**तर्हीत्यर्थः । अमुख्ययेति ॥ अपरममुख्यया - इत्यर्थः । अपिशब्द इति ॥ 'अस्योद्भवादिदम्' इत्यत्र सकलजगन्निमित्तकारणत्वादिना नारायणसिद्धेर्वक्ष्यमाणत्वात् तत्प्रमाणसमुच्चयार्थोऽपिशब्द इत्यर्थः ।**

ಅಥವೇತಿ ॥ ಈ ಯೋಜನೆಯಲ್ಲಿ ನಿಖಿಲಪೂರ್ಣಗುಣೈಕದೇಹಂ ಮುಂತಾದವುಗಳು ನಾರಾಯಣನ ಲಕ್ಷಣವನ್ನು ತೋರಿಸುವುದಕ್ಕೋಸ್ಕರ ಇವೆ. "ಸುವಾಕ್ಯೈಃ, ಆಪ್ಯತಮಮ್" ಮುಂತಾದವುಗಳಾದರೋ ನಾರಾಯಣನ ವಿಷಯದಲ್ಲಿ ಪ್ರಮಾಣವನ್ನು ತೋರಿಸುವಂತಹವುಗಳು. ಅನ್ಯಥಾऽಪಿ ಉಚ್ಯತೇ ಇತಿ ॥ ನಿಖಿಲಪೂರ್ಣಗುಣೈಕದೇಹ ಮುಂತಾದ ಪದಗಳಿಂದ ಹೇಳಲ್ಪಟ್ಟ ಲಕ್ಷಣಕ್ಕಿಂತ ವಿಪರೀತವಾಗಿ ವೇದದ ಒಂದು ಭಾಗದಲ್ಲಿ ನಾರಾಯಣನು ಪ್ರತಿಪಾದಿಸಲ್ಪಟ್ಟಿದ್ದಾನೆಯಾದ್ದರಿಂದ ವೇದದಿಂದ ಹಿಂದೆ ಹೇಳಿದ ಲಕ್ಷಣದಿಂದ ಕೂಡಿದ ನಾರಾಯಣನನ್ನು ಹೇಗೆ ತಿಳಿಯಲು ಸಾಧ್ಯ? ಎಂದಭಿಪ್ರಾಯ. ಅಪರಾಮರ್ಶೇತಿ ॥ ವೇದದ ಒಂದು ಭಾಗದಲ್ಲಿ ಮೇಲುನೋಟಕ್ಕೆ ಬೇರೆ ರೀತಿಯ ಲಕ್ಷಣವು ತೋರಿದರೂ ಇಡೀ ವೇದವನ್ನು ವಿಚಾರ ಮಾಡಿದಾಗ ನಿಖಿಲ ... ಮುಂತಾದ ಲಕ್ಷಣಗಳಿಂದ ಕೂಡಿದ ನಾರಾಯಣನು ತೋರುತ್ತಾನೆ ಎಂಬ ಕಾರಣದಿಂದ ವೇದದಿಂದ ಮುಂಚೆ ಹೇಳಿದ ಲಕ್ಷಣದಿಂದ ಕೂಡಿದ ನಾರಾಯಣನು ಸಿದ್ಧನಾಗುವುದು ಸರಿಯೆಂದು ಅಭಿಪ್ರಾಯ. ತರ್ಹೀತಿ ॥ ಒಂದು ವೇಳೆ ನಾರಾಯಣನಿಗೆ ಎಲ್ಲ ರೀತಿಯಾದ ಸುವಾಕ್ಯಗಳಿಂದ ಪ್ರತಿಪಾದ್ಯತ್ವವಿದ್ದರೆ ಆಗ ಎಂದರ್ಥ. ಅಮುಖ್ಯಯಾ ಇತಿ ॥ ಪರಮಮುಖ್ಯವಲ್ಲದ ವೃತ್ತಿಯಿಂದ ಎಂದರ್ಥ. ಅಪಿಶಬ್ದಃ ಇತಿ ॥ ಅಸ್ಯೋದ್ಭವಾದಿದಂ ಎಂಬಲ್ಲಿ ಸಕಲಜಗನ್ನಿಮಿತ್ತಕಾರಣನಾದ್ದರಿಂದ ನಾರಾಯಣನು ಸಿದ್ಧನಾಗುತ್ತಾನೆ ಎಂದು ಮುಂದೆ ಹೇಳುವುದರಿಂದ ಅಂತಹ ಪ್ರಮಾಣವನ್ನು ಸಮುಚ್ಚಯ ಮಾಡುವುದಕ್ಕೋಸ್ಕರ ಅಪಿಶಬ್ದವು ಇದೆ ಎಂದರ್ಥ.

## ಏವಂ ರೂಪೇಣೈವ ಲಕ್ಷಣಗಳನ್ನು ಹೇಳಬೇಕು ಎಂಬುದಕ್ಕೆ ಕಾರಣವಿಲ್ಲ

(ಪರಿಮಳ)- ನನು ವಿಭವಾದನೇಕಲಕ್ಷಣೋಕ್ತಾವಪಿ ಏವಂರೂಪೇಣೈವ ಲಕ್ಷಣಾನಿ ವಾಚ್ಯಾನಿ ಇತ್ಯತ್ರ ನ ಬೀಜಮಸ್ತಿ ಇತ್ಯತಃ ಸರ್ವಸ್ಯ ಉಪಯೋಗಮಾಹ - **ಅಥವಾ** ಇತ್ಯಾದಿನಾ **ದುಃಖಾದಿದೋಷರಹಿತಶ್ಚ** ಇತ್ಯಂತೇನ ॥ ತಮಪೋಽಗ್ರೇ ಪೃಥಕ್‌ಕೃತ್ಯಂ ವಕ್ತುಮ್ **'ಆಪ್ಯಮ್'** ಇತಿ ಪ್ರತೀಕೋಕ್ತಿಃ । 'ವಕ್ಷ್ಯಮಾಣಪ್ರಮಾಣೇ' ಇತ್ಯುಕ್ತಮ್ । ತದ್ವ್ಯನಕ್ತಿ - **ಸಕಲೇತಿ** ॥ ಆದಿಪದಾತ್ ಜಗತ್ಪಾಲಕತ್ವಸಂಹರ್ತೃತ್ವನಿಯಂತೃತ್ವಾದೌ ಹೇತವೋ ಗ್ರಾಹ್ಯಾಃ । ಉಕ್ತಂ ಹಿ ಭಾಗವತೇ 'ಕರ್ತೃತ್ವಾತ್ ಸಗುಣಂ ಬ್ರಹ್ಮ' ಇತಿ । ವಕ್ಷ್ಯತಿ ಚ ಭಾಷ್ಯಕಾರೋಽಪಿ ಆನಂದ-ಮಯನಯೇ –

'ಜನ್ಮಾದ್ಯಸ್ಯೇತಿಸೂತ್ರೇಣ ಗುಣಸರ್ವಸ್ವಸಿದ್ಧಯೇ ।
ಬ್ರಹ್ಮಣೋ ಲಕ್ಷಣಂ ಪ್ರೋಕ್ತಮ್ ....'

ಇತಿ ಭಾವಃ । ನಹಿ ಜಗಜ್ಜನ್ಮಾದಿಕರ್ತುಃ ದೋಷಾಃ ಸಂಭವಂತೀತಿ ಜಗತ್ಕರ್ತೃತ್ವಾದಿನಾ ಏವ ಗುಣಸರ್ವಸ್ವವತ್ ನಿರ್ದೋಷತಾಽಪಿ ಸಿದ್ಧ್ಯತೀತಿ ಭಾವೇನ 'ಉಕ್ತಲಕ್ಷಣ' ಇತ್ಯುಕ್ತಮ್ ।

ವೈಭವಕ್ಕನುಗುಣವಾಗಿ ಇಲ್ಲಿಯವರೆಗೆ ನಾರಾಯಣನಿಗೆ ಅನೇಕಲಕ್ಷಣಗಳನ್ನು ಹೇಳಿದ್ದಾರೆ. ಆದರೆ ಈ ರೀತಿಯಾದ ಲಕ್ಷಣಗಳನ್ನೇ ಹೇಳಬೇಕು ಎಂಬಲ್ಲಿ ಕಾರಣವೇನಿಲ್ಲ. ಆದ್ದರಿಂದ ಎಲ್ಲಾ ವಿಶೇಷಣಗಳಿಗೆ ಉಪಯೋಗವನ್ನು ಇನ್ನೊಂದು ರೀತಿಯಾಗಿ ತೋರಿಸುತ್ತಿದ್ದಾರೆ — ಅಥವಾ ಎಂದು. ಸುಧಾದಲ್ಲಿ 'ಸುವಾಕ್ಯೈಃ ಆಪ್ಯಮ್' ಎಂಬುದಾಗಿ ಪ್ರತೀಕವನ್ನು ಗ್ರಹಣ ಮಾಡಿದ್ದಾರೆ. ಪರಂತು ಅನುವ್ಯಾಖ್ಯಾನದಲ್ಲಿ 'ಸುವಾಕ್ಯೈಃ ಆಪ್ಯತಮಮ್' ಎಂದಿದೆ. ಹೀಗೆ ಹೇಳಿದ್ದರ ಉದ್ದೇಶ ತಮಪ್‌ಪ್ರತ್ಯಯದ ಕೃತ್ಯವನ್ನು ಪ್ರತ್ಯೇಕವಾಗಿ ಹೇಳುವವರಿದ್ದಾರೆ. ಹಾಗಾಗಿ 'ಆಪ್ಯಮ್' ಎಂದಿಷ್ಟೇ ಗ್ರಹಣಮಾಡಿದ್ದಾರೆ.

ಅಪಿಶಬ್ದವು ಮುಂದೆ ಹೇಳುವ ಪ್ರಮಾಣಗಳನ್ನು ಸಮುಚ್ಚಯಮಾಡುತ್ತದೆ ಎಂದು ಹೇಳಿದ್ದಾರೆ. ಅದನ್ನು ಈಗ 'ಸಕಲಜಗನ್ನಿಮಿತ್ತಕಾರಣತ್ವಾದಿಹೇತುಭಿರಪಿ' ಎಂದು ತೋರಿಸುತ್ತಿದ್ದಾರೆ. ಇಲ್ಲಿ ಆದಿ ಎಂಬ ಪದದಿಂದ ಜಗತ್ಪಾಲಕತ್ವ, ಜಗತ್ಸಂಹರ್ತೃತ್ವ, ಜಗನ್ನಿಯಂತೃತ್ವ ಮೊದಲಾದ ಹೇತುಗಳನ್ನು ಗ್ರಹಿಸಬೇಕು. ಭಾಗವತದಲ್ಲಿಯೂ ಹೇಳಿದ್ದಾರಷ್ಟೆ.

ಹಾಗೆ ಭಾಷ್ಯಕಾರರೂ ಆನಂದಮಯಾಧಿಕರಣದಲ್ಲಿ — "'ಜನ್ಮಾದ್ಯಸ್ಯೇತಿಸೂತ್ರೇಣ ಗುಣಸರ್ವಸ್ವ-ಸಿದ್ಧಯೇ । ಬ್ರಹ್ಮಣೋ ಲಕ್ಷಣಂ ಪ್ರೋಕ್ತಮ್" - ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಿಂದ ಬ್ರಹ್ಮನು ನಿಖಿಲಗುಣಪೂರ್ಣ ಎಂದು ಸಾಧಿಸಲು ಜನ್ಮಾದಿಕರ್ತೃತ್ವವು ಲಕ್ಷಣವಾಗಿ ಹೇಳಲ್ಪಟ್ಟಿದೆ. - ಎಂದಿದ್ದಾರೆ. ಜಗತ್ತಿಗೆ ಜನ್ಮ, ಸ್ಥಿತಿ, ಲಯ ಮುಂತಾದವುಗಳನ್ನುಂಟು ಮಾಡುವ ವ್ಯಕ್ತಿಗೆ ದೋಷಗಳು ಸಂಭವಿಸುವುದಿಲ್ಲವಷ್ಟೇ ಎಂದಿದರ ಭಾವ. ಇನ್ನು "ಉಕ್ತಲಕ್ಷಣಃ ನಾರಾಯಣಃ ಪ್ರತ್ಯೇತವ್ಯಃ" ಎಂದು ಸುಧಾದಲ್ಲಿ ಬಂದ ಉಕ್ತಲಕ್ಷಣಃ ಎಂಬ ಪದವು 'ದೋಷಾಭಾವವಿಶಿಷ್ಟನಾದವನು' ಎಂಬ ಅರ್ಥವನ್ನು ತಿಳಿಸುತ್ತದೆ. ಜಗತ್ಕರ್ತೃತ್ವಾದಿ ಹೇತುಗಳಿಂದ ಗುಣಪರಿಪೂರ್ಣತ್ವಸಿದ್ಧವಾದಂತೆ ನಿರ್ದೋಷತ್ವವೂ ಸಿದ್ಧಿಸುವುದು ಆದ್ದರಿಂದ ಎಂದು ತಿಳಿಯಬೇಕು.

## ಭೇದದೃಷ್ಟ್ಯಾಭಿಮಾನೇನ

ಭೇದದೃಷ್ಟ್ಯಾಭಿಮಾನೇನ ನಿಃಸಂಗೇನಾಪಿ ಕರ್ಮಣಾ ।
ಕರ್ತೃತ್ವಾತ್ ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಂ ॥ (ಭಾಗ.3-32-13) (3-33-12)

— ಪಂಚಭೇದಜ್ಞಾನ, ಸ್ವಯೋಗ್ಯಪೂರ್ಣತತ್ವಜ್ಞಾನ, ಕರ್ಮ ಜ್ಞಾನೋತ್ತರ ನಿಷ್ಕಾಮಕರ್ಮ ಇವುಗಳಿಂದ ಪುರುಷೋತ್ತಮ ಪರಬ್ರಹ್ಮನಾದ ನಾರಾಯಣನ ಉದರವನ್ನು ಪ್ರವೇಶಿಸುತ್ತಾನೆ. ಆ ನಾರಾಯಣನು ಜಗತ್ಕರ್ತೃವಾದ್ದರಿಂದ ಜ್ಞಾನಾದಿಗುಣಪರಿಪೂರ್ಣನಾಗಿದ್ದಾನೆ.

• ಭೇದದೃಷ್ಟ್ಯಾ = ಜೀವೇಶ್ವರಾದಿವಿಷಯಪಂಚವಿಧಭೇದಜ್ಞಾನೇನ, ಭೇದಜ್ಞಾನಸ್ಯ ಶುಕ್ತಿರಜತಜ್ಞಾನವತ್ ಹೇಯತ್ವೇನ ನ ತೇನ ಮುಕ್ತಿನಿಶ್ಚಯ ಇತ್ಯತ ಉಕ್ತಮ್ — ಅಭಿಮಾನೇನೇತಿ ॥ ಅಭಿಮಾನೇನ = ಪೂರ್ಣಜ್ಞಾನೇನ ಯಾವತಾ ಮುಕ್ತಿಃ ಸ್ಯಾತ್, ತಾವತಾ ಜ್ಞಾನೇನೇತ್ಯರ್ಥಃ । ನಿಃಸಂಗೇನ = ಫಲಾಭಿಸಂಧಿರಹಿತೇನ ಜ್ಞಾನೋತ್ತರಕಾಲೀನೇನ ಕರ್ಮಣಾಪಿ ಜಗತ್ಸೃಷ್ಟ್ಯಾದಿಕರ್ತೃತ್ವಾತ್ ಸಗುಣಂ = ಜ್ಞಾನೈಶ್ವರ್ಯಾದ್ಯನಂತಗುಣೋಪೇತಂ ನೇದಂ ಶಬಲಮಿತ್ಯಾಹ — ಬ್ರಹ್ಮೇತಿ ॥ "ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ" ಇತಿ ಶ್ರುತೇಃ, ಸ್ವತ ಏವ ಸರ್ವಗುಣಪೂರ್ಣಮಿತ್ಯರ್ಥಃ । ನಾಕಾಶವನ್ನೀರೂಪಮಿತ್ಯಾಹ — ಪುರುಷಮಿತಿ ॥ ಭಕ್ತಾನುಕಂಪಯಾ ಗೃಹೀತಪುರುಷಾಕಾರಮ್ । ಅನೇನ ಗುಣಾಶ್ಚೈಶ್ವರ್ಯಾದಯಃ ನ ತು ಸತ್ವಾದಯ ಇತಿ ಧ್ವನಯತಿ 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ' ಇತ್ಯಾದೇಃ । ಇತೋಽಪಿ ನ ಶಬಲಮಿತ್ಯಾಹ — ಪುರುಷರ್ಷಭಮಿತಿ ॥ ಕ್ಷರಾಕ್ಷರಪುರುಷಾತೀತತ್ವಾತ್ ಪುರುಷೋತ್ತಮಂ ಸಂಗತಃ = ಪ್ರವಿಷ್ಟೋ ಭವತಿ ಸಾಯುಜ್ಯಾದಿಲಕ್ಷಣಾಂ ಮುಕ್ತಿಮಾಪ್ನೋತೀತ್ಯರ್ಥಃ । (ಪದರತ್ನಾವಲೀ)

• ಭೇದದೃಷ್ಟ್ಯಾ = ಪಂಚವಿಧಭೇದದರ್ಶನೇನಾಭಿಮಾನೇನ ಸ್ವಯೋಗ್ಯಮುಕ್ತಿಸಾಧನಜ್ಞಾನೇನ ಸಗುಣಂ = ಜ್ಞಾನಾನಂದಾದಿಸರ್ವಗುಣಪೂರ್ಣಮ್ ಅತ ಏವ ಬ್ರಹ್ಮಶಬ್ದವಾಚ್ಯಮ್ । ತಸ್ಯ ಸರ್ವಗುಣಪೂರ್ಣತ್ವಂ ಕುತ ಇತ್ಯತ ಉಕ್ತಮ್ — ಕರ್ತೃತ್ವಾದಿತಿ ॥ ಜನ್ಮಾದಿಕರ್ತೃತ್ವಾದಿತ್ಯರ್ಥಃ । ಯಥೋಕ್ತಮ್ — "ಜನ್ಮಾದ್ಯಸ್ಯೇತಿಸೂತ್ರೇಣ ಗುಣಸರ್ವಸ್ವಸಿದ್ಧಯೇ । ಬ್ರಹ್ಮಣೋ ಲಕ್ಷಣಂ ಪ್ರೋಕ್ತಮ್" ಇತಿ । ಪುರುಷಂ = ವಾಸುದೇವಂ ಪುರುಷರ್ಷಭಂ = ಪರಮೇಶ್ವರಮ್ ॥ (ಪ್ರಕಾಶಿಕಾ)

— ಭೇದದೃಷ್ಟಿ ಎಂದರೆ ಈಶ್ವರನಿಗೂ, ಜೀವನಿಗೂ , ಜಡಕ್ಕೂ ಸೇರಿಸಿ ಇವುಗಳಲ್ಲಿರುವ ಐದು ವಿಧವಾದ ಭೇದಜ್ಞಾನ. ಈ ಭೇದಜ್ಞಾನವಿದ್ದವನಿಗೆ ಮುಕ್ತಿಯ ನಿಶ್ಚಯ ಹೇಗೆ? ಏಕೆಂದರೆ ಶುಕ್ತಿರಜತಜ್ಞಾನವೂ ಒಂದು ಜ್ಞಾನವೇ. ಅದರಿಂದ ಮುಕ್ತಿಯ ನಿಶ್ಚಯವಾಗುವುದಿಲ್ಲವಷ್ಟೇ. ಅದರಂತೆ ಇದೂ ಕೂಡ ಒಂದು ಜ್ಞಾನವೇ. ಇದಕ್ಕೆ ಉತ್ತರವಾಗಿ "ಅಭಿಮಾನೇನ" ಎಂದಿದ್ದಾರೆ. ಪೂರ್ಣವಾದ ಪಂಚಭೇದಾದಿಜ್ಞಾನವನ್ನು ತಿಳಿಯಬೇಕು. ಎಲ್ಲಿಯವರೆಗೂ ಮುಕ್ತಿಯಾಗುವುದೋ ಅಲ್ಲಿಯವರೆಗಿನ ಜ್ಞಾನ ಎಂದು ಗ್ರಹಿಸಬೇಕು. ಮುಕ್ತಿ ಸಿಗುವವರೆಗೂ ಬೇಕಾದ ಜ್ಞಾನ ಎಂದರ್ಥ.

ನಿಃಸಂಗೇನ ಎಂದರೆ ಫಲಾಪೇಕ್ಷೆ ಇಲ್ಲದೇ ಮಾಡುವ ಅಪರೋಕ್ಷಜ್ಞಾನಾನಂತರಕಾಲದಲ್ಲಿರುವ ಕರ್ಮದಿಂದಲೂ, ಜಗತ್ಸೃಷ್ಟ್ಯಾದಿಗಳಿಗೆ ಕರ್ತೃವಾದ್ದರಿಂದ ಬ್ರಹ್ಮನು ಜ್ಞಾನಐಶ್ವರ್ಯಾದಿ ಅನಂತಗುಣಗಳಿಂದ ಕೂಡಿದವನಾಗಿ ಸಗುಣನೇ ಆಗಿದ್ದಾನೆ ಹೊರತು ಶಬಲನಾಗಿಲ್ಲ. "ಬ್ರಹ್ಮ" ಎಂದು ಇದನ್ನು ತಿಳಿಸಿದ್ದಾರೆ. 'ಅಥ ಕಸ್ಮಾದುಚ್ಯತೇ ಬ್ರಹ್ಮ' ಎಂಬ ಶ್ರುತಿಯ ಬಲದಿಂದ ಭಗವಂತನು ಸ್ವತ ಏವ ಸರ್ವಗುಣಪರಿಪೂರ್ಣನಾಗಿದ್ದಾನೆ. ಹೊರತು ಆಕಾಶದಂತೆ ರೂಪ ಇಲ್ಲದವನಲ್ಲ - ಎಂದು ಹೇಳುತ್ತಾರೆ "ಪುರುಷಂ" ಎಂದು. ಭಕ್ತರ ಮೇಲಿನ ಅನುಕಂಪೆಯಿಂದ ಪುರುಷಾಕಾರವನ್ನು ಧರಿಸಿ ಬಂದಿದ್ದಾನೆ.

ಇನ್ನೊಂದು ಕಾರಣದಿಂದಲೂ ಶಬಲನಲ್ಲ ಎಂದು ತಿಳಿಸುತ್ತಾರೆ — ಪುರುಷರ್ಷಭಂ ಎಂದು. ಕ್ಷರಾಕ್ಷರಪುರುಷರನ್ನು ಮೀರಿಸಿದ್ದರಿಂದ ಪುರುಷೋತ್ತಮನನ್ನು ಕುರಿತು ಸಾಯುಜ್ಯರೂಪವಾದ ಮುಕ್ತಿಯನ್ನು ಪಡೆಯುತ್ತಾರೆ. ಅಂದರೆ ಅವನಲ್ಲಿ ಪ್ರವೇಶಿಸುತ್ತಾರೆ.

## ಲಕ್ಷಣಪ್ರಮಾಣ ಉಭಯಪರವಾದ ವ್ಯಾಖ್ಯಾನ

**(ವಾಕ್ಯಾರ್ಥಚಂದ್ರಿಕಾ) - ಲಕ್ಷಣೇನ ವ್ಯಾವೃತ್ತಸ್ವರೂಪಸ್ಯ ಬುದ್ಧ್ಯಾರೂಢತ್ವೇಽಪಿ, ಮಾನಾಧೀನತ್ವಾತ್ ಮೇಯಸಿದ್ಧಿಃ, ಲಕ್ಷಣೋಕ್ತಿಮಾತ್ರಪರತ್ವಾದಪಿ ಲಕ್ಷಣಪ್ರಮಾಣೋಭಯಪರತ್ವಸ್ಯ ಜ್ಯಾಯಸ್ತ್ವಾತ್, ಉಭಯಪರತಯಾ ಶ್ಲೋಕಂ ಯೋಜಯತಿ - ಅಥವೇತಿ ॥**

ಲಕ್ಷಣವನ್ನು ಹೇಳಿದಾಗ ನಾರಾಯಣನು ಬೇರೆ ವಸ್ತುಗಳಿಗಿಂತ ವ್ಯಾವೃತ್ತ ಎಂಬ ಜ್ಞಾನ ನಮಗೆ ಬರುವುದು. ಆದರೂ 'ಮಾನಾಧೀನಾ ಮೇಯಸಿದ್ಧಿಃ' - ಪ್ರಮೇಯಸಿದ್ಧಿಯು ಪ್ರಮಾಣದ ಅಧೀನ ಎನ್ನುವಂತೆ ಕೇವಲ ಲಕ್ಷಣವನ್ನು ಹೇಳುವುದಕ್ಕಿಂತಲೂ ಲಕ್ಷಣಪ್ರಮಾಣಗಳೆರಡನ್ನೂ ಹೇಳುವುದು ಶ್ರೇಷ್ಠವಾದ್ದರಿಂದ ಲಕ್ಷಣ-ಪ್ರಮಾಣ ಉಭಯಪರವಾಗಿ ಈ ಶ್ಲೋಕವನ್ನು ''ಅಥವಾ" ಎಂಬುದಾಗಿ ಯೋಜನೆ ಮಾಡಿದ್ದಾರೆ.

## ಯದ್ವಾ ನಾರಾಯಣಸ್ಯ ದೇಹಸದ್ಭಾವೇ ... ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा -** यद्वा, नारायणस्य देहसद्भावे दुःखादिदोषानुषङ्गः । तदभावे ज्ञानादिगुणाभावः । उभयथाऽपि जगज्जन्मादिकारणत्वासम्भव इत्याशङ्क्योक्तम् **निखिलपूर्णगुणैकदेहम्, निर्दोषमिति ।** देहवत्त्वाज्ज्ञानादिगुणपूर्णः, तस्यापि निखिलपूर्णगुणमात्रत्वेन दुःखादिदोषरहितश्चेति ।

ಯದ್ವಾ - ಅಥವಾ, ನಾರಾಯಣಸ್ಯ - ನಾರಾಯಣನಿಗೆ, ದೇಹಸದ್ಭಾವೇ - ದೇಹವಿದ್ದರೆ,

**ದುಃಖಾದಿದೋಷಾನುಷಂಗಃ** - ದುಖ, ಅಜ್ಞಾನ ಮೊದಲಾದ ದೋಷಗಳ ಸಂಬಂಧವು (ಬರುವುದು), **ತದಭಾವೇ** - ದೇಹವಿಲ್ಲವಾದರೆ, **ಜ್ಞಾನಾದಿಗುಣಾಭಾವಃ** - ಜ್ಞಾನ ಆನಂದ-ಮೊದಲಾದ ಗುಣಗಳು ಇರುವುದಿಲ್ಲ, **ಉಭಯಥಾಪಿ** - ಎರಡು ಪ್ರಕಾರದಿಂದಲೂ, **ಜಗಜ್ಜನ್ಮಾದಿ-ಕಾರಣತ್ವಾಸಂಭವಃ** - ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲ, **ಇತಿ** - ಎಂಬುದಾಗಿ, **ಆಶಂಕ್ಯ** - ಶಂಕಿಸಿ, **ಉಕ್ತಂ** - ಹೇಳಲ್ಪಟ್ಟಿದೆ, **"ನಿಖಿಲಪೂರ್ಣಗುಣೈಕದೇಹಂ, ನಿರ್ದೋಷಂ" ಇತಿ** - ನಿಖಿಲಪೂರ್ಣಗುಣೈಕದೇಹಂ ನಿರ್ದೋಷಂ ಎಂಬುದಾಗಿ. **ದೇಹವತ್ವಾತ್** = ದೇಹವಿರುವುದ-ರಿಂದ, **ಜ್ಞಾನಾದಿಗುಣಪೂರ್ಣಃ** - ಜ್ಞಾನಆನಂದ ಮೊದಲಾದಗುಣಗಳಿಂದ ಪೂರ್ಣನಾಗಿದ್ದಾನೆ. **ತಸ್ಯಾಪಿ** - ಆ ದೇಹವೂ ಕೂಡ, **ನಿಖಿಲಪೂರ್ಣಗುಣಮಾತ್ರತ್ವೇನ** - ಎಲ್ಲ ಪೂರ್ಣವಾದ ಗುಣಗಳೇ ಆದ್ದರಿಂದ, **ದುಃಖಾದಿದೋಷರಹಿತಶ್ಚ ಇತಿ** - ದುಃಖ ಮೊದಲಾದ ದೋಷಗಳಿಂದ ರಹಿತನೂ ಆಗಿದ್ದಾನೆ.

ಸಾರ — ನಾರಾಯಣನಿಗೆ ದೇಹವಿದ್ದರೆ ದುಃಖಾದಿದೋಷಗಳು ಬರಬೇಕು. ಏಕೆಂದರೆ ಲೋಕದಲ್ಲಿ 'ಯಾರಿಗೆ ದೇಹವಿದೆಯೋ ಅವನಿಗೆ ದುಃಖಾದಿದೋಷಗಳಿವೆ' ಎಂಬ ವ್ಯಾಪ್ತಿಯಿರುವುದರಿಂದ. ದೇಹವನ್ನೊಪ್ಪದಿದ್ದರೆ ಜ್ಞಾನಾದಿಗುಣಗಳು ಇರಬಾರದು ಎಂಬ ಪ್ರಸಂಗ. ಏಕೆಂದರೆ ದೇಹ-ವಿದ್ದವನಿಗೆ ಇಂದ್ರಿಯಾದಿಗಳು ಅದರಿಂದ ಬರುವ ಜ್ಞಾನಾದಿಗಳು ಇರಲು ಸಾಧ್ಯ. ಹೀಗೆ ದೇಹ ಇದೆ, ದೇಹ ಇಲ್ಲ ಎಂಬ ಎರಡೂ ಪಕ್ಷಗಳಲ್ಲಿಯೂ ನಾರಾಯಣನು ಜಗಜ್ಜನ್ಮಾದಿಗಳಿಗೆ ಕಾರಣ-ನಾಗಲು ಸಾಧ್ಯವಿಲ್ಲ ಎಂಬ ಶಂಕೆ ಬರುತ್ತದೆ. ಇದಕ್ಕೆ ಉತ್ತರ — ಭಗವಂತನಿಗೆ ದೇಹವಿದೆ. ಆದ್ದರಿಂದ ಜ್ಞಾನಾದಿಗುಣಗಳಿವೆ ಎಂದಾಯಿತು. ಇನ್ನು ಆ ದೇಹವು ನಿಖಿಲಪೂರ್ಣಗುಣಾತ್ಮಕ-ವಾದ್ದರಿಂದ ದೋಷವು ಇಲ್ಲ ಎಂದು ತಿಳಿಯಬೇಕು.

### ಲಕ್ಷಣಪ್ರದರ್ಶಕ ಹಾಗೂ ಅನುಪಪತ್ತಿನಿರಾಸಕವಿಶೇಷಣಗಳು

**कम्वा** — यद्वेति ।। **अस्मिन् पक्षे 'अस्योद्भवादिदम्' इत्यादिकं नारायणस्य लक्षणप्रदर्शनपरम् । 'निखिले'त्यादिकं तु जगज्जन्मादिकारणत्वरूपलक्षणस्या-सम्भवरूपानुपपत्तिनिरासकमिति द्रष्टव्यम् ।**

ಯದ್ವಾ ಇತಿ ॥ ಈ ಪಕ್ಷದಲ್ಲಿ ಅಸ್ಯೋದ್ಭವಾದಿದಂ ಮುಂತಾದವುಗಳು ನಾರಾಯಣನ ಲಕ್ಷಣವನ್ನು ತೋರಿಸುತ್ತಿವೆ. ನಿಖಿಲಪೂರ್ಣ ... ಮುಂತಾದವುಗಳು ನಾರಾಯಣನಲ್ಲಿ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣಕ್ಕೆ ಅಸಂಭವ ಎಂಬ ಶಂಕೆಯನ್ನು ನಿರಾಸಮಾಡುವುದಕ್ಕಾಗಿ ಇದೆ - ಎಂದು ತಿಳಿಯಬೇಕು.

**ಅರ್ಥವಿಶೇಷಲಾಭಕ್ಕಾಗಿ ಪಕ್ಷಾಂತರಕಥನ**

**(ವಾಕ್ಯಾರ್ಥಚಂದ್ರಿಕಾ)– ಸಾಧಕವತ್ ಬಾಧಕಪರಿಹಾರಸ್ಯಾಪಿ ಆವಶ್ಯಕತ್ವೇನ ಲಕ್ಷಣ–ಪ್ರಮಾಣೋಕ್ತಿಮಾತ್ರಪರತ್ವಾದಪಿ ವಿಶೇಷಣದ್ವಯಸ್ಯ ಬಾಧಕಪರಿಹಾರಾರ್ಥತ್ವಾಭ್ಯುಪಗಮೇಽರ್ಥ–ವಿಶೇಷಲಾಭಂ ಮನ್ವಾನಃ ಪಕ್ಷಾಂತರಮಾಹ – ಯದ್ವೇತಿ ॥**

ಸಾಧಕಪ್ರಮಾಣಗಳನ್ನು ಹೇಳುವಂತೆ ಬಾಧಕವನ್ನು ಪರಿಹಾರಮಾಡುವುದು ಮುಖ್ಯವಾದ್ದರಿಂದ ಕೇವಲ ಲಕ್ಷಣಪ್ರಮಾಣಗಳನ್ನು ಹೇಳುವುದಕ್ಕಿಂತಲೂ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಎಂದು ಹೇಳಲ್ಪಡುವ ಎರಡು ವಿಶೇಷಣಗಳು ಬಾಧಕಪರಿಹಾರಕ್ಕೋಸ್ಕರ ಇವೆ ಎಂದು ಒಪ್ಪಿದಾಗ ವಿಶೇಷವಾದ ಅರ್ಥಲಾಭವಿದೆ ಎಂಬ ದೃಷ್ಟಿಯಿಂದ ಇನ್ನೊಂದು ಪಕ್ಷವನ್ನು ತಿಳಿಸುತ್ತಿದ್ದಾರೆ – 'ಯದ್ವಾ ನಾರಾಯಣಸ್ಯ ದೇಹಸದ್ಭಾವೇ' ಎಂದು.

**ಅಥವಾ ನಾಯಂ ನಾರಾಯಣಶಬ್ದಃ ... ಪ್ರತಿಪದಾರ್ಥ ಹಾಗೂ ಸಾರ**

**श्रीमन्न्यायसुधा –** अथवा, नायं नारायणशब्दो डित्थादिशब्द इव भगवति साङ्केतिकः, घटादिशब्द इव वा रूढिमात्रप्रवृत्तः, किन्तु विशिष्टगुणानप्याचष्ट इति ज्ञापयन् तदर्थमनेन कथयति। एतदपि स्तुत्यर्थमित्यवगन्तव्यम्।

ಅಥವಾ - ಅಥವಾ, ಅಯಂ - ಈ ನಾರಾಯಣಶಬ್ದಃ - ನಾರಾಯಣ ಎಂಬ ಶಬ್ದವು, ಡಿತ್ಥಾದಿಶಬ್ದ ಇವ - ಡಿತ್ಥ ಡವಿತ್ಥ ಮೊದಲಾದ ಶಬ್ದಗಳಂತೆ, ಭಗವತಿ - ಭಗವಂತನಲ್ಲಿ, ಸಾಂಕೇತಿಕಃ - ವ್ಯಕ್ತಿಯ ಇಚ್ಛೆಯಿಂದ ಸಂಕೇತಿತವಾದದ್ದು, ವಾ - ಅಥವಾ, ಘಟಾದಿಶಬ್ದ ಇವ - ಘಟ ಮುಂತಾದ ಶಬ್ದದಂತೆ, ರೂಢಿಮಾತ್ರಪ್ರವೃತ್ತಃ - ಕೇವಲ ರೂಢಿಯಿಂದ ಹೊರಟದ್ದು, ನ - ಅಲ್ಲ. ಕಿಂತು - ಹೊರತಾಗಿ, ವಿಶಿಷ್ಟಗುಣಾನಪಿ - ಭಗವಂತನ ಅಸಾಧಾರಣವಾದ ಗುಣಗಳನ್ನೂ, ಆಚಷ್ಟೇ - ಹೇಳುತ್ತಿದೆ, ಇತಿ - ಎಂಬುದಾಗಿ, ಜ್ಞಾಪಯನ್ - ತಿಳಿಸುತ್ತಾ, ತದರ್ಥಂ - ಆ ವಿಶೇಷಣಗಳ ಅರ್ಥವನ್ನು, ಅನೇನ - ಈ ಮೊದಲನೆಯ ಪದ್ಯದಿಂದ, ಕಥಯತಿ - ಹೇಳುತ್ತಾರೆ. ಏತದಪಿ - ಈ ವ್ಯಾಖ್ಯಾನವು ಕೂಡ, ಸ್ತುತ್ಯರ್ಥಮಿತಿ - ಸ್ತೋತ್ರಮಾಡುವುದಕ್ಕೋಸ್ಕರ ಎಂಬುದಾಗಿ, ಅವಗಂತವ್ಯಂ - ತಿಳಿಯಲ್ಪಡಬೇಕು.

ಸಾರ – ನಾರಾಯಣಶಬ್ದವು ಡಿತ್ಥ ಮೊದಲಾದ ಶಬ್ದಗಳಂತೆ ಸಾಂಕೇತಿಕವಲ್ಲ. ಅಥವಾ ಘಟಾದಿ ಶಬ್ದಗಳಂತೆ ರೂಢವೂ ಅಲ್ಲ. ಹೊರತು ವಿಶಿಷ್ಟವಾದ ಗುಣಗಳನ್ನು ಹೇಳುವ ಶಬ್ದವಾಗಿದೆ

ಎಂಬುದನ್ನು ಈ ವಿಶೇಷಣಗಳೆಲ್ಲವೂ ತಿಳಿಸುತ್ತಿವೆ. ಅನೇಕರೀತಿಯಾದ ನಾರಾಯಣಶಬ್ದಾರ್ಥ-ಕಥನವು ನಾರಾಯಣನ ಸ್ತುತಿರೂಪವಾಗಿದೆ ಎಂದು ತಿಳಿಯಬೇಕು.

## ಏತದಪಿ ಎಂದರೇನು?

**कम्बा – एतदपीति ॥ नारायणशब्दस्य विशिष्टगुणरूपार्थकथनमपीत्यर्थः ।**

**ಏತದಪಿ ಇತಿ ॥** ನಾರಾಯಣ ಎಂಬ ಶಬ್ದಕ್ಕೆ ವಿಶಿಷ್ಟಗುಣಗಳೆಂಬ ಅರ್ಥವನ್ನು ಹೇಳುವುದು ಎಂಬುವುದಾದರೂ - ಎಂದರ್ಥ.

## ಸಾಂಕೇತಿಕವೆಂದರೇನು? ವಿಶಿಷ್ಟಗುಣಗಳೆಂದರೇನು? ಸ್ತುತ್ಯರ್ಥವು ಉಪಲಕ್ಷಣ

(ಪರಿಮಳ)- **ಸಾಂಕೇತಿಕ ಇತಿ ॥** 'ಅಸ್ಮಾತ್ ಶಬ್ದಾತ್ ಅಯಮರ್ಥೋ ಬೋದ್ಧವ್ಯಃ ಇತೀಚ್ಛಯಾ ನಿಯಮಿತಃ' ಇತ್ಯರ್ಥಃ । ವಿಶಿಷ್ಟಗುಣಾನಪೀತಿ ॥ ನ ಕೇವಲಂ ರೂಢಃ ಕಿಂತು ನಿಖಿಲಪೂರ್ಣಗುಣತ್ವನಿರ್ದೋಷತ್ವಾದೀನ್ ಇತರಾಸಾಧಾರಣಾನ್ ಗುಣಾನಪಿ ಆಚಷ್ಟ ಇತ್ಯರ್ಥಃ । ತದರ್ಥಂ ನಾರಾಯಣಶಬ್ದಾರ್ಥಮ್ । ಅನೇನ = ಶ್ಲೋಕೇನ ಇತ್ಯರ್ಥಃ । ಸ್ತುತ್ಯರ್ಥಮಿತ್ಯುಪಲಕ್ಷಣಂ ಬ್ರಹ್ಮಶಬ್ದಸಮಾನಾರ್ಥತ್ವಸೂಚನಾರ್ಥಂ ಚ ಇತ್ಯಪಿ ಧ್ಯೇಯಮ್ । 'ನಿಖಿಲ' ಇತ್ಯನೇನೈವ ಬ್ರಹ್ಮಪದಸಮಾನಾರ್ಥತ್ವಲಾಭಾತ್ ಇತರನಿರುಕ್ತಿಸಾರ್ಥಕ್ಯಾಯ 'ಸ್ತುತ್ಯರ್ಥಮ್' ಇತ್ಯೇವೋಕ್ತಮ್ ।

ಸಾಂಕೇತಿಕಶಬ್ದಗಳೆಂದರೆ ಈ ಶಬ್ದದಿಂದ ಈ ಅರ್ಥವನ್ನು ತಿಳಿಯಬೇಕು ಎಂಬ ರೀತಿಯ ಇಚ್ಛೆ-ಯಿಂದ ನಿಯಮಿಸಲ್ಪಟ್ಟಿದ್ದು. ವಿಶಿಷ್ಟಗುಣಾನಪಿ ॥ ಕೇವಲ ರೂಢಶಬ್ದವಾಗದೇ ನಾರಾಯಣ-ಶಬ್ದವು ಇತರರಲ್ಲಿ ಇಲ್ಲದೇ ಇರುವ ಅಸಾಧಾರಣಗುಣಗಳನ್ನು ಅಂದರೆ ನಿಖಿಲಪೂರ್ಣಗುಣತ್ವ, ನಿರ್ದೋಷತ್ವ ಮೊದಲಾದವುಗಳನ್ನು ತಿಳಿಸುತ್ತಿದೆ. ಆ ನಾರಾಯಣಶಬ್ದಾರ್ಥವನ್ನು ತಿಳಿಸಲೆಂದೇ ನಿಖಿಲಪೂರ್ಣಗುಣೈಕದೇಹಂ ಮುಂತಾದ ವಿಶೇಷಣಗಳಿವೆ. ಹಾಗಾಗಿ ಈ ಶ್ಲೋಕ ಹೊರಟಿದೆ.

ಇನ್ನು ಇಲ್ಲಿ ಅನೇಕ ವಿಶೇಷಣಗಳನ್ನು ಹೇಳಿದ್ದು ನಾರಾಯಣನ ಸ್ತುತಿಗೋಸ್ಕರ ಎಂದು ತಿಳಿಯಬೇಕು. ಇದರ ಜೊತೆಗೆ ಈ ಎಲ್ಲ ವಿಶೇಷಣಗಳ ಕಥನವು ಬ್ರಹ್ಮಶಬ್ದಸಮಾನಾರ್ಥಕವಾಗಿದೆ ನಾರಾ-ಯಣಶಬ್ದ ಎಂದು ತಿಳಿಸಲೂ ಎಂದು ತಿಳಿಯಬೇಕು. ಬ್ರಹ್ಮಶಬ್ದಸಮಾನಾರ್ಥಕವಾಗಿದೆ ನಾರಾ-ಯಣಶಬ್ದವು ಎಂಬ ಅಂಶವು ನಿಖಿಲಪೂರ್ಣಗುಣೈಕದೇಹಂ ಎಂಬ ಒಂದು ವಿಶೇಷಣದಿಂದಲೇ ತಿಳಿಯುವುದು.

ಇತರ ವಿಶೇಷಣಗಳು ಏಕೆ ಎಂದರೆ ಸ್ತುತಿಗೋಸ್ಕರ ಎಂದೇ ತಿಳಿಯಬೇಕು.

## ಪ್ರಕೃತ್ಯರ್ಥಕಥನಪರವಾದ ವ್ಯಾಖ್ಯಾನ

(ವಾಕ್ಯಾರ್ಥಚಂದ್ರಿಕಾ)- ಏವಂ ಪ್ರಕೃತ್ಯರ್ಥನಾರಾಯಣಸ್ವರೂಪನಿರ್ಧಾರಣಹೇತುಲಕ್ಷಣಾದಿ- ಪರತಯಾ ವಿಶೇಷಣಾನಿ ವ್ಯಾಖ್ಯಾಯ ಪ್ರಕೃತ್ಯರ್ಥಕಥನಪರತಯಾಽಪಿ ತಾನಿ ವ್ಯಾಚಷ್ಟೇ - **ಅಥವೇತಿ** ॥ ಅರ್ಥಗತಪ್ರವೃತ್ತಿನಿಮಿತ್ತಮನಪೇಕ್ಷ್ಯ ವಕ್ತ್ರಭಿಪ್ರಾಯೇಣ ಅರ್ಥಪ್ರತ್ಯಾಯಕತ್ವಂ ಸಾಂಕೇತಿತತ್ವಮ್; ಅಖಂಡಶಕ್ತೀ ರೂಢಿಃ ।

ಈ ಹಿಂದೆ ಈ ಶ್ಲೋಕವನ್ನು ನಾರಾಯಣಪದದ ಪ್ರಕೃತ್ಯರ್ಥವಾದ ನಾರಾಯಣನ ಸ್ವರೂಪವನ್ನು ನಿರ್ಧರಿಸುವ ಲಕ್ಷಣಪರವಾಗಿ ವಿಶೇಷಣಗಳಿವೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಇದೀಗ ಆ ನಾರಾಯಣ ಶಬ್ದದ ಅರ್ಥವನ್ನು ವಿವರಿಸಲು ಈ ವಿಶೇಷಣಗಳಿವೆ ಎಂದು "ಅಥವಾ" ಎಂಬ ಈ ಸುಧಾ ಭಾಗದಿಂದ ತಿಳಿಸುತ್ತಿದ್ದಾರೆ.

ಸಾಂಕೇತಿಕಶಬ್ದಗಳೆಂದರೆ ಅರ್ಥದಲ್ಲಿರುವ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸದೇ ಹೇಳುವವನ ಅಭಿಪ್ರಾಯಕ್ಕೆ ಅನುಗುಣವಾಗಿ ಅರ್ಥವನ್ನು ತಿಳಿಸಿಕೊಟ್ಟರೆ ಆ ಶಬ್ದಗಳನ್ನು ಸಾಂಕೇತಿಕ ಎನ್ನುವರು. ರೂಢಿ ಎಂದರೆ ಅಖಂಡಶಕ್ತಿ ಎಂದರ್ಥ.

## ನಾರಾಯಣಶಬ್ದಾರ್ಥಕಥನರೂಪವಾದ್ದರಿಂದ ವಿಶೇಷಣಗಳಿಗೆ ವೈಯರ್ಥ್ಯವಿಲ್ಲ

(ಆನಂದ) - ನನು ತಥಾಪಿ ಮಹಾಯೋಗವಿದ್ವದ್‌ರೂಢಿಭ್ಯಾಂ ನಾರಾಯಣಶಬ್ದಸ್ಯ ವಿಷ್ಣುಪರತ್ವೇನ ತೇನೈವೋಕ್ತಸ್ಯ ಸರ್ವಸ್ಯಾಪ್ಯರ್ಥಸ್ಯ ವಕ್ತುಂ ಶಕ್ಯತ್ವಾತ್ ಏತೇಷಾಂ ವಿಶೇಷಣಾನಾಂ ವೈಯರ್ಥ್ಯಮ್ ಇತ್ಯತಃ, ನಾರಾಯಣಶಬ್ದಾರ್ಥಕಥನರೂಪತ್ವಾತ್ ನ ಏತೇಷಾಂ ವಿಶೇಷಣಾ- ನಾಮ್ ವೈಯರ್ಥ್ಯಮಿತ್ಯಾಹ - **ಅಥವೇತಿ** ॥ ಏಕಸ್ಯ ಪಿತ್ರಾದೇರೇವ ಯತ್ರ ಪುತ್ರಾದಿರೂಪೇ ವಸ್ತುನಿ ಯಚ್ಛಬ್ದಪ್ರಯೋಗೇ ಸ್ವಾತಂತ್ರ್ಯಂ ತತ್ರ ತಚ್ಛಬ್ದಪ್ರಯೋಗಃ ಸಂಕೇತಃ, ಯತ್ರ ವಸ್ತುನಿ ಯಚ್ಛಬ್ದಪ್ರಯೋಗೇ ಕಸ್ಯಾಪಿ ಸ್ವಾತಂತ್ರ್ಯಾಭಾವಃ ಸಾರ್ವಜನೀನಪ್ರಸಿದ್ಧಿರಿತಿ ಯಾವತ್ । ಸೈವ ರೂಢಿರಿತ್ಯನಯೋರ್ಭೇದ ಇತಿ ದ್ರಷ್ಟವ್ಯಮ್ ।

ನಾರಾಯಣಶಬ್ದವು ಮಹಾಯೋಗವೃತ್ತ್ಯಾ ಹಾಗೂ ರೂಢ್ಯಾ ವಿಷ್ಣುಪರವಾಗಿರುವುದರಿಂದ ಆ ಒಂದು ಶಬ್ದದಿಂದಲೇ ಎಲ್ಲ ವಿಶೇಷಣಗಳ ಅರ್ಥವನ್ನು ಹೇಳಲು ಬರುವುದರಿಂದ ಅವುಗಳು ವ್ಯರ್ಥ ಎಂಬ ಪ್ರಶ್ನೆಗುತ್ತರವಾಗಿ ನಾರಾಯಣಶಬ್ದದ ಅರ್ಥವನ್ನು ಈ ಎಲ್ಲ ವಿಶೇಷಣಗಳಿರು- ವುದರಿಂದ ವ್ಯರ್ಥವಲ್ಲ ಎಂದು - "ಅಥವಾ" ಎಂಬ ಸುಧಾಭಾಗದಿಂದ ಉತ್ತರಿಸಿದ್ದಾರೆ.

ಸಂಕೇತಕ್ಕೂ ರೂಢಿಗೂ ಇರುವ ವ್ಯತ್ಯಾಸವನ್ನು ಹೀಗೆ ತಿಳಿಯಬೇಕು. ಸಂಕೇತ ಎಂದರೆ ಒಬ್ಬ ತಂದೆಗೆ ಅಥವಾ ತಾಯಿಗೆ ಮಗ ಮಗಳು ಮುಂತಾದ ವಸ್ತುವಿನಲ್ಲಿ ಯಾವ ಶಬ್ದವನ್ನು ಪ್ರಯೋಗ

ಮಾಡಲು ಸ್ವಾತಂತ್ರ್ಯವಿದೆಯೋ ಅಂತಹ ವಸ್ತುಗಳಲ್ಲಿ ಮಾಡುವ ಶಬ್ದಪ್ರಯೋಗವೇ ಆಗಿದೆ. ರೂಢಿ ಎಂದರೆ ಯಾವ ವಸ್ತುವಿನಲ್ಲಿ ಯಾವಶಬ್ದವನ್ನು ಪ್ರಯೋಗಿಸಲು ಯಾರಿಗೂ ಸ್ವಾತಂತ್ರ್ಯವಿಲ್ಲವೋ ಅರ್ಥಾತ್ ಸಾರ್ವಜನೀನ ಪ್ರಸಿದ್ಧಿಯು ಇದೆಯೋ ಅಂತಹದ್ದು. ಎಲ್ಲರೂ ಆ ಶಬ್ದದಿಂದ ಆ ವ್ಯಕ್ತಿಯನ್ನು ವ್ಯವಹರಿಸುತ್ತಿರಬೇಕು. ಆದರೆ ಅವರಿಗೆ ಆ ಶಬ್ದಪ್ರಯೋಗ ವಿಷಯದಲ್ಲಿ ಸ್ವಾತಂತ್ರ್ಯವಿರುವುದಿಲ್ಲ.

### ತಥಾ ಹಿ ಅರಾ ದೋಷಾಃ - ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा–** तथाहि अरा = दोषाः, तद्विरुद्धत्वाद् गुणा = नाराः, तदयनत्वान्नारायणः । अराणामयनं न भवतीति वा । उपकारित्वादिना नराणामिमे नारा = वेदादयः, प्रतिपाद्यतया तदयनत्वाद् वा । नराणामिदं नारम् = उद्भवादि, दातृतया तस्यायनत्वाद् वा । नरसमूहो = नारम्, वन्द्यतया तदयनत्वाद् वा । नराणामधिपतिर्नारः = मुख्यवायुः, परमप्रेमास्पदतया तस्या- यनत्वाद् वेति यथाक्रममवगन्तव्यम् ।

ತಥಾಹಿ - ಅದು ಹೀಗೆ, (1) ಅರಾಃ - ಅರಾ ಎಂದರೆ, ದೋಷಾಃ - ದೋಷಗಳು, ತದ್ವಿರುದ್ಧತ್ವಾತ್ - ದೋಷವಿರುದ್ಧವಾದ್ದರಿಂದ, ಗುಣಾಃ - ಗುಣಗಳು, (ಇವುಗಳು) ನಾರಾಃ - ನಾರ ಎನಿಸುತ್ತವೆ. ತದಯನತ್ವಾತ್ - ನಾರಗಳಿಗೆ ಆಶ್ರಯನಾದ್ದರಿಂದ, ನಾರಾಯಣಃ - ನಾರಾಯಣ ಎಂದೆನಿಸುವನು. (2) ವಾ - ಅಥವಾ, ಅರಾಣಾಂ - ದೋಷಗಳಿಗೆ, ಅಯನಂ - ಆಶ್ರಯನು, ನ ಭವತಿ - ಆಗುವುದಿಲ್ಲ, ಇತಿ - ಎಂಬ ಕಾರಣದಿಂದ ನಾರಾಯಣನೆನಿಸುವನು. (3) ವಾ - ಅಥವಾ, ಉಪಕಾರಿತ್ವಾದಿನಾ - ಉಪಕಾರ ಮಾಡುತ್ತವೆ ಎಂಬ ಕಾರಣದಿಂದ, ನರಾಣಾಂ - ಮನುಷ್ಯರಿಗೆ, ಇಮೇ - ಸಂಬಂಧಪಟ್ಟವುಗಳು, ನಾರಾಃ - ನಾರಾ ಎನಿಸುತ್ತವೆ, (ನಾರಾ ಎಂದರೆ) ವೇದಾದಯಃ - ವೇದ ಮುಂತಾದವುಗಳು, ಪ್ರತಿಪಾದ್ಯತಯಾ - ಪ್ರತಿಪಾದನೆ ಮಾಡುವ ಮುಖಾಂತರ, ತದಯನತ್ವಾತ್ - ವೇದಾದಿಗಳಿಗೆ ಆಶ್ರಯನಾದ್ದರಿಂದ ನಾರಾಯಣನೆನಿಸುವನು. (4) ವಾ - ಅಥವಾ, ನರಾಣಾಂ - ಮನುಷ್ಯರಿಗೆ ಸಂಬಂಧಿಸಿದ, ಇದಂ - ಇದು, ನಾರಂ - ನಾರ ಎನಿಸುವುದು. ಅಂದರೆ ಉದ್ಭವಾದಿ - ಉತ್ಪತ್ತಿ ಮೊದಲಾದವುಗಳು, ದಾತೃತಯಾ - ಕೊಡುವ ಮುಖಾಂತರ, ತಸ್ಯ - ಉದ್ಭವ ಮುಂತಾದವುಗಳಿಗೆ, ಅಯನತ್ವಾತ್ - ಆಶ್ರಯನಾದ್ದರಿಂದ ನಾರಾಯಣನೆನಿಸುವನು. (5) ವಾ - ಅಥವಾ ನರಸಮೂಹಃ - ಮನುಷ್ಯರ ಸಮುದಾಯವು, ನಾರಂ - ನಾರ ಎನಿಸುತ್ತದೆ.

ವಂದ್ಯತಯಾ - ನಮಸ್ಕರಿಸಲು ಯೋಗ್ಯನಾಗುವ ಮುಖಾಂತರ, ತದಯನತ್ವಾತ್ - ನರಸಮೂಹಕ್ಕೆ ಆಶ್ರಯನಾದ್ದರಿಂದ ನಾರಾಯಣನೆನಿಸುವನು. (6) ವಾ - ಅಥವಾ, ನರಾಣಾಂ - ಮನುಷ್ಯರಿಗೆ, ಅಧಿಪತಿಃ - ಸ್ವಾಮಿಯು, ನಾರಃ - ನಾರ ಎನಿಸುವನು, ಅಂದರೆ ಮುಖ್ಯವಾಯುಃ - ಮುಖ್ಯಪ್ರಾಣನು, ಪರಮಪ್ರೇಮಾಸ್ಪದತಯಾ - ಅತ್ಯಂತಪ್ರೀತಿಗೆ ವಿಷಯ ಆಗುವ ಮುಖಾಂತರ, ತಸ್ಯ - ಆ ಮುಖ್ಯಪ್ರಾಣನಿಗೆ, ಅಯನತ್ವಾತ್ - ಆಶ್ರಯನಾಗುವ್ರದರಿಂದ ನಾರಾಯಣನೆನಿಸುವನು. ಇತಿ - ಎಂಬುದಾಗಿ, ಯಥಾಕ್ರಮಂ - ಶ್ಲೋಕದಲ್ಲಿ ಹೇಳಿದ ಕ್ರಮಕ್ಕೆ ಅನುಗುಣವಾಗಿ, ಅವಗಂತವ್ಯಂ - ತಿಳಿಯಲ್ಪಡಬೇಕು.

### ನಾರಾಯಣಂ ಎಂಬುವುದರಿಂದ ಮಮ ಪ್ರಿಯತಮಂ ಎನ್ನುವುದರ ಲಾಭ

(ಪರಿಮಳ) — **ತಸ್ಯ ಅಯನತ್ವಾದ್ವಾ ಇತೀತಿ ॥** ಪರಮಪ್ರೇಮಾಸ್ಪದತಯಾ ವಾಯ್ವಯನಸೋಕ್ತ್ಯೈವ ವಾಯ್ವವತಾರತ್ವಾತ್ ಆಚಾರ್ಯಸ್ಯ 'ಮಮ ಪ್ರಿಯತಮಮ್' ಇತ್ಯೇತತ್ 'ನಾರಾಯಣಮ್' ಇತ್ಯನೇನ ಪ್ರಾಪ್ತಮೇವ ಇತಿ ಭಾವಃ ॥

ವಾಯುದೇವರಿಗೆ ಭಗವಂತನು ಅತ್ಯಂತಪ್ರೀತಿಗೆ ಆಸ್ಪದನಾಗಿದ್ದರಿಂದ ವಾಯುದೇವರಿಗೆ ಆಶ್ರಯನಾಗಿದ್ದಾನೆ. ಹೀಗೆ ಹೇಳಿದ್ದರಿಂದ ವಾಯುವಿನ ಅವತಾರರಾದ ಮಧ್ವಾಚಾರ್ಯರಿಗೆ 'ಮಮ ಪ್ರಿಯತಮಮ್' ಎನ್ನುವುದು ನಾರಾಯಣಶಬ್ದದಿಂದಲೇ ಪ್ರಾಪ್ತವಾಗಿದೆ ಎಂದು ಭಾವ.

### ಅಥವಾ ಶ್ರೋತೃಬುದ್ಧ್ಯನುಕೂಲಾಯ -- ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** — अथवा श्रोतृबुद्ध्यनुकूलनाय सकलशास्त्रार्थं सङ्क्षेपतोऽनेनाऽचष्टे। विदितसङ्क्षेपा हि प्रपञ्चं जिज्ञासवो भवन्ति।

तत्र सदा वन्द्यमिति प्रथमसूत्रार्थोक्तिः। मनोवृत्तेस्तत्प्रवणता हि वन्दनम्। जिज्ञासाऽपि तद्विशेष एव। तस्य जीवादिव्यावृत्तये यद् ब्रह्मेत्युक्तं तस्यार्थः निखिलेति। तदुपपादनाय द्वितीयसूत्रे लक्षणमभिहितम्। तदाह — **अस्येति**। तृतीयसूत्रेण तत्र शास्त्रं प्रमाणमभिधाय तस्याध्यायशेषेण तद्विषयतोपपादिता। तत्कथनम् आप्यतममिति।

ಅಥವಾ - ಅಥವಾ, ಶ್ರೋತೃಬುದ್ಧ್ಯನುಕೂಲನಾಯ - ಶಾಸ್ತ್ರ ಕೇಳುವವರ ಬುದ್ಧಿಯ ಅನು-ಕೂಲತೆಗೋಸ್ಕರ, ಸಕಲಶಾಸ್ತ್ರಾರ್ಥಂ - ಸಂಪೂರ್ಣ ಬ್ರಹ್ಮಸೂತ್ರಗಳ ಅರ್ಥವನ್ನು, ಸಂಕ್ಷೇಪತಃ -

ಸಂಕ್ಷೇಪವಾಗಿ, ಅನೇನ - ಈ ಪದ್ಯದಿಂದ, ಆಚಷ್ಟೇ - ಹೇಳುತ್ತಾರೆ. ವಿದಿತಸಂಕ್ಷೇಪಾಃ - ಸಂಕ್ಷೇಪ-ವಾಗಿ ತಿಳಿದಿರುವವರು, ಪ್ರಪಂಚಂ - ವಿಸ್ತಾರವಾಗಿ, ಜಿಜ್ಞಾಸವಃ - ತಿಳಿಯಬೇಕೆಂಬ ಇಚ್ಛೆಯುಳ್ಳ-ವರು, ಭವಂತಿ ಹಿ - ಆಗುವವರಷ್ಟೆ. ತತ್ರ - ಶ್ಲೋಕೋಕ್ತವಿಶೇಷಣಗಳಲ್ಲಿ, "ಸದಾ ವಂದ್ಯಂ" ಇತಿ - ಸದಾ ವಂದ್ಯಂ ಎಂಬುವುದು, ಪ್ರಥಮ- ಸೂತ್ರಾರ್ಥೋಕ್ತಿಃ - ಮೊದಲನೆಯ ಬ್ರಹ್ಮಸೂತ್ರದ ಅರ್ಥವನ್ನು ತಿಳಿಸುವ ಮಾತು. ಮನೋವೃತ್ತೇಃ - ಮನಸ್ಸಿನ ಒಂದು ರೀತಿಯಾದ ವ್ಯಾಪಾರದ, ತತ್ಪ್ರವಣತಾ - ಭಗವಂತನಲ್ಲಿ ಲೀನತೆಯು, ವಂದನಂ ಹಿ - ವಂದನ ಎನ್ನಿಸುವುದಷ್ಟೆ. ಜಿಜ್ಞಾಸಾಪಿ - ಜಿಜ್ಞಾಸೆಯೂ ಕೂಡ, ತದ್ವಿಶೇಷ ಏವ - ಒಂದು ರೀತಿಯಾದ ಮನೋವ್ಯಾಪಾರದ ಪ್ರಭೇದವೇ. ತಸ್ಯ - ಜಿಜ್ಞಾಸೆ ವಿಷಯನಾದವನು, ಜೀವಾದಿವ್ಯಾವೃತ್ತಯೇ - ಜೀವ ಮೊದಲಾದವರಿಂದ ಬೇರ್ಪಡುವುದಕ್ಕೋಸ್ಕರ, ಯತ್ - ಬ್ರಹ್ಮೇತ್ಯುಕ್ತಮ್ - ಯಾವ ಬ್ರಹ್ಮ ಎಂಬ ಪದವು ಹೇಳಲ್ಪಟ್ಟಿ-ದೆಯೋ, ತಸ್ಯ - ಆ ಪದದ, ಅರ್ಥಃ - ಅರ್ಥವು, ನಿಖಿಲ ಇತಿ - ನಿಖಿಲಪೂರ್ಣಗುಣೈಕದೇಹಂ ಎಂದು. ತದುಪಪಾದನಾಯ - ಜಿಜ್ಞಾಸ್ಯನು ಬ್ರಹ್ಮನೆಂದು ಉಪಪಾದನೆ ಮಾಡಲು, ದ್ವಿತೀಯ-ಸೂತ್ರೇ - ಎರಡನೆಯ ಬ್ರಹ್ಮಸೂತ್ರದಲ್ಲಿ, ಲಕ್ಷಣಂ - ಲಕ್ಷಣವು, ಅಭಿಹಿತಮ್ - ಹೇಳಲ್ಪಟ್ಟಿದೆ. ತತ್ - ಆ ಲಕ್ಷಣವನ್ನು, ಆಹ - ಹೇಳಿದ್ದಾರೆ, "ಅಸ್ಯ" ಇತಿ - ಅಸ್ಯೋದ್ಭವಾದಿದಂ ಎಂಬುದಾಗಿ.

ತೃತೀಯಸೂತ್ರೇಣ - ಮೂರನೆಯ ಬ್ರಹ್ಮಸೂತ್ರದಿಂದ, ತತ್ರ - ಬ್ರಹ್ಮಶಬ್ದ ಅರ್ಥ ಗುಣ-ಪೂರ್ಣತ್ವ ಹಾಗೂ ತತ್ಸಮರ್ಥಕವಾದ ಜಗಜ್ಜನ್ಮಾದಿಕಾರಣತ್ವ ಇವುಗಳ ವಿಷಯದಲ್ಲಿ, ಶಾಸ್ತ್ರಂ - ಶಾಸ್ತ್ರವನ್ನು, ಪ್ರಮಾಣಂ - ಪ್ರಮಾಣವನ್ನಾಗಿ, ಅಭಿಧಾಯ - ಹೇಳಿ, ತಸ್ಯ - ಆ ಮೂರನೆಯ ಸೂತ್ರಕ್ಕೆ, ಅಧ್ಯಾಯಶೇಷೇಣ - ಇನ್ನು ಮಿಕ್ಕಿದ ಮೊದಲನೆಯ ಅಧ್ಯಾಯದೊಂದಿಗೆ, ತದ್ವಿಷಯತಾ ಉಪಪಾದಿತಾ - ಪರಬ್ರಹ್ಮವಿಷಯಕವೆಂದು ಉಪಪಾದನೆ ಮಾಡಲ್ಪಟ್ಟಿದೆ.

ತತ್ಕಥನಮ್ - ಈ ಅರ್ಥವನ್ನು ತಿಳಿಸುವ ಶಬ್ದವೇ, "ಅಪ್ಯತಮಮ್" ಇತಿ - ಆಪ್ಯತಮಂ ಎಂಬುವುದು.

ಸಾರ — ಅಥವಾ ಎಂದು ಇನ್ನೊಂದು ರೀತಿಯಲ್ಲಿ 'ನಾರಾಯಣಂ ನಿಖಿಲಪೂರ್ಣ..' ಎಂಬ ಅನುವ್ಯಾಖ್ಯಾನದ ಪದ್ಯಕ್ಕೆ ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ. ಈ ವ್ಯಾಖ್ಯಾನವು ಸಕಲ ಬ್ರಹ್ಮ-ಸೂತ್ರಾರ್ಥಸಂಕ್ಷೇಪರೂಪವಾಗಿದೆ. ಮೊದಲನೆಯ ಸೂತ್ರದ ಅರ್ಥವನ್ನು 'ಸದಾ ವಂದ್ಯಂ' ಎಂಬ ಭಾಗವು ತಿಳಿಸುತ್ತಿದೆ. 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಿದ ಲಕ್ಷಣವನ್ನು 'ಅಸ್ಯೋ-ದ್ಭವಾದಿದಂ' ಎಂಬ ಭಾಗವು ತಿಳಿಸುತ್ತಿದೆ. ಮೂರನೆಯ ಸೂತ್ರದಿಂದ ಬ್ರಹ್ಮನ ವಿಷಯದಲ್ಲಿ

ಶಾಸ್ತ್ರವನ್ನೇ ಪ್ರಮಾಣ ಎಂದು ತೋರಿಸಿ ನಂತರ ಇಡೀ ಪ್ರಥಮಾಧ್ಯಾಯದಿಂದ ಇಡೀ ಶಾಸ್ತ್ರಕ್ಕೆ ಆ ಸಕಲಗುಣಪರಿಪೂರ್ಣನಾದ ನಿರ್ದೋಷನಾದ ಭಗವಂತನೇ ವಿಷಯ ಎಂದು ತೋರಿಸಲ್ಪಟ್ಟಿದೆ. ಇದನ್ನು ಆಪ್ಯತಮಂ ಎಂಬ ಭಾಗದಿಂದ ಹೇಳಿದ್ದಾರೆ.

**ಮನೋವೃತ್ತೇಃ ತತ್ಪ್ರವಣತಾ ಹಿ ವಂದನಮ್; ಜಿಜ್ಞಾಸಾಪಿ ತದ್ವಿಶೇಷ ಏವ**

**कम्बा — तत्प्रवणतेति ॥ भक्त्यतिशयेन भगवद्विषयकतेत्यर्थः । तद्विशेष इति ॥ मनोवृत्तेस्तत्प्रवणताविशेष इत्यर्थः । तथाच वन्द्यमिति मनोवृत्तेर्भगवत्प्रावण्यरूप-वन्दनोक्त्या मनोवृत्तेस्तत्प्रवणताविशेषरूपा प्रथमसूत्रार्थभूतजिज्ञासाऽप्युक्ता भवतीति भावः । ब्रह्मेत्युक्तमिति ॥ 'सूत्रे' इति शेषः । तस्येति ॥ शास्त्रस्येत्यर्थः ।**

**ತತ್ಪ್ರವಣತಾ ಇತಿ** ॥ ಅತಿಶಯವಾದ ಭಕ್ತಿಯಿಂದ ಭಗವಂತನನ್ನು ವಿಷಯೀಕರಿಸುವುದೆಂದರ್ಥ. **ತದ್ವಿಶೇಷ ಇತಿ** ॥ ಜಿಜ್ಞಾಸೆಯಾದರೋ ಮನೋವೃತ್ತಿಯ ತತ್ಪ್ರವಣತಾ ಎಂಬ ಒಂದು ಅವಾಂತರ-ಪ್ರಭೇದವೆಂದರ್ಥ. ಹಾಗಾಗಿ 'ವಂದ್ಯಮ್' ಎಂಬುವುದರಿಂದ ಮನೋವೃತ್ತಿಯ ಭಗವದ್ವಿಷಯೀ-ಕರಣ ಎಂಬ ವಂದನೆಯನ್ನು ಹೇಳಿದ್ದರಿಂದ ಮನೋವೃತ್ತಿಯ ಭಗವದ್ವಿಷಯೀಕರಣ ಎಂಬ ಇನ್ನೊಂದು ಪ್ರಭೇದವಾದ ಮೊದಲನೆಯ ಸೂತ್ರಾರ್ಥವಾದ ಜಿಜ್ಞಾಸೆಯನ್ನು ಹೇಳಿದಂತಾಯಿತು ಎಂದು ಭಾವ. **ಬ್ರಹ್ಮೇತ್ಯುಕ್ತಮಿತಿ** ॥ "ಸೂತ್ರದಲ್ಲಿ" ಎಂದು ಶೇಷಪೂರಣೆ. **ತಸ್ಯ ಇತಿ** ॥ ಶಾಸ್ತ್ರಕ್ಕೆ ಎಂದು ಅರ್ಥ.

**ಎರಡು ಕಾರಣಕ್ಕೋಸ್ಕರ ಯೋಜನಾಂತರ ಕಥನ**

(ಪರಿಮಳ)- ನನು ಬುದ್ಧಿಚಾತುರ್ಯೇಣ ನಾನಾಪ್ರಕಾರೇಣ ನಾರಾಯಣಪದಸ್ಯ ನಿರ್ವಚನ-ಸಂಭವೇಽಪಿ ಏವಂರೂಪೇಣೈವ, ತತ್ರಾಪಿ ಏತಾವದ್ಭಿರೇವ ನಿರ್ವಚನೈಃ ನಾರಾಯಣಸ್ತುತೌ ನ ಪ್ರಬಲಹೇತುಂ ಪಶ್ಯಾಮಃ । ಶ್ರೋತೃಬುದ್ಧ್ಯಾನುಕೂಲ್ಯಾದಿಪ್ರಯೋಜಕಸ್ಯೈವ ಆದೌ ಅವಶ್ಯ-ವಕ್ತವ್ಯತ್ವಾತ್ ಇತ್ಯತೋ ವಾ 'ವ್ಯಾಖ್ಯಾಂ ಕರೋಮಿ' ಇತಿ ವಕ್ಷ್ಯಮಾಣವರ್ತಮಾನನಿರ್ದೇಶ-ಘಟನಾಯ ವಾ ಯೋಜನಾಂತರಮಾಹ - ಅಥವಾ ಇತಿ ॥

**ಪ್ರಪಂಚಂ ಜಿಜ್ಞಾಸವಃ ಎಂಬ ಪ್ರಯೋಗಸಮರ್ಥನೆ**

**ಪ್ರಪಂಚಂ ಜಿಜ್ಞಾಸವ ಇತಿ** ॥ 'ಸನಾಶಂಸಭಿಕ್ಷ ಉಃ' ಇತಿ ಉಪ್ರತ್ಯಯಾಂತಜಿಜ್ಞಾಸುಪದಪ್ರಯೋಗೇ 'ನ ಲೋಕಾವ್ಯಯನಿಷ್ಠಾಖಲರ್ಥತೃನಾಮ್' ಇತಿ ಷಷ್ಠೀನಿಷೇಧಾದ್ ದ್ವಿತೀಯೋಕ್ತಾ । ಪ್ರಪಂಚ-ವಿಷಯಕಜಿಜ್ಞಾಸಾವಂತೋ ಭವಂತೀತ್ಯರ್ಥಃ ।

ಅಲ್ಲ। ನಿಮ್ಮ ಬುದ್ಧಿಕೌಶಲದಿಂದ ಅನೇಕಪ್ರಕಾರವಾಗಿ ನಾರಾಯಣಪದಕ್ಕೆ ನಿರ್ವಚನ ಮಾಡಲು ಬಂದರೂ ಇದೇ ರೀತಿಯಿಂದ ಇಷ್ಟೇ ನಿರ್ವಚನಗಳಿಂದ ನಾರಾಯಣನನ್ನು ಸ್ತುತಿಸುವುದಕ್ಕೆ ಪ್ರಬಲವಾದ ಕಾರಣವೇನೂ ಕಾಣುತ್ತಿಲ್ಲ. ಅಥವಾ ಶ್ರೋತೃಬುದ್ಧಿಗೆ ಅನುಕೂಲವಾಗಿ ಇದ್ದದ್ದನ್ನೇ ಮೊದಲು ಹೇಳಬೇಕಾದ್ದರಿಂದ ಅಥವಾ 'ವ್ಯಾಖ್ಯಾಂ ಕರೋಮಿ' ಎಂದು ಮುಂದಿನ ಶ್ಲೋಕದಲ್ಲಿ ವರ್ತಮಾನ-ಕಾಲದಲ್ಲಿ ವ್ಯಾಖ್ಯಾನಮಾಡುತ್ತಿದ್ದೇನೆ ಎಂಬ ಅರ್ಥವನ್ನು ತಿಳಿಸುವ ಭಾಗವನ್ನು ಸಮರ್ಥಿಸಲು ಬೇರೆ ಯೋಜನೆಯನ್ನು ತೋರಿಸುತ್ತಿದ್ದಾರೆ – ಅಥವಾ ಎಂಬ ಭಾಗದಿಂದ.

ಪ್ರಪಂಚಂ ಜಿಜ್ಞಾಸವ ಇತಿ ॥ ಜಿಜ್ಞಾಸು ಎಂಬ ಪದದ ಯೋಗವಿದ್ದಾಗ ಪ್ರಪಂಚಸ್ಯ ಎಂದು ಷಷ್ಠೀ ವಿಭಕ್ತಿ ಏಕೆ ಬಂದಿಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಷಷ್ಠೀನಿಷೇಧವಿರುವುದರಿಂದ ಬಂದಿಲ್ಲ ಎಂದಿದ್ದಾರೆ ಪರಿಮಳಾಚಾರ್ಯರು. 'ಸನಾಶಂಸಭಿಕ್ಷ ಉಃ' (ಪಾ.ಸೂ.) ಎಂಬ ಸೂತ್ರದಿಂದ ಉಪ್ರತ್ಯಯಾಂತವಾಗಿದೆ ಜಿಜ್ಞಾಸುಶಬ್ದ ಇದರ ಸಂಬಂಧವಿದ್ದಾಗ 'ನ ಲೋಕಾವ್ಯಯನಿಷ್ಠಾ-ಖಲರ್ಥತೃನಾಮ್' (ಪಾ.ಸೂ.) ಎಂಬ ಸೂತ್ರದಿಂದ ಷಷ್ಠೀ ವಿಭಕ್ತಿಯು ಬರುವುದಿಲ್ಲ ಎಂದಿದ್ದಾರೆ. ಹಾಗಾಗಿ ಈ ವಾಕ್ಯದ ಅರ್ಥಪ್ರಪಂಚವನ್ನು ವಿಷಯೀಕರಿಸುವ ಜಿಜ್ಞಾಸೆ ಇರುವವರು ಆಗುವರು ಎಂದು.

* – सनिति सन्प्रत्ययान्तो गृह्यते न सनिर्धातुः, अनभिधानात् व्याप्तिन्यायाद् वा । सन्नन्तेभ्यो धातुभ्यः आशंसेर्भिक्षेश्च तच्छीलादिषु कर्तृषु उः प्रत्ययो भवति । चिकीर्षुः । जिहीर्षुः । आशंसुः । भिक्षुः । आङः शसि इच्छायाम् इत्यस्य ग्रहणं, न शंसेः स्तुत्यर्थस्य । (काशिका)

* – एषां प्रयोगे षष्ठी न स्यात् । लादेशाः - कुर्वन् कुर्वाणो वा सृष्टिं हरिः । उः - हरिं दिदृक्षुः, अलंकरिष्णुर्वा । उक - दैत्यान् घातुको हरिः ॥कमेरनिषेधः (वार्तिकम्) ॥ लक्ष्म्याः कामुको हरिः । अव्ययम् - जगत् सृष्ट्वा । सुखं कर्तुम् । निष्ठा - विष्णुना हता दैत्याः । दैत्यान् हतवान् विष्णुः । खलर्थः - ईषत्करः प्रपञ्चो हरिणा । तृन्निति प्रत्याहारः शतृशानचाविति तृशब्दादारभ्यातृनो नकारात् । शानन् - सोमं पवमानः । चानश् - आत्मानं मण्डयमानः । शतृ - वेदमधीयन् । तृन् - कर्ता लोकान् ॥ (सिद्धान्तकौमुदी)

## ತತ್ರ ಶಾಸ್ತ್ರಂ ಎಂಬುದರ ಅರ್ಥ

(ಪರಿಮಳ)– ತತ್ರ ಶಾಸ್ತ್ರಮಿತಿ ॥ ಬ್ರಹ್ಮಶಬ್ದಾರ್ಥರೂಪಗುಣಪೂರ್ಣತ್ವೇ ತದುಪಪಾದಕಜಗ-ಜ್ಜನ್ಮಾದಿಹೇತುತ್ವಲಕ್ಷಣೇ ಚ ಇತ್ಯರ್ಥಃ । ತೇನ ಭಾಷ್ಯೇ ಆದ್ಯದ್ವಿತೀಯಸೂತ್ರಾರ್ಥಯೋಃ ಮಧ್ಯೇ ತೃತೀಯಸೂತ್ರಾರ್ಥೋಕ್ತಿಃ । ಪೂರ್ವೋತ್ತರಯೋರನ್ವಯೇನ ದ್ವಯೋರಪಿ ಶಾಸ್ತ್ರಪ್ರಮಾಣಕತ್ವ-ಸೂಚನಾಯ ಇತ್ಯುಕ್ತಂ ಭವತಿ ।

'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂಬ ಮೊದಲನೆಯ ಸೂತ್ರದಿಂದ ಬ್ರಹ್ಮನು ಗುಣಪರಿಪೂರ್ಣ ಎಂದು ತಿಳಿಯುವುದು. ಎರಡನೆಯ ಸೂತ್ರದಿಂದ ಜಗಜ್ಜನ್ಮಾದಿಕಾರಣ ಬ್ರಹ್ಮ ಎಂದು ತಿಳಿಯುವುದು. ಈ ಎರಡೂ ವಿಷಯದಲ್ಲಿ ಶಾಸ್ತ್ರಯೋನಿತ್ವಾತ್ ಎಂಬ ಮೂರನೆಯ ಸೂತ್ರದಿಂದ ಶಾಸ್ತ್ರವೇ ಪ್ರಮಾಣ ಎಂದು ತಿಳಿಸಲಾಗಿದೆ. ಈ ಅಂಶವನ್ನು ತಿಳಿಸಲು ಆಚಾರ್ಯರು ಅನುವ್ಯಾಖ್ಯಾನದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಹಾಗೂ 'ಅಸ್ಯೋದ್ಭವಾದಿದಂ' ಎಂಬುದರ ಮಧ್ಯದಲ್ಲಿ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬ ಮೂರನೆಯ ಸೂತ್ರದ ಅರ್ಥವನ್ನು ತಿಳಿಸುವ ಭಾಗವನ್ನು ಹಾಕಿದ್ದಾರೆ.

### ಅಥವಾ ಎಂಬುದಾಗಿ ಶಾಸ್ತ್ರಾರ್ಥವನ್ನೇ ಹೇಳುತ್ತಿದ್ದಾರೆ.

(ವಾಕ್ಯಾರ್ಥಚಂದ್ರಿಕಾ)- ಏವಂ ಶಾಸ್ತ್ರಾರ್ಥವ್ಯಾಖ್ಯಾನಹೇತೂಕ್ತಿಪರತಯಾ ಶ್ಲೋಕೋ ವ್ಯಾಖ್ಯಾತಃ । ಇದಾನೀಂ ತು ಶಾಸ್ತ್ರಾರ್ಥಮೇವ ಅನೇನಾಚಷ್ಟೇ ಇತ್ಯಾಹ - **ಅಥವೇತಿ** ॥

ಇಲ್ಲಿಯವರೆಗೂ ಶಾಸ್ತ್ರಾರ್ಥವಾದ 'ನಾರಾಯಣನು ಸಕಲಗುಣಪರಿಪೂರ್ಣ' ಮುಂತಾದ ವ್ಯಾಖ್ಯಾನಗಳಿಗೆ ಉಪಯುಕ್ತವಾದ ನಾರಾಯಣಸ್ವರೂಪನಿರ್ಧಾರಕವಾದ ಲಕ್ಷಣಕಥನ ಪ್ರಮಾಣಕಥನ ಬಾಧಕಪರಿಹಾರಾದಿಗಳನ್ನು ಈ ಶ್ಲೋಕವು ಮಾಡುತ್ತಿದೆ ಎಂದು ವ್ಯಾಖ್ಯಾನಿಸಲಾಗಿದೆ. ಇದೀಗ ಸಮಗ್ರಶಾಸ್ತ್ರಾರ್ಥವನ್ನೇ ಈ ಶ್ಲೋಕದಿಂದ "ಅಥವಾ" ಎಂದು ತಿಳಿಸುತ್ತಿದ್ದಾರೆ.

### ಪ್ರಥಮಸೂತ್ರಾರ್ಥದ ಲಾಭ ಹೇಗೆ?

(ಯಾದುಪತ್ಯ) - ನನು ಕರಶಿರಃಸಂಯೋಗಾದೇರೇವ ವಂದನಾತ್ ಕಥಂ 'ವಂದ್ಯಮ್' ಇತ್ಯನೇನ ಪ್ರಥಮಸೂತ್ರಾರ್ಥಜಿಜ್ಞಾಸೋಕ್ತಿಃ? ಇತ್ಯತ ಆಹ — **ಮನೋವೃತ್ತೇರಿತಿ** ॥ **ತತ್ಪ್ರಣವತಾ ಇತಿ** ॥ 'ಮತ್ತಃ ತ್ವಮುತ್ಕೃಷ್ಟಃ' ಇತಿ ಸ್ವಾವಧಿಕೋತ್ಕರ್ಷವಿಷಯತಾ ಇತ್ಯರ್ಥಃ । ತತಶ್ಚ ಕರಶಿರಃಸಂಯೋಗಾದೌ ಉಕ್ತಭಗವದ್ವಿಷಯಕಮನೋವೃತ್ತಿವಿಶೇಷ ಏವ ವಂದನಮ್ । ತಚ್ಚ ಸದಾ ಕ್ರಿಯಮಾಣಮ್ ಉಪಾಸನಾರೂಪಮೇವ ಪರ್ಯವಸ್ಯತಿ । ಅತ ಏವ 'ಸದಾ' ಇತ್ಯಸ್ಯ ಅತ್ರೋತ್ತರತ್ರ ಚ ಅನ್ವಯ ಉಕ್ತ ಇತಿ ಭಾವಃ ।

ವಂದನ ಎಂದರೆ ಕೈಯಿಗೂ ತಲೆಗೂ ಆಗುವ ಸಂಯೋಗ ಮುಂತಾದವು. ಆದ್ದರಿಂದ 'ವಂದ್ಯಂ' ಎಂಬ ಭಾಗದಿಂದ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಮೊದಲನೆಯ ಸೂತ್ರದ ಅರ್ಥವಾದ ಜಿಜ್ಞಾಸೆಯನ್ನು ಹೇಗೆ ಹೇಳಿದಂತಾಯಿತು? ಎನ್ನುವುದಕ್ಕೆ ಉತ್ತರವಾಗಿ "ಮನೋವೃತ್ತೇಃ" ಎಂಬ ಪಂಕ್ತಿ ಹೊರಟಿದೆ. ಮನಸ್ಸಿನ ತತ್ಪ್ರವಣತಾ ಎನ್ನುವುದನ್ನೇ ವಂದನೆ ಎನ್ನುವರು. ಅಂದರೆ 'ಮತ್ತಃ ತ್ವಮುತ್ಕೃಷ್ಟಃ' - ನನ್ನಿಂದ ನೀನು ಉತ್ಕೃಷ್ಟ ಎಂಬೀರೀತಿಯಾದ ಸ್ವಾವಧಿಕವಾದ ಉತ್ಕರ್ಷ-

ವಿಷಯತ್ವ ಎಂದರ್ಥ. ಆದ್ದರಿಂದ ವಂದನೆ ಎಂದರೆ ಕರಶಿರಃಸಂಯೋಗಾದಿಗಳಾಬೇಕಾದರ 'ಮತ್ತಃ ತ್ವಮುತ್ಕೃಷ್ಟಃ' ಎಂಬೀ ರೀತಿಯಾದ ಭಗವದ್ವಿಷಯಕ ಮನೋವೃತ್ತಿವಿಶೇಷ ಎಂದು. ಇದನ್ನು ಯಾವಾಗಲೂ ಆಚರಿಸುತ್ತಿದ್ದರೆ ಅದೇ ಉಪಾಸನೆಯಾಗುತ್ತದೆ. ಅದನ್ನೇ ಇಲ್ಲಿ ಜಿಜ್ಞಾಸ ಎಂದು ಕರೆದಿದ್ದು. ಈ ಅಭಿಪ್ರಾಯದಿಂದಲೇ 'ಸದಾ' ಎಂಬ ಪದವನ್ನು 'ಪ್ರಿಯತಮಂ ಮಮ' ಎಂಬಲ್ಲಿಯೂ ಹಾಗೇ ಹಿಂದೆ ಇರುವ 'ವಂದ್ಯಂ' ಎಂಬುದಕ್ಕೂ ಅನ್ವಯಿಸಬೇಕು.

## 'ಪ್ರಥಮಾಧ್ಯಾಯಾರ್ಥೇ ಶಂಕಿತ...' — ಪ್ರತಿಪದಾರ್ಥ ಹಾಗೂ ಸಾರ

**ಶ್ರೀಮನ್ನ್ಯಾಯಸುಧಾ** – प्रथमाध्यायार्थे शङ्कितदोषनिरासो द्वितीयेऽभिहितः । तमाह – निर्दोषमिति ।

ಪ್ರಥಮಾಧ್ಯಾಯಾರ್ಥೇ - ಮೊದಲನೆಯ ಅಧ್ಯಾಯದ ಅರ್ಥದಲ್ಲಿ, ಶಂಕಿತದೋಷನಿರಾಸಃ - ಶಂಕಿಸಲ್ಪಟ್ಟ ದೋಷಗಳ ಪರಿಹಾರವು, ದ್ವಿತೀಯೇ - ಎರಡನೆಯ ಅಧ್ಯಾಯದಲ್ಲಿ, ಅಭಿಹಿತಃ - ಹೇಳಲ್ಪಟ್ಟಿದೆ. ತಮ್ - ಅದನ್ನು, ಆಹ - ಹೇಳಿದರು – "ನಿರ್ದೋಷ"ಮಿತಿ - ನಿರ್ದೋಷಮ್ ಎಂಬುದಾಗಿ.

ಸಾರ — ಮೊದಲನೆಯ ಅಧ್ಯಾಯದ ಅರ್ಥವಾದ ಸಕಲಜಗಜ್ಜನ್ಮಾದಿಕಾರಣನಾದ ಸಕಲ-ಗುಣಪರಿಪೂರ್ಣನಾದ ಬ್ರಹ್ಮನಲ್ಲಿ ಅನೇಕವಿಧವಾಗಿ ಪ್ರಾಪ್ತವಾಗುವ ದೋಷಗಳ ಶಂಕೆಯನ್ನು ದ್ವಿತೀಯಾಧ್ಯಾಯವು ಪರಿಹಾರ ಮಾಡುವುದು. ದ್ವಿತೀಯಾಧ್ಯಾಯದ ಅರ್ಥವನ್ನು ಹೇಳಲು ನಿರ್ದೋಷಂ ಎಂದಿದ್ದಾರೆ.

## 'ಪ್ರಥಮಾಧ್ಯಾಯಾರ್ಥೇ ಶಂಕಿತ...' ಸುಧಾಪಂಕ್ತಿಯ ಅರ್ಥವಿವರಣೆ

**कम्बा** — प्रथमाध्यायार्थ इति ॥ **प्रथमाध्यायप्रतिपाद्ये = जगत्कारणत्वादिगुणके ब्रह्मणि युक्त्यादिभिः समन्वयविरोधमुखेन शङ्कितानां दोषाणां निरासो द्वितीयाध्याये विहितः । तमर्थमाह** निर्दोषमित्यनेनेत्**यर्थः ।**

**ಪ್ರಥಮಾಧ್ಯಾಯಾರ್ಥ ಇತಿ ॥** ಮೊದಲನೆಯ ಅಧ್ಯಾಯದಲ್ಲಿ ಪ್ರತಿಪಾದನೆ ಮಾಡುವ ಜಗತ್ಕಾರಣತ್ವಾದಿಗುಣಗಳುಳ್ಳ ಬ್ರಹ್ಮನ ವಿಷಯದಲ್ಲಿ ಯುಕ್ತಿ ಮೊದಲಾದವುಗಳಿಂದ ಸಮನ್ವಯ-ವಾಗಲು ಸಾಧ್ಯವಿಲ್ಲ ಎಂಬುದರ ಮುಖಾಂತರ ಶಂಕೆ ಮಾಡಿದ ದೋಷಗಳ ಪರಿಹಾರವು ಎರಡನೆಯ ಅಧ್ಯಾಯದಲ್ಲಿ ಮಾಡಲ್ಪಟ್ಟಿದೆ. ಈ ಅರ್ಥವನ್ನು "ನಿರ್ದೋಷಂ" ಎಂಬ ಪದದಿಂದ ಹೇಳಿದ್ದಾರೆ ಎಂದು ತಿಳಿಯಬೇಕು.

### ತೃತೀಯಸೂತ್ರಾರ್ಥೋಕ್ತಿಯ ಪೂರ್ವನಿವೇಶ ಏಕೆ?

(ಪರಿಮಳ)- **ನಿರ್ದೋಷಮಿತೀತಿ** ॥ ಏತದಪಿ ಶಾಸ್ತ್ರಪ್ರಮಾಣಸಿದ್ಧಮ್ ಇತಿ ಸೂಚನಾಯ ತೃತೀಯಸೂತ್ರಾರ್ಥೋಕ್ತೇಃ ಪೂರ್ವಂ ನಿವೇಶಿತಮ್ ಇತಿ ಭಾವಃ ।

**ನಿರ್ದೋಷಮಿತಿ** ॥ ಭಗವಂತನು ನಿರ್ದೋಷಿ ಎಂಬ ವಿಷಯದಲ್ಲೂ ಶಾಸ್ತ್ರವೇ ಪ್ರಮಾಣ ಎಂದು ತಿಳಿಸಲು 'ನಿರ್ದೋಷಂ' ಎಂಬುದರ ನಂತರ "ಆಪ್ತತಮಮಪ್ಯಖಿಲೈಃ ಸುವಾಕ್ಯೈಃ" ಎಂದಿದ್ದಾರೆ.

### 'ಏವಂ ಬ್ರಹ್ಮಸ್ವರೂಪೇ ಸಿದ್ಧೇ' ... ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – एवं ब्रह्मस्वरूपे सिद्धेऽधिकारिणस्तत्प्रसादसाधनोपायभूत-तत्साक्षात्कारजननाय वैराग्यभक्तिभ्यामखिलवेदार्थश्रवणादि तृतीये निरूपितम् । तस्यायं सङ्ग्रहः **अशेषविशेषतोऽपि प्रियतमम्, आप्यतममिति** । ल्यब्लोपनिमित्ता पञ्चमी । अशेषान् विषयविशेषान् विहाय ज्ञातव्यतममिति । "इयदामननात्" इत्याद्यर्थसूचनम् ममेति ।

ಏವಂ - ಈ ರೀತಿಯಾಗಿ, ಬ್ರಹ್ಮಸ್ವರೂಪೇ - ಬ್ರಹ್ಮಸ್ವರೂಪವು, ಸಿದ್ಧೇ - ಸಿದ್ಧವಾಗುತ್ತಿರಲು, ಅಧಿಕಾರಿಣಃ - ಅಧಿಕಾರಿಗೆ, ತತ್ಪ್ರಸಾದಸಾಧನೋಪಾಯಭೂತತತ್ಸಾಕ್ಷಾತ್ಕಾರಜನನಾಯ - ತತ್ - ಆ ಬ್ರಹ್ಮನ ಪ್ರಸಾದ - ಅನುಗ್ರಹಕ್ಕೆ ಸಾಧನ - ಸಾಧನವಾದವುಗಳಿಗೆ ಉಪಾಯಭೂತ - ಉಪಾಯಗಳಾದ ತತ್ಸಾಕ್ಷಾತ್ಕಾರ - ಆ ಬ್ರಹ್ಮನ ಸಾಕ್ಷಾತ್ಕಾರವನ್ನು ಜನನಾಯ - ಹುಟ್ಟಿಸುವುದಕ್ಕಾಗಿ, ವೈರಾಗ್ಯಭಕ್ತಿಭ್ಯಾಂ - ವೈರಾಗ್ಯ ಹಾಗೂ ಭಕ್ತಿಯಿಂದ, ಅಖಿಲವೇದಾರ್ಥಶ್ರವಣಾದಿ - ಯಥಾಶಕ್ತಿ ಸಕಲವೇದದ ಅರ್ಥವನ್ನು ಶ್ರವಣಮಾಡುವುದು ಮನನ ಮಾಡುವುದು ಇತ್ಯಾದಿಗಳು, ತೃತೀಯೇ - ಮೂರನೆಯ ಅಧ್ಯಾಯದಲ್ಲಿ, ನಿರೂಪಿತಂ - ಹೇಳಲ್ಪಟ್ಟಿದೆ. ತಸ್ಯ - ಆ ಎಲ್ಲದರ, ಅಯಂ ಸಂಗ್ರಹಃ - ಈ ಸಂಗ್ರಹವು, "ಅಶೇಷ- ವಿಶೇಷತೋಽಪಿ ಪ್ರಿಯತಮಂ ಆಪ್ಯತಮಂ" ಇತಿ – ಅಶೇಷವಿಶೇಷತೋಽಪಿ ಪ್ರಿಯತಮಂ ಆಪ್ಯತಮಂ - ಎಂಬುದಾಗಿ. ಲ್ಯಬ್ಲೋಪನಿಮಿತ್ತಾ ಪಂಚಮೀ – ಲ್ಯಬಂತಶಬ್ದದ ಲೋಪವನ್ನು ನಿಮಿತ್ತಮಾಡಿಕೊಂಡು ಕರ್ಮಾರ್ಥದಲ್ಲಿ ಬಂದ ಪಂಚಮೀ ಎಂಬ ಅರ್ಥದ ವಾರ್ತಿಕವಿದೆ. ಅಶೇಷಾನ್ - ಸಕಲ, ವಿಷಯ- ವಿಶೇಷಾನ್ - ಅನೇಕ-ರೀತಿಯ ವಿಷಯಗಳನ್ನು, ವಿಹಾಯ - ಬಿಟ್ಟು, ಜ್ಞಾತವ್ಯತಮಂ - ಅತಿಶಯೇನ ತಿಳಿಯಲ್ಪಡಬೇಕು, ಇತಿ - ಎಂಬುದಾಗಿ ಅರ್ಥ. "ಇಯದಾಮನನಾತ್" ಇತ್ಯಾದ್ಯರ್ಥಸೂಚನಂ – ಇಯದಾಮನನಾತ್ ಮುಂತಾದ ಸೂತ್ರಗಳ ಅರ್ಥದ ಸೂಚನೆಯು, "ಮಮ" ಇತಿ - ಮಮ ಎಂಬುದಾಗಿ.

ಸಾರ – ಎರಡು ಅಧ್ಯಾಯಗಳಿಂದ ಬ್ರಹ್ಮನ ನಿಷ್ಕೃಷ್ಟವಾದ ಸ್ವರೂಪವು ಸಿದ್ಧವಾಗಿದೆ. ಈಗ ಅಧಿಕಾರಿಗೆ ಅವನ ಪ್ರಸಾದ ಹೇಗೆ ಆಗುವುದು? ಎನ್ನುವ ಚಿಂತೆ ಬಂದಿದೆ. ಅದಕ್ಕಾಗಿ ಸಾಧನಗಳನ್ನು ಮೂರನೆಯ ಅಧ್ಯಾಯದಲ್ಲಿ ನಿರೂಪಣೆ ಮಾಡಿದ್ದಾರೆ. ಇದರ ಸಂಗ್ರಹವನ್ನು "ಅಶೇಷ-ವಿಶೇಷತೋಽಪಿ ಪ್ರಿಯತಮಂ ಆಪ್ತತಮಂ" ಎಂಬ ವಿಶೇಷಣಗಳು ಮಾಡಿವೆ. ಅದು ಹೇಗೆ ಎಂಬ ವಿವರಣೆ ಈ ಭಾಗದಲ್ಲಿ ಬಂದಿದೆ.

## ತೃತೀಯಾಧ್ಯಾಯಾರ್ಥಸಂಗ್ರಹ

**कम्बा** – ल्यब्लोप इति ॥ **ल्यब्लोपे कर्मण्यधिकरणे च पञ्चमी वक्तव्येति ल्यब्लोपनिमित्तायाः कर्मणि पञ्चम्या अनुशासनेन 'अशेषविशेषतः' इत्यस्याशेषान् विषयविशेषान् विहाय इत्यर्थाश्रयणाद् विषयवैराग्यलाभेन 'प्रियतमम्' इति प्रीत्य-परपर्यायस्नेहविषयकत्वकथनेन भक्तिलाभाद् आप्यतमं ज्ञातव्यमित्याश्रयणेन भगवत्साक्षात्कारजनकश्रवणमननादिरूपज्ञानलाभाच्च अशेषविशेषतोऽपि प्रिय-तमम् आप्यतममिति तृतीयाध्यायसङ्ग्रह इति भावः । इयदिति ॥ 'इयदामननात्' इत्यत्र मुख्यप्राणस्याधिकार्युत्तमत्वं प्रतिपादितम् । तत् 'मम प्रियतमम्' इति विशेष-निर्देशेनाधिकार्युत्तमस्य मम प्रियतममित्यर्थलाभात् सूच्यत इति भावः ।**

**ಲ್ಯಬ್ಲೋಪ ಇತಿ** ॥ "ಲ್ಯಬ್ಲೋಪೇ ಕರ್ಮಣಿ ಅಧಿಕರಣೇ ಚ ಪಂಚಮೀ ವಕ್ತವ್ಯಾ" ಎಂದು ಲ್ಯಪ್-ಪ್ರತ್ಯಯಾಂತವಾದ ಶಬ್ದದ ಲೋಪದ ಕಾರಣದಿಂದ ಕರ್ಮ ಹಾಗೂ ಅಧಿಕರಣ ಎಂಬ ಅರ್ಥದಲ್ಲಿ ಪಂಚಮೀ ವಿಭಕ್ತಿಯನ್ನು ಹೇಳಬೇಕು ಎಂಬ ಅನುಶಾಸನವಿರುವುದರಿಂದ "ಅಶೇಷವಿಶೇಷತಃ" ಎಂಬ ಪದಕ್ಕೆ ಅಶೇಷಾನ್ ಅಂದರೆ ಸಕಲವಿಷಯಪದಾರ್ಥಗಳನ್ನು ಬಿಟ್ಟು ಎಂಬ ಅರ್ಥವನ್ನು ಆಶ್ರಯಿಸಿರು-ವುದರಿಂದ ವಿಷಯಗಳಲ್ಲಿ ವೈರಾಗ್ಯ ಎಂಬ ಅರ್ಥದ ಲಾಭವಾಗುವುದರಿಂದ "ಪ್ರಿಯತಮಮ್" ಎಂಬುದಾಗಿ ಪ್ರೀತಿಯೇ ಆದ ಸ್ನೇಹವನ್ನು ವಿಷಯೀಕರಿಸುವುದೆಂದು ಹೇಳಿದ ಕಾರಣ ಭಕ್ತಿಯ ಲಾಭವಾಗುವುದರಿಂದ ಆಪ್ಯತಮಂ ಎಂದರೆ ತಿಳಿಯಬೇಕು ಎಂದು ಅರ್ಥವನ್ನು ಆಶ್ರಯಿಸಿದ್ದರಿಂದ ಭಗವಂತನ ಸಾಕ್ಷಾತ್ಕಾರವನ್ನು ಹುಟ್ಟಿಸುವ ಶ್ರವಣ ಮನನ ಮೊದಲಾದ ಜ್ಞಾನದ ಲಾಭವಾಗು-ವುದರಿಂದಲೂ, "ಅಶೇಷವಿಶೇಷತೋಽಪಿ, ಪ್ರಿಯತಮಂ, ಆಪ್ಯತಮಂ" ಎಂಬ ಪದಗಳಿಂದ ಮೂರನೆಯ ಅಧ್ಯಾಯದ ಅರ್ಥದ ಸಂಗ್ರಹವಾಗುವುದು ಎಂದು ಅಭಿಪ್ರಾಯ. **ಇಯದಿತಿ** ॥ 'ಇಯತ್ ಆಮನನಾತ್' ಎಂಬ ಸೂತ್ರದಲ್ಲಿ ಮುಖ್ಯಪ್ರಾಣನು ಉಪಾಸನಾಧಿಕಾರಿಗಳಲ್ಲಿ ಉತ್ತಮ ಎಂಬ

ಪ್ರತಿಪಾದನೆ ಇದೆ. 'ತನ್ಮಮ ಪ್ರಿಯತಮಂ' ಎಂದು ಅದು(ನಾರಾಯಣನು) ನನಗೆ ಅತ್ಯಂತ ಪ್ರೀತಿ-ಪಾತ್ರ ಎಂದು ವಿಶೇಷವಾಗಿ ಹೇಳಿದ್ದರಿಂದ ಅಧಿಕಾರಿಗಳಲ್ಲಿ ಉತ್ತಮನಾದ ನನಗೆ ಪ್ರಿಯತಮ ಎಂಬ ಅರ್ಥವನ್ನು ಸೂಚನೆ ಮಾಡಿದಂತಾಗುವುದು ಎಂದಭಿಪ್ರಾಯ.

## ಲ್ಯಬ್ಲೋಪೇ ಕರ್ಮಣಿ ... ವಾರ್ತಿಕ

ವ್ಯಾ.ವಿ. – 'ಲ್ಯಬ್‌ಲೋಪೇ ಕರ್ಮಣ್ಯಧಿಕರಣೇ ಚ ಪಂಚಮೀ ವಕ್ತವ್ಯಾ' ಎಂದು ಈ ಟಿಪ್ಪಣಿಯಲ್ಲಿ ಉಲ್ಲಿಖಿತವಾದ ವಾರ್ತಿಕದ ಸ್ವರೂಪ. ಸಿದ್ಧಾಂತಕೌಮುದಿಯಲ್ಲಿ ಹೀಗಿದೆ – ಭುವಃ ಪ್ರಭವಃ (ಪಾ. ಸೂ. 1-4-31) ಲ್ಯಬ್‌ಲೋಪೇ ಕರ್ಮಣ್ಯಧಿಕರಣೇ ಚ - ಎಂಬುದಾಗಿ. ಇನ್ನು ಪ್ರಕ್ರಿಯಾಕೌಮುದಿ-ಯಲ್ಲಿ ಇದೇ ಸೂತ್ರದ ಸಂದರ್ಭದಲ್ಲಿ 'ಲ್ಯಬ್‌ಲೋಪೇ ಕರ್ಮಣ್ಯಧಿಕರಣೇ ಚ ವಾಚ್ಯಾ' ಎಂದಿದೆ.

## ಪ್ರಿಯತಮಂ ಎಂಬ ಶಬ್ದದ ಅರ್ಥ ಆಪ್ಯತಮವೇ? ಅಲ್ಲವೇ?

(ಪರಿಮಳ)– ಪ್ರಿಯತಮಸ್ಯೈವ ಆಪ್ಯತಮತ್ವಾತ್ ಪ್ರಿಯತಮಮ್ ಇತ್ಯಸ್ಯೈವ ಆಪ್ಯತಮಮ್ ಇತ್ಯರ್ಥಮುಪೇತ್ಯ ವಾ 'ಆಪ್ಯತಮಮ್' ಇತ್ಯತ್ರಾಪ್ಯನುವರ್ತತ ಇತಿ ಭಾವೇನ ವಾ 'ಪ್ರಿಯ-ತಮಮ್ ಆಪ್ಯತಮಮ್' ಇತ್ಯುಕ್ತಮ್ । ಅನುವೃತ್ತಿಪಕ್ಷೇ ಪ್ರಿಯತಮತ್ವಾತ್ ಜ್ಞಾತವ್ಯಮ್ ಇತಿ ಹೇತುಗರ್ಭಂ ಬೋಧ್ಯಮ್ । ಮನಸಾಽಽಪ್ಯತ್ವಸ್ಯ ಜ್ಞಾತವ್ಯತ್ವಾನತಿರೇಕಾತ್ ।

'ಪ್ರಿಯತಮಮ್ ಆಪ್ಯತಮಮ್' ಯಾವುದು ಅತ್ಯಂತ ಪ್ರಿಯವಾದ ವಸ್ತುವೋ ಅದೇ ಹೊಂದಲು ಯೋಗ್ಯ- ಆದ್ದರಿಂದ ಪ್ರಿಯತಮಂ ಎಂಬುದಕ್ಕೇ ಆಪ್ಯತಮಂ ಎಂಬರ್ಥವನ್ನು ಒಪ್ಪಿ 'ಪ್ರಿಯತಮಂ = ಆಪ್ಯತಮಂ' ಎಂದು ವ್ಯಾಖ್ಯಾನಿಸಿದ್ದಾರೆ. ಅಥವಾ 'ಆಪ್ಯಮಮಮಪ್ಯಖಿಲೈಃ ಸುವಾಕ್ಯೈಃ' ಎಂಬ ಹಿಂದಿನ ಭಾಗದಿಂದ ಆಪ್ಯತಮಂ ಎಂಬ ಪದವು 'ಸದಾ ಪ್ರಿಯತಮಂ ಮಮ' ಎಂಬಲ್ಲಿಯೂ ಅನುವೃತ್ತವಾಗುತ್ತದೆ. ಈ ಅಭಿಪ್ರಾಯದಿಂದ ಪ್ರಿಯತಮಂ ಆಪ್ಯತಮಂ ಎಂದಿದ್ದಾರೆ. ಅನುವೃತ್ತಿಯ ಪಕ್ಷದಲ್ಲಿ ಪ್ರಿಯತಮವಾದ್ದರಿಂದ ತಿಳಿಯಬೇಕಾದದ್ದು ಎಂದು ಪ್ರಿಯತಮಂ ಎಂಬುದು ಹೇತು-ಗರ್ಭವಿಶೇಷಣ ಎಂದು ತಿಳಿಯಬೇಕು. ಮನಸ್ಸಿನಿಂದ ಹೊಂದುವುದು ಎಂದರೂ ತಿಳಿಯುವುದು ಎಂದರೂ ಒಂದೇ ಅರ್ಥ.

## ಪ್ರಸನ್ನಂ ಚ ತತ್ ಯಾದೃಶಂ ... ಪ್ರತಿಪದಾರ್ಥ ಹಾಗೂ ಸಾರ

**श्रीमन्न्यायसुधा** – प्रसन्नं च तत्, यादृशं पुमर्थं प्रयच्छति तत्स्वरूपनिरूपणं चतुर्थेऽभिहितम् । तदभिधानम् आप्यतममिति । आप्तिमात्रस्य नित्यसिद्धत्वात् तमपा तां विशिनष्टीति ।

ಪ್ರಸನ್ನಂ ಚ ತತ್ - ಪ್ರಸನ್ನನಾದ ಆ ಪರಮಾತ್ಮನಾದರೋ, ಯಾದೃಶಂ - ಯಾವರೀತಿಯಾದ, ಪುಮರ್ಥಂ - ಪುರುಷಾರ್ಥವನ್ನು, ಪ್ರಯಚ್ಛತಿ - ನೀಡುವನೋ, ತತ್ಸ್ವರೂಪನಿರೂಪಣಂ - ಅಂತಹ ಸ್ವರೂಪದ ಬ್ರಹ್ಮನ ನಿರೂಪಣೆಯು, ಚತುರ್ಥೇ - ನಾಲ್ಕನೆಯ ಅಧ್ಯಾಯದಲ್ಲಿ, ಅಭಿಹಿತಮ್ - ಹೇಳಲ್ಪಟ್ಟಿದೆ. ತದಭಿಧಾನಂ - ಅದನ್ನು ಹೇಳುವ ಶಬ್ದವು, ಆಪ್ಯತಮಂ ಇತಿ - ಆಪ್ಯತಮಂ ಎಂಬುದಾಗಿ. ಆಪ್ತಿಮಾತ್ರಸ್ಯ - ಕೇವಲ ಪರಮಾತ್ಮನ ಸಂಬಂಧವಾದರೋ, ನಿತ್ಯಸಿದ್ಧತ್ವಾತ್ - ನಿತ್ಯದಲ್ಲಿಯೂ ಸಿದ್ಧವಾದ್ದರಿಂದ, ತಮಪಾ - ತಮಪ್ ಪ್ರತ್ಯಯದಿಂದ, ತಾಂ - ಆ ಆಪ್ತಿಯನ್ನು, ವಿಶಿನಷ್ಟಿ ಇತಿ - ವಿಶೇಷಯುತವನ್ನಾಗಿ ತಿಳಿಸುತ್ತಾರೆ ಎಂಬುದಾಗಿ.

ಸಾರ — ಭಗವಂತನು ಸುಪ್ರಸನ್ನನಾದರೆ ನಮಗೆ ಪುರುಷಾರ್ಥವನ್ನು ನೀಡುತ್ತಾನೆ. ಆ ಪುರುಷಾರ್ಥವು ಯಾವುದು? ಎನ್ನುವುದನ್ನು ನಾಲ್ಕನೆಯ ಅಧ್ಯಾಯನಿರೂಪಣೆ ಮಾಡುತ್ತದೆ. ಅದರ ನಿರೂಪಣೆಯನ್ನು "ಆಪ್ಯತಮಂ" ಎಂದು ಮಾಡಿದ್ದಾರೆ. ಭಗವಂತನು ಎಲ್ಲ ಕಡೆ ಇದ್ದರೂ ಅವನನ್ನು ಹೊಂದುವುದು ಎಂದರೆ ಸ್ಥಾನವಿಶೇಷದಲ್ಲಿ ರೂಪವಿಶೇಷದ ಪ್ರಾಪ್ತಿ ಎಂದರ್ಥ.

### ಆಪ್ಯತಮಂ ಎಂಬುದು ಚತುರ್ಥಾಧ್ಯಾಯಾರ್ಥನಿರೂಪಣಪರ

**कम्बा —** तमपेति ॥ **सर्वगतब्रह्मप्राप्तिमात्रस्य नित्यसिद्धत्वेऽपि** 'आप्यतमम्' **इति तमप्प्रत्ययमहिम्ना लब्धस्य 'सोऽश्नुते सर्वान् कामान् सह ब्रह्मणा विपश्चिता' इति श्रुत्युक्तस्य प्राप्तिविशेषस्य नित्यसिद्धत्वाभावेन पुमर्थत्वसम्भवात् अप्यतममित्येतच्चतुर्थाध्यायार्थपुमर्थनिरूपणपरमिति भावः ।**

**ತಮಪಾ ಇತಿ ॥** ಎಲ್ಲ ಕಡೆಯಿರುವ ಬ್ರಹ್ಮನನ್ನು ಹೊಂದಿರುವುದು ಎಲ್ಲರಿಗೂ ನಿತ್ಯವಾಗಿ ಸಿದ್ಧವಾದರೂ 'ಆಪ್ಯತಮಮ್' ಎಂಬಲ್ಲಿರುವ ತಮಪ್ ಪ್ರತ್ಯಯದ ಬಲದಿಂದ ಸಿಕ್ಕಿರುವ "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" - ಜ್ಞಾನಿಯಾದವನು ಬ್ರಹ್ಮನ ಜೊತೆಗೆ ಸಕಲ ಭೋಗಗಳನ್ನು ಅನುಭವಿಸುವನು ಎಂದು ಶ್ರುತಿಯು ಹೇಳುವ ವಿಶೇಷವಾದ ಪ್ರಾಪ್ತಿಯು ನಿತ್ಯಸಿದ್ಧವಲ್ಲವಾದ್ದರಿಂದ ಇಂತಹ ಪ್ರಾಪ್ತಿ ವಿಶೇಷವು ಪುರುಷಾರ್ಥವಾಗಬಹುದಾದ್ದರಿಂದ ಆಪ್ಯತಮಮ್ ಎನ್ನುವ ಪದವು ನಾಲ್ಕನೆಯ ಅಧ್ಯಾಯದ ಅರ್ಥವಾದ ಪುರುಷಾರ್ಥವನ್ನು ನಿರೂಪಣೆ ಮಾಡುತ್ತಿದೆ ಎಂದಭಿಪ್ರಾಯ.

### ನಿತ್ಯಸಿದ್ಧನಾದ ಭಗವಂತನ ಪ್ರಾಪ್ತಿ

(ಪರಿಮಳ)- 'ಪ್ರಿಯತಮಮ್' ಇತ್ಯಸ್ಯ ಪ್ರಾಕ್ 'ಆಪ್ಯತಮಮ್' ಇತಿ ಪ್ರತಿಪದಂ ದತ್ತಮ್ ।

ತದೇವ ಅನುವದತಿ – ಆಪ್ಯತಮಮ್ ಇತೀತಿ ॥ ನಿತ್ಯಸಿದ್ಧತ್ವಾದಿತಿ ॥ 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಇತ್ಯಾದೇರಿತಿ ಭಾವಃ । ತಮಪಾ ಇತಿ ॥ ಅತಿಶಯಾರ್ಥಕ-ತಮಪ್‌ಪ್ರತ್ಯಯೇನ ಶ್ವೇತದ್ವೀಪಾದಿಸ್ಥರೂಪವಿಶೇಷಪ್ರಾಪ್ತಿರೇವ ಇಹ 'ಆಪ್ತಿ'ಶಬ್ದಾರ್ಥ ಇತಿ ಭಾವೇನ ತಾಂ ಪ್ರಾಪ್ತಿಂ ವಿಶೇಷಣಯುಕ್ತಾಂ ಕರೋತಿ ಇತ್ಯರ್ಥಃ । 'ಇತಿ'ಶಬ್ದ ಆದ್ಯಪದ್ಯ-ವ್ಯಾಖ್ಯಾಸಮಾಪ್ತೌ ।

ಪ್ರಿಯತಮಂ ಎಂಬುದಕ್ಕೆ ಆಪ್ಯತಮಂ ಎಂದು ಪ್ರತಿಯಾಗಿ ಪದವನ್ನು ವಿವಕ್ಷಿಸಿ ಅನುವಾದ-ಮಾಡಿದರು. ಇದೀಗ ಆ ಆಪ್ಯತಮಂ ಎಂಬ ಪದಕ್ಕೆ ವಿವರಣೆಯನ್ನು ನೀಡುತ್ತಿದ್ದಾರೆ – ಆಪ್ಯತಮ-ಮಿತಿ ಎಂದು. ಭಗವಂತನು ನಿತ್ಯಸಿದ್ಧ ಎಂದರೆ 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಮುಂತಾದ ವಾಕ್ಯಗಳು ಹೇಳಿದಂತೆ ಒಳಗೆ ಹೊರಗಡೆ ಈ ರೀತಿ ಎಲ್ಲ ಪ್ರದೇಶವನ್ನು ವ್ಯಾಪಿಸಿ ಆ ನಾರಾಯಣನು ಇದ್ದಾನೆ. 'ಆಪ್ಯತಮಮಂ' ಎಂಬಲ್ಲಿರುವ ತಮಪ್ ಪ್ರತ್ಯಯಕ್ಕೆ ಅತಿಶಯ ಎಂದರ್ಥ. ಹಾಗಾಗಿ ಎಲ್ಲ ಕಡೆ ಭಗವಂತನಿದ್ದರೂ ಅವನನ್ನು ಹೊಂದುವುದು ಎಂದರೆ ಶ್ವೇತದ್ವೀಪ, ಅನಂತಾಸನ, ವೈಕುಂಠಾದಿ ಲೋಕಗಳಲ್ಲಿರುವ ಭಗವಂತನ ರೂಪವಿಶೇಷವನ್ನು ಹೊಂದುವುದೇ ಆಪ್ತಿ ಎಂಬ ಶಬ್ದದ ಅರ್ಥ ಎಂದು ತಿಳಿಯಬೇಕು. ಇತಿ ಎಂಬ ಶಬ್ದವು ಮೊದಲನೆಯ ಪದ್ಯದ ವ್ಯಾಖ್ಯಾನವು ಮುಗಿಯಿತು ಎಂಬರ್ಥದಲ್ಲಿದೆ.

## ಪೂರ್ವಪೂರ್ವವ್ಯಾಖ್ಯಾನಪ್ರಾಬಲ್ಯ

(ವಾಕ್ಯಾರ್ಥಚಂದ್ರಿಕಾ) – ಅತ್ರ ಪ್ರಥಮೇ ನತಿಸ್ತುತಿರೂಪೋಭಯವಿಧಸ್ಯಾಪಿ ಮಂಗಲಸ್ಯಾನು-ಷ್ಠಾನಮ್ । ದ್ವಿತೀಯಾದಿಚತುರ್ಷು ನತೇರೇವಾನುಷ್ಠಾನಮ್ । ವಿಶೇಷಣಾನಾಂ ಚ ಕಂಠೋಕ್ತ-ನತ್ಯುಪಪಾದಕತ್ವಮ್ । ತತ್ರಾಪಿ ಪ್ರಥಮೇ ವಿಶೇಷಣಾನಾಂ ನತಿಪ್ರಯೋಜಕಧರ್ಮಕಥನ-ಪರತ್ವಮ್ । ದ್ವಿತೀಯೇ ನತಿಪ್ರಯೋಜಕಸ್ವರೂಪನಿರ್ಧಾರಣಾರ್ಥಕಲಕ್ಷಣಪರತ್ವಮ್ । ತೃತೀಯೇ ಸ್ವರೂಪನಿರ್ಧಾರಕಲಕ್ಷಣೇ ಸಾಧಕಕಥನಪರತ್ವಮ್ । ಚತುರ್ಥೇ ತನ್ನಿರ್ಧಾರಕೇ ಲಕ್ಷಣೇ ಪ್ರಮಾಣೇ ವಾ ಬಾಧಕಪರಿಹಾರಪರತ್ವಮ್ । ಷಷ್ಠೇ ತೂಭಯಪರತ್ವೇಽಪಿ ಅಸ್ಯ ಪದ್ಯಸ್ಯ ವಿಶೇಷಣಾನಾಂ ನಾರಾಯಣಪದವ್ಯಾಖ್ಯಾನದ್ವಾರಾ ಏತದ್‌ಪದ್ಯಾಭಿಪ್ರೇತಸ್ತುತ್ಯರ್ಥತ್ವಮ್ । ಸಪ್ತಮೇ ತು ಏತದ್‌ಪದ್ಯತಾತ್ಪರ್ಯವಿಷಯೀಭೂತನತಿಸ್ತುತಿಪರತ್ವಾಭಾವೇಽಪಿ ಏತದ್-ಪದ್ಯೋಕ್ತನತಿವಿಶೇಷ್ಯನಾರಾಯಣವಿಶೇಷಣಾನಾಂ ನತೇರ್ಯಚ್ಛಾಸ್ತ್ರಾರ್ಥವ್ಯಾಖ್ಯಾನಾರ್ಥತ್ವಂ ತಚ್ಛಾಸ್ತ್ರಾರ್ಥಸಂಕ್ಷೇಪಕಥನಪರತ್ವಮಿತಿ ಪೂರ್ವಪೂರ್ವಪ್ರಾಬಲ್ಯಕ್ರಮಃ ಪಕ್ಷಣಾಂ ದ್ರಷ್ಟವ್ಯಃ ॥ (ಪ್ರಥಮೇ ದ್ವಿತೀಯೇ ತೃತೀಯೇ ಚತುರ್ಥೇ ಇತಿ । ದ್ವಿತೀಯೇ ತೃತೀಯೇ ಚತುರ್ಥೇ ಪಂಚಮೇ

ಇತಿ ಕ್ರಮೇಣಾರ್ಥೋ ಜ್ಞೇಯಃ । ಪೂರ್ವಂ 'ದ್ವಿತೀಯಾದಿಷು ಚತುರ್ಷು' ಇತಿ ದ್ವಿತೀಯಸ್ಯ ಪ್ರಾಥಮ್ಯೋಕ್ತಿಃ)

ಒಟ್ಟು ಏಳುವಿಧವಾಗಿ ಅನುವ್ಯಾಖ್ಯಾನದ ಮೊದಲನೆಯ ಪದ್ಯಕ್ಕೆ ವ್ಯಾಖ್ಯಾನಮಾಡಿದ್ದಾರೆ ಟೀಕಾ-ಚಾರ್ಯರು. ಅವುಗಳಲ್ಲಿ ಮೊದಲಿನ ಮೊದಲಿನ ಪಕ್ಷಗಳು ಪ್ರಬಲ ಎಂಬ ಅಂಶವನ್ನು ಮನಸ್ಸಿ-ನಲ್ಲಿಟ್ಟುಕೊಂಡು ಈ ವ್ಯಾಖ್ಯಾನಗಳು ಹೊರಟಿವೆ.

(1) ಮೊದಲನೆಯ ವ್ಯಾಖ್ಯಾನದಲ್ಲಿ ಅನುವ್ಯಾಖ್ಯಾನದ ಮೊದಲನೆಯ ಪದ್ಯವು ಮಂಗಳಾಚರಣ ರೂಪ ಎಂದು ಹೇಳಿ ಅಲ್ಲಿ ನಾರಾಯಣನ ಸ್ತುತಿಯೂ ಆಗಿದೆ. ನಾರಾಯಣನ ನತಿಯೂ ಆಗಿದೆ ಎಂದು ಎರಡು ರೀತಿಯಾದ ನತಿಸ್ತುತಿ ಉಭಯಾರ್ಥತ್ವವನ್ನು ಹೇಳಿದ್ದಾರೆ.

(2) ದ್ವಿತೀಯಾದಿ ನಾಲ್ಕು ವ್ಯಾಖ್ಯಾನಗಳಲ್ಲಿ — ನತಿಯನ್ನು ಮಾತ್ರ ಅನುಷ್ಠಾನ ಮಾಡಿದ್ದಾರೆ. ಅಲ್ಲಿ ಬಂದ 'ನಿಖಿಲಪೂರ್ಣಗುಣೈಕದೇಹಂ' ಮೊದಲಾದ ವಿಶೇಷಣಗಳು ನಮಸ್ಕಾರ ಮಾಡುವುದನ್ನು ಸಮರ್ಥಿಸುತ್ತಿವೆ. ಅಲ್ಲಿಯೂ ಮೊದಲನೆಯ (ಅರ್ಥಾತ್ 2ನೆಯ) ವ್ಯಾಖ್ಯಾನದಲ್ಲಿ 'ನಿಖಿಲಪೂರ್ಣ-ಗುಣೈಕದೇಹಂ' ಮುಂತಾದ ವಿಶೇಷಣಗಳು ನಮಸ್ಕಾರಕ್ಕೆ ಪ್ರಯೋಜಕವಾದ ವಿಶಿಷ್ಟತ್ವ ಮೊದಲಾದ ಧರ್ಮಗಳನ್ನು ಹೇಳುತ್ತಿವೆ. 2ನೆಯ (ಅರ್ಥಾತ್ 3ನೆಯ) ವ್ಯಾಖ್ಯಾನದಲ್ಲಿ ನಮಸ್ಕಾರಕ್ಕೆ ಪ್ರಯೋಜಕವಾದ ನಾರಾಯಣನ ಸ್ವರೂಪವನ್ನು ನಿರ್ಧರಿಸುವ ಲಕ್ಷಣಗಳನ್ನು ಕಾಣಬಹುದು. 3ನೆಯ (ಅರ್ಥಾತ್ 4ನೆಯ) ವ್ಯಾಖ್ಯಾನದಲ್ಲಿ ನಾರಾಯಣನ ಸ್ವರೂಪನಿರ್ಧಾರಕವಾದ ಲಕ್ಷಣಗಳಲ್ಲಿ ಸಾಧಕವಾದ ಪ್ರಮಾಣಗಳನ್ನು ಹೇಳಿದ್ದಾರೆ. 4ನೆಯ (ಅರ್ಥಾತ್ 5ನೆಯ) ವ್ಯಾಖ್ಯಾನದಲ್ಲಿ ನಾರಾಯಣನ ಸ್ವರೂಪನಿರ್ಧಾರಕವಾದ ಲಕ್ಷಣ ಹಾಗೂ ಪ್ರಮಾಣದಲ್ಲಿ ಬಾಧಕ-ವನ್ನು ಪರಿಹರಿಸಿದ್ದಾರೆ.

(3) 6ನೆಯ ವ್ಯಾಖ್ಯಾನದಲ್ಲಿ ನತಿ-ಸ್ತುತಿ ಉಭಯಪರತ್ವವಿದ್ದರೂ ಈ ಪದ್ಯದ ವಿಶೇಷಣಗಳು ನಾರಾಯಣ ಪದವನ್ನು ವ್ಯಾಖ್ಯಾನ ಮಾಡುವ ಮುಖಾಂತರ ಈ ಪದ್ಯದಿಂದ ಅಭಿಪ್ರೇತವಾದ ಸ್ತುತಿಯನ್ನು ಮಾಡುತ್ತಿವೆ.

(4) 7ನೆಯ ವ್ಯಾಖ್ಯಾನದಲ್ಲಾದರೋ ಮಂಗಳಪದ್ಯದ ತಾತ್ಪರ್ಯಕ್ಕೆ ವಿಷಯವಾದ ನತಿ-ಸ್ತುತಿಪರತ್ವ ಎರಡೂ ಇಲ್ಲದಿದ್ದರೂ ಈ ಪದ್ಯದಲ್ಲಿ ಹೇಳಿದ ನಮಸ್ಕಾರಕ್ಕೆ ವಿಶೇಷ್ಯವಾದ ನಾರಾಯಣನಿಗೆ ಕೊಟ್ಟ ಯಾವ 'ನಿಖಿಲಪೂರ್ಣಗುಣೈಕದೇಹಂ' ಮುಂತಾದ ವಿಶೇಷಣಗಳಿವೆ ಅವುಗಳೆಲ್ಲವೂ ಶಾಸ್ತ್ರದ ಅರ್ಥವನ್ನು ಸಂಕ್ಷೇಪವಾಗಿ ಹೇಳುತ್ತಿವೆ.

ಈ ರೀತಿ ನೇರವಾಗಿ ನತಿಸ್ತುತಿ ಉಭಯಪರವಾದ ವ್ಯಾಖ್ಯಾನವು ಪ್ರಬಲ. ಅದು ಮೊದಲನೆಯ

ವ್ಯಾಖ್ಯಾನವಾಗಿದೆ. ಇನ್ನು ನಾಲ್ಕರಲ್ಲಿ ನತಿ-ಸ್ತುತಿ ಉಭಯಪರತ್ವ ಇರುವುದಿಲ್ಲ. ಆರನೆಯ ವ್ಯಾಖ್ಯಾನದಲ್ಲಿ ಇದ್ದರೂ ಪರಂಪರಯಾ ಇದೆ. ಏಳನೆಯ ವ್ಯಾಖ್ಯಾನದಲ್ಲಿಯೂ ನತಿ-ಸ್ತುತಿ ಉಭಯಪರತ್ವವಿಲ್ಲ ಎಂದಭಿಪ್ರಾಯ.

## ಉತ್ತರೋತ್ತರವ್ಯಾಖ್ಯಾನಪ್ರಾಬಲ್ಯ

(ವಾಕ್ಯಾರ್ಥಚಂದ್ರಿಕಾ)- ಯದ್ವಾ, "ನತಿವಿಶೇಷ್ಯನಾರಾಯಣವಿಶೇಷಣಾನಾಂ ಕಂಠೋಕ್ತನತ್ಯು-ಪಪಾದಕತಯಾ ಸಂಭವತ್ಯೇಕವಾಕ್ಯತ್ವೇ, ನ ಕಂಠತೋಽನುಕ್ತಸ್ತುತಿಪರತಯಾ ಭಿನ್ನವಾಕ್ಯತ್ವಂ ಯುಕ್ತಮ್ ಇತಿ ಪ್ರಥಮಾಪೇಕ್ಷಯಾ ದ್ವಿತೀಯಾದೀನಾಂ ಪ್ರಾಬಲ್ಯಮ್ । ತತ್ರಾಪಿ ನತಿವಿಶೇಷ್ಯ-ನಾರಾಯಣಧರ್ಮನಮ್ಯತ್ವಪ್ರಯೋಜಕಪರತ್ವಾಪೇಕ್ಷಯಾ ತತ್ಸ್ವರೂಪನಿರ್ಧಾರಕಲಕ್ಷಣಪರತ್ವಂ ಜ್ಯಾಯ ಇತಿ ಸರ್ವವಿಶೇಷಣಾನಾಂ ಲಕ್ಷಣಪರತ್ವಪಕ್ಷಸ್ಯ ಪ್ರಾಬಲ್ಯಮ್ । ಸ್ವರೂಪಮಾತ್ರಪ್ರದರ್ಶಕ-ಲಕ್ಷಣಮಾತ್ರಪರತ್ವಾಪೇಕ್ಷಯಾ 'ನಿಖಿಲ' ಇತ್ಯಾದಿವಿಶೇಷಣಚತುಷ್ಟಯಸ್ಯ ಲಕ್ಷಣಪರತ್ವಮ್, ತಲ್ಲಕ್ಷಣವಿಶಿಷ್ಟೇ 'ಆಪ್ಯತಮಮ್, ಅಸ್ಪೋಢವಾದಿದಮ್' ಇತಿ ವಿಶೇಷಣಪದದ್ವಯಸ್ಯ ಆಗಮಾನುಮಾನರೂಪಪ್ರಮಾಣಪರತ್ವಮ್, ಏವಂ ವಸ್ತುಸಿದ್ಧ್ಯುಪಯುಕ್ತಲಕ್ಷಣಪ್ರಮಾಣೋ-ಭಯಪರತಯಾ ಲಕ್ಷಣಪರತ್ವಾಪೇಕ್ಷಯಾಽಸ್ಯ ಪಕ್ಷಸ್ಯ ಪ್ರಾಬಲ್ಯಮಿತಿ । 'ಅಶೇಷ' ಇತ್ಯಾದಿ-ವಿಶೇಷಣದ್ವಯಸ್ಯ ಲಕ್ಷಣಪರತ್ವಮಪಿ, 'ಆಪ್ಯತಮಮ್, ಅಸ್ಪೋಢವಾದಿದಮ್' ಇತಿ ವಿಶೇಷಣದ್ವಯಸ್ಯ ಲಕ್ಷಣವಿಶಿಷ್ಟೇ ಪ್ರಮಾಣಪರತ್ವಮ್, ಆದ್ಯವಿಶೇಷಣದ್ವಯಸ್ಯ ತತ್ರ ಪ್ರಾಪ್ತ-ಬಾಧಕಪರಿಹಾರಪರತ್ವಮ್, ಇತ್ಯಭಿಪ್ರೇತ್ಯ ಪ್ರವೃತ್ತಸ್ಯ ಚತುರ್ಥಸ್ಯ ಪೂರ್ವಾಪೇಕ್ಷಯೋಪ-ಯುಕ್ತಬಹ್ವರ್ಥಪ್ರತಿಪಾದಕತ್ವಾತ್ ತತೋಽಪಿ ಪ್ರಾಬಲ್ಯಮ್ । (ಪಂಚಮಸ್ಯೇತ್ಯರ್ಥಃ ಪೂರ್ವ-ವತ್) । ಏವಮಪಿ ಸ್ತುತೇಃ ಅಲಾಭಾತ್ ನಮ್ಯತ್ವೋಪಪಾದಕಸ್ವರೂಪನಿರ್ಧಾರಕಲಕ್ಷಣ-ಪ್ರಮಾಣತದ್ಬಾಧಕಪರಿಹಾರಕತತ್ತದರ್ಥಪ್ರತಿಪಾದಕನಾರಾಯಣಪದವ್ಯಾಖ್ಯಾನೇನ ಸ್ತುತೇರಪಿ ಲಾಭಾತ್ ತತ್ಪ್ರತಿಪಾದಕಷಷ್ಠಸ್ಯ ಪೂರ್ವತೋಽಪಿ ಪ್ರಾಬಲ್ಯಮ್ । 'ನಮಾಮಿ' ಇತ್ಯಾದ್ಯುಕ್ತ್ಯೈವ ತದುಪಪಾದಕಾನಾಂ ಸರ್ವೇಷಾಮಪ್ಯಾಕ್ಷೇಪೇಣ ಲಾಭಸಂಭವೇನ ಪ್ರಪಂಚಜಿಜ್ಞಾಸೋಪಯುಕ್ತ-ಸಂಕ್ಷಿಪ್ತಸಕಲಶಾಸ್ತ್ರಾರ್ಥಾಕಥನಪ್ರಯುಕ್ತನ್ಯೂನತಾಪರಿಹಾರಾಯ, ವಿಶೇಷಣಾನಾಂ ತತ್ಕಥನಪರತ್ವಂ ಸರ್ವತೋಽಪಿ ಜ್ಯಾಯಃ" ಇತ್ಯಭಿಪ್ರೇತ್ಯ ಪ್ರವೃತ್ತಸ್ಯಾಂತಿಮಸ್ಯ ಸರ್ವತೋಽಪಿ ಪ್ರಾಬಲ್ಯಮಿತಿ ಪಕ್ಷಾಣಾಮುತ್ತರೋತ್ತರಪ್ರಾಬಲ್ಯಕ್ರಮೋ ದ್ರಷ್ಟವ್ಯಃ ।

ಅಥವಾ ಮೊದಲು ಮೊದಲಿನ ವ್ಯಾಖ್ಯಾನಗಳಿಂತ ಉತ್ತರೋತ್ತರವ್ಯಾಖ್ಯಾನಗಳೇ ಪ್ರಬಲ. ಈ ದೃಷ್ಟಿಯಲ್ಲಿ ಸಕಲಶಾಸ್ತ್ರಾರ್ಥಸಂಕ್ಷೇಪರೂಪವಾದ ಏಳನೆಯ ವ್ಯಾಖ್ಯಾನವು ಪ್ರಬಲ. ಅದು ಹೀಗೆ

– ಮೊದಲನೆಯ ವ್ಯಾಖ್ಯಾನದಲ್ಲಿ ಕಂಠತಃ ಹೇಳದೇ ಇದ್ದ ಸ್ತುತಿಯನ್ನು ಎಲ್ಲ ವಿಶೇಷಣಗಳು ಮಾಡುತ್ತಿವೆ ಎಂದು ಕಲ್ಪನೆ ಮಾಡುವುದರಿಂದ ನತಿಪರವಾಗಿ ಹಾಗೂ ಸ್ತುತಿಪರವಾಗಿ ಎಂದು ಎರಡು ವಾಕ್ಯಗಳನ್ನು ಕಲ್ಪನೆ ಮಾಡುವುದರಿಂದ ಭಿನ್ನವಾಕ್ಯತ್ವವಿದೆ. ಹಾಗಾಗಿ 'ಸಂಭವತಿ ಏಕವಾಕ್ಯತ್ವೇ ವಾಕ್ಯಭೇದೋ ಹಿ ದೋಷಃ' ಎನ್ನುವ ಪ್ರಕಾರ ವಾಕ್ಯಭೇದದೋಷವಿದೆ. ಹಾಗಾದರೆ ಏಕವಾಕ್ಯತಾ ಇದೆಯೇ ಎಂದರೆ ಹೌದು ಇದೆ. ಕೇವಲ ನತಿವಿಶೇಷ್ಯನಾದ ನಾರಾಯಣನಿಗೆ ಕೊಟ್ಟ ವಿಶೇಷಣಗಳು ಕಂಠತಃ ಹೇಳಿದ ನತಿಗೆ ಮಾತ್ರ ಉಪಪಾದಕವಾಗಿದೆ ಎಂದು ಹೇಳುವುದು ಸಾಧ್ಯವಾಗುವುದರಿಂದ.

ಆದ್ದರಿಂದ ಮೊದಲನೆಯ ವ್ಯಾಖ್ಯಾನಕ್ಕಿಂತ ದ್ವಿತೀಯಾದಿ ವ್ಯಾಖ್ಯಾನಗಳು ಪ್ರಬಲ. ಅಲ್ಲಿಯೂ ಕೂಡ "ನಮ್ಯತ್ವಪ್ರಯೋಜಕವಾದ ವಿಶಿಷ್ಟತ್ವ, ಇಷ್ಟತ್ವ ಮೊದಲಾದ ಧರ್ಮಸೂಚಕವಾಗಿದೆ ನಿಖಿಲಪೂರ್ಣಗುಣೈಕದೇಹಂ" ಎನ್ನುವ ವ್ಯಾಖ್ಯಾನಕ್ಕಿಂತ "ನಾರಾಯಣಸ್ವರೂಪವನ್ನು ನಿರ್ಧ-ರಿಸುವ ಲಕ್ಷಣಪರವಾಗಿವೆ ವಿಶೇಷಣಗಳು" ಎನ್ನುವ ವ್ಯಾಖ್ಯಾನ ಇನ್ನೂ ಪ್ರಬಲ.

ಇದಕ್ಕಿಂತ ಲಕ್ಷಣಪ್ರಮಾಣ ಉಭಯಪರವಾದ ವ್ಯಾಖ್ಯಾನವು ಶ್ರೇಷ್ಠ. ಈ ವ್ಯಾಖ್ಯಾನದಲ್ಲಿ ನಿಖಿಲ ಮುಂತಾದ ನಾಲ್ಕು ವಿಶೇಷಣಗಳು ಲಕ್ಷಣಪರವಾಗಿದ್ದು, ಆ ವಿಶೇಷಣವಿಶಿಷ್ಟನಾದ ನಾರಾ-ಯಣನಲ್ಲಿ 'ಆಪ್ಯತಮಂ', 'ಅಸ್ಯೋದ್ಭವಾದಿದಂ' ಎಂಬ ಎರಡು ವಿಶೇಷಣಗಳು ಪ್ರಮಾಣವಾಗಿವೆ ಎಂದು ತಿಳಿಯಬೇಕು.

ಇದಕ್ಕಿಂತಲೂ ಬಹಳ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ 'ನಿಖಿಲಪೂರ್ಣ-ಗುಣೈಕದೇಹಂ' 'ನಿರ್ದೋಷಂ' ಎಂಬ ಎರಡು ವಿಶೇಷಣಗಳ ಮೇಲೆ ಬಂದ ಬಾಧಕವನ್ನು ಪರಿಹರಿಸುವ ವ್ಯಾಖ್ಯಾನವು ಶ್ರೇಷ್ಠ.

ಇಷ್ಟಾದರೂ ನಾರಾಯಣನ ಸ್ತೋತ್ರವನ್ನು ಮಾಡಿದಂತಾಗಲಿಲ್ಲವಾದ್ದರಿಂದ ನಾರಾಯಣಪದವನ್ನು ನಿರ್ವಚನ ಮಾಡುವ ಮೂಲಕ ಈ ವಿಶೇಷಣಗಳು ಸ್ತುತಿಪರವಾಗಿವೆ ಎನ್ನುವ ವ್ಯಾಖ್ಯಾನವು ಶ್ರೇಷ್ಠ.

ಇವೆಲ್ಲದಕ್ಕಿಂತಲೂ 'ನಮಾಮಿ' ಎಂಬ ಮಾತಿನ ಮೂಲಕ ಅರ್ಥಾಪತ್ತಿಪ್ರಮಾಣದಿಂದಲೇ ಬೇಕಾದ ಎಲ್ಲ ವಿಧವಾದ ಲಕ್ಷಣ ಪ್ರಮಾಣ ಬಾಧಕಪರಿಹಾರ ಮೊದಲಾದವುಗಳ ಲಾಭವಾಗುವುದರಿಂದ ಈ ಹಿಂದಿನ ವ್ಯಾಖ್ಯಾನಗಳಿಗಿಂತ ಏಳನೆಯ ವ್ಯಾಖ್ಯಾನವು ಶ್ರೇಷ್ಠ. ಅದು ಹೀಗೆ – ಶಾಸ್ತ್ರಾರ್ಥದ ವಿಸ್ತಾರವಾದ ಜಿಜ್ಞಾಸೆಗೆ ಬೇಕಾದ ಸಂಕ್ಷೇಪತಃ ಶಾಸ್ತ್ರಕಥನ ಎಂಬುದನ್ನು ಮಾಡದಿದ್ದರೆ ನ್ಯೂನತಾ ಎಂಬ ದೋಷವು ಬರುತ್ತದೆ. ಏಕೆಂದರೆ ಸಂಕ್ಷೇಪವಾಗಿ ಶಾಸ್ತ್ರಾರ್ಥವನ್ನು ತಿಳಿಯದ ವ್ಯಕ್ತಿಯು ವಿಸ್ತಾರವಾದ ಶಾಸ್ತ್ರಾರ್ಥದಲ್ಲಿ ಜಿಜ್ಞಾಸೆಯನ್ನು ಪಡೆಯುವುದು ಅಸಾಧ್ಯ. ಆದ್ದರಿಂದ 'ಸಂಕ್ಷೇಪ-

ಶಾಸ್ತ್ರಾರ್ಥಕಥನಪರವಾಗಿ ಈ ಎಲ್ಲ ವಿಶೇಷಣಗಳಿವೆ' ಎಂಬ ವ್ಯಾಖ್ಯಾನವೇ ಶ್ರೇಷ್ಠ ಎಂದು ಉತ್ತರೋತ್ತರಪಕ್ಷಪ್ರಾಬಲ್ಯ ಎಂದು ತಿಳಿಯಬೇಕು.

ಇಲ್ಲಿಗೆ ನಾರಾಯಣಂ ನಿಖಿಲಪೂರ್ಣಗುಣೈಕದೇಹಂ ಎಂಬ
ಅನುವ್ಯಾಖ್ಯಾನದ ಮೊದಲನೆಯ ಪದ್ಯದ ಕನ್ನಡಾನುವಾದವು ಮುಗಿದಿದೆ.

- - - - - - -

ಭಾರತೀರಮಣೋ ಮಧ್ವೋ ಸೃಷ್ಟಿಸ್ಥಿತ್ಯಂತಕಾರಕಃ ।
ವಾಸುದೇವಾಜ್ಞಯಾ ನಿತ್ಯಂ ದುಷ್ಟಾನಾಂ ಪ್ರಾಣಘಾತಕಃ ॥

ಶರ್ವಾದಿಸರ್ವಗೀರ್ವಾಣನಿರ್ವಾಣಗತಿಹೇತವಃ ।
ಪೂರ್ಣಪ್ರಜ್ಞಪದಾಂಭೋಜಪಾಂಸವಃ ಪಾಂತು ನಃ ಸದಾ ॥

ಅಸ್ಮದ್ಗುರ್ವಂತರ್ಗತ-ಶ್ರೀಕಂಬಾಲೂರುರಾಮಚಂದ್ರತೀರ್ಥಗುರ್ವಂತರ್ಗತ-
ಶ್ರೀವ್ಯಾಸರಾಜಗುರ್ವಂತರ್ಗತ-ಶ್ರೀಜಯತೀರ್ಥಗುರ್ವಂತರ್ಗತ-
ಶ್ರೀಭಾರತೀರಮಣಮುಖ್ಯಪ್ರಾಣಾಭಿನ್ನಮಧ್ವಾಂತರ್ಗತ-
ನೀಲಾದೇವಿಕರಾರ್ಚಿತ-ರುಕ್ಮಿಣೀಸತ್ಯಭಾಮಾಸಮೇತ-ಶ್ರೀಮನ್ಮೂಲಗೋಪಾಲಕೃಷ್ಣಾರ್ಪಣಮಸ್ತು.

# ಶ್ರೀವ್ಯಾಸರಾಜಮಠದ ಸಂಪ್ರದಾಯಪ್ರವರ್ತಕರಾದ
# ಶ್ರೀಕಂಬಾಲೂರುರಾಮಚಂದ್ರತೀರ್ಥರು

**ವಂದಾರುಕಲ್ಪತರವೇ ವಾದಿಕೈರವಭಾನವೇ ।**
**ಶ್ರೀರಾಮಚಂದ್ರಗುರವೇ ನಮಃ ಕಾರುಣ್ಯಸಿಂಧವೇ ॥**

**– ಶ್ರೀಲಕ್ಷ್ಮೀವಲ್ಲಭತೀರ್ಥರು**

ನಮಸ್ಕರಿಸುವವರಿಗೆ ಕಲ್ಪವೃಕ್ಷರಾದ, ಪ್ರತಿವಾದಿಗಳೆಂಬ ನೈದಿಲೆಗಳಿಗೆ ಸೂರ್ಯ ರಾದ, ಕಾರುಣ್ಯಸಮುದ್ರರಾದ ಶ್ರೀರಾಮಚಂದ್ರಗುರುಗಳಿಗೆ ನಮಸ್ಕಾರವು.

**ವ್ಯಾಸತೀರ್ಥಾರ್ಯಸನ್ಮಾರ್ಗಸಂಸ್ಥಾಪನಮಹಾದರಃ ।**
**ರಾಮಚಂದ್ರಮುನೀಂದ್ರೋಽಸೌ ಪಾತು ಸೌಭಾಗ್ಯಭಾಗ್ಯದಃ ॥**

**– ಶ್ರೀವ್ಯಾಸರಾಮಾಚಾರ್ಯರು**

ಪೂಜ್ಯರಾದ ಶ್ರೀವ್ಯಾಸತೀರ್ಥರು ನಿರ್ಮಿಸಿದ ಸನ್ಮಾರ್ಗವನ್ನು ಚೆನ್ನಾಗಿ ಸ್ಥಾಪಿಸುವುದರಲ್ಲಿ ಮಹಾ ಆದರವುಳ್ಳ, ಸಕಲವಿಧಭಾಗ್ಯವನ್ನು ದಯಪಾಲಿಸುವ ಶ್ರೀರಾಮಚಂದ್ರಮುನಿಶ್ರೇಷ್ಠರು ಕಾಪಾಡಲಿ.

**ಸ್ವಾದಿಮಾನಂ ಸುಧಾಯಾ ಯಃ ಸಮ್ಯಕ್ ಜ್ಞಾಪಿತವಾನ್ ಭುವಿ ।**
**ರಾಮಚಂದ್ರಗುರುಂ ನೌಮಿ ವಿದ್ವನ್ಮಕುಟಮಂಡನಮ್ ॥**

**– ಶ್ರೀಕುಂಡಲಗಿರಿ ಆಚಾರ್ಯರು, ಶ್ರೀಮನ್ನ್ಯಾಯಸುಧಾಟಿಪ್ಪಣೀಕಾರರು**

ಯಾರು ಭೂಮಿಯಲ್ಲಿ ನ್ಯಾಯಸುಧೆಯ ಸ್ವಾದವನ್ನು ಚೆನ್ನಾಗಿ ತಿಳಿಸಿಕೊಟ್ಟರೋ ಅಂತಹ ವಿದ್ವಾಂಸರ ಸಮೂಹಕ್ಕೆ ಕಿರೀಟದಂತೆ ಅಲಂಕಾರಭೂತರಾದ ಶ್ರೀರಾಮಚಂದ್ರಗುರುಗಳನ್ನು ನಮಸ್ಕರಿಸುತ್ತೇನೆ.